# ಕಣವಿ ಸಮಗ್ರ ಗದ್ಯ



ಸಂಪುಟ-೨

# ಕಣವಿ ಸಮಗ್ರ ಗದ್ಯ

## ಸಂಪುಟ ೨

**ಚೆನ್ನವೀರ ಕಣವಿ**



ಕರ್ನಾಟಕ ಸರ್ಕಾರ

**ಕನ್ನಡ ಮತ್ತು ಸಂಸ್ಕೃತಿ ಇಲಾಖೆ**

ಕನ್ನಡ ಭವನ, ಜೆ.ಸಿ. ರಸ್ತೆ

ಬೆಂಗಳೂರು – ೫೬೦ ೦೦೨

**KANAVI SAMAGRA GADYA Vol. 2** : Complete Collection of Articles : **Chennaveera Kanavi**, Published by : **Manu Baligar** K.A.S., Director, Department of Kannada & Culture, Kannada Bhavana, J.C. Road, Bangaluru - 560 002.

Pages : xxxii + 814

Price : **Rs. 165/-**

First Edition : 2010

Copies : 1000



ಬೆಲೆ : ರೂ. ೧೬೫/-

ಮುಖಪುಟ ಚಿತ್ರ : ಎಂ.ಎಸ್. ಮುಕುಂದ, ಬೆಂಗಳೂರು

ಲಕ್ಷ್ಮೀ ಮುದ್ರಣಾಲಯ
LAKSHMI MUDRANALAYA
ISO 9001-2000
ಚಾಮರಾಜಪೇಟೆ, ಬೆಂಗಳೂರು-೧೮
ದೂರವಾಣಿ : ೨೬೬೧ ೩೧೨೩, ೨೬೬೧ ೮೬೫೨

# ಕೃತಜ್ಞತೆಯ ನುಡಿ

ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಸಮಗ್ರ ಸಾಹಿತ್ಯ ಪ್ರಕಟಣೆಯ ಯೋಜನೆಯ ಅಂಗವಾಗಿ 'ಕಣವಿ ಕಾವ್ಯ ಭಂಡಾರ'ದ ಎರಡು ಸಂಪುಟಗಳ ಜೊತೆಗೆ ಇದೀಗ ನನ್ನ ಸಮಗ್ರ ಗದ್ಯದ ಎರಡು ಸಂಪುಟಗಳನ್ನು ಹೊರ ತರುತ್ತಿರುವುದು ತುಂಬ ಸಂತೋಷವನ್ನುಂಟು ಮಾಡಿದೆ.

ಇದುವರೆಗಿನ ಗ್ರಂಥರೂಪದಲ್ಲಿ ಹಾಗೂ ಬಿಡಿಯಾಗಿ ಪ್ರಕಟಗೊಂಡ ನನ್ನ ಲೇಖನಗಳನ್ನು ವಿಷಯಾನುಸಾರ ವಿಂಗಡಿಸಿ ಸಂಯೋಜಿಸುವ ಕಾರ್ಯದಲ್ಲಿ ಡಾ॥ ಶ್ಯಾಮಸುಂದರ ಬಿದರಕುಂದಿ ಹಾಗೂ ಶ್ರೀ ಬಸವರಾಜ ಒಕ್ಕುಂದ ಅವರು ನೆರವಾಗಿದ್ದಾರೆ. ಡಾ॥ ಪ್ರಹ್ಲಾದ ಅಗಸನಕಟ್ಟೆಯವರು ಈ ಸಂಪುಟಗಳಿಗೆ ಸಮೀಕ್ಷೆಯ ರೂಪದಲ್ಲಿ ಪ್ರಸ್ತಾವನೆಯನ್ನು ಬರೆದಿದ್ದಾರೆ. ಕನ್ನಡದ ಖ್ಯಾತ ಲೇಖಕರಾದ ಈ ಮೂವರೂ ಆತ್ಮೀಯ ಸ್ನೇಹಿತರಿಗೆ ನಾನು ತುಂಬ ಕೃತಜ್ಞ.

ಇವುಗಳ ಪ್ರಕಟಣೆಯ ಕಾರ್ಯದಲ್ಲಿ ವಿಶೇಷ ಆಸ್ಥೆವಹಿಸಿ ಸಹಕರಿಸಿದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ನಿರ್ದೇಶಕರಾದ ಶ್ರೀ ಮನು ಬಳಿಗಾರ ಅವರಿಗೆ ಬಹಳ ಆಭಾರಿಯಾಗಿದ್ದೇನೆ.

ಕರಡು ತಿದ್ದುವಲ್ಲಿ ನೆರವಾದ ಶ್ರೀಮತಿ ವೈ.ಎಸ್. ವಿಜಯಲಕ್ಷ್ಮಿಯವರಿಗೆ ಕೃತಜ್ಞತೆಗಳು.

ಈ ಸಂಪುಟಗಳನ್ನು ಸುಂದರವಾಗಿ ಹಾಗೂ ಅಚ್ಚುಕಟ್ಟಾಗಿ ಮುದ್ರಿಸಿಕೊಟ್ಟ ಲಕ್ಷ್ಮೀ ಮುದ್ರಣಾಲಯದ ಒಡೆಯರಿಗೆ ಮತ್ತು ಅವರ ಸಿಬ್ಬಂದಿಗೆ ನನ್ನ ವಂದನೆಗಳು.

ಇದರಲ್ಲಿ ಸಂಗ್ರಹಿತವಾದ ಪುಸ್ತಕ ಹಾಗೂ ಲೇಖನಗಳನ್ನು ಈ ಮೊದಲು ಪ್ರಕಟಿಸಿದ ಎಲ್ಲ ಪ್ರಕಾಶಕರಿಗೂ ನನ್ನ ಧನ್ಯವಾದಗಳು.

*'ಚೆಂಬೆಳಕು'* *ಚೆನ್ನವೀರ ಕಣವಿ*
ಕಲ್ಯಾಣ ನಗರ, ಧಾರವಾಡ.-೫೮೦ ೦೦೭
೨೭-೦೩-೨೦೦೯
ಯುಗಾದಿ

ನಾಡೋಜ ಚೆನ್ನವೀರ ಕಣವಿಯವರು ಈ ಮಹತ್ವದ ಕಾರ್ಯಕ್ಕೆ ಒಪ್ಪಿಗೆ ನೀಡುವುದರ ಮೂಲಕ ಯೋಜನೆಯನ್ನು ಆಗು ಮಾಡಿದ್ದಾರೆ. ಅಲ್ಲದೆ ಕರಡು ತಿದ್ದುವ ಜವಾಬ್ದಾರಿಯನ್ನು ವಹಿಸಿಕೊಂಡು ನೆರವಾಗಿದ್ದಾರೆ. ಅವರಿಗೆ ನಮ್ಮ ಕೃತಜ್ಞತೆಗಳು ಸಲ್ಲುತ್ತವೆ. ನಾಡೋಜ ಚೆನ್ನವೀರ ಕಣವಿಯವರ ಈ ಪ್ರಕಟಣೆಯನ್ನು ಹೊರತರಲು ಸಹಕರಿಸಿದ ಶ್ರೀ ಎಚ್. ಶಂಕರಪ್ಪ, ಜಂಟಿ ನಿರ್ದೇಶಕರು, (ಸುವರ್ಣ ಕರ್ನಾಟಕ) ಶ್ರೀಮತಿ ವೈ. ಎಸ್. ವಿಜಯಲಕ್ಷ್ಮಿ, ಸಹಾಯಕ ನಿರ್ದೇಶಕರು, ಪ್ರಕಟಣ ಶಾಖೆ ಹಾಗೂ ಸಿಬ್ಬಂದಿ ವರ್ಗದವರಿಗೆ ನನ್ನ ಕೃತಜ್ಞತೆಗಳು. ಈ ಸಂಪುಟವನ್ನು ಸುಂದರವಾಗಿ ಮುದ್ರಿಸಿಕೊಟ್ಟಿರುವ ಲಕ್ಷ್ಮೀ ಮುದ್ರಣಾಲಯದ ಮಾಲೀಕರು ಮತ್ತು ಸಿಬ್ಬಂದಿ ವರ್ಗದವರಿಗೆ ಕೃತಜ್ಞತೆಗಳು.

ಹಿರಿಯ ಕವಿ ಚೆನ್ನವೀರ ಕಣವಿಯವರ ಕೃತಿಗಳನ್ನು ಸುಲಭ ಬೆಲೆಯಲ್ಲಿ ಕನ್ನಡಿಗರಿಗೆ ಒದಗಿಸುವುದು ನಮ್ಮ ಆಶಯವಾಗಿದೆ. ಅವರ ಈ ಸಮಗ್ರ ಸಾಹಿತ್ಯ ಸಂಪುಟಗಳನ್ನು ಸಾಹಿತ್ಯಾಸಕ್ತರು ಪ್ರೀತಿಯಿಂದ ಸ್ವಾಗತಿಸುತ್ತಾರೆಂದು ನಂಬಿದ್ದೇವೆ. ಈ ಕೃತಿಗಳ ಉಪಯೋಗವನ್ನು ಕನ್ನಡ ಜನತೆ ಪಡೆದುಕೊಂಡರೆ ನಮ್ಮ ಶ್ರಮ ಸಾರ್ಥಕ.

೨೦-೦೯-೨೦೦೮

ಮನು ಬಳಿಗಾರ್
ನಿರ್ದೇಶಕರು
ಕನ್ನಡ ಮತ್ತು ಸಂಸ್ಕೃತಿ ಇಲಾಖೆ

# ಪ್ರಸ್ತಾವನೆ

ಕನ್ನಡದ ಮಹತ್ವದ ಕವಿಗಳಾದ ಡಾ॥ ಚೆನ್ನವೀರ ಕಣವಿಯವರ ಸಮಗ್ರ ಗದ್ಯ ಪ್ರಕಟವಾಗುತ್ತಿರುವ ಈ ಹೊತ್ತಿನಲ್ಲಿ ಅದಕ್ಕೊಂದು ಪ್ರಸ್ತಾವನೆಯನ್ನು ಬರೆಯಲು ನನಗೆ ತುಂಬಾ ಸಂತೋಷವಾಗುತ್ತದೆ. ಇದೊಂದು ಅಯಾಚಿತವಾಗಿ ನನಗೆ ದೊರೆತ ಸೌಭಾಗ್ಯವೆಂದು ನಾನಾದರೂ ನಂಬಿದ್ದೇನೆ. ಎಲ್ಲಕ್ಕಿಂತ ಕಿರಿಯನಾದ ನನಗೆ ಈ ಜವಾಬ್ದಾರಿಯನ್ನು ವಹಿಸಿರುವ ಕಣವಿಯವರು ಆ ಮೂಲಕ ಅವರು ಯಾವತ್ತೂ ಕಿರಿಯರ ಮೇಲೆ ತೋರುತ್ತಾ ಬಂದಿರುವ ವಿಶ್ವಾಸದ ಪ್ರತೀಕ ಇದು, ಎಂದು ಅಂದುಕೊಂಡಿದ್ದೇನೆ. ಈಗ ಪ್ರಕಟವಾಗುತ್ತಿರುವ ಈ ಪುಸ್ತಕದ ತುಂಬ ಇಂಥ ಸಹೃದಯತೆ ಗುಣ ಧಾರಾಳವಾಗಿ ಪ್ರತಿಫಲನಗೊಂಡಿರುವುದನ್ನು ಯಾರು ಬೇಕಾದರು ಕಾಣಬಹುದಾಗಿದೆ. 'ಶುಭಾಕಾಂಕ್ಷೆ-ಮತ್ತು ಸದ್ಭಾವ' ಅವರ ಗದ್ಯ ಬರಹದ ಮೂಲ ಮಾತೃಕೆಗಳಾಗಿವೆ.

ಕವಿ ಕಣವಿಯವರ ಕಾವ್ಯ ನಮ್ಮ ಸಾಹಿತ್ಯ ವಿಮರ್ಶೆಯಲ್ಲಿ ಚರ್ಚೆಗೆ ಒಳಗಾದ ಪರಿಯಲ್ಲಿ ಅವರ ಗದ್ಯ ಈ ಬಗೆಯ ಲಕ್ಷ್ಯವನ್ನಾಗಲಿ ಅಥವ ಚರ್ಚೆಯನ್ನಾಗಲಿ ಪಡೆದಿಲ್ಲದಿರುವುದು ಸೋಜಿಗದ ಸಂಗತಿಯಾಗಿದೆ. ನವೋದಯ ಕಾಲದಿಂದಲೂ ತಮ್ಮ ಕಾವ್ಯಕೃಷಿಯ ಜೊತೆ ಜೊತೆಗೆ ಅದರ ಹೆಗಲೆಣೆಯಾಗಿ ಕಣವಿಯವರು ಗದ್ಯ ಸೃಷ್ಟಿಯಲ್ಲಿ ನಿರತವಾಗಿದ್ದಾಗ್ಯೂ, ಯಾಕೋ ಅದು ಅಂತಹ ಪ್ರಧಾನ ಚರ್ಚೆಯಿಂದ ದೂರ ಸರಿದಿದೆ. ಅವರ ಕಾವ್ಯ ಹೇಗೆ ಕಾಲಕಾಲದ ನಿರೀಕ್ಷೆ, ಅಪೇಕ್ಷೆ, ಬದಲಾವಣೆ ಮತ್ತು ಸಂಕ್ರಮಣದ ತುಯ್ತಗಳಿಗೆ ತನ್ನನ್ನು ಒಡ್ಡಿಕೊಳ್ಳುತ್ತಾ ತನ್ನ ಅನನ್ಯತೆಯನ್ನು ಮತ್ತು ಅನುಸ್ಯೂತತೆಯನ್ನು ಕಾಪಾಡಿಕೊಂಡು ಬಂದಿದೆಯೋ... ಹಾಗೆಯೇ ಅವರ ಗದ್ಯದ ಬರವಣಿಗೆ ಈ ವಿಕಾಸದ ಹಾದಿಯಲ್ಲಿ-ಆಯಾ ಕಾಲದ ನಿರೀಕ್ಷೆಗಳಿಗೆ ತನ್ನನ್ನು ಒಪ್ಪಿಸಿಕೊಳ್ಳುತ್ತಾ ಒಡ್ಡಿಕೊಳ್ಳುತ್ತಾ ಬಂದಿದೆ.

ನವೋದಯದ ಪ್ರಭಾವಳಿಯಲ್ಲಿ ತಮ್ಮ ಸಾಹಿತ್ಯಕ ಕೃಷಿ ಆರಂಭಿಸಿದ ನಮ್ಮ ಬಹುತೇಕ ಹಿರಿಯರದು ಬಹುಮುಖಿ ವ್ಯಕ್ತಿತ್ವ, ಕಾವ್ಯದ ಜೊತೆ ಜೊತೆಗೆ ಇನ್ನಿತರ ಪ್ರಕಾರಗಳಲ್ಲೂ ಅದೇ ಬಗೆಯ ಮಹತ್ವಾಕಾಂಕ್ಷೆ, ಅದೇ ಬಗೆಯ ಶಿಸ್ತು, ಅದೇ ಬಗೆಯ ನಿಷ್ಠೆ, ಅದೇ ಬಗೆಯ ತುಡಿತ, ಅದೇ ಬಗೆಯ ಸಮರ್ಪಣೆಗಳನ್ನು ಅವರ ಬರೆಹಗಳಲ್ಲಿ ಕಾಣಬಹುದು. ಈ ಬಗೆಯ ವ್ಯಕ್ತಿತ್ವದ ಎರಡು ಪ್ರತಿಬಿಂಬಗಳೆಂದು ನಾವು ಸಾಂಕೇತಿಕವಾಗಿ ಕುವೆಂಪು ಹಾಗೂ ಬೇಂದ್ರೆಯವರನ್ನು ಉದಾಹರಿಸಬಹುದು. ಕುವೆಂಪು ಅವರು ಗದ್ಯ ಪ್ರಕಾರದಲ್ಲಿ ಶ್ರೇಷ್ಠ ಸಾಧನೆ ಮಾಡಿದ್ದಾರೂ...ಕಾವ್ಯ ಪ್ರಕಾರದಲ್ಲಿ

ಶ್ರೇಷ್ಠ ಸಾಧನೆ ಮಾಡಿದ್ದಾರೋ ಎಂಬ ಚರ್ಚೆಗಳು ಇವೊತ್ತು ಜೀವಂತವಾಗಿರುವುದನ್ನು ನೋಡಿದರೆ ಆ ಹಿರಿಯರು ಈ ಎರಡು ಪ್ರಕಾರಗಳಲ್ಲಿ ಸಾಧಿಸಿದ ಅಸಂತುಲಿತ ಸಾಧನೆ ಬೆರಗು ಹುಟ್ಟಿಸುವಂತಹದ್ದಾಗಿದೆ.

ನವೋದಯದ ಸಾಹಿತ್ಯ ಗ್ರಹಿಕೆ, ವಿವೇಚನೆ, ಮೌಲ್ಯಮಾಪನ ಮತ್ತು ಒಟ್ಟು ಸಾಹಿತ್ಯದ ಬೆಳವಣಿಗೆಯ ಕ್ರಮವನ್ನು ಕನ್ನಡದ ಸಾಹಿತ್ಯ ಚರಿತ್ರೆಯ ನಡುವೆ ಇಟ್ಟು ತೂಗಿ ಬೆಲೆ ಕಟ್ಟುವ ಕೆಲಸವನ್ನು ನಂತರದ ತಲೆಮಾರಿನಲ್ಲಿ ಅದೇ ಬಗೆಯ ನಿಷ್ಠೆಯಿಂದ ಮುಂದುವರೆಸಿದವರಲ್ಲಿ ಡಾ॥ ಜಿ.ಎಸ್. ಶಿವರುದ್ರಪ್ಪ ಹಾಗೂ ಡಾ॥ ಚೆನ್ನವೀರ ಕಣವಿಯವರ ಪಾಲು ದಾಖಲಾರ್ಹವಾಗಿದೆ. ನವ್ಯ ಸಾಹಿತ್ಯದ ವಿಮರ್ಶೆಯ ಮೊನಚು, ಪಾಶ್ಚಾತ್ಯ ವಿಮರ್ಶೆಯ ದಟ್ಟ ಪ್ರಭಾವಳಿಯಲ್ಲಿ ಕನ್ನಡದ ಸಾಹಿತ್ಯವನ್ನು ಅಳೆದು-ತೂಗಿ-ಕಾಸಿ ಬಡಿಯುವ ಕಾವಿನ ನಡುವೆ-ಕನ್ನಡ ಕಾವ್ಯವನ್ನು ಹಾಗೂ ಕನ್ನಡದ ಒಟ್ಟು ಬರವಣಿಗೆಯನ್ನು ಈ ಬಗೆಯ ಕಾವಿನ ಕುತ್ತಿನಿಂದ ಪಾರು ಮಾಡಿ ಒಂದು ಉದಾರವಾದ ನಿಲುವಿನಿಂದ ಸಾಹಿತ್ಯವನ್ನು ಬೆಳೆಸಿ, ಪೋಷಿಸುವ, ಬರಹಗಾರರನ್ನು ಅವರ ಬರಹದೆಲ್ಲಾ ಕುಂದು ಕೊರತೆಗಳನ್ನು ಲಕ್ಷಿಸಿಯೂ-ಅವರನ್ನು ಕೈ ಹಿಡಿದು ಬೆಳೆಸುವ ಕೆಲಸವನ್ನು ನಿರಂತರವಾಗಿ ಈ ಇರ್ವರೂ ಮಾಡಿಕೊಂಡು ಬಂದಿದ್ದಾರೆ.

ಈ ಎಲ್ಲಾ ಲಕ್ಷಣಗಳನ್ನು, ಮನೋಧರ್ಮಗಳನ್ನು ಕಣವಿಯವರು ಈವರೆಗೂ ಪ್ರಕಟಿಸಿರುವ-ಅವರ ಪ್ರಬಂಧ ಗ್ರಂಥಗಳಾದ-ಸಾಹಿತ್ಯ ಚಿಂತನ (೧೯೬೬), ಕಾವ್ಯಾನುಸಂಧಾನ (೧೯೭೧), ಸಮಾಹಿತ (೧೯೭೭), ಸಮತೋಲನ (೧೯೮೯), ಮಧುರಚೆನ್ನ (೧೯೮೪), ಶುಭನುಡಿಯೆ ಹಕ್ಕಿ (೨೦೦೦), ಸಾಹಿತ್ಯ ಸಮಾಹಿತ (೨೦೦೭), ಸದ್ಭಾವ (೨೦೦೮)-ಈ ಗ್ರಂಥಗಳಲ್ಲಿ ವ್ಯಕ್ತಪಡಿಸಿರುವುದು ಒಡೆದು ಕಾಣುತ್ತದೆ. ಈ ಕಾರಣಕ್ಕೆ ಇಲ್ಲಿನ ಹಲವು ಪುಸ್ತಕಗಳು ಲೇಖನಗಳು ಮರುಮುದ್ರಣದ ಭಾಗ್ಯವನ್ನೂ ಪಡೆದಿವೆ.

ಈ ಎಲ್ಲಾ ಪುಸ್ತಕಗಳ ಫಸಲನ್ನು ನೋಡಿದರೆ ಕಣವಿಯವರ ಗದ್ಯ ಬರವಣಿಗೆಯು ಸುಮಾರು ಒಂದೂವರೆ ಸಾವಿರ ಪುಟಕ್ಕೂ ಮಿಕ್ಕಿ ಹೆಚ್ಚಿನ ವಿಸ್ತಾರವನ್ನು ಪಡಕೊಳ್ಳುತ್ತದೆ. ಆದರೆ ಕಣವಿಯವರು ಸ್ವತಃ ತಮ್ಮ ಗದ್ಯದ ಬರವಣಿಗೆಯ ಬಗ್ಗೆಯೇ-ಒಂದು ಬಗೆಯ ನಿರ್ಲಿಪ್ತ ಧೋರಣೆ ತಾಳಿದಂತೆ ಕಾಣುತ್ತದೆ. ಅವರ ಮೊಟ್ಟ ಮೊದಲ ವಿಮರ್ಶನಾ ಗ್ರಂಥದಲ್ಲಿಯೇ ಅವರು "ಗದ್ಯದಲ್ಲಿ ನನ್ನದು ಆಮೆಯ ಗತಿ, ಬರೆದದ್ದು ತೀರಾ ಕಡಿಮೆ" (ಸಾಹಿತ್ಯ ಚಿಂತನ) ಎಂದು ಅಂದುಕೊಂಡಿದ್ದಾರೆ. ಆದರೆ ಕಣವಿಯವರ ಒಟ್ಟು ಗದ್ಯವನ್ನು ವಿಶ್ಲೇಷಣೆಯ ಸಲುವಾಗಿ ಸಾಹಿತ್ಯ ಕುರಿತು ಬರೆದ ಬರೆಹಗಳನ್ನು-ವಿಮರ್ಶಾ ಲೇಖನಗಳು ಎಂದು, ಅವರ ವ್ಯಕ್ತಿ ಚಿತ್ರಗಳನ್ನು-ಒಡನಾಟ ಎಂದು, ಪ್ರಬಂಧಾತ್ಮಕ ಗುಣವುಳ್ಳ ಲೇಖನಗಳನ್ನು ಪ್ರಬಂಧಗಳೆಂದು-ಹಾಗೂ ಅವರು ಅಪಾರವಾಗಿ ಬರೆದಿರುವ ಮುನ್ನುಡಿ-ಹಿನ್ನುಡಿಗಳನ್ನು ಶುಭಾಕಾಂಕ್ಷೆ ಎಂದು ಸ್ಥೂಲವಾಗಿ ವಿಭಾಗಿಸಿಕೊಂಡು ಅವರ ಗದ್ಯದ ಸಮೀಕ್ಷೆಯನ್ನು ಬೆಳೆಸಬಹುದು.

## ವಿಮರ್ಶಾ ಲೇಖನಗಳು

ಕಣವಿಯವರ ಹೆಚ್ಚಾನು ಹೆಚ್ಚು ವಿಮರ್ಶಾ ಲೇಖನಗಳು ಕನ್ನಡದ ಕಾವ್ಯವನ್ನೆ ಕುರಿತಾಗಿ ಹುಟ್ಟಿಕೊಂಡಿವೆ. ಅದು ವಚನಕಾರರಿಂದ ಶುರುವಾಗಿ ಇವೊತ್ತಿನ ಕಾವ್ಯದವರೆಗೂ ಮುಂದುವರೆಯುತ್ತದೆ. ಕಣವಿಯವರು ಮೂಲತಃ ಕವಿಗಳಾದ್ದರಿಂದ ಅವರಿಗೆ ಕಾವ್ಯ ಕುರಿತು ಬರೆಯುವುದೆಂದರೆ, ಕಾವ್ಯ ಕುರಿತ ಚರ್ಚೆಯೆಂದರೆ, ಒಂದು ಬಗೆಯ ಉತ್ಸಾಹ ಮತ್ತು ತಮ್ಮ ಕಾವ್ಯಕ್ಕೆ ಅಗತ್ಯವಾದ ಒಂದು ಭೂಮಿಕೆಯನ್ನು ಸದಾಸಿದ್ಧಪಡಿಸಿಕೊಳ್ಳುವ ಹವಣಿಕೆಯಂತೆ ಅಥವ ನೇರ್ಪುಗೊಳಿಸಿಕೊಳ್ಳುವ ಕೈಂಕರ್ಯದಂತೆ ಕಾಣಬರುತ್ತದೆ. ಹೀಗಾಗಿ ಅವರು ತಮ್ಮ ವಿಮರ್ಶೆಗೆ ಆಯ್ದುಕೊಳ್ಳುವ ಬಹುತೇಕ ಕವಿಗಳು ಅವರು ಬಹುವಾಗಿ ಇಷ್ಟಪಡುವ ಮತ್ತು ತಮ್ಮನ್ನು ಒಂದಲ್ಲ ಒಂದು ರೀತಿಯಲ್ಲಿ ಪ್ರಭಾವಿಸಿದ ಕವಿಗಳೇ ಆಗಿದ್ದಾರೆ. ಅವರ ಒಟ್ಟು ಕಾವ್ಯ ವಿಮರ್ಶೆಯಲ್ಲಿ ಮೊದಲ ಸ್ಥಾನ ವಚನಕಾರರಿಗೆ, ತದನಂತರ ಸ್ಥಾನ ನವೋದಯ ಕವಿಗಳಿಗೆ, ಅದರಲ್ಲೂ ಆ ಪಂಥದ ದಿಗ್ಗಜರೆನಿಸಿದ ಕುವೆಂಪು ಹಾಗೂ ಬೇಂದ್ರೆಯವರಿಗೆ ಮತ್ತು ತಮ್ಮ ಮೇಲೆ ದಟ್ಟವಾಗಿ ಪ್ರಭಾವ ಬೀರಿದ ಮಧುರಚೆನ್ನರಿಗೆ ಮುಡುಪಾಗಿದೆ. ಹಾಗೆಯೇ ಅವರ ಇನ್ನೊಂದು ಪ್ರಧಾನ ಒಲವು ಜನಪದ ಕಾವ್ಯ.

ಕಣವಿಯವರು ತಮ್ಮ ಗದ್ಯದ ಸ್ವರೂಪ, ಗುಣಲಕ್ಷಣಗಳನ್ನು ಅದರ ಆಶಯ ಹಾಗೂ ಧೋರಣೆಗಳನ್ನು ರೂಪಿಸಿಕೊಂಡಿದ್ದೇ ನವೋದಯದ ಉಚ್ಛ್ರಾಯ ದಿನಮಾನಗಳಲ್ಲಾದ್ದರಿಂದ ಈ ಬಗೆಯ ದೃಷ್ಟಿಕೋನ ಅವರು  ಬಹುತೇಕ ಗದ್ಯವನ್ನು ಮುನ್ನಡೆಸುವ ಮನೋಧರ್ಮವಾಗಿ ರೂಪಿತಗೊಂಡಿದೆ. ಅವರ ಮೊದಲ ವಿಮರ್ಶಾ ಪುಸ್ತಕದ ಬಹುತೇಕ ಲೇಖನಗಳು ಇಂಥ ಆಶಯದಿಂದಲೇ ಬರೆಯಲ್ಪಟ್ಟಂತೆ ಕಾಣುತ್ತವೆ. ಮೊದಲ ಸಂಕಲನಕ್ಕೆ ಮುನ್ನುಡಿ ಬರೆದಿರುವ–ಸ.ಸ. ಮಾಳವಾಡ ಅವರು "ನಯವು ಕಣವಿಯವರ ಸಹಜ ಮನೋಧರ್ಮವಾಗಿದೆ. ಅವರು ಅದನ್ನು ಅನುಕೂಲ ಸಿಂಧುವನ್ನಾಗಿ ಬಳಸಿಕೊಳ್ಳುವುದಿಲ್ಲ. ಹಸಿಯ ಗೋಡೆಯ ಮೇಲೆ ಹರಳಿಡುವಂತೆ ಅವರು ಹೇಳಬಲ್ಲರು. ವ್ಯಾಸಂಗದೊಂದಿಗೆ ಬೌದ್ಧಿಕ ಪ್ರಾಮಾಣಿಕತೆಯನ್ನು, ನಯದೊಂದಿಗೆ ಸ್ಪಷ್ಟೋಕ್ತಿಯನ್ನು ರೂಢಿಸಿಕೊಂಡುದರ ಫಲವಾಗಿ...ಹೊರಹೊಮ್ಮಿದ ಇಲ್ಲಿಯ ವಿಮರ್ಶೆ ಸತ್ವಯುತವಾಗಿದೆ"–ಎಂಬ ಮಾತುಗಳು ಒಟ್ಟು ಅವರ ವಿಮರ್ಶಾ ಲೇಖನಗಳಿಗೆ ವಿಸ್ತರಿಸಬಹುದಾಗಿದೆ.

ವಿಮರ್ಶೆಯಲ್ಲಿ 'ವಿನಯ' ಎನ್ನುವ ಮಾತನ್ನು ನಾವು ಆಗಾಗ ಕ್ಲೀಷೆಯಂತೆ ಸಾಹಿತ್ಯಲೋಕದಲ್ಲಿ ಬಳಸುತ್ತಾ ಬಂದಿದ್ದೇವೆ. ಆದರೆ ಆ ಮಾತನ್ನು ಯಥಾರ್ಥವಾಗಿ ಯಾವುದೇ ಪೂರ್ವಗ್ರಹ ಅಥವಾ ವ್ಯಂಗ್ಯವಿಲ್ಲದೆ ಬಳಸಬಹುದಾದಲ್ಲಿ ಅದು ಕಣವಿಯವರ ಒಟ್ಟು ಗದ್ಯ ಬರಹಕ್ಕೆ ಅನ್ವಯಿಸುವಂತಹ ಅರ್ಥವತ್ತಾದ ಗುಣವಾಗಬಲ್ಲದು.

ಕಣವಿಯವರು ವೃತ್ತಿಪರ ವಿಮರ್ಶಕರಲ್ಲ. ವಾದ, ಸಿದ್ಧಾಂತ, ಪಂಥಗಳನ್ನು ತಮ್ಮ ವಿಮರ್ಶೆಯ ನಿಕಷವನ್ನಾಗಿಟ್ಟುಕೊಂಡು ಅವರು ಕೃತಿ ಪ್ರವೇಶ ಮಾಡುವುದಿಲ್ಲ:

ಅಥವ ಕೃತಿ ಪರೀಕ್ಷೆಯ ಸಂದರ್ಭದಲ್ಲಿ ತಮ್ಮ ಬೌದ್ಧಿಕ ಪ್ರದರ್ಶನವನ್ನಾಗಲಿ ಅಥವ ಕೃತಿಯನ್ನು ನೆಪವನ್ನಾಗಿಟ್ಟುಕೊಂಡು ತಮ್ಮ ನಿಲುವನ್ನು ಪ್ರದರ್ಶಿಸುವವರಲ್ಲ. ಕೃತಿಯೊಂದು ಬಿಟ್ಟುಕೊಡಬಹುದಾದ ಎಲ್ಲಾ ಸಂಭವನೀಯ ತಿಳುವಳಿಕೆಗಳಿಗೆ ಮತ್ತು ಅರ್ಥಗಳಿಗೆ ಅವರು ತಮ್ಮ ಎದೆಯನ್ನು ಮುಕ್ತವಾಗಿ ತೆರೆದಿಟ್ಟುಕೊಂಡು ಸ್ಪಂದಿಸುತ್ತಾರೆ. ಈ ಸ್ಪಂದನಗಳನ್ನು ನಾನಾ ನೆಲೆಗಳಿಂದ ವಿಶ್ಲೇಷಿಸುತ್ತಾರೆ ಮತ್ತು ವಿವರಿಸುತ್ತಾರೆ.

ಈಗಾಗಲೇ ಉಲ್ಲೇಖಿಸಿದಂತೆ ಅವರ ಗದ್ಯ ಬರಪದಲ್ಲಿ ಮತ್ತೆ ಮತ್ತೆ ಬಸವಣ್ಣ ನವರ ವಚನಗಳನ್ನು ಹಾಗೂ ವಚನಕಾರರನ್ನು ಕುರಿತು ಬರೆಯಲ್ಪಟ್ಟ ಹಾಗೂ ಪುನರುಕ್ತೋಪಾದಿಯಂತಿರುವ ಲೇಖನಗಳಲ್ಲಿ ಈ ಮನೋಧರ್ಮ ಢಾಳವಾಗಿ ಕಾಣುತ್ತದೆ. ಅವರು ತಮ್ಮ ಒಂದು ಲೇಖನದಲ್ಲಿ ಹೇಳಿಕೊಂಡಂತೆ–ತಮ್ಮ ಬರವಣಿಗೆಯ ಆರಂಭದಲ್ಲಿ ತಾವು ಬಸವಣ್ಣನವರ ಬದುಕು–ಬರಪದಿಂದ ಗಾಡವಾಗಿ ಪ್ರಭಾವಿತರಾಗಿದ್ದೇವೆಂಬುದನ್ನು ಈ ಲೇಖನಗಳು ನಮಗೆ ಸಾಬೀತುಪಡಿಸುವಂತಿವೆ. ಇದನ್ನೆ ಅವರು 'ಪ್ರಭಾವ ಬೀರಿದ ಪುಸ್ತಕಗಳು' ಎಂಬ ಲೇಖನದಲ್ಲಿ 'ನನ್ನ ಆಲೋಚನೆ ತಾತ್ವಿಕ ಚಿಂತನೆ', ಕಾವ್ಯ ಸೃಷ್ಟಿ ಹಾಗೆಯೇ ಜೀವನದ ರೀತಿಗಳ ಮೇಲೆ ಮೊದಲಿಂದ ಕೊನೆಯವರೆಗೂ ಪ್ರಭಾವ ಬೀರಿದ ಅತ್ಯಂತ ಪ್ರಮುಖ ಗ್ರಂಥವೆಂದರೆ 'ಬಸವಣ್ಣನವರ ಷಟ್‌ಸ್ಥಲದ ವಚನಗಳು' ಎಂದು ಹೇಳಿಕೊಂಡಿದ್ದಾರೆ.

ಬಸವಣ್ಣನ ಭಾವಚಿತ್ರ (ಸಾಹಿತ್ಯ ಚಿಂತನ), ವಚನ ಸಾಹಿತ್ಯದಲ್ಲಿ ಉಪಮೆ (ಸಾಹಿತ್ಯ ಚಿಂತನ), ಹೆಸರಿಡಲಾರದ ಹಿರಿಯ ಆದಯ್ಯ (ಸಾಹಿತ್ಯ ಚಿಂತನ), ಬಸವಣ್ಣನವರ ವಚನಗಳ ಆಶಯ (ಸಮತೋಲನ), ಬಸವಣ್ಣನವರ ವಚನಗಳ ಸಾಹಿತ್ಯಿಕ ಮೌಲ್ಯ (ಕಾವ್ಯಾನುಸಂಧಾನ), ಅಚ್ಚ ಬದುಕಿನ ರತ್ನ ಮೌಕ್ತಿಕದಚ್ಚು ಬಸವಣ್ಣ (ಸಮಾಹಿತ)–ಈ ಲೇಖನಗಳಲ್ಲಿ ಬಸವಣ್ಣನವರ ವ್ಯಕ್ತಿತ್ವವನ್ನು, ಅವರ ಆಶಯಗಳನ್ನು, ಅವರ ಸಾಮಾಜಿಕ ನಿಲುವುಗಳನ್ನು, ವಚನ ಸಾಹಿತ್ಯದ ವೈಶಿಷ್ಟ್ಯವನ್ನು ಪುನರ್ ನಿರ್ಮಿಸುವ, ಪುನರ್ ಸಂಯೋಜಿಸುವ ಕೆಲಸವನ್ನು ಕಣವಿಯವರು ಶ್ರದ್ಧೆಯಿಂದ ಮಾಡಿರುವುದನ್ನು ಕಾಣಬಹುದು. ಇಲ್ಲಿ ವಚನ ಸಾಹಿತ್ಯದ ಪುನರ್ ಮೌಲ್ಯಮಾಪನ, ಅಥವ ಅದರ ಗುಣ–ದೋಷಗಳ ಚರ್ಚೆಗಿಂತ, ವಚನ ಸಾಹಿತ್ಯದ ಅದರಲ್ಲೂ ಬಸವಣ್ಣನವರ ಕೊಡುಗೆಯನ್ನು ವಿಶ್ಲೇಷಣಾತ್ಮಕವಾಗಿ ಚರ್ಚೆ ಮಾಡಲಾಗಿದೆ. ಸಾಂಸ್ಕೃತಿಕ ಚಿಂತನೆಗಿಂತ ಸಾಹಿತ್ಯದ ಚಿಂತನೆ ಮೇಲುಗೈ ಪಡೆದಿದೆ. ಬಸವಣ್ಣನವರ ವಚನಗಳ ವೈಶಿಷ್ಟ್ಯಗಳನ್ನು ಗುರುತಿಸುತ್ತಾ ಕಣವಿಯವರು "ಬಸವನ ಮಾತು, ಭಕ್ತಿಯ ಓಜೆ, ರೀತಿ, ಕಿಂಕರ ವೃತ್ತಿ, ಬಸವನ ಬಟ್ಟೆ, ನಿಷ್ಠೆ, ನೇಮ, ಬಸವನ ನೀತಿ, ನಿರ್ಮಲರೂಪು, ಬುದ್ಧಿ, ಪುಣ್ಯದ ಲೀಲೆ, ಬಸವನ ಪೆರ್ಮೆ ನಚ್ಚಿನ ಕೂರ್ಮೆ ಜಾಣು, ಶೀತಲ ಶಾಂತಿ–ಇವೇ ಮೊದಲಾಗಿ ಬಸವಣ್ಣನವರ ವ್ಯಕ್ತಿತ್ವದ ಗುಣಗಳಾಗಿರುವಂತೆಯೇ ಅವರ ವಚನಗಳ ಲಕ್ಷಣಗಳೂ ಆಗಿವೆ" ಎಂದು ಗುರುತಿಸಿದ್ದಾರೆ.

ಒಂದರ್ಥದಲ್ಲಿ ಬಸವಣ್ಣ ಮತ್ತು ಬಸವಣ್ಣನವರ ವಚನಗಳು ಕಣವಿಯವರ ಒಟ್ಟು ಬದುಕು-ಬರಹದ ಮೇಲೆ ಗಾಢ ಪ್ರಭಾವ ಬೀರಿರುವ ಅಂಶಗಳ ನೆಲೆ-ಬೆಲೆಯನ್ನು ಇಂಥ ಲೇಖನಗಳಲ್ಲಿ ಗುರುತಿಸಬಹುದಾಗಿದೆ. ಕಣವಿಯವರ ಗದ್ಯದಲ್ಲಿ ಮತ್ತೆ ಮತ್ತೆ ಶೋಧನೆಗೆ ಅಥವ ಚಿಂತನೆಗೆ ಪಕ್ಕವಾಗುವ ಕವಿಯೆಂದರೆ ನಿಸ್ಸಂಶಯವಾಗಿ ಅವರು ಮಧುರಚೆನ್ನರು. ಅವರ ಆರಂಭದ ವಿಮರ್ಶಾ ಪುಸ್ತಕ ಸಾಹಿತ್ಯ ಚಿಂತನದಲ್ಲಿ "ಮಧುರಚೆನ್ನರ ಮಧುರ ಗೀತ"-ಎಂದು ಶುರುವಾಗುವ ಈ ಬಗೆಯ ಲೇಖನ ಮಾಲೆಗಳು-ಮಧುರಚೆನ್ನರ ಅನುಭಾವ ಕಾವ್ಯ (ಸಾಹಿತ್ಯ ಸಮಾಹಿತ) ಹಾಗೂ ಮಧುರಚೆನ್ನರ ಕುರಿತು 'ಮಧುರಚೆನ್ನ' ಎಂಬ ಪ್ರತ್ಯೇಕ ಪುಸ್ತಕ ಬರೆಯುವ ಮಟ್ಟಕ್ಕೂ ಹಬ್ಬುತ್ತದೆ. ಕಣವಿಯವರ ಬದುಕು-ಬರಹದ ಮೇಲೆ ಗಾಢವಾದ ಪ್ರಭಾವ ಬೀರಿದ ಮಧುರಚೆನ್ನರನ್ನು ಕಣವಿಯವರು ಪುನಃ ಪುನಃ ತಮ್ಮ ಗದ್ಯ ಬರವಣಿಗೆಯ ವ್ಯಾಪ್ತಿಗೆ ತಂದುಕೊಳ್ಳುತ್ತಾರೆ:

"ನಾನು ಮೆಚ್ಚಿಕೊಂಡ ಹಾಗೂ ನನ್ನ ಮೇಲೆ ಪ್ರಭಾವ ಬೀರಿದ ಕನ್ನಡದ ಹಿರಿಯ ತಲೆಮಾರಿನ ಕವಿಗಳಲ್ಲಿ ಶ್ರೀ ಮಧುರಚೆನ್ನರು ಒಬ್ಬರು. ೧೯೫೦ರಲ್ಲಿ ಪ್ರಕಟವಾದ ನನ್ನ 'ಭಾವ ಜೀವಿ' ಕೃತಿಯನ್ನು ಹಲಸಂಗಿಯ ಕಾವ್ಯರ್ಷಿ– ಮಧುರಚೆನ್ನರಿಗೆ ಅರ್ಪಿಸಿದ್ದೆ" (ಮಧುರಚೆನ್ನ) ಎಂದು ಮಧುರಚೆನ್ನರ ಪ್ರಭಾವವನ್ನು ಉಲ್ಲೇಖಿಸುವ ಕಣವಿಯವರು ಅವರ 'ನನ್ನ ನಲ್ಲ', 'ಮಧುರಗೀತ', 'ದೇವತಾ ಪೃಥಿವಿ' ಕುರಿತು ಆಳವಾದ ಚರ್ಚೆ ಬೆಳೆಸಿ ತನ್ಮೂಲಕ ಈ ಬರೆಹಗಳಲ್ಲಿ ವಿಸ್ತೃತವಾದ ಅಧ್ಯಯನ ನಡೆಸಿರುವುದನ್ನು ಕಾಣಬಹುದು. "ಭಾಷೆ, ಛಂದಸ್ಸುಗಳ ದೃಷ್ಟಿಯಿಂದಲೂ ಮಧುರಚೆನ್ನರ ಕಾವ್ಯ ಅಭ್ಯಸನೀಯವಾಗಿದೆ. ಅವರ ಕಂದ, ಷಟ್ಪದಿ, ಕುಸುಮ, ದ್ವಿಪದಿ, ತ್ರಿಪದಿ, ಹಾಗೂ ಭಾವಗೀತದ ವಿವಿಧ ಲಯಗಳು ತುಂಬಾ ಮನೋಜ್ಞವಾಗಿವೆ. ಹೊಸಗನ್ನಡ ಕಾವ್ಯಕ್ಕೆ ಜಾನಪದ ಸತ್ವ ತುಂಬಿ, ಆತ್ಮ ಚಿಂತನೆಯ ಅನುಭಾವ ಮಾರ್ಗದಲ್ಲಿ ಅದನ್ನು ನಡೆಸಿಕೊಂಡು ಹೋಗಿ ಕೃತಕೃತ್ಯರಾದ ಮಧುರಚೆನ್ನರು ಕೆಲವೇ ಕೃತಿಗಳನ್ನು ನೀಡಿದ್ದರೂ ಅವುಗಳ ಚೆಲುವು ಎಂದಿಗೂ ಮಾಸದಂತಹದ್ದು" –(ಪುಟ ೪೦ ಮಧುರಚೆನ್ನ) ಎಂದು ಕಣವಿಯವರು ಮಧುರಚೆನ್ನರ ಕಾವ್ಯದ ವಿಶೇಷತೆ ಹಾಗೂ ಅದರ ಐತಿಹಾಸಿಕ ಮಹತ್ವವನ್ನು ತಮ್ಮ ಬರಹದಲ್ಲಿ ಗುರುತಿಸಿದ್ದಾರೆ.

ಇಷ್ಟಲ್ಲದೆ ಮಧುರಚೆನ್ನರ ಆತ್ಮಚರಿತ್ರೆಯ ಭಾಗಗಳಾದ ಪೂರ್ವರಂಗ, ಕಾಳರಾತ್ರಿ, ಬೆಳಗು, ಆತ್ಮಸಂಶೋಧನ, ಕುರಿತು ಹಾಗೂ ಅವರ ಇನ್ನಿತರ ಕ್ಷೇತ್ರಗಳಾದ-ಲಿಪಿ, ಶಾಸನ, ಜಾನಪದ, ನಾಟಕ, ಕವಿಗಳ ಕಾಲನಿರ್ಣಯ ಮೊದಲಾದ ಕಡೆಗಳಲ್ಲಿ ನಡೆಸಿರುವ ಅಧ್ಯಯನವನ್ನು ತಮ್ಮ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಿದ್ದಾರೆ. ಸುಮಾರು ೨೨ ಭಾಷೆಗಳನ್ನು ಅರಿತವರಾಗಿದ್ದ-ಮಧುರಚೆನ್ನರು ಹಲಸಂಗಿಯಂತಹ ದೂರದ ಗ್ರಾಮದಲ್ಲಿದ್ದುಕೊಂಡು ನಡೆಸಿದ ಸಾಹಿತ್ಯಕ-ಆಧ್ಯಾತ್ಮಿಕ ಸಾಧನೆಯನ್ನು ಕಣವಿಯವರು ಅತ್ಯಂತ ವಿಸ್ಮಯದಿಂದ, ಬೆರಗಿನಿಂದ ನೋಡಿದ್ದಾರೆ. ಮಧುರಚೆನ್ನರನ್ನು ಕುರಿತು ಅಧ್ಯಯನ ಮಾಡಬಯಸುವ ಮುಂದಿನ ಬರಹಗಾರರಿಗೆ ಈ ಲೇಖನಗಳು ಒಳ್ಳೆಯ ಮಾರ್ಗದರ್ಶಿಯಾಗಿ ನಿಲ್ಲಬಲ್ಲವು.

ಕಣವಿಯವರ ವಿಮರ್ಶೆಯು ಒಳಗೊಳ್ಳುವ ಮತ್ತೊಂದು ಬಹು ಮುಖ್ಯವಾದ ವಿಷಯ ಅಥವ ವಸ್ತು ಎಂದರೆ–ನವೋದಯ ಕಾವ್ಯ. ನವೋದಯದ ಬಹುತೇಕ ಕವಿಗಳ ಕಾವ್ಯವು ಕಣವಿಯವರ ವಿಮರ್ಶೆಯ ವ್ಯಾಪ್ತಿಗೆ ಒಳಪಟ್ಟಿದೆ. ಬೇಂದ್ರೆ ಅವರನ್ನು ಕುರಿತು ಅವರು ಬರೆದಿರುವ ಲೇಖನಗಳು–ಬೇಂದ್ರೆಯವರ ಕಾವ್ಯದಲ್ಲಿ 'ಭಾವ ಸಂಪತ್ತು' (ಸಾಹಿತ್ಯ ಚಿಂತನ) 'ಅರಳು ಮರಳು' (ಸಾಹಿತ್ಯ ಚಿಂತನ) 'ಬೇಂದ್ರೆ ಕಾವ್ಯ ಭಾಷೆ ಮತ್ತು ಪ್ರತಿಮಾಯೋಜನೆ' (ಸಾಹಿತ್ಯ ಸಮಾಹಿತ) ಈ ಲೇಖನಗಳಲ್ಲಿ ಬೇಂದ್ರೆ ಅವರ ಕಾವ್ಯದ ವಿಶೇಷತೆಗಳನ್ನು ಮತ್ತು ಅದು ಕನ್ನಡ ಕಾವ್ಯ ಜಗತ್ತಿನಲ್ಲಿ ಉಂಟುಮಾಡಿದ ಪರಿಣಾಮಗಳನ್ನು ಕುರಿತು ವಿಶ್ಲೇಷಿಸಿದ್ದಾರೆ. ಅವರು ಒಂದು ಕಡೆ ಬೇಂದ್ರೆಯವರ ಕಾವ್ಯ ವಿಶೇಷತೆಯ ಬಗ್ಗೆ ಬರೆಯುತ್ತಾ "ಶಿಷ್ಟ ಕನ್ನಡದಲ್ಲಿ ಕವಿತೆಗಳನ್ನು ಬರೆದಿದ್ದರೂ ಬೇಂದ್ರೆ ಕಾವ್ಯ ಭಾಷೆಯ ವೈಶಿಷ್ಟ್ಯ ಎದ್ದು ಕಾಣುವುದು ಉತ್ತರ ಕರ್ನಾಟಕದ ಉಪಭಾಷೆಯನ್ನು ಅವರು ಬಳಸಿಕೊಂಡ ರೀತಿಯಲ್ಲಿ. ಹೊಸಗನ್ನಡ ಕಾವ್ಯಕ್ಕೆ ಯಾವುದೇ ಸಿದ್ಧ ಭಾಷೆ ಇನ್ನೂ ರೂಪುಗೊಂಡಿರದ ಸಂದರ್ಭದಲ್ಲಿ ಭಾಷೆಯ ಮಡಿವಂತಿಕೆಯಿಂದ ಹೊರಬಂದು, ಆಡುನುಡಿಯನ್ನು, ಜನಪದ ಭಾಷೆಯನ್ನು ಕಾವ್ಯಕ್ಕೆ ಒಗ್ಗಿಸಿಕೊಂಡ ನಿರ್ಧಾರ ಹಾಗೂ ಅದರಲ್ಲಿ ಪಡೆದ ಕಣ್ಣು ಕುಕ್ಕುವಂತಹ ಯಶಸ್ಸು ಕನ್ನಡ ಸಾಹಿತ್ಯದ ದೃಷ್ಟಿಯಿಂದ ಒಂದು ಐತಿಹಾಸಿಕ ಮಹತ್ವದ ಸಂಗತಿಯಾಗಿದೆ. ಒಂದೇ ಕವಿತೆಯಲ್ಲಿ ಭಾಷೆಯನ್ನು ಬೇರೆ ಬೇರೆ ಸ್ತರಗಳಲ್ಲಿ ದುಡಿಸಿಕೊಳ್ಳುವುದು ಬೇಂದ್ರೆ ಕಾವ್ಯದ ವೈಶಿಷ್ಟ್ಯವಾಗಿದೆ"– ಎಂದು ಉಲ್ಲೇಖಿಸಿ ಬೇಂದ್ರೆಯವರ ಅನೇಕ ಕವಿತೆಗಳನ್ನು ಕಣವಿಯವರು ಈ ದೃಷ್ಟಿಕೋನದಿಂದ ಚರ್ಚೆ ಮಾಡಿದ್ದಾರೆ.

ಇಂಥದ್ದೆ ಚರ್ಚೆಯ ಮಾದರಿಗಳನ್ನು– 'ಕುವೆಂಪು ಕಾವ್ಯದಲ್ಲಿ ಪಕ್ಷಿಲೋಕ', 'ಕುವೆಂಪು ಅವರ ಇಬ್ಬನಿಯವತಾರ', 'ಕವಿ ಕಂಡ ರವಿ' (ಕನ್ನಡ ಸಾಹಿತ್ಯದ ಕಾವ್ಯ ಪ್ರಪಂಚದಲ್ಲಿ ರವಿ ಕುರಿತ ಬರೆದ ಪದ್ಯಗಳ ಒಂದು ಸ್ವಾರಸ್ಯಕರ ಚರ್ಚೆ) 'ಕುವೆಂಪು ಕಾವ್ಯ ಒಂದು ಸೃಜನಶೀಲ ಪ್ರತಿಕ್ರಿಯೆ'–ಮೊದಲಾದ ಲೇಖನಗಳಲ್ಲಿ ಕಣವಿಯವರು ತಾವು ಕಂಡ, ಓದಿದ–ಮೆಚ್ಚಿದ ಕವಿಗಳನ್ನು ಕುರಿತು ಚರ್ಚಿಸಿದ್ದಾರೆ. ಈ ಇಬ್ಬರನ್ನು ತಾವು ಮೆಚ್ಚಿಕೊಳ್ಳಲು ಹಿಂದಿರುವ ಕಾರಣಗಳನ್ನು ಕೂಡ ಈ ಲೇಖನಗಳಲ್ಲಿ ದಾಖಲಿಸಿದ್ದಾರೆ. ಕುವೆಂಪು ತಮ್ಮ ಕಾವ್ಯದಲ್ಲಿ ಕಟ್ಟಿಕೊಡುವ ಮಲೆನಾಡನ್ನು–ಹಾಗೂ ಬೇಂದ್ರೆಯವರು ತಮ್ಮ ಕಾವ್ಯದಲ್ಲಿ ನಡೆಸುವ ಭಾಷಾ ಪ್ರಯೋಗಗಳನ್ನು ಕುರಿತು ಮೆಚ್ಚಿಗೆಯ ಮಾತುಗಳನ್ನೆ ಆಡಿದ್ದಾರೆ.

ನವೋದಯ ಕಾವ್ಯ ಕುರಿತ ಅವರ ವಿಮರ್ಶಾ ಲೇಖನಗಳಲ್ಲಿ ಗಮನಿಸಬಹುದಾದವುಗಳೆಂದರೆ– 'ಆನಂದಕಂದರ ಕಾವ್ಯ; ಒಂದು ಸಮೀಕ್ಷೆ' 'ವಿನಾಯಕರ ಐದು ನೀಳ್ಗವನಗಳು' 'ಎಂ.ವಿ.ಸೀ.–ಅವರ ಸುನೀತಗಳು' 'ವಿ.ಸಿ. ಕಾವ್ಯದ ಹೆಜ್ಜೆಪಾಡು' 'ಕೆ.ಎಸ್. ನರಸಿಂಹಸ್ವಾಮಿಯವರ ವಾತ್ಸಲ್ಯ ಗೀತೆಗಳು' 'ಜೋಳದರಾಶಿಯವರ ಎರಡು ಕಾವ್ಯ ಸಂಗ್ರಹಗಳು' (ರಸವರ್ಷ–೧೯೫೩ ಹಾಗೂ ಗೌಡತಿ ಬರಲಿಲ್ಲ–೧೯೭೭) 'ದಿನಕರ ದೇಸಾಯಿ ಅವರ ಕಾವ್ಯ' 'ಬೆರಗಿನಿಂದ ನಿಬ್ಬೆರಗಿಗೆ–ಜಿ.ಎಸ್.ಎಸ್. ಕಾವ್ಯ' 'ವೀ.ಚಿ.ಯವರ

ಕಾವ್ಯ ಒಂದು ಅವಲೋಕನ' 'ಸಾ.ಶಿ. ಮರುಳಯ್ಯ ಅವರ ಕಾವ್ಯ'-ಇಂಥ ವಿಮರ್ಶಾ ಲೇಖನಗಳಲ್ಲಿ ಕಣವಿಯವರು ಆಯಾ ಕವಿಗಳ ವಿಶಿಷ್ಟ ಗುಣ-ಲಕ್ಷಣಗಳನ್ನು ಮತ್ತು ಅವರ ಕಾವ್ಯಕ್ಕಿರುವ ನೆಲೆ-ಬೆಲೆಗಳನ್ನು ಚರ್ಚಿಸಿದ್ದಾರೆ.

ಆಶ್ಚರ್ಯದ ಮತ್ತು ಚಕಿತಗೊಳಿಸುವ ಸಂಗತಿಯೆಂದರೆ ಕಣವಿಯವರ ಕಾವ್ಯ ವಿಮರ್ಶೆಯಲ್ಲಿ ನವ್ಯಕಾವ್ಯ ಕುರಿತ ವಿಮರ್ಶೆ ತೀರಾ ಕಡಿಮೆ. 'ಆಧುನಿಕ ಕನ್ನಡ ಕಾವ್ಯ-ರೂಪ, ವಿನ್ಯಾಸ, ದೃಷ್ಟಿ-ಧೋರಣೆ'-ಎಂಬ ಕಣವಿಯವರು ಬರೆದಿರುವ ಒಂದು ಮಹತ್ವದ ಲೇಖನದಲ್ಲಿ ಕನ್ನಡ ಕಾವ್ಯ ನಡೆದು ಬಂದ ದಾರಿಯ ಹೆಜ್ಜೆ-ಗುರುತುಗಳನ್ನು ದಾಖಲಿಸುವ ಸಂದರ್ಭದಲ್ಲಿ ಮಾತ್ರ ಅವರು ಆ ಕಾವ್ಯದ ಚರ್ಚೆಯನ್ನು ಎತ್ತಿಕೊಳ್ಳುತ್ತಾರಾದರೂ ಅಲ್ಲಿಯೂ ಅವರು 'ಭಾವಕ್ಕಿಂತ ಹೆಚ್ಚು ಬುದ್ಧಿ ಪ್ರಧಾನವಾದ ಈ ಕಾವ್ಯ ಸಾಮಾಜಿಕ ಸಮಸ್ಯೆಗಳ ಬಗ್ಗೆ ತನ್ನ ವ್ಯಕ್ತಿತ್ವವನ್ನು ಮರೆಯಲಾಗದ ರೀತಿಯಲ್ಲಿ ಕ್ಲೇಶಕ್ಕೊಳಗಾಗಿಸಿದೆ'-ಎನ್ನುತ್ತಾರೆ. ಅಲ್ಲದೆ ಆ ಕಾವ್ಯ ಪ್ರಕಟಿಸುವ ವ್ಯಂಗ್ಯ, ಉಡಾಫೆ, ನಿರಾಶೆ, ಸಿನಿಕತನದ ಬಗ್ಗೆ-ಅಂಥ ಯಾವುದೇ ನಿಲುವನ್ನು ಪ್ರಕಟಿಸುವುದಿಲ್ಲ. ಅದೇ ಲೇಖನದಲ್ಲಿ ದಲಿತಕಾವ್ಯದ ಮುನ್ಸೂಚನೆಯ ಬಗ್ಗೆ ಬರೆಯುತ್ತಾ ಅಂದರೆ ೧೯೭೦ರ ಸುಮಾರಿನಲ್ಲಿಯೇ-"ಇಂದು ದೇಶದಲ್ಲಿ ತಲೆಯೆತ್ತುತ್ತಿರುವ ಹೊಸ ಸಾಮಾಜಿಕ ಅರಿವಿನ ಸಂದರ್ಭದಲ್ಲಿ ದಲಿತ ಪಂಥದ ಕವಿಗಳು ಹೆಚ್ಚಿನ ಆವೇಗವನ್ನು ಪಡೆಯುವ ಸೂಚನೆಗಳಿದ್ದು, ಆಧುನಿಕ ಕನ್ನಡ ಕಾವ್ಯ ಸಂಪ್ರದಾಯ ಅವರ ಕೊಡುಗೆಯಿಂದ ಶ್ರೀಮಂತಗೊಳ್ಳುವ ಅವಕಾಶವಿದೆ" ಎಂಬ ಮುಂಗಾಣ್ಕೆಯನ್ನು ಪ್ರಕಟಿಸುವ ಮೂಲಕ ಕಾವ್ಯದ ಓದಿನಿಂದ ಲಭ್ಯವಾದ ತಮ್ಮ ಒಳನೋಟಗಳ ಆಧಾರದಿಂದ ಕನ್ನಡ ಕಾವ್ಯ ಮುಂಬರುವ ದಿನಗಳಲ್ಲಿ ಪಡೆಯಬಹುದಾದ ತಿರುವುಗಳನ್ನು ಗುರುತಿಸುತ್ತಾರೆ.

ಕಣವಿಯವರು ತಮ್ಮ ಕಾವ್ಯ ವಿಮರ್ಶೆಗೆ ಆಯ್ದುಕೊಂಡ ಕವಿಗಳನ್ನು ಹಾಗೂ ಕವನ ಸಂಕಲನಗಳನ್ನು ಒಂದು ಸೂಕ್ಷ್ಮ ವಿಶ್ಲೇಷಣೆಗೆ ಒಳಪಡಿಸಿದರೆ ಸಾಕು, ಕಣವಿಯವರ ಗದ್ಯದ ಮನೋಧರ್ಮ ತಟ್ಟನೆ ಹೊಳೆಯುತ್ತದೆ. ಈ ಎಲ್ಲಾ ಕವಿಗಳಲ್ಲೂ ನವೋದಯ ಕಾವ್ಯದ ಗುಣ-ಧರ್ಮಗಳು, ಆಶಯಗಳೂ, ಮತ್ತು ಅನುಭಾವಿಕ ಹಾಗೂ ಸಾಮಾಜಿಕ ಅಥವ ಈ ಎರಡನ್ನು ಒಂದು ಹದದಲ್ಲಿ ಕಟ್ಟಿಕೊಡುವ ಕಾವ್ಯದ ಕಡೆ ಕಣವಿಯವರ ಒಲವು ಕೊಂಚ ಹೆಚ್ಚು. ಅವರ ಕಾವ್ಯ ವಿಮರ್ಶೆಯ ಉದ್ದಕ್ಕೂ-ಅದು ಬಸವಣ್ಣನವರ ವಚನ ಸಾಹಿತ್ಯದ ವಿಶ್ಲೇಷಣೆಯಿಂದ ಆರಂಭಗೊಂಡು ಮಧುರಚೆನ್ನರನ್ನು ಒಳಗೊಂಡು ವಿ.ಚೀ.ಯವರ ಕಾವ್ಯದವರೆಗೂ ಇದೇ ಬಗೆಯ ಧಾಟಿಯಲ್ಲಿ ಮುಂದುವರೆಯುತ್ತದೆ.

ಕಣವಿಯವರ ಒಟ್ಟಾರೆ ವಿಮರ್ಶೆ-ಸಹೃದಯ ಪ್ರತಿಕ್ರಿಯೆಯ ಮಾದರಿಯದು. ಕಾವ್ಯವನ್ನು ಅದು ಮೊದಲು ಕಾವ್ಯವಾಗಿದೆಯೇ ಎಂದು ಪರೀಕ್ಷೆಗೆ ಒಡ್ಡುವ ರೀತಿಯದು. ಹಾಗೆ ಕಾವ್ಯವಾಗಿದ್ದಲ್ಲಿ ಅದನ್ನು ಕಾವ್ಯವಾಗಿರಿಸಿರುವ ಅಂಶಗಳಾವುವು- ಅದರ ಭಾಷೆಯೆ, ವಸ್ತುವೇ, ಪ್ರತಿಮೆ, ರೂಪಕ, ಛಂದಸ್ಸು, ಲಯ, ಪ್ರಾಸವೇ-ಎಂಬ ವಿಶ್ಲೇಷಣಾತ್ಮಕ ಜಾಡನ್ನು ಅವಲಂಬಿಸುವುದು. ಕಾವ್ಯದ ಆಶಯ ಮತ್ತು ಆಕೃತಿಗಳನ್ನು ಒಂದು ಹದವಾದ-

ಸಮತೂಕದ ತಕ್ಕಡಿಯಲ್ಲಿಟ್ಟು ತೂಗುವುದು ಅವರ ಗದ್ಯದ ವಿಶೇಷ. ಅವರು ಯಾವುದೇ ಕವಿಯ ಕಾವ್ಯವನ್ನು ಪ್ರವೇಶಿಸುವುದು ಭಾವದಿಂದ ಮಾತ್ರವೇ ಹೊರತು ಬುದ್ಧಿಯಿಂದಲ್ಲ. ಹೀಗಾಗಿ ಅವರ ಕಾವ್ಯ ವಿಮರ್ಶೆಯಲ್ಲಿ ಬೌದ್ಧಿಕ ಸರ್ಕಸ್ಸು ಕಾಣಿಸಿಕೊಳ್ಳುವುದಿಲ್ಲ. ಭಾವ ಸ್ಪಂದನಗಳು–ಕಾವ್ಯಾನುಸಂಧಾನದ ತರಂಗಗಳು ಕಾಣುತ್ತವೆ.

ಕಣವಿಯವರ ಗದ್ಯ ಒಳಗೊಳ್ಳುವ ಮತ್ತೊಂದು ವಿಭಿನ್ನವಾದ ವಸ್ತು-ವಿಷಯವೆಂದರೆ–ಜಾನಪದ. ಅವರ ಕಾವ್ಯ ಬದುಕಿನ ಆರಂಭದಲ್ಲಿಯೇ ಅವರು ತೆರಕೊಂಡ–ಜಾನಪದ ಪರಿಸರ ಮತ್ತು ಆ ಕಾಲದಲ್ಲಿಯೇ ಹಲಸಂಗಿ ಗೆಳೆಯರು ಕೈಗೊಂಡ ಜಾನಪದ ಸಂಗ್ರಹ ಕಾರ್ಯ ಈ ದಿಕ್ಕಿನಲ್ಲಿ ಅವರು ಗಂಭೀರವಾಗಿ ಚಿಂತಿಸುವಂತೆ ಮಾಡಿದಂತೆ ತೋರುತ್ತದೆ. ಅದರಲ್ಲೂ 'ಗರತಿಯ ಹಾಡು' ಹಾಗೂ 'ಮಲ್ಲಿಗೆ ದಂಡೆ' ಕೃತಿಗಳು ಅವರ ಮೇಲೆ ಗಾಢ ಪ್ರಭಾವ ಬೀರಿ ಕಣವಿಯವರು–ತಮ್ಮ ಕಾವ್ಯಕ್ಕೆ ಅಗತ್ಯವಾದ ಜಾನಪದೀಯ ಸಂಸ್ಪರ್ಶ, ಮಟ್ಟು, ಲಯ, ಪ್ರಾಸ, ವಿವಿಧ ಛಂದೋಮಾದರಿಗಳ ಅನ್ವೇಷಣಾಕಾಂಕ್ಷಿಯಾಗಿಯೂ ಅವರು ಈ ಬಗೆಯ ಲೇಖನಗಳ ರಚನೆಗೆ ಮುಂದಾದಂತೆ ತೋರುತ್ತದೆ.

"ಜನಪದ ಸಾಹಿತ್ಯದ ಕಾವ್ಯ ಭಾಷೆ" (ಸಮಾಹಿತ) ಎಂಬ ಲೇಖನ ಈ ದಿಕ್ಕಿನ ಒಂದು ಮನೋಜ್ಞ ಲೇಖನ. ಜನಪದ ಕಾವ್ಯ ಭಾಷೆಯ ಸಮೃದ್ಧತೆ, ಶ್ರೀಮಂತಿಕೆ, ಅದರ ದೇಸಿಗುಣ, ಅದರ ಸರಳ ಸಹಜತನಗಳನ್ನು ಸೋದಾಹರಣವಾಗಿ ಚರ್ಚಿಸುವ ಕಣವಿಯವರು "ಜನಪದ ಕಾವ್ಯ ಅನೇಕ ರೀತಿಯ ಪದ್ಯರೂಪಗಳನ್ನು ಒಳಗೊಂಡಿದೆ. ತ್ರಿಪದಿಗಳು, ಲಾವಣಿಗಳು, ಸೋಬಾನದ ಹಾಡುಗಳು, ಕಥನ ಕವನಗಳು, ಕೋಲಾಟದ ಪದಗಳು, ಬಯಲಾಟಗಳು ಇತ್ಯಾದಿ"ಗಳನ್ನು (ಪು.–೯) ಕಣವಿಯವರು ಪ್ರಸ್ತಾಪಿಸುತ್ತಾರೆ. ಈ ದಿಕ್ಕಿನಲ್ಲಿ ವ್ಯಾಪಕ ಚಿಂತನೆ ನಡೆಸಿದ ಡಾ. ವೆರಿಯರ್ ಎಲ್ವಿನ್ ಅವರ ವಿಚಾರಗಳನ್ನು 'ಹೋಳಿ ಸಂಪ್ರದಾಯ'– ಲೇಖನದಲ್ಲಿ ಚರ್ಚಿಸುತ್ತಾರೆ. ಹಾಗೆಯೇ ಜನಪದ ಸಂಗ್ರಹಣೆ, ವಿಶ್ಲೇಷಣೆ, ಮತ್ತು ಅವುಗಳ ತೌಲನಿಕ ಅಧ್ಯಯನದಲ್ಲಿ ಅಪಾರ ಕೆಲಸ ಮಾಡಿದ – ಕಾರಂತ, ಹೆಚ್.ಎಲ್. ನಾಗೇಗೌಡ, ಶಿವರಾಮ ಐತಾಳ–ಮೊದಲಾದವರ ವಿಚಾರಗಳನ್ನು ಇಲ್ಲಿ ಉದಾಹರಿಸುತ್ತಾರೆ.

'ಜನಪದ ಕಾವ್ಯದ ಮೂಲಕ ಜನಾಂಗದ ಸಂಸ್ಕೃತಿಯ ಅಧ್ಯಯನ'–ಎನ್ನುವ ಲೇಖನದಲ್ಲಿ "ಹೀಗೆ ಪ್ರಧಾನವಾಗಿ ಇವು ಹಾಡುಗಳ ಸಂಗ್ರಹವಾಗಿದ್ದರೂ ಈ ಗೀತಗಳು ಆಯಾ ಮಾನವಕುಲಗಳ, ಜನಾಂಗಗಳ ಇಡಿಯ ಜೀವನ ಕ್ರಮದ ಬಗ್ಗೆ ಭಾಷ್ಯ ಬರೆದಂತಿವೆ. ಇವುಗಳಲ್ಲಿ ಜನಾಂಗ ವೈಲಕ್ಷಣ್ಯಗಳು ಎಲ್ಲಿ ಮುಗಿದು, ಕಾವ್ಯ ಎಲ್ಲಿಂದ ಪ್ರಾರಂಭವಾಗುತ್ತದೆ ಎಂದು ಹೇಳುವುದು ಕಠಿಣ" – (ಸಮಾಹಿತ ಪುಟ ೪೩) ಎನ್ನುತ್ತಾರೆ ಕಣವಿಯವರು.

ಇದೇ ಬಗೆಯ ಇತರ ಲೇಖನಗಳೆಂದರೆ–'ಸ್ವಾತಂತ್ರ್ಯಪೂರ್ವದ ಕನ್ನಡ ಜನಪದ ಸಾಹಿತ್ಯ'–'ಆಧುನಿಕ ಪರಿಸರ ಮತ್ತು ಜನಪದ ಸಾಹಿತ್ಯ'–'ಜನಪದ ಕಾವ್ಯದಲ್ಲಿ

ಪ್ರತಿಮಾವಿಧಾನ' ಮೊದಲಾದವುಗಳನ್ನು ನೋಡಬಹುದು. 'ಜನಪದ ಕಾವ್ಯದಲ್ಲಿ ಪ್ರತಿಮಾವಿಧಾನ'-ಒಂದು ಮೌಲಿಕವಾದ ಹಲವು ವೈಶಿಷ್ಟ್ಯಗಳನ್ನು ಒಳಗೊಂಡ ಒಂದು ವಿಭಿನ್ನ ಲೇಖನ. ಜನಪದ ಕಾವ್ಯ ಸೃಜನಗೊಳ್ಳುವ ಹಲವು ನೆಲೆಗಳ ತಲಸ್ಪರ್ಶಿ ಅಧ್ಯಯನವನ್ನು ಈ ಲೇಖನ ಒಳಗೊಂಡಿದೆ. ಜನಪದ ಕಾವ್ಯದಲ್ಲಿ ನಿಸರ್ಗ, ಮಾನವ ಸಂಬಂಧಗಳು ದೈವಾರಾಧನೆ ಹಬ್ಬ-ಹರಿದಿನಗಳು, ವಾತ್ಸಲ್ಯ-ಪ್ರೇಮ ಪ್ರಣಯಗಳು-ಪ್ರತಿಮಾವಿಧಾನದಲ್ಲಿ ಭಾಷಿಕ ಆಕಾರ ಪಡೆಯುವ ಸೋಜಿಗವನ್ನು ಕಣವಿಯವರು ಇಲ್ಲಿ ಚರ್ಚಿಸಿದ್ದಾರೆ. ಲೇಖನದ ಕಡೆಯಲ್ಲಿ ಅವರು ಆಡುವ ಮಾತು..."ಈ ಕವಿಗಳು ಪಂಡಿತರಲ್ಲ. ಪ್ರೌಢ ಕವಿಗಳು ಬರೆದ ಕಾವ್ಯಗಳನ್ನು ಓದಿದವರಲ್ಲ. ತಮ್ಮ ಕಣ್ಣುಗಳಿಂದಲೇ ಸುತ್ತಣ ಜಗತ್ತನ್ನು ಕಂಡವರು, ತಮ್ಮ ಕಿವಿಗಳಿಂದಲೇ ಜೀವನ ಸಂಗೀತ ಕೇಳಿದವರು...ಅವರ ವೈಯಕ್ತಿಕವಾದ ಸ್ವಂತ ಅನುಭವವೇ ಅವರ ಕಾವ್ಯದ ಪ್ರತಿಮಾಸೃಷ್ಟಿಯ ತಳಹದಿಯಾಗಿದೆ. ಹಾಗೂ ಈ ಪ್ರತಿಮೆಗಳ ಒಡಲಿನಿಂದಲೇ ಅವರ ಕವಿತೆ ಚಿಗುರುತ್ತದೆ". (ಕಾವ್ಯಾನು ಸಂಧಾನ-ಪುಟ ೯೮).

**ಒಡನಾಟ**

ಕಣವಿಯವರು ಹೈಸ್ಕೂಲು ವಿದ್ಯಾರ್ಥಿಯಾಗಿ, ಬರವಣಿಗೆಯ ಮೊದಲ ತರಂಗಗಳಿಗೆ ತಮ್ಮ ಎದೆ ತೆರಕೊಳ್ಳುವ ಸಂದರ್ಭದಿಂದ ಹಿಡಿದು ಕಳೆದ ಸರಿ ಸುಮಾರು ಆರು ದಶಕಗಳವರೆಗೆ-ಅಂದರೆ ಇಂದಿನವರೆಗೆ ತಮ್ಮ ಗಾಢ ಸಂಪರ್ಕಕ್ಕೆ ಬಂದ, ತಮ್ಮನ್ನು ಗಾಢವಾಗಿ ಪ್ರಭಾವಿಸಿದ ಒಂದಲ್ಲ ಒಂದು ಕಾರಣದಿಂದ ತಮ್ಮ ಸ್ಮೃತಿಕೋಶದಲ್ಲಿ ಮರೆಯಲಾಗದೆ ಉಳಿದ ಮಹಾನುಭಾವರ ವ್ಯಕ್ತಿಚಿತ್ರಗಳ ಬರವಣಿಗೆ ಕಣವಿಯವರ ಒಟ್ಟು ಗದ್ಯದ ಒಂದು ಬಹು ಮುಖ್ಯ ಭಾಗ. ಹಾಗೂ ನಾನಾ ಕಾರಣಗಳಿಂದ ತೀರಾ ಮಹತ್ವದ್ದೂ ಆಗಿ ಕಾಣಬರುತ್ತದೆ. ಅವರ ಎರಡು ಪ್ರಮುಖ ಗದ್ಯ ಕೃತಿಗಳಾದ "ಸಾಹಿತ್ಯ ಸಮಾಹಿತ"ದಲ್ಲಿ ೩೧ ಜನ ಒಡನಾಡಿಗಳನ್ನು ಹಾಗೂ "ಸದ್ಭಾವ" ಗ್ರಂಥದಲ್ಲಿ-೩೩ ಜನ ಒಡನಾಡಿಗಳನ್ನು ಅವರು ತಾವು ಕಂಡ ರೀತಿಯಲ್ಲಿ, ಪರಿಭಾವಿಸಿದ ರೀತಿಯಲ್ಲಿ, ಗ್ರಹಿಸಿದ ರೀತಿಯಲ್ಲಿ -ಅವರ ನುಡಿ ಚಿತ್ರಗಳಲ್ಲಿ ಕಟ್ಟಿಕೊಟ್ಟಿದ್ದಾರೆ. 'ಸಾಹಿತ್ಯ ಸಮಾಹಿತ'ದಲ್ಲಿ ಕಾಣಬರುವ ಬಹುಪಾಲು ವ್ಯಕ್ತಿಚಿತ್ರಗಳು-ಹಿರಿಯ ತಲೆಮಾರಿಗೆ ಸೇರಿದವರೂ...ಕನ್ನಡದ ಸಾಂಸ್ಕೃತಿಕ ದಿಗ್ಗಜರೂ ಹಾಗೂ ಕಣವಿಯವರನ್ನು ಒಂದಲ್ಲ ಒಂದು ರೀತಿಯಲ್ಲಿ ಪ್ರಭಾವಿಸಿದವರೂ ಆಗಿರುವ ಪ್ರಯುಕ್ತ...ಇಲ್ಲಿನ ಬರವಣಿಗೆ ತೀರಾ ಆತ್ಮೀಯವೂ, ಹೃದಯ ಸ್ಪರ್ಶಿಯೂ ಮತ್ತು ಕಳೆದ ದಿನಮಾನಗಳ ಕುರಿತ ಹಂಬಲಿಕೆಯೂ, ಕಳೆದುಹೋದ ಹಿರಿಯ ಜನಾಂಗ ಕುರಿತ ನುಡಿ ನಮನವೂ ಆಗಿ ಕಾಣಬರುತ್ತದೆ.

ಆದರೆ "ಸದ್ಭಾವ"-ಗ್ರಂಥದಲ್ಲಿ ಕಾಣಿಸಿಕೊಳ್ಳುವ ಹೆಚ್ಚಾನು ಹೆಚ್ಚು ನುಡಿಚಿತ್ರಗಳಲ್ಲಿ ಕಾಣಿಸಿಕೊಳ್ಳುವ ಬಹುತೇಕ ವ್ಯಕ್ತಿಗಳು...ಕಣವಿಯವರ ಸಮಕಾಲೀನರೋ ಅಥವ ಅವರ ಕಿರಿಯರೋ ಆದ್ದರಿಂದ ಒಂದು ಕಾಲದ ಅಂತರ ಸದಾ ಈ ಲೇಖನಗಳ ನಡುವೆ ನುಸುಳುತ್ತದೆ. ಹಾಗೂ ಈಗ ಸಾಹಿತ್ಯ ಲೋಕದಲ್ಲಿ ಹೆಚ್ಚಾಗಿರುವ ಅಭಿನಂದನಾ

ಗ್ರಂಥಗಳಿಗೆ ಬರೆಯುವ ರೂಢಿ–ಹಾಗೂ ಅನಿವಾರ್ಯತೆ ಕೂಡ ಇಂಥ ಲೇಖನಗಳಿಗೆ ಕಾರಣವಾಗಿದ್ದು "ಸಾಹಿತ್ಯ ಸಮಾಹಿತ" ಕೃತಿಯಲ್ಲಿ ಕಾಣ ಬರುವ ಬೀಸು, ಸೊಗಸು, ವ್ಯಾಪ್ತಿ, ಆತ್ಮೀಯತೆ, ತನ್ಮಯತೆ–ಎರಡನೆ ಗ್ರಂಥದಲ್ಲಿ ಸತತವಾಗಿ ಕಾಣಬರುವುದಿಲ್ಲ.

'ಸಾಹಿತ್ಯ ಸಮಾಹಿತ'–ಪುಸ್ತಕದಲ್ಲಿ ಕಾಣಬರುವ ಬಹುತೇಕ ವ್ಯಕ್ತಿಗಳ ಚಿತ್ರಣ ಶುರುವಾಗುವುದೇ ಬೆರಗಿನಿಂದ–'ಮಾಸ್ತಿ–ನಾನು ಕಂಡಂತೆ' –ಎಂಬ ಮೊದಲ ಲೇಖನದಲ್ಲಿಯೇ ಇದರ ಸೂಚನೆ ಕಾಣಬರುತ್ತದೆ. ಕಣವಿಯವರು ಅನೇಕ ಸಾಹಿತ್ಯ ದಿಗ್ಗಜರನ್ನು ಮೊಟ್ಟಮೊದಲ ಬಾರಿ ಕಂಡದ್ದೆ ೧೯೪೪ರಲ್ಲಿ ರಬಕವಿಯಲ್ಲಿ ನಡೆದ ಸಾಹಿತ್ಯ ಸಮ್ಮೇಳನದಲ್ಲಿ...ಅವರ ಹಲವು ವ್ಯಕ್ತಿಚಿತ್ರಗಳಲ್ಲಿ ಈ ಪ್ರಸಂಗ ಮತ್ತೆ ಮತ್ತೆ ದಾಖಲಾಗುತ್ತದೆ. ಬಹುತೇಕ ಪ್ರಗತಿಶೀಲರನ್ನು ಕಣವಿಯವರು ಕಂಡಿದ್ದೇ ಈ ಸಮ್ಮೇಳನದಲ್ಲಿ. ಈ ಸಮಾವೇಶದಲ್ಲಿ ಮೊದಲ ಬಾರಿಗೆ ಕಂಡ ಮಾಸ್ತಿಯವರ ಜೊತೆಗಿನ ಅವರ ಸಂಬಂಧ ಮುಂದೆ ಹಲವು ರೀತಿಯಲ್ಲಿ ಹಬ್ಬುತ್ತಾ ಸಾಗುತ್ತದೆ. ಮಾಸ್ತಿಯವರ 'ಜೀವನ'–ಪತ್ರಿಕೆಯಲ್ಲಿ ಕಣವಿಯವರ ಪದ್ಯಗಳ ಪ್ರಕಟಣೆ... ೧೯೪೬ರಲ್ಲಿ ಬೇಂದ್ರೆಯವರ ೫೦ನೇ ವರ್ಷದ ಹುಟ್ಟು ಹಬ್ಬ ಧಾರವಾಡದಲ್ಲಿ...೧೯೪೯ರಲ್ಲಿ ಮಾಸ್ತಿ ಧಾರವಾಡಕ್ಕೆ ಬಂದಾಗ ಹುಶಾರು ತಪ್ಪಿ ಹಾಸಿಗೆ ಹಿಡಿದಾಗ ಕಣವಿಯವರೇ ಅವರ ಶುಶ್ರೂಷೆಗೆ ನಿಂತದ್ದು...ಮುಂದೆ ಕಣವಿಯವರು... ಮಾಸ್ತಿಯವರನ್ನು ಬೆಂಗಳೂರಿನಲ್ಲಿ ಅವರ ಮನೆಯಲ್ಲಿ ಕಂಡದ್ದು. ಇಂಥ ಹಲವು ಸ್ವಾರಸ್ಯಕರ ಪ್ರಸಂಗಗಳನ್ನು ಉಲ್ಲೇಖಿಸಿರುವ ಕಣವಿಯವರು–ಮಾಸ್ತಿಯವರ ಉದಾರತೆಯನ್ನು, ಅಜಾತಶತ್ರು ಗುಣವನ್ನು ಕೊಂಡಾಡುತ್ತಾರೆ. ಮಾಸ್ತಿಯುವರದು ತುಂಬಾ ಮಾಗಿದ ಮನಸ್ಸಾಗಿದ್ದು 'ಚನ್ನಬಸವನಾಯಕ'–ಕಾದಂಬರಿ ಕುರಿತ ವಿವಾದದಲ್ಲಿ ಮಾತ್ರ ಅವರೊಮ್ಮೆ ವ್ಯಗ್ರರಾದದ್ದನ್ನು ಬಿಟ್ಟರೆ, ಅವರು ಮತ್ತೆಂದೂ ಕೋಪಗೊಂಡಿದ್ದನ್ನು ತಾನು ಕಂಡಿಲ್ಲವೆಂಬುದನ್ನು ಕಣವಿಯವರು ಈ ಲೇಖನದಲ್ಲಿ ಉಲ್ಲೇಖಿಸುತ್ತಾ ಮಾಸ್ತಿಯವರು ಈ ಸಂದರ್ಭದಲ್ಲಿ ಆಡಿದರೆನ್ನಲಾದ 'ನನ್ನ ಬಾಳಿನಲ್ಲಿ ತಪ್ಪೇನಾಗಿದೆ, ಇದಕ್ಕೆಲ್ಲಾ ನನ್ನ ಸ್ವಭಾವ ಕಾರಣ, ಒಳ್ಳೇದೇನಾಗಿದೆ ಅದೆಲ್ಲದರ ಕಾರಣ ದೈವ ಕೃತ್ಯ' ಎಂಬ ಮಾತನ್ನು ದಾಖಲಿಸುತ್ತಾರೆ.

ಕಣವಿಯವರು ಬರೆದಿರುವ ಒಟ್ಟು ವ್ಯಕ್ತಿಚಿತ್ರಗಳನ್ನು ಅಧ್ಯಯನದ ದೃಷ್ಟಿಯಿಂದ–ವಿದ್ಯಾರ್ಥಿ ದೆಸೆಯಲ್ಲಿ ಕಂಡ ವ್ಯಕ್ತಿ ಚಿತ್ರಗಳು–ವೃತಿಕಾಲದಲ್ಲಿ ಕಂಡ ವ್ಯಕ್ತಿಚಿತ್ರಗಳು–ಹಾಗೂ ಸಾಹಿತ್ಯ ಪ್ರವೃತ್ತಿಯ ದೆಸೆಯಿಂದ ಅವರ ಸಾಹಚರ್ಯಕ್ಕೆ ಒದಗಿಬಂದ ವ್ಯಕ್ತಿಗಳ ಕುರಿತಾದ ಚಿತ್ರಗಳು ಎಂದು ವಿಂಗಡಿಸಬಹುದು. ಉಳಿದಂತಹವುಗಳು...ಅಪೇಕ್ಷೆಯ ಮೇರೆಗೆ ಬರೆದ ವ್ಯಕ್ತಿಚಿತ್ರಗಳು ಎಂದೂ ಕರೆಯಬಹುದು.

ವಿದ್ಯಾರ್ಥಿ ದೆಸೆಯಲ್ಲಿ ಅವರು ಕಂಡ ವ್ಯಕ್ತಿಗಳನ್ನು ಕುರಿತು ಬರೆದ ವ್ಯಕ್ತಿ ಚಿತ್ರಗಳ ಸಾಲಿಗೆ–ವರಕವಿ ಬೇಂದ್ರೆ, ಶಂಬಾ, ಸ.ಸ. ಮಾಳವಾಡ, ಎಂ.ವಿ. ಇನಾಂದಾರ, ಜಿ.ಬಿ. ಜೋಶಿ, ಶಿ.ಶಿ. ಬಸವನಾಳ...ಮೊದಲಾದವರಿದ್ದಾರೆ. ಇವೆಲ್ಲವುಗಳ ಕಾಲ ಸ್ವಾತಂತ್ರ್ಯ ಪೂರ್ವದ ಕಾಲ... ವರಕವಿ ಬೇಂದ್ರೆಯವರ ಒಡನಾಟ ಕುತೂಹಲಕಾರಿಯಾಗಿದೆ.

ಕಣವಿಯವರ ಮೊದಲ ಕವನ ಸಂಕಲನ 'ಕಾವ್ಯಾಕ್ಷಿ'ಗೆ ಮುನ್ನುಡಿ ಬರೆಯುವುದರಿಂದ ಆರಂಭಗೊಂಡು ೧೯೮೧ರಲ್ಲಿ 'ಚೆಂಬೆಳಕು' ಬಿಡುಗಡೆ ಮಾಡುವುದರ ತನಕ ಅದು ಮುಂದುವರೆಯುತ್ತದೆ. ಈ ಮಧ್ಯ ಅವರು ಕಣವಿಯವರ 'ನೆಲ ಮುಗಿಲು' ಸಂಕಲನಕ್ಕೂ ಮುನ್ನುಡಿಯನ್ನು ಬರೆದ ಪ್ರಸಂಗವನ್ನು ಕಣವಿಯವರು ನೆನಪು ಮಾಡಿಕೊಂಡಿದ್ದಾರೆ... ಆಶ್ಚರ್ಯದ ಮತ್ತು ಉಲ್ಲೇಖನಾರ್ಹ ಎನ್ನುವ ಘಟನೆಯೆಂದರೆ 'ಚೆಂಬೆಳಕು' ಬಿಡುಗಡೆ ಮಾಡಿ ಮಾತಾಡಿದ ಬೇಂದ್ರೆಯವರದು ಅದೇ ಕಟ್ಟ ಕಡೆಯ ಸಾರ್ವಜನಿಕ ಭಾಷಣವೂ ಆದದ್ದು. ಇದನ್ನು ಕಣವಿಯವರು ದಾಖಲಿಸಿದ್ದಾರೆ. ಮಾತುಗಾರ ಬೇಂದ್ರೆ–ಎಂಬ ಲೇಖನ ಬೇಂದ್ರೆಯವರ ಕುರಿತಾದ ವಿಶೇಷ ಒಳನೋಟಗಳನ್ನು ಪರಿಚಯಿಸುವ ಲೇಖನ. ಮಾತಿನಲ್ಲಿ ಮೋಡಿ ಹಾಕುವ ಅವರ ಹುಟ್ಟು ಗುಣ ಹಾಗೂ ಅವರ ಮಾತುಗಳಲ್ಲಿ ಅಡಗಿರುತ್ತಿದ್ದ ಮಾಂತ್ರಿಕತೆ ಮತ್ತು ಅಂತಃಸ್ಫೂರ್ತಿಯನ್ನು ಕಣವಿಯವರು ಇಲ್ಲಿ ಹಿಡಿದಿಡಲು ಪ್ರಯತ್ನಿಸಿದ್ದಾರೆ. 'ಶಂಬಾ ಸ್ಮೃತಿ' ಲೇಖನದಲ್ಲಿ ಶಂಬಾ–ಬೇಂದ್ರೆಯವರ ನಡುವಣ ಜಗಳದ ಕಿರುಪರಿಚಯವೂ ಇದೆ. ಶಂ.ಬಾ. ಉದಯೋನ್ಮುಖ ಲೇಖಕರಿಗೆ ತೋರುತ್ತಿದ್ದ ಪ್ರೋತ್ಸಾಹದ ಪ್ರಸ್ತಾಪವು ಮತ್ತು ಅವರ ಕೊನೆಯ ಮಹತ್ವದ ದಿನಗಳ ವಿವರಗಳು ಇಲ್ಲಿ ದಾಖಲಾಗಿವೆ.

ಇಲ್ಲಿಯ ಮಹತ್ವದ ಲೇಖನವೆಂದರೆ, ಪ್ರೊ. ಶಿ.ಶಿ. ಬಸವನಾಳ ಅವರನ್ನು ಕುರಿತದ್ದು. ಶಿ.ಶಿ. ಬಸವನಾಳರ ಬಹುಮುಖ ವ್ಯಕ್ತಿತ್ವವನ್ನು ಹಿಡಿದಿಡುವಲ್ಲಿ ಈ ಲೇಖನ ಅಪಾರ ಯಶಸ್ಸು ಕಂಡಿದೆ. ನಾಡಿನ ಅದರಲ್ಲೂ ಉತ್ತರಕರ್ನಾಟಕದಲ್ಲಿ ಬಸವನಾಳರ ಸಾಧನೆ ಹಲವಾರು ಕಾರಣಗಳಿಂದ ಐತಿಹಾಸಿಕವಾಗಿದೆ. ಇಂದು ನಾಡಿನಲ್ಲಿ ಮನೆಮಾತಾಗಿರುವ ಕೆ.ಎಲ್.ಇ. ಸಂಸ್ಥೆಯ ಏಳು ಜನ ಸ್ಥಾಪಕ ರೂವಾರಿಗಳಲ್ಲಿ ಅವರೂ ಒಬ್ಬರಾಗಿದ್ದರಲ್ಲದೆ ಆ ಕಾಲದಲ್ಲಿ ಉತ್ತರ ಕರ್ನಾಟಕದಲ್ಲಿ ಸ್ಥಾಪನೆಗೊಂಡ ಹಲವಾರು ಹೆಸರಾಂತ ಸಂಘ ಸಂಸ್ಥೆಗಳ ಆದ್ಯ ನಿರ್ಮಾಪಕರು ಅವರೆಂಬುದನ್ನು ಕಣವಿಯವರು ಈ ಲೇಖನದಲ್ಲಿ ಮನದುಂಬಿ ನೆನೆದಿದ್ದಾರೆ. ಅವರು ಸ್ಥಾಪನೆಗೆ ಕಾರಣರಾದ ಬಹು ಮುಖ್ಯಸಂಸ್ಥೆಗಳಲ್ಲಿ ಕಣವಿಯವರು ಉಲ್ಲೇಖಿಸಿರುವವುಗಳೆಂದರೆ –ಕರ್ನಾಟಕ ವಿಶ್ವವಿದ್ಯಾಲಯ, ಆರ್.ಎಲ್.ಎಸ್. ಹೈಸ್ಕೂಲ್, ಕರ್ನಾಟಕ ಸೆಂಟ್ರಲ್ ಕೋ–ಆಪರೇಟಿವ್ ಸೊಸೈಟಿ, ವೀರಶೈವ ಮಹಿಳೆಯರ ಸಂಘ ಇನ್ನೂ ಮುಂತಾದ ವುಗಳು ಸೇರಿವೆ. ಇಷ್ಟಲ್ಲದೆ ಅವರ ಪತ್ರಿಕೋದ್ಯಮ ಸಾಹಿತ್ಯ ಅದರಲ್ಲೂ ವೀರಶೈವ ಸಾಹಿತ್ಯ ಕುರಿತು ನಡೆಸಿದ ಅಧ್ಯಯನ, ಗ್ರಂಥಸಂಪಾದನೆ ಮೊದಲಾದವುಗಳು ಇವತ್ತಿಗೂ ಚರಿತ್ರಾರ್ಹ ಕೆಲಸಗಳಾಗಿವೆ ಎಂದು ಕಣವಿಯವರು ಅವುಗಳನ್ನು ವಿಸ್ತೃತವಾಗಿ ಚರ್ಚಿಸಿದ್ದಾರೆ. "ನಾಡಿನ ಸಾಂಸ್ಕೃತಿಕ ಜೀವನ ರೂಪುಗೊಳಿಸಿದ ಶಿಲ್ಪಿಯೆಂದೂ, ಸರ್ವತೋಮುಖ ಅಭಿರುಚಿಯುಳ್ಳ ಕನ್ನಡ ಕುಲ ರಸಿಕರು" ಎಂದೂ ಅ.ನ.ಕೃ. ಅವರಿಂದ ಕರೆಸಿಕೊಂಡ ಶಿ.ಶಿ. ಬಸವನಾಳರ ವ್ಯಕ್ತಿತ್ವ ಎಷ್ಟು ಅಗಾಧವಾಗಿತ್ತೆಂಬುದನ್ನು ಈ ಲೇಖನ ನಮ್ಮ ಮುಂದಿಡುತ್ತದೆ. ಹಾಗೆಯೇ ನಾಟಕಕಾರ, ಗ್ರಂಥ ಪ್ರಕಾಶಕರಾಗಿದ್ದ ಜಿ.ಬಿ. ಜೋಶಿಯವರ ಕುರಿತಾದ ಲೇಖನವನ್ನು ಇಂತಹ ಸಾಲಿಗೆ ಸೇರಿಸಬಹುದು.

ಕಣವಿಯವರು ತಮ್ಮ ಸ್ನಾತಕೋತ್ತರ ಪದವಿಯನ್ನು ಮುಗಿಸಿ ಪ್ರಸಾರಾಂಗದ ನೇತೃತ್ವವಹಿಸಿಕೊಂಡ ಬಳಿಕ ಆ ವೃತ್ತಿಯ ಭಾಗವಾಗಿ ಅವರು ಅನೇಕ ವ್ಯಕ್ತಿಗಳ ಸಂಪರ್ಕ, ಸಾಹಚರ್ಯ, ಸ್ನೇಹವನ್ನು ಆಯಾಚಿತವಾಗಿ ಪಡೆಯುತ್ತಾರೆ. ಅಂತಹವರಲ್ಲಿ ಮುಖ್ಯರಾದವರು ವಿ.ಸೀ... ತೀ.ನಂ.ಶ್ರೀ... ಡಾ. ಸದಾನಂದ ನಾಯಕ. ಇದೇ ಅವಧಿಯಲ್ಲಿ ಅವರು ಆಕಾಶವಾಣಿಗಾಗಿ ನಡೆಸಿದ "ಗೋಕಾಕ-ಕಾರಂತರ ಸಂದರ್ಶನ" ಮೊದಲಾದ ಲೇಖನಗಳನ್ನು ಈ ಗುಂಪಿಗೆ ಸೇರಿಸಬಹುದು. ಕಣವಿಯವರು ವೃತ್ತಿಗೆ ಪಾದಾರ್ಪಣ ಮಾಡಿ ಪ್ರಸಾರಾಂಗದ ಕೆಲಸ ಕೈಗೆತ್ತಿಕೊಂಡಾಗ ಅವರು ಏರ್ಪಡಿಸಿದ ಮೊದಲ ಉಪನ್ಯಾಸವನ್ನು ತೀ.ನಂ.ಶ್ರೀ. ನೀಡಿದ್ದನ್ನು ಹಾಗೂ ಅದು ಪಡೆದುಕೊಂಡ ಅಪಾರ ಯಶಸ್ಸನ್ನು ಇಲ್ಲಿ ದಾಖಲಿಸಿದ್ದಾರೆ. ತೀ.ನಂ.ಶ್ರೀ. ಅವರ ಕುಟುಂಬದ ಹಾಗೂ ಕಣವಿಯವರ ಕುಟುಂಬದ ನಡುವೆ ಮುಂದಿನ ದಿನಗಳಲ್ಲಿ ಬೆಳೆದ ಬಾಂಧವ್ಯದ ಸವಿ ನೆನಪನ್ನು ಈ ಲೇಖನ ಒಳಗೊಂಡಿದೆ.

ಕಣವಿಯವರು ಚಿತ್ರಿಸುವ ಯಾವುದೇ ನುಡಿ ಚಿತ್ರದಲ್ಲೂ ಕೊಂಕು, ವ್ಯಂಗ್ಯ ಉಡಾಫೆಗಳಿಲ್ಲ. ಪ್ರತಿಯೊಬ್ಬ ವ್ಯಕ್ತಿಯ ಇತ್ಯಾತ್ಮಕ ಮತ್ತು ಆದರ್ಶದ ಗುಣಗಳನ್ನು ಕಂಡಿದ್ದಾರೆ. ಅವರಿಂದ ನಾಡು-ನುಡಿಗೆ ಸಂದ ಸೇವೆಯನ್ನು ಸ್ಮರಿಸಿದ್ದಾರೆ. ವ್ಯಕ್ತಿಯ ಇನ್ನೊಂದು ಮುಖವಾದ ದೌರ್ಬಲ್ಯಗಳನ್ನು, ಸಣ್ಣತನಗಳನ್ನು ಅವರು ಉಪೇಕ್ಷೆಯಿಂದಲೇ ಕಂಡಿದ್ದಾರೆ. ಅಂತಹ ಸಾಧಕರ ಸಾಧನೆಯ ಮುಂದೆ ಇವು ಅಷ್ಟು ದೊಡ್ಡವಲ್ಲ ಹಾಗೂ ಎತ್ತಿ ಆಡುವವುಗಳಲ್ಲವೆಂದು ಅವರು ಭಾವಿಸಿದಂತೆ ತೋರುತ್ತದೆ. ಕಣವಿಯವರ ಇಂತಹ ವ್ಯಕ್ತಿಚಿತ್ರಗಳನ್ನು ಹಾಗೂ ನವ್ಯರ ಸಂದರ್ಭದಲ್ಲಿ ಪ್ರಕಟವಾದ ವ್ಯಕ್ತಿಚಿತ್ರಗಳನ್ನು ಒಂದು ತುಲನಾತ್ಮಕ ಅಧ್ಯಯನಕ್ಕೆ ಒಳಪಡಿಸಿದರೆ ಕಣವಿಯವರ ಕಣ್ಣಲ್ಲಿ ರೂಪುಗೊಳ್ಳುವ ವ್ಯಕ್ತಿಚಿತ್ರಗಳ ಮಹತ್ವ ಮತ್ತು ಅದರ ಗುಣಾತ್ಮಕತೆ-ನಿರ್ವ್ಯಾಜ-ಅಜಾತಶತ್ರುತನದ ಮನೋಭಾವನೆ ಗಮನಕ್ಕೆ ಬರುತ್ತದೆ. ಅದರಲ್ಲೂ ಲಂಕೇಶರವರ 'ಕಂಡದ್ದು ಕಂಡ ಹಾಗೆ' ಪುಸ್ತಕವನ್ನು ಒಂದು ಹೋಲಿಕೆಯ ಉದಾಹರಣೆಯಾಗಿಟ್ಟುಕೊಂಡು ನೋಡಿದರೂ ಈ ಅಗಾಧ ವ್ಯತ್ಯಾಸ ಹೊಳೆಯುತ್ತದೆ.

ಕಣವಿಯವರು ನಡೆಸಿರುವ 'ಗೋಕಾಕ-ಹಾಗೂ ಕಾರಂತರ ಸಂದರ್ಶನ'ಕ್ಕೊಂದು ಐತಿಹಾಸಿಕ ಮಹತ್ವವಿದೆ. ಬದುಕು-ಬರಹವನ್ನು ಕುರಿತು ತಮ್ಮ ನಂಬಿಕೆಗಳಲ್ಲಿ ಎರಡು ಧ್ರುವಗಳಿರುವಂತಿರುವ ಈ ಇಬ್ಬರ ಚರ್ಚೆ ಬಹು ಕುತೂಹಲಕಾರಿಯಾಗಿದೆ. ಭಿನ್ನಾಭಿಪ್ರಾಯಗಳಿದ್ದು ಸ್ನೇಹವನ್ನು ಹೇಗೆ ಅಬಾಧಿತವಾಗಿ ಮುಂದುವರೆಸಿಕೊಂಡು ಹೋಗಲು ಸಾಧ್ಯವೆಂಬುದನ್ನು ಈ ಸಂದರ್ಶನ ಹೇಳುವಂತಿದೆ.

ಕಣವಿಯವರ ಸಾಹಿತ್ಯಕ ಪ್ರವೃತ್ತಿ ಕನ್ನಡ ನಾಡಿನಾದ್ಯಂತ ಅಪಾರ ಮಿತ್ರರನ್ನು ಹಿತೈಷಿಗಳನ್ನು ಸೃಷ್ಟಿಸಿದೆ. ಅಂತಹವರನ್ನು ತೀರಾ ಹತ್ತಿರದಿಂದ ಕಂಡು ಒಡನಾಡಿದ ಅಭಿಪ್ರಾಯಗಳನ್ನು ತೀರಾ ಆತ್ಮೀಯವಾಗಿ ಹಂಚಿಕೊಂಡ ಹಲವಾರು ವ್ಯಕ್ತಿಗಳ ಕುರಿತಾಗಿ ಕಣವಿಯವರು ಇಲ್ಲಿ ಬರೆದಿದ್ದಾರೆ. ಬಹುಪಾಲು ಲೇಖನಗಳು ಇಂಥ ವ್ಯಕ್ತಿಗಳನ್ನು

ಕುರಿತಾಗಿ ತಂದ ಅಭಿನಂದನಾ ಗ್ರಂಥಗಳಿಗೆ ಬರೆದ ಬರಹಗಳಾದ್ದರಿಂದ ಬಹು ಸಂಕ್ಷಿಪ್ತವೂ ಹಾಗೂ ಕೊಂಚ ಪ್ರಶಂಸನೀಯ ಧಾಟಿಯನ್ನು ಒಳಗೊಂಡಿವೆ. ಅವರುಗಳೊಂದಿಗೆ ತೀರಾ ಹತ್ತಿರದಿಂದ ಹಲವಾರು ವರ್ಷಗಳ ಜೊತೆ ಒಡನಾಟವಿದ್ದರೂ ಕಣವಿಯವರಿಗೆ ಹೆಚ್ಚು ಬರೆಯಲಾಗಿಲ್ಲ. ಪ್ರಾಯಶಃ ಇದಕ್ಕೆ ಕಾರಣ ಇಂಥ ಲೇಖನಗಳನ್ನು ಬರೆಯಬೇಕಾದ ಸಮಯೋಚಿತ ಸಂದರ್ಭ ಹಾಗೂ ಪುಟಮಿತಿ ಹಾಗೂ ಕಾಲಮಿತಿಗಳೇ ಕಾರಣವಾದಂತೆ ತೋರುತ್ತದೆ. ಆದರೆ ಪಾಟೀಲ ಪುಟ್ಟಪ್ಪ, ಲಂಕೇಶ್, ಜಿ.ಎಸ್.ಎಸ್. ಕೀರ್ತಿನಾಥ ಕುರ್ತಕೋಟಿ ಇಂಥವರ ಕುರಿತು ಕಣವಿಯುವರು ಸಾನೆಟ್ ಪದ್ಯರೂಪದಲ್ಲಿಯೂ ಶಬ್ದಚಿತ್ರ ಕಟ್ಟಿಕೊಟ್ಟದ್ದನ್ನು ಮರೆಯಲಾಗದು.

ಈ ಬಗೆಯ ಸಾಹಿತ್ಯ ಪ್ರವೃತ್ತಿಯ ಒಡನಾಟದಿಂದ ಬರೆದ ಲೇಖನಗಳಲ್ಲಿ ಬಹಳ ಮಹತ್ವದವುಗಳೆಂದರೆ –'ದೇ.ಜ.ಗೌ.–ಸ್ವಲ್ಪ ದೂರದಿಂದ' 'ಕ್ರಾಂತಿಕಾರಿ ಕಾದಂಬರಿಕಾರ ಬಸವರಾಜ ಕಟ್ಟೀಮನಿ' 'ನಿರಂಜನ ಸಂಚಯ' 'ಕರ್ಕಿ ಕಾವ್ಯ ಗೌರವ' 'ಹಿರೇಮಲ್ಲೂರ ಈಶ್ವರನ್' 'ಸಾಂಸ್ಕೃತಿಕ ಲೋಕದ ಮಾಧುರ್ಯ ಹೆಚ್ಚಿಸಿದ ಕವಿ ಹೆಚ್.ಎಸ್.ವಿ.' 'ದಣಿವರಿಯದ ಅಕ್ಷರ ಸಂಗಾತಿ' 'ಗೊರೂರು ನಮನ' 'ಕೆ.ಎಫ್. ಪಾಟೀಲರ ಆದರ್ಶ' ಮೊದಲಾದ ಲೇಖನಗಳು ಹಲವಾರು ದೃಷ್ಟಿಯಿಂದ ಮಹತ್ವದ ಲೇಖನಗಳಾಗಿವೆ. ಬಸವರಾಜ ಕಟ್ಟಿಮನಿಯವರ ಹಾಗೂ ನಿರಂಜನರ ಕುರಿತು ಬರೆದ ಲೇಖನಗಳು ಆ ಲೇಖಕರ ಸಾಹಿತ್ಯಕ–ವೈಯಕ್ತಿಕ ಏಳು–ಬೀಳಿನ ಕತೆಯನ್ನು ಕಣವಿಯವರು ಆಪ್ತವಾಗಿ ಹಿಡಿದಿಟ್ಟಿದ್ದಾರೆ.

ಪ್ರಗತಿಶೀಲರ ಬಗ್ಗೆ ಬರೆಯುವಾಗಲೆಲ್ಲ ಕಣವಿಯವರು ತಪ್ಪದೆ ಉದ್ಧರಿಸುವ ಹೆಸರು ಶ್ರೀ ಶಿವೇಶ್ವರ ದೊಡ್ಡಮನಿಯವರದು ಮತ್ತು 'ಉಷಾ'–ಪತ್ರಿಕೆಯದು ಹಾಗೂ ತಾವು ವಿದ್ಯಾರ್ಥಿಯಾಗಿದ್ದಾಗ ಮಾಡಿಕೊಂಡಿದ್ದ ಮಾಳಮಡ್ಡಿಯ ಕೋಣೆ...ಮತ್ತು ಅಲ್ಲಿನ ಚಹಾಕೂಟ...ಹಾಗೂ ಅಲ್ಲಿನ ಸಾಹಿತ್ಯಕ ಚರ್ಚೆಯದು. ಇಷ್ಟಾಗಿಯೂ ಶಿವೇಶ್ವರ ದೊಡ್ಡಮನಿಯವರ ಕುರಿತಾದ ಪ್ರತ್ಯೇಕ ವ್ಯಕ್ತಿಚಿತ್ರ ಇಲ್ಲದ್ದು ಆಶ್ಚರ್ಯ ಹುಟ್ಟಿಸುತ್ತದೆ. ಅವರನ್ನು ಕುರಿತ 'ಚರಮಗೀತೆ' ಮಾತ್ರ ಕನ್ನಡದ ಅತ್ಯುತ್ತಮ ಶೋಕಗೀತ (elegy)ಗಳಲ್ಲೊಂದಾಗಿದೆ. ಆದರೆ ಈ ಕೊರತೆಯನ್ನು 'ಮೊದಲ ಕುಸುಮ ಕಾವ್ಯಾಕ್ಷಿ' ಎಂಬ ಲೇಖನ ತುಂಬಿಕೊಡುವ ರೀತಿಯಲ್ಲಿ ಶ್ರೀ ಶಿವೇಶ್ವರ ದೊಡ್ಡಮನಿಯವರ ಬಗ್ಗೆ ಕಣವಿಯವರು ಬರೆದಿದ್ದಾರೆ. ತಮ್ಮ ಸುದೀರ್ಘ ಕಾವ್ಯ ಜೀವನದಲ್ಲಿ ತಾವು ಬರೆದ ಮೊಟ್ಟ ಮೊದಲ ಪದ್ಯ 'ಕಾವ್ಯಾಕ್ಷಿ'ಯ ಹುಟ್ಟಿನ ಹಿಂದಣ ಸೃಜನಶೀಲ ಕ್ಷಣಗಳನ್ನು ಅತ್ಯಂತ ಭಾವಪೂರ್ಣವಾಗಿ ನೆನಪು ಮಾಡಿಕೊಂಡಿರುವ ಕಣವಿಯವರು ಆ ಪದ್ಯ ಹೃದಯದಲ್ಲಿ ಚಿಗುರೊಡೆಯುವ ಗಳಿಗೆ ತಮ್ಮೊಡನಿದ್ದ ಶ್ರೀ ದೊಡ್ಡಮನಿಯವರನ್ನು ಹಾಗೂ ಆ ಪದ್ಯದ ಸೊಗಸಿಗೆ ಮಾರು ಹೋಗಿ ಮುಂದೆ ತಮಗೆ ಜನಿಸಿದ ಮಗಳಿಗೆ ಕಾವ್ಯಾಕ್ಷಿ ಎಂದು ನಾಮಕರಣ ಮಾಡಿದುದನ್ನು ಕಣವಿಯವರು ಇಲ್ಲಿ ದಾಖಲಿಸಿದ್ದಾರೆ. ತುಂಬಾ ಪ್ರತಿಭಾವಂತನೂ ಪ್ರಗತಿಶೀಲ ಚಳುವಳಿಯೊಂದಿಗೆ ಗುರುತಿಸಿಕೊಂಡು ಜಾನಪದದ

ಮೇಲೆ ಅಪಾರ ಪ್ರೀತಿ ಇಟ್ಟು ಅದರ ಸಂಗ್ರಹಣೆಗೆ ತನ್ನನ್ನು ಅರ್ಪಿಸಿಕೊಂಡಿದ್ದ ಈ ಗೆಳೆಯನ ಅಕಾಲಿಕ ಸಾವನ್ನು ತುಂಬಾ ನೋವಿನಿಂದ ಕಣವಿಯವರು ಇಲ್ಲಿ ದಾಖಲಿಸಿದ್ದಾರೆ.

ಕಣವಿಯವರ ನುಡಿಚಿತ್ರದ ಮಾದರಿಗಾಗಿ ಒಂದೆರಡನ್ನು ಇಲ್ಲಿ ಉದ್ಧರಿಸಬಹುದು–

ಒಂದು ಜಿ.ಬಿ.ಜೋಶಿಯವರ ಕುರಿತು..."ನಾನು ಧಾರವಾಡಕ್ಕೆ ವಿದ್ಯಾರ್ಥಿಯಾಗಿ ಬಂದಾಗಿನಿಂದಲೂ (೧೯೪೦) ಜಿ.ಬಿ. ಜೋಶಿಯವರನ್ನು ಆಗಾಗ ನೋಡುತ್ತಿದ್ದೆ. ಧೋತರ, ಹಾಫ್ ಶರ್ಟ್, ಕರಿ ಟೊಪ್ಪಿಗೆ ಅವರ ಖಾಯಂ ವೇಷವಾಗಿತ್ತು."

ಕವಿ ಕರ್ಕಿಯವರನ್ನು ಕುರಿತು..."ಸದಾ ನಗೆಮೊಗದ, ಸಮಾಧಾನ, ಸಾತ್ವಿಕ ಕಳೆಯನ್ನುಕ್ಕಿಸುವ, ಸರಸ, ಸಜ್ಜನಿಕೆಯ, ನಿರ್ಮಲ ಸ್ನೇಹಾಂತಃಕರಣದ ಕವಿ ಕರ್ಕಿಯವರನ್ನು ಕಂಡಾಗಲೆಲ್ಲ ಅವರ ಕಾವ್ಯವೇ ಕಣ್ಣಿಗೆ ಕಟ್ಟಿದಂತಾಗುತ್ತದೆ..."

ಲಂಕೇಶ್ ಕುರಿತು–"ನೇರವಾದ ಮಾತು, ನಿಸ್ಸಂಕೋಚವಾದ ನಡೆ, ಅದೇ ಹೊತ್ತಿಗೆ ಅಕೃತಿಮವಾದ ಪ್ರೀತಿ, ಸ್ನೇಹ ಅವರ ಸ್ವಭಾವದ ವೈಶಿಷ್ಟ್ಯವೆನಿಸಿತು."

ತಮ್ಮ ನಿಡುಗಾಲದ ಗೆಳೆಯರಾದ ಜಿ.ಎಸ್.ಎಸ್. ಕುರಿತು ಬರೆದ ಲೇಖನ 'ಜೊತೆಗಾರ ಜಿ.ಎಸ್.ಎಸ್.' ಎಂಬ ಬರೆಹ ಹಲವಾರು ಕಾರಣಗಳಿಂದ ನಮ್ಮ ಗಮನ ಸೆಳೆಯುತ್ತದೆ. ಕಳೆದ ಆರು ದಶಕಗಳಿಂದ ಅಬಾಧಿತವಾಗಿ ಮುಂದುವರೆದಿರುವ ಈ ಇರ್ವರ ನಡುವಣ ಗೆಳೆತನಕ್ಕೆ ಕಾರಣವಾಗಿರುವ ಹಲವಾರು ಕುತೂಹಲಕರ ಅಂಶಗಳನ್ನು ಈ ಲೇಖನ ಮುಂದಿಡುವಲ್ಲಿ ಯಶಸ್ವಿಯಾಗಿದೆ. ೧೯೪೮ರ ಸುಮಾರಿನಲ್ಲಿ ಪರಿಚಯವಾಗುವ ಜಿ.ಎಸ್.ಎಸ್. ಕಣವಿಯವರ ಜೊತೆ ನಿರಂತರ ಒಡನಾಟ ಸಂಪರ್ಕ, ಸಾಹಚರ್ಯ ಅನುಸಂಧಾನ ನಡೆಸುತ್ತಾ ಬದುಕು ಮತ್ತು ಬರಹಗಳ ನಡುವೆ ಸಮಾನ ಆಸಕ್ತಿ ಹಾಗೂ ಅಭಿಪ್ರಾಯಗಳನ್ನು ಕಾಲ ಕಾಲಕ್ಕೆ ವಿನಿಮಯ ಮಾಡಿಕೊಳ್ಳುತ್ತಾ ಪರಸ್ಪರರ ಬೆಳವಣಿಗೆಗಳಿಗೆ ಹೇಗೆ ಸ್ಪಂದಿಸುತ್ತಾ ಬಂದರು ಎಂಬುದನ್ನು ಈ ಲೇಖನ ಸಾಬೀತು ಮಾಡುತ್ತದೆ. ಜಿ.ಎಸ್.ಎಸ್. ಹಾಗೂ ಕಣವಿಯವರ ನಡುವೆ ನಡೆದ ಪತ್ರ ವ್ಯವಹಾರದಲ್ಲಿ ಅವರು ಕಾಲ ಕಾಲಕ್ಕೆ ಕಾವ್ಯ ಕುರಿತು ನಡೆಸಿದ ಚರ್ಚೆಯು ಹೇಗಿತ್ತೆಂಬುದನ್ನು ಜಿ.ಎಸ್.ಎಸ್. ನವ್ಯ ಕಾವ್ಯ ಸಂದರ್ಭದಲ್ಲಿ ಬರೆದ ಈ ಮಾತುಗಳು ಅವರಿಬ್ಬರ ಮನೋಭಾವಗಳು ಹೇಗೆ ಸ್ಪಂದಿಸಿದ್ದವೆಂಬುದನ್ನು ತೋರಿಸುವಂತಿವೆ. "ನವ್ಯತೆಯ ಬಗ್ಗೆ ನನಗೆ ರೋಮಾಂಚಕತೆ ಇಲ್ಲ. ಏಕೆಂದರೆ ನಿಜವಾದ ನವ್ಯತೆ ಒಂದು ರಚನೆ ಅಲ್ಲ, ವಿಕಾಸ–ಎಂಬುದನ್ನು ಕಂಡುಕೊಂಡವರಲ್ಲಿ ನಾನೊಬ್ಬ. ನನ್ನ ಒಳಗಿನ 'ನವ್ಯ ಕವಿ' ನಾನೊಬ್ಬ ಭಾರತೀಯ ಎಂಬುದನ್ನು ಎಂತಹ ಹೊತ್ತಿನಲ್ಲೂ ಮರೆಯುವುದಿಲ್ಲ. ಎಂತಹ ಕಷ್ಟ ಕಾರ್ಪಣ್ಯಗಳಲ್ಲೂ ಏನೋ ಒಂದು ಅದಕ್ಕೆ ಮೀರಿದ ಆನಂದ, ಆದರ್ಶಗಳನ್ನು ಕಾಣಬಲ್ಲನು" ಎಂಬ ಮಾತುಗಳು ಸಾಕ್ಷಿಯಾಗಿವೆ.

ಶುಭಾಕಾಂಕ್ಷೆ

ಕಣವಿಯವರ ಪ್ರಕಟಿತ ಗದ್ಯದಲ್ಲಿ ಗಮನಿಸಲೇಬೇಕಾದ ಮತ್ತೊಂದು ಭಾಗ ವೆಂದರೆ ಅವರು ಕಾಲ ಕಾಲಕ್ಕೆ ಕಳೆದ ಐದು ದಶಕಗಳಿಂದ ಹಿರಿಯ-ಕಿರಿಯ ಉದಯೋನ್ಮುಖ, ಉದಿತ, ಸ್ಥಾಪಿತ ಕವಿಗಳಿಗೆ ಬರೆದ ಮುನ್ನುಡಿ ಹಾಗೂ ಹಿನ್ನುಡಿಗಳು. ಕಣವಿಯವರು ಪ್ರತ್ಯೇಕವಾಗಿ ತಮ್ಮದೇ ಆದ 'ಕಾವ್ಯ ಮೀಮಾಂಸೆಯ' ಪುಸ್ತಕ ಪ್ರಕಟಿಸಿ, ಕಾವ್ಯ ಕುರಿತಾಗಿ ತಮ್ಮ ನಿಲುವು ಒಲವುಗಳನ್ನು ಪ್ರಕಟಿಸದೇ ಹೋಗಿದ್ದರೂ-ಈ ಎಲ್ಲ ಮುನ್ನುಡಿ ಹಿನ್ನುಡಿಗಳ ಅಧ್ಯಯನದಿಂದ ಅವರ 'ಕಾವ್ಯ ಮೀಮಾಂಸೆಯ' ನಿಲವುಗಳನ್ನು ಹೆಕ್ಕಿ ತೆಗೆಯಬಹುದಾಗಿದೆ.

೨೦೦೦ನೇ ಇಸವಿಯಲ್ಲಿ ಪ್ರಕಟವಾದ "ಶುಭ ನುಡಿಯೆ ಹಕ್ಕಿ" ಪುಸ್ತಕ ಈ ದೃಷ್ಟಿಯಿಂದ ಬಹು ಮುಖ್ಯವಾದ, ಗಮನಿಸಲೇಬೇಕಾದ ಪುಸ್ತಕ. ೧೯೫೨ ರಿಂದ ೨೦೦೦ನೆಯ ಅವಧಿಯಲ್ಲಿ ಅವರು ಬರೆದ ಮುನ್ನುಡಿಗಳ ಸಂಗ್ರಹವಿದು. ಈ ಪುಸ್ತಕದಲ್ಲಿ ಒಟ್ಟು ೭೧ ಮುನ್ನುಡಿಗಳಿವೆ. ಸಂಕಲನಕ್ಕೆ ಹಿನ್ನುಡಿ ಬರೆದಿರುವ ಡಾ. ಶ್ಯಾಮಸುಂದರ ಬಿದರಕುಂದಿಯವರು ಈ ಪುಸ್ತಕದ ಮಹತ್ವವನ್ನು ಕುರಿತು ಬರೆಯುತ್ತಾ "ತನ್ನ ಕಾಲದ ದನಿಗಳಿಗೆಲ್ಲಾ ಸಮ್ಮತಿ, ಸಹದನಿ ಕೂಡಿಸುವ, ಸ್ವಾಗತ ಕೋರುವ, ಕಾವ್ಯದ ಹರಿವು ವಿಸ್ತರಿಸುವ ಹಂಬಲ; ಅಂತೆಯೇ ಕಣವಿಯವರು ಕಿರಿ ಕವಿಗಳಿಗೆ ಅಣ್ಣನಾಗಿ, ಮರಿ ಕವಿಗಳಿಗೆ ಗುರುವಾಗಿ, ಪ್ರೌಢ ಕವಿಗಳಿಗೆ 'ಮುನ್ನುಡಿ'ಯ ಹಣೆಬೊಟ್ಟನ್ನು ಇಟ್ಟು ಕಾವ್ಯಲೋಕಕ್ಕೆ ಪರಿಚಯಿಸಿದವರು" ಎಂಬ ಮಾತುಗಳು ಅರ್ಥಗರ್ಭಿತವಾಗಿಯೇ ಇದೆ. ಹಾಗೆಯೇ 'ಸದ್ಭಾವ' ಪುಸ್ತಿಕೆಯಲ್ಲಿ ೧೭ ಮುನ್ನುಡಿಗಳು ಹಾಗೂ ೭ ಹಿನ್ನುಡಿಗಳೂ ಇದ್ದು ಅನಂತರ ಬರೆದವುಗಳನ್ನೆಲ್ಲವನ್ನು ಒಟ್ಟು ಸೇರಿಸಿದರೆ (ಗದ್ಯ ಕೃತಿಗಳನ್ನೂ ಹಿಡಿದು) ೯೧ ಮುನ್ನುಡಿಗಳು ಹಾಗೂ ೨೫ ಹಿನ್ನುಡಿಗಳೂ ಅವರ ಒಟ್ಟು ಗದ್ಯ ಕೃಷಿಯಲ್ಲಿ ಎದ್ದು ಕಾಣುವ ಮಹತ್ವದ ಬರಹಗಳಾಗಿವೆ.

ಈ ಎಲ್ಲ ಮುನ್ನುಡಿಗಳ ಮುಖ್ಯ ಲಕ್ಷಣಗಳನ್ನು ಪಟ್ಟಿ ಮಾಡಿದರೆ ಅವುಗಳನ್ನು ಹೀಗೆ ಸಂಗ್ರಹಿಸಬಹುದು:

೧) ಯಾವುದೇ ಕವನ ಸಂಕಲನವನ್ನು ಯಾವುದೇ ಹಣೆಪಟ್ಟಿ ಇಟ್ಟುಕೊಂಡು ಕಣವಿಯವರು ಮೌಲ್ಯ ಮಾಪನ ಮಾಡಲು ಮುಂದಾಗುವುದಿಲ್ಲ.

೨) ವಸ್ತು, ವಿಷಯ, ಆಶಯಕ್ಕಿಂತ-ಇವುಗಳೆಲ್ಲ ಕಾವ್ಯಗಳಾಗಿವೆಯೇ ಎಂದು ಪರಿಶೀಲಿಸಲು ಮುಂದಾಗುವ ದೃಷ್ಟಿಕೋನ ಎದ್ದು ಕಾಣುತ್ತದೆ.

೩) ಕಾವ್ಯವನ್ನು ಸಹೃದಯನ ನೆಲೆಯಿಂದ ಪ್ರವೇಶಿಸಿ ಕಾವ್ಯಕ್ಕೆ ಇನ್ನಿಲ್ಲದ ಪ್ರೀತಿ-ಗೌರವ ಒದಗಿಸುವ ಪ್ರಯತ್ನ ಮಾಡುತ್ತಾರೆ.

೪) ಕಾವ್ಯದ ಬೆಲೆಕಟ್ಟುವಾಗ 'ಇವನಾರವ, ಇವನಾರವ' ಎಂಬ ಪಕ್ಷಭೇದದ ಇಂಚುಪಟ್ಟಿ ಇಟ್ಟುಕೊಂಡು ಹೊರಡುವುದಿಲ್ಲ.

೫) ಯಾವುದೇ ಚಳುವಳಿ ಪಂಥ, ಪಂಗಡಗಳ ವಕ್ತಾರರಂತೆ ಮುನ್ನುಡಿಯ ಮುಸುಕಿನೊಳಗೆ ಕಾವ್ಯದ ಬೆಲೆ ಕಟ್ಟುವುದಿಲ್ಲ.

೬) ಪ್ರತಿ ಕವನ ಸಂಗ್ರಹವನ್ನು ಕನ್ನಡ ಕಾವ್ಯ ಪರಂಪರೆಯ ಮಧ್ಯ ಇಟ್ಟು ಅದರ ಮೌಲ್ಯ ಪರೀಕ್ಷೆ ನಡೆಸುತ್ತಾರೆ.

೭) ನವ್ಯ, ನವೋದಯ, ದಲಿತ ಬಂಡಾಯ, ಮಹಿಳಾವಾದ-ಇತ್ಯಾದಿಯಾದ ಎಲ್ಲಾ ವಾದ ಪ್ರೇರಿತ ಕವಿಗಳಿಗೆ ಮುನ್ನುಡಿ ಬರೆದಿದ್ದರೂ-ಒಂದು ಅಜಾತಶತ್ರುವಿನ ಗುಣವನ್ನು-ಸದೂರವನ್ನು ಇಟ್ಟುಕೊಂಡು ಮುನ್ನುಡಿಗಳನ್ನು ಬರೆದಿರುವುದು ಎದ್ದು ಕಾಣುವ ಅಂಶವಾಗಿದೆ.

೮) ಬಹುಪಾಲು ಉತ್ತರ ಕರ್ನಾಟಕದ ಕವಿಗಳ ಕಾವ್ಯ ಸಂಗ್ರಹಗಳಿಗೆ ಮುನ್ನುಡಿಯನ್ನೋ-ಹಿನ್ನುಡಿಯನ್ನೋ ಬರೆದು ಈ ಭಾಗದ ಕವಿತೆಯ ಪಸೆ ಬತ್ತದಂತೆ ಕಾಪಿಡುವ ಕೆಲಸವನ್ನು ಈ ಗದ್ಯ ಬರಹದ ಮೂಲಕ ಮಾಡಿರುವುದು ಕೂಡ ಒಂದು ಚಾರಿತ್ರಿಕ ಕೆಲಸವಾಗಿದೆ.

ಅವರು ಬರೆದಿರುವ ಮುನ್ನುಡಿಗಳ ಸಾಲಿಗೆ ಸೇರಿರುವ ಕೆಲವು ಕವಿಗಳ ಹೆಸರನ್ನು ಇಲ್ಲಿ ದಾಖಲಿಸುವುದಾದರೆ-ಬುದ್ದಣ್ಣ ಹಿಂಗಮಿರೆ, ದೇಶಪಾಂಡೆ ಸುಬ್ಬರಾಯ, ಸಿದ್ಧಲಿಂಗ ದೇಸಾಯಿ, ಸೋಮಶೇಖರ ಇಮ್ರಾಪುರ, ಬಿ.ಎ. ಸನದಿ, ಶಾಂತರಸ, ದೇವೇಂದ್ರಕುಮಾರ ಹಕಾರಿ, ಗಂಗಪ್ಪ ವಾಲಿ, ಮಾಲತಿ ಪಟ್ಟಣಶೆಟ್ಟಿ, ಮೂಡ್ನಾಕೂಡು ಚಿನ್ನಸ್ವಾಮಿ, ಬಸವರಾಜ ಸಾದರ, ಬೆಟಗೇರಿ ಕೃಷ್ಣಶರ್ಮ, ಚಂದ್ರಶೇಖರ ವಸ್ತ್ರದ-ಹೀಗೆ ಹೆಸರಿಸುತ್ತಾ ಹೋಗಬಹುದು.

'ನೆನಪು ಸಿಹಿ-ಕಹಿ' ಎಂಬ ನೀಳ್ಗದ್ಯದ ಬರವಣಿಗೆಯಲ್ಲಿ ಅವರು ತಮ್ಮ ಬಾಲ್ಯದ ಬದುಕನ್ನು ಕುರಿತು ತುಂಬಾ ವಿಸ್ತಾರವಾಗಿ ಬರೆದಿದ್ದಾರೆ. 'ತುಷಾರ' ಮಾಸ ಪತ್ರಿಕೆಗೆ ಬರೆದ ಈ ಲೇಖನ ಕಣವಿಯವರ ಆತ್ಮ ಚರಿತ್ರೆಯಂತಿದೆ. ತಮ್ಮ ತಂದೆ ಸಕ್ರೆಪ್ಪನವರು ಶಾಲಾಮಾಸ್ತರರಾಗಿದ್ದು ಅವರು ಬಾಲ್ಯದಲ್ಲಿ ಬಿತ್ತಿದ ಆದರ್ಶ, ಒದಗಿಸಿಕೊಟ್ಟ ಸಂಸ್ಕಾರ, ಸಾಹಿತ್ಯಾಭಿರುಚಿ, ಅವರು ಕೆಲಸ ಮಾಡುತ್ತಿದ್ದ ಹಳ್ಳಿಯ ಪರಿಸರ, ಹಳ್ಳಿಯಲ್ಲಿ ಜರುಗುತ್ತಿದ್ದ ಹಬ್ಬ ಹರಿದಿನ ಜಾತ್ರೆ, ಉತ್ಸವ, ಜಾನಪದ ಆಟಗಳು, ಹಾಡುಗಳು ಮತ್ತು ಆ ಕಾಲದ ಶಿಕ್ಷಣ ಪದ್ಧತಿ ಆಗ ತಾನೇ ತಾರಕಕ್ಕೇರುತ್ತಿದ್ದ ಸ್ವಾತಂತ್ರ್ಯ ಚಳುವಳಿ ಅವುಗಳ ಪ್ರಭಾವ-ಇವೆಲ್ಲವೂ ಇಲ್ಲಿ ವಿವರವಾಗಿ ದಾಖಲಿಸಲ್ಪಟ್ಟಿವೆ. ಮತ್ತು ಇವೆಲ್ಲವೂ ಒಟ್ಟಾಗಿ ತಮ್ಮ ಬದುಕು-ಬರೆಹದ ಮೇಲೆ ಏನೆಲ್ಲಾ ಪರಿಣಾಮಗಳನ್ನು ಬೀರಿದವೆಂಬುದನ್ನು ದೀರ್ಘವಾಗಿಯೇ ಇಲ್ಲಿ ದಾಖಲು ಮಾಡಿದ್ದಾರೆ.

೧೯೪೦ರ ಸುಮಾರಿಗೆ ಅಂದರೆ ಹೈಸ್ಕೂಲಿನ ಓದಿಗಾಗಿ ಧಾರವಾಡಕ್ಕೆ ಬಂದದ್ದು ಆರ್.ಎಲ್.ಎಸ್. ಹೈಸ್ಕೂಲ್, ಮುರುಘಾಮಠದ ಸಾಹಿತ್ಯಕ ವಾತಾವರಣ, ಹೈಸ್ಕೂಲ್ ವಿದ್ಯಾರ್ಥಿಯಾಗಿದ್ದಾಗಲೇ-ಕುವೆಂಪು, ಬೇಂದ್ರೆ, ಮಧುರ ಚೆನ್ನ, ಬಸವನಾಳರ ಬಗ್ಗೆ

ಗಾಢವಾಗಿ ಅಧ್ಯಯನಕ್ಕೆ ತೊಡಗಿದ್ದು, ಧಾರವಾಡದ ವಿದ್ಯಾವರ್ಧಕ ಸಂಘ, ಧಾರವಾಡದಲ್ಲಿ ಬೀಸುತ್ತಿದ್ದ ಕವಿಗಾಳಿ–ಜೀವನ, ಜಯಂತಿ, ಜಯ ಕರ್ನಾಟಕ, ಪತ್ರಿಕೆಗಳಲ್ಲಿ ಕವಿತೆಗಳ ಪ್ರಕಟಣೆ–ಶಿವೇಶ್ವರ ದೊಡ್ಡಮನಿಯವರ ಗೆಳೆತನ–ಬೆಟಗೇರಿ ಕೃಷ್ಣಶರ್ಮ, ಸ.ಸ. ಮಾಳವಾಡ, ಅರ್ಮಾಂಡೋ ಮೆನಜಿಸ್ ಅಂತಹವರ ಒಡನಾಟ ಎಲ್ಲವೂ ಇಲ್ಲಿ ದಾಖಲಾಗಿದೆ.

ಹಾಗೆಯೇ ತಮ್ಮ ಮೊದಲ ಗ್ರಂಥ 'ಕಾವ್ಯಾಕ್ಷಿ'ಗೆ ಬೇಂದ್ರೆ ಮುನ್ನುಡಿ, ಅದನ್ನು ಪ್ರಕಟಿಸಿದ ಶ್ರೀ ಹಿರೇಮಲ್ಲೂರು ಈಶ್ವರನ್ ಅವರ ಸಹಕಾರ, ಮುಂದೆ ಎಂ.ಎ. ಪದವಿ, ಪ್ರಸಾರಾಂಗದಲ್ಲಿನ ನೌಕರಿ, ಶ್ರೀಮತಿ ಶಾಂತಾದೇವಿ ಅವರೊಡನೆ ಲಗ್ನ, ಮನೆತನದಲ್ಲಿ ಸಂಭವಿಸಿದ ಸಾವುಗಳು–ಇತ್ಯಾದಿಗಳೆಲ್ಲ ಇಲ್ಲಿ ವಿವರವಾಗಿ ದಾಖಲಾಗಿವೆ. ಲೇಖನದ ಕೊನೆಯಲ್ಲಿ ಕಣವಿಯವರು ತಮ್ಮ ಬದುಕಿನಲ್ಲಿ ಇಷ್ಟೆಲ್ಲಾ ಸಾಧನೆ ಮಾಡಲು ಕಾರಣವಾದದ್ದು "ನಿಸರ್ಗದ ಚೈತನ್ಯ, ಜನತೆಯ ಪ್ರೀತಿ, ಸ್ನೇಹದ ಭಾಗ್ಯ" ಎನ್ನುತ್ತಾರೆ. ಇಂಥದ್ದೆ ಮಾದರಿಯ ಲೇಖನವೆಂದರೆ "ಪ್ರಭಾವ ಬೀರಿದ ಪುಸ್ತಕಗಳು" ಎನ್ನುವುದು ಕೂಡ ಒಂದು.

ಅದರಷ್ಟೇ ವಿಶಿಷ್ಟವಾದ ಲೇಖನ "ಸಂಭಾಷಣೆ ಕಳೆದು ಹೋಗುತ್ತಿರುವ ಕಲೆ"– ತುಂಬಾ ಪ್ರಭಾವಪೂರ್ಣವಾದ, ಮೌಲಿಕವಾದ, ಮತ್ತು ಆಳವಾದ ಅಧ್ಯಯನದಿಂದ ಬರೆದ ಲಲಿತ ಪ್ರಬಂಧವಾಗಿದೆ.

ಕಣವಿಯವರು ತಮ್ಮ ದೀರ್ಘಾವಧಿಯ ಸಾಹಿತ್ಯಕ ಬದುಕಿನಲ್ಲಿ ಲೆಕ್ಕವಿಲ್ಲದಷ್ಟು ಸಂಖ್ಯೆಯ ಅಪಾರವಾದ ಸಭೆ, ಸಮಾರಂಭ, ಗೋಷ್ಠಿ, ಸಮ್ಮೇಳನಗಳ ಅಧ್ಯಕ್ಷತೆಯನ್ನೋ, ಉದ್ಘಾಟನೆಯನ್ನೋ ಅಥವ ಅತಿಥಿ ಸ್ಥಾನವನ್ನೋ ವಹಿಸಿ ಮಾತಾಡಿರುವುದುಂಟು– ಲೇಖನಗಳನ್ನು ಮಂಡಿಸಿರುವುದುಂಟು. ಅಂಥವುಗಳು ಕೂಡ ಅವರ ಗದ್ಯ ಬರವಣಿಗೆಯ ಸ್ವರೂಪವನ್ನು ಅಧ್ಯಯನ ಮಾಡುವವರಿಗೆ ಉಪಯುಕ್ತವಾಗಬಲ್ಲವು. ಅಂಥ ಕೆಲ ಬರವಣಿಗೆಗಳಲ್ಲಿ ಉಲ್ಲೇಖಿಸಬಹುದಾದವುಗಳೆಂದರೆ;

೧) ಅಖಿಲ ಭಾರತ ೬೫ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷೀಯ ಭಾಷಣ. (ಇದು ಹಾಸನದಲ್ಲಿ ಜರುಗಿತು)

೨) ಅಖಿಲ ಭಾರತ ೬೬ನೆಯ ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ಮಾಡಿದ ನಿಕಟಪೂರ್ವ ಅಧ್ಯಕ್ಷರ ನುಡಿಯ ಭಾಷಣ. (ಮಂಗಳೂರು)

೩) ಮಧುರೈನ ಕಾಮರಾಜ ವಿಶ್ವವಿದ್ಯಾಲಯದ ಕನ್ನಡ ವಿಭಾಗದ ಬೆಳ್ಳಿ ಹಬ್ಬದ ಉದ್ಘಾಟನಾ ಭಾಷಣ.

೪) 'ಕನ್ನಡ ನವೋದಯ ಮತ್ತು ಸಾಲಿ ರಾಮಚಂದ್ರರಾಯರ ಕಾವ್ಯ'–ವಿಚಾರ ಸಂಕಿರಣದ ಸಮಾರೋಪ ಭಾಷಣ.

೫) 'ಚಲೇಜಾವ್ ಚಳುವಳಿ; ಅರವತ್ತರ ನೆನಪು ಹಾಗೂ ಬಸವರಾಜ ಕಟ್ಟಿಮನಿ ಸ್ಮರಣೆ' ಕಾರ್ಯಕ್ರಮದಲ್ಲಿ ಮಂಡಿಸಿದ ಆಶಯ ಭಾಷಣ.

೬) 'ಮಧುರ ಚೆನ್ನ; ಬದುಕು-ಬರೆಹ-ಚಿಂತನೆ' ವಿಚಾರ ಸಂಕಿರಣದ ಸಮಾರೋಪ ಭಾಷಣ.

೭) 'ಸಿಂಪಿ ಲಿಂಗಣ್ಣ; ಅಪ್ಪಟ ಜಾನಪದ ಪ್ರತಿಭೆ' ವಿಚಾರ ಸಂಕಿರಣದ ಉದ್ಘಾಟನಾ ಭಾಷಣ.

ಇವುಗಳೆಲ್ಲ ಆಳವಾದ ಅಧ್ಯಯನ, ಸಾಂಸ್ಕೃತಿಕ ಜವಾಬ್ದಾರಿ ಮತ್ತು ಶಿಸ್ತಿನಿಂದ ಕೂಡಿರುವ ಕವಿ ಹೃದಯದ ಬರೆಹಗಳಾಗಿವೆ. ಅಖಿಲ ಭಾರತ ೬೫ನೆಯ ಸಮ್ಮೇಳನದ ಭಾಷಣದಲ್ಲಿ ಉತ್ಸಾಹ ಹುಮ್ಮಸ್ಸು ಹಾಗೂ ಭವಿಷ್ಯದ ಬಗ್ಗೆ ಆಶಾದಾಯಕ ನೋಟವಿದ್ದರೆ ಅಖಿಲ ಭಾರತ ೬೬ನೆಯ ಸಾಹಿತ್ಯ ಸಮ್ಮೇಳನದ ನಿಕಟಪೂರ್ವ ನುಡಿಯಲ್ಲಿ-ವಾಸ್ತವತೆ, ಕಟುತ್ವ ಮತ್ತು ನೇರವಾದ ಮಾತುಗಳು ಅಡಗಿವೆ. ಮೊದಲ ಭಾಷಣ ವಿಸ್ತಾರವಾದದ್ದು ಹರಹಿನಿಂದ ಕೂಡಿದ್ದರೆ, ಎರಡನೆಯ ಭಾಷಣ ಸಂಕ್ಷಿಪ್ತವೂ ಪಾರದರ್ಶಕವೂ ಆಗಿದೆ.

ಬಸವರಾಜ ಕಟ್ಟೀಮನಿ, ಮಧುರ ಚೆನ್ನ, ಸಾಲಿ ರಾಮಚಂದ್ರರಾಯ ಹಾಗೂ ಸಿಂಪಿ ಲಿಂಗಣ್ಣನವರ ಬಗ್ಗೆ ಈಗಾಗಲೇ ಸಾಕಷ್ಟು ಪ್ರಸ್ತಾಪ, ಉಲ್ಲೇಖಗಳನ್ನು ಮಾಡಿದ್ದರೂ, ಈ ವಿಚಾರ ಸಂಕಿರಣಗಳಲ್ಲಿ ಅವರು ಮಂಡಿಸಿರುವ ಪ್ರಬಂಧಗಳಲ್ಲಿ-ಒಂದು ಬಗೆಯ ಶಾಸ್ತ್ರೀಯವಾದ, ಅಕಾಡೆಮಿಕ್ ಸ್ವರೂಪ ವ್ಯಕ್ತವಾಗಿದೆ. ಅದರಲ್ಲೂ ಬಸವರಾಜ ಕಟ್ಟೀಮನಿ ಹಾಗೂ ಮಧುರಚೆನ್ನರ ಕುರಿತ ಪ್ರಬಂಧಗಳಿಗೆ ಈ ಮಾತು ಇನ್ನೂ ಚೆನ್ನಾಗಿ ಅನ್ವಯಿಸುತ್ತದೆ.

ಒಟ್ಟಾರೆ ಕಣವಿಯವರ ಗದ್ಯ ಕೃಷಿ ಕಳೆದ ಅರ್ಧ ಶತಮಾನದ ಕನ್ನಡದ ಸಾಹಿತ್ಯಕ-ಸಾಂಸ್ಕೃತಿಕ ಚರಿತ್ರೆಯ ಪಲುಕುಗಳನ್ನು ತನ್ನ ತೆಕ್ಕೆಗೆ ಆಹ್ವಾನಿಸಿಕೊಂಡು ಅದರ ಗತಿ-ಪ್ರಗತಿಗಳನ್ನು ಅದರ ಸಾಧಕ-ಬಾಧಕಗಳನ್ನು ತುಂಬಾ ಸಾವಧಾನವಾಗಿ ಯಾವ ಪೂರ್ವಾಗ್ರಹಕ್ಕಾಸ್ಪದವಿಲ್ಲದೆ ಮೌಲ್ಯ ವಿವೇಚನೆ ನಡೆಸಿದೆ. ಈ ಅಗಾಧ ಕಾಲ ಮತ್ತು ವ್ಯಾಪ್ತಿಯ ಚೌಕಟ್ಟಿನೊಳಗೆ ಕಾಣಿಸಿಕೊಂಡ ಕ್ರಿಯಾಶೀಲ ವ್ಯಕ್ತಿಗಳನ್ನು ಅವರ ಸಿದ್ಧಿ-ಸಾಧನೆಗಳನ್ನು ಮತ್ತು ಈ ಕಾಲಘಟ್ಟದಲ್ಲಿ ತಲೆ ಎತ್ತಿದ ಸಂಘ-ಸಂಸ್ಥೆಗಳನ್ನು ಅವು ನಿರ್ವಹಿಸಿದ ನಿರ್ಣಾಯಕ ಪಾತ್ರಗಳನ್ನು ಹಾಗು ಸಾಹಿತ್ಯದ ವಲಯಗಳೊಳಗೆ ಆವಿರ್ಭವಿಸಿದ ಪಂಥ-ಪಂಗಡ-ಚಳುವಳಿಗಳನ್ನು ಅವುಗಳು ಸೃಷ್ಟಿಸಿದ ಸಂಚಲನಗಳನ್ನು ಅವರ ಗದ್ಯ ಒಂದು ನ್ಯಾಯೋಚಿತ ತಕ್ಕಡಿಯಲ್ಲಿಟ್ಟು ತೂಗಿದೆ.

ಆಧುನಿಕ ಹಾಗೂ ಪರಂಪರೆಯ ಒಂದು ಹದವಾದ ಬೆಸುಗೆಯಾಗಿಯೂ ಅವರ ಗದ್ಯವನ್ನು ನಾವು ನೋಡಬಹುದು. ಇಂಥ ಅವರ ಗದ್ಯ ನಮ್ಮ ಸಾಹಿತ್ಯಕ ಸಂದರ್ಭದಲ್ಲಿ ಗಂಭೀರ ಚರ್ಚೆ, ವಿಮರ್ಶೆ, ಪರೀಕ್ಷೆ, ಪರಿಶೀಲನೆ ಹಾಗೂ ಅನುಸಂಧಾನದ ಕಕ್ಷೆಯಾಚೆ ಉಳಿದಿದ್ದು ಈಗ ಸಮಗ್ರವಾಗಿ ಪ್ರಕಟವಾಗುವ ಮೂಲಕ ಮತ್ತೊಮ್ಮೆ ಅಂಥ ಸಾಧ್ಯತೆಗಳಿಗೆ ತನ್ನನ್ನು ತೆರೆದುಕೊಳ್ಳುತ್ತಿದೆ. ಕನ್ನಡದ ಹಿರಿಯ ವಿಮರ್ಶಕರಾದ

ಡಾ. ಶಂಕರ ಮೊಕಾಶಿ ಪುಣೇಕರ ಅವರು ಕಣವಿಯವರ ವಿಮರ್ಶೆ ಕುರಿತು ಆಡಿರುವ ಮಾತುಗಳೊಂದಿಗೆ ಈ ಪ್ರಸ್ತಾವನೆಯ ಮಾತುಗಳನ್ನು ಮುಗಿಸುವುದು ಸೂಕ್ತವಾದೀತು. ಮೊಕಾಶಿಯವರು ಬರೆದದ್ದು: "ಅವರಲ್ಲಿ ಕಾವ್ಯ ಎಷ್ಟು ನೈಜವಾಗಿ ಸಮಯ ಸ್ಫೂರ್ತಿಯಿಂದ ಹಾಗೆಯೇ ಚಿಂತನ ಪರವಾಗಿ ಹೊಮ್ಮುವುದೋ...ಅವರ ಗದ್ಯದ ಪ್ರೌಢಿಮೆಯೂ ರೂಪುಗೊಳ್ಳುವುದನ್ನು ನೋಡಿದ್ದೇವೆ." ('ಸಮತೋಲನ'ದ ಮುನ್ನುಡಿ)

ಹುಬ್ಬಳ್ಳಿ
೧-೦೩-೨೦೦೯

ಡಾ. ಪ್ರಹ್ಲಾದ ಅಗಸನಕಟ್ಟೆ

# ಪರಿವಿಡಿ

## ಭಾಗ - ೧

### ಮುನ್ನುಡಿಗಳು

## ಭಾಗ – ೨

### ಬೆನ್ನುಡಿಗಳು



## ಭಾಗ – ೩

### ಭಾಷಣಗಳು

## ಭಾಗ – ೪

### ಒಡನಾಟ

## ಭಾಗ – ೫

### ಸಂಕೀರ್ಣ ಲೇಖನಗಳು

# ೧

# ಮಧುರಯಾನ

ಗೆಳೆಯ ಪಂಚಾಕ್ಷರಿಯವರು ತಮ್ಮ ಸ್ನೇಹಿತರಾದ ಶ್ರೀ ಕ.ಮ.ಶಿ.ಚಂದ್ರಶೇಖರಯ್ಯನವರ ಕವನ ಸಂಗ್ರಹಕ್ಕೆ ಮುನ್ನುಡಿಯ ರೂಪದಲ್ಲಿ ನಾಲ್ಕು ಮಾತುಗಳನ್ನು ಬರೆಯಬೇಕೆಂದು ಈಗ ಕೆಲದಿನಗಳ ಹಿಂದೆ ಕೇಳಿಕೊಂಡಿದ್ದರು. ನಾನವರಿಗೆ " ಮುನ್ನುಡಿಯೆ ಏಕೆ, ಕವಿತೆಗಳನ್ನೋದಿದ ಮೇಲೆ ನನ್ನ ಅಭಿಪ್ರಾಯವನ್ನು ಅವರಿಗೆ ಅಗತ್ಯವಾಗಿ ಪತ್ರರೂಪದಲ್ಲಿ ತಿಳಿಸುತ್ತೇನೆ" ಎಂದಿದ್ದೆ. ಕವನ ಸಂಗ್ರಹದ ಕರಡು ಪ್ರತಿಯನ್ನು ಈಗಲೇ ಕಳುಹಿಸಿ ಅವರು ಮತ್ತೆ ಅದನ್ನು ನನ್ನ ನೆನಪಿಗೆ ತಂದುಕೊಟ್ಟಿದ್ದಾರೆ. ಅದನ್ನೋದಿದ ತರುವಾಯ ನನ್ನ ಎರಡು ನೇಹದ ನುಡಿಗಳನ್ನು ಇಲ್ಲಿ ಮೂಡಿಸುತ್ತಿದ್ದೇನೆ.

ಶ್ರೀ ಚಂದ್ರಶೇಖರಯ್ಯನವರನ್ನು ನಾನು ಮುಖತಃ ಕಂಡಿಲ್ಲವಾದರೂ ಅವರ ಕವನಗಳನ್ನು ಆಗೀಗ ಪತ್ರಿಕೆಗಳಲ್ಲಿ ಅವಲೋಕಿಸಿದ್ದೇನೆ."ನಿಮ್ಮ ಮುಖಪರಿಚಯ ನನಗಿಲ್ಲದಿದ್ದರೂ ಬಹುಕಾಲದಿಂದಲೂ ನಿಮ್ಮ ಕಾವ್ಯ ಪರಿಚಯ ನನಗಿದೆ. ವೈಯಕ್ತಿಕ ಪರಿಚಯವಿಲ್ಲದಿದ್ದರೂ ದೊಡ್ಡ ಮನಸ್ಸು ಮಾಡಿ ಕವನ ಸಂಕಲನಕ್ಕೆ ಮುನ್ನುಡಿಯನ್ನು ಬರೆಯಲು ಒಪ್ಪಿದುದು ತಮ್ಮ ಸಹೃದಯಕ್ಕೆ ಸಾಕ್ಷಿಯಾಗಿದೆ" ಎಂಬುದಾಗಿ ಅವರು ತಮ್ಮ ಓಲೆಯಲ್ಲಿ ಕಾಣಿಸಿದ್ದಾರೆ. ಬರಿಯ ಕಾವ್ಯ ಪರಿಚಯ ಮಾತ್ರದಿಂದ ಅವರು ತಮ್ಮ ಅಂತಃಕರಣವನ್ನು ನನ್ನೆದುರು ತೆರೆದು ತೋರಿಸುತ್ತಿರುವುದನ್ನು ನೋಡಿದರೆ, 'ದೊಡ್ಡ ಮನಸ್ಸು' 'ಸಹೃದಯ' ಎಂಬ ಮಾತುಗಳು ನಿಜವಾಗಿಯೂ ಅವರಿಗೇ ಅನ್ವಯಿಸುತ್ತವೆಂಬುದನ್ನು ನಾನಿಲ್ಲಿ ಹೇಳದಿರಲಾರೆ.

ಇಲ್ಲಿರುವ ಕವನಗಳನ್ನು ಕುರಿತು ಪ್ರಸ್ತಾಪಿಸುತ್ತ ಅವರು ಅದೇ ಕಾಗದದಲ್ಲಿ "ಕಳೆದ ಆರೇಳು ವರ್ಷಗಳಿಂದ ಬೆಂಗಳೂರಿನಲ್ಲಿ ಸೆಂಟ್ರಲ್ ಕಾಲೇಜಿನ ವಿದ್ಯಾರ್ಥಿಯಾಗಿದ್ದಾಗಿನಿಂದಲೂ ಬರೆಯುತ್ತಿದ್ದ, ಕನ್ನಡದ ಪ್ರಮುಖ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದ, ಕೆಲವು ಕವನಗಳನ್ನು ಇಲ್ಲಿ ಸಂಕಲಿಸಿದ್ದೇನೆ" ಎಂದಿದ್ದಾರೆ. "ಹೊಸಬನೊಬ್ಬನ ಕವನಗಳು. ತಪ್ಪುಗಳನ್ನು ತೋರಿಸಿದರೆ ತಿದ್ದಿಕೊಳ್ಳುತ್ತೇನೆ" ಎಂಬ ವಿನಯವನ್ನೂ ಅವರು ವ್ಯಕ್ತಪಡಿಸಿದ್ದಾರೆ.

ಈ ಸಂಗ್ರಹದ ಅನೇಕ ಕವಿತೆಗಳಲ್ಲಿ ಕವಿಯ ಮುಗ್ಧ ಮನೋಭಾವ ಮಧುರ ಕಲ್ಪನೆಯೊಡನೆ ವ್ಯಕ್ತಗೊಂಡಿರುವುದನ್ನು ಕಾಣುತ್ತೇವೆ. 'ಮಧುರಯಾನ'ದಲ್ಲಿ ಸೂತ್ರರೂಪವಾಗಿ ಅದು ಪ್ರಕಟವಾಗಿದೆ:

"ಹಸುಳೆಗನಸಿನ ಶಶಿಯ ಲೋಕಕೆ ನಮ್ಮ ಬಯಕೆಯ ಪಯಣವು
ಮಳೆಯಬಿಲ್ಲಿನ ಸಿರಿಯ ಚಲುವಿಗೆ ಮನವು ಸೋತಿದೆ ಮೌನವು!
ಮಧುರ ಭಾವದ ದಿವ್ಯರೂಪದ ಪ್ರೀತಿಪ್ರೇಮದ ಸ್ರೋತವು
ನೂರು ವರ್ಷದ ನೂರು ರಾಗದ ಮಧುರಯಾನದ ಬಯಕೆಯು"

ಕಾವ್ಯರಚನೆಗೆ ತೊಡಗುವ ಪ್ರಥಮದಲ್ಲಿ ಕವಿಗೆ ಇಂಥ ಭಾವ ಸಹಜವಾದುದು. ಕಾವ್ಯಜೀವನದ ಈ ಮೊಗ್ಗು "ಅರಳಿ ಸೌರಭವೀವ ಸಂತಸಕೆ ಕಾದಿಹುದು," ಅಲ್ಲದೆ "ಜನರ ಮನವನು ಸೆಳೆವ ಮರುಳಾಟ ಇದಕಿಹುದು".

ತಾಯನ್ನು ಸೆಳೆದುಕೊಂಡ ಕ್ರೂರಮೃತ್ಯು ಮಮತೆ ಮೋಹದ ಮಧುರ ಬಂಧನವನ್ನು ಕಡಿದುದರ ಕೊರಗು ಬೀಸುಗಲ್ಲಿನ ಹಾಡು ಕೇಳುತ್ತಿರುವಂತೆ ಕವಿಗೆ ಮರುಕಳಿಸಿ, ಹೆತ್ತ ಕರುಳಿನ ಪ್ರೀತಿ ಮುತ್ತಿಟ್ಟು ಬರುವುದರ ಬಣ್ಣನೆ ಹೃದಯವನ್ನು ಕರಗಿಸುತ್ತದೆ.

"ಮಧುರಭಾವದ ಗೀತೆ ಹೃದಯ ಮಂದಿರದಲ್ಲಿ
ಕೆಣಕುತಿದೆ ಬಹುದಿನದ ಹಳೆಯ ನೆನಪ
ಮೌನ ಮಂಟಪದಲ್ಲಿ ಮನವು ಮಲಗಿರುವಾಗ
ಮೂಡಿ ಬರುತಿದೆ ಅದರ ಅಲೆಯ ರೂಪ"

ಮೋಡದ ತುಣುಕು, ಚುಕ್ಕಿಯ ಮಿಣುಕು, ಬಳ್ಳಿಮಿಂಚಿನ ಥಳಕುಗಳಿಂದ ಕೂಡಿದ ರಾತ್ರಿಯ ಆಕಾಶವನ್ನು ಕಂಡು

"ಬೆಳಕಿನ ಜನ್ಮಕೆ ಕತ್ತಲೆ ಮೂಲವೊ ಎನೆ ಸೂಸಿದೆ ಬೆಳಕು".

ಎಂಬ ಉದ್ಗಾರ ಮಿಂಚಿನ ಮೊನೆಯಂತೆಯೇ ತೀಕ್ಷ್ಣಸುಂದರವಾಗಿದೆ. ತುಣುಕು ಮೋಡಗಳೆ, ಹೊಳೆವ ತಾರೆಗಳೆ ಬೋಳು ಬಾನಿನ ಸೊಬಗಿನ ಸೂತ್ರಗಳೆಂದು ಹೇಳಿರುವುದೂ ಅಷ್ಟೇ ಹೃದ್ಯವಾಗಿದೆ. ಅದೇರೀತಿ "ಒಂದು ಸಂಜೆ" ಎಂಬ ಕವನವೂ ಮನಸ್ಸನ್ನು ಸೆರೆಹಿಡಿಯುತ್ತದೆ.

"ಹಿಂಡು ಮೋಡಗಳಿಲ್ಲ ಹೊಳೆವ ತಾರೆಗಳಿಲ್ಲ
ಮೈಮರೆತು ಮಲಗಿರುವ ಮುಗಿಲಿನಲ್ಲಿ"

ಕಂದುಬಣ್ಣದ ಒಂದೇ ಮೋಡ ಅಲ್ಲಿ ಮಂದಗಮನದಿಂದ ಸಾಗಿದೆ 'ಹಲವುನಾಮದ ದೇವನೊಬ್ಬನಂತೆ'. ಈ ಮಾತು ದೂರೂಷ್ಯವೆನಿಸಿದರೂ ಅದರ ಹಿನ್ನೆಲೆಯ ಚಿತ್ರ ಅಷ್ಟರಮಟ್ಟಿಗೆ ಅದನ್ನು ರಂಗುಗೊಳಿಸಿದೆ.

ಇಂಥ ಸಂದರ್ಭದಲ್ಲೆಲ್ಲ ಜೀವನದ ಒಂದೊಂದು ತತ್ತ್ವವನ್ನು ಎಳೆದುಕೊಂಡು ಬರುವ ಪ್ರಯತ್ನ ಓದುಗರ ತನ್ಮಯತೆಗೆ ಭಂಗವನ್ನುಂಟುಮಾಡದಿರದು. ಹೀಗಾಗಿ ಇಲ್ಲಿಯ ಕೆಲವು ಕವಿತೆಗಳು ಶಿಥಿಲವಾಗಿವೆ. ಆದರ ಅದೇ ಅನುಭವ ಸಂಗ್ರಹವಾಗಿ, ಸ್ವಯಂಪೂರ್ಣವಾಗಿ ಸಹಜವಾಗಿ ಅಭಿವ್ಯಕ್ತಗೊಂಡಾಗ ರಸಾನಂದವನ್ನುಂಟು ಮಾಡಲು ಸಮರ್ಥವಾಗುತ್ತದೆ. 'ನನ್ನ ಇಂದಿರೆ' 'ಸುಲೋಚನ' ಮುಂತಾದ ಪದ್ಯಗಳು ಇದಕ್ಕೆ ಒಳ್ಳೆಯ ಉದಾಹರಣೆಗಳಾಗಿವೆ.

ವೈಯಕ್ತಿಕ ನೋವು ನಲಿವುಗಳಲ್ಲದೆ ಸಾಮಾಜಿಕ ವಸ್ತುವನ್ನು ಕವಿತೆಗೆ ಅಳವಡಿಸಿಕೊಂಡಾಗಲೂ ಇವರ ಕವಿ ಶಕ್ತಿ ಕುಂಠಿತವಾಗಿಲ್ಲದಿರುವುದು ಗಮನಾರ್ಹವಾಗಿದೆ.

"ಅಧಿಕಾರಕೆ ಆಕ್ರಮಣಕೆ ಕೈಚಾಚಿದೆ ಮನವು
ಹಣಮಾರಿಗೆ ರಣಕಾಳಿಗೆ ಶರಣಾಗಿದೆ ಜನವು"

ಎಂಬುದಾಗಿ ಇಂದಿನ ಜನಜೀವನದ ಸ್ಥಿತಿಯನ್ನು ನಿರೂಪಿಸುವಾಗಲೂ,

"ಬಲಗುಂದಿ ಕಳೆಗುಂದಿ
ಹಿಂಜಿ ಅಪ್ಪಟೆಯಾಗಿ
ಚಿಂದಿಯಾಗಿದೆ ನಮ್ಮ ಬಾಳಸಂತೆ-
ನೀರಿನಲಿ ನೆನೆದಿರುವ ಬೆಂಕಿಪೊಟ್ಟಣದಂತೆ"

ಎಂಬ ನುಡಿ ಚಿತ್ರದಲ್ಲಿಯೂ ಆವೇಶದ ಜೊತೆಗೆ ಕಾವ್ಯಗುಣವೂ ಬೆರೆತಿರುವುದು ಅಪೇಕ್ಷಣೀಯವಾಗಿದೆ.

(೩)

ಕಾವ್ಯವನ್ನು ರಚಿಸಲಿಕ್ಕೆ ಕವಿಗೆ ಬೇಕಾದ ಮುಖ್ಯ ಸಾಧನ ಸಾಮಗ್ರಿಗಳನ್ನು ಕುರಿತು ಕಾವ್ಯಾವಲೋಕನಕಾರನು ಪ್ರತಿಭೆ, ಕಾವ್ಯ ವಿದ್ಯಾಪ್ರಚಯ ಪರಿಚಯ, ವೃದ್ಧಸೇವಾನುರಾಗ, ಸತತಾಭ್ಯಾಸ ಪ್ರಯತ್ನ ಇವುಗಳನ್ನು ಕವಿತೆಗೆ ನಿಯತಕಾರಣಗಳಾಗಿ ಸೂಚಿಸಿದ್ದಾನೆ. ಪ್ರತಿಭೆಯೇ ಶಕ್ತಿ, ಲೋಕಾಗಮ ಸಕಲ ಕಲಾವೇದನವೇ ವಿದ್ಯೆ, ಶಾಸ್ತ್ರಾನ್ವಿತನಪ್ಪವನೇ ವೃದ್ಧ, ಆಲಸ್ಯವನ್ನುಳಿದು ಗೈಯುವ ಉದ್ಯೋಗವೇ ಅಭ್ಯಾಸಕರ್ಮವೆಂದೂ ಅದಕ್ಕೆ ವಿವರಣೆಯನ್ನೂ ಕೊಡಲಾಗಿದೆ. ಪ್ರತಿಭೆಗೆ ಪೋಷಕವಾದ ಅಂಶಗಳು ಇನ್ನೂ ಹಲವಾರಿದ್ದರೂ ಅಭ್ಯಾಸ ಸಂಸ್ಕೃತವಾದ ಪ್ರತಿಭೆ ಕಾವ್ಯಾಮೃತ ಕಾಮಧೇನುವಾಗುತ್ತದೆಂಬ ಹೇಮಚಂದ್ರನ ಮಾತನ್ನಿಲ್ಲಿ ನೆನೆಯಬಹುದು.

ಶಬ್ದಗಳ ಆಯ್ಕೆ, ಛಂದಸ್ಸಿನ ಹಿಡಿತ, ಅನುಭವದ ಕಾವು ಚಿತ್ತೈಕಾಗ್ರತೆ ಹಾಗೂ ಕಲಾಸಂಯಮ ಇವುಗಳ ಕೊರತೆಯನ್ನು ಇಲ್ಲಿಯ ಕೆಲ ಕವಿತೆಗಳು ಒಂದಲ್ಲ ಒಂದು ಮುಖದಿಂದ ಒಡನುಡಿಯುತ್ತವೆ. ಈ ಅತೃಪ್ತಿ ಕವಿಗೂ ಇರುವುದರಿಂದಲೂ ವಿನಯಶೀಲತೆ ಅವರ ಗುಣವಾಗಿರುವುದರಿಂದಲೂ ಅವರ ಭವಿಷ್ಯದಲ್ಲಿ ನಿಜವಾಗಿಯೂ ನಾನು ಭರವಸೆಯನ್ನು ತಾಳಿದ್ದೇನೆ.

ಗೆಳೆಯ ಚಂದ್ರಶೇಖರಯ್ಯನವರು 'ಮಧುರಯಾನ'ಕ್ಕೆ ಮೊದಲು ನನ್ನ ಈ ನಾಲ್ಕು ನೇಹದ ನುಡಿಗಳನ್ನು ಕೇಳಿಕೊಂಡುದಕ್ಕೆ ಹಾಗು ಅವರು ನನ್ನಲ್ಲಿಟ್ಟಿರುವ ಆದರ ವಿಶ್ವಾಸಗಳಿಗೆ ನಾನು ಕೃತಜ್ಞನಾಗಿದ್ದೇನೆ.

(೧೯೫೨)

೨

# ತೋಳಬಂದಿ

ಪ್ರಕೃತ ಕವನ ಸಂಗ್ರಹದಿಂದ ಕನ್ನಡ ಕಾವ್ಯಕ್ಷೇತ್ರದಲ್ಲಿ ಇದೀಗ ಮೊಗದೋರುತ್ತಿರುವ ಗೆಳೆಯ ಸಂಗಮೇಶರು ನನ್ನ ಕೆಳೆನುಡಿಯನ್ನು ಆಗ್ರಹಪೂರ್ವಕ ಬಯಸಿದ್ದಾರೆ. ಈ ಸಂಕಲನದಲ್ಲಿಯ ಅವರ ನೈಜಭಾವನೆಯ ಶೃಂಗಾರಿಕ ಕವಿತೆಗಳನ್ನೋದಿ ನನಗೆ ಉಂಟಾದ ಸಂತೋಷವನ್ನು ಈ ರೀತಿ ಸವಿನುಡಿಯಿಂದ ಕಾವ್ಯರಸಿಕರಿಗೆ ಹಂಚುವದು ಒಳ್ಳೆಯದೆಂದು ಬಗೆದು ನಾಲ್ಕು ಮಾತುಗಳನ್ನು ಬರೆಯುತ್ತಿದ್ದೇನೆ.

ಕವಿಯ ಕಣ್ಣಿಗೆ ಅಂದವಾಗಿ ಕಂಡುಬಂದಿರುವ ಒಲವಿನ ಪ್ರಪಂಚದ ನಾನಾ ಭಾವ ರೂಪಗಳು, ದಾಂಪತ್ಯಜೀವನದ ಅನುಭವ ಚಿತ್ರಗಳು ನಿರಾಡಂಬರವಾದ ಶೈಲಿಯಲ್ಲಿ ಇಲ್ಲಿ ಮೈದೋರಿವೆ. ಈ ಕವಿಯ ಮುಖ್ಯಗುಣವೆಂದರೆ ಭಾವ ಹಾಗೂ ಭಾಷೆಯಲ್ಲಿಯ ಸಹಜತೆ, ಸ್ವಲ್ಪ ಕಸುಕೆನಿಸಿದರೂ ನೇರವಾದ ಸ್ವಂತ ಮಾತುಗಾರಿಕೆ.

"ತುಂಬು ಮೊಗ ಮುಗುಳು ನಗೆ ಮಲ್ಲಿಗೆಯ ಮುಗುಳೊಂದು
ಅರೆಬಿರಿದ ಕೆಂಪಿನಾ ಚೆಂದುಟಿಯ ಮುತ್ತೊಂದು"

ಇವುಗಳನ್ನು ಕುಡಿನೋಟ ಮಿಂಚಿನೆಳೆದಾರದಲಿ ಹೆಣೆದ ಕವಿತೆಗಳಿವು. ಒಲವಿನ ಮೂರ್ತಿಯ ಸಾನ್ನಿಧ್ಯದಲ್ಲಿ ಕವಿ ಕಾವ್ಯಪ್ರೇರಣೆಯನ್ನು ಪಡೆದಿದ್ದಾನೆ.

"ತನುಬಾನಲಿ ಮಿಂಚನು ಹೊಡೆದು
ತಡೆಯದ ತಾರುಣ್ಯವು ಬರಲು"

ಉಂಟಾಗುವ ಮನಸ್ಸಿನ ಪ್ರತಿಕ್ರಿಯೆಗಳನ್ನು ಕುಸುರು ಕುಸುರಾಗಿ ಮೂಡಿಸಿದ್ದಾರೆ. 'ಒಡೆಯದ ಒಗಟು', 'ಪ್ರಶ್ನೆ-ಉತ್ತರ', 'ಹೊನ್ನುಗ್ಗಿ', 'ನಿರಾಶೆ', ಮುಂತಾದ ಚಿಕ್ಕ ಚಿಕ್ಕ ಕವಿತೆಗಳಲ್ಲಿಯೇ ಕವಿಯ ಪ್ರತಿಭೆ ಹೆಚ್ಚು ಒಡೆದು ಕಾಣುತ್ತದೆ.

"ಬತ್ತಿದ ಬಾಯ ಬಯಲು ಸೀಮೆಯಲಿ
ಮುತ್ತನು ಬಿತ್ತಿದರಾರು?", ಇಲ್ಲವೆ
"ಜಗ್ಗುವೆ ಏತಕೆ ಬಾರದೆ ಬೇಗ?
ಜಗ್ಗಬಾರದೆ ನಮ್ಮನು ಹಾಗ?"

ಆಡಿನ ಕೊರಳ ಹಗ್ಗವನ್ನು ಹಿಡಿದು ಹೊರಟ ಹಳ್ಳಿಯ ಹುಡುಗಿಯ ಮುಗ್ಧ ಸೌಂದರ್ಯವನ್ನು ಕುರಿತು ಹೇಳುವಾಗ ಅಥವಾ

"ಮುಟ್ಟಲು ಮುದುಡುವ ಒಳ ಮುಚ್ಚುಕದೊಲು
ಮುದುಡುವಳೀಕೆಯು ಮಗ್ಗಲು ಹಾಯಲು"

ಎಂಬ ಇಂಥ ಸಾಲುಗಳಲ್ಲಿ ಭಾವಪ್ರಕಟನೆ ಚೇತೋಹಾರಿಯಾಗಿದೆ.

"ಅಳು ನಗು ಹೃದಯದ ಒಳನಗು ತಿಳಿಯದ
ಅಳೆಯದ ಅಸಮರ್ಥ
ಹೇಗೂ ಬಳಲುವೆ ಸೆಳೆತಕೆ ಸಿಲುಕುವೆ
ಹೆಣಗುವೆ ನಾ ವ್ಯರ್ಥ"

ಎನ್ನುವಲ್ಲಿ ಕವಿಯ ತಾತ್ವಿಕ ದೃಷ್ಟಿ ಪರಿಣಾಮಕಾರಿಯಾಗಿದೆ.

ಹೀಗೆ ಸ್ವಚ್ಛಂದವಾಗಿ ಬೆಳೆದ ಹಳ್ಳಿಗಾಡಿನ ಹೂಗಳ ಮಾಸದ ಚೆಲುವಿಕೆಯೂ, ದೋರೆಹಣ್ಣಿನ ರುಚಿಯೂ ಈ ಕವಿತೆಗಳಲ್ಲಿ ಕಂಡುಬರುತ್ತದೆ. ಆದರೆ ಇಷ್ಟೇ ಸಾಲದು. ಭಾಷೆ ಛಂದಸ್ಸುಗಳಲ್ಲಿ ಹೆಚ್ಚಿನ ಪರಿಶ್ರಮದ ಅಗತ್ಯವಿದೆ. ಅನುಭವಗಳನ್ನು ಅಚ್ಚುಕಟ್ಟಾಗಿಯೂ, ಸಾರವತ್ತಾಗಿಯೂ ನಿರೂಪಿಸುವ ಜಾಣ್ಮೆ ಬರಬೇಕಾಗಿದೆ. ಉತ್ಸಾಹದ ಜೊತೆಗೆ ಸಂಯಮ, ಬೆಳವಣಿಗೆಯ ಜೊತೆಗೆ ಸಾಧನೆ ಮುಂದುವರಿದು ಗೆಳೆಯ ಸಂಗಮೇಶರಲ್ಲಿಯ ಕವಿತ್ವದ ಕಿಡಿ ಹೆಚ್ಚು ಪ್ರಕಾಶ ಮಾನವಾಗಿ ಬೆಳಗಿ ರಸಿಕರ ಆನಂದವನ್ನು ಹೆಚ್ಚಿಸಲಿ ಎಂದು ಹಾರಯಿಸುತ್ತೇನೆ.

(೧೯೫೩)

## ೩

## ಸುಗ್ಗಿಯ ಕಣ

(೧)

ನಿಜವಾದ ಕವಿತೆ, ನೂತನ ಭಾವವನ್ನುಸುರುವ ಕವಿತೆ, ಎಲ್ಲಾದರೂ ಕಣ್ಣಿಗೆ ಬಿದ್ದರೆ ಸಹೃದಯನಿಗೆ,ಕಿಟಕಿ ಬಾಗಿಲು ಮುಚ್ಚಿ ಮುಗ್ಗು ನಾರುವ ಕೋಣೆಯಲ್ಲಿ ಹೊರಗಿನ ಹೊಸಗಾಳಿ ಬೀಸಿ ಬಂದಷ್ಟು ಸಂತೋಷ, ಉತ್ಸಾಹ ಉಂಟಾಗುತ್ತದೆ. ಅಂಥ ಕವಿತೆಗಾಗಿ ಅವನ ಜೀವ ಸದಾ ಹಂಬಲಿಸುತ್ತಿರುತ್ತದೆ.

ಭಾವಾಭಿವ್ಯಕ್ತಿಗೆ ಭಾಷೆ ಸಹಜವಾದ, ಸಮರ್ಥವಾದ ಸಾಧನೆಯಾಗಿ ಬಂದರೆ ಕವಿತೆ ಅರ್ಧ ರಾಜ್ಯವನ್ನು ಗೆದ್ದು ಬಂದ ಹಾಗೆಯೇ. ಹಿಂದಿನ ಕವಿಗಳಿಗೂ ಈ ಮಾತಿನ ಅರಿವು ಸಾಕಷ್ಟಿದ್ದಿತು. ಕಾವ್ಯಕ್ಕೆ ಮೀಸಲಾದ ಭಾಷೆಯೊಂದು ರೂಢಿಗೊಂಡಿರುವ ಈ ಕಾಲದಲ್ಲಿ ಮರೆತು ಹೋದ ಆ ತಿರುಳಿನ ಮಾತನ್ನು ಪುನಃ ಇಂದು ನಮ್ಮ ಸ್ಮರಣೆಗೆ ತಂದುಕೊಳ್ಳಬೇಕಾಗಿದೆ. **"ಅದು (ಕಾವ್ಯ) ಮಾತನಾಡಿದವೊಲಂದವನಾಳ್ದಿರೆ ಬಲ್ಪು ನೆಟ್ಟನೆ ದೊರೆಕೊಂಡುದು"** ಎಂದು ಆಂಡಯ್ಯ ಹೇಳಿರುವುದನ್ನು ನೆನೆದರೆ ಇಂದಿನ ಕೆಲವರಿಗಾದರೂ ಆಶ್ಚರ್ಯವೆನಿಸೀತು. ಕವಿತೆ ಮಾತನಾಡಿದಂತೆ ಸಹಜವಾದ ಜೀವಂತ ಭಾಷೆಯಲ್ಲಿರಬೇಕು. ಅಂದರೆ ಅದು ಹೃದಯಂಗಮವಾಗುವುದಲ್ಲದೆ ತನ್ನಷ್ಟಕ್ಕೆ ಒಂದು ಬಗೆಯ ಸಾಮರ್ಥ್ಯವೂ ಅದಕ್ಕೆ ನೆಟ್ಟನೆ ದೊರಕೊಳ್ಳುತ್ತದೆ.

ಕವಿತೆಯನ್ನು ಕವಿತೆಯನ್ನಾಗಿಯೇ ನೋಡುವ, ಅದರ ಕಾವ್ಯಗುಣದಿಂದಲೇ ಅದರ ನೆಲಬೆಲೆಗಳನ್ನು ಗುರುತಿಸುವ ದೃಷ್ಟಿ ಇಂದು ನಮ್ಮಲ್ಲಿ ಬೆಳೆಯಬೇಕಾಗಿದೆ. ಕವಿತೆಗೆ ಯಾವ ಕಟ್ಟುಪಾಡೂ ಇಲ್ಲವೆಂಬ ಮಾತೇನೊ ನಿಜವೆ. ಆದರೆ ಕವಿ ಹೇಳುವ ಮಾತು ಬರಿಯ ಸಂಗತಿಗಳನ್ನು ನಿರೂಪಿಸುವ ಹೇಳಿಕೆಗಳಾಗಿ ಪರಿಣಮಿಸಿವೆಯೇ ಅಥವಾ ಅವನ ಅನುಭವದಲ್ಲಿ ಅದು ಮಾರ್ಪಟ್ಟು ಕಾವ್ಯಮುಖದಿಂದ ಪ್ರಕಟವಾಗಿದೆಯೆ ಎಂಬುದು ಕವಿತೆಯಲ್ಲಿ ಮುಖ್ಯ ನೋಡಬೇಕಾದುದು. ರಾಘವಾಂಕ ಕವಿ 'ಹರಿಶ್ಚಂದ್ರ ಕಾವ್ಯ'ವನ್ನು ಮುಗಿಸುವಾಗ **"ಕಾವ್ಯಮುಖದಿಂ ಪೇಳ್ವನನಪೇಕ್ಷೆಯಿಂದ"** ಎಂದು ಹೇಳುತ್ತಾನೆ. ಈ ಮಾತನ್ನು ಅಂದಿನವರು ಯಾವ ಅರ್ಥದಲ್ಲಿ ತಿಳಿದುಕೊಂಡಿದ್ದರೂ ಏನೊ, ಇಂದಿನವರಾದ ನಮಗೆ ಮಾತ್ರ ಅದರಲ್ಲಿ ವಿಶೇಷಾರ್ಥವನ್ನೊಳಗೊಂಡ ಕಾವ್ಯದ ಸೂತ್ರವೇ ಕಂಡುಬರುತ್ತಿದೆ.

ಇನ್ನೂ ವಿದ್ಯಾರ್ಥಿದೆಸೆಯಲ್ಲಿರುವ (ಹಾಗೆ ನೋಡಿದರೆ ನಾವೆಲ್ಲರೂ ವಿದ್ಯಾರ್ಥಿಗಳೆ.) ಗೆಳೆಯ ಶ್ರೀ ವಿರೂಪಾಕ್ಷಗೌಡರು ಆಗಾಗ ನನ್ನ ಬಳಿ ಬಂದು ತಮ್ಮ ಕವಿತೆಗಳನ್ನು ಓದಿ ತೋರಿಸುವುದರ ಮೂಲಕ ಕಾವ್ಯಚರ್ಚೆಯಲ್ಲಿ ಕುತೂಹಲದಿಂದ ಭಾಗವಹಿಸುತ್ತ ಬಂದಿದ್ದಾರೆ. ಅವರ ಕಾವ್ಯಶಕ್ತಿಯ ಬೆಳವಣಿಗೆಯನ್ನು ತೀರ ಹತ್ತಿರದಲ್ಲಿ ನಿಂತು ನಿರೀಕ್ಷಿಸಿದವನೆಂಬ ಕಾರಣದಿಂದಿರಬಹುದು, ಅವರು ತಮ್ಮ ಕವಿತೆಗಳ ಪ್ರಥಮ ಸಂಕಲನಕ್ಕೆ ಮುನ್ನುಡಿಯ ರೂಪದಲ್ಲಿ ಕೆಲವು ಮಾತುಗಳನ್ನು ನಾನು ಹೇಳಬೇಕೆಂದು ಬಯಸಿದ್ದಾರೆ. ಇಲ್ಲಿ ಅರಳಿದ ಹೂವುಗಳೆಲ್ಲವೂ ಸುಗಂಧಪೂರಿತವಾಗಿವೆಯೆಂದಾಗಲಿ, ಇಲ್ಲವೆ, ಎಲ್ಲ ಬಣ್ಣದ ಹೂವುಗಳೂ ಇಲ್ಲಿ ಸಮಾವೇಶಗೊಂಡಿವೆಯೆಂದಾಗಲಿ ಭ್ರಮೆಯುಂಟಾಗುವಂತೆ ನುಡಿಯುವದು ಈ ನನ್ನ ಮುನ್ನುಡಿಯ ಉದ್ದೇಶವಾಗಿಲ್ಲ. ಆದರೆ ಈ ತೋಟದ ನೆಲದ ಗುಣ ಚೆನ್ನಾಗಿದೆ; ಫಲವತ್ತಾಗಿದೆ.ಅಲ್ಲಿ ಇಲ್ಲಿ ಬೇರುಬಿಟ್ಟ ಕರಿಕೆಯನ್ನು ಕಿತ್ತು, ಕಳೆ ತೆಗೆದು ಕೃಷಿ ಮಾಡಿದರೆ,ಇದಕ್ಕೆ ಸರಿಯಾಗಿ ನೀರು ಹಾಯಿಸಿದರೆ,ಒಳ್ಳೆಯ ಫಲಪುಷ್ಪಗಳನ್ನು ಕೊಡಬಲ್ಲದು ಎಂಬ ಕಲ್ಪನೆ ಇಲ್ಲಿ ಸಂಗ್ರಹಗೊಂಡಿರುವ ಕವಿತೆಗಳನ್ನು ಓದಿದವರಲ್ಲಿ ಸಹಜವಾಗಿ ಮೂಡುತ್ತದೆ. ಆ ಭಾವನೆಯೇ ನನ್ನನ್ನಿಲ್ಲಿ ಮುನ್ನುಡಿ ಬರೆಯಲೂ ಪ್ರೇರಿಸಿತು.

ಬೆಳುವೊಲದ ಮಡಿಲಲ್ಲಿ ಬೆಳೆದಿರುವ ಈ ಕವಿಯ ಮನಸ್ಸು, ಹೃದಯ ಆ ಬಾಳಿನ ಚೆಲುವಿನ ತೆನೆತೆನೆಗಳನ್ನು ಇಲ್ಲಿ ಅಂದವಾಗಿ ಸಿವುಡುಗಟ್ಟಿಕೊಟ್ಟಿದೆ:

"ಸಕ್ಕರೆಯು ಹೊಸಪೇಟೆ, ಸಿಹಿನೀರು ಹಡಗಲಿಯು
ಶಿರಗುಪ್ಪ ಬಿಳಿಜೋಳ, ಹರಪನಳ್ಳಿ
ಶೇಂಗ, ಹತ್ತಿಯ ಹೂವು ಬಳ್ಳಾರಿ, ಕೂಡ್ಲಿಗಿ
ಅನ್ನ, ಸೊಂಡೂರೊಂದು ಚೆಲುವ ಬಳ್ಳಿ"

'ತಿಪ್ಪೆಯ ಹೂವು', ಸುಗ್ಗಿಯ ಕಣ', 'ಅಲ್ಲಿಯ ಮಳೆಯೇ ಈ ಹಳ್ಳ' ಈ ಕವಿತೆಗಳಲ್ಲಿ ಹಳ್ಳಿಯ ಬಾಳಿನ ಒಂದೊಂದು ಚಿತ್ರ ಅದರ ಜೊತೆಗೇ ಆಯಾ ಭಾವವನ್ನು ವ್ಯಂಜಿಸಿ ತೋರಿಸುವ ಪ್ರಯತ್ನ ತುಸುಮಟ್ಟಿಗೆ ನಡೆದಿದೆ. "ಬಯಲು ಸೀಮೆಯ ಬಾಳು" "ಜನನ ಮರಣಗಳೆರಡು ಕೆಲಸದಲ್ಲೆ" ಇರುವ ರೈತನ ಒಂದು ದಿನದ ಜೀವನಗತಿಯನ್ನು ವಿವರವಾಗಿ ಕಣ್ಣುಮುಂದೆ ಕಟ್ಟುವಂತೆ ಚಿತ್ರಿಸಿರುವ ಸೊಗಸಾದ ಕವಿತೆ. 'ಬಾಳನ್ನು ಬಾಳುವದೆ ಒಂದು ಕಲೆಯು' ಹೇಗೆ, ಎಂಬುದನ್ನು ಇದು ಒಡನುಡಿಯುತ್ತದೆ. ಈ ಕವಿತೆಯಲ್ಲಿಯೂ ಹಾಗೂ ಈ ಸಂಗ್ರಹದ ಇನ್ನಿತರ ಕೆಲವು ಕವಿತೆಗಳಲ್ಲಿಯೂ ಕಥನಕಲೆಯಲ್ಲಿ ಇವರಿಗೆ ಒಳ್ಳೆಯ ಗತಿ ಇರುವುದನ್ನು ಕಾಣುತ್ತೇವೆ.

ಗ್ರಾಮಜೀವನದ ಮತ್ತೊಂದು ಬದಿಯನ್ನೂ ಇವರ ಕಣ್ಣು ಕಾಣದೆ ಇಲ್ಲ. 'ಹಳ್ಳಿ-ಗರತಿಯ ಹಾಡು' ಇದನ್ನು ಹೇಳುತ್ತದೆ. 'ಕವಿಕೃತಿಯ ಕುಂದು' ಎಂಬ ಕವಿತೆಯ 'ಹಸಿರು ಗಿಡದಲಿ

ಹಸಿರು ಬಣ್ಣದ ಹಾವ ನೀ ಕಂಡಿಲ್ಲವೋ' ಎಂಬ ಮಾತಿನಲ್ಲಿ ಇಂದಿನ ಹಳ್ಳಿಗಳ ಯಥಾರ್ಥ ಚಿತ್ರವು ಪರಿಣಾಮಕಾರಿಯಾಗಿ ಮೂಡಿದೆ.

ಬಾಲ್ಯದ ನೆನಹುಗಳನ್ನು ಮನಸೆಳೆಯುವಂತೆ ಚಿತ್ರಿಸುವ ಕವನಗಳಲ್ಲಿ ಇವರು ಹೆಚ್ಚು ಯಶಸ್ವಿಯಾಗಿದ್ದಾರೆ. ಮುಗ್ಧಮಧುರ ಭಾವದಿಂದ ಅವು ಓದುಗರ ಹೃದಯವನ್ನು ಸೆರೆಹಿಡಿಯಬಲ್ಲವು. ಅಲ್ಲಿಯ ಭಾವ-ಭಾಷೆಗಳ ಹೊಂದಾಣಿಕೆ ತೃಪ್ತಿಯನ್ನುಂಟು ಮಾಡುತ್ತದೆ.'ಹೋದ ಬಾಲ್ಯವೆ ಬಾರ' 'ಕಂಚುಗಾರ ಹುಳ' 'ಸಾಕಾಗದ ಸುಖ' ಇವುಗಳನ್ನಿಲ್ಲಿ ಹೆಸರಿಸಬಹುದು.'ಬಾಲ್ಯವೇ ಜೀವನದಮೌಲ್ಯ ಜೇನು! ಸವಿದಿಹೆವು ಮತ್ತೊಮ್ಮೆ ಸಿಗುವದೇನು' ಎಂಬ ಮಧುರ ಯಾತನೆ ಈ ಕವನಗಳಲ್ಲಿ ತನ್ನ ನರುಗುಂಪು ಬೀರಿ ಹೋಗಿದೆ.

ಲಲಿತ ಪದ ಸಂಯೋಜನೆಯಿಂದ ತನಗೆ ತಕ್ಕ ಛಂದಸ್ಸಿನ ನಡಿಗೆಯಲ್ಲಿ ಸೊಬಗು ಬೀರುವ "ರಾತ್ರಿರಾಣಿ" ಗಮನಾರ್ಹ ರಚನೆ.

"ನೋಟಕಿವಳು ಬಹಳ ಕಿರಿದು
ನನಗೆ ತಿಳಿಯದಂತೆ ಬೆಳೆದು
ಮಧುರ ಮಂದ ರಾತ್ರಿಗೊಲಿದು ನಗುತಲಿರುವಳು.
ಇವಳ ಹೆಸರೊ ರಾತ್ರಿ ರಾಣಿ
ಸುಮಗಳಲ್ಲಿ ಇವಳೆ ಜಾಣೆ
ಘಮಘಮಿಸಿದೆ ಹಳ್ಳಿ ಓಣಿ ಇವಳ ಪಡೆಯುತ;

ನಮ್ಮ ಪೂಜ್ಯ ನೆಟ್ಟನಿದನು
ಗಿಡದ ಜಾಗದಲ್ಲಿ ಶಿವನು
ಸಗ್ಗವನ್ನೆ ಕಾಣಿಸಿಹನು ಕುಸುಮವಿರಿಸುತ"

'ಮದುವೆಗೆ ಕರೆ', 'ಲಲಿತೆ ಕವಿತೆಯಾಗಬೇಕು', 'ಸ್ವರ್ಗ-ಸೆಳೆತ'ಗಳಲ್ಲಿ ಒಲವಿನ ಓರೆನೋಟವು, ದಾಂಪತ್ಯ ಜೀವನದ ಸವಿಗಾರಿಕೆಯೂ ಕಂಡಿದೆ. 'ನಲ್ಲೆಯ ನುಡಿ'ಯಲ್ಲಿ ಮಧುರ ಹಾಸ್ಯದ ಚದುರು ನುಡಿಯಿದೆ.

ನೂತನ ಭಾವಗಳನ್ನೂ, ವಿಚಾರಗಳನ್ನೂ ಹೊಸ ರೀತಿಯಲ್ಲಿ ಹೇಳಬೇಕು ಎಂಬ ಹವಣಿಕೆ ಇಲ್ಲಿ ಕೊನೆಕೊನೆಗೆ ಕಂಡು ಬಂದಿದೆ:

"ಬೇಡ ಕವಿಗಳೆ ಮುಂದೆಯಾದರೂ ದೃಷ್ಟಿ ಬೇಗನೆ ಬದಲಿಸಿ
ಜಗವು ಹೊಸದಿದೆ, ಜನರು ಹೊಸಬರು ಹೊಚ್ಚ ಹೊಸದನೆ ರೂಪಿಸಿ"

ಎಂಬ ಮಾತನ್ನು 'ಕೋಗಿಲೆಯ ಕವಿಗಳಿಗೆ' ಅರ್ಥಾತ್ ತಮಗೇ ಹೇಳಿಕೊಂಡಿದ್ದಾರೆ. 'ಕಾಲೇಜಿನಲ್ಲಿಯೇ ಇರಲಿ ಇವನು', 'ಸುಸಂಸ್ಕೃತರ ಹೃದಯ', 'ಬೇಸರಿಕೆ ಭಾರತದ ಬೇಸಾಯ ಶಾಸ್ತ್ರ' ಈ ಪದ್ಯಗಳಲ್ಲಿ ಹೊಸ ವಿಚಾರದ ಹೊಳಹು ಮೂಡಿದೆ.

"ಮುದಿ ಎತ್ತುಗಳ ಕಟ್ಟಿ ರಂಟೆ ಹೊಡೆವೊಲು ಹೊಲದಿ
ತೂಕಡಿಸಿ ನಡೆದಿತ್ತು ನಮ್ಮ ಕ್ಲಾಸು,"
"ಮೇಷ್ಟ್ರು ಈ ಕಡೆ, ರೈತ ಆ ಕಡೆ
ನಡುವೆ ಹೊಳೆ ಭೋರಿಡುತ್ತಿದೆ,
ಎಲ್ಲಿ ಸೇತುವೆ? ಇಲ್ಲ ನಾವೆ!"

ಈ ಬಗೆಯ ನವೀನ ಉಪಮೆ ರೂಪಕಗಳು ಇವರ ಮುಂದಿನ ಕಾವ್ಯಮಾರ್ಗದ ಬಗ್ಗೆ ಹೊಸ ಆಸೆಯನ್ನು ಹುಟ್ಟಿಸುವಂತಿವೆ.

(೩)

ಹಿರಿಯ ಕವಿಗಳು ಸಿದ್ಧಮಾಡಿ ಕೊಟ್ಟಿರುವ ದಾರಿಯಲ್ಲಿ ಸುಗಮವಾಗಿ ಸಾಗಿ ಬಂದಿರುವ ಇವರ ಕವಿತಾಲಹರಿಯಲ್ಲಿ ಆ ಕವಿಗಳ ಭಾವ, ಛಂದಸ್ಸು, ನುಡಿಕಟ್ಟುಗಳ ಪ್ರಭಾವವೂ ಪ್ರತಿಧ್ವನಿಯೂ ಕಂಡು ಬಂದಿದ್ದರೆ ಆಶ್ಚರ್ಯವೇನಲ್ಲ ; ಒಂದು ದೃಷ್ಟಿಯಿಂದ ಇದು ಅನಿವಾರ್ಯವೂ ಆಗಿದೆ. ಆದರೂ ಸ್ವತಂತ್ರವಾದ ಬೆಳವಣಿಗೆಯ ಕುರುಹುಗಳನ್ನೂ ಅಲ್ಲಲ್ಲಿ ಕಂಡಾಗಿದೆ. ಹೊಸ ಮಾರ್ಗದಲ್ಲಿ ಅಡಿಯಿಡುವಾಗಲೂ ಕವಿ ತುಂಬ ಎಚ್ಚರಿಕೆ ವಹಿಸಬೇಕಾಗುತ್ತದೆ :

"ಊರಮುಂದೆಯ ಹಗರಿ ಹರಿಯುತಿದೆ ಭೋರೆಂದು
ಬುರುಗು, ಮರ, ಕ್ರಿಮಿಕೀಟ, ಮಳೆನೀರು ತಂದು"

ಎಂದು ತುಂಬಿ ಬಂದ ಹಳ್ಳವನ್ನು ಅವರೇ ಒಂದು ಕವಿತೆಯಲ್ಲಿ ಬಣ್ಣಿಸಿರುವಂತೆ ಕಾವ್ಯಮಾರ್ಗದಲ್ಲಿಯೂ ಹೊಸ ಹೊಸ ಪ್ರವಾಹಗಳ ರಭಸದಲ್ಲಿ ಒಮ್ಮೊಮ್ಮೆ ಹಾಗೆ ಬಗ್ಗಡವೇಳುವದುಂಟು. ಕಲಾದೃಷ್ಟಿಯ ತಾಳ್ಮೆ, ಸಂಯಮಗಳು ಆ ಹೊತ್ತಿನಲ್ಲಿಯೂ ಅದನ್ನು ತಿಳಿಗೊಳಿಸಬಹುದಾಗಿದೆ.

ಶ್ರೀ ವಿರೂಪಾಕ್ಷಗೌಡರ ಈ ಸಂಕಲನ ನಿಜವಾಗಿಯೂ ಒಂದು ಸುಗ್ಗಿಯ ಕಣ. ಹಂತಿಕಟ್ಟಿ, ತೆನೆ ತುಳಿಸಿ, ಕಂಕಿ ಹೊಟ್ಟುಗಳನ್ನು ವಿಂಗಡಿಸಿ ಜಳ್ಳುತೂರಿ ಕಾಳುಗಳನ್ನು ಸಹಗ್ರಹಿಸಿ ರಾಶಿ ಮಾಡುವ ಕಾರ್ಯ ಇನ್ನು ನಡೆಯಬೇಕು. 'ದುಡಿದ ಹಾಗೆ ಪಡೆವರು' ಎಂಬ ಮಾತನ್ನು ಮೊದಲ ಕವಿತೆಯಲ್ಲಿಯೇ ಅವರು ಮನಸ್ಸಿಗೆ ತಂದುಕೊಂಡಿದ್ದಾರೆ. ಅವರು ಪ್ರಾರಂಭಿಸಿರುವ ಈ 'ಸುಗ್ಗಿಯ ಕಣ'ದಿಂದ ಇನ್ನು ಮುಂದೆ, ಮುತ್ತಿನಂತಹ ಕಾಳನ್ನು ಮನೆಗೆ ತರಲಿ, ಕನ್ನಡದ ಕಣಜವನ್ನು ತುಂಬಲಿ ಎಂದು ಹಾರೈಸಿ ಅವರಿಗೆ ಶುಭ ಕೋರುತ್ತೇನೆ. (೧೯೫೮)

## ೪

## ರಸವಂತಿ

'ರಸವಂತಿ' ಹೊಸ ಕವಿಯೊಬ್ಬನ ಪ್ರಸಾದ ಗುಣವನ್ನು ಎತ್ತಿ ತೋರಿಸುವ ಕವನ ಸಂಕಲನ. ಶ್ರೀ ಗಿರಡ್ಡಿ ಗೋವಿಂದರಾಜರ ಕಾವ್ಯ ಜೀವನದ ಬೆಳವಣಿಗೆಯ ಕ್ರಮ, ಅವರ ಈ ಪ್ರಥಮ ಸಂಕಲನದಲ್ಲಿಯೇ ಕುತೂಹಲವನ್ನು ಹುಟ್ಟಿಸುವಂತಿದೆ. ನಿಸರ್ಗದ ಚೆಲುವಿಗೆ ಮನಸೋತ ಇವರ ಕಾವ್ಯವಾಣಿ, ಹೊಸ ಹೊಸ ನುಡಿ ಚಿತ್ರಗಳನ್ನು ಮೂಡಿಸುವಲ್ಲಿ ಮತ್ತು ತನ್ನ ಅನುಭವಕ್ಕೆ ತಕ್ಕ ಅಭಿವ್ಯಕ್ತಿಯನ್ನು ಕಂಡುಕೊಳ್ಳುವಲ್ಲಿ ನಿಷ್ಠೆಯಿಂದ ಮುಂದುವರಿಯುತ್ತಿರುವದು ಸಂತೋಷದ ಸಂಗತಿ. ಹಕ್ಕಿಗಳ ಚಿಲಿಪಿಲಿ 'ಮಕ್ಕಳ ಲೆಝೀಮು' ನುಡಿದಂತೆ, ನಿಶೆಯ ಬಾನು 'ರೇಶ್ಮೆಬಿಳಿಗಸೂತಿಯುಳ್ಳ ಚಂದ್ರಕಾಳಿ ಸೀರೆ'ಯಂತೆ, 'ಬೆಳಗಿನೆಳೆಯ ಗಾಳ್ಯಾಗ ರೆಕ್ಕಿ ತೆರೆದಾವ ಹಕ್ಕಿ-ಮಾತು', 'ಹೆಸರಿನಲ್ಲೆ ಹೂ ಹೆಸರ ಬರಿಯತಾವ', 'ಮಾಡ ಮುಸುಕಿ ಮುಗಿಲೆಲ್ಲ ಮುಳುಗಿದರು ಜಗವೆಲ್ಲ ಬೆಳಕು' - ಇವೇ ಮೊದಲಾದ ಬಿಡಿ ಬಿಡಿ ಚಿತ್ರ, ರೂಪಕಗಳಲ್ಲಿಯ ನಿತಾಂತರಮಣೀಯತೆ ಕವಿಯ ಭವಿಷ್ಯದಲ್ಲಿ ಭರವಸೆಯನ್ನು ಹುಟ್ಟಿಸುತ್ತದೆ.

ಪ್ರೇಮದ ಲಲ್ಲೆಮಾತು ಹಾಗೂ ನಾಡಿನಳ್ಕರೆಯ ಭಾವಗಳನ್ನು ಒಳಗೊಂಡ ಕೆಲವು ಕವಿತೆಗಳೂ ಇಲ್ಲಿವೆ. ಇವುಗಳ ಸಾಮಾನ್ಯತೆಯನ್ನು ಹೊಡೆದೋಡಿಸಲು ಸೂಚ್ಯತೆ, ವ್ಯಂಜಕತೆಗಳು ದಾಳಿಯಿಡಬೇಕು. ಕೇವಲ ಕುತೂಹಲಕ್ಕಾಗಿ ಇವರು ನವ್ಯತೆಯ ಕಡೆಗೆ ಒಲಿದು ಅದರ ರುಚಿಯನ್ನೋ, ಕಹಿಯನ್ನೋ ಒಂದಿಷ್ಟು ಕಂಡು ಮತ್ತೆ ತಮ್ಮ ದಾರಿಯತ್ತ ಸಾಗಿರುವದನ್ನು ಇನ್ನು ಕೆಲವು ಕವಿತೆಗಳು ಸೂಚಿಸುತ್ತವೆ. ಹುಟ್ಟಿದೂರಿನ ಹೂವು ತನ್ನ ರಮ್ಯತೆಯ ಮುಷ್ಟಿಯಲ್ಲಿ ಇವರನ್ನು ಬಂಧಿಸಿದೆ. ಈ ಕವಿಯ ಭಾವ ಅಲ್ಲಿಯೇ ತನ್ನ ನೆಲೆಯನ್ನು ಕಂಡುಕೊಳ್ಳುವ ಹವಣಿಕೆಯೂ ಕಂಡು ಬಂದಿದೆ.

"ಹೂವಿನ ಹಾಸಿಗಿ ತುಳ ತುಳದ ಸಾಕಾತು,
ಮುಳ್ಳಿನ ಸವಿಯನ್ನು ನೋಡೇನ.
ಹುಲ್ಲೆಯ ಚೆಲ್ಲಾಟ ಸಾಕಪ್ಪ ಸಾಕಿನ್ನ,
ಸಿಂಹದ ಕೂಡಽನು ಆಡೇನ".

ಎನ್ನುವ ಹುಮ್ಮಸ್ಸೇನೋ ಆಗೀಗ ಹೊರಹೊಮ್ಮುತ್ತಿದೆ. ಆದರೂ 'ನೆತ್ತಿಗೆ ಹತ್ತುವ ಖಾರ ಮಾತ್ರ ಬೇಡ' ಎಂದು ತಮ್ಮ ಕಾವ್ಯಶಕ್ತಿಯ ಮಿತಿಯನ್ನು ಇವರು ತಿಳಿದುಕೊಂಡಿರುವುದು ಒಂದು ಒಳ್ಳೆಯ ಲಕ್ಷಣ.

ತನ್ನ ಕಾವ್ಯಮಾರ್ಗ ಯಾವುದೆಂಬುದನ್ನು ಇವರು ಇನ್ನೂ ಸ್ಪಷ್ಟವಾಗಿ ಜಾನಿಸಿಕೊಂಡಿರದಿದ್ದರೂ ಜಾನಪದಗೀತಮಾಧುರ್ಯ, ಅದರ ನುಡಿಗಟ್ಟು, ದೇಶಿಯ ಸೊಬಗುಗಳತ್ತ ಇವರ ಕಾವ್ಯ ಒಲಿಯುತ್ತಿರುವದನ್ನು ನಾವಿಲ್ಲಿ ಕಾಣಬಹುದು. ಈಗಾಗಲೇ ಒಬ್ಬಿಬ್ಬರು ನಮ್ಮ ಹಿರಿಯ ಕವಿಗಳು ಜಾನಪದ ಕಾವ್ಯಭಂಡಾರದ ಮುದ್ರೆಯನ್ನೊಡೆದು ಅದರ ಸಿರಿ-ಸಂಪತ್ತನ್ನು ರಸಿಕರಿಗೆ ಹಂಚಿದ್ದಾರೆ. ಆದರೂ, ಈ ದಿಸೆಯಲ್ಲಿ ಸೂರೆಗೊಳ್ಳಲು ಇನ್ನೂ ಬೇಕಾದಷ್ಟು ಸಂಪತ್ತಿದೆ ಎಂಬ ಆತ್ಮವಿಶ್ವಾಸದಿಂದ ಇವರು ಮುನ್ನಡೆದಿರುವದು ಗಮನಾರ್ಹವಾಗಿದೆ.

"ಹಾಡುವೆನು ಗಾಳಿಯಲಿ
ನನ್ನ ಹಾಡು;
ಎದೆಯುಕ್ಕಿ ಬಂದಾಗ ಯಾರ ಕೇಳುವದೇನು?
ತಿಳಿದಂತೆ ತೋಡುವೆನು
ನನ್ನ ಪಾಡು"

ಎಂಬ ಇವರ ಉತ್ಸಾಹ ಮೆಚ್ಚತಕ್ಕುದೇ. ಆದರೂ ಗಣಿಗಳಲ್ಲಿ ಕಲ್ಲು ಮಣ್ಣುಗಳನ್ನು ಬೇರ್ಪಡಿಸಿ ಚಿನ್ನದ ಗಟ್ಟಿಗಳನ್ನು ಹೊರದೆಗೆಯುವ ಸಂಯಮ-ಸಾಹಸ ಇವರದಾಗಲೆಂದು ಹಾರೈಸಿ, 'ರಸವಂತಿ'ಗೆ ಸ್ವಾಗತ ಬಯಸುತ್ತೇನೆ.

(೧೯೬೧)

೨೯

## ಸಂಕ್ರಾಂತಿ

ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ವಿದ್ಯಾರ್ಥಿಯಾಗಿದ್ದಾಗ ಶ್ರೀ ಹೊರಡಿಯವರು 'ನಕ್ಷತ್ರ' ಎಂಬ ಪುಟ್ಟ ಕವನ ಸಂಗ್ರಹದಿಂದ ತಮ್ಮ ಕಾವ್ಯಶಕ್ತಿಯ ಮಿನುಗನ್ನು ತೋರಿಸಿದ್ದರು. ಇದೀಗ 'ಸಂಕ್ರಾಂತಿ'ಯ ಮೂಲಕ ಈಚಿನ ತಮ್ಮ ಕಾವ್ಯಸಾಧನೆಯ ಫಸಲನ್ನು ರಸಿಕರೆದುರು ಇಟ್ಟಿದ್ದಾರೆ. ಅಲ್ಲಿ ಕಂಡು ಬಂದ ಗುಣಗಳೆಲ್ಲ ಇಲ್ಲಿ ಇನ್ನಿಷ್ಟು ಮೈತುಂಬಿಕೊಂಡಿವೆ. ಭಾವ ಅಲ್ಲಲ್ಲಿ ಪುಷ್ಟಿಗೊಂಡಿದೆ. ಮಾತು ಎಲ್ಲೆಡೆಗೂ ಹರಿತವಾಗಿದೆ. ತನ್ನ ಅನಿಸಿಕೆಗಳನ್ನು ಚುಟುಕಿನಲ್ಲಿ, ಕಟಕಿಯಲ್ಲಿ ಹೇಳಿ ಮುಗಿಸುವ ಹವ್ಯಾಸ ಒಂದೆಡೆಗಿದ್ದರೆ ('ಪಿಂಡದಾನಿ', 'ಹೂವು-ದಾರ', 'ಹೀನರಕ್ತ') ಅದನ್ನು ಕಥೆಮಾಡಿ ಸುರುಳಿ ಬಿಚ್ಚುವ ರೀತಿಯನ್ನೂ ಕವಿ ಅವಲಂಬಿಸಿದ್ದಾರೆ.

"ಮಿತಿಯನು ಮೀರದ ಮೌನವು ಚಿನ್ನ
ಹೆಚ್ಚಿನ ಮೌನವು ಹೇಡಿಯ ಚಿಹ್ನ"

ಎಂಬ ತಿಳಿವಳಿಕೆಯಿಂದ 'ನಾಯಕ ಮಣಿ', 'ಏರಿತು ಗಗನಕೆ', 'ಬಾಲವಿತಂತು', 'ಕಾಲೇಜು ಕುವರ'- ಇಂಥ ಕವಿತೆಗಳು ತಮ್ಮ ರಭಸವನ್ನು ತೋರ್ಪಡಿಸಿವೆ.

"ಎಸ್ಸೆಸ್ಸಿ ಪಾಸಾಗಿ
ಕಾಲೇಜು ಕೂಸಾಗಿ
ನಾಲೇಜು ಗಳಿಸಲವ ಬಂದನಯ್ಯ,
ಅಪ್ಪ ಗಳಿಸಿದ ಗಂಟು
ಬ್ಯಾಂಕಿನಲಿ ಬಹಳುಂಟು
ತುಂಟತನ ಮಾಡಲಿಕೆ ಭರ್ತಿ ಪ್ರಾಯ!"

ಈ ಬಗೆಯ ಸ್ವಭಾವೋಕ್ತಿ ಅವುಗಳ ಶಕ್ತಿಯಾಗಿದೆ. ಒಮ್ಮೊಮ್ಮೆ ಹಿಡಿತ ತಪ್ಪಿದಾಗ ಅದು ಬರಿಯ ವಿವರಣೆಯಾಗುವ ಸಂಭವವೂ ಉಂಟು. ವಿಡಂಬನೆಗೆ ಹೊರಳಿದಾಗ ಆ ಮಾತು ಮತ್ತೆ ತನ್ನ ಮೊನೆಯನ್ನು ಚಾಚುತ್ತದೆ. ಕವಿಯ ಒಲವೂ ಹೆಚ್ಚಾಗಿ ಆಕಡೆಗೇ ಹರಿದಿದೆ. 'ದುಃಖಸೂಚಕ ಸಭೆ', 'ಬಡವರ ಬಾಳೆ' ಇತ್ಯಾದಿ ಕವಿತೆಗಳಲ್ಲಿ ಅದು ತಕ್ಕಮಟ್ಟಿಗೆ ಯಶಸ್ವಿಯಾಗಿದೆ. ಇದೇ ಸೆರಗನ್ನು ಹಿಡಿದು ಇವರ ಕವಿತೆಗಳಲ್ಲಿ ಅಲ್ಲಲ್ಲಿ ಬರುವ ಕೆಲವು ಸಾಲುಗಳನ್ನು ಗಮನಿಸಬಹುದು :

'ಏರಿತು ಗಗನಕೆ ನಮ್ಮ ಧ್ವಜ
ಅದರಡಿ ನಡೆದಿದೆ ಎಂಥ ಮಜ'

'ಹಾರುವ ಹಕ್ಕಿಯ ಹಿಡಿಯಲುಬಹುದು
ಏರುವ ಬೆಲೆಗಳ ಇಳಿಸಲು ಬರದು'

'ಅಂದು ಮಾಲೆ ಹಿಡಿದ ವಧುವೆ
ಇಂದು ಮೂಲೆ ಹಿಡಿದ ವಿಧವೆ;
ನಿನ್ನೆ ಮಡದಿ ಸತ್ತ ವಿದುರ
ಇಂದು ಮತ್ತೆ ನೂತನ ವರ'

'ಕತ್ತಲು ಮನೆಯಲಿ
ಬತ್ತಲೆ ಹೆಣ್ಣು
ದೇಹದ ವ್ಯಾಪಾರ
ತುತ್ತಿನ ಚೀಲಕೆ
ಎಲ್ಲಿವೆ ಕಣ್ಣು?
ಹಸಿವೆಯ ಅವತಾರ!

ಇಂಥ ಸಾಲುಗಳು ಚಮತ್ಕಾರದಿಂದ ಕೂಡಿದ್ದರೂ, ವಿಷಮ ವಾಸ್ತವತೆಯ ಬಿಸಿಯನ್ನು ಓದುಗನಿಗೆ ತಾಗಿಸದಿರುವು.

ಮಾಧುರ್ಯದ ಒಳಬಗೆಯನ್ನು ಈ ಕವಿ ಅರಿತಿಲ್ಲವೆಂದಲ್ಲ :

'ಹೃದಯ ತುಂಬಿ ಹೊರಬಂದ ಮಾತು
ತುಟಿಯಲ್ಲೆ ಅಡಗಿ ನಿಂತು,
ಕಣ್ಣಾಲಿ ಜೋಲಿ ತಪ್ಪಿದವೊ ಏನೊ
ಹರುಷಾಶ್ರು ಹರಿದು ಬಂತು'

ಎಂದು ತನ್ನ ಭಾವನೆಗೆ ರೂಪುಗೊಟ್ಟು ಹೃದಯದಿಂದ ಹೊರಗೆ ಅದನ್ನು ಹಗುರಾಗಿ ಎತ್ತಿಡಬಲ್ಲ. ಅದನ್ನೇ ಪರಿಹಾಸದಲ್ಲಿ ಬೆರಸಿ ಅದಕ್ಕೊಂದು ಹೊಸ ರುಚಿಯನ್ನೂ ಕೊಡಬಲ್ಲ:

'ನಿನಗಂತು ಈಗ ದಿನಕೊಂದು ಬಯಕೆ
ತಿಂದೀಯೆ, ಅದನು, ಇದನು.

ಹುಣ್ಣಿಮೆಯ ದಿವಸ ಕಣ್ಣೀರು ಏಕೆ?
ಸಣ್ಣವಳೆ ಅರಸಿ, ನೀನು?'
'ಹಸಿರು ತೊಟ್ಟಿಲದಲ್ಲಿ
ಜೀಕುತಲಿ ಜೋಕಾಲಿ
ಕವನ ಹಾಡಿದೆ ಕುಸುಮ ಪವನ ತಾಗಿ'

ಇಂಥ ರೂಪಕಗಳಲ್ಲಿ ಸಹಜವಾದ ಭಾವಾಭಿನಯದಿಂದ ರಸಿಕರನ್ನು ತಲೆದೂಗಿಸಬಲ್ಲ.

ಇಷ್ಟಾದರೂ, ಇಲ್ಲಿಯ ಕವಿತೆಗಳಿಗೆ ಒಂದು ರೂಪು, ಆಕಾರ ಇನ್ನೂ ಬರಬೇಕಾಗಿದೆ. ಆಡಂಬರದ, ಡಾಂಭಿಕತೆಯ ಇಂದಿನ ಜೀವನ, ವಿಡಂಬನೆಗೆ ಸಾಕಷ್ಟು ಸಾಮಗ್ರಿಯನ್ನೊದಗಿಸಲ್ಲುದೇನೊ ನಿಜ. ಆದರೆ ವಿಡಂಬನೆಯು ವಾಚ್ಯವಾಗಿರದೆ ಸೂಚ್ಯವಾಗಿದ್ದಷ್ಟೂ ಕಾವ್ಯಗುಣ ಕಳೆಯೇರುತ್ತದೆ. ಜೀವನಾನುಭವದ ಪಾಕ ಕವಿತಾರಸವಾಗಲು ಸಾಕಷ್ಟು ಕಾಲಪರಿಧಿಯೂ ಬೇಕಾದೀತು. ಭಾವಪ್ರಕಟನೆಯಲ್ಲಿ, ಮಾತಿನ ಪ್ರಯೋಗದಲ್ಲಿ, ಕವಿತೆಯ ಧಾಟಿಯಲ್ಲಿ ಇನ್ನಿಷ್ಟು ಸಂಯಮದಿಂದ ಈ ಕವಿ ಮುಂದುವರಿದರೆ ಇನ್ನೂ ಒಳ್ಳೆಯ ಕೃತಿ ಇವರಿಂದ ಬರಬಹುದೆಂಬ ಆಸೆಯನ್ನು ಈ ಸಂಗ್ರಹ ಹುಟ್ಟಿಸುತ್ತದೆ. ಈ ಹಂತದಿಂದ ಮುಂದಿನ ಬೆಳವಣಿಗೆಯನ್ನು ಕಾವ್ಯರಸಿಕರು ನಿರೀಕ್ಷಿಸಿದರೆ ತಪ್ಪಲ್ಲ. ಪ್ರಯೋಗ ಪ್ರಮುಖವಾದ ಈ ಸಂಧಿಕಾಲದಲ್ಲಿ ಹೊಸ ಕವಿಗಳು ಮುಂದೆ ಬರುತ್ತಿರುವದು ಸಂತೋಷದ ಸಂಗತಿ. ಈ ದೃಷ್ಟಿಯಿಂದ ಸಹೃದಯರು 'ಸಂಕ್ರಾತಿ'ಗೆ ಸ್ವಾಗತ ಬಯಸುವರೆಂದು ನಂಬಿದ್ದೇನೆ.

(೧೯೬೫)

೬

# ಶಬ್ದ ರಕ್ತ ಮತ್ತು ಮಾಂಸ

"ಸ್ವಾನುಭವದ ಜಾಡು ಹಿಡಿದು ಚಿಂತನೆ ನಡೆಸುವ ಕವಿಯ ಕಾವ್ಯ ಹೊಸರೀತಿಗಳನ್ನು ಬೆಳಕಿಗೆ ತರಬಲ್ಲುದು" ಎಂದು ತಮ್ಮ ಪ್ರಥಮ ಕವನ ಸಂಕಲನದಲ್ಲಿ ಹೇಳಿಕೊಂಡ ಶ್ರೀ ಬುದ್ದಣ್ಣ ಹಿಂಗಮಿರೆಯವರು ಐದಾರು ವರ್ಷಗಳ ನಂತರ ಪ್ರಕಟಿಸುತ್ತಿರುವ ಈ ದ್ವಿತೀಯ ಸಂಕಲನದಲ್ಲಿ ತಮ್ಮ ಸಾಧನೆಯನ್ನೂ ಹಾಗೂ ವ್ಯಕ್ತಿತ್ವದ ಕೆಲವು ಮಹತ್ವದ ಅಂಶಗಳನ್ನೂ 'ಶಬ್ದ, ರಕ್ತ ಮತ್ತು ಮಾಂಸ'ದಲ್ಲಿ ನುಡಿಗೊಟ್ಟು ತೋರಿಸಿದ್ದಾರೆ. ಕೊಲ್ಲಾಪುರ ಜಿಲ್ಲೆಯ ರಾಜಾಪುರದಲ್ಲಿ ಜನಿಸಿ, ಕೃಷ್ಣಾತೀರದ ಕನ್ನಡ ನೆಲದ ಕಬ್ಬಿನ ಕಾಕವಿಯನ್ನುಳಿಸಿಕೊಂಡು, ನಿಪ್ಪಾಣಿಯಿಂದ ಕಳೆದ ವರುಷವೇ ಹುಬ್ಬಳ್ಳಿಗೆ ಬಂದು ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿರುವ ಹಿಂಗಮಿರೆಯವರು ಕಾವ್ಯ ಸೆಲೆಯನ್ನು ಹಿಂಗದೆ ಕಾಪಾಡಿಕೊಂಡು ಬಂದಿರುವುದು ಅಭಿನಂದನೀಯ. ಇಷ್ಟೇ ಅಲ್ಲ, ಇಂದಿನ ಕನ್ನಡದ ಹೊಗರು ಹೊಮ್ಮಿಸುವ ಹೊಸ ಪೀಳಿಗೆಯ ಕವಿಗಳ ಸಾಲಿನಲ್ಲಿ - ಸಂಕೋಚ ಸ್ವಭಾವದಿಂದ ಸ್ವಲ್ಪ ಹಿಂದುಮುಂದೆಯಾದರೂ - ವ್ಯಕ್ತಿವೈಶಿಷ್ಟ್ಯದಿಂದ ನಿಲ್ಲಬಲ್ಲ ತ್ರಾಣವನ್ನು ಅವರ ಕಾವ್ಯ ಪಡೆದುಕೊಂಡಿದೆ. ಆದುದರಿಂದ ಅದು ಸ್ವಾಗತಕ್ಕೆ ಯೋಗ್ಯವೆಂದು ಬೇರೆ ಹೇಳಬೇಕಿಲ್ಲ.

ತಮ್ಮ ಪ್ರಥಮ ಸಂಕಲನವಾದ 'ಹುಲ್ಲುಗೆಜ್ಜೆ'ಯಲ್ಲಿಯೇ ಸರಳ ರಮ್ಯತೆಯೊಡನೆ ಅಲ್ಲಲ್ಲಿ ವಾಸ್ತವಿಕ ಪ್ರಜ್ಞೆಯ ಒಲವನ್ನೂ, ಬುದ್ಧಿಯ ಮಿಂಚನ್ನೂ ಇವರು ತೋರಿಸಿದ್ದರು:

"ಕಿವುಡುಭೂಮಿ, ಕುರುಡುಗಾಳಿ
ಹುಲ್ಲು ಗೆಜ್ಜೆ ನಿನದ".

"ಈ ಮಣ್ಣಿನಲ್ಲಿಳಿದಿಹವು ಬ್ರಹ್ಮವೃಕ್ಷದ ಬೇರು"

"ತನ್ನ ಸೆರಗಿನಲ್ಲಿ ಬೆಂಕಿ-ಬಿರುಗಾಳಿ-ಹೊಳೆ
ಕಟ್ಟಿಕೊಂಡಲೆಯುವ ಶಕ್ತಿಯಿದೊ, ನೆನಪಿಡು;
ಹೆಣ್ಣೆಂದು ಹೆಸರಾಂತು ಲೋಕ ಆಕರ್ಷಿಸುವುದಿಗೊ
ಬಿಗಿದ ಲೋಹ ಸರಪಳಿಯಲ್ಲಿ ನರಳುವ ಗಂಡು."

"ಜೀವ ಧಿಗ್ಗನೆಯೆದ್ದು ಮುಗಿಲ ಮೊಗ ಮುತ್ತಿಟ್ಟು
ಕುಸಿಯುವದು ಮತ್ತೆ ಇದೇ

ಇದೇ ನೆಲಕೆ."

ಇಂಥ ಹಲವು ಶಕ್ತಿಯುತವಾದ ಹಾಗೂ ಸತ್ವಪೂರ್ಣವಾದ ಸಾಲುಗಳನ್ನು ಅಲ್ಲಲ್ಲಿ ಕಂಡರೂ ಅವರು ತಮ್ಮದೇ ಆದ ಅಭಿವ್ಯಕ್ತಿಗೆ ಮೂರ್ತರೂಪಕೊಡಲು ಕಷ್ಟಪಟ್ಟಿರುವುದೂ ಕೆಲವು ಕವಿತೆಗಳಲ್ಲಿ ಅಂಥ ಯಶಸ್ಸನ್ನು ಪಡೆದಿರುವುದೂ ಪ್ರಕೃತ ಸಂಗ್ರಹದಲ್ಲಿಯೇ ಎಂದು ಹೇಳಬಹುದು.

ತನ್ನೊಳಗೆ ಕುದಿಯುತ್ತಿರುವ ಅನುಭವಗಳಿಗೆ ಅವುಗಳ ಸಂಕೀರ್ಣತೆಯೊಂದಿಗೇ ತಕ್ಕ ಭಾಷಾಶೈಲಿಯನ್ನು ನಿರ್ಮಿಸಿಕೊಂಡು ಕಾವ್ಯವಾಗಿ ಪುಟಿದೇಳುತ್ತದೆ ಇಲ್ಲಿಯ ಒಳಮನದ ಒತ್ತಡ. ಈ ಕಾವ್ಯದ ಭಾವಭೂಮಿಕೆಯನ್ನೂ, ವಿಚಿತ್ರ ಸಂವೇದನೆಗಳನ್ನೂ, ದಾಟಿ-ಧೋರಣೆಯನ್ನೂ ಕವಿಯ ಮಾತಿನಲ್ಲಿಯೇ ಕಂಡುಕೊಳ್ಳುವುದಾದರೆ

ರಕ್ತ-ಮಾಂಸ ತುಂಬಿಕೊಂಡು ಗಟ್ಟಿಯಾಗಿದ್ದೇವೆನ್ನಿಸಲು
ಎತ್ತಲಣಿಯಾಗಿದ್ದೇವೆ ಗೋವರ್ಧನ ಗಿರಿ.

..................................................

ವಾಗ್ದೇವಿಯ ಭಂಡಾರದ ಮುದ್ರೆಯನ್ನೊಡೆದು
ತೋಡಿಕೊಳ್ಳುತ್ತಿದ್ದೇವೆ;
ಹಸಿ-ಬಿಸಿ, ಕಹಿ-ಸಿಹಿ ರಸಾಯನ ಹೋಳಿ.

ಸರಸ್ವತಿಯ ನಗ್ನ ಪುತ್ಥಳಿ ಸುತ್ತ ಹೂ ಸುರಿದು
ಸ್ವಚ್ಛಂದ ತುಳಿಯುತ್ತಿದ್ದೇವೆ ಹೊಸ ಲಯ,
ಭಯ, ಶಂಕೆ, ಬಿರುಗಾಳಿ ಹೊರೆ ಕಟ್ಟಿ ತಂದು
ಲಿಲಾವು ಮಾಡುತ್ತೇವೆ;

ರತ್ನದಂಗಡಿ ಹೊಕ್ಕು ಲೂಟಿ ಮಾಡುತ್ತೇವೆ
ಪ್ರತಿಮೆಗಳ.

..................................................

..................................................

ಶ್ರದ್ಧೆ ಬಚ್ಚಲಲಿ ತೊಯ್ದ ಭ್ರಮಿಷ್ಠರು ನಾವಲ್ಲ,

..................................................

ಅಂಧೇರ ನಗರಿಯಾಳ್ವ ಅಪ್ರಮಾಣಿಕ ಗಣಕ್ಕೆ
ಇದೋ ಎತ್ತಿದ್ದೇವೆ ಕಪ್ಪು ಧ್ವಜ.

ವಾಗ್ದೇವಿಯ ಭಂಡಾರದ ಮುದ್ರೆಯನ್ನೊಡೆದು ಸೂರೆಗೊಳ್ಳುವ ಸಾಹಸ ಕಾಲಕಾಲಕ್ಕೆ ಆಗಬೇಕಾದದ್ದೆ. ಭಾಷೆಯ ಮೇಲೆ ಪ್ರಭುತ್ವವನ್ನು ಪಡೆದು, ಅದಕ್ಕೆ ಹೊಸ ಚಲಾವಣೆಯನ್ನು ನೀಡಿ, ಕಾವ್ಯಕ್ಕೆ ಹೊಸ ರಕ್ತವನ್ನು ಪಡೆಯಲೆಳಸುವ ಕವಿ ಈ ವಿಷಯದಲ್ಲಿ ಕೆಲಮಟ್ಟಿಗಾದರೂ ಬಂಡುಗಾರನಾಗುವದು ಅನಿವಾರ್ಯ. ಆದರೆ ಅದು ಬರಿ ಆರ್ಭಟದಲ್ಲಿ ಮುಗಿಯಬಾರದು,

ಅಷ್ಟೆ. ಮೇಲೆ ಉದ್ಧರಿಸಿದ ಈ ಸಂಗ್ರಹದ ಮೊದಲನೆಯ ಕವಿತೆಯಲ್ಲಿ ಕವಿ ತನ್ನ ಕಾವ್ಯಕ್ಕೆ ತಾನೇ ಮುನ್ನುಡಿ ಬರೆದುಕೊಂಡಿರುವಾಗ ಬೇರೆ ಮಾತಿನ ಅವಶ್ಯಕತೆಯಾದರೂ ಏನು? ಆದರೂ ಅವನ ಈ ಆವೇಶವನ್ನು ಓದುಗರು ಅಪಾರ್ಥ ಮಾಡಿಕೊಳ್ಳಬಾರದೆಂದು ಎರಡು ಮಾತು ಜೋಡಿಸಬೇಕಾಗಿದೆ. "ಪ್ರಸ್ತಾವನೆ ಹೊಸೆದು ಯಾರಾದರೂ ಹಗ್ಗ ಬಿಗಿದದ್ದುಂಟೆ ಕೊರಳಿಗೆ?" ಎಂದು ಮುಖಕ್ಕೆ 'ಮಂಗಳಾರತಿ' ಎತ್ತುವ ಈ ಕವಿ ಮುನ್ನುಡಿ ಬರೆಯಲು ನನಗೆ ಕೇಳಿಕೊಂಡಿರುವುದೂ ಧೀರತನದ ವಿನಯವೆಂದೇ ನಾನು ಭಾವಿಸಿದ್ದೇನೆ :

"ಅದೋ ಅಲ್ಲಿ ಅಲಾಬದಗ್ನಿ ಕುಂಡ ಹೊಗುವುದಕ್ಕೆ ಹೊರಟಿದೆ
ರೋಜಾ ಕೈಕೊಂಡ ತಂಡ; ಅವರು ಕುಣಿದಂತೆ
ಕುಣಿ ಹೋಗು, ನಿನಗೂ ಸಿಕ್ಕೀತು
ನೈವೇದ್ಯ" (ಮಂಗಳಾರತಿ)

- ಎಂದು ವ್ಯಂಗ್ಯವನ್ನು ಮೆರೆದಿರುವ ಈ ಕವಿ ಅಂಥ ಹವ್ಯಾಸವನ್ನು ಬಿಟ್ಟುಕೊಟ್ಟು ತನ್ನ ವೈಯಕ್ತಿಕ ಸ್ವರನ್ನು ಬಲಗೊಳಿಸಿಕೊಳ್ಳಲು ಪ್ರಯತ್ನಿಸಿರುವುದು ಈ ಸಂದರ್ಭದಲ್ಲಿ ಗಮನಾರ್ಹವಾದ ಸಂಗತಿಯಾಗಿದೆ.

ಈ ಸಂಗ್ರಹದ ಯಾವ ಕವಿತೆಯನ್ನು ತೆಗೆದು ನೋಡಿದರೂ ಅದು ಓದುಗನ ಬುದ್ಧಿ ಭಾವನೆಗಳಿಗೆ ಒಂದಿಲ್ಲ ಒಂದು ಬಗೆಯ ಘರ್ಷಣೆಯನ್ನೂ ಆಘಾತವನ್ನೂ ಉಂಟು ಮಾಡದೆ ಮುಗಿಯುವುದಿಲ್ಲ. ಯಾವುದೋ ನಿಗಿನಿಗಿ ಕಿಚ್ಚಿಗೆ ಮೈ ಬೆಚ್ಚಗಾಗಿ ಮನಸ್ಸು ಚೇತರಿಸಿಕೊಳ್ಳುತ್ತದೆ.

"ಹೊತ್ತಿ ಉರಿಯುತ್ತವೆ ಮತ್ತೆ ಅವೆ ಅವೇ ಜ್ವಾಲಾಮುಖಿ
ಇನ್ನು ಇನ್ನೂ,
ನನ್ನೊಡಲಾಳದಲ್ಲಿ ಹೂತ ಧಾತುಗಳಗೊ ಕರಕರಗಿ
ಪ್ರವಹಿಸುತ್ತವೆ ಕರಿ ಕರೀ ಕಪ್ಪ ನದಿಗಳಾಗಿ" (ಜ್ವಾಲಾಮುಖಿಗಳು)

ಎಲ್ಲ ಕವಿತೆಗಳೂ ಮೂಲಾನುಭವದ ಕಾವನ್ನು ಕೊನೆಯವರೆಗೂ ರೂಪುಗೊಳಿಸುತ್ತ ಕಲಾಪ್ರಜ್ಞೆಯಿಂದ ಕಳಕಳಿಸುತ್ತವೆಯೆಂದೇನೂ ಇದರರ್ಥವಲ್ಲ. ಆದರೆ ಓದುಗನನ್ನು ವೃಥಾ ದಿಗ್ಭ್ರಮೆಗೊಳಿಸಬೇಕೆಂಬ ಉದ್ದೇಶದಿಂದಾಗಲಿ ಇಲ್ಲವೆ ತಾಂತ್ರಿಕ ಕಾರಣಕ್ಕಾಗಲಿ ಭಾವವನ್ನು ಕೃತಕಗೊಳಿಸುವ ಪ್ರಮೇಯವನ್ನು ಈ ಕವಿ ತಂದುಕೊಂಡಿಲ್ಲ ಈ ಮುಂದಿನ ಕೆಲವು ಸಾಲುಗಳನ್ನೇ ನೋಡಬಹುದು.

"ಹುಟ್ಟಿದಂದಿನಿಂದ ಹೆಜ್ಜೆ ಎಷ್ಟೆಂದು ಎಣಿಸಿದವರಾರುಂಟು?
ಅಂಕಿಸಂಖ್ಯೆ ಅರಗಿನಮನೆ ಸುಖ ಎಷ್ಟು ಬಟ್ಟಲಾದೀತು?
ಉರಿ, ಬೆಂಕಿ, ಚಳಿ, ಮಳೆ, ಸರಪಣಿ ಕಟ್ಟಿರುವ
ಆಜನ್ಮ ಕೈದಿ
ಅಪ್ಪಿತಪ್ಪಿ ನಕ್ಕ ಕ್ಷಣಕ್ಕೊಮ್ಮೆ

ಗುರುಗುರು ಎನ್ನುತ್ತವೆ ಹಂಡಬಂಡ ನಾಯಿ" (ತೆರಣೆಯ ಹುಳು)

"...... ಸಮಾಪ್ತಿಯಲ್ಲುಕ್ಕುವ ಸಂತೃಪ್ತಿಗಿಂತಲು
ರಸಮಯವೆನ್ನಿಸಿದ್ದು ಪೀಠಿಕೆಯೆ ?" (ಖಡ್ಗ)

"ತ್ರಿಕೋನ ರಸಗಳ್ಳಿ ಮುಳ್ಳುಮೊನೆ ಕತ್ತರಿಯಲ್ಲಿ
ಸಿಕ್ಕೊದ್ದಾಡಿ, ತೊಟ್ಟಿಕ್ಕುವ ಹನಿ ನೆಕ್ಕಿ
ಥಳಕ್ಕನೆ ಉಬ್ಬಿ ಒಡೆವಾಸೆಯೆ ?" (ಎಚ್ಚರ)

"ಚಿಮುಟುವುದು ಚಿವುರುವುದು ಕೆಂಪು ರಾತ್ರಿ
ಏಕತಾರಿಯ ಬಿಸುಟು ಬಂದದ್ದರ ಪಶ್ಚತ್ತಾಪ
ತಿವಿಯುವುದು ಎದೆಯ" (ಏಕತಾರಿಯ ನೆನಪು)

"ರತ್ನ ಕಾಣಿಸದಿರಲು
ದೊಣ್ಣೆಬೀಸಿ ಒಡೆದು ಹಾಕಿದೆ ಸ್ವಪ್ನಭಾಂಡ
ಕನ್ನಡಿ ಚೂರು ಶೇಖರಿಸಿ ಚುಚ್ಚಿಕೊಂಡು ಮೈಗೆ
ನರಳಿದೆನು:
ಅಮೃತಮತಿ ಸತಿಗತಿ ಎಲ್ಲಿ ಎಲ್ಲೆಂದು" (ಇರುಳು)

"ಪಶು ಪಿಶಾಚಿ ಪರಮಾತ್ಮ
ಮೂರೂ ಪಾತ್ರ ನಟಿಸಿ
ಸುಟ್ಟ ಭಸ್ಮ ಲೇಪಿಸಿಕೊಂಡು ಮೈಗೆ
ಸುಖಿಸುತ್ತೇನೆ
ಗಾಳಿಮುಳ್ಳಲ್ಲಿ ಹಾಯಾಗೊರಗಿ" (ಅಜ್ಞಾತ)

"ವಿಶ್ವಾಮಿತ್ರ ಸೋತದ್ದನ್ನು ಗೆಲ್ಲುವುದಕ್ಕೆ
ಹಟತೊಟ್ಟು ನಿಂತೆ-
ಅತ್ಯಂತ ವಿಜೃಂಭಣೆಯಿಂದಾಯ್ತು ತಪಸ್ಸಿನ ಭಂಗ" (ಚತುರ್ಭುಜ)

"ಮುತ್ತು ರತ್ನ ರಫ್ತು ಮಾಡಿ ಮರಳುವ ಹಡಗು
ನಾಪತ್ತೆಯಾಗುತ್ತವೆ ಮುಳುಗಿ ಕಡಲೊಡಲ,
ದಿನ್ನೆಯಾಚೆಗೆ ನಿಂತು
ಮುಳುಮುಳೂ ಅಳುತ್ತವೆ
ಮುಗ್ಧ ನೆನಪು" (ಜ್ವಾಲಾಮುಖಿಗಳು)

ಇಲ್ಲೆಲ್ಲ ಕವಿಯ ಸೂಕ್ಷ್ಮವಾದ ಹಾಗೂ ತೀವ್ರವಾದ ಸಂವೇದನೆಗಳು ತಕ್ಕ ಪ್ರತಿಮೆಗಳಲ್ಲಿ, ಹೆಚ್ಚಾಗಿ ನೂತನ ಪ್ರತೀಕಗಳಲ್ಲಿ ಪ್ರತಿಫಲಿಸಿ ಭಾವಸಂವಾದಿಯಾಗಿ ನಿಲ್ಲುತ್ತವೆ. ಭಾವಾಭಿನಯಕ್ಕೆ

ಎಡೆಗೊಡುತ್ತ ಅಲ್ಲಲ್ಲಿ ನಾಟಕೀಯತೆಯಿಂದ ಸಾಗುವ ಭಾಷೆಯ ಈ ಬೆಳವಣಿಗೆಯೇ ಅಲ್ಲಿ ಕಾವ್ಯವಿರುವುದನ್ನೂ ಸೂಚಿಸುತ್ತದೆ. ಮೈ ಕೈಗೆ ಜಳ ತಾಕಿದರೂ ಬೆಂಕಿ ಹತ್ತಿದ ಮನೆಯಲ್ಲಿ ನುಗ್ಗಿ ಮಗುವನ್ನುಳಿಸಿಕೊಂಡು ಬರುವ ಧೀರನ ಮನೋಧರ್ಮ ಈ ಕವಿತೆಗಳಲ್ಲಿ ಎದ್ದು ಕಾಣುತ್ತದೆ. ಮನಸ್ಸಿನ ದ್ವಂದ್ವ, ಗೊಂದಲ, ಗಜಿಬಿಜಿಯ ಮಧ್ಯದಲ್ಲಿಯೇ ಕವಿಯ ಭಾವವಿಭಾವಗಳು ಪಾಕಗೊಂಡು ರೂಪಕವಾಗಿ ಹೊರಬರಲು ಪ್ರಯತ್ನಿಸುತ್ತಿರುವುದನ್ನೂ ಅದು ಅನೇಕ ಕಡೆಗಳಲ್ಲಿ ಸಫಲವಾಗಿರುವುದನ್ನೂ ಕಾಣುತ್ತೇವೆ. ಅನುಭವದ ನಾನಾ ಮುಖಗಳನ್ನು- ಲೈಂಗಿಕಾನುಭವದ ಉದ್ದೀಪಕತೆಯನ್ನೂ ಒಳಗೊಂಡು- ಅರ್ಥಗರ್ಭಿತವಾದ ರೀತಿಯಲ್ಲಿ ನೋಡುವ, ನುಡಿಯುವ ಒಲವನ್ನು ಕವಿ ತನ್ನ ನುಡಿಗಟ್ಟಿನಲ್ಲಿ ತೋರಿಸಿದ್ದಾನೆ.

'ಲುಮುಂಬಾ', 'ಇಂದಿರಾ ಗಾಂಧಿ' ಇಂಥ ರಾಜಕೀಯ ಗಣ್ಯವ್ಯಕ್ತಿಗಳನ್ನು ಕುರಿತು ಬರೆದ ಹಾಗೂ 'ಮಂಗಳಾರತಿ', 'ವಿದ್ಯಾರ್ಥಿ', 'ಹಸಿರು ಹುಡುಗರು', 'ಸೆಗಣಿ ಪಾಂಡವರು', 'ಭೀಮಶಾ ಪೈಲ್ವಾನನ ಗೋಳು' ಇತ್ಯಾದಿ ವಿಡಂಬನೆಗೊಲಿದ ವ್ಯಂಗ್ಯಮಾದರಿಯ ಕವಿತೆಗಳನ್ನು ಬಿಟ್ಟರೆ ಉಳಿದವೆಲ್ಲ ಸಾಮಾನ್ಯವಾಗಿ ಕವಿಯ ವೈಯಕ್ತಿಕ ಅನುಭೂತಿಯನ್ನೇ ಆಧಾರವಾಗಿ ಪಡೆದಿವೆ. 'ಅಲ್ಲಾಡುವಟ್ಟ ಹತ್ತಿನಿಂತು ರಭಸ ತೂರು'ತ್ತಿರುವ ತನ್ನ ಅಸ್ತಿತ್ವವನ್ನೇ ಅಲುಗಾಡಿಸುತ್ತಿರುವ, ಒಳಮನದ ಒಲೆಹತ್ತಿ ಉರಿಯುತ್ತಿರುವ ಕೋಟಲೆಗಳನ್ನೇ ವಸ್ತುವಾಗಿ, ಅವುಗಳನ್ನು ವಿಶ್ಲೇಷಿಸುವ, ಪರೀಕ್ಷೆಗೊಡ್ಡುವ, ಎಳೆದು ಹೊರಗೆ ತರುವ, ಯಾತನೆಗೆ ಮಾತುಗೊಡುವ ಕೆಲಸವನ್ನೇ ಇಲ್ಲಿಯ ಕವಿತೆಗಳು ಕೈಕೊಂಡಿವೆ. ಸಂಕೇತವನ್ನು ಅನುಭವದೊಂದಿಗೆ ಅಳವಡಿಸಲು ನಡೆಸಿದ ಹೋರಾಟದಲ್ಲಿ ಕವಿಯು ಪಡೆದಿರುವ ಸೋಲು, ಗೆಲವು ಎರಡೂ ಮಹತ್ವದ್ದಾಗಿವೆ. 'ವರ್ತುಲ', 'ತೆರಣಿಯ ಹುಳು', 'ಚತುರ್ಭುಜ', 'ಜ್ವಾಲಾಮುಖಿಗಳು', 'ಹೊಸಬೆಂಕಿ' ಇವೇ ಮೊದಲಾದ ಕವನಗಳಲ್ಲಿ ಅನುಭವದ ವೈಯಕ್ತಿಕತೆ ಸಾರ್ವತ್ರಿಕತೆಯಾಗಿ ಮಾರ್ಪಡುವ ವಿಕಾಸವನ್ನು ಕಾಣಬಹುದು.

> "ಕತ್ತಲ ಮೂಲೆಯಲ್ಲಡಗಿ ಕತ್ತು ಹಿಚುಗಲು ಹೊಂಚಿರುವ
> ಅನಿಷ್ಟಕ್ಕೆ, ಗೋಮುಖ ವ್ಯಾಘ್ರಕ್ಕೆ
> -ಎಂದರೆ ನನ್ನ ನಿನ್ನ ಭ್ರಾಮಕ
> ಪ್ರತಿಬಿಂಬಕ್ಕೆ"
>
> ..................................
>
> ಬೆಂಕಿ ಹಚ್ಚೋ ಬೆಂಕಿ ಹಚ್ಚು

ಎಂದು ಉಗ್ಘಡಿಸುವ ಕವಿಯ ಪ್ರಾಮಾಣಿಕತೆಯನ್ನು ಇಲ್ಲಿ ಪ್ರಶ್ನಿಸುವಂತೆಯೇ ಇಲ್ಲ.

ಶಿಶುಪಾಲ, ಜರಾಸಂಧ, ಸುಂದೋಪಸುಂದ, ಪಾಂಡು, ಅಮೃತಮತಿ, ಯಶೋಧರ, ವಿಶ್ವಾಮಿತ್ರ ಇಂಥ ಪೌರಾಣಿಕ ಪಾತ್ರಗಳ ಜೊತೆಗೆ ಪೃಥ್ವೀರಾಜ, ಸಿದ್ಧಾರ್ಥ, ತೈಮೂರಲಂಗ ಮೊದಲಾದ ಐತಿಹಾಸಿಕ ಪಾತ್ರಗಳನ್ನೂ ಸಾಂಕೇತಿಕವಾಗಿ ಅಲ್ಲಲ್ಲಿ ಉಪಯೋಗಿಸಿ ಆಯಾ

ಸಂದರ್ಭದ ಅರ್ಥವ್ಯಾಪ್ತಿಯನ್ನು ಹೆಚ್ಚಿಸಿಕೊಳ್ಳುವ ಪ್ರಯತ್ನವನ್ನು ಕವಿ ಇಲ್ಲಿ ಮಾಡಿದ್ದಾನೆ. ಜೋಕುಮಾರನ ಜಾನಪದ ಪ್ರತೀಕವನ್ನು ನಾಗರಿಕ ಪ್ರಜ್ಞೆಯ ಹೊಸ ಕಾವ್ಯದಲ್ಲಿ (ಹಸಿರು ಹುಡುಗರು) ಮೊಟ್ಟಮೊದಲಿಗೆ ಈ ಕವಿ ಸಮರ್ಥವಾಗಿ ತಂದಿದ್ದಾನೆ. ಇಂದಿನ ತರುಣ ಕವಿಗಳಲ್ಲಿಯೇ ಅದ್ಭುತವಾದ ಪ್ರತೀಕ ನಿರ್ಮಾಣ ಸಾಮರ್ಥ್ಯವನ್ನು ಪಡೆದಿರುವುದು ಇವರ ಕಾವ್ಯಶಕ್ತಿಯ ವೈಶಿಷ್ಟ್ಯವಾಗಿದೆ. ಆದರೆ ಕೆಲವು ಪ್ರತೀಕಗಳು ಸಾಮಾನ್ಯಾರ್ಥದ ವ್ಯಾಪ್ತಿಯನ್ನು ಪಡೆಯದೆ ವ್ಯಕ್ತಿಗತವಾಗಿ ನಿಲ್ಲುವುದರಿಂದ ಕವಿತೆಯ ಆಶಯ ಹೊಳೆಯದೆ ಭಾವದ ಕೋಲಾಹಲವಷ್ಟೇ ಉಳಿದು ಬಿಡುವ ಸಂಭವವಿದೆ. 'ಹಳದಿ ಕಣ್ಣಗವಿ' 'ಕಪ್ಪುಸೂರ್ಯ', 'ಬೆಳ್ಳಿಮುಗುಳು' 'ನೀಲಿ ಮಣ್ಣಿನ ಹುಡುಗ', 'ನಾಲ್ಕು ಕಣ್ಣಿನ ನಾಯಿ' ಇಂಥವುಗಳನ್ನು ಇಲ್ಲಿ ಉದಾಹರಿಸಬಹುದು.

ಕವನಗಳ ಛಂದೋಗತಿಯಲ್ಲಿ ವೈವಿಧ್ಯವನ್ನು ಚೆನ್ನಾಗಿ ಸಾಧಿಸಲಾಗಿದೆ. ಕನ್ನಡ ಕಾವ್ಯಪರಂಪರೆಯ ಸಾರವನ್ನು ಹೀರಿಕೊಂಡಿರುವ ಇವರ ಭಾಷೆ ಸಾಕಷ್ಟು ಪ್ರೌಢಿಮೆಯನ್ನು ಹೊಂದಿ ಅನುಭವದ ಅನನ್ಯತೆಯನ್ನೂ ಸಾಂಗತ್ಯವನ್ನೂ ಪರಿಣಾಮಕಾರಿಯಾಗಿ ಮೂಡಿಸಬಲ್ಲುದು. ಆದರೆ ಇವರು ಉಪಯೋಗಿಸಿರುವ ಎಷ್ಟೋ ಇಂಗ್ಲಿಷ್ ಪದಗಳು ಅನಿವಾರ್ಯವೆಂದೇನೂ ನನಗೆ ತೋರುವುದಿಲ್ಲ. ಅಲ್ಲದೆ ಇಂಥ ಕವಿತೆಗಳಲ್ಲಿ ಶೈಲಿ ಪಾಕಗೊಳ್ಳುವದಕ್ಕೂ ಸಾಕಷ್ಟು ಅವಧಿ ಬೇಕಾದೀತು.

ಸಂಕೀರ್ಣತೆಯನ್ನು ಜೀರ್ಣಸಿಕೊಳ್ಳಬಲ್ಲ, ಅನುಭವ ಸಾಮರ್ಥ್ಯವನ್ನು ಪಡೆದ, ಪ್ರಭಾವಶಾಲಿಯಾದ ಪ್ರತೀಕಗಳ ಮೂಲಕ ಬಾಳಿನ ನಿಗೂಢತೆಯನ್ನು ಅನ್ವೇಷಿಸಿ ಅಭಿವ್ಯಕ್ತಿಗೊಳಿಸಬಲ್ಲ ಹಿಂಗಮಿರೆಯವರ ಕಾವ್ಯ ಶಕ್ತಿ ಇನ್ನೂ ಹೆಚ್ಚಿನ ಕಲಾತ್ಮಕತೆಯಿಂದ ಬಹು ಬೆಲೆಯುಳ್ಳ ಕವನಗಳನ್ನು ಕೊಡಬಲ್ಲ ಭರವಸೆಯನ್ನು ಹುಟ್ಟಿಸುತ್ತಿದೆ. ಅವರು ನಮ್ಮ ನಿರೀಕ್ಷೆಯನ್ನು ಸಫಲಗೊಳಿಸುವಂತಾಗಲಿ ಎಂದು ಹಾರೈಸುತ್ತೇನೆ. (೧೯೬೮)

## ೭

## ಪ್ರವಾಸ

೧೯೫೪ರಲ್ಲಿ 'ವಿಷಬಿಂದು'ವಿನ ಮೂಲಕ ಶಕ್ತಿಯುತವಾದ ಕಥನ ಕವನಗಳನ್ನು ನೀಡಿದ ಗೆಳೆಯ 'ಮರುಳಸಿದ್ಧ'ರು ಕಾವ್ಯಕ್ಷೇತ್ರದಲ್ಲಿ ತಮ್ಮ ಹದಿನಾಲ್ಕು ವರ್ಷಗಳ ಅಜ್ಞಾತವಾಸವನ್ನು ಮುಗಿಸಿಕೊಂಡು 'ಪ್ರವಾಸ'ದ ವಿನೂತನವಾದ ವಿಶಿಷ್ಟ ಅನುಭವದೊಂದಿಗೆ ಇದೀಗ ಹೊರಬಂದಿದ್ದಾರೆ. ಕಾವ್ಯರಚನೆಯ ದೃಷ್ಟಿಯಿಂದ ಈ ಅವಧಿ ದೀರ್ಘವೆನಿಸಿದರೂ ಸಮಾಜ ಶಾಸ್ತ್ರವನ್ನು ಕುರಿತ ಅವರ ಇದುವರೆಗಿನ ಅಮೂಲ್ಯವಾದ ಬರವಣಿಗೆಯಿಂದ ಅವರು ಅದನ್ನು ತುಂಬಿಕೊಟ್ಟಿರುವದು ಸಮಾಧಾನದ ಸಂಗತಿಯಾಗಿದೆ. ಇದರಿಂದ ಅವರ ಕಾವ್ಯಕ್ಕೂ ಹೊಸ ದೃಷ್ಟಿಕೋನವೊಂದು ಒದಗಿರುವದನ್ನು ಇಲ್ಲಿ ಕಾಣಬಹುದು. ಈಚಿನ ಕನ್ನಡ ಕಾವ್ಯದ ಸ್ಥಿತ್ಯಂತರವನ್ನು ಗಮನಿಸಿಯೂ ಹೊರಗಿನ ಬಣ್ಣಕ್ಕಿಂತ ಒಳಗಿನ ತಿರುಳಿನ ಕಡೆಗೆ ಲಕ್ಷ್ಯವಿರಿಸಿ ಅತ್ಯಂತ ಸಂಯಮದಿಂದ ತಮ್ಮ ಅಭಿವ್ಯಕ್ತಿಯ ರೀತಿಯನ್ನು ಇವರು ರೂಪಿಸಿಕೊಂಡಿರುವುದು ಗಮನಾರ್ಹವಾಗಿದೆ. ಇಂದಿನ ಹತ್ತು ಹೊಸ ದನಿಗಳಲ್ಲಿ ಹತ್ತರ ಕೂಡ ಹನ್ನೊಂದಾಗದೆ ಚಿಂತನಪರವಾದ ವ್ಯಕ್ತಿತ್ವದ ಹೊಳಹುದೋರುವ ಅವರ ಈ ಸಂಗ್ರಹವನ್ನು ಕನ್ನಡ ಕಾವ್ಯಲೋಕ ಸಂತೋಷದಿಂದ ಬರಮಾಡಿಕೊಳ್ಳುವದೆಂದು ಆಶಿಸಿದ್ದೇನೆ.

ಇವರ ಕಾವ್ಯಸೃಷ್ಟಿಯ ಮೊದಲ ಘಟ್ಟದ ರಮ್ಯತೆಯ ಕುತೂಹಲವನ್ನೂ, ಭಾವಪರವಶತೆಯನ್ನೂ ಈ ಸಂಗ್ರಹದ ಕೊನೆಯಲ್ಲಿ ಸೇರಿಸಿರುವ ಹಿಂದಿನ ಕವನಗಳು ಸೂಚಿಸುತ್ತವೆ:

"ದೂರ ಬೆಟ್ಟದೋರೆಯಲ್ಲಿ
ಸರಿದ್ವರ್ಣ ಹರಿದ್ವರ್ಣ
ಮಿಲನವಾಗಿ ಬೆಸಲೆಯಾದ
ಮಹದ್ವರ್ಣದಿ" ಎಂದು

ಚಂದ್ರೋದಯವನ್ನು ಬಣ್ಣಿಸುವಲ್ಲಿ, ಇಲ್ಲವೆ

"ಬೆಳ್ಳಿ ಮೋಡ ಬಣ್ಣದಳೆದು
ನಭದಿ ಚಿತ್ರಗೈದಿರೆ;
ಉಷೆಯು ಗಗನದಂಚಿನಲ್ಲಿ
ನಾಟ್ಯಗೈದು ಮೆರೆದಿರೆ"

ಹೀಗೆ ಉಷೆಯ ಸೊಗಸನ್ನು ಚಿತ್ರಿಸುವಲ್ಲಿ ಆ ಕಾಲದ (೧೯೫೦) ಹಿರಿಯ ಕವಿಗಳ ಪ್ರಭಾವದಲ್ಲಿ ಮಿಂದು ಮೇಲೇಳುತ್ತಿರುವ ಕವಿಯ ಒಳ್ಳೆಯ ಪ್ರಾರಂಭವನ್ನು ಕಾಣುತ್ತೇವೆ. ಆಮೇಲಿನ ಒಂದೆರಡು ಸಾನೆಟ್ಟುಗಳಲ್ಲಿ ಕವಿ ಆಗಲೇ ಭಾವೋದ್ವೇಗದಿಂದ ಚೇತರಿಸಿಕೊಂಡು, ಪ್ರಕೃತಿಯೊಡನೆ ಜೀವನದ ವಿಚಿತ್ರ ಸಂಘರ್ಷವನ್ನು ಅನುಭವಿಸತೊಡಗಿದ್ದರೆ, 'ತಾಯಿ' (೧೯೫೩) ಕವಿತೆಯಲ್ಲಿ ಕವಿಯ ಮನೋಧರ್ಮದಲ್ಲಾದ ಬದಲಾವಣೆಯ ಹಾಗೂ ಬೌದ್ಧಿಕ ಬೆಳವಣಿಗೆಯ ಸೂಚನೆ ಕಂಡುಬರುತ್ತದೆ. ವಾಸ್ತವ ಪ್ರಜ್ಞೆಯ ವಿಕಾಸದೊಂದಿಗೆ ಭಾವ-ಭಾಷೆಗಳ ಬೆಸೆದಾಟದಲ್ಲಿ ಛಂದಸ್ಸಿನ ಜೀವಂತ ಗತಿಯನ್ನು ಈ ಕವಿತೆಯಲ್ಲಿ ಪ್ರಥಮ ಬಾರಿಗೆ ಕವಿ ಅನುಭವಿಸಿದಂತಿದೆ. ಇನ್ನು ಮುಂದಿನ ಕವಿಯ 'ಪ್ರವಾಸ'ದ ದಾರಿ ಅಷ್ಟು ಸುಲಭವಲ್ಲದಿದ್ದರೂ ದುರ್ಗಮವಾದ ದಾರಿಯನ್ನು ಕ್ರಮಿಸುವಾಗಿನ ಅನುಭವದ ಹೊಸತನವನ್ನೂ, ಜೀವನದ ಜಟಿಲತೆಯನ್ನೂ ಸ್ವವಿಮರ್ಶೆಯ ಶೋಧನೆಯನ್ನು ಕಂಡ ಸತ್ಯವನ್ನು ಕಡೆದು ರೂಪಿಸುವ ಪ್ರಯತ್ನವನ್ನೂ ಈ ಸಂಗ್ರಹದ ಮೊದಲ ಭಾಗದ ಹದಿನೈದು ಕವಿತೆಗಳು ತಮ್ಮ ಇತಿ-ಮಿತಿಯಲ್ಲಿ ಒಳಗೊಂಡಿವೆ. ಅವುಗಳನ್ನು ಪರಿಶೀಲಿಸುವ ಮೊದಲು ಈ ನಡುವೆ ಕವಿ ಒದಗಿಸಿರುವ 'ಹನಿಗವನ'ಗಳ ಕಡೆಗೆ ದೃಷ್ಟಿ ಹಾಯಿಸಬಹುದು.

ಆಕಾರದಲ್ಲಿ ಸಣ್ಣದೆಂದೂ, ಇಲ್ಲವೆ ಬರೆಯಲು ಸುಲಭವೆಂಬ ತಪ್ಪು ಭಾವನೆಯಿಂದಲೊ ಈಚಿನ ಕೆಲ ವರುಷಗಳಲ್ಲಿ ಕನ್ನಡದಲ್ಲಿ 'ಚುಟುಕ'ಗಳ ಅತಿಪ್ರಸರಣ ನಡೆದಿದೆ. ಅವುಗಳನ್ನು ಪ್ರಾರಂಭಿಸಿದ ಹಿರಿಯ ಕವಿಗಳನ್ನೊಳಗೊಂಡು (ದಿನಕರದೇಸಾಯಿ, ವ್ಹಿ.ಜಿ. ಭಟ್ಟ ಮುಂ.) ಬೇರೆ ಒಬ್ಬಿಬ್ಬರಿಂದಲೂ ಈ ಬಗೆಯ ರಚನೆಗಳಲ್ಲಿ ವಿಡಂಬನೆಯ ಮೊನೆಯೂ, ಸಾಮಾಜಿಕ ರಾಜಕೀಯ ಅಂತಸ್ಸತ್ವವೂ ತುಂಬಿಕೊಳ್ಳುತ್ತಿರುವುದೇನೊ ನಿಜ. ಆದರೆ ಇನ್ನುಳಿದ ರಾಶಿಯನ್ನು ಜರಡಿಯಲ್ಲಿ ಹಾಕಿದಾಗ ಬೊಗಸೆ ಕಾಳು ಕೂಡ ದೊರೆಯುವದು ಸಂದೇಹಾಸ್ಪದವೆನಿಸಿದರೆ ಆಶ್ಚರ್ಯವಿಲ್ಲ. ಕಾರಣವೆಂದರೆ ಇವುಗಳಲ್ಲಿ ಬಹುಪಾಲು ಕೃತಿಸಂಯಮವನ್ನು ಕಾಪಾಡಿಕೊಳ್ಳದ, ಅಂತಃಸ್ಫೂರ್ತಿಗೆ ಎರವಾದ, ತೇಲು ನೋಟದ ತುಣುಕುಗಳು. ಎಲ್ಲಿ ಕಟಕಿ, ವಿನೋದ, ಬುದ್ಧಿಯ ಮಿಂಚು, ಭಾವದ ಬೆರಗು ಸಂಗ್ರಹವಾಗಿ, ಸುಟಿಯಾಗಿ, ಚುರುಕಾಗಿ ತಕ್ಕ ಮಾತಿನಲ್ಲಿ ವ್ಯಕ್ತಗೊಂಡಿದೆಯೊ ಅಂಥಲ್ಲಿ ಇವು ಮನಸ್ಸಿಗೆ ನಾಟುತ್ತವೆ; ಕ್ಷಣಿಕವೆನಿಸಿದರೂ ತಮ್ಮ ಬೆಲೆಯನ್ನು ಉಳಿಸಿಕೊಳ್ಳುತ್ತವೆ.

'ಮರುಳಸಿದ್ಧ'ರ ಹನಿಗವನಗಳು (ಇದು ಸಾರ್ಥಕವಾದ ಹೆಸರು ಎಂದು ನನ್ನ ಅನಿಸಿಕೆ) ಈ ಗುಣಗಳಲ್ಲಿ ಕೆಲವನ್ನಾದರೂ ಒಳಗೊಂಡು ಅವರ ಚಿಂತನಪರವಾದ ಶೈಲಿಗೆ ಒಗ್ಗಿಕೊಂಡು ಒಡಮೂಡಿವೆ. ಇಲ್ಲಿ ವಸ್ತು ವೈವಿಧ್ಯಕ್ಕೆ ಕೊರತೆಯಿಲ್ಲದಿದ್ದರೂ ಪ್ರೀತಿ ಪ್ರಣಯಗಳಿಗೇ ಪ್ರಾಧಾನ್ಯ ಒದಗಿದೆ. ಇವು ಕೆಲವು ಮಿಂಚಿನಂತೆ ನಮ್ಮ ಮನಸ್ಸನ್ನು ಸೆಳೆದರೆ ಇನ್ನು ಹಲವು ಸಂಜೆಯ ಮೋಡಗಳನ್ನು ತೂರಿ ಬರುವ ಹೊಂಬಿಸಿಲಿನಂತೆ ಮುದಗೊಳಿಸಿ ಅರ್ಥ ವಿಸ್ತಾರವನ್ನು ಪಡೆಯುತ್ತದೆ. ಕಟಕಿಯನ್ನು ಪಳಗಿಸಿಕೊಂಡ 'ಅನ್ಯೋಕ್ತಿ'ಯನ್ನೂ ಕವಿ ಇಲ್ಲಿ ಸಾಧಿಸಿದ್ದಾರೆ.

ಇಂಥ ಹೊಳಪಿನ ಒಂದೊಂದು ಹನಿಯೂ ನಮ್ಮ ರುಚಿಯನ್ನು ಹೆಚ್ಚಿಸುತ್ತವೆ.

"ವಚನವಿತ್ತನು ಪ್ರಿಯನು
ಕನಸಿನಲಿ ಬರುವೆನೆಂದು,
ಇಷ್ಟಕೇ ಖುಷಿಯಾಯ್ತು
ಬರದಲ್ಲ ನಿದ್ದೆಯಿಂದು"

ಎನ್ನುವಲ್ಲಿಯ ವಿಲಕ್ಷಣ ಉತ್ಕಟತೆ,

"ಕಣ್ಣ ಹನಿ ಕಂಡೆಯಾ?
ಅದು ಸ್ವಾತಿ ಮಳೆಯು,
ತುಟಿಯ ಚಿಪ್ಪನು ಮುಚ್ಚು
ಹುಟ್ಟುವುದು ಮುತ್ತು"

ಎನ್ನುವಲ್ಲಿಯ ಭಾವ ನಿರ್ಭರತೆ ಹಾಗೂ ಭಾಷೆಯ ಸಾಮರಸ್ಯದಿಂದ ಅನುಭವಕ್ಕೆ ಒದಗುವ ಸಫಲತೆ,

"ಮೋಚಿ, ಮಡಿವಾಳನನು, ಸಿಂಪಿ, ಪತ್ತಾರನನು
ಬಲ್ಲೆ ನಾ ಮತ್ತೆ ಮುದ್ರಕನ ಪರಿಯನ್ನು
ಕೊಡುವ ಸಮಯಕೆ ಕೊಡರು ಮಾಡಿ ವಸ್ತುಗಳನ್ನು
ಮೀರಿಸಿದೆ ಮುತ್ತಿನವಳೇ ನೀನಿವರೆಲ್ಲರನ್ನು"

ಎಂಬಲ್ಲಿ (ಬಂಧ ಸ್ವಲ್ಪ ಸಡಿಲೆನಿಸದರೂ) ವಾಸ್ತವ ಪರಿಜ್ಞಾನದೊಂದಿಗೆ ಮಿಂಚುವ ಮಾತಿನ ಜಾಣ್ಮೆ ಮೆಚ್ಚುವಂತಿದೆ.

"ಒಂದು ಶಬ್ದಕೆ ಒಂದೆ ಅರ್ಥವಿದೆ ಎಂಬುದುಂಟೆ?
ಮೂಲೆ ಮೂಲೆಗು ನೂರು ರಂಗಿನ ಶಬ್ದಗಳ ಗಂಟೆ
ಕೊಂಚ ಸರಿದರೆ ಸೆರಗು ಮಿಂಚು ಹುಳುಗಳ ದೇಶ
ಹೆಣ್ಣು ಎಂಬುದು ಒಂದು ಬೆಳೆಯುತಿಹ ಶಬ್ದಕೋಶ"

ಅನುಭವದ ಆಳದಿಂದ ಹೊರದೆಗೆದ ಮುತ್ತಿನಂತಿರುವ ಇಂಥ ಹಲವಾರು ಹನಿಗವನಗಳು ಕವಿಯ ಪ್ರಯತ್ನವನ್ನು ಸಾರ್ಥಕಗೊಳಿಸಿವೆ. ಕೆಲವೆಡೆ ಮಾತಿನಲ್ಲಿ ಕಾವು ಸಾಲದೆ ಸಾಲುಗಳನ್ನು ಎಳೆದು ತಂದಂತೆ ತೋರಬಹುದು, ಪ್ರಾಸಗಳು ಸಹಜತೆಗೆ ಎರವಾಗಬಹುದು; ಒಟ್ಟಿನಲ್ಲಿ ಅಂಥವುಗಳ ಸಂಖ್ಯೆ ಕಡಿಮೆ. ಇವುಗಳ ಏಕತಾನತೆಯನ್ನು ಹೋಗಲಾಡಿಸಲು ಇವುಗಳ ಛಂದೋಗತಿಯಲ್ಲಿಯೂ ತಕ್ಕ ಮಾರ್ಪಾಟು ಅವಶ್ಯವೆಂದು ತೋರುತ್ತದೆ.

ಈ ಸಂಗ್ರಹದ ಮೊದಲ ಭಾಗದ ಕವಿತೆಗಳು ಕವಿಯ ಪ್ರಮುಖ ಕೊಡುಗೆಯಾಗಿದೆ. ಕವಿ ತನ್ನ ಅನುಭವದ ವಿವಿಧ ಪದರುಗಳನ್ನು ಶೋಧಿಸುತ್ತ ಅವಸರವಿಲ್ಲದ, ಅನುರೂಪವಾದ

ಪ್ರತಿಮಾ ವಿಧಾನದಿಂದ ಅವುಗಳಿಗೆ ಮೂರ್ತರೂಪ ಕೊಡುವಲ್ಲಿ, ಸಂಕೀರ್ಣತೆಯನ್ನು ಅರಗಿಸಿಕೊಂಡು ಅಭಿವ್ಯಕ್ತಿಗೊಳಿಸುವಲ್ಲಿ ಮಾತು ಸಂಕೇತ ರೂಪ ತಾಳಿ ಕವನದ ಶಿಲ್ಪವನ್ನು ಬಿಗಿಗೊಳಿಸಿರುವುದನ್ನು ಅಲ್ಲಲ್ಲಿ ಕಾಣಬಹುದು.

"ರಾಜನಬ್ಬರದಿ ಬಿಲ್ಲು ಬಾಣವ ಹಿಡಿದು,
ಅರಸಿಯನು ಸೆಳೆದೊಯ್ದವನ-
ನ್ನ, ಈ ಮಗನ-
ಹುಡುಕ ಹೊರಟನು,
ಕಂಡ:
ಮುಗುದೆ ಮುಗುಳ್ನಕ್ಕು
ನಾಚಿ, ನುಣುಚಿಕೊಂಬುದನು" (ಶರಾವತಿ-ವಿಜ್ಞಾನಿ-ಮಗ-ರಾಜ)

"ಒಳಗೊಳಗೆ ಸತ್ತು, ಸಾಯಿಸಿ, ಬೇಸತ್ತು
ಬಂದಿರಬೇಕು ಮೈದಾನಕೆ
ಹತ್ತಾರು ನಾಗಕನ್ಯೆಯರು
ಮಿಂಚು ಮೈ ಕಣ್ಣು ಕೈಯವರು" (ನಾಗಕನ್ಯೆಯರು)

"ಎತ್ತೆಂದರತ್ತ ತಿರುಗುತಿಹ ನೀನು-
ಸಪ್ಪಳಾದೀತೆಂದು
ಬರಿಯ ಪಾದದಲ್ಲಿಯೆ ತಿರುಗುತಿಹ ಬೆಕ್ಕು -
ಕೆಸರು ಅಂಟುವುದೆಂದು
ಬಲ್ಲೆಯೇನು?" (ಗಾದೆಯ ಮಾತು)

ಈ ಬಗೆಯ ವಿಧಾನದಿಂದ ಮೊದಲ ಓದಿಗೆ ಕ್ಲಿಷ್ಟತೆ ಕಂಡುಬಂದರೂ ಒಟ್ಟು ಕವನದ ಕಟ್ಟಡಕ್ಕೆ ಅದರ ಅರ್ಥವೈಭವಕ್ಕೆ ನೆರವಾಗುವಂತೆ ನಿರೂಪಣೆಯಲ್ಲಿ ಸಾಂಕೇತಿಕತೆ ಅನಿವಾರ್ಯವಾಗಿ ತಲೆದೋರುತ್ತದೆ.

ಒಂದು ಅನುಭವವನ್ನು ಅದರ ಹಲವು ಮಗ್ಗಲುಗಳಿಂದ ನಿರೀಕ್ಷಿಸಿ, ಪರೀಕ್ಷಿಸಿದಾಗ ಕಾಣುವ ಸತ್ಯಕ್ಕೆ ಹೆಚ್ಚಿನ ಬೆಲೆ ಬರುತ್ತದೆ, ಜೀವನವನ್ನು ನಿಜವಾಗಿ ಅರಿತುಕೊಳ್ಳುವುದೇ ಹೀಗೆ:

"ಹಸಿವಿನಲಿ ಕೂಗುತಿತ್ತು ಅದೂ, ಇದೂ,
ಮೇಲೆ ಹೊಟ್ಟೆ.
ಬಿಸಿನೀರ ಊಟೆ
ಹಿಮದ ಒಡಲಲೂ ಉಂಟೆ?
ಬೆಂದರಳಿ ಘಮಘಮಿಸಿತು ಅನ್ನ
ನರನರಕು ಆಯ್ತು ರಸದೌತಣ" (ಔತಣ)

ಎಂಬ ಸಾಲುಗಳಲ್ಲಿ "ಹಸಿವೆ"ಯ ಎರಡು ಮುಖಗಳನ್ನೂ ಒಂದೇ ಎನ್ನುವಂತೆ ಅಡಕವಾಗಿ ಚಿತ್ರಿಸುವಲ್ಲಿ ಕವಿಯ ನಿರೂಪಣಾಕೌಶಲವನ್ನು ಕಾಣಬಹುದು.

ಇದು ಬರಿ 'ಪ್ರವಾಸ'ವಲ್ಲ; ಏನನ್ನೋ ಹುಡುಕಿ ತೆಗೆಯುವ ಸಾಹಸವೂ ಇದರಲ್ಲಿದೆ. 'ಮತ್ತದನು ತರಲೆಲ್ಲಿ ? ಹುಡುಹುಡುಕಿ ಸಾಕಾಯಿತು' (ನಾಚಿಗೆಗೇಡಿ) ಎಂದು ನುಡಿದಿದ್ದರೂ ಈ ಹುಡುಕಾಟದಲ್ಲಿ 'ಏರಿಳಿದು ಸುತ್ತಿ ಬಂದುದಕೆ ಸಾರ್ಥಕ' (ಪ್ರವಾಸ) ಎಂಬ ಸಾರ್ಥಕತೆಯನ್ನೂ ಕವಿ ಕಂಡುಕೊಂಡಿದ್ದಾನೆ.

'ಪ್ರವಾಸ', 'ಶರಾವತಿ', 'ನಾಗಕನ್ನೆಯರು', 'ಗಾದೆಯ ಮಾತು', 'ಹಗುರಾಯಿತು' ಇವೇ ಮೊದಲಾದ ಕವಿತೆಗಳಲ್ಲಿ ಅನುಭವದ ಸಮಗ್ರತೆಯ ಕಡೆಗೆ ಕೈಚಾಚುವ, ಅದಕ್ಕೊಂದು ಪೂರ್ಣತೆಯನ್ನು ತಂದುಕೊಡುವ ಆಧುನಿಕ ಕಾವ್ಯಸಂವೇದನ ಪ್ರಾಮಾಣಿಕವಾಗಿ ವ್ಯಕ್ತವಾಗಿದೆ. 'ವಸ್ತು-ರೂಪ'ದಲ್ಲಿ ವಿರೋಧಾಭಾಸದ ನಿರೂಪಣೆ ಸಮರ್ಥವಾಗಿ ಬಂದಿದೆ. ಆದರೆ ಕೊನೆಯಲ್ಲಿ "ಫ್ರಾಯ್ಡನೇ ಬೆಂಬಲಕೆ ಇಹನಲ್ಲ" ಎಂಬ ವಾಚ್ಯವಾದ ಹೇಳಿಕೆಯ ಅಗತ್ಯವಿರಲಿಲ್ಲವೆನಿಸುತ್ತದೆ. ಕಾವ್ಯವಸ್ತುವನ್ನು ಕೇಂದ್ರಪ್ರತಿಮೆಯೊಂದರಲ್ಲಿ ಮೂಡಿಸಿ ಪ್ರತೀಕಗಳಿಂದ ಅದನ್ನು ಪೋಷಿಸಿಕೊಂಡು ಬರುವ ವಿಧಾನ 'ಹಗುರಾಯಿತು' ಕವಿತೆಯಲ್ಲಿ ಸಹಜವಾಗಿ ಬಂದಿದೆ. 'ಅಣೆಕಟ್ಟೆ'ನ ಪ್ರತಿಮೆಯಿಂದ ಪ್ರಾರಂಭವಾಗಿ

"ಬಾಯಿ ಬಿಡದಿರೆ ಒಡಲು ಒಡೆಯುವುದೆಂಬ ಭೀತಿ
ಗುಟ್ಟೆಂಬುದನು ಬಿಟ್ಟು ಕೊಡದಿರೆ ನನಗೇ ಫಜೀತಿ"

ಎಂಬ ಸಾಲುಗಳಿಂದ ಕೊನೆಗೊಳ್ಳುವ ಈ ಕವಿತೆ ಕಾವ್ಯಾರ್ಥವನ್ನು ಸಬಲವಾಗಿ ನಿರೂಪಿಸುತ್ತದೆ.

'ಹಟಮಾರಿ' ಹಾಗೂ 'ನಾನೊಂದು ಕನಸ ಕಂಡೆ' ಈ ಕವಿತೆಗಳಲ್ಲಿ ಗಾಂಧಿ ಹಾಗೂ ನೆಹರು ಅವರ ವ್ಯಕ್ತಿತ್ವದ ಕೆಲವು ಅಂಶಗಳಿಗೆ ವ್ಯಂಜಕತೆಯನ್ನು ನೀಡಿ ಚಿತ್ರಿಸಲಾಗಿದೆ.

ಆಧುನಿಕ ಜೀವನದ ನೋವಿನ, ನಿರಾಶೆಯ, ನಿಷ್ಫಲತೆಯ ಧ್ವನಿಯೂ ಇಲ್ಲಿಯ ಕೆಲವು ಕವಿತೆಗಳ ಒಡಲಿನಲ್ಲಿ ಮಿಡಿಯುತ್ತದೆ. ಹಳವ ಕವಿತೆಯ,

"ಸೇತುವಿನ ಅಡಿಪಾಯ
ತುಂಬ ಅಪಾಯ
ಈಜಲಾರದ ನಾನು
ನಿರ್ಬಲ ತೋಳ"

ಎಂಬ ಕೊನೆಯ ಸಾಲುಗಳಲ್ಲಿ ವ್ಯಕ್ತಿ ಹಾಗೂ ಪರಿಸ್ಥಿತಿ ಎರಡರ ದೌರ್ಬಲ್ಯವೂ ಸೂಚಿತವಾಗಿದೆ. 'ನಡೆ' ಕವಿತೆಯಲ್ಲಿ ಐತಿಹಾಸಿಕ ಪ್ರಜ್ಞೆಯ ಮೂಲಕ ಹಿಂದು-ಇಂದಿನ ಕಾಲಪರಿಸ್ಥಿತಿಯ ವ್ಯತ್ಯಾಸದ ವ್ಯಥೆ, ಭಯ 'ಪಯಣ ಹೊರಟಿಹ ಶೆಟ್ಟಿ ಮರಳಿ ಬರಬಹುದೆ ಎಂಬ ಶಂಕೆ'ಯಲ್ಲಿ ಮೂಡಿದೆ. ಅಲ್ಲದೆ

"ಬಂದರೂ ಬರಬಹುದು
ಹೆಮಿಂಗ್ವೆಯ ಮುದುಕನ ಮೀನ ಹಿಡಿದು
ಉಪ್ಪು ಕಡಲನು ಈಸಿ"

ಎಂಬ ಸಾಂಕೇತಿಕ ಪ್ರತಿಮೆ ಇಂದಿನ ಬದುಕಿನ ಹೋರಾಟದ ನಿಷ್ಫಲತೆಯನ್ನು ಅದ್ಭುತವಾಗಿ ಧ್ವನಿಸುತ್ತದೆ.

ಈ ಕವಿತೆಗಳು ಕವಿ ತನಗೆ ಸಹಜವಾದ ನಿರಾಡಂಬರ ಶೈಲಿಯನ್ನು ರೂಪಿಸಿಕೊಳ್ಳುವಲ್ಲಿ ಪಡೆದಿರುವ ಯಶಸ್ಸನ್ನು ಎತ್ತಿ ತೋರಿಸುತ್ತವೆ.

"ಚಳಿಯ ಗಾಳಿಯ ನವುರಾದ ಸುಳಿವು
ಹಣ್ಣಾದ ಗೋದಿಬಣ್ಣದ ಹುಲ್ಲ ಬಾಗು, ಬಳುಕು,
ಹದವಾದ ಹೂಬಿಸಿಲು" (ನಾಗಕನ್ಯೆಯರು)

ಇವೇ ಮೊದಲಾದ ಸಾಲುಗಳಲ್ಲಿ ಕವಿಯ ಚಿತ್ರಕ ಶಕ್ತಿ ಪಡೆದಿರುವ ಪ್ರಸನ್ನತೆಯನ್ನು ಕಂಡರೆ ವಸ್ತುವಿಗೆ ತಕ್ಕಂತೆ ರೂಪುಗೊಂಡು ಅರ್ಥವತ್ತಾಗಿ ಬಾಗಿ ಬೀಗುವದನ್ನು ಹಲವೆಡೆಗಳಲ್ಲಿ ಕಾಣುತ್ತೇವೆ :

"ಮೈ ತುಂಬ ತರು, ನಿಮಿರಿ
ನಿಂತಿರೆ ತುರುಗಿ,
ಬಟ್ಟ ಮಲೆಗಳಲಿ
ಹಾವು ಸುತ್ತಿನ ಹಾದಿಯಲಿ
ಹರಿದಾಡಿದೆನು,
ಟ್ರಕ್ಕು ಬಂದಪ್ಪಳಿಸುವ
ಹೆದರಿಕೆಯು
ಇದ್ದರೂ ಒಳಗೊಳಗೆ."

ಇಲ್ಲಿಯ ಛಂದೋವಿನ್ಯಾಸ, ಪದಪ್ರಯೋಗದ ಔಚಿತ್ಯ ('ನಿಮಿರಿ', 'ತುರುಗಿ', 'ಬಟ್ಟಮಲೆ', 'ಟ್ರಕ್ಕು ಬಂದಪ್ಪಳಿಸುವ', 'ಇದ್ದರೂ ಒಳಗೊಳಗೆ' ಇತ್ಯಾದಿ) ಭಾವದ ಅರ್ಥಪೂರ್ಣವಾದ ಅಭಿನಯಕ್ಕೆ ಹೇಗೆ ನೆರವಾಗಿವೆ ಎಂಬುದನ್ನು ಓದಿ ಅನುಭವಿಸಬೇಕು.

ಇವರ ಮೊದಲ ಕವನಸಂಗ್ರಹಕ್ಕೆ (೧೯೫೪) ಮುನ್ನುಡಿ ಬರೆಯುತ್ತ ಅಡಿಗರು "..... ಈ ಕವಿಯ ಕಾವ್ಯ ಯಾವಾಗಲೂ ವೈಶಿಷ್ಟ್ಯವುಳ್ಳದ್ದೂ ಅನ್ಯಾದೃಶವಾದ ಗುಣವುಳ್ಳದ್ದೂ ಆಗುವುದೆನ್ನುವುದರಲ್ಲಿ ಸಂದೇಹ ಕಾಣದು" ಎಂದು ನುಡಿದ ಭವಿಷ್ಯ ನಿಜವಾಗಿ ಪರಿಣಮಿಸಿರುವದನ್ನು ಕಂಡು ನನಗೆ ಸಂತೋಷವಾಗಿದೆ. ಇದಕ್ಕೂ ಇಮ್ಮಡಿ ಸಂತೋಷವನ್ನು ಈ ಕವಿ ತಮ್ಮ ಮುಂದಿನ ಕೃತಿಗಳಿಂದ ರಸಿಕ ಲೋಕಕ್ಕೆ ನೀಡಲಿ ಎಂದು ಹಾರೈಸುತ್ತೇನೆ.

(೧೯೬೮)

೮

## ನಾಲ್ಕು ಹಿಡಿ ಬೆಂಕಿ

"ಈ
ಕೊಳೆತ, ಕಸಕು
ಹಳೆ ಹೊಸ ಪ್ರತಿಮೆ-ಶಬ್ದಗಳ
ಬಣವೆಯನೊಟ್ಟಿ ಒಟ್ಟಿ
ಎಷ್ಟೂ ಒಂತ ವ್ಯರ್ಥ ತೋಡಲೀs
ಸತ್ತ ಭಾಷೆಯಲಿ
ಧಗಧಗಿಸುವೀ ಕುದಿಕುದಿಯ
ಹೊರೆಯ" (ಅಗಲಿದವಳ ನೆನೆದು)

ಈ ಸಂಗ್ರಹದ ಹನ್ನೆರಡು ಕವಿತೆಗಳಲ್ಲಿ ಹರಡಿರುವ ಕವಿಯ ಮನೋಧರ್ಮವನ್ನೂ, ಕಾವ್ಯವಸ್ತುವಿನ ಕುದಿಯನ್ನೂ, ಅಭಿವ್ಯಕ್ತಿಯ ದಗದಗಿಯನ್ನೂ ಈ ಮೇಲಿನ ಸಾಲುಗಳು ಸಹಜವಾಗಿ ವ್ಯಕ್ತಪಡಿಸುತ್ತವೆಯೆಂದು ನಾನು ಭಾವಿಸುತ್ತೇನೆ.

"ಬರೀ ಕಳವಳ, ತಳಮಳ, ವೇದನೆ, ಯೋಚನೆ-ದ್ವಂದ್ವ" (ಇದು ಅದು) ಈ ಕವಿತೆಗಳ ಸ್ಥಾಯೀಭಾವ. ಅದೇ ಮುಖ ಬೇರೆ ಬೇರೆ ಪ್ರತಿಮೆ ಸಂಕೇತಗಳಲ್ಲಿ ಬೇರೆ ಬೇರೆ ಮುಖವಾಡದೊಂದಿಗೆ ಕಾಣಿಸಿಕೊಳ್ಳುತ್ತದೆ. ಮಾತಾಡಿದರೆ ಅದು ಬೆಂಕಿಯನ್ನುಗುಳುತ್ತದೆ; ಅಗುಳು ಹಿಚುಕಿ ನೋಡಲೂ ಒಮ್ಮೊಮ್ಮೆ ಅದು ಅವಕಾಶ ಕೊಡುವುದಿಲ್ಲ.

"ವರ್ತಮಾನ ದೇಹ
ಸಂಜೆಯಂಚಿನ ಭವಿತವ್ಯಕೆ ನಡೆದು
ನೀಡಿದ ನಿಡಿದು ನೆರಳು
ಭೂತ" (ಸುಡುಗಾಡಿನ ಹಾಳು ಗೋಡೆ)

ಸರಿ; ಓದುಗರೂ ಅವರ ಹಿಂದೆ ಸಾಗಿದರೆ -

'ಇದು-ಅದು'ವಿನ ತೊಡರು ಗಂಟುಗಳು ಬಿಡಿಸಬೇಕೆಂದು ಹೊರಟರೂ 'ಇದು' ನಿಧಿ ಇರುವ ತಾಣವೋ, ಜ್ವಾಲಾಮುಖಿಯ ಮುಖವೋ, ಪಾತಾಳಕ್ಕೆ ರಹದಾರಿಯೋ, ತನ್ನದೇ

ಗೋರಿಯೋ ಎಂಬ ಸಂಶಯ. 'ಅದ'ನ್ನೂ ಹಿಡಿಯಬೇಕೆಂದು ಧಾವಿಸಿ ದಣಿದು ಬಿದ್ದದ್ದು ಮಾತೃಗರ್ಭದಿಂದ ಭೂಮಿಗೆ ಬಿದ್ದಲ್ಲೇ. ವಾಸ್ತವ-ಆದರ್ಶ, ವರ್ತಮಾನ-ಭವಿಷ್ಯತ್ತು ಹೀಗೆ ಕಲಕು ಮಲಕಾಗಿ ಕಾಣಿಸಿಕೊಳ್ಳುತ್ತವೆ. ಈ ದ್ವಂದ್ವದಲ್ಲಿ ಸಿಕ್ಕವನದು ಅಸಹಾಯಕತನದ ಒಂಟಿ ಪಯಣ. ಭೂತ-ಭೈರವದ ಕಪ್ಪು ಕತ್ತಲು ಬೇರೆ. ದೂರದೀವಿಗೆಯ ಮಿಣುಕಿಗಾಗಿ ಕಾತರ, ಸಂಗಾತಿಯೊಬ್ಬಳಿದ್ದಿದ್ದರೆ ಎಂಬ ಕನವರಿಕೆ. ಮುದ್ದೆಯಾದ ಗುಬ್ಬಿಯ ಮರಿಯಂತೆ ಜೀವದ ಫಡಫಡಿಕೆ, ಕಲ್ಪನೆಯ ಭವಿಷ್ಯದ ತಣ್ಣೆಳಲಲ್ಲಿ ಪವಡಿಸಿದಾಗ ವರ್ತಮಾನದ ಮೈಯನ್ನು ಕೊರೆಯುತ್ತಿದೆ ಬ್ಲೇಡು-ಭೂತ.

ಕಾದ ಉಕ್ಕು-ಉಸುಕಿನ ನಡುವೆ ಅದನ್ನು ಧಿಕ್ಕರಿಸಿ ಮುಳ್ಳುಗತ್ತಿಗಳನ್ನು ಹೊತ್ತು ಹಸುರಾಗಿ ದಿಗಂತವನ್ನಿರಿದಿರಿದು ಮೇಲೇರ ಬಯಸುವ ಸುಡುಗಾಡಿನ ಡಬಗಳ್ಳಿ; ಸುತ್ತಲೂ ದಿನದಿನವೂ ಕೊಳೆತು ನಾರುತ್ತಿರುವ ವಾತಾವರಣ, ತನ್ನದೇ ಎದೆಯನ್ನು ಹಿರಿದು ತಿಂದು ಬಾಯಿ ಚಪ್ಪರಿಸಿದಂತೆ ಎದೆಯಲ್ಲೊಂದು ಸಮಾಧಾನ, ನೆನಪ ರೆಫ್ರಿಜಿರೇಟರಿನ ತಿಂಡಿಯನ್ನು ಬೇಕೆಂದಾಗ ತಿಂದು ತೇಗುವ ಬಯಕೆ, ಪ್ರೇಮ-ಭೂಮಿಯೊಡಲ ಸೀಳಿಬರುವ ದುಃಖ ಲಾವಾರಸವನ್ನು ಎಷ್ಟೆಂದು ಅಂಗಿಯೊಡ್ಡಿ ತಡೆಯಲಾದೀತು? ತನ್ನೆದೆಯಲ್ಲೇ ಮುಖ ಒಡೆದು ಜ್ವಾಲಾಮುಖಿಯಂತಿದೆ ಅಗಲಿದವಳ ನೆನಪು, ಗೋಡೆ ಹಾಯುವ ಕುರುಡು ಬಾವಲಿಯಂತೆ ಧಡಪಡಿಸುವದೆ? ಇಲ್ಲ ದೈವಚಕ್ರವನ್ನು ಹನ್ನಿಗಣ್ಣಿಂದ ನೋಡಿ ನಕ್ಕು ಬಿಡುವುದೆ?

ಸತ್ತ ದುಃಖಗಳ ಹೆಣಬಣವೆಯ ಹೊತ್ತು ತಪ್ತ ಬಸವನ ಹುಳ ಈ ಕಾವ್ಯದ ನಾಯಕ. ಭವಿಷ್ಯದ ಎಲುವುಚೂರಿಗೆ ವರ್ತಮಾನ ಜೊಲ್ಲು ಹನಿಸುವ ಭೂತ-ನಾಯಿ. ಈ ಬಾಳಿನ ಕುರುಕ್ಷೇತ್ರದಲ್ಲಿ ದುಃಖಗಳ ಶರಪಂಜರದಲ್ಲಿಯೇ ಆ ಕೊನೆಯ ಉತ್ತರಾಯಣಕ್ಕಾಗಿ ಕಾಯಬೇಕು; ಇಲ್ಲ, ಸಿಕ್ಕಲ್ಲಿ ಬೆದರು-ಬೆಂತರವಾಗಿ ನಿಲ್ಲಬೇಕು. ಬೆಂಬತ್ತಿ ಕಾಡುವ ಭೂತದಿಂದ ಬಿಡುಗಡೆಯೆಂದು? ದಟ್ಟ ನೆರಳುಗಳ ಗಾಢ ಕಪ್ಪಿನಲ್ಲಿ ಕಂಡೀತೇ ಆ ನಾಳೆ ಬೆಳಕು?

ಹೀಗೆ ಭೂತ-ವರ್ತಮಾನ-ಭವಿಷ್ಯತ್ತುಗಳ ತಿರುಗಣೆ ಮಡುವಿನಲ್ಲಿ ತಿರುತಿರುಗಿ ಹೊರಬರುವ ಈ ಕವಿಯ ಭಾವ ಪ್ರವಾಹಕ್ಕೆ ಸೆಳವಿದೆ, ಶಕ್ತಿಯಿದೆ, ಮೊರೆತವಂತೂ ಉದ್ದಕ್ಕೂ ಇದೆ. ಇದು ತಿಳಿಗೊಂಡಾಗ ಇದರ ಆಳವೂ ಇಂದಿಲ್ಲ ನಾಳೆ ಕಂಡು ಬಂದೀತು.

ಪ್ರತಿಮೆಗಳೂ ಪ್ರತೀಕಗಳೂ ಈ ಪದ್ಯಗಳಲ್ಲಿ ಪರಸ್ಪರ ಹಾಯ್ದಾಡುತ್ತವೆ. ಒಂದೇ ಕವಿತೆಯಲ್ಲಿ ಹಲುವ ಬಿಡಿಬಿಡಿಯಾದ ಪ್ರತಿಮೆಗಳು ಸೃಷ್ಟಿಗೊಳ್ಳುತ್ತವಾದರೂ ಅವುಗಳಲ್ಲಿ ಪರಸ್ಪರ ಪೋಷಣೆ ಬೆಳವಣಿಗೆ ತೋರುವುದಿಲ್ಲ. ಇಡಿಯ ಕವಿತೆಯನ್ನು ಒಂದು ಹಿಡಿತಕ್ಕೆ ತರುವ ಸಾಮರ್ಥ್ಯ ಅವಕ್ಕೆ ಬೇಕಾಗಿದೆ. ಅನುಭವವನ್ನು ಅನಿಸಿಕೆಯನ್ನು ಒಂದೇ ಸವನೆ ತೋಡಿಕೊಳ್ಳುವ ಧೋರಣೆ ಈ ಕವಿತೆಗಳದಾಗಿದ್ದರೂ ಕಲಾಸಂಯಮದ ಕಡೆಗೂ ಆಗೀಗ ಕವಿ ಲಕ್ಷ್ಯವಿತ್ತಿದ್ದಾನೆ. ಆಗ ಮೂಡುವ ನುಡಿಚಿತ್ರಗಳಿಗೆ ಗಾಢತೆ ಒದಗಿದೆ :

"ಯಾರೊ ರಕ್ಕಸನೆಗರಿ, ಚಲ್ಲಿ ಜಾಲಾಡಿದಂತೆ
ಚದುರಿ ಚಲ್ಲಾಪಿಲ್ಲಿಯಾಗಿ ಬಿದ್ದ ತಾರೆಗಳು:
ಅರೆ ಮಿಣುಕು ಮಿಣುಕಿಸಿ-ಅಳಕಿಸಿ
ನಗು-ಅಳುತ್ತಿರುವ
ಬೆಳಕು-ಮಬ್ಬು-ಸ್ಮೃತಿಗಗನ" (ಅಸಹಾಯ)

ತಕ್ಕಮಟ್ಟಿಗೆ ಯಶಸ್ವಿ ಕವಿತೆಯನ್ನಬಹುದಾದ 'ಕ್ಯಾಕ್ಟಸ್'ದಲ್ಲಿ ಭಾವ ಕಾವುಗೊಂಡು, ವಾತಾವರಣವನ್ನು ಸೃಷ್ಟಿಸಿಕೊಂಡು, ಸಂಯಮವನ್ನು ಸಾಧಿಸುತ್ತ ಪ್ರತೀಕದ ಒಡಲಿನಿಂದ ಪ್ರತಿಮೆಯಾಗಿ ಮೂಡಿ ತಕ್ಕ ಪರಿಣಾಮವನ್ನು ಬೀರುತ್ತದೆ :

"ಈ ಉದ್ದ ಮುಳ್ಳುಗತ್ತಿಗಳ ಹೊತ್ತು
ಹಸರನ್ನೆ ಮರೆದು
ಈ ದಿಗಂತವನಿರಿದಿರಿದು
ಮೇಲೇರಲೇಬೇಕೆಂದ ಧೀಮಂತ
ಜೀವ."

ಭಾಷೆಯ ಬಳಕೆಯಲ್ಲಿ ಧಾರಾಳತೆ ಹೆಚ್ಚು. ಆದರೂ ಒಮ್ಮೊಮ್ಮೆ ನಾಟಕೀಯತೆಯಿಂದ ಅದಕ್ಕೆ ಹೊಸ ಕಳೆ ಬರುವದುಂಟು :

"ಛಕ್ಕೆಂದು
ಮಿಂಚಾಗಿ ಹರಿದು, ಗೆರೆ ಕೊರೆದು
ಆಪಾದಮಸ್ತಕ, ಮಟಮಾಯವಾಗುವ
ಮುನ್ನ ಸಿಡಿಲಿಕ್ಕಿ ಕೊಂದೆನ್ನ
ಬೂದಿಯಾಗಿಸಿದವಳ" (ಅಗಲಿದವಳ ನೆನೆದು)

"ಸುಡುಗಾಡಿನ ಹಾಳು ಗೋಡೆ"ಯ ಕೊನೆಯ ಭಾಗದಲ್ಲಿ ಭಾವಾತಿರೇಕಕ್ಕೆ ಎಡೆಗೊಡದೆ ಚಿಂತನೆ ತನ್ನ ಮಟ್ಟದಲ್ಲಿ ಕೆಲಸ ಮಾಡುವುದರಿಂದ ಅದಕ್ಕೊಂದು ಪೂರ್ಣತೆ ಬಂದಿದೆ. ಸಂಯಮದಿಂದ ಕೂಡಿದ ಜೀವನದೃಷ್ಟಿ ಅನುಭವವನ್ನು ತೂಗಿನೋಡುತ್ತಿರುವಂತೆ ನಿಂತು ನಿಂತು ಹೆಜ್ಜೆಯಿಡುವಂತಿರುವ ಪದ್ಯದ ನಡಿಗೆ ಈ ಸಂಗ್ರಹದಲ್ಲಿಯೇ ಅಪರೂಪ :

"ಟಿಸಿಲಿರದ ದಪ್ಪ ಕತ್ತಲು ಪರದೆ
ಜಂಗುತಿಂದು ಮಗುಚಿ ಬಿದ್ದ ಬೆಳಕಿನ ಭರ್ಚಿ
ರೆಪ್ಪೆಗಳಡಿಯ ಭಾರ ನಿದ್ರೆಯಂತೆ ಸತ್ತು ಬಿದ್ದ
ಸುಳಿಗಾಳಿಯ ತೆಳುವಾದ ಶವ"
ಗರ್ಭದಿಂದ ಗೋರಿಯ ಕೊನೆಯವರೆಗೂ ಕೂತು ಕಾಯುವ

"ಬೋಳು ತಲೆಯ ಗೂಬೆಯ
ಒಂಟಿಗಣ್ಣಿನಲ್ಲಾದರೂ ಕಂಡೀತೇ
ಆ ನಾಳೆಯ ಬೆಳಕು
?"

ಇಲ್ಲಿಯ ಕವಿತೆಗಳಲ್ಲಿ ಭೀಭತ್ಸ ರಸಕ್ಕೆ ಎಡೆದೊರೆತಿರುವಷ್ಟು ಉಳಿದವಕ್ಕೆ ದೊರೆತಿಲ್ಲವೆನ್ನುವ ಕೊರತೆ ಎದ್ದು ಕಂಡರೂ ಅಭಿವ್ಯಕ್ತಿಯಲ್ಲಿ ಕವಿ ಪ್ರಾಮಾಣಿಕತೆಯನ್ನು ಸಾಧಿಸಲು ಪ್ರಯತ್ನಿಸಿದ್ದಾನೆ. ಇಲ್ಲಿಯ ನುಡಿಕಟ್ಟು ಅದಕ್ಕೆ ಹೊಂದಿಕೊಂಡೇ ಬಂದಿದೆ :

"ಮನದ ಮಣ್ಣಿನಲ್ಲಿ ಅಗಿದು
ಅಗಿದರೂ ಬೆವರು ಮೈ ಅನುಭವ" (ಇದು-ಅದು)

ಕವಿ ಬಳಸುವ ಸಂಕೇತಗಳೋ ಸಾಲುಗಟ್ಟಿ ಮೆರವಣಿಗೆ ಹೊರಟಂತೆ ತೋರುತ್ತದೆ. ಕೆಲವು ಕವಿತೆಗಳಲ್ಲಿ : ಹಾವು, ಗುಬ್ಬಿ, ಹಲ್ಲಿ, ಓತಿಕಾಟ, ಕಪ್ಪೆ, ಹದ್ದು, ಗಿಡುಗ, ನಾಯಿ, ನುಶಿ, ನೊರಜು ಇತ್ಯಾದಿ. ಆದರೆ ಇವು ಕಾವ್ಯ ಸಂಕೇತಗಳಾಗಿ ಮಾರ್ಪಟ್ಟಾಗ ಅವುಗಳಿಗೆ ತಕ್ಕ ಬೆಲೆ ಇದ್ದೇ ಇದೆ.

ಈ ಕವಿ ಬೆಳೆಯಬಲ್ಲನೆಂಬುದಕ್ಕೆ ಈ ಸಂಗ್ರಹದಲ್ಲಿ ಸಾಕಷ್ಟು ಸೂಚನೆಗಳಿವೆ. ತಾನು ಕಟ್ಟಿಕೊಂಡಿರುವ ಆ ಆವರಣದಿಂದ ಹೊರಬಂದು 'ಆ ನಾಳೆಯ ಬೆಳಕ'ನ್ನು ಕಾಣುವ ಸಾಮರ್ಥ್ಯ ಅವನಿಗೆ ಬೇಗ ಒದಗಲಿ ಎಂದು ಹಾರೈಸುತ್ತೇನೆ. (೧೯೬೯)

೯

## ಮುಂಜಾವಿನ ಕೊರಳು

"ಮುಂಜಾವಿನ ಕೊರಳಿ"ನಲ್ಲಿ ಕವಿಚೇತನವೊಂದರ ಧ್ವನಿ ನೂತನ ಶ್ರುತಿಯೊಡನೆ ಆಕರ್ಷಕವಾಗಿರುವಾಗ ಅದನ್ನು ಕಹಳೆಯೂದಿ ಹೇಳಬೇಕಾದ ಅಗತ್ಯವಿಲ್ಲ. ಮಂಜು ಮುಸುಕದೆ ಮುಂಚಾಚಿರುವ ಇಲ್ಲಿಯ ಕಿರಣ ತನ್ನ ಅಸ್ತಿತ್ವವನ್ನು ಕಾಯ್ದುಕೊಳ್ಳಲು ಸಮರ್ಥವಾಗಿದೆ. ಆದರೂ ಕವಿಮಿತ್ರ ಶ್ರೀ ಶಾಂತರಸರ ಕೋರಿಕೆಯಂತೆ ಈ ಕಾವ್ಯವನ್ನು ಕುರಿತು ಪರಿಚಯಾತ್ಮಕವಾದ ಎರಡು ಮಾತು ಬರೆಯುತ್ತಿದ್ದೇನೆ.

ಯಾರು ಏನೇ ಅಂದರೂ, ನವ್ಯಕಾವ್ಯ ಇಕ್ಕಟ್ಟಿನಲ್ಲಿಯೂ ದಾರಿ ಮಾಡಿಕೊಂಡು ತನ್ನ ಪಾತ್ರವನ್ನು ಸಾಧ್ಯವಿದ್ದಷ್ಟು ವಿಸ್ತಾರಗೊಳಿಸುತ್ತ, ಅಲ್ಲಲ್ಲಿ ಆಳವನ್ನೂ ಕಂಡುಕೊಳ್ಳುತ್ತ ಮುಂದುವರಿಯುತ್ತಿದೆ. ಅದಕ್ಕೆ ಹೊಸದಾಗಿ ಬಂದು ಕೂಡುತ್ತಿರುವ ಝರಿ-ತೊರೆಗಳಲ್ಲಿ ಕವಿ ಜಂಬಣ್ಣನವರ ಈ ನೀರಿಗೂ ಸಾಕಷ್ಟು ಸೆಳವಿದೆ.

ಇದು, ತನ್ನದಲ್ಲದ ಅನುಭವವನ್ನು ತನ್ನದೆಂಬಂತೆ ಬೋಧಿಸುವ ಕಾವ್ಯವಲ್ಲ; ನೈಜಾನುಭವಗಳನ್ನು ದೌರ್ಬಲ್ಯಗಳಿದ್ದರೂ ಅವುಗಳಿಗೆ ಆದರ್ಶದ ವೇಷ ತೊಡಿಸದೆ ಆದಷ್ಟು ತನ್ನದೇ ಆದ ಭಾಷೆಯಲ್ಲಿ ನಿರೂಪಿಸುವ ನೇರ ಕಾವ್ಯ. ಈ ಕಾವ್ಯದ ನಾಯಕ ಆಧುನಿಕ ಜೀವನದ ಸಂಘರ್ಷದಲ್ಲಿ ತನ್ನ ಅಸ್ತಿತ್ವ ಹೋಳಾಗಿ ಬಿದ್ದಿರುವುದನ್ನು ಕಂಡಿದ್ದಾನೆ. ಆ ನೋವಿನ, ಅಸಹಾಯಕ ಸ್ಥಿತಿಯನ್ನೂ ಕೀಳಾಳ್ತನವನ್ನೂ ಕವಿ ಇಲ್ಲಿ ಕೆಲವೆಡೆ ಸತ್ವಪೂರ್ಣವಾಗಿ ಕಂಡರಿಸಿದ್ದಾನೆ:

"ನಾ - ಭೀಮ ಉದ್ದಂಡ
ಎತ್ತಿಯೂ ಗದಾ - ದಂಡ
ಮೂಡಿದ್ದೇನೆ ನಪುಂಸಕ ಆಕ್ರೋಶ
ಮರುಕ್ಷಣ ಅತ್ತಿದ್ದೇನೆ
ಷಂಡಗಂಬನಿ ಸುರಿಸಿ
ಗಳಗಳ"

ಹಿಂದಿನ ದಾರಿಯನ್ನು ಕಳೆದುಕೊಂಡು 'ನಾಲ್ಕೂ ದಿಕ್ಕಿಗೆ ಕವಲೊಡೆವ ಸಂಶಯದಂತೆ' ಆತ ನಿಂತಿದ್ದಾನೆ. ಇವನ ದಾರಿಯಲ್ಲಿ -

"ನಿತ್ಯ-
ಅದೇ ಹಳಸಿದ ಹಗಲು-ರಾತ್ರಿಗಳು
ಅಮಾಸೆ ಹಾಕಿಕೊಂಡ ಹುಣ್ಣಿಮೆ ಮುಖವಾಡಗಳು"

ಒಮ್ಮೆ ಈ ಎಲ್ಲವನ್ನೂ ಕಟ್ಟಿ, ಬೆಂಕಿಹಚ್ಚಿ ದೂರ ಓಡಬೇಕೆಂದು ಮನಸ್ಸಾದರೂ 'ಸೋತ ಕ್ಷಣಗಳ ಮೈದಡವಿ, ಏಳುತ್ತ ಬೀಳುತ್ತ ಬಯಲ ಹೆಗಲು ಹಿಡಿದು' ಹಾಗೆ ನಡೆದಿರುವಾಗ 'ಎಲ್ಲರೂ ನನ್ನಂತೆ ಕುರುಡರೆ' ಎಂಬ ಅನುಭವವಾಗಿ, ಕಲ್ಪಿಸಿಕೊಂಡ 'ಬ್ಯಾಲೆನ್ಸಷೀಟು' ಸರಿಹೊಂದದೆ ಈತ 'ಮತ್ತೆ ಬರಬೇಕಾಯಿತು ನಾವೆಯಲಿ ಹಾಕಲು ಹುಟ್ಟು' ಹರಿಯುವ ನೀರಿನ ಮಧ್ಯೆ ಹಾಕಿ ಅಣೆ-ಕಟ್ಟು ನಿಲ್ಲುತ್ತಾನೆ ಒಂಟಿಮಹಲು-

"ನೆನಪಿನ ಜೋಗಕ್ಕೆ ಹೃದಯ ಗಿಮ್ಮೆಂದು ತಿರುಗಿ
ನರ ನರಕ್ಕೆ ವಿದ್ಯುತ್ ಪ್ರವಾಹ
ಹರಿದಾಗ ನನ್ನ ನಾ ಮರೆತು
ನಿನ್ನೆಗಳ ಗುಂಡಿಯಲ್ಲಿ
ಒದ್ದಾಡುತ್ತೇನೆ."

ಮರೆಯಲು ಪ್ರಯತ್ನಿಸಿದಷ್ಟೂ ಭೂತ ಎದೆತುಂಬ ಹೆಡೆ ಬಿಚ್ಚುತ್ತದೆ. ಈ ಸಂದಿಗ್ಧ ಪರಿಸ್ಥಿತಿಯಲ್ಲಿ -

"ಈ ಅಣೆ-ಕಟ್ಟು ಒಡೆದು ಕೊಳೆತ
ನೀರನ್ನು ಹೊರಬಿಡಬೇಕು
ಹರಿಯುವ ನೀರು ಹರಿಯಗೊಡಬೇಕು"

ಎಂದು ಪ್ರಕೃತಿಯ ಸಹಜಸ್ಥಿತಿಯನ್ನು ಒಪ್ಪಿಕೊಂಡು ಆರೋಗ್ಯಕರವಾದ ನಿರ್ಣಯಕ್ಕೆ ಬರುತ್ತಾನೆ. ಹೀಗೆ ಸಮರ್ಥವಾದ ಪ್ರತಿಮೆಗಳಲ್ಲಿ ಭಾವಸಮೀಕರಣವನ್ನು ಪಡೆದ 'ಅಸ್ತಿತ್ವ', 'ಹರಿಯುವ ನೀರು', 'ದಾರಿಯಲ್ಲಿ' ಮೊದಲಾದ ಕವಿತೆಗಳು ಕವಿಯ ಬೆಳವಣಿಗೆಯ ಬಗ್ಗೆ ಭರವಸೆ ನೀಡುತ್ತವೆ.

ಯೌವನಾವಸ್ಥೆಯ ಕೆಲವೊಂದು ಅನುಭವಗಳು, ಆ ಕ್ಷಣದ ವಿಲಕ್ಷಣತೆ 'ಕನಸು-ಮನಸು', 'ಕ್ಷಣಗಳು', 'ಮೋಜು' ಈ ಚಿಕ್ಕ ಕವಿತೆಗಳಲ್ಲಿ ಅಭಿವ್ಯಕ್ತಿ ಪಡೆದಿವೆ. ಇನ್ನೂ ಚಿಕ್ಕದಾದ ಕವಿತೆಗಳಲ್ಲಿ ಕಲ್ಪನೆಯ ಚುರುಕು ಚಮತ್ಕಾರ, ಚಿತ್ರಕತೆ ಒಡಮೂಡಿ ತಮ್ಮ ಪರಿಮಿತಿಯಲ್ಲಿಯೇ ಅಚ್ಚುಕಟ್ಟಾಗಿವೆ.

ಅಂತು ಈ ಚಿಕ್ಕ ಸಂಗ್ರಹದಲ್ಲಿ ಕವಿ ತೋರಿಸಿರುವ ಶಕ್ತಿ-ಸಂಯಮ ಮೆಚ್ಚುವಂತಹದು. ಬದುಕಿನ ಸಂವೇದನೆಗಳಿಗೆ ಸಮರ್ಪಕವಾದ ಅಭಿವ್ಯಕ್ತಿಯನ್ನು ನೀಡುವಲ್ಲಿ ಇನ್ನೂ ಹೆಚ್ಚಿನ ಯಶ ಇವರಿಗೆ ದೊರೆತು, ಇವರ ಕಾವ್ಯ ಉಜ್ವಲಗೊಳ್ಳಲಿ ಎಂದು ಹಾರೈಸುತ್ತೇನೆ.

ರಾಯಚೂರಿನ 'ಸತ್ಯಸ್ನೇಹ ಪ್ರಕಾಶನ' ಕರ್ನಾಟಕದ ಆ ಭಾಗದ ತರುಣರ ಪ್ರತಿಭೆಯ ಪ್ರಕಾಶನಕ್ಕೂ ಕಾರಣವಾಗುತ್ತಿರುವುದು ನಿಜಕ್ಕೂ ಪ್ರಶಂಸನೀಯ. ಹಳಗನ್ನಡ-ಹೊಸಗನ್ನಡವೆನ್ನದೆ

ಹುರುಳುಳ್ಳ ಸಾಹಿತ್ಯ ಪ್ರಕಾರವೆಲ್ಲವನ್ನೂ ಓದುಗರಿಗೆ ಒದಗಿಸಿಕೊಡುತ್ತಿರುವ ಶ್ರೀ ಶಾಂತರಸ ಹಾಗೂ ಅವರ ಮಿತ್ರರ ಸಾಹಸ ಪ್ರೋತ್ಸಾಹ ಯೋಗ್ಯವಾಗಿದೆ. ಈ ಪ್ರಕಾಶನದಲ್ಲಿ ಕವಿ-ಕಲಾವಿದ ಶ್ರೀ ಚಂದ್ರಕಾಂತ ಕುಸನೂರರ ಕುಂಚಕ್ಕೂ ಒಂದು ವಿಶಿಷ್ಟಕಾಂತಿಯಿದೆ. ವ್ಯಾವಹಾರಿಕ ಜೀವನದಲ್ಲಿ ಹೊರಗೆ ತೋರುವ ಅನುಭವಗಳನ್ನು ಬದಿಗೊತ್ತಿ, ಸಂಯೋಜಕವಾದ ಅವರ ಸ್ಮೃತಿಶಕ್ತಿ ವಾಸ್ತವದ ಹೊಸ ಕಲ್ಪನೆಯನ್ನು ಮೂಡಿಸಿ ತೋರಿಸುವಂತಿದೆ. ಈ ಎಲ್ಲ ಮಿತ್ರರಿಗೂ ನನ್ನ ಹಾರ್ದಿಕ ಅಭಿನಂದನೆಗಳು. (೧೯೬೯)

## ೧೦

## ಅಂತರಂಗದ ಹಾಡು

ಈಗಾಗಲೇ ತಮ್ಮ ನಾಟಕ, ಕಥೆ, ವಿಮರ್ಶೆ, ಜಾನಪದ ಸಾಹಿತ್ಯ ಕೃತಿಗಳಿಂದ ಕನ್ನಡ ವಾಚಕಲೋಕಕ್ಕೆ ಚಿರಪರಿಚಿತರಾಗಿರುವ ಶ್ರೀ ಡಿ. ಲಿಂಗಯ್ಯನವರ 'ಅಂತರಂಗದ ಹಾಡು' ಅವರ ಪ್ರಥಮ ಕವನ ಸಂಕಲನವಾಗಿ ಹೊರಬರುತ್ತಿದೆ. ಇದಕ್ಕೆ ಮುನ್ನುಡಿ ಬರೆಯಬೇಕೆಂದು ಕವಿಯೊಂದಿಗೆ ಮಿತ್ರರಾದ ಹಂಪ ನಾಗರಾಜಯ್ಯನವರೂ ಕೋರಿದ್ದಾರೆ. ಆ ಕಾರ್ಯವನ್ನು ನಾನು ಅತ್ಯಂತ ಸಂತೋಷದಿಂದ ಮಾಡುತ್ತಿದ್ದೇನೆ. ಕನ್ನಡ ಕಾವ್ಯದ ಸದ್ಯದ ಇಕ್ಕಟ್ಟಿನ ದಾರಿಯಲ್ಲಿ ಹಾಯ್ದು ಬರುವ, ಮುಂದೆ ತಮ್ಮ ದಾರಿಯನ್ನು ತಾವು ಕಂಡುಕೊಳ್ಳಬಹುದಾದ ಯಾವ ಹೊಸ ಕವಿಗೂ ಈ ಸಂದರ್ಭದಲ್ಲಿ ಧೈರ್ಯದ ನಾಲ್ಕು ಮಾತು ಹೇಳಬೇಕಾದುದು ಅವಶ್ಯವೆಂದು ನಾನು ಭಾವಿಸುತ್ತೇನೆ.

ಈ ಸಂಗ್ರಹದ ಸುಮಾರು ನಾಲ್ವತ್ತು ಕವಿತೆಗಳನ್ನು ಪ್ರೇಮ, ಪ್ರಕೃತಿ, ವ್ಯಕ್ತಿ, ನಾಡು-ನುಡಿ ಭಕ್ತಿ, ಸಂಕೀರ್ಣ ಎಂದು ವಸ್ತುವಿಗನುಸಾರವಾಗಿ ವಿಭಾಗಿಸಿಕೊಟ್ಟಿದ್ದರೂ ಒಂದರೊಳಗೊಂದು ಸೇರಿಕೊಂಡಿರುವ ಕೆಲವು ಕವಿತೆಗಳೂ ಇದರಲ್ಲಿವೆ, ಭಾವ, ಭಾಷೆ, ಛಂದಸ್ಸಿನಲ್ಲಿ ಇದರ ಕೆಲವು ಕವಿತೆಗಳು ಹಳೆಯ ಜಾಡಿನಲ್ಲಿ ನಡೆದಿದ್ದರೆ ಇನ್ನು ಕೆಲವು ಹೊಸರೂಪಕ್ಕೆ ಹಾತೊರೆದಿವೆ. ಹೊಸ ಅನುಭವದ ಅಭಿವ್ಯಕ್ತಿಯ ಆಕಾಂಕ್ಷೆ ಇಲ್ಲಿಯ ಪ್ರಕೃತಿ ಗೀತಗಳಲ್ಲಿ ಮೊಳೆತು, ವ್ಯಕ್ತಿಗೀತಗಳಲ್ಲಿ ಕುಡಿವರಿದು, ಸಂಕೀರ್ಣ ಪದ್ಯಗಳಲ್ಲಿ ಒಂದು ನೆಲೆಯನ್ನು ಕಾಣಲು ಹವಣಿಸಿದೆ. ಹಳೆಯ ಜಾಡಿನ ಪದ್ಯಗಳಲ್ಲಿ ಕಾವ್ಯಾಂಶ ಅಲ್ಲಲ್ಲಿ ತಲೆದೋರಿದ್ದರೂ ಅಲ್ಲಿಯ ಭಾಷೆಗೆ ಜೀವಂತಿಕೆಯ ಸ್ಪಂದನವಿಲ್ಲ. ಆದೂ ಒಮ್ಮೊಮ್ಮೆ ಮುಕ್ತಕದಂತಹ ಪದ್ಯಗಳಲ್ಲಿ ಮಾತು ಮಿತವಾಗಿ, ಅನುಭವ ಯಾವ ಅಲಂಕಾರವನ್ನೂ ಬಯಸದೆ ಸಹಜ ಕಾವ್ಯತ್ವವನ್ನು ಪಡೆಯಬಲ್ಲದು :

ಹಣವು ಬೇಕಿಲ್ಲ ಅಧಿಕಾರ ಬೇಕಿಲ್ಲ
ಹೆಸರು ಬೇಕಿಲ್ಲ ನಮಗೆ
ಹಾಲು ಬಾಳಿಗೆ ಹುಳಿಯ ಹಿಂಡದಿದ್ದರೆ

ಅದುವೆ ಏನೆಲ್ಲ ನಮಗೆ (ಪ್ರಾರ್ಥನೆ)

"ಬಾಳ ಸವಿ ಮುಗಿದಿಲ್ಲ ನಡೆದಿಹುದು ಯಾತ್ರೆ
ಸವಿಜೇನ ಸವಿಬಾಳು ಮುಗಿದಿಲ್ಲ ಪಾತ್ರೆ"

(ಯೌವನವೆ ಚಿರವಿರಲಿ)

(ಎರಡನೆಯ ಸಾಲಿನಲ್ಲಿ ಆಗಲೇ ಭಾಷೆಯ ಕೃತಕತೆಯಿಂದಾಗಿ ಭಾವ ಸೋಲುತ್ತದೆ.)

"ಬಾಳ ಬೆಳಗಿನಲ್ಲಿ ಹುಟ್ಟ ಹಿಡಿದಾಗ
ದಾರಿ ಕಾಣಲೆ ಇಲ್ಲ ; ಮಂಜು ಕವಿದಿತ್ತು
ಬಾಳ ಬೈಗಿನಲ್ಲಿ ಹುಟ್ಟ ಹಿಡಿದಾಗ
ಶಕ್ತಿ ಉಳಿದಿರಲಿಲ್ಲ; ದಾರಿ ಬೆಳದಿತ್ತು."

(ಬೈಗು-ಬೆಳಗು)

ಅನುಭವದ ಸಂಕೀರ್ಣತೆ ರೂಪಕದಲ್ಲಿ ಎರಕ ಹೊಯ್ದು ನಿಂತಂತೆ ಇಲ್ಲಿ ತಕ್ಕ ಪರಿಣಾಮವನ್ನು ಬೀರುತ್ತದೆ.

'ಒಂದು ರಾತ್ರಿ' 'ಭರಣಿ ಮಳೆ' 'ಮಳೆ ಬಿದ್ದ ಮೇಲೆ' - ಈ ಕವಿತೆಗಳಲ್ಲಿ ಕವಿಯ ಅಭಿವ್ಯಕ್ತಿಗೆ ಹೊಸದಿಕ್ಕು ಕಾಣಿಸಿಕೊಂಡಿದೆ. ಬದುಕಿನೊಡನೆ ಹೇಗೋ ಭಾಷೆಯೊಡನೆಯೂ ಹಾಗೆಯೇ ಹೋರಾಡದೆ ಅನುಭವಕ್ಕೆ ತಕ್ಕ ಅಭಿವ್ಯಕ್ತಿ ದೊರೆಯದು ಎಂದು ಕವಿಗೆ ಇಲ್ಲಿ ಅನ್ನಿಸಿದೆ. ('ಮಳೆಬಿದ್ದ ಮೇಲೆ'ಯ ಕೊನೆಯ ಭಾಗವನ್ನು ಮಾತ್ರ ಎಳೆದು ತಂದಂತಿದೆ) ವ್ಯಕ್ತಿಗೀತೆಗಳಲ್ಲಿ ವ್ಯಕ್ತಿಯ ಹಲವು ಮುಖಗಳು ಆ ವ್ಯಕ್ತಿತ್ವದ ಕೇಂದ್ರಬಿಂದುವನ್ನು ಪೋಷಿಸುವಂತಿರಬೇಕು. ಚಿತ್ರದಲ್ಲಿಯ ಸೂಕ್ಷ್ಮಗೆರೆಗಳಂತೆ ಇಲ್ಲಿಯೂ ಮಾತು ಸೂಚ್ಯವಾಗಿ ಅರ್ಥದ ಸ್ವಾರಸ್ಯವನ್ನು ಹೆಚ್ಚಿಸಬೇಕು.

'ಕಣ್ಣಾಮುಚ್ಚಾಲೆ', 'ಹದ್ದುಮನ', 'ಚಾಡಿಕೋರ', 'ಸ್ಮಶಾನಯಾತ್ರೆ' - ಇತ್ಯಾದಿ ಕವಿತೆಗಳಲ್ಲಿ ವಿಚಾರಶೀಲತೆ ಭಾವವನ್ನು ಮುನ್ನಡೆಸಿದೆ. ಹಾಗೆಯೇ ಇಲ್ಲಿಯ ಶೈಲಿಯೂ ವಚನಗಳ ಶೈಲಿಯನ್ನು ಹಿಡಿಹಿಡಿದು ಬಿಟ್ಟಂತೆ ತೋರುತ್ತದೆ. ಈ ದಿಸೆಯಲ್ಲಿ 'ಸರ್ವೇಶ್ವರ' ಎಂಬ ಅಂಕಿತದ ಇಲ್ಲಿಯ ಐದು ವಚನಗಳು ಗಮನಾರ್ಹವಾದ ಬೆಳವಣಿಗೆಯನ್ನು ಸೂಚಿಸುತ್ತವೆ.

ಒಂದು ದೃಷ್ಟಿಯಿಂದ ಈ ಸಂಗ್ರಹ ಕಲಸುಮೇಲೋಗರದಂತೆ ಕಂಡು ಬಂದರೂ ಕವಿಗೆ ತನ್ನ ಮುಂದಿನ ಹಾದಿಯನ್ನು ಕಂಡುಕೊಳ್ಳಲು ನೆರವಾಗಲು ವಿಶಿಷ್ಟ ರುಚಿ ಲಕ್ಷಣಗಳನ್ನೂ ಅದು ಅಲ್ಲಿಯೇ ಒಡಮೂಡಿಸಿದೆ.

"ಹಲವು ಹತ್ತು ಕೆರೆಯ ನೀರು ಕುಡಿದು
ಕೊನೆಗಿಲ್ಲಿ ಬಂದಿದ್ದೇನೆ"

ಎಂಬ ಕವಿಯೇ ಕೊನೆಯ ಪದ್ಯದಲ್ಲಿ ನುಡಿದದ್ದುಂಟು.

"ಅರಿವಿನಮರ ನೆಲೆಯರಸಿ ವಿಶ್ವಪರ್ಯಟನೆಗೆ
ಹೊರಡುತ್ತೇನೆ ಮತ್ತೆಮತ್ತೆ"

ಎಂಬ ವಿಶ್ವಾಸವನ್ನು ಹೊಂದಿರುವ ಈ ಕವಿಯ ಭವಿಷ್ಯ ಉಜ್ವಲಗೊಳ್ಳಲಿ ಎಂದು ಹಾರೈಸುತ್ತೇನೆ.

(೧೯೭೦)

# ೧೧

# ಜೀವ - ಜೇನು

ಪ್ರಾಥಮಿಕ ಶಾಲೆಯ ಶಿಕ್ಷಕರಾದ ಶ್ರೀ ಮಹಮ್ಮದ ಅಲಿ ಗೋಗೇರಿಯವರು ಕೆಲ ದಿನಗಳ ಹಿಂದೆ ನಮ್ಮ ಮನೆಗೆ ಬಂದು. ತಾವು ಕೆಲವು ಕವಿತೆಗಳನ್ನು ಬರೆದಿರುವುದಾಗಿಯೂ, ಬೇಕಾದರೆ ಒಂದೆರಡನ್ನು ಹಾಡಿ ತೋರಿಸುವದಾಗಿಯೂ ಬಹಳ ಸಂಕೋಚದಿಂದ ನುಡಿದರು. ನಾನು ಆಗಬಹುದು ಎಂದೆ. ಅವರಿಗೆ ಸ್ವಲ್ಪ ಧೈರ್ಯ ಬಂತೆಂದು ತೋರುತ್ತದೆ, ಒಂದೆರಡು ದೇಶಭಕ್ತಿಯ ಪದ್ಯಗಳನ್ನು ಹಾಡಿದರು. ಧ್ವನಿ ಇಂಪಾಗಿತ್ತು. ಜಾನಪದ ಮಟ್ಟದಲ್ಲಿ ಏನಾದರೂ ಬರೆದಿದ್ದೀರಾ? ಎಂದು ಕೇಳಿದೆ. ಅವುಗಳನ್ನು ಕೆಲವು ಬರೆದಿರುವುದಾಗಿ ಹೇಳಿದರು. ಅಂಥ ಮೂರು ನಾಲ್ಕು ಕವನಗಳನ್ನು ಜಾನಪದ ಧಾಟಿಯಲ್ಲಿ, ಲಾವಣಿ ಮಟ್ಟದಲ್ಲಿ ಹಾಡಿಸಿ ಕೇಳಿದೆ. ಈ ಕವಿತೆಗಳು ಮೊದಲಿನವುಗಳಿಗಿಂತ ಭಾವಪೂರ್ಣವಾಗಿದ್ದವು. ಭಾಷೆ ಹಾಗೂ ಛಂದಸ್ಸಿನ ದೃಷ್ಟಿಯಿಂದ ಒಟ್ಟಾಗಿ ಅವರ ಪದ್ಯಗಳಲ್ಲಿ ಕಂಡು ಬರುವ ಲೋಪದೋಷಗಳನ್ನು ಅವರಿಗೆ ತಿಳಿಸಿ ಹೇಳಿದೆ. ಅತ್ಯಂತ ವಿನಯದಿಂದ ಅವರು ಈ ದಿಶೆಯಲ್ಲಿ ಪರಿಶ್ರಮ ಪಡುವುದಾಗಿ ಹೇಳಿದರು.

ಈಗ 'ಜೀವ-ಜೇನು' ಎಂಬ ಹೆಸರಿನಲ್ಲಿ ಈ ಸಂಗ್ರಹವನ್ನು ಪ್ರಕಟಿಸಲು ಅವರು ಮುಂದಾಗಿದ್ದಾರೆ. ಗ್ರಾಮಾಂತರಗಳಲ್ಲಿ ನಡೆಯುವ ಶೈಕ್ಷಣಿಕ ಸಭೆ ಸಮ್ಮೇಳನಗಳಲ್ಲಿ ಈ ಕವಿತೆಗಳನ್ನು ಹಾಡಿದಾಗ ಅವು ಜನತೆಯ ಮೆಚ್ಚುಗೆ ಪಡೆದಿರುವುದಾಗಿಯೂ, ಅವರ ಶಿಕ್ಷಕ ಬಂಧುಗಳನೇಕರು ಈ ಸಂಗ್ರಹದ ಪ್ರಕಟಣೆಗೆ ಆತುರವಾಗಿರುವುದಾಗಿಯೂ ಹೇಳಿ, ಶ್ರೀ ಮಹಮ್ಮದ ಅಲಿಯವರು ಇದಕ್ಕೆ ಮುನ್ನುಡಿಯ ರೂಪದಲ್ಲಿ ಎರಡು ಮಾತು ಬರೆದು ಕೊಡಬೇಕೆಂದು ನನ್ನನ್ನು ಕೇಳಿಕೊಂಡಿದ್ದಾರೆ. ಒಂದು ಮಾತನ್ನು ಈ ಸಂಗ್ರಹದ ಒಟ್ಟು ಸ್ವರೂಪದ ಬಗ್ಗೆ ಈಗಾಗಲೇ ಹೇಳಿಯಾಗಿದೆ. ಈಗ ಇನ್ನೊಂದು ಮಾತು.

ತಾಳಿಯಿಲ್ಲದ ಭಾಗ್ಯವು
ತಾಳವಿಲ್ಲದ ಪದ್ಯವು
ಮೇಳವಿಲ್ಲದ ಸಂಗದಂತೆ ವಿರಸವಲ್ಲವೆ ಜೀವನ

ಎಂದು ಒಂದೆಡೆ ಇವರು ತಮ್ಮ ಒಲವನ್ನೂ, ಜೀವನದ ಚೆಲುವನ್ನು ಸೂಚಿಸಿದ್ದಾರೆ. 'ಹಳ್ಳಿಯ ಗರತಿ', 'ತರಕಾರಿ', 'ನಿನಗ್ಯಾಕ ಚಿಂತಿ' ಮೊದಲಾದ ಕವನಗಳಲ್ಲಿ ಹಳ್ಳಿಯ ಜೀವನದ ಚಿತ್ರಗಳು ಜಾನಪದ ಭಾವ-ಭಾಷೆಯಲ್ಲಿ ಸಹಜವಾಗಿ ಮೂಡಿ ನಿಂತಿವೆ. ಶಿಕ್ಷಣ ಸಂಪತ್ತು, ಕುಟುಂಬ ಯೋಜನೆಗಳ ಪ್ರಚಾರ, ಗಾಂಧಿ, ನೆಹರು ಮೊದಲಾದ ದೇಶದ ಧುರೀಣರನ್ನು ಕುರಿತು ಆದರ, ನಿಷ್ಠೆ, ಹೆಣ್ಣಿನ ಬಾಳಿನ ಬವಣೆ ಇತ್ಯಾದಿ ವಿಷಯಗಳ ಬಗೆಗೂ ಇಲ್ಲಿ ಕಥೆ ಮಾಡಿ, ಕವನ ಕಟ್ಟಿ ಹೇಳಲಾಗಿದೆ.

ದಟ್ಟಡಿಯನ್ನಿಟ್ಟು ನಡೆಯುವ ಮಗುವಿನ ಹೆಜ್ಜೆಗಳಂತೆ ಈ ಕವನಗಳಿಗೆ ತಮ್ಮದೇ ಆದ ಸೊಗಸಿದೆ. ಮಹಮ್ಮದ ಅಲಿಯವರ ಇಂಪಾದ ಹಾಡುಗಾರಿಕೆಯೊಡನೆ ಅವರ ಪದ್ಯಗಳ ಕಾವ್ಯಗುಣವೂ ಬೆಳೆದು ಹದಗೊಂಡು ಇನ್ನೂ ಉತ್ತಮವಾದ ಕಾವ್ಯರಚನೆ ಅವರಿಂದ ನಡೆಯುವಂತಾಗಲಿ ಎಂದು ಹಾರೈಸುತ್ತೇನೆ. (೧೯೭೦)

೧೨

## ಒಂದು ಗಳಿಗೆ

ಕನ್ನಡ ಕಾವ್ಯ ಪರಂಪರೆಯ ಸಾರವನ್ನು ಹೀರಿಕೊಂಡು ಅದರ ಇಂದಿನ ಧಾಟಿ-ಧೋರಣೆಯನ್ನು ಅನುಸರಿಸಿಯೂ ಅನುಕರಣವಾಗದಂತೆ ಬದುಕಿಗೆ ಹತ್ತಿರವಾದ ಅನುಭವವನ್ನು ಪ್ರಾಮಾಣಿಕ ಪರಿಶ್ರಮದಿಂದ ನಿಸ್ಸಂಕೋಚವಾಗಿ ನಿರೂಪಿಸುವ ಪ್ರಯತ್ನ ಈ ಕವನ ಸಂಗ್ರಹದಲ್ಲಿ ಕಂಡುಬರುತ್ತಿರುವುದು ತುಂಬ ಸಂತೋಷದ ಸಂಗತಿ. ಕಥೆ-ಕಾದಂಬರಿಗಳಂತೆ ಕಾವ್ಯ ಕ್ಷೇತ್ರದಲ್ಲಿ ಮಹಿಳೆಯರು ವಿಶೇಷ ಕೃಷಿ ಮಾಡದಿರುವ ಈ ಸಂದರ್ಭದಲ್ಲಿ ಶ್ರೀಮತಿ ಶೈಲಜಾ ಉಡುಚಣ ಅವರ ಕವನ ಸಂಗ್ರಹ ಬೆಳಕಿಗೆ ಬರುತ್ತಿರುವುದು ಒಂದು ಮಹತ್ವದ ಘಟನೆ ಎಂದು ನಾನು ಭಾವಿಸಿದ್ದೇನೆ. ಮಹಿಳೆಯರ ಸಾಹಿತ್ಯ ಸೃಷ್ಟಿಯನ್ನು ಒಂದು ಬಗೆಯ ಪ್ರತ್ಯೇಕತೆಯ ಭಾವನೆಯಿಂದ ಹಾಗೂ ಔದಾರ್ಯದ ದೃಷ್ಟಿಯಿಂದ ಕಾಣುವ ಕಾಲ ಈಗ ಮಾಯವಾಗುತ್ತಿರುವುದು ಒಂದು ಶುಭ ಸೂಚನೆಯೆಂದೇ ಹೇಳಬಹುದು. 'ಬದುಕನ್ನು ನೆನೆವ, ಧ್ಯಾನಿಸುವ ಆತ್ಮೀಯ ನಂಟ'ನ್ನು ಜೀವಕ್ಕೊದಗಿಸಲು ಹವಣಿಸುವ, ತನ್ನತನದ ಸೊಗಸನ್ನು, ಸೆಡವನ್ನು ಪಡೆದುಕೊಂಡ ಈ ಕೃತಿಯನ್ನು ಕಾವ್ಯ-ಪ್ರೇಮಿಗಳು ಸ್ವಾಗತಿಸುವರೆಂಬ ಭರವಸೆ ನನಗಿದೆ. ಆದರೆ ನನ್ನ ಮುನ್ನುಡಿಯ ಉದ್ದೇಶ ಇಲ್ಲಿ ಅದರ ವಿಮರ್ಶೆ ಮಾಡುವುದಲ್ಲ; ಇದನ್ನು ಪ್ರಕಟಿಸುವಲ್ಲಿ ಅವರು ತೋರಿಸಿರುವ ಅಧೈರ್ಯಕ್ಕೂ, ಸಂಕೋಚಕ್ಕೂ ಕಾರಣವಿಲ್ಲ ಎಂಬುದನ್ನು ತಿಳಿಸಲು ಎರಡು ಸೌಹಾರ್ದದ ಮಾತು, ಅಷ್ಟೆ. ಅದರಿಂದ ಈ ಕವಿತೆಗಳು ಅರ್ಥಪೂರ್ಣವಾದ ವಾಚನಕ್ಕೆ ನೆರವಾಗುವುದಾದರೆ ಇನ್ನೂ ಸಂತೋಷವೆ.

ಈ ಕವಿತೆಗಳ ವಸ್ತುವಿನಲ್ಲಿ ವೈವಿಧ್ಯವಿದೆ. ಭಾಷೆಯಲ್ಲಿ ಆಡುಮಾತಿನ ಜೀವಂತ ಸ್ಪರ್ಶವಿದೆ. ಭಾವಕ್ಕೆ ರೂಢಿಗತವಾದ ಛಂದಸ್ಸನ್ನು ಕೊಡವಿಕೊಂಡು ನಡೆಯುವ ಗತಿಯಿದೆ :

"ಅಂದು ಇತ್ತು
ಹಲವರ ತುತ್ತನುಂಡು
ತೃಪ್ತಿಗೊಳ್ಳುವ ಮನಸು
ಇಂದು ಬೆಳೆದು
ನನಗೆ ನಾನೇ ನಿರ್ಮಿಸಬೇಕು
ನನ್ನ ಲೋಕದ ಕನಸು"

ಎಂಬ ನಿಷ್ಠೆ ಇಲ್ಲಿಯ ರಚನೆಗಳಲ್ಲಿ ನಿಷ್ಠುರವಾಗಿ ಒಡಮೂಡಿದೆ. ಅನುಭವ ಕಾವ್ಯರೂಪವನ್ನು ತಾಳಿ ಹೊರಬರುವದು 'ಒಂದುಗಳಿಗೆ'ಯದಾಗಿದ್ದರೂ ಅಂಥ ಅಮೃತ ಗಳಿಗೆಗಳನ್ನು ಇಲ್ಲಿಯ ಚಿತ್ರ-ರೂಪಕ-ಸನ್ನಿವೇಶಗಳ ಬಂಧದಲ್ಲಿ ಹೊಳೆಯಿಸಲಾಗಿದೆ. 'ಏಕಷ್ಟು ಪ್ರತೀಕಗಳಿಗೆ ಪರದಾಟ?' ಎಂಬುದು ಇಂದಿನ ಕಾವ್ಯ ಸಂದರ್ಭಕ್ಕೆ ಅನ್ವಯಿಸಿರಲಿಕ್ಕಿಲ್ಲವಾದರೂ

"ಮುಚ್ಚಿದ ಚೆಲುವ ಇನಿತು ಇನಿತು
ನೋಡಿ ಸಹಿಸಿದ ಕಣ್ಣುಗಳಿಗೇಕೆ
ಭಗ್ಗನೆ ನಗ್ನತೆಯ ಬಣ್ಣ"

ಎನ್ನುವಲ್ಲಿ ತಮ್ಮ ಕಾವ್ಯ ದೃಷ್ಟಿಯನ್ನು ಸೂಚಿಸಿದ್ದಾರೆ. "ನಮಗಂತು ಬೆಲೆಬೇಕು, ನಾಣ್ಯ ಯಾವುದಾದರೇನು?" ಎಂಬ ಸರಳವಾದ ಸದುದ್ದೇಶವೂ ಇಲ್ಲಿ ವ್ಯಕ್ತಗೊಂಡಿದೆ. ಇತ್ತೀಚೆಗೆ ಪ್ರಕಟಗೊಳ್ಳುತ್ತಿರುವ ಹೊಸ ಪೀಳಿಗೆಯ ಕವಿಗಳ ಕವನ ಸಂಗ್ರಹವನ್ನು ಪರೀಕ್ಷಿಸಿದಾಗ ನವ್ಯಕಾವ್ಯಕ್ಕೂ ಹಲವಾರು ಕವಲುಗಳಿರುವುದು ಸ್ಪಷ್ಟವಾಗುತ್ತಿದೆ. ಹಾಗಿರುವುದೇ ಆ ಸಂಪ್ರದಾಯದ ಬೆಳವಣಿಗೆಗೂ ಕಾರಣವಾಗಬಲ್ಲದು.

'ದಾಹ', 'ನಡುವಣ ದಾರಿ', 'ಉಪ್ಪಿಲ್ಲ', 'ಒಂದುಗಳಿಗೆ', 'ನಮ್ಮಹಿಪ್ಪಿ', 'ಹೂವು-ಹುಲ್ಲು', 'ನನ್ನಲೀಲೆ', 'ಪ್ರೀತಿ', 'ಭಾವಗೀತೆ', 'ನಾನು ಮನುಷ್ಯ', 'ಹನಿ', 'ಮುತ್ತು-ರತ್ನ', 'ಭಾಷಣ' ಇವೇ ಮೊದಲಾದ ಇಲ್ಲಿಯ ಕವಿತೆಗಳು ಚಿತ್ರಕ ಶಕ್ತಿಯ ನಿರಾಡಂಬರ ಅಭಿವ್ಯಕ್ತಿಯ ಮೂಲಕ ಓದುಗರ ಗಮನವನ್ನು ಸೆಳೆಯಬಲ್ಲವು. ಶೈಲಿ ಕೆಲಮಟ್ಟಿಗೆ ಗದ್ಯಗಂಧಿಯಾಗಿ ತೋರಿದರೂ ಭಾವಸ್ಪಂದಿಯಾಗಿ ಮನಸ್ಸನ್ನು ಸೆರೆ ಹಿಡಿಯಬಲ್ಲದೆಂಬುದಕ್ಕೆ ಕೆಲವು ಸಾಲುಗಳನ್ನು ಇಲ್ಲಿ ಎತ್ತಿ ಹೇಳಬಹುದು.

"ಅಲ್ಲಿ ಚುಕ್ಕಿಗಳ ಕೋಲಾಹಲ
ಇಲ್ಲಿ ಧಗೆ ಧಗೆಯ ಗೊಂದಲ
ಈ ಬಾನಿಗಿಲ್ಲವೇ ಒಂದಿನಿತು
ತನ್ನದೆ ಆದ ಸವಿಯ ತಳಮಳ" (ನಡುವಣದಾರಿ)

"ಬತ್ತಲೆಯಾಗಿದ್ದ ಈ ಗಿಡಕ್ಕೆಷ್ಟು
ಬಡಿವಾರ
ನೋಡು ನೋಡುತ್ತಲೇ ಹಸಿರ ಸಿಂಗರ ಹೊತ್ತು
ಹೊನ್ನ ಹೊದಿಕೆಯನುಟ್ಟು
ನನ್ನ ಮುಂದೆ ಮಾಡುತ್ತಿದೆಯಲ್ಲ
ಮುರಕ !
ಬಯಲ ದಿನ್ನೆ ಬೋಳಾಗಿತ್ತು

ಇಂದಾಗಿದೆ ಹೊನ್ನ ಹಸಿರಲಿ ಮಿಂದ
ಯುವಕ" (ಒಂದುಗಳಿಗೆ)

"ಬೆಳೆದ ನೆಲ್ಲಿಯ ಮರ
ಎಲೆಗಳನ್ನೆಲ್ಲ ನಸ್ನತ್ತ ತೂರಿ
ಕಾಯಿ ಮುಗಿಲ ನೋಡುತ್ತಿದೆ.
ಕಾಯಿ ಕಿತ್ತು ಉಪ್ಪಿನ ಕಾಯಿ
ಮಾಡುವಾಸೆ.
ಉಪ್ಪು......?
ಇನ್ನೂ ಸಮುದ್ರದ ತಳದಲ್ಲಿಯೇ
ನಿದ್ರಿಸುತ್ತಿದೆ" (ಉಪ್ಪಿಲ್ಲ)

"ನೀ ತುಳಿದು ತಣಿದೆ ನಿನ್ನ
ಅವಜ್ಞೆಯ ಕಾಲುಗಳಿಂದ
ನಾಬೆಳೆದು ನಿಂತೆ ಹಾಲು ಚೀಪಿ
ನಿನ್ನ ಅಕ್ಷಯುಂಗುಟದಿಂದ" (ನಿನ್ನ ಲೀಲೆ)

ಭಾವದ ಉದ್ರೇಕವನ್ನು ಚಿಂತನೆಯಿಂದ ತಡೆಗಟ್ಟಿ ಅನುಭವದ ಹಾದಿಯಲ್ಲಿ ನಿಧಾನವಾಗಿ ಸಾಗುವ ನಡಿಗೆ ಈ ಕವಿತೆಗಳ ಒಂದು ಮುಖ್ಯ ಗುಣವಾಗಿದೆ. ಕುಸುರುಗೆಲಸದ ಕಲೆಗಾರಿಕೆಯನ್ನೂ, ಲಯಗಾರಿಕೆಯನ್ನೂ ಇಲ್ಲಿಯ ಕಾವ್ಯ ಶಿಲ್ಪ ಬಯಸುತ್ತಿರಬಹುದು. ಆದರೆ ಇಲ್ಲಿ ಮೂಡಿರುವ ಪ್ರತಿಮೆಗಳ ಮುಖದಲ್ಲಿ ತಮ್ಮದೇ ಆದ ಜೀವಂತ ಕಳೆಯಿದೆ. ಅಭಿವ್ಯಕ್ತಿ ಪ್ರಬುದ್ಧಗೊಂಡಂತೆ ಅದರ ಸತ್ವ ಇನ್ನೂ ಚೆನ್ನಾಗಿ ಗೋಚರಿಸಬಲ್ಲುದು.

ಹೀಗೆ ತಮ್ಮ ಪ್ರಥಮ ಸಂಗ್ರಹದಲ್ಲಿಯೇ ಒಳ್ಳೆಯ ಕಾವ್ಯಶಕ್ತಿಯನ್ನು ತೋರ್ಪಡಿಸಿರುವ ಈ ಕವಯಿತ್ರಿಯು ಕಾಲಕ್ರಮೇಣ ಇನ್ನೂ ಉತ್ತಮ ಕೃತಿಗಳನ್ನು ಕೊಡಬಲ್ಲರೆಂಬ ಭರವಸೆಯನ್ನು ಹುಟ್ಟಿಸಿದ್ದಾರೆ. ಅವರ ಕಾವ್ಯ ಜೀವನ ಫಲಪ್ರದವಾಗಲಿ ಎಂದು ಹಾರೈಸುತ್ತೇನೆ.

(೧೯೭೨)

## ೧೩

# ಮೊದಲು - ತೊದಲು

ಯಾವ ಕವಿಯೂ ಮೊದಲವಾರಿ ತನ್ನ ಕೃತಿಯನ್ನು ಜನತೆಯ ಮುಂದೆ ಇಡುವಾಗ ಸ್ವಲ್ಪ ಸಂಕೋಚಪಟ್ಟುಕೊಳ್ಳುವುದು ಸಹಜ. ಅವನ ಕಾವ್ಯದ ರೀತಿಯ ಬಗೆಗೆ ನಾಲ್ಕು ಪರಿಚಯದ ಮಾತುಗಳನ್ನು ಹೇಳಿ, ಕವಿ ಮತ್ತು ಓದುಗರ ನಡುವಿನ ತೆರೆಯನ್ನು ಸಹೃದಯರೊಬ್ಬರು ಓಸರಿಸಿದರೆ ಮುಂದಿನ ಕೆಲಸವನ್ನು ಹಗುರಗೊಳಿಸಿದಂತಾಗುತ್ತದೆ. ಗೆಳೆಯ ಡಾ. ವಾಮನ ಬೇಂದ್ರೆಯವರ ಪ್ರಥಮ ಕವನ ಸಂಗ್ರಹ 'ಮೊದಲು-ತೊದಲು' ಬಗೆಗೆ ಈ ಕಾರ್ಯವನ್ನು ನಾನು ಸಂತೋಷದಿಂದ ಮಾಡುತ್ತಿದ್ದೇನೆ.

೧೯೫೪-೭೨ರ ನಡುವಿನ ಇಪ್ಪತ್ತೆರಡು ಕವನಗಳನ್ನು ಇಲ್ಲಿ ಸಂಗ್ರಹಿಸಿಕೊಟ್ಟಿದ್ದಾರೆ. ಇವುಗಳಲ್ಲಿ ಎಲ್ಲೋ ಒಂದೆರಡು ಈ ಮೊದಲು ಪ್ರಕಟವಾಗಿರಬಹುದು. ಇಷ್ಟು ವರ್ಷ ಇವುಗಳನ್ನು ಒಳಗೆ ಇಟ್ಟುಕೊಂಡದ್ದೇ ಹೆಚ್ಚಿನದು. ವಾಮನನ ಗುರು ಅಂಬಿಕಾತನಯದತ್ತ ಎಂಬುದನ್ನು ಅದರ ಸಂಕೇತದೊಂದಿಗೆ ಕವಿ ಇದೀಗ ರಸಿಕರಿಗೆ ನಿವೇದಿಸಿದ್ದಾರೆ :

ಎಂದಿಂದೋ ಏನೋ ಆ ಮರಾ
ಅದರ ಕೆಳಗ ದತ್ತಾ, ವಾಮನಾ,
ಶ್ರೀ ಗುರುದತ್ತ ಕೊಡ್ತಾನ; ವಾಮನಾ ತಗೋತಾನ.

ಈ ಕೊಡು-ಕೊಳ್ಳುವಿಕೆ, ಸಂವಾದ ಈ ಕವಿತೆಗಳ ಮೂಲ ಪ್ರೇರಣೆ.

ದತ್ತ ಧ್ವನಿ ವಾಮನ ಗುಹಾ ಸೇರಿ
ಸಂ. ವಾ. ದ. ಕವನ ಆಗಿ ಕೇಳಸ್ತದ.

ನಿಜ, ಹೇಳಿದ್ದೂ ಕೇಳಿದ್ದೂ ಒಂದೇ ಆಗಿ ಸಂವಾದವಾಗಿದ್ದರೂ ಕೇಳೋ ಕಾಲಕ್ಕ ಏನೇನೋ ಹೊಳೆದರೂ ತಪ್ಪೇನು? ಆದರೆ ವಾದಿಸ್ಯಾಡುವದು ಈ ಕವಿಯ ಸ್ವಭಾವವಲ್ಲ. ಸಹದ ಸುಖ ಇವರಿಗೆ ತೀರ ಸಮೀಪ. ಮೊದಲನೆಯ ಕವಿತೆ ನಾನರಿಯದ ಪಕ್ಷಿ (೧೯೫೪)ಯಲ್ಲಿಯೇ, ಅವರಿಗರಿಯದಂತೆ ಕೊನೆಯ ಕವಿತೆ ಸಂವಾದ (೧೯೭೨)ದ ಸ್ವರೂಪಕ್ಕೆ ಸೂಚನೆಯಿದೆ :

ನಿನ್ನನ್ನು ಬಂಧಿಸಿ ಹಿಡಿದಿಡಬೇಕು
ಎನ್ನುತ ಎನ್ನುತ ಮುಂದಕೆ ಬಂದು
ನಾನೇ ಸೆರೆಯಲಿ ಸಿಕ್ಕಿರುವೆ.

‘ಬೀಜದಲ್ಲಿಯೇ ಗುಣಬೇಕು’ ಎನ್ನುವದು ಬರಬರುತ್ತ ಕವಿಗೆ ಸ್ಪಷ್ಟವಾಗುತ್ತ ಹೋಗಿದ್ದರೂ, ನಡೆಯುವವ ಅನುಸರಿಸುವವ ಇಬ್ಬರೂ ದುರ್ಲಭರಾಗಿದ್ದರೂ ಇಲ್ಲಿ ಸುಲಭವಾಗಿರುವದೇ ಇದಕ್ಕೆ ಕಾರಣವೆನಿಸುತ್ತದೆ.

‘ಕವಿ’ ಕವಿತೆ ಚಿಕ್ಕದರಲ್ಲಿಯೇ ಪಕ್ಕಪಡೆದು ಅರ್ಥದ ಆಗಸವನ್ನು ಹೊಕ್ಕು ಹಿಗ್ಗಿ ಬರುತ್ತದೆ. ‘ಸರಸ್ವತಿ’, ‘ಸೊಂಡಿಗಣಪ್ಪ’, ‘ಕಾಮಣ್ಣ’, ‘ರತಿದೇವಿ ಕೋಲು’ ಇವು ಮಕ್ಕಳಿಗೂ ಉಲ್ಲಾಸವನ್ನು ತರುವಂಥವು; ಕಲ್ಪನೆಯ ಚೌರಬೀಸಿ ಅವರ ಮನಸ್ಸನ್ನು ಚಿಗುರಿಸಬಲ್ಲವು, ‘ಸಾಧುಸಂತವಾಣಿ’, ‘ಬೆಳಕು’, ‘ಕಾಲಾಯ ತಸ್ಮೈನಮಃ’ ಕವಿತೆಗಳು ತಮ್ಮ ಮೊದಲ ಸಾಲುಗಳಲ್ಲಿಯೇ -

ಸಾಧು ಸಂತರ ವಾಣಿ ತಾನೇ ಮೋಡವಾಗಿದೆ ನಭದಲಿ

* * *

ನಾ ಎಲ್ಲಿ ಇರುವೆನೆಂಬರಿವು ಇಲ್ಲದೇ ಇದ್ದೆ ನಿದ್ದೆಯಲ್ಲಿ

* * *

ಬರುವ ಕಾಲ ಬಂದಾಗ ಬರಲಿ. ಬರಗಾಲ ಬರದೆ ಇರಲಿ

ಈ ಬಗೆಯ ಭಾವ-ಭಾಷೆ, ಧಾಟಿ-ಧೋರಣೆಗಳ ಹೊಂದಿಗೆಯಿಂದ ಒಂದು ಹಂತದಲ್ಲಿ ಓದುಗರನ್ನು ಸೆಳೆಯಬಲ್ಲವು, ‘ಭಸ್ಮಾಸುರನ ಕಥೆ’ ಲಾವಣಿ ಧಾಟಿಯಲ್ಲಿ ಮುಂಬರಿದರೆ ಇಷ್ಟೇ ದೀರ್ಘವಾದ ‘ಮಾನವ’ ಕವಿತೆಯೂ ಇದೇ ರೀತಿಯ ಸಮೀಪ ಸುಳಿದಾಡಿದೆ.

ತಾನೇ ಪ್ರಶ್ನೆ ಹಾಕಿ, ತಾನೇ ತಿಳಿಸಿಹೇಳುವ ಸ್ವಗತ ಸಂಭಾಷಣಾ ಶೈಲಿಯಲ್ಲಿ ಮೂಡಿಬಂದ ‘ಗೆಳೆತನ’, ‘ಈಶನಮನಾ’, ‘ವಿಶಾಲ ವೃಕ್ಷ’, ‘ಹಿಂದುಸ್ಥಾನ-ಚೀನ’, ‘ಕವಿತೆ’ - ಈ ಕವಿತೆಗಳು ಇನ್ನೊಂದು ಹಂತದಲ್ಲಿ ಮನಸ್ಸನ್ನು ಮುಟ್ಟಿ ತಟ್ಟುತ್ತವೆ. ಮಾತಿಗೆ ತಕ್ಕ ಭಾವವನ್ನು ಬುದ್ಧಿಯೊಡನೆ ದುಡಿಸುತ್ತ ಧ್ವನಿಯಲ್ಲಿ ಅಚ್ಚರಿಗೊಳಿಸುವ ‘ಹಿಂದುಸ್ಥಾನ-ಚೀನ’ ಈ ದಿಸೆಯಲ್ಲಿ ಹೆಚ್ಚು ಯಶಸ್ವಿಯಾದ ಕವಿತೆ.

ಕವಿತೆ ಎಂದರೆ ಶಬ್ದವೇ? ಅರ್ಥವೇ? ಅಲಂಕಾರವೇ?
ಛಂದವೇ? ರಸವೇ?
ಇದೆಲ್ಲಾ ಹೌದು; ಆದರೂ ಅಷ್ಟೇ ಅಲ್ಲ !

ಎನ್ನುವುದು ಇಲ್ಲಿ ಸ್ವತಃ ‘ಕವಿತೆ’ಯೇ ಹೇಳುತ್ತದೆ.

ಈ ಬಗೆಯ ಗುರು-ಶಿಷ್ಯ ಸಂವಾದದಲ್ಲಿ ತಂದೆ-ಮಕ್ಕಳ ಸಂಮೋದವೂ ಇದೆ. ಆದ್ದರಿಂದ ಮೊದಲು-ತೊದಲು ಇದೇ ಮೊದಲಲ್ಲ. ಇದೇ ಕಡೆಯಲ್ಲ. ಮುಂದಾದರೂ ಇದು ಬದಲು ಆಗುವಂಥದೇ. ಆದರೆ ಸದ್ಯಕ್ಕೆ ಇವರ ಬಿಟ್ಟು ಇವರು ಯಾರು? ಎಂದು ಕೇಳುವಂತಿಲ್ಲ. ಅಷ್ಟೇ.

ಇದು ಮುನ್ನುಡಿಯಲ್ಲ; ಈ ಕವಿತೆಗಳ ನಡೆನುಡಿಯನ್ನು ಕಂಡಾಗ ಮನಸ್ಸಿಗೆ ಹೊಳೆದ ಮಾತು. ಓದುಗರಿಗೂ ಇಷ್ಟೇ ಹೊಳೆಯಬೇಕೆಂದೇನೂ ಇಲ್ಲ. ಆದರೆ ಇಷ್ಟೂ ಹೊಳೆಯದೆ ಹೋಗಬಾರದು ಎನ್ನುವದು ಈ ಸಹೃದಯನ ಆಶೆ.

(೧೯೭೩)

## ೧೪

## ಹೊಳಿಸಾಲ ಬಳ್ಳಿ

"ನಾ ಇನ್ನ ಹೇಳಲಿ ಎಷ್ಟಾ
ಹೇಳಿದಷ್ಟೂ ತೀರದಷ್ಟಾ
ಯಾದವಾಡ ಊರ ಗಂಡ ಮೆಟ್ಟಾ
ಬಸವಣ್ಣನ ದಯಾ ಚಾಟಾ"

ವಿಜಾಪುರ ಜಿಲ್ಲೆಯ ಬೀಳಗಿ ಜ್ಯೂನಿಯರ್ ಕಾಲೇಜಿನಲ್ಲಿ ಅಧ್ಯಾಪಕರಾಗಿರುವ ಶ್ರೀರಾಮ ಇಟ್ಟಣ್ಣನವರ ಬೆಳಗಾಂವಿ ಜಿಲ್ಲೆಯ ಗೋಕಾಕ ತಾಲೂಕಿನವರು. ಆ ಭಾಗದ ಜನಪದ ಸತ್ವವನ್ನು ಸಹಜವಾಗಿಯೇ ಮೈಗೂಡಿಸಿಕೊಂಡು ಬೆಳೆದವರು; ಜಾನಪದ ಜೀವನ ಸೌಂದರ್ಯದಿಂದ ಕಾವ್ಯಸ್ಫೂರ್ತಿಯನ್ನು ಪಡೆದವರು. ಅವರು ಕಷ್ಟಪಟ್ಟು ಸಂಗ್ರಹಿಸಿರುವ ಹಲವಾರು ಮನೋಹರವಾದ ಲಾವಣಿಗಳ ಸಂಗ್ರಹ ಇಷ್ಟರಲ್ಲಿಯೇ ಪ್ರಕಟವಾಗಲಿದೆ. ಹಳ್ಳಿಗರ ಆಡುನುಡಿ ಹಾಗೂ ಅವರ ಹಾಡುಗಳ ನಾದ, ಲಯ, ಗತಿಗಳನ್ನು ಯಥಾಮತಿ ಅರಗಿಸಿಕೊಂಡು 'ಹೊಳಿಸಾಲ ಬಳ್ಳಿ'ಯ ಈ ಸ್ವತಂತ್ರ ಕವಿತೆಗಳಲ್ಲಿ ಅವರು ಜಾನಪದರ ಮೂಲಭೂತ ಗುಣ ಸ್ವಭಾವಗಳಿಗೆ ಧಕ್ಕೆಯೊದಗದಂತೆ ಸರವೆತ್ತಿ ಪಾಡಿದ್ದಾರೆ; ಅವುಗಳನ್ನು ಅದೇ ನಾದ, ಲಯ ವಿನ್ಯಾಸದಲ್ಲಿ ದನಿ ತೆಗೆದು ಮನಸ್ಸು ತುಂಬುವಂತೆ ಸ್ವತಃ ಹಾಡಬಲ್ಲವರೂ ಆಗಿದ್ದಾರೆ.

ಈ ಗೀತೆಗಳಲ್ಲಿ ಎಲ್ಲೋ ಒಂದೆರಡು ಕಡೆ ಆಧುನಿಕ ಪ್ರಜ್ಞೆಯ ಗಾಳಿ ಸೋಕಿದಂತೆನಿಸಿದರೂ ಒಟ್ಟಿನಲ್ಲಿ ಜನಪದ ಕಾವ್ಯ ಪರಂಪರೆಯಿಂದ ಇದು ಭಿನ್ನವಾದದ್ದಲ್ಲ. ಅಂದರೆ ಹಳ್ಳಿಯ ಜನಸಾಮಾನ್ಯರ ಜೀವನವನ್ನು, ಅವರ ಸಹಜವಾದ ಭಾವ-ಭಾವನೆಗಳನ್ನು ಅಲ್ಲಿಯ ವಾತಾವರಣಕ್ಕೆ ತಕ್ಕಂತೆ, ಅವರ ಮಾತಿನಲ್ಲಿಯೇ ಪ್ರಾಮಾಣಿಕವಾಗಿ ಇಲ್ಲಿ ಅಭಿವ್ಯಕ್ತಿಗೊಳಿಸಲಾಗಿದೆ. ಮಾನವನ ಮೂಲ ಗುಣ, ಸ್ವಭಾವ ಯಾವ ದೇಶದಲ್ಲಾಗಲಿ, ಕಾಲದಲ್ಲಾಗಲಿ ಒಂದೇ ಎಂಬುದು ನಿಜವಾದರೂ ಕಾಲಕಾಲಕ್ಕೆ ಅವರ ರೀತಿ ನಡತೆಗಳಲ್ಲಿ ಹಾಗೂ ಆಡುವ ಭಾಷೆಯಲ್ಲಿ ಬದಲಾವಣೆಯಾಗುತ್ತಿರುವುದು ಸಹಜ. ನಗರ ಜೀವನದ ಸಂಪರ್ಕವನ್ನು ಹೆಚ್ಚಾಗಿ ಪಡೆದಿರುವ ಈಗಿನ ಹಳ್ಳಿಗಳ ಜೀವನದ ಪರಿಸರ ಹಾಗೂ ಅಲ್ಲಿಯ ಸಮಾಜದ ಸ್ವರೂಪ ಬದಲಾಗುತ್ತಿದ್ದು ಜನಪದ ಕಾವ್ಯಪರಂಪರೆಗೆ ಅದರಿಂದ ಯಾವ ಪೋಷಣೆಯೂ ದೊರೆಯುವಂತಿಲ್ಲ. ಇಂಥ ಸಂದರ್ಭದಲ್ಲಿ ಈ ಕವಿ ಅದನ್ನು ತನ್ನ ಹಾಡುಗಳಲ್ಲಿ

ಹಿಡಿದಿಡಲು ಪ್ರಯತ್ನಿಸಿರುವದು ನಿಜಕ್ಕೂ ಪ್ರಶಂಸನೀಯ. ಆನಂದಕಂದರ 'ನಲ್‌ವಾಡು'ಗಳನ್ನು ಇವು ಅಲ್ಲಲ್ಲಿ ನೆನಪಿಗೆ ತಂದರೂ ಅವುಗಳ ಅನುಕರಣೆಯಾಗಿಲ್ಲ. ಹಳ್ಳಿಯ ಜೀವನದ ಅನುಭವ ಈ ಕವಿಗೆ ತನ್ನಷ್ಟಕ್ಕೆ ಗಟ್ಟಿಮುಟ್ಟಾಗಿರುವದೇ ಇದಕ್ಕೆ ಕಾರಣವೆನ್ನಬಹುದು.

(೨)

ಗಂಡು-ಹೆಣ್ಣಿನ ಕಾಮ-ಪ್ರೇಮ ಸಂಬಂಧದ ವಿವಿಧ ಸ್ವರೂಪ, ದಾಂಪತ್ಯದ ಸರಸ-ವಿರಸ ಇಲ್ಲಿನ ಹೆಚ್ಚಿನ ಕವಿತೆಗಳ ವಸ್ತು. ಜಾನಪದರ ಮಾತು, ಸ್ವಭಾವ, ಆಶೆ-ಆಕಾಂಕ್ಷೆಗಳ ಗಾಢವಾದ ಪರಿಚಯದಿಂದ ತಾದಾತ್ಮ್ಯ ಹೊಂದಿ ಅವರ ಭಾವಕ್ಕೆ ನುಡಿಗೊಟ್ಟಿರುವದು ಇಲ್ಲಿಯ ಮೇಲ್ಮೆ. ಕೆಲವು ಉದಾಹರಣೆಗಳನ್ನು ಮಾತ್ರ ಇಲ್ಲಿ ನೋಡಬಹುದು.

ಪ್ರೀತಿ ಸಹಜವಾಗಿ ಬೆಳೆದು ಬಂದಿದ್ದರೂ ಅದು ಸಫಲಗೊಳ್ಳಲು ಯಾವುದೊ ಆತಂಕವುಂಟಾಗಿದೆ-

ನಮ್ಮ ಪ್ರೀತಿ ಬೆಳ ಬೆಳದ ಬಂತ
ಹೊಳಿಸಾಲ ಬಳ್ಳಿ ಹಾಂಗ
ನಂದೂ ನಿಂದೂ ಪ್ರೀತಿ ಐತಿ ಖರೆ
ಕೂಡೂ ಬಗಿ ಹ್ಯಾಂಗ?

ಅದಕ್ಕೆ ಜಾತಿ, ಹಿರಿಯರು ಅಡ್ಡವಾಗಿರಬಹುದು. ಆದರೆ ಇವರ ಮನಸ್ಸು ಆಗಲೇ

ಪ್ರೀತಿ ಜಳಕಾ ಮಾಡಿ ನಮ್ಮನಾ
ಬಂಗಾರಾಗೇತಿ ss

ಇವರ ಹಂಬಲ, ಮನಸಿನ ಕುದಿ ಉಳಿದವರಿಗೆ ಹೇಗೆ ತಿಳಿಯಬೇಕು ?

ಹಗಲೂ ರಾತ್ರೀ ಎಷ್ಟು ಹಲಬಿದರೂ
ವೆರ್ತ ನಮ್ಮ ಮಾತ
ಮುದುಕರಿಗೆಲ್ಲಾ ಮೂರದ್ದೇಲಿ
ಪ್ರೀತಿ ಕಿಮ್ಮತ್ತ.

ಅದಕ್ಕಾಗಿ ತಡೆಯದೆ ಈ ಯುವಕ ತನ್ನ ಹುಡುಗಿಗೆ ಹೇಳಿ ಬಿಡುತ್ತಾನೆ.

ಉಟ್ಟಸೀರಿ ಮ್ಯಾಗ ಬಂದ್ರ ಬಿಡ ನೀ
ಕುಂತೀಯಾ ಮತ್ತ
ಊರಾವ್ರಿಗೆಲ್ಲಾ ತೋರ್ಸುನು ಒಮ್ಮೆ
ಗರದಿ ಗಮ್ಮತ್ತ

ಇದು ಗಂಡಿನ ಮನದ ಭಾವವಾದರೆ ಪ್ರೀತಿಸಿದ ಹೆಣ್ಣಿನ ಮನಸ್ಸು ಮನೆಯಲ್ಲಿ ಹೇಳಲಾರದೆ ಮನದಲ್ಲಿ ತಾಳಲಾರದೆ ತೊಳಲಾಡುತ್ತದೆ :

ಗೆಳತಿಯ ಅಣ್ಣನನ್ನು ಪ್ರೀತಿಸಿದ ಈಕೆ

ನೀರ ನೆವಾ ಮಾಡಿ ಕೆರಿ ದಾರ್‍ಯಾಗ
ಅವನ ಕೂಡತ್ತ್ವನ
ಹಿರಿಯರನ್ನವರ ನೆದುರ ತಪ್ಪಿಸಿ
ಮಾರಿ ನೋಡತಽನ

ಅವನ ರೂಪ ಕಣ್ಣು ಕುಕ್ಕುವಂತಹುದು :

ತುಂಬಿದೆದಿ ಮ್ಯಾಗ ಬೆಳ್ಳಿ ತಾಯಿತಾ
ಕಣ್ಣ ಕುಕ್ಕತೈತಿ
ಬಲಗೈಯಾಗ ಎಂಟೆಳಿ ಬಿರದಾ
ಹರೇ ಹೇಳತೈತಿ

ಮೆಚ್ಚಿದಾಕೆಯನ್ನು ತಂದು ಮದುವೆಯಾಗಿ ಸುಖದಿಂದ ಬಾಳಬೇಕೆಂದಿರುವ ಯುವಕನಿಗೆ ತಾಯಿಯ ಬಲದಿಂದ ಮಾವನ ಮಗಳೊಂದು 'ಯಮನ್ಹಾಂಗ' ಎದುರಿಗೆ ನಿಂತಿದೆ. ಪ್ರೀತಿಗೂ ಕಳ್ಳುಬಳ್ಳಿಗೂ ಘರ್ಷಣೆಯೊದಗುವದು ಹಳ್ಳಿಯ ಸಮಾಜದಲ್ಲಿ ಎದ್ದು ಕಾಣುವ ಅಂಶವಾಗಿದೆ.

ತೌರಿನ ಕಳ್ಳಂತ ತಮ್ಮನ ಮಗಳಂತ
ಅವ್ವ ಹೇಳೂದು ಎದಿ ಮಾತಾ
ಮೆಳ್ಳಗಣ್ಣಿನ ಮಗಳ ಸಾಗ್ಸಸಬೇಕಂತ
ಮಾವ ನಡಿಸ್ಯಾನು ಒಳಬೇತಾ

ಯುವಕನಿಗೆ ಕೊನೆಗೆ ಅನಿಸುತ್ತದೆ :

ಒಲ್ಲದ ಮದುವೀಗೆ ಎಲ್ಲಾರ ಒತ್ತಾಯ
ಗಂಟ ಬಿದ್ದತಿ ಇದಿಮಾಯಿ
ಈ ಪರಿ ಮದಿವ್ಯಾಗಿ ಸುರಕೊಳುದೇನೈತಿ
ಸನ್ಯಾಸಿ ಆಗೂದು ಬೇಸೈತಿ

ಊರ ಹುಡಿಗೆಯರೆಲ್ಲ ಮನಸೋತರೂ ಬಲಿಬೀಳದ ಬಂಟ. ಕಂಡವರಿಗೆಲ್ಲ ಕಣ್ಣು ಹೊಡೆಯುವ ಹೊಲಸು ಚಾಳಿಯ ಹೆಣ್ಣು, ಹೊಲದಲ್ಲಿ ಬಿಂಕದಿಂದ ಹಕ್ಕಿ ಕಾಯುವ ಹುಡುಗಿ, ನಿಶ್ಚಯವಾದ ಮೇಲೆ ಮದುವೆಗೇಕೆ ತಡವೆಂದು ಚಡಪಡಿಸುವ ಯುವಕ, ಅತ್ತೂ ಇತ್ತೂ ಕೂಡೆ ಹುಬ್ಬು ಹಾರಿಸುತ್ತ ಗೆಳೆಯರಿಬ್ಬರ ಗೆಳೆತನಕ್ಕೆ ಭಂಗ ತಂದ ಹಾಳ ಮಾರಿಯ ಹುಡುಗಿ- ಇವರೆಲ್ಲರ ವ್ಯಕ್ತಿ ಸ್ವಭಾವ ಚಿತ್ರಣ ಇನ್ನು ಕೆಲವು ಪದ್ಯಗಳಲ್ಲಿ ತುಂಬಿಕೊಂಡು ಬಂದಿದೆ.

ಗೊಂಬೆಯಂಥ ಮಗಳು, ಕುರುಡಿಯಲ್ಲ, ಕುಂಟಿಯಲ್ಲ. ಆದರೂ ಇನ್ನೂ ಕಂಕಣ ಬಲ ಕೂಡಿ ಬಂದಿಲ್ಲ. ಇದು ತಂದೆತಾಯಿಗಳ ಮನಸ್ಸಿನಲ್ಲಿ ಕಟಿಯುತ್ತದೆ.

ಒಗತಾನ ಬಂದಿಲ್ಲ, ಮಗಳೀಗಿ ಮದಿವಿಲ್ಲ
ಹಗಲೆಲ್ಲಾ ಕಟಿತ್ತ್ಯತಿ ಮನದಾಗ
ತುಂಬೇತಿ ಹದನಾರ, ಈಗೊಳೆ ಹರೆಬಾರ
ನನ ಮಗಳ ಕುಂತಾಳ ಎದಿಮ್ಯಾಗ.

ಇನ್ನು ಹಳ್ಳಿಯ ಜನರ ದಾಂಪತ್ಯದ ಕೆಲವು ಚಿತ್ರಗಳನ್ನು ಈಗ ನೋಡಬಹುದು. ತೌರಿಗೆ ಹೋದ ಹೆಣ್ಣು ಜಾತ್ರೆಗೆ ಬರುತ್ತೇನೆಂದು ಹೇಳಿದ ನಲ್ಲನ ದಾರಿ ಕಾಯುತ್ತಿದ್ದಾಳೆ -

ಎಂಟು ದಿನಾ ಆತ ತೌರಿಗೆ ಬಂದ ಬರೇ ಅವರ ಕನಸ
ಒಂಟಿಯಾಗಿ ನಾ ಕುಂತಾಗೆಲ್ಲಾ ನೆನಸತೈತಿ ಮನಸ
ಹೊರಟ ಬರುವಾಗಿನ ತುಂಟ ನಗಿಯ ಆ ಮತ್ಹ್ಯಾಂಗ ಮರತ್ಯನ
ಹುಡಗಿ ಜಾತ್ರಿಗಿ ಬರತ್ಯನ

ಮದುವೆಯಾಗಿ ಗಂಡನಮನೆಗೆ ಬಾಳುವೆ ಮಾಡಲು ಬಂದು ತಿಂಗಳಾಗಿದೆ. ಇವಳು 'ಗುಣ ರೂಪದಾಗ ಸಾವಿತ್ರಿಹಾಂಗ', ಏನೆಲ್ಲ ಇದೆ. ಚಿಂತೆಯೇ ಇಲ್ಲ ಎನಿಸಬಹುದು ಹೊರಗೆ; ಆದರೆ ತನ್ನ ದೊರೆಯ ಸುತ್ತಮುತ್ತ ಹಾರಾಡುವ ಪಾತರಗಿತ್ತಿಗಳ ಬಗ್ಗೆ ಆಕೆಗೆ ಒಳಗೊಳಗೇ ಚಿಂತೆ. ಅದಕ್ಕಾಗಿ ಊರದೇವರನ್ನು ಆಕೆ ಬೇಡಿಕೊಳ್ಳುತ್ತಾಳೆ :

ನನ್ನ ರಾಯ ರಾಮನ್ಹಾಂಗ ಇದ್ದರೂ
ಮನಸಂಬುದು ಮಂಗ;
ಯಾವ ಯಾಳೇಕ ಏನಾದೀತೊ
ಅದನ ಹೇಳುದ್ಹ್ಯಾಂಗ ?
ಊರದೊರಿ ನೀ ಕಾಯೊ ಮಾರುತಿ
ನಿನ್ನ ಮಗಳ ಬದಕ್ಯ

ದಿನಗಳೆದಂತೆ ಸಂಸಾರದ ಕಷ್ಟವನ್ನು ಕರಗಿಸಲು ಗಂಡ-ಹೆಂಡಿರು ಎಳೆ ಹರೆಯದ ನೆನಪಿನ ಬುತ್ತಿಯನ್ನು ಬಿಚ್ಚಿ

ಪರಕಾರದಾಗಿನ ಕೊಬರಿ ಬೆಲ್ಲಾ
ಹಾಕತಿದ್ದಿ ನನ್ ಟೊಪಿಗ್ಯಾಗೆಲ್ಲಾ
ಏನ ಕೊಟ್ಟರೂ ನನಗ್ಯ ಎಲ್ಲಾ

ಹೀಗೆ ಒಂದೊಂದೇ ನೆನಪಿನ ಸವಿ ಮನಸ್ಸನ್ನು ಸವಿಗೊಳಿಸಿ ಸಂಸಾರದ ಭಾರವನ್ನು ಹಗುರುಗೊಳಿಸುತ್ತದೆ.

ಸೊಸೆ ಮನೆಗೆ ಬಂದ ಒಂದು ವರುಷದಲ್ಲಿ ಮಗ ಬೇರೆಯಾದ. ಅತ್ತೆಯೆಂದರೆ ಕಾಸಿನ ಕಿಮ್ಮತ್ತೂ ಕೊಡದೆ ಸೊಸೆ ತುತ್ತು ಕೂಳಿಗೂ ಹಂಗಿಸುತ್ತಾಳೆ. ಅವಳ ಕೊರಗನ್ನು ಯಾರು ಕೇಳುವವರು?

ಮಗಾ ಅಂತ ಸಾಗರ ಬಿದ್ದೆರ
ಮಾರಿ ತಿರುವತಾನ
ಅವ್ವ ಅನ್ನುದು ಮರತ್ಹೋಗೀಗ
ಮುದುಕಿ ಅಂತಾನ

ಇವರ ರೀತಿಯನ್ನು ಹಿರಿಯರಿಗೆ ಹೇಳಿದರೆ ಈಕೆಗೆ ಅರವು-ಮರುವು ಎಂದು ಬಿಡುತ್ತಾರೆ. 'ಯಾರಿಗಂದರ ಏನಾಗೂದು ನನ್ನ ದೈವ ಕೆಟ್ಟ' ಎಂದು ಕೊಳ್ಳುತ್ತಾಳೆ ತಾಯಿ.

ತನ್ನ ಗಂಡ ತಿರಸೆಟ್ಟಿ, ಎಡವಟ್ಟ; ಹಗಲೆಲ್ಲಾ ಮೂಲಿಗ್ಹ್ಯಾಕಿ ಹೊಡೆಯುತ್ತಾನೆ. ದಿನಾ ಬೆಳಗು ಅವನ ಕೈಯೊಳಗೆ ಸತ್ತು ಹುಟ್ಟಿ ಬರುತ್ತಾಳೆ. ಮಂದಿಹಾಂಗ ಅರಿವೆ ತೊಟ್ಟು ಚೆಂದದಿಂದ ತಿರುಗುವವನೂ ಅವನಲ್ಲ. ಇಷ್ಟಿದ್ದರೂ ಅವನ ದಿಟ್ಟತನ, ಗಂಡು ಗಾಡಿಯನ್ನು ಮೆಚ್ಚಿದ್ದಾಳೆ. ಆದ್ದರಿಂದಲೇ

ಇದ್ದರ ಇರಲೇಳ ಅಂವ ಪಾಡ
ಏನಂದ್ರು ಅಳಬುರಕ ಗಂಡ ಬ್ಯಾಡ

ಎಂದು ಸಮಾಧಾನ ತಾಳುತ್ತಾಳೆ.

ತನ್ನ ಗಂಡ ಸೂಳೆಯ ಸಹವಾಸ ಮಾಡಿದ್ದಕ್ಕೆ ಇನ್ನೊಬ್ಬ ಗರತಿ 'ಎಂಜಲ ಎಲಿಮ್ಯಾಗ ನೆಬ್ಯಾಕ' ಎಂದು ತನ್ನ ಬಾಳು ನಗೆಪಾಟಲಾದದ್ದಕ್ಕೆ ಮರುಗಿ ತಿಳಿ ಹೇಳುತ್ತಾಳೆ:

ಸೆರೆ ಸೂಳಿ ಸವಾಸಾ ಇದ್ದವರ ಕೈತುತ್ತ
ನಮಗ್ಯಾಕ ಮುಗಲುದ್ದ ಬಡಿವಾರ
ಬಡವರಿಗ್ಯಾತಕ ಹೆಡಗಿ ಜಾತರಿ ಮಾತ
ಮಾರ ಬೇಕಾದೀತ ಮನಿಮಾರ

ಬೀಗರು ಬಿಜ್ಜರು ಮನೆಗೆ ಬಂದಾಗ ಮರ್ಯಾದೆ ಬರುವ ಹಾಗೆ ದಂಪತಿಗಳು ಹೇಗೆ ನಡೆದುಕೊಳ್ಳಬೇಕೆಂಬುದನ್ನು 'ನಾನು ನೀನು ಗಂಡಾ ಹೆಂಡತಿ' ಪದ್ಯ ಸೊಗಸಾಗಿ ನಿರೂಪಿಸುತ್ತದೆ. 'ಹಸಿ ಕಟಿಗಿ ತುಂಡ' ಎಂಬ ಇನ್ನೊಂದು ಕವಿತೆಯಲ್ಲಿ ಚಂಡಾಳಿ ಹೆಂಡತಿಯನ್ನು ಕಟ್ಟಿಕೊಂಡು ಒದ್ದಾಡುವ ಗಂಡಸಿನ ಆತ್ಮನಿವೇದನೆ ಇದೆ :

ನಾ ಹೆಂತಾ ಗಂಡ್ಸ
ನಿನಗ ಹಸ್ಕಿ ಕಟಿಗಿ ತುಂಡ
ಯಾವಾಗಿದ್ದರು ನಿನ ದರಬಾರಾ
ನೀ ನನಗಂತಿ ಐನನ ಸೂರಾ
ಗಂಡಸಾಗಿ ನಾ ಈ ಹಣೆಬಾರಾ
ಇಡಲ್ಯ್ಯಾಂಗ ಮೀಸಿ?
ನೋಡಿ ನಗತ್ಸತೀಗ ಊರಂತೂರಾ
ನಿಂದ್ಸ ನೀ ನಡಿಸಿ

ಹೀಗೆ ಆರು ನುಡಿಗಳಲ್ಲಿ ಕುಡಿವರಿದಿರುವ ಈ ಪದ್ಯ ಭಾವ-ಭಾಷೆಗಳ ಹದವಾದ ಕಸುವಿನ ಬೆಸುಗೆಯಿಂದ ಉದ್ದಕ್ಕೂ ಪರಿಣಾಮಕಾರಿಯಾಗಿ ಸಾರ್ಥಕವಾಗಿ ಮೂಡಿ ಬಂದಿದೆ. ಹಾಗೆಯೇ ಗಂಡ-ಹೆಂಡಿರ ಸಿಟ್ಟು ಸೆಡುವಿನ ಚಿತ್ರ 'ಪಂಚಮಿ ಎರುವಾತ' ಪದ್ಯದ ಸಂವಾದರೂಪದಲ್ಲಿ ಕಳೆಗೊಂಡು ನಿಂತಿದೆ.

ಮೇಲೆ ಕಾಣಿಸಿದ ಉದಾಹರಣೆಗಳಷ್ಟೇ ಈ ಸಂಗ್ರಹವಲ್ಲಿ ವಿಶಿಷ್ಟವಾದವುಗಳೆಂದು ಇದರರ್ಥವಲ್ಲ. ಇಡಿಯ ಪದ್ಯಗಳನ್ನು ನೋಡಿದಾಗಲೇ ಅವುಗಳ ಸೊಗಸು ಮನದಟ್ಟಾಗುವಂಥದು. ಭಾವ ಎಲ್ಲೋ ಒಂದೆಡೆ ಕೂಡಿ ಬೀಳದೆ ಇಲ್ಲವೆ ಮೊಟಕಾಗದೆ ಕವಿತೆಯ ಕೊನೆಯವರೆಗೂ ಬೆಳೆಯುತ್ತ ಹೋಗುವುದು ಈ ಕವಿತೆಗಳ ವಿಶೇಷ ಗುಣವಾಗಿದೆ.

ಸಂಗ್ರಹದ ಕೊನೆಯಲ್ಲಿರುವ 'ಬರಗಾಲ ಲಾವಣಿ' ಈಚೆಗೆ ನಮ್ಮ ನಾಡಿಗೊದಗಿದ ಭೀಕರ ಬರಗಾಲದ ಬವಣೆಯನ್ನು ಎದೆ ಕರುಗುವಂತೆ ಚಿತ್ರಿಸುತ್ತದೆ. ಭೂಮಿಯನ್ನೇ ನೆಚ್ಚಿಗೊಂಡಿದ್ದ ಒಕ್ಕಲು ಮಕ್ಕಳು ಅನ್ನಾನ್ನಗತಿಕರಾಗಿ ತಮ್ಮ ತಮ್ಮ ಊರುಗಳನ್ನೇ ಬಿಟ್ಟು ಗುಳೇ ಹೊರಡಬೇಕಾಗಿ ಬಂದ ಪ್ರಸಂಗವನ್ನು ಶಕ್ತಿಯುತವಾಗಿ, ಕಣ್ಣಿಗೆ ಕಟ್ಟುವಂತೆ, ಹೃದಯಕ್ಕೆ ತಟ್ಟುವಂತೆ ಈ ಲಾವಣಿ ಬಣ್ಣಿಸುತ್ತದೆ. ಸನ್ನಿವೇಶಗಳ ನಾಟಕೀಯತೆಗೆ ಪುಟಗೊಟ್ಟು ಚಾಲ, ಕೂಡಪಲ್ಲಗಳು ಮೇಳವಿಸಿ ನಿರೂಪಣೆಗೆ ತಕ್ಕ ನುಡಿಗಟ್ಟನ್ನೂ, ಧಾಟಿಗೆ ಒಂದು ಹಿಡಿತವನ್ನೂ ತಂದು ಈ ದೇಶಿ ಛಂದದ ರಸಭಾಗ್ಯವನ್ನು ಹೆಚ್ಚಿಸಿವೆ. ಈ ಸಂಗ್ರಹದ ಉಳಿದ ಕವಿತೆಗಳೆಲ್ಲ ಒಂದು ತೂಕವಾದರೆ ಈ ಲಾವಣಿ ಹಾಡಿನದೇ ಒಂದು ತೂಕವಾಗಿ ಕವಿಯ ಪಳಗಿದ ಕೈಯನ್ನು ಕಾಣುತ್ತೇವೆ.

ಈ ಕವಿಯ ಮುಂದಿನ ಬೆಳವಣಿಗೆಯ ಬಗ್ಗೆ ಈಗಲೇ ಏನನ್ನೂ ಹೇಳಬರುವಂತಿಲ್ಲ. ಆದರೂ ಅದು ಈ ಜಾನಪದ ಪರಂಪರೆಯ ಯಥಾರ್ಥತೆಯನ್ನು ಕಾಯುವದರಲ್ಲಿರದೆ ಅದನ್ನು ಆಧುನಿಕ ಪ್ರಜ್ಞೆಗೆ ಒಗ್ಗಿಸಿ ಮೇಳವಿಸಿಕೊಳ್ಳುವದರಲ್ಲಿದೆ ಎಂದು ಮಾತ್ರ ಸೂಚಿಸಿ ಅವರಿಗೆ ಶುಭ ಕೋರುತ್ತೇನೆ.

(೧೯೭೩)

## ೧೫

## ಚಿಗಳಿ

ಕಳೆದ ಎರಡು ದಶಕಗಳಿಂದ ಕನ್ನಡ ಕಾವ್ಯ ಹೊಸತೊಂದು ಧಾಟಿ ಧೋರಣೆಯನ್ನು ರೂಪಿಸಿಕೊಂಡು ವಿಶಿಷ್ಟ ಜೀವನದೃಷ್ಟಿಯಿಂದ ತನ್ನ ಸತ್ವವನ್ನು ಹೊರಸೂಸುತ್ತ ಇನ್ನೂ ಮಹತ್ವದ ರಚನಾತ್ಮಕ ಕೃತಿಯಲ್ಲಿ ತೊಡಗಿರುವಂತೆಯೇ ಮೂರನೆಯ ದಶಕದ ಹೊಸ ಪೀಳಿಗೆಯನ್ನು ಅದು ತನ್ನೆಡೆಗೆ ಬರಮಾಡಿಕೊಳ್ಳುತ್ತಿದೆ. ಕಿವಿ ಗಡಚಿಕ್ಕುವ ಯಂತ್ರಾಗಾರದಲ್ಲಿ ಹೊಕ್ಕು ಹೊರಬಂದಾಗ ಮನಸ್ಸಿನ ಬಿಗಿತ ಸಡಿಲಿ ಹಗುರಾದಂತೆ, ಯಾವುದೊ ಬೌದ್ಧಿಕ ಕಸರತ್ತಿನ ಗರಡಿಮನೆಯಲ್ಲಿ ಗುದ್ದಾಡಿ ಹೊರಗೆ ಸುಳಿಗಾಳಿಗೆ ಬಂದು ಸಹಜವಾಗಿ ಉಸಿರಾಡಿಸಿದಂತೆ, ಕಾಯಿಸಿ ಕಾಯಿಸಿ ಹೊತ್ತಿ ಹೊಗೆಸುತ್ತಿದ್ದ ಹಾಲು ಖೀರಿನ ಬದಲು ಸೊಗಸಾದ ಸುವಾಸನೆಯ ಚಹಾ ಕುಡಿದಂತೆ ಹೊಸ ಪೀಳಿಗೆಯ ಕೆಲವು ಕವಿಗಳ ಕವಿತೆಗಳನ್ನೋದಿದಾಗ ಮನಸ್ಸಿಗೆ ಅವಶ್ಯವಾದ ಉತ್ಸಾಹ ಉಲ್ಲಾಸ ಒಡಮೂಡುತ್ತಿದೆ. ಇದೇ ಅದರ ಹೆಚ್ಚುಗಾರಿಕೆಯೆಂದೇನೂ ಅರ್ಥವಲ್ಲ; ಇದೂ ಒಂದು ಸಹಜವಾದ ಅನಿಸಿಕೆ, ಅಷ್ಟೇ.

ಕರ್ನಾಟಕ ವಿಶ್ವವಿದ್ಯಾಲಯದ ಸ್ನಾತಕೋತ್ತರ ಇಂಗ್ಲೀಷ ವಿಭಾಗದಲ್ಲಿ ಓದುತ್ತಿರುವ ಸಿದ್ಧಲಿಂಗ ದೇಸಾಯಿ ಈ ಹೊಸ ಪೀಳಿಗೆಯ ಒಬ್ಬ ಸುಟಿಯಾದ ಕವಿ. ಧಾರವಾಡಕ್ಕೆ ತೀರ ಸಮೀಪದ ಹಳ್ಳಿಯಾದ ಮುಮ್ಮಿಗಟ್ಟಿಯಲ್ಲಿ ಹುಟ್ಟಿ ಬೆಳೆದ ಇವರು ಜನಪದ ಪರಿಸರ ಮತ್ತು ದೇಸೀಯ ಪ್ರಭಾವವನ್ನು ಅರಗಿಸಿಕೊಂಡಿರುವಂತೆಯೇ ಧಾರವಾಡದ ಸಾಂಸ್ಕೃತಿಕ ಜೀವನದ ಸಂಪರ್ಕವನ್ನೂ ಪಡೆದವರಾಗಿದ್ದಾರೆ. ಜನಪದ ಸತ್ವವನ್ನು ತಮ್ಮ ಶಕ್ತಿಗೆ ತಕ್ಕಂತೆ ಭಾಷೆಯ ಮಟ್ಟಿಗೆ ಮೈಗೂಡಿಸಿಕೊಂಡ ಇವರ ಕಾವ್ಯ ಸಂವೇದನೆಯಲ್ಲೂ ಅದರ ಛಾಯೆಯನ್ನು ಉಳಿಸಿಕೊಂಡು, ಅನುಭವದ ಸೂಕ್ಷ್ಮತೆ ಹಾಗೂ ಪ್ರಾಮಾಣಿಕತೆಯನ್ನು ಪ್ರತಿಬಿಂಬಿಸುತ್ತ ವಿನಯದ ಜೊತೆಯಲ್ಲಿಯೇ ನಿಸ್ಸಂಕೋಚವಾದ ಅಭಿವ್ಯಕ್ತಿಯ ಕ್ರಮವನ್ನು ಪಡೆದಿದೆ. ಮೊದಲ ಸಂಕಲನದಲ್ಲಿಯೇ ಇವರ ಕಾವ್ಯ ಹುಣಸೆಯ ಚಿಗುರಿನ ಹುಳಿಯೊಗರನ್ನು ಮುರಿದು ಹಣ್ಣಿನ ಹುಳಿ-ಮಧುರವನ್ನು ಪಡೆಯುವ ಪ್ರಯತ್ನದಲ್ಲಿ ಸಾಗಿರುವುದು ಭರವಸೆಯನ್ನು ಹುಟ್ಟಿಸುವಂತಿದೆ. ಉತ್ತರ ಕರ್ನಾಟಕದ (ವಿಶೇಷವಾಗಿ) ಜನಪದ ಸತ್ವ ಹೀಗೆ ಎಲ್ಲ ತಲೆಮಾರಿನ ಕವಿಗಳಿಗೂ ಜೀವಂತ ಸೆಲೆಯಾಗಿ ಕವಿಚೈತನ್ಯಕ್ಕೆ ಕಸುವನ್ನೊದಗಿಸುತ್ತಿರುವುದು ಗಮನಾರ್ಹವಾಗಿದೆ.

ಈ ಸಂಗ್ರಹದಲ್ಲಿ ಬಂದಿರುವ ಕವಿತೆಗಳನ್ನೀಗ ಅವಲೋಕಿಸೋಣ: ಕೊನೆಯ ಆರು ಕವಿತೆಗಳು ಹಾಡಿನ ಮಟ್ಟದಲ್ಲಿ ಕೆಲಮಟ್ಟಿಗೆ ಆಕರ್ಷಕವೆನಿಸಿದರೂ ಅವುಗಳಲ್ಲಿ ಎರಡು

ಮಾತ್ರ ಗಮನಾರ್ಹವಾಗಿವೆ. 'ಉಂಡನೀರು ಉಗುಳುದರಾಗ' ಜನಪದ ಪರಿಸರವನ್ನು ಪುನಃ ಸೃಷ್ಟಿಸಿ ತೋರಿಸುವ ಸಾಮರ್ಥ್ಯವನ್ನು ಪಡೆದಿದೆ :

ಆಡೂ ಹುಡುಗನ ಗಲ್ಲಾ ಕಡದು
ಆಡಸಾಕಂತ ಪಡಸಾಲಿಗಿ ಬಾರ್‍
ಸವತಿ ಬೀಜಕ ಉಳ್ಳೀ ನಾದಿ
ಕಟಿಯಾಕಂತ ಕಟ್ಟಿಗಿ ಬಾರ್‍

ಹೀಗೆ ಒಂದೊಂದು ನುಡಿಯೂ ತಕ್ಕ ವಾತಾವರಣದಲ್ಲಿ ಭಾವವನ್ನು ಬಲಗೊಳಿಸುತ್ತದೆ. 'ತ್ಯಾಪಿ ಪ್ರೀತೀನ ಬ್ಯಾಡ' ಕವಿತೆಯ ಜನಪದ ನುಡಿಕಟ್ಟು, ಪ್ರತಿಮೆಗಳೇ ಅದರ ಜೀವಂತಿಕೆಗೂ ಅರ್ಥವಂತಿಕೆಗೂ ನೆರವಾಗಿದೆ :

ಮುಳ್ಳು ಕಂಟಿಗಿ ಸಿಕ್ಕ ಮಲ್ಲ ಧೋತರದಂಗ
ಹರದ ಹೋತ ನನ ಮನಸ ಚೂರ ಚೂರಾ
ಇನ್ನ ತ್ಯಾಪಿ ಪ್ರೀತಿನ ಬ್ಯಾಡಾ ಇರುನಿಬ್ರು
ಆದಷ್ಟು ದೂರಕ್ಕ ದೂರ ದೂರಾ

'ಕ್ಯಾಲೆಂಡರ', 'ಮದುವ್ಯಾದಮ್ಯಾಲೆ', 'ಇದು ನನ್ನ ಸಮಸ್ಯೆ', 'ಸ್ಟ್ರೈಕು', 'ಪೋಸ್ಟರುಗಳು'- ಇವು ಇನ್ನೊಂದು ಬಗೆಯ ಚುರುಕಾದ ಕವನಗಳು. ಒಂದು ಘಟನೆಯನ್ನೊ, ಅನಿಸಿಕೆಯನ್ನೊ, ವಿಚಾರವನ್ನೊ, ಅನುಭವವಾಗಿ ನಿರೂಪಿಸುವ ಒಳ್ಳೆಯ ಪ್ರಯತ್ನಗಳು. ಕೆಲವೆಡೆ ಬಂಧ ಸಡಿಲವೆನಿಸಿದರೂ ಭಾವವನ್ನು ಒಂದು ನೆಲೆಗೆ ಮುಟ್ಟಿಸುವಲ್ಲಿ ಕಾಣುವ ತಿರುವು ಅನಿರೀಕ್ಷಿತ ಸೊಗಸಿಗೆ ಕಾರಣವಾಗುತ್ತದೆ. ಭೂತದ ನೆರಳನ್ನು ವರ್ತಮಾನಕ್ಕೆ ಚಾಚುವ 'ಪೋಸ್ಟರುಗಳು' ಕವಿತೆ -

ಇಂಟರವೆಲ್ಲಿಗೇನೆ ಯಾರು ಹೊರಗೆ ಬರುವ
ಸಾಹಸ ಮಾಡುತ್ತಾರೆ?
ಬಂದರೂ ಎಲ್ಲಿಂದ ಎಲ್ಲಿಗೆ?

ಎಂದು ಕೊನೆಗೊಳ್ಳುವ ಮಾತಿನ ಅರ್ಥಪೂರ್ಣತೆಗೆ ಹಿನ್ನಲೆಯಾಗಿ ಕವಿತೆಯ ಒಡಲಿನಲ್ಲಿಯೇ ಮೂಡಿದ ಈ ಪ್ರತಿಮೆ ಸಾಕ್ಷಿಯಾಗುತ್ತದೆ.

ತನ್ನ ಬಾಳಿನ ಇಂಟರವೆಲ್ಲಿಗೇನೆ ನಿದ್ರೆ
ಗುಳಿಗೆ ನುಂಗಿ
ಪಲಾಯನಗೈದ ಮರ್ಲಿನ್ ಮನ್ರೊ
ಪೋಜುಕೊಟ್ಟು ನಿಂತ
ಹಳೆಫಿಲ್ಮಿನ ಹೊಸ ಮ್ಯಾಟ್ನಿ ಪೋಸ್ಟರು
ಅಲ್ಲಿ; ಇಲ್ಲಿ, ಗಲ್ಲಿಗಲ್ಲಿಯ ಗೋಡೆ

ಕೂಟು ಕೂಟಿನ ಕಂಬಕ್ಕೆ
ಅಂಟಿಸಿದ್ದಾರೆ.
ಓದದೆ ನಿರ್ವಾಹವಿಲ್ಲ

'ಇದು ನನ್ನ ಸಮಸ್ಯೆ'ದಲ್ಲಿ ಬೆಳೆಯುತ್ತ ಹೋಗುವ ವಿವರಗಳೆಲ್ಲ ಅನುಭವದ ಸಂಕೀರ್ಣತೆಯನ್ನು ಹಿಡಿದಿಡುವಂತೆಯೇ ಕೊನೆಯಲ್ಲಿ ಬರುವ

ಇಪ್ಪತ್ತರ ಮೇಲೆ ಮತ್ತೈದು ಪೈಸೆಯ
Refugee Relief fund ಟಿಕೆಟ್
ಹಚ್ಚಬೇಕೆಂದಾಗ
ಇದು ಬರಿ ಬಂಗ್ಲಾ ಸಮಸ್ಯೆಯಲ್ಲ
'ನನ್ನ ಸಮಸ್ಯೆ' ಎಂದುಕೊಂಡೆ.

ಈ ಸಾಲುಗಳಿಂದ ಕವನಕ್ಕೆ ಬೇರೊಂದು ಅರ್ಥದ ಛಾಯೆಯೊದಗಿ ನಡೆದ ಘಟನೆಗಳನ್ನು ಬೌದ್ಧಿಕವಾಗಿ ಬೆಲೆಗಟ್ಟಲು ನೆರವಾಗುತ್ತದೆ. 'ಕ್ಯಾಲೆಂಡರ್' ಕವಿತೆಯ ಮೊದಲಭಾಗದಲ್ಲಿ ಚಿತ್ರವತ್ತಾದ ವಿವರಗಳು ಆಮೇಲೆ ಸೂಚಿಸುವ ಅವುಗಳ 'ಯಥಾಸ್ಥಿತಿ'ಯಿಂದ ಬೇರೊಂದು ಅರ್ಥಕ್ಕೆ ಸ್ಫುರಣೆಯೊದಗಿ ಗತವರ್ಷದ ಕನಸುಗಳ ಆದರ್ಶಗಳ ನಿಷ್ಕ್ರಿಯತೆಯನ್ನು ಸೂಚಿಸುತ್ತವೆ. ಕ್ಯಾಲೆಂಡರು ಗಾಳಿಗೆ ಹಾರಿಬಿದ್ದಾಗ,

ವಾಲ್‌ಕ್ಲಾಕಿನ ಪೆಂಡ್ಯೂಲಮ್ ಮಾತ್ರ
ಟಿಕ್ ಟಿಕ್ಕೆಂದು
ಸೆಕೆಂಡುಗಳನ್ನು ಗೂಡಿಸುತ್ತಿತ್ತು.

ಎನ್ನುವಲ್ಲಿ ಕಾಲದ ನಿರ್ಲಿಪ್ತತೆಗೂ ನಿರಂತರ ಪ್ರವಾಹಕ್ಕೂ ತಕ್ಕ ಸಂಕೇತವಾಗಿ ಕವನದ ಮೂಲ ಭಾವಕ್ಕೆ ಅರ್ಥಪೂರ್ಣ ಸಂಬಂಧವನ್ನು ಕಲ್ಪಿಸಿಕೊಡುತ್ತದೆ.

'ಬರೀಕರಿ', 'ಕ್ಲೋರೊಫಾರ್ಮ ಕೊಡಲೆ' ಕವಿತೆಗಳು ಬಳಕೆಯ ಮಾತಿನಲ್ಲಿದ್ದರೂ ತೀರ ಗದ್ಯಕ್ಕಿಳಿಯದಂತೆ ಭಾವನೆಯನ್ನು ಬುದ್ಧಿಯ ಬೆಳಕಿನಲ್ಲಿ ಪರೀಕ್ಷಿಸುತ್ತ ಮನಸ್ಸಿನ ದ್ವಂದ್ವಕ್ಕೆ ತಕ್ಕ ಪ್ರತಿಮೆಗಳಲ್ಲಿ ಆಕಾರ ತಳೆದಿವೆ.

ಇನ್ನುಳಿದ ಆರೇಳು ಕವಿತೆಗಳು ಪೂರ್ತಿ ಆಡುಮಾತಿನ ಸಂಭಾಷಣೆಯ ಶೈಲಿಯಲ್ಲಿಯೇ ಅಭಿವ್ಯಕ್ತಿಗೆ ತಕ್ಕ ಮಾಧ್ಯಮವನ್ನು ಪಡೆದು ಜನಪದಸತ್ವದಿಂದ ಹೊಸ ಸಾಧ್ಯತೆಯನ್ನು ಹೊಂದಿ ಯಶಸ್ಸಿನ ಇನ್ನೊಂದು ಬದಿಯನ್ನು ಹೊಳೆಯಿಸುತ್ತವೆ. 'ಕವಿತಾ ಬರೀತೀರೆಂತಲ್ಲಾ' ಪೂರ್ತಿ ಸಂಭಾಷಣೆಯಲ್ಲಿಯೇ ತನ್ನ ತಂತ್ರವನ್ನು ಕಂಡುಕೊಂಡು ಸೊಗಸಾಗಿದೆ. 'ನಮ್ಮೂರ ಗೌಡನ ಮಗಾ' ತನ್ನ ಶೌರ್ಯವನ್ನು ತಾನೇ ಹೇಳಿಕೊಳ್ಳುವ ರೀತಿಯಲ್ಲಿಯ ಸೂಕ್ಷ್ಮ ವ್ಯಂಗ್ಯ ಪರಿಣಾಮಕಾರಿಯಾಗಿದೆ.

'ಪಪ್ಪಾಯಿ', 'ಚಿಗಳಿ', 'ನನ್ನ ನಿನ್ನ ಮಾತು' ಈ ಕವಿತೆಗಳಲ್ಲಿ ಜನಪದ ಸಂವೇದನೆಯಿಂದ ಹೊಮ್ಮುವ ನಿಸ್ಸಂಕೋಚವಾದ ಭಾವದ ನಿರೂಪಣೆಗೆ ಭಾಷೆಯ ಸಾಂಕೇತಿಕತೆಯನ್ನು

ಸಮರ್ಥವಾಗಿ ಬಳಸಿಕೊಳ್ಳಲಾಗಿದೆ. ಮದುವೆಯಾದ ಹೊಸದರಲ್ಲಿ ಇರುಳಿಡೀ ಗಂಡಹೆಂಡಿರ ಮಾತಿಗೆ ಕೊನೆಯಿಲ್ಲದಿರುವುದನ್ನು ಸೊಗಸಾಗಿ ಚಿತ್ರಿಸುವ 'ನನ್ನ ನಿನ್ನ ಮಾತು' ಕವಿತೆಯಲ್ಲಂತೂ ಜೀವಂತವಾಗಿ ಕಳಕಳಿಸುವ ಪ್ರತಿಮೆಗಳು ಒಂದರಮೇಲೊಂದು ಈರ್ಯಾಡಿ ಬಂದು ಭಾವದ ಉತ್ಕರ್ಷವನ್ನು ಪೋಷಿಸುವದರ ಜೊತೆಗೆ ಸಂಕೀರ್ಣತೆಯನ್ನೂ ಸಾಧಿಸಿವೆ. ಚಿಗುಳಿಯಂತೆ ಬಾಯಲ್ಲಿ ನೀರೂರಿಸುವ ಈ ಭಾಷೆಯ ಹದ ನಿಜಕ್ಕೂ ಅಚ್ಚರಿಗೊಳಿಸುವಂಥದು. ಅನುಭವಕ್ಕೆ ಅವಶ್ಯವೆನಿಸಿದಷ್ಟು ಆಡುನುಡಿಯ ಶಕ್ತಿಯನ್ನು ಹತೋಟಿಯಿಂದ ಉಪಯೋಗಿಸಿಕೊಂಡಿರುವುದು ಈ ಕವಿಯ ವಿಶಿಷ್ಟ ಸಾಧನೆಯೆನ್ನಬಹುದು. ಹಾಗೆಯೇ ಸಾಮಾನ್ಯವಾಗಿ ಇಲ್ಲಿಯ ಕವಿತೆಗಳ ಕೊನೆಯೂ ಕಲಾತ್ಮಕವಾಗಿರುವುದು ಗಮನಾರ್ಹವಾಗಿದೆ.

ಕೊನೆಯದಾಗಿ 'ಬೆವರವಾಸನೆ' ಕವಿತೆಗೆ ಬರುತ್ತೇನೆ :

ಬೇಡ, ಪುಸ್ತಕೀಯ ಭಾಷೆಯಂತಹ
ನಿಸ್ಸತ್ವವಾದ ನೀ ಲೇಪಿಸಿಕೊಂಡ
ಸ್ನೋ ಪೌಡರಿನ ಸಪ್ಪೆ ವಾಸನೆ.
ಬೇಕು ಹಿತ್ತಲದ ಹದಿನೆಂಟು ಮಾರು ಭಾವಿಯ
ನೀರು ಜಗ್ಗಿದಾಗ ಬೆವೆತ
ಖೋರಾ ನಿನ್ನ ಮೈವಾಸನೆ.

ಇಂಥ ಸಾಲುಗಳನ್ನೋದಿ ಯಾರೂ ಈಗ ಬೆಚ್ಚಬೀಳುವ ಪ್ರೇಮಯವಿಲ್ಲ. 'ಕಾವ್ಯದಲ್ಲಿ ಮತ್ತೆ ಮಣ್ಣಿನ ವಾಸನೆ ಹೊಡೆಯಬೇಕು' ಎಂಬ ಘೋಷಣೆ ಮೊಳಗಿದ ಎರಡು ದಶಕದಮೇಲೆ, ಕೆಲಮಟ್ಟಿಗೆ ಭಿನ್ನ ಪರಿಸರದಲ್ಲಿ ಬೆಳೆಯುತ್ತಿರುವ ಹೊಸ ಪೀಳಿಗೆಯ ವಾಸ್ತವದ ಆಕಾಂಕ್ಷೆ ಹೀಗೆ ಅಭಿವ್ಯಕ್ತಗೊಳ್ಳುತ್ತಿರುವುದು ಸಹಜವಾದ ಬೆಳವಣಿಗೆಯೆಂದೇ ನನಗೆ ತೋರುತ್ತದೆ. ನವ್ಯಕಾವ್ಯದ ಪ್ರಾರಂಭಕಾಲದಲ್ಲಿ ಇಂಥ ಮಾತುಗಳು ಉದ್ದೇಶಪೂರ್ವಕವಾಗಿ ಎಂಬಂತೆ ಒಮ್ಮೊಮ್ಮೆ ಹಿಂದಿನ ಕಾವ್ಯಮಾರ್ಗವನ್ನು ಚುಚ್ಚಲೆಂದು ಬರುತ್ತಿದ್ದರೆ, ಈಗ ಸಹಜ ಅನಿಸಿಕೆಗಳಾಗಿ ಅವು ಮೈದೋರುತ್ತಿವೆ. ಅಭಿರುಚಿಯಲ್ಲಿ ತರತಮಗಳಿರಬಹುದಾದರೂ ಅವುಗಳ ಪ್ರಾಮಾಣಿಕತೆಯನ್ನು ಮಾತ್ರ ಶಂಕಿಸುವಂತಿಲ್ಲ.

ತನ್ನ ಅನುಭವಕ್ಕೆ ಪ್ರಾಮಾಣಿಕನಾಗಿ, ತನ್ನದೇ ಆದ ಭಾಷೆಯನ್ನು ರೂಪಿಸಿಕೊಳ್ಳಲು ಹೆಣಗುತ್ತಿರುವ ಸತ್ವಶಾಲಿಯಾದ ಸಹಜ ಕವಿಯೊಬ್ಬನ ಪ್ರಥಮ ಸಂಕಲನವನ್ನು ಕುರಿತು ಅದರ ಓದುಗರಿಗೆ ಹೀಗೆ ಪರಿಚಯ ಮಾಡಿಕೊಡುವಲ್ಲಿ ಒಂದೆರಡು ಮಾತು ಹೆಚ್ಚೆನಿಸಿದರೂ - ನನಗೆ ಸಂತೋಷವಿದೆ. ಅಲ್ಪತೃಪ್ತಿಗೆಡೆಗೊಡದೆ ಈ ತರುಣ ಕವಿ ತನ್ನ ಕಾವ್ಯಜೀವನದಲ್ಲಿ ಇನ್ನೂ ಹಿರಿದಾದುದನ್ನು ಸಾಧಿಸುವಂತಾಗಲಿ ಎಂದು ಹಾರೈಸುತ್ತೇನೆ.

(೧೯೭೪)

೧೬

# ಮೂವತ್ತಾರು ಮುಖ, ಅರವತ್ಮೂರು ಕವನ

ಈ ಭಾಗದ ಹೊಸ ತರುಣ ಕವಿಗಳ ಅರಳುತ್ತಿರುವ ಸತ್ತ್ವವನ್ನು ಹಾಗೂ ಕಾವ್ಯಚೈತನ್ಯದ ಸ್ವರೂಪವನ್ನು ಗುರುತಿಸುವ ಒಂದು ಸಂದರ್ಭವನ್ನು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದ ಕರ್ನಾಟಕ ಸಂಘ ಈಚೆಗೆ ಏರ್ಪಡಿಸಿದ ವಿದ್ಯಾರ್ಥಿ ಕವಿಸಮ್ಮೇಳನವೊಂದರ ಮೂಲಕ ಕಾವ್ಯಪ್ರೇಮಿಗಳಿಗೆ ಒದಗಿಸಿಕೊಟ್ಟಿತು. ಆ ಮೂವತ್ತಾರು ಕವಿಗಳ ಅರುವತ್ಮೂರು ಕವನಗಳನ್ನು ಈಗ ಸಂಗ್ರಹರೂಪದಲ್ಲಿ ಪ್ರಕಟಿಸಿ ಕರ್ನಾಟಕ ಸಂಘ ಒಂದು ಉತ್ಕೃಷ್ಟ ಕಾರ್ಯವನ್ನು ಮಾಡಿದೆ. ಅಂದಿನ ಕವಿ ಸಮ್ಮೇಳನಕ್ಕೆ ಮುಖ್ಯ ಅತಿಥಿಯಾಗಿ ಬರಮಾಡಿಕೊಂಡದ್ದಲ್ಲದೆ, ಇಂದು ಈ ಸಂಗ್ರಹಕ್ಕೆ ಮುನ್ನುಡಿ ಬರೆಯಲು ಕೇಳಿಕೊಂಡು ತಮ್ಮ ಪ್ರೀತಿ ವಿಶ್ವಾಸಗಳನ್ನು ವ್ಯಕ್ತಪಡಿಸಿರುವ ಸಂಘದ ಅಧ್ಯಕ್ಷರಾದ ಡಾ. ಆರ್.ಸಿ. ಹಿರೇಮಠ ಅವರಿಗೂ ಕಾರ್ಯಾಧ್ಯಕ್ಷರಾದ ಕವಿಮಿತ್ರ ಶ್ರೀ ಸೋಮಶೇಖರ ಇಮ್ರಾಪೂರ ಅವರಿಗೂ ಕಾರ್ಯದರ್ಶಿಗಳಾದ ವಿದ್ಯಾರ್ಥಿಮಿತ್ರರಿಗೂ ತುಂಬ ಕೃತಜ್ಞನಾಗಿದ್ದೇನೆ.

ಈ ಸಂಗ್ರಹದ ಕವಿಗಳೆಲ್ಲರೂ ಸಾಮಾನ್ಯವಾಗಿ ಇಪ್ಪತ್ತು ಇಪ್ಪತ್ತೈದರ ಹರಯದವರು. ಅಂದರೆ ಸ್ವಾತಂತ್ರ್ಯೋತ್ತರ ಭಾರತದಲ್ಲಿ ಹುಟ್ಟಿ, ಒಂದಾದ ಕನ್ನಡ ನಾಡಿನ ಹಂದರದಲ್ಲಿ ಬೆಳೆದವರು. ಈ ಎರಡು ಮಹತ್ವದ ಘಟನೆಗಳ ಹಿಂದಿನ ಹೋರಾಟವನ್ನೂ, ವಿದ್ಯಮಾನಗಳನ್ನೂ ಇಂದಿನ ಯುವಜನಾಂಗ ಪ್ರತ್ಯಕ್ಷ ಕಂಡವರಲ್ಲ. ಆದರೆ ಅವುಗಳ ಪರಿಣಾಮದ ಫಲವನ್ನು ಅದರ ಎಲ್ಲಾ ಹಿತಾಹಿತಗಳ ರೂಪದಲ್ಲಿ ಅನುಭವಿಸುವವರು. ರಾಜಕೀಯವನ್ನೊಳಗೊಂಡು ಜೀವನದ ಎಲ್ಲ ಕ್ಷೇತ್ರಗಳಲ್ಲಿಯೂ ಸಾಮಾನ್ಯವಾಗಿ ಆಸಕ್ತಿಯುಳ್ಳವರು; ಎಲ್ಲದರ ಬಗೆಗೂ ಸ್ವಂತ ಅಭಿಪ್ರಾಯಗಳನ್ನು ಸರಿಯೊ, ತಪ್ಪೊ ಮಂಡಿಸಲು ಆತುರಗೊಂಡವರು; ಇಂದಿನ ಜೀವನದ ಆರ್ಥಿಕ, ಸಾಮಾಜಿಕ, ಧಾರ್ಮಿಕ ಕ್ಷೇತ್ರದ ಅಸ್ತವ್ಯಸ್ತತೆಗೆ ಬೇಸತ್ತು ಪ್ರಚಲಿತ ಸಮಾಜವ್ಯವಸ್ಥೆಯನ್ನೇ ಬದಲಿಸಬೇಕೆನ್ನುವವರು.

ಇಂದಿನ ವಿಶಿಷ್ಟ ಪರಿಸ್ಥಿತಿಯಲ್ಲಿ ಬರೆಯುತ್ತಿರುವ ಈ ಕವಿಗಳಿಗೆ ಹೊಸಗನ್ನಡದ ಕಾವ್ಯಮಾರ್ಗಗಳಾದ ನವೋದಯ ಹಾಗೂ ನವ್ಯ ಇವೆರಡರ ಹಿನ್ನೆಲೆಯೂ ಇದ್ದು, ಅದರ ಇಷ್ಟಾನಿಷ್ಟಗಳನ್ನೂ ಇವರು ಕೆಲಮಟ್ಟಿಗೆ ಬಲ್ಲವರಾಗಿದ್ದಾರೆ. ನವ್ಯಕಾವ್ಯ ತನ್ನ ಕ್ಲಿಷ್ಟತೆಯ,

ಅಸ್ಪಷ್ಟತೆಯ, ಹಾಗೂ ಯಾವ್ಯಾವುದೊ ವಾಸನೆಗಳ ಸಂಕೀರ್ಣತೆಯ ವೈಪರೀತ್ಯದ ಪೊರೆಯನ್ನು ಕಳಚಿಕೊಂಡು ಪುನರ್ಜನ್ಮ ತಾಳುತ್ತಿರುವ ಈ ಸಂದರ್ಭದಲ್ಲಿ ಇವರ ಹಾದಿ ಅಷ್ಟೊಂದು ಸುಗಮವಾಗಿದೆಯೆಂದು ಹೇಳಬರುವಂತಿಲ್ಲ. ಇನ್ನೂ ನವ್ಯದ ನೋವಿನಲ್ಲಿಯೇ ನುಡಿಯುತ್ತಿರುವವರ ಧ್ವನಿ ಬೇನೆಯಿಲ್ಲದ ನರಳಿಕೆಯೆಂಬುದು ತಟ್ಟನೆ ಗೋಚರಿಸುತ್ತದೆ. ಆದರೆ ನವ್ಯದವರ ದೋಷಗಳನ್ನು ನಿವಾರಿಸಿಕೊಂಡು ಸ್ವಂತಿಕೆಯ ಬಲದಿಂದ ಹೊಸಕವಿಗಳು ಮುಂದುವರಿಯಬಹುದಾಗಿದೆ. 'ವೈಯಕ್ತಿಕ ಅನ್ವೇಷಣೆ' ನವ್ಯಕಾವ್ಯದ ಅನಿವಾರ್ಯವಾದ ಪ್ರವೃತ್ತಿಯಾಗಿದ್ದರೂ ಅದರ ಅಭಿವ್ಯಕ್ತಿಯ ರೀತಿ ಹೊಸರೂಪವನ್ನು ತಳೆಯಬೇಕಾಗಿದೆ. ಭಾವನೆಗಳನ್ನು ಹತ್ತಿಕ್ಕಿ ಬುದ್ಧಿ ಮೇಲೆದ್ದು ಮಾತನಾಡದೆ ಎರಡೂ ಮುಖಾಮುಖಿಯಾಗಿ ಜೀವನದ ಸಮತೋಲನವನ್ನು ಸಾಧಿಸಬೇಕಾಗಿದೆ. ಬರಿ ವಿಕ್ಷಿಪ್ತತೆ ಏನನ್ನೂ ಸಾಧಿಸಲಾರದು. ಹಾಳಾಗಿ ಹೋಗುತ್ತಿರುವ ಮಾನವೀಯ ಮೌಲ್ಯಗಳ ಪಾಳುನೆಲದಲ್ಲಿ ಅಂತಃಕರಣದ ಹಸುರು ಚಿಗುರಿ ನಿಲ್ಲಬೇಕಾಗಿದೆ. ಅಂಥ ಹಸುರು ಹುಲ್ಲು ಚಿಗಿದು ಬರಲೆಂದೇ ಕಾಡಿಗೆ ಬೆಂಕಿ ಹಚ್ಚುವದುಂಟು. ಆದರೆ ಅದು ಒಳ್ಳೊಳ್ಳೆಯ ಮರಗಳನ್ನೂ ಆಹುತಿ ತೆಗೆದುಕೊಳ್ಳುವಂತಾಗ ಬಾರದೆನ್ನುವದು ಲಕ್ಷ್ಯದಲ್ಲಿಡಬೇಕಾದ ಸಂಗತಿಯಾಗಿದೆ.

ಯಾವ ಒಂದು ತಲೆಮಾರಿನ ಕಾವ್ಯದಲ್ಲಿಯೂ ಆ ಕಾಲದ ಎಲ್ಲ ಸಮಸ್ಯೆಗಳೂ ಜೀವನಾನುಭವದ ಎಲ್ಲ ಮಗ್ಗುಲಗಳೂ ಮೂಡಿರುತ್ತವೆಂದಾಗಲಿ, ಅದರ ಎಲ್ಲ ಆಶೋತ್ತರಗಳೂ ಈಡೇರಿರುತ್ತವೆಂದಾಗಲಿ ಭಾವಿಸಲಾಗದು. ಆದುದರಿಂದ ಹೊಸ ತಲೆಮಾರಿನ ಇಂದಿನ ಕವಿಗಳು ತಮಗೊದಗಿರುವ ಅವಕಾಶವನ್ನು ಹೇಗೆ ಉಪಯೋಗಿಸಿಕೊಳ್ಳಬಹುದು ಎಂಬುದು ತುಂಬ ಕುತೂಹಲಕಾರಿಯಾಗಿದೆ. ಅದರ ಕೆಲವು ಸೂಚನೆಗಳು ಈ ಸಂಗ್ರಹದಲ್ಲಿ ಅಲ್ಲಲ್ಲಿ ಕಂಡುಬರುತ್ತಿರುವುದು ಸಂತೋಷದ ಸಂಗತಿ.

ಈ ಸಂಗ್ರಹದ ಅರ್ಧದಷ್ಟು ಕವಿತೆಗಳು ನೈಸರ್ಗಿಕ ತುಡಿತದಿಂದ ತಮಗಿರುವ ಸಮಸ್ಯೆಗಳ ಚಿಂತನೆಯಿಂದ, ಶಕ್ತಿಯುತವಾದ ಭಾವದ ಪ್ರಾಣಶಕ್ತಿಯಿಂದ, ಜೀವನದ ಅಂತಃಸತ್ವದ ಹುಡುಕಾಟದಿಂದ ತಮ್ಮ ಅಸ್ತಿತ್ವದ ಸಾರ್ಥಕತೆಯನ್ನು ಎತ್ತಿ ತೋರಿಸುತ್ತಿವೆ. ಈ ಬಗೆಯ ಸಂಕಲನದಲ್ಲಿ ಇದೇನೂ ಸಣ್ಣ ಸಾಧನೆಯಲ್ಲ.

ಇದರಲ್ಲಿ ಹೆಚ್ಚಿನ ಕವಿತೆಗಳ ಭಾಷೆ ಬಳಕೆಮಾತಿನ ಕನ್ನಡ, ಅದರಲ್ಲೂ ಹಲವು ಪ್ರಾದೇಶಿಕತೆಯ ಸೊಬಗಿನಿಂದ ಇಂಬುಗೊಂಡಿವೆ. ಒಂದು ಪ್ರಸಂಗವನ್ನೊ, ಅನುಭವವನ್ನೊ ಕಥಿಸುವ ಸಹಜ ಮಾತಿನ ರೀತಿ, ಕೊನೆಯಲ್ಲಿ ಅರ್ಥಪೂರ್ಣವಾದ ತಿರುವು 'ಕರಿಕೆ', 'ಸಿಗ್ನಲ್'ಗಳಲ್ಲಿದೆ. ತನಗೆ ಸಂಬಂಧಪಟ್ಟ ಸಂಗತಿಯೊಂದರ ಪ್ರಾಮಾಣಿಕ ವಿವರಗಳ ಕ್ರಿಯಾತ್ಮಕ ವರ್ಣನೆಯಿಂದ ಬೀಭತ್ಸವಾಗಬಹುದಾದುದನ್ನು ಆತ್ಮೀಯ ಭಾವಕ್ಕೆಡೆಗೊಡುವಂತೆ ನಿರ್ವಹಿಸುವ ನವೀನ ವಸ್ತು ಹಾಗೂ ರೀತಿ 'ಕುರ'ದಲ್ಲಿ ಕಾಣುತ್ತದೆ. ಹಳ್ಳಿಯ ಪ್ರೇಮಿಗಳ ಸಾಚಾತನ ಹಾಗೂ ಅದರ ತಾಜಾತನ 'ತಲೀಮ್ಯಾಗ ಕೈಯಿಟ್ಟ ಹೇಳಮಾವ'ದಲ್ಲಿ ಸಹಜವಾಗಿ ಅಭಿವ್ಯಕ್ತಿ ಪಡೆದಿದ್ದರೆ

'ಬಾಯಿ ಉಪ್ಪುಪ್ಪಾತು' ಕವಿತೆಯಲ್ಲಿ ಅದೇ ಪ್ರೇಮ ತನ್ನ ಸಂಕೀರ್ಣತೆಯ ನವಾನುಭೂತಿಯನ್ನು ಒದಗಿಸುತ್ತದೆ. ಹಸಿ ಕಾಮದ ಬಿಸಿ ಅನುಭವ ಸಾಂದ್ರವಾಗಿ ಜಾನಪದ ಗತ್ತಿನೊಡನೆ 'ಚರಗ'ದಲ್ಲಿ ಮೂಡಿದ್ದರೆ, ಅದೇ ಹಳ್ಳಿಯ ಮಾತಿನ ಧಾಟಿ ಸೂಕ್ಷ್ಮವಾದ ವ್ಯಂಗ್ಯವನ್ನು 'ಹೊಲಿಯಾ'ದಲ್ಲಿ ಸಾಧಿಸಿದೆ. ವಸ್ತುವಿನ ವಿನ್ಯಾಸವೇ ತಂತ್ರವಾಗಿ ಪರಿಣಮಿಸುವ ಕಲಾನೈಪುಣ್ಯ ಈ ಮೇಲಿನ ಕವಿತೆಗಳಲ್ಲೆಲ್ಲ ಮೆಚ್ಚುವಂತಹದು. ಸಾಮಾನ್ಯ ಸಂಗತಿಗಳಲ್ಲಿಯೂ ಕಾವ್ಯಾಂಶವನ್ನು ಕಾಣುವ ಕಣ್ಣು ಇವರಿಗಿದೆ. ನವುರಾದ ಜಾಣತನವೂ ಇದೆ. ಅಲ್ಲದೆ ನವ್ಯದ ಸಿದ್ಧಶೈಲಿಯನ್ನು ತಪ್ಪಿಸಿಕೊಂಡು ತಮ್ಮತನವನ್ನು ಕಂಡುಕೊಳ್ಳಲು ಇದರಿಂದ ನೆರವಾಗಿದೆ. 'ಕಂಡದ್ದು', 'ಗೂಳಿ', 'ಹಿಪ್ಪಿ', 'ಹಳತು ಮತ್ತು ಹೊಸತು', 'ಕನಸು', 'ಅಂಗಾತನ ಹೊಂಟ', 'ಹೊಲಸು ಚಟಾ', 'ಖಾತೆಪಾನ' ಇವುಗಳಲ್ಲಿಯೂ ಅದೇ ಬಗೆಯ ಭಾಷಾಪ್ರಯೋಗವಿದ್ದರೂ ಇವು ಆ ಮಟ್ಟದಲ್ಲಿ ತೃಪ್ತಿಯನ್ನು ಕೊಡಲಾರವು. 'ಹೊನ್ನಗಿಳಿ'ಗೆ ಇಷ್ಟೊಂದು ಉದ್ಗಾರ ಚಿಹ್ನೆಗಳೇಕೆ ? 'ಮಗನ ಸಮಸ್ಯೆ' ಹಾಗೂ 'ರಾತ್ರಿರಾಣಿ'ಯ ಭಾವ ಬಂಧುರವಾಗಿದ್ದರೂ ಆಡುಭಾಷೆಯ ನಡುನಡುವೆ ಮತ್ತೆ ಶಿಷ್ಟ ಶೈಲಿ ಹಣಕಿದೆ.

ಇನ್ನೊಂದು ಗುಂಪು ನಗರದ ಶಿಷ್ಟ ಭಾಷೆಯಲ್ಲಿಯೇ ಆಡು ಮಾತಿನ ಲಯವನ್ನು ಹಿಡಿದು ಹೊಗರೇರಿದ ಕವಿತೆಗಳದು. 'ನನ್ನ ಕವಿತೆಗಳು', 'ದರ್ಪಣ' ಇವುಗಳಲ್ಲಿಯ ಸ್ವವಿಮರ್ಶೆ, 'ಇದೇನು ಹೊಸದಲ್ಲ'ದಲ್ಲಿಯ ತನ್ನ ಮೂಲಕ ಸಮಾಜದ ರೀತಿ-ನೀತಿಯನ್ನು ಪ್ರತಿಬಿಂಬಿಸುವ ರೀತಿ ಚುರುಕಾಗಿದೆ. 'ಚಾಲತೀ ಸ್ಥಿತಿ'ಯಲ್ಲಿ ವ್ಯಕ್ತಿಗಳೇ ಪ್ರತೀಕಗಳಾಗಿ ನಿಲ್ಲುತ್ತಾರೆ.

'ಏನು ವ್ಯತ್ಯಾಸ'ದಲ್ಲಿ ಸಸ್ಯ ವಿಜ್ಞಾನಕ್ಕೆ ಸಂಬಂಧಪಟ್ಟ ಪ್ರತಿಮೆಗಳ ಮೂಲಕ ವಸ್ತುವನ್ನು ಭೇದಿಸಲಾಗಿದೆ. 'ಸ್ವಾವಲಂಬಿ' ಹಾಗೂ 'ಆರ್ಕಿಡ್ ಜಾತಿ'ಯ ಸಸ್ಯಗಳು ನಮ್ಮ ಸಮಾಜದ ಕೆಲವು ವ್ಯಕ್ತಿಗಳ ಸ್ವಭಾವಕ್ಕೆ ಪ್ರತೀಕವಾಗಿ ನಿಂತು ಅರ್ಥ ಪುಷ್ಟಿಯನ್ನು ಪಡೆದಿವೆ. ಹಾಗೆಯೇ 'ಗ್ರಹಣ'ದಲ್ಲೂ, ಗ್ರಹಣದ ಪರಿಭಾವನೆಯ ಮೂಲಕ ಭೂತ-ವರ್ತಮಾನ-ಭವಿಷ್ಯಗಳ ವಿವೇಚನೆ ಅರ್ಥವತ್ತಾಗಿದೆ. 'ಡಾರ್ವಿನ್‌ನ ವಿಕಾಸವಾದದ ಒಂದು ಥೀಸಸ್', 'ಕೋಮು ಮಾವಂದಿರ ಹಲವಾರು ಬಣ್ಣಗಳು', 'ಉಗುರು' - ಇವು ಒಂದು ವೈಚಾರಿಕ ಹಿನ್ನೆಲೆಯಲ್ಲಿ ಅನುಭವವನ್ನು ಬಿಚ್ಚಿಕೊಳ್ಳುತ್ತ ಅದನ್ನು ಅರ್ಥೈಸುತ್ತ ಹೋಗುತ್ತವೆ. 'ನಿರಾಶೆ'ಗಿಂತ 'ಗಡಿಯಾರ'ದಲ್ಲಿ ಅನ್ಯೋಕ್ತಿಗೆ ಪ್ರತೀಕಗಳನ್ನು ಸಮರ್ಥವಾಗಿ ಬಳಸಿಕೊಳ್ಳಲಾಗಿದೆ.

ಪ್ರತಿಮೆ, ಪ್ರತೀಕಗಳಿಗೆ ಅಷ್ಟಾಗಿ ಪರದಾಡದೆ ಆಡು ಮಾತುಗಳಲ್ಲಿಯೇ ಮರ್ಮಕ್ಕೆ ನಾಟುವಂತೆ, ಅನುಭವವನ್ನು ಹರಳುಗೊಳಿಸಿ ಹೊಳೆಸುವ ರೀತಿ 'ಬರಗಾಲ', 'ಕವನ', 'ಹಿರಿಮೆ' ಈ ಕವಿತೆಗಳಲ್ಲಿ ಕುತೂಹಲಕಾರಿಯಾಗಿ ಅಭಿವ್ಯಕ್ತಿ ಪಡೆದಿದೆ. ಇಲ್ಲಿ ವಸ್ತು-ಭಾವ-ಕಲ್ಪನೆ ನಿರೂಪಣೆಯ ವಿಧಾನದಲ್ಲಿಯೇ ಸಮರಸಗೊಂಡು ನಿಲ್ಲುತ್ತವೆ. ಭರವಸೆಯನ್ನು ಹುಟ್ಟಿಸಬಲ್ಲ ಕವಿತೆಗಳಿವು.

'ನಲ್ಮೆಯ ಕೃಷ್ಣನಿಗೆ', 'ಇಲ್ಲಿ ಏನೂ ಅನ್ನಲಾರೆ' ಕವಿತೆಗಳು ಬದುಕನ್ನು ಇಡಿಯಾಗಿ ಅನುಭವಿಸಿ ನೋಡಬಲ್ಲ, ಇಂದಿನ ಜೀವನವನ್ನೇ ಕಾವ್ಯವಾಗಿ ಪ್ರತಿಮಿಸಲು ಪ್ರಯತ್ನಿಸುವ, ಸೂಕ್ಷ್ಮ ಸಂವೇದನೆಯ ಸಮರ್ಥ ಕವಿಯೊಬ್ಬನ ಬರವನ್ನು ಸೂಚಿಸುತ್ತಿವೆ. ಅನುಭವದ ವಿವಿಧ ಮುಖಗಳನ್ನು ಒಂದೆಡೆ ಹೊಂದಿಸಿ ಸಮಗ್ರತೆಯನ್ನು ಕಾಪಾಡುವ ಕೌಶಲ್ಯ, ಆಯಸ್ಕಾಂತಕ್ಕೆ ಬಂದು ಅಂಟಿಕೊಳ್ಳುವ ಉಕ್ಕಿನ ತುಂಡುಗಳಂತೆ ವಿವರಗಳನ್ನು ಅರ್ಥಪೂರ್ಣವಾಗಿ ಹಿಡಿದಿಡಬಲ್ಲಶಕ್ತಿ ವಿವಿಧ ಸ್ತರಗಳಲ್ಲಿ ಹಾಯ್ದು ಭಾವ ಬೆಳವಣಿಗೆ ಪಡೆಯುವ ರೀತಿ, ಶೈಲಿಯ ಸ್ವಂತಿಕೆ ಈ ಎಲ್ಲ ಗುಣಗಳು ಇಲ್ಲಿ ಒಡೆದು ಕಾಣುತ್ತವೆ. ಪರಿಸರಕ್ಕೆ ಜ್ವಲಂತ ಪ್ರತಿಕ್ರಿಯೆ ನೀಡಬಲ್ಲ ಒಂದು ಚೈತನ್ಯ ಪೂರ್ಣ ವ್ಯಕ್ತಿತ್ವ ಇಲ್ಲಿ ಕಾಣಸಿಕೊಂಡಿದೆ.

ಮೇಲಿನ ಮಾತುಗಳನ್ನು ಸಮರ್ಥಿಸಲು ಇಲ್ಲಿಯ ಕವಿತೆಗಳಿಂದ ಅನೇಕ ಸಾಲುಗಳನ್ನು ಉದಾಹರಣೆಯಾಗಿ ಕೊಡಬಹುದು. ಆದರೆ ಕವಿತೆಯಲ್ಲಿ ಅವೆಲ್ಲವು ಸಾವಯವ ಸಂಬಂಧ ಪಡೆದು ಒಟ್ಟಂದದ ಪರಿಣಾಮಕ್ಕೆ ಕಾರಣವಾಗಿರುವದರಿಂದ ಅವುಗಳನ್ನು ಬಿಡಿಯಾಗಿ ಎತ್ತಿಟ್ಟರೆ ಆ ಕವಿತೆಗಳಿಗೆ ಒಂದಿಷ್ಟು ಅನ್ಯಾಯ ಮಾಡಿದಂತೆಯೇ ಆಗಬಹುದು. ಆದರೂ ಈ ಕವಿಗಳ ಮನೋಧರ್ಮವನ್ನು, ಪ್ರತಿಮಾ ವಿಧಾನವನ್ನು, ಕಾವ್ಯದ ಧಾಟಿ-ಧೋರಣೆಯನ್ನು, ರೀತಿಯನ್ನು, ನವೀನತೆಯನ್ನು ಕುಡುಕೊಳ್ಳಲು ಅಲ್ಲಲ್ಲಿಯ ಕೆಲವು ಸಾಲುಗಳನ್ನು ರಸಿಕರೆದುರು ಎತ್ತಿ ಹಿಡಿಯುತ್ತಿದ್ದೇನೆ.

ಕಾಲ ಉರುಳಿದಂತೆ
ಭೂತಕ್ಕೆ ವರ್ತಮಾನ ತನ್ನ ನೆರಳೆಳೆದು
ಭೂತಕ್ಕೆ ಗ್ರಹಣ ಹಿಡಿದಿದೆ ಎಂದು ನಗುತ್ತದೆ.
ಭವಿಷ್ಯದ ಬೆಳಕಿನಿಂದಲೇ
ಭೂತ ವರ್ತಮಾನಗಳು ಪ್ರತಿಫಲಿಸಿ
ಕಾಲಕಾಲಕ್ಕೆ ಗ್ರಹಣವಾಗುತ್ತಿವೆ. (ಗ್ರಹಣ)

ಕಣ್ಣು ಹರಿಯುವ ಬಣ್ಣಗಳ ಕುಕ್ಕಕ್ಕಿ
ಅಸ್ಥಿಪಂಜರಗಳ ಆತ್ಮಹತ್ಯೆಯನ್ನು
ಅಜ್ಜ ಹೆಂಡತಿಯ ಮಾರಿ ಸತ್ಯ ಮಾತಾಡಿದ್ದನ್ನು
ನನ್ನಲ್ಲಿಳಿಯದೆ ನೇರ
ತನ್ನ ಕಣ್ಣುಗಳಲ್ಲೆ ಆಮ್ಲೆಟ್ ಕುದಿಸುವ ಆ ಹುಡುಗಿಯನ್ನ
ಸಾಕ್ಷಿಯಿಲ್ಲದೇ ಸೋರುವೀ
ಅಸಂಖ್ಯ ನಿರ್ಜೀವ ನಲ್ಲಿಗಳನ್ನ
ಇನ್ನೂ ಹೀಗೆಯೇ ನೋಡುತ್ತಿದ್ದೇನಲ್ಲ
ಮುಚ್ಚಿಕೊಂಡ ರೆಪ್ಪೆ ಪುನಃ ಬಿಚ್ಚುತ್ತಿದ್ದೇನಲ್ಲ
ನನಗೇನೆನ್ನಲಿ? (ಇಲ್ಲಿ ಏನೂ ಅನ್ನಲಾರೆ)

ಒಂದೀಟು ಸಡ್ಲ ಕೊಟ್ರ
ಮುಗಿತು ಕತಿ
ಎಲ್ಲಾ ಕಡೆ ಬೆಳೆದು
ತನ್ನ ಸಾಮ್ರಾಜ್ಯಾ ಸ್ಥಾಪಸ್ತತಿ;
ಈ ಹೊಲಕ ನಾನ್ಸ ರಾಜಾ
ಅಂತ ಡಂಗರಾ ಹೊಡಿತೈತಿ (ಕರಿಕಿ)

ಟಮ್ಯಾಟೊ ಹಣ್ಣಿನ ಮ್ಯಾಗ
ಇಬ್ಬನಿ ಬಿದ್ದಾಂಗ
ಗಲ್ಲದ ಮ್ಯಾಗ ಕಣ್ಣೀರು ಬಿಟಗೊಂಡು
ಬಿಕ್ಕೋತ ಬಂದ
ಮಾವನ ಕೇಳ್ಯಾಳ
ಗುಂಗೀ ಹುಳು ಗುಂಯ್ಯ ಗುಟ್ಟಿದಾಂಗ
ನಮ್ಮನ್ನು ನೋಡಿ
ಗುಂಯ್ ಗುಡತಾರ ಮಂದಿ ಮಾವ
ಇನ್ನಮ್ಯಾಗ ಸಾಕ ಹಿಂಗಿರೋದು
(ತಲಿಮ್ಯಾಗ ಕೈ ಇಟ್ಟ ಹೇಳ ಮಾವ)

ನಿನ್ನ ದನಿ ಕೇಳಿದಾಗೊಮ್ಮೆ
ಚುರಮರಿ ಕಂಡ ಮೀನದಾಂಗ
ಓಡಿ ಬಂದರ್ಸ
ಗಾಳದಂತಾ ನಿಮ್ಮಪ್ಪನ್ನ ನೋಡೆ
ಗರ್ರನೆ ತಿರಗತಿದ್ದೆ
ನಿನ ಕೂಡ ಮಾತಾಡಿದಾಗೊಮ್ಮೆ
ಗೋಕಾಕದ ಸ್ವೆಯಿಂಗ ಬ್ರಿಜ್ ಮ್ಯಾಲೆ
ನಡದಂಗ ಆಗಿ
ಆಧಾರಕ್ಕ ನಿನ ಹೆಗಲಿಗೆ ಕೈ ಇಡತಿದ್ದೆ. (ಬಾಯಿ ಉಪ್ಪಪ್ಪಾತು)

ಭಾವಗೀತೆಗೆ ಬೇಂದ್ರೆ ಬಾರ್ಡರು
ನವ್ಯಕ್ಕೆ ಅಡಿಗರ ನೆರಳು
ಎರಡರ ನಡುವಿನ ಗೊದಮೊಟ್ಟೆ ನಾನು
ಗೂಡಿನಲ್ಲಿದ್ದುಕೊಂಡೇ ಜಗತ್ತನ್ನು ಕಾಣುವ ಆಶೆ ಹೊತ್ತಿದ್ದೇನೆ
(ಕವನ)

Scoundrals
ಬರೀ ಇವರೇ
ನನ್ನಂಥವರೇ !
ಕಾಲಿಟ್ಟೆಡೆ ಗಟಾರ
ಹುಡುಕುವ ಬುದ್ಧಿಯವರು
ಹವಾಯ್ ಚಪ್ಪಲಿ ತೊಡಿಸಿ
ಕೆಸರಲ್ಲಿ ಓಡಿಸುವ ಚಪಲದವರು. (ದರ್ಪಣ)

ಕಣ್ಣು ಮಿಟಿಕಿಸಿದಾಗೊಮ್ಮೆ ಮೆವ್ ಮೆವ್ ಗುಟ್ಟುತ್ತಾ
ತೊಡಿ ತುರಿಸಿ ಖೊಕ್ಕೆಂದು ನಗೂ ಬೆರಕಿ ಬಾ
ಇತತ ಚೆಲ್ಲಿ ಬಿಡತೀನಿ ನಿನ್ನ ಚರಗಾ
ದುಮ್ಮಾ ಹಿರದ ಬಿಡತೀನಿ (ಚರಗ)

ಇಂಡಿಯಾ = ಭಾರತ
ಇಂಡಿಯಾ = ರಾಜಕೀಯ ಖೊಜ್ಜಾಗಳ ರಾಷ್ಟ್ರ
ಇಂಡಿಯಾ = ಅಂದರೆ ಸ್ವಾಮಿಗಳ, ಬಾಬಾಗಳ, ಕಪಟ ಸನ್ಯಾಸಿಗಳ ಸ್ಥಾನ
ಇಂಡಿಯಾ = ಮಾತಿನ ಮಂಟಪ ಕಟ್ಟುವದರಲ್ಲೇ ಮಗ್ನ
(ಇಂಡಿಯಾ)

ನೀವ್ ನಮ್ಮನಿ ಯಜಮಾನ್ರಪ್ಪಾ
ನಿಮಗೆ ನಾ ಹೊಲದ ಕೊಟ್ಟ ಜೋಡು
ನಮ್ಮನಿ ಹೊಚ್ಚಲದಾಗ್ನ ಇರತಾವು
ನಮಗೆಲ್ಲಿ ಪುರಸೊತ್ತೆಪ್ಪಾ ಮನೀಗಿ ಬರಾಕ (ಹೊಲಿಯಾ)

ಕಾವ್ಯ ಪ್ರಕ್ರಿಯೆಯಲ್ಲಿ ಮೇಲೆ ಕಾಣಿಸಿದ ಎಲ್ಲ ಸಂಗತಿಗಳೂ ಕೂಡಿಕೊಂಡೇ ಕೆಲಸ ಮಾಡುತ್ತವೆ. ಕಲ್ಪನೆ, ವಿಚಾರ, ಅನುಭೂತಿ imagination, thinking, feeling ಒಂದರೊಳಗೊಂದು ಬೆಸದುಕೊಂಡೇ ಕಾವ್ಯವನ್ನು ನಡೆಸಿಕೊಡುತ್ತವೆ. ಈ ಸಂದರ್ಭದಲ್ಲಿ ಫ್ರೆಂಚ್ ಕವಿ Saint-Pol Roux ಹೇಳಿದ ಮಾತೊಂದು ನೆನಪಾಗುತ್ತದೆ: "Imagination is a reaping before the sowing. Reason is imagination that has gone stale"

ಒಟ್ಟಿನಲ್ಲಿ ಇದೊಂದು ತುಂಬಾ ಆಶಾದಾಯಕವಾದ ಕವನ ಸಂಕಲನ. ತಮ್ಮ ಸೃಜನಶಕ್ತಿಯ ಬೆಳವಣಿಗೆಯ ಅಂಶಗಳನ್ನು ಸೂಚಿಸಿರುವ, ಆ ಬಗ್ಗೆ ಅಲ್ಲಲ್ಲಿ ಭರವಸೆಯನ್ನು ಹುಟ್ಟಿಸಿರುವ ಈ ತರುಣ ಕವಿಗಳು ಕಾವ್ಯಕಲೆಯ ಸಾಧನೆಯಲ್ಲಿ ಅಲ್ಪತೃಪ್ತಿಗೆ ಎಡೆಗೊಡದೆ, ನಿರಂತರ ಪರಿಶ್ರಮದಿಂದ ಮುಂದುವರಿದು ಕನ್ನಡ ಕಾವ್ಯಕ್ಕೆ ಒಳ್ಳೊಳ್ಳೆಯ ಕಾಣಿಕೆಗಳನ್ನು ಕೊಡುವಂತಾಗಲಿ ಎಂದು ಹಾರೈಸುತ್ತೇನೆ.
(೧೯೭೪)

೧೭

# ಹತ್ತರಗೂಡ ಹನ್ನೊಂದು

ಶ್ರೀ ಪಾಟೀಲ ಶಿವಶರಣ ಜಾವಳಿಯವರು 'ಹಾಲುತೊರೆಯಿಂದ ಉಪ್ಪು ನೀರಿಗೆ' ಎಂಬ ಮೊದಲ ಕವನಸಂಗ್ರಹದಲ್ಲಿ ತಮ್ಮ ಕಾವ್ಯಮಾರ್ಗವನ್ನು ರೂಪಿಸಿಕೊಳ್ಳಲು ಪ್ರಯತ್ನಿಸುತ್ತ ಭರವಸೆ ಹುಟ್ಟಿಸುವಂಥ ಕೆಲವು ಗುಣಗಳನ್ನು ತೋರಿದ್ದರು. ಈ ಎರಡನೆಯ ಸಂಕಲನದಲ್ಲಿ ತಕ್ಕಮಟ್ಟಿನ ಬೆಳವಣಿಗೆಯನ್ನು ತೋರಿಸಿರುವದು ಸಂತೋಷದ ಸಂಗತಿಯಾಗಿದೆ. ಈ ಕವನಗಳಲ್ಲಿ ಕವಿ ನವ್ಯಮಾರ್ಗವನ್ನೇ ಅನುಸರಿಸಿದ್ದರೂ ತನ್ನ ಸ್ವರೂಪವನ್ನು ಸ್ಪಷ್ಟಪಡಿಸಿಕೊಳ್ಳುವಲ್ಲಿ ಯಶಸ್ವಿಯಾಗಿದ್ದಾನೆ. ಭಾಷೆಯ ಕಸುವಿಗೆ, ಮಾತಿನ ಚಮತ್ಕಾರಕ್ಕೆ ಮರುಳಾಗಿ ಬಿಡದೆ ಅದನ್ನು ಸಂಯಮದಿಂದ ಬಳಸಿ ಪ್ರತಿಮಾ ವಿಧಾನದಲ್ಲಿ ಆಸಕ್ತಿವಹಿಸಿದ್ದಾನೆ. ಪರಿಸ್ಥಿತಿಯನ್ನು ಎದುರಿಸಲಾರದ ಹತ್ತರ ಕೂಡ ಹನ್ನೊಂದಾಗಿ ಹರಿಗುಂಟ ತೇಲಿಹೋಗುವ ನಿಸ್ಸಹಾಯಕ ಸ್ಥಿತಿಯ ಮೇಲೆಯೇ ಇಲ್ಲಿ ಒತ್ತು ಬಿದ್ದಿದ್ದರೂ ವಿಡಂಬನೆ ಹದಗೊಂಡು, ಅಲ್ಲಲ್ಲಿ ವ್ಯಂಗ್ಯವೂ ಪರಿಣಾಮಕಾರಿಯಾಗಿ ಕೆಲಸ ಮಾಡಿದೆ.

ವಸ್ತುವಿನ ಆಚೆಯನ್ನು ಸುಂದರವಾಗಿ ಧ್ವನಿಸುವ 'ಪಯಣ', ಪ್ರತಿಮೆ-ಪ್ರತೀಕಗಳನ್ನು ಕ್ರಿಯಾತ್ಮಕವಾಗಿಯೂ, ಸಮರ್ಥವಾಗಿಯೂ ಬಳಸಿ, ಕಾವ್ಯಶಕ್ತಿಯನ್ನೆ ಬೆಳೆಸಿಕೊಂಡಿರುವ 'ಅಜ್ಜ ನೆಟ್ಟಿರುವ ಆಲದಮರ', 'ನಮ್ಮ ಭಾವೈಕ್ಯತೆಯ ಕಥೆ', 'ಸ್ಥಳಪುರಾಣ', ಕವನದ ನಿರ್ವಹಣೆಯಲ್ಲಿ ಭಾವ-ಚಿತ್ರ-ವೈದೃಶ್ಯದ ಮೂಲಕ ಮನಸ್ಸಿಗೆ ಚುರುಕು ಮುಟ್ಟಿಸುವ 'ನಾಯಿ', 'ಕಾಲದಿಂದ ಕಾಲಕ್ಕೆ' 'ವೈಕುಂಠ-ಕೈಲಾಸ' ಇದೇ ಮೊದಲಾದ ಕವಿತೆಗಳಲ್ಲಿ ಕವಿಯ ಸತ್ವ ಎದ್ದುಕಾಣುತ್ತದೆ.

ಈ ಸಂಗ್ರಹದ ಚಿಕ್ಕ ಕವನಗಳದೇ ಒಂದು ಸೊಗಸು. ಸಾಮಾನ್ಯ ಬಗೆಯ ಚುಟುಕುಗಳ ಪ್ರಾಸ-ಪದಗಳ ಚಮತ್ಕಾರಕ್ಕಿಂತ ಕವನದ ಸಹಜವಾದ ನಡೆಯಲ್ಲಿ ಇವು ಅರ್ಥವತ್ತಾಗಿ ಮಿನುಗುತ್ತವೆ. 'ಟೊಪ್ಪಿಗೆ ಶರ್ಟುಗಳ ಕಥೆ', 'ಜಾರುವ ಮಾತು ಕೆಳಗೆ', 'ಮೀಸೆಯ ಹೆಜ್ಜೆ' 'ವಿರಹ', 'ನಲ್ಲಿಯ ನೀರು', 'ಅಗ್ನಿ ದುರಂತ' ಈ ಹನಿಗವನಗಳ ಹೊಳಪೇ ಬೇರೆ.

ಇವರ ಈ ಸ್ವಂತಿಕೆ, ಸಮಕಾಲೀನ ಪ್ರಜ್ಞೆಯಿಂದ ಒಗುಮಿಗುವ ಅನುಭವದ, ಅಭಿವ್ಯಕ್ತಿಯ ಸಾಮರ್ಥ್ಯ-ಇವುಗಳನ್ನು ನೋಡಿದಾಗ ಈ ಕವಿ ಹತ್ತರ ಕೂಡ ಹನ್ನೊಂದಲ್ಲ ಎನ್ನುವುದನ್ನು ಸೂಚಿಸುತ್ತವೆ. ತಮ್ಮ ಮುಂದಿನ ಕೃತಿಗಳನ್ನು ಇನ್ನಷ್ಟು ಆಶೆಯಿಂದ ನಿರೀಕ್ಷಿಸಲು ಪ್ರೇರಿಸಿರುವ ಈ ಕವಿಯ ಭವಿಷ್ಯ ಉಜ್ವಲಗೊಳ್ಳಲಿ ಎಂದು ಹಾರೈಸುತ್ತೇನೆ. (೧೯೭೫)

# ೧೮
## ಬಾ ಪರೀಕ್ಷೆಗೆ

ಇತ್ತೀಚೆಗೆ ಕಾವ್ಯಕ್ಷೇತ್ರದಲ್ಲಿ ಕಾಲಿರಿಸಿದ ಮಹಿಳೆಯರು ಪ್ರಗತಿಪರವಾಗಿ ಮುನ್ನಡೆಯುತ್ತಿರುವದು ಪ್ರಶಂಸನೀಯ. ನೂತನ ಸಂವೇದನೆಯನ್ನೊಳಗೊಂಡ ಶ್ರೀ ಮಾಲತಿ ಪಟ್ಟಣಶೆಟ್ಟಿಯವರ ಈ ಪ್ರಥಮ ಸಂಕಲನವನ್ನು ಅತ್ಯಂತ ಸಂತೋಷದಿಂದ ಸ್ವಾಗತಿಸುತ್ತೇನೆ.

ಕನ್ನಡ ಕಾವ್ಯಕ್ಕೆ ಈಗ ಮತ್ತೊಂದು ಸಂಕ್ರಮಣ ಕಾಲ. ನವ್ಯ ಈಗ ಬರಿ ಅನುಕರಣೆಯಾಗಿ ಉಳಿದುಕೊಂಡಿದ್ದು ತನ್ನ ಪೂರ್ಣರೂಪವನ್ನು ಇನ್ನೂ ಪಡೆಯಬೇಕಾದ ಹೊಸ ಬಗೆಯ ಕಾವ್ಯ ಅಲ್ಲಲ್ಲಿ ಹಣಿಕಿ ಹಾಕುತ್ತಿದೆ. ಈ ಸಂದರ್ಭದಲ್ಲಿ ಹೊರಬರುತ್ತಿರುವ 'ಬಾ ಪರೀಕ್ಷೆಗೆ' ಅನೇಕ ಕಠಿಣ ಪ್ರಶ್ನೆಗಳನ್ನು ಎದುರಿಸಬೇಕಾಗಿದ್ದರೂ ಸ್ವಂತ ಅನುಭವದ ಸಿದ್ಧತೆಯಿಂದ ಅದು ಸಹಜವಾಗಿ ತೇರ್ಗಡೆ ಪಡೆಯಬಲ್ಲದು.

ಸಂಕೀರ್ಣಗೊಂಡ ಇಂದಿನ ಬದುಕಿನಲ್ಲಿ ವ್ಯಕ್ತಿಗೆ ಸುತ್ತು ಹತ್ತೂ ಕಡೆಯಿಂದ ಎರಗುವ ಆಘಾತಗಳು ಅನೇಕ; ವ್ಯಕ್ತಿಗಳ ನಡುವಣ ಸಂಬಂಧಗಳು ಜಟಿಲಗೊಂಡು ಪರಸ್ಪರ ನೋವು, ನಿರಾಶೆ, ತಳಮಳಗಳನ್ನು ಹೆಚ್ಚಿಸುತ್ತಿವೆ. ಜೀವನದಲ್ಲಿ ಒದಗುವ ಹಲ ಬಗೆಯ ಕುತ್ತುಗಳು ನುಂಗಲಾರದ ತುತ್ತುಗಳಾಗಿ ಸಹನೆಯ ಪರೀಕ್ಷೆಗೆ ನಿಲ್ಲುತ್ತವೆ. ಇವುಗಳಿಗೆ ತಕ್ಷಣ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸದೆ ಅಂತರ್ಮುಖಿಯಾದ ಕವಿ ತನ್ನ ಚಿಂತನೆಯ ಕಾವಿನಲ್ಲಿ ಅವುಗಳನ್ನು ಕುದಿಸುತ್ತಾನೆ. ಅದಕ್ಕೆ ಪ್ರತಿರೂಪಗಳನ್ನು ಕಂಡರಿಸಿ ಆತ್ಮೀಯವಾಗಿ ಮಾಡಿಕೊಂಡು ಅವುಗಳೊಡನೆ ಸಂಭಾಷಣೆ ನಡೆಸುತ್ತ ತನ್ನ ಭಾವನೆಗಳನ್ನು ತೋಡಿಕೊಳ್ಳುತ್ತಾನೆ. ಶ್ರೀಮತಿ ಮಾಲತಿ ಪಟ್ಟಣಶೆಟ್ಟಿಯವರ ಇಲ್ಲಿಯ ಕವಿತೆಗಳು ಸಾಮಾನ್ಯವಾಗಿ ಈ ಸ್ವರೂಪದವು.

ಬೂದಿ ಮುಚ್ಚಿದ ಕೆಂಡದಂತೆ ಒಳಗೊಳಗೇ ನಿಗಿನಿಗಿಸುತ್ತಿರುವ ಇಲ್ಲಿಯ ಸಂವೇದನೆ ತನಗೆ ತಕ್ಕ ಪ್ರತಿಮೆ-ಪ್ರತೀಕಗಳಲ್ಲಿ ಅಭಿವ್ಯಕ್ತಿ ಪಡೆದಾಗ ತಮ್ಮ ಪರಿಮಿತಿಯಲ್ಲಿಯೇ ಪರಿಣಾಮಕಾರಿಯಾಗಿರುವದಕ್ಕೆ 'ಕಣಜ', 'ಪರೀಕ್ಷೆ', 'ಆಸೆ', 'ನಿರೀಕ್ಷೆ', 'ಸಂಗಾತಿ' ಮೊದಲಾದ ಕವಿತೆಗಳನ್ನು ನೋಡಬಹುದು.

ಹೊಸ ಹಳೆ ನೋವು
ಕಣಜ
ಹೊರಹಾಕದೆ ಗೆದ್ದಲಿ ಹಿಡಿದು
ನುಸಿಯಾಡಿ ಹುಡಿಯಾದೀತೆಂದು
ಹೊರಗೆ ಅಂಗಳದಲ್ಲಿ
ಸುರುವಬೇಕೆಂದಿದ್ದೆ. (ಕಣಜ)

ಇಲ್ಲಿಯ ಎಲ್ಲ ಕವಿತೆಗಳ ವಸ್ತು ಸಾಮಾನ್ಯವಾಗಿ ಇದೆ ಆಗಿದ್ದರೂ

ಭೂತ ಭುಗಿಲ್ಲೆಂದೆದ್ದು
ಸಹಿಸಲಾರದೆ ಸಹಿಸಿದ ದಿನ
ಕೊಳ್ಳಿ ತಿವಿ ತಿವಿದು
ನಕ್ಕಾಗ (ಭೂತ)

ಉಂಟಾದ ನೋವು ಇಲ್ಲಿಯ ವ್ಯಕ್ತಿತ್ವದಾಳದಲ್ಲಿ ಮಡುಗೊಂಡಿದೆ. 'ಸುತ್ತಿ ಸುತ್ತಿ ಕೆರಳಿದ ಕ್ಷಿತಿಜ', 'ಧರೆಯಾಗಿ ಅಧರ ಕಚ್ಚಿದ್ದೆ' 'ಸಂಜೆ ಸೂರ್ಯಕಾಂತಿ... ಜೋತಾಡುವ ನಿರಾಶೆ ಗುಲಾಪು', 'ಉರಿವ ನಾಲಗೆ ಚಾಚಿದ ಗುಲ್‌ಮೊಹರ್', 'ಜರ್ಜರಿತ ಮಗ್ಗಲು ಹಾಸಿಗೆ', 'ಸಂದಿಯಲಿ ಹೆಡೆಯೆತ್ತಿ ನಿಂತ ನೆನಪು', 'ವೇದನೆ ಕತ ಕತ ಕುದ್ದು ಕೆನೆಗಟ್ಟಿ', 'ವಿಶ್ವಾಸದಿರಿತಗಳು', 'ಹೆಣ ಪೂರ್ಣ ಸುಡಲು ಕಾಯ್ದ ಬ್ರಾಹ್ಮಣ', 'ಕನಸಿನ ಕಸ', 'ತಲೆ ಮೂಸಿಸಿಕೊಳ್ಳದ ಬೀದಿ ಮಕ್ಕಳು', 'ಅಗ್ನಿ ಪರೀಕ್ಷೆಗೆ ನಿಂತೇ ಇರುವೆ ಸೀತೆ' ಹೀಗೆ ಈ ಪದ್ಯಗಳಲ್ಲಿ ಇಡಿಕಿರಿದಿರುವ ರೂಪಕ-ಪ್ರತೀಕಗಳು ಇಲ್ಲಿಯ ಅನುಭವವನ್ನು ಜ್ವಲಂತಗೊಳಿಸಿವೆ.

ಗಾಯಗೊಂಡ ಮನಸು ತಾಳ್ಮೆಯಿಂದ ಇನ್ನಿಷ್ಟು ತಿಳಿಗೊಂಡು ಕೋಮಲವಾದಾಗ 'ಬಾ ಒಮ್ಮೆ', 'ಹಂಬಲ', 'ನಿರ್ಮೋಹಿ'ಯಂಥ ಹೃದಯದಾಳದ ಕರೆಯಾಗಿ ಭಾವಮಾಧುರ್ಯವನ್ನು ಪಡೆಯುತ್ತವೆ :

ಉಲಿಯೊಮ್ಮೆ ಒಲವಿನ ಮಾತು
ಉರುಳಿಹೋಗುವುದಿಲ್ಲ ನಿನ್ನ ಅಂತಸ್ತು (ನಿರ್ಮೋಹಿ)

ಮಾರಬೇಡ ಪ್ರೀತಿವಿಶ್ವಾಸಗಳ ಮಾರುಕಟ್ಟೆಯಲ್ಲಿ
ಕೊಳ್ಳಬೇಡ ಕ್ಷಣಿಕದಮಲುಗಳ (ಗಡಂಗಿಗೆ)

ಕಳೆದುಕೊಂಡಿಲ್ಲ ಪಚ್ಚೆ ಮುತ್ತು
ಹೋಗಿಲ್ಲ ಹವಳದ ಗುರುತು
ದೇಹದಮಲುಗಳ ಹೂಳಿ ಹುಳಿತು
ಬೇಸತ್ತು ಬಹಳ ದಿನವಾಯ್ತು
ಬಾ ಒಮ್ಮೆ (ಬಾ ಒಮ್ಮೆ)

ಇಂಥ ಎಡೆಗಳಲ್ಲಿ ಮಾತು ಯಾವ ಅಲಂಕಾರವನ್ನೂ ಬಯಸದೆ ಹೃದಯಕ್ಕೆ ನೇರವಾಗಿ ಮುಟ್ಟುತ್ತದೆ.

ಮೂವತ್ತೈದರಲಿ
ಮುಪ್ಪಿನುಪ್ಪನುಣಿಸಿದವರ
ಉಪಕಾರ ಎಷ್ಟೆಂದು ಹೇಳಲಿ ? (ಉಪಕಾರ)

ಇಂಥ ಸೂಕ್ಷ್ಮ ವ್ಯಂಗ್ಯ ಅಲ್ಲಲ್ಲಿ ಕವಿತೆಯ ಸತ್ವವನ್ನು ಮೆರೆದಿದೆ.

ಕೆಲವು ಸಲ ಭಾವದ ಉತ್ಕಟತೆ, ಚಿಂತನದ ಹೊಳಪು ತಗ್ಗಿದಾಗ ಪ್ರತೀಕಗಳನ್ನು ಎಳೆದೆಳೆದು ತಂದು ಜೋಡಿಸಿದಂತಾಗಿ ಕವಿತೆಯ ದನಿ ಕುಗ್ಗುತ್ತದೆ. ('ಕುತ್ತು', 'ಅನ್ವೇಷಣೆ' ಇತ್ಯಾದಿ)ಪದ್ಯದ ಸಾಲಿನಲ್ಲಿ ಪದಗಳನ್ನು ಮತ್ತು ಪ್ರತ್ಯಯಗಳನ್ನು ಒಡೆದು ಮುಂದಿನ ಸಾಲಿಗೆ ಹಾಕುವದು ಒಮ್ಮೊಮ್ಮೆ ವಿಶೇಷಾರ್ಥವನ್ನು ನೀಡಬಹುದಾದರೂ ಬರಬರುತ್ತ ಅದೊಂದು ಚಟವಾಗಿ ಪರಿಣಮಿಸಿದ್ದನ್ನು ಇಲ್ಲಿ ಕಾಣುತ್ತೇವೆ. ಲಯವನ್ನು ಕವಿತೆಯ ಅರ್ಥಕ್ಕಾಗಿ ದುಡಿಸಿಕೊಳ್ಳುವಾಗ ಇಂಥ ಚಮತ್ಕಾರಗಳಿಂದ ದೂರವಿದ್ದಷ್ಟು ಒಳ್ಳೆಯದು. ಹೀಗೆ ಒಂದು ಗುಣ ಸ್ಫುಟವಾಗುವದರಲ್ಲಿಯೇ ಮತ್ತೊಂದು ಗುಣ ಮಾಸುತ್ತದೆ. ಪರಿವರ್ತನ ಕಾಲದ ಪರಿಣಾಮವಾಗಿ ಇಂಥ ಕೆಲವು ದೋಷಗಳುಳಿಯುವದು ಸ್ವಾಭಾವಿಕ.

ತಮ್ಮ ಕಾವ್ಯ ಜೀವನದ ಪ್ರಥಮ ಘಟ್ಟದಲ್ಲಿಯೇ ದಿಟ್ಟತನದ ಅಭಿವ್ಯಕ್ತಿಯನ್ನು ತೋರಿಸಿರುವ ಶ್ರೀಮತಿ ಮಾಲತಿ ಪಟ್ಟಣಶೆಟ್ಟಿಯರ ಮುಂದಿನ ಬೆಳವಣಿಗೆಯನ್ನು ಕಾವ್ಯಪ್ರೇಮಿಗಳು ಕುತೂಹಲದಿಂದ ನಿರೀಕ್ಷಿಸಬಹುದಾಗಿದೆ.

(೧೯೭೬)

೧೯

## ನಾಕ ಹೆಜ್ಜೆ

ಯಾಕ ಸುಳ್ಳಕ ಸುಳ್ಳ
ಕಾಗದಾ ಮಸಿ ಕೆಡಸತೀರಿ
ನಾಕ ಹೆಜ್ಜೆ ಗುರತಾ
ಬಿಟ್ಟ ಹೋಗ್ರಿ

ಎನ್ನುವ ಆತ್ಮವಿಶ್ವಾಸದಿಂದ ಕಾವ್ಯರಂಗದಲ್ಲಿ ಹೆಜ್ಜೆಯಿಟ್ಟಿರುವ ಶ್ರೀಮತಿ ಲೀಲಾವತಿ ತೋರಗಟ್ಟಿಯವರ ಈ ಕವನ ಸಂಗ್ರಹಕ್ಕೆ ಮುನ್ನುಡಿಯ ಅವಶ್ಯಕತೆಯನ್ನೇನೂ ಕಾಣೆ. ಆದರೂ ಅವರ ಕೋರಿಕೆಯ ಮೇರೆಗೆ ಈ ಎರಡು ಮಾತನ್ನು ಸಂತೋಷದಿಂದ ಬರೆಯುತ್ತಿದ್ದೇನೆ.

ಶ್ರೀಮತಿ ತೋರಣಗಟ್ಟಿಯವರು ಸಾಹಿತ್ಯದ ಒಳ್ಳೆಯ ಅಭ್ಯಾಸಿಗಳು; ಕಾಲೇಜಿನಲ್ಲಿ ಅಧ್ಯಾಪಕಿಯಾಗಿ ಕೆಲಸ ಮಾಡಿದವರು; 'ಜನಪದ ಸಾಹಿತ್ಯದಲ್ಲಿ ಮಾತೃವಾತ್ಸಲ್ಯ' ಎಂಬ ಅವರ ಚಿಕ್ಕ ಪುಸ್ತಕ ಜನಪದ ಸಾಹಿತ್ಯದಲ್ಲಿ ಅವರಿಗಿರುವ ವಿಶೇಷ ಆಸಕ್ತಿಯನ್ನೂ ಆತ್ಮೀಯತೆಯನ್ನೂ ವ್ಯಕ್ತಪಡಿಸುತ್ತದೆ. ಅದೇ ಕಾರಣಕ್ಕಾಗಿಯೊ ಏನೊ ಈ ಸಂಗ್ರಹದ ಕವನಗಳೆಲ್ಲವೂ ಬೆಳಗಾಂವಿ ಜಿಲ್ಲೆಯ ಬಳಕೆಯ ಮಾತಿನ ಧಾಟಿಯಲ್ಲಿಯೇ ಮೂಡಿ ಬಂದಿವೆ.

ಸಮಾಜದ ರೀತಿ-ನೀತಿ-ನಡಾವಳಿಗಳನ್ನೂ, ಮನುಷ್ಯ ಸ್ವಭಾವದ ಲೋಪ-ದೋಷಗಳನ್ನೂ ಇವರು ತಮ್ಮ ಕಾವ್ಯದ ವಸ್ತುವನ್ನಾಗಿ ಮಾಡಿಕೊಂಡಿದ್ದು, ಭಾವುಕತೆಗೆ ವಿಶೇಷವಾಗಿ ಅಂಟಿಕೊಳ್ಳದೆ ವೈಚಾರಿಕತೆಯ ಕಡೆಗೆ ಹೆಜ್ಜೆಯಿಟ್ಟಿರುವುದು ಈ ಸಂಗ್ರಹದ ಒಡೆದು ಕಾಣುವ ಗುಣವಾಗಿವೆ. 'ನಮ್ಮನಿ', 'ನಮ್ಮೆತ್ತ', 'ಮದರೋಗ', 'ಹರಕಿ ಹೊರಲ್ಯಾ', 'ರಪಾಟಿ', 'ಮಾರಾಯರ' ಇವೇ ಮೊದಲಾದ ಕವಿತೆಗಳಲ್ಲಿ ಕಟಕಿ, ವ್ಯಂಗ್ಯ, ಅನ್ಯೋಕ್ತಿ ಒಂದರೊಡನೊಂದು ಬೆರೆತು ನಿರೂಪಣೆ ಪರಿಣಾಮಕಾರಿಯಾಗಿದೆ. ಒಮ್ಮೆ ಸ್ವಗತವೆಂಬಂತೆ, ಮತ್ತೊಮ್ಮೆ ಸಮೀಪದವರೊಡನೆ ಸಂಭಾಷಣೆ ನಡೆಸಿದಂತೆ ಇರುವ ಇಲ್ಲಿಯ ಅಭಿವ್ಯಕ್ತಿಯ ರೀತಿ ಸಹಜತೆಯಿಂದ ಕೂಡಿದೆ. ಆದರೆ ಪ್ರಾದೇಶಿಕತೆಗೆ ಬದ್ಧವಾದ ಇಲ್ಲಿಯ ಮಾತಿನ ಧಾಟಿ, ಅದನ್ನು ಓದುವ ರೀತಿಯಲ್ಲಿ ಓದದೆ ಹೋದರೆ ತನ್ನ ಸ್ವಾರಸ್ಯಕ್ಕೆ ಎರವಾಗುವ ಸಂಭವವಿದೆ. ಅಲ್ಲದೆ ಈ ಬಗೆಯ ಅಭಿವ್ಯಕ್ತಿಯಲ್ಲಿ ಸಂಯಮ ಸಾಲದೆ ಹೋದಾಗ, ಕವಿತೆಯ ಬಂಧ ಸಡಿಲಾಗಿ ಹೇಳಿದ್ದೆಲ್ಲಾ ಜಾಪಾಳವೆನಿಸುವ ಅಪಾಯವೂ ಇದೆ.

ಒಟ್ಟಿನಲ್ಲಿ ಸಾಮಾಜಿಕ ಆಸಕ್ತಿಯುಳ್ಳ ಈ ಕವಿತೆಗಳ ಧೋರಣೆ ಆರೋಗ್ಯಕರವಾದದ್ದು; ತನ್ನತನದ ವೈಶಿಷ್ಟ್ಯವನ್ನು ಉಳಿಸಿಕೊಳ್ಳಲು ಹವಣಿಸುವಂಥದು; ನಿಸ್ಸಂಕೋಚವಾಗಿ ಮುನ್ನಡೆಯುವ ಭರವಸೆಯುಳ್ಳುದು. ಈ ಕಾರಣಗಳಿಗಾಗಿ, ಶ್ರೀಮತಿ ತೋರಣಗಟ್ಟಿಯವರ ಈ ಸಂಕಲನ ಮುಂದೆ ಬರಬಹುದಾದ ಅವರ ಇನ್ನೂ ಉತ್ತಮ ಕೃತಿಗಳಿಗೆ ನಾಂದಿಯಾಗಲಿ ಎಂದು ಹಾರೈಸುತ್ತೇನೆ.

(೧೯೭೬)

## ೨೦

## ಮೂವತ್ತೈದು ಕವನಗಳು

ನೀವು ಕಳುಹಿಸಿಕೊಟ್ಟ 'ಮೂವತ್ತೈದು ಕವನಗಳು' ಮುದ್ರಿತ ಪ್ರತಿ ತಲುಪಿದೆ. ಇದಕ್ಕೊಂದು ಹಿನ್ನುಡಿ ಅನಿಸಿಕೆ ಅಥವಾ ಒಂದು ವಿಚಾರ, ಏನೇ ಆಗಲಿ ಬರೆದು ಕೊಡಬೇಕು ಎಂದು ಆಗ್ರಹಪೂರ್ವಕ ಕೇಳಿಕೊಂಡಿದ್ದೀರಿ. ಪ್ರಥಮ ಸಂಗ್ರಹವನ್ನು ಪ್ರಕಟಿಸುತ್ತಿರುವಾಗಿನ ನಿಮ್ಮ ಆತುರ ಕಾತರಗಳನ್ನು ನಾನು ಅರ್ಥಮಾಡಿಕೊಳ್ಳಬಲ್ಲೆ. ಆದರೆ ನನಗೀಗ ಸಮಯವಿಲ್ಲದ್ದರಿಂದ ಈ ಪತ್ರದಲ್ಲಿಯೇ ಒಂದೆರಡು ಮಾತುಗಳನ್ನು ಬರೆಯುತ್ತಿದ್ದೇನೆ.

ಮೂರು ವರ್ಷಗಳ ಹಿಂದೆ ನಮ್ಮ ವಿಶ್ವವಿದ್ಯಾಲಯದಲ್ಲಿ ಏರ್ಪಡಿಸಿದ ವಿದ್ಯಾರ್ಥಿ ಕವಿ ಸಮ್ಮೇಳನದಲ್ಲಿ ನೀವು ಭಾಗವಹಿಸಿ ಕವಿತೆಗಳನ್ನೋದಿದ್ದು ನನಗೆ ನೆನಪಿದೆ. ಈ ಸಂಗ್ರಹದಲ್ಲಿರುವ ಕವಿತೆಗಳೂ ಆ ಮೇಲಿನವೇ ಇರಬೇಕು. 'ನನ್ನ ಪ್ರಯತ್ನ ಹೇಗಿದೆಯೋ ಏನೋ' ಎಂಬ ಅನುಮಾನ ನಿಮಗಿರುವುದು ಸಹಜವೇ. ಜೊತೆಗೆ 'ಬರೆಯದೆ ಇರಲಾರದಂಥ ಪರಿಸ್ಥಿತಿಯಲ್ಲಿಯೇ ಇವನ್ನು ಬರೆದಿದ್ದೇನೆ' ಎಂದೂ ಹೇಳಿದ್ದೀರಿ. ಈ ಸಂಗ್ರಹದಲ್ಲಿ ಕಣ್ಣಾಡಿಸಿದಾಗ ಆ ಮಾತು ಎಷ್ಟೋ ಮಟ್ಟಿಗೆ ನಿಜವಿರಬೇಕು ಎಂದು ಅನಿಸುತ್ತದೆ.

ಇದರಲ್ಲಿ ವೈಯಕ್ತಿಕ ಎನ್ನಬಹುದಾದ ಕೆಲವು ಕವಿತೆಗಳು ಇದ್ದರೂ ಸಾಮಾನ್ಯ ಜನರ, ಅದರಲ್ಲೂ ಕೆಳವರ್ಗದವರ ಜೀವನದ ನೋವು ಸಂಕಷ್ಟಗಳನ್ನು ನಿರೂಪಿಸಲು ನೀವು ಹೆಚ್ಚು ಪ್ರಯತ್ನಿಸಿರುವದು ಕಂಡುಬರುತ್ತದೆ, 'ಬದಕ್ತಾವ', 'ಥಟ್ಬ್ಯಾ', 'ಗೌಡ್ರ ಸಂಕ್ರೆಪ್ಪ', 'ಕುರು' ಮೊದಲಾದ ಕವಿತೆಗಳಲ್ಲಿ ಈ ಧ್ವನಿ ಕೇಳಿಸುತ್ತದೆ. ಸಾಮಾಜಿಕ ರೀತಿನೀತಿಗಳು ವಿಡಂಬನೆಯೂ ಅಲ್ಲಲ್ಲಿ ತಲೆದೋರದೆ ಇಲ್ಲ. 'ಮೆರೊಣಗಿ' 'ಸತ್ತಧ್ವನಿಗಳು', 'ರೇಡಿಮೇಡ ದುಕಾನ', 'ಊರಡೊಂಗರು' ಇವುಗಳನ್ನು ಇಲ್ಲಿ ಎತ್ತಿ ಹೇಳಬಹುದು. ಬೀದರ ಜಿಲ್ಲೆಯ ಆಡು ಮಾತನ್ನು ಇಲ್ಲಿ ಇದ್ದಕ್ಕಿದ್ದಂತೆ ಅನೇಕ ಕಡೆಗಳಲ್ಲಿ ಬಳಸಿದ್ದೀರಿ, ಅದನ್ನು ಅರ್ಥಪೂರ್ಣವಾಗಿ ಬಳಸಿಕೊಂಡಾಗ ಮಾತ್ರ ಅದರಿಂದ ಕಾವ್ಯಕ್ಕೆ ಪೋಷಣೆಯೆಂಬುದನ್ನು ಮಾತ್ರ ಮರೆಯಬಾರದು. 'ನಾನು', 'ಹೊರಗಿನಗಾಳಿ', 'ಹರಿದು ಹೋಗಿದ್ದೇನೆ', 'ಫುಕಾಟ ಬರಗಾಲ'ದಂತಹ ಚಿಕ್ಕ ಕವನಗಳು ಚೊಕ್ಕವೆನಿಸಲು ಕಾರಣ ಭಾವ ಭಾಷೆಗಳ ಅನುರೂಪ ಹೊಂದಾಣಿಕೆ.

ಹೊಸಬರು ಪ್ರಚಲಿತ ಕಾವ್ಯರಚನೆಯ ಫ್ಯಾಷನ್‌ಗೆ ಮರುಳಾಗುತ್ತಿರುವದು ಹೆಚ್ಚಾಗಿ ಕಂಡು ಬರುತ್ತಿರುವಾಗ ತೀವ್ರ ಸಂವೇದನೆಯ ಮಿಡಿತವನ್ನು ನಿಮ್ಮ ಕಾವ್ಯ ಕಾಪಾಡಿಕೊಳ್ಳಲಿ ಎಂದು ಆಶಿಸಿದರೆ ತಪ್ಪಾಗಲಿಕ್ಕಿಲ್ಲವಷ್ಟೆ ?

(೧೯೭೭)

## ೨೧

## ತಾಪದ ಕಿಡಿ

ಈ ಕವನಸಂಕಲನಕ್ಕೆ ನಿಜಕ್ಕೂ ಮುನ್ನುಡಿಯ ಅವಶ್ಯಕತೆ ಇರಲಿಲ್ಲ. ಏಕೆಂದರೆ ಇದರ ಸಂಪಾದಕರಿಗೆ 'ತಾಪದ ಕಿಡಿಗಳ' ಇತಿಮಿತಿಗಳು ಗೊತ್ತಿವೆ. ಅಲ್ಲದೆ, ಸಮಗ್ರ ಸಂಕಲನದ ನಿರ್ದಿಷ್ಟ ಒಲವಿಗೆ ಹೊರತಾದ ಕವನಗಳೂ ಇಲ್ಲಿರುವುದನ್ನು ಅವರು ಅರಿತಿದ್ದಾರೆ. ಸುಪ್ತ ಪ್ರತಿಭೆಗಳಿಗೆ ಚೇತನ ನೀಡುವ ಮೂಲ ಉದ್ದೇಶದಿಂದ ಹೊರಟ ಅವರಿಗೆ ಇಲ್ಲಿಯ "ಯುವಕ ಕವಿಗಳ ಧೋರಣೆಗಳು ನಿರ್ದಿಷ್ಟವಾಗಿದ್ದರೂ ತಮ್ಮ ಕಾವ್ಯದ ಸ್ವರೂಪದ ಬಗ್ಗೆ ಅವರಿಗೂ ಒಂದು ನಿರ್ಧಾರಕ್ಕೆ ಬರಲು ಸಾಧ್ಯವಾಗುತ್ತಿಲ್ಲ" ಎಂಬ ವಿಮರ್ಶಾ ಪ್ರಜ್ಞೆಯೂ ಅವರಿಗಿದೆ. ಆದರೂ "ಶಬ್ದಗಳಲ್ಲಿ ನಾವು ಮಾಡುತ್ತಿರುವ ಕಸರತ್ತಿಗೂ ಒಂದು ಅರ್ಥವಿದೆ" ಎಂಬ ಅವರ ಆತ್ಮವಿಶ್ವಾಸ ಇಲ್ಲಿ ಒಡೆದು ಕಾಣಿಸುತ್ತದೆ. ಒಟ್ಟಿನಲ್ಲಿ ಸಮಕಾಲೀನ ಪ್ರಜ್ಞೆ, ಮತ್ತು ಕವಿಗೆ ಇರುವ ಅಂತರಕ್ಕೆ ಸೇತುವೆ ನಿರ್ಮಿಸುವ ಅಗತ್ಯವನ್ನು ಕಂಡುಕೊಂಡಿರುವ ಸಂಪಾದಕರಾದ ಶ್ರೀ ರಮೇಶ ಧಾನವಾಡಕರ ಅವರ ಈ ಪ್ರಯತ್ನ ಮೆಚ್ಚುವಂಥದು.

ನೂರು ಆಕಾಂಕ್ಷೆಗಳ ಬಸಿರೊಡೆದು
ಹೆರಲು ಇಂಬಿಲ್ಲದೆ, ಕಲ್ಪನೆಯ
ವಿಫಲತೆಯ ಮರೆಗೆ
ಭೂತ ಸಾಯುತ್ತದೆ.
ಸತ್ತ ದೇಹದ ದ್ವಾರಾ
ನಾಳೆಯಸ್ತಿತ್ವಕ್ಕೆ ಈ ವರ್ತಮಾನ
ಈ ಕ್ಷಣಕ್ಕಷ್ಟೆ ಸತ್ಯ; ಮುಂದೆ ಹೇಗೋ ಏನೊ (ಪ್ರಶ್ನೆ)

ಎನ್ನುವ ಸಮಸ್ಯೆಯನ್ನು ಚಿಂತನಶೀಲವಾಗಿ ಎದುರಿಸುತ್ತಿದೆ ಇಂದಿನ ಯುವ ಜನಾಂಗ. ನಿತ್ಯ ಇಂಥ ನೋವನ್ನು ನಾಳೆಯ ಒಳಿತಿಗಾಗಿ ಸಹಿಸುತ್ತಿದ್ದರೂ ಒಮ್ಮೊಮ್ಮೆ ನಿರಾಶೆಗೂ ಒಳಗಾಗುವುದುಂಟು :

ಅಜ್ಜ ಮುತ್ತಜ್ಜನ ಹಗ್ಗದಿಂದೇರಿದವರ ಸಿಂಹಾಸನದ
ಮಾಯಾ ತಂತಿಯನು ಕತ್ತರಿಸಿ ಹೋಗಿ ಪಾತಾಳದಲಿ
ನನ್ನ ಪೀಳಿಗೆ ಜಾರಿದರೂ ಮತ್ತೊಮ್ಮೆ
ಜಲಪಾತವಾಗಿ, ಕರಂಟಾಗಿ.... (ನನ್ನ ಪೀಳಿಗೆ)

ಅದು ಮಾರ್ಪಡುತ್ತಿರುವಂತೆಯೇ "ತನ್ನ ಗೋರಿಯನು ತಾನೇ ಕಟ್ಟುತ್ತಿರುವಂತೆ" ತೋರುವದುಂಟು. ಇಂದಿನ ವಿಷಮ ಪರಿಸ್ಥಿತಿಯಲ್ಲಿ ಯುವಕರ ಪಾಡೇ ಹೀಗಾಗಿದೆ :

ವರ್ಷದ ಮೇಲೆ ವರ್ಷ ಹೇರಿಕೊಂಡರೂ ಬಿಡದೆ
ಬೀಸಿದ ಗಾಳಿಗಳಲ್ಲೆಲ್ಲ ತೂರಿಕೊಂಡು
ಊರಲ್ಲಿದ್ದ ಚೂರು-ಪಾರು ಹೊಲ ಮನೆಗಳನ್ನೆಲ್ಲ ಮಾರಿಕೊಂಡು
ಒಂದು ಪದವಿ, ಒಂದು ಬಡತಿಯ
ಕೊಡಲಿ ಏಟಿಗೆ ತಲೆ ಹಿಡಿದುಕೊಂಡು ಬಿಟ್ಟ ಸಮಯದಲ್ಲಿ
(ಆತ್ಮಹತ್ಯೆ)

-ಕೂತುಂಡೇ ಬದುಕಿದವರನ್ನು ಬೈಯುತ್ತ, ಅವರು ಕಲಿಸುವ ವಿದ್ಯೆಯನ್ನೇ ಪಠಿಸುತ್ತ, ಇರದ ನಂಬಿಕೆಗೆ ಇಂಬುಗೊಡುವದು ಹೇಗೆ ಸಾಧ್ಯ ? ಇಂಥ ಒಂದು ಸಂದಿಗ್ಧ ಪರಿಸ್ಥಿತಿಯನ್ನು ಇಲ್ಲಿಯ ಕೆಲವು ಕವನಗಳು ದಿಟ್ಟತನದಿಂದ ಚಿತ್ರಿಸುತ್ತವೆ.

ಇದೇ ಸಂದರ್ಭದಲ್ಲಿ ವ್ಯಾಪಕವಾದ ರೀತಿಯಲ್ಲಿ ತನ್ನ ಸಮಾಜ ಸಮುದಾಯದ ಆಗು-ಹೋಗುಗಳ ಜೊತೆಗೆ ತನ್ನನ್ನು ತೊಡಗಿಸಿಕೊಂಡಾಗ ತನ್ನ ಪ್ರಾಮಾಣಿಕ ಪ್ರತಿಕ್ರಿಯೆಯನ್ನು ಅಭಿವ್ಯಕ್ತಿಗೊಳಿಸಿದ ಕವನಗಳೂ ಇಲ್ಲಿವೆ.

ಇಂಡಿಯಾದ ದರಿದ್ರ ದಲಿತನ ಸುಂದರ
ಎಲುಬುಗೂಡಿನ ಮೋಹಕ ಭಂಗಿಗೆ
ಸ್ವಿಸ್ ಫೋಟೋಗ್ರಾಫರನಿಗೆ
ಅಂತರ್‌ರಾಷ್ಟ್ರೀಯ ಪ್ರಶಸ್ತಿ (ಗಾಂಧಿ ಸಾಹಿತ್ಯ)

ಇಂಥ ಕ್ರೂರ ಸತ್ಯ ಅನೇಕ ರೀತಿಯಲ್ಲಿ ಇವರ ಅನುಭವಕ್ಕೆ ಬಂದಿದೆ. ಅದಕ್ಕಾಗಿ ಅವನು ಕಾದಿದ್ದಾನೆ, 'ರಾಮನ ಬರುವಿಗೆ ಕಾದ ಶಬರಿಯ ಹಾಗಲ್ಲ, ಆ ಶಬರಿಗಾಗಿಯೇ ಕಾದ ರಾಮನಂತೆ'. ಏಕೆಂದರೆ 'ರತ್ನಗರ್ಭಾ ವಸುಂಧರೆಗೆ ಗರ್ಭಪಾತ ತಪ್ಪಿಯೇ ಇಲ್ಲ' ಇದು ಕಠೋರವಾದ ವಾಸ್ತವ ಸ್ಥಿತಿ.

ಬಡ ಜನರ ಶೋಷಣೆ ನಿತ್ಯವೂ ನಡೆದಿದೆ. ಅದೂ ಮೋಸದ ಬಲೆಯನ್ನು ಒಡ್ಡುತ್ತಲೇ:

ಭಂಡ ಬೇಡರು ಹರವಿದ ವ್ಯವಸ್ಥೆಯ
ಬಲೆಯಲ್ಲಿ ಅನ್ನದಗುಳಿಗಾಗಿ ಅರಿಯದೆ
ಅಡಿಯಿಟ್ಟು ಅನಿವಾರ್ಯವಾಗಿ ತೊಡರಿಕೊಂಡು
ಹಿಂಡು ಹಿಂಡಾಗಿ ಅನುದಿನವೂ
ಮುಗ್ಧ ಮುದ್ದು ಹಕ್ಕಿಗಳು ಸಾಯುತ್ತಿವೆ ! (ಹಕ್ಕಿಗಳೇಕೆ ಸಾಯುತ್ತಿವೆ)

ಮುದಿ ಪರಂಪರೆಯ ಮಂಪರಿನಿಂದ ಎಚ್ಚತ್ತು, ಅಜ್ಞಾನ, ಆಲಸ್ಯ, ದೌರ್ಬಲ್ಯ ದಾಸ್ಯಗಳನ್ನು ಕಳಚಿ ಸೇಡಿನ ಕಿಡಿಯಾಗಿ ಸಿಡಿಯಲು ಅವುಗಳಿಗೆ ಕರೆ ನೀಡುತ್ತಾನೆ ಕವಿ :

.... ಒಂದಾಗಿ ನಿಮ್ಮೆಲ್ಲ
ಬಲ ಬಳಸಿ ಒದ್ದು ದೂರ ದಿಗಂತಕ್ಕೆ ಸಿಡಿದು
ಹಕ್ಕಿನ ಪುಕ್ಕ ಬಿಚ್ಚಿ ಎಲ್ಲೆ ಮೀರಿ ಹಾರಿ !

ಬಡತನವನ್ನು ಜೀತಕ್ಕೆ ದುಡಿಸಿಕೊಳ್ಳುತ್ತ ದರ್ಪದಿಂದ ಮೆರೆಯುತ್ತಿರುವ ಸಿರಿವಂತರ ಕಟುಕತನಕ್ಕೆ ಬೇಸತ್ತು.

ಪ್ರಳಯ ಕಾದಿಹುದು ನಿಮಗೆ ಮುಂದಿನ ಬಾಗಿಲಲಿ
ತೂಗಾಡುತ್ತಿದೆ ಡೆಮಾಕ್ಲಸ್‌ನ ಕತ್ತಿಯ ಅಲಗು ನಿಮಗಾಗಿ
(ಕಾದಿಹುದು ಡೆಮಾಕ್ಲಸ್‌ನ ಕತ್ತಿ)

ಎಂದು ಕೊನೆಯ ಎಚ್ಚರಿಕೆಯನ್ನು ನೀಡುತ್ತಾನೆ.

ಈ ದೇಶದ ಅನಿಷ್ಟ ಪರಂಪರೆಗೆ ಮೂಲವಾದ ಜಾತಿವಾದದ ಅನಾಹುತವನ್ನು ಇಂದಿನ ತರುಣ ಕವಿ ತೀಕ್ಷ್ಣವಾಗಿ ಪರೀಕ್ಷಿಸಬಲ್ಲವನಾಗಿದ್ದಾನೆ. ದಲಿತರ ಕೊರಳಿನ ದನಿಯಾಗಿ ಅವರ ರೋಷ, ರೊಚ್ಚು, ಆಕ್ರೋಶವನ್ನೆಲ್ಲ ಒಂದೇ ಬಾರಿಗೆ ಹೊರ ಹೊಮ್ಮಿಸುವ ಪದ್ಯ 'ಜಾತಿವಾದಿಗಳಿಗೆ ಹೊಲೆಯ ಹೇಳಿದ್ದು', 'ತಾಪದ ಕಿಡಿ'ಗಳಲ್ಲಿ ಇಂಥ ಒಂದೆರಡು ಕೋಪದ ಕಿಡಿಗಳೂ ಇವೆ. ಇಡಿಯ ದೇಶದ ಸದ್ಯದ ಪರಿಸ್ಥಿತಿಯನ್ನು ಪರೀಕ್ಷಿಸಿದಾಗ 'ದೇಶಭಕ್ತ ಸೂಳೆಯ ಮಗನ ಅಸಂಗತ ಕವನ'ಕ್ಕೂ ಇಲ್ಲಿ ಆಸ್ಪದ ದೊರೆತಿರುವದು ಅಸಹಜವೇನೂ ಅಲ್ಲ.

ಹೀಗೆ ಬದುಕಿನ ವಿವಿಧ ಸ್ತರಗಳಲ್ಲಿಯ ಅನುಭವಗಳ ಸಾಧ್ಯತೆಗಳು ಇಲ್ಲಿ ಕಾವ್ಯದ ಸಾಧ್ಯತೆಗಳಾಗುವ ಅಂಚಿನಲ್ಲಿವೆ. ಅಂದರೆ ಕಾವ್ಯದ ಕಾವಿನಲ್ಲಿ ಅವಿನ್ನೂ ಮಾಗಬೇಕಾಗಿದೆ. ಸಾಮಾಜಿಕ ಪರಿಸರದ ಪ್ರಜ್ಞೆಯುಳ್ಳ ಇನ್ನೊಂದು ಬಗೆಯ ಪದ್ಯಗಳೂ ಈ ಸಂಕಲನದಲ್ಲಿವೆ.

ನೀವು ಯಾವ ಕೆಲಸಕ್ಕೂ ಸೇರದೆಯೇ
ಹಣ ಸಂಪಾದಿಸಬಹುದು (ಶ್ರೀಮತಿಯವರೇ)

- ಹೇಗೆ ಎಂಬುದನ್ನು ವಿಡಂಬಿಸಿ ಹೇಳುವ ಹಾಗೆಯೇ

ನಮ್ಮ ಸರಕಾರಿ ಕಚೇರಿಗಳಲ್ಲಿ ಕುರ್ಚಿಗಳು ಖಾಲಿ (ಕಚೇರಿಗಳು)

ಯಾಗಿರುವ ಸ್ಥಿತಿಯನ್ನು ನೇರವಾಗಿ ಚುಚ್ಚುವಂತೆ ನಿರೂಪಿಸುವ ರೀತಿಯನ್ನೂ ಇಲ್ಲಿ ಕಾಣಬಹುದು.

ತಮ್ಮಾ ಎಷ್ಟೂಂತ ಓದತೀಯೋ
ಬಂಡಿಗಟ್ಲೆ ಮೋಟರಗಟ್ಲೆ ಪುಸ್ತಕಾನಾ !
ಎಲ್ಲಾದರಾಗೂ ಇರೋದು ಮನುಷ್ಯಾರ ಜೀವನಾನ್ಸ

(ಅಜ್ಜಿ ಹೇಳಿದ ದೃಷ್ಟಾಂತ)

ಎಂದು ಅಜ್ಜಿ ಹೇಳುವ ಜೀವನಾನುಭವದ ದೃಷ್ಟಾಂತಕ್ಕೆ ಕಿವಿಗೊಡುವಂತಾದರೆ 'ಪುಸ್ತಕದ ಜೊತೆ ಮನುಷ್ಯಾರದೂ ಅಭ್ಯಾಸ' ಮಾಡಲು ಪ್ರಚೋದನೆ ದೊರೆಯದೆ ಇರದು.

ಒಂದು ಸನ್ನಿವೇಶದ ಕಾವ್ಯಮಯತೆಯನ್ನು ಸುಂದರವಾಗಿ ವೈಯಕ್ತಿಕತೆಯಿಂದ ನಿಧಾನವಾಗಿ ಸಾರ್ವತ್ರಿಕತೆಗೊಯ್ಯುವ 'ಖಾಲಿ ರೋಡುಗಳು ಮತ್ತು ನಾನು', ಸಾವಿನಂಥ ಅಮೂರ್ತ ಭಾವಕ್ಕೆ ಬದುಕಿನ ಹಲವು ಮಗ್ಗಲುಗಳನ್ನು ಚಿಂತನೆಯ ಹಿನ್ನಲೆಯಲ್ಲಿ ಸಾಣೆಹಚ್ಚಿ ಹೊಳೆಯಿಸುವ 'ಸಾವೇ!', ಜೀವನದ ಒಂದು ಗಾಢವಾದ ಅನುಭವದ ಯಾತನೆಯನ್ನು ಸಂಯಮದಿಂದ ಅದು ನೋವು ಸುಳಿಯದಂತೆ ನಿರೂಪಿಸುವ 'ಕಂದಕ' ಇವೇ ಮುಂತಾದ ಒಳ್ಳೆಯ ಇನ್ನೂ ಕೆಲವು ಕವಿತೆಗಳು ಇಲ್ಲಿವೆ :

ಕೂಡಿಸಿ ಕಳೆಯುವ
ಬದುಕಿನ ಲೆಕ್ಕದ
ಸೊನ್ನೆಗಳು
ಈ
ನಿನ್ನೆಗಳು (ನಿನ್ನೆಗಳು)

ಇಂಥ ವಾಸ್ತವಪ್ರಜ್ಞೆಯುಳ್ಳ ಬೆಳೆಯಬಲ್ಲ ಕವಯಿತ್ರಿ 'ನಿನ್ನೆ'ಗಳಲ್ಲಿ ಸೇರಿಕೊಂಡದ್ದು ಬದುಕಿನ ಒಂದು ವಿಪರ್ಯಾಸವೇ.

'ಕ್ಲೀನ್‌ಬೌಲ್ಡ್', 'ನೆನಪಿಗೆ', 'ಏಕಾಂಗಿ', 'ಪ್ರಾಮಾಣಿಕತೆ', 'ಅಳಲು', 'ನವ್ಯ ನವೋದಯ', 'ಕನಸು', 'ಅನಿಸಿಕೆ' ಇವೇ ಮೊದಲಾದ ಚುಟುಕುಗಳು ಹೊಸ ಭಾವದ ಹೊಳಪಿನಿಂದ ಅಭಿವ್ಯಕ್ತಿಯ ಮೊನಚಿನಿಂದ ಪರಿಣಾಮಕಾರಿಯಾಗಿವೆ.

ಇದೇ ಸಂಕಲನದ 'ಭ್ರೂಣ'ದಲ್ಲಿ ಕಾಣಿಸಿದಂತೆ 'ಹೊರಸು ಕಂಡೊಡನೆ ಹಡೆಯಲು ಕೂಡ್ರುವ ಹೆಣ್ಣಾಗಿ' ಅವಸರದಲ್ಲಿ ಹುಟ್ಟಿದ ಕವನಗಳೂ ಇಲ್ಲಿ ಇರಬಹುದು. ಅದರ ಅರಿವು ಅವುಗಳ ರಚಕರಿಗೂ ಇರುವದು ಸಮಾಧಾನದ ಸಂಗತಿಯೆಂದೇ ಹೇಳಬಹುದು.

ಹೊಸ ಪೀಳಿಗೆಯ ಕವಿಗಳಲ್ಲಿ ಆಸ್ಥೆಯುಳ್ಳವರು, ಅವರ ಹೊಸ ಒಲವುಗಳನ್ನು

ಗುರುತಿಸಬೇಕೆನ್ನುವವರು, ಹೀಚಿನಲ್ಲಿಯೇ ಕಾಯಿಯ ಗುಣವನ್ನು ಕಾಣಬೇಕೆನ್ನುವವರು ಈ ಕವನ ಸಂಕಲನವನ್ನು ಸಹಾನುಭೂತಿಯಿಂದ ಪರಿಶೀಲಿಸುತ್ತಾರೆಂದು ನಾನು ಆಶಿಸಿದ್ದೇನೆ. ಈ ಸಂಕಲನದ ಸಂಪಾದನೆಯ ಕಾರ್ಯದಲ್ಲಿ ಶ್ರಮವಹಿಸಿರುವ ಶ್ರೀ ರಮೇಶ ಧಾನವಾಡಕರ ಅವರನ್ನು ನಾನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ. ಇದಕ್ಕೆ ನಾನು ಮುನ್ನುಡಿಯನ್ನು ಬರೆಯಲೇಬೇಕೆಂದು ಆತ್ಮೀಯವಾಗಿ ಒತ್ತಾಯಿಸಿದ ಶ್ರೀ ವಿಜಯ ಪಾಟೀಲ ಅವರಿಗೂ ನನ್ನ ನೆನಕೆಗಳು.

(೧೯೭೮)

## ೨೨

## ಜಿರಕಿ ಜೋಡು

ಸರಾಗವಾದ ತ್ರಿಪದಿಯಲ್ಲಿ 'ಗೀತವಾತಾಪಿ'ಯನ್ನು ಬರೆದು ಕಥನ ಕಾವ್ಯದಲ್ಲಿ ತಮಗಿರುವ ಆಸಕ್ತಿಯನ್ನು ತೋರ್ಪಡಿಸಿದ ಶ್ರೀ ಮೃತ್ಯುಂಜಯ ಹೊರಕೇರಿಯವರು 'ಜಿರಕಿ ಜೋಡು' ಸಂಗ್ರಹದಲ್ಲಿ ತಮ್ಮ ಜಾನಪದ ಸಂವೇದನೆಗೆ ಸಮಕಾಲೀನ ಜೀವನದಲ್ಲಿ ಹೊಕ್ಕು-ಬಳಕೆಯನ್ನು ಸಾಧಿಸಲು ಪ್ರಯತ್ನಿಸಿದ್ದಾರೆ.

ಬಾದಾಮಿ ಮುಗಿದರ ಹಾದ್ಯಾಗ ಬನಶಂಕ್ರಿ
ಹಾದು ಹೋಗೂಣು ನಡಿಯವ್ವ । ದೇವಿಯು
ಕಾದು ನಿಂತಾಳ ನಮಗಾಗಿ

ಎನ್ನುವ 'ಗೀತವಾತಾಪಿ'ಯ ಸರಳವಾದ ಹಾಡಿನ ಧಾಟಿ ಈ ಸಂಗ್ರಹದಲ್ಲಿ

ಹಾಳ ಹರಿಕತಿಯಂತ ಹೇಳಾಕ ನಿಂತಿಲ್ಲಾ
ಬಾಳೇದ ಮಾತೈತ್ರಿ ನಮಗೆಲ್ಲಾ

ಎಂದು ವಾಸ್ತವ ಪ್ರಜ್ಞೆಯನ್ನು ಸೋಕುತ್ತದೆ. ದೀನ-ದಲಿತರ ಶೋಷಣೆಯ ಚಿತ್ರ ಹಾಗೂ ಅವರ ಬಾಳಿನ ನೋವಿನ ಮೇಲೆ ಇಲ್ಲಿಯ ಪದ್ಯಗಳು ಕಾವು ಕೂತಿವೆ.

ಜಿರಕ್ ಜಿರಕ್ ಜಿರಕ್ ಜಿರಕ್
ಜಿರಕಿ ಜೋಡೋ
ಹರಕೊಂಡು ತಿಂತೀವಂತಾವು
ಕೇಳಿ ನೋಡೋ

ಕೆಳವರ್ಗದ ಜನವನ್ನು ಮೆಟ್ಟಿ ಮೋಜು ಮಾಡುವ ಮೇಲಿನ ವರ್ಗದ ಜನರಿಗೆ ಅವರ ಆಕ್ರೋಶದ ದನಿ ಮೆಟ್ಟ ಬೀಳುವಂತೆ ಮಾಡುವ ಸೂಚನೆ ಇಲ್ಲಿದೆ. 'ನಾನು ನೀವು' ಕವನದಲ್ಲಿ ಈ ಶೋಷಣೆಯ ಚಿತ್ರ ಸಾಲು ಸಾಲಾಗಿ ಮೂಡಿ ಬಂದಿವೆ.

'ಹಾದರ ಹೊತ್ತು ದೇವರ ಹೊತ್ತ್ಯಾ' ಎನ್ನುವ 'ಜೋಗತಿ', 'ಊರಕೂರ ಕಿವಿಬಾಯಿ ಕೂಡ್ಸಿ ಆಡಿಕೊಳ್ಳು ಹೊತ್ತಿನ್ಯಾಗ ತುಡಗ-ಬಡಗ ಯಾಕ್ರಿ ಗೌಡ್ರ ?' ಎಂದು ಕೇಳುವ 'ಹನುಮಂತನ ಹೆಂತಿ', 'ಕಿರಸ್ಯಾಗ ಕೈಯಿಟ್ಟರ ತುಣುಕು ರೊಟ್ಟಿ ಸಿಗದಿದ್ದರೂ ಧಣೇರು ಗುಡಸಲಕ್ಕ ಬಂದಾರೆಂದರೆ

‘ಎಮ್ಮೀ ಗಿಣ್ಣಾ ಸುರಕೊಂಡಂಗಾತ್ರಿ’ ಎಂದು ಅವರನ್ನು ವ್ಯಂಗ್ಯವಾಗಿ ಸ್ವಾಗತಿಸುವ ದುರುಗ, ಕನ್ನಡ ಕಾವ್ಯದ ಹೊರಳು ಹಾದಿಯಲ್ಲಿ ತಮ್ಮ ಧ್ವನಿಯನ್ನು ಎತ್ತಿರುವುದು ಮಹತ್ವದ ಸಂಗತಿಯಾಗಿದೆ.

‘ನನ್ನ ನಲುಮೆ ನಲ್ಲೆ’, ‘ಬನಶಂಕ್ರಿ ಜಾತ್ರೆ’ ಹಾಗೂ ‘ಬಯಕಿ ಬುತ್ತಿ’ಯಂಥ ಕವಿತೆಗಳಲ್ಲಿ ಅನುಕರಣೆಯ ಧಾಟಿ ಈ ಕವಿಯನ್ನು ಮತ್ತೆ ಹಿಂದಕ್ಕೆ ಜಗ್ಗಿದಂತೆ ಕಂಡರೂ ‘ಇತಿಹಾಸ’, ‘ದೊಡ್ಡ ಮನೆ ತುಂಬ ಅಡ್ಡಗೋಡೆಗಳು’ದಂಥ ಕವಿತೆಗಳು ಇವರು ಸ್ವಂತಿಕೆಯಿಂದ ಮುಂದುವರಿಯಬಲ್ಲರೆಂಬುದನ್ನು ಸೂಚಿಸುತ್ತವೆ. ಶ್ರೀ ಮೃತ್ಯುಂಜಯ ಹೊರಕೇರಿಯವರು ಸಂಯಮದಿಂದ ಹಾಗೆ ಮುಂದುವರಿಯಲಿ ಎಂದು ಹಾರೈಸುತ್ತೇನೆ.

(೧೯೭೮)

## ೨೩

## ಬಾಳ ಹಂದರ

ಕಾವ್ಯಪ್ರೇಮಿಗಳಾದ ಪ್ರೊ. ಬಿ.ಟಿ. ಸಾಸನೂರ ಅವರ ಮೂಲಕ ಶ್ರೀ ಮಾಣಿಕ ಗಂಗನಪಳ್ಳಿಯವರ 'ಬಾಳ ಹಂದರ'ದ ಹಸ್ತಪ್ರತಿ ನನ್ನ ಕೈಸೇರಿತು. ನಾನಿದನ್ನು ನೋಡಿ, ಮುನ್ನುಡಿಯ ಎರಡು ಮಾತು ಬರೆಯಬೇಕೆಂಬುದು ಅವರ ಆಶಯವಾಗಿತ್ತು. ಬೀದರದ ಒಂದು ಮೂಲೆಯ ಹಳ್ಳಿಯಲ್ಲಿ ಪ್ರಾಥಮಿಕ ಶಾಲೆಯ ಶಿಕ್ಷಕರಾಗಿರುವ ಶ್ರೀ ಗಂಗನಪಳ್ಳಿಯವರ ಸಾಹಸವನ್ನು ಮೆಚ್ಚಿ ನಾನು ಇದಕ್ಕೆ ಒಪ್ಪಿಕೊಂಡೆ.

ಉರ್ದು ಭಾಷೆಯ ಹೇರಿಕೆಯಿಂದ ತತ್ತರಿಸಿ, ಜೀವಹಿಡಿದುಕೊಂಡಿದ್ದ ಬೀದರ ಜಿಲ್ಲೆಯ ಕನ್ನಡ, ಕರ್ನಾಟಕ ಒಂದಾದ ಮೇಲೆ ಮೆಲ್ಲಮೆಲ್ಲಗೆ ಚೇತರಿಸಿಕೊಳ್ಳತೊಡಗಿ, ಅಲ್ಲಿ ಮೇಲೆದ್ದ ಶಿಕ್ಷಣ ಸಂಸ್ಥೆಗಳಿಂದಲೂ ಹೊಸ ಹೊಸ ಬರೆಹಗಾರರಿಂದಲೂ ಎಲ್ಲರೂ ಅದೇ ಪ್ರದೇಶದವರಲ್ಲದಿದ್ದರೂ-ತನ್ನ ಜೀವಕಳೆಯನ್ನು ಹೆಚ್ಚಿಸಿಕೊಳ್ಳತೊಡಗಿದೆ. ಈ ದಿಸೆಯಲ್ಲಿ ಸಾಹಿತ್ಯದ ಒಲವುಳ್ಳ ಪ್ರಾಥಮಿಕ ಶಾಲೆಯ ಶಿಕ್ಷಕರ ಹುಮ್ಮಸ್ಸಿನ ಕಾರ್ಯ ಪ್ರಶಂಸನೀಯವಾದುದು. ಇದು ಆ ಪ್ರದೇಶಕ್ಕೆ ವಿಶಿಷ್ಟವಾದದ್ದೆಂದು ಹೇಳಬರದಿದ್ದರೂ ಅವರಿಂದ ಆಗಿರುವ ಕೆಲಸ, ವಿವಿಧ ಭಾಗಗಳ ಕನ್ನಡದ ಬೆಳವಣಿಗೆಯ ದೃಷ್ಟಿಯಿಂದ ಗಮನಾರ್ಹವಾದದ್ದು. ಶ್ರೀ ಸಾಸನೂರ ಅವರಿಂದ ಕಾವ್ಯದೊಸಗೆಯನ್ನು ಪಡೆದ ಶ್ರೀ ಗಂಗನಪಳ್ಳಿಯವರು ತಮ್ಮ ಪ್ರಥಮ ಕವನ ಸಂಗ್ರಹ 'ಬಾಳ ಹಂದರ'ದ ಮೂಲಕ ಬೆಳಕಿಗೆ ಬರುತ್ತಿರುವುದು ಸಂತೋಷದ ಸಂಗತಿಯಾಗಿದೆ.

ಕನ್ನಡವನ್ನು ಮಾತನಾಡಿದರೂ ಅದನ್ನು ಬರೆಯಲುಬಾರದ ಎಷ್ಟೋ ಜನ ತನ್ನ ಸುತ್ತಮುತ್ತ ಇರುವಾಗ 'ಕನ್ನಡಾಂಬೆ ಮತ್ತು ನಾನು' ಎಂಬ ಕವಿತೆಯಲ್ಲಿ;

ಕನ್ನಡದ ಲಿಪಿಯ ಕುಡಿಬಳ್ಳಿಯೊಲು ಬರೆಯಲೇನು ?
ತಾಯ್ನುಡಿಯ ಸವಿನುಡಿಯು ಕನ್ನಡದ ಕಾಮಧೇನು

ಎಂದು ಹಾಡಿಕೊಳ್ಳುವಲ್ಲಿ ಆಶ್ಚರ್ಯವಿಲ್ಲ. ನಾಡು-ನುಡಿಯ ಈ ಅಭಿಮಾನವೇ ಅವರ ಹಲವಾರು ಕವಿತೆಗಳಿಗೆ ಪ್ರೇರಣೆಯಾಗಿದೆ. ಕನ್ನಡದ ನುಡಿ 'ಕರ್ಣರಸಾಯನ'ವಾಗಿ, 'ಮೋಹನ ಮಂತ್ರ'ವಾಗಿ 'ಪ್ರೀತಿಯ ಮೆಲ್ಲುಲಿ'ಯಾಗಿ 'ಜೀವನ ದರ್ಶನ'ವಾಗಿರುವುದನ್ನು ಕವಿ ಜನತೆಗೆ ಮತ್ತೆ ಮತ್ತೆ ಹೇಳುವುದರಲ್ಲಿ ಒಂದು ಅರ್ಥವಿದೆ. ಹಾಗೆಯೇ ನಮ್ಮ ಭಾರತದ ಕನಸು ಎದೆಯಲ್ಲಿ ಮೂಡಿದಾಗ

ಅರುಣ ಕಾಂತಿಯ
ಉದಯ ಚೇತನ
ಎನ್ನ ತನುಮನ ತುಂಬಿದೆ

ಎಂದೂ ಕವಿ ಉತ್ಸಾಹಗೊಂಡು ನುಡಿಯಬಲ್ಲ. 'ನಾಡ ಜನತೆಯ ಒಂದುಗೂಡಿಸೆ' ಅವರ ಕರುಳನ್ನು ಮಿಡಯಬಲ್ಲ.

ಛಂದ ನಟಿಯ ತಾಳಕೆ
ಕಾವ್ಯ ಬಂಧ ಮೂಡಿದೆ

ಎಂದು ತನ್ನ ಕಾವ್ಯಾರಂಭವನ್ನು ನಿರೂಪಿಸುವ ಇವರು ಅದಕ್ಕನುಗುಣವಾಗಿ 'ಬೆಳಕು ಹರಿಯಿತು', 'ಬೇಸಿಗೆಯ ದೃಶ್ಯ', 'ವಿಜಯ ದಶಮಿ', 'ಈ ಯುಗಾದಿ', 'ಬಾಳಗೀತೆ', 'ಏನ್ ಹೇಳಲಿ ?' ಮುಂತಾದ ಕವಿತೆಗಳಲ್ಲಿ ಅಲ್ಲಲ್ಲಿ 'ಭಾವ ಸೆಲೆಯ ಮಿಂಚಿನಲೆ'ಯನ್ನೂ ಕಾಣಿಸಿದ್ದಾರೆ.

ಮಹಾನುಭಾವರ ಜೀವನದಿಂದಲೂ ಇವರ ಕಾವ್ಯ ಸ್ಫೂರ್ತಿಯನ್ನು ಪಡೆದಿದ್ದು, ಕೆಲವೆಡೆ ಅದನ್ನು ತಕ್ಕ ಮಾತಿನಲ್ಲಿ ಅಭಿವ್ಯಕ್ತಿಗೊಳಿಸಿರುವದನ್ನೂ ಮುಂದಿನ ಉದಾಹರಣೆಗಳಲ್ಲಿ ಕಾಣಬಹುದು.

ಸಾಗಿಹನು ಬುದ್ಧನದೊ
ದುಃಖದ ಬೇರಗಿಯಲು
ಹುಣ್ಣಿಮೆಯ ಇರುಳಿನಲಿ
ಕಾಡದಾರಿ ತುಳಿಯಲು (ಬುದ್ಧನ ತ್ಯಾಗ)

ಸಾವಿನಲಿ ಜೀವನದ
ಮಹತಿಯನು ತೆರೆದವನು
ಕ್ರೈಸ್ತನವನು (ಕ್ರೈಸ್ತನಾರು ?)

ಎನ್ನೆದೆ ಹೊಲ ಹದಗೊಳಿಸಿ
ಕೃಷಿ ಮಾಡಲು ಬಾ
ಭಕ್ತಿಯ ಸಸಿ ನೀನೆಟ್ಟು
ಬೆಳೆ ಬೆಳೆಸಲು ಬಾ (ಬಸವ ಬೇಗ ಬಾ)

ಹೃದಯ ಬೃಂದಾವನದೊಳಿಲ್ಲೆ ಕೊಳಲು ಮೊರೆಯುತಿದೆ
ತನ್ನ ಒಳ್ದನಿ ಅರಿಯದಾಗಿ ಜೀವ ತೊಳಲುತಿದೆ (ಹೃದಯ ಬೃಂದಾವನ)

ಇಷ್ಟಿದ್ದರೂ ಈ ಪ್ರಥಮ ಸಂಗ್ರಹದಲ್ಲಿ ಕಾವ್ಯಕ್ಕೆ ಹೊರತಾದ ಬರಿಯ ಗದ್ಯದಲ್ಲಿಯೇ ಹೇಳಿಬಿಡಬಹುದಾದ, ವಾಚ್ಯವೆನಿಸುವ ಎಷ್ಟೋ ಪದ್ಯಗಳಿವೆ. ಕಾವ್ಯದ ಒಂದು ಹದ ಅಲ್ಲಿ, ಇಲ್ಲಿ ಕೆಲವು ಸಾಲುಗಳಲ್ಲಿ ಕೈಗೆಸಿಕ್ಕಂತೆ ಮಾಡಿ ತಪ್ಪಿಸಿಕೊಳ್ಳುವದೇ ಹೆಚ್ಚು. ಅದನ್ನು

ಸಂಪೂರ್ಣವಾಗಿ ಹಿಡಿದುಕೊಳ್ಳುವ, ಹಾಗೂ ಅದಕ್ಕೆ ಭಾಷೆಯನ್ನು ಚೆನ್ನಾಗಿ ದುಡಿಸಿಕೊಳ್ಳುವ ಹಾಗೆಯೇ ಅನುಭವವನ್ನು ಆಳವಾಗಿಸುವ ಕಡೆಗೆ ಈ ಕವಿ ಗಮನಕೊಟ್ಟಷ್ಟೂ ಮುಂದೆ ಇನ್ನೂ ಒಳ್ಳೆಯ ಕವನಗಳು ಇವರಿಂದ ಬಂದಾವು, ಬರಲಿ ಎಂದು ಹಾರೈಸಿ ಅವರಿಗೆ ಶುಭ ಕೋರುತ್ತೇನೆ (೧೯೭೮)

## ೨೪

## ಪರಿಸರ

ಶ್ರೀಮತಿ ಸುಕನ್ಯಾ ಮಾರುತಿ ಅವರು ತಮ್ಮ ಪತಿಯೊಡನೆ ಹೊಸಪೇಟೆಯಿಂದ ಧಾರವಾಡದವರೆಗೆ ಬಂದು, ನಾನು ಊರಲ್ಲಿಲ್ಲವೆಂದು ತಿರುಗಿ ಹೋಗಿ, ಮತ್ತೆ ಪುನಃ ಬಂದು ನನ್ನನ್ನು ಕಂಡರು. ತಮ್ಮ ಕವಿತೆಗಳ ಹಸ್ತಪ್ರತಿಯನ್ನು ಅಳುಕುತ್ತಲೇ ನನ್ನ ಕೈಗಿತ್ತರು. ಈ ತರುಣ ದಂಪತಿಗಳು ವಿನಯಶಾಲಿಗಳಾಗಿರುವುದು ನನಗೆ ಸಂತೋಷವನ್ನುಂಟುಮಾಡಿತು. ನಾನು ಕುಳಿತ ಮೆಟ್ಟಿನಲ್ಲಿಯೇ ಕವಿತೆಗಳನ್ನು ಅಲ್ಲಲ್ಲಿ ಕಣ್ಣಾಡಿಸಿ "ಪರವಾಗಿಲ್ಲ ಚೆನ್ನಾಗಿವೆ" ಎಂದೆ. ಅವರಿಗೆ ಒಂದಿಷ್ಟು ಧೈರ್ಯ ಬಂದಿತೆಂದು ತೋರುತ್ತದೆ. 'ಪ್ರಕಟಿಸಲು ಅರ್ಹವಾಗಿವೆಯೆ?' ಎಂದು ಮತ್ತೆ ಕೇಳಿದರು. 'ಪ್ರಕಟಿಸಬಹುದಲ್ಲ' ಎಂದೆ. 'ನೀವು ಮುನ್ನುಡಿ ಬರೆದರೆ ಮಾತ್ರ' ಎಂದು ತಮ್ಮ ದೃಢ ಸಂಕಲ್ಪವನ್ನು ವ್ಯಕ್ತಪಡಿಸಿದರು. ಇದು ಆರೇಳು ತಿಂಗಳುಗಳ ಹಿಂದಿನ ಮಾತು. ಅಚ್ಚಾದ ಫಾರ್ಮುಗಳು ನನ್ನ ಕೈಸೇರಿ ಆಗಲೇ ತಿಂಗಳಾಗುತ್ತಾ ಬಂತೇನೊ. ಈಗ ಆ ಕೆಲಸ ಪೂರೈಸುತ್ತಿದ್ದೇನೆ.

ಸಮಕಾಲೀನ ಕಾವ್ಯದಲ್ಲಿ ಪರಿಸರ ಪ್ರಜ್ಞೆಗೆ ವಿಶೇಷ ಒತ್ತು ಬೀಳುತ್ತಿರುವ ಸಂದರ್ಭದಲ್ಲಿ ಸುಕನ್ಯಾ ಅವರ ಕವಿತೆ ಸಹಜವಾಗಿಯೇ ಆ ದಿಶೆಯಲ್ಲಿ ಧೈರ್ಯವಾಗಿ ಹೆಜ್ಜೆಯಿರಿಸಿದೆ. 'ಪರಿಸರದಲ್ಲಿ'ರುವ ಸಾಮಾಜಿಕ, ನೈತಿಕ ಹಾಗೂ ಕೆಲಮಟ್ಟಿಗೆ ರಾಜಕೀಯ ಅಂಶಗಳು ಇವರ ಅನುಭವಕ್ಕೆ ತಾಕಿದಾಗ ಉಂಟಾದ ಪ್ರತಿಕ್ರಿಯೆ ಇಲ್ಲಿಯ ಕವಿತೆಗಳಲ್ಲಿ ಮೂಡಿದೆ. ವಸ್ತುನಿರ್ವಹಣೆಗೆ ಎಷ್ಟುಬೇಕೋ ಅಷ್ಟು ಮಾತನ್ನು ಹಸನಾಗಿಯೇ ಬಳಸಿ, ಆದಷ್ಟು ಮಟ್ಟಿಗೆ ಹೇಳುವ ರೀತಿ ವಾಚ್ಯವಾಗದಂತೆ ನೋಡಿಕೊಂಡಿರುವುದು ಇಲ್ಲಿ ಮೆಚ್ಚಬೇಕಾದ ಅಂಶ.

ಅನುಭವಗಳ ಸೂಕ್ಷ್ಮತೆ ತಕ್ಕ ಸಂಕೇತಗಳನ್ನು ಮೈಗೂಡಿಸಿಕೊಂಡಿದೆ. 'ವಿಮಾನಬಂತು', 'ಈ ರಸ್ತೆ', 'ಅರಿವು', 'ವಿದ್ರೋಹ', 'ಕಳಕೊಂಡವನು' ಇವೇ ಮೊದಲಾದ ಕವಿತೆಗಳು ಇದಕ್ಕೆ ನಿದರ್ಶನವಾಗಿವೆ.

ತನ್ನತನವನ್ನು ಕಾಪಾಡಿಕೊಂಡಿರುವ ಇವರ ಕವಿತೆ ಅನುಭವ ವಿಸ್ತಾರಗೊಂಡಂತೆ ಇನ್ನೂ ಹೆಚ್ಚಿನ ಹದವನ್ನು ಶಕ್ತಿಯನ್ನು ಪಡೆದುಕೊಳ್ಳುವ ಭರವಸೆ ಹುಟ್ಟಿಸುತ್ತದೆ. ಅವರ ಕಾವ್ಯೋಪಾಸನೆ ನಿರಂತರ ನಿಷ್ಠೆಯಿಂದ ಮುಂದುವರಿಯಲಿ ಎಂದು ಹಾರೈಸಿ ಅವರಿಗೆ ಶುಭ ಕೋರುತ್ತೇನೆ.

(೧೯೭೮)

೨೫

## ಮನೆಮನೆಗೆ ಬೇಲಿ

ಉದ್ಯೋಗದ ಅನಿವಾರ್ಯತೆಯಿಂದಾಗಿ ಕನ್ನಡ ನಾಡಿನಿಂದ ದೂರ ಉಳಿಯಬೇಕಾಗಿ ಬಂದರೂ ಕನ್ನಡ ವಾಚಕಲೋಕ ಸದಾ ಸ್ಮರಣೆಯಲ್ಲಿಟ್ಟುಕೊಳ್ಳಬೇಕಾದ ಲೇಖಕರಲ್ಲಿ ಶ್ರೀ ಸನದಿಯವರೂ ಒಬ್ಬರು. ಅವರು ಎಲ್ಲಿದ್ದರೂ ತಮ್ಮ ಬರವಣಿಗೆಯೊಂದಿಗೆ ಕನ್ನಡದ ಚಟುವಟಿಕೆಗಳಲ್ಲಿ ಒಂದಾಗಿ ಕನ್ನಡಿಗರ ಸಂಘಟನೆಯಲ್ಲಿ ಪಾಲುಗೊಳ್ಳುತ್ತ, ತಮ್ಮ ಸರಸ ಸಜ್ಜನಿಕೆಯಿಂದ ಸ್ನೇಹವಲಯವನ್ನು ನಿರ್ಮಿಸಬಲ್ಲವರು. ಮುಂಬಯಿ ಆಕಾಶವಾಣಿಯಲ್ಲಿ ಕನ್ನಡ ಸ್ವಲ್ಪಮಟ್ಟಿಗಾದರೂ ಕೇಳಿಬರುತ್ತಿದ್ದರೆ ಅದಕ್ಕೆ ಸನದಿಯವರ ಸದ್ದಿಲ್ಲದ ದುಡಿಮೆ ಬಹುಮಟ್ಟಿಗೆ ಕಾರಣವೆಂದು ಹೇಳಿದರೆ ತಪ್ಪಾಗದು. ಲೇಖಕರು ಯಾವುದೇ ಗುಂಪುಗಾರಿಕೆಗೆ ಒಳಗಾಗದೆ, 'ಕನ್ನಡತನವೊಂದಿದ್ದರೆ ಸಾಕು, ನೀನಮ್ಮಗೆ ಕಲ್ಪತರು' ಎಂಬ ಭಾವನೆಯನ್ನು ಬೆಳೆಸಿಕೊಂಡು, ಎಲ್ಲರೊಳಗೊಂದಾಗಿ ನಡೆಯುವ ಹದವನ್ನು ಅವರು ಗಳಿಸಿಕೊಂಡಿದ್ದಾರೆ. ಅವರ ಈ ಕವನಸಂಕಲನಕ್ಕೆ ಮುನ್ನುಡಿಯ ಅವಶ್ಯಕತೆ ಎಷ್ಟೂ ಇರದಿದ್ದರೂ ನಾನು ಎರಡು ಮಾತು ಬರೆಯಬೇಕೆಂದು ಅವರು ಪ್ರೀತಿಯಿಂದ ಅಪೇಕ್ಷಿಸಿದ್ದಾರೆ. ಅವರ ಬರವಣಿಗೆ ಹಾಗೂ ವ್ಯಕ್ತಿತ್ವದ ಬೆಳವಣಿಗೆಯಲ್ಲಿ ಮೊದಲಿನಿಂದಲೂ ಆಸ್ಥೆತಳೆದಿರುವ ನನಗೆ ಅದು ಸಂತೋಷದ ವಿಷಯವೂ ಹೌದು.

ಸನದಿಯವರು ಸಣ್ಣ ಕಥೆಗಳನ್ನು ಬರೆದಿದ್ದಾರೆ; ಗೀತರೂಪಕಗಳನ್ನು ರಚಿಸಿದ್ದಾರೆ. ಅನುವಾದ ಮಾಡಿದ್ದಾರೆ ; ತಮ್ಮ ಕಾವ್ಯರಚನೆಯ ಪ್ರಾರಂಭದಲ್ಲಿಯೇ ಶಿಶುಸಾಹಿತ್ಯಕ್ಕೆ ವಿಶೇಷವಾದ ಕೊಡಗೆಯನ್ನು ನೀಡಿದ್ದಾರೆ. ಆದರೆ ಇವೆಲ್ಲಕ್ಕಿಂತ ಹೆಚ್ಚಾಗಿ ಹಾಗೂ ಮುಖ್ಯವಾಗಿ ಕಾವ್ಯಕ್ಷೇತ್ರದಲ್ಲಿ ಅವರು ಮಾಡಿರುವ ಕೃಷಿ ಗಮನಾರ್ಹವಾದದ್ದು. ಇದುವರೆಗೆ ಅವರು ಪ್ರಕಟಿಸಿರುವ ಒಂಬತ್ತು ಕವನಸಂಕಲನಗಳು ಅವರ ಕವಿಹೃದಯವನ್ನು ಚೆನ್ನಾಗಿ ಕಂಗೊಳಿಸುವಂತೆ ಮಾಡಿವೆ. ಮುಕ್ತಮನಸ್ಸಿನ, ಸರಳ ಹಾಗೂ ಪ್ರಾಮಾಣಿಕ ಜೀವಕ್ಕೆ ತನ್ನ ಬದುಕಿನ ಮಿತಿಯಲ್ಲಿ ಏನೇನು ಕಾಣಬಹುದೊ, ಯಾವ ಯಾವ ಅನುಭವಗಳು ಬಂದೊದಗಬಹುದೊ, ಅವುಗಳಿಗೆ ತಮ್ಮ ಪ್ರತಿಕ್ರಿಯೆಯನ್ನು ಆಯಾ ಕಾಲದ ಕಾವ್ಯರಚನೆಯ ಒಲವು ನಿಲುವಿನೊಂದಿಗೆ ಇವರು ಮೂಡಿಸುತ್ತ ಬಂದಿದ್ದಾರೆ. ಸಾಮಾಜಿಕವಾಗಿ ಜನತೆಯೊಡನೆ ಎಲ್ಲ ಸನ್ನಿವೇಶಗಳಲ್ಲಿ ಒಂದಾಗಿ, ತಮ್ಮ ಸಾಮರ್ಥ್ಯಕ್ಕನುಸರಿಸಿ ಅದಕ್ಕೆ ನುಡಿಗೊಟ್ಟಿದ್ದಾರೆ. ಭಾವಗೀತೆಗೆ ಅವರು ಎತ್ತಿದ ಕೈಯಾದರೂ

ಭಾವ-ಬುದ್ಧಿಗಳನ್ನು ಮಿದ್ದಿ ಹದಗೊಳಿಸುವಲ್ಲಿ ಪ್ರಸಾದ ಗುಣವನ್ನೇ ತೋರಿದ್ದಾರೆ; ಜೊತೆಗೆ ವಿನೋದಗುಣವನ್ನೂ ಮೆರೆದಿದ್ದಾರೆ. 'ಧ್ರುವಬಿಂದು' (೧೯೬೫) ಸಂಕಲನಕ್ಕೆ ಮುನ್ನುಡಿ ಬರೆಯುತ್ತ ಶ್ರೀ ಗೋಕಾಕರು 'ಈ ಕವಿತೆಗಳ ರಚನಾಕ್ರಮದಲ್ಲಿಯೂ ಒಂದು ವಿವರಪೂರ್ಣವಾದ ಅವ್ಯಾಹತ ಕ್ರಮವಿದೆ' ಎಂಬುದನ್ನು ಗುರುತಿಸಿದ್ದಾರೆ. ಆ ಮೇಲಿನ ಕವನಗಳಲ್ಲಿಯೂ ಅದು ವಿವಿಧ ಹಂತದಲ್ಲಿ ಸೊಗಸುಗೊಳ್ಳುತ್ತ, ಸುಟಿಯಾಗುತ್ತ 'ಮನೆಮನೆಗೆ ಬೇಲಿ'ಯಲ್ಲಿ ಒಂದು ನೆಲೆಯನ್ನು ಕಂಡುಕೊಂಡಿದೆಯೆನ್ನಬಹುದು.

ಕಣಕದ ಸಣ್ಣ ಉರುಳಿಯನ್ನೇ ಹೊಸೆಹೊಸೆದು ಸೇವಿಗೆಯನ್ನು ಬಳ್ಳಿಬಳ್ಳಿಯಾಗಿ ತೋರಣಕಟ್ಟುವಂತೆ ಇಲ್ಲಿನ ಕವನಗಳಲ್ಲಿ ವಸ್ತು ವಿನ್ಯಾಸಗೊಳ್ಳುತ್ತ ಹೋಗುತ್ತದೆ. ಮೊದಲ ಕವಿತೆಯಾದ 'ಮನೆಮನೆಗೆ ಬೇಲಿ' ಹೇಗೆ ವಿವಿಧ ರೂಪಗಳಲ್ಲಿ ಮನಮನದ ಬೇಲಿಯೂ ಆಗಿ ಪರಿಣಮಿಸಿದೆಯೆಂಬುದನ್ನು ಚಿತ್ರಿಸುತ್ತ ಅಲ್ಲಲ್ಲಿ ಅನುಭವದ ಬೇರೆ ಬೇರೆ ಮಗ್ಗಲುಗಳನ್ನೂ ತೆರೆಯುತ್ತದೆ. 'ಇಲ್ಲಿ ಬದುಕಿದ್ದವರ ಹೊಲಮನೆಗೆ ಬೇಲಿ' ಇಷ್ಟೇ ಅಲ್ಲ. 'ಸತ್ತವರ ಗೋರಿಗಳ ಸುತ್ತಲೂ ಬೇಲಿ'ಯಾಗಿರುವುದೇ ಒಂದು ದುರಂತ. 'ಮುಕ್ತ, ಸಂಯಮಯುಕ್ತ ಬದುಕಿನ ಕೀಲಿ'ಯನ್ನು ತೆರೆದರೆ ಮಾತ್ರ ಈ ಬೇಲಿಗಳ ಹಾವಳಿಯನ್ನು ತಪ್ಪಿಸಬಹುದೆಂಬುದನ್ನು ಈ ಕವಿತೆ ಒಡನುಡಿಯುತ್ತದೆ. ಪವಾಡ-ಗಿವಾಡಗಳ ಗೀಳಿರದೆ ಜನರಿಂದ 'ಬಾಬಾ' ಎಂದು ಆತ್ಮೀಯವಾಗಿ ಕರೆಯಿಸಿಕೊಳ್ಳುವ, ಜನರನ್ನು ಹತ್ತಿರ ಹತ್ತಿರ ಬರುವಂತೆ ಮಾಡುವ ಕವಿಯ ಆಶೆ, ಆಶಯ 'ಪವಾಡ'ದಲ್ಲಿ ವ್ಯಕ್ತವಾಗಿದೆ. 'ನಿದ್ದೆಗಣ್ಣೊಳು ಬಿರಿವ ಮುಗ್ಧ ಜೀವದ ಕಿಲಕಿಲ ನಗುವೂ ಪವಾಡ' ಕವಿಯ ದೃಷ್ಟಿಗೆ. ಕವಿಯ ಇದುವರೆಗಿನ ಜೀವನಾನುಭವ ಈ ಕವಿತೆಗೆ ಕಳಸವಿಡುತ್ತದೆ :

ಹಲವು ಸಲ ನಿನ್ನೆಗಳ ನೆನಹುಗಳ ಬಿಟ್ಟುಬಿಡದೆ
ನಾಳೆಗಳ ಕನಸುಗಳ ಹೊತ್ತು ನಡೆದೆ.
ಒಂದು ದಿನ ಕಾತರಿಸಿ
ಆದರ್ಶಗಳ ಗಂಟು ತಲೆದಿಂಬಿಗಿರಿಸಿ
ರಾತ್ರಿ ಬೆಳಗುವ ಲಕ್ಷನಕ್ಷತ್ರ ಛತ್ರದಡಿ
ಅಸರವ ಪಡೆದೆ. ಮರುದಿನವೆ ಚೇತರಿಸಿ
ಹೊಸ ಕ್ಷಿತಿಜ ಕರೆದತ್ತ ಕೈಬೀಸಿ ನಡೆದೆ.
ಈ ದಾರಿಯುದ್ದಕ್ಕು ನನ್ನ ಲೆಕ್ಕದೊಳಿಲ್ಲ
ಕಲ್ಲರಳಿ ಹೂವಾದ ಒಂದೂ ಪವಾಡ,
ನೀರೊಡಲಿನಿಂದೊಗೆಯದಿರುವ ಮೋಡ !

'ದಿಗಿಲುಗೊಳಿಸುವ ನೂರೆಂಟು ಅನುಭವಗಳ', 'ಇಂದಿನ ಹಾಡು' ದೀರ್ಘವಾದ ಒಂದೇ ವಾಕ್ಯದಂತೆ ಉಸಿರು ಬಿಡದೆ ನಡೆದು 'ನಿನ್ನ ಮುಖ ಕಾಣುವುದೇನೊಮ್ಮೆ ಇಣಿಕಿ ನೋಡು'

ಎಂಬ ತಿರುವಿನೊಂದಿಗೆ ಕೊನೆಗೊಳ್ಳುತ್ತದೆ. ಸನದಿಯವರ ಈ ಮಾದರಿಯ ಕವಿತೆಗಳಲ್ಲಿ 'ನಮ್ಮ ಸರಸತೀ ವಿಚಾರ' ಸಂಕಲನದಲ್ಲಿಯೇ ಅತ್ಯುತ್ತಮವಾದುದ್ದೆನ್ನಬಹುದು. ಒಂದಾದ ಮೇಲೊಂದು ನುಡಿಚಿತ್ರಗಳನ್ನು ನೇಯುತ್ತ, ಕುತೂಹಲವನ್ನು ಹುಟ್ಟಿಸುವ ಸಹಜ ಕಲೆಗಾರಿಕೆ ಇಲ್ಲಿದೆ. ಇಂದಿನ ಜೀವನದ, ಹಾಗೆಯೇ ಕಾವ್ಯ ಧೋರಣೆಯ ನಾನಾ ಬಗೆಗಳನ್ನು ಸುರುಳಿ ಬಿಚ್ಚುತ್ತ, ಯಾವುದು ಸಲ್ಲದೆಂಬುದನ್ನು ಅಲ್ಲಲ್ಲೇ ಧ್ವನಿಸುತ್ತ, ದುಡಿವವರ ಮೌನಕ್ಕೆ ಹೊಸ ಧ್ವನಿಯ ನೀಡುವ ಬಯಕೆ ಸೂಚಿತವಾಗಿದೆ. ತನ್ನ ವಿಶಿಷ್ಟತೆಗೆ ಅನುಗುಣವಾದ ಭಾಷೆ, ಲಯಗಳ ಮೂಲಕ ಹೊಸತನವನ್ನು ದಕ್ಕಿಸಿಕೊಂಡು, ಕಾವ್ಯದ ಧೋರಣೆಯಾವುದೇ ಇದ್ದರೂ ಅದರ ಅಭಿವ್ಯಕ್ತಿ ಕಲಾತ್ಮಕವಾಗಿರುವಂತೆ ಈ ಕವಿತೆಯಲ್ಲಿ ನೋಡಿಕೊಳ್ಳಲಾಗಿದೆ.

'ವಾಸ್ತವ', 'ಶಬ್ದಸೃಷ್ಟಿ', 'ಬದುಕು ಮಾತಾಡುವುದು', 'ಭೂತ' ಮೊದಲಾದ ಕವಿತೆಗಳಲ್ಲಿ ಬದುಕಿನ ಬಗ್ಗೆ ಚಿಂತನದ ಬೇರೆ ಬೇರೆ ಪರಿಗಳಿವೆ. ಕಪಟ, ವಂಚನೆ, ಆಡಂಬರ, ಆಟಾಟೋಪಗಳನ್ನು ಕಟುವಾಗಿ ವಿಡಂಬಿಸಬಲ್ಲ ಶಕ್ತಿಯನ್ನು 'ನಾನೇನು ಮಾಡುವೆ', 'ಹೇಳಿ ಕೊಡುತ್ತಾರೆ' ಮೊದಲಾದ ಕವಿತೆಗಳಲ್ಲಿ ಕಾಣಬಹುದು. ಮನಸ್ಸಿನ ಒಂದು ಭಾವನೆಯನ್ನು ತಕ್ಕ ನಿದರ್ಶನದೊಂದಿಗೆ ಅದರ ಸಾಮ್ಯ-ವೈಷಮ್ಯದೊಂದಿಗೆ ನಿರೂಪಿಸುವ ಕಲೆ 'ಕಪ್ಪು', 'ನಾನಾರು' ಮುಂತಾದ ಕವಿತೆಗಳಲ್ಲಿ ಕಂಡುಬಂದರೆ, 'ಅಂತರ್ಮುಖಿ', 'ಗಣಿತ', 'ಬಂಜೆ ಮೋಡ' ಮುಂತಾದವು ಹನಿಗವನಗಳಾಗಿ ಹರಳುಗೊಂಡಿವೆ. ಭಾವಗೀತೆಯ ಛಂದವನ್ನು ಇನ್ನೂ ಚಂದವಾಗಿ ಪಡೆದಿದೆ 'ಮಹಾಕವಿಗೆ ಶರಣು'. 'ಅಂತರಾಳ ಗೆದ್ದು ಅಂತರಿಕ್ಷಕೆ ನೆಗೆವ' ಆರೋಗ್ಯಕರವಾದ ದೃಷ್ಟಿ 'ಹೊಸ ಪಯಣ'ಕ್ಕೆ ಹೊಳಹು ಹಾಕಿದೆ.

ಕಾವ್ಯ ವಸ್ತುವಿನ ವಿವರಗಳಿಗೆ ಹಾತೊರೆಯುವಾಗಲೂ ಅವುಗಳನ್ನು ಔಚಿತ್ಯಪೂರ್ಣವಾಗಿ ಹಾಗೂ ಕಲಾತ್ಮಕವಾಗಿ ಬಂಧಿಸುವ ಕ್ರಮ ಇಲ್ಲಿ ಇನ್ನಷ್ಟು ಬಲಗೊಳ್ಳಬೇಕಾಗಿದೆ. ಅಲ್ಲಲ್ಲಿ ಅನಗತ್ಯವೆನಿಸುವ, ಅಂತೆಯೇ ವಾಚ್ಯಕ್ಕೆಡೆಗೊಡುವ ಅಂಶ ಕಡಿಮೆಯಾದಂತೆ ಭಾವ ಪ್ರಾಮಾಣಿಕತೆ ಇನ್ನಷ್ಟು ಪುಟಗೊಳ್ಳಬಹುದು. ಮುಕ್ತ ಛಂದದ ಆಡುಮಾತಿನ ಲಯವೇ ಇಲ್ಲಿ ಪ್ರಧಾನವಾಗಿದ್ದರೂ ಅದನ್ನು ಇನ್ನಷ್ಟು ಹಿಡಿತಕ್ಕೊಳಪಡಿಸಿದಾಗ ರಚನೆಯಲ್ಲಿ ಬಿಗುವು ಉಂಟಾದೀತು. ಶಬ್ದಕ್ಕಿರುವ ವ್ಯಂಜನ ಸಾಮರ್ಥ್ಯವನ್ನು ಇವರ ಕಾವ್ಯಶೈಲಿ ಚೆನ್ನಾಗಿ ಬಳಸಿಕೊಂಡಿರುವುದಲ್ಲದೆ ಬೇರೆ ಬೇರೆ ಅರ್ಥದ ನೆಲೆಗಳಿಗೂ ಅದು ಆಗೀಗ ಚಾಚಿಕೊಳ್ಳುತ್ತದೆ. ಆದರೆ 'ಅಳುಕುಗಳ ಸೆಳಕುಗಳ', 'ಮಂದಿಗಳ ಚಂದಿಗಳ', 'ದಿಕ್ಕುಗಳ ಸುಕ್ಕುಗಳ', 'ಲಾಭಗಳ ಲೋಭಗಳ' ಇತ್ಯಾದಿ ನುಡಿಜೋಡಣೆ ಅರ್ಥಪುಷ್ಟಿಯನ್ನೊದಗಿಸಿದಂತೆ ತೋರುವುದಿಲ್ಲ.

ಸಾಹಿತ್ಯಕ್ಷೇತ್ರದಲ್ಲಿ ಆಗೀಗ ಏಳುವ ಗೊಂದಲಗಳನ್ನು ತಲೆಗೆ ಹಚ್ಚಿಕೊಳ್ಳದೆ, ತಮ್ಮ ಅನುಭವ, ಅನಿಸಿಕೆಗಳನ್ನು ಕಾವ್ಯದ ಮೂಲಕ ನಿವೇದಿಸುತ್ತ, ಸ್ವಂತಿಕೆ ಹಾಗೂ ಸಹಜ ಬೆಳವಣಿಗೆಯ ದಾರಿಯಲ್ಲಿ ಸಾಗಿರುವ ಸನದಿಯವರ ಸಾಧನೆ ಮೆಚ್ಚುವಂತಹದು. 'ಹೊಸ ಪಯಣ'ದಲ್ಲಿ ಕವಿಯೇ ನುಡಿದಿರುವಂತೆ

ಹೌಹಾರಿ ಅತ್ತಿತ್ತ ಓಡಾಡುವವರ ನಡುವೆ
ಸ್ತಂಭದೊಲು ನಿಂತು
ನಿಂತಲ್ಲೆ ದೀಪಸ್ತಂಭವಾಗು

ಎಂದು ನಾನೂ ಹಾರೈಸುತ್ತೇನೆ.

(೧೯೮೧)

೨೬

## ವಿಜಯಲಕ್ಷ್ಮಿಯ ಕವಿತೆಗಳು

ದಿವಂಗತ ವಿಜಯಲಕ್ಷ್ಮಿಯ ಕವಿತೆಗಳನ್ನು ಆಯ್ದು ಪ್ರಕಟಣೆಗೆ ಅಣಿಗೊಳಿಸಿರುವ ಶ್ರೀ ಕಾಶೀಪುಟ್ಟ ಸೋಮಾರಾಧ್ಯರು ತಮ್ಮ ತಂಗಿಯ ಮಗಳ ನೆನಪಿಗೆ ಈ ಮೂಲಕ ಒಳ್ಳೆಯ ಕಾಣಿಕೆಯನ್ನು ಸಲ್ಲಿಸುತ್ತಿದ್ದಾರೆ. ಅದಕ್ಕಾಗಿ ಅವರನ್ನು ಅಭಿನಂದಿಸುತ್ತ, ಸನ್ಮಿತ್ರರಾದ ಅವರ ಕೋರಿಕೆಯಂತೆ ಇಲ್ಲಿ ಎರಡು ಮಾತು ಸಂತೋಷದಿಂದ ಬರೆಯುತ್ತಿದ್ದೇನೆ.

ಈ ಸೋದರಿ ಎಂ.ಎ.ಗೆ ಅಭ್ಯಾಸ ಮಾಡುತ್ತಿರುವಾಗಲೇ ಅಕಾಲ ಮರಣಕ್ಕೆ ತುತ್ತಾದುದು ಅತ್ಯಂತ ವಿಷಾದದ ಸಂಗತಿ. ಆಕೆ ತನ್ನ ಆತ್ಮ ಸಂತೋಷಕ್ಕಾಗಿ ಬರೆದು ಬಿಟ್ಟು ಹೋದ ಈ ಕವಿತೆಗಳನ್ನು ಓದಿದಾಗ ಬೆಳೆಯಬಹುದಾಗಿದ್ದ ಆ ಕೋಮಲ ಕವಿಜೀವದ ಬಗೆಗೆ ಇನ್ನಿಷ್ಟು ಮರುಗುವಂತಾಗುತ್ತದೆ.

ಪ್ರಾರ್ಥನೆ, ಹಂಬಲ, ಅಭೀಪ್ಸೆ, ಅರ್ಪಣ ಭಾವಗಳಿಂದ ತುಂಬಿ ತುಳುಕುತ್ತಿವೆ ಈ ಪದ್ಯಗಳು. ಪ್ರಕೃತಿಯಲ್ಲಿ ಪ್ರೀತಿಯಿಂದ ತನ್ಮಯತೆಯಿಂದ ಸೋಜಿಗಗೊಳ್ಳುತ್ತ, ಮನಸ್ಸನ್ನು ಅರಳಿಸಿಕೊಳ್ಳುತ್ತ, ದೈವೀಚೈತನ್ಯಕ್ಕೆ ಸಾಗಿದ ಬಗೆ ಇಲ್ಲಿಯದು. ಬೆಳ್ನೊರೆಯ ಮೋಡದಲ್ಲಿ ಕರಗುವ, ಹಕ್ಕಿಗಿಂತ ಹಗುರಾಗಿ, ಗಾಳಿಗಿಂತ ಮಿಗಿಲಾಗಿ ದೂರದ ಗಗನಕ್ಕೆ ಹಾರಿ, ಚುಕ್ಕಿಯೊಡನೆ ಚಲುವಾಗಿ ಆಡುವ ಮುಗ್ಧ ಬಯಕೆ; ಹುಲ್ಲಿನ ಮೇಲಿನ ಮುತ್ತಿನ ಹನಿಗಳನ್ನು ನಕ್ಷತ್ರಗಳು ಸುರಿಸಿದ ಕಣ್ಣೀರು ಎಂಬ ಕಲ್ಪನೆ; ತಾರೆಗಳು ಗುಂಪು ಗುಂಪಾಗಿರುವುದರಿಂದ ಅವುಗಳ ಮನಸ್ಸಿಗೆ ತನ್ನಂತೆ ಏಕಾಂತದ ಬೇಸರವಿಲ್ಲವೆಂಬ ಅನಿಸಿಕೆ; ಮಲ್ಲಿಗೆ ಹೂವಿನಲ್ಲಿಯ ಕಂಪು ಯಾವ ತಪದ ಪುಣ್ಯ ಫಲವೋ ಎಂಬ ಪರಿಭಾವನೆ; ಬಣ್ಣಬಣ್ಣದ ಪತಂಗಗಳ ಸ್ವಾತಂತ್ರ್ಯ, ಆನಂದ ತನಗಿಲ್ಲವೆಂಬ ಕೊರಗು; ಕೆಳಗಿನ ಭೂಮಿಯ ನೀರನ್ನು ಮೇಲಿನ ಸೂರ್ಯನ ಬೆಳಕನ್ನು ಹೀರಿ ಉನ್ನತವಾಗಿ ಬೆಳೆಸಿದ ವೃಕ್ಷ ಭೂದೇವಿ ಗಗನಕ್ಕೇರುವ ಏಣಿಯಂತೆ ಬಣ್ಣಿಸಿದ ನುಡಿಚಿತ್ರ; ಮಧುರ ನಗೆಯ ಸೊಗಸು ಬೀರುವ, ಮಗುವಿನ ಆಕರ್ಷಣೆಯ ಗುಟ್ಟೇನು ಎಂಬ ಚಿಂತನೆ - ಇವೆಲ್ಲವೂ ಈ ಕವಿತೆಗಳ ಹಿಂದಿರುವ ಮನೋಧರ್ಮ ಎಂಥದು ಎಂಬುದನ್ನು ಸೂಚಿಸುತ್ತವೆ.

ಕಾವ್ಯರಚನೆ ಇನ್ನೂ ಒಂದು ಹದಕ್ಕೆ ಬಂದು, ಆಶಯ ತಕ್ಕ ಆಕಾರವನ್ನು ಪಡೆಯಲಿದ್ದಂತೆಯೇ ಆ ಜೀವ ಕಣ್ಮರೆಯಾದದ್ದು ನಿಜಕ್ಕೂ ದೊಡ್ಡ ನಷ್ಟ. 'ಪರಿಶುದ್ಧ ಕುಸುಮವಿದು ಸ್ವೀಕರಿಸು ಪ್ರಭುವೆ' ಎಂಬ ಇಲ್ಲಿಯ ಕವಿತೆಯೊಂದರ ಭಾವ ಬಂಧುಬಳಗಕ್ಕೆಲ್ಲ ಸಮಾಧಾನವನ್ನುಂಟು ಮಾಡೀತೆಂದು ಆಶಿಸುತ್ತೇನೆ.

(೧೯೮೧)

೨೭

## ಕಟ್ಟ್ಯಾಣಿಸತಿಯೆಂದು ಕರದೇನ

'ಬದುಕು' ಹಾಗೂ 'ಕೊಲ್ಲಲೇ ಸಾಯಲೇ' ಎಂಬ ತಮ್ಮ ಮೊದಲಿನ ಎರಡು ಸಂಕಲನಗಳಲ್ಲಿ ಸಾಮಾಜಿಕ ಕಳಕಳಿಯನ್ನೂ ಬಂಡೇಳುವ ಸೂಚನೆಗಳನ್ನೂ ಸರಳವಾಗಿ ಹಾಗೂ ನೇರವಾಗಿ ಅಭಿವ್ಯಕ್ತಿಗೊಳಿಸಲು ಪ್ರಯತ್ನಿಸಿದ ಬಾಪುಗೌಡ ಪಾಟೀಲರು ಪ್ರಸ್ತುತ ಸಂಕಲನದಲ್ಲಿ ಗಂಡು ಹೆಣ್ಣಿನ ಪ್ರೇಮವನ್ನು ಚಿತ್ರಿಸುವ ಹಲವು ಕವನಗಳನ್ನು ಓದುಗರಿಗೆ ನೀಡಿದ್ದಾರೆ.

ಈ ಕವನಗಳಿಗೆ ಪ್ರಮುಖವಾಗಿ ಹಳ್ಳಿಯ ಬದುಕಿನ ಪರಿಸರವೇ ಹಿನ್ನೆಲೆಯಾಗಿದ್ದು ಅದಕ್ಕೆ ತಕ್ಕಂತೆ ಭಾವ-ಭಾಷೆ, ಆ ಬದುಕಿನ ಇತಿಮಿತಿಗಳು ತಕ್ಕ ಪೋಷಣೆಯೊದಗಿಸಿವೆ. ಜೀವನ ಸಂತೋಷದ ಮೂಲಭೂತ ನೆಲೆಗಳಲ್ಲಿ ಕಾಮದ ಒಗರಿಗೂ, ಪ್ರೇಮದ ಹೊಗರಿಗೂ ಪ್ರಮುಖವಾದ ಸ್ಥಾನವಿದೆ. ಇಲ್ಲಿಯ ಕವನಗಳಲ್ಲಿ ಈ ಸಂತೋಷವು ಅಲೆಅಲೆಯಾಗಿ ಜಾನಪದ ನುಡಿಗಟ್ಟನ್ನೂ ಅದರದೇ ಛಂದವನ್ನು ಪಡೆದು ಯಾವ ತಾತ್ವಿಕ ಮೌಲ್ಯಕ್ಕೂ ಜೋತು ಬೀಳದೇ ಹೊರ ಹೊಮ್ಮಿದೆ. ಇಲ್ಲಿ ಒಡಮೂಡಿರುವ ಪ್ರೀತಿ-ಪ್ರಣಯ ಸಾಮಾಜಿಕ ಕಟ್ಟುಪಾಡುಗಳನ್ನು ಮೀರಿ ನುಗ್ಗದೇ ತನ್ನ ಚೌಕಟ್ಟಿನಲ್ಲಿಯೇ ಬಿಸಿಯನ್ನೂ ಉಳಿಸಿಕೊಂಡಿದೆ. ಅದರ ಗುರಿ 'ನಾಕೂರ ಮಂದ್ಯಾಗ ಒಂದಾಗಿ ಚಂದಾಗಿ ಬಾಳು'ವುದೇ ಆಗಿದೆ.

ಪ್ರಾರಂಭದಲ್ಲಿ 'ಹುಸಿ ನಗಿಯ ನಕ್ಕು' ಎದಿ ಕದವ ತೆರೆದು, ಮನಕದ್ದ, ಹಂಗಾಮದ ಹುಡುಗ ಹುಡುಗಿಯರ ಪರಸ್ಪರ ಆಕರ್ಷಣೆ, ಒಲವಿನ ಕೋಮಲತೆ ನೆನಪುಗಳ ನೀರೂರುವಿಕೆ ಅಲ್ಲಲ್ಲಿ ಸಹಜವಾಗಿ ನೂತನ ಪ್ರತಿಮೆಗಳೊಂದಿಗೆ ಅಭಿವ್ಯಕ್ತಿ ಪಡೆದಿವೆ. ನಿಸರ್ಗದ ಪರಿಸರದೊಂದಿಗೆ ಆಯಾ ಭಾವಗಳು ಕಾವುಗೊಂಡಾಗ ಅವಕ್ಕೆ ತಮ್ಮದೇ ಆದ ಕಮನೀಯತೆ ಪ್ರಾಪ್ತವಾಗುತ್ತದೆ :

ಹರಿಯುವ ಹೊಳಿಯೆಲ್ಲ ಹೊನ್ನ
ಬಣ್ಣಕ್ಕೆ ತಿರುಗಿ ನಿಂತ ಹುಡುಗಿಯ
ನಿಲುವೆಲ್ಲ ನಿಲುಗನ್ನಡಿಯೊಳಗ ಮೂಡಿದ್ಹಾಂಗ

('ನಿಲುವೆಲ್ಲ ನಿಲುಗನ್ನಡಿ...')

ಹಾಲ್ಗಾಳ ತಿನ್ನುವ ಹಿಂಡಕ್ಕಿ ಕಾಯಾಕ ಮನಸಿಲ್ಲ
ಮಾರಾಯ ಮಾದೇವಿ ನನ್ಮನಸು ಕುಕ್ಕಿ ತಿಂದಾಳೋ
ಕಲ್ಲ ಕವಣೇಯ ಬೀಸಿದರ ನಿಲುನ್ಯಾಗ ಹಕ್ಕಿ ಅಡಗಿದ್ಹಂಗ,
ಮಾದೇವಿ ಮನಸೊಳಗ ಅಡಗಿ ಕುಂತಾಳೋ

(ಅರಗಿಣಿಯು....)

ನಿನ್ನ ನಗಿಯ ಹುಣ್ಣಿಮಿ
ರಾತ್ರಿಯಂಗಿತ್ತ
ಬೆಳ್ಳನ ಬೆಳದಿಂಗಳಂಗಿತ್ತ
ಸುದ್ದ ಬೆಳದಿಂಗಳಂಗಿತ್ತ ಸುರಕೊಂಡು
ಕುಡಿಯುವ ಮಜ್ಜಿಗಿಯಂಗಿತ್ತ

(ನಿನ್ನ ನಗಿಯು)

ಈ ಮೊದಲ ಘಟ್ಟದ ಹುಡುಕಾಟ, ಮಿಡುಕಾಟಗಳ ನಂತರ ಇಂಥ ಒಲವಿನ ಜೋಡಿಗಳು ಪರಸ್ಪರ ಅರಿತುಕೊಳ್ಳುವ ಪ್ರಯತ್ನದಲ್ಲಿದ್ದಾಗ ಹಲವಾರು ಚಿಂತೆಗಳು ಅವರನ್ನು ಕಾಡದೇ ಇರುವದಿಲ್ಲ, ಆ ಎದೆಗುದಿಯಲ್ಲಿಯೇ ಒಂದು ಬಗೆಯ ಧೈರ್ಯ ಆಗಲೇ ಇವರಲ್ಲಿ ನೆಲೆಗೊಳ್ಳತೊಡಗಿರುತ್ತದೆ; ಒಡಲಾಳವೂ ತಿಳಿಗೊಳ್ಳತೊಡಗುತ್ತದೆ.

ಚಿಂತ್ಯಾಕ ಹುಡುಗಿ ಹಂತೇಕ ಬಾರ
ನಿನ್ನ ಚಿಂತೀಯ ಹೋಳ ಮಾಡತೀನಿ
ನೀ ಪಿಳಿ ಪಿಳಿ ಕಣ್ಣ ಬಿಡತಿದ್ದರ ಹಾಂಗ
ನನ್ನ ಎದಿಯಾಗ ಸುಣ್ಣ ಎರದ್ಹಾಂಗ

(ಚಿಂತ್ಯಾಕ ಹುಡುಗಿ)

ಒಳಮನಸ ಒಗಟ ಒಡಿದೆಲ್ಲ
ತಿಳಿನೀರಿನಂತಾಗಬೇಕು
ಒಲವೆಲ್ಲ ಒಡಗೂಡಿ ಒಡಲಾಳ
ಮೂಡಿ ಬರಬೇಕು

(ಹುಡುಗಿ ನೀ ಬೆಂಗಡಗಿ)

ಮನಬಿಚ್ಚಿ ಮಾತಾಡತಿದ್ರ ಹಾಂಗ
ಎದಿತುಂಬ ಕಾರಂಜಿ ಪುಟಿದ್ಹಾಂಗ
ಒಲವು ಗೆಲುವಿನ ನಾಡಿ ಬಡಿ ಬಡಿದು
ರಕುತದ ಚಿಲುಮಿ ಚಿಮ್ಮಿದಾಂಗ

(ಅರಳಿದ ಮಲ್ಲಿಗಿ...)

ಈ ಒಲವು ಫಲಿಸಿ ದಾಂಪತ್ಯ ಜೀವನ ಪ್ರಾರಂಭವಾದಾಗ ಅದಕ್ಕೊಂದು ಬೇರೆ ಗತಿ ದೊರಕುತ್ತದೆ. ಜೊತೆ ಬಾಳಿನಲ್ಲಿ ಕ್ಷೇಮ ಸ್ಫುಟಗೊಳ್ಳತೊಡಗುತ್ತದೆ. 'ಪ್ರೀತೆಂಬ ವಸ್ತುವಿಗೆ ಸಾಲಿಲ್ಲ ಸಮುದಿಲ್ಲ' ಎಂಬುದನ್ನು ಪ್ರತ್ಯಕ್ಷವಾಗಿ ಅನುಭವಿಸುತ್ತಾರೆ. ಆ ಸಂದರ್ಭದಲ್ಲಿ ಅಗಲಿಕೆಯೂ ಅಸಹನೀಯವಾಗುತ್ತದೆ.

'ಹಗಲು ಹೊಲದಾಗ, ರಾತ್ರಿ ಮನಿಯಾಗ
ಹತ್ತಾರು ಕೆಲಸ ಹೊತ್ತು ಮುಗಿಸಾಕಿ'

ತೌರಿಗೆ ಹೋದಾಗ ಗಂಡನ ಜೀವ ಮರ ಮರ ಮರಗುತ್ತದೆ :

ಮನದೊಳಗ ಒಲವಿನ ನಿಲುವೆಲ್ಲ
ಆಕಾರ ತಾಳ್ಯಾವು ಆಕಾರ ತಾಳ್ಯಾವು ಅವು
ದೂರ ದಾರಿ ಮಡದಿಯ ಕೈಮಾಡಿ ಕರೆದಾವು.

(ನಗು ನಗುತ ಇರುವಾಕಿ)

ಆಕೆ ಮೊದಲ ಸಲ ತೌರಿನಿಂದ ಗಂಡನ ಮನೆಗೆ ಹೊರಟಾಗ ಬಂದ ದುಃಖವೇನೂ ಕಡಿಮೆಯದಲ್ಲ -

ನೆರೆದ ಮಂದ್ಯಾಗ ಗೌರಿ
ಅಳುನುಂಗಿ ನಕ್ಕಾಳ, ಹೆತ್ತವರ
ಪಾದಕ್ಕೆ ಹಣೆಹಚ್ಚಿ ಒತ್ತರಿಸಿ ಅತ್ತಾಳ

(ತಿರುತಿರುಗಿ ತೌರೂರ)

ತಮ್ಮ ನಿತ್ಯದ ಬದುಕಿನಲ್ಲಿ ಬ್ಯಾನಿ ಬ್ಯಾಸರಕಿ ಒಬ್ಬರಿಗೊಬ್ಬರು ಹಂಚಿಕೊಂಡು, ಹೆಗಲಿಗೆ ಹೆಗಲು ಹಚ್ಚಿ, ಬೆನ್ನ ಹಿಂದಿನ ನೆರಳಿನಂತೆ ಕೂಡಿ ದುಡಿಯುತ್ತ 'ಪ್ರೀತಿಯ ಸುರಕೊಂಡು ಕುಡಿಯಬೇಕೆಂಬ' ನಿಲುಮೆ ಅವರದು. ಬಂದ ಬಡತನಕ್ಕೆ ಹೆದರಿ ಸಾಗಿ ಹೋಗುವ ಹಾದಿಯಲ್ಲಿ ಕುಳಿತುಕೊಳ್ಳದೇ ಗಟ್ಟಿಮನಸ್ಸು ಮಾಡಿ -

ಮುಗಿಲಾನ ಮೋಡ ಮುಂದಕ ಸಾಗಿದಂಗ
ಸಾಗಿ ಮುಂದಕ ಹೋಗಬೇಕ

ಎಂಬ ತಿಳಿವನ್ನು ಅವರ ಬದುಕೇ ಅವರಿಗೆ ತಂದುಕೊಡುತ್ತದೆ.

ಹಳ್ಳಿಯ ಜೀವನದಲ್ಲಿ ಎಲ್ಲರೂ ಹೀಗೇ ಬದುಕು ಸಾಗಿಸುತ್ತಾರೆಂದು ಹೇಳಲಿಕ್ಕೆ ಬರುವದಿಲ್ಲ. ಅಲ್ಲಿಯೂ ಇಜ್ಜೋಡಿಗಳಿವೆ, ಇರುಸು-ಮುರುಸುಗಳಿವೆ. ಜೊತೆಗೇ ವಿನೋದದಿಂದ ಅದನ್ನು ಹಗುರುಗೊಳಿಸುವ, ಹಾಸ್ಯಭಾವದಿಂದ ಹಾಳತಗೊಳಿಸುವ ಗುಣವೂ ಇದೆ. ಅಂಥ ವಾಸ್ತವ ಚಿತ್ರಗಳನ್ನೂ ಕವಿ ಇಲ್ಲಿ ನೀಡದೇ ಇಲ್ಲ :

ತೋಳಾಗ ತಾಂಬರ ವಂಕಿಯಿಟ್ಟು, ಕಾಲಾಗ
ತಗಡಿನ ಪಿಲ್ಲೆ ತೊಟ್ಟು ಗಡಗಡ ನಡಿಯಾಕಿ
ಇಕೀ ಸಾಮದೋಮ ಬಿಜಾಪುರದ
ಮುಲ್ಕ ಮೈದಾನ ತೋಪಿನಂಥಾಕಿ

(ರೊಕ್ಕಾ ಜಣಜಣ)

ಎಂದು ದಾಡಸೀ ಹೆಂಡತಿಯ ಚಿತ್ರವನ್ನು ಗಂಡನ ಮಾತಿನಲ್ಲಿ ಬಿಡಿಸಿದರೆ, ಹೆಂಡತಿಯ ಮಾತಿನಲ್ಲಿ ಸೋಮಾರಿ ಗಂಡನ ಚಿತ್ರವನ್ನೂ ಕಾಣಬಹುದು.

ಉಂಡುತಿಂದು ಹೊಲಕ ಹೋಗೂದ
ಬಿಟ್ಟುಗೊಟ್ಟು ಒಂದರಮ್ಯಾಲ ಒಂದ ಹಾಸಗಿ
ಹಾಸಿ ಸುಸ್ತಾಗಿ ನಿದ್ದಿ ಮಾಡತಾನ
ಕುಂಬಕರ್ಣನಂಗ ನಿದ್ದಿ ಮಾಡತಾನ.

(ತೊತ್ತ ಬೇಡತಾಳ)

ಹೀಗೆ ನಮ್ಮ ಜನಪದ ಜೀವನವನ್ನು ಹತ್ತಿರದಿಂದ ಕಂಡು ಚಿತ್ರಿಸಿರುವ ಈ ಕವಿತೆಗಳಲ್ಲಿ ಆಧುನಿಕ ನಾಗರಿಕ ಜೀವನದ ಪ್ರಭಾವವನ್ನು ಎಲ್ಲಿಯೂ ಕಾಣದಿರುವದು ಸ್ವಲ್ಪ ಸೋಜಿಗವಾಗಿ ತೋರಬಹುದು. ಆದರೂ ಈಗಲೂ ಇಂಥ ಹಳ್ಳಿಗಳಿಗೆ ಕೊರತೆಯೇನು ಇಲ್ಲವೆಂಬುದನ್ನೂ ನಾವು ನೆನಪಿನಲ್ಲಿಡಬೇಕು. ಈ ಕವಿತೆಗಳ ಛಂದ ಇನ್ನಷ್ಟು ವೈವಿಧ್ಯವನ್ನು ಬಂಧ ಇನ್ನಷ್ಟು ಬಿಗುವನ್ನು ರಚನಾ ಕೌಶಲ್ಯವನ್ನೂ ಬಯಸುವಂಥದು. ಆದುದರಿಂದಲೇ ಹಾಗೇ ವಾಚ್ಯದ ಮಟ್ಟದಲ್ಲಿ ನಿಂತು ಬಿಡುವ ಪದ್ಯಗಳು ಸಾಕಷ್ಟಿವೆ. ಆದರೂ ಜನಪದ ಮೂಲದ ಇಂದ್ರಿಯಗಮ್ಯ ಜೀವನದ ಉತ್ಕಟತೆಯನ್ನು ಹೊಮ್ಮಿಸುವ ಇಂಥ ಸಂಗ್ರಹಗಳು ಈಗಲೂ ಸ್ವಾಗತಾರ್ಹವೆಂದೇ ನಾನು ಭಾವಿಸುತ್ತೇನೆ.

(೧೯೮೨)

## ೨೮

## ದಾಸಾಳ

ಐದು ವರ್ಷಗಳ ಹಿಂದೆ ಅಂಕೋಲೆಯಲ್ಲಿ ಕೆನರಾ ವೆಲ್‌ಫೇರ್ ಟ್ರಸ್ಟ್‌ನವರು ಏರ್ಪಡಿಸಿದ ಸಮಾರಂಭವೊಂದರಲ್ಲಿ ಶ್ರೀ ದಿನಕರ ದೇಸಾಯಿಯವರ ೨೫೦೦ ಮುಕ್ತಕಗಳ ಮಾಲೆ 'ದಿನಕರನ ಚೌಪದಿ'ಯನ್ನು ಬಿಡುಗಡೆ ಮಾಡುವ ಗೌರವ ನನ್ನದಾಗಿದ್ದಿತು. ಈ ಚೌಪದಿಗಳ ಚಕ್ರವರ್ತಿ ಇಂದು ನಮ್ಮನ್ನಗಲಿ ಎಂಟು ತಿಂಗಳಾಯಿತು. ಅವರ ಕಣ್ಮುಂದೆಯೇ ಮುದ್ರಣಗೊಂಡಿದ್ದರೂ 'ದಾಸಾಳ' ಕವನ ಸಂಕಲನ ಅವರ ಕೊನೆಯ ಕಾಣಿಕೆಯೆಂಬಂತೆ, ಅವರು ಕಣ್ಮರೆಯಾದ ಮೇಲೆ ಕನ್ನಡಿಗರ ಕೈಸೇರುತ್ತಿದೆ. ದಿನಕರ ದೇಸಾಯಿಯವರ ಮಾನಸಪುತ್ರರೆಂದೇ ನಾನು ಭಾವಿಸಿರುವ, ಅಂಕೋಲೆಯ ಗೋಖಲೆ ಸೆಂಟಿನರಿ ಕಾಲೇಜಿನ ಪ್ರಾಚಾರ್ಯರೂ, ಆತ್ಮೀಯ ಸ್ನೇಹಿತರೂ ಆದ ಶ್ರೀ ಕೆ.ಜಿ. ನಾಯಕ ಅವರು ಈ ಸಂಕಲನಕ್ಕೆ ನಾನು ಮುನ್ನುಡಿ ಬರೆಯಬೇಕೆಂದು ಕೇಳಿಕೊಂಡಿದ್ದಾರೆ. ನಾನು ಮೆಚ್ಚಿಕೊಂಡ ಈ ಹಿರಿಯ ಕವಿಯ ಬಗೆಗಿರುವ ನನ್ನ ಆದರ ಗೌರವಗಳ ಪ್ರತೀಕವಾಗಿ ಕೆಲವು ಮಾತುಗಳನ್ನು ಇಲ್ಲಿ ಸಂತೋಷದಿಂದ ಬರೆಯುತ್ತಿದ್ದೇನೆ. ಇದು ಹೆಗ್ಗಳಿಕೆಯ ಮುನ್ನುಡಿಯಾಗಿರದೆ ಕವಿಯ ಅಗ್ಗಳಿಕೆಯನ್ನು ಅರಿತುಕೊಂಡು ಆನಂದ ಪಡುವ ಚಿರಸ್ಮರಣೆಯ ಹಣತೆಯಾಗಿದೆಯೆಂದು ನಮ್ರತೆಯಿಂದ ನುಡಿಯ ಬಯಸುತ್ತೇನೆ.

ತಮ್ಮ ವಿಶಿಷ್ಟವಾದ ಕಾವ್ಯಶಕ್ತಿಯನ್ನು ಚುಟುಕುಗಳ ಮೂಲಕ ಆದಷ್ಟು ಸಮಗ್ರವಾಗಿ ಅಭಿವ್ಯಕ್ತಿಗೊಳಿಸಿದ ದೇಸಾಯಿಯವರು ಭಾವಗೀತೆಯ ರಸಾರ್ದ್ರತೆಯನ್ನು ಕೈಬಿಡದೆ, ವಿಡಂಬನೆಯ ತೀಕ್ಷ್ಣತೆಯನ್ನು ಸಷ್ಟಗೊಳಿಸಿದುದು ಕನ್ನಡ ಕಾವ್ಯಪ್ರಪಂಚದಲ್ಲಿ ಅನ್ಯಾದೃಶವೆಂದೇ ಹೇಳಬೇಕು. ಈ ಬಗೆಯ ತಮ್ಮ ಬರವಣಿಗೆ ಪ್ರಾರಂಭವಾದದ್ದು ೧೯೫೬ರಿಂದ ಎಂದು ಅವರೇ ಹೇಳಿದ್ದಾರೆ. ಆದರೆ ೧೯೨೭ರಿಂದಲೇ ಅವರು ಭಾವಗೀತೆಗಳ ರಚನೆಗೆ ತೊಡಗಿದರು. ೧೯೫೦ರಲ್ಲಿ ಪ್ರಕಟವಾದ 'ಕವನ ಸಂಗ್ರಹ' ಹಾಗೂ ೧೯೫೮ರಲ್ಲಿ ಹೊರಬಂದ 'ಹೂಗೊಂಚಲು'ಗಳಲ್ಲಿ ಅವು ಸಂಕಲನಗೊಂಡಿವೆ. ೧೯೫೬ ರಿಂದ ೧೯೭೮ರ ವರೆಗೆ ಅರವತ್ತು ಕವನಗಳು ಪ್ರಸ್ತುತ ಸಂಕಲನದ ಮೂಲಕ ನಮಗೆ ದೊರೆತಿವೆ. ಅಂದರೆ ಈ ಮೂರು ಸಂಗ್ರಹಗಳಲ್ಲಿ ಅವರು ಕೊಟ್ಟಿರುವ ಕವನಗಳು ಅವರ ಚುಟುಕುಗಳಷ್ಟೇ ವೈಶಿಷ್ಟ್ಯಪೂರ್ಣವಾದುವುಗಳಾದುದರಿಂದ ಕಾವ್ಯಪ್ರೇಮಿಗಳು ಅವುಗಳ ಮಹತ್ವವನ್ನು ಕಡೆಗಣಿಸಲಾರರೆಂದು ನಾನು ಭಾವಿಸಿದ್ದೇನೆ. ಜೊತೆಗೆ ಅವರ 'ಮಕ್ಕಳ ಪದ್ಯ'ಗಳ ಸೊಬಗನ್ನೂ ಗಮನಿಸದೆ ಇರುವಂತಿಲ್ಲ.

೧೯೫೦ರಲ್ಲಿ 'ಕವನ ಸಂಗ್ರಹ'ಕ್ಕೆ ಬರೆದ 'ಕಳೆನುಡಿ'ಯಲ್ಲಿ ಶ್ರೀ ಗೋಕಾಕರು ದೇಸಾಯರ ಕಾವ್ಯದ ಪ್ರಮುಖ ಲಕ್ಷಣಗಳಾದ ಭಾವನಿರ್ಭರತೆ, ನೇರತೆ, ಸಹಜಾಭಿವ್ಯಕ್ತಿ, ಹಿತಮಿತಶೈಲಿ-ಛಂದ, ಉದಾತ್ತ ವಿನೋದ ಸಂಸ್ಕಾರ, ಸಮತೆಯೆಡೆಗೆ ಕುದುರಿದ ಸಾಮಾಜಿಕ ಪ್ರಜ್ಞೆ, ವಿಚಾರ ಪೂರ್ಣತೆ, ಸಮಾಜ ಸೇವೆಯ ಉದಾತ್ತ ಪ್ರೇರಣೆ ಮೊದಲಾದವುಗಳನ್ನು ಸಮಗ್ರವಾಗಿ ಗುರುತಿಸಿ ಇವುಗಳ 'ಒಂದು ಸಹಜ, ಮಧುರ, ಗಮ್ಯ ಸಮನ್ವಯವನ್ನು ಕವಿಯ ವ್ಯಕ್ತಿತ್ವವು ಸಾಧಿಸಿದೆ' ಎಂದಿದ್ದಾರೆ. 'ದಾಸಾಳ'ದಲ್ಲಿಯೂ ಅವೇ ಗುಣಲಕ್ಷಣಗಳು ಪ್ರಧಾನವಾಗಿರುವುದನ್ನು ಕಾಣಬಹುದು. ಪಂಪ ಮಾರ್ಗ ಮತ್ತು ದೇಸಿಯನ್ನು ತನ್ನ ಕಾವ್ಯದಲ್ಲಿ ಒಡಂಬಡಿಸಲು ಪ್ರಯತ್ನಿಸಿದಂತೆ ದೇಸಾಯರು ಕಾವ್ಯ ಮತ್ತು ಸಮಾಜ ಸೇವೆಗಳನ್ನು ಪ್ರತ್ಯೇಕವಾಗಿ ಎಣಿಸದೆ ಅವೆರಡನ್ನೂ ಒಡಂಬಡಿಸಿ ಯಶಸ್ವಿಯಾಗಿದ್ದಾರೆ.

ಈ ಸಂಗ್ರಹದ ಹನ್ನೊಂದು ಕವನಗಳು ಚುಟುಕುಗಳಾಗಿವೆ. ಆದರೆ ವಾಡಿಕೆಯಂತೆ ಕವಿಯ ಭಾವ-ವಿಚಾರ ಇಲ್ಲಿ ಒಂದೇ ಚೌಪದಿಯಲ್ಲಿ ಮುಗಿಯದೆ ಎರಡೆರಡು ಚೌಪದಿಗಳನ್ನೊಳಗೊಂಡು ಒಂದಕ್ಕೊಂದು ಪೂರಕ-ತಾರಕವೆನಿಸುವಂತಿವೆ; 'ವಿಮರ್ಶೆ' ಎಂಬ ಕವನವನ್ನು ಅದಕ್ಕೆ ಇಲ್ಲಿ ಉದಾಹರಿಸಬಹುದು :

ಆ ವಿಮರ್ಶಕ ಶ್ರೇಷ್ಠರೆಲ್ಲರೂ ಸೇರಿ
ತ್ರಿಪುರ ಸುಂದರಿಯೆಂದು ಮೊಳಗಿದರು ಭೇರಿ.
ಅರ್ಧ ಶತಮಾನ ಕಳೆಯಲು ಕಾಲರಾಯ
ಹೇಳಿದನು : ಬಾಡಿ ಹೋಯಿತು ಅವಳ ಪ್ರಾಯ.

ಆ ವಿಮರ್ಶಕ ಶ್ರೇಷ್ಠರೆಲ್ಲರೂ ಕೂಡಿ
ಈ ಮುದುಕಿಯನ್ನು ಹೊರಗೆ ಹಾಕಿದರು ದೂಡಿ.
ಅರ್ಧ ಶತಮಾನ ಕಳೆಯಲು ಕಾಲರಾಯ
ಹೇಳಿದನು : ಕಂಗೊಳಿಸುತಿದೆ ಇವಳ ಪ್ರಾಯ

ಈ ಸಂಗ್ರಹಕ್ಕೆ ಹೆಸರು ತಂದಿರುವ 'ದಾಸಾಳ', ಅದರಲ್ಲಿಯೂ ಕೆಂಪು ದಾಸಾಳ ಕವಿಗೆ ಪ್ರಿಯವಾದ ಹೂವು. ಎಲ್ಲರೂ ಮಲ್ಲಿಗೆಯನ್ನೇ ಹೊಗಳುತ್ತಿರುವಾಗ ಸಾಮಾನ್ಯ ಜನರಂತಿರುವ ದಾಸಾಳ ತನ್ನ ಕಾವ್ಯದ ಸ್ಫೂರ್ತಿಯೆಂದೂ, ತನ್ನ ಜೀವನದ ರೀತಿಯೆಂದೂ ಹೇಳಿರುವುದರಲ್ಲಿಯೇ ದೇಸಾಯರ ಕಾವ್ಯದ ರೀತಿ-ನೀತಿಗಳು ಅಡಗಿವೆ. ಒಂದೊಂದು ನುಡಿಯಲ್ಲಿಯೂ ಯಾವುದೇ ದೌಲತ್ತು, ಪೇಟೆಯ ಕಿಮ್ಮತ್ತೂ ಇಲ್ಲದ, ಪ್ರದರ್ಶನದೊಳಗೆ ಬಹುಮಾನ ಪಡೆಯದ, ಟೊಂಗೆಯನ್ನು ನೆಟ್ಟರೂ ಬದುಕಿಕೊಳ್ಳುವ, ಹನ್ನೆರಡು ತಿಂಗಳು ಬಿರಿದರೂ ಬಿರುದು ಬಯಸದ ಆದರೆ ಮಂಗಲದ ಸಂಕೇತವಾಗಿರುವ (ಕೆಂಪು ಬಣ್ಣ) ಅದರ ಗುಣ ವಿಶೇಷವನ್ನು, ಆದರೆ ಉಳಿದವರ ದೃಷ್ಟಿಯಲ್ಲಿ ತೀರ ಸಾಮಾನ್ಯವೆನ್ನಿಸಿರುವುದನ್ನು ಯಾವ ಅತಿಶಯೋಕ್ತಿಯೂ ಇಲ್ಲದೆ, ವಾಸ್ತವವನ್ನೇ ತೆರೆದು ತೋರಿಸುತ್ತ ಕವಿ ತನ್ನ ಜೀವನದಲ್ಲಿ ತಾನು ನಂಬಿರುವ ಮೌಲ್ಯಗಳೊಡನೆ

ಸಮೀಕರಿಸುತ್ತಾ -

ರಕ್ತದೊಳಗಿನ ನೋವು
ಸಂವೇದನೆಯ ಹೂವು
ಇದಕ್ಕಿಲ್ಲ ಕಾಮ ಹುಟ್ಟಿಸುವ ಕಾವು

ಎಂದು ಕೊನೆಯಲ್ಲಿ ಅದರ ಸಾಂಕೇತಿಕತೆಯನ್ನೇ ಕಾವ್ಯದ ಹೂವಾಗಿಸುತ್ತಾನೆ. 'ಮುಳ್ಳುಗಳಿಗೆ' ಕವಿತೆ ಈ ಮಟ್ಟಕ್ಕೆ ಬರದಿದ್ದರೂ ಇದೇ ಜಾತಿಗೆ ಸೇರಿದೆ.

ನಿಸರ್ಗ ಹಾಗೂ ಜನಜೀವನದ ಒಡವೆರೆದ ಪ್ರಾದೇಶಿಕತೆಯ ಸೊಗಡನ್ನು, ಚೆಲುವನ್ನು ದೇಸಾಯರಂತೆ ಜನಜೀವನದ ತೀವ್ರಾಸಕ್ತಿಯೊಡನೆ ಕವಿತೆಯಲ್ಲಿ ಸೆರೆಹಿಡಿದವರು ವಿರಳ. 'ಕರಾವಳಿಯ ಕಮಲೆಗೆ', 'ಅಲಗೇರಿಯ ಸಿದ್ಧ', 'ಬೆಂಗಳೂರಿನ ದಾರಿಯಲ್ಲಿ' ಮೊದಲಾದ ಕವನಗಳಲ್ಲಿಯ ಭಾವ-ಭಾಷೆ ಒಂದಕ್ಕೊಂದು ಹೆಗಲೆಣೆಯಾಗಿ ಬೆಳವಣಿಗೆ ಪಡೆಯುವದರಿಂದ ಅವುಗಳನ್ನು ಇಡಿಯಾಗಿಯೇ ಓದಿ ಸವಿಯಬೇಕು. ವಾಸ್ತವತೆಯೊಂದಿಗೆ ವಿನೋದವನ್ನು ಬೆರಸುವಲ್ಲಿ ಈ ಕವಿಯ ಸಿದ್ಧಿ ಹೆಚ್ಚಿನದು. 'ಕಳ್ಳನ ಅನುಭವ', 'ಮಾದರಿ ಮಾದಪ್ಪ', 'ನನ್ನ ತಂದೆಯವರಿಗೆ ನನ್ನ ಪರಿಚಯ' ಇವೇ ಮೊದಲಾದ ಕವಿತೆಗಳು ಇದಕ್ಕೆ ಉದಾಹರಣೆಯಾಗಿವೆ. ಆದರೆ 'ಅಣ್ಣಪ್ಪ ಬಾಳಿಗಾ', 'ಸಣ್ಣಪ್ಪ ಗಾಂವಕರರಿಗೆ' ಶ್ರದ್ಧಾಪೂರ್ಣ ಕವನಗಳು.

ಹಿಮಗಿರಿಯ ಎತ್ತರವೆ ಭಾರತೀಯರದಾಗಿ
ಇಡಿಯ ಭೂಮಂಡಲವ ಮೇಲಕೆತ್ತಿ
ತಾರೆಗಳ ಗಳಿಸಿದರೆ ಈ ಪ್ರಜಾರಾಜ್ಯ ದಿನ
ಬೆಳಗಿಸಲು ಬೇಕೇನು ಮೇಣಬತ್ತಿ ?

ಎಂಬ ಆದರ್ಶಾಕಾಂಕ್ಷೆ 'ಪ್ರಜಾರಾಜ್ಯದಿನ'ದಲ್ಲಿ ಸೂಚಿತವಾಗಿದ್ದರೆ 'ಬಿರುಗಾಳಿ' ಮತ್ತೆ ರಾಜಕೀಯದ ವಾಸ್ತವಕ್ಕೆಳೆಯುತ್ತದೆ. 'ಗೋವೆಯ ವಿಮೋಚನೆ' ಮುಕ್ತಮನಸ್ಸಿನ ಉತ್ಸಾಹ ಗಾಥಾ ಆಗಿದ್ದರೆ, 'ಗಾಂಧೀಜಿಯಲ್ಲಿ ಭಿನ್ನವತ್ತಳೆ' ರಾಜಕಾರಣಿಯ ಆತ್ಮವಿಶ್ಲೇಷಣೆಯೊಂದಿಗೆ ಮನಸ್ಸನ್ನು ಸೆಳೆಯುತ್ತದೆ. 'ರಾಷ್ಟ್ರೀಯ ಯೋಜನೆ' ಯೋಜನೆಗಳ ಕಟು ವಿಮರ್ಶೆ. ಈ ಗುಂಪಿನಲ್ಲಿ 'ನೆಹರೂ ಆಡಳಿತ' ವಿಶಿಷ್ಟವಾದದ್ದು, ರಾಜಕೀಯ, ಕಾವ್ಯದಲ್ಲಿ ಬೇಗ ಕರಗುವ ವಸ್ತುವಲ್ಲವಾದರೂ ಕವಿಯ ರಾಜಕೀಯ ತಜ್ಞತೆ ಹಾಗೂ ಜೀವನಾನುಭವದಿಂದ ದೇಶದ ಆಗು ಹೋಗುಗಳ ವಸ್ತುನಿಷ್ಠ ವಿಮರ್ಶೆ ಈ ದೀರ್ಘಕವನದಲ್ಲಿ ಹರಳುಗೊಂಡಿದೆ.

ಭೂಮಿ ಇಳಿಜಾರು
ಜಾರಿದನು ನೆಹರು
ಮಾಡಿಯೂ ತ್ಯಾಗ
ಹಾಕಿದನು ಲಾಗ.

ಹೀಗೆ ಕೊನೆಗೊಳ್ಳುವ ಈ ಕವಿತೆಯ ಛಂದವೂ ಒಂದು ಹೊಸ ಪ್ರಯೋಗವೆನಿಸಿದೆ. ಒಂದೊಂದು ಚರಣದಲ್ಲಿ ಐದು ಹಾಗೂ ಮೂರು ಮಾತ್ರೆಗಳನ್ನೊಳಗೊಂಡ ಅಂಥ ನಾಲ್ಕು ಚರಣಗಳ ನುಡಿ, ಎರಡೆರಡು ಸಾಲುಗಳಲ್ಲಿಯೂ ಅಂತ್ಯಪ್ರಾಸವನ್ನೊಳಗೊಂಡು, ಹಸಿ ಗೋಡೆಯಲ್ಲಿ ಹರಳು ಒತ್ತಿದಂತೆ ಮನಸ್ಸಿನಲ್ಲಿ ನೆಲೆಯೂರಿ ನಿಲ್ಲುತ್ತದೆ.

ಕವಿತೆಯ ವಸ್ತು ರೂಪ ಯಾವುದೇ ಇರಲಿ, ಅದನ್ನು ಸರಸವಾಗಿ, ಸರಳವಾಗಿ, ಮಾನವೀಯ ಭಾವನೆಯೊಂದಿಗೆ ಮುನ್ನಡೆಸುವ ನಿರೂಪಣಾ ಶಕ್ತಿ ದೇಸಾಯರ ಕಾವ್ಯಶೈಲಿಗಿದೆ. ಪ್ರಾಸಮೋಹ ಹೆಚ್ಚು ಎಂದು ಕೆಲವರಿಗನಿಸಬಹುದಾದರೂ ಪ್ರಾಸಗಳು ಇವರ ಕಾವ್ಯದಲ್ಲಿ ಹೇಳಿ ಕಳಿಸಿದ ಹಾಗೆ ಬರುತ್ತವೆ. ಆಡುವ ಭಾಷೆಯಲ್ಲಿಯೇ ಆಧುನಿಕ ಪ್ರಜ್ಞೆಯನ್ನೂ ಪ್ರಗತಿಶೀಲತೆಯನ್ನೂ ಇವರು ಮೆರೆಯಬಲ್ಲರು. ದ್ವಿಪದಿಗಳಲ್ಲಿ ಈ ಕವಿಗಿರುವ ಹಿಡಿತ ಅಸಾಧಾರಣವಾದದ್ದು. ಛಂದಸ್ಸಿನ ನಿಯಂತ್ರಣದಿಂದ ಕಾವ್ಯಕ್ಕೆ ಒಂದು ಹಿಡಿತ ಬರುವದೆಂಬ ನಂಬಿಕೆಯಿಂದ ಅವರು ಎಂದೂ ದೂರ ಸರಿದಂತಿಲ್ಲ. ಲವಲವಿಕೆಯಿಂದಲೂ, ವಿವರಗಳ ವೈವಿಧ್ಯದಿಂದಲೂ ಕೂಡಿದ ವಿಲಕ್ಷಣವಾದ ಕಥನಶೈಲಿ ಇವರ ಕೆಲವು ಉತ್ತಮ ಕವನಗಳ ಮೈಗುಣವಾಗಿದೆ. 'ತೆರಿಗೆ ಅಧಿಕಾರಿಗಳಿಗೆ ಕವಿಗಳ ಮನವಿ' ಹಾಗೂ 'ಕೋಟಿ ರತ್ನಗಳ ಕಥೆ'ಯ ಲಘುವಾದ, ನವಿರಾದ ಹಾಸ್ಯದಂತೆಯೇ 'ಚಹಾಪಾನದ ಕಥೆ'ಯಂತೆ ಗಂಭೀರವಾದ ಭಾವವನ್ನೂ ರುಚಿಗೊಳಿಸಿ ಕೊಡಬಲ್ಲರು.

ದೇಸಾಯರ ಕಾವ್ಯದ ಸಕಲ ಲಕ್ಷಣ ಸಂಪನ್ನತೆಯೊಂದಿಗೆ, ತನ್ನ ಶಕ್ತಿ ಸಾಮರ್ಥ್ಯಗಳನ್ನೆಲ್ಲ ಸೂರೆಗೊಂಡಿರುವ ಪದ್ಯ 'ಸ್ವರ್ಗದ ಗೆಳೆಯನಿಗೆ ಪತ್ರ', ಹನ್ನೊಂದು ಭಾಗಗಳ, ಮೂರು ನೂರ ಅರವತ್ತು ಸಾಲುಗಳಲ್ಲಿ ಓತಪ್ರೋತವಾಗಿ ಒಡಮೂಡಿದ ವಿವಿಧ ಬಗೆಯ ಸಾಮಾಜಿಕ ಪ್ರಜ್ಞೆ, ಸೂಕ್ಷ್ಮ ವಿಡಂಬನೆ, ವ್ಯಕ್ತಿ, ಊರು, ನಾಡು, ದೇಶವನ್ನೆಲ್ಲ ವ್ಯಾಪಿಸಿಕೊಂಡು, ಸಮಕಾಲೀನ ಜೀವನದ ನಾನಾಮುಖಗಳನ್ನು ಪ್ರತಿಬಿಂಬಿಸುವ ರೀತಿ ದಂಗುಬಡಿಸುವಂತಿದೆ. ಕನ್ನಡದಲ್ಲಿ ಸಮಕಾಲೀನ ಪ್ರಜ್ಞೆಯಿಂದ ಜೀವನವನ್ನು ವಿಮರ್ಶಿಸುವ ಇಂಥ ಪದ್ಯ ಬಹುಶಃ ದೇಸಾಯರ ಲೇಖನಿಗೇ ಮೀಸಲಾದಂತಿದೆ.

ಸುಮಾರು ಮೂವತ್ಮೂರು ವರುಷಗಳ ಹಿಂದೆ ಶ್ರೀ ಗೋಕಾಕರು ಹೇಳಿದರು : "ಕನ್ನಡಕ್ಕೆ ಇಂದಿಗೂ ಒಬ್ಬನೆ ದಿನಕರನೆಂದು ಹೇಳದೇ ಗತಿಯಿಲ್ಲ. ಅವರಂತೆ ಇನ್ನಾರೂ ಹಾಡಿಯೇ ಇಲ್ಲ." ಈ ಮಾತು ಇಂದಿನ ಸಂದರ್ಭದಲ್ಲಿಯೂ ನನಗೆ ನಿಜವೆಂದೇ ತೋರುತ್ತದೆ. ಮಕ್ಕಳಿಂದ ಮುದುಕರವರೆಗೂ ಮೆಚ್ಚುಗೆ ಪಡೆಯಬಲ್ಲ, ಬಹುಶಃ ಅಂದು-ಇಂದೆನ್ನದೇ ಎಂದೆಂದಿಗೂ ಸಲ್ಲುವ ಸಮಾಜವಾದಿ ಕವಿ ಶ್ರೀ ದಿನಕರ ದೇಸಾಯಿಯವರು ಕನ್ನಡಕ್ಕೆ ಸಲ್ಲಿಸಿದ ಕಾಣಿಕೆ ಅನನ್ಯವಾದದ್ದು.

(೧೯೮೩)

## ೨೯

## ಅಸ್ತಿತ್ವ

ಜಾನಪದ ಮಾದರಿಯ ತ್ರಿಪದಿಯಲ್ಲಿ ಅಕ್ಕಮಹಾದೇವಿಯ ಜೀವನವನ್ನು ಚಿತ್ರಿಸುವ ಸೊಗಸಾದ ಕಿರುಗಬ್ಬ (ಗಿರಿಯ ಪರಂಜ್ಯೋತಿ)ವೊಂದನ್ನು ಹನ್ನೆರಡು ವರ್ಷಗಳ ಹಿಂದೆ ನೀಡಿದ್ದ ಡಾ. ಕೋತಿನ ಇದೀಗ ಭಿನ್ನ ರೀತಿಯ ಕವನ ಸಂಗ್ರಹವೊಂದನ್ನು 'ಅಸ್ತಿತ್ವ'ದ ಮೂಲಕ ಬೆಳಕಿಗೆ ತರುತ್ತಿದ್ದಾರೆ. ಈ ನಡುವೆ ಪ್ರಸಿದ್ಧ ರಂಗಕಲಾವಿದೆ ಸೋನುಬಾಯಿ ದೊಡ್ಡಮನಿಯವರ ಸಾರ್ಥಕ ಕಲಾ ಜೀವನವನ್ನೊಳಗೊಂಡ ಉತ್ತಮ ಚರಿತ್ರೆಯನ್ನು ಅವರು ಕನ್ನಡಕ್ಕೆ ಕೊಟ್ಟಿದ್ದಾರೆ. ಕವಿ ಆಂಡಯ್ಯನನ್ನು ಕುರಿತು ಮೌಲಿಕವಾದ ಅವರ ಪಿಎಚ್.ಡಿ ಪ್ರಬಂಧ ಪ್ರಕಟವಾಗಿ ಆಗಲೇ ಹಳೆಯ ಮಾತಾಗಬೇಕಿತ್ತು. ಈಗಲಾದರೂ ಅದು ಅಚ್ಚಿಗೆ ಹೋಗುತ್ತಿರುವುದು ಸಂತೋಷದ ಸಂಗತಿ.

ಪ್ರಸ್ತುತ ಸಾಮಾಜಿಕ ಮತ್ತು ಕೆಲಮಟ್ಟಿಗೆ ರಾಜಕೀಯ ಹಾಗೂ ವೈಯಕ್ತಿಕ ಸಂದರ್ಭಗಳಲ್ಲಿ ವಿವಿಧ ವ್ಯಕ್ತಿಗಳ ನಡವಳಿಕೆ, ದೋಷ-ದೌರ್ಬಲ್ಯಗಳು, ಸಣ್ಣತನ-ಸಂಕುಚಿತತೆಗಳು, ಗುಣಾವಗುಣಗಳು ಇಲ್ಲಿ ವಿನೋದ, ಕಟಕಿ, ವಿಡಂಬನೆಗೆ ಈಡಾಗಿರುವಂತೆಯೇ ಸಾಂಸ್ಕೃತಿಕ ವ್ಯಕ್ತಿಗಳ ಗುಣ ಗೌರವವನ್ನೂ ಕಾಣಬಹುದಾಗಿದೆ. ಸ್ವಭಾವೋಕ್ತಿ, ಅನ್ಯೋಕ್ತಿಗಳೆರಡನ್ನೂ ಪರಿಣಾಮಕಾರಿಯಾಗಿ ಕೆಲವೆಡೆ ಬಳಸಿಕೊಳ್ಳಲಾಗಿದೆ. ಅವರಿವರ ಹೇಳಿಕೆಗಳ ಮೇಲೆ ಬದುಕು ಸಾಗಿಸುವವ ತನ್ನ ಕರಿನೆರಳಿಗೆ ಅಂಜಿ ತಾನೂ ಕತ್ತಲಾಗುವದು, ಆದರೆ ಸ್ವಂತ ವಿವೇಚನೆಯಿಂದ ಮುಂದೆ ಸಾಗಿದಾಗ ಬೆಳಕಿನನುಭವ ಪಡೆಯುವ ನಿರೂಪಣೆ 'ಸ್ವಂತಿಕೆ'ಯಲ್ಲಿದ್ದರೆ, 'ಪೂಜಾರಿಯ ಪರಿಚಯ ಭಾಷಣ' ಕಣ್ಣುಮುಚ್ಚಿ ಕೈ ಮುಗಿಯುವ ಭಕ್ತರಿಗೆ ಅವರು ತಮ್ಮ ಹುಳುಕನ್ನು ತಾವೇ ಬಿಚ್ಚಿಬಯಲಿಗಿಡುವಂತಿದೆ. 'ಪ್ರತೀಕಾರ'ದಲ್ಲಿ ತನ್ನೊಡನೆ, ತನ್ನ ಕಳ್ಳಿಗೆ ಕೊಳ್ಳಿಕೊಟ್ಟ ಇನ್ನೊಬ್ಬ ವ್ಯಕ್ತಿಯ ನಡತೆಯನ್ನು ಎದುರಿಗೆ ಹಿಡಿಯುತ್ತದೆ. 'ಎಚ್ಚರಿಕೆ'ಯಲ್ಲಿ ಎಚ್ಚತ್ತ ದಲಿತನ ದನಿ-ಮಾರ್ದನಿಗಳಿವೆ. ಇತ್ತೀಚಿನ ಕವಿತೆಗಳಲ್ಲಿ ಇದು ಸಾಮಾನ್ಯವಾಗಿ ಬಿಟ್ಟಿದೆ. ಭಿಕ್ಷುಕನೊಬ್ಬನ ಪ್ರತೀಕವಾಗಿ 'ಕಪ್ಪುನೆರಳು' ಕಾಡಿದ ಚಿತ್ರದಂತೆ, ನಂಬಿಗೆಗೆ ಕೈಕೊಟ್ಟ ವ್ಯಕ್ತಿ 'ಬೀದಿನಾಯಿ'ಯ ಪ್ರತೀಕವಾಗಿ 'ವಿಷಾದ'ದಲ್ಲಿ ಕಾಣಿಸಿಕೊಂಡಿದೆ. ಮುಗ್ಧರನ್ನು ಮುರಿದು ತಿನ್ನುವ ರಾಜಕೀಯ ಅನಿಷ್ಟಗಳು ಶ್ವೇತಾಂಬರ ತೋಳಗಳ ಚಿತ್ರ 'ಸೇಡು'ವಿನಲ್ಲಿದ್ದರೆ, 'ವಾಸನೆ' ಲೈಂಗಿಕ ತೀವ್ರತೆಯ ಘಾಟು ಹೊಡೆಯುತ್ತದೆ. ಹೊಟ್ಟೆಯ ಹಸಿವಿಗೆ ದುಡಿಯುವದಕ್ಕೂ ಉಳಿದವರ ಏರಿಕೆಯನ್ನು

ಸಹಿಸದೆ ಹೊಟ್ಟೆಕಿಚ್ಚಿನಿಂದ ದುಡಿಯುವದಕ್ಕೂ ಇರುವ ವ್ಯತ್ಯಾಸ 'ಪೈಪೋಟಿ'ಯಲ್ಲಿ ಸ್ಫುಟವಾಗಿ ವ್ಯಕ್ತಗೊಂಡಿದೆ. 'ಕಾಡುಕೋಣ' ಅಂಥ ವ್ಯಕ್ತಿಗಳ ಸಹವಾಸದ ಪರಿಣಾಮದ ಚಿತ್ರನೀಡಿದರೆ 'ಕೆಲವು ಪ್ರಾಧ್ಯಾಪಕರ' ಚಿತ್ರಗಳನ್ನು ಬಿಡಿಸಿದ ರೀತಿ ಮಾತ್ರ ಧ್ವನಿ ಪೂರ್ಣವಾಗಿದೆ.

'ಉದ್ಧಾರ' 'ಕವಿಗೆಳೆಯನಿಗೆ ಕಿವಿಮಾತು', 'ಸರ್ವಜ್ಞನಾಗಾಕ', 'ಸತ್ಯಾಗ್ರಹ', 'ಮತೀಯತೆ', 'ಸೋಡಚೀಟಿ' - ಇವೇ ಮೊದಲಾದವು ಬಳಕೆಯ ಮಾತಿನ ಶೈಲಿಯಲ್ಲಿ ಸೂಕ್ಷ್ಮವಾದ ಹಾಸ್ಯ, ವಿನೋದ ವಿಡಂಬನೆಗಳಿಂದ ರಚನೆಯಲ್ಲಿಯೂ ಸ್ವಯಂಪೂರ್ಣವಾಗಿ ಹೆಚ್ಚು ಯಶಸ್ವಿಯಾದ ಕವನಗಳಾಗಿವೆ.

ಕವಿಗೆ ಗುರುಸ್ಥಾನದಲ್ಲಿರುವ ಮೂವರು ವ್ಯಕ್ತಿಗಳನ್ನು ಕುರಿತ ಕವಿತೆಗಳು ಆಯಾ ವ್ಯಕ್ತಿಗಳ ವೈಶಿಷ್ಟ್ಯಗಳನ್ನು ತಕ್ಕಮಾತಿನಲ್ಲಿ ತೂಗಿರುವ ಹಾಗೆಯೇ ಕಾವ್ಯಗುಣದಿಂದ ಕೂಡಿದ ಆತ್ಮೀಯ ವ್ಯಕ್ತಿಚಿತ್ರಗಳಾಗಿವೆ. ಆದರೆ 'ಸರ್ವಜ್ಞನಿಗೆ', 'ಬಸವಣ್ಣನಿಗೆ', 'ಮಗುವಿಗೆ' ಪದ್ಯಗಳು ವಾಚಾಳಿತನದಿಂದ, ಭಾವಸಾಂದ್ರತೆ ಇಲ್ಲದೆ ತೆಳುವಾಗಿ ಕಂಡು ಬರುತ್ತವೆ. ವ್ಯಕ್ತಿ ಎಷ್ಟೇ ಸಣ್ಣವನಾದರೂ ತನ್ನ ಅಸ್ತಿತ್ವವನ್ನು ಕಾಪಾಡಿಕೊಂಡರೆ ಹಳ್ಳವಾಗಿ ಹರಿದು ಸಾಗರ ಸೇರುವ ಸಾಮರ್ಥ್ಯವಿಲ್ಲದಿದ್ದರೂ ತನ್ನಲ್ಲಿಯೇ ಹೊಸನೀರುನ್ನು ಚಿಮ್ಮಿಸುವ ಕಿರುಬರತೆಯಂತೆ ಅಂಥ ಜೀವನವೂ ಸಾರ್ಥಕವೇ ಎಂಬ ಭಾವ 'ಅಸ್ತಿತ್ವ'ದಲ್ಲಿ ಚೆನ್ನಾಗಿ ಅಭಿವ್ಯಕ್ತಗೊಂಡಿದೆ.

ಇಷ್ಟೆಲ್ಲ ಹೇಳಿದರೂ ಈಚಿನ ಕವಿತೆಗಳಲ್ಲಿ ಸಾಮಾನ್ಯವಾಗಿ ಕಂಡು ಬರುವ 'ಎಲ್ಲಾ ಒಂದೇ ಥರ'ವೆನ್ನಬಹುದಾದ ಸಮಾನ ದೋಷವನ್ನೇ ಈ ಸಂಗ್ರಹದಲ್ಲಿಯೂ ಕಂಡರೆ ಆಶ್ಚರ್ಯವಿಲ್ಲ. ಕಾವ್ಯದ ವಸ್ತು ಮತ್ತು ರೀತಿಯಲ್ಲಿ ವೈವಿಧ್ಯ, ಅನಿಸಿಕೆಗಳನ್ನು ಭಾವವಾಗಿ ಮಾರ್ಪಡಿಸಿ ನಿರೂಪಿಸುವ ಕೌಶಲ. ಭಾಷೆಯ ಬಳಕೆಯಲ್ಲಿ ಸಂಯಮ ಇತ್ಯಾದಿ ಅಂಶಗಳ ಬಗ್ಗೆ ಹೆಚ್ಚು ಗಮನ ಕೊಟ್ಟಂತೆ ಇನ್ನೂ ಉತ್ತಮವಾದ ಕೃತಿಗಳನ್ನು ಈ ಕವಿ ಕೊಡಬಲ್ಲರು. 'ರೋಗ ಬೇಕಾತು ಮದ್ದು ಬ್ಯಾಡಾತು ಅನಸ್ತೈತಿ' ಎಂಬ ಬೇಸರದ ಮಾತು ಕವಿತೆಯೊಂದರಲ್ಲಿ ಬಂದಿದ್ದರೂ ಕೊನೆಯಲ್ಲಿ 'ನನಗಂತೂ ಬಾಳಸಲಾ ಹೊಸಾಮದ್ದ ಹುಡುಕೂದ ಚಲೋ ಅನಸ್ತೈತಿ' ಎಂಬ ಅಭಿಲಾಷೆಯೂ ವ್ಯಕ್ತವಾಗಿದೆ. ಡಾ. ಕೋತಿನ ಅವರ ಕಾವ್ಯಶಕ್ತಿಯಲ್ಲಿ ನಂಬಿಗೆಯುಳ್ಳ ನಾನೂ ಅದನ್ನೇ ಹಾರೈಸುತ್ತೇನೆ.

(೧೯೮೪)

## ೩೦

# ಚಿತ್ರ - ಚಿತ್ತಾರ

ಶ್ರೀ ಆನಂದ ಹಣಮಂತಗೌಡ ಅವರ ಪರಿಚಯವಿರದಿದ್ದರೂ ಅವರ ಕೆಲವು ಸಣ್ಣ ಕಥೆಗಳನ್ನು ಆಗೀಗ ಪತ್ರಿಕೆಗಳಲ್ಲಿ ಓದಿ ಮೆಚ್ಚಿಕೊಂಡಿದ್ದೆ. ಶ್ರೀ ರಾಜೇಂದ್ರ ಪಾಟೀಲರ ಮುಖಾಂತರ ಈಚೆಗೆ ಅವರ ಪರಿಚಯವಾಗಲು 'ಚಿತ್ರ-ಚಿತ್ತಾರ'ದ ಕವಿತೆಗಳು ಕಾರಣವಾದವು. ಈ ಸಂಕಲನಕ್ಕೆ ಮುನ್ನುಡಿಗೆ ಬದಲು ಎರಡು ಮಾತು ಮೆಚ್ಚಿಗೆಯಿಂದ ಬರೆಯುತ್ತಿದ್ದೇನೆ.

ಇಲ್ಲಿಯ ಹದಿನೈದು ಕವಿತೆಗಳು ಅವಸರದ ಬರವಣಿಗೆಯಾಗಿರದೆ, ಸಂಯಮಶೀಲವಾದ, ಶಿಸ್ತಿನಿಂದ ಕೂಡಿದ ಮನಸ್ಸಿನಲ್ಲಿ ಮೂರ್ತಗೊಂಡಂಥವು. ಆದುದರಿಂದಲೇ ಸೂಕ್ಷ್ಮವಾದ ಭಾವನೆಗಳು ನುಣುಚಿ ಹೋಗದಂತೆ, ತಮಗೆ ಸಹಜವಾದ ಲಯದಲ್ಲಿ ಒಂದಾಗಿ, ಕವಿತೆಯ ಒಟ್ಟು ಪರಿಣಾಮಕ್ಕೆ ಕಳೆ ಕೊಟ್ಟಿರುವುದನ್ನು ಕಾಣುತ್ತೇವೆ. ಭಾಷೆಯ ಕಸರತ್ತನ್ನು ತೋರಿಸದೆ, ಬಳಸಿಕೊಂಡ ಪ್ರತಿಮೆಗಳು ಅರ್ಥಪೂರ್ಣವಾಗಿ ಅನುಭವದ ಅಭಿವ್ಯಕ್ತಿ ಕಾವ್ಯವಾಗುವತ್ತ ಒಲಿದಿರುವುದು ಸಂತೋಷದ ಸಂಗತಿ. ಕವಿಯ ಅಂತರಂಗದ ಅನ್ನಿಸಿಕೆಗಳು ಯಾವ ಅಲಂಕಾರವನ್ನೂ ಬಯಸದೆ ಕಾವುಗೊಂಡು ಅರಳುವದರಲ್ಲೇ ಒಂದು ಸೊಗಸಿದೆ.

ಸುಳಿದ ತಂಗಾಳಿ ಹೊತ್ತು ತಂದ ರಾತ್ರಿರಾಣಿಯ ಕಂಪು
ಮನದಾಳದಲ್ಲಿ ಹರಡಿದ ಶುಭ್ರ ಜ್ಯೋತ್ಸ್ನ
ಆಗಸದ ಎತ್ತರಕೆ ಹಾಯಾಗಿ ಹಾರಾಡಿ
ಅರಳಿದ ಹೂಗಳ ಆಚೆ
ಮಾಗಿದ ಹಣ್ಣುಗಳ ಆಚೆ
ನಿರ್ಝರಿಯ ತಂಪಿಗೂ ಆಚೆ
ಯಾವುದೊ ಲೋಕದ ಕನಸು
ಕಂಡಿದ್ದೆ

ಅಂಥ ಕನಸುಗಳನ್ನು ಒಳಗೊಂಡಾಗಲೇ ಅಪೂರ್ವವಾದ ಅನುಭವವೊಂದನ್ನು ಕವಿ ನಮಗೆ ನೀಡುತ್ತಾನೆ. ನಾವು ಭಾವಿಸಿಕೊಂಡಿದ್ದರಾಚೆಗೂ ಇರುವ ಹೊಸ ಲೋಕವನ್ನು ನಮ್ಮ ಕಣ್ಣೆದುರು ತೆರೆಯುತ್ತಾನೆ. ಅಷ್ಟೇ ಅಲ್ಲ -

ಎತ್ತರ ಗಿಡದ ರೆಂಬೆ ಕೊಂಬೆಗಳಲ್ಲಿ ಮೂಡಿರುವ
ಸಾವಿರ ಸಾವಿರ ಎಲೆ ಹೂ ಕಾಯಿ ಹಣ್ಣುಗಳನ್ನೇ
ಗಮನಿಸುವ ನಿಮ್ಮ ಕಣ್ಣಿಗೆ ಬೀಳದ
ಬೇರುಗಳಾಗಿದ್ದೇವೆ.

ಎಂದು 'ಅಜ್ಞಾತ'ವೆನಿಸಿದ ವಾಸ್ತವಕ್ಕೂ ಬೆಳಕು ಚೆಲ್ಲುತ್ತಾನೆ.

ಇಲ್ಲಿಯ ಕವಿತೆಗಳ ರೀತಿ ಒಂದೇ ಬಗೆಯಾಗಿ ಏಕತಾನತೆಗೆ ಆಸ್ಪದವೀಯಬಹುದೆನ್ನಿಸಿದರೂ ಅವುಗಳ ಬಂಧದಲ್ಲಿ ಸಮನ್ವಯತೆಯಿದೆ. ಪ್ರಶಾಂತ ಮನೋಧರ್ಮದಿಂದ ಬದುಕಿನ ಗಾಢವಾದ ಚಿಂತನೆಗೆ ಒಲಿದಿರುವ ಈ ಕವಿಗೆ ಒಳ್ಳೆಯ ಭವಿಷ್ಯವನ್ನು ಹಾರೈಸುತ್ತೇನೆ.

(೧೯೮೩)

೨೧

## ಬೆಳ್ಳಿತೇರು

ಶ್ರೀ ನರಸಿಂಹ ಪರಾಂಜಪೆಯವರ ಈ ಮೂರನೆಯ ಕವನ ಸಂಕಲನಕ್ಕೆ ಮುನ್ನುಡಿಯ ಅವಶ್ಯಕತೆಯಿದೆಯೆಂದು ನನಗೆ ತೋರುವುದಿಲ್ಲ. ಎಂಜಿನಿಯರಿಂಗ್ ವೃತ್ತಿಯಲ್ಲಿರುವ ಅವರು ಈ ಸಂಕಲನ ಪ್ರಕಟವಾಗುವಾಗಲೂ ಒಂದೆರಡು ಧೈರ್ಯದ ಮಾತುಗಳನ್ನು ಬಯಸುತ್ತಿರುವಂತೆ ತೋರುತ್ತದೆ. ಅವರ ವಿನಯಕ್ಕೆ ಅದು ಸಹಜವೇ.

'ಕವಿಹೃದಯ ಯಾವ ಕ್ಷಣಕ್ಕೆ ಯಾವ ದಾರಿ ಹಿಡಿದಿತ್ತೊ ಅಂತೆಯೆ ಚಿತ್ರಿಸಿದ್ದೇನೆ' ಎಂದು ಇಲ್ಲಿಯ ಕವಿತೆಗಳ ಛಂದೋರೂಪವನ್ನು ಕುರಿತು ಅವರು ಪ್ರಾಮಾಣಿಕವಾಗಿ ಹೇಳಿದ್ದಾರೆ. ವಸ್ತು ಮತ್ತು ಅದರ ನಿರ್ವಹಣೆಯನ್ನೂ ಇದು ಬಹುಮಟ್ಟಿಗೆ ಅವಲಂಬಿಸಿರುತ್ತದೆ.

ಮೊದಲ ಭಾಗದ ಕವಿತೆಗಳು ಮಧುರ ಭಾವನೆಯ, ಸುಂದರ ಕಲ್ಪನೆಯ ಒಲವು ವಾತ್ಸಲ್ಯಗಳಿಗೆ ಹಗುರಾದ ಪದಬಂಧವನ್ನು ಪಡೆದು ಮುನ್ನಡೆಯುವ ಪ್ರಯತ್ನದಲ್ಲಿ ಅಲ್ಲಲ್ಲಿ ಆಕರ್ಷಕವಾದ ಯಶಸ್ಸನ್ನು ಪಡೆದಿದ್ದಾರೆ. ಉದಾಹರಣೆಗೆ ಮುಂದಿನ ನುಡಿಗಳನ್ನು ನೋಡಬಹುದು.

ಮನೆಮನೆಯ ಬೆಳಕುಗಳು, ಮುದ್ದು ಕಂದಮ್ಮಗಳು
ಪುಟ್ಟ ಹೆಜ್ಜೆಯನಿಡುವಬೆಳಕು ಕೋಲುಗಳು;
ನಗೆಬಳ್ಳಿ ಹೂವಿನಲಿ ತೊದಲು ನುಡಿಯ ಪರಾಗ
ಬಾಳಿನಾ ಗುಡಿಯ ಕುಡಿ ಮಿಂಚು ದೀಪಗಳು

(ಮಂಗಲ ದೀಪ)

ಇಡಲು ಮೆಲ್ಲನಡಿಯನಲ್ಲಿ
ಗಾಳಿ ಕೊಳಲ ಇಂಪಿನಲ್ಲಿ
ಬಳುಕಿ ಬರಲು ಬಯಕೆ ಹೂವ ಹಿಡಿದು ನಿಂತೆನು.
ಹೆರಳ ತುಂಬ ಇರುಳ ತಾರೆ
ನಟ್ಟನಡುವೆ ಚಂದ್ರ ಕೋರೆ
ಅಲ್ಲಿ ಇಲ್ಲಿ ಎಷ್ಟು ಎಂದು ಎಣಿಸದಾದೆನು. (ಬಯಕೆ)

ಎರಡನೆಯ ಭಾಗದಲ್ಲಿ 'ಓಯಸಿಸ್', 'ಮಳೆ', 'ಬೇಂದ್ರೆ ವರ್ಣಚಿತ್ರಕ್ಕೆ', 'ಕುರ್ಚಿ', 'ವಿಪರ್ಯಾಸ' ಮೊದಲಾದ ಪದ್ಯಗಳು ತಮ್ಮ ಚಿತ್ರಕ ಶಕ್ತಿಯಿಂದ ಕೆಲಮಟ್ಟಿನ ವ್ಯಂಗ್ಯ ವಿಡಂಬನೆಗಳಿಂದ ಓದುಗರ ಗಮನವನ್ನು ಸೆಳೆಯಬಲ್ಲವು. ಮುಕ್ತ ಛಂದ, ಅದರಲ್ಲೂ ಸಂಕೀರ್ಣಭಾವಕ್ಕೆ ಎಡೆಗೊಟ್ಟಾಗ ಅದು ಗದ್ಯವಾಗದಂತೆ ನೋಡಿಕೊಳ್ಳುವದು ಎಷ್ಟು ಕಷ್ಟ ಎಂಬುದನ್ನು ಈ ಕವಿ ಅರಿತಿದ್ದಾರೆಂದು ನಾನು ಭಾವಿಸಿದ್ದೇನೆ.

ಕವಿಯ ಮನೋಧರ್ಮಕ್ಕೆ ತಕ್ಕ ನಡಿಗೆಯಲ್ಲಿ ಸಾಗಿರುವ 'ಬೆಳ್ಳಿ ತೇರು' ಸಂಯಮದಿಂದ ಒಂದು ಹಿಡಿತದಲ್ಲಿ, ಕಾವ್ಯಕ್ಕೆ ಬೇಕಾದ ಎಲ್ಲ ಪರಿಕರಗಳನ್ನೂ ಪಡೆದು, ತನ್ನ ಜೋಲಿಯನ್ನು ತಾನೇ ಕಾಯ್ದುಕೊಳ್ಳುತ್ತ ಸುತ್ತಲೂ ಸೊಬಗನ್ನು ಬೀರುವಂತಾಗಲಿ ಎಂದು ಹಾರೈಸುತ್ತೇನೆ.

(೧೯೮೪)

೩೨

## ನನ್ನ ನಿನ್ನೊಳಗೆ

ಇಂಗ್ಲೀಷ್ ಸಾಹಿತ್ಯದಲ್ಲಿ ಪ್ರಥಮ ದರ್ಜೆಯ ಸ್ನಾತಕರಾಗಿ, ಕಾನೂನು ಪರೀಕ್ಷೆಯಲ್ಲಿ ಪಾಸಾಗಿ ವಕೀಲಿ ವೃತ್ತಿಯನ್ನು ನಡೆಸಿ, ಕಳೆದ ಒಂದು ವರ್ಷದಿಂದ ಬಿಜಾಪುರ ತಾಲೂಕಾ ತಹಸೀಲ್ದಾರ್ ಆಗಿ ಕೆಲಸ ನಿರ್ವಹಿಸುತ್ತಿರುವ ಶ್ರೀ ಮನು ಬಳಿಗಾರ್ ಜೀವನೋತ್ಸಾಹದಿಂದ ತುಂಬಿ ತುಳುಕುತ್ತಿರುವ ಯುವಕರು. ಅವರ ಈ ಉತ್ಸಾಹದ ಪ್ರತೀಕವಾಗಿ "ನನ್ನ ನಿನ್ನೊಳಗೆ" ಕವನ ಸಂಕಲನ ಪ್ರಕಟಗೊಳ್ಳುತ್ತಿದೆ. ಇದರಲ್ಲಿ ಮುಕ್ಕಾಲು ಭಾಗ ಕಳೆದ ಒಂದೆರಡು ವರ್ಷಗಳಲ್ಲಿ ಬರೆದವುಗಳೆಂದು ಅವರು ತಿಳಿಸಿದ್ದಾರೆ.

ದಾಂಪತ್ಯ ಜೀವನದ ಪ್ರಾರಂಭ ದೆಸೆಯಲ್ಲಿ ಉಕ್ಕುವ ಪ್ರೀತಿ, ಉನ್ಮಾದ ಈ ರಚನೆಗಳಿಗೆ ಪ್ರೇರಕ. ಅದನ್ನು ಅಭಿವ್ಯಕ್ತಿಗೊಳಿಸಿರುವುದು ಹನಿಗವನ ಅಥವಾ ಚುಟುಕುಗಳ ರೀತಿಯಲ್ಲಿ, ಸಮಕಾಲೀನ ಸಂವೇದನೆಯಿಂದ ನಿಸ್ಸಂಕೋಚವಾದ ನುಡಿಚಿತ್ರಗಳಲ್ಲಿ ಅದನ್ನು ಹಿಡಿದಿಡಲು ಪ್ರಯತ್ನಿಸಿರುವ ಈ ಕವಿ ಅಲ್ಲಲ್ಲಿ ಓದುಗರ ಮನಸ್ಸನ್ನು ಸೆರೆಹಿಡಿಯಬಲ್ಲರು. ಉದಾಹರಣೆಗೆ ಕೆಲವನ್ನು ಇಲ್ಲಿ ನೋಡಬಹುದು.

ನಿನ್ನ ನೆನಪಿನ ನೆರಳಲ್ಲಿ ಕುಳಿತು
ತುಟಿಗಳ ಫ್ರಿಜ್‌ನಲ್ಲಿ
ಮನ ಇಟ್ಟಾಗ
ಬೇಸಿಗೆಯ ಬಿಸಿಲಲ್ಲೂ
ಕಲ್ಬುರ್ಗಿ ಕಾಶ್ಮೀರ.

* * *

ನೀ ಮಹಾರಾಣಿಯಂತೆ
ಮೆರೆಯುವೆ ಏಕೆ ?
ನಿನ್ನ ಸಾಮ್ರಾಜ್ಯದ ಪ್ರಜೆ
ನಾನೊಬ್ಬನೆ

* * *

ನಾ ಬರೆವ ಉದ್ದುದ್ದ ಪುಟಗಳು
ನಿನಗೆ ಆಲಿಂಗನಗಳು
ನೀ ಬರೆದ ಪುಟ್ಟ ಪತ್ರಗಳು
ನಿನ್ನ ಸಿಹಿ ಮುತ್ತುಗಳು.

ಕೆಲವೇ ಪದಗಳನ್ನು ಬಳಸಿ, ನವೀನ ಕಲ್ಪನೆಯಿಂದ ಒಂದು ಚಿತ್ರವನ್ನು ಕಟ್ಟುವಲ್ಲಿ, ಮಾತಿನ ಚಮತ್ಕಾರದಿಂದ ಅರ್ಥಕ್ಕೆ ಹೊಸ ಮೆರುಗನ್ನು ತರುವಲ್ಲಿ, ಪ್ರೇಮದ ಉತ್ಕಟತೆ ಭಾವೋದ್ರೇಕದಲ್ಲಿ ಕೊನೆಗೊಳ್ಳದಂತೆ ನೋಡಿಕೊಳ್ಳುವಲ್ಲಿ ಇವು ಯಶಸ್ವಿಯಾಗುತ್ತವೆ. ಕಾವ್ಯಗುಣದಿಂದ ಕಳಕಳಿಸದೆ ಹೇಳಿಕೆಗಳಂತೆ ತೋರುವ ರಚನೆಗಳೂ ಇಲ್ಲಿವೆ. ಹನಿಗವನಗಳಲ್ಲಿ ಸಾಮಾನ್ಯವಾಗಿ ಕಂಡು ಬಂದಿರುವ ಹಿಡಿತ ಇನ್ನುಳಿದ ಕವನಗಳ ಮಾತಿನಸಲ್ಲಾಗಲಿ, ರೀತಿಯಲ್ಲಾಗಲಿ ಕಂಡುಬರುವುದಿಲ್ಲ. ಅದೇನೇ ಇದ್ದರೂ ರಸಿಕರಿಗೆ ಈ ಸಂಕಲನ ಮೆಚ್ಚುಗೆಯಾಗುವದೆಂದು ಆಶಿಸಿದ್ದೇನೆ.

(೧೯೮೪)

೩೩

## ಬಯಲು ಸೀಮೆಯ ಬಿಸಿಲು

ತಮ್ಮ ಮೊದಲ ಕವನ ಸಂಗ್ರಹ 'ಮಾನಸಗಳ್ಳಿ'ಯಲ್ಲಿಯೇ ತಮ್ಮ ಕಾವ್ಯದ ಸ್ವರೂಪವನ್ನು ಕಂಡುಕೊಂಡ ಶಾಂತರಸರು ಯಾವ ಪಂಥಕ್ಕೂ ಜೋತುಬೀಳದೆ, ಕಳೆದ ಸುಮಾರು ಎರಡು ದಶಕಗಳಿಂದಲೂ ತಮ್ಮ ದಾರಿಯಲ್ಲಿಯೇ ಇನ್ನಿಷ್ಟು ಗಟ್ಟಿ ಹೆಜ್ಜೆಗಳನ್ನಿಡುತ್ತ, ಇದೀಗ ಎರಡನೆಯ ಸಂಕಲನವನ್ನು ಓದುಗರ ಕೈಗೆ ನೀಡುತ್ತಿರುವುದು ಅವರ ಕಾವ್ಯ ಬರವಣಿಗೆಯ ನಿಗ್ರಹಶಕ್ತಿಗೆ ನಿದರ್ಶನವಾಗಿದೆ. ಅವರ ಸ್ನೇಹದ ಕೋರಿಕೆಯಂತೆ ಮುನ್ನುಡಿ ರೂಪದ ಎರಡು ಮಾತುಗಳನ್ನು ಬರೆಯಲು ತುಂಬ ಸಂತೋಷವೆನಿಸುತ್ತಿದೆ.

ಬಯಲು ಸೀಮೆಯ ಬಿಸಿಲನ್ನುಂಡ ನೆಲದ ಕಸುವನ್ನೂ, ಹೊಸ ನೀರಿಗಾಗಿ ಅದರ ಹಸಿವನ್ನೂ, ಜೊತೆಗೆ ಅದರ ಬನ್ನ ಬವಣೆಗಳನ್ನೂ ಸಕಾಲದಲ್ಲಿ ಮಳೆ ಬಿದ್ದರೆ ಏನು ಬೇಕಾದರೂ ಬೆಳೆದುಕೊಡಬಲ್ಲ ಶಕ್ತಿಯನ್ನೂ ಸಾಂಕೇತಿಕವಾಗಿ ಇಲ್ಲಿಯ ಕವನಗಳು ಪಡೆದುಕೊಂಡಿವೆ. ಬಹುಮಟ್ಟಿನ ಕವನಗಳ ಮಾತು, ರೀತಿ, ನಡಿಗೆ, ನೋಟ ಒಂದೇ ಬಗೆಯಾಗಿ ಕಂಡರೂ ಅನುಭವಗಳ ನಿಷ್ಠುರವಾದ ಅಭಿವ್ಯಕ್ತಿ ಅನನ್ಯವಾಗಿದೆ.

ಈ ಕವನಗಳ ನಾಯಕ 'ನಾನು' ವೈಯಕ್ತಿಕವಾಗಿ ಸಾಮಾಜಿಕ ಸಂವೇದನೆಯ ಭಾಗವಾಗಿರುವುದು ಮಹತ್ವದ್ದಾಗಿದೆ. ಕೊಂಚ ದೀರ್ಘವಾಗಿ ಬೆಳೆದಂತೆ ತೋರಿದರೂ 'ಯಾರು?' ಕವನ ಇದಕ್ಕೆ ಉತ್ತಮ ಉದಾಹರಣೆಯಾಗಿದೆ. ಅವನು 'ಕಿಡ್ಡಿ ಕಣ್ಣಿಂದ ನೋಡೊ ಬಂಬಾಯಿ ತಾರೀಫು' ವಸ್ತು ಮತ್ತು ತಂತ್ರದ ಸಮನ್ವಯದಿಂದ ಪರಿಸರವನ್ನು ಪ್ರಮುಖವಾಗಿ ಒಳಗಣ್ಣಿಗೆ ಒಡ್ಡಿಕೊಳ್ಳುತ್ತದೆ.

ಹುಟ್ಟೋ ಸೂರ್ಯನ್ಗಿಂತ ಸಾಯೋ ನೇಸರ್ನ ಮ್ಯಾಲೆ
ನನಗೆ ಹೆಚ್ ಪ್ರೀತಿ !
ತನ್ನ ಮೈಬೆಳಕಿನ ಚಿತೆ ತಾನೇ ಏರಿ
ಸೂರ್ಯ ಸುಟ್ ಮರ್‍ಯಾದಾಗ
ಆ ಉರ್‍ಯಾಗೇನೇ ಹುಟ್ಟಿ ಬರ್ತಾನ ಬಿದ್ಗಿಚಂದ್ರ

'ಏನೋ ಹೊಸದ್ ಬೇಕು' ಎನ್ನುವ ಜೀವದ ಚಡಪಡಿಕೆ ಕವನದ ಉದ್ದಕ್ಕೂ ಮಿಡಿದು 'ಕತ್ಲೆ, ಬೆಳ್ದಿಂಗ್ಳು, ಲೈಟು, ಚಾಳೀಸು, ಹಲ್ಲಿ, ಪುಸ್ತಕ, ಆಕೆ' ಹೀಗೆ ಸಂಕೀರ್ಣತೆಯ ಸಂವಿಧಾನದಲ್ಲಿ ಯಾರು ಯಾರೂ ಎಂಬ ಹುಟ್ಟು ಸಾವಿನ ಚಿಂತನೆಯ ಮೂಸೆಯಲ್ಲಿರುವಾಗಲೇ -

ನೋಡ್ ನೋಡಟರಲ್ಲಿ
ಹುಟ್ಬೋ ಸೂರ್ಯನ ಬಂಗಾರ್ದ ಕೈಗಳು
ಚಂದ್ರಾಮನ ಕುತ್ಗಿ ಹಿಚ್ಕಿಬಿಡ್ತವ.

- ಎಂದು ಕವನ ಧ್ವನಿಪೂರ್ಣವಾಗಿ ಕೊನೆಗೊಳ್ಳುತ್ತದೆ.

ನಾನು ನೀನು ಅವರು ಇವರು ಎಲ್ಲರೂ
ಈ ಒಣ ಮಾತುಗಳ ಬಣಿವೆಯಲ್ಲಿ
ಸುಟ್ಟು ಬೂದಿಯಾಗುತ್ತೇವೆ.

ಎಂಬ ವಿಷಾದ ಆಳವಾದದ್ದಲ್ಲದೆ ಮೇಲುಮೇಲಿನದಲ್ಲ. ಅದಕ್ಕಾಗಿಯೇ ತಾನು ಕವಿತೆ ಬರೆಯುವುದನ್ನೂ ಬಿಟ್ಟು 'ಬಾ ಗೆಳೆಯಾ ಹೊರಗೆ ಬಾ, ಏನಾದರೂ ಮಾಡೋಣ' ಎಂದು ಮತ್ತೊಂದು ಅಂತಃಕರಣಕ್ಕೆ ಈ ಜೀವ ಮೊರೆಯಿಡುತ್ತದೆ. 'ನನ್ನ ಹಾಡಿ'ನ ಸ್ವಾತ್ಮ ನಿರೀಕ್ಷೆಯೊಂದಿಗೆ 'ಹುಟ್ಟಿನಲ್ಲಿ ಸೆರೆ ಸಿಕ್ಕ ಕಾಲವನ್ನು ಸಾವಿನಲ್ಲಿ ಬಿಡುಗಡೆಮಾಡಿ ಕಾಲಾತೀತನಾಗು'ವ ಬಯಕೆಯನ್ನು ವ್ಯಕ್ತಪಡಿಸುತ್ತದೆ.

'ಬಯಲು ಸೀಮೆಯ ಬಿಸಿಲು', 'ಬೆಕ್ಕುಗಳೇ' ಮೊದಲಾದ ಕವನಗಳಲ್ಲಿ ಸಾಮಾಜಿಕ ಪ್ರಜ್ಞೆ ಸೂಚ್ಯವಾಗಿದ್ದರೆ; 'ಪಾಪ ಅನಿಸುತ್ತದೆ', 'ದಲಿತರ ಉದ್ಧಾರ'ದಂಥ ಕವಿತೆಗಳಲ್ಲಿ ಅದು ವಾಚ್ಯಕ್ಕಿಳಿದುಬಿಡುತ್ತದೆ. 'ದಾರಿ', 'ಸುಂಕೇಸರ', 'ಬಿದಿಗೆ ಎಂಬುದಿಲ್ಲ', 'ಗಂಗೆಯ ನಿದ್ದೆ' ಮೊದಲಾದ ಚಿಕ್ಕ ಕವನಗಳಲ್ಲಿ ಭಾವಾಭಿವ್ಯಕ್ತಿ ಚೊಕ್ಕವಾಗಿ, ಚೆಲುವಾಗಿದೆ. 'ಕೌರವನ ಆತ್ಮ ಕಥನ' ವ್ಯಕ್ತಿಯ ಜೀವನದಲ್ಲಿ ಪ್ರಾಮಾಣಿಕತೆಯನ್ನು ಜಾಲಾಡಿಸಿ ನೋಡುವಷ್ಟು ತೀಕ್ಷ್ಣತೆ ಪಡೆದಿದ್ದರೆ 'ಸೋಡಚೀಟಿ' ಎದೆಯ ಕುದಿತಕ್ಕೆ ತಕ್ಕ ಮಾತಿನ ಶಕ್ತಿಯನ್ನು ಪಡೆದು ಸಹಜತೆ, ಸರಳತೆಗಳನ್ನು ಮೇಳವಿಸಿಕೊಂಡಿದೆ. ಮನುಷ್ಯ ಸ್ವಭಾವದ ರೀತಿ-ನೀತಿಗಳ 'ಅಂತರ' ಮಾರ್ಮಿಕವಾಗಿದ್ದರೆ, 'ಹಂಪಿತೇರ್ ಬಿತ್ತು' ಶಾಂತರಸರ ಸಂಕೇತ ಶಕ್ತಿಗೆ ಸಾಕ್ಷಿಯಾಗಿದೆ.

ಸಣ್ಣ ಕತೆ, ವ್ಯಕ್ತಿ ಚಿತ್ರ ಮೊದಲಾದ ಸಾಹಿತ್ಯದ ಉಳಿದ ಪ್ರಕಾರಗಳಲ್ಲಿಯೂ ಉತ್ತಮ ಕೃಷಿಗೈದಿರುವ ಶಾಂತರಸರು ಕನ್ನಡ ಸಾಹಿತ್ಯ ಪರಂಪರೆಯ ಸಾರವನ್ನು ಮೈಗೂಡಿಸಿಕೊಂಡವರೆಂಬುದು ಮಹತ್ವದ ಅಂಶವಾಗಿದೆ. ಪ್ರಸ್ತುತ ಸಂದರ್ಭದಲ್ಲಿ 'ಬಯಲು ಸೀಮೆಯ ಬಿಸಿಲು' ಗಂಭೀರ ಪರಿಶೀಲನೆಗೆ ಅರ್ಹವಾಗಿದೆಯೆಂದು ನಾನು ಭಾವಿಸಿದ್ದೇನೆ.

(೧೯೮೫)

## ೩೪

# ಅರ್ಥ

'ಅರ್ಥವಿಲ್ಲ, ಸ್ವಾರ್ಥವಿಲ್ಲ, ಬರಿಯ ಭಾವಗೀತ' ಎಂಬ ಕವಿಯ ಮಾತನ್ನು ಅರ್ಥೈಸಲು ವಿಮರ್ಶಕರೆಲ್ಲ ಸಾಕಷ್ಟು ಹೆಣಗಿದ್ದುಂಟು; ಆದಾಗ್ಯೂ ಇಂದಿಗೂ ಅದು ತನ್ನ ಸಂಪೂರ್ಣ ಅರ್ಥವನ್ನು ಬಿಟ್ಟುಕೊಟ್ಟಿದೆಯೆಂದು ಹೇಳಬರದು. ಈಚಿನ ಕವಿಗಳ ರಚನೆಗಳು 'ಬರಿಯ ಭಾವಗೀತ'ಗಳಾಗಿರುವುದಿಲ್ಲವಾದ ಕಾರಣ ಆ ಮಾತಿಗೆ ಅವರು ಹೆಚ್ಚು ತಲೆ ಕೆಡಿಸಿಕೊಳ್ಳುವ ಗೊಡವೆಗೆ ಹೋಗುವುದಿಲ್ಲವೆಂದು ತೋರುತ್ತದೆ. ಅದೇನೇ ಇರಲಿ, ರಾಜ್ಯಶ್ರೀ ತನ್ನ ಪ್ರಥಮ ಸಂಕಲನಕ್ಕೆ 'ಅರ್ಥ' ಎಂದು ಹೆಸರಿಟ್ಟಿರುವುದೂ 'ಅರ್ಥವಿಲ್ಲದ ಮಾತುಗಳ ನಡುವೆ ಧ್ವನಿಸಲಾಗದ ಸಂಗತಿಗಳ' ನಿರೂಪಣೆಗೆ 'ಧ್ವನಿಸದ್ದು' ಎಂಬ ಕವಿತೆಯಲ್ಲಿ ಬಂದಿರುವುದೂ ಇಲ್ಲಿ ನನಗೆ ಗಮನಾರ್ಹವಾಗಿ ತೋರಿತು.

ಹೊಸದಾಗಿ ಪದ್ಯ ಬರೆಯಲು ಹೊರಡುವ ಇಂದಿನ ಯುವಕರು ಪ್ರಚಲಿತ ಬಂಡಾಯ ಕಾವ್ಯವನ್ನು ಗಮನಿಸದೆ ಇರಲಾರರೆಂಬುದಕ್ಕೆ ಪ್ರಸ್ತುತ ಸಂಕಲನ ಕೆಲಮಟ್ಟಿಗೆ ಸಾಕ್ಷಿಯಾಗಬಹುದು. ಆದರೆ ಇಲ್ಲಿಯ ಪದ್ಯಗಳು ಅದರ ಅನುಕರಣೆಯಾಗಿರದೆ ತನ್ನ ಮನೋಧರ್ಮವನ್ನು ಅದರಲ್ಲಿ ಗುರುತಿಸಿಕೊಳ್ಳುವ ಒಂದು ಸಹಜ ಪ್ರಯತ್ನವಾಗಿದೆಯೆಂದರೆ ತಪ್ಪಾಗದು. ಕವಿಯಾಗುವ ಸವಿಗನಸು ತನ್ನಲ್ಲಿ ಮೊದಲೇ ಹುಟ್ಟಿದ್ದರೂ ಕವಯತ್ರಿಯರ ಕವಿಗೋಷ್ಠಿ 'ಅಂಕುರ' ಕವನದಲ್ಲಿ ನೆನೆದುಕೊಂಡಿದ್ದಾರೆ. ಇಂದಿನ ಕನ್ನಡ ಕಾವ್ಯ ಕವಯತ್ರಿಯರ ನಿಸ್ಸಂಕೋಚವಾದ, ಮುಕ್ತಮನಸ್ಸಿನ ಬರವಣಿಗೆಯಿಂದ ಹೊಸ ಅನುಭವಗಳನ್ನು ಓದುಗರಿಗೆ ಒದಗಿಸುತ್ತಿರುವುದು ಇಲ್ಲಿ ಗಮನಿಸಬೇಕಾದ ಸಂಗತಿಯಾಗಿದೆ.

ಸುತ್ತಲಿನ ಸಮಾಜದ ಬದುಕು, ಕಾಣುವ ವ್ಯಕ್ತಿಗಳು, ನಡೆಯುವ ವಿದ್ಯಮಾನಗಳು, ಅದರಿಂದ ಇಂದಿನ ಯುವ ಮನಸ್ಸು ಪಡೆಯುವ ಆಘಾತ, ಅಸ್ವಸ್ಥತೆಯ ಅನುಭವಕ್ಕೆ ಅಭಿವ್ಯಕ್ತಿ ಕೊಡುವ ಪ್ರಯತ್ನವನ್ನು ಇಲ್ಲಿಯ ಕವನಗಳಲ್ಲಿ ಕಾಣಬಹುದು. ಪ್ರತಿಭಟನೆ ಭಾವದ ಕಾವಿನಿಂದ ಪುಟಿದಾಗ, ವೈಚಾರಿಕ ನಿಲುವಿನಲ್ಲಿ ಬೆಸೆದುಕೊಂಡಾಗ ಅದಕ್ಕೆ ಕಾವ್ಯದ ಹೊಳಪು ತಾನಾಗಿಯೇ ಒದಗಿ, ಭಾವನೆಯ ಏರಿಳಿತಗಳೊಂದಿಗೆ ಭಾಷೆಯೂ ಛಂದಕ್ಕೆ ಹೊಂದಿಕೊಳ್ಳುತ್ತದೆ. 'ನೆಚ್ಚಿನ ಕರಿಯ ನಾಯಕ' ಇದಕ್ಕೊಂದು ಉದಾಹರಣೆಯೆನಿಸಬಹುದು. ಆದರೆ ತಾತ್ಕಾಲಿಕವಾದ ಪ್ರಚೋದನೆಯಿಂದ ವಸ್ತು ಅಥವಾ ಸಂಗತಿಯನ್ನು ಭಾವನಾತ್ಮಕವಾಗಿ ಗ್ರಹಿಸದಿದ್ದಾಗ

‘ಕ್ರಾಂತಿಕಾರರಲ್ಲವೆ ನಾವು ?’, ‘ಅರ್ಥ’, ‘ಕತ್ತಲೆಯ ಷಂಡರು’ ಮೊದಲಾದವು ಕವನದ ವೇಷವನ್ನು ತೊಟ್ಟ ಭಾಷಣಗಳಾಗಿಬಿಡುತ್ತವೆ. ರಾಜ್ಯೋದಯದ ಬೆಳ್ಳಿಯ ಹಬ್ಬದ ಸಂದರ್ಭದಲ್ಲಿ ಬರೆದ ‘ನನ್ನ ಒಂದು ಮೊರೆ’ಯಲ್ಲಿ ‘ಇಪ್ಪತ್ತೈದು ವರ್ಷದ ಸುಂದರ ಯುವತಿ ನೀನು’ ಎಂದು ಪ್ರಾರಂಭದಲ್ಲಿ ಸಂಬೋಧಿಸಿ, ಕೊನೆಯಲ್ಲಿ ‘ತಾಯೇ’ ಇತ್ಯಾದಿಯಾಗಿ ಕೋರುವುದು ಅಸಂಗತವಾಗಿ ತೋರಬಹುದು.

ಆದರೆ, ಭಾವೋದ್ವೇಗಕ್ಕೆಡೆಗೊಡದೆ ಚಿಂತನೆಗೆ ತೊಡಗುವ ಒಲವು ಸಾಮಾನ್ಯವಾಗಿ ಇಲ್ಲಿಯ ಪದ್ಯಗಳ ಒಂದು ಒಳ್ಳೆಯ ಲಕ್ಷಣವಾಗಿದೆ. ‘ಸುಳಿ’ಯಲ್ಲಿ ಸಂಕೀರ್ಣಭಾವದ ಒಂದು ಪ್ರತಿಮೆಯನ್ನು ನಿಧಾನವಾಗಿ ಮೂಡಿಸುವಿಕೆ, ‘ಸ್ಪಂದನ’ದಲ್ಲಿ ಕಾಣಿಸುವ ಇಂದಿನ ಯುವಕನ ಒಂದು ಚಿತ್ರ, ‘ಅಪ್ಪನ ಆಲ’ದಲ್ಲಿ ಮನುಷ್ಯ ಸಂಬಂಧದ ಒಂದು ಮಾರ್ದವತೆ, ‘ಮೇಡಂ ತುಟಿ’ಯ ಆತ್ಮ ನಿರೀಕ್ಷೆಯ ಅನಿರೀಕ್ಷಿತ ತಿರುವು, ‘ಹರೆಯ’ ಬಾಲ್ಯದ ನೆನಪಿನ ವ್ಯತ್ಯಾಸದ ಅಗೋಚರತೆ, ‘ಒಂದು ಹೆಣ್ಣಿನ ಪ್ರಶ್ನೆ’ಯ ದಿಟ್ಟತನ, ‘ಸಭ್ಯರು’ದಲ್ಲಿಯ ನೇರವಾದ ವಿಡಂಬನೆ ಮೆಚ್ಚಬೇಕಾದವು. ‘ಕಾಲಕೂಟ’, ‘ಸಮಾನತೆ’ಯಂಥ ಪದ್ಯಗಳಲ್ಲಿ ತನ್ನಷ್ಟಕ್ಕೆ ನಡೆಸುವ ಪರಿಣಾಮಕಾರಿಯಾದ ಸಂವಾದ ಉಪದೇಶಕ್ಕಿಳಿಯದಂತೆ ನೋಡಿಕೊಳ್ಳಬೇಕಾಗುತ್ತದೆ. ‘ಗಾಳಿ, ಮಳೆ, ಬಟ್ಟೆಗಳು’ ಕೊಡುವ ಮುಗ್ಧಭಾವದ ವಿನೋದ ಸಂತೋಷವನ್ನುಂಟುಮಾಡುತ್ತದೆ.

ಚಟುಕುಗಳಂತೆ ಚುರುಕಾಗಿರುವ ಏಳೆಂಟು ಕಿರುಗವನಗಳಲ್ಲಿ ‘ಜೀವನ’, ‘ಸಂಬಂಧ’, ‘ವಾಸ್ತವ’ ಮೊದಲಾದವು ಪರಿಣಾಮಕಾರಿಯಾಗಿವೆ. ‘ಕಂಬನಿ-ಕವಿತೆ’ಯಲ್ಲಿ ನಿರೂಪಿಸಿದಂತೆ ಅವು ‘ಜೀವದುಂಬಿದ ಹನಿಗಳಾಗಿ ಉದುರ’ ಬೇಕು, ಅಷ್ಟೇ.

ಕಾವ್ಯದಲ್ಲಿ ಗದ್ಯದ ಮಾತಿನ ಗತಿ ಅಪೇಕ್ಷಣೀಯವೆನಿಸಿದರೂ ಅದರ ಸ್ಪಷ್ಟತೆ, ನೇರ ಹೇಳಿಕೆಗಳು ಕಾವ್ಯ ಗುಣವನ್ನು ಕುಂದಿಸಿರುವುದನ್ನು ಇಲ್ಲಿ ಕಾಣುತ್ತೇವೆ. ಅಸ್ಪಷ್ಟತೆ ಅಲ್ಲಲ್ಲಿ ತಲೆದೋರಲು ಇನ್ನೂ ಅರಗಿಸಿಕೊಳ್ಳಲಾಗದ ಕೆಲವೊಂದು ವಿಚಾರ ಸರಣಿಯೂ ಕಾರಣವಾಗಿರಬಹುದು. ಅಂಥ ಸಂದರ್ಭಗಳಲ್ಲಿ ಅದು ಕವಿತೆಯೊಡನೆ ಎರಕಗೊಳ್ಳದೆ ಹೊರಗೇ ಉಳಿಯುವ ಸರಕಾಗುತ್ತದೆ. ಹಾಗೆಯೇ ಕವಿತೆಯ ಮುಖ್ಯ ಲಯವನ್ನು ಲಕ್ಷಿಸಿ, ಅದನ್ನು ಕಾಪಾಡಿಕೊಳ್ಳದೆ ಹೋದರೆ ಸಾಲುಗಳನ್ನು ಎಷ್ಟೇ ನಯನಮನೋಹರವಾಗಿ ಬೇರ್ಪಡಿಸಿ ಮುದ್ರಿಸಿದರೂ ಅದರ ಕೃತಕತೆಯನ್ನು ಮುಚ್ಚಿಡಲು ಸಾಧ್ಯವಾಗುವುದಿಲ್ಲ.

ನಿಜಕ್ಕೂ ಅನೇಕ ಒಳ್ಳೆಯ ಗುಣಗಳನ್ನು ಹೊಂದಿರುವ ಈ ಪ್ರಥಮ ಕವನ ಸಂಕಲನಕ್ಕೆ ‘ಮಾರ್ಗದರ್ಶಕವಾದ ವಿಮರ್ಶಾತ್ಮಕ ಮುನ್ನುಡಿ’ಯನ್ನು ಶ್ರೀಮತಿ ಕಮಲಾ ಹಂಪನಾ ಅವರು ನನ್ನಿಂದ ಬಯಸಿರುವುದು ಮಗಳ ಬೆಳವಣಿಗೆಯಲ್ಲಿ ಅವರಿಗಿರುವ ಕಳಕಳಿಯ ದ್ಯೋತಕವಾಗಿದೆ. ಅದಕ್ಕಾಗಿ ಅವರನ್ನು ಅಭಿನಂದಿಸಿ, ರಾಜ್ಯಶ್ರೀಯ ಕಾವ್ಯಶ್ರೀ ಅರ್ಥಪೂರ್ಣವಾಗಿ ಬೆಳಗಲಿ ಎಂದು ಹಾರೈಸುತ್ತೇನೆ.

(೧೯೮೫)

೩೫

## ಸಾಗಿ ಬರುತಿದೆ ಬೆಳಗು

ಸ್ವಾತಂತ್ರ್ಯ ಹೋರಾಟಗಾರರಾಗಿ ಕನ್ನಡನಾಡಿನ ಸಾಮಾಜಿಕ ರಾಜಕೀಯ ಹಾಗೂ ಶೈಕ್ಷಣಿಕ ಕ್ಷೇತ್ರಗಳಲ್ಲಿ ಸಂಪೂರ್ಣ ಸೇವಾ ಮನೋಧರ್ಮದಿಂದ ಕಾರ್ಯಗೈದು, ಸಚಿವರಾಗಿದ್ದೂ ಸರಳ, ಸಾಮಾನ್ಯ ಜೀವನದ ಆದರ್ಶವನ್ನು ಪಾಲಿಸಿದವರಲ್ಲಿ ಶ್ರೀ ಕಲ್ಲನಗೌಡ ಪಾಟೀಲರು ಅಗ್ರ ಪಂಕ್ತಿಯಲ್ಲಿದ್ದಾರೆ. ೮೨ ವರ್ಷದ ಈ ವಯಸ್ಸಿನಲ್ಲಿಯೂ ಸ್ವಗ್ರಾಮದಲ್ಲಿ ಇಂದಿಗೂ ವಿಧಾಯಕ ಕಾರ್ಯದಲ್ಲಿ ತೊಡಗಿರುವ ಅವರು ತಮ್ಮ 'ನೆನಪಿನ ಒರತೆಯ' ಸಂಪುಟಗಳ ಮೂಲಕ ಆತ್ಮ ಚರಿತೆಯನ್ನು ನೀಡುತ್ತಿರುವುದು ನಾಡಿನ ಚರಿತ್ರೆಯ ದೃಷ್ಟಿಯಿಂದಲೂ ಮಹತ್ವದ ಸಂಗತಿಯಾಗಿದೆ. ದೇಶಭಕ್ತರ ಜೀವನ ಚರಿತೆ. ಗ್ರಾಮ ಸುಧಾರಣೆ, ಶಿಕ್ಷಣ ಇತ್ಯಾದಿ ವಿಷಯಗಳನ್ನು ಕುರಿತು ಅವರು ಆಗಾಗ ಗ್ರಂಥರಚನೆ ಮಾಡುತ್ತಲೇ ಬಂದಿದ್ದಾರೆ.

ಶ್ರೀಯುತರು ಪದ್ಯಗಳನ್ನು ಬರೆದಿರುವ ವಿಷಯ ಓದುಗರಿಗೆ ಗೊತ್ತಾಗುತ್ತಿರುವುದು ಬಹುಶಃ ಇದೇ ಮೊದಲು. ಅವುಗಳ ಬಗ್ಗೆ ಅವರಿಗೆ ಯಾವ ಭ್ರಮೆಯೂ ಇಲ್ಲ. 'ಯಾವ ಗದ್ಯ ಅಥವಾ ಪದ್ಯಗಳ ವರ್ಗಕ್ಕೂ ಸೇರದಂಥ ಕರಡು ಟಿಪ್ಪಣಿಗಳು' ಎಂದು ಅವರೇ ಅಂದುಕೊಂಡಿದ್ದರೂ ತಮ್ಮ ವಿಚಾರ, ಬಯಕೆ, ಆಸೆ, ಆಕಾಂಕ್ಷೆ, ಹಂಬಲ, ಕೊರಗು ಮೊದಲಾದವನ್ನು ಈ ರಚನೆಗಳಲ್ಲಿ ನಿವೇದಿಸಿಕೊಂಡಿದ್ದಾರೆ. ಪರಿಸರದ ಒತ್ತಡ, ಮನಸ್ಸು ಹಾಗೂ ಅಂತಃಕರಣದ ಮೇಲೆ ಆಗಾಗ ಒದಗಿದ ಆಘಾತಗಳಿಗೆ ಪ್ರತಿಕ್ರಿಯೆಯಾಗಿ.

'ನಂದಾದೀಪವ ಹೊತ್ತಿಸುವೆವು ಪಂಪಾತೀರದಲ್ಲಿ ನಾವಿಂದು
ಎಂದೂ ನಂದದ ಆನಂದದ ಕರ್ನಾಟಕದ ಜ್ಯೋತಿ ಬೆಳಗಲೆಂದು
ಹಿಂದೊಮ್ಮೆ ಪ್ರಜ್ವಲಿಸಿದ ಕನ್ನಡ ಪ್ರಭೆಯಿಂ ಪುಳಕಗೊಂಡ,
ಮುಂದೆಯೂ ಕರ್ನಾಟಕ ಪ್ರಜಾತಂತ್ರ ಪ್ರತಿಭೆ ಬೆಳಗಲೆಂದು.

ಸನ್ಮಾನ್ಯ ಹಿರಿಯರಾದ ಶ್ರೀ ಪಾಟೀಲರು ಈ ಪದ್ಯ ಸಂಕಲನಕ್ಕೆ ನನ್ನ ಮುನ್ನುಡಿಯನ್ನು ಬಯಸಿದ್ದು ನನಗೊಂದು ಗೌರವವೆಂದು ಭಾವಿಸಿ ಅವರ ಪ್ರೀತಿ ವಿಶ್ವಾಸಗಳಿಗಾಗಿ ಆದರಪೂರ್ವಕ ವಂದನೆಗಳನ್ನು ಸಲ್ಲಿಸುತ್ತೇನೆ.

(೧೯೮೬)

## ೩೬

# ಮುಂಜಾನೆ ಬಂದವನು

ಕವಯಿತ್ರಿ ಕಮಲ ಹೆಮ್ಮಿಗೆಯವರ ಮೂರನೆಯ ಕವನಸಂಕಲನ 'ಮುಂಜಾನೆ ಬಂದವನು' ಪ್ರಕಟಗೊಳ್ಳುತ್ತಿರುವುದು ನಿಜಕ್ಕೂ ಸಂತೋಷದ ಸಂಗತಿ. ನಿಷ್ಠೆಯಿಂದ, ನಿರಾಡಂಬರವಾದ ಕಾವ್ಯಸೃಷ್ಟಿಯಲ್ಲಿ ತೊಡಗಿರುವ ಇಂದಿನ ಕವಿಗಳಲ್ಲಿ ಇವರು ಗಣ್ಯರು. ಈ ಸಂಕಲನಕ್ಕೆ ನಾನು ಮುನ್ನುಡಿ ಬರೆಯಬೇಕೆಂದು ಅವರು ಅಪೇಕ್ಷಿಸಿದ್ದಾರೆ. ಅವರನ್ನು ಹೊಸದಾಗಿ ವಾಚಕಲೋಕಕ್ಕೆ ಪರಿಚಯ ಮಾಡಿಕೊಡುವ ಪ್ರಮೇಯವಿಲ್ಲದಿರುವುದರಿಂದ ಸಹೃದಯ ಪ್ರತಿಕ್ರಿಯೆಯಾಗಿ ನನ್ನ ಅನಿಸಿಕೆಗಳನ್ನು ಓದುಗರೊಡನೆ ಹಂಚಿಕೊಳ್ಳುವಲ್ಲಿ ನನಗೆ ಸಂತೋಷವಿದೆ. ಕಾವ್ಯಾಭಿವ್ಯಕ್ತಿಯಲ್ಲಿ ಅವರು ಯಾವುದೇ ಬಗೆಯ ಸಂಕೋಚಕ್ಕೆ ಎಡೆಗೊಟ್ಟಿಲ್ಲವಾದರೂ ತಮ್ಮ ಕಾವ್ಯದ ಬಗ್ಗೆ ತಾವೇ ಹೇಳಿಕೊಳ್ಳುವುದಕ್ಕೆ ಸಂತೋಷಪಟ್ಟಿರಬೇಕೆಂದು ತೋರುತ್ತದೆ. ಅದು ಅವರ ಸದ್ದುಗದ್ದಲವಿಲ್ಲದ, ಸಭ್ಯತೆಯ ಲಕ್ಷಣವೆಂದು ನಾನು ಭಾವಿಸಿದ್ದೇನೆ.

ತಮ್ಮ ಮೊದಲ ಕವನಸಂಗ್ರಹ 'ಪಲ್ಲವಿ'ಯಲ್ಲಿಯೇ ಸ್ವಂತಿಕೆಯನ್ನು ತೋರ್ಪಡಿಸಿದ ಅನುಭವನಿಷ್ಠವಾದ ಅವರ ಕಾವ್ಯರಚನೆ 'ವಿಷಕನ್ಯೆ'ಯೆಂಬ ಎರಡನೆಯ ಸಂಕಲನದಲ್ಲಿ, 'ಸತ್ಯ ಹೊಳೆದರೂ ಬುದ್ಧಿಯ ಕೈಗೆ ಭಾವ ದಕ್ಕುವದಿಲ್ಲ'ವೆಂಬ ಚೋದ್ಯವನ್ನು ಹೆಣ್ಣಿನ ಮೃದು ಹೃದಯದ ಆಶೆ-ನಿರಾಶೆಗಳಲ್ಲಿ ಮನಗಂಡು ಇಲ್ಲಿ ವಸ್ತು ವೈವಿಧ್ಯದೊಂದಿಗೆ ಇನ್ನಷ್ಟು ಚಿಂತನಪರವಾಗಿ, ಮನಸ್ಸನ್ನು ಕಲುಷಿತಗೊಳಿಸಿಕೊಳ್ಳದೆ, ಪರಿಶುದ್ಧವಾಗಿಟ್ಟುಕೊಳ್ಳುವ ಹವಣಿಕೆಯಲ್ಲಿ ಸೂಕ್ಷ್ಮವಾದ ಭಾವನೆಗಳಿಗೆ ಸಮರ್ಥವಾಗಿ ಅಭಿವ್ಯಕ್ತಿ ನೀಡುವ ಪ್ರಯತ್ನವಿದೆ. ಕವಿಯ 'ತೇದುಕೊಂಡರೂ ಗಂಧವಾಗದ ನೋವು' ಸಾರ್ವತ್ರಿಕ ಅನುಭವದ ಸೂಕ್ಷ್ಮವಾದ ತಂತಿಗಳನ್ನು ಮಿಡಿದು 'ಮೌನಧ್ಯಾನದ ರೋಮಾಂಚನ'ವನ್ನು ತಂದುಕೊಡಬಲ್ಲುದೆಂಬುದಕ್ಕೂ ಇದರಲ್ಲಿ ಸಾಕಷ್ಟು ನಿದರ್ಶನಗಳಿವೆ.

ಕವಿತೆಯ ಆಕೃತಿ ಚಿಕ್ಕದಾದರೂ ಪದಪ್ರಯೋಗ ಸಾಮರ್ಥ್ಯದೊಂದಿಗೆ ಅನುಭವ ಹರಳುಗೊಂಡು, ತುಂಬಲಾಗದ ಶೂನ್ಯವನ್ನು ತುಂಬುವ ಇಲ್ಲಿಯ ಕ್ರಿಯೆ ತನ್ನ ಸರಳತೆಯಲ್ಲಿಯೇ ಸೋಜಿಗವನ್ನುಂಟುಮಾಡುತ್ತದೆ. ಕಾಣಲು ಹಗುರವಾದ ಭಾವವನ್ನೆತ್ತಿಕೊಂಡು ಗಂಭೀರವಾದ ಶೋಧನೆಯಲ್ಲಿ ತೊಡಗಿಸಿ ಕೊನೆಮುಟ್ಟಿಸುವುದು ಇಲ್ಲಿನ ಬಹುಮಟ್ಟಿನ ಕವಿತೆಗಳ ವಿಶೇಷ ಗುಣವೆನ್ನಬಹುದು. ಒಂದೆರಡು ಉದಾಹರಣೆಗಳನ್ನು ಇಲ್ಲಿ ನೋಡಬಹುದು :

ಎಲ್ಲಿದೆ ಸತ್ಯ ? ಕತ್ತಲಲ್ಲೊ, ಬೆಳಕಲ್ಲೊ ?
ದೃಷ್ಟಿಯಲ್ಲೊ, ದೀಪದಲ್ಲೊ ? (ಸತ್ಯ)

* * * *

ಜ್ವರ ಬಿಟ್ಟ ಮೈಮನ ಬಲು ಸೂಕ್ಷ್ಮವಲ್ಲವೆ ?
ಅಂಥ ಸ್ಥಿತಿಯಲ್ಲಿ ನಾನು ಮತ್ತು ನನ್ನ ದೇಶ. (ಜ್ವರ)

* * * *

ಹಸಿದ ಹಸು ಹಸಿರ ನುರಿಸಿ
ದಕ್ಕಿಸಿಕೊಂಡು ಹಾಲು ಹನಿಸುವಾಗ
ವಾಗರ್ಥಗಳ ನಡುವೆ ಗೆರೆಯಿದೆಯೆ ? (ವಾಗರ್ಥ)

ಪ್ರಚಲಿತ ಘಟನೆ, ವಿದ್ಯಮಾನಗಳನ್ನು ಕಾವ್ಯಾನುಭವವನ್ನಾಗಿ ಪರಿವರ್ತಿಸಿ, ಅವುಗಳ ಕಾವ್ಯಾರ್ಥವನ್ನು ಹೊಳೆಯಿಸುವಲ್ಲಿ ಹೆಚ್ಚಿನ ಕಾಳಜಿ ಕಂಡುಬರುತ್ತಿದೆ. ವಾಚ್ಯತೆಯನ್ನುಳಿದು ಸೂಚ್ಯತೆಗೆ ಹಾಯುವ, ಬೇರೊಂದು ಪರಿಭಾವನೆಗೊಯ್ಯುವ ಇವುಗಳ ರೀತಿ ಮೆಚ್ಚುವಂಥದು. 'ಜ್ವರ', 'ಬೆನಜೀರ್ ಮತ್ತು ನಿದ್ದೆ', 'ನಿಮಗೆ ಗೊತ್ತೆ ?', 'ಹೀಗೊಂದು ಭಾಷೆ', 'ಸ್ವಾತಂತ್ರ್ಯೋತ್ಸವ-೧೯೮೬' ಮೊದಲಾದವು ಈ ದಿಸೆಯಲ್ಲಿ ಗಮನರ್ಹವಾದವು.

ಈ ಕೆಲವು ಸಾಲುಗಳು ಅವುಗಳನ್ನು ಇಡಿಯಾಗಿ ಓದಲು ಪ್ರೇರೇಪಿಸಬಹುದು.

ಕುಂಡದಲ್ಲಿ ಕ್ಯಾಕ್ಟಸ್ ಬೆಳೆಸಿ
ಗುಲಾಬಿ ಮುಡಿಯುವ
ನೀರೆಯರೇ
ಚಂದ್ರಗುತ್ತಿಯ ಬೆತ್ತಲೆ ಸೇವೆಯ ಬಗ್ಗೆ ನಿಮಗೆ ಗೊತ್ತಿದೆಯೆ ?
(ನಿಮಗೆ ಗೊತ್ತೆ ?)

* * * *

ಪ್ರೀತಿಗೆ ಹೇಗೆ
ಭಾಷೆಯಿಲ್ಲವೊ ದ್ವೇಷಕ್ಕೂ ಹಾಗೆ
ಎಂದಿರಾ ?
ಪ್ರೀತಿಗೆ ಮೌನವೇ ಭಾಷೆ
ದ್ವೇಷಕ್ಕೆ ಹಿಂಸೆಯೆ ? (ಹೀಗೊಂದು ಭಾಷೆ)

* * * *

ಹಿಡಿದ ಕಾಯಿಪಲ್ಲೆ ಹಾವಾಗುವ ಭಯ !
'ಹೋಗುತ್ತೇನೆ'ನ್ನುವ ವಾಚ್ಯದ ಧ್ವನಿಯ ಬಗ್ಗೆ
ಭಯ (ಸ್ವಾತಂತ್ರ್ಯೋತ್ಸವ-೧೯೮೬)

ಹೆಣ್ಣು ಹೃದಯದ ನೋವು-ನೀರಾಶೆಗಳನ್ನು ಅಭಿವ್ಯಕ್ತಿಗೊಳಿಸುವುವಾಗಲೂ ಉದ್ವೇಗರಹಿತವಾದ ಭಾವತೀವ್ರತೆ ಹಾಗೂ ಬುದ್ಧಿಯ ಬೆಳಕಿನಲ್ಲಿ ಅದನ್ನು ಪ್ರತಿಫಲಿಸಿ ತೋರಿಸುವ ಸಂಯಮದ ಕೌಶಲ ಇವರಿಗೆ ಸಾಧಿಸಿದೆ. 'ಸುಮ್ಮನೇಕೆ ?', 'ಚಲಿತ ಚಿತ್ತ' (ಇದರಲ್ಲಿ ಅನುಭಾವದ ಎಳೆಯೂ ಇದೆ.) 'ಹಳೆಯ ನೋವೇ' ಈ ಕವಿತೆಗಳನ್ನು ಈ ದೃಷ್ಟಿಯಿಂದ ಪರಿಭಾವಿಸಬಹುದು:

ನನ್ನೆದೆಯ ಕಪ್ಪೆ ಚಿಪ್ಪಲ್ಲಿ ಹದವಾಗಿ ಕೂತ ಹನಿಯೇ
ಕಸುಗಾಯ ಮಾಗಿಸಿದ ಚೋದ್ಯವೇ
ಪ್ರಶ್ನಿಸಲಿ ಹೇಗೆ ನಿನ್ನಿರವ ?
..................................
..................................
ಸಾಕದಿರಲಿ ಹೇಗೆ ನೀನೇ ಹಾಕಿದ ಹೊಸ ಮರಿಯ ?
(ಹೊಸ ನೋವೇ)

ಕೆಲವು ಕವಿತೆಗಳ ಒಡಲಲ್ಲಿಯೇ ಅವುಗಳ ಹಾಡು-ಪಾಡು ಬೆರೆತುಕೊಂಡಿರುವುದರಿಂದ, ಅಲ್ಲಿಯ ಶಬ್ದ ನಾದ ಗೀತ ಮಾಧುರ್ಯವನ್ನು ಪಡೆದಿವೆ. 'ನಡೆದು ಹೋದರು', 'ಮಾಜೀ ರಾಜಕುಮಾರನ ವಿಲಾಪ', 'ಯಾರಿಗ್ಹೇಳಲಿ ?', 'ಅಲ್ಲಮನ ವಿರಹ', 'ಬುದ್ಧಿ ಭಾವಗಳ ಸಂವಾದ', 'ವಿಪ್ರಲಂಬ', 'ಇಲ್ಲಿಯ ತನಕ', 'ಬೇಡ' ಇದಕ್ಕೆ ತಕ್ಕ ಉದಾಹರಣೆಯಾಗಿವೆ. 'ದೊರೆಗೊಂದು ಗೀತೆ'ಯ ಛಂದ ಭಾಮಿನೀಷಟ್ಪದಿಯೆಂದು ಮೇಲು ನೋಟಕ್ಕೆ ಹೊಳೆಯದಂತೆ, ನೂತನ ಭಾವರೂಪಕ್ಕೆ ಇಂಬುಗೊಟ್ಟಿದೆ. 'ಕವಿತೆ ಬರೆದ ಗಳಿಗೆ' ತುಂಬಿಯೂ ತುಳುಕದಂತೆ ಅದನ್ನು ಚಿರವಾಗಿ ಶಬ್ದದಲ್ಲಿ ಹಿಡಿದುಕೊಂಡಿದೆ.

ಆದರ್ಶದ ಭರವಸೆ ತನ್ನ ಮೌಲ್ಯವನ್ನು ಕಳೆದುಕೊಂಡ ಸ್ಥಿತಿ ಹಾಗೂ ಸಂದರ್ಭ 'ಅಶ್ವಮೇಧದ ಕುದುರೆ'ಯ ಪ್ರತಿಮೆಯಲ್ಲಿ ಪರಿಣಾಮಕಾರಿಯಾಗಿ ಮೂಡಿದೆ.

'ದುರ್ದೆಸೆ', 'ಚೌಡಿಕೆ ಪದ', 'ಬೇಂದ್ರೆ ಅವರನ್ನು ಕುರಿತು', 'ಸತ್ಯ ನಾಶದ ಕಾಲ' ಮೊದಲಾದವು ಜನಪದ ಗೀತಗಳ ನಾದ, ಲಯ, ಗತ್ತುಗಳನ್ನು ಯಶಸ್ವಿಯಾಗಿ ಮೈಗೂಡಿಸಿಕೊಂಡು ಆಕರ್ಷಕವಾಗಿವೆ. ಕವಿಯ ಜಾನಪದ ಒಲವು ಹಾಗೂ ಅಭ್ಯಾಸ ಒಟ್ಟಾರೆಯಾಗಿಯೂ ಈ ಸಂಗ್ರಹದ ಕವಿತೆಗಳ ಸತ್ವಕ್ಕೆ ತನ್ನ ಕಾಣಿಕೆ ಸಲ್ಲಿಸಿದೆ.

ಕನ್ನಡ ಕಾವ್ಯಪರಂಪರೆಯ ಪ್ರಜ್ಞೆ ಇಲ್ಲಿಯ ಕವಿತೆಗಳಿಗೆ ಗಟ್ಟಿತನವನ್ನೂ ಆತ್ಮೀಯತೆಯನ್ನೂ, ತಂದುಕೊಟ್ಟಿದೆ. ಗಡಿಬಿಡಿ, ಗೊಂದಲಗಳ ಇಂದಿನ ಸಂದರ್ಭದಲ್ಲಿ, ಕಮಲ ಹೆಮ್ಮಿಗೆಯವರ

ಈ ಸಾಧನೆ ಗಮನಾರ್ಹವೆಂದು ನಾನು ಭಾವಿಸಿದ್ದೇನೆ. ಈ ಕವಿತೆಗಳನ್ನೋದುವಲ್ಲಿ, ನಾನು ಪಡೆದ ಸಂತೋಷ ಇನ್ನೂ ಹಲವರದಾಗಲಿ ಎಂದು ಹಾರೈಸಿ ಅವರನ್ನು ಅಭಿನಂದಿಸುತ್ತೇನೆ.

(೧೯೮೬)

೩೭

# ಮಂದಾರ ಕಾವ್ಯ

ಭಾರತೀಯ ಸ್ಟೇಟ್ ಬ್ಯಾಂಕ್ ಬೆಂಗಳೂರು ನಗರ ಶಾಖೆಯ ಕನ್ನಡ ಸಂಘ ಕೈಕೊಂಡಿರುವ ಕನ್ನಡದ ಕೈಂಕರ್ಯ ಆ ವೃತ್ತಿಯ ವಲಯುವನ್ನು ಮೀರಿ ತನ್ನ ಚಟುವಟಿಕೆಗಳನ್ನು ವಿಸ್ತರಿಸಿಕೊಳ್ಳುತ್ತಿರುವುದು ಅಭಿಮಾನದ ಹಾಗೂ ಸಂತೋಷದ ಸಂಗತಿಯಾಗಿದೆ. ಅದರ ಶೃಂಗಸಂಸ್ಥೆಯಾದ ಸಮನ್ವಯ ಸಮಿತಿ ಅಚ್ಚುಕಟ್ಟಾಗಿ ಪ್ರಕಟಿಸುತ್ತಿರುವ 'ಬ್ಯಾಂಕಿಂಗ್ ಪ್ರಪಂಚ'ದ ಉಪಯುಕ್ತತೆಯನ್ನು ಇಲ್ಲಿ ವಿವರಿಸುವ ಅಗತ್ಯವಿಲ್ಲ.

ಸಮನ್ವಯ ಸಮಿತಿಯು ಕಳೆದ ಅಕ್ಟೋಬರ್‌ನಲ್ಲಿ ಹುಬ್ಬಳ್ಳಿಯಲ್ಲಿ ಬ್ಯಾಂಕಿಂಗ್ ಕಮ್ಮಟವನ್ನು ಏರ್ಪಡಿಸಿದಾಗ ಪ್ರಾ. ಎಚ್ಚೆಸ್ಕೆಯವರ ಮಾರ್ಗದರ್ಶನದಲ್ಲಿ ಆ ಸದಸ್ಯರೆಲ್ಲರ ಕಳಕಳಿಯ ಕಾರ್ಯನಿರ್ವಹಣೆಯನ್ನು ಪ್ರತ್ಯಕ್ಷ ಕಂಡು ಅಚ್ಚರಿಪಟ್ಟಿದ್ದೇನೆ. ಕನ್ನಡವನ್ನು ವ್ಯವಹಾರದ ಎಲ್ಲ ಕ್ಷೇತ್ರಗಳಲ್ಲಿ ಆಡಳಿತ ಭಾಷೆಯಾಗಿ ಪರಿಣಾಮಕಾರಿಯಾಗಿ ರೂಢಿಸಬೇಕಾದರೆ ಈ ಬಗೆಯ ಆತ್ಮೀಯ ತೊಡಗಿಸಿಕೊಳ್ಳುವಿಕೆ ಅತ್ಯಗತ್ಯ. ಸಮನ್ವಯ ಸಮತಿಯ ಕಾರ್ಯ ಈ ದಿಸೆಯಲ್ಲಿ ಮಾದರಿಯಾಗಿದೆಯೆಂದರೆ ಅತಿಶಯೋಕ್ತಿಯಾಗಲಾರದು.

ಕನ್ನಡ ಸಂಘವು ತನ್ನ ವಾರ್ಷಿಕ ಸಾಹಿತ್ಯ ಸಂಚಿಕೆಯಾದ 'ಮಂದಾರ'ದ ಕಳೆದ ಎಂಟು ವರ್ಷದ ಸಂಚಿಕೆಗಳಿಂದ ಆಯ್ದ ಕವನಗಳನ್ನು 'ಮಂದಾರ ಕಾವ್ಯ' ಎಂಬ ಸಂಕಲನ ರೂಪದಲ್ಲಿ ಇದೀಗ ಹೊರತರುತ್ತಿರುವುದು ಅದಕ್ಕೊಂದು ತುರಾಯಿಯಾಗಿ ಕಂಗೊಳಿಸುವುದರಲ್ಲಿ ಸಂದೇಹವಿಲ್ಲ. ಅದರ ಸಂಪಾದಕರು ಈ ಸಂಕಲನಕ್ಕೆ ನನ್ನ ಮುನ್ನುಡಿಯನ್ನು ಅಪೇಕ್ಷಿಸಿದ್ದಾರೆ. ಅವರ ವಿಶ್ವಾಸಕ್ಕೆ ಕೃತಜ್ಞತೆ ಸಲ್ಲಿಸಿ ಅತ್ಯಂತ ಸಂತೋಷದಿಂದ ಈ ನಾಲ್ಕು ಮಾತು ಬರೆಯುತ್ತಿದ್ದೇನೆ.

'ಬ್ಯಾಂಕಿಂಗ್ ಕ್ಷೇತ್ರದ ಉದ್ಯೋಗಿಗಳಾಗಿಯೂ ಕಲೆಯ ಅತ್ಯುನ್ನತ ಅಭಿವ್ಯಕ್ತಿಯಾದ ಕಾವ್ಯದಲ್ಲಿ ಆಸಕ್ತಿ ಹೊಂದಿರುವವರ ಮೊದಲ ಹೆಜ್ಜೆಗಳಿವು' ಎಂದು ಸಂಪಾದಕರು ತಮ್ಮ ಪತ್ರದಲ್ಲಿ ನಮ್ರತೆಯಿಂದ ಹೇಳಿಕೊಂಡಿದ್ದಾರೆ. ವೈವಿಧ್ಯಪೂರ್ಣವಾದ ಇಲ್ಲಿಯ ೨೦ ಕವಿಗಳ (ಐವರು ಕವಯಿತ್ರಿಯರನ್ನೊಳಗೊಂಡು) ೪೩ ಕವಿತೆಗಳನ್ನು ಅವಲೋಕಿಸಿದಾಗ ಇವು ದಟ್ಟಡಿಗಳಾಗಿರದೆ ಜೋಕೆ-ತೂಕದಿಂದ ಇಟ್ಟ ದೃಢವಾದ ಹೆಜ್ಜೆಗಳೆಂಬುದು ಓದುಗರ ಗಮನಕ್ಕೆ ಬರದಿರಲಾರದು. ಅದಕ್ಕೆ ಮುಖ್ಯಕಾರಣ ಒಂದೆರಡು ಪದ್ಯಗಳನ್ನು ಬರೆದು ತಾನು ಕವಿಯೆನಿಸಿಕೊಳ್ಳಬೇಕೆಂಬ 'ಹುಸಿ' ಹಂಬಲದ ರಚನೆಗಳಲ್ಲ ಇವು. ಕಾವ್ಯದ ಬಗೆಗಿರುವ ನಿಜವಾದ ಆಸಕ್ತಿ ಹಾಗೂ ಆ

ಕಲೆಯನ್ನು ಕರಗತಗೊಳಿಸಿಕೊಳ್ಳಲು ನಡೆಸಿದ ಪ್ರಾಮಾಣಿಕ ಪ್ರಯತ್ನ ಇಲ್ಲಿ ಒಡೆದು ಕಾಣುತ್ತದೆ. ಭಾಷಾಭಿವ್ಯಕ್ತಿಗೆ ತಕ್ಕ ಭಾಷೆಯನ್ನು ಬಳಸುವಲ್ಲಿ ಸಾಕಷ್ಟು ಸಂಯಮ ಹಾಗೂ ಪರಿಶ್ರಮ ಇವುಗಳ ಹಿಂದಿದೆ. ಪ್ರಚಲಿತ ಕನ್ನಡ ಕಾವ್ಯದ ಓಘವನ್ನೂ, ಅದರ ಧಾಟಿ, ಧೋರಣೆಯನ್ನೂ ಬಲ್ಲವರಾಗಿಯೂ ಅನುಕರಣೆಯಾಗದಂತೆ ಎಚ್ಚರವಹಿಸಿದ್ದಾರೆ. ಹಾಗೆಂದು ಇಲ್ಲಿರುವ ಪದ್ಯಗಳೆಲ್ಲವೂ ಅತ್ಯುತ್ತಮ ರಚನೆಗಳೆಂದು ನಾನು ಹೇಳುತ್ತಿಲ್ಲ. ಬಹುಶಃ ಅದನ್ನು ಬರೆದ ಕವಿಗಳಿಗೂ ಆ ಭಾವನೆ ಇರಲಾರದು. ಆದರೆ ಈ ಕವಿತೆಗಳು ಸಾಮಾನ್ಯವಾಗಿ ತಮ್ಮ ಒಂದಿಲ್ಲ ಒಂದು ಗುಣದಿಂದ ಓದುಗರ ಗಮನವನ್ನು ಸೆಳೆದುಕೊಳ್ಳದೆ ಇರಲಾರವು.

ಬ್ಯಾಂಕಿಂಗ್ ಕ್ಷೇತ್ರದ ಉದ್ಯೋಗಿಗಳಾಗಿ ಇವರು ಕಾವ್ಯದ ಬಗ್ಗೆ ಇಟ್ಟುಕೊಂಡಿರುವ ಆಸಕ್ತಿ ಶ್ರದ್ಧೆ ಅನುಪಮವಾದದ್ದು. ಇವರ ಮುಂದಿನ ಕಾವ್ಯ ಯತ್ನಗಳು ಇದಕ್ಕೂ ಹೆಚ್ಚು ಸಫಲಗೊಂಡು ಮಂದಾರ ಪುಷ್ಪ ಮರ್ತ್ಯಲೋಕದಲ್ಲಿಯೂ ಅರಳಿ ಮಗಮಗಿಸಬಲ್ಲುದೆಂಬುದಕ್ಕೆ ನಿದರ್ಶನವಾಗಲಿ ಎಂದು ಹಾರೈಸುತ್ತೇನೆ.

(೧೯೮೬)

## ೩೮

## ನನ್ನ ಸುತ್ತ

ಡಾ. ದೇವೇಂದ್ರಕುಮಾರ ಹಕಾರಿಯವರು ತಮ್ಮ ಪ್ರಸ್ತುತ ಕವನ ಸಂಕಲನಕ್ಕೆ ನನ್ನ ಮುನ್ನುಡಿಯನ್ನು ಅಪೇಕ್ಷಿಸಿದ್ದಾರೆ. ಇದು ಅವರ ನಾಲ್ಕನೆಯ ಕವನ ಸಂಗ್ರಹವಾದರೂ, ಮೊದಲ ಮೂರಕ್ಕೂ ಮುನ್ನುಡಿಯಿಲ್ಲದಿರುವುದೂ ಒಂದು ಕಾರಣವಾಗಿ ನಾನು ನಾಲ್ಕು ಮಾತು ಬರೆಯಲು ಒಪ್ಪಿಕೊಳ್ಳಬೇಕಾಯಿತು. ಅಲ್ಲದೆ, ತಮ್ಮ ಕಾವ್ಯ ಜೀವನದ ಪ್ರಾರಂಭದಿಂದಲೂ ಅವರು ನನ್ನ ಬಗ್ಗೆ ಇಟ್ಟುಕೊಂಡಿರುವ ಪ್ರೀತಿ ವಿಶ್ವಾಸ ಇನ್ನೂ ಹೆಚ್ಚಿನದೆಂದು ಹೇಳಬೇಕು.

ಉಸ್ಮಾನಿಯಾ ವಿಶ್ವವಿದ್ಯಾಲಯದ ವಿದ್ಯಾರ್ಥಿಯಾಗಿದ್ದಾಗಿನಿಂದಲೂ ಹಕಾರಿಯವರು ತಮ್ಮ ಗೆಳೆಯರ ಬಳಗದೊಂದಿಗೆ ಹೈದರಾಬಾದ ಕರ್ನಾಟಕದ ಕನ್ನಡ ಚಟುವಟಿಕೆಗಳಲ್ಲಿ ಪಾಲುಗೊಂಡದ್ದಲ್ಲದೆ ಅಧ್ಯಾಪಕ ವೃತ್ತಿಯನ್ನೂ ಅಲ್ಲಿಯೇ ಪ್ರಾರಂಭಿಸಿದರು. ಹಿಂದಿ, ಉರ್ದು ಭಾಷೆ-ಸಾಹಿತ್ಯಗಳ ಪರಿಚಯಕ್ಕೂ ಮನಸ್ಸನ್ನು ತೆರೆದುಕೊಂಡಿದ್ದಲ್ಲದೆ ಕಥೆ, ಕವಿತೆಗಳನ್ನೂ ಬರೆಯಲು ಆಗಲೇ ಪ್ರಾರಂಭಿಸಿದ್ದರು. ಇದು ಮೂರು ದಶಕಕ್ಕೂ ಹಿಂದಿನ ಮಾತು. ಅತ್ತ ಸೊಲ್ಲಾಪುರದ 'ಕನ್ನಡ ಕೋಟೆ' ಇವರ ಕಾವ್ಯಪ್ರಕಾಶನಕ್ಕೆ ಇಂಬುಗೊಟ್ಟಂತೆಯೇ ಇತ್ತ ಧಾರವಾಡದ ಆಕರ್ಷಣೆಯೂ ಅವರಿಗೆ ಬಲವಾಗಿತ್ತು. ಧಾರವಾಡಕ್ಕೆ ಬಂದು ನೆಲಸಿದ ಮೇಲೆ ಇವರ ಬರವಣಿಗೆ ಗದ್ಯದಲ್ಲಿಯೂ ಪದ್ಯದಲ್ಲಿಯೂ ಒಂದು ನೆಲೆಯನ್ನೂ ಬೆಲೆಯನ್ನೂ ಕಂಡುಕೊಂಡಿತು. ಕಥೆ, ಕಾದಂಬರಿ, ನಾಟಕ ಪ್ರಕಾರಗಳಲ್ಲಿಯೂ ತಮ್ಮ ಪ್ರತಿಭೆಯನ್ನು ದುಡಿಸಿಕೊಳ್ಳಲು ಹೆಚ್ಚಿನ ಅವಕಾಶ ಒದಗಿತು. ಮೊದಲಿನಿಂದಲೂ ಮೈಗೂಡಿಸಿಕೊಂಡು ಬಂದಿದ್ದ ಜಾನಪದ ಆಸಕ್ತಿ ಆ ವಿಷಯದಲ್ಲಿ ಅವರಿಗೆ ಡಾಕ್ಟರೇಟ್ ಪದವಿಯನ್ನೂ ತಂದುಕೊಟ್ಟಿತು. ವಿವಿಧ ಕಲೆಗಳಲ್ಲಿಯಂತೆಯೇ ಸಮೂಹ ಮಾಧ್ಯಮದಲ್ಲಿಯೂ ಈಚೆಗೆ ಅವರು ತಮ್ಮ ಆಸ್ಥೆಯನ್ನು ಕುದುರಿಸಿಕೊಂಡಿದ್ದಾರೆ. ಸ್ವಭಾವದಲ್ಲಿ ಕೆಲಮಟ್ಟಿಗೆ ಅವಸರದ ವ್ಯಕ್ತಿಯಂತೆ ಕಂಡುಬಂದರೂ ಬರವಣಿಗೆಯಲ್ಲಿ ಮಾತ್ರ ಅವರು ಸಂಯಮವನ್ನೂ ಚಿತ್ತಸ್ಥಿರತೆಯನ್ನೂ ಕಾಪಾಡಿಕೊಂಡಿರುವುದು ವೈಯಕ್ತಿಕವಾಗಿ ನನಗೆ ಹೆಚ್ಚು ಸಂತೋಷವನ್ನುಂಟು ಮಾಡಿದೆ.

೧೯೫೮ರಲ್ಲಿ 'ಚಿನ್ಮಯಿ' ಪ್ರಕಟವಾದಂದಿನಿಂದಲೂ ತಾವು ಮೂಲತಃ ಕವಿ ಎಂಬುದನ್ನು ಶ್ರೀ ಹಕಾರಿ ಸಾದರಪಡಿಸುತ್ತಲೇ ಬಂದಿದ್ದಾರೆ. 'ಪ್ರಾಣವೊಂದು ವೀಣೆಯಾದರೆ ಭಾವಗಳು ಅದರ ತಂತಿ, ಬದುಕಿನ ಸಾವಿರ ಬೆರಳು ಈ ಭಾವತಂತಿಗಳನ್ನು ಮೀಟುತ್ತವೆ' ಎಂಬ ತಮ್ಮ

ಆಗಿನ ಭಾವನೆಗನುಗುಣವಾಗಿ ಅಲ್ಲಿನ ಕವನಗಳು ಸಾಂಪ್ರದಾಯಿಕವಾಗಿ ಮೂಡಿಬಂದಿವೆ ಯಾದರೂ ಕೊನೆಯ ಎರಡು ಕವನಗಳು ಹೊಸ ಗತಿಗೆ ಹೊರಳುವ ಸೂಚನೆಯಿತ್ತಿದ್ದುವು :

ಮೂರಾಗ ಬಯಸುವೆನು, ಮುಕ್ಕಾಗ ಬಯಸುವೆನು
ಸಿಕ್ಕು ನಿನ್ನಯ ಪಾದ ತುಳಿತದಲ್ಲಿ;
ನೂರಾಗ ಬಯಸುವೆನು, ನುಗ್ಗಾಗ ಬಯಸುವೆನು
ಸಿಕ್ಕು ನಿನ್ನಯ ಕೊನೆಯ ಕುಣಿತದಲ್ಲಿ,

(ಬೇಡ ನಿನ್ನಯ ಕರುಣೆ)

* * * *

ಏಳು ಎಚ್ಚರಗೊಳ್ಳು ಒಳಗಿರುವ ತಿಳಿವೆ
ಪ್ರಾಣದಲಿ ಮೈಮುರಿವ ಅನುಭವದ ಸುಳಿವೆ !

(ಪ್ರಾಣದಲಿ ಮೈಮುರಿದು)

ಹತ್ತು ವರ್ಷಗಳ ನಂತರ ಬಂದ ಎರಡನೆಯ ಸಂಗ್ರಹ 'ಆಜೆ-ಈಚೆ'ಯಲ್ಲಿ 'ಮಧುರ ರಾಗಿಣಿ', 'ರಸತರಂಗಿಣಿ'ಯಂಥ ಹಿಂದಿನ ಪಳಪಳಿಕೆಯ ಪದಪುಂಜಗಳು ಅಲ್ಲಲ್ಲಿ ಉಳಿದುಕೊಂಡಿದ್ದರೂ ಭಾಷೆಯಲ್ಲಿ ಹೆಚ್ಚಿನ ಸ್ವಾತಂತ್ರ್ಯವಹಿಸಿ, ಆದಷ್ಟು ಮುಕ್ತಛಂದದಲ್ಲಿ ಭಾವ ಅಭಿವ್ಯಕ್ತಗೊಂಡಿರುವುದನ್ನು ಕಾಣುತ್ತೇವೆ. 'ಈ ಹಂತದಲ್ಲಿ ಕೇವಲ ಶಬ್ದಗಳ ಗಾಡಿ-ಮೋಡಿ ನಮ್ಮ ಗಂತವ್ಯವಾಗುವುದಿಲ್ಲ; ಅರ್ಥದ ನಾದ ನಮ್ಮ ಬುದ್ಧಿ ಮತ್ತು ಭಾವನೆಗಳನ್ನು ಸಂವೇದನೆಯ ಸ್ತರಕ್ಕೆ ಹೊಂದಿಸುತ್ತದೆ. ಆಗಂತೂ ಕಾವ್ಯ ಕ್ರಿಯೆ ನಮ್ಮ ವ್ಯಕ್ತಿತ್ವವನ್ನೇ ಅಲುಗಿಸುತ್ತದೆ'. ಕವಿ 'ಸಹೃದಯರೊಡನೆ' ಹೇಳಿಕೊಂಡ ಈ ಮಾತಿನಲ್ಲಿಯೂ ಅದು ವ್ಯಕ್ತವಾಗಿದೆ. ಕಾವ್ಯಕ್ರಿಯೆ ವ್ಯಕ್ತಿತ್ವವನ್ನು ಅಲುಗಿಸಿ ಬಿಡುವ ಈ ಅನುಭವ ಒಂದು ಮಹತ್ವದ ಬೆಳವಣಿಗೆಯನ್ನು ಇಲ್ಲಿ ಸೂಚಿಸುತ್ತದೆ. ಆದರೂ 'ಏಳು ಮೇಳ ಗೀತೆಗಳ'ಲ್ಲಿ ಪಡೆದಿರುವ ಯಶಸ್ಸು ಉಳಿದವುಗಳಲ್ಲಿ ಅಷ್ಟಾಗಿ ಕಾಣದಿರುವುದು ಅವರ ಕಾವ್ಯದ ಒಲವಿನ ದೃಷ್ಟಿಯಿಂದ ಕುತೂಹಲಕರವಾಗಿದೆ.

ಎಲ್ಲಾರೆ ಅಡಗಿರುವೆ ಗಂಗಾಮಾಯಿ
ಶಂಕರನ ಜಡೆಯಲ್ಲಿ ನೆಲಿಸೀದ ತಾಯಿ
ಬೆಟ್ಟಾ ಘಟ್ಟಾ ಹತ್ತೀ ಬಂದೆ
ಹಳ್ಳಾ ಕೊಳ್ಳಾ ಸುತ್ತೀ ಬಂದೆ
ಎಲ್ಲಾರೆ ಅಡಗಿರುವೆ....

'ಗಂಗಾಮಾಯಿ'ಯಲ್ಲಿ ವ್ಯಕ್ತಗೊಂಡ ಈ ಶೋಧನೆ ಕವಿ ತನ್ನ ಕಾವ್ಯದ ಮೂಲ ಸ್ರೋತಸ್ಸನ್ನು ಹುಡುಕುತ್ತಿರುವಂತೆಯೂ ತೋರುತ್ತದೆ. 'ಈ ಜೀವ ಹಾಡ್ಯಾವೊ' ಎಂಬ ಶರಣರ ಅನುಭಾವದ ಜಾಡನ್ನು ಹಿಡಿದ ಹಾಡಿನಲ್ಲಿ ಅದು ತನ್ನ ಸಾಫಲ್ಯವನ್ನು ಕಂಡುಕೊಂಡಂತಿದೆ.

'ಬಿಡುಗಡೆ' ಸಂಗ್ರಹದಲ್ಲಿ ಆಡುಮಾತಿನ ಲಯವನ್ನು ಹಿಡಿಯುವ ಮುಂದಣ ಹೆಜ್ಜೆ ಒಡೆದು ಕಾಣುತ್ತಿದೆ. ಮೊದಲ ಭಾಗದಲ್ಲಿ ಕವಿಯ ಆಶಯ ವಿವರಗಳಲ್ಲಿ ಹಂಚಿ ಹೋಗುತ್ತಿದೆಯೆನಿಸಿದರೂ ಎರಡನೆಯ ಭಾಗದ ಕವಿತೆಗಳಲ್ಲಿ ಅನುಭವ ಸಾಂದ್ರಗೊಂಡು ಸಾರವತ್ತಾಗಿ ನಿಲ್ಲುವ ಪ್ರಯತ್ನ ಗಮನಾರ್ಹವಾಗಿದೆ. 'ಕಾವ್ಯದ ಭಾಷೆ, ಶೈಲಿ, ವಸ್ತುಗಳನ್ನು ಕುರಿತು ಚಿಂತನೆ ಹೆಚ್ಚಿದಷ್ಟೂ ಸೃಷ್ಟಿಗೆ ಹೊಸ ಆಯಾಮಗಳು ಪ್ರಾಪ್ತವಾಗಬಹುದು' ಎಂಬ ಈ ಸಂಗ್ರಹದ 'ಅರಿಕೆ'ಯ ನುಡಿ ಪ್ರಸ್ತುತ ಸಂಗ್ರಹವಾದ 'ನನ್ನ ಸುತ್ತ'ಕ್ಕೆ ಹೆಚ್ಚು ಅನ್ವಯಿಸುವಂತಿದೆ. ಮೊದಲಿನಿಂದಲೂ ಇವರು ಕಾವ್ಯಕ್ಕೆ ಮೂಲ ಸ್ಫೂರ್ತಿಯಾಗಿರುವುದು ನಿಸರ್ಗವೇ.

ನನ್ನಲ್ಲಿ ಅಚ್ಚೊತ್ತಿನಿಂತ ಈ ಸೃಷ್ಟಿ
ಒಮ್ಮೆಲೆ ತೆರೆದಿಟ್ಟ ಮಂತ್ರವಾದಿಯ ಬುಟ್ಟಿ.

ನಂತರ ಹೆಣ್ಣು - ಗಂಡಿನ ಪ್ರೀತಿ - ಪ್ರೇಮ, ಉದಾತ್ತ ವ್ಯಕ್ತಿಗಳ ಬಗೆಗಿನ ಗೌರವ ಮುಖ್ಯವಾಗಿದೆ.

'ನನ್ನ ಸುತ್ತ'ದಲ್ಲಿ ಸಾಮಾಜಿಕ ಪ್ರಜ್ಞೆ ಎಚ್ಚರಗೊಂಡುದು ವಸ್ತುವಿನ ಆಯ್ಕೆಯಲ್ಲಿ, ನಿರ್ವಹಣೆಯಲ್ಲಿ ಒಡೆದು ಕಾಣುತ್ತದೆ. ಕಾಲ ಮತ್ತು ಮನುಷ್ಯನನ್ನು ಕುರಿತ ಚಿಂತನೆ, ಮನುಷ್ಯನ ಅಸಹಾಯಕ ಸ್ಥಿತಿಯ ಅರಿವು ಕಾವ್ಯ ಪ್ರೌಢವಾಗಿರುವುದರ ಸೂಚನೆಯಾಗಿದ್ದರೆ, ಕವಿಯ ತಾತ್ವಿಕ ಬೆಳವಣಿಗೆಯಲ್ಲಿ ಒಂದು ಪ್ರಮುಖ ಘಟ್ಟವಾಗಿಯೂ ಅದನ್ನು ಗುರುತಿಸಬಹುದು.

ಕಣ್ಣೆದುರೇ ಬೆಳಗಿನಿಂದ ಸಂಜೆ ಜಾರಿ
ಹೀಗೆಯೇ, ಅಷ್ಟಷ್ಟೆ ಕತ್ತರಿಸಿಕೊಳ್ಳುತ್ತಿದೆ.
ನೋಡುತ್ತೇನೆ ನಿಟ್ಟುಸಿರ ಚೆಲ್ಲಿ ಸುಮ್ಮನೆ
ಅಸಹಾಯಕ, ವ್ಯಥಿತ, ವ್ಯಗ್ರ.

* * * *

ಸುಮ್ಮನೇ ಕೂತರೂ ನನ್ನೊಳಗೆ ಮಿಸುಕಾಡಿ
ಮಿಡುಕುತಿದೆ, ಮೊರೆಯುತ್ತದೆ ಒಂಟಿ ದ್ವೀಪ

* * * *

ಎಲ್ಲೊ ಬಂಗಾರ ಬೆಳಕಿನ ತತ್ತಿಗೆ ನಿತ್ಯ ಕಾವು

(ನನ್ನ ಸುತ್ತ)

* * * *

ಕಾಲ ವಿಸ್ಮೃತಿ ಬೀಗ ತೆರೆದು ಎಚ್ಚರದಲ್ಲಿ ಕಣ್ದೆರೆದ ನಾನು
ಅದರ ಬೀಗದ ಕೈ ಕಳೆದುಕೊಂಡಿರುವೆ....
ಅಲೆಯುತ್ತಲೇ ಇರುವೆ

(ಅಲೆದಾಟ)

ಇಲ್ಲಿಯ ಜಿಜ್ಞಾಸೆ ತಾತ್ವಿಕತೆ ಹಾಗೂ ಸೃಜನಶೀಲತೆಯ ಅರ್ಥಪೂರ್ಣ ಸಾಮರಸ್ಯವನ್ನು ಇನ್ನೂ ಸಾಧಿಸಬೇಕಾಗಿದೆಯಾದರೂ ಇಲ್ಲಿಯ ವಾಸ್ತವತೆ ಭಾವ ಗೀತಾತ್ಮಕವಾಗಿಯೇ ಮನಸ್ಸನ್ನು ಸೆಳೆಯುತ್ತದೆ.

ದಲಿತರ, ಶೋಷಿತರ ನೋವು ಇನ್ನುಳಿದ ಕವಿತೆಗಳ ವಸ್ತುವಾಗಿರುವುದು ಬೆಳವಣಿಗೆಯ ಇನ್ನೊಂದು ಹೆಜ್ಜೆಯೆನ್ನಬಹುದು.

ಬೆನ್ನು ಹತ್ತಿದ ಹೊಟ್ಟೆಯಲ್ಲಿ ಪುಟವಿಟ್ಟ
ಕಿಚ್ಚು ಸಿಡಿಯುತ್ತಿದೆ.
ಅನಾಥ ಮಗು, ಮುಖದಲ್ಲಿ ಪ್ರಶ್ನೆ, ಸುರುಸುರು ಬತ್ತಿ.

ಇದುವರೆಗೆ ಮೆಚ್ಚಿ, ಹುಚ್ಚಾಗಿ ಹತ್ತಿಕೊಂಡಿದ್ದ ಪ್ರಕೃತಿಯ ಬಗೆಗೂ ವಾಸ್ತವತೆಯ ಬಿಸಿ ತಾಗದೆಯಿಲ್ಲ. ಬರಗಾಲದ ಹಿನ್ನೆಲೆಯಲ್ಲಿ ಮಳೆಗರೆಯದ ಮೋಡ 'ಕಪ್ಪು ಗುದಾಮು' ಆಗಿ ಕಂಡಿರುವುದು ಇದಕ್ಕೊಂದು ಉತ್ತಮ ನಿದರ್ಶನ.

ಬೆಳ್ಳಗೆ ಕಪ್ಪಗೆ, ಸುಮ್ಮನೆ ಗಾಳಿ ಸೆಳೆದ ಕಡೆ ಎತ್ತಲೋ
ಮುಖ ಮಾಡಿ-ನನ್ನ ಎಡಬಲಕೆ ತೇಲಿ ಹೋಗುವ ಕಾರುಗಳಂತೆ
ತೇಲುತ್ತಲೇ ಹೋಗುತ್ತವೆ ಕಾರ್‌ಮೋಡ ಕೂಡ
..............................................
ಈ ಮೋಡಗಳೂ ಜಲದ ಕಪ್ಪು ಗುದಾಮುಗಳಾಗಿರುವ ಗುಮಾನಿ ನನಗೆ.

ಆದರೆ ನಿರಾಶೆಯ ಆಕ್ರಂದನ ಈ ಕವಿಯ ಜಾಯಮಾನಕ್ಕೆ ಒಗ್ಗುವುದಿಲ್ಲ. ಅಂತೆಯೇ

ನಾಳೆಗಳ ಬೆಳಗುಗಳ ಪೋಷಿಸುತ ಎದೆಯಲ್ಲಿ
ಶೋಷಣೆಗೆ ಮಣಿಯದೇ ಆಗಸಕೆ ತಲೆಯೆತ್ತಿ
ಬೆಳೆವ ಚೈತನ್ಯ (ಈ ಹಳ್ಳಿ ಹುಡುಗಿ)

ಎಂಬುದನ್ನು 'ನಾನಿಂದು ಕೂಗಿ ಹೇಳುತ್ತೇನೆ' ಎನ್ನುತ್ತಾರೆ. 'ಚಣಚಣಕು ಕವಿಗೆ ಹೊಸ ಹುಟ್ಟು' ಎಂಬ ಭರವಸೆ ಬೇರೆ ಸಂದರ್ಭಗಳಲ್ಲಿಯೂ ಮೂಡುತ್ತದೆ.

ಈ ಸಂಗ್ರಹದ ಎರಡನೆಯ ಭಾಗದಲ್ಲಿ ಹಾಡಿಗೆ ಸಲೀಸಾಗಿ ಒಗ್ಗುವ ಕೆಲವು ಪದ್ಯಗಳಿವೆ. ಆದರೆ ಅವುಗಳಲ್ಲಿ ತೀರ ಪ್ರತ್ಯೇಕವಾಗಿ ವಿಶಿಷ್ಟವಾಗಿ ನಿಲ್ಲುವ ಕವಿತೆ 'ಎಲ್ಲಿ ಹುಟ್ಟಿ ಎಲ್ಲಿ ಚಾಚ್ಯಾದೊ' ಎಂಬ ಗೀತ. ಕನ್ನಡದ ಅನುಭಾವ ಪರಂಪರೆಯ ಸಾರವನ್ನು ಹೊಸ ಬೆಡಗಿನಲ್ಲಿ ಹಿಡಿದುಕೊಡುವ ಜಾನಪದ ಗತ್ತಿಗೇ ಮತ್ತೇರಿಸುವ ಹಾಡು ಇದಾಗಿದೆ.

ಹೀಗೆ ಹಕಾರಿಯವರ ಕಾವ್ಯದ ಬೆಳವಣಿಗೆಯ ಹೊಸ ಹೆಜ್ಜೆಗಳನ್ನು 'ನನ್ನ ಸುತ್ತ' ಪಡಿಮೂಡಿಸಿದೆ. ಆಧುನಿಕ ಕನ್ನಡ ಕಾವ್ಯ ಕಾಲಕಾಲಕ್ಕೆ ತೋರಿಸುತ್ತ ಬಂದ ಹೊಸ ಒಲವುಗಳಿಗೂ ಇಲ್ಲಿ ತಕ್ಕ ಪ್ರತಿಕ್ರಿಯೆ ಇರುವುದನ್ನು ಗುರುತಿಸಬಹುದು. ತನ್ನನ್ನೂ ಪರೀಕ್ಷಿಸಿಕೊಂಡು ತನ್ನ

ಸುತ್ತುಮುತ್ತನ್ನು ವೀಕ್ಷಿಸಿದಾಗ 'ನನ್ನ ಸುತ್ತಿ'ನ ವರ್ತುಲ ವಿಸ್ತಾರವಾಗುತ್ತ 'ಕರಕಾದ ಕನಸುಗಳ ಬೂದಿಯೊಡಲಲ್ಲಿ ಮತ್ತೆ ಚಿಗುರು' ಒಡೆಯುವುದನ್ನು ಕಂಡ ಕವಿ ಅದು ಮರವಾಗಿ ಬೆಳೆಯುವುದನ್ನೂ ಚಿಂತಿಸಬಲ್ಲನೆಂಬ ನಿರೀಕ್ಷೆ ನನ್ನದಾಗಿದೆ.

(೧೯೮೭)

## ೩೯

## ಸೃಷ್ಟಿಯ ಸುಳಿ

ಕೆಲದಿನಗಳ ಹಿಂದೆ, ಧಾರವಾಡ ಹೆಚ್ಚುವರಿ ಪೋಲೀಸ್ ವರಿಷ್ಠಾಧಿಕಾರಿ ಶ್ರೀ ಎಂ.ಕೆ. ನಾಗರಾಜ ಅವರು ಮೊದಲ ಸಲ ನಮ್ಮ ಮನೆಗೆ ಬಂದಾಗ ನನಗೆ ಸ್ವಲ್ಪ ಅಚ್ಚರಿಯೆನಿಸಿತ್ತು. ಆದರೆ ಅವರು ಬಂದ ಕೆಲಸದ ಕಾರಣ ತಿಳಿದಾಗ ಅಚ್ಚರಿ ಆನಂದಕ್ಕೆಡೆಗೊಟ್ಟಿತು. ಹುಬ್ಬಳ್ಳಿಯಲ್ಲಿ 'ಹೂಬಳ್ಳಿ ಕವಿಬಳಗ'ವನ್ನು ಕಟ್ಟುವಲ್ಲಿ ಪ್ರಮುಖ ಪಾತ್ರವಹಿಸಿದ ಅವರು ಅದರ ಉದ್ಘಾಟನೆಗೆ ಏರ್ಪಾಡು ಮಾಡಿದ್ದರು. ಅಂದಿನ ಕಾರ್ಯಕ್ರಮದ ಅಚ್ಚುಕಟ್ಟು ಹಾಗೂ ಯಶಸ್ಸನ್ನು ಕಂಡು ನಾಗರಾಜರ ಬಗ್ಗೆ ಹೆಚ್ಚಿನ ವಿಶ್ವಾಸ ಮೂಡುವಂತಾಯಿತು. ಇಂಥ ವಿನಯ ಸಂಪನ್ನರಾದ ವ್ಯಕ್ತಿಗಳು ಪೋಲೀಸ್ ಇಲಾಖೆಯಲ್ಲಿರುವುದು ಒಂದು ಸುಯೋಗವೇ. ವಿದ್ಯಾರ್ಥಿದೆಸೆಯಿಂದಲೂ ಕಾವ್ಯದಲ್ಲಿ ತಮಗೆ ಆಸಕ್ತಿಯಿರುವುದನ್ನು ಅಂದು ಸೂಚ್ಯವಾಗಿ ತಿಳಿಸಿದ್ದರು. ಈಚೆಗೆ ತಮ್ಮ ಕವಿತೆಗಳ ಹಸ್ತಪ್ರತಿಯನ್ನು ಸ್ವಲ್ಪ ಸಂಕೋಚದಿಂದಲೇ ನನ್ನ ಕೈಯ್ಯಲ್ಲಿಟ್ಟು ಮುನ್ನುಡಿ ಬರೆಯಲು ಕೋರಿದರು. ಅತ್ಯಂತ ಸಂತೋಷದಿಂದ ಆ ಕೆಲಸವನ್ನು ಮಾಡುತ್ತಿದ್ದೇನೆ.

ಪ್ರಥಮ ಸಂಕಲನವನ್ನು ಹೊರತರುವಾಗ ಯಾರಿಗಾದರೂ ಅದರಲ್ಲೂ ಕವಿಯಾದವನಿಗೆ ಸ್ವಲ್ಪ ಹಿಂಜರಿಕೆ ಇದ್ದೇ ಇರುತ್ತದೆ. ಶ್ರೀ ನಾಗರಾಜರಂತಹ ಮುದುಡಿಕೊಳ್ಳುವ ಸ್ವಭಾವದವರಿಗೆ ಅದು ಇನ್ನೂ ಹೆಚ್ಚಿನ ಪ್ರಮಾಣದಲ್ಲಿರುತ್ತದೆ. ಈ ಸಂಕಲನದ ಪದ್ಯಗಳನ್ನು ನೋಡಿದಾಗ ಅವರು ನಿಸ್ಸಂಕೋಚವಾಗಿಯೇ ತಮ್ಮ ಭಾವನೆಗಳಿಗೆ ಅಭಿವ್ಯಕ್ತಿ ನೀಡಿರುವುದು ಕಂಡುಬರುತ್ತದೆ. ಆದುದರಿಂದ ಅವರು ಈ ದಿಸೆಯಲ್ಲಿ ಧೈರ್ಯವಾಗಿಯೇ ಮುಂದುವರೆಯಬಹುದು.

ಹೆಣ್ಣು-ಗಂಡಿನ ಪ್ರೇಮ, ಸಾಮಾಜಿಕ ಜೀವನದ ಲೋಪದೋಷಗಳು ಹಾಗೂ ಆ ಬಗೆಗಿನ ಚಿಂತನೆ ಇವರ ಕವನಗಳ ಪ್ರಧಾನ ವಸ್ತುವಾಗಿ ಗೋಚರಿಸುತ್ತಿವೆ. ನಿಸರ್ಗ ಪ್ರೇಮವೂ ಅದಕ್ಕೆ ಪೋಷಕವಾಗಿ ಬಂದಿದೆ. ಪ್ರಾರಂಭದ ಕವಿತೆ 'ಸಂಭ್ರಮ'ದಲ್ಲಿಯೇ ನವಪ್ರಾಯದ ಉತ್ಸಾಹ ಮೂಡಿದೆ :

> ಘಮ ಘಮವಿಸುತಿದೆ ಮಾವು
> ಚಿಗುರುತಿದೆ ಹೊಸ ಚೈತನ್ಯದ ಚಿಗುರು

'ನನ್ನವಳಿಗೊಂದು ಕವಿತೆ ', 'ಕಾಮದೋಕುಳಿ', 'ಸೆಳೆತಗಳು', 'ದಟ್ಟ ಬಯಕೆ' ಮೊದಲಾದವುಗಳಲ್ಲಿ ಪ್ರೇಮದ ರಭಸ ಹಾಗೂ ತೀವ್ರತೆ ತಾನೇ ತಾನಾಗಿ ವಿಜೃಂಭಿಸಿದೆ.

‘ಮುತ್ತು ಹನಿ’ಯಲ್ಲಿ ಗತಿಸಿದ ‘ನಲ್ಲೆಯ ನೆನಪು’, ಕಡಲಿನ ತರಗಳೊಡನೆ ಬಂದು ಹಾಯುವ ಚಿತ್ರ ಪರಿಣಾಮಕಾರಿಯಾಗಿದೆ. ಯಾವ್ಯಾವುದೊ ಕಾರಣಕ್ಕೆ ಮದುವೆಯಾದ ಹೆಣ್ಣು ‘ಸನಿಹ’ವಾಗುವುದು ಯಾವುದರಿಂದ ಎಂಬ ಪ್ರಶ್ನೆ ‘ಸಂಗಾತಿ’ಯಲ್ಲಿದೆ. ಹೆಣ್ಣಿನ ಮನಸ್ಸಿನ ಕಷ್ಟಸುಖಗಳನ್ನು ಅರಿತು, ದಿಟ್ಟತನಕ್ಕೆ ದಾರಿಮಾಡಿಕೊಡುವ ಹವಣಿಕೆ ‘ಪಿಡುಗು’, ‘ಮುಸುಕುಗಳು’, ‘ತುಲಾಭಾರ’ ಮೊದಲಾದ ಪದ್ಯಗಳಲ್ಲಿ ಕಂಡುಬರುತ್ತದೆ. ‘ವಧುಪರೀಕ್ಷೆ’ಯಲ್ಲಿ ಅದು ಇನ್ನೂ ಸ್ಫುಟವಾಗಿದೆ:

ನಿನ್ನನ್ನು ವರಿಸುವ ಮೊದಲು
ನಡೆದಿದ್ದವು
ವಧು(ಧೆ) ಪರೀಕ್ಷೆಗಳು.
ನೀನೆಷ್ಟನೆಯವನೋ
ಸ್ಪಷ್ಟ ನೆನಪಿಲ್ಲ.
ಈಗ ಹೇಳು ನಲ್ಲ
ನಿನಗಿಂತ ನಾನೇನು ಕಡಿಮೆ ?

‘ಸ್ತ್ರೀ ಮತ್ಸರ’ ಒಂದು ಸೊಗಸಾದ ಅನ್ಯೋಕ್ತಿಯಾಗಿದ್ದರೆ ‘ಸಿಂಡ್ರೆಲಾ’ ತನ್ನ ಪ್ರಾಮಾಣಿಕ ಅಭಿವ್ಯಕ್ತಿಯಿಂದ ಮನಸಳೆಯುತ್ತದೆ.

ಸಾಮಾಜಿಕ ಪ್ರಜ್ಞೆ ಈ ಕವನಗಳಲ್ಲಿ ಒಡೆದು ಕಾಣುವ ಇನ್ನೊಂದು ಗುಣ. ‘ಭರವಸೆಗಳು’, ಜಲಪಾತದಂತೆ ಧುಮುಕಿ, ತಿಪ್ಪೆಗುಂಡಿಗಳಲ್ಲಿ ನಿಂತು ಮಲೆಯುವ ವಿಫಲತೆಯ ಚಿತ್ರ ಮನೋಜ್ಞವಾಗಿದೆ. ‘ಜಾತಿಗಳು’ ವಾಚ್ಯವಾಗಿದ್ದರೂ ಕೊನೆಯಲ್ಲಿಯ ನುಡಿಚಿತ್ರ ಅರ್ಥಪೂರ್ಣವಾಗಿ ಮನಸ್ಸನ್ನು ಸೆರೆ ಹಿಡಿಯುತ್ತಿದೆ :

ವ್ಯೂಹವ ಸೃಷ್ಟಿಸಿ, ದಾರಿಯ ತಪ್ಪಿಸಿ
ಅಪ್ಪಲೆ - ತಿಪ್ಪಲೆ ಆಡಿಸಿ ನಲಿವರು.
ಗಿರಿಗಿರಿ ತಿರುಗುವ ಬುಗುರಿಯ ನೋಡಿ
ಕಾಣದೆ ಕೊರೆಯುವ ರಂಧ್ರದ ಮೋಡಿ.

‘ಗಗನಚುಂಬಿ’ ಗಂಗಾರಾಮ ಕಟ್ಟಡಗಳಂತಹ ದುರಂತವನ್ನು ನೆನೆಪಿಸುತ್ತದೆ. ‘ಮಡಿವಂತರು’ ಡಾಂಭಿಕತೆಯನ್ನು ವಿಡಂಬಿಸಿದರೆ, ‘ಗುಳುಂ’ ಪದ್ಯ ಭ್ರಷ್ಟಾಚಾರವನ್ನು ವ್ಯಂಗ್ಯವಾಗಿ ಚಿತ್ರಿಸುತ್ತದೆ:

ತಿನ್ನುವವರಿಗಿಂತ
ನುಂಗುವವರೇ ಹೆಚ್ಚು
ತಿನ್ನುವುದು ತಡವಾಗಿ
ನುಂಗುವುದೇ ಲೇಸೆಂದು.

'ಸುಖಿಗಳೆಲ್ಲ' ನಾನಾಬಗೆಯ ಸಂಕಷ್ಟಕ್ಕೊಳಗಾದವರನ್ನು ಉಲ್ಲೇಖಿಸುತ್ತದೆ. 'ಸೃಷ್ಟಿಯ ಸುಳಿ'ಯಲ್ಲಿ ದುರಂತದ ಛಾಯೆಯಿದೆ.

ಹನಿಗವನಗಳಲ್ಲಿ ಕೆಲವು ವಾಸ್ತವ ಚಿತ್ರಣದಿಂದ ಚೂಪಾಗಿವೆ, ಚುರುಕಾಗಿವೆ :

ಮದುವೆ
ತಾಳಿಯ ಸಂಕೇತದ
ಬೆತ್ತಲೆಯ ಅಪ್ಪುಗೆಗಳ
ಪರವಾನಿಗೆಯಲಿ
ಉನ್ಮತ್ತರಾಗಿ ಮೆರೆವ ಪರಿ.

'ಬೆಸುಗೆ', 'ಆಷಾಢ', 'ಹಂಬಲ', 'ಬಾಲ್ಯ ವಿವಾಹ' ಪರಿಣಾಮಕಾರಿಯಾಗಿವೆ. ಚಿಕ್ಕದರಲ್ಲಿಯೇ ಚೊಕ್ಕವಾಗಿ ಅರಳಿದ ಭಾವಗಳೂ ಇವೆ : 'ಸುಖಾಂತ'

ಪ್ರಿಯಾ, ನೀನು
ಪ್ರೀತಿಯಿಂದ ಚುಚ್ಚಿದ
ಸುಖದ ನೋವಲ್ಲಿ
ನರಳಿ
ಅರಳುತಿರುವೆ.

ಈ ಸಂಕಲನದ ಹೆಚ್ಚಿನ ಪದ್ಯಗಳು ಒಂದೇ ಉಸಿರಿನಲ್ಲಿ ಓದಬೇಕಾದ ಧಾಟಿಯವು. ಭಾಷೆ, ಲಯ, ಛಂದಗಳ ಹೆಚ್ಚಿನ ಪರಿಜ್ಞಾನದಿಂದ, ಪ್ರಯೋಗದಿಂದ ನಾಗರಾಜರ ಕಾವ್ಯರಚನೆ ಇನ್ನಿಷ್ಟು ಪುಷ್ಟಿಗೊಳ್ಳಬಲ್ಲದು. ಅವರ ಇನ್ನೂ ಒಳ್ಳೆಯ ಪ್ರಯತ್ನಗಳಿಗೆ ಈ ಸಂಗ್ರಹ ನಾಂದಿಯಾಗಲಿ ಎಂದು ಹೃತ್ಪೂರ್ವಕ ಹಾರೈಸುತ್ತೇನೆ.

(೧೯೮೮)

೪೦

# ಜೋಳ - ಮುತ್ತು

ಶ್ರೀ ಮಹಾಂತೇಶ ಕಣಗಲಿಯವರು ಹದಿಮೂರು ವರ್ಷಗಳ ಹಿಂದೆಯೇ ತಮ್ಮ ಪ್ರಥಮ ಕವನ ಸಂಕಲನ 'ಮಿನುಗು ತಾರೆ'ಯನ್ನು ಪ್ರಕಟಿಸಿದ್ದರು. ಇದೀಗ 'ಜೋಳ-ಮುತ್ತು' ಎಂಬ ಎರಡನೆಯ ಸಂಕಲನಕ್ಕೆ ನನ್ನ ಮುನ್ನುಡಿಯನ್ನು ಅಪೇಕ್ಷಿಸಿದ್ದಾರೆ. ನನ್ನ ಹಿರಿಯ ಸ್ನೇಹಿತರಾಗಿದ್ದ ದಿ. ಡಾ. ಡಿ. ಎಸ್. ಕರ್ಕಿಯವರ ಮುಖಾಂತರ ಶ್ರೀ ಕಣಗಲಿಯವರು ಬಹು ಹಿಂದೆಯೇ ನನಗೆ ಪರಿಚಿತರಾದವರು. ಡಾ. ಕರ್ಕಿಯವರ ಕಣ್ಣರಿಕೆಯಲ್ಲಿ ಶಿಕ್ಷಣ ಪಡೆದು, ಅವರ ಸಾಹಿತ್ಯಿಕ, ಸಾಂಸ್ಕೃತಿಕ ಜೀವನದಿಂದ ಪ್ರಭಾವಿತರಾದ ಕಣಗಲಿಯವರು ನನ್ನ ಬಗೆಗೂ ಅದೇ ಆದರ ವಿಶ್ವಾಸಗಳನ್ನು ತೋರಿಸುತ್ತ ಬಂದಿದ್ದಾರೆ. ಮೂರು ದಶಕಕ್ಕೂ ಮಿಕ್ಕಿ ಶಿಕ್ಷಣ ಕ್ಷೇತ್ರದಲ್ಲಿ ಒಳ್ಳೆಯ ಶಿಕ್ಷಕ, ಮುಖ್ಯಾಧ್ಯಾಪಕ, ಪ್ರಾಚಾರ್ಯರಾಗಿ ನಿಷ್ಠೆಯಿಂದ ಸೇವೆ ಸಲ್ಲಿಸಿರುವ ಅವರು ನಿವೃತ್ತರಾದ ಮೇಲೂ ಸಾಮಾಜಿಕ ಹಿತಾಸಕ್ತಿಯ ಕಾರ್ಯಗಳಲ್ಲಿ ತೊಡಗಿರುವದು ಸಂತೋಷದ ಸಂಗತಿ. ಅವರ ಕಾವ್ಯಾಸಕ್ತಿ ಹಾಗೂ ಸಜ್ಜನಿಕೆಯನ್ನು ಮೆಚ್ಚಿಕೊಂಡಿರುವ ನಾನು ಈ ಕವನ ಸಂಗ್ರಹದ ಬಗ್ಗೆ ಎರಡು ಮಾತುಗಳನ್ನು ಸಂತೋಷದಿಂದ ಬರೆಯುತ್ತಿದ್ದೇನೆ.

ಶ್ರೀ ಕಣಗಲಿಯವರು ವಿಶೇಷ ಪರಿಶ್ರಮವಹಿಸಿ ಕಾವ್ಯರಚನೆಗೆ ತೊಡಗಿರದಿದ್ದರೂ ತಮ್ಮ ಆಸಕ್ತಿಗನುಸರಿಸಿ ಆಗೀಗ ಅಷ್ಟಿಷ್ಟು ಪದ್ಯಗಳನ್ನು ಬರೆಯುತ್ತ ಬಂದವರು. ಹೆಚ್ಚಿನದನ್ನು ಬಯಸದೆ ಅಷ್ಟರಲ್ಲಿಯೆ ಸಮಾಧಾನಗೊಂಡವರು. ಈ ಮಿತಿಯಲ್ಲಿಯೇ ಇಲ್ಲಿಯ ಕವನಗಳನ್ನು ಪರಿಶೀಲಿಸಬೇಕಾಗುತ್ತದೆ. ನಿಸರ್ಗ ಪ್ರೀತಿ ಹಾಗೂ ಸಾಮಾಜಿಕ ದೃಷ್ಟಿ ಎರಡೂ ಇವರ ಕಾವ್ಯರಚನೆಗೆ ಮುಖ್ಯ ಪ್ರೇರಣೆಗಳಾಗಿ ತೋರುತ್ತವೆ. ನಿಸರ್ಗದಿಂದ ಬಾಳಿಗೆ ಕಾಂತಿ, ಚೇತನ ದೊರೆಯುವ ಅನುಭವ ಅವರದಾಗಿದೆ. 'ಉದ್ಯಾನದಲಿ' ಪದ್ಯದಲ್ಲಿ ಅದು ಹೀಗೆ ವ್ಯಕ್ತವಾಗಿದೆ. ಮೇಲೆ ಆಕಾಶದ ನೀಲಿ ಛತ್ರ, ಕೆಳಗೆ ಹುಲ್ಲಿನ ಹಸಿರು ಪೀತಾಂಬರ, ಸುತ್ತು ವಿವಿಧ ಹೂವುಗಳ ವರ್ಣಶ್ರೇಣಿ, ಅಲ್ಲಿ ಮಕ್ಕಳ ಕೇಳಿ, ಈ ಸಂದರ್ಭದಲ್ಲಿ -

ಎಲ್ಲೆಲ್ಲೂ
ಬೀಸಿದೆ ತಂಗಾಳಿ
ಸೂಸಿದೆ ಗಂಧವ ತೀಡಿ
ಎದೆ ಬಟ್ಟಲಲಿ

ತುಂಬಿದೆ ಶಾಂತರಸ
ಆ ಚೇತನ ಕರುಣರಸ

ಮುಗಿಲು ನೆಲವನಪ್ಪಿ, ಸಲಿಲದಲ್ಲಿ ಚಲಿಸಿ, ಜೀವತಂತು ಮಿಡಿದ 'ಚೇತೋಹಾರಿ ಮಳೆ'ಯ ಬಗ್ಗೆ ಕವಿಯ ಅನಿಸಿಕೆ ಹೀಗಿದೆ:

ಜಗದ ಮೊರೆ ಕೇಳಿತು
ಶಿವನ ಕಣ್ಣು ತೆರೆಯಿತು,
ಜಡೆಯ ಗಂಗೆ ಇಳಿದಳು
ನೆಲದೊಳೆಲ್ಲ ಸುಳಿದಳು.

'ಶ್ರಾವಣದೈಸಿರಿ'ಯಲ್ಲಿ 'ನವವಧುವಾಗಿ ಮೆರೆವ ವಸುಂಧರೆ'ಯನ್ನು ಬಗೆದುಂಬಿ ಬಣ್ಣಿಸುತ್ತಾರೆ. 'ಕಲ್ಪತರು ಕಲ್ಯಾಣಿ' ತೆಂಗಿನ ಗಿಡದ ಚಿತ್ರವನ್ನು ಬರೆಯುವಲ್ಲಿ ಸ್ವಲ್ಪ ಮಟ್ಟಿಗೆ ಹೊಸತನವಿದೆ. ಮಾನವ 'ನಿಸರ್ಗಶಿಶು'ವೆಂಬುದನ್ನು ಮರೆತರೆ ಅವನು 'ದಾನವ'ನಾಗುತ್ತಾನೆಂದು ಕವಿಯ ಭಾವನೆ. 'ಹೂವುಗಳ ಜಾದೂ' ಆಡುಮಾತಿನ ರೀತಿಯಲ್ಲಿ ಸೊಗಸಾಗಿ ಮೂಡಿದೆ.

ಈ ಹೂಗಳದಾವಂತ
ಈ ಭೂಮಿ ಇರಲಿಕ್ಕೊಂದು
ಸೊಗಸಿನ ಸೀಮಿ;
ಇಲ್ಲದಿದ್ದರೆ ಯಾರು ಇರತಿದ್ದರು
ಈ ನೆಲದ ಮ್ಯಾಲೆ ?
ಅದೊಂದು ಬಂಜರು ಭೂಮಿ.

'ಜೋಳ-ಮುತ್ತು' ವಾಸ್ತವತೆಯನ್ನು ಒಳಗೊಂಡು ಜನರ ಭಾವನೆಗೆ ಹೆಚ್ಚು ಸಮೀಪವೆನಿಸುತ್ತದೆ.

ಮುತ್ತಿಗಿಂತಲೂ ಮಿಗಿಲು ಜೋಳದಾ ಕಾಳು
ಜೋಳ ಬಿಟ್ಟು ಮುತ್ತಿರಲು ಸಾಗುವದೇ ಬಾಳು ?

ಈ ಬಗೆಯ ವಾಸ್ತವ ಪ್ರಜ್ಞೆ, ಸಾಮಾಜಿಕ ಕಳಕಳಿ ಜಾಗೃತವಾಗಿರುವ ಕೆಲವು ಕವನಗಳಲ್ಲಿಯ ಟೀಕೆ, ವಿಡಂಬನೆ ಓದುಗರ ಗಮನ ಸೆಳೆಯುತ್ತವೆ.

ನಮ್ಮೂರ ಪೇಟೆ ರಸ್ತೆ, ಎಂದು
ಕಂಡಿರುವುದೋ ದುರಸ್ತಿ;
ಬಾಯ್ದೆರೆದು; ಹಲ್ಲು ಕಿಸಿದು
ಸ್ವಾಗತಿಸುವದೇನು ಜಾಸ್ತಿ (ರಸ್ತೆ)

* * * *

ನಮ್ಮ ಸರಕಾರ ರೋಣಗಲ್ಲು
ಹೊಟ್ಟೆ ಹೊಸೆವುದು ಹೆಬ್ಬಾವಿನೊಲು (ನಮ್ಮ ಸರಕಾರ)

'ಆಧುನಿಕ ವರಗಂಗೆ' (ರೇಡಿಯೊ) ಬದುಕಿನಲ್ಲಿ 'ಗೌರಿಯಂತೆ' ಜೊತೆಗಾತಿಯಾಗಿರುವುದರ ವರ್ಣನೆಯ ವಿವರಗಳು ರಂಜನೀಯವಾಗಿವೆ. ನ್ಯೂಯಾರ್ಕದಲ್ಲಿಯ ಸ್ವಾತಂತ್ರ್ಯ ಪ್ರತಿಮೆ ಮಾನವ ಹಕ್ಕುಗಳನ್ನು ಜಗತ್ತಿಗೆ ಸಾರುತ್ತ ನಿಂತಿರುವಾಗಲೇ ಶ್ವೇತಭವನದಲ್ಲಿಯ 'ದುರ್ನೀತಿ'ಗಳನ್ನು ಹಾಗೂ ಆ ದೇಶ 'ವಿರೋಧಾಭಾಸಗಳ ಮೂಟೆ'ಯಾಗಿರುವದನ್ನು ಖಂಡಿಸುವ 'ಎಚ್ಚರಾಗಲಿ ಅಮೇರಿಕೆ' ವಾಚ್ಯವಾಗಿದ್ದರೂ ಓದಿಸಿಕೊಳ್ಳುತ್ತದೆ. 'ಗೊಮ್ಮಟೇಶ್ವರ'ನ ವ್ಯಕ್ತಿತ್ವವನ್ನು ಪ್ರಶಂಸಿಸುವಂತೆಯೇ ಕ್ರಿಕೆಟ್ ಪಟುಗಳಿಗೂ ಕವಿ 'ಅಭಿನಂದನೆ' ಸಲ್ಲಿಸುತ್ತಾರೆ. ನಾಡಿನ ಜನಕ್ಕೆ ಬೆಳಕುನೀಡುವ 'ಡಾ. ಮೋದಿ'ಯವರ ಮೋಡಿಯನ್ನು ಚಿತ್ರಿಸಿದ್ದಾರೆ. 'ಸಂಸ್ಕಾರ' - ಜೀವನದಲ್ಲಿ ಅದರ ಮಹತ್ವವನ್ನು ಮೂರು ದೃಷ್ಟಾಂತಗಳಿಂದ ನಿರೂಪಿಸುತ್ತದೆ.

ಹೀಗೆ ವಿಷಯ ವೈವಿಧ್ಯ, ತಕ್ಕ ಛಂದೋರೂಪ ಹಾಗೂ ಸದಭಿರುಚಿ ಈ ಪದ್ಯಗಳ ಗುಣಗಳೆನ್ನಬಹುದು. ಕಾವ್ಯಗುಣವನ್ನು ಸಂಪೂರ್ಣ ಲಕ್ಷ್ಯದಲ್ಲಿಟ್ಟುಕೊಂಡು ಭಾಷೆ, ಛಂದಸ್ಸು ಹಾಗೂ ಅನುಭವ ನಿರೂಪಣೆಯಲ್ಲಿ ಹೆಚ್ಚಿನ ಪರಿಶ್ರಮ ಹಾಗೂ ಪರಿಷ್ಕಾರದ ಪ್ರಯತ್ನ ನಡೆದರೆ ಶ್ರೀ ಕಣಗಲಿಯವರು ಇನ್ನೂ ಹೆಚ್ಚಿನ ಯಶಸ್ಸು ಪಡೆಯಬಲ್ಲರು ಎನಿಸುತ್ತದೆ. ಈ ದಿಸೆಯಲ್ಲಿ ಸಫಲರಾಗಲಿ ಎಂದು ಹೃತ್ಪೂರ್ವಕ ಹಾರೈಸುತ್ತೇನೆ.

(೧೯೮೮)

## ೪೧

## ಪ್ರತಿಬಿಂಬ

ಶ್ರೀಮತಿ ಮಿತ್ರವಿಂದಾ ಪಾಟೀಲರ ಈ ಪ್ರಥಮ ಕವನ ಸಂಕಲನಕ್ಕೆ ಎರಡು ಮಾತು ಬರೆಯುವದರಲ್ಲಿ ನನಗೆ ಸಂತೋಷವಿದೆ. 'ನೋವುಗಳ ನೆರಳಿನಲ್ಲಿ ಹೊರಟಿದ್ದೇವೆಂಬ ಭ್ರಮೆ'ಯನ್ನುಳಿದು 'ಬತ್ತಿದ ಭಾವನೆಗಳು ಹುರಿದುಂಬಿ ಹರಿದಾಡಿ ಸರನರಗಳು ನಿನದಿಸುವ' ಭರವಸೆಯನ್ನು ಅವರು ಈ ಸಂಕಲನದುದ್ದಕ್ಕೂ ನೀಡಿರುವದೇ ಅದಕ್ಕೆ ಮುಖ್ಯ ಕಾರಣ. ಕವಿತೆಗಳ ಶೀರ್ಷಿಕೆಯನ್ನು ನೋಡಿದರೆ ಸಾಕು., 'ಭರವಸೆ', 'ತೃಪ್ತಿ', 'ಸಾಂತ್ವನ', 'ಕನ್ನಡಿ', 'ಆಶ್ಚರ್ಯ', 'ಅಳುಕು' - ಹೀಗೆ ಯಾವ ಉದ್ವೇಗಕ್ಕೂ ಎಡೆಗೊಡದೆ, ಪ್ರಶಾಂತ ಮನಸ್ಸಿನಲ್ಲಿ ಅನುಭವ ಮೂಲದಿಂದ ಮೂಡುವ ಚಿಂತನೆಯ ಸ್ವರೂಪವನ್ನು ಕಂಡುಕೊಂಡು ತಕ್ಕ ಪದಗಳಲ್ಲಿ, ಪ್ರತಿಮೆಗಳನ್ನು ಅವುಗಳಲ್ಲಿ ನಿಚ್ಚಳವಾಗಿ ಪ್ರತಿಬಿಂಬಿಸಿರುವದು ಇಲ್ಲಿಯ ವೈಶಿಷ್ಟ್ಯ. ಕವಿತೆಗಳ ವಸ್ತುವಿನಲ್ಲಿಯೂ ತಕ್ಕಮಟ್ಟಿನ ವೈವಿಧ್ಯವಿದೆ. ಆಯಾವಸ್ತು ತನ್ನ ಪ್ರತಿರೂಪವನ್ನು ಸೃಷ್ಟಿಸಿಕೊಳ್ಳುತ್ತ ಒಟ್ಟು ಧೋರಣೆಗೆ ವ್ಯತ್ಯಯ ಬರದಂತೆ ತನ್ನ ಮಿತಿಯಲ್ಲಿಯೇ ಅನುಭವ ಆಕಾರಗೊಳ್ಳುವಂತೆ ಮಾಡುವ ಪ್ರಯತ್ನ ಚೆನ್ನಾಗಿ ಫಲಿಸಿದೆ. ಭಾವ, ವಿಚಾರ ಜೊತೆ ಜೊತೆಯಾಗಿ ಸಾಗುತ್ತ ಸಹಜವಾದ ಮುಕ್ತಾಯವನ್ನು ಕಂಡುಕೊಳ್ಳುತ್ತವೆ. ಈ ಪದ್ಯಗಳ ಗದ್ಯಲಯ ಸ್ವಲ್ಪ ಶಿಥಿಲವೆನಿಸಿದರೂ ಭಾವಾನುಸಾರಿಯಾಗಿ ಓದುವ ಮನಸ್ಸಿಗೆ ಸ್ಪಂದಿಸಬಲ್ಲದು.

'ಪ್ರೀತಿಯ ಮೌನ ಮಿಡಿತದ ಮಾನವೀಯ ಸ್ಪಂದನದ ತುಡಿತದ ಸೆಲೆಯಲ್ಲಿ, ನನ್ನ ಮೂಲವನ್ನು ಕಂಡುಕೊಂಡು, ಸ್ವೋಪಜ್ಞತೆಯ ಮುದ್ರೆಗಾಗಿ ತಡಕಾಡಿ, ಅಂಕು ಡೊಂಕುಗಳನ್ನು ತಿದ್ದಿ ಸುಂದರ'ಗೊಳಿಸುವ ಕೆಲಸವನ್ನು ಪ್ರಕೃತಿಗನ್ನಡಿಗೆ ಬಿಟ್ಟುಕೊಟ್ಟು ಭೂಮಿಯ ಆಳ ಬಾನಿನ ಅನಂತತೆಯ ನಡುವೆ 'ಗರ್ಭಗುಡಿಯ ಪುಟ್ಟ ಮೂರ್ತಿ'ಯನ್ನು ಪ್ರಸನ್ನ ಚಿತ್ತದಿಂದ ಕಾಣುವ ದೃಷ್ಟಿಯಲ್ಲಿ ಕವಿ ಹೃದಯದ ಒಲವು-ಚೆಲುವು ಒಡಮೂಡಿದೆ. ಜಗತ್ತಿನೊಡನೆ ನಾವು ಹಳಬರಾಗುತ್ತ ಹೊರಟಿದ್ದೇವೆ ಎಂದು ಅನಿಸುತ್ತಿರುವಾಗಲೇ ಹೊಸ ಹೊಸ ರೂಪ ತಾಳಿ ನೂರಾರು ಅರ್ಥಗಳನ್ನು ತೋರಿಸುತ್ತ ತನ್ನೊಂದಿಗೆ ಬರಲು ಹೇಳುವ 'ಬದುಕಿನ' ಬಗೆಯನ್ನು ಕಂಡ ಮಿತ್ರಾವಿಂದಾ ಅವರ ಕವಿತೆಗಳು ಅವರ ಕಾವ್ಯ ಜೀವನದ ಭವಿಷ್ಯದಲ್ಲಿ ಭರವಸೆ ಹುಟ್ಟಿಸುತ್ತವೆ. 'ಆಕಾಶದ ಅಂತರಂಗಕ್ಕೆ ಮೋಡವೆಂಬ ಭಾವನೆ, ಮಳೆಯೆಂಬ ಭಾಷೆಯಿದೆ'ಯೆನ್ನುವಂಥ ಮಾತುಗಳೇ ಅದಕ್ಕೆ ಸಾಕ್ಷಿಯಾಗಿವೆ.

ಹೀಗೆ 'ಬುದ್ಧಿ ಭಾವನೆಗಳ ಹೆಬ್ಬಾಗಿಲಿನಿಂದ ಹೊರಬರಲು ಹವಣಿಸುತ್ತಿರುವ ಪ್ರತಿಭೆ ಪ್ರಭಾವ'ಗಳನ್ನು ಕಾವ್ಯಪ್ರೇಮಿಗಳು ಸ್ವಾಗತಿಸುತ್ತಾರೆಂದು ಆಶಿಸಿ ಶ್ರೀಮತಿ ಮಿತ್ರವಿಂದಾ ಅವರಿಗೆ ಶುಭ ಕೋರುತ್ತೇನೆ.

(೧೯೮೮)

## ೪೨

# ಕಾವ್ಯಾಂಜಲಿ

ಶಿಕ್ಷಣ ಕ್ಷೇತ್ರದಲ್ಲಿ ಕೆಲಸ ಮಾಡುತ್ತಲೇ ಹಲವಾರು ಸಾರ್ವಜನಿಕ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಕ್ರಿಯಾಶೀಲರಾಗಿರುವ ಶ್ರೀಮತಿ ಗಿರಿಜಾ ದುರ್ಗದಮಠ ಆಗಾಗ ಪದ್ಯಗಳನ್ನು ಬರೆಯುವ ಹವ್ಯಾಸ ಇಟ್ಟುಕೊಂಡವರು. ಅವರ ಪ್ರಥಮ ಸಂಕಲನ 'ಕಾವ್ಯಾಂಜಲಿ'ಯನ್ನು ತಾವು ಕೆಲಸಮಾಡುತ್ತಿರುವ ಸಂಸ್ಥೆಯ ಬೆಳ್ಳಿಹಬ್ಬದ ಸಂದರ್ಭದಲ್ಲಿ ಪ್ರಕಟಿಸುತ್ತಿರುವಾಗ ನಾನು 'ಆಶೀರ್ವಚನ' ನುಡಿಯಬೇಕೆಂದು ಅವರ ಕೋರಿಕೆ. ಕಾವ್ಯ ಸ್ವರೂಪದ ವಿವೇಚನೆಗೆ ನೆರವಾಗುವ ದೃಷ್ಟಿಯಿಂದ ಈ ಎರಡು ಮಾತುಗಳನ್ನು ಸಂತೋಷದಿಂದ ಬರೆಯುತ್ತಿದ್ದೇನೆ.

ಒಳ್ಳೆಯ ಜೀವನವನ್ನು ಬಾಳುವ ಹಂಬಲದಿಂದ ಒಂದು ಬಗೆಯ ನೀತಿಯನ್ನು ತನ್ನ ಮನಸ್ಸಿಗೆಂತೋ ಹಾಗೆಯೇ ಉಳಿದವರಿಗೂ ತಿಳಿಹೇಳುವದು ಇಲ್ಲಿಯ ಹೆಚ್ಚಿನ ಪದ್ಯಗಳ ಆಶಯವಾಗಿದೆ.

ಹಾಲು ಕುಡಿಯಲು ಬೇಡವಾದರೆ
ಉರುಳಿಸದಿರು ಮನವೆ

ಎನ್ನುವಂಥ ಕೆಲವೆಡೆಗಳಲ್ಲಿ ಮಾತಿನ ರೀತಿ ಮನಸ್ಸಿಗೆ ನಾಟುವದುಂಟು. ಕಾವ್ಯಸ್ಪರ್ಶವಿಲ್ಲದೆ, ಗೊತ್ತಿರುವುದನ್ನೇ ಮತ್ತೆ ಮತ್ತೆ ಒತ್ತಿಹೇಳುವ ಚಾಪಲ್ಯ ಮಾತಿಗೆ ಮುಂದಾಗಿರುವುದನ್ನೂ ಕಾಣಬಹುದು. ಆದರೆ 'ಹಸನಾದ ಬಾಳು', 'ಭಾರತಾಂಬೆಯ ಮಕ್ಕಳು'ದಂತಹ ಪದ್ಯಗಳು ವಾಚ್ಯವೆನಿಸಿದರೂ ಕೇಳುವುದಕ್ಕೆ ಹಿತವಾಗಿರುತ್ತವೆ.

ಶಾಂತಿಯಿಂದ ಅಶಾಂತಿಯೆಡೆಗೆ
ಬೆಳಕಿನಿಂದ ಕತ್ತಲೆಡೆಗೆ ಜ್ಞಾನದಿಂದ ಅಜ್ಞಾನದಕಡೆಗೆ, ತ್ಯಾಗದಿಂದ
ಸ್ವಾರ್ಥದೆಡೆಗೆ
ಏಕೆ ನಿನ್ನ ಪಯಣವೊ?

'ನವಯುವಕನ ಪಯಣ'ದಲ್ಲಿಯ ಈ ಬಗೆಯ ಕಳಕಳಿಯಾಗಲಿ, ಯಾರ ಹಿಡಿತಕ್ಕೂ ಸಿಗದ, ತನ್ನ ಅಸ್ತಿತ್ವವನ್ನೇ ನುಂಗಿ ನಿಂತ ಮನಸ್ಸಿನ ಚಂಚಲತೆಯನ್ನು ಹೇಗೆ ಅರಿಯಲಿ ಎಂದು 'ಚಂಚಲ ಮನಸ್ಸು' ಕವನದಲ್ಲಿ ತನ್ನಷ್ಟಕ್ಕೆ ಕೇಳಿಕೊಳ್ಳುವುದಾಗಲಿ ಈ ಬಗೆಯದು. 'ಇಂದಿನಾ ಯುಗದಾಗ' ಯಾವುದಕ್ಕೆ ಬೆಲೆಯಿದೆಯೆಂಬುದನ್ನು ಸೂಚಿಸುವ ವ್ಯಂಗ್ಯವೂ ನೇರವಾಗಿಯೇ ವ್ಯಕ್ತವಾಗಿದೆ.

ಇಂದಿನ ಸಮಾಜದ ರೀತಿನೀತಿಯನ್ನು 'ಸಮಾಜ' ಪದ್ಯ ಸರಳವಾಗಿದ್ದೂ ಪರಿಣಾಮಕಾರಿಯಾಗಿ ನಿರೂಪಿಸುತ್ತದೆ. 'ನೀರಿನ ಬೋರು' ಸುತ್ತ ನಡೆವ ಚಟುವಟಿಕೆಗಳ ಇಂದಿನ ಚಿತ್ರ ವಸ್ತುವಿನ ಹೊಸತನದಿಂದ ಕೂಡಿ ಆಕರ್ಷಕವಾಗಿದೆ. 'ಬಾವಿಯಲ್ಲಿ ಗಣಪನನ್ನು ಏಕೆ ಹಾಕಿದೆ?' ಕವನದ ಮೊದಲ ಭಾಗದಲ್ಲಿ ವ್ಯಕ್ತವಾಗಿರುವ ಮಗುವಿನ ಭಾವನೆಗಳು ಸಹಜತೆಯಿಂದ ಕೂಡಿವೆ. ಕಲ್ಪನೆಯ ಮತ್ತು ವಾಸ್ತವದ ಸಂಘಟನೆಯನ್ನು ಚಿಕ್ಕದರಲ್ಲಿಯೇ ಚೊಕ್ಕದಾಗಿ, ಸಾರವತ್ತಾಗಿ ಒಡಮೂಡಿಸುವ ಕವಿತೆ 'ಕಲ್ಪನಾ ವಿಹಾರ'.

ಭಾವ-ಭಾಷೆಯ ಸಾಮರಸ್ಯದಿಂದ ಪ್ರೇಮದ ವಿವಿಧ ಭಾವನೆಗಳನ್ನು ನಿರೂಪಿಸುವ ಕವಿತೆಗಳು ನೈಜಾನುಭವದಿಂದ ಹೆಚ್ಚು ಆತ್ಮೀಯವೆನಿಸುತ್ತವೆ. 'ಬೆರೆತ ಜೀವ', 'ಈ ಬಿಂಕ ನಿನಗ್ಯಾಕ?' 'ಸವಿನೆನಪು', 'ಬಯಕೆ', 'ಪ್ರೇಮದನುಬಂಧ', 'ದೃಷ್ಟಿತರಂಗ' ಮುಂತಾದ ಕವನಗಳು ಅಂಥ ಸವಿಗಾರಿಕೆಯನ್ನು ಸೂಸುತ್ತವೆ. ದುಂಬಿಗಾಗಿ ಬೆಳೆದು, ಅಂದವಾಗಿ ಅರಳಿನಿಂತ ಹೂವನ್ನು ಕುರಿತು 'ಮಧು' ಪದ್ಯ ಅನ್ಯೋಕ್ತಿಯನ್ನು ಅವಲಂಬಿಸಿದೆ. ಕೊನೆಯಲ್ಲಿ ಬರುವ ನುಡಿ-

ಹೂವಿನಿಂದ ಹೂವ ಬಯಸಿ
ಬರುವ ಈ ದುಂಬಿಗೆ
ಏ ಹೂವೇ, ನಿನ್ನ ಮಧು
ಸಾಕಾಗಲಾರದೆ?

ಎನ್ನುವಲ್ಲಿ ದುಂಬಿಯ ಚಂಚಲತೆ ಹೂವಿನ ಸಂದರ್ಭದಲ್ಲಿ ವಿಷಾದ ಭಾವವನ್ನು ಮಿಡಿಯುತ್ತದೆ. ಗುಣಗೌರವದಿಂದ ಕೂಡಿದ ಎರಡು ವ್ಯಕ್ತಿಗೀತೆಗಳು ಈ ಸಂಗ್ರಹದಲ್ಲಿವೆ.

ಇಲ್ಲಿ ಎತ್ತಿ ತೋರಿಸಿದ ಕವನಗಳಿಗೂ, ಉಳಿದವುಗಳಿಗೂ ಇರುವ್ಯ ವ್ಯತ್ಯಾಸ ಕಾವ್ಯ-ಗದ್ಯ, ವಾಚ್ಯ-ಸೂಚ್ಯ ಇವುಗಳಿಗೆ ಸಂಬಂಧಪಟ್ಟದ್ದೆಂಬುದನ್ನು ಶ್ರೀಮತಿ ಗಿರಿಜಾ ಅವರು ಕಾವ್ಯಾಭ್ಯಾಸದ ಬಲದಿಂದ ಅರಿತುಕೊಳ್ಳುತ್ತಾರೆಂದು ಆಶಿಸಿದ್ದೇನೆ. ಛಂದಸ್ಸು, ಕವನದ ಸ್ವರೂಪ, ಭಾವ-ಭಾಷೆಗಳ ಹೊಸತನ ಮೊದಲಾದ ದೃಷ್ಟಿಯಿಂದ ಹೆಚ್ಚು ಪ್ರಯತ್ನಶೀಲರಾಗಿ ಮುಂದುವರಿದಲ್ಲಿ ಅವರು ಇನ್ನೂ ಉತ್ತಮವಾದ ಕೃತಿಗಳನ್ನು ಕೊಡಬಲ್ಲರು.

(೧೯೮೮)

೪೩

# ವೈಜಯಂತಿ

ಡಾ. ಬಸುಪಟ್ಟದ ಅವರ ಮೂರನೆಯ ಕವನ ಸಂಕಲನ 'ಚೈತ್ರಾಗಮನ'ಕ್ಕೆ ಮುನ್ನುಡಿ ಬರೆಯುತ್ತ ಶ್ರೀ ಬೇಂದ್ರೆಯವರು, ಅವರ ಕಾವ್ಯ-ಪ್ರಕೃತಿ ಸುಕುಮಾರ, ಲಲಿತ, ಸೌಮ್ಯ ಎಂಬುದನ್ನು ಗುರುತಿಸಿ, ಈ 'ಕವಿ ಜೀವನದ ಸೌಮನಸ್ಯದ ಪ್ರಫುಲ್ಲತೆಗೆ ಅವರೂ ಕಾಯಬೇಕು; ಯಾರೂ ಕಾಯಬೇಕು' ಎಂದು ನುಡಿದಿದ್ದರು. ಆ ಮಾತನ್ನು ಶಬ್ದಶಃ ಪಾಲಿಸಿದರೊ ಏನೋ ಎಂಬಂತೆ ಈ ಕವಿ ಮೂರು ದಶಕದವರೆಗೂ ಕಾದು ಇದೀಗ ತಮ್ಮ ಸಂಸ್ಕೃತಿಯ 'ವೈಜಯಂತಿ'ಯನ್ನು ಪ್ರಕಟಿಸಿದ್ದಾರೆ. (ಅವರ ಇನ್ನೊಂದು ಕವನ ಸಂಗ್ರಹವೂ ಇಷ್ಟರಲ್ಲಿಯೇ ಪ್ರಕಟವಾಗಲಿದೆ.) ಗುಳೇದಗುಡ್ಡದ ಜನತೆಯಿಂದ ಪೌರ ಸನ್ಮಾನ ಪಡೆಯುತ್ತಿರುವ ಈ ಕವಿ ಮಿತ್ರರಿಗೆ ಪರಸ್ಪರ ಪ್ರೀತಿ-ಸ್ನೇಹ-ಗೌರವಗಳ ಸಂಕೇತವಾಗಿ ಈ ಮುನ್ನುಡಿಯ ಮುತ್ತಿನ ಹಾರವನ್ನು ಹಾಕುತ್ತಿದ್ದೇನೆ.

ಇಲ್ಲಿಯ ನಾಲ್ವತ್ನಾಲ್ಕು ಕವನಗಳ ವಸ್ತುವಿನಲ್ಲಿ ಸಾಕಷ್ಟು ವೈವಿಧ್ಯವಿದೆ. ಪ್ರಕೃತಿ ಸೌಂದರ್ಯ, ದೈವೀಶ್ರದ್ಧೆ, ದೇಶದ ಆಗು ಹೋಗುಗಳು, ನಾಡು-ನುಡಿಯ ಕಳಕಳಿ, ಹಬ್ಬಗಳ ಸಂಭ್ರಮ, ವಿಶಿಷ್ಟ ವ್ಯಕ್ತಿಗಳು, ಜೀವನದ ಸುಖ-ದುಃಖ-ಇವೆಲ್ಲವೂ ಕವಿಯ ಮನಸ್ಸಿನಲ್ಲಿ ಎಬ್ಬಿಸಿದ ವಿಚಾರ ಲಹರಿಗಳು, ಭಾವ ತರಂಗಗಳು ನುಡಿಯಲ್ಲಿ, ಛಂದದ ನಡಿಗೆಯಲ್ಲಿ ಒಡಮೂಡುತ್ತ ಬಂದಿವೆ. ಜೀವನದಲ್ಲಿ ಮಾಗುವಿಕೆಯಿಂದ ಒದಗುವ ಮಾಧುರ್ಯವನ್ನು ಒಂದಲ್ಲ ಒಂದು ರೀತಿಯಲ್ಲಿ ಈ ಕವನಗಳು ಓದುಗರಿಗೆ ನೀಡಬಲ್ಲವು. ಇದನ್ನೇ ಬೇರೆ ಬೇರೆ ಉದಾಹರಣೆಗಳ ಮೂಲಕ ಎತ್ತಿ ತೋರಿಸುವದು ಇಲ್ಲಿ ನನ್ನ ಮುಖ್ಯ ಉದ್ದೇಶವಾಗಿದೆ.

ದೈವೀ ಕರುಣೆಯ ಕಿರಣಗಳನ್ನು ಪ್ರತಿಫಲಿಸುತ್ತ 'ನಿನ್ನ ಕರುಣೆ' ಸಂತೃಪ್ತಿಯ ಕೃತಜ್ಞತಾ ಭಾವವನ್ನು ನೀರದ-ಮಳೆ-ಬೆಳೆಯ ರೂಪಕದಲ್ಲಿ ತಣಿಸುತ್ತದೆ;

ವ್ಯೋಮ ಮಂಡಲದಲ್ಲಿ ವಿಹರಿಸುವ ನೀರದವು
ತಾ ಕರಗಿ ನೆಲದಲ್ಲಿ ಬೆಳೆಯಂತಿರಲು,
ನೆಲವೆಲ್ಲ ನೀರುಂಡು ಅಣುರೇಣು ಸ್ಫುಟಗೊಂಡು
ಚೆಲುವಿನ್ನೈಸಿರಿಯಿಂದ ಮೆರೆಯುತಿರಲು
ನೆಲದ ಈ ಸುಂದರತೆ ತಾ ಬೆಳೆದು ಮಾಗಿರಲು

ಕರಣ ಪಂಚೀಕರಣ ಪುಲಕಗೊಂಡು-
ದಿವ್ಯತೆಯ ಹೊಗರೇರಿ ನಲಿಯುತಿವೆ ನಲವೇರಿ
ನೀನಿತ್ತ ಈ ಸೊಬಗ ಸವಿಯನುಂಡು.

ತನ್ನ ಬಾಳು ಅವನ ಹಾಡಿನ ದಿವ್ಯ ತಾನವಾಗಿ ನುಡಿದು ಧನ್ಯವೆನಿಸಲಿ ಎಂಬ ಭಾವ ಸಾಂಪ್ರದಾಯಿಕವಾಗಿದ್ದರೂ 'ಪ್ರಾರ್ಥನೆ'ಯ ಅಭಿವ್ಯಕ್ತಿಯಲ್ಲಿ ಬೇರೊಂದು ವೈಶಿಷ್ಟ್ಯವನ್ನು ಹೀಗೆ ಪಡೆದಿದೆ :

ಕಣ್ಣ ತೆರೆದು ಕಣ್ಗೊಂಬೆಯಾಗಿ ನೀ
ನಿಂತು ಮುಂದೆ ನಡೆಸು;
ಹೃದಯದೆರೆದು ಹೃದಯಸ್ಥವಾಗಿ ನೀ
ಸತ್ಯ ಕವಚ ತೊಡಿಸು;
ಮನದ ದಂಡಿಗೆಯ ತಿದ್ದಿ ತಿದ್ದಿ ನೀ
ದಿವ್ಯ ಮಂತ್ರ ನುಡಿಸು.

ಅವತಾರದಲ್ಲಿಯ ನಂಬಿಕೆ ಒಂದು ನಿಷ್ಠೆಯಾಗಿ 'ಬರ್‍ತ್ಯ ಇರತಾನ' ಕವಿತೆಯಲ್ಲಿ ಸಾಮನ್ಯರ ಅನುಭವಕ್ಕೆ ತಂದು ಕೊಡುವಂತಿದೆ :

ಸುದ್ದುಳ್ಳ ಜನರಿಗೆ ಸದ್ದಿಲ್ಲದಾ ಹಾಗೆ
ಆಗಾಗ ಮೇಲೆತ್ತಿ ಹಿಡಿದಾನ್ಸ,
ಅಂಥವರ ಮನಿಯಾಗ ಅಂಥವರ ಮನದಾ
ಹತ್ತೀಲೆ ಇದ್ದು ತಾ ನಡದ್ಯಾನ,

ಅದರ ಜೊತೆಗೆ ರೀತಿ-ನೀತಿಯ ನುಡಿಯೂ ದನಿಗೊಟ್ಟಿದೆ :

ಹಾದೀಯ ಬಿಡಬ್ಯಾಡ, ಹರಲೀಯ ಹೊರಬ್ಯಾಡ
ಮುನ್ನೋಡಿ ನಡೆಯೆಂದು ಹೇಳ್ಯಾನ.

ಕಾಲಕ್ಕೆ ಕರುಣೆಯಿಲ್ಲ. ಜೀವಕ್ಕೆ ವಿರಹದ ಬೇಗೆಯನ್ನೊಡ್ಡುತ್ತದೆ. ಸೋವು ಹಾವುಗಳನ್ನೆ-ಸೆಯುತ್ತದೆ. ಜೀವಗಳನ್ನು ವಿಧವಿಧವಾಗಿ ಪರೀಕ್ಷಿಸುತ್ತದೆ, ಈ ರೀತಿ ಜೀವಿಗಳನ್ನು ತಳಮಳಗೊಳಿಸಿದರೆ ಅದಕ್ಕಾಗುವ ಲಾಭವಾದರೂ ಏನು ಎಂಬ ಚಿಂತನೆಯಿಂದ ಕ್ರೌರ್ಯದ ಪುನರಾವೃತ್ತಿಯನ್ನು, ತೀಕ್ಷ್ಣತೆಯನ್ನು ತಗ್ಗಿಸಲು ಕಾಲ ಕರಿಭಕ್ಕೆ ಕೋರಿಕೆ ಪರಿಣಾಮಕಾರಿಯಾಗಿದೆ:

ತೂರಿ ಬಿಡು, ದೂರ ಬಿಡು ಒಮ್ಮೆ ಸೊಂಡಿಲನೆತ್ತಿ
ತುಳಿಯದಿರು ಜೀವಗಳ ನಿನ್ನ ಕಾಲನೆತ್ತಿ.

ಎಳ್ಳು-ಬೆಲ್ಲದ ಸ್ನೇಹಸ್ನಿಗ್ಧ ಮಾಧುರ್ಯ ಬಾಳಿಗೆ ಜೀವ ತುಂಬುವ ಸಂಕ್ರಾಂತಿ ಹಬ್ಬದ ಸಂಕೇತವನ್ನು ಹಿನ್ನೆಲೆಯಾಗಿಟ್ಟುಕೊಂಡು ಇಂದಿನ ಬಾಳಿನಲ್ಲಿ ಕವಿ ಹಾರೈಸುವದು ಇದನ್ನು:

ಒಬ್ಬರೊಬ್ಬರ ಬಾಳ ಸಿಹಿ-ಕಹಿಯ ಪಾಲ್ಗೊಂಡು
ಪ್ರೇಮದಲಿ ಸಾಗಿಪುದು ಜಾಳನಿಂದು.

ಹಬ್ಬದ ಉಬ್ಬನ್ನು ಪಡೆಯುವವರು ಹೆಚ್ಚಾಗಿ ಧನಿಕರೇ, ಬಹು ಸಂಖ್ಯೆಯ ಬಡವರಿಗೆ -?

ಬೆಳಗೂ ಬೈಗೂ ದುಡಿದೇ ದುಡಿದು ಬಿದ್ದಿರೆ ದೇಹವು ಕೆಳಗೆ-
ಅರೆ ನಿಮಿಷಾದರು ಅಳಲನು ಮರೆತು ಜೀವಪ್ಪ ತನ್ನೊಳಗೆ
ನಕ್ಕರೆ ಜೀವ, ಉಕ್ಕಲು ಭಾವ. ಅದುವೆ ಹಬ್ಬವು ಇಳೆಯೊಳಗೆ.,

'ಅಚಲ ಶ್ರದ್ಧೆ'ಯಲ್ಲಿ ಬಂದುದನ್ನು ಎದುರಿಸುತ್ತ ಎಡರುಗಳ ಜೆದುರಿಸುತ್ತ 'ಬಾಳ ಸಂಗ್ರಾಮದಲ್ಲಿ ಹಿಗ್ಗಬೇಕು' ಎಂಬ ನಿಲುವನ್ನು ಹೊಂದಿರುವ ಕವಿ 'ದುಡಿಮೆಯಲಿ ಸಂತಸವ ಪಡೆಯುವಾ ಶಕುತಿಯನು' ದೇವ ಕರುಣಿಸಿದರೆ ಸಾಕೆನ್ನುತ್ತಾನೆ.

ಸೃಷ್ಟಿ ಸೌಂದರ್ಯ 'ಜೀವಕೋಟಿಗೆ ಮುದವ ನೀವು'ದೆಂಬ ಭಾವನೆ ಅದರ ನಿತ್ಯ ನೂತನತೆಯಿಂದ ಪುಷ್ಟಿ ಪಡೆಯುತ್ತದೆ. ನಿಮಿಷ ನಿಮಿಷಕೆ ಸೃಷ್ಟಿ ದೇವಿಯ ಹೊಸತು ಹಡದಿಯ ಹಾಸುತ ಸಾಗಿರುವುದನ್ನು ಕಂಡ ಕಣ್ಣು ಅದರ ಸೊಬಗನ್ನು ಸವಿದಿದೆ. 'ಮೇಘರಾಜ'ನಲ್ಲಿ ಅದು ಉತ್ಸಾಹದಿಂದ ಹೊರ ಹೊಮ್ಮಿದೆ :

ವ್ಯೋಮಾಂಗದಿ ನೋಡು ಮೇಘರಾಜನು ತಾನು
ರಾಜ ಶೀವಿಯೊಳಲ್ಲಿ ಸುತ್ತುತಿರುವ;
ಪ್ರಕೃತಿ ವನಿತೆಗೆ ದಿವ್ಯ ಚೆಲುವಿನಂಬರ ತೊಡಿಸಿ
ನೋಡಿ ಸಂತಸಬಡಲು ಮತ್ತೆ ಬರುವ.

'ಕಾರವಾರದ ಮಳೆ'ಯನ್ನು ವರ್ಣಿಸುತ್ತ 'ನೀರಗಾಜಿನ ಕೊಳವೆ ಜಾಲವು ಇಳೆಗೆ ನಭದಿಂದಿಳಿವೊಲು' ಎನ್ನುವಲ್ಲಿ ಹೊಸತನವಿದೆ. 'ಕಡಲ ಮೊರೆತವೆ ಮಳೆಯ ಸಪ್ಪಳ ಸೂರು ಹಿಡಿಯುತ ಬಂದಿರೆ' ಮತ್ತೆ ಯಥಾರ್ಥಕ್ಕೆ ಮರುಳುತ್ತದೆ. ಕಾರವಾರ 'ಹುಡುಗಿ'ಯ ವರ್ಣರಂಜಿತ ಹೆರಳು ಮರುಳುಗೊಳಿಸುವಂತೆಯೇ 'ಕಾರವಾರ ಸೊಬಗಿ'ನಲ್ಲಿ ಸಹಜವಾದ ಸಾಮಾನ್ಯ ಚಿತ್ರಗಳೇ ಮನಸ್ಸನ್ನು ಸೆರೆಹಿಡಿಯುತ್ತವೆ,

ಹುಡುಗ ಹುಡುಗಿಯರಿಲ್ಲಿ, ಮುದುಕ ಮುದುಕಿಯರಲ್ಲಿ
ಸೈಕಲ್ಲ ಮೇಲೇರಿ ಸಾಗುತಿಹರು;
ಇಬ್ಬರೋ ಮೂವರೋ ನಿಶ್ಚಿಂತೆಯಲಿ ಕುಳಿತು
ಒಂದೆ ಬೈಕಿನ ಮೇಲೆ ಹೋಗುತಿಹರು.

'ಸಿದ್ಧಲಿಂಗಯತಿ', 'ವರ ಪುಣ್ಯ ಪುರುಷ' (ಹಳಕಟ್ಟಿ), 'ಧೀರ ಸಾಹಿತಿ ಭಾನು' (ಕಾರಂತ), 'ವಿಜಯಮಹಂತೇಶ', 'ನೇತಾಜಿ', 'ಗಾಂಧೀಜಿ ಕೊಟ್ಟ ನೆಹರು', 'ಶಾಸ್ತ್ರಿ' ಇವೇ ಮೊದಲಾದ ವ್ಯಕ್ತಿ ಗೀತ-ಸುನೀತ-ಗಳು ಇಡಿಯಾಗಿ ಅಲ್ಲದಿದ್ದರೂ ಬಿಡಿಯಾಗಿ ಅಲ್ಲಲ್ಲಿ ಆಯಾ ವ್ಯಕ್ತಿತ್ವನ್ನು ಮಿಂಚಿಸುತ್ತವೆ:

ತಮಸಿನಿಂ ಬೆಳಕಿನಡೆ ಶರಣ ವಾಙ್ಮಯ ತಂದೆ

* * * *

ಸೋಲು ಮೂಸದೆ ಮಹಾ ಸಾಹಸಿಗ ಸಂಚಾರಿ
ಬಾಳ ಕ್ಷೇತ್ರದಿ ಮೆರೆದ ಪೌರುಷದ ಪೂಜಾರಿ.

* * * *

ಸಂಧಾನ ಯಜ್ಞದಲಿ ಶಾಂತಿ ದೇವತೆಗಲ್ಲಿ
ನಿಮ್ಮ ಪ್ರಾಣದ ಹವಿಯ ಬಯಸಿದನೆ ಕಾಲ.

* * * *

ದುಡಿದೆ ದುಡಿದರೂ ಅವನ ಹೃದಯ ಚಿಗುರೆಲೆಯ ತೆರದಿ ಹಸಿರು.

'ಪ್ರಜಾರಾಜ್ಯದಿನದ', 'ಆಶೆ ಆಕಾಂಕ್ಷೆಗಳು', 'ದಿವ್ಯ ನಾಡಿ'ನ ಬಣ್ಣನೆ, 'ಭರತಜರ ಹಿರಿಮೆ', 'ಜೈ ಕಿಸಾನ ಹೇ', 'ಕಂಕಣ ಕಟ್ಟಲಿ', 'ನಾವು ಮುಟ್ಟುವ ಗುರಿ', 'ಮೆಟ್ಟು' 'ಈ ಕಾಳಿಂಗ' ಇವೇ ಮೊದಲಾದ ಇನ್ನುಳಿದ ಪದ್ಯಗಳು ಹೆಚ್ಚಾಗಿ ಹಿತೋಪದೇಶದಿಂದ ಕೂಡಿವೆ. 'ಬೆಂಕಿ ಬಿದ್ದಿದೆ ನೋಡು', ಪದ್ಯ ಇದ್ದುದರಲ್ಲಿ ಸ್ವಲ್ಪ ಭಿನ್ನವಾಗಿದೆ.

ನವೋದಯ ಮಾರ್ಗದ ಸಾಲುಮರಗಳ ನೆರಳಿನಲ್ಲಿ ಸಾಗಿ ಬಂದಿರುವ ಶ್ರೀ ಬಸುಪಟ್ಟದ ಅದೇ ಛಂದ-ಬಂಧಕ್ಕೆ, ಅದೇ ತಂಪು-ಇಂಪಿಗೆ, ಅದೇ ಭಾಷೆ-ಭಾವಕ್ಕೆ ಸಂಪೂರ್ಣ ಒಳಗಾಗಿದ್ದಾರೆ. ಅದರಿಂದಾಗಿ ಬಹುಶಃ ಹೆಚ್ಚಿನದನ್ನು ಸಾಧಿಸುವ ಪ್ರಯತ್ನ ಇಲ್ಲಿ ಕಂಡು ಬರುವದಿಲ್ಲ. ಆದರೂ ತನ್ನ ಜೀವನಾನುಭವದಿಂದ 'ಜೀವದುಂಬಿ ರಸ-ಭಾವ ಮಿಡಿದು ಹೃದಹೃದಯವನ್ನು ತುಡಿ'ಯುವದರಲ್ಲಿ ಹಿಂದೆ ಬಿದ್ದಿಲ್ಲ ಎನ್ನುವದು ಸಮಾಧಾನದ ಸಂಗತಿಯಾಗಿದೆ.

(೧೯೮೯)

## ೪೪

# ಗೀತ ಸುಮನ

ಪ್ರೊ. ಶ್ರೀನಿವಾಸ ತೋಫಖಾನೆಯವರ 'ಗೀತಸುಮನ'ಕ್ಕೆ ನಾಲ್ಕು ಮಾತು ಬರೆಯುವ ಸಂದರ್ಭದಲ್ಲಿ, ನಾಲ್ಕು ದಶಕಗಳಷ್ಟು ಹಿಂದಿನ ನಮ್ಮ ಸ್ನೇಹ-ಸಂಬಂಧದ ಸವಿನೆನಪು ಮರುಕಳಿಸುತ್ತಿದೆ. ನಾನು ಧಾರವಾಡದಲ್ಲಿ, ಅವರು ಬೆಳಗಾವಿಯಲ್ಲಿ ಅಭ್ಯಸಿಸುತ್ತಿದ್ದರೂ ಕಾವ್ಯಾಸಕ್ತಿಯೇ ನಮ್ಮ ಸ್ನೇಹಾಂಕುರಕ್ಕೆ ಕಾರಣವಾಯಿತು. ಬೆಳಗಾವಿಯ ಅಂದಿನ ಸಾಹಿತ್ಯಿಕ ಚಟುವಟಿಕೆಗಳಲ್ಲಿ ತೋಫಖಾನೆಯವರೂ, ಅವರ ಗೆಳೆಯರೂ, ಹಿರಿಯರಾದ ಡಿ. ಎಸ್. ಕರ್ಕಿ, ಎಸ್.ಡಿ. ಇಂಚಲ, ಬ. ಗಂ. ತುರಮರಿ ಮೊದಲಾದವರೊಡನೆ ಉತ್ಸಾಹದಿಂದ ಪಾಲ್ಗೊಳ್ಳುತ್ತಿರುವುದನ್ನು ನಾನು ಕಂಡಿದ್ದೆ. ೧೯೫೨ರಷ್ಟು ಹಿಂದೆಯೇ ಶ್ರೀ ಎಂ. ಅಕಬರ ಅಲಿ ಅವರ ಜೊತೆಗೂಡಿ 'ಅನ್ನ' ಎಂಬ ಚುಟುಕುಗಳ ಸಂಕಲನವನ್ನೂ ಅವರು ಪ್ರಕಟಿಸಿದ್ದರು. "ಇವರಿಬ್ಬರ ಕೈಯಲ್ಲಿ 'ಚುಟ್ಕ'ವು ವ್ಯಾಪ್ತಿಯನ್ನು ಪಡೆದಿದೆ" ಎಂದು ಶ್ರೀ ಗೋಕಾಕರಿಂದ ಅದು ಪ್ರಶಂಸೆ ಪಡೆದದ್ದೂ ಉಂಟು.

ಶ್ರೇಷ್ಠ ಸಂಸ್ಕೃತ ವಿದ್ವಾಂಸರಾದ ತೋಫಖಾನೆಯವರು ಹುಬ್ಬಳ್ಳಿಯಲ್ಲಿ ತಮ್ಮ ಅಧ್ಯಾಪಕ ವೃತ್ತಿಯಿಂದ ನಿವೃತ್ತರಾಗುವ ಮೊದಲು ಎರಡು ಮಹತ್ವದ ಕೃತಿಗಳನ್ನು ನೀಡಿ ಕಾವ್ಯರಸಿಕರ ಮನ್ನಣೆಗೆ ಪಾತ್ರರಾಗಿದ್ದಾರೆ. ಮೊದಲನೆಯದಾಗಿ, ಆಧುನಿಕ ಮರಾಠಿ ಕಾವ್ಯಗಳಲ್ಲಿ ಅತ್ಯಂತ ಜನಪ್ರಿಯವಾದ 'ಗೀತರಾಮಾಯಣ'ವನ್ನು ಅಷ್ಟೇ ಹೃದಯಂಗಮವಾಗಿ ಕನ್ನಡಕ್ಕೆ ಅನುವಾದಿಸಿ ಕನ್ನಡದಲ್ಲಿಯೂ ಅದನ್ನು ಜನಪ್ರಿಯಗೊಳಿಸಿದ್ದು. ಎರಡನೆಯದಾಗಿ ಜಯದೇವ ಕವಿಯ ಅಪೂರ್ವವಾದ 'ಗೀತಗೋವಿಂದ'ವನ್ನು ಮೂಲದ ಗೇಯಗುಣಕ್ಕೆ ಭಂಗ ಬರದಂತೆ ಹೊಸ ಛಂದೋಬಂಧಗಳಲ್ಲಿ ಕನ್ನಡಕ್ಕೆ ರೂಪಾಂತರಗೊಳಿಸಿದ್ದು.

ಮೇಲಿನ ಎರಡೂ ಕೃತಿಗಳ ಯಶಸ್ಸಿಗೆ ಅವರು ಸ್ವತಃ ಭಾವಗೀತಕಾರರಾಗಿರುವುದೂ ಒಂದು ಮುಖ್ಯ ಕಾರಣವಾಗಿದೆಯೆಂದರೆ ತಪ್ಪಾಗದು. ಅವರ ಪ್ರಥಮ ಕವನಸಂಕಲನ ('ಏಳು ಧನ್ಯಳೆ' - ೧೯೮೦)ದಲ್ಲಿ ಕಂಡುಬಂದ ಸೌಂದರ್ಯ ಪ್ರಜ್ಞೆ ಹಾಗೂ ಆರಾಧಕ ಮನೋಭಾವ ಪ್ರಸ್ತುತ ಸಂಕಲನದಲ್ಲಿ ಇನ್ನಿಷ್ಟು ಗಾಢವಾಗಿ ಮೈದೋರಿದೆ. ಅಲ್ಲಿಯಂತೆ ಇಲ್ಲಿಯ ಕವನಗಳೂ ಭಕ್ತಿ ಪ್ರಧಾನವಾಗಿದೆ. ಪ್ರಕೃತಿಪ್ರೇಮವನ್ನೂ ದಾಂಪತ್ಯಜೀವನದ ಪ್ರೀತಿ ವಾತ್ಸಲ್ಯಗಳನ್ನೂ ವ್ಯಕ್ತಪಡಿಸಿರುವಂತೆಯೇ ದೇಶಭಕ್ತಿ ಹಾಗೂ ಮನುಷ್ಯ ಜೀವನದ ಬಗೆಗಳ ಚಿಂತನಪರ ಗೀತಗಳೂ ಇಲ್ಲಿ ಪ್ರಾಮುಖ್ಯವನ್ನು ಪಡೆದಿವೆ.

ಕಾವ್ಯರಚನೆಯಲ್ಲಿ ಅವರ ಒಲವು ಯಾವ ಕಡೆಗಿದೆ ಎಂಬುದನ್ನು ಮೊದಲ ಕವನ 'ಗೀತಸುಮನ'ವೇ ಅಚ್ಚುಕಟ್ಟಾಗಿ ನಿರೂಪಿಸುತ್ತದೆ.

ಶಬ್ದಸೌಷ್ಠವ ಅರ್ಥಗೌರವ ನಾದಮಾರ್ದವ ಹೊಮ್ಮಿಸಿ
ಸ್ವರಸುಗಂಧವ ಸುತ್ತ ಸೂಸುವ ಲಯ ನಿಬಂಧವ ಮನ್ನಿಸಿ
ಮನಕೆ ಮೋದವನಿತ್ತು ನಿತ್ಯನವೀನ ಭಾವವ ಕರುಣಿಸಿ
ಅಮಿತ ವಿಭವವ ಪಡೆದ ಗೀತವ ಸುತನ ಕೈಯಲಿ ಬರೆಯಿಸು.

ಮೇಲ್ಕಾಣಿಸಿದ ಗುಣಗಳನ್ನು ತಕ್ಕ ಪ್ರಮಾಣದಲ್ಲಿ ಮೈಗೂಡಿಸಿಕೊಂಡಿರುವ ಇಲ್ಲಿಯ ಕವನಗಳು ಓದುಗರ ಮನಸ್ಸನ್ನು ಸಹಜವಾಗಿಯೇ ಮುದಗೊಳಿಸುತ್ತವೆ. 'ನವೀನಭಾವ'ದ ಕೊರತೆ ಕೆಲವರಿಗೆ ಕಾಣಿಸಬಹುದಾದರೂ ಅವುಗಳ ಗೀತಮಾಧುರ್ಯದ ಮೇಲ್ಮೆಯನ್ನು ಯಾರೂ ಕಡೆಗಣಿಸಲಾರರು.

ಭಕ್ತಿಪರ ಗೀತಗಳಲ್ಲಿ 'ರಾಮಮಂತ್ರ', 'ಜಯತು ಜಯ ಶ್ರೀರಾಮ', 'ಜಯದೇವನೆ ಗಜವದನೆ', 'ದ್ವಾರಕಾಧೀಶ', 'ಶ್ರೀ ಶಂಕರಾಚಾರ್ಯ' ಇವೇ ಮೊದಲಾದ ಪದ್ಯಗಳು ವಿಷಯವನ್ನು ಸಂಗ್ರಹಿಸಿಕೊಡುತ್ತ ವರ್ಣನಾತ್ಮಕವಾದ ಸ್ತೋತ್ರದ ಹಂತದಲ್ಲಿ ನಿಂತರೆ, 'ಓಂಕಾರ', 'ಆಲದೆಲೆಯ ಹಾಸುಗೆ' ಕವನಗಳಲ್ಲಿ ಪದಗಳು ಹೊಸಜೀವನ ಪಡೆದಂತೆ ತಕ್ಕ ಛಂದೋಗತಿಯಲ್ಲಿ ಭಾವ ಪ್ರಕಾಶಕ್ಕೆ ಅಣಿಗೊಳ್ಳುವದನ್ನು ಕಾಣುತ್ತೇವೆ.

ಚಿದಾಕಾಶದಲಿ ಓಂಕಾರವೆ ಧ್ರುವ -
ತಾರೆಯ ತೆರದಲಿ ಹೊಳೆಯುತಿರು.
ಆವರಿಸಿರುವಾ ತಮವ ನಿವಾರಿಸಿ
ಪಾರಮ್ಯದ ಪಥ ಬೆಳಗುತಿರು. (ಓಂಕಾರ)

ಪ್ರಳಯಾಬ್ಧಿಯ ಭೋರ್ಗರೆಯುವ
ಗಿರಿಯೆತ್ತರ ಏರಿಳಿಯುವ
ಜಲ ಸಂಚಯದಲಿ ತೇಲುವ
ಆಲದೆಲೆಯ ಹಾಸುಗೆ
ಕಡುಚೆಲ್ವಿಕೆ ಮೈದಳೆದಿಹ
ಚೈತನ್ಯವೆ ಘನವಾಗಿಹ
ಆನಂದದ ನಿಧಿ ಎನಿಸಿಹ
ಎಳೆಯ ಮುದ್ದುಕೂಸಿಗೆ (ಆಲದೆಲೆಯ ಹಾಸುಗೆ)

ಪ್ರಕೃತಿಗೀತಗಳಲ್ಲಿ ಸುಂದರವಾದ ಚಿತ್ರಗಳನ್ನು ಬಿಡಿಸುತ್ತಿರುವಂತೆಯೇ ಒಮ್ಮೊಮ್ಮೆ ಸರಳವಾದ ಬೋಧನೆ ಭಾವವನ್ನು ತೆಳುವಾಗಿಸಿ ಬಿಡುವದುಂಟು. 'ಹೊಳೆ', 'ಶುಭಕೋರಿಕೆ' ಇದಕ್ಕೆ ಉದಾಹರಣೆಯಾಗಬಲ್ಲವು. ಆದರೂ 'ಶುಭಕೋರಿಕೆ'ಯಲ್ಲಿಯ ಬನದ ವನಿತೆ ಪೂರ್ಣರೂಪಕವಾಗಿಯೇ ಮೂಡಿ ಬಂದಿದೆ.

ಅರುಣಕಾಂತಿಯ ತುಂಬಲೆಳಸುವಂತಹ ತುಂಬು
ಮಾರ್ದವವೆ ಮೈದಳೆವ ಎಸಳು ಎಂಟು
ಬೆರಸಿ ಸುರಸೌರಭವ ಅರಳಿನಿಂತಿಹ ಹೂವ
ಪಚ್ಚೆಯಾ ಬಟ್ಟಲಲಿ ಇರಿಸಿದುಂಟು;

'ಪಾರಿಜಾತ' ಕವನದ ಐದು ನುಡಿಗಳಲ್ಲಿ ಮೇಲಿನ ಈ ಒಂದು ನುಡಿ-ಚಿತ್ರ ಮನಸ್ಸಿನಲ್ಲಿ ಉಳಿದುಕೊಂಡರೆ, 'ಮಲ್ಲಿಗೆ' ಕವನ ಇಡಿಯಾಗಿಯೆ ಮನಸ್ಸನ್ನು ತುಂಬಿಕೊಳ್ಳುತ್ತದೆ. 'ಹೂವು-ದುಂಬಿ' ಹಾಗೂ 'ಚೆಲುವಿನಾಗರ ಚಂದಿರ' ಕವನಗಳ ಕೊನೆಯ ನುಡಿಗಳು ಸಂಸ್ಕೃತ ಕಾವ್ಯಗಳಲ್ಲಿಯ ಕಲ್ಪನಾಚಾತುರ್ಯವನ್ನು ನೆನಪಿಗೆ ತರುತ್ತವೆ.

ಪ್ರೀತಿ ಗೀತಗಳಲ್ಲಿ ನವುರಾದ ಭಾವ, ಅಲ್ಲಲ್ಲಿ ನವೀನ ಕಲ್ಪನೆಯೊಂದಿಗೆ ಮೆರುಗು ಪಡೆದಿದೆ. ಸ್ವಾತಿಮೋಡದ ಹನಿ ಶುಕ್ತಿಯ ಕೋಶದಲ್ಲಿ ಮುಕ್ತಾಯ ಫಲವಾಗುವ 'ಪ್ರಿಯನ ಕಾಣಿಕೆ' ಆ ಬಗೆಯದು. ಬಾಳಿನಲ್ಲಿ ನೂರೆಂಟು ಜನರನ್ನು ಸಂಧಿಸಬಹುದು. ಆದರೆ ದಾಂಪತ್ಯದ ಅನ್ಯೋನ್ಯತೆ ಎಲ್ಲಕ್ಕಿಂತ ಮಿಗಿಲಾದದ್ದೆಂಬ ಭಾವ 'ನಮ್ಮ ನಂಟು'ವಿನಲ್ಲಿ ಚಿತ್ರಿತವಾಗಿದೆ :

ನಮ್ಮದೊಂದೇ ಉಸಿರು, ಬೇರೆಬೇರೆಯ ಬಸಿರು
ಬಲು ಸೊಗಸು ನಮ್ಮ ಜೊತೆ ಅನ್ನ-ಕೆನೆಮೊಸರು.
ಈ ಸ್ನೇಹವನ ಹಸಿರು; ನೆಮ್ಮದಿಯ ತಂಬೆಲರು
ದ್ರಾಕ್ಷಿ ಸಕ್ಕರೆ ಜೇನು ಇದರೆದುರು ಒಗರು.

ಬಯಕೆ ಬಲವತ್ತರವಾಗಿ ಅದನ್ನು ಪಡೆವ ಛಲವೂ ಬಲವಾಗಿದ್ದರೆ ಗುರಿ ಹತ್ತಿರವಾಗುವದೆಂಬುದನ್ನು ಸೀತೆ, ವಿನತೆ, ದಮಯಂತಿಯರಿಗೆ ಒದಗಿದ ಕಠಿಣ ಪ್ರಸಂಗಗಳಿಂದ ನಿರೂಪಿಸುತ್ತ ದ್ರೌಪದಿಯ ದೃಷ್ಟಾಂತದೊಂದಿಗೆ 'ಬಯಕೆ ಸಫಲ' ಕವನ ಪರಿಣಾಮಕಾರಿಯಾಗಿ ಕೊನೆಗೊಳ್ಳುತ್ತದೆ:

ಮುಡಿ ಹಿಡಿದಿರೆ ದುಶ್ಯಾಸನ, ತೊಡೆತಟ್ಟಿರೆ ದುರ್ಯೋಧನ
ಜರಿದಿರೆ 'ಹಸು' ಎನುತ ಕರ್ಣ-ವಧೆಗೆ ಆ ದುರಾತ್ಮರ
ಕೃಷ್ಣೆಯ ಬಿಸಿಯುಸಿರೆ ಗಾಳಿ, ಭೀಮ ರೋಷದಗ್ನಿ ಹೋಳಿ
ಹಗೆಗಳೆಲ್ಲ ಭಸ್ಮ ಧೂಳಿ! ಬಯಕೆ ಫಲದ ಆಗರ !

ಊರ್ವಶಿ-ಪುರೂರವರ ಪ್ರಸಂಗದಲ್ಲಿ ಊರ್ವಶಿ ತಾನು ಗೆದ್ದು ಸೋತವಳೆಂದೂ ಪುರೂರವ ಸೋತು ಗೆದ್ದವನೆಂದೂ ಭಾವಿಸಿ ಅವನ ಬಗ್ಗೆ ಕಾತರಿಸುವಲ್ಲಿ ಪ್ರೇಮದ ಉತ್ಕಟತೆ ವ್ಯಕ್ತವಾಗಿದೆ. 'ಇನಿಯನ ಉಂಗುರ'ದಲ್ಲಿ ಶಕುಂತಲೆಯ ಚಿಂತೆಯನ್ನೂ ಅಷ್ಟೇ ಮನಮಿಡಿಯುವಂತೆ ಚಿತ್ರಿಸಲಾಗಿದೆ. 'ಮಗು'ವಿನಲ್ಲಿ ವಾತ್ಸಲ್ಯ ಭಾವ ಅರಳಿದೆ. ಅಳು-ನಗು ಬಾಳಿನ ಬಗೆ, ನೋವು ನಲಿವು ಜೀವನ-ಎಂಬುದನ್ನು ಮಗುವಿನ ಬದುಕಿನಿಂದ ಹಿರಿಯರು ಅರಿಯಬೇಕೆನ್ನುತ್ತಾರೆ ಕವಿ.

ಸಾಮಾಜಿಕ ಹಾಗೂ ಸಾಂಸ್ಕೃತಿಕ ಸ್ವರೂಪದ ಕೆಲವು ಕವನಗಳೂ ಇಲ್ಲಿವೆ. ಮಾತು ಮತ್ತು ಕೃತಿಯಲ್ಲಿ ಹೊಂದಾಣಿಕೆಯಿಲ್ಲದ, ಒಳಗೊಂದು ಹೊರಗೊಂದು ರೀತಿ ವರ್ತಿಸುವ ವ್ಯಕ್ತಿಗಳೇ ಇಂದು ಸಮಾಜದಲ್ಲಿರುವುದು 'ಬಲು ವಿಚಿತ್ರ'ವಾಗಿ ಕಂಡಿದೆ ಕವಿಗೆ. ಉದ್ವೇಗದಿಂದಲೇ ಅವನು ಪ್ರಶ್ನಿಸುತ್ತಾನೆ :

ಒಳಹೊರದಲಿ ತಾಳವಿಲ್ಲ
ಜೀವನಡಗಿಸಿಮುದು ಜಲ್ಲ
ಇದು ಉಗಾದಿ-ಸೆನಪಿಗಲ್ಲ !
ಆಡಿದಂತೆ ಮಾಡಬಲ್ಲ ಎದೆಗಾರಿಕೆ ಯಾರೊಳು ?

ದೀನ-ಧನಿಕ ಭೇದ ಸಾವಿನಲ್ಲಿ ಮಣ್ಣಾಗುತ್ತದೆ. ದಾರಿ ಹಲವು ಆದರೆ ಗುರಿ ಒಂದೇ ಎನ್ನುವದನ್ನು ಹೊಳೆ-ಕಡಲು, ಮರ-ಬೇರು ದೃಷ್ಟಾಂತಗಳಿಂದ 'ದಾರಿ ಗುರಿ' ಮನಗಾಣಿಸುತ್ತದೆ. 'ಬನ್ನಿ', 'ದೀಪಾವಳಿ', 'ಜೀಕೋಣ' ಪದ್ಯಗಳು ಆಯಾ ಹಬ್ಬಗಳ ನಿಜವಾದ ಅರ್ಥವನ್ನು ನಿರೂಪಿಸಿದರೆ ವೈಜ್ಞಾನಿಕ ಪ್ರಗತಿಯನ್ನು 'ನವ ಮನ್ವಂತರ'ದಲ್ಲಿ ಸ್ವಾಗತಿಸಲಾಗಿದೆ. ಸುಖಸೌಕರ್ಯದೊಂದಿಗೇ ಹೊಸ ಆಹ್ವಾನವನ್ನು ಅದು ಎಸೆಯುತ್ತಿರುವ ಸೂಚನೆಯೂ ಅಲ್ಲಿದೆ. ನಿತ್ಯಜೀವನದ ಕೊರತೆಗಳ ವಾಸ್ತವ ವಿವರಗಳೊಂದಿಗೆ 'ಇಲ್ಲೆನುವ ಇಲಿ' ಸರಳವಾಗಿದ್ದೂ ಪರಿಣಾಮಕಾರಿಯಾಗಿದೆ.

ಸೃಷ್ಟಿಯ ಸರ್ವ ಚಟುವಟಿಕೆಗಳನ್ನು ನಿತ್ಯನೂತನವೆಂಬಂತೆ ಕಂಡಾಗ ಅವುಗಳ ಹಿಂದಿನ ಪ್ರೇರಣೆಯ ಬಗ್ಗೆ ಜಿಜ್ಞಾಸೆ ಹುಟ್ಟುತ್ತದೆ. 'ಯಾರ ಪ್ರೇರಣೆ?' ಕವನದಲ್ಲಿ ಅದು ಸಮರ್ಥವಾಗಿ ಅಭಿವ್ಯಕ್ತಿ ಪಡೆದಿದೆ. ಸರ್ವ ಕಾರ್ಯಕ್ಕೆ ಕಾರಣವಾದ ಎಲ್ಲ ಪ್ರೇರಣೆಗೆ ಪ್ರೇರಣೆಯಾದ ಆ ಚೇತನವನ್ನು ಕವಿತೆಯ ಕೊನೆಯಲ್ಲಿ ಕವಿ ಹಿಡಿದಿಟ್ಟಿರುವುದು ಹೀಗೆ :

ವಿದ್ಯುದಲೆಯೊಲು ಜಗದೊಳೆಲ್ಲೆಡೆ ಹರಿಯುತಿದೆ 'ಹರಿ' ಎನಿಪುದು
ಸತ್ಯ-ಸುಂದರ ಮತ್ತೆ ಶುಭಕರ, ಎಂದೆ 'ಹರ' ತಾನಾದುದು.

'ದೋಸೆ' ರುಚಿಕರವಾದ ಬಣ್ಣನೆಯ ಸ್ವಭಾವೋಕ್ತಿ ಆಕರ್ಷಿಸಿದರೆ 'ಬಾಟಲಿ' ಅದರ ಬಗೆಬಗೆಯ ಬಳಕೆಗಳ ವಿವರಗಳಿಂದ ಓದಿಸಿಕೊಳ್ಳುತ್ತದೆ.

'ಬದುಕು', 'ಬಿಂದಿಗೆ', 'ಓ ಕಾಲವೆ!', 'ಹೆಮ್ಮರ', 'ಶಿಕ್ಷೆ' ಮೊದಲಾದ ಚಿಂತನಪರ ಕವಿತೆಗಳಲ್ಲಿ ಜೀವನದ ಬಗ್ಗೆ, ಕಾಲದ ಬಗ್ಗೆ ಕವಿಯ ಆಳವಾದ ಅನುಭವ ಹಾಗೂ ಪ್ರೌಢವಾದ ವಿವೇಚನೆ ಕಂಡುಬರುತ್ತದೆ.

ಬೇಡವೆಂದರೆ ಬಿಡದು ಈ ಜಗ, ಬೇಕು ಎಂದರು ಸಿಕ್ಕದು
ಬಂದುದಾನಂದದಲಿ ಅಪ್ಪದೆ ನಿತ್ಯನೆಮ್ಮದಿ ದಕ್ಕದು.

ಎಂಬ ಪಲ್ಲವಿಯೊದಿಗೆ ಪ್ರಾರಂಭವಾಗುವ 'ಬದುಕು' ಮುಂದಿನ ನಾಲ್ಕುನುಡಿಗಳಲ್ಲಿ ಹೊಳೆಯ ಆಳ ತಿಳಿಯುವ ಮೊದಲೆ ಸೆಳವಿಗೆ ಬಿದ್ದ ಸ್ಥಿತಿಯನ್ನೂ, ತೆರೆಯು ಬೀಳುವವರೆಗೆ ಜೀವಕ್ಕೆ

ಪಾತ್ರಾಭಿನಯದ ಅನಿವಾರ್ಯತೆಯನ್ನು ಹೊಸದಾರಿಗೆ ಮೊದಲ ಬಾರಿಗೆ ಬಂದ ಪಯಣಿಗನು ಎದುರಿಸಬೇಕಾದ ಸಂಕಟ ಮೊದಲಾದ ರೂಪಕಗಳಲ್ಲಿ ಹಿಡಿದು ಹಿಗ್ಗು-ಕುಗ್ಗು, ಸುಖ-ದುಃಖ, ಸರಸ-ವಿರಸಗಳೊಂದಿಗೆ ಕಾಲ 'ಅನುಗಾಲ ಗಾಲಿಯ ತೆರದಲಿ' ಉರುಳುತ್ತಿರುವುದನ್ನು ದಟ್ಟವಾಗಿ ಚಿತ್ರಿಸುತ್ತದೆ. ಇದೇ ರೀತಿ 'ಬಿಂದಿಗೆ' ಪದ್ಯದಲ್ಲಿ 'ಜಡ ಒಡಲಿಂಗೆ ಜಲವನು ತುಂಬಿಸಿಕೊಳ್ಳಬೇಕೆಂಬ' ಆದರ ಮುಂದಿನ ಕ್ರಿಯೆಗಳ ವಿವರದಲ್ಲಿ ಜೀವನ ಯೋಗದ ದರ್ಶನ-ನಿದರ್ಶನಗಳಿವೆ. ವಿಶಾಲಪ್ರಪಂಚದ ಪ್ರತೀಕವಾಗಿ 'ಹೆಮ್ಮರ' ಕವಿತೆ ಕಣ್ಣೆದುರು ನಿಲ್ಲುತ್ತದೆ. ಅದರ ಬಿಳಲಿನ ಎಳೆಯಿಂದ ಜನಿಸಿ ಮನುಷ್ಯ 'ಹುಟ್ಟಿದೊಡನೆ ಹಿಡಿದುಕೊಳ್ಳುತ್ತ ಜೀಕುವ ನಿರಂತರ' ಚಿತ್ರಣ ಮಾರ್ಮಿಕವಾಗಿದೆ. ಕೊನೆಮೊದಲಿಲ್ಲದೆ ಸಂತತ ಪ್ರವಹಿಸುವ ಕಾಲದ ಅಗಮ್ಯತೆ ಆಮೇಯತೆಗಳ ಶಕ್ತಿಯುತವಾದ ನಿರೂಪಣೆ 'ಓ ಕಾಲವೆ!' ಪದ್ಯದಲ್ಲಿದೆ, ಅದರ ಛಂದವೂ ಕಾಲದ ವೇಗವನ್ನನುಸರಿಸುವಂತೆ ಮನೋಜ್ಞವಾಗಿದೆ :

ನಿನಗಧೀನ ಹುಟ್ಟು ಸಾವು
ನೀನೆ ಹಾರ, ನೀನೇ ಹಾವು
ನಿನ್ನಿಂದಲೆ ನೋವು ನಲಿವು
ಒಮ್ಮೆ ಸೋಲು ಒಮ್ಮೆ ಗೆಲುವು
ಈ ಬಗೆ, ಓ ಕಾಲವೆ !
ಬಲು ಸೋಜಿಗವಲ್ಲವೆ?

ಬಾಲ್ಯ, ಹರಯ, ಸಂಸಾರ, ಮುಪ್ಪು - ಈ ಅವಸ್ಥೆಗಳಲ್ಲಿ ಜೀವ ನಾಟ್ಯಲೋಲನಾಗಿ ಜಗದ ರಂಗಭೂಮಿಯಲ್ಲಿ ಕೊನೆಯಿಲ್ಲದ ಕುಣಿತ-ಮಣಿತಗಳಲ್ಲಿ ತೊಡಗಿರುವುದನ್ನು 'ಅಭಿನಯದಲಿ ಕುಶಲನು' ಕವಿತೆ ಮನಮುಟ್ಟುವಂತೆ ಚಿತ್ರಿಸುತ್ತದೆ. ಹೀಗೆ ಈ ಪದ್ಯಗಳ ಉದ್ದೇಶ ವೈರಾಗ್ಯವನ್ನು ಬೋಧಿಸುವದಾಗಿರದೆ ಜೀವನದ ಆಗಾಧತೆಯ ಅರಿವಿನೊಂದಿಗೆ ಹೇಗೆ ಬದುಕಬೇಕೆಂಬುದನ್ನು ಪರ್ಯಾಯವಾಗಿ ಸೂಚಿಸುವುದಾಗಿದೆ.

'ಕುಸುಮಾಂಜಲಿ' ಹಾಗೂ 'ಶೂಲಿಯ ತಾಂಡವ' ಪದ್ಯಗಳು ಕವಿಯ ಅನುವಾದ ಕಲೆಗೆ ಉತ್ತಮ ಸಾಕ್ಷಿಯಂತಿವೆ.

ದೇಶಭಕ್ತಿಯ ಕೆಲ ಪದ್ಯಗಳು ಬೋಧನೆಯಿಂದಾಗಿ ವಾಚ್ಯವೆನಿಸಿದರೂ 'ಮತಯಜ್ಞ'ದ ಪ್ರಚಲಿತ ರಾಜಕೀಯವಿಮರ್ಶೆ ಗಮನಾರ್ಹವಾಗಿದೆ.

ಸ್ವಾತಂತ್ರ್ಯಪೂರ್ವದ ಹಾಗೂ ತರುವಾಯದ ಭಾರತೀಯ ರೀತಿ ನೀತಿಗಳ ವೈರುಧ್ಯಗಳನ್ನು 'ಅಂದು-ಇಂದು' ನೇರವಾಗಿ ನಿರೂಪಿಸುತ್ತದೆ. ಸುಮಾರು ಎರಡುನೂರು ಸಾಲುಗಳಷ್ಟು ದೀರ್ಘವಾಗಿರುವ 'ಸ್ವಾತಂತ್ರ್ಯವೃಕ್ಷ' ಕವಿತೆ ಸ್ವಾತಂತ್ರ್ಯದ ತರುವಾಯ ನಮ್ಮ ದೇಶವ ಸ್ಥಿತಿಗತಿಯನ್ನು ಅದಕ್ಕೊದಗುತ್ತಿರುವ ಅನಿಷ್ಟಗಳನ್ನು, ಜನತೆಯ ಹಾಗೂ ರಾಜಕೀಯ ಧುರೀಣರ ಲೋಪದೋಷಗಳನ್ನು ಅತ್ಯಂತ ಕಳಕಳಿಯಿಂದ ಚಿತ್ರಿಸುತ್ತ ಈ ವೃಕ್ಷ ರೋಗಮುಕ್ತವಾಗಿ ನಳನಳಿಸಿ ಬೆಳೆದು ಕಲ್ಪತರುವಾಗುವ ಆಶಾವಾದದಿಂದ ಕೂಡಿದೆ.

ತನ್ನ ಕಾವ್ಯದ ಬಗ್ಗೆ ಯಾವುದೇ ಬಗೆಯ ಹಮ್ಮುಬಿಮ್ಮುಗಳಿಲ್ಲದ ವಿನಯವಂತಿಕೆ ಈ ಸಂಗ್ರಹದುದ್ದಕ್ಕೂ ಕಂಡುಬರುತ್ತದೆ. ಕನ್ನಡಾಂಬೆಯ ಕಾವ್ಯಭಾಂಡಾರದೆದುರು 'ಭವತಿಭಿಕ್ಷಾಂ ದೇಹಿ'ಯೆಂದು ಕೋರುವ 'ಅಮೃತಹಸ್ತ' ಕವನವೇ ಇದಕ್ಕೆ ಸಾಕ್ಷಿ :

ನಿನ್ನ ಧನ ಕನಕಗಳ ಸೂರೆಗೊಳ್ಳುವ ಶೌರ್ಯ
ಸಾಹಸದ ಗುಣವೆನಗೆ ಇಲ್ಲ ಎದೆಯೊಳಗೆ,
ಎನ್ನ ಮನದುಪವನದಿ ನಲಿವ ಸುಮನಗಳನ್ನು
ನಿನ್ನಡಿಯಲಿಡಲೆಂದು ಬಂದಿರುವೆ ಬಳಿಗೆ.

ಕನ್ನಡ ಕಾವ್ಯರಸಿಕರು ಅಷ್ಟೇ ಸೌಮನಸ್ಯದಿಂದ ಈ ಸುಮಗಳನ್ನು ಕೈಗೆತ್ತಿಕೊಳ್ಳುವರೆಂದು ಆಶಿಸಿದ್ದೇನೆ.

ಒಟ್ಟಿನಲ್ಲಿ ಸನಾತನ ಜೀವನದ ಮೌಲ್ಯಗಳನ್ನು ನಂಬಿ ನಡೆಯುತ್ತಿರುವ ಕವಿ ಅವುಗಳನ್ನು ಕಾಪಾಡಿಕೊಳ್ಳುವಲ್ಲಿಯೂ ಅಷ್ಟೇ ಆಸ್ಥೆ ವಹಿಸಿದ್ದಾರೆ. ಕನ್ನಡದ ನವೋದಯ ಕಾವ್ಯಸಂಪ್ರದಾಯದಲ್ಲಿಯೇ ತಮ್ಮ ಕಾವ್ಯರಚನೆಯ ಸಾಫಲ್ಯವನ್ನು ಕಂಡುಕೊಳ್ಳುವ ಅವರ ಪ್ರಯತ್ನವನ್ನು ಯಾರೂ ಪ್ರಶ್ನಿಸುವಂತಿಲ್ಲವಾದರೂ ಭಾಷೆ ಜಡವಾಗದಂತೆ ನೋಡಿಕೊಳ್ಳುವದು ಅವಶ್ಯವೆನಿಸುತ್ತದೆ. ಛಂದಸ್ಸು ಹಾಗೂ ಪ್ರಾಸಗಳ ಬಳಕೆ ಭಾವಾನುಸಾರಿಯಾದಲ್ಲಿ ಮಾತ್ರ ಜೀವಂತಿಕೆಯನ್ನುಳಿಸಿಕೊಳ್ಳುವದು ಸಾಧ್ಯವಾಗುತ್ತದೆ. ಅಲ್ಲಲ್ಲಿ ಸಂಸ್ಕೃತ ಕಾವ್ಯದ ಪ್ರಭಾವ ಕುಡುಬಂದರೂ ಪಾಂಡಿತ್ಯಕ್ಕೆ ಯಜಮಾನಿಕೆ ವಹಿಸಿಕೊಡದೆ ಅದನ್ನು ಸೇವಕನಂತೆ ದುಡಿಸಿಕೊಂಡಿರುವುದು ಮೆಚ್ಚತಕ್ಕ ಸಂಗತಿಯಾಗಿದೆ.

ಇತ್ತೀಚೆಗೆ ದೈಹಿಕವಾಗಿ ಹೊರಗಣ್ಣಿನ ದೃಷ್ಟಿಗೆ ಶ್ರೀ ತೋಫಖಾನೆಯವರು ಎರವಾಗಿದ್ದರೂ ಅವರ ಜೀವನೋತ್ಸಾಹ ಹಾಗೂ ಕಾವ್ಯೋಪಾಸನೆಗೆ ಯಾವ ಆತಂಕವೂ ಒದಗದಿರುವದು ಅವರು ಸಾಧಿಸಿಕೊಂಡು ಬಂದ ಆದರ್ಶ ಜೀವನದ ಫಲವೆಂದು ಭಾವಿಸುತ್ತೇನೆ. 'ಸೌಂದರ್ಯವೆಂಬುದು ಕಣ್ಣಿನ ತುತ್ತಲ್ಲ ಕಣ್ಣಿಗೂ ಕಣ್ಣಾಗಿ ಒಳಗಿಹುದು' ಎಂದು ಬೇಂದ್ರೆ ಹಾಡಿದ್ದುಂಟು. ಗೆಳೆಯ ಶ್ರೀನಿವಾಸ ತೋಫಖಾನೆಯವರ ಒಳಗಣ್ಣಿನ ಬೆಳಕು ಅವರ ಕಾವ್ಯ ಸೌಂದರ್ಯವನ್ನು ಇನ್ನಿಷ್ಟು ಉಜ್ವಲಗೊಳಿಸಲೆಂದು ಹಾರೈಸುತ್ತೇನೆ.

(೧೯೮೯)

೪೫

## ಬೇವು - ಬೆಲ್ಲ

"ಬೇವು-ಬೆಲ್ಲ"ದ ಕರ್ತೃ ಶ್ರೀ ಸಿ. ವಾಯ್. ಕೋಡಮಗ್ಗಿಯವರು ನಮ್ಮ "ಕಾವ್ಯಾನುಭವ ಮಂಟಪ"ದ ಸದಸ್ಯರಲ್ಲಿ (೧೯೪೮-೫೧) ಒಬ್ಬರಾಗಿದ್ದರು. ಸಂಗೀತದಲ್ಲಿ ಹೆಚ್ಚಿನ ಆಸಕ್ತಿ ಹೊಂದಿದ್ದ ಅವರು ಆಗೀಗ ಕವನಗಳನ್ನೂ ಬರೆಯುತ್ತಿದ್ದರು. ಎಂಥ ಪದ್ಯವಿದ್ದರೂ ಅದನ್ನು ಹಾಡಿತೋರಿಸಿ ಸ್ನೇಹಿತರಿಂದ ಮೆಚ್ಚುಗೆ ಪಡೆಯುತ್ತಿದ್ದರು. ಪ್ರಸ್ತುತ ಸಂಗ್ರಹಕ್ಕೆ ನನ್ನ ಮುನ್ನುಡಿಯನ್ನು ಅಪೇಕ್ಷಿಸಿದಾಗ ಅಂದಿನ ದಿನಗಳೆಲ್ಲ ನನ್ನ ಕಣ್ಣೆದುರಿಗೆ ಬಂದವು. ಈ ನಡುವೆ ನಾಲ್ಕು ದಶಕಗಳೇ ಉರುಳಿ ಹೋದವು. ಅವರ ಕವನಗಳು ಅಚ್ಚಾದುದನ್ನು ನಾನೆಲ್ಲಿಯೂ ನೋಡಲಿಲ್ಲ. ಎಂದೋ ಒಮ್ಮೊಮ್ಮೆ ಭೇಟಿಯಾದಾಗ ತಮ್ಮ ಕಚೇರಿ ಕೆಲಸದ ಹಾಗೂ ಸಂಸಾರದ ಸಂಕಷ್ಟಗಳನ್ನು ಹಂಚಿಕೊಂಡದ್ದುಂಟು. ಅವರೀಗ ನಿವೃತ್ತರಾಗಿಯೇ ಹತ್ತುವರ್ಷಗಳ ಮೇಲಾಯಿತು. ಮೆಚ್ಚಿನ ಮಡದಿಯನ್ನು ಕಳೆದುಕೊಂಡು ಹೆಚ್ಚಿನ ಆಘಾತವನ್ನನುಭವಿಸಿ ಮಕ್ಕಳ ಯೋಗಕ್ಷೇಮವನ್ನು ನೋಡಿಕೊಳ್ಳುತ್ತ, ಆಗಾಗ ಕವನ ರಚಿಸುತ್ತ ಅದರಲ್ಲಿಯೇ ಸಾಂತ್ವನ ಪಡೆಯಲು ಹವಣಿಸುತ್ತಿದ್ದಾರೆ.

ಈ ಮೊದಲು "ಹೊಂಗಿರಣ" ಎಂಬ ಕವನ ಸಂಗ್ರಹವೊಂದನ್ನು ಇಪ್ಪತ್ತೆರಡು ವರ್ಷಗಳ ಹಿಂದೆಯೇ ಅವರು ಪ್ರಕಟಿಸಿದ್ದುಂಟು. ಪ್ರಸ್ತುತ ಸಂಗ್ರಹಕ್ಕೆ ಎರಡು ಮಾತು ಬರೆಯುವಲ್ಲಿ ಸ್ನೇಹದ ಬತ್ತಿಯನ್ನು ಮುಂದಕ್ಕೆ ಚಾಚುವ ಸಂದರ್ಭದ ಸಂತೋಷ ನನ್ನದಾಗಿದೆ.

ಜೀವನದಲ್ಲಿ ಹಲವು ಬಗೆಯ ಕಷ್ಟ ನಷ್ಟಗಳನ್ನು ಅನುಭವಿಸಿದ ಜೀವದ ಆತ್ಮ ನಿವೇದನೆಯೇ ಬಹುಶಃ ಇಲ್ಲಿಯ ಎಲ್ಲ ಕವಿತೆಗಳ ವಸ್ತುವಾಗಿದೆ. "ಬೇವು-ಬೆಲ್ಲ"ದಲ್ಲಿ ಬೇವಿನ ಅಂಶವೇ ಹೆಚ್ಚಾಗಿರುವಂತೆ ಕಂಡುಬಂದರೂ ಬೇವಿನ ಕಹಿಬಾಳಿಲ್ಲಿ ಹೂವಿನ ನರುಗುಂಪು ಸೂಸಿದಂತೆ ಕವನ ರಚನೆ ನೊಂದ ಹೃದಯಕ್ಕೆ ಅಷ್ಟಿಷ್ಟು ನೆಮ್ಮದಿ ನೀಡಿರಬಹುದಾಗಿದೆ. ತಾನು ನಂಬಿದ ದೈವೀ ಶಕ್ತಿಯಲ್ಲಿ ತನ್ನ ದುಃಖವನ್ನು ತೋಡಿಕೊಳ್ಳುವತ್ತ ಅದಕ್ಕೆ ಮೊರೆ ಇಡುವ ಆರ್ತಧ್ವನಿ ಬೇವು-ಬೆಲ್ಲದ ಎಲ್ಲ ಸಾಲುಗಳಲ್ಲಿ ಮರುಕಳಿಸುತ್ತ ಪ್ರತಿಧ್ವನಿಗೊಳ್ಳುತ್ತ ಹೋಗಿದೆ ಅದರ ತೀವ್ರತೆಗೆ ಕೆಲವು ಸಾಲುಗಳನ್ನು ಇಲ್ಲಿ ಉದಾಹರಿಸಬಹುದು.

ಬವಣೆದುಂಬಿದ ಬಾಳ ಬೇಗೆಯ ತಾಳಲಾರೆನು ದೇವನೆ
ಕರುಣೆದುಂಬಿದ ನಯನದಿಂದಲಿ ಒಮ್ಮೆ ನೋಡೆಲೊ ಕಾವನೆ

* * * *

ಕಲ್ಲುಕರಗುವ ತೆರದಿ ಬೇಡಿದರಿಲ್ಲ ಕರುಣೆಯ ಹರನಿಗೆ

* * * *

ಕರುಬುಗೊಂಡಿಹ ಜಗವ ನೋಡುತ ಕರಗಿ ಹೋಗಿದೆ ಸನ್ಮತಿ
ಉರಿದುಹೋಗುವ ಮುನ್ನ ನಿನ್ನಯ ಧರೆಯು ಹೊಂದಲಿ ಜಾಗ್ರತಿ.

ಉಳಿದ ಕವಿತೆಗಳಲ್ಲಿ ಕವಿಯ ನಿಸರ್ಗಪ್ರೇಮ ವರ್ಣನಾತ್ಮಕವಾಗಿ ವ್ಯಕ್ತಗೊಂಡಿದೆ :

ಹೂಗೊಂಚಲು ಸುರಿದಿವೆ ಭೂದೇವಿಯ ಸಿಂಗರಿಸೆ
ಋತುರಾಜನು ಚುಂಬಿಸಿ ಮತ್ತೇರಿದೆ ಮೇದಿನಿಗೆ

ಪ್ರಕೃತಿಸೌಂದರ್ಯವೂ ಪರಮಾತ್ಮನ ಕೃಪೆ ಎಂಬ ಉದಾತ್ತಭಾವನೆ ಕವಿಗಿದೆ.

ಎಲ್ಲೆಡೆ ಸವಿಸಿಂಚನ ಸುಮಸಂಚಯವರಳಿಹುದು
ಸುರಸುಂದರ ಸೌಂದರ್ಯವು ಪರಮಾತ್ಮನ ಕೃಪೆಯು

* * * *

ಬಾನಲಿ ತೇಲುತಿಹ ಬಿಳಿಮೋಡ ನೋಡಿದೊಡೆ
ದೈವದರುಶನದಾನಂದವುಕ್ಕಿ ಹರಿಯುವದು.

ದೀವಳಿಗೆಯಲ್ಲಿ ಏರಿಸಿದ ಆಕಾಶಬುಟ್ಟಿಗಳಲ್ಲಿಯೂ ಕವಿ ಕಾಣುವದು "ಹಿರಿಯರಾತ್ಮಪ್ರಭೆಯ ಚೆಂಬೆಳಕು", "ಕಾರ್ಮೋಡ ಕವಿದಾಗ ಮಿಂಚಾಗಿ ಬೆಳಗೀದ" ದೈವೀಕರುಣೆಯನ್ನು ಅವನು ಅನುಭವಿಸಿದ್ದಾನೆ. "ಸೀಗೆ ಹುಣ್ಣಿವೆ", "ನಕ್ಕರೆ ಸಗ್ಗ"ದಂತಹ ಹರುಷವನ್ನು ಹೊರಸೂಸುವ ಒಂದೆರಡು ಪದ್ಯಗಳೂ ಇಲ್ಲಿವೆ.

ಹರಕರುಣೆ ಹರಿಕರುಣೆ ಯಾವ ದೇವಿಯ ಕರುಣೆ
ಎನ್ನ ಜೀವನ ದಾರಿದೀಪವಾಗದೆ ಹೋಯ್ತು,
ಜೀವಮಾನವೂ ಮನಕೆ ಕಾವ್ಯರಸವನು ಎರೆದು
ಕಾಪಿಡುವ ಸರಸತಿಯ ನೆನೆದು ಹಾಡುವೆ ಮುದದಿ

ಎಂದಿದ್ದಾನೆ ಕವಿ. ಛಂದಸ್ಸು ಹಾಗೂ ವಸ್ತುಗಳ ವೈವಿಧ್ಯದೊಂದಿಗೆ ಭಾಷೆಯ ಹೊಸತನವೂ ಬೆಸೆದುಕೊಂಡು ಕಾವ್ಯರಚನೆಯ ಮುಂದಿನ ಮೆಟ್ಟಲನ್ನು ಅವರು ಏರುವಂತಾಗಲಿ ಎಂದು ಹೃತ್ಪೂರ್ವಕ ಹಾರೈಸುತ್ತೇನೆ.

(೧೯೮೯)

೪೬

## ಕಣ್ಣು ಹೊಡಿ

"ನಕ್ಷತ್ರಗಳು" ಹನಿಗವನಗಳ ಮಿಣುಕಿನಿಂದ ಕಾವ್ಯಮಂದಿರದಲ್ಲಿ ಇಣುಕಿದ ಶ್ರೀ ಡಿ.ಬಿ. ಥಂಗ ಆಗಲೇ "ಕಣ್ಣು ಹೊಡೆ"ಯುವುದರಲ್ಲಿ ಪಳಗಿರುವದು ಅಚ್ಚರಿಯ ಸಂಗತಿಯೇನೂ ಅಲ್ಲ. ಆ ಮೂಲಕ ನಿಜವಾದ ಆಸಕ್ತಿಯಿಂದ ಕಾವ್ಯವನ್ನು ಒಲಿಸಿಕೊಳ್ಳುವ ಪ್ರಯತ್ನ ಇಲ್ಲಿಯ ಕವನಗಳಲ್ಲಿ ಕಂಡುಬರುತ್ತಿದೆ. ಹುಡುಗಾಟ, ಚಿನ್ನಾಟದ ಉಬ್ಬಿನಲ್ಲಿ ಕೆಲವು ಪುಬ್ಬು ಹಾರಿಸಿದರೆ, ಸಂಕೇತ, ಪ್ರತೀಕಗಳ ಹೊಸತಿಲಲ್ಲಿ ನಿಂತು ಕೆಲವು ಹೆಚ್ಚಿನ ನಿರೀಕ್ಷೆಯನ್ನೂ ಹುಟ್ಟಿಸುವಂತಿವೆ. 'ಕುಸ್ತಿ', 'ಸೊಳ್ಳೆಗಳು', 'ಡೊಂಬರಾಟ', 'ಒಂದು ಹೊಲದ ಕಥೆ' ಇತ್ಯಾದಿ ಪದ್ಯಗಳು ಇದಕ್ಕೆ ಉದಾಹರಣೆಯಾಗಿವೆ.

"ಕವಿತೆಗಳು" ಪದ್ಯದಲ್ಲಿ ಅವು ವಿವಿಧ ಬಗೆಯಾಗಿರುವುದನ್ನು ಕಂಡುಕೊಂಡಿರುವ ಇವರು ಅರ್ಥಪೂರ್ಣವಾದದ್ದನ್ನು ಮೆಚ್ಚಿಕೊಂಡರೂ ನೈಸರ್ಗಿಕವಲ್ಲದ ಅಧ್ಯಾತ್ಮ, ಸಮಾಜಕ್ಕೆ ಹೊಂದದಿರುವ ಆದರ್ಶವನ್ನು ಹೊರತುಪಡಿಸಿದ್ದಾರೆ.

ಓದುತ್ತ ಹೋದಂತೆ
ಇನ್ನೂ ಹಲವು ಕವಿತೆಗಳು
ಲೇಪಿಸಿಕೊಂಡಿವೆ ಸ್ನೋ ಪೌಡರ ಪ್ರಾಸ;
ಕಾರಣ
ಹೃದಯ ತಾಳಕೆ ಗತ್ತು ಕೊಡಲು
ಚೆಲುವು ನೀಡಲು
ಆಕರ್ಷಿಸುತ್ತವೆ ಈ ಸುಂದರ ಕವಿತೆಗಳು

ಎಂದು ತಮ್ಮ ಒಲವನ್ನು ಸೂಚಿಸಿದಂತಿದೆ. 'ನಮ್ಮ - ನಿಮ್ಮ ನಡುವೆ ಬಂಡಾಯ'ಕ್ಕೆ 'ಬೇಕು ಹದಿಪರೆಯದ ಪ್ರಾಯ' ಎಂದು ಬಯಸಿದರೂ

ಹೀಗೆಲ್ಲ ಹಾಲನ್ನು
ಉಕ್ಕಿಸಿ,
ಬೆಕ್ಕಿನ ಬಾಯಿಗೆ ನೆಕ್ಕಿಸುವ

ಮುನ್ನ ಕೆನೆಹಾಲನ್ನು ಜಪ್ಪಿಸಿಡುವದು
ಲೇಸು

ಎಂಬ ಎಚ್ಚರಿಕೆ 'ಯೌವನ'ದಲ್ಲಿ ಮೂಡಿಬಂದಿರುವುದು ವಿಶೇಷ.

ಆಡುಮಾತಿನ ಸೊಗಸನ್ನು ಈ ಕವಿ ಬಲ್ಲನಾದರೂ ಅದರ ಲಯವನ್ನು ಇನ್ನೂ ಸಮರ್ಪಕವಾಗಿ ಹಿಡಿಯಲೆತ್ನಿಸಿ, ವಾಚಾಳಿತನಕ್ಕೆಡೆಗೊಡದಂತೆ ಭಾಷೆಯನ್ನು ತಕ್ಕ ಪರಿಷ್ಕಾರದೊಂದಿಗೆ ಬಳಸುವತ್ತ ಲಕ್ಷ್ಯವಹಿಸಿ, ಜೀವನಾನುಭವ ತನ್ನ ಆಳ ಹಾಗೂ ವಿಸ್ತಾರದೊಂದಿಗೆ ಗಂಭೀರವಾದ ಚಿಂತನೆಗೂ ಎಡೆಗೊಡುತ್ತ ಯಶಸ್ಸಿನ ಹಾದಿಯಲ್ಲಿ ಈ ಯುವಕವಿ ಮುದುವರಿಯಲೆಂದು ಹಾರೈಸುತ್ತೇನೆ.

(೧೯೮೯)

## ೪೭

# ಜೇನ್ಗೂಡು

೧೯೮೭ ಆಗಸ್ಟ ತಿಂಗಳು, ಸೊಲ್ಲಾಪುರದ ಸಿದ್ಧರಾಮನ ಸನ್ನಿಧಿಯಲ್ಲಿ ನಡೆದ ಗಡಿನಾಡ ಕನ್ನಡ ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ಕವಿಗೋಷ್ಠಿಯ ಉದ್ಘಾಟನೆ ನೆರವೇರಿಸುವ ಸಂತೋಷ ನನ್ನ ಪಾಲಿಗೆ ಬಂದಿತ್ತು. ಅಂದಿನ ಗೋಷ್ಠಿಯಲ್ಲಿ ಭಾಗವಹಿಸಿದ ಹಲವಾರು ಹಿರಿಕಿರಿಯ ಕವಿಗಳು ಜನಮನವನ್ನು ರಂಜಿಸುವಲ್ಲಿ ಯಶಸ್ವಿಯಾಗಿದ್ದರು. ಸಮ್ಮೇಳನದ ಸಹಕಾರ್ಯದರ್ಶಿಯಾಗಿ, ಕವಿಗೋಷ್ಠಿಯ ಸ್ವಾಗತ ಭಾಷಣ ಮಾಡಿದ ಶ್ರೀ ಧರೇಂದ್ರನಾಥ ಬಿದರಕೋಟಿಯವರ ಉತ್ಸಾಹ. ಕಾರ್ಯದಕ್ಷತೆ, ಕನ್ನಡ ಪ್ರೇಮವನ್ನು ನಾನು ಆಗಲೇ ಮೆಚ್ಚಿಕೊಂಡಿದ್ದೆ. ಗಡಿನಾಡು ಪ್ರಕಾಶನದ ಪ್ರಕಾಶಕ ಮತ್ತು ಸಂಪಾದಕರಾಗಿ, ಅಕ್ಕಲಕೋಟೆ ಕನ್ನಡ ಸೇವಾಸಂಘದ ಪ್ರಧಾನ ಕಾರ್ಯದರ್ಶಿಯಾಗಿ; ಗಡಿನಾಡು ಯುವ ಬರಹಗಾರರ ಬಳಗದ ಕೇಂದ್ರ ಸಮಿತಿಯ ಅಧ್ಯಕ್ಷರಾಗಿ ಅವರು ನಿಷ್ಠೆಯಿಂದ ಕೆಲಸ ಮಾಡುತ್ತಿರುವುದು ಇದಕ್ಕೆ ಸಾಕ್ಷಿಯಾಗಿದೆ. ಗಡಿನಾಡಿನಲ್ಲಿರುವ ಕನ್ನಡ ತರುಣ ಬರೆಹಗಾರರು ಅನುಭವಿಸುತ್ತಿರುವ ಪ್ರೋತ್ಸಾಹ ಹಾಗೂ ಸಂಘಟನೆಯ ಕೊರತೆಯನ್ನು ನಿವಾರಿಸಲು "ಗಡಿನಾಡು ಪ್ರಕಾಶನ"ವನ್ನು ಪ್ರಾರಂಭಿಸಿ 'ಪರಿಮಳ' ಎಂಬ ವಿವಿಧ ಲೇಖಕರ ಕಥಾ ಸಂಕಲನವನ್ನು ಹೊರತಂದಿದ್ದಾರೆ. 'ಜೇನ್ಗೂಡು' ಕವನ ಸಂಕಲನದ ಮೂಲಕ ಅವರು ಇದೀಗ ಮತ್ತೊಂದು ಹೆಜ್ಜೆ ಮುಂದಿಟ್ಟಿದ್ದಾರೆ. ಇದಕ್ಕೆ ವಿಮರ್ಶಾಪರವಾದ ಮುನ್ನುಡಿ ಬರೆದು ಮಾರ್ಗದರ್ಶನ ಮಾಡಬೇಕೆಂಬುದಾಗಿ ಆಗ್ರಹಪೂರ್ವಕ ಕೇಳಿಕೊಂಡಿದ್ದಾರೆ. ಅಕ್ಕಲಕೋಟ, ಸೊಲ್ಲಾಪುರ ಭಾಗದ ಗಡಿ ಪ್ರದೇಶದಲ್ಲಿ ಅವರು ಕೈಕೊಂಡಿರುವ ಕನ್ನಡದ ಕೈಂಕರ್ಯ ಪ್ರಶಂಸನೀಯವಾದುದು. ಹೊಸ ವರ್ಷದ ಮೊದಲ ದಿನವೇ ಈ ಸಂಕಲನವನ್ನು ಪ್ರಕಟಿಸಬೇಕೆಂಬ ಅವರ ಇಚ್ಛೆ ಅನಿವಾರ್ಯ ಕಾರಣದಿಂದ ಈಡೇರದಿದ್ದರೂ ಅದು ನನ್ನ ಮುನ್ನುಡಿಯ ದಿನವಾಗಿ ಪರಿಣಮಿಸಿದ್ದು ಕೆಲಮಟ್ಟಿಗಾದರೂ ನನ್ನ ಗಡಿನಾಡ ಬಂಧುಗಳಿಗೆ ಸಮಾಧಾನ ತಂದೀತೆಂದು ಭಾವಿಸಿದ್ದೇನೆ.

ಇಲ್ಲಿ ಸಂಕಲನಗೊಂಡಿರುವ ಕವನಗಳು ಐವತ್ತೈದು. (ಐವತ್ತೊಂದು ಕವಿಗಳು) ಅವುಗಳನ್ನು ಬರೆದವರಲ್ಲಿ ಹೆಚ್ಚಿನವರು ಗಡಿನಾಡಿನ ಯುವಕರು. ಈ ಸಂಕಲನದ ಮೂಲಕ ಅವರೆಲ್ಲರನ್ನು ಗುರುತಿಸಿರುವ ಸಂಪಾದಕರಾದ ಶ್ರೀ ಧರೇಂದ್ರನಾಥರಿಗೆ ಮೊದಲು ಅಭಿನಂದನೆ ಸಲ್ಲಬೇಕು. ಒಟ್ಟಾರೆ ನೋಡಿದಾಗ ಈ ಸಂಕಲನದಲ್ಲಿ ಒಂದು ಮೂರಾಂಶದಷ್ಟು ಕವನಗಳು

ಆಶಾದಾಯಕವಾಗಿ ಕಂಡು ಬರುತ್ತಿರುವುದರಿಂದ ಸಂಪಾದಕರ ಶ್ರಮ ವ್ಯರ್ಥವಾಗಿಲ್ಲವೆಂದು ಸಂತೋಷಪಡಬೇಕಾಗಿದೆ. ಬೇಂದ್ರೆಯವರು ನುಡಿದಂತೆ 'ಲೀಲೆಯಲಿ ಯಾವುದೂ ವ್ಯರ್ಥವಲ್ಲ'.

ಕಾವ್ಯದ ಸೋಂಕಿಗೆ ಪಾತ್ರರಯುವ ಹಲವಾರು ಪದ್ಯಗಳು ಇಲ್ಲಿದ್ದರೂ ಹತ್ತು ಹದಿನೈದು ಕವನಗಳು ಓದುಗರ ಮನಸ್ಸನ್ನು ಸೆರೆ ಹಿಡಿಯುವಲ್ಲಿ ಮೊದಲ ಸಾಲಿನಲ್ಲಿ ನಿಲ್ಲಬಲ್ಲಂಥವು.

'ಮಾನವೀಯತೆ ಮಣ್ಣು ಮುಕ್ಕಿ

ನಂಜುಕಾರುವ ನೆಲ'ವಾಗಿ ಪರಿಣಮಿಸಿದ ನಮ್ಮ ದೇಶದ ಪರಿಸ್ಥಿತಿಯನ್ನು ಸಂಕೇತಗಳ ಮೂಲಕ ಚಿಕ್ಕದರಲ್ಲಿ ಚೊಕ್ಕವಾಗಿ 'ಪ್ರಶ್ನೆ' ಪ್ರತಿಬಿಂಬಿಸಿದರೆ, ಹೆಣ್ಣಿನ ಶೋಷಣೆಯನ್ನು ತಣ್ಣಗೆ ನಿರೂಪಿಸುತ್ತಲೇ ವ್ಯಂಗ್ಯದ ಒಳದನಿಯಲ್ಲಿ ಬಿಸಿ ಮುಟ್ಟಿಸುವ ಕವನ 'ಹೆಣ್ಣುದನಿ'.

ಗೆಳೆಯಾ
ನನಗೂ ಆಗಾಗ ಕವನ
ಬರೆಯುವ ತುಡಿತ ಎದೆಯಲ್ಲಿ
ಕಾರಂಜಿಯಂತೆ ಪುಟಿಯತೊಡಗುತ್ತದೆ
ಅವ್ಯಕ್ತ ವೇದನೆಯಾಗುತ್ತದೆ.

ಎಂದು ಪ್ರಾರಂಭವಾಗುವ 'ತುಡಿತ'ವೇದನೆಗೆ ಕಾರಣವಾಗಿರುವ ಸಾಮಾಜಿಕ ಅನಿಷ್ಟಗಳನ್ನು ಅಭಿವ್ಯಕ್ತಗೊಳಿಸುವ ರೀತಿಯ ಹೊಸತನದಿಂದ ಕೂಡಿದೆ. ನಿಸರ್ಗ ರಮ್ಯತೆ ಇನಿಯನ ನೆನಪನ್ನು ತಂದು, 'ಗೆರೆಗಳಿಗೆ ಜೀವದ ಬಣ್ಣ' ತುಂಬುವ ಭಾವ ಸಾಹಚರ್ಯ 'ಚೈತ್ರ' ಪದ್ಯಕ್ಕೆ ಚಲುವು ನೀಡಿದ್ದರೆ, ಇನಿಯನ ಹುಸಿ ಮುನಿಸೂ ಸೊಗಸಾಗಿ ತೋರುವ 'ಅನಿಸಿಕೆ'ಯಲ್ಲಿ

ಹುಣ್ಣಿಮೆಯ ಚಂದ್ರ ತನ್ನ ಸುತ್ತ
ಕಟ್ಟುವ ಸುಂದರ ಕಣದಂತೆ

ಈ ಚಿತ್ರವನ್ನು ಶಬ್ದಗಳಲ್ಲಿ ಸೆರೆ ಹಿಡಿದು ನಿಲ್ಲಿಸಲು ಪ್ರಯತ್ನಿಸುತ್ತದೆ. ಇದೇ ಮಾತನ್ನು 'ಪ್ರಸ್ತಾವನೆ' ಕವನದ ಬಗೆಗೂ ಹೇಳಬಹುದು. ಇಪ್ಪತ್ತೊಂದನೆ ಶತಮಾನಕ್ಕೆ ಸಾಗುವಾಗಿನ ಸಂಕಷ್ಟಗಳನ್ನು ತೋಡಿಕೊಳ್ಳುವ ಪದ್ಯ ಕೊಂಚ ವಾಚ್ಯವಾಗಿದ್ದರೂ,

ಹಾಲೆಂದು ಬರೀ ನೀರನ್ನೇ ಹಿಡಿಯುತ್ತಿರುವೆ
ಅಕ್ಕಿಯೆಂದು ರಾಶಿ ರಾಶಿ ಕಲ್ಲುಗಳನ್ನೇ ತಿನ್ನುತ್ತಿರುವೆ
ಔಷಧಿಯೆಂಬ ವಿಷವನ್ನೆ ನುಂಗುತ್ತಿರುವೆ
ಸಾಯದೆ, ಬದುಕದೆ ಮಮ್ಮಲ ಮರುಗುತ್ತಿರುವೆ

ಎಂದು ಕೊನೆಗೊಂಡಾಗ ಅದರ ವಾಸ್ತವತೆ ತನ್ನ ನಿಷ್ಠುರತೆಯಿಂದಲೇ ಮೆಚ್ಚುಗೆ ಪಡೆಯುತ್ತದೆ. 'ಮಣ್ಣು' ಪದ್ಯ ಅದನ್ನು ಕೀರ್ತಿಸುವಂತೆ ತೋರಿದರೂ

ಮಣ್ಣಿನಲ್ಲಿ ಮಾಣಿಕ್ಯ
ಮಣ್ಣಿನಲಿ ಜೇನು;
ಮಣ್ಣಿನಲಿ ಹೂತಿಹುದು
ಕವನ ಸುರಧೇನು

ಎಂಬಂಥ ನುಡಿಗಳು ಅದನ್ನು ಸುಂದರವಾದ ಭಾವಗೀತೆಗಳನ್ನಾಗಿಸಿದೆ. 'ಪ್ರೀತಿ' ಉದ್ವೇಗವಿಲ್ಲದೆ ಭಾವ-ಬುದ್ಧಿಯನ್ನು ಮೇಳವಿಸಿಕೊಂಡಿದ್ದರೆ, 'ಉತ್ತರ' ತನ್ನ ನಿಧಾನಗತಿಯಲ್ಲಿ ಧ್ವನಿಪೂರ್ಣವಾಗಿದೆ. ಇದೇ ಕವಿಯ 'ಪಿನ್ನು' ಚುಟುಕಿನಲ್ಲಿ ಚುರುಕಾಗಿ ಕುಟುಕುತ್ತದೆ.

ಸರ್ಕಾರಿ ಕಚೇರಿಯಲ್ಲಿನ
ಪಿನ್ನುಗಳು
ಸರ್ಕಾರದ ಉದ್ಯೋಗ ಪತಿಗಳ
ಕಾಗದಗಳನ್ನು
ಜೋಡಿಸಿದವು;
ಬಡವನ ಅಹವಾಲನ್ನು
ಕಿತ್ತು ಹಾಕಿದವು.

ದುಡ್ಡಿನ ದರ್ಪಕ್ಕೆ ಓಗೊಟ್ಟು, ಬಡವರಿಗೆ ಕನಸಿನ ಕೈಲಾಸವಾದ 'ನೌಕರಿ'ಯನ್ನುದ್ದೇಶಿಸಿದ ಮಾತುಗಳು ನೇರವಾಗಿಯೇ ಮುಖಕ್ಕೆ ತಿವಿಯುವಂತಿದ್ದರೆ, 'ಸಾಹಿತಿ' ಕವನ ಅಷ್ಟೇ ಕಟುವಾಗಿ, ವಿಡಂಬನೆಯ ಚೌಕಟ್ಟಿನಲ್ಲಿ ಕಂಗೊಳಿಸುತ್ತದೆ. ಪ್ರೀತಿಯ ಆಳವನ್ನು, ಅದಕ್ಕೆ ಅಡ್ಡ ಬರುವ ಸಮಾಜವನ್ನು ಎದುರಿಸುವ ಧೈರ್ಯವನ್ನು 'ಕನಸು-ನೆನಸು' ಒಡನುಡಿದಿದೆ. ತಾನು ಕವಿಯಾಗಿಲ್ಲವೆಂಬ ನಿರಾಶಾಭಾವವನ್ನು ನಿರೂಪಿಸುವ 'ಆಶೆ'.

ಅರಳಬೇಕೆನ್ನುತ್ತೇನೆ
ನಾನೂ ಒಮ್ಮೆ ಹೂವಾಗಿ
ಆಕಾರಗಳೆಲ್ಲ ಮುಗಿದಿವೆಯೆಂಬ ಮರುಕ
ಮರುಕಳಿಸುತ್ತದೆ.

ಎಂಬಲ್ಲಿ ಸಹಜವಾಗಿಯೇ ಕವಿತೆಯ ರೂಪ ತಳೆದಿದೆ. 'ದಿನ ಬೆಳಗಾದರೆ ಎಲ್ಲೆಲ್ಲೂ ಅಶಾಂತಿ' ತುಂಬಿರುವಾಗ 'ಏನಂತ ಬರೆಯಲಿ ?' ಎಂಬ 'ದೇಶದ ಗತಿ....?' ಕವನ ಚಿಂತನೆಗೆ ಅವಕಾಶ ಒದಗಿಸಿದೆ.

'ಪ್ರತಿಷ್ಠೆ', 'ಮನ, ಮನೆ, ಮಡದಿ', 'ಹೆಣ್ಣಿಗೊಂದು ಕಿವಿಮಾತು', 'ಬಾಂಧವ್ಯ' ಇತ್ಯಾದಿ ಇನ್ನುಳಿದ ಪದ್ಯಗಳ ಕೆಲ ಕೆಲವು ಸಾಲುಗಳಲ್ಲಿ, ಮಾತು ಕವಿತೆಯಾಗುವ ಹವಣಿಕೆಯಲ್ಲಿರುವದನ್ನು ಕಾಣಬಹುದು. ದೇಶದ ತುಂಬ ನಡೆದ ರಕ್ತದೋಕುಳಿಯಾಟವನ್ನು ಕಂಡು

ನಿಲ್ಲಿಸಿ ನಿಮ್ಮ ಕ್ರೂರ, ಅಮಾನುಷ
ಬೌಂಡರಿ, ಸಿಕ್ಸರ್, ಸೆಂಚುರಿ ದಾಖಲೆಯ ಹತ್ಯಗಳ

ಎಂಬ ಜೀವನದ ಚಡಪಡಿಕೆ 'ಭಾತೃತ್ವ'ದಲ್ಲಿ ಎದ್ದು ಕಂಡರೆ, 'ನಮ್ಮೂರ ಕೋಗಿಲೆ' ಪದ್ಯದಲ್ಲಿ ಕೆಲಮಟ್ಟಿಗೆ ಅನ್ಯೋಕ್ತಿಯ ಛಾಯೆಯಿದೆ. 'ಗಂಡಸರೇ ನಿಮಗೆ ನಮಸ್ಕಾರ'ದಲ್ಲಿಯ ವ್ಯಂಗ್ಯ ನೇರವಾಗಿ ವ್ಯಥೆಯ ಕಥನವಾಗಿದೆ. 'ಹೊಸ ವರುಷ', 'ಒಂದಾದ ಬಾಳೆಲ್ಲ ಬಂಗಾರವಾಯ್ತು' ಎಂಬ ತೃಪ್ತಿ ತಾಳಿದ್ದರೆ, 'ದುಡಿಮೆಯ ದೀಕ್ಷೆ'ಯಲ್ಲಿ ಭಾವ-ಭಾಷೆಯ ಶಕ್ತಿಯುತ ನಡಿಗೆಯಿದೆ.

ಬೆವರಿನ ಮುತ್ತನ್ನು ಬಿತ್ತಲು ಭೂಮಿಗೆ
ಬಂಗಾರದ ಬೆಳೆ ಇಳೆಯಲ್ಲಿ
ಬರವನು ಹರಿಸುವ, ಹಸಿರನು ತರಿಸುವ
ಯುಕ್ತಿಯಿಹುದು ಶ್ರಮಶಕ್ತಿಯಲಿ.

ಉಪದೇಶದಂತೆ ತೋರಿದರೂ 'ಮಾನವ ಮರೆಯದಿರು' ಹಿತವಾಗಿ ಕೇಳಿಸುತ್ತದೆ. 'ಕಲಿಯುಗದ ಕಾಲ' ಹಾಡಿದಾಗ ರಂಗೇರಬಹುದು.

ಹೃದಯಾಂತರಾಳದಲ್ಲಿ ಸುಪ್ತವಾಗಿಹ ಕವಿತೆ
ನೀಡೆನಗೆ ದರುಶನ ಕೃಪೆದೋರಿ ನಸುನಗುತ
ನೀ ಬರುವ ಹಾದಿಯಲೆ ಕಾದು ಕುಳಿತಿಹೆ ನಾನು.

'ಕವಿತಾನಂದ' ಪದ್ಯದಿಂದ ಉದ್ಧರಿಸಿದ ಈ ಸಾಲುಗಳು ಇಲ್ಲಿನ ಹೆಚ್ಚಿನ ಪದ್ಯ ರಚಕರ ಹಂಬಲವನ್ನೇ ನುಡಿದಂತಿದೆ. ಈ ನಿರೀಕ್ಷೆ ಫಲಿಸಬೇಕಾದರೆ ನಿರಂತರವಾದ ಅಭ್ಯಾಸ, ಅನುಭವಗಳಿಗೆ, ತಕ್ಕ ಅಭಿವ್ಯಕ್ತಿಗಾಗಿ ಅವರೆಲ್ಲ ಶ್ರದ್ಧೆಯಿಂದ ಪರಿಶ್ರಮಿಸುತ್ತಾರೆಂದು ಆಶಿಸುತ್ತೇನೆ.

ಇಲ್ಲಿಯ ಪದ್ಯಗಳಲ್ಲಿ ಭಾವೋದ್ರೇಕಕ್ಕಿಂತ ವಿಚಾರಪರತೆಗೆ ಒತ್ತು ಬಿದ್ದಿರುವದು ಗಮನಾರ್ಹವಾಗಿದೆ. ಹಾಗೆಯೇ ಸಾಮಾಜಿಕ ಎಚ್ಚರ ಎದ್ದು ಕಾಣುವ ಒಂದು ಗುಣವಿಶೇಷವೆನ್ನಬಹುದು. ಆದರೂ ವಾಚ್ಯದಿಂದ ಸೂಚ್ಯಕ್ಕೆ ತಲುಪುವ ದಾರಿಯಲ್ಲಿ ಇವರೆಲ್ಲ ಇನ್ನೂ ಬಹುದೂರ ನಡೆಯಬೇಕಾಗಿದೆ. ವಿವಿಧ ಹೂಗಳ ಬಂಡನ್ನು ಆರಿಸಿ. ಶೇಖರಿಸಿ ಅದನ್ನು ತುಪ್ಪದ 'ಹನಿ'ಯಾಗಿಸುವಲ್ಲಿ ತೊಡಗಿರುವ 'ಜೇನ್ಗೂಡಿ'ನ ದುಂಬಿಗಳು ಜೇಂಗೊಡವನ್ನು ತುಂಬಿ ಕೊಡುವಂತಾಗಲಿ ಎಂದು ಹಾರೈಸುತ್ತೇನೆ.

(೧೯೮೯)

## ೪೮

## ರೆಕ್ಕೆ ಗರಿಗಳ ಬಿಚ್ಚಿ

ವೇದನೆಯ ನಿವೇದಿಸಲು
ಸಂವೇದನೆಯ ಆಳಕಿಳಿಯಬೇಕು.
ಮೌನವನ್ನೊಂದಿಷ್ಟು ಸೆರೆಹಿಡಿಯಬೇಕು
ಗಟ್ಟಿ ಪದಗಳ ಊರಿ ಹೆಜ್ಜೆಯಿಡಬೇಕು.

ಇಂಥ ಗಂಭೀರ ಕಾಳಜಿಯಿಂದ ಕಾವ್ಯರಚನೆಗೆ ತೊಡಗಿರುವ ಶ್ರೀ ಎಂ.ಡಿ. ವಕ್ಕುಂದ ತಮ್ಮ ಪ್ರಥಮ ಕವನ ಸಂಕಲನಕ್ಕೆ ನನ್ನ ಮುನ್ನುಡಿಯನ್ನು ಅಪೇಕ್ಷಿಸಿದ್ದಾರೆ. ಈ ಮೊದಲೇ ನಾನು ಗುರುತಿಸಿಕೊಂಡಿರುವ ಈ ಯುವ ಪ್ರತಿಭೆಯನ್ನು ಕನ್ನಡ ವಾಚಕಲೋಕಕ್ಕೆ ಪರಿಚಯಿಸಿ ಕೊಡುವಲ್ಲಿ ನನಗೆ ಹೆಚ್ಚಿನ ಸಂತೋಷವಿದೆ.

ನೋವು ಈ ಕವನಗಳ ಸ್ಥಾಯಿ ಎನ್ನುವಷ್ಟು ಇಲ್ಲಿ ವ್ಯಾಪಕವಾಗಿದ್ದರೂ ಈ ಕವಿ ಹೆಚ್ಚು ಸಂವೇದನಾಶೀಲರಾಗಿರುವುದರಿಂದ ಅದು ಅಸ್ವಸ್ಥತೆಯ ಮಟ್ಟದಲ್ಲಿ ಉಳಿಯದೇ ಆರೋಗ್ಯಕರವಾದ ಅಭಿವ್ಯಕ್ತಿಯನ್ನು ಇಲ್ಲಿ ಕಂಡುಕೊಂಡಿದೆ. ಆದ್ದರಿಂದಲೇ 'ಹರಕು ಸೀರೆಯಲ್ಲಿ ಉಡಿಕಟ್ಟಿದ' 'ಅವ್ವ'

ಹೃದಯವನ್ನೇ ಹೆಚ್ಚಿಟ್ಟು
ಮಕ್ಕಳಿಗೆ ಹಂಚಿ
ಖಾಲಿ ಹೊಟ್ಟೆಯಿಂದ ಗುಳಿಬಿದ್ದ ಕಣ್ಣಿಂದ
ನಕ್ಕು ಬಿಡುತ್ತಾಳೆ
ಆರಿದ ವಿದ್ಯುದ್ದೀಪ ಥಕ್ಕನೇ ಹೊತ್ತಿಕೊಂಡಂತೆ
ನೂರು ಕನಸಿನ ದಾರಿ ದೀಪವಾಗುತ್ತಾಳೆ.

ಮೌನವನ್ನೊಂದಿಷ್ಟು ಸೆರೆ ಹಿಡಿಯುವದರಿಂದ 'ಮಳೆಬಿದ್ದ ಮಾರನೆಯ ದಿನದ ನೆಲದ ಹಸಿರಾಗುತ್ತಾಳೆ'. ಈ ಬಗೆಯ ಅನುಭವದ ಗ್ರಹಿಕೆಯಿಂದ ಇಲ್ಲಿಯ ಕವನಗಳು ಗಟ್ಟಿ ಪದಗಳ ಊರಿ ಇಟ್ಟ ಹೆಜ್ಜೆಗಳಾಗಿ ಓದುಗರ ಮನಸ್ಸಿನಲ್ಲಿ ಅಚ್ಚೊತ್ತುತ್ತವೆ. 'ನೀ ತಿಳಿಯ ಗೆಳತಿ'ಯಲ್ಲಿಯ,

ಒಂಟಿ ಹಕ್ಕಿಯೊಂದ ದನಿ ತಗದ ಹಾಡಿದರ...
ದಡಕ್ಕ ಅಪ್ಪಳಿಸಿ ತೆರೆಯೊಂದು ಹೊಡದರ...

ಜುಳು ಜುಳು ನದಿಯೊಂದ ನರಳತ್ತಿದ್ದರ....
ಮಬ್ಬ ಸೂರ್‍ಯನ ಮಾರಿ ಮಂಜ ಮುಸುಕಿದ್ದರ...

ಈ ಪ್ರತಿಮೆಗಳು ಕವಿಜೀವದ ಹಾಡು, ಒಲವಿನ ಕರೆ, ಮನದ ಅಳಲು, ವ್ಯಕ್ತಿಯ ಹಕೀಕತ್ತುಗಳನ್ನು ಕಾವ್ಯ ವ್ಯಕ್ತಿತ್ವವಾಗಿ ಮೂರ್ತೀಕರಿಸುತ್ತವೆ.

ಕವಿತೆಯ ವಸ್ತು ಯಾವುದೇ ಇದ್ದರೂ ಜೀವನದ ವಾಸ್ತವದ ಪ್ರಜ್ಞೆ ಹಾಗೂ ಸಾಮಾಜಿಕ ಕಳಕಳಿ ಅವುಗಳ ಪ್ರಧಾನ ಗುಣವಾಗಿ ಎದ್ದು ಕಾಣುತ್ತಿದೆ. ಅದರ ನಿರ್ವಹಣೆಯೊಂದಿಗೆ ಭಾವತೀವ್ರತೆ ವೈಚಾರಿಕತೆಯೂ ಕೂಡಿ ಭಾಷೆ ಹಾಗೂ ಛಂದದಲ್ಲಿ ಸಮಕಾಲೀನತೆಯ ಗತಿ ಎದ್ದು ಕಾಣುತ್ತದೆ.

ಬಡತನದ ತಂದೀಗೆ ಹಸಿವೀನ ತಾಯೀಗೆ
ಖಾಸ ಮಕ್ಕಳಾಗಿ ಹುಟ್ಟಿದವರು
ಗುಡಸಲದ ದೀಪದಾನ ಎಣ್ಣಿ ತೀರಿದ ಮ್ಯಾಲ
ಕಣ್ಣ ತಕ್ಕೊಂಡು ಎದ್ದು ಬಂದವರು. (ಕೂಲಿಕಾರರ ಹಾಡು)

ಕತ್ತಲೆಯ ಖಂಡದಲಿ ಬಿಳಿ ಹೆಣದ ರಾಶಿಯಲಿ
ಉರಿವ ಸೂರ್ಯನ ಉದಯವಾಗುತ್ತದೆ. (ಕ್ರಾಂತಿಗೀತೆ)

ಇಷ್ಟೆಲ್ಲ ಸಂಕಟಗಳ ನಡುವೆಯೂ ಕವಿ ಆಶಾವಾದಿಯಾಗಿರುವುದಕ್ಕೆ ಅರ್ಥವಿದೆ. ಅದಕ್ಕೆ ಕಾರಣ ಕವಿಯ ಅನುಭವದ ಪ್ರಾಮಾಣಿಕತೆ. ಇದು ಕವಿಯ ಬೆಳವಣಿಗೆಯ ದ್ಯೋತಕವಾಗಿಯೂ ನಿಲ್ಲುತ್ತದೆ.

ಷಂಡ ಬಿಳಿ ಮೋಡಗಳಾಗಿ
ಹಿಮಾಲಯವನ್ನು ಮುತ್ತಿ ಮುತ್ತಿಡಲಾರೆ.
.........................................

ಹಿಂಸೆ ಶೋಷಣೆ ಕ್ರೌರ್ಯಗಳನ್ನು ಪ್ರತಿಭಟಿಸುವಲ್ಲಿ ಆಕ್ರೋಶಕ್ಕಿಂತ ಆತ್ಮವಿಶ್ವಾಸಕ್ಕೆ ಈ ಕವಿ ಹೆಚ್ಚು ಒತ್ತು ಕೊಡುವಲ್ಲಿ ಉಳಿದ ಬಂಡಾಯ ಮನೋಧರ್ಮದ ಕವಿಗಳಿಗಿಂತ ಭಿನ್ನವಾಗಿ ತೋರುತ್ತಾರೆ.

ಕಪ್ಪು ಮೋಡಗಳೊಡಲಿನಲ್ಲಿ
ಗುಡುಗಾಗಿ ಗುಡುಗುತಾನೆ
ಸಿಡಿಲಾಗಿ ಸಿಡಿಯುತಾನೆ ನೆಲ್ಸನ್ ಮಂಡೇಲಾ. (ನೆಲ್ಸನ್ ಮಂಡೆಲಾ)

ನಿರಾಸೆಯ ಹೊತ್ತ ಕನಸುಗಳು ಸತ್ತ
ಸ್ವತಂತ್ರ ಭಾರತದ ಅತಂತ್ರ ಮುಖಗಳು (ಮುಖಗಳು)
ನಮ್ಮೆದೆಯ ಕನಸುಗಳ

ಕಣಿಕಿ ಬಣವಿಗಳಿಗೆ ಕೊಳ್ಳಿ ಇಟ್ಟಿರುವ.... (ಮುಖಗಳು)

ಕನಸುಗಳ ಕುರಿತು ಪ್ರತ್ಯೇಕ ಕವನದಲ್ಲಿ "ಹೊಸ ಕನಸುಗಳ ಕವಿತೆ ಹೊಸೆದು ತನ್ನಿ" ಎಂಬ ಕೋರಿಕೆಯಿದೆ.

'ದಾಹ' 'ಕವಿತೆ', 'ನೀ ತಿಳಿಯ ಗೆಳತಿ' 'ನೋಡ ಬಾರೇ' ದಂತಹ ಪ್ರೇಮ ಗೀತೆಗಳು ಈ ಸಂಗ್ರಹದ ವೈವಿಧ್ಯಕ್ಕೆ ತಮ್ಮ ಕಾಣಿಕೆ ನೀಡಿವೆ. ಇಲ್ಲಿಯೂ ಕೂಡ ನೋವಿನ ಮಿಡಿತಕ್ಕೆ ಪ್ರಾಧಾನ್ಯ:

ಎದೆಯ ಕಾಲುವೆಯಲ್ಲಿ
ನದಿಯಾಗಿ ಹರಿದವಳೇ
ಎದೆಯೊಡೆದು ಹೋಗುತಿದೆ ನೋಡಬಾರೇ (ನೋಡಬಾರೇ)

ಮೇಲಿನ ಕವಿತೆಗಳಿಗಿಂತ ಸ್ವಲ್ಪ ಭಿನ್ನವಾದ ಆದರೆ ಲಕ್ಷಿಸಬೇಕಾದ ಕೆಲವು ಕವನಗಳೂ ಇಲ್ಲಿವೆ. 'ಚೂರಿ' ಭಯೋತ್ಪಾದಕ ವಾತಾವರಣದಲ್ಲಿಯ ಮಾನಸಿಕ ಪ್ರಕ್ರಿಯೆಯ ಚಿತ್ರಣವಾಗಿದ್ದರೆ 'ನನ್ನೂರು' ಕೆಟ್ಟು ಹೋದ ಪರಿಸ್ಥಿತಿಯ ದುರ್ನಾತಕ್ಕೆ ಪ್ರಾತಿನಿಧಿಕ ಸ್ವರೂಪವನ್ನು ಪಡೆಯುತ್ತದೆ. 'ಯಾರೋ ಕರೆಯುತ್ತಾರೆ' 'ಯಾರಿದ್ದಾನಪ್ಪಾ ಇಂವ ಯಾರಿದ್ದಾನು ?' ಇವು ಸುಪ್ತ ಪ್ರಜ್ಞೆಯಲ್ಲೇಳುವ ಪ್ರತಿಮೆ ಪ್ರತೀಕಗಳ ಕಾವ್ಯಾತ್ಮಕ ಗುಣಗಳಾಗಿ ಗಮನಾರ್ಹವಾಗಿ ನಿಲ್ಲುತ್ತವೆ.

ಕಂಡುಂಡುದನ್ನು ಕವಿತೆಯಾಗಿಸುವ ಛಲಗಾರಿಕೆಯ ಜೊತೆಗೆ ಭಾಷೆ ಹಾಗೂ ಛಂದಸ್ಸಿನಲ್ಲಿ ಅಲ್ಲಲ್ಲಿ ಕಂಡುಬರುವ ಶೈಥಿಲ್ಯವನ್ನು ಹೋಗಲಾಡಿಸುವ ಏಕಾಗ್ರತೆ ಹಾಗೂ ಕಾವ್ಯದ ಕಸಬುಗಾರಿಕೆ ಕೈಗೂಡಿದರೆ ಇನ್ನೂ ಉತ್ತಮ ಕವಿತೆಗಳನ್ನು ಈ ಉತ್ಸಾಹಿ ತರುಣ ಕವಿಯಿಂದ ನಿರೀಕ್ಷಿಸಬಹುದಾಗಿದೆ. ಕಾವ್ಯ ಪ್ರೇಮಿಗಳು ಪ್ರಸ್ತುತ ಸಂಗ್ರಹವನ್ನು ಸಂತೋಷದಿಂದ ಸ್ವಾಗತಿಸುತ್ತಾರೆಂದು ಆಶಿಸುತ್ತೇನೆ.

(೧೯೮೯)

೪೯

# ಹತ್ತರೊಳಗೆ ಹನ್ನೊಂದು

'ಮೂರು ಮಹಾಕಾವ್ಯಗಳು' ಕೃತಿಯಿಂದ ಉತ್ತರ ಕರ್ನಾಟಕದ ಉದಯೋನ್ಮುಖ ವಿಮರ್ಶಕರಾಗಿ ಸಾಹಿತ್ಯಾಸಕ್ತರ ಗಮನವನ್ನು ಸೆಳೆದಿರುವ ಅಮರನಾಥರು ತಮ್ಮ ಎರಡನೆಯ ಕವನ ಸಂಕಲನಕ್ಕೆ ನನ್ನ ಮುನ್ನುಡಿಯನ್ನು ಅಪೇಕ್ಷಿಸಿದ್ದಾರೆ. 'ನೀವು ನಿರ್ವಿವಾದವಾಗಿ ಕವಿ; ಮುನ್ನುಡಿಯ ಅಗತ್ಯವಿಲ್ಲದೆ ಧೈರ್ಯವಾಗಿ ಮುನ್ನಡೆಯಿರಿ' ಎಂದು ನಾನು ಪರಿಪರಿಯಾಗಿ ಹೇಳಿದರೂ ಅವರು ಕೇಳಲಿಲ್ಲ. ಪ್ರಸ್ತುತ ಕಾವ್ಯ ಸಂದರ್ಭದ ಗೊಂದಲ ಇದಕ್ಕೆ ಕಾರಣವಾಗಿರಬಹುದು. ಅದೇನೇ ಇದ್ದರೂ ಅವರ ಮನಸ್ಸಿನ ಆತಂಕವನ್ನು ಕೆಲಮಟ್ಟಿಗೆ ಅರ್ಥ ಮಾಡಿಕೊಂಡ ನಾನು ಅದರ ನಿವಾರಣೆಗಾಗಿ ಈ ನಾಲ್ಕು ಮಾತುಗಳನ್ನು ಸಂತೋಷದಿಂದ ಬರೆಯುತ್ತಿದ್ದೇನೆ. ನನ್ನ ಸಹೃದಯತೆಯಲ್ಲಿ ಅವರಿಗೆ ವಿಶೇಷ ನಂಬಿಕೆ ಇದ್ದಾಗಲೂ ನನ್ನ ಇಲ್ಲಿಯ ಬರವಣಿಗೆ ಯಾವ ಭಿಡೆ, ಮುರವತ್ತುಗಳಿಗೆ ಒಳಗಾಗಿಲ್ಲವೆಂಬುದನ್ನು ಮೊದಲೇ ಹೇಳಬಯಸುತ್ತೇನೆ.

ಮೊದಲ ಸಂಕಲನ 'ಹುಚ್ಚುಹಾದಿಯ ಪಯಣಿಗ' (೧೯೮೮)ದಲ್ಲಿಯೇ ಅವರನ್ನು ಕಾಡಿದ ಪ್ರಶ್ನೆ ಇದು : 'ನವೋದಯ ಕಾಲದ ಸೌಂದರ್ಯಪ್ರಜ್ಞೆ, ಆರಾಧಕ ಮನೋಭಾವ, ನವ್ಯದ ಸಂಕೀರ್ಣ ಪ್ರಜ್ಞೆ, ತ್ರಿಶಂಕು ಮನೋಭಾವ, ಇತ್ತೀಚಿನ ಪ್ರತಿಭಟನಾತ್ಮಕ ಧೋರಣೆ-ಇವುಗಳಲ್ಲಿ ನಾನು ಎಲ್ಲಿ ?' ಇವೆಲ್ಲವುಗಳ ಅಭ್ಯಾಸ, ಅನುಭವ ಎರಡನ್ನೂ ಪಡೆದಿರುವ ಈ ಕವಿ ತನ್ನ ಅಸ್ತಿತ್ವದಲ್ಲಿ ಮಾತ್ರ ಸಂಶಯ ಪಡದೆ ನಿರಂತರವಾದ ಕಾವ್ಯಾಸಕ್ತಿಯಿಂದ ಮುಂದುವರಿದಿರುವುದರ ಫಲವೇ ಪ್ರಸ್ತುತ ಸಂಕಲನವೆಂದು ಹೇಳಬಹುದು. ನವೋದಯದ ಆರಾಧಕ ಮನೋಭಾವ ಹಾಗೂ ನವ್ಯದ ತ್ರಿಶಂಕು ಮನೋಭಾವ ಎರಡನ್ನು ಹೊರತುಪಡಿಸಿ ಉಳಿದೆಲ್ಲವನ್ನೂ ಅವರು ತಕ್ಕಮಟ್ಟಿಗೆ ಮೈಗೂಡಿಸಿಕೊಂಡು ಬೆಳೆದಿರುವುದು ಈ ಸಂಕಲನದಲ್ಲಿ ಸ್ಪಷ್ಟವಾಗಿ ಗೋಚರಿಸುತ್ತದೆ. "ಹತ್ತರೊಳಗೆ ಹನ್ನೊಂದು" ಎಂದುಕೊಂಡರೂ ಅವರ ಕಾವ್ಯದ ಮೂಲ ಸ್ಫೂರ್ತಿ ಹಾಗೂ ಉತ್ಸಾಹ ಅನನ್ಯವಾದದ್ದೆ :

ಮದನ ಮಾಸ ಬಂದಾಗ ಮೊಗ್ಗು ಬಡಬಡಿಸಿ ಎದ್ದಹಾಂಗ
ಮೆತ್ತ ಹುಲ್ಲ ಪಲ್ಲಂಗ ಮ್ಯಾಲ ಧಿಮಿಕಿಡುವ ಚಿಗರಿ ಹಾಂಗ
ಚಿಗುರು ಎಲೆಯ ಎಳೆಗೆಂಪಿನೊಳಗ ಚಿಲಿಪಿಲಿಯ ಗುಬ್ಬಿಹಾಂಗ
ಹತ್ತರೊಳಗ ಹನ್ನೊಂದರಾಂಗ ಬಂದೇನಿ ಛಂಗ ಛಂಗ ॥

ಆದರೂ,

'ಬ್ರಹ್ಮನೆಲ್ಲೊ ಅವಸರವ ಮಾಡಿ ಅಪಘಡವ ಬರೆದ ಹಾಂಗ' ಆಗಬಾರದೆಂಬ ಕಾಳಜಿ ಅಮರನಾಥರಂತೆ ಇಂದಿನ ಎಷ್ಟು ಜನ ಹೊಸ ಕವಿಗಳಲ್ಲಿ ಕಾಣಲು ದೊರೆತೀತು ? 'ಯಾವ ಜಾತಿಯ ಕವಿಯು ನಾನೊ ?' ಎಂಬ ಇನ್ನೊಂದು ಒಳ್ಳೆಯ ಕವಿತೆಯಲ್ಲಿಯ ಪ್ರಾಮಾಣಿಕವಾದ ಆತ್ಮವಿಶ್ಲೇಷಣೆಯನ್ನು ಕಂಡಾಗ, ರಮ್ಯ, ನವ್ಯ, ಬಂಡಾಯ, ದಲಿತ - ಇವೆಲ್ಲದರಲ್ಲಿಯ ನಿಜವಾದ ಕಾವ್ಯದ ಎಳೆಗಳನ್ನು ಹಿಡಿದು ಹುರಿಗೊಳಿಸಬಲ್ಲ ಶಕ್ತಿ ಅವರಿಗೆ ಕೈವಶವಾಗಬಹುದೆಂಬ ಸೂಚನೆ ಈ ಸಂಗ್ರಹದಲ್ಲಿ ಕಂಡುಬರುತ್ತದೆ.

ಇದಕ್ಕನುಗುಣವಾಗಿ ಇಲ್ಲಿಯ ಕವಿತೆಗಳನ್ನು ನಾಲ್ಕು ಭಾಗಗಳಾಗಿಯೇ ಕವಿ ವಿಂಗಡಿಸಿ ಕೊಟ್ಟಿದ್ದಾರೆ. 'ರಮ್ಯ-ನವೋದಯದ ಕವನಗಳು' ಭಾವಗೀತೆಯಾಗಿ ಹೆಚ್ಚಾಗಿ ಹಾಡುಗಳಾಗಿ ಹೊರಹೊಮ್ಮಿದಂಥವು. 'ಕವಿತೆ ಹುಟ್ಟುವ ಸಮಯ'ದಲ್ಲಿಯ ಭೀತಿ ಸಹಜವೆ ? ಎಂಬ ಸಂದೇಹ ಧೈರ್ಯದಲ್ಲಿ ಪರ್ಯವಸಾನಗೊಳ್ಳುವ ಸಂದರ್ಭ ಚಿತ್ರಣದ ನವೀನ ಕಲ್ಪನೆ ಕವಿಯ ಆತ್ಮವಿಶ್ವಾಸಕ್ಕೆ ಕೋಡು ಮೂಡಿಸುವಂತಿದೆ :

ಹಡೆದ ಹೆಮ್ಮೆಯ ಮಕ್ಕಳೆಲ್ಲರು
ಪಡೆದ ದುರ್ಗತಿ ಕಂಡ ಪೃಥಿವೀ
'ರತ್ನಗರ್ಭಾ' ಎಂಬ ಬಿರುದಿಗೆ
ಸಾಕು ಅಯ್ಯೋ ಎಂದಳಯ್ಯೋ
ಸಹಜವೇನೊ ಗೆಳೆಯ । ಭೀತಿ । ಸಹಜವೇನೊ ಗೆಳೆಯ ॥

ಕವಿತೆಯನ್ನು ಕುರಿತು ಇದೇ ಭಾವ ಸಂಕೀರ್ಣತೆಯನ್ನು ಪಡೆದು 'ನೋವುಗಣ್ಣಿನ ಹುಡುಗಿ'ಯ ಪ್ರತೀಕದ ಸೃಜನಾತ್ಮಕವಾದ ನೋವಿನ ಹಿಗ್ಗನ್ನು ಬೇಡಿದೆ :

ಈ ನೋವ ನೀಡು, ಆ ಭಾವ ನೀಡು ಅದಕೆಂದು ಹಾಡ ಬರೆವೆ
ಈ ಜೀವಕೊಂದು ಒಡನಾಡಿ ಜೀವ ಬಂತೆಂದು ಹಿಗ್ಗಿ ಮೆರೆವೆ ॥

'ಒಂದು ನಾಯಿಯ ಕಥೆ'ಯ ಕರುಣ, 'ತವರಿನಲ್ಲಿ ಮಡದಿ'ಯ ಪ್ರೀತಿ, 'ರತಿಮನ್ಮಥರು'ದಲ್ಲಿಯ ಹಾಸ್ಯ, 'ಬಡವಿಯ ಜೋಗುಳ'ದ ತಾಪ, 'ಗೆಳೆಯನೆಂದರೆ ಗೆಳೆಯ'ನಲ್ಲಿಯ ಕೃತಜ್ಞತೆ ಇವೇ ಮೊದಲಾದ ವಿವಿಧ ಭಾವಗಳು ತಕ್ಕಭಾಷೆ ಹಾಗೂ ಛಂದದಲ್ಲಿ ಪರಿಣಾಮಕಾರಿಯಾಗಿ ಅಭಿವ್ಯಕ್ತಿಗೊಂಡಿವೆ. ಕವನಗಳ ಧಾಟಿ ಸಾಂಪ್ರದಾಯಿಕವಾಗಿದ್ದರೂ ಅಲ್ಲಲ್ಲಿ ನೂತನ ಕಲ್ಪನೆಗಳಿಂದ ಹಾಗೂ ಭಾವ ತೀವ್ರತೆಯಿಂದ ಮನಸ್ಸನ್ನು ತುಂಬಿಕೊಳ್ಳುತ್ತವೆ. 'ಜೋಕಾಲಿ', 'ರುದ್ರಸೂಕ್ತ'ಗಳಲ್ಲಿ ಬೇಂದ್ರೆ ಕವಿತೆಗಳ ನೆನಪಾದರೂ ಸತ್ವದಲ್ಲಿ ಸ್ವಂತಿಕೆಯನ್ನು ಕಾಪಾಡಿಕೊಳ್ಳಲಾಗಿದೆ.

ಎರಡನೆಯ ಮಜಲಿನ 'ನವ್ಯ-ನವ್ಯೋತ್ತರ ಕವನಗಳು' ಹಾಡಿನ ಗುಂಗಿನಿಂದ ಬಿಡಿಸಿಕೊಂಡು ನವ್ಯ ಸಂವೇದನೆಗೆ ಮುಕ್ತ ಛಂದದಲ್ಲಿ ಅಭಿವ್ಯಕ್ತಿ ನೀಡಿವೆ. 'ಒಂದು ಸಿಗರೇಟಿನ ಕಥೆ'ಯಂಥ ಕವನಗಳ ಆಶಯ ಸ್ಪಷ್ಟವಾಗದಿದ್ದರೂ ಸಾಮಾನ್ಯವಾಗಿ ಉಳಿದ ಕವನಗಳ ಸಂವಹನೆ ಕ್ರಿಯೆಗೆ

ತೊಂದರ ಕಂಡುಬರುವುದಿಲ್ಲ. ಆಧುನಿಕ ಜೀವನದ ವೈಪರೀತ್ಯ-ವೈರುಧ್ಯಗಳನ್ನೂ, ಜಂಜಡವನ್ನೂ ಅವು ಚೆನ್ನಾಗಿಯೇ ಚಿತ್ರಿಸುತ್ತವೆ :

ಸಾವಿರ ಬಾಯಿಗಳು ಹರಿದು ಮುಕ್ಕಿದರೂ
ಖರ್ಚಾಗದ ಅಕ್ಷಯ ಪಾತ್ರೆ ನನ್ನ ತಲೆ

(ಕರೆದರೂ ಬಾರದ ವಸ್ತುಗಳು)

ನನ್ನೊಳಗೆ ಅಡಗಿರುವ ಸಾವಿರದ ಕವಿತೆಗಳು
ಹುಟ್ಟುತ್ತಲೇ ಸಾಯುವುದಿಲ್ಲ,
ಹುಟ್ಟುತ್ತಿದ್ದ ಹಾಗೆ
ವಿಧವೆಯಾಗಿ ಬಿಡುತ್ತವೆ

(ಹ್ಯಾಂಗ ಹೇಳಲೋ ಗೆಳೆಯಾ...)

ಸೋಲೇ ಮನುಷ್ಯನ
ಜೀವಂತ ಲಕ್ಷಣವಾದರೆ
ನನ್ನಷ್ಟು ಜೀವಂತ ಯಾರೂ ಇಲ್ಲ

(ಜೀವಂತಿಕೆಯ ಸಾಕ್ಷಿ)

ಕಂಡದ್ದನ್ನು ಕುರಿತು ಹೇಳುವದೇ
ಕವಿಯ ಕೆಲಸವಾದರೆ
ನನಗೆ ಕವಿಯಾಗುವದು ಬೇಕಾಗಿಲ್ಲ

(ಸನ್ನಿಧಾನದಲ್ಲೊಂದು ಮೆರವಣಿಗೆ)

ಪ್ರತಿಮೆ-ಪ್ರತೀಕಗಳ ಗೀಳಿಲ್ಲದೆ ಸರಳವಾಗಿ ಬರೆಯುತ್ತಲೇ ವಸ್ತುವನ್ನು ಅನುಭವಿಸಿ ನಿರೂಪಿಸುವ ರೀತಿ ಇಲ್ಲಿ ಕಂಡು ಬರುತ್ತದೆ. 'ಗ್ರಾಮಕವಿಯಿಂದ ನಗರ ಕವಿಗೆ', 'ರಾಷ್ಟ್ರೀಯ ಭಾವೈಕ್ಯ', 'ಸಂಜೀವಿನಿ', 'ಕೊನೆಯ ಕವನ' ಮೊದಲಾದವು ಇದಕ್ಕೆ ಒಳ್ಳೆಯ ನಿದರ್ಶನಗಳಾಗಿವೆ. ಸರಳತೆ ವಾಚಾಳಿತನಕ್ಕೆ ಎಡೆಗೊಟ್ಟದ್ದೂ ಉಂಟು. ಕವಿಗೂ ಅದು ಅನಿಸಿರಬೇಕೆಂದು ತೋರುತ್ತದೆ. ಅದಕ್ಕೆ ಈ ಬಿನ್ನಹ :

ಮೌನ ವಿಮರ್ಶಕನಾದ ನಿನ್ನೆದುರು
ಬಾಯಿಬಡುಕ ಕುಡುಕನಂತೆ ಒದರಾಡಿದೆ
ಕೋಟಿ ತಪ್ಪುಗಳುಳ್ಳ ಈ ನಿನ್ನ ಮಾಯೆಯನ್ನು
ಕೊಂಕಿಲ್ಲದೆ, ಕೊಸರಿಲ್ಲದೆ ಪ್ರೀತಿಸುವ ಮಾಯೆಯಲ್ಲಿ
ನನ್ನನ್ನು ಗುಲಾಮನನ್ನಾಗಿಸು ಪ್ರಭುವೇ

(ವಿಮರ್ಶಕನ ಪ್ರಾರ್ಥನೆ)

ಮೂರನೆಯ ಮಜಲಿನ 'ಬಂಡಾಯ-ಪ್ರಗತಿಶೀಲ ಕವನಗಳು' ಹೆಚ್ಚು ಯಶಸ್ವಿಯಾಗಿರುವುದಕ್ಕೆ ಕಾರಣ ಕವಿಯ ಮನೋಧರ್ಮಕ್ಕೆ ಅವು ಹೆಚ್ಚು ಹತ್ತಿರವಾಗಿರುವುದರಿಂದ, ಅಲ್ಲದೆ, ಹಿಂದಿನ ಕವಿತೆಗಳಲ್ಲಿನ ಭಾವತೀವ್ರತೆ, ವೈಚಾರಿಕತೆ, ಗೇಯತೆ-ಮೊದಲಾದವನ್ನು ಸಮಕಾಲೀನತೆಯೊಡನೆ ಸ್ಪಂದಿಸುವಂತೆ ಮಾಡಿರುವುದರಿಂದ. ಈ ಮನೋಧರ್ಮ ರಮ್ಯದಲ್ಲಿಯೂ 'ಕಪ್ಪು ಮೋಡದ ಡೊಳ್ಳು ಹೊಟ್ಟೆ ಡಮ್ಮೆಂದು ಒಡೆದ ಹಾಂಗ' - ಇಂಥ ಸಾಲುಗಳಲ್ಲಿ ಆಂಶಿಕವಾಗಿ ಕಾಣಿಸಿಕೊಂಡಿತ್ತು. ಕವಿ ಸ್ವತಃ ದಲಿತನಾಗಲಿ ಬಲಿತನಾಗಲಿ ಆಗಿರದಿದ್ದರೂ

'ನಂಬಿರಣ್ಣ ಬೇಕಾದದ್ದರಾಣೆ ನಾ ಸತ್ಯ ಹೇಳತೇನಿ'

ಎಂಬುದನ್ನು ಖಚಿತಗೊಳಿಸುವಂತಿದೆ ಈ ಭಾಗದ ಪದ್ಯಗಳು. 'ಸವರ್ಣೀಯನ ಅವರ್ಣೀಯ ಕವಿತೆ'ಯಲ್ಲಾಗಲಿ -

ನಿಮ್ಮ ನೋವಿನ ನೇಗಿಲೀಗ
ನಮ್ಮ ಎದೆಯೇ ಭೂಮಿಯು
ನಿಮ್ಮ ಸಿಟ್ಟಿನ ಅಬ್ಬರಕ್ಕೆ
ನಮ್ಮ ಬುರುಡೆಯೆ ಚಂಡೆಯು

ಜಾತಿವಾದಿಗಳಿಗಾಗಿ ಸಿಂದಾಬಾದನ ಕಥೆಯಲ್ಲಾಗಲಿ -

ಮುದುಕನನ್ನು ಕೆಳಗೆ ಚೆಲ್ಲಿ
ಸಿಂದಬಾದ ಕರುಣೆ ಇಡದೆ
ದೊಡ್ಡಕಲ್ಲು ಹೇರಿ ಕೊಂದ ಕಥೆಯ ಕೇಳಿರಿ ।
ಜಾತಿ ಎಂಬ ಮುದುಕನನ್ನು
ಕೊಂದರ್‍ಯಾವ ಪಾಪವಿಲ್ಲ
ತಲೆಯ ಒಳಗೆ ಹೊತ್ತು ಮಾತ್ರ ತಿರುಗ ಬೇಡಿರಿ;

ನೇರವಾಗಿ, ಅಷ್ಟೇ ಪರಿಣಾಮಕಾರಿಯಾಗಿ 'ಸತ್ಯ'ಕ್ಕೆ ಒತ್ತು ಬಿದ್ದಿರುವುದನ್ನು ಕಾಣುತ್ತೇವೆ. ಇಲ್ಲಿಯ 'ಜಾಡು'ಗಳು ವಿವಿಧ ಛಂದಗಳಲ್ಲಿ ಕಥನ ಕಲೆಯನ್ನುಳಿಸಿಕೊಂಡು ಹೊಸ ಅನಿಸಿಕೆಗಳನ್ನು ಹರಳುಗಟ್ಟಿಸುತ್ತ ಕವಿಯ ನಿಲುವನ್ನು ಪರ್ಯಾಯವಾಗಿ ಮೂಡಿಸುವ ಪ್ರಯತ್ನವನ್ನು ಸಾರ್ಥಕಗೊಳಿಸಿವೆ. ಹೆಚ್ಚಿನ ಕವನಗಳು ಹೆಣ್ಣಿನ ಶೋಷಣೆ-ಸಂಕಷ್ಟಗಳಿಗೇ ಮೀಸಲಾಗಿರುವದು ಇಲ್ಲಿ ಗಮನಾರ್ಹವಾಗಿದೆ.

'ಇತರ ಕವನಗಳು' 'ಆತ್ಮಚರಿತ್ರೆ'ಯಲ್ಲಿ ಕವಿಯ ಆತ್ಮ ವಿಶ್ಲೇಷಣೆಯೊಂದಿಗೆ ಜೀವನದ ಧೋರಣೆಯೂ ವ್ಯಕ್ತವಾಗಿದೆ. ಉಳಿದ ಕವನಗಳು ವ್ಯಂಗ್ಯ ವಿಡಂಬನೆಗಳನ್ನಷ್ಟೆ ಬಂಡವಾಳವಾಗಿಟ್ಟುಕೊಳ್ಳದೆ ಹನಿಗವನಗಳಿಗಿಂತ ಸ್ವಲ್ಪ ಭಿನ್ನ ಮಾದರಿಯಲ್ಲಿ ಮನಸ್ಸಿಗೆ ತಟ್ಟುತ್ತವೆ. ಒಂದು ಉದಾಹರಣೆ ಸಾಕು :

ನೇಗಿಲಿನಿಂದ ಉಳುವಾಗ
ಸರಳ ರೇಖೆ ಕಾಲ;
ಗಾಣದ ಸುತ್ತ ನಡೆವಾಗ
ವರ್ತುಲವೇ ಕಾಲ;
ಬಂಡಿಯ ಸರಕು ಎಳೆವಾಗ
ಚಕ್ರಗತಿಯ ಕಾಲ.
ಹೆಗಲಿನ ಮೇಲೆ ನೊಗವಿರುವಾಗ
ದುಡಿಯುವುದೊಂದೆ ಕಾಲ!
ಕೊಳ್ಳು ಪರಿದವ ಹುಲ್ಲಿಡದಾಗ
ಬಂತು ಎಂಥ ಕಾಲ!!
ಕಟುಕರ ಕೈಗೆ ಒಪ್ಪಿಸಿದಾಗ
ಮಚ್ಚು ಹಿಡಿದ ಕಾಲ !

(ಕಾಲ-ಬರಗಾಲ)

ಬೇರೆ ಕವಿಗಳ ಪ್ರಭಾವದಿಂದ ಪಾರಾಗುವದೆಂದರೆ, ಅವರನ್ನು ಚೆನ್ನಾಗಿ ಅರಗಿಸಿಕೊಂಡು ತನ್ನ ದಾರಿಯನ್ನು ಕಂಡುಕೊಳ್ಳುವದು, ಅಮರನಾಥರು ಹೊಸಗನ್ನಡದ ಎರಡು ಪ್ರಮುಖ ಕಾವ್ಯಮಾರ್ಗಗಳಂತೆಯೇ ಮೂರನೆಯದನ್ನು ಜೀರ್ಣಿಸಿಕೊಂಡು ಶಕ್ತಿ ಪಡೆಯುತ್ತ ಸ್ವಂತ ಹೆಜ್ಜೆಗಳನ್ನಿಡುವ ಪ್ರಯತ್ನದಲ್ಲಿ ಬಹುಮಟ್ಟಿಗೆ ಸಫಲರಾಗಿದ್ದಾರೆ. ಸ್ವಾರ್ಜಿತವಾದ ಪುರಾಣೇತಿಹಾಸ ಪ್ರಜ್ಞೆಯನ್ನು ಸಂದರ್ಭಾನುಸಾರ ಕಾವ್ಯಕ್ಕೆ ಒದಗಿಸಿಕೊಳ್ಳುವಲ್ಲಿ ಅವರು ಪ್ರಬುದ್ಧತೆಯನ್ನು ತೋರಿದ್ದಾರೆ. ಒಟ್ಟಿನಲ್ಲಿ ತಮ್ಮದೇ ಆದ ಕಾವ್ಯ ವ್ಯಕ್ತಿತ್ವವನ್ನು ರೂಪಿಸಿಕೊಂಡಿರುವ ಲಕ್ಷಣಗಳು ಇಲ್ಲಿ ಕಂಡುಬಂದಿರುವುದರಿಂದ ಈ ಕವಿ 'ಹತ್ತರೊಳಗೆ ಹನ್ನೊಂದು' ಎಂಬ ಕೊರಗಿಗೆ ಈಡಾಗದೆ ಧೈರ್ಯದಿಂದ ಮುಂದುವರಿಯುವರೆಂದು ಆಶಿಸುತ್ತೇನೆ. ಅವರ ಮುಂದಿನ ಬೆಳವಣಿಗೆಯೂ ಅಷ್ಟೇ ಕುತೂಹಲಕಾರಿಯಾಗಿದೆ.

(೧೯೮೯)

೫೦

## ಮೊಲಾಯಿಸ್ ಮತ್ತು ಇತರ ಕವನಗಳು

'ಕಳೆದು ಹೋದ ಪದ್ಯಗಳು' ಸಿಕ್ಕ ಮೇಲೆ ಉಳಿದ ಪದ್ಯಗಳೊಂದಿಗೆ ಹೊಸವನ್ನು ಸೇರಿಸಿ ಸುಮಿತ್ರಾ ಹಲವಾಯಿಯವರು 'ಮೊಲಾಯಿಸ್ ಮತ್ತು ಇತರ ಕವನಗಳು' ಎಂಬ ಎರಡನೆಯ ಸಂಕಲನವನ್ನು ಇದೀಗ ಹೊರತರುತ್ತಿದ್ದಾರೆ. ಅಲ್ಲಿಯ ಮತ್ತು ಇಲ್ಲಿಯ ಕವನಗಳನ್ನು ನೋಡಿದಾಗ ಇವರ ಪ್ರಜ್ಞೆ ಯಾವುದೇ ಒಂದು ವಸ್ತುವಿಗೆ ಸೀಮಿತವಾಗದೆ ವೈಯಕ್ತಿಕ, ಸಾಮಾಜಿಕ ಒಮ್ಮೊಮ್ಮೆ ಜಾಗತಿಕ ಸ್ತರಗಳಲ್ಲಿಯೂ ಹರಿದಾಡಿ ಭಾವಗೀತೆ, ವ್ಯಂಗ್ಯ, ವಿಡಂಬನ, ಹಾಸ್ಯ ಪ್ರಕಾರಗಳನ್ನು ಬಳಸಿಕೊಂಡು ಪರಿಸರಕ್ಕೆ ಮುಕ್ತವಾಗಿ ಸ್ಪಂದಿಸುತ್ತ ಹೋಗುವುದನ್ನು ಕಾಣುತ್ತೇವೆ. ಸಂವೇದನೆ ಸಮಾನವಾಗಿದ್ದರೂ ಮನಸಿನ ಏಕಾಗ್ರತೆ ಹಾಗೂ ಕಾವ್ಯದ ಕಸಬುಗಾರಿಕೆ ಅದೇ ಮಟ್ಟದಲ್ಲಿ ಕೆಲಸ ಮಾಡದಿದ್ದಾಗ ವಸ್ತು ವೈವಿಧ್ಯಕ್ಕೆ ಹೆಚ್ಚಿನ ಮಹತ್ವ ಬಾರದೆ ಹೋಗಬಹುದು. ಇದೇ ಕಾರಣಕ್ಕಾಗಿ ಇಲ್ಲಿಯ ಕೆಲವು ಕವನಗಳು ಪ್ರಾರಂಭದಲ್ಲಿ ತೋರುವ ಆಕರ್ಷಣೆಯನ್ನು ಕೊನೆಯಲ್ಲಿ ಉಳಿಸಿಕೊಳ್ಳದೆ ಹೋಗುವದುಂಟು, ಮೊಲಾಯಿಸ್, ಗೆಲಿಲಿಯೊ, ಬೆಕೆಟ್, ಲಿಂಕನ್, ನೆಲ್ಸನ್ ಮಂಡೆಲಾ ಮೊದಲಾದ ವ್ಯಕ್ತಿಗಳನ್ನು ಕುರಿತ ಕವನಗಳನ್ನೇ ನೋಡಬಹುದು:

ಕಪ್ಪು ನೆಲದಲ್ಲೊಂದು ಬೆಳ್ಳಿ ಮರವಾದವನೆ
ಬೆಳಕ ಚೆಲ್ಲಲು ರಕುತ ಹರಿಸಿದವನೆ
* * * * (ಬೆಳ್ಳಿಮರವಾದವನೆ)

ದುರ್ಬೀನಿನಲ್ಲಿ ಕಣ್ಣುಗಳ ನೆಟ್ಟು
ಭೂವ್ಯೋಮ ರವಿ, ಚಂದ್ರ
ನಕ್ಷತ್ರ ಪುಂಜಗಳನೆ ಗುಣಿಸುತ್ತ
ಭೂಮಿ ದುಂಡಗಿದೆಯೆಂದು ಸತ್ಯ ಹೇಳಿ
ಕುದಿವೆಣ್ಣೆ ಕೊಪ್ಪರಿಗೆಯ ಮೇಲೆ
ತುಯ್ಯಲಾಡಿಸಿಕೊಂಡೆಯೇಕೊ
* * * * (ಹುಟ್ಟದಿರು ಇನ್ನೊಮ್ಮೆ)

ಓ ನಡೆದಾಡಿದ ಕರುಣೆ
ಹೂವೊಂದು ಉಸಿರಾಡಿದಂತೆ
........................................
ಹಂದಿಮರಿ ನರಳುವಿಕೆ ಸಹಿಸದವನೇ

(ಲಿಂಕನ್ನಗೆ)

* * * *

ದಪ್ಪ ಬೀಗಗಳ ಜಡಿದು ಮುಚ್ಚಿದ
ಬಾಗಿಲುಗಳ ಹಿಂದೆ
ಕಬ್ಬಿಣದ ಸರಳುಗಳ ಕೈದಿನಲಿ
ನೀ ಕಳೆದ ಇಪ್ಪತ್ತೆಂಟು ವರ್ಷಗಳು
ವ್ಯರ್ಥವಾಗಿಲ್ಲ

(ನೆಲ್ಸನ್ ಮಂಡೆಲಾ)

ಹೀಗೆ ಆಯಾ ವ್ಯಕ್ತಿಗಳ ಗುಣ ವೈಶಿಷ್ಟ್ಯವನ್ನು ಪ್ರಾರಂಭದಲ್ಲಿಯೇ ಆಕರ್ಷಕವಾಗಿ ಮೂಡಿಸಿರುವ ಈ ಪದ್ಯಗಳು ಕೊನೆ ಕೊನೆಗೆ ತೆಳುವಾಗುತ್ತ, ಹೇಳಿಕೆ, ಹಾರೈಕೆ, ಉಪದೇಶಗಳಲ್ಲಿ ಇಂಗಿ ಹೋಗುತ್ತವೆ. (ಬೆಕೆಟ್‌ನನ್ನು ಕುರಿತು 'ಮೌನಿಯಾದ ಮಹಾಮೌನಿ' ಇದಕ್ಕೆ ಕೆಲಮಟ್ಟಿಗೆ ಅಪವಾದವೆನ್ನಬಹುದು) ಕವನದಲ್ಲಿಯ ವಿವರಗಳು ವಾಚ್ಯವಾಗುತ್ತ ಹೋದಂತೆ ಬಂಧ ಸಡಿಲಾಗಿ, ಲಯ ಜಾಳಾಗುವುದನ್ನೂ ಇಲ್ಲಿ ಗಮನಿಸಬಹುದು.

ಆದರೆ ಕವಿ ತನ್ನ ಸಮೀಪದ ಸುತ್ತಣ ಬದುಕಿಗೆ ಗಾಢವಾಗಿ ಸ್ಪಂದಿಸಿದಾಗ ನೈಜಾನುಭವದ ನಿರೂಪಣೆ ತನ್ನಲ್ಲಿ ತೀವ್ರತೆಯೊಂದಿಗೆ ಅಭಿವ್ಯಕ್ತಿ ಪಡೆಯುವದನ್ನು 'ಬದುಕು', 'ಕಿಡಿ', 'ಸಾಕಿನ್ನು', 'ಒದ್ದೆಯಾಗುತ್ತೇನೆ' ಮೊದಲಾದ ಕವಿತೆಗಳು ಪರಿಣಾಮಕಾರಿಯಾಗಿ ಸೂಚಿಸುತ್ತವೆ :

ನಿಮ್ಮ ದಯೆ ಔದಾರ್ಯ
ಕರುಣೆ ಮಮತೆಯ ಶುಷ್ಕ
ಶಬ್ದದನುಕಂಪವು ಸಾಕು ಇನ್ನು
ಬಿಡಿ ಬಿಡಿಸಿ ಬಾಂಧವ್ಯದೆಳೆಗಳನು
ಒಂದೊಂದು ಹರಿದು ಚೆಲ್ಲಿಹೆನೀಗ

(ಸಾಕಿನ್ನು)

* * * *

ಒದ್ದೆಯಾಗುತ್ತೇನೆ ಶಬ್ದಗಳ ಕೊಳದಲ್ಲಿ
ಮತ್ತೊಮ್ಮೆ ಇನ್ನೊಮ್ಮೆ
ನಿನ್ನ ನೆನೆಸಿ

(ಒದ್ದೆಯಾಗುತ್ತೇನೆ)

* * * *

ಯಾರೇಕೆ ಕದಿಯುವರು ರತ್ನವೆನ್ನುತ
ಭ್ರಮಿಸಿ ಕಿಡಿಯನಿಟ್ಟಿದ್ದೆ,
ಕಿಡಿಯೀಗ ಕಿಚ್ಚಾಗಿ ಉರಿಯ ಕೆನ್ನಾಲಿಗೆಯ
ಚಾಚಿ ನೆಕ್ಕುತಿದೆ ನನ್ನ ಮೈತುಂಬ
ಪ್ರೀತಿಯಿಂದ

(ಕಿಡಿ)

'ಬೆಳಕು ತಂದಿಹವು', 'ಬಯಕೆ', 'ಮುಡಿಯಿರಣ್ಣ' ಇವು ಸರಳವಾದ ಭಾವಗೀತಗಳಾಗಿವೆ. ('ನೀನಲ್ಲವೆ ?' ಕೆ.ಎಸ್.ಎನ್ ಅವರ 'ನೀವಲ್ಲವೆ' ಪದ್ಯವನ್ನು ಕೂಡಲೆ ನೆನಪಿಗೆ ತರುತ್ತದೆ.) ಭಾವನೆಯ ವಿವಿಧ ಮಗ್ಗಲುಗಳಿಗೆ ಹಾಯುತ್ತ ಭಾವದ ಸಂಕೀರ್ಣತೆಗೆ ಭಾಷೆಯು ಭಾವಗೀತಾತ್ಮಕತೆ ಒದಗಿದಾಗ ಈ ಕವಿಯ ರಚನೆಗಳು ತನ್ನತನದ ವೈಶಿಷ್ಟ್ಯವನ್ನು ಪಡೆದುಕೊಳ್ಳುತ್ತವೆ. 'ಏನಾಗಲಿ', 'ಸಮಾಗಮ', 'ಚಕ್ರ', 'ಹೆಸರೇನೆ ?' ಕವನಗಳು ಇದಕ್ಕೆ ಉದಾಹರಣೆಯಾಗಿ ನಿಲ್ಲಬಲ್ಲವು.

ಆಶೋತ್ತರಗಳ ಹೊನ್ನ ಕಳಸವಾಗುತ
ಗೆಳೆಯ ನಿನ್ನೊಂದು ಸಂತಸದ ಕ್ಷಣವಾಗಲೆ?
ನಾ ಜಗವ ಬಿಡುತಿರಲು ನೀ ದುಃಖಿಯಾಗುತಿರೆ
ತೊಯ್ದ ರೆಪ್ಪೆಯ ಹನಿಯು ನಾನಾಗಲೆ?
* * * * (ಏನಾಗಲಿ)

ಈಗ ತಣಿದಳು ಪ್ರಕೃತಿ ಪುರುಷನನು ಪಡೆದು
ಶಾಂತಳಾದಳು ಶುಭ್ರ ಬೆಳಕ ಸುರಿದು,
ಮಂದಾರ ಮಲ್ಲಿಗೆ ಪಾರಿಜಾತವ ಸುರಿಸಿ
ಹಸಿರು ಪೀತಾಂಬರದಿ
ಕಿಲಕಿಲನೆ ನಗುತಿಹಳು
ಬೆಳಗ ಬಿಸಿಲಲ್ಲಿ
* * * * (ಸಮಾಗಮ)

ಸುತ್ತಿ ಹರಿಯುವ ನದಿಯು,
ಬೀಸುವ ಗಾಳಿ, ಸುತ್ತೆಲ್ಲ
ರವಿ ಶಶಿಯ ಕಿರಣಗಳು
ಮತ್ತೆ ತಾರೆಯ ಬೆಳಕು
ಹೊತ್ತು ಸೂಸುವ ಗಂಧ
ಸಾರುತಿವೆ ಸುತ್ತುವುದೆ ನೀತಿಯೆಂದು

(ಚಕ್ರ)

'ಪ್ರೀತಿ ಮಮತೆಯ ಭಾವ ಕಂಪನದ ಹೃದಯ'ದಿಂದಲೇ ನಿಸರ್ಗದ 'ಕೊಡುಗೆ'ಯನ್ನು ಸ್ವೀಕರಿಸುವ, ಆದರ ಸ್ನೇಹಕ್ಕೆ 'ಬೇರೆ ಹೆಸರೇಕೆ ?' ಎಂದು ಕೇಳುವ ಧೋರಣೆ ಗಮನಾರ್ಹವಾಗಿದೆ.

ಸಾಮಾಜಿಕ ಪ್ರಜ್ಞೆ ಇವರ ಕವಿತೆಗಳಲ್ಲಿ ಸಹಜವಾಗಿಯೆ ಒಡಮೂಡಿದ್ದರೂ 'ಮಕ್ಕಳ ದಿನಾಚರಣೆ', 'ಟೋಪಿ, ತಲೆ, ಗಂಡಸರು', 'ನಮ್ಮ ಸರಕಾರಾ'ದಂಥ ಪದ್ಯಗಳಲ್ಲಿ ವ್ಯಂಗ್ಯ, ವಿಡಂಬನೆಗಳೊಂದಿಗೆ ಅದು ಪ್ರಖರವಾಗಿಯೇ ಕಾಣಿಸಿಕೊಂಡಿದೆ.

ಬಂಡಾಯದ ದನಿಯಾಗಬೇಕೆಂಬ ಹವ್ಯಾಸವನ್ನಿಟ್ಟುಕೊಳ್ಳದಿದ್ದರೂ ಸುಮಿತ್ರಾ ಹಲವಾಯಿಯವರು ಸಾಂಪ್ರದಾಯಿಕ ದೃಷ್ಟಿಕೋನವನ್ನು ಮೀರಿ ಅಲ್ಲಲ್ಲಿ ಮುಕ್ತಚಿಂತನೆಗೆ ಎಡೆಗೊಟ್ಟಿರುವುದನ್ನೂ ಕಾಣುತ್ತೇವೆ. ಬಂಧದಲ್ಲಿ, ಲಯಗಾರಿಕೆಯಲ್ಲಿ ಹೆಚ್ಚಿನ ಕಾಳಜಿವಹಿಸುತ್ತ ಸಂವೇದನಾಶೀಲವಾದ ಇವರ ಕವಿ ಹೃದಯ ಇನ್ನೂ ಉತ್ತಮ ರಚನೆಗಳನ್ನು ನೀಡಬಲ್ಲುದು. ಈ ದಿಸೆಯಲ್ಲಿ ಅವರಿಗೆ ಹೆಚ್ಚಿನ ಯಶಸ್ಸು ದೊರೆಯಲಿ ಎಂದು ಆಶಿಸುತ್ತೇನೆ.

(೧೯೯೦)

೫೧

## ನೆನಪು ಕಹಿಯಲ್ಲ

ಬಹಳ ಹಿಂದಿನಿಂದಲೇ ಕವಿತೆ ಬರೆಯಲು ಪ್ರಾರಂಭಿಸಿದ ಶ್ರೀ ಸಿ.ಪಿ. ಹೇಮಗಿರಿಮಠ ಇದೀಗ ಅನುಮಾನಿಸುತ್ತಲೇ ತಮ್ಮ ಪ್ರಥಮ ಸಂಗ್ರಹದ ಹಸ್ತಪ್ರತಿಯನ್ನು ನನ್ನ ಕೈಗಿತ್ತಿದ್ದಾರೆ. ಇಂಥ ಎಷ್ಟೊ ಸರಕನ್ನು ತಮ್ಮಲ್ಲಿ ಇನ್ನೂ ಉಳಿಸಿಕೊಂಡಿರುವ ಅವರು ಆಯ್ದ ಕೆಲವನ್ನು ಮಾತ್ರ ಇಲ್ಲಿ ಕೊಟ್ಟಿದ್ದಾರೆನ್ನುವುದನ್ನು ನಾನು ಬಲ್ಲೆ. ಹೊಸಬರನೇಕರಲ್ಲಿ ಕಂಡುಬಾರದ ಅವರ ಈ ಸಂಯಮವನ್ನು ಮೆಚ್ಚಿಕೊಂಡಿರುವ ನಾನು ಈ ಸಂಗ್ರಹದ ಬಗ್ಗೆ ಎರಡು ಮಾತು ಸಂತೋಷದಿಂದ ಬರೆಯುತ್ತಿದ್ದೇನೆ.

'ನೆನಪು ಕಹಿಯಲ್ಲ', ಆಗಬಾರದು. ಅದು ಬಾಳಿನ ಬುತ್ತಿಯಾಗಿರುವಂತೆ ಕಾವ್ಯದ ಸಂಪತ್ತು ಕೂಡ. ನೆನಪಿನ ಉಗ್ರಾಣದಲ್ಲಿ ಅಸ್ತವ್ಯಸ್ತವಾಗಿ ಕೂಡಿಬಿದ್ದ ಅನುಭವಗಳು ಯಾವುದೋ ಒಂದು ಸನ್ನಿವೇಶದಲ್ಲಿ ಕವಿಯ ಪ್ರಸ್ತುತ ಅನುಭವಕ್ಕೆ ಹಿನ್ನಲೆಯ ಬೆಳಕಾಗಿ ಪುಟಗೊಟ್ಟು ಆಕಾರಗೊಳ್ಳಲು (ಶಬ್ದಗಳ ಮೂಲಕ) ಹವಣಿಸಿ ಕವಿತೆ ಜೀವ ತಳೆಯಲು ಕಾರಣವಾಗುತ್ತವೆ. ಅವಕ್ಕೆ ಮುಪ್ಪಿಲ್ಲ 'ನೆನೆಸಿ ಯುವಕನಾಗುತ್ತೇನೆ ಮತ್ತೆ' ಎನ್ನುವಲ್ಲಿ ಈ ಕವಿಯ ಸಹಜ ಕವಿತ್ವದ ದಾರಿ ತೆರೆದುಕೊಂಡಿದೆ.

ಬೆಳಕು ನುಸುಳುವುದಿಲ್ಲ, ಕತ್ತಲಾಗುವದಿಲ್ಲ<br>
...............................................<br>
ಬಯಕೆ ಕುಂದುವದಿಲ್ಲ; ನಿದ್ದೆ ಹರಿಯುವದಿಲ್ಲ

'ಶ್ರಾವಣ ಸೋನೆಮಳೆ'ಯಲ್ಲಿ ನಿಸರ್ಗದ ಸನ್ನಿವೇಶ ಭಾವದ ಬೆಸುಗೆಯಿಂದ ವಿಶಿಷ್ಟವೆನಿಸುತ್ತದೆ. 'ಪ್ರಕೃತಿ ಧರ್ಮ'ದಲ್ಲಿ ಮನುಷ್ಯನ ನಿರ್ಧಾರಗಳು ಏರುಪೇರಾಗುವ ವಾಸ್ತವದ ಅರಿವಿದೆ.

ಆಧುನಿಕ ಜೀವನದ ಅಸಂಬದ್ಧತೆ, ವಿಕ್ಷಿಪ್ತತೆ ಹಾಗೂ ಅವಿವೇಕದ ಪರಿಣಾಮಗಳನ್ನು ಪ್ರತೀಕಾತ್ಮಕವಾಗಿ ಚಿತ್ರಿಸುವ ಪ್ರಯತ್ನ ಇಲ್ಲಿಯ ಬಹುತೇಕ ಕವನಗಳಲ್ಲಿ ಕಂಡುಬರುತ್ತದೆ. 'ನವ, ತುರಿತ, ಕೆರೆತ', 'ಅಸಂಬದ್ಧ', 'ಉಪ್ಪರಿಗೆ' ಮೊದಲಾದ ಕವನಗಳಲ್ಲಿ ಅದು ತಕ್ಕಮಟ್ಟಿನ ಯಶಸ್ಸನ್ನು ಪಡೆದಿದೆ. 'ಅಪ್ಪ', 'ನಾಚಿಕೆ', 'ಕಿತ್ತಳೆ'ಗಳಲ್ಲಿ ಕಾವ್ಯವಸ್ತುವಿನ ಆಚೆಗಿರುವ ಬೇರೊಂದು

ಭಾವದ ಸೂಕ್ಷ್ಮಸೂಚನೆ ಇದೆ. 'ವಿಕ್ಷಿಪ್ತ', 'ವಿನಾಯಕ' ಕವನಗಳ ಪ್ರತೀಕಗಳು ರಾಜಕೀಯ ವೈಪರೀತ್ಯವನ್ನು ಪರಿಣಾಮಕಾರಿಯಾಗಿ ಸಂವಹನಗೊಳಿಸಬಲ್ಲವು.

ವೈಯಕ್ತಿಕ ಜರೂರಿಯನ್ನೂ, ನಿಲುವನ್ನೂ, ಪ್ರತಿಪಾದಿಸುವ ಬೇರೆ ಬಗೆಯ ಕವನಗಳೂ ಇಲ್ಲಿವೆ. 'ಓಟ', 'ಹಿತ್ತಲದ ಸುರಭೂಜ', 'ಕಳೆದುಕೊಂಡಿದ್ದೇನೆ', 'ಹತ್ತರಗೂಡ ಹನ್ನೊಂದು', 'ವಸ್ತಾದಿ', 'ಸ್ವಾಗತ' ಮೊದಲಾದವು ಕಾವ್ಯವ್ಯಕ್ತಿತ್ವದ ಬೇರೊಂದು ಭರವಸೆಯ ಹಾಗೂ ಗೆಲುವಿನ ಮುಖವನ್ನು ಪ್ರತಿಬಿಂಬಿಸುತ್ತವೆ. ಚರಮಗೀತೆಯಲ್ಲಿ ಕಟ್ಟೀಮನಿಯವರ ಸ್ವಭಾವ ಚಿತ್ರಣದೊಂದಿಗೆ ಸಾಧನೆಯ ವೈಶಿಷ್ಟ್ಯವೂ ಸೊಗಸಾಗಿ ಮೂಡಿದೆ. ಅನುಭವದ ಪ್ರಾಮಾಣಿಕತೆಯಿದ್ದಲ್ಲಿ ಕಾವ್ಯಮಾರ್ಗದ ಎಲ್ಲ ಹೊರಳುದಾರಿಗಳಲ್ಲಿಯೂ ತನ್ನ ಅಭಿವ್ಯಕ್ತಿಯನ್ನು ಕಾಪಾಡಿಕೊಳ್ಳುವುದು ಸಾಧ್ಯವೆಂಬುದನ್ನು ಪ್ರಸ್ತುತ ಸಂಗ್ರಹ ತನ್ನ ಮಿತಿಯಲ್ಲಿಯೇ ತೋರಿಸಿಕೊಡುತ್ತದೆ. ಈ ದಿಸೆಯಲ್ಲಿ ಹೇಮಗಿರಿಮಠರಿಗೆ ಇನ್ನೂ ಹೆಚ್ಚಿನ ಯಶಸ್ಸು ದೊರೆಯಲೆಂದು ಹಾರೈಸುತ್ತೇನೆ.

(೧೯೯೦)

೫೨

# ಪುಟ್ಟನ ಹಾಡು

ಕನ್ನಡದಲ್ಲಿ ಶಿಶು ಸಾಹಿತ್ಯಕ್ಕೆ ಇತ್ತೀಚೆಗೆ ಮತ್ತೆ ಹೊಸ ಸತ್ತ್ವ, ಹೊಸ ಕಳೆ ಒದಗಿಬರುತ್ತಿರುವುದು ಸಂತೋಷದ ಸಂಗತಿ. ಉದಿತೋದಿತ ಕವಿಗಳಲ್ಲನೇಕರು ಈ ದಿಸೆಯಲ್ಲಿ ಕಾರ್ಯಪ್ರವೃತ್ತರಾಗಿದ್ದು, ಹೊಸ ಆಶೆಯನ್ನೂ ಭರವಸೆಯನ್ನೂ ಹುಟ್ಟಿಸುತ್ತಿದ್ದಾರೆ. ಹಾಗೆ ಗಮನಿಸಬೇಕಾದವರಲ್ಲಿ ಶ್ರೀ ಅಶೋಕ ಚೊಳಚಗುಡ್ಡ ಅವರೂ ಒಬ್ಬರು, ಕನ್ನಡದ ಪ್ರಸಿದ್ಧ ಪತ್ರಿಕೆಗಳಲ್ಲಿ ಪ್ರಕಟವಾಗಿರುವ ಅವರ ಕವನಗಳು ಈಗಾಗಲೇ ಮಕ್ಕಳ ಮನಸ್ಸನ್ನು ಸೆಳೆದುಕೊಂಡಿವೆ. ಈ ಪ್ರಥಮ ಸಂಕಲನದ ಮೂಲಕ ಅಂಥ ಪದ್ಯಗಳ ಒಂದು ಗುಚ್ಛವನ್ನು ಅವರು ನಾಡಿನ ಮಕ್ಕಳ ಕೈಗೆ ಕೊಡುತ್ತಿದ್ದಾರೆ.

ಮುಗ್ಧ ಮನೋಹರವಾದ ಮಕ್ಕಳ ಪ್ರಪಂಚಕ್ಕೆ ಪ್ರತಿನಿಧಿಯಾಗಿ ಈ ಕವಿತೆಗಳ 'ಪುಟ್ಟ' ಕಂಗೊಳಿಸುತ್ತಾನೆ. ಅಂದಚಂದದ ಕನ್ನಡ ಅಕ್ಷರಗಳನ್ನು ಬರೆಯಲು, ಓದಲು ಹಾಗೂ ಸವಿ ಸವಿ ಪದಗಳನ್ನು ಬಳಸಲು ಅವನು ಹಾತೊರೆಯುತ್ತಿದ್ದಾನೆ. ಕತೆಗಳನ್ನು ಹಾಡುಗಳನ್ನು ಹೇಳಲು ತಾಯಿಗೆ ದುಂಬಾಲು ಬೀಳುತ್ತಿದ್ದಾನೆ. ಹಿಗ್ಗಿನಿಂದ ಪಾಟೀಚೀಲವನ್ನು ಕೈಯಲ್ಲಿ ಹಿಡಿದು ಆಗಲೆ ಶಾಲೆಯನ್ನು ಪ್ರವೇಶಿಸಿದ್ದಾನೆ. ಈ ವಯಸ್ಸಿನ ಮಕ್ಕಳ ಮನೋಧರ್ಮವನ್ನು ಈ ಕವಿ ಚೆನ್ನಾಗಿ ಗ್ರಹಿಸಿದ್ದಾರೆ. ಅವರ ಮನಸ್ಸಿನ ಮುಗ್ಧತೆ, ಅಚ್ಚರಿ, ಕುತೂಹಲಗಳನ್ನು, ವಿನೋದ ಹಾಗೂ ಚೇಷ್ಟೆಯ ಸ್ವಭಾವವನ್ನು, ಸುತ್ತುಮುತ್ತಿನ ವಸ್ತುಗಳಲ್ಲಿ, ಪ್ರಾಣಿ ಪಕ್ಷಿಗಳಲ್ಲಿ ಅವನು ತೋರುವ ಆಸಕ್ತಿಯನ್ನು ಮನೆಯಲ್ಲಿ ವ್ಯಕ್ತಿಗಳ ಬಗ್ಗೆ ಇಟ್ಟುಕೊಂಡಿರುವ ಅಕ್ಕರತೆಯನ್ನು ಸುಲಭವಾಗಿ ತಾವೂ 'ಮಗು'ವಾಗಿ ಕಂಡುಹಿಡಿದು ಅಶೋಕ ಅವರು ಮಕ್ಕಳ ಲೋಕವನ್ನು ಸುಲಭವಾಗಿ ಪ್ರವೇಶಿಸಿದ್ದಾರೆ. ಇದು ಅವರು ಸಾಧಿಸಿರುವ ಮಹತ್ವದ ಮೊದಲ ಹೆಜ್ಜೆ.

ಮಕ್ಕಳ ಕವಿತೆಗಳಲ್ಲಿ ಭಾಷೆ ಒಂದು ಪ್ರಮುಖವಾದ ಅಂಶ. ಮಕ್ಕಳ ಮನಸ್ಸಿಗೆ ಹಿಡಿಸುವ, ಅವರು ಆಗಾಗ ಹಾಡಿ ಮೆಲುಕು ಹಾಕಬಹುದಾದಂತಹ, ಸರಳ ಸುಲಭವಾದ, ಅವರಿಗೆ ಅರ್ಥವಾಗುವ ಭಾಷೆ ಬೇಕು. ಮನೆ ಬಳಕೆಯ ಆಡು ಮಾತುಗಳನ್ನೂ, ಜಾನಪದ ನುಡಿಗಟ್ಟುಗಳನ್ನೂ ಅವರ ಮನಸ್ಸು ಬೇಗ ಹಿಡಿದುಕೊಳ್ಳಬಲ್ಲುದು, ಅವರನ್ನು ಉತ್ಸಾಹದಿಂದ ಕುಣಿಸುವ ಪ್ರಾಸ, ಲಯಗಳು, ಮನಸ್ಸನ್ನು ಅರಳಿಸುವ ಮಧುರ ಭಾವನೆಗಳು ಕವನದಲ್ಲಿರಲೇಬೇಕಾದ ಗುಣ. ಮಾತಿಗಿಂತ ಗೀತ, ಆಡುತ್ತ ಹಾಡುವದು ಅವರಿಗೆ ಪ್ರಿಯ, ಆದ್ದರಿಂದ ಕವನಗಳ ಗೇಯ ಗುಣ, ಲಯ ವಿನ್ಯಾಸ ಮತ್ತು ಪದಗತಿಗಳಿಗೆ ಮಕ್ಕಳ ಪದ್ಯಗಳಲ್ಲಿ

ಹೆಚ್ಚಿನ ಮಹತ್ವ. ಅಲ್ಲಿ ವಸ್ತುವಿಗಿಂತ ಹೇಳುವ ರೀತಿ ಮುಖ್ಯವಾದದ್ದು. ಹೀಗೆ ಭಾಷೆಯ, ಛಂದಸ್ಸಿನ ಮೋಹಕತೆಯ ಮೂಲಕ ವಿಷಯ ಪ್ರವೇಶ ಮಾಡಿಸುವದು ಶಿಶುಗೀತಕಾರನು ಸಾಧಿಸಬೇಕಾದ ಎರಡನೆಯ ಮಹತ್ವದ ಹೆಜ್ಜೆ. ಈ ದಿಸೆಯಲ್ಲಿ ಈ ಕವಿ ಸಾಧಿಸಬೇಕಾದದ್ದು ಸಾಕಷ್ಟಿದ್ದರೂ ಇಲ್ಲಿನ ಕವನಗಳ ಮಟ್ಟಿಗೆ ಪಡೆದಿರುವ ಯಶಸ್ಸು ಹೆಚ್ಚಿನ ಭರವಸೆಯನ್ನು ಹುಟ್ಟಿಸುತ್ತದೆ.

ಇದಕ್ಕೆ ಅನೇಕ ಉದಾಹರಣೆಗಳನ್ನು ಕೊಡಬಹುದಾದರೂ ಆಯ್ದ ಕೆಲವನ್ನು ಮಾತ್ರ ಇಲ್ಲಿ ಎತ್ತಿ ತೋರಿಸಬಹುದಾಗಿದೆ :

ತಪ್ಪನು ಮಾಡಲು ಅಪ್ಪನು ಬಡಿವನು
ಮರುಗುವುದೇತಕೆ ನೀನಮ್ಮ ?
ಅತ್ತರೆ ನೀನೂ ಅಳುವುದು ಏತಕೆ
ತಿಳಿಯದು ಬೇಗನೆ ಹೇಳಮ್ಮ

'ಪುಟ್ಟನ ಪ್ರಶ್ನೆ'ಯಲ್ಲಿಯ ಈ ಮಾತು ಮಕ್ಕಳ ನಿರ್ಮಲವಾದ ಮನಸ್ಸನ್ನು ಚೆನ್ನಾಗಿ ಪ್ರತಿಬಿಂಬಿಸುತ್ತದೆ. ಚಿತ್ರ ಬರೆಯಲು ಬಣ್ಣ ಕುಂಚಗಳನ್ನು ಹಿಡಿದು ಕುಳಿತಾಗಲೂ ಅವನಿಗೆ ಹೊಳೆಯುವ ಅತ್ಯಂತ ಸುಂದರವಾದ ಚಿತ್ರವೆಂದರೆ ತನ್ನ ತಾಯಿಯದೇ ಎನ್ನುವುದರಲ್ಲಿ ಅದೇ ಅಕ್ಕರತೆ ಕಂಡುಬರುತ್ತದೆ. 'ಅಮ್ಮನ ಕೇಳುವೆ' ಪದ್ಯದಲ್ಲಿ ಸೃಷ್ಟಿಯ ಬಗೆಗಿನ ಅಚ್ಚರಿ ಸೊಗಸಾಗಿ ಮೂಡಿದ್ದರೆ, 'ನಮ್ಮ ಅಜ್ಜ' 'ಅಜ್ಜಿಯ ಅಡಿಗೆ' ಪದ್ಯಗಳಲ್ಲಿ ವಿನೋದದೊಂದಿಗೆ ಪ್ರೀತಿ ಸಂತೋಷಗಳು ಸಹಜವಾಗಿ ಅಭಿವ್ಯಕ್ತಿ ಪಡೆದಿವೆ.

ಹಣ್ಣಿನಂತೆ ನಮ್ಮ ಅಜ್ಜಿ
ಬಹಳ ಮೆತ್ತಗೆ
ಹಣ್ಣಿಗಿಂತ ರುಚಿಯು ಬಹಳ
ಅವಳ ಅಡಿಗೆಗೆ

ಉಂಡಿ ಖಾರ, ತಿಂಡಿ ತಿನಿಸು
ಕಡಬು ಸಂಡಿಗೆ
ತಿನ್ನಬೇಕು ಅವಳ ಕೈಯ
ಖೀರು ಮಂಡಿಗೆ

'ಉಲ್ಲಾಸನ ಉಪವಾಸ' ಹಾಗೂ 'ಇಲಿಗಳ ಹಬ್ಬ' ಪದ್ಯಗಳು ಇಡಿಯಾಗಿ ಓದಿ ಸವಿಯಬೇಕಾದ ಉತ್ತಮವಾದ ಹಾಸ್ಯ ಗೀತಗಳಾಗಿವೆ. ಇವು ಮಕ್ಕಳ ಮಸ್ಸನ್ನು ಸುಲಭವಾಗಿ ರಂಜಿಸಬಲ್ಲವು.

ಮಗು ತನ್ನೆದುರಿನ ಪ್ರಪಂಚವನ್ನು ಗ್ರಹಿಸುವುದು ಹಾಗೂ ಅದರ ಸಂಪರ್ಕ ಪಡೆಯುವುದು ಹೆಚ್ಚಾಗಿ ಕಣ್ಣು ಹಾಗೂ ಕಿವಿಯ ಮೂಲಕ. ರೂಪ ಮತ್ತು ನಾದ ಮಗುವಿನ ಮನಸ್ಸನ್ನು

ಬಹುಬೇಗ ಆಕರ್ಷಿಸುತ್ತವೆ. ಹೊಸ ಹೊಸ ವಸ್ತುಗಳು ಅವನ ಕುತೂಹಲವನ್ನು ಹೇಗೆ ಕೆರಳಿಸುತ್ತವೆ ಎಂಬುದಕ್ಕೆ 'ನಮ್ಮ ಮನೆಯ ಟಿ.ವಿ.', 'ನಮ್ಮ ಕ್ಯಾಮರಾ', 'ವಿದ್ಯುತ್ತು' ಇವೇ ಮೊದಲಾದ ಪದ್ಯಗಳು ಒಳ್ಳೆಯ ಉದಾಹರಣೆಗಳಾಗಿವೆ. ಮನೆ ಬಳಕೆಯಲ್ಲಿ ವಿದ್ಯುಚ್ಛಕ್ತಿಯ ಉಪಯುಕ್ತತೆಯನ್ನು 'ವಿದ್ಯುತ್ತು' ಪದ್ಯ ಸುಲಭವಾಗಿ ಸರಳವಾಗಿ, ಅಷ್ಟೇ ಕಾವ್ಯಮಯವಾಗಿ ನಿರೂಪಿಸುತ್ತದೆ.

'ಹಾವು', 'ಚೇಳು'ಗಳ ಬಗ್ಗೆ ಭಯಮಿಶ್ರಿತ ಭಾವಕ್ಕಿಂತ ಆತ್ಮೀಯ ವಿನೋದವೇ ಒಡೆದು ಕಾಣುವದು ಸಹಜವಾಗಿದೆ. ಮಕ್ಕಳ ಲೋಕದ ಇನ್ನೊಂದು ಮುಖ್ಯ ಭಾವವೆಂದರೆ ಕರುಣ. ಇಲ್ಲಿ 'ತಿರುಕ' ಪದ್ಯದ ಪ್ರಾರಂಭವೇ ಮನಸ್ಸನ್ನು ಕರಗಿಸುವಂತಿದೆ :

ಅಮ್ಮಾ ಅಮ್ಮಾ ಒಂದೆ ಸವನೆ
ಕೂಗುವ ನೋಡಮ್ಮ
ಅನ್ನ ಅನ್ನ ಅನ್ನುವ ತಿರುಕ
ಅನ್ನವ ನೀಡಮ್ಮ.

ಗಿಳಿಯ ಅಂದಚೆಂದ, ಆಟ-ಪಾಠ, ತಿಂಡಿ-ತಿನಿಸುಗಳನ್ನೆಲ್ಲ 'ನನ್ನ ಮುದ್ದು ಗಿಳಿ'ಯಲ್ಲಿ ಸೊಗಸಾಗಿ ನಿರೂಪಿಸುತ್ತಲೇ ಕೊನೆಯ ನುಡಿಯಲ್ಲಿ ಕರುಣಭಾವದ ತಿರುವು ಮಗುವಿನ ಮನೋಧರ್ಮವನ್ನು ಪರಿಣಾಮಕಾರಿಯಾಗಿ ಪ್ರತಿಬಿಂಬಿಸುತ್ತದೆ.

ಪಾಪ ನನ್ನ ಮುದ್ದು ಗಿಳಿಯು
ಪಂಜರದಲಿ ಇರುವುದು
ಅದನು ನೋಡಿ ಏಕೊ ಏನೊ
ನನಗೆ ದುಃಖ ಬರುವುದು.

ಇಲ್ಲಿಯ ಪದ್ಯಗಳಲ್ಲಿ ಉಪದೇಶ, ನೀತಿ ಬೋಧನೆ ಇಲ್ಲವೆಂದಲ್ಲ. ಆದರೆ ಅದು ಎಲ್ಲಿಯೂ ಜಡವಾಗದೆ, ಹೇಳಿಯೂ ಹೇಳದಂತೆ ಹಗುರಾಗಿ ಕೇಳಿಸುತ್ತದೆ. 'ಕೋಳಿಮರಿ ಮತ್ತು ಚಂಡು' ಪದ್ಯದಲ್ಲಿ ಸಂಭಾಷಣೆಯಿಂದ ಕೂಡಿದ ಕಥೆಯ ಮೂಲಕ ಅದನ್ನು ಸಾಧಿಸಲಾಗಿದೆ. 'ಪುಟ್ಟನ ಪಾಠ'ದಲ್ಲಿ ಅದು ನೇರವಾಗಿದ್ದರೂ ಭಾರವಾಗಿಲ್ಲ. 'ಪುಟ್ಟನ ಪ್ರವಾಸ' ಹಾಗೂ 'ಪುಟ್ಟನ ಹಾಡು' ಅವನ ಬೆಳವಣಿಗೆಯ ಪ್ರತೀಕವಾಗಿ ಸಂಗ್ರಹದ ಕೊನೆಯಲ್ಲಿರುವದು ಯಥೋಚಿತವಾಗಿದೆ.

ಕೆಲವು ಪದ್ಯಗಳು ಸಹಜಸ್ಫೂರ್ತವಾಗಿರದೆ ನೀರಸ ನಿರೂಪಣೆಗೆ ಎಡೆಗೊಟ್ಟಿರುವುದುಂಟು. ಆದರೆ ಅಂಥ ಪದ್ಯಗಳ ಸಂಖ್ಯೆ ಕಡಿಮೆ. 'ವಿದ್ಯಾ ದೇಗುಲ', 'ದೃಢಕಾಯ', 'ಐಕ್ಯಮಂತ್ರ' ಮೊದಲಾದ ಪದಗಳು ಮಕ್ಕಳಿಗೆ ಅರ್ಥಪೂರ್ಣವೆನಿಸಬೇಕಾದರೆ ನುಡಿಚಿತ್ರಗಳ ಮೂಲಕ ಅವುಗಳ ಭಾವ ಸಂವಹನವನ್ನು ಸಾಧಿಸಬೇಕಾಗುತ್ತದೆ. ಕನ್ನಡದ ದೀಕ್ಷೆ ಪಡೆದಿರುವ ಇಂಗ್ಲೀಷ್ ಪದಗಳ ಪ್ರಯೋಗ ಅನುಚಿತವೆನಿಸಲಾರದು.

ಮಕ್ಕಳ ಮಾನಸಿಕ ಉಲ್ಲಾಸಕ್ಕೆ ನೆರವಾಗುವುದೇ ಈ ಕವಿತೆಗಳ ಮುಖ್ಯ ಗುಣವಾಗಿರುವುದರಿಂದ ಮಕ್ಕಳು ಈ ಪದ್ಯಗಳನ್ನು ತಮ್ಮವೆಂದು ಭಾವಿಸುತ್ತಾರೆಂದು ನಾನು ಆಶಿಸಿದ್ದೇನೆ. ಭಾವ, ಭಾಷೆ, ವಸ್ತು, ರೀತಿಗಳಲ್ಲಿ ನಾವೀನ್ಯವನ್ನು ಸಾಧಿಸುತ್ತ ಇನ್ನೂ ಉತ್ತಮ ರಚನೆಗಳನ್ನು ಈ ಕವಿ ಕನ್ನಡದ ಕಂದರಿಗೆ ನೀಡುವಂತಾಗಲಿ ಎಂದು ಹೃತ್ಪೂರ್ವಕ ಹಾರೈಸುತ್ತೇನೆ.

(೧೯೬೦)

೫೩

# ವಿದ್ಯಾರ್ಥಿ ಕಾವ್ಯ ೯೦

ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಪ್ರಸ್ತುತ ಸಂದರ್ಭದ ಒಂದು ಮುಖ್ಯ ಲಕ್ಷಣವೆನ್ನುವಂತೆ ವಿದ್ಯಾರ್ಥಿ-ಯುವ ಕವಿಗಳು ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತಿದ್ದಾರೆ. ತಮ್ಮದೇ ವೇದಿಕೆಗಳನ್ನು ನಿರ್ಮಿಸಿಕೊಂಡು ಸಾಹಿತ್ಯಿಕ ಚಟುವಟಿಕೆಗಳಲ್ಲಿ ಅವರು ತೊಡಗಿರುವುದೂ ಅಲ್ಲಲ್ಲಿ ಕಂಡುಬರುತ್ತಿದೆ. ರಾಜ್ಯ ಸಾಹಿತ್ಯ ಅಕಾಡೆಮಿಯು ಕೂಡ ಪ್ರತಿವರ್ಷ ಯುವ ಕವಿ ಸಮ್ಮೇಳನವೊಂದನ್ನು ನಡೆಸಲು ಕಳೆದ ಎರಡು ವರ್ಷಗಳಿಂದ ಪ್ರಾರಂಭಿಸಿದೆ. ಬೆಂಗಳೂರಿನ ಕ್ರೈಸ್ಟ್ ಕಾಲೇಜಿನ ಮಾದರಿಯಲ್ಲಿ ಕೆಲವು ಕಾಲೇಜುಗಳ ಕರ್ನಾಟಕ ಸಂಘಗಳು ವಿದ್ಯಾರ್ಥಿ ಪ್ರತಿಭೆಯನ್ನು ಗುರುತಿಸಿ ಪ್ರೋತ್ಸಾಹಿಸುವುದರಲ್ಲಿ ಮುಂದಾಗಿವೆ. ಹೊಸಪೇಟೆಯ ವಿಜಯನಗರ ಕಾಲೇಜಿನ ಕರ್ನಾಟಕ ಸಂಘ ಈ ದಿಸೆಯಲ್ಲಿ ಇದೀಗ ಹೆಚ್ಚಿನ ಆಸಕ್ತಿ ವಹಿಸಿ ಅಖಿಲ ಕರ್ನಾಟಕ ವಿದ್ಯಾರ್ಥಿ ಕವಿ ಸಮ್ಮೇಳನವನ್ನು ನಡೆಸಲು ಯೋಜಿಸಿರುವುದಲ್ಲದೆ ಈ ಕವಿಗಳ ಪ್ರಾತಿನಿಧಿಕ ಕವನ ಸಂಗ್ರಹವೊಂದನ್ನು ಪ್ರಕಟಿಸುವ ಪ್ರಶಂಸನೀಯ ಕಾರ್ಯವನ್ನು ಕೈಗೊಂಡಿದೆ. ಕಾಲೇಜಿನ ಕನ್ನಡ ವಿಭಾಗದ ಮುಖ್ಯಸ್ಥರೂ ನನ್ನ ಸ್ನೇಹಿತರೂ ಆದ ಡಾ. ಬಸವರಾಜ ಮಲಶೆಟ್ಟಿಯವರ ಅಪೇಕ್ಷೆಯ ಮೇರೆಗೆ ಅವರ ಸಂಘದ ಸಾಹಸದ ಫಲವಾದ 'ವಿದ್ಯಾರ್ಥಿ ಕಾವ್ಯ-೯೦'ಕ್ಕೆ ಅತ್ಯಂತ ಸಂತೋಷದಿಂದ ಈ ನಾಲ್ಕು ಮಾತು ಬರೆಯುತ್ತಿದ್ದೇನೆ.

ಪದವಿ ತರಗತಿಗಳಲ್ಲಿ ಅಭ್ಯಸಿಸುತ್ತಿರುವ ಬೇರೆ ಬೇರೆ ಕಾಲೇಜುಗಳ ನಾಲ್ವತ್ತೊಂದು ವಿದ್ಯಾರ್ಥಿಗಳ ಒಂದೊಂದು ಕವಿತೆಯನ್ನು ಪ್ರಸ್ತುತ ಸಂಗ್ರಹ ಒಳಗೊಂಡಿದೆ. ತಮ್ಮ ಸುತ್ತಮುತ್ತಲಿನ ಬದುಕಿಗೆ, ಅದರ ಆಗು-ಹೋಗುಗಳಿಗೆ ಸ್ಪಂದಿಸುತ್ತ, ಒದಗಿದ ಅನುಭವಗಳಿಗೆ ತಮ್ಮದೇ ಆದ ರೀತಿಯಲ್ಲಿ ಪ್ರತಿಕ್ರಿಯೆ ತೋರಿಸುತ್ತ ಭಾಷೆಯಲ್ಲಿ ರೂಪು ಕೊಡುವ ಉತ್ಸಾಹದ ಪ್ರಯತ್ನಗಳನ್ನು ಇಲ್ಲಿ ಕಾಣುತ್ತೇವೆ. ಅವುಗಳಲ್ಲಿ ಕೆಲವು ಆಯ್ದ ಕವಿತೆಗಳ ಗುಣಲಕ್ಷಣಗಳನ್ನು ಮಾತ್ರ ಎತ್ತಿತೋರಿಸುವುದು ಇಲ್ಲಿ ನನ್ನ ಉದ್ದೇಶವಾಗಿದೆ.

ಆ ಹುಡುಗ  
ರಾತ್ರಿ ಮನೆಯ ಬಾಗಿಲ ಮುರಿದು  
ಹೊರಟವನು ಹೋಗಿಯೇ ಬಿಟ್ಟ ದಾರಿ ಹಿಡಿದು.

ಪ್ರಾರಂಭದಲ್ಲಿಯೇ ಹೀಗೆ ಕುತೂಹಲ ಹುಟ್ಟಿಸುವ 'ದಾರಿ' ಕವನ ತೀರ ಅವಶ್ಯವೆನಿಸುವ ವಿವರಗಳನ್ನು ಮಾತ್ರ ಹಿಡಿದು 'ಭಾರವಾಗಿಹ ದೇಹ', 'ಕನಸು ತುಂಬಿದ ತಲೆ'ಯ ಆ ಹುಡುಗ ಒಂದು ಬಗೆಯಲ್ಲಿ ಇಂದಿನ ಯುವ ಮನಸ್ಸಿನ ಪ್ರತೀಕವಾಗಿ, ಕವಲು ದಾರಿ, ಕಾಲು ದಾರಿ, ಹೆದ್ದಾರಿಗಳಲ್ಲಿ ಹಾಯ್ದು ಮೂಲದ ದಾರಿಗೆ ಬರುವ ಬಗೆಗಿನ ಕವಿಯ ಕಾಳಜಿಯೊಂದಿಗೆ 'ದಾರಿ' ಹೆಚ್ಚಿನ ಒತ್ತು ಪಡೆಯುತ್ತದೆ. ಪ್ರೇಮದಲ್ಲಿ ವಂಚಿಸಿ, ಸ್ವಾರ್ಥ ಸಾಧಿಸಿಕೊಂಡು ವ್ಯಕ್ತಿಯ ಎರಡು ಬಗೆಯ ಕ್ರಿಯೆಗಳನ್ನು 'ಅತಿಥಿ' ಪದ್ಯದ ಎರಡು ಭಾಗದ ನುಡಿಚಿತ್ರಗಳು ಸಮರ್ಥವಾಗಿ ಸೂಚಿಸಿವೆ. ತನಗೆ ಬೇಕಾದುದನ್ನು ಬೆಳೆಸಿಕೊಳ್ಳಲು ಸುತ್ತ ಹಚ್ಚಿದ 'ಮುಳ್ಳಬೇಲಿ', 'ತನ್ನದೆಲ್ಲವ ಕೊಯ್ದುಕೊಂಡು' ಹೋದ ಮೇಲೆ ಪಡೆಯುವ ಸಾಂಕೇತಿಕತೆ ಅರ್ಥಪೂರ್ಣವಾಗಿದೆ. ಪ್ರತಿಮೆಗಳನ್ನು ದೃಷ್ಟಾಂತಗಳಾಗಿ ದುಡಿಸಿಕೊಂಡ ಕವಿತೆ 'ಕನಸುಗಳೇ ಹೀಗೆ' ಹೇಗೆ ? ಎನ್ನುವುದಕ್ಕೆ ಒಂದು ನುಡಿ ಉದಾಹರಿಸಬಹುದು :

ಎಂಬತ್ತರ ಮುದುಕಮ್ಮನ
ತುಟಿಯಲಡಗಿದ
ಸವಿ ನೆನಪುಗಳ ತಾಂಬೂಲದ ಹಾಗೆ.

ತಂದೆಯ ಉಪದೇಶ 'ಗಲಿಬಿಲಿಗೊಂಡ' ಮಗನ ಮೂಲಕ ಅವನಿಗೇ ಚುರುಕು ಮುಟ್ಟಿಸುವ ತಂತ್ರ 'ವಾಸ್ತವ' ಪದ್ಯದಲ್ಲಿ ಪರಿಣಾಮಕಾರಿಯಾಗಿದೆ. 'ಜೋಪಡಿಯ ಕಂಬಕ್ಕೊರಗಿ' ನಿಂತ 'ಹೊಟ್ಟೆ ಬೆನ್ನಿಗಂಟಿದ' ಮಗುವಿನಲ್ಲಿ ತನ್ನ ಬಾಲ್ಯವನ್ನು ಸಮೀಕರಿಸಿಕೊಳ್ಳುವ 'ಮಗುವೇ' ಕವಿತೆ ಉದ್ವೇಗಕ್ಕೆಡೆಗೊಡದೆ -

ಚೀಪಿದರೆ ಹೆಬ್ಬೆಟ್ಟು
ಹಾಲು ಬಂತೆ ?

* * * *

ಹುಟ್ಟಿಸಿದವ ಹುಲ್ಲು ಮೇಯಿಸಲಾರ
ಹಿಟ್ಟು ನೀಡಿ ಬದುಕಿಸಲಾರ

ಎಂಬಂತಹ ಮಾತುಗಳಿಂದ ವ್ಯಂಗ್ಯವನ್ನಡಗಿಸಿಕೊಂಡು ಅನುಕಂಪಕ್ಕೆ ಅರ್ಥವನ್ನೊದಗಿಸುತ್ತವೆ. ವಸ್ತು ಯಾವುದೇ ಆಗಬಹುದು; ಆದರೆ ಕವಿ ಅದನ್ನು ಕಂಡ ರೀತಿ, ಆ ಬಗ್ಗೆ ಹೊಮ್ಮುವ ಅವನ(ಳ) ಭಾವನೆಗಳು ಮುಖ್ಯ ಎನ್ನುವುದಕ್ಕೆ 'ಲೈಟುಕಂಬ' ಒಳ್ಳೆಯ ಉದಾಹರಣೆಯಾಗಬಲ್ಲದು. ಶೃಂಗಾರ ಕಾವ್ಯರಚನೆಗೆ ಪ್ರೇರಕ ಎಂಬುದು ಸಾಮಾನ್ಯ ಭಾವನೆ. ಆದರೆ ಜೀವನದ ಇಂದಿನ ದಾರುಣ ಪರಿಸ್ಥಿತಿಯಲ್ಲಿ ಸಾಮಾಜಿಕ ಎಚ್ಚರವುಳ್ಳ ಕವಿಯ 'ನನ್ನ ಕಾವ್ಯ' ಬಂಡಾಯ ಪ್ರಜ್ಞೆಯಿಂದ ಸಿಡಿದೇಳುತ್ತದೆ :

ಹಿಟ್ಟಿಲ್ಲದ ಹೊಟ್ಟೆಯಿಂದ
ಬೆಂಕಿಯಾಗಿ ಹುಟ್ಟುತ್ತಿದೆ ನನ್ನ ಕಾವ್ಯ
ಗೆಳತೀ
ನಿನ್ನ ಪುಷ್ಪಾಲಂಕೃತ ಜುಟ್ಟಿನಿಂದಲ್ಲ.

ಅನುಭವದ ಸಂಕೀರ್ಣತೆಯನ್ನು ಅಭಿವ್ಯಕ್ತಿಗೊಳಿಸುವ 'ಭವಿಷ್ಯ' ಪದ್ಯ ಸಂವಹನಕ್ಕೆ ಕೆಲಮಟ್ಟಿನ ಆತಂಕವನ್ನು ತಂದುಕೊಂಡಿದ್ದರೆ 'ನಾನು' ಕವಿತೆ ಅದನ್ನು ನಿವಾರಿಸಿಕೊಂಡು ಸರಳವಾಗಿ ಸ್ಪಂದಿಸುತ್ತದೆ.

ಈ ಸಂಗ್ರಹದ ಅರ್ಧಕ್ಕಿಂತಲೂ ಹೆಚ್ಚಿನ ಕವಿತೆಗಳು ಹನಿಗವನಗಳಿಗೆ ಸಮೀಪವರ್ತಿಯಾದ ಕಿರುಗವನಗಳಾಗಿವೆ. ತಮ್ಮ ಅನಿಸಿಕೆಗಳನ್ನು, ಭಾವನೆಗಳನ್ನು ರೂಪಕದಲ್ಲಿಯೊ, ನುಡಿಚಿತ್ರದಲ್ಲಿಯೊ ಹಿಡಿದಿಟ್ಟು ಓದುಗರ ಗಮನವನ್ನು ಕೆಲವು ಸೆಳೆಯುವಂತಿದ್ದರೆ ('ವೃದ್ಧಾಪ್ಯ', 'ಮುಂಗಾರು', 'ನೆನಪುಗಳು', 'ಹೆಣ್ಣು' ಇತ್ಯಾದಿ), ಇವು ಕೆಲವು ವಿಡಂಬನೆಯಿಂದ ವಿಶಿಷ್ಟ ದೃಷ್ಟಿಕೋನದಿಂದ ಹಾಗೂ ಮಾತಿನ ಚಮತ್ಕಾರದಿಂದ ಚುರುಕು ಮುಟ್ಟಿಸುತ್ತವೆ ('ಬಾಗಿಲು', 'ಪ್ರಾಬ್ಲಮ್', 'ಚಿರವಿರಹಿ', 'ಹುಟ್ಟು', 'ಯಾರದು?', 'ರಾಜಕಾರಣಿ', 'ಚಂದ್ರ' ಇತ್ಯಾದಿ) ಒಂದನ್ನು ಇಲ್ಲಿ ಉದಾಹರಿಸಬಹುದು.

ತಿಳಿದವನ ಮುಂದೆ
ಆಶ್ವಾಸನೆಗಳ ಮಳೆ ಸುರಿಸಿ
ಹೆಬ್ಬೆಟ್ಟಿನವರಿಗೆ ನೋಟು ತೋರಿಸಿ
ಓಟನ್ನು ಗಳಿಸಿ
ಸೀಟನ್ನು ಭದ್ರಪಡಿಸಿಕೊಂಡು
ರಾಜಾ ಆಗುವ ಕಾರಣ
ಇವನು ರಾಜಕಾರಣಿ.

ಈ ಬಗೆಯ ರಚನೆಗಳು ಯುವ ಕವಿಗಳನ್ನು ಹೆಚ್ಚಾಗಿ ಆಕರ್ಷಿಸಿರುವುದು ಸಹಜವೆನಿಸಿದರೂ ಅವರ ಪ್ರತಿಭೆ ಅಷ್ಟಕ್ಕೇ ಸೀಮಿತಗೊಳ್ಳದಂತೆ, ಕೇವಲ ಸೌಲಭ್ಯಾಕಾಂಕ್ಷೆಗೆ ಒಳಗಾಗದಂತೆ ನೋಡಿಕೊಳ್ಳುವುದೂ ಅಷ್ಟೇ ಅವಶ್ಯವೆನಿಸಿದೆ.

ಈ ಕವನಗಳಲ್ಲಿ ತಕ್ಕಮಟ್ಟಿಗೆ ವಿಷಯ ವೈವಿಧ್ಯವಿದ್ದರೂ ಬಳಸಿರುವ ಮುಕ್ತಛಂದ ಶೈಥಿಲ್ಯಕ್ಕೆ ಒಳಗಾಗಿರುವುದು ಒಡೆದು ಕಾಣುತ್ತದೆ. ಕವಿತೆಗೆ ವಿಶಿಷ್ಟವಾಗಿರುವ ಲಯವನ್ನು ಕಂಡುಕೊಂಡು, ಭಾಷೆ ತಕ್ಕ ಹದವನ್ನು ಪಡೆಯುವಂತೆ ಪರಿಶ್ರಮಿಸುವುದು ಅವಶ್ಯವೆಂಬುದನ್ನು ಇಲ್ಲಿ ಒತ್ತಿ ಹೇಳಬೇಕಾಗಿದೆ. ನಿಯತಲಯ ಹಾಗೂ ಛಂದೋಬದ್ಧ ಪ್ರಯೋಗಗಳನ್ನು ಅವರು ಪೂರ್ಣ ಕಡೆಗಣಿಸಬೇಕಾಗಿಲ್ಲ. ಹಿಂದಿನ ಹಾಗೂ ಇಂದಿನ ಹಿರಿಯ ಕವಿಗಳ ಕಾವ್ಯದ ಅಭ್ಯಾಸದ ಜೊತೆಗೆ ಅವರ ಒಲವು-ನಿಲುವುಗಳು ತಮ್ಮವೆಂದು ಭಾವಿಸದೆ, ಯಾವುದೇ ಬಗೆಯ

ಗೊಂದಲಕ್ಕೀಡಾಗದೆ, ನೈಜಾನುಭವದಿಂದ ಹೊಸತನವನ್ನೇನಾದರೂ ಅಭಿವ್ಯಕ್ತಿಗೊಳಿಸಲು ನಮ್ಮ ವಿದ್ಯಾರ್ಥಿ ಕವಿಗಳು ಪ್ರಯತ್ನಿಸುತ್ತಾರೆಂದು ಆಶಿಸುತ್ತೇನೆ. ಉದಯೋನ್ಮುಖ ಕವಿಗಳೆಂದು ಗುರುತಿಸಬಲ್ಲ ಕೆಲವರಾದರೂ ಈ ಸಂಕಲನದ ಪ್ರಕಟನೆಯ ಸಂದರ್ಭದಲ್ಲಿ ಕಾಣಿಸಿಕೊಂಡಿರುವುದು ನಿಜಕ್ಕೂ ಸಂತೋಷದ ಸಂಗತಿ. ಪ್ರೋತ್ಸಾಹದ ಜೊತೆಗೆ ಸರಿಯಾದ ಮಾರ್ಗದರ್ಶನ ಹಾಗೂ ವಿಮರ್ಶೆ ವಿದ್ಯಾರ್ಥಿ ಕವಿಗಳಿಗೆ ದೊರೆತು ಕರ್ನಾಟಕ ಸಂಘದ ಈ ಸ್ತುತ್ಯ ಪ್ರಯತ್ನ ಸಾರ್ಥಕಗೊಳ್ಳುವಂತಾಗಲಿ ಎಂದು ಹೃತ್ಪೂರ್ವಕ ಹಾರೈಸುತ್ತೇನೆ.

(೧೯೬೦)

೫೪

# ಗಗನದಿ ಗಾಳಿಪಟ

ಮಕ್ಕಳ ಪದ್ಯಗಳ ಹೆಸರಿನಲ್ಲಿ ಇಂದು ಅನೇಕ ಕವನ ಸಂಗ್ರಹಗಳು ಪ್ರಕಟವಾಗುತ್ತಿದ್ದರೂ ಅವುಗಳಲ್ಲಿ ಮಕ್ಕಳ ಕುತೂಹಲವನ್ನು ಕೆರಳಿಸಿ, ಅವರ ಮನಸ್ಸನ್ನು ಅರಳಿಸಬಲ್ಲ ಕವಿತೆಗಳನ್ನು ಹುಡುಕಿಯೇ ತೆಗೆಯಬೇಕಾಗುತ್ತದೆ. ಇದಕ್ಕೆ ಮುಖ್ಯ ಕಾರಣವೆಂದರೆ ಬಹಳಷ್ಟು ಇಂಥ ಪದ್ಯಗಳ ಭಾವ-ಲಯ-ರೀತಿಗಳಲ್ಲಿರುವ ಹೊಸತನದ ಅಭಾವ. ಪ್ರಕಾಶ ಎಸ್. ಮನ್ನಂಗಿಯವರ ಪ್ರಸ್ತುತ ಸಂಕಲನದ ಕೆಲವು ಪದ್ಯಗಳಲ್ಲಿಯಾದರೂ ಅಂಥ ಹೊಸತನ ಕಂಡುಬರುತ್ತಿರುವುದು ಸಂತೋಷದ ಸಂಗತಿಯಾಗಿದೆ.

'ಗಗನದಿ ಗಾಳಿಪಟ' ವಾಡಿಕೆಯಂತೆ ಗಾಳಿಪಟದ ನೇರ ವರ್ಣನೆಗೆ ತೊಡಗದೆ 'ನಾಗಾಲೋಟದಿ ಗಗನದಿ ಹಾರುವ' ಅದನ್ನು ನೋಡಿ, ಗೊರವಂಕ, ಗುಬ್ಬಿ, ಗಿಳಿ, ಕಾಗೆ ಮೊದಲಾದ ಪಕ್ಷಿಗಳು ತೋರಿಸುವ ವಿವಿಧ ಬಗೆಯ ಪ್ರತಿಕ್ರಿಯೆಯ ಮೂಲಕ ಅದರ ಸ್ವರೂಪವನ್ನು ಚಿತ್ರಿಸುವದರಲ್ಲಿ ಒಂದು ಸೊಗಸಿದೆ. ಹಕ್ಕಿಯ ಜೊತೆಗೆ ಹಾರಿಹೋಗಬೇಕೆಂಬ 'ಕಂದನ ಬಯಕೆ'ಯಲ್ಲಿ ಅಪ್ಪನ ಹೊಡೆತ, ಮೇಷ್ಟರ ಬಡಿತವನ್ನು ತಪ್ಪಿಸಿಕೊಳ್ಳುವುದೂ ಒಂದು ಕಾರಣವಾಗಿರುವುದಾಗಲಿ ಹಾಗೂ 'ಸೂಟಿಯ ದಿನಗಳ'ಲ್ಲಿ 'ಪಾಟಿಯ ಎಸೆದು, ಪುಸ್ತಕ ಹರಿದು, ಹಡಗನು ಮಾಡಲು ತೊಡಗುವ' ಮಗುವಿನ ಕ್ರಿಯೆಯಾಗಲಿ ಸ್ವಾಭಾವಿಕತೆಯಿಂದ ಆಪ್ತವಾಗುತ್ತದೆ. 'ನೋಡಿದಿರಾ?' 'ಇವನಾರು?' ಪದ್ಯಗಳೂ ಇದೇ ಬಗೆಯ ಲವಲವಿಕೆಯಿಂದ ಖುಷಿಕೊಡುತ್ತವೆ.

ಜಿಂಕೆಯಂತೆ ಓಡಿ ಮೋಡಿ ಮಾಡುವ, ಸಿಂಹದಂತೆ ಒಮ್ಮೆಲೆ ಗುಡುಗಿ ಗರ್ಜಿಸುವ, ಮಂಗಗಳಂತೆ ಜಿಗಿದಾಡುವ, ಕರಡಿಗಳಂತೆ ಲಾಗಹಾಕುವ ಮೋಡಗಳ ಡೊಂಬರಾಟ, ಅದನ್ನೆಲ್ಲ ನೋಡಿ ಕುಲು ಕುಲು ನಗುವ ಕಾಮನಬಿಲ್ಲು - ಇಂಥ ಒಂದು ಚೇತೋಹಾರಿ ರೂಪಕದಿಂದ 'ಗಗನದ ಗಾರುಡಿ' ಮಕ್ಕಳ ಕಲ್ಪನೆಯನ್ನು ಕುದುರಿಸಿ ಕುಣಿದಾಡಿಸಬಲ್ಲದು.

ಪ್ರಕಾಶ ಮನ್ನಂಗಿ ಈ ಹಾದಿಯಲ್ಲಿ ಮುನ್ನಡೆದು ತಮ್ಮ ನವನವೀನ ಪದ್ಯಗಳಿಂದ ಮಕ್ಕಳ ಸಾಹಿತ್ಯಕ್ಕೆ ಇನ್ನೂ ಹೆಚ್ಚಿನ ಕೊಡುಗೆಯನ್ನು ನೀಡುವಂತಾಗಲಿ ಎಂದು ಹಾರೈಸುತ್ತೇನೆ.

(೧೯೯೧)

೨೨

# ಕಾವ್ಯ ಮಂಜರಿ

ಶ್ರೀ ವಾಲಿ ಗಂಗಪ್ಪನವರು ತಮ್ಮ 'ಕಾವ್ಯ ಮಂಜರಿ'ಗೆ ನನ್ನ ಮುನ್ನುಡಿಯನ್ನು ಅಪೇಕ್ಷಿಸಿದಾಗ ಹಿಂಜರಿಯದೆ ಒಪ್ಪಿಕೊಳ್ಳಬೇಕಾಗಿ ಬಂದದ್ದಕ್ಕೆ ಕಳೆದ ನಾಲ್ವತ್ತು ವರ್ಷಗಳಿಂದಲೂ ಬೆಳೆದುಕೊಂಡು ಬಂದ ನಮ್ಮ ನಡುವಿನ ಸ್ನೇಹ ವಿಶ್ವಾಸಗಳೇ ಮುಖ್ಯ ಕಾರಣ ಎಂಬುದನ್ನು ಮೊದಲಿಗೇ ಹೇಳಬಯಸುತ್ತೇನೆ. ಎಂಬತ್ತನ್ನು ದಾಟಿರುವ, 'ಎನಗಿಂತ ಕಿರಿಯರಿಲ್ಲ' ಎಂದು ಭಾವಿಸಿರುವ ಈ ಹಿರಿಯರು ಭೆಟ್ಟಿಯಾದ ಸಲಕ್ಕೊಮ್ಮೆ ಎರಡೂ ಕೈಗಳನ್ನು ಗಟ್ಟಿಯಾಗಿ ಹಿಡಿದು ತಮ್ಮ ಪ್ರೀತಿಯನ್ನು ವ್ಯಕ್ತಪಡಿಸುವ ಮುಗ್ಧತೆಗೆ ನಾನು ಮಾರುಹೋಗಿದ್ದೇನೆ. ಹುಬ್ಬಳ್ಳಿಯ ದುರ್ಗದ ಬೈಲಿನಲ್ಲಿ ಕಂಡೂ ಕಾಣದಂತಿರುವ ಚಿಕ್ಕ ಅಂಗಡಿಯೊಂದರಲ್ಲಿ ಬೆಳಗಿನಿಂದ ಸಂಜೆ ವರೆಗೆ ತಕ್ಕಡಿ ತೂಗುವ ಕಾರ್ಯ ನಡೆದಿದ್ದರೂ ಬಿಡುವು ದೊರೆತಾಗೆಲ್ಲ ಯಾವುದೊ ಕವಿತೆಯ ಸಾಲುಗಳನ್ನು ಗುಣುಗುಣಿಸುತ್ತ, ಪ್ರಾಸಾನುಪ್ರಾಸಗಳನ್ನು ತೂಗಿ ನೋಡುತ್ತ, ಒಳಮನಸ್ಸಿನಲ್ಲಿ ನುಡಿಸುವ ಕಿನ್ನರಿಯೊಂದರ ನಾದಲಹರಿಯಲ್ಲಿ ಅವರು ಮಗ್ನರಾಗಿರುವುದನ್ನು ನಾನು ಅನೇಕ ಸಲ ಕಂಡಿದ್ದೇನೆ. ರತ್ನಾಕರವರ್ಣಿಯ ಮಾತಿನಲ್ಲಿ ಹೇಳುವುದಾದರೆ ಇದು ಗಂಗಪ್ಪನವರು ಸಾಧಿಸಿಕೊಂಡು ಬಂದ 'ಆತ್ಮಲೀಲಾನುವೃದ್ಧಿ' ಎನ್ನಬಹುದು.

ಮಾಧ್ಯಮಿಕ ಶಿಕ್ಷಣವನ್ನು ಅರ್ಧಕ್ಕೇ ಬಿಟ್ಟು (ಇಂಗ್ಲೀಷ್ ೩ನೆಯ ಇಯತ್ತೆ) ವ್ಯಾಪಾರಕ್ಕೆ ತೊಡಗಬೇಕಾಗಿ ಬಂದ ಗಂಗಪ್ಪನವರ ಕಾವ್ಯದ ಗೀಳು ವೇದಾಂತಪ್ರಿಯರೂ ಸಾಹಿತ್ಯಪ್ರೇಮಿಗಳೂ ಆಗಿದ್ದ ತಂದೆ ವೀರಪ್ಪನವರಿಂದ ಬಳುವಳಿಯಾಗಿ ಬಂದಿದ್ದರೂ ಸ್ವಾಧ್ಯಾಯದಿಂದ, ಅಂತರಂಗದ ಶ್ರದ್ಧೆಯಿಂದ ಅದನ್ನು ವೃದ್ಧಿಗೊಳಿಸಿಕೊಂಡು ಬಂದ ರೀತಿ ಅಚ್ಚರಿಗೊಳಿಸುವಂಥದು. ಷಡಕ್ಷರದೇವ ಹಾಗೂ ಲಕ್ಷ್ಮೀಶರ ಕಾವ್ಯಗಳು, ಶರಣರ ವಚನ ಹಾಗೂ ಅನುಭಾವ ಪದಗಳು, ಸರ್ವಜ್ಞನ ತ್ರಿಪದಿಗಳು ಅವರ ನಿತ್ಯದ ಅಭ್ಯಾಸಕ್ಕೆ ಒಳಗಾದವು. ಬೇಂದ್ರೆ, ಕುವೆಂಪು, ಡಿವಿಜಿ ಮೊದಲಾದವರು ಅವರ ಮೆಚ್ಚಿನ ಕವಿಗಳಾದರು. ಚಿಕ್ಕಂದಿನಿಂದಲೇ ಒದಗಿ ಬಂದ ಸಂಗೀತದ ಒಲವು ಶ್ರೀ ಮಲ್ಲಿಕಾರ್ಜುನ ಮನಸೂರ ಅವರ ಸಂಪರ್ಕದಿಂದ ಇನ್ನಷ್ಟು ಕುದುರುವಂತಾಯಿತು. ಇಂಗ್ಲೀಷ್ ರೋಮ್ಯಾಂಟಿಕ್ ಕವಿಗಳ ಬಿಡಿಗವನಗಳಿಗೆ ಇವರ ಹೃದಯ ತುಡಿಯಿತು, ರವೀಂದ್ರರಂತೆಯೇ ಎಂ.ಎನ್. ರಾಯ್ ಅವರ ವೈಚಾರಿಕತೆಗೂ ಮನಸ್ಸು ತೆರೆದುಕೊಂಡಿತು. ದಿ. ನರೇಗಲ್ ಪ್ರಲ್ಹಾದರಾಯರು ಕಂಡಂತೆ "ಇವರ ಅಂಗಡಿ ಸದಾಕಾಲ ಸಾಹಿತಿಗಳ ಸಮಾಗಮ ಕೇಂದ್ರವೂ, ವಿದ್ವನ್ಮಣಿಗಳ ಚರ್ಚಾಕೂಟ ಸ್ಥಳವೂ" ಆಗಿ ಪರಿಣಮಿಸಿತು. "ಅವರು ವೃತ್ತಿಯಿಂದ

ವ್ಯಾಪಾರಸ್ಥರು. ಶೀಲದಿಂದ ಗೃಹಸ್ಥರು, ಹೃದಯದಿಂದ ಕವಿಗಳು, ಕಲಾತ್ಮಕತೆಯಿಂದ ಸಹಜ ಗಮಕಿಗಳು" ಎಂದು ಬೇಂದ್ರೆಯವರಿಂದ "ಗುಣಮಣಿಯಾದ ಕಿನ್ನರ"ನೆಂಬ ಪ್ರಶಂಸೆಗೆ ಪಾತ್ರರಾದರು. ಈ ಹಿನ್ನೆಲೆಯಲ್ಲಿ ಗಂಗಪ್ಪನವರ ಕಾವ್ಯದಿಂದ ಕೆಲವು ಉದಾಹರಣೆಗಳನ್ನು ಎತ್ತಿಕೊಂಡು ರಸಿಕರ ಆಸ್ವಾದನೆಗ ಮತ್ತೊಮ್ಮೆ ಅನುವು ಮಾಡಿಕೊಡುವುದೇ ನನ್ನ ಈ ಮುನ್ನುಡಿಯ ಉದ್ದೇಶ.

"ಕಲ್ಯಾಣ ಕ್ರಾಂತಿ" (೧೯೪೭), "ಚಂದ್ರಮಾಯೆ" (ಅನುವಾದಗಳು - ೧೯೬೯) "ಕಾವ್ಯ ಕಿನ್ನರಿ" (೧೯೭೧) - ಇವು ಗಂಗಪ್ಪನವರ ಪ್ರಕಟಿತ ಕವನ ಸಂಗ್ರಹಗಳು, ಇವುಗಳ ಜೊತೆಗೆ ಇದುವರೆಗೆ ಸಂಗ್ರಹ ರೂಪದಲ್ಲಿ ಪ್ರಕಟವಾಗದಿರುವ ನೂರಾರು ಕವಿತೆಗಳನ್ನೂ ಒಳಗೊಂಡು ಪ್ರಸ್ತುತ "ಕಾವ್ಯ ಮಂಜರಿ" ಓದುಗರ ಕೈಸೇರುತ್ತಿರುವುದು ತುಂಬ ಸಂತೋಷದ ಸಂಗತಿ.

ಕಾವ್ಯರಚನೆಯೊಡನೆ ಗಮಕವನ್ನೂ ತಮ್ಮ ಮನೋಧರ್ಮವಾಗಿ ಬೆಳೆಸಿಕೊಂಡು ಬಂದಿರುವ ಈ ಕವಿ, ಸಹೃದಯಿಗಳನ್ನು ಸಂಗೀತದ ಮೂಲಕ ಹೆಚ್ಚು ಆಕರ್ಷಿಸಬಲ್ಲವರಾಗಿದ್ದಾರೆ. ನಾಡುನುಡಿಯ ಅಭಿಮಾನ, ದೇಶಭಕ್ತಿ, ದೈವೀಶ್ರದ್ಧೆ, ಮಹಾನುಭಾವರ ಬಗೆಗಿನ ಗೌರವ, ಪ್ರಕೃತಿಯ ಚೆಲುವು - ಇವೇ ಮೊದಲಾದವು ಇವರ ಕಾವ್ಯದ ಮುಖ್ಯ ವಸ್ತುಗಳಾಗಿವೆ, ಸಾಮಾಜಿಕವೆನಿಸುವ ಸಂಕೀರ್ಣಭಾವಗಳು "ಸಾರಜ್ಞನ ವಚನ"ಗಳಿಗೆ ಮೀಸಲಾದಂತಿದೆ. ಗಂಗಪ್ಪನವರ ಕಾವ್ಯರಚನೆಯ ಕ್ರಮವನ್ನು, ಸಾಧನೆಗಳನ್ನು ಈ ಹಿನ್ನೆಲೆಯಲ್ಲಿಯೇ ನಾವು ಗಮನಿಸಬೇಕು.

ಪ್ರಾರಂಭದ ದೆಸೆಯಲ್ಲಿ ಕಾವ್ಯದ ಬಗೆಗಿರುವ ಕವಿಯ ಪರಿಶುದ್ಧ ಹಂಬಲ ಹಾರೈಕೆಗಳನ್ನು ಮುಂದಿನ ಪದ್ಯಗಳು ಪ್ರತಿಬಿಂಬಿಸುತ್ತವೆ :

ಜಗದೊಳಗಿನ ಕರ್ದಮ ಜಲವೆಲ್ಲವು
ಹರಿಯುತ ಬಂದರು ಹೊಳೆಯಂತೆ
ಮುಗಿಲಿನ ಹನಿಯನೆ ಪಡೆಯಲು ಚಾತಕ
ಪಕ್ಷಿಯು ವ್ರತವನು ತಳೆವಂತೆ

(ಕವಿತಾಸುಂದರಿಗೆ)

* * * *

ನಿನ್ನ ಬೀಣೆಯ ತೆಗೆದು ಬದಿಗಿಟ್ಟು ತುಸು ಹೊತ್ತು
ನನ್ನ ಹೃದಯವ ನಿನ್ನ ಕೈಗೆತ್ತಿಕೊಂಡು
ನಿನ್ನ ಬೆರಳಿಂದದರ ತಂತುಗಳ ಮಿಡಿಮಿಡಿದು
ಚೆನ್ನೆಸೆವ ಗಾನಮಂ ನುಡಿಸು ಬಗೆಗೊಂಡು

(ಓ ತಾಯೆ ಸರಸತಿಯೆ)

* * * *

* * * *

ಕಾವ್ಯಕಿನ್ನರಿ ಹಾಡೆ ಮುದದಿಂದ
ಸವಿ ಸರಗಳಿಂದ
.........................................
ಜೇನುತುಪ್ಪದ ಮಳೆಯು ಸುರಿದಂತೆ
ಚಂದ್ರಮನ ಬೆಳಕಿನ
ಹಾಲುಹೊಳೆಯದು ತುಂಬಿ ಹರಿದಂತೆ
ಜೀವನದ ಹೂದೋಟದಲ್ಲಿ
ಭಾವ ಪುಷ್ಪಗಳರಳುವಂತೆ
ಮಾನವೀಯತೆಯೆಂಬ ಪಾವನ
ಪ್ರೇಮ ಪರಿಮಳ ಸೂಸುವಂತೆ.

(ಕಾವ್ಯ ಕಿನ್ನರಿ)

ಕನ್ನಡ ನಾಡಿನ ಹಿರಿಮೆಯನ್ನು ಹಾಡಿ ಹೊಗಳುವ 'ನಮ್ಮ ನಾಡು' ತನ್ನ ವೀರೋಚಿತ ಧಾಟಿಯಿಂದ ಮಕ್ಕಳಿಗೂ ಪ್ರಿಯವಾಗಿ ಪ್ರತಿಧ್ವನಿಗೊಂಡದ್ದುಂಟು. ಸ್ವತಂತ್ರ ಭಾರತ, ಸ್ವಾತಂತ್ರ್ಯೋತ್ತರ ಭಾರತ ಎರಡರ ಸ್ಥಿತಿಗತಿಗಳನ್ನು ಕುರಿತು ಬರೆಯುವಾಗ ಆವೇಶ ಸಹಜವಾಗಿದ್ದರೂ ಸಂಯಮದಿಂದ ಭವಿಷ್ಯತ್ತಿನ ಚಿಂತನೆಗೂ ಅಲ್ಲಿ ಎಡೆಯಿಲ್ಲದಿಲ್ಲ.

ಪ್ರತಿ ವ್ಯಕ್ತಿಯ ಗುಣಶಕ್ತಿಯ
ವಿಕಸನವೇ ಸ್ವಾತಂತ್ರ್ಯ

(ರಾಷ್ಟ್ರಧ್ವಜ ಹಾರುತಿದೆ)

ಕೆಸರಿನಿಂದ ಕೊಸರಿಕೊಂಡು ಮೇಲಕೆದ್ದು ಮೆಲ್ಲನೆ
ಪೊಸ ಮಕರಂದ ರಸವ ಸೂಸಿ ನಗುವ ನಳಿನ ತಾನೆನೆ
ಕೊರತೆಗೆಸರನುಳಿದು ಬೆಳೆದು ವೃದ್ಧಿ ಕೋಟಿ ದಳಗಳ
ತೆರೆದು ಅರಳಲಿಹುದು ನಮ್ಮ ರಾಷ್ಟ್ರಕಮಲಕುಟ್ಮಲ.

(ಸ್ವತಂತ್ರ ಭಾರತ)

ಸ್ವಾತಂತ್ರ್ಯದ ಅರುಣೋದಯವಾದ ನಂತರ ದೇಶದ ಪರಿಸ್ಥಿತಿಯ ವಾಸ್ತವ ಚಿತ್ರ ಇದಕ್ಕೆ ವ್ಯತಿರಿಕ್ತವಾಗಿತ್ತು.

ಬಂಧನವ ಹರಿಯಲ್ಕೆ ಬಲಿಯಾದ ಬಂಧುಗಳ
ನೆತ್ತರದ ನರಗಳನು ಹುರಿಗೊಳಿಸಿ ಹೊಸೆಹೊಸೆದು
ಹೊಸದೊಂದು ಬಲೆ ಹೆಣೆದು ಜನಜಂಗುಳಿಯ ಹಿಡಿದು
ಮೈಮನಂಗಳ ಬಿಗಿದು, ತಾಂ ಗುಡುಗಿದಾಜ್ಞೆಗಳ

ಲಾಲಿಸುತ ಪಾಲಿಸುತ ಕೌಲೆತ್ತುಗಳ ಹೂಡಿ
ಎಲ್ಲವರ ಹಿತವೆಂದು ಕಲ್ಲಗಾಣಕೆ ಹೂಡಿ
ಕಣ್‌ಕಟ್ಟಿ ಸುತ್ತಿಸುವ ಸ್ವಾತಂತ್ರ್ಯದಾಸವತೆ
ಮೈವೆತ್ತುದನು ಕಂಡೆ ದುಃಸ್ವಪ್ನವೊಂದರಲಿ.

(ದುಃಸ್ವಪ್ನ)

ಸಾಮಾನ್ಯವಾಗಿ ಸ್ತುತಿಪರವಾಗಿ ಹೊಮ್ಮಿರುವ ಕವಿಯ ದೇಶಭಕ್ತಿಯ ಗೀತೆಗಳಲ್ಲಿ ಒಮ್ಮೆಲೆ ಸ್ಫೋಟಗೊಂಡಂತಿರುವ ಈ ಪದ್ಯ ವಾಡಿಕೆಯ ಛಂದೋಬದ್ಧತೆಯನ್ನು ಮುರಿದು ಬಂದಿರುವುದು ಗಮನಾರ್ಹವಾಗಿದೆ. ಮುಂದೆ ಇದೇ ಭಾವ ಸಾತ್ವಿಕ ರೀತಿಯಲ್ಲಿ ಸಾಮೂಹಿಕ ಚಿಂತನೆಯನ್ನೊಳಗೊಂಡಾಗ ಆತ್ಮನಿರೀಕ್ಷಣೆಗೆ ಎಡೆ ದೊರೆಯುತ್ತದೆ.

ಎರಡು ದಶಕಂಗಳಿಗು ಹೆಚ್ಚು ವರ್ಷಗಳು
ಉರುಳಿದರೂ ನನಸಾಗದಿಹವು ಕನಸುಗಳು
ನೂರಕ್ಕೆ ಇನ್ನೂರು ಮಾತಾಡುತಿಹೆವೆ ?
ನೂರಕ್ಕೆ ಮೂರಾದರೂ ಮಾಡುತಿಹೆವೆ ?

(ಪ್ರಚಲಿತ)

ಹಿಂದಿನವರು ಇಂದಿನವರು ಎನ್ನದೆ ದೇಶಕ್ಕಾಗಿ ದುಡಿದು ಮಡಿದವರನ್ನು, ಈಗಲೂ ಅಪರೂಪಕ್ಕೆಂಬಂತೆ ಆ ದಾರಿಯಲ್ಲಿ ನಡೆದವರನ್ನು ವಂದಿಸಿ ಕವಿ ತಣಿದಿದ್ದಾನೆ. ಮಹಾನುಭಾವರನೇಕರಿಗೆ ಮಣಿದಿದ್ದಾನೆ. ಇಲ್ಲೆಲ್ಲ ಕವಿಯ ಗುಣಗ್ರಾಹಕತೆ ಹಾಗೂ ಭಾವನೆಯ ಔದಾರ್ಯದ್ದೇ ಮೇಲುಗೈಯಾಗಿದೆ. ವಿವಿಧ ಸಂದರ್ಭಗಳು ಇವರನ್ನು ಮಿಡುಕಿಕೊಂಡು ಬಂದು ಸ್ತುತಿ, ಸ್ತವನದ ಕಾಣಿಕೆ ಪಡೆದುಕೊಂಡಂತಿದೆ. ಆದರೆ 'ಕಲ್ಯಾಣಕ್ರಾಂತಿ'ಯಂಥ ಮಂಥನ ನಡೆಯುವದರಿಂದ ಅವು ಹೆಚ್ಚು ಪ್ರಸ್ತುತವಾಗಿ ಕವಿಯ ಅಭಿವ್ಯಕ್ತಿಗೂ ಒಂದು ಶಕ್ತಿಯನ್ನು ತಂದುಕೊಟ್ಟಿದೆ :

ಬುದ್ಧಿ ಕುರುಡಾಯಿತ್ತು
ಹೃದಯ ಬರಡಾಗಿತ್ತು
ಕುರುಡ ಕುಂಟನ ತೆರದಿ ತಪ್ಪು ಹೆಜ್ಜೆಯನಿಡುತಲಿತ್ತು ಬದುಕು.
ನರನ ನಂಬಿಗೆಯೋಜೆ
ಮಾರಿಮಸಣಿಯ ಪೂಜೆ-
ಯೊಳಗಿತ್ತು. ಅದರ ಫಲವಾಗಿತ್ತು ಅನುದಿನದ ಬಾಳತೊಡಕು.

* * * * *

ಅರಿವಿನಾರಾಧನೆಯ
ಭಕ್ತಿ ಸಂವೇದನೆಯ
ಸತ್ಯ ಸಂಶೋಧನೆಯ ಶೂನ್ಯಸಂಪಾದನೆಯ ಸಿದ್ಧಿಗಾಗಿ;
ಜ್ಞಾನಕ್ರಿಯಾ ಬಲವ
ಶಿವಶರಣ ಸಂಕುಲವ
ನೆರಪಿದನು ಕಲ್ಯಾಣದೊಳು ಲೋಕಕಲ್ಯಾಣ ವೃದ್ಧಿಗಾಗಿ.

ಹನ್ನೆರಡನೆಯ ಶತಮಾನದ ಶಿವಶರಣರ ಬುದ್ಧಿ-ಹೃದಯ, ಜ್ಞಾನ-ಕ್ರಿಯೆ, ನಡೆ-ನುಡಿ ಇವುಗಳ ಸಮನ್ವಯ ಹಾಗೂ ಸರ್ವ ಸಮತಾಭಾವ ಈ ಕವನದಲ್ಲಿ ಸ್ಫುಟಗೊಂಡಿದೆ. ಇದೇ ಆಶಯ 'ದಂಡನಾಯಕ ಬಸವ ಬಾ'ಕವನದಲ್ಲಿ ರೂಪಾಂತರಗೊಂಡಂತಿದೆ. ಆದರೆ ಕವಿಯ ಸಾಮಾಜಿಕ ಹಾಗೂ ತ್ರಿಪದಿ ರೂಪದ ಹೊಸ ಆಯಾಮವೊಂದು ದೊರೆತಿದೆ. ಭಾಷೆ ಹಾಗೂ ಶೈಲಿಯಲ್ಲಿ ಕೂಡ ಷಡಕ್ಷರಿ ಹಾಗೂ ಲಕ್ಷ್ಮೀಶರ ಪ್ರಭಾವ ಕಡಿಮೆಯಾಗಿ ಸರ್ವಜ್ಞನನ್ನು ಓಲೈಸಿದರೂ ಸ್ವತಂತ್ರವಾದ ಅಭಿವ್ಯಕ್ತಿಯಲ್ಲಿ ಒಂದು ಬಗೆಯ ಬಿಡುಗಡೆಯ ಆನಂದವನ್ನು ಪಡೆದುಕೊಂಡಂತಿದೆ :

ತಿಳುವಳಿಕೆಯೆಂದೆಂಬ
ಬೆಳಕು ನೀರಿನ ಹೊಳೆಯ
ಜಳಕವನು ಮಾಡಿ ಜೀವನದ ಸುಖ ಉಂಡು
ನಲಿಯುವದೆ ಹಬ್ಬ.

ಜೀವನ ಮರ್ಮವನ್ನು ತಮ್ಮ "ಸಾರಜ್ಞನ ವಚನ"ಗಳ ಮೂಲಕ ಕಂಡುಕೊಳ್ಳುವಲ್ಲಿ "ಮಂಕುತಿಮ್ಮ"ನ ಕುಮ್ಮಕ್ಕು ಇದ್ದರೂ ಇರಬಹುದು.

ವೈಭವದ ಭಕ್ತಿಯಲಿ
ಲಾಭದಾಸೆಗಳುಂಟು,
ಲಾಭ ಮಿತಿಗೆಡಲು ಲೋಕದಲಿ ಬಲು ದೊಡ್ಡ
ಕ್ಷೋಭೆ ಏಳುವದು ಸಾರಜ್ಞ.

ಅದೇನೇ ಇದ್ದರೂ ಗಂಗಪ್ಪನವರ ಕವಿತೆಗೆ ಹೊಸ ಹುರುಪು, ಹೊಸ ಹೊಳಪು ಇದರಿಂದ ದೊರೆತದ್ದು ಸ್ಪಷ್ಟವಾಗಿ ಗೋಚರಿಸುತ್ತದೆ. ಹಸನಾದ ಹಂಜಿಯನ್ನು ಹಿಡಿದು ಕೈಯಿಂದ ರಾಟೆಯ ಮೂಲಕ ನೂಲು ಹೊರಟಂತೆ ಸೂತ್ರರೂಪವಾಗಿ ಸಾರಜ್ಞನ ವಚನಗಳು ಇಂದಿಗೂ ಅವರಿಂದ ರಚಿತವಾಗುತ್ತಲೇ ಇವೆ. ಹತ್ತಿಯ ಗುಣಧರ್ಮಕ್ಕೆ ತಕ್ಕಂತೆ ನೂಲು ಎಲ್ಲ ಕಡೆಗೂ ಸಮನಾಗಿರದಿದ್ದರೂ ರಚನಾಕೌಶಲ್ಯದಿಂದ ಅದು ಹುರಿಗೊಳ್ಳುತ್ತ ಬಂದಿರುವುದು ಗಂಗಪ್ಪನವರ ವಿಶಿಷ್ಟ ಕಾಣಿಕೆಯೆಂದರೆ ತಪ್ಪಾಗದು. ಕೆಲವನ್ನು ಇಲ್ಲಿ ಉದಾಹರಿಸಬಹುದು.

ಹಸಿರು ಗುಡ್ಡದ ಮೇಲೆ ಎಸಳು ಹುಲ್ಲನು ಮೆಲುವ
ಹೊಸ ಹೋರಿಯಂತೆ ಮಾನವನ ಮಾನಸವು
ಕುಶಲದಿಂದಿರಲಿ ಸಾರಜ್ಞ.

* * * *

ಸಿಡಿಗುಂಡು ಬೇಕಿಲ್ಲ. ಕೊಡೆ ದಂಡು ಬೇಕಿಲ್ಲ
ಪೊಡವಿಯಲಿ ಶಾಂತಿ ಸೌಖ್ಯಗಳ ಸ್ವಾಗತಕೆ
ನಡೆಯೊಳಿತು ಬೇಕು ಸಾರಜ್ಞ.

* * * *

ಅಂಧಶ್ರದ್ಧೆಗಳನ್ನು ಒಂದುಗೂಡಿಸಿ ಧರ್ಮ
ಸಿಂಧುವೆಂದೆನುತ ಡಂಗುರವ ಹೊಡೆದಲ್ಲಿ
ಬಂಧ ಹರಿದೀತೆ ಸಾರಜ್ಞ.

* * * *

ಹಸಿದುಂಡ ರಸದೂಟ ಹೊಸ ರಕ್ತವಾಗುವುದು
ಒಸೆದೋದಿದೋದು ಹಸಿಯ ಗೋಡೆಗೆ ಹರಳು
ಎಸೆದಂತೆ ನಿಜದಿ ಸಾರಜ್ಞ.

* * * *

ಮೊಗದ ಹೊಗಳಿಕೆಯೆಂಬ ಮೃಗಜಲದ ಬೆಂಬತ್ತಿ
ಮಿಗಿಲಾದ ತನ್ನ ಬದುಕನ್ನೆ ಮರೆವವಗೆ
ಸಿಗಬಹುದೆ ಸೊಗವು ? ಸಾರಜ್ಞ.

* * * *

ದುಡ್ಡುಳ್ಳ ದಡ್ಡನಿಗೆ ಒಡ್ಡೋಲಗದಿ ಸ್ಥಾನ
ದುಡ್ಡಿಲ್ಲದಂಥ ಗುಣನಿಧಿಗೆ ಪಾಳ್ಬಿದ್ದ
ದೊಡ್ಡಿಯಲಿ ಸ್ಥಾನ ಸಾರಜ್ಞ.

* * * *

ಮುದ್ದೆ ಹೊಟ್ಟೆಗೆ ಸಿಗದೆ ಒದ್ದಾಡುತಿರೆ ಜನರು
ಮದ್ದು ಹಾರಿಸಲು ಹಣ ತೂರುವದು ಎಂಥ
ಬುದ್ಧಿವಂತಿಕೆಯು ಸಾರಜ್ಞ.

* * * *

ಆಧುನಿಕ ಪಾಪಗಳ ಯಾದಿ ಬಲು ದೊಡ್ಡದಿದೆ
ಹಾದಿಯಲಿ ಹಣ್ಣು ಸಿಪ್ಪೆ ಚೆಲ್ಲುವದೊಂದು
ಆಧುನಿಕ ಪಾಪ ಸಾರಜ್ಞ

ಈ ಸಾರಜ್ಞನ ವಚನಗಳ ಒಟ್ಟು ಸ್ವರೂಪವನ್ನು ಕವಿಯ ಮಾತಿನಲ್ಲಿಯೇ ಹೀಗೆ ಹೇಳಬಹುದು.

ಕುಂಜರವು ಅರಗಿಳಿಯ ಪಂಜರವ ಹೊಕ್ಕಂತೆ
ರಂಜಿಸುವ ಚಿಕ್ಕ ತ್ರಿಪದಿಯಲಿ ನಿಡುಭಾವ
ಸಂಜನಿಸುತಿಹವು ಸಾರಜ್ಞ.

(೨)

ವಿವಿಧ ಸಂದರ್ಭಗಳಿಗೆ ಅನುಗುಣವಾಗಿ ರಚಿತವಾದ ಪದ್ಯಗಳ ಸಂಖ್ಯೆಯೂ ಸಾಕಷ್ಟಿವೆ. ಅಲ್ಲಲ್ಲಿ ಕಾವ್ಯದ ಎಳೆಗಳು ಮಿಂಚಿದರೂ ಒಟ್ಟು ನೇಯ್ಗೆ ಸಾಂದರ್ಭಿಕ ಸೌಲಭ್ಯವನ್ನು ಅವಲಂಬಿಸಿದೆ. ಸುಪ್ರಭಾತ ಗೀತಗಳಲ್ಲಿ ಆಯಾ ಮಹಾಂತರ ಜೀವನದ ವೈಶಿಷ್ಟ್ಯಗಳನ್ನು ಎತ್ತಿ ತೋರಿಸುವಲ್ಲಿಯ ಕಾವ್ಯೋತ್ಸಾಹ ಮೆಚ್ಚುವಂಥದು. ಕಥನಕಲೆಯ ದ್ಯೋತಕವಾಗಿ 'ಪಾದಯಾತ್ರಾ ಪರ್ವ', 'ಕನಕ-ಕದಳಿ'ಯಂಥ ಪದ್ಯಗಳು ಎದ್ದು ಕಾಣುತ್ತವೆ. ಆಂತರಿಕ ಒತ್ತಡದಿಂದ ಮೂಡಿ ಬಂದ ಭಾವಗೀತೆಗಳನ್ನು ಗೇಯ ಪ್ರಧಾನವಾದ ಇನ್ನುಳಿದ ರಚನೆಗಳಿಂದ ಪ್ರತ್ಯೇಕಿಸಿ ನೋಡಬೇಕಾಗುತ್ತದೆ. 'ತೆಂಗಿನಂತೆ ತುಂಗವಾಗಿ' ಅಂಥ ಒಂದು ಒಳ್ಳೆಯ ರಚನೆ :

ತೆಂಗಿನಂತೆ ತುಂಗವಾಗಿ ಬೆಳೆಯುತಿರಲಿ ಮನವಿದು
ಮಂಗಲವನು ಪಾಡುತಿರಲಿ ಒಲಿಯುವಂತೆ ಘನವದು
ಗಗನದಗಲದಲ್ಲಿ ತೂಗುತಿರಲಿ ಬಗೆಯ ಗರಿಗರಿ
ಪಗಲು ಇರುಳು ಬೆಳೆವುದೊಂದೆ ಇರಲಿ ಇದಕೆ ಹಿರಿಗುರಿ.

* * * *

ಯಾರೊ ಏನೊ ಎಂದೊ ಹಚ್ಚಿ ಬೆಳೆಸಿ ಹೋದ ಮರಗಳು
ಮೀರಿ ಫಲವನೀಯುತಿಹವು ಹಿರಿಯರಮೃತ ವರಗಳು
ಮೂರು ವರುಷ ಸಲುಹಿದಲ್ಲಿ ನೂರು ವರುಷದುದ್ದಕೂ
ಭೂರಿ ಫಲವನೀಯುವಂತೆ ಫಲಿಸಲೆನ್ನ ಮನವಿದು.

ಮಲ್ಲಿಕಾರ್ಜುನ ಮನಸೂರರ ಸಂಗೀತದ ಪರಿಣಾಮವನ್ನು "ಸಂಗೀತ ಪರಮಶ್ರೀ"ಯಲ್ಲಿ ಸ್ಫೂರ್ತಿಯುತವಾಗಿ ಸೆರೆಹಿಡಿಯಲಾಗಿದೆ :

ಆತ್ಮಾನಂದದ ಅಂಬರ ತುಂಬಿತು
ನಾದ ಸಮುದ್ರದ ಓಂಕಾರ
ಗಾಯನ ಗೌರೀಶಂಕರ ಶಿಖರದ

ಸ್ವರ್ಣಸ್ವರಗಳ ಝೇಂಕಾರ.
ವ್ಯೋಮದ ಅಂಚಿಂದಂಚಿಗೆ ನೆಗೆಯುವ
ರಾಗವು ಪ್ರೇಮಾಂದೋಲನವು
ವಿಧ ವಿಧ ಮೋದದ ನಾದದ ನದಿಗಳ
ತರಳ ತರಂಗದ ಖೇಲನವು.

ಜೀವನದ ನಾಟಕದ ಪ್ರತಿ ದೃಶ್ಯದಲ್ಲಿ ದೈವ ಮೈದೋರುವುದನ್ನು ಕಂಡ ಕವಿ ಅದೇ ದೇವದೇವನ ವಿಷಮ ಲೀಲೆಯನ್ನು ಕಂಡು ಸಾತ್ವಿಕ ಕ್ರೋಧವನ್ನು ವ್ಯಕ್ತಗೊಳಿಸಿರುವುದು ಕುತೂಹಲಕಾರಿಯಾಗಿದೆ.

ಲಕ್ಷ ನಕ್ಷತ್ರಗಳ ವಜ್ರದ
ಗಗನ ಸೌಧದಿ ಕುಳಿತಿಹೆ
ಮುರುಕು ಮನೆ ಗುಡಿಸಲದ ದೀನರ
ಕಂಬಳಿಯ ಕಡೆಗಣಿಸಿಹೆ.

* * * *

ಒಳಿತನೆಸಗುವ ಸರ್ವಶಕ್ತಿಯು
ನಿನ್ನ ಕೈಯೊಳಗಿದ್ದರೂ
ಒಳಿತನೆಸಗದೆ ಏಕೆ ಕುಳಿತಿಹೆ
ಶಕ್ತಿಕೊಡು ನಮಗಾದರೂ

(ಶಕ್ತಿಕೊಡು ನಮಗಾದರೂ)

(೩)

ಗಂಗಪ್ಪನವರ "ಅನುವಾದ ಗೀತ"ಗಳು ಪ್ರತ್ಯೇಕ ಪರೀಶೀಲನೆಗೆ ಅರ್ಹವಾಗಿವೆ. ಅನುವಾದ ಒಂದು ರೀತಿ ಪುನರ್‌ಸೃಷ್ಟಿ ಎಂದು ಹೇಳುವದುಂಟು. ಒಂದು ಭಾಷೆಯಲ್ಲಿರುವ ಮೂಲಕೃತಿಯ ಸತ್ವವನ್ನು ಅದೇ ಪ್ರಮಾಣದಲ್ಲಿ ಮತ್ತೊಂದು ಭಾಷೆಯಲ್ಲಿ ಜೀವಂತವಾಗಿ ತರುವದು ಅಷ್ಟು ಹಗುರಾದ ಕೆಲಸವಲ್ಲ. ಮೂಲಕೃತಿಯ ಭಾವವನ್ನು ಮೊದಲು ಸರಿಯಾಗಿ ಅರ್ಥಮಾಡಿಕೊಳ್ಳಬೇಕು. ಅನುವಾದಗೊಳ್ಳಲಿರುವ ಭಾಷೆಯ ಜಾಯಮಾನವನ್ನು ಚನ್ನಾಗಿ ತಿಳಿದಿರಬೇಕು. ಸೃಜನಶಕ್ತಿಯುಳ್ಳವರು ಅನುಸೃಷ್ಟಿಗೆ ತೊಡಗಿದಾಗ ಅದರ ಹಾದಿ ಸುಗಮಗೊಳ್ಳಲು ಸಾಧ್ಯವಾಗುವದು. ಸ್ವಂತ ಕೃತಿರಚನೆಯ ಜೊತೆಗೇ ಆಗೀಗ ಅಷ್ಟೇ ಮುತುವರ್ಜಿಯಿಂದ ಈ ಕವಿ ಅನುವಾದ ಕಾರ್ಯವನ್ನು ಕೈಕೊಂಡು ಸುಮಾರು ಮೂವತ್ತು ಕವನಗಳನ್ನು ಇಡಿಯಾಗಿ ಅನುವಾದಿಸಿದ್ದಾರೆ. ಸಾರಜ್ಞನ ವಚನಗಳಲ್ಲಿ ಮೂವತ್ತರಷ್ಟು ಬೇರೆ ಬೇರೆ ಆಂಗ್ಲ ವೈಚಾರಿಕರ ವಾಕ್ಯಗಳಿಂದ ಪ್ರೇರಣೆ ಪಡೆದಿವೆ. ಇವುಗಳಲ್ಲಿ ಒಂದೇ ಒಂದು "ಸಿದ್ಧಾಂತ ಶಿಖಾಮಣಿ"

ಸಂಸ್ಕೃತ ಗ್ರಂಥದಲ್ಲಿಯ ಕೆಲವು ಶ್ಲೋಕಗಳ ಅನುವಾದವಾಗಿದ್ದು ಬೇಂದ್ರೆಯವರ "ಮೇಘದೂತ" ಧಾಟಿಯಿಂದ ಮೆರಗು ಪಡೆದಿರುವಂತೆ ತೋರುತ್ತದೆ.

ಬಿಳಿಯ ತಾವರೆಯ ಚೆಲುವ ಗೆಲುವ ಕಂಗೊಳಿಪ ಮಾಟವುಳ್ಳ
ಹೊಳೆವ ಹುಣ್ಣಿಮೆಯ ಕಳೆಯ ಚಂದ್ರನೊಡ ಹುಟ್ಟಿನಂತೆ ಬಹಳ
ಬಿಳಿಯ ಸತ್ತಿಗೆಯ ಶಿವನಿಗೆತ್ತಿ ಹಿಡಿದಿದ್ದಳಲ್ಲ ತಾನು
ನಳಿನನಾಭನೊಲವಳೆದ ಲಕ್ಷ್ಮಿಯೆಂದೆಂಬ ಸಿರಿಯ ಹೆಣ್ಣು.

ರವೀಂದ್ರರ "ಗೀತಾಂಜಲಿ"ಯಿಂದ ಏಳು ಗೀತಗಳು ಇಲ್ಲಿ ಅನುವಾದಗೊಂಡಿದ್ದು "ಮರಣರಹಿತನ ಬೆರೆಯಲು" ಹಾಗೂ "ನಿನ್ನ ಗಾನ"ದಂಥ ಕವಿತೆಗಳು ಮೂಲದಲ್ಲಿಯ ದೈವೀಪ್ರೇಮ, ಸ್ವಾನುಭವದಂತೆ ಹದನಾಗಿ ಬಂದಿರುವುದಕ್ಕೆ ಉದಾಹರಣೆಯಾಗಿವೆ :

ಏನು ಗಾನವಿದೆಂಥ ಗಾನವು
ನಿನ್ನ ಗಾನವು ಗುರುವರಾ
ಮೌನದಲಿ ನಿಬ್ಬೆರಗಿನಲಿ ಕಿವಿ-
ಗೊಡುವನದಕೆ ನಿರಂತರಾ.
ಆಡುವೆನು ನಾ ನೂರು ಮಾತನು
ಆಡಿದುದು ಪಾಡಾಗದೆ
ನೋಡು ಗೋಗರೆಯುವೆನು ಪಾಡಿನ
ಬಯಕೆಯಿದು ಕೈಗೂಡದೆ

(ನಿನ್ನ ಗಾನ)

ಇಂಗ್ಲಿಷ್ ಕವಿಗಳ ಅನುವಾದಗಳು ಮೂಲದ ವಸ್ತು, ರೀತಿ ಮತ್ತು ಶೈಲಿಗೆ ಭಂಗ ಬರದಂತೆ ಕನ್ನಡಕ್ಕೆ ಸಹಜವಾಗಿ, ನಿರರ್ಗಳವಾಗಿ ಬಂದಿವೆ. "ಒಂದಿನಿತೆ ಹಿರಿದಾಗು" (ಅಜ್ಞಾತ ಕವಿ) "ಮುತ್ತಿನ ಸಿಂಪು" (The Shell-ಲಾರ್ಡ್ ಟೆನಿಸನ್) "ಎಲ್ಲ ಪ್ರಾಕ್ತನ" (All that's Past ವಾಲ್ಟರ್ ಡಿಲಾಮೇರ್), "ಬೆಳ್ಳಿ" (Silver ವಾಲ್ಟರ್ ಡಿಲಾಮೇರ್), "ಕಂದ" (Baby ಜಾರ್ಜ ಮ್ಯಾಕ್‌ಡೋನಾಲ್ಡ) - ಕವನಗಳನ್ನು ಸಂತೋಷದಿಂದ ಉದಾಹರಿಸಬಹುದು. ದೇವಶಿಲ್ಪವನ್ನು ಕಂಡ ಟೆನಿಸನ್‌ನ ಬೆರಗು, ನಿತ್ಯ ಜೀವನದಲ್ಲಿಯ ಚಿಕ್ಕಪುಟ್ಟ ಸಂಗತಿಗಳೆಡೆಗೆ ಚಕ್ಕನೆ ಮನ ಸೆಳೆಯುವ ವಾಲ್ಟರ್ ಡಿಲಾಮೇರ್‌ನ ಶ್ರೀಸಾಮಾನ್ಯ ಚಿತ್ತಲಹರಿಗಳ ಚಮತ್ಕಾರ ಮೊದಲಾದವು, 'ಶ್ರೀ'ಯವರ 'ಇಂಗ್ಲೀಷ್ ಗೀತ'ಗಳಂತೆಯೇ ಓದುಗರ ಬಗೆದುಂಬಿ ನಿಲ್ಲಬಲ್ಲವು. ಇಲ್ಲೆಲ್ಲ ಭಾವಾನುವಾದದ ಶೈಲಿ ಸ್ವಾನುಭವವಾಗಿ ಕನ್ನಡದ ನುಡಿಕಟ್ಟಿನಲ್ಲಿ ಹೇಗೆ ಹದಗೊಂಡಿದೆ ಎಂಬುದಕ್ಕೆ "ನಿಶ್ಚಿಂತೆ" (Fifth Philosopher's Song ಅಲ್ಡಸ್ ಹಕ್ಸ್ಲೀ) ಕವಿತೆಯನ್ನು ಇಡಿಯಾಗಿ ಅವಲೋಕಿಸಬಹುದು. ("ಇಂಗ್ಲಂಡದಲ್ಲಿ ಸಾವಿರಾರು ರಸಿಕರು ಇದನ್ನು ಕಂಠಪಾಠ ಮಾಡಿ ಕಂಡವರೆದುರು ಹೇಳುತ್ತ ನಲಿಯುತ್ತಿದ್ದರೆಂಬ ಪ್ರತೀತಿಯಿದೆ.")

ಲಕ್ಷೋಪಲಕ್ಷ ಜೀವಂತ ಶುಕ್ರಾಣುಗಳು
ಕಡೆಗಾಲದಡಿಗುರುಳಿ ಹುಡಿಗೂಡುತಿರಲು
ಊರುರಿದರೂ ಹನುಮ ಊರ ಹೊರಗೆಂಬಂತೆ
ಆಡಿಸಿತು ಕ್ಷುದ್ರಾಣುವೊಂದುಳಿದುಕೊಳಲು-
ಒಂದನುಳಿದಳಿದ ಆ ಶುಕ್ರಾಣು ಕೋಟಿಯಲಿ
ಆವ ನವ ಕವಿತಾಗುಣಾರ್ಣವನೊ ಮೇಣು
ಆವ ನೂತನ ದಾರ್ಶನಿಕನಿದ್ದನೋ ಏನೊ
ಉಳಿದವನು ನಾಚುಗೆಯನಳಿದವನು ನಾನು.
ಒಳ್ಳೆ ಬೆಳೆಯನೆ ನುಂಗಿ ಬೆಳೆವ ಕಸದಂತೆ
ನೀನುಳಿಯದಳಿದಿದ್ದರಿತ್ತು ನಿಶ್ಚಿಂತೆ.

ಈ ಎಲ್ಲ ಅನುವಾದಗಳು ಛಂದೋಬದ್ಧವಾಗಿ ಪರಿವರ್ತನಗೊಂಡಿದ್ದರೂ ಮೂಲವನ್ನೇ ಹೊಸ ರೂಪದಲ್ಲಿ ಎರಕಹೊಯ್ಯುವ ಕಾರ್ಯದಲ್ಲಿ ಗಂಗಪ್ಪನವರು ಪಡೆದಿರುವ ಯಶಸ್ಸು ಅತ್ಯಂತ ಗಮನಾರ್ಹವಾದುದು. ವಾಲಿಯವರು ಈ ಸಂದರ್ಭದಲ್ಲಿ ತೋರಿಸಿರುವ ಉತ್ತಮ ಆಯ್ಕೆಯನ್ನು ವಿಚಕ್ಷಣತೆಯನ್ನು ಮೆಚ್ಚಿಕೊಂಡ ಶ್ರೀ ಪಾ.ವೆಂ. ಆಚಾರ್ಯರು "ಪರಮಾತ್ಮ ಪ್ರೇಮದಲ್ಲಿರುವ ಒಂದು ವಿಶಿಷ್ಟ ಗುಣವೆಂದರೆ ಅದರ ಗೇಯತ್ವ. ಆ ಗೇಯತ್ವ ಆ ಅನುವಾದಗಳಲ್ಲಿ ಅತ್ಯುತ್ತಮವಾಗಿ ಸಾಧಿಸಿದೆ" ಎಂದಿದ್ದಾರೆ. ಕವಿಯೇ ಹೇಳಿರುವಂತೆ ಈ ಎಲ್ಲ ಪದ್ಯಗಳನ್ನು "ಪಟ್ಟು ಹಿಡಿದು ಒಂದೇ ಮೆಟ್ಟಿಗೆ ರಚಿಸಿಲ್ಲ. ವಿರಾಮದಲ್ಲಿ ಓದುತ್ತಿರುವಾಗ ಆಗೊಮ್ಮೆ ಈಗೊಮ್ಮೆ ಆನಂದದಲ್ಲಿ ಅರಳಿದ ಭಾವಾನುವಾದಗಳಿವು". ಅನುವಾದಗಳಿಂದ ಕವಿಯ ಸೃಜನಶಕ್ತಿಯು ಬಲಗೊಳ್ಳುವದರಲ್ಲಿ ಸಂದೇಹವಿಲ್ಲ.

"ಕಾವ್ಯಮಂಜರಿ"ಯನ್ನು ಒಟ್ಟಾಗಿ ನೋಡಿದಾಗ ವಸ್ತುವಿನ ಆಯ್ಕೆ, ನಿರೂಪಣಾವಿಧಾನ ಹಾಗೂ ಮನೋಧರ್ಮದಲ್ಲಿ ಶ್ರೀ ಗಂಗಪ್ಪನವರು ನವೋದಯ ಕಾವ್ಯಪರಂಪರೆಯನ್ನು 'ಸ್ವಧರ್ಮ'ದಂತೆ ಕಾಪಾಡಿಕೊಂಡು ಬಂದಿರುವುದು ಎದ್ದು ಕಾಣುತ್ತದೆ. "ಭಾಷೆಯಲ್ಲಿ ಶೈಥಿಲ್ಯ, ಛಂದಸ್ಸಿನಲ್ಲಿ ಸ್ವೈರವೃತ್ತಿ ತಲೆದೋರದಂತೆ ಎಚ್ಚರಿಕೆ ವಹಿಸಿರುವುದನ್ನೂ, ಕನ್ನಡದ ಮೇಲಿನ ಹಿಡಿತ ಹಾಗೂ ಸಂಸ್ಕೃತದ ಹಿತಮಿತ ಬೆರಕೆಯ ಓಜೋಪೂರ್ಣ ಶೈಲಿಯನ್ನೂ" ಪ್ರೊ. ಬಸವನಾಳರು ಪ್ರಥಮ ಸಂಗ್ರಹದಲ್ಲಿಯೇ ಗುರುತಿಸಿ ಮೆಚ್ಚಿರುವುದನ್ನು ಇಲ್ಲಿ ಸ್ಮರಿಸಬಹುದು. ಆದಿಪ್ರಾಸವನ್ನು ಕೂಡ ಬಂಧನವೆನಿಸದಂತೆ ಸಹಜವಾಗಿ ಇವರು ಬಳಸಿಕೊಂಡಿರುವುದು ಎಷ್ಟೋ ಕಡೆಗಳಲ್ಲಿ ಅಚ್ಚರಿ ಹುಟ್ಟಿಸುವಂತಿದೆ. "ಇವರ ಕವನಸ್ಫೂರ್ತಿಯು ಪ್ರಾಸಂಗಿಕವಾಗಿ ಪ್ರಾದುರ್ಭವಿಸಿದಂತೆ ತೋರಿದರೂ, ಪ್ರಕಟನಾಚಾತುರ್ಯದಲ್ಲಿ ಅದು ಸಹಜವೆನಿಸುವಂತೆ ಹದಗೊಂಡು ಬರುತ್ತದೆ" ಎಂದಿರುವ ಬೇಂದ್ರೆಯವರು ("ಕಾವ್ಯಕಿನ್ನರಿಯನ್ನು ಕುರಿತಂತೆ") "ಸಹೃದಯನ ಒಳ್ಳೆಯ ಮಾತ"ನ್ನೇ ಆಡಿದ್ದಾರೆ. ಗುಣಸಾರಗ್ರಾಹಕತೆ, ಪೌರುಷನಿಷ್ಠೆ,

ವಿಭೂತಿವಂದನೆ, ಕಾರಣ ಪುರುಷರ ಸ್ಮರಣೆ ಹಾಗೂ ನಾಡಿನ ಹಿತಚಿಂತನೆಗಳಲ್ಲಿ ತಮ್ಮ ಕಾವ್ಯದ ನೆಲೆಯನ್ನು ಕಂಡುಕೊಂಡ ಗಂಗಪ್ಪನವರು ತಮ್ಮ ಕಾವ್ಯದ ಬಗ್ಗೆ ಯಾವ ಭ್ರಮೆಯನ್ನೂ ತಾಳಿದವರಲ್ಲ -

ಕಲ್ಲಿನಲ್ಲಿ ಕಟೆದ ಅಕ್ಷ-
ರಗಳಂತೆ ಮನದಲಿ
ಒಳ್ಳಿತೆಂಬುದಳಿಯದಂತೆ
ಗಟ್ಟಿಯಾಗಿ ನಿಲ್ಲಲಿ. (ವಜ್ರದಂತಿರು)

ಎಂಬ ಆಶಯವನ್ನು ಮೊದಲಿನಿಂದ ಕೊನೆಯವರೆಗೆ ಉಳಿಸಿಕೊಂಡು ಬಂದಿರುವುದೇ ಅವರ ಕಾವ್ಯದ ಹಿರಿಮೆಯಾಗಿದೆ. "ತ್ರಿಪದಿಗಳ ತಪಗೈದು" ಸಫಲರಾಗಿರುವ ತೃಪ್ತಿಯೂ ಅವರಿಗಿದೆ.

ಸುವಿವೇಕ ತಕ್ಕಡಿಯು, ಸುವಿಚಾರ ಸರಿತೂಕ
ಸವಿನುಡಿಯು ಬೆಲ್ಲ ; ಬಾಳೆಂಬುವಂಗಡಿಯ
ವ್ಯವಹಾರ ಮಾಡು ಸಾರಜ್ಞ

ಹೀಗೆ ಬಾಳಿನಲ್ಲಿ ಸವಿಯಾದದ್ದನ್ನು ಸಾರವತ್ತಾದದ್ದನ್ನು ಅವರ ಕಾವ್ಯ ಕಿನ್ನರಿ ಸದಾ ನುಡಿಸುತ್ತಿರಲಿ. ಸಹೃದಯರು ಅದಕ್ಕೆ ಆಸ್ಥೆಯಿಂದ ಕಿವಿಗೊಡುತ್ತಿರಲಿ ಎಂದು ಹಾರೈಸಿ ವಿರಮಿಸುತ್ತೇನೆ.

(೧೯೯೨)

೫೭

# ಮೊದಲ ಹೆಜ್ಜೆಗಳು

ವಿದ್ಯಾರ್ಥಿದೆಸೆಯಿಂದಲೇ ಕಾವ್ಯದಲ್ಲಿ ಆಸಕ್ತಿ ಹೊಂದಿದ್ದ ಡಾ. ಸಂಜೀವ ಕುಲಕರ್ಣಿಯವರು ತಮ್ಮ ವೈದ್ಯಕೀಯ ವೃತ್ತಿಯಲ್ಲಿಯೂ ಅದನ್ನು ಗುಪ್ತ ಭಕ್ತಿಯಿಂದ ಪೋಷಿಸಿಕೊಂಡು ಬಂದಿರುವುದು ನನಗೆ ಇತ್ತೀಚೆಗೆ ಗೊತ್ತಾಯಿತು. ಒಂದು ದಿನ ತಮ್ಮ ಹಸ್ತಪ್ರತಿಯನ್ನು ಬಹಳ ಸಂಕೋಚದಿಂದಲೇ ನನ್ನ ಕೈಗೆ ಕೊಟ್ಟು ನನ್ನ ಅಭಿಪ್ರಾಯವನ್ನು ತಿಳಿಯಬಯಸಿದರು. ಕಳೆದ ಸುಮಾರು ಹದಿನಾರು ವರುಷಗಳಿಂದ ಕಾವ್ಯ ರಚನೆ ಮಾಡುತ್ತ ಬಂದಿದ್ದರೂ ಅಚ್ಚಿನ ಮೋಹದಿಂದ ಅವರು ದೂರ ಉಳಿದಿರುವದೇ ಒಂದು ಪರಮಾಶ್ಚರ್ಯವಾಗಿ ನನಗೆ ಕಂಡುಬಂದಿತು. ಮುದ್ದಾದ ಕೈಬರಹದಲ್ಲಿದ್ದ ಅವರ ಪದ್ಯಗಳನ್ನು ನೋಡುತ್ತ ಹೋದಂತೆ ನಿಸರ್ಗದ ಪ್ರೀತಿಯೊಡನೆ ಸಮಾಜವನ್ನು, ತನ್ನ ಸುತ್ತಣ ಪರಿಸರವನ್ನು ಕಣ್ದೆರೆದು ನೋಡುತ್ತ, ಪಡೆದ ಅನುಭವವನ್ನು ಅರಗಿಸಿಕೊಳ್ಳುತ್ತ, ಸಮಕಾಲೀನ ಸಂದರ್ಭದಲ್ಲಿ ತಕ್ಕ ಪ್ರತಿಕ್ರಿಯೆಯನ್ನು ಕವಿಯೊಬ್ಬನ ದಿಟ್ಟ ಹೆಜ್ಜೆಗಳನ್ನು ಅವುಗಳಲ್ಲಿ ಗುರುತಿಸಿದೆ. 'ಚೆನ್ನಾಗಿವೆ ಅವಶ್ಯವಾಗಿ ಪ್ರಕಟಿಸಿ' ಎಂದು ಅವರಿಗೆ ತಿಳಿಸಿದಾಗ, ನಾನೇ ಮುನ್ನುಡಿ ಬರೆಯಬೇಕೆಂಬ ಪ್ರೀತಿಯ ಒತ್ತಾಯವು ಅವರಿಂದ ಬಂದಿತು. ಕಲೆಯ ಎದುರು ಅವರಿಗಿರುವ ಸ್ವಾಭಾವಿಕ ವಿನಯ ಸೌಜನ್ಯಗಳನ್ನು ಮೆಚ್ಚಿಕೊಂಡು ಪರಿಚಯಾತ್ಮಕವಾದ ಈ ಎರಡು ಮಾತುಗಳನ್ನು ಸಂತೋಷದಿಂದ ಬರೆಯುತ್ತಿದ್ದೇನೆ.

ಪ್ರಕೃತಿ ಪ್ರೇಮ ಹಾಗೂ ಗಾಢವಾದ ಸಾಮಾಜಿಕ ಪ್ರಜ್ಞೆ ಈ ಕವಿತೆಗಳಲ್ಲಿ ಒಡೆದು ಕಾಣುವ ಅಂಶಗಳಾಗಿವೆ. ಕವಿಯ ನಿಸರ್ಗ ಪ್ರೀತಿ ವರ್ಣನೆಯಲ್ಲಿ ಮುಕ್ತಾಯಗೊಳ್ಳದೆ ಪ್ರತಿಮೆ ಪ್ರತೀಕಗಳ ಹವಣಿಕೆಯಲ್ಲಿರುವುದನ್ನು 'ಸೂರ್ಯ', 'ನಾನು ಪಲಾಯನವಾದಿ ಅಲ್ಲ', 'ಒಂದು ಸಾವು', 'ಪ್ರತೀಕ್ಷೆ' ಮೊದಲಾದ ಕವಿತೆಗಳು ಸೂಚಿಸುತ್ತವೆ. ಎಳೆತನದಲ್ಲಿ ಹೊಳೆದು ಬೆಳೆದು ಆದರ್ಶದ ಸೂರ್ಯನ ಪ್ರಕಾಶ ದೊಡ್ಡವನಾದ ಮೇಲೆ ಕ್ರಮೇಣ ಕಡಿಮೆಯಾಗಿ ಕತ್ತಲೆ ಆವರಿಸಿದಾಗ

ನನ್ನ ಆದರ್ಶ ಸೂರ್ಯ ಒಡೆದು
ಚುಕ್ಕೆಗಳಾಗಿ ಹೇಗೆ ಹೊಳೆಯುತ್ತಿದೆ;
ಈಗ ಈ ಚುಕ್ಕೆಗಳನ್ನೆಲ್ಲ ಕೂಡಿಸಿ
ಮತ್ತೆ ಸೂರ್ಯನನ್ನು ಪಡೆಯುವದೆಂತು ?

(ಸೂರ್ಯ)

ಎನ್ನುವಲ್ಲಿ ಭವಿಷ್ಯದ ಚಿಂತನೆಯ ಮೊದಲ ಹೆಜ್ಜೆ ಮೂಡಿದ್ದರೆ, ಮರದ ಆದರ್ಶದಲ್ಲಿ

ಗಟ್ಟಿ ನೆಲದಲ್ಲಿ ಅಡ್ಡ
ಬಂದ ಬಂಡೆಗಳನ್ನು ದಾಟಿ, ನನ್ನ
ಬೇರುಗಳನ್ನು ಬಿಟ್ಟು, ನಿತ್ಯಸತ್ಯದ
ನೀರನ್ನರಸುತ್ತ ಆದಷ್ಟು ಆಳಕ್ಕೆ ಇಳಿ-
ಯಬೇಕು

(ನಾನು ಪಲಾಯನಾದಿಯಲ್ಲ)

ಎಂದು ಪ್ರಯತ್ನಪಟ್ಟಾಗ. ಅದೇ ನೆಲದ ಆಳದಲ್ಲಿ ಯಾರಾರವೋ ಬೇರುಗಳು ಈ ಮೊದಲೇ ಘುದುಗಿಕೊಂಡಿರುವುದನ್ನು ಕಂಡು ಪೃಥ್ವಿಯ ಜಟಿಲತೆಯ ಅರಿವಾಗುತ್ತದೆ. ತಂಗಾಳಿಯಲ್ಲಿ ಹೊಂಬಿಸಿಲನ್ನು ಆನಂದಿಸಿ ಸೂರ್ಯನ ಶಕ್ತಿಯ್ನನು ಹೀರಿ ಹಸಿರಾಗಿದ್ದ ಕೆಂಪು ಚಿಗುರು ಈಗ ಹಣ್ಣೆಲೆಯಾಗಿ 'ಮುದಿ ತೊಟ್ಟಿನಲ್ಲೇ ಜೀವ' ಹಿಡಿದಿರುವ ಅದಕ್ಕೆ

ಇಷ್ಟು ದಿನವೂ ದೂರದಿಂದಲೇ
ನೋಡಿದ್ದ ಮಣ್ಣಮಡಿಲಲ್ಲಿ
ಇನ್ನು ಮುಂದಿನ ವಾಸ.

(ಒಂದು ಸಾವು)

ಮರ ಹೀಗೆ ಬರಡಾದರೂ ಒಳಗಿನ್ನೂ ಜೀವರಸವಿರುವ ಹೊಸ ಚೇತನಕ್ಕಾಗಿ ತುಡಿಯುತ್ತ, ಬದುಕಿ ಬೆಳೆಯುವ ಆಶೆಗೆ ಪ್ರತೀಕವಾಗುತ್ತದೆ ;

ದೇಹವೆಲ್ಲ ಕಣ್ಣಾಗಿ
ಕಾಯುತ್ತ ನಿಂತಿದೆ
ವಸಂತನ ಬರವನ್ನೆ
ಶಬರಿಯಂತೆ.

(ಪ್ರತೀಕ್ಷೆ)

ಇದಕ್ಕೂ ಪ್ರಬಲವಾಗಿ ಇಲ್ಲಿಯ ಕವನಗಳಲ್ಲಿ ಕಂಡು ಬರುವ ಅಂಶವೆಂದರೆ ಕವಿಯ ಸಾಮಾಜಿಕ ಕಳಕಳಿ. 'ಈ ಪುಟ್ಟ ಜೀವಗಳು', 'ನಾವು ಗೊಂಬೆಗಳಲ್ಲ', 'ಆಹ್ವಾನ', 'ತೆರೆಗಳು', 'ಕೀಳುವ ಸಮಯ' ಮೊದಲಾದ ಕವನಗಳಲ್ಲಿ ಜನತೆಯ ಬಡತನ, ಸಾಮಾಜಿಕ ಏರುಪೇರುಗಳು, ದೀನದಲಿತರ ಬೆಳಕು ಕಾಣದ ಬಾಳು - ಇವುಗಳ ವಾಸ್ತವ ಚಿತ್ರದೊಂದಿಗೆ ಅನ್ಯಾಯ ಅಸಮಾನತೆಗಳನ್ನು ಪ್ರತಿಭಟಿಸುವ ಬಂಡಾಯ ಧ್ವನಿಯೂ ಕೇಳಿಬರುತ್ತದೆ.

ಎಲ್ಲರಂತೆಯೇ ಹುಟ್ಟಿದರೂ
ಬೆಳಕು ಕಾಣದ, ಬಾಳು ಬಾಳದ ನೆರಳುಗಳಾಗಿಯೇ
ಉಳಿದ ಮುಖವಿಲ್ಲದ ಕಪ್ಪು ನಕ್ಷತ್ರಗಳು

ದನಿಯಿಲ್ಲದ ಮೂಕ ಕೊರಳುಗಳು (ಆಹ್ವಾನಗಳು)

ಇವುಗಳನ್ನು ಜೊತೆಗಿಟ್ಟುಕೊಂಡು, ದೇವರ ಸರ್ವಸ್ವಕ್ಕೂ ಧಿಕ್ಕಾರ ಕೂಗಿ 'ಇಂದಿನ ಹಿರಣ್ಯಕಶಿಪುವಾಗಿ' ಕಾಳಗಕ್ಕೆ ಕರೆಯುವಲ್ಲಿ,

ಕೈ ಕೆಸರಾದರೆ ಬಾಯಿ ಮೊಸರು
ಎಂದು ಕಲಿಸಿದವರಿಗೆ
ಕೇಳು ಕೆಸರಾದದ್ದು ಯಾರ ಕೈ ?
ಮೊಸರಾದದ್ದು ಯಾರ ಬಾಯಿ ?

(ಕೇಳುವ ಸಮಯ)

ಎಂದು ಕೇಳುವ ಸಮಯ ಬಂದಿರುವುದನ್ನು ಧೈರ್ಯವಾಗಿ ಸಾರುವಲ್ಲಿ,

ಕೆಳಗೆ ನೀರಾಳದೊಳಗೆ ಕುಸಿಯುತ್ತಿದೆ ದಡ,
ಏಳುತ್ತಿವೆ ಜನಸಾಗರದ ಮಧ್ಯದಲ್ಲಿ
ಎಂದಿಗಿಂತಲೂ ದೊಡ್ಡದಾಗಿ ತೆರೆಗಳು,
ಬರುತ್ತಲೇ ಇವೆ ಮೆರವಣಿಗೆಗಳು.

(ತೆರೆಗಳು)

ಇದನ್ನೆಲ್ಲ ಕಿಡಕಿಯಲ್ಲಿ ಇಣಿಕಿ ನೋಡಿ ಮುಖತಿರುವಿ ಮರೆತು ಬಿಡುವ ಧನಿಕ ತಟಸ್ಥರಿಗೆ ನೀಡುವ ಎಚ್ಚರಿಕೆಯಲ್ಲಿ ಪ್ರತಿಭಟನೆಯ ದನಿ ಶಕ್ತಿಯನ್ನು ಪಡೆದುಕೊಳ್ಳುತ್ತದೆ. ಬಂಡೆದ್ದ ಮೇಲೆ ಮುಂದಿನ ಕ್ರಿಯೆಯ ಕಲ್ಪನೆಯೂ ಕವಿಗಿದೆ.

ಇದು ನಮ್ಮ ನೆಲ, ನಮ್ಮ ಬದುಕು
ಇದನ್ನು ನಾವು ಹಸನ ಮಾಡತೀವು

(ನಾವು ಗೊಂಬೆಗಳಲ್ಲ)

ಹಳೆಯ ಹರಕು ಕಂಬಳಿಯಲ್ಲಿಯೇ ಕವುಚಿಕೊಂಡಿರುವ ಗೆಳಯನಿಗೆ ಹೇಳುವ ಮಾತು ಧ್ವನಿಪೂರ್ಣವಾಗಿದೆ.

ಇನ್ನು ಕತ್ತಲೆ ಸುತ್ತಲೂ
ಅಂದೆಯಾ ?
ಇನ್ನೂ ಕತ್ತಲೆ ಸುತ್ತಲೂ
ಅದಕ್ಕೇ ಈಗ ಎದ್ದೇಳು

(ಹೊಸ ಕಂಬಳಿಗಾಗಿ)

ಹಲವು ರೀತಿಯಿಂದ ದಬ್ಬಾಳಿಕೆಗೆ, ಅನ್ಯಾಯಕ್ಕೆ ಒಳಗಾಗಿರುವ ಹೆಣ್ಣು ವಸ್ತುವಾಗಿರುವ ನಾಲ್ಕೈದು ಕವನಗಳೂ ಒಟ್ಟು ಪ್ರತಿಭಟನೆಯ ಅಂಗವಾಗಿ ಇಲ್ಲಿರುವುದು ಗಮನಾರ್ಹವಾಗಿದೆ.

ವಿವರಗಳಲ್ಲಿ ವ್ಯಂಗವನ್ನಡಗಿಸಿಕೊಂಡ ಹೆಣ್ಣಿನ ಜೀವನದ ವಾಸ್ತವ ಚಿತ್ರ 'ಸಂಪೂರ್ಣ ಕತೆ', 'ಚಕ್ರ' ಹಾಗೂ 'ಮೂರ್ತಿಯನ್ನು ಮಾಡುವುದು' ಕವಿತಗಳಲ್ಲಿ ಪರಿಣಾಮಕಾರಿಯಾಗಿ ಮೂಡಿದೆ. 'ಸುತ್ತಮುತ್ತಲೂ ಹತ್ತಾರು ಅಗೋಚರ ಲಕ್ಷ್ಮಣ ರೇಖೆಗಳು ನಡುವೆ' , 'ನಿತ್ಯ ಸೀತೆ'ಯಾಗಿರುವ ಆಕೆಗೆ 'ಅರಿಯುತ್ತ ಹೋದಂತೆ ರೇಖೆಗಳಾಚೆಯ ಜಗಕೆ ಹೆಜ್ಜಯಿಕ್ಕುವ ಧೈರ್ಯ' ಬಂದೀತೆಂಬ ಆಶೆಯನ್ನು ವ್ಯಕ್ತಪಡಿಸಲಾಗಿದೆ. ಕವಿಯ ಎಳೆಗಣ್ಣುಗಳಿಗೆ 'ಹಾಳು ಗುಡಿ'ಯಾಗಿ ಕಂಡ 'ಕುಂಕಮವಿಲ್ಲದ ಹಣೆ' ಅದರ ರಕ್ತ ರಂಜಿತ ಚರಿತೆ ತಿಳಿವಿಗೆ ಬಂದ ಮೇಲೆ.

ಈಗ ಕಾಣಿಸುತ್ತದೆ
ಕುಂಕುಮವಿಲ್ಲದ ಹಣೆಯ
ನೈಜ ನೈಸರ್ಗಿಕ ಚಂದ
ಸ್ವಚ್ಛ ಬಿಳಿ ಅರಳೆಯಂತೆ
ಶುಭ್ರ ನೀಲ ಬಾನಿನಂತೆ

(ಕುಂಕುಮವಿಲ್ಲದ ಹಣೆ)

ದೇಶದಲ್ಲಿ ನಡೆದಿರುವ ಕೋಮುಗಲಭೆಯ ದುರಂತವೂ ಕವಿಯ ಕಣ್ಣಿಗೆ ಬೀಳದೆ ಇಲ್ಲ. ಸುತ್ತಲೂ ನಡೆಯುತ್ತಿರುವ ಹಿಂಸೆ ತನಗೆ ಸಂಬಂಧಪಟ್ಟದ್ದಲ್ಲವೆಂದುಕೊಂಡು ಅಂತಃಕರಣಕ್ಕೆ ಎರವಾಗುತ್ತಿರುವ ವ್ಯಕ್ತಿಗೆ ಕವಿ ಪ್ರಶ್ನಿಸುತ್ತಾನೆ.

ನಿನ್ನೆ ನಿನ್ನ ಊರಿನಲ್ಲೆ
ಮೈಮೇಲೆ ದೇವರು ಬಂದು
ಭಕ್ತರು ತೂರಾಡಿದ ಹೆಣಗಳು
ನಿನ್ನವಲ್ಲ, ನಿನ್ನ ಪೈಕಿಯವರವೂ ಅಲ್ಲ
ನಿನ್ನೆ ಅಲ್ಲ ಹೌದು,
ಆದರೆ ನಾಳೆ ?

(ಬೀದಿಯಲ್ಲಿ ಬಿದ್ದಿರುವ ಹೆಣ)

ಆ 'ನಾಳೆ' ನಿಜಕ್ಕೂ ಭೀಕರವಾಗಿರುವುದರ ಬಗ್ಗೆ ಚಿಂತಿಸಬಲ್ಲವರೆಷ್ಟು ಜನ ?

ರಕ್ತದ ಹನಿಯಿಂದಲೇ ತೋರಿಸಬೇಕೆ
ದೇಶದ ಪ್ರತಿ ಊರನ್ನು
ನಾಳೆ ಮಕ್ಕಳಿಗೆ ನಕಾಶೆಯಲ್ಲಿ ?

(ಹೇಳಿ ಅವರಿಗೆ)

ಜಾತಿಗಳ ಪರಸ್ಪರ ಹೀಯಾಳಿಕೆ 'ನಾಳೆ ಹತ್ತಿ ಉರಿಯುವ ಬೆಂಕಿಗೆ ಇಂದು ಸುರಿಯುವ ತುಪ್ಪ'ವೆಂಬುದು ಈ ಕವಿತೆಯ ಮುಖ್ಯ ಆಶಯವಾಗಿದೆ.

ಜೀವನದ ಚೆಲುವನ್ನು ಕಾಣಬೇಕಾದರೆ ಮನುಷ್ಯ ತಾನು ಕಟ್ಟಿಕೊಂಡ ಬಂಧನದಿಂದ ಹೊರಬರಬೇಕೆಂಬ ಆಶಯ 'ಬಾ ಹೊರಗೆ' ಕಾವ್ಯದ ಚಿಟ್ಟೆಯ ಪ್ರತಿಮೆಯಲ್ಲಿ ಆಕೃತಿ ಪಡೆದಿದ್ದರೆ, ಕವಿತೆ ಹೊರಬರುವಾಗಿನ ಕವಿಯ ಮನಸ್ಥಿತಿ 'ನೆರೆಬಂದ ಹೊಳೆ'ಯಲ್ಲಿ ಸುಳುಹುದೋರಿ ಸೃಜನಕ್ರಿಯೆಯ ಸೋಜಿಗದಲ್ಲಿ ಮುಕ್ತಾಯಗೊಂಡಿದೆ.

ನಿನ್ನೆಯವರೆಗೂ ಯಾವದು ಎಂದಿಗೂ
ನನ್ನಿಂದ ಸಾಧ್ಯವೇ ಇಲ್ಲ ಅನಿಸಿದ್ದು
ಹೇಗೆ ಇಂದು ತಾನಾಗಿಯೇ
ಹರಿದುಕ್ಕಿ ಬರುತ್ತಿದೆ ಹೊರಗೆ
ನೆರೆ ಬಂದ ಹೊಳೆಯಂತೆ !

ಹೀಗೆ ಸಾಮಾನ್ಯವಾಗಿ ಇಲ್ಲಿಯ ಎಲ್ಲ ಕವಿತೆಗಳಲ್ಲಿ ಭಾವದ ತೀವ್ರತೆಯೊಂದಿಗೆ ವೈಚಾರಿಕತೆಯನ್ನು ಮೇಳವಿಸಿ ಹೊಸ ದೃಷ್ಟಿಕೋನವೊಂದನ್ನು ಕಂಡುಕೊಳ್ಳುವ ಪ್ರಾಮಾಣಿಕ ಪ್ರಯತ್ನ ನಡೆದಿರುವುದು ಕಂಡುಬರುತ್ತದೆ. ಪ್ರಸ್ತುತ ಸಂದರ್ಭದಲ್ಲಿ ವಸ್ತುವಿನ ಪ್ರಾಧಾನ್ಯವನ್ನು ಒಪ್ಪಿಕೊಂಡೂ ಕವಿತೆಯ ಬಂಧ ಶಿಥಿಲವಾಗದಂತೆ ಲಯದ ವೈಶಿಷ್ಟ್ಯವನ್ನು ಕಾಪಾಡಿಕೊಳ್ಳುವುದು ಅವಶ್ಯವೆನಿಸುತ್ತದೆ, ಕಾವ್ಯದ ಕಸಬುಗಾರಿಕೆಯ ದೃಷ್ಟಿಯಿಂದ ಈ ಕವಿಯ ಮುಂದಿನಹೆಜ್ಜೆಗಳು ಇನ್ನಿಷ್ಟು ದೃಢವಾಗಿ ಮೂಡುವಂತಾಗಲಿ ಎಂದು ಹಾರೈಸಿ ಅವರ ಸಾಹಸಪೂರ್ಣವಾದ ಮುಂದಿನ ಪಯಣಕ್ಕೆ ಶುಭ ಕೋರುತ್ತೇನೆ.

(೧೯೯೩)

೫೭

## ಕಾವ್ಯಗಳ ಪುಟದಿಂದ ನೀನೆದ್ದು ನಿಲ್ಲು

ಸಣ್ಣ ಕತೆ ಹಾಗೂ ಕಾದಂಬರಿ ಕ್ಷೇತ್ರದಲ್ಲಿ ಈಗಾಗಲೇ ಕೃಷಿಗೈದಿರುವ ಶ್ರೀಮತಿ ಇಂದಿರಾ ಹೆಗ್ಗಡೆಯವರು ತಮ್ಮ ಈ ಪ್ರಥಮ ಕವನ ಸಂಕಲನಕ್ಕೆ ನನ್ನ ಮುನ್ನುಡಿಯನ್ನು ಅಪೇಕ್ಷಿಸಿದ್ದಾರೆ. ಸಹೃದಯರ ಸ್ವಾಗತಕ್ಕೆ ಅರ್ಹವಾಗಿರುವ ಇಲ್ಲಿಯ ಕಾವ್ಯದ ಪೈರಿಗೆ ನನ್ನ ಎರಡು ನುಡಿಗಳು ನೀರೆರೆಯುವಂತಾದರೆ ಅದಕ್ಕಿಂತ ಹೆಚ್ಚಿನ ಸಂತೋಷವೇನಿದೆ ?

ಇಲ್ಲಿಯ ಕವನಗಳಲ್ಲಿ ಹೆಚ್ಚಿನವು ಸಮಾಜದಲ್ಲಿ ಹೆಣ್ಣಿಗುಂಟಾಗುತ್ತಿರುವ ಅನ್ಯಾಯವನ್ನು ಚಿತ್ರಿಸುತ್ತವೆ. ಹಾಗೆ ಚಿತ್ರಿಸುವಾಗ ಯಾವುದೇ ಬಗೆಯ ರೋಷ-ದ್ವೇಷಕ್ಕೆ ಪಕ್ಕಾಗದೆ, ಇರುವ ಸ್ಥಿತಿಯ ಮಾರ್ಮಿಕ ನಿರೂಪಣೆಯಿಂದ ಕವಿಯ ಆಶಯ ಕವಿತೆಯಲ್ಲಿ ಸೂಚ್ಯವಾಗಿ ಒಡಮೂಡಿರುವುದು ಗಮನಾರ್ಹವಾಗಿದೆ. 'ದ್ರೌಪದಿಯರು', 'ಕೃತಿವಿಮರ್ಶೆ', 'ನಮ್ಮ ಸಂಸ್ಕೃತಿ' ಮೊದಲಾದ ಕವನಗಳು ಇದಕ್ಕೆ ನಿದರ್ಶನ. ಕಾಲಚಕ್ರ ಉರುಳುತ್ತ ಸಾಗಿದ್ದರೂ ಇವರಿಗೂ

ಪುರುಷ ಸಾಮ್ರಾಜ್ಯದಾಸ್ಥಾನದಲ್ಲಿ
ದುಶ್ಯಾಸನರ ಮರುಹುಟ್ಟು ಆಗುತ್ತಲೇ ಇದೆ.
ಧೃತರಾಷ್ಟ್ರನಿಗೆ ಕಿರೀಟ ದಕ್ಕುತ್ತಲೇ ಇದೆ.

ಪುರುಷಪ್ರಧಾನ ಸಮಾಜದಲ್ಲಿ, ಗಂಡಿನಿಂದ ಹೆಣ್ಣಿಗೆ ಅನ್ಯಾಯ ನಡೆಯುತ್ತಿರುವಾಗಲೂ ಅದನ್ನು ಮನ್ನಾ ಮಾಡಿ ಗಂಡಿಗೇ ಮರ್ಯಾದೆ ದಕ್ಕುವಂತಿರುವ ಪ್ರವೃತ್ತಿಯನ್ನು ವಿಡಂಬಿಸುವ 'ನಮ್ಮ ಸಂಸ್ಕೃತಿ'ಯಲ್ಲಿಯ ವ್ಯಂಗ್ಯ ಪರಿಣಾಮಕಾರಿಯಾಗಿದೆ. ಹೂವು, ಬಳ್ಳಿ, ಹಣ್ಣು ಮುಂತಾದವುಗಳ ಹೋಲಿಕೆಯೊಂದಿಗೆ ಕಾವ್ಯದಲ್ಲಿ ರಸವತ್ತಾಗಿ ಚಿತ್ರಿತವಾದ ಹೆಣ್ಣು ವಾಸ್ತವದಲ್ಲಿ ರಸ ಇಂಗಿದಾಗ 'ಬಟ್ಟಬಯಲಿನಲಿ ನೀನಿರುವೆ ಏಕಾಂಗಿ' ಎಂಬುದನ್ನು ನೆನಪಿಸಿ 'ಪರಂಪರೆಯ ಪಳೆಯುಳಿಕೆ' ಯಾಗದೆ

ನಿನ್ನ ಶಕ್ತಿಗೆ ಇನಿತು ಸೂಕ್ಷ್ಮವ ತಂದು
ನಿನ್ನ ವಿಧಿಯ ನೀನು ರೂಪಿಸಲೇಬೇಕು

ಎಂಬ ಎಚ್ಚರಿಕೆಯೂ ಇಂಥ ಕವನಗಳಲ್ಲಿ ವ್ಯಕ್ತವಾಗಿರುವುದು ಒಂದು ಮಹತ್ವದ ಅಂಶ. 'ಕಾವ್ಯಗಳ ಪುಟದಿಂದ ನೀನೆದ್ದು ನಿಲ್ಲು' ಎಂಬುದು ಈ ಕವನ ಸಂಗ್ರಹದ ಶೀರ್ಷಿಕೆಯಾಗಿರುವುದು ಈ ದೃಷ್ಟಿಯಿಂದ ಅರ್ಥಪೂರ್ಣವಾಗಿದೆ.

ಇಂದಿನ ರಾಜಕೀಯ ವಿದ್ಯಮಾನಗಳಿಗೆ ಸ್ಪಂದಿಸಿದ ಕವನಗಳೂ ಇಲ್ಲಿವೆ. 'ಪ್ರತಿನಿಧಿಗಳು', 'ಜಾರುತಿದೆ ಕನಸುಗಳು' ಕವನಗಳಲ್ಲಿ ಪ್ರಜಾಪ್ರಭುತ್ವದಲ್ಲಿ ಅನಿಸಿಕೆಗಳು ಅರ್ಥ ಕಳಚಿಕೊಳ್ಳುವ, ಅರ್ಥಗಳು ಗೋಜಲಾಗುತ್ತಿರುವ 'ಕನಸುಗಳು ತಡಕಾಡಿ' ಭಾರತದ ಭೂಪಟದಿಂದ ಎದ್ದು ಬಂದ ಶ್ವೇತಾಂಬರಧಾರಿ (ಉಟ್ಟ ಬಟ್ಟೆಯಲಿ ಕೆಂಪು ಕಲೆಗಳು)ಯ ನಡುಗಳಲ್ಲಿ ನಮ್ಮ ದೇಶದ ಸದ್ಯದ ಸ್ಥಿತಿಯನ್ನು 'ಗದ್ದಲು ಹತ್ತಿದ ಮರ'ದ ಪ್ರತಿಮೆಯ ಮೂಲಕ ನಾಟಕೀಯವಾಗಿ ನಿರೂಪಿಸಿರುವುದು ಅದರ ಕಾವ್ಯಗುಣವನ್ನು ಹೆಚ್ಚಿಸಿದೆ. ಬೇರೆ ಭಾಷೆಗಳ ಆಕ್ರಮಣದಿಂದಾಗಿ ಕನ್ನಡ ನರಳುತ್ತಿರುವ ಅದರ ಶೋಚನೀಯ ಸ್ಥಿತಿಗೆ 'ಕಾಣೆಯಾಗಿದೆ ಕನ್ನಡ' ಕನ್ನಡಿ ಹಿಡಿದಂತಿದೆ. ಕನ್ನಡ, ತುಳು ಈ ಭಾಷೆಗಳ ಬಾಂಧವ್ಯ 'ಹೆತ್ತಬ್ಬೆ-ಹೊತ್ತಬ್ಬೆ' ಕವಿತೆಗಳಲ್ಲಿ ಕವಿಯ ಸ್ವಾನುಭವದಿಂದ ಆತ್ಮೀಯತೆಯನ್ನು ಪಡೆದು ಆಪ್ಯಾಯಮಾನವಾಗಿದೆ.

ಗಮನಿಸಬೇಕಾದ ಉಳಿದ ಕವಿತೆಗಳಲ್ಲಿ 'ದುಡಿಮೆ ನನಗೆ ಫಲ ನಿನಗೆ', 'ಕಡಲು', 'ದೀಪಾವಳಿ', 'ಕಾಗೆಗಳು', 'ನಾಯಿಮುಟ್ಟಿದ ಮಡಕೆ', 'ಮರಳಿಮನೆಗೆ', 'ಪಯಣಿಗರು', 'ನಲವತ್ತೈದರ ರಮಣಿ', 'ಮಲ್ಲ ಜಾಣ' ಇವನ್ನು ಮುಖ್ಯವಾಗಿ ಹೆಸರಿಸಬಹುದು. ಸಂಗ್ರಹದಲ್ಲಿ ವಸ್ತುವೈವಿಧ್ಯಕ್ಕೂ ಅವು ಒಂದಿಲ್ಲ ಒಂದು ದೃಷ್ಟಿಯಿಂದ ಕಾಣಿಕೆ ಸಲ್ಲಿಸಿವೆ.

ಕಾವ್ಯದ ಕಸುಬುಗಾರಿಕೆಯ ದೃಷ್ಟಿಯಿಂದ ಇಲ್ಲಿಯ ಕವನಗಳ ಶೈಥಿಲ್ಯ ಒಡೆದು ಕಾಣುತ್ತದಾದರೂ ಭಾಷೆ, ಲಯ, ಛಂದ ಮೊದಲಾದ ಕಾವ್ಯ ಪರಿಕರಗಳ ಬಗ್ಗೆ ಹೆಚ್ಚಿನ ಕಾಳಜಿ ವಹಿಸಿ ಆ ಕೊರತೆಯನ್ನು ನೀಗಿಸಿಕೊಳ್ಳಬಹುದೆಂದು ಸೂಚಿಸುತ್ತ ಕವಯಿತ್ರಿ ಇಂದಿರಾ ಹೆಗ್ಗಡೆಯವರಿಗೆ ಶುಭ ಕೋರುತ್ತೇನೆ.

(೧೯೯೩)

೫೮

## ಗೋಧೂಳಿ

ಪ್ರಥಮ ಸಂಕಲನದಲ್ಲಿಯೇ ತಮ್ಮ ಕಾಲ ಮೇಲೆ ತಾವು ನಿಲ್ಲುವ, ತಮ್ಮದೇ ಆದ ಹಾದಿಯನ್ನು ಕಂಡುಕೊಳ್ಳುವ ಭರವಸೆ ಮೂಡಿಸಿದ ಕವಿ ಬಿ. ಚಿನ್ನಸ್ವಾಮಿಯವರು ಎರಡನೆಯ ಸಂಕಲನ 'ಗೋಧೂಳಿ'ಗೆ ನನ್ನ ಮುನ್ನುಡಿಯನ್ನು ಅಪೇಕ್ಷಿಸಿರುವುದು ಅವರ ಸೌಜನ್ಯದ ಸಂಕೇತವೆಂದು ನಾನು ಭಾವಿಸಿದ್ದೇನೆ. ವಿನಯದಿಂದ ಕೂಡಿದ ಅವರ ಕಾವ್ಯದ ಪ್ರಗತಿಯನ್ನು ಮೆಚ್ಚಿಕೊಂಡು ಸಂತೋಷದಿಂದ ಎರಡು ಮಾತು ಬರೆಯುತ್ತಿದ್ದೇನೆ.

ಹೊಸ ಪೀಳಿಗೆಯ ಅನೇಕ ಕವಿಗಳಿಗೆ ಬಂಡಾಯ ಒಂದು ಆಕರ್ಷಣೆ ಎನಿಸಿದ್ದರೆ, ನಿಜವಾದ ಸಾಮಾಜಿಕ ಕಳಕಳಿಯುಳ್ಳ ಕೆಲವರಿಗೆ ಅದು ಅನಿವಾರ್ಯವಾಗಿದೆ. 'ಹುಟ್ಟೇ ನೋವಾಗಿ, ಬದುಕು ಸಾವಾಗಿ ಅಣಕಿಸುವ ಒಂದು ಬೃಹತ್ ಮಾನವ ಸಮುದಾಯ' ಅನಾಗರಿಕ ಹಾಗೂ ಅಮಾನವೀಯ ಶೋಷಣೆ ಮತ್ತು ದಬ್ಬಾಳಿಕೆಗೆ ಒಳಗಾಗಿರುವಾಗ ಅದರ ನೋವು, ಸಂಕಟಗಳನ್ನು, ದುಃಖ ದುಮ್ಮಾನಗಳನ್ನು ಆ ಸಮುದಾಯದ ಒಂದು ಭಾಗವೇ ಆದ ಲೇಖಕನೇ ಅದನ್ನು ಅಧಿಕೃತವಾಗಿ ನೀಡಬಲ್ಲ. ಈಚಿನ ಕವಿಗಳಲ್ಲಿ ಅಂಥ ದಲಿತ ಬಂಡಾಯ ಮನೋಧರ್ಮವನ್ನು ಸಂಯಮದಿಂದ ಅಭಿವ್ಯಕ್ತಿಗೊಳಿಸುತ್ತಿರುವವರಲ್ಲಿ ಶ್ರೀ ಚಿನ್ನಸ್ವಾಮಿಯವರ ಪ್ರಯತ್ನ ವೈಶಿಷ್ಟ್ಯಪೂರ್ಣವಾಗಿದೆ.

ಇವರ ಮೊದಲ ಕವನ ಸಂಗ್ರಹ (ಕೊಂಡಿಗಳು ಮತ್ತು ಮುಳ್ಳುಬೇಲಿಗಳು)ಕ್ಕೆ ಮುನ್ನುಡಿ ಬರೆಯುತ್ತ ಡಾ॥ ಸಿದ್ಧಲಿಂಗಯ್ಯನವರು ಇವರಲ್ಲಿ ಪ್ರತಿಭಟನೆಯ ಪ್ರವೃತ್ತಿ ಇದ್ದು, ಅವರು ಲೋಕವನ್ನು ಗ್ರಹಿಸುವ ರೀತಿ ಬುದ್ಧಿಪ್ರಧಾನವಾಗಿರುವುದನ್ನು ಹಾಗೂ ಕ್ರಾಂತಿಯ ಸೋಗಿಗಿಂತ ದಲಿತತ್ವದ ನೋವು ದಟ್ಟವಾಗಿ ಹರಡಿರುವುದನ್ನು ಸರಿಯಾಗಿ ಗುರುತಿಸಿದ್ದಾರೆ. ಪ್ರಸ್ತುತ ಸಂಗ್ರಹದಲ್ಲಿ ಈ ಗುಣಗಳು ಇನ್ನಿಷ್ಟು ಸಮರ್ಥವಾಗಿ, ಮೈದುಂಬಿಕೊಂಡು ಮೂಡಿ ಬಂದಿರುವುದನ್ನು ಕಾಣುತ್ತೇವೆ. ಜೊತೆಗೆ ಭಾವನೆ ಮತ್ತು ಚಿಂತನೆಗಳ ಸಾಮರಸ್ಯವನ್ನು ಸಾಧಿಸುವ ಪ್ರಯತ್ನ ಇಲ್ಲಿಯ ಕೆಲವು ಕವನಗಳಲ್ಲಿ ಯಶಸ್ವಿಯಾಗಿದೆ. ಇಲ್ಲಿಯ ಹೆಚ್ಚಿನ ಕವನಗಳ ರೀತಿ ಆತ್ಮಕಥನ ಅಥವಾ ಆತ್ಮನಿವೇದನೆಯ ಧಾಟಿಯನ್ನನುಸರಿಸಿದ್ದು ಸಮುದಾಯದ ಅನುಭವವೇ ವೈಯಕ್ತಿಕ ಅನುಭವವೂ ಆಗಿರುವುದರಿಂದ ಅದು ಹೆಚ್ಚಿನ ತೀವ್ರತೆಯನ್ನು ಅಲ್ಲಲ್ಲಿ ಪಡೆದುಕೊಂಡಿದೆ. ಭಾಷೆ ಮತ್ತು ಲಯಗಳಲ್ಲಿ ಕಂಡುಬರುವ ಸಂಯಮ ಚಿತ್ರಕ ಶಕ್ತಿಯನ್ನು ಸ್ಫುಟಗೊಳಿಸಿದೆ.

ಯಾವ ಆಕ್ರೋಶಕ್ಕೂ ಎಡೆಗೊಡದೆ ಓದುಗರ ಮನಸ್ಸನ್ನು ಕಲಕುವ ಗುಣಕ್ಕೆ 'ಗೋಧೂಳಿ' ಮತ್ತು 'ಮತ್ತೆ ಮಳೆ ಬರುವ ಮುನ್ನ' ಕವಿತೆಗಳು ಉತ್ತಮ ಉದಾಹರಣೆಗಳಾಗಿವೆ. ಯಾತನಾಮಯವಾದ ದಲಿತ ಜೀವನದ ಕರುಳು ಮಿಡಿಯುವ ಚಿತ್ರ 'ಗೋಧೂಳಿ'ಯಲ್ಲಿ ಕಾವ್ಯವಾಗಿ ನಮ್ಮನ್ನು ತಟ್ಟುತ್ತದೆ. ಹಸಿದು ಕಂಗಾಲಾದ ಎಳೆಗೂಸು, 'ಸೂರ್ಯನ ಕಣ್ಣಿಂಗುವಾಗ' ದುಡಿದು ದಣಿದು ಸೂಪ್ಪಾಗಿ ಪಟ್ಟಿಗೆ ಹಿಂತಿರುಗುವ ತಾಯಿ - ಇವರ ನಡುವಿನ ವಾತ್ಸಲ್ಯಭಾವ ನುಡಿ ನುಡಿಯಲ್ಲೂ ಮಡುಗಟ್ಟುವಂತಿದೆ : ಒಂದೆರಡು ನುಡಿಗಳನ್ನು ಇಲ್ಲಿ ಉದಾಹರಿಸಬಹುದು:

ಹಾದಿ ಬೀದಿಯ ಅಳೆದು
ಕೊಳಗ ಮಾತನು ಸುರಿದು
ಕೇರಿ ತಿರುಗುವ ಪುಟ್ಟ ಸರದಾರ
ಗಟ್ಟಿ ಉಡಿದಾರಕ್ಕೆ ತೊಟ್ಟ ಬೀಗದ ಕೈ
ಆಡು ಕುರಿ ಮೇಕೆ ಎತ್ತುಗಾಡಿಗೆ
ಎದುರು ಬದುರಾಗಿ ದಾಪುಗಾಲು ಹಾಕುವ
ಹಸಿದು ಕಂಗಾಲಾದ ಹೈದ ಛಲಗಾರ

* * * *

ಕಣ್ಣಾಲಿಯಿಂದ ಧುಮುಕುವ ಹನಿಗಳು
ಮೈತೊಳೆದವೋ
ಹತಾಶೆಯ ಹೊಳ್ಳೆಗಳುಸುರಿದ ಬಿಸಿಗಾಳಿ
ಗಂಧ ತೀಡಿತೋ
ಬೊಗಸೆಯಿಂದೆತ್ತುವಳು ಮುಖವ
ಮೈದಡವಿ ಒಮ್ಮೆ ಬೀರಿ ಮಂದಹಾಸವ
ಹಾಲುಣ್ಣುವ ಆಸೆಗಣ್ಣಿಗೆ
ಸರಸರನೆ ಕುಪ್ಪಸವ ತಡವಿ
ಬರದ ಹಾಲಿಗೆ ಮೊಲೆಯ ಹಿಂಡುವಳು.

ಮಳೆಗಾಲದಲ್ಲಿ ಸೋರುವ ಸೂರಾಗಿರುವ ಅಜ್ಜನ ಕಾಲದ ಮನೆಯಲ್ಲಿ ವಾಸಿಸುವ ಅಪ್ಪ-ಮಗನ ಬದುಕಿನ ಬವಣೆಯ ವಾಸ್ತವ ಚಿತ್ರ 'ಮತ್ತೆ ಮಳೆ ಬರುವ ಮುನ್ನ'ದಲ್ಲಿ ಪರಿಣಾಮಕಾರಿಯಾಗಿ ಬಂದಿದೆ:

ಕವಡೆ ಕಾಸಿನ ಕಂಬಳದ ಜನರನ್ನ
ಲೇವಡಿ ಮಾಡುವ ಈ
ರಾಡಿಮಳೆ ನಿಲ್ಲಬಾರದೇಕೆಂದು
ಕುದಿತ ಒಳಗೊಳಗೆ

ಅಪ್ಪನ ತಿದಿಬಾಯಿ
ಒತ್ತಿ ಹೇಳುವ ಮಾತು
ಹೆಂಚು ಕೈಯಾಡಿಸೋ ಮಗ
ಮತ್ತೆ ಮಳೆ ಬರುವ ಮುನ್ನ
ಇಲ್ಲ
ಹೊತ್ತು ಸಾಗಿಸು
ನನ್ನ ಕಳೇಬರವನ್ನ

'ಸೂರ್ಯಚಂದ್ರರೆಂಬ ಗುಲಾಮರ'ನ್ನು ದುಡಿವ ಬಡವರೊಡನೆ ಸಮೀಕರಿಸಿದ ರೀತಿ ಅನನ್ಯವಾಗಿದೆ. ಅಂಬೇಡಕರರ ವ್ಯಕ್ತಿತ್ವದ ಪ್ರಖರತೆಯನ್ನು 'ನಾ ಮಾಡುವ ಶಬ್ದ' ಅಡಕವಾಗಿ ಹಿಡಿದಿಡುತ್ತದೆ. 'ಜೀತದಾಳಿನ ಗಾಥೆ' ಆನೆಯ ಪ್ರತಿಮೆಯಲ್ಲಿ ಸಾರ್ಥಕವಾಗಿ ಅಭಿವ್ಯಕ್ತಿ ಪಡೆದಿದೆ.

ಅಂತ್ಯಜರ ಬದುಕಿನ ಹೀನ ಸ್ಥಿತಿಯನ್ನು 'ನೀವ್ ಹುಟ್ಟಿದ್ದಾರ ಯಾಕ'ದಲ್ಲಿ ವ್ಯಂಗ್ಯವಾಗಿ ಸೂಚಿಸಿದ್ದಾರೆ. ಈ ಸ್ಥಿತಿಯ ಅರಿವು ಮೂಡಿದಾಗ ಶೋಷಕರ ಬಗೆಗೆ ಉಕ್ಕುವ ರೋಷ 'ಯಾಕಿಂಗ್ಮಾಡಿದ್ರೋ'ದಂಥ ವಿಚಾರಪರತೆ ಆ ವ್ಯಕ್ತಿಯ ಆಡುಭಾಷೆಯಲ್ಲಿಯೇ ಒಡಮೂಡಿದ್ದರೆ ಹೆಚ್ಚು ಪರಿಣಾಮಕಾರಿಯಾಗಬಹುದಿತ್ತು. ಈ ಸಂಗ್ರಹದ ಪ್ರಧಾನ ವಸ್ತುವಿಗಿಂತ ಭಿನ್ನವಾದ ಪದ್ಯಗಳಲ್ಲಿ 'ಪ್ರಮದೆಯರೇ ಹೀಗೆ' ಗಮನಾರ್ಹವಾಗಿದೆ.

ಇಲ್ಲಿ ಕೆಲವು ವಾಚ್ಯವಾಗಿದ್ದರೂ ಅವು ಪ್ರತಿಪಾದಿಸುವ ವಿಚಾರಗಳ ಸುಸಂಬದ್ಧತೆಯನ್ನು ಕಡೆಗಣಿಸುವಂತಿಲ್ಲ. ಆವೇಶಭರಿತವಾದ ಘೋಷಣೆ ಇಲ್ಲದೆ ದಿಟ್ಟ ಅನುಭವದಿಂದ ಕೂಡಿದ ಒಂದು ಸಮುದಾಯದ ಜೀವನ ಚಿತ್ರಣ ಹೆಚ್ಚು ಪರಿಣಾಮಕಾರಿಯಾಗಬಲ್ಲದು ಎಂಬುದಕ್ಕೆ ಮೇಲೆ ಉದಾಹರಿಸಿದ ಪದ್ಯಗಳು ಸಾಕ್ಷಿಯಾಗಿವೆ. ಅನುಭವದ ಪ್ರಾಮಾಣಿಕತೆಗೆ ತಕ್ಕ ಅಭಿವ್ಯಕ್ತಿ ಇಂಥಲ್ಲಿ ಸಹಜವಾಗಿಯೇ ದೊರೆಕೊಂಡಿದೆ. ಹೊಸಹುಟ್ಟು ಪಡೆಯಬೇಕಾಗಿರುವ ಬಂಡಾಯಕಾವ್ಯ ಮರೆಯಬಾರದ ಕೆಲವು ಸೂಕ್ಷ್ಮ ಅಂಶಗಳು 'ಗೋಧೂಳಿ'ಯಲ್ಲಿವೆ ಎಂದು ನಾನು ಭಾವಿಸಿದ್ದೇನೆ. ಶ್ರೀ ಚಿನ್ನಸ್ವಾಮಿಯವರು ತಮ್ಮ ದಾರಿಯಲ್ಲಿ ಧೈರ್ಯವಾಗಿ ಮುನ್ನಡೆದು ಇನ್ನೂ ಹೆಚ್ಚಿನ ಯಶಸ್ಸನ್ನು ಪಡೆಯುವಂತಾಗಲಿ ಎಂದು ಹಾರೈಸಿ ಶುಭ ಕೋರುತ್ತೇನೆ.

(೧೯೯೩)

# ೫೯

# ಭಾವಶ್ರೀ

ಬೆಳಗಾವಿಯ ಸಾಂಸ್ಕೃತಿಕ ಜೀವನದಲ್ಲಿ ಒಂದಾಗಿ, ಕನ್ನಡದ ಚಟುವಟಿಕೆಗಳಿಗೆ ಸ್ಫೂರ್ತಿಯ ಚಿಲುಮೆಯಂತಿದ್ದ ಜನಪ್ರಿಯ ಕವಿ ಹಾಗೂ ಶಿಕ್ಷಕ ಶ್ರೀ ಎಸ್.ಡಿ. ಇಂಚಲ ನಮ್ಮಿಂದ ಕಣ್ಮರೆಯಾಗಿ ಎರಡು ದಶಕಗಳಾಗುತ್ತ ಬಂದರೂ ತಮ್ಮ ಜೀವನದ ಧ್ಯೇಯ-ಧೋರಣೆಗಳ ಪ್ರತಿಬಿಂಬದಂತಿರುವ ಕಾವ್ಯ ಕೃತಿಗಳ ಮೂಲಕ ಕನ್ನಡಿಗರ ಹೃದಯದಲ್ಲಿ ಚಿರಸ್ಮರಣೀರಾಗಿದ್ದಾರೆ. ಬೆಳಗಾವಿಯ ಇಂಚಲ ಸ್ಮಾರಕ ಸಮಿತಿಯವರು ಪ್ರತಿವರ್ಷ ಅವರ ನೆನಪಿನಲ್ಲಿ ಸಾಹಿತ್ಯಿಕ ಕಾರ್ಯಕ್ರಮಗಳನ್ನು ಸಾಮೂಹಿಕವಾಗಿ ನಡೆಸಿಕೊಂಡು ಬರುತ್ತಿದ್ದು ಇದೀಗ ಇಂಚಲರ ಅಪ್ರಕಟಿತ ಕವಿತೆಗಳನ್ನೆಲ್ಲ ಸಂಗ್ರಹರೂಪದಲ್ಲಿ ತರುತ್ತಿರುವದು ಅಭಿನಂದನಾರ್ಹ ಸಂಗತಿಯಾಗಿದೆ. ಸಮಿತಿಯ ಸ್ನೇಹಿತರ ಕೋರಿಕೆಯ ಮೇರೆಗೆ ಪ್ರಸ್ತುತ ಸಂಕಲನ 'ಭಾವಶ್ರೀ'ಗೆ ಮುನ್ನುಡಿ ಬರೆಯುವದೆಂದರೆ ಸ್ನೇಹಾಂಜಲಿ ಸಮರ್ಪಣೆಯೆಂದು ನಾನು ಭಾವಿಸಿದ್ದೇನೆ.

ನಾಲ್ವತ್ತರ ದಶಕದ ಭಾರತ ಹಾಗೂ ಕನ್ನಡ ನಾಡಿನ ಜೀವನದಲ್ಲಿ ಒದಗಿದ ಸಂಧಿಕಾಲದ ಆಗುಹೋಗುಗಳಿಗೆ ತೆರೆದ ಹೃದಯದಿಂದ ಸ್ಪಂದಿಸಿದ ಇಂಚಲರ ಕಾವ್ಯ 'ತರಂಗಿಣಿ' ಮುಂದಿನ ಕಾಲು ಶತಮಾನಗಳವರೆಗೂ ಹರಿಗಡಿಯದೆ ತನ್ನ ಏರಿಳಿತಗಳೊಂದಿಗೆ ಮುಂದುವರೆದಿರುವುದು ಅವರ ಕಾವ್ಯೋತ್ಸಾಹಕ್ಕೆ ಹಿಡಿದ ಕನ್ನಡಿಯಾಗಿದೆ. ನಾಡತಾಯಿ ಹಿರಿಮೆ, ನಾಡಿನ ವೀರ ವಿಭೂತಿಗಳು, ನಾಡಿನ ವರ್ತಮಾನದ ಕಷ್ಟ ಮೊದಲಾದವುಗಳಿಗೆ ಸಂಬಂಧಿಸಿದ ಕವಿತೆಗಳು ಮೊದಲ ಕವನ ಸಂಗ್ರಹದ ಮುಖ್ಯಭಾಗವಾಗಿರುವುದನ್ನು ಗಮನಿಸಿ 'ತರಂಗಿಣಿ'ಗೆ ಮುನ್ನುಡಿ ಬರೆದ ಹಿರಿಯ ಕವಿ ಮಧುರಚೆನ್ನರು ಅದನ್ನು ನಾಡಿನ ಹಾಡುಗಳ ವರ್ಗಕ್ಕೆ ಸೇರಿಸಿರುವುದು ಸಮಂಜಸವಾಗಿದೆ. 'ವೀರಗೀತೆಯ ಜಾತಿ' ಹಾಗೂ 'ರಮ್ಯವರ್ಣನೆಯ ರೀತಿ' ಎರಡೂ ಇಂಚಲರ ಕಾವ್ಯದ ಮುಖ್ಯ ಲಕ್ಷಣಗಳೆನ್ನಬಹುದು. ಸೃಷ್ಟಿಸೌಂದರ್ಯದ ಹಿಗ್ಗು ಹಾಗೂ ವೈಯಕ್ತಿಕ ಜೀವನದ ನೋವು-ನಲಿವುಗಳಿಗೂ ಅವರ ಕಾವ್ಯದಲ್ಲಿ ಕೆಲಮಟ್ಟಿಗೆ ಎಡೆಯಿದೆಯಾದರೂ ನಾಡಿನ ವೀರ ಜೀವನಕ್ಕೆ ಹಾಗೂ ರಾಷ್ಟ್ರೀಯ ಜಾಗೃತಿಗೆ ಅದು ಹೆಚ್ಚಾಗಿ ಒಲಿದಿರುವುದನ್ನು ಅವರ ಕಾವ್ಯಜೀವನದುದ್ದಕ್ಕೂ ಕಾಣಬಹುದು.

ಸ್ನೇಹದಲ್ಲಿ ಸೌಂದರ್ಯವನ್ನು, ಸೌಂದರ್ಯದಲ್ಲಿ ಆನಂದವನ್ನು ಕಂಡುಕೊಳ್ಳಲು ಹವಣಿಸುವ ದ್ವಿತೀಯ ಸಂಕಲನ 'ಸ್ನೇಹ ಸೌರಭ'ದಲ್ಲಿ ಎರಡರ ಸಮನ್ವಯ ಹಾಗೂ ಮಧುರಬಾಂಧವ್ಯ

ತಾನೇ ತಾನಾಗಿ ಗೋಚರಿಸುತ್ತದೆ. ವಿಷಯ ವೈವಿಧ್ಯ, ಸುಲಭ ಶೈಲಿ, ಭಾವಾವೇಶ ಹಾಗೂ ನಾದ ಮಾಧುರ್ಯಗಳಿಂದ ಈ ಸಂಗ್ರಹದ ಕವನಗಳು ಮನೋನುರಾಗವನ್ನುಂಟುಮಾಡುವ ಗುಣವನ್ನು ಅದರ ಮುನ್ನುಡಿಯಲ್ಲಿ ಡಾ. ಡಿ.ಎಸ್. ಕರ್ಕಿಯವರು ಗುರುತಿಸಿದ್ದಾರೆ. ಮೂರನೆಯ ಕೃತಿ 'ಡಿಂಡಿಮ'ದಲ್ಲಿಯ ಕವಿತೆಗಳ ಮುಖ್ಯ ಪ್ರೇರಣೆ ನಾಡಿನ ನವೋದಯವೆ ಎಂಬುದನ್ನು ಡಾ. ಸದಾನಂದ ನಾಯಕರು ಎತ್ತಿಹೇಳಿ, ಭೂತಕಾಲದ ಸದಾಚರಣೆಗಳು ಅರ್ಥಪೂರ್ಣವಾದಾಗ ವರ್ತಮಾನವು ಶಕ್ತಿಯುತವಾಗುವುದಲ್ಲದೆ ಭವಿಷ್ಯತ್ತಿಗೂ ಅದು ದಾರಿದೀಪವಾಗುವ ಆಶಯವನ್ನು ಇಂಚಲರ ಕವಿತೆಗಳ ಮೂಲಕ ಸೂಚಿಸಲಾಗಿದೆ.

ಈ ಮೂರು ಕೃತಿಗಳಲ್ಲದೆ, ಅಖಂಡ ಕರ್ನಾಟಕದ ಹೊಂಗನಸು ನನಸಾಗುತ್ತಿರುವ ಸಂದರ್ಭದಲ್ಲಿ ಇಪ್ಪತ್ತೆರಡು ಕವಿಗಳ, ನಾಡುನುಡಿಯನ್ನು ಕುರಿತು ವಿವಿಧ ಭಾವ ಪ್ರಕಾಶನದ ಕವನಗಳನ್ನು ಸಂಪಾದಿಸಿ 'ಕರ್ನಾಟಕ ದರ್ಶನ'ವನ್ನು ಮೂಡಿಸುವಲ್ಲಿ ಇಂಚಲರ ಶ್ರಮ ತನ್ನ ಸಾರ್ಥಕ್ಯವನ್ನು ಕಂಡುಕೊಂಡಿತೆಂದು ಹೇಳಿದರೆ ತಪ್ಪಾಗದು. ಅದೇ ಹೊತ್ತಿಗೆ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ (೧೮೫೭)ದ ಶತಮಾನೋತ್ಸವ ಸಂದರ್ಭದಲ್ಲಿ ಸ್ವಾತಂತ್ರ್ಯವೀರರಿಗೆ ಸ್ಫೂರ್ತಿಯ ನೆಲೆಯಾಗಿದ್ದ ವೀರರಾಣಿ ಚೆನ್ನಮ್ಮನ ಕಾರ್ಯ ಸಾಹಸದ ಕಥೆಯನ್ನು ಲಾವಣಿರೂಪದಲ್ಲಿ ಬರೆದು (ಕಿತ್ತೂರ ಕ್ರಾಂತಿ) ಹಾಡಿ, ಪ್ರಕಟಿಸಿದ್ದು ಅವರ ಕಾವ್ಯದ ಇನ್ನೊಂದು ಮುಖವಾದ ಕಥನ ರೀತಿಗೆ ಉತ್ತಮ ನಿದರ್ಶನವಾಗಿದೆ. ಹೀಗೆ ಬೇರೆ ಬೇರೆ ಸಂದರ್ಭಗಳಲ್ಲಿ ರಚಿಸಿದ ಇಂಚಲರ ಅನೇಕ ಪದ್ಯಗಳು ಅಲ್ಲಲ್ಲಿ ವಾಚ್ಯಕ್ಕೆ ಎಡೆಕೊಟ್ಟಿದ್ದರೂ ವಸ್ತುವಿನ ತನ್ಮಯತೆ ಹಾಗೂ ಭಾವಾವೇಶದಿಂದಾಗಿ ಆ ಸಂದರ್ಭಗಳೇ ಇವರನ್ನು ಹುಡುಕಿಕೊಂಡು ಬಂದಷ್ಟು ಸಹಜತೆಯಿಂದ ಕೂಡಿವೆ. ಕಥನದ ಧಾಟಿ ಹಾಗೂ ಭಾಷಾಶೈಲಿಗಳಲ್ಲಿ ಕುವೆಂಪು ಪ್ರಭಾವವನ್ನು ತಕ್ಕಮಟ್ಟಿಗೆ ಗುರುತಿಸಬಹುದಾಗಿದೆ.

ಪ್ರಸ್ತುತ ಸಂಕಲನ 'ಭಾವಶ್ರೀ'ಯ ಪದ್ಯಗಳಲ್ಲಿ ಮೇಲೆ ಕಾಣಿಸಿದ ಎಲ್ಲ ಅಂಶಗಳ ಮುಂದುವರಿಕೆಯಿದೆ. ವಸ್ತುವಿನ ಆಯ್ಕೆಯಲ್ಲಿ ಎಂದಿನಂತೆ ದೇಶಪ್ರೇಮಕ್ಕೆ ಮೊದಲ ಸ್ಥಾನ ಸಂದಾಯವಾಗಿದೆ. ಸ್ವಾತಂತ್ರ್ಯದ ಬೆಳ್ಳಿಯ ಹಬ್ಬದ ನಿಮಿತ್ತವಾಗಿ ಭಾರತ ವೀರರ ವಿಜಯೋತ್ಸಾಹದ ಮೆರವಣಿಗೆಯನ್ನು 'ಸ್ವಾತಂತ್ರ್ಯದ ಮುನ್ನಡೆ' ಲಾವಣಿ ನಡಿಗೆಯಲ್ಲಿ ನಿರೂಪಿಸುತ್ತದೆ. ಭಿನ್ನಭೇದಗಳನ್ನುಳಿದು ಸೇವೆಯಲ್ಲಿ ಧನ್ಯರಾಗಿ ಬಾಳನ್ನು ಬೆಳಗಲು ಮಕ್ಕಳಿಗೆ ನೀಡಿದ ಕರೆ 'ನಮ್ಮ ಬಾವುಟ'. ಚೀನೀ ಆಕ್ರಮಣದ ಸಂದರ್ಭದಲ್ಲಿ ದೇಶದ ರಕ್ಷಣೆಗೆ ಹುರುದುಂಬಿಸುವ ರೀತಿ 'ಬನ್ನಿ ಓ ಬಾಂಧವರೆ', 'ತಾಯ ಹಾರೈಕೆ'ಯಲ್ಲಿ ಭಾರತದ ಭಾಗ್ಯ ರೇಷೆಯನ್ನು ಬರೆದ ಕಾರಣಿಕನ ಬರವನ್ನು ತಾಯಿ ಭಾರತಿ ಕಾಯುತ್ತಿರುವಳೆಂಬ ಭಾವ ವ್ಯಕ್ತವಾಗಿದ್ದರೆ, 'ಏಳು ಭಾರತ ಮಾತೆ'ಯಲ್ಲಿ ಭಾವ ಸಂಗಮವನ್ನು ಸಾಧಿಸಿ ಮಾನವೀಯತೆಯ ಬೆಳಗಿಸಲು ಕವಿ ಕೋರಿಕೆ ಸಲ್ಲಿಸಿದ್ದಾನೆ. ಹುತಾತ್ಮರ ಸ್ಮರಣೆಯ ಸ್ಫೂರ್ತಿಯಿಂದ ಹೆಗ್ಗುರಿಯ ಸಾಧನೆಗೆ ಸನ್ನದ್ಧರಾಗಲು 'ವೀರ ದೀಕ್ಷೆ' ಕರೆ ಕೊಟ್ಟರೆ 'ಅಗಷ್ಟ ಕ್ರಾಂತಿ'ಯ ಸ್ಮರಣೆಯೂ ಅದೇ ಭಾವವನ್ನು ಉಗ್ಘಡಿಸುತ್ತದೆ. ಕನ್ನಡ ನಾಡು ಒಂದಾಗಿ ಉದಯವಾದ ಸಂದರ್ಭದಲ್ಲಿ 'ಎಚ್ಚೆತ್ತ

ಕರ್ನಾಟಕ', 'ಕರ್ತವ್ಯದ ಕರೆ' ಕವನಗಳಲ್ಲಿ ನಾಡು, ನುಡಿ, ಸಂಸ್ಕೃತಿಯ ಹೆಗ್ಗಳಿಕೆಯನ್ನು ಸಾರುವದರೊಂದಿಗೆ ಅಧಿಕಾರ ಲಾಲಸ, ಸ್ವಾರ್ಥಸಾಧನೆಗಳ ರಾಜಕೀಯವನ್ನು ತೊರೆದು ನಾಡನ್ನು ಕಟ್ಟಬೇಕಾದ ಕಳಕಳಿ ವ್ಯಕ್ತವಾಗಿದೆ.

'ಸ್ನೇಹ ಸೌರಭ' ಸಂಗ್ರದಲ್ಲಿರುವಂತೆಯೇ ಇಲ್ಲಿಯೂ ವ್ಯಕ್ತಿಗಳ ಗುಣಗೌರವವನ್ನು ಚಿತ್ರಿಸುವ ಹತ್ತಾರು ಕವನಗಳಿವೆ. ರೆ. ಕಿಟಲ್ ಕುರಿತು ಪದ್ಯವನ್ನು ಬಿಟ್ಟರೆ ಉಳಿದವೆಲ್ಲ ಕಾವ್ಯಾನಂದ, ಬೀಚಿ, ಕುವೆಂಪು, ಜಯದೇವಿತಾಯಿ, ಕರ್ಕಿ ಮೊದಲಾದ ಕವಿಗೆ ಹತ್ತಿರವೂ ಪ್ರಿಯವೂ ಆದ ಸಮಕಾಲೀನ ವ್ಯಕ್ತಿಗಳ ಆತ್ಮೀಯ ಅನುಸಂಧಾನದಿಂದ ಒಡಮೂಡಿ ಬಂದವುಗಳಾಗಿದ್ದು ಕಾವ್ಯಗುಣದಿಂದಲೂ ಮನಸೆಳೆಯುತ್ತವೆ.

ಹಾಗೆ ನೋಡಿದರೆ ಇಂಚಲರ ಕಾವ್ಯಸೃಷ್ಟಿಯಲ್ಲಿ ವೈಯಕ್ತಿಕ ನೋವು-ನಲಿವುಗಳನ್ನು ತೋಡಿಕೊಂಡ ಕವಿತೆಗಳ ಸಂಖ್ಯೆ ತೀರ ಕಡಿಮೆಯೆಂದೇ ಹೇಳಬಹುದು. ಈ ಸಂಗ್ರಹದಲ್ಲಿರುವ 'ಪ್ರಶಾಂತನ ನೆನಹು' ಮೊಮ್ಮಗಳನ್ನು ಕುರಿತು ಆರ್ದ್ರ ಭಾವನೆಗಳ ಸಹಜಾಭಿವ್ಯಕ್ತಿಯಿಂದ ಒಂದು ಒಳ್ಳೆಯ ವಾತ್ಸಲ್ಯ ಗೀತೆಯೆನಿಸಿದೆ. ಒಂದು ನುಡಿಯನ್ನಿಲ್ಲಿ ಉದಾಹರಿಸಬಹುದು :

ನಮ್ಮ ಕರುಳಿನ ನೆನಹಿನಾಳದಲಿ ಹುದುಗಿರುವ
ಹಲವು ಚಿನ್ನಾಟಗಳ ಹವಳ-ಮುತ್ತು;
ಎಣಿಸಲಾರದೆ ಮತ್ತೆ ಗುಣಿಸಲಾರದೆ ನಿತ್ಯ
ಉರುಳುವದೆ ಹಗಲಿರುಳು ನಮ್ಮ ಹೊತ್ತು.

'ಜೀವನಕಲೆ' ಕವಿತೆಯಲ್ಲಿ ಆದರ್ಶ ಜೀವನದ ಹಂಬಲ ಪ್ರಾರ್ಥನೆಯ ರೂಪತಾಳಿದ್ದರೆ ಜೀವ ಜಡವಾಗಿ ಭಾವ ಮಂಕಾಗಿ ಹೋದ ನಾಡಿನ ಜನತೆಯ ಜೀವನದ ವೈಪರೀತ್ಯಗಳ ಚಿತ್ರಣ 'ಎಂಥ ಬಾಳಿದು ಇಂದು'ದಲ್ಲಿ ಪರಿಣಾಮಕಾರಿಯಾಗಿ ಮೂಡಿದೆ. 'ನವ ಸಮಾಜದ ನಾಂದಿ'ಯಲ್ಲಿ ಕಂಡುಬರುವ ವಾಸ್ತವ ಜೀವನದ ಅರಿವು 'ಯುಗಾದಿ ಪುರುಷ' ಕವಿತೆಯಲ್ಲಿ ಇನ್ನಿಷ್ಟು ವ್ಯಾಪಕವಾಗಿ, ಇಂದಿನ ಸಾಮಾಜಿಕ ಜೀವನದಲ್ಲಿರುವ ವಿಷಮತೆ, ವೈರುಧ್ಯ ಹಾಗೂ ಆಧುನಿಕತೆಯ ವೈಚಿತ್ರ್ಯಗಳನ್ನು ವಿಡಂಬನೆಗೆ ಗುರಿಮಾಡಿದೆಯಲ್ಲದೆ ಸಾಂಪ್ರದಾಯಿಕ ಛಂದೋಬದ್ಧತೆಯಿಂದ ಕೆಲಮಟ್ಟಿಗೆ ಬಿಡುಗಡೆ ಪಡೆಯಲೂ ಇಲ್ಲಿ ಪ್ರಯತ್ನಿಸಲಾಗಿದೆ.

ಹಿಂದಿನ ಕವನ ಸಂಗ್ರಹಗಳ ಧಾಟಿ ಧೋರಣೆಗಳೇ 'ಭಾವಶ್ರೀ'ಯಲ್ಲಿಯೂ ಪ್ರಧಾನವಾಗಿ ಮುಂದುವರೆದಿವೆ. ಭಾವಾವೇಶವನ್ನೇ ಹೆಚ್ಚಾಗಿ ಅವಲಂಬಿಸಿರುವ ಪದ್ಯಗಳಲ್ಲಿ ವೈಚಾರಿಕತೆಯ ಕೊರತೆ ಕಾಣಿಸಬಹುದು. ಕೆಲವು ಸಂದರ್ಭಗಳಲ್ಲಿ ಸಮಸ್ಯೆಯ ಉಳಿದ ಮುಖಗಳನ್ನು ವಿವೇಚಿಸುವ ಗೊಡವೆಗೆ ಹೋಗದೆ ಕವಿಯ ಭಾವ ಲಹರಿ ಏಕಮುಖವಾಗಿ ಹರಿಯುವುದರಿಂದ ಕೇವಲ ಹಾರೈಕೆಯಲ್ಲಿ ಅದು ಕೊನೆಗೊಂಡಿರುವುದನ್ನು ಕಾಣುತ್ತೇವೆ. ವೀರೋತ್ಸಾಹಕ್ಕೆ ತಕ್ಕ ಭಾಷೆ ಕೈವಶವಾಗಿದ್ದರೂ ನೇರವಾದ ವಿವರ, ವರ್ಣನೆ, ನಿರೂಪಣೆಗಳಲ್ಲಿಯೇ ತೊಡಗುವುದರಿಂದ ಸೂಚ್ಯತೆಯು ವಿರಳವಾಗಿ ಕಾಣಿಸಿಕೊಳ್ಳುತ್ತದೆ. ಅದೇನೇ ಇದ್ದರೂ ರಾಷ್ಟ್ರದ ಪುನರುದ್ಧಾರದಲ್ಲಿ

ಇಂಚಲರ ಕಾವ್ಯಕ್ಕಿರುವ ಅಪರಿಮಿತ ಆಸಕ್ತಿ ಗಮನಾರ್ಹವಾದದ್ದು, ರಾಷ್ಟ್ರೀಯ ಭಾವೈಕ್ಯವನ್ನು ಕುರಿತು ಇವರು ಬರೆದಿರುವಷ್ಟು ಪದ್ಯಗಳನ್ನು ಕನ್ನಡದಲ್ಲಿ ಬಹುಶಃ ಇನ್ನಾರೂ ಬರೆದಿರಲಾರರು. ಜೀವನದಲ್ಲಿ ಪ್ರೀತಿ, ಸ್ನೇಹ, ಪ್ರಾಮಾಣಿಕತೆ, ಔದಾರ್ಯ, ದೇಶಭಕ್ತಿಗಳಿಗೆ ಒತ್ತುಕೊಟ್ಟಿರುವ ಇಂಚಲರ ಕಾವ್ಯ ಸಾಂದರ್ಭಿಕ ರಚನೆಯ ಅಡೆತಡೆಗಳನ್ನು ಮೀರಿ ಓದುಗರ ಹೃದಯವನ್ನು ತಟ್ಟಬಲ್ಲದು.

(೧೯೯೩)

## ೬೦

# ಅನ್ನ-ಜೇನು

ಶ್ರೀ ಗುರುರಾಜ ಬೆಣಕಲ್ ಅವರ ಮಕ್ಕಳ ಕವಿತೆಗಳನ್ನು ಈ ಮೊದಲೇ ಅಲ್ಲಲ್ಲಿ ಪತ್ರಿಕೆಗಳಲ್ಲಿ ಓದಿ ಮೆಚ್ಚಿಕೊಂಡಿದ್ದೆ. ಈ ಬಗೆಯ ಪದ್ಯ ರಚನೆಯಲ್ಲಿ ಹೆಚ್ಚಿನ ಲವಲವಿಕೆಯನ್ನು ಹಾಗೂ ಹೊಸತನವನ್ನು ವ್ಯಕ್ತಪಡಿಸುತ್ತಿರುವ ನಾಲ್ಕಾರು ಕವಿಗಳಲ್ಲಿ ಇವರೂ ಒಬ್ಬರೆಂದು ಗುರುತಿಸಿದ್ದೆ. ಮೊನ್ನೆ ಅವರು ತಮ್ಮ ಈ ಹೊಸ ಸಂಕಲನಕ್ಕೆ ಮುನ್ನುಡಿಯನ್ನು ಬರೆಯಬೇಕೆಂದು ಕೇಳಿಕೊಂಡಾಗ ಸಂತೋಷದಿಂದ ಒಪ್ಪಿಕೊಂಡೆ.

'ಅನ್ನ-ಜೇನು' ಈ ಕವಿಯ ಶಿಶುಗೀತೆಗಳ ಮೂರನೆಯ ಸಂಕಲನ. ೧೯೮೦ರಲ್ಲಿ ಪ್ರಕಟವಾದ ಅವರ ಪ್ರಥಮ ಕೃತಿ 'ಪುಟ್ಟನ ಕನಸು'ದಲ್ಲಿಯ 'ಬಗಟ್ಟ ಬಗರಿ', 'ಪುಟ್ಟನ ಜೇಬು', 'ಸೊಂಡಿಲಿ ಮತ್ತು ಮೈಸೂರು ಪಾಕು', 'ಪುಟ್ಟನ ಕನಸು'ವಿನಂಥ ಪದ್ಯಗಳಲ್ಲಿ ಭಾಷೆ ಮತ್ತು ಲಯಗಳಲ್ಲಿ ಹೊಸತನವನ್ನು ಸೂಚಿಸಿದ್ದರು. ಇದೇ ವರ್ಷ ಪ್ರಕಟವಾಗಿರುವ ಅವರ ಎರಡನೆಯ ಸಂಗ್ರಹ 'ಗಡಿಬಿಡಿ ಪುಟ್ಟ' ವಸ್ತು ವೈವಿಧ್ಯದಿಂದ, ಕಲ್ಪನಾಶಕ್ತಿಯಿಂದ ಪುಟ್ಟನ ಮಾನಸಿಕ ಬೆಳವಣಿಗೆಯನ್ನು ಮುಗ್ಧತೆಯೊಂದಿಗೇ ವಿಚಾರವಂತಿಕೆಯನ್ನು ಪ್ರತಿಬಿಂಬಿಸುವಂತಿದೆ.

ಮೊದಲ ಸಂಗ್ರಹದಲ್ಲಿಯ ಮೊದಲ ಪದ್ಯ 'ತೂಗು ತಾಯಿ' ಹಳೆಯ ಕಾವ್ಯರೂಪದೊಂದಿಗೆ ಮಕ್ಕಳ ಕಲ್ಪನೆಗೆ ಮೀರಿದ್ದನ್ನು ಹೇಳ ಹೊರಟಿದ್ದರೆ ಎರಡನೆಯ ಸಂಗ್ರಹದಲ್ಲಿಯ 'ಮಳೆ', 'ಪುಟ್ಟನ ಬಯಕೆ', 'ಬೆಳಗು', 'ಎಣ್ಣೆ-ಹತ್ತಿ', 'ಪುಟ್ಟನ ಸರ್ಕಸ್', 'ಪುಟ್ಟನ ಆಸೆ' ಮೊದಲಾದ ಕವಿತೆಗಳು ಮಗುವಿನ ಮನೋಧರ್ಮದ ಸರಿಯಾದ ತಿಳುವಳಿಕೆಯಿಂದ ಹೊರಹೊಮ್ಮಿ ಪುಟ್ಟನನ್ನು ಸಮಕಾಲೀನ ಜೀವನದೊಂದಿಗೆ ಸಹಜವಾಗಿ ಬೆರೆಯುವಂತೆ ಮಾಡುತ್ತವೆ. ಈ ಕೆಳಗಿನ ಸಾಲುಗಳನ್ನು ನೋಡಬಹುದು.

ಹಾಲು, ವರ್ತಮಾನ
ಪತ್ರದವನ ಧ್ಯಾನ,
ಬಂತು ನಲ್ಲಿ ನೀರು
ಕೊಡಕೆ ತುಂಬೊ ಸೂರು,
ಗುಡಿಯಲಿಂದ ನೋಡು,
ಸುಬ್ಬಲಕ್ಷ್ಮೀ ಹಾಡು (ಬೆಳಗು)

ಈ ವಯಸ್ಸಿನ ಮಕ್ಕಳ ತಮಾಷೆಯೂ ಎಷ್ಟುಮುದ್ದಾಗಿರುತ್ತದೆ, ಜಾಣತನವನ್ನೂ, ಜಿಜ್ಞಾಸೆಯನ್ನೂ ಹೇಗೆ ಒಟ್ಟಿಗೆ ವ್ಯಕ್ತಪಡಿಸುತ್ತದೆ ಎಂಬುದನ್ನು 'ಜಾಣ ಪುಟ್ಟ' ಕವಿತೆ ಸುಂದರವಾಗಿ ಅಭಿವ್ಯಕ್ತಿಗೊಳಿಸುತ್ತದೆ. ಅದರ ಮೊದಲ ನುಡಿ ಹೀಗಿದೆ :

ಬಸ್‌ಗೆ ಕನ್ನಡದಲ್ಲೇನೇಳ್ತಾರೆ
ಅಂತಾ ಕೇಳ್ದ ಪುಟ್ಟು
ಉತ್ತಾರಾ ತಿಳಿದೆ ನೆಟ್ಟಗಾಗೋಯ್ತು
ಕನ್ನಡ ಮೇಷ್ಟ್ರ ಜುಟ್ಟು,

ಮನುಷ್ಯರಲ್ಲಿಯ ಅಸಮಾನತೆಯನ್ನು ಕಂಡು ಮಗು ತೋರಿಸುವ ಸಹಜ ಪ್ರತಿಕ್ರಿಯೆ ಅದನ್ನು ಹೋಗಲಾಡಿಸಲು ಸದ್ದಿಲ್ಲದೇ ಪ್ರೇರೇಪಿಸುತ್ತದೆ.

ಅಮ್ಮಾ ಅಮ್ಮಾ ಬೋರನ ಮಗ ಆ
ಭೀಮನ ಕರೆಯಮ್ಮಾ,
ನಮ್ಮ ಮನೆಯಲೆ ನನ್ನೊಟ್ಟಿಗೆ ಅವ-
ಗನ್ನವ ನೀಡಮ್ಮಾ.

* * * *

ಶಾಲೆಗೆ ಹೋಗದೆ ಮಳೆ ಬಿಸಿಲೆನ್ನದೆ
ದುಡಿಯುವನಲ್ಲಮ್ಮಾ
ನನ್ನದು ಹೀಗೆ ಅವನದು ಹಾಗೆ
ಈ ತೆರನೇಕಮ್ಮಾ ? (ಪುಟ್ಟನ ಆಸೆ)

ಅಜ್ಜೀ ಅಜ್ಜೀ ಕಥೆ ಹೇಳು
ಕಥೆಗಿರಬೇಕು ಹೊಸ ತಿರುಳು

ಇದು 'ಅನ್ನ-ಜೇನು' ಸಂಗ್ರಹದ ವೈಶಿಷ್ಟ್ಯ, ಚಿಕ್ಕ ಚಿಕ್ಕ ಘಟನೆಗಳನ್ನಾಧರಿಸಿ ಅದಕ್ಕೆ ತಕ್ಕ ಸನ್ನಿವೇಶ ಸೃಷ್ಟಿಸಿ ಅದರಿಂದ ಒಂದು ಹೊಸ ಭಾವವನ್ನೋ ವಿಚಾರವನ್ನೊ, ನೀತಿಯನ್ನೊ ಸೂಚಿಸಿ ಮಕ್ಕಳ ಮನಸ್ಸನ್ನು ಮುದಗೊಳಿಸುವದು ಇಲ್ಲಿನ ಕಥನ ರೂಪದ ಕವನಗಳ ಉದ್ದೇಶ. ಹಸನಾದ ಮಾತಿನಿಂದ, ಛಂದಸ್ಸಿನ ವೈವಿಧ್ಯದಿಂದ, ರೀತಿಯ ಹೊಸತನದಿಂದ, ಹಾಸ್ಯದಿಂದ, ನಾಟಕೀಯ ಗುಣದಿಂದ ಕವಿ ಅದನ್ನು ಈಡೇರಿಸುವ ಪ್ರಯತ್ನದಲ್ಲಿ ಸಾಕಷ್ಟು ಯಶಸ್ವಿಯಾಗಿದ್ದಾರೆ.

'ಅನ್ನ ಜೇನು', 'ಶಿವನಿಗೆ ಎಡೆ', 'ಹೂತಹೊನ್ನು' ಮೊದಲಾದ ಕವಿತೆಗಳು ನೀರಸವಾದ ನೀತಿ ಬೋಧೆಯಾಗದೆ ದೃಷ್ಟಾಂತ ರೂಪದಲ್ಲಿ ಅದು ಪ್ರತ್ಯಕ್ಷಗೊಳ್ಳುವಂತೆ ಮಾಡುತ್ತವೆ. ಈ ಸಾಲುಗಳನ್ನು ಗಮನಿಸಿ :

ದುಡಿದ ಹಸಿವಿನಿಂದಲಿ
ಅನ್ನ ಬಾಯಿಗಿಡುತಿರೆ
ಜೇನಿನಂಥ ರುಚಿಯನು
ಅನ್ನದೊಳಗೆ ಕಂಡಿರೆ (ಅನ್ನ-ಜೇನು)

* * * *

ತಂದೆಯಿತ್ತ ಮಗನ ಕೈಗೆ
ಹಲವು ಹಣ್ಣನು,
ಶಿವನ ಗುಡಿಗೆ ಕೊಡಲು ತಿಳಿಸೆ
ಹೊರಟ ಚಿಣ್ಣನು,
ದಾರಿಯಲ್ಲಿ ಹಸಿದ ಹುಡುಗ-
ನನ್ನು ಕಂಡನು,
ಮನಸು ಕರಗಿ ಹಣ್ಣನಿತ್ತು
ತಿರುಗಿ ಬಂದನು. (ಶಿವನಿಗೆ ಎಡೆ)

'ಪುಕ್ಕಲು', 'ಗುಬ್ಬೀಪಾರ', 'ಪೆದ್ದ ಸಿದ್ದ' ಕವನಗಳು ಹಾಸ್ಯದ ಚಟಾಕಿಯಂತಿದ್ದರೆ 'ಮಂಗನ ಮದುವೆ'ಯಲ್ಲಿ ವಧು ಪರೀಕ್ಷೆ ವರ ಪರೀಕ್ಷೆಯಾಗಿ ಪರಿಣಮಿಸುವ ಸೂಕ್ಷ್ಮ ವ್ಯಂಗ್ಯ ಪರಿಣಾಮಕಾರಿಯಾಗಿದೆ. 'ಪಕ್ಷಿ ಪರಿಸರ' ಪಟ್ಟಣದಲ್ಲಿಯ ಪರಿಸರ ಮಾಲಿನ್ಯದ ಅರಿವನ್ನು ಮೂಡಿಸಲು ಪ್ರವಾಸದ ತಂತ್ರವನ್ನು ಯಶಸ್ವಿಯಾಗಿ ಬಳಸಿಕೊಳ್ಳಲಾಗಿದೆ. 'ಕ್ರೀಡಾ ಮಂತ್ರಿ ಮಂಗಣ್ಣ'ದಲ್ಲಿ ಜೋಕೊಂದು ಸೊಗಸಾದ ರಾಜಕೀಯ ವಿಡಂಬನೆಯಾಗಿ ಮೂಡಿದೆ. 'ಕಪಟ ನಾಟಕ' ಇದೇ ಸಾಲಿನಲ್ಲಿ ನಿಲ್ಲುವ ಇನ್ನೊಂದು ಕವಿತೆ ಕರುಣ ರಸದಿಂದ ಮಕ್ಕಳ ಮನಸ್ಸನ್ನು ಕರಗಿಸಬಲ್ಲ 'ಗುಬ್ಬೀ ಮರಿ' ದಯವೇ ಧರ್ಮದ ಮೂಲವೆಂಬುದನ್ನು ಸದ್ದುಗದ್ದಲವಿಲ್ಲದೆ ಸೂಚಿಸುತ್ತದೆ. ಈ ಕವಿತೆಗಳು ಇಡಿಯಾಗಿಯೆ ಮಕ್ಕಳಿಗೆ ಖುಷಿ ಕೊಡಬಲ್ಲವು. ಹಾಗೆಯೇ ತಿಳಿವನ್ನು ನೀಡಬಲ್ಲವು. ಎಳೆಯರ ಮನಸ್ಸನ್ನು ಆಕರ್ಷಿಸಬಲ್ಲವು.

ಪಕ್ಷಿ ಪ್ರಾಣಿ ರೂಪಕಗಳನ್ನು ಈ ಕವಿ ಸಮರ್ಥವಾಗಿ ಬಳಸಿಕೊಂಡಿರುವಂತೆಯೇ ಹಾಸ್ಯ ಹಾಗೂ ಕರುಣರಸದ ಮೂಲಕ ಮಕ್ಕಳ ಮನಸ್ಸನ್ನು ಬಹುಬೇಗ ಗೆಲ್ಲಬಲ್ಲವರಾಗಿದ್ದಾರೆ.

ಶ್ರೀ ಗುರುರಾಜ ಬೆಣಕಲ್ ತಮ್ಮ ಮೂರು ಸಂಕಲನಗಳಲ್ಲಿ ಬೆಳವಣಿಗೆಯ ಮೆಟ್ಟಲೇರುತ್ತ, ಪ್ರಗತಿಪರ ಮನೋಧರ್ಮದಿಂದ ಮಕ್ಕಳ ಕಾವ್ಯಕ್ಕೆ ಹೊಸ ಕ್ಷಿತಿಜವೊಂದನ್ನು ಕಾಣಿಸುವ ಭರವಸೆ ಮೂಡಿಸಿದ್ದಾರೆ. ಈ ದಿಶೆಯಲ್ಲಿ ಇನ್ನೂ ಹೆಚ್ಚಿನ ಯಶಸ್ಸು ಅವರದಾಗಲಿ ಎಂದು ಹಾರೈಸುತ್ತ ಪ್ರಾಥಮಿಕ ಹಂತದಲ್ಲಿಯೆ ಕನ್ನಡದ ಬಗ್ಗೆ ಪ್ರೀತಿಯನ್ನು ಹುಟ್ಟಿಸಲು ಇಂಥ ಪುಸ್ತಕಗಳು ಮಕ್ಕಳ ಕೈಯ್ಯಲ್ಲಿರಬೇಕಾದ ಅವಶ್ಯಕತೆಯನ್ನು ನಮ್ಮ ಶಿಕ್ಷಣ ಇಲಾಖೆ ಬೇಗೆ ಅರಿತುಕೊಳ್ಳುವದೆಂದು ಆಶಿಸುತ್ತೇನೆ.

(೧೯೯೩)

# ೬೧

# ಪ್ರೇಮದ ಕನಸುಗಳು

ಕತೆಗಾರರಾಗಿ ಈಗಾಗಲೇ ಹೆಸರು ಮಾಡಿರುವ ಶ್ರೀ ರೋಹಿದಾಸ ನಾಯಕ ಅವರು, 'ಪ್ರೇಮದ ಕನಸುಗಳು' ಮೂಲಕ ಇದೀಗ ಕಾವ್ಯ ಕ್ಷೇತ್ರವನ್ನು ಪ್ರವೇಶಿಸುತ್ತಿದ್ದಾರೆ. ಪ್ರಸ್ತುತ ಸಂಗ್ರಹ ಓದುಗರಿಗೆ ಸುಲಭವಾಗಿಯೇ ಮುಟ್ಟುವಂತಿದ್ದರೂ ಅವರ ಅಪೇಕ್ಷೆಯಂತೆ ಮುನ್ನುಡಿ ರೂಪದಲ್ಲಿ ಈ ಎರಡು ಮಾತು ಸಂತೋಷದಿಂದ ಬರೆಯುತ್ತಿದ್ದೇನೆ. ಅಬಕಾರಿ ಇಲಾಖೆಯಲ್ಲಿ ಅಧಿಕಾರಿಯಾಗಿರುವ ರೋಹಿದಾಸರಿಗೆ ಸಾಹಿತ್ಯ ಪ್ರಿಯವಾದ ಹವ್ಯಾಸವಾಗಿರುವುದು ಮೆಚ್ಚತಕ್ಕ ಸಂಗತಿ.

ಯೌವನಕ್ಕೆ ಸಹಜವಾದ ಪ್ರೇಮಾಭಿಲಾಷೆ, ಪ್ರೀತಿಗೆ ಪಾತ್ರರಾದವರ ಬಗೆಗಿನ ಸವಿಗನಸುಗಳು, ಆಸೆ-ಆಕಾಂಕ್ಷೆಗಳು, ಜೊತೆಗೂಡಿದ ನೆನಪುಗಳು, ಒಲವಿನ ವರ್ಣನೆಗಳು ಹೀಗೆ ಹಲವು ಬಗೆಯ ಕೋಮಲ ಭಾವನೆಗಳು ಇಲ್ಲಿಯ ಪದ್ಯಗಳಲ್ಲಿ ಚೆಲ್ಲುವರಿದಿವೆ.

ನಿನ್ನ ಪ್ರೇಮವನು
ಬೇಸಿಗೆಯ ಮಳೆಬಿಸಿಲಿಗೆ ಹೋಲಿಸಲೇ
ಅಥವಾ
ಮೊದಲ ಮಳೆಯ ಗಂಧಕ್ಕೆ ಸೇರಿಸಲೇ

ಎಂದು ಪ್ರೇಮದ ಮಧುರವಾದ ಅನುಭವವನ್ನು ನಿಸರ್ಗದ ಚೇತೋಹಾರಿಯಾದ ವಾತಾವರಣದೊಡನೆ ಚಿತ್ರಿಸಿದಂತೆಯೇ

ಪ್ರೇಮ ಉಕ್ಕುವುದುಂಟು
ಬಿಕ್ಕುವುದುಂಟು
ಬಂಡೆಗಪ್ಪಳಿಸಿ
ಹನಿಯೊಡೆಯುವುದುಂಟು

ಎಂದು ಅದರ ಕಟು ಅನುಭವವನ್ನು ತೆರೆದಿಡಲು ಇಲ್ಲಿ ಮರೆತಿಲ್ಲ. 'ಕನಸಲೋಕದ ರಾಣಿ'ಯೊಡನೆ ಭಾವದೋಣಿಯಲ್ಲಿ ತೇಲುವ ಹದಿಹರಯದ ಹೃದಯದ ಮಿಡಿತದೊಂದಿಗೆ ಒಂದು ಎಚ್ಚರವನ್ನು ಈ ಕಾವ್ಯದ ನಾಯಕ ಕಾಪಾಡಿಕೊಂಡಿರುವುದು ಗಮನಾರ್ಹ.

ಬಗೆಬಾನಿನೆತ್ತರಕೆ
ಭುವಿ ಬಿಟ್ಟು ನೆಗೆವುದಕೆ
ಆತುರವು ಸಲ್ಲ.

ಎಷ್ಟೋ ಸಂದರ್ಭಗಳಲ್ಲಿ ನೆನಪಿನ ಬುತ್ತಿಯನ್ನು ಸವಿಯುವುದರಲ್ಲಿಯೇ ಪ್ರೇಮಿಗಳು ಹೆಚ್ಚು ಸುಖ ಪಡುವುದುಂಟು. ಇಲ್ಲಿಯ ಪಲವಾರು ಪದ್ಯಗಳಿಗೆ ಅಂಥ ನೆನಪೇ ಸ್ಥಾಯಿಯಾಗಿದೆ. 'ಹೃದಯ ಗಹ್ವರದಲ್ಲಿ ನೆನಪೊಂದು ಮಿಣುಕುತಿದೆ' ಎಂಬ ರೂಪಕದಲ್ಲಿ ಕವಿ ಅದಕ್ಕೆ ಸುಂದರವಾದ ಅಭಿವ್ಯಕ್ತಿ ನೀಡಿದ್ದಾರೆ.

ಕಳೆದ ಆ ಕ್ಷಣಗಳು ಬರಲಾರವು
ನೆನಪುಗಳು ಆ ಭಾರ ಹೊರಲಾರವು

ಎಂದೂ ಒಮ್ಮೊಮ್ಮೆ ಅನಿಸಿದರೆ ಆಶ್ಚರ್ಯವಿಲ್ಲ. ಆದರೂ ಕನಸಿನಲ್ಲಿ ಕಂಡ, ಮನಸ್ಸಿನಲ್ಲಿ ಬೆಳೆದ ಈ ರೂಪವೇ ಈಗ 'ನೆನಪಾಗಿ ನಿಂತಿದೆ' ಒಳ್ಳೇ ದಿನ ಬರಬಹುದು. ಆದರೆ ಪ್ರೀತಿಸಿದ ದಿನಗಳು ಮರುಕಳಿಸಲಾರವೆಂಬುದೇ 'ಕೊರಗು', 'ಕಳೆದುಕೊಂಡ ಕಾಲ', ಕವಿತೆಯಲ್ಲಿ ಈ ಭಾವ ಹೃದಯಸ್ಪರ್ಶಿಯಾಗಿ ಮೂಡಿದೆ. 'ಮರೆಯಾದ ಕನಸು', 'ಚಿತ್ತಾರ' ಮೊದಲಾದ ಕವನಗಳಲ್ಲಿಯೂ ಇದೇ ಭಾವ ಮರುಕಳಿಸಿದೆ. ನಿಸರ್ಗದ ಹಿನ್ನೆಲೆ ಅಂಥ ಭಾವನೆಗೆ ಹೊಸಬಣ್ಣ ನೀಡಿರುವುದುಂಟು. 'ಮಳೆಬಿದ್ದು ಹಸಿರಾದ ಹುಲ್ಲು ಬಯಲಿನಲ್ಲಿ ಪುಟಿದೆದ್ದ ಬಿಳಿಯ ಹೂವು' ಮಲ್ಲಿಗೆ, ಜಾಜಿ, ಸಂಪಿಗೆಗಳ ಪರಿಮಳವನ್ನು ಹೊಂದಿರದಿದ್ದರೂ ಮುಗ್ಧ ಮಗುವಿನ ಹಾಗೆ ಭಾವನೆಗಳನ್ನು ಹೀಗೆ ಪ್ರೇರೇಪಿಸಬಲ್ಲದು.

ಮೂರು ಸಂಜೆಯ ಹೊತ್ತು
ರಾಗರತಿಯನೆ ಹೊತ್ತು
ಪ್ರೇಮಿಗಳ ತಲೆ ಸುತ್ತು
ನಗುವ ನೀನು
ನೆನಪೊಂದು ಮರುಕಳಿಸಿ
ಹೃದಯವದು ತಳಮಳಿಸಿ
ಕಳೆದ ಕನಸಿನ ಕಥೆಯ ಬರೆವೆಯೇನು?

'ಪ್ರೇಮವೊಂದು ಸ್ಫೂರ್ತಿ ಪ್ರೇಮವೊಂದು ಶಕ್ತಿ' ಎಂಬುದನ್ನು ವಿಧವಿಧವಾಗಿ ನಿರೂಪಿಸುವುದೇ ಈ ಕವನಗಳ ಬಹುಮಟ್ಟಿನ ಆಶಯ.

ಓ ಪ್ರೇಮಗಂಗೆಯೇ
ಹೃದಯಾಂತರಾಳದಲಿ
ಉಗಮಿಸಿದ ಮೂರ್ತಿ ನೀನು

ನಿನಗೆ ಜೀವವ ತುಂಬಿ
ಹೃದಯ ದೇಗುಲದಲ್ಲಿ
ಪೂಜಿಸುವ ಪೂಜಾರಿ ನಾನು

ಈ 'ಪೂಜಾರಿ' ಪ್ರೇಮಮೂರ್ತಿಗೆ ಅಲಂಕರಿಸಿದ ಹೂಗಳಂತೆ ಇಲ್ಲಿಯ ಕವನಗಳು ಕಳೆಗೊಂಡಿವೆ. ಬೇರೆ ಕವಿಗಳ ಛಾಯೆ ಇಲ್ಲಿ ಬೀಳದಿರುವುದು ಇವುಗಳ ಇನ್ನೊಂದು ಗುಣವಾಗಿದೆ.

ಇದೊಂದು ಪರಿಚಯವೇ ಹೊರತು ವಿಮರ್ಶೆಯಲ್ಲ. ಹಾಗೆ ನೋಡಿದರೆ ಇಲ್ಲಿಯ ಭಾಷೆ ಇನ್ನೂ ಸಾಕಷ್ಟು ಹದಗೊಳ್ಳಬೇಕಿದೆ. ಲಯವನ್ನು ಲಕ್ಷ್ಯಪೂರ್ವಕ ಸಾಧಿಸಬೇಕಿದೆ. ಬಂಧದಲ್ಲಿಯ ಶೈಥಿಲ್ಯವನ್ನು ಹೋಗಲಾಡಿಸಿ ಕವನ ಕಡೆದ ಬುಗುರಿಯಂತೆ ರೂಪುಗೊಳ್ಳುವ ಆವಶ್ಯಕತೆಯಿದೆ. ಉತ್ಸಾಹ, ವಿಷಯ ಈ ಎರಡನ್ನೂ ಪಡೆದಿರುವ ಈ ಕವಿ ಅದನ್ನು ಸಾಧಿಸುವಂತಾಗಲಿ ಎಂದು ಹಾರೈಸಿ ಶುಭ ಕೋರುತ್ತೇನೆ.

(೧೯೯೪)

೬೨

# ನನ್ನ ಮಾದರಿ

ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯಲ್ಲಿ ಅಧಿಕಾರಿಯಾಗಿರುವ ಶ್ರೀ ಎಲ್ಲಪ್ಪ ಕೆಕೆಪುರ ಅವರನ್ನು ಕಳೆದ ನಾಲ್ಕೈದು ವರ್ಷಗಳಿಂದ ಬಲ್ಲೆ. ಕಾರ್ಯದಕ್ಷತೆ ಹಾಗೂ ವಿಶ್ವಾಸಪೂರ್ಣ ನಡವಳಿಕೆಯಿಂದ ಅವರು ಜನರ ಮೆಚ್ಚುಗೆ ಪಡೆದಿರುವರಲ್ಲದೆ ಕವಿಯಾಗಿ, ಲೇಖಕರಾಗಿ ಸಾಹಿತ್ಯ ಕೃಷಿಯಲ್ಲಿ ತಮ್ಮನ್ನು ಶ್ರದ್ಧೆಯಿಂದ ತೊಡಗಿಸಿಕೊಂಡವರಾಗಿದ್ದಾರೆ. ಪ್ರಸ್ತುತ ಕವನ ಸಂಕಲನ 'ನನ್ನ ಮಾದರಿ'ಗೆ ಅವರ ಅಪೇಕ್ಷೆಯಂತೆ ಸಂತೋಷದಿಂದ ಎರಡು ಮಾತು ಬರೆಯುತ್ತಿದ್ದೇನೆ.

ಈ ಸಂಕಲನಕ್ಕೆ ಹಿನ್ನಲೆಯಾಗಿ ಅವರ ಈ ಮೊದಲಿನ ಎರಡು ಸಂಗ್ರಹಗಳನ್ನು ('ಕೆಂಪು ಬಸ್ಸಿನ ಕಪ್ಪು ಕವಿತೆಗಳು', 'ನಾ ನಗುತ್ತೇನೆ') ಅವಲೋಕಿಸಿದಾಗ ಕಾವ್ಯವಸ್ತುವಿನಲ್ಲಾಗಲಿ, ರೀತಿಯಲ್ಲಾಗಲಿ ಹೆಚ್ಚಿನ ಬದಲಾವಣೆಯೇನೂ ಕಂಡುಬರುವುದಿಲ್ಲ. ದಲಿತರ, ಶೋಷಿತರ, ಶ್ರಮಜೀವಿಗಳ ಬಾಳಿನ ಬವಣೆಯನ್ನು ಸ್ವಂತದ್ದಾಗಿ, ತೀರ ಹತ್ತಿರದಿಂದ ನೇರವಾಗಿ ಅವರು ಚಿತ್ರಿಸುತ್ತ ಬಂದಿದ್ದಾರೆ. ಅಲ್ಲಲ್ಲಿ ಒಂದೆರಡು ಪ್ರೇಮಗೀತೆಗಳಿದ್ದರೂ ಅವರ ಕಾವ್ಯಧೋರಣೆ ಒಟ್ಟಾರೆ ಸಾಮಾಜಿಕವಾಗಿ ದಲಿತ ಜನಾಂಗದ ಪರವಾಗಿದ್ದು ವಾಸ್ತವತೆಗೆ ಕನ್ನಡಿ ಹಿಡಿಯುವಂತಿದೆ.

ನಾನೊಬ್ಬ ದಲಿತ ಕವಿ
ನನ್ನ ಕಣ್ಣೀರಿನ ಕಥೆ-ವ್ಯಥೆ ಮಡುಗಟ್ಟಿ
ಆವೇಶ, ಉದ್ವೇಗ, ರಾಮಾರಂಪ ಕೀಲು ಕೀಲಿನಲ್ಲಿ

(ನನ್ನೊಳಗಿನ ಕವಿತೆಗಳು)

ಎಂದು ಹಿಂದೆ ಹೇಳಿಕೊಂಡಿದ್ದ ಕವಿ ಈ ಸಂಗ್ರಹದಲ್ಲಿ ಕೆಲ ಮಟ್ಟಿಗೆ ಆ ಆವೇಶ ಉದ್ವೇಗಗಳಿಗೆ ಕಡಿವಾಣ ಹಾಕಲು ಪ್ರಯತ್ನಿಸುತ್ತ ನೈಜಾನುಭವಕ್ಕೆ ಒಳದನಿಯಾಗುತ್ತ ಆರ್ದ್ರವಾಗಿ ನುಡಿಯುತ್ತಿರುವುದು ಒಂದು ಅಪೇಕ್ಷಣೀಯ ಬೆಳವಣಿಗೆಯಾಗಿದೆ. ಇಲ್ಲಿಯ 'ಈ ನನ್ನ ಕವನ'-

ಧನಿಕರ ಕೋಪಕ್ಕೆ
ಶ್ರಮಿಕರ ತಾಪಕ್ಕೆ
ರಕ್ತದ ಹನಿ ಹನಿ ತೊಟ್ಟಿಕ್ಕಿ

ನಿಬ್ಬೆರಗು ಸೂಸಿ
ನೊಂದವರ ಕಣ್ಣಾಲಿಯಾಗುತ್ತದೆ
..........................................
................................................
ಕನವರಿಸುತ್ತದೆ
ಎಂದೂ ಕಾಣದ ಪ್ರೀತಿಗೆ

ಆದರೂ ತನ್ನ ಮೂಲಗುಣವನ್ನು ಬಿಟ್ಟುಕೊಡದೆ,

ನೆತ್ತಿ ಸೂರ್ಯನಾಗಿ
ಕತ್ತಿ ಅಲಗಿನಂತೆ ಹೊಳೆಯುತ್ತದೆ.

ತನ್ನ ಜನರ ಬಗ್ಗೆ ಅಪಾರ ಕಳಕಳಿಯನ್ನು ಹೊಂದಿದ ಕವಿ ಗೋಳಿನ ಸಾಗರದೊಳಗೆ ಹೂವಾಗಿ ಅರಳಿ, ಹದವಾದ ನೆಲದೊಳಗೆ ತಲೆಯೆತ್ತಿ ನಿಂತು, 'ನಾವು ಮನುಷ್ಯರು' ಎಂದು ಒಮ್ಮೆ ಕೂಗಿ ಬಿಡಿ ಎಂದು ಅವರಲ್ಲಿ ಧೈರ್ಯವನ್ನೂ ಜೀವನೋತ್ಸಾಹವನ್ನೂ ತುಂಬಲು ಪ್ರಯತ್ನಿಸುತ್ತಾನೆ. ಎಲ್ಲೋ ಒಬ್ಬಿಬ್ಬರು ಮುಂದೆ ಬಂದರೆ ಸಾಲದು, ಇಡೀ ದಲಿತ ಜನಾಂಗ ಮೈಕೊಡವಿ ಮೇಲೆದ್ದು ಆತ್ಮವಿಮರ್ಶೆ ಮಾಡಿಕೊಳ್ಳಬೇಕೆಂಬುದು ಕವಿಯ ಬಯಕೆ; ಅದು ಹುಸಿಗೊಂಡಾಗ ವಿಷಾದ ಪಡುತ್ತಾನೆ :

ಇನ್ನೂ ಮೇಲೇಳಲಾರದ ದಲಿತರು ಬರಿ ಒಣ ಬೊಬ್ಬೆಯಿಟ್ಟು
ಠೀಕು ಠಾಕಿನಲ್ಲಿ ಗಡ್ಡ ಮೀಸೆ, ಉದ್ಧಾರವಾಗಿದ್ದೇವೆಂದು ಹಿಗ್ಗಿ
ಅಂಡಲೆಯುವದ ಕಂಡು - ನಾ ನಗುತ್ತೇನೆ.
..........................................
................................................
ಊರ ಹೊರಗೆ ತಿಪ್ಪೆಗುಂಡಿಗಳಲ್ಲಿ
ರಾಷ್ಟ್ರದ ಹೊಲಗೇರಿಗಳು ಕೊಳೆಯುತ್ತಿರುವುದ ಕಂಡು
ನಾಳಿನ ಹೊಂಗನಸಿಗೆ ಬಾಯಿ ಬಾಯಿ ಬಿಟ್ಟು ನಾ ನಗುತ್ತೇನೆ
(ನಾ ನಗುತ್ತೇನೆ)

ಜನತೆಯನ್ನು ಶೋಷಿಸಿ, ನಾಲ್ಕು ದಿಕ್ಕಿನಿಂದ ಸ್ವರ್ಗಸುಖವುಣ್ಣುತ್ತ ಬಂದ 'ಪರಂಪರೆ'ಗೆ ದಲಿತ ಕಪಳೆ ನಿಗುರಿ ಪ್ರತಿಭಟನೆಯ ಕೂಗು ಮೊಳಗಿಸಬೇಕೆಂದು 'ಅಂತರ್ಯ' ಪದ್ಯ ಮಿಡಿಯುತ್ತದೆ. 'ಇಂಥ ಬದುಕು ನಮ್ಮದು' -

ದೇವರು ದಿಂಡರಿಗೆ ಹರಕೆ ಹೊತ್ತು
ಅವರಿವರ ಮನೆ ಸಾಕ್ರಿ ಬೊಗಳುವದು
ಇನ್ನಾದರೂ ಬೇಡವೋ

ಎಂದು ಮೂಢ ನಂಬಿಕೆಯನ್ನು ಹೋಗಲಾಡಿಸಿ, ದೈನ್ಯವನ್ನು ಕೈಬಿಡಲು ಆರ್ತವಾಗಿ ಮೊರೆಯುತ್ತದೆ.

ಎಡವಿಬಿದ್ದು, ನಡ ಕಳಕೊಂಡ ಬಡವರ ಒಡಲಲ್ಲಿ ಕೆರಳಿದ ಆಶೆ, ಆಕಾಂಕ್ಷೆಗಳು ಚಿಗುರೊಡೆಯಲು ತವಕಿಸುತ್ತಿರುವುದನ್ನು ಗುರುತಿಸಿದ ಕವಿ, ಅವರು 'ನರಕ ಯಾತನೆಯ ನಗಾರಿ ಬಾರಿಸುತ್ತಿ'ದ್ದರೂ ದವಲತ್ತಿನ ಧನಿಕರ ಕಾಲ್ಮುಂದೆ ಅದು 'ಸರಿಗಮ ಸಲ್ಲಾಪದ ಸಂಗೀತ'ವೆನಿಸಿದಾಗ -

ಜಡ ಭಾರತವಿದು
ಕೂತಿದೆ ಕೂತಲ್ಲೇ ತಾಂಬೂಲ ಜಗಿಯುತ್ತಾ
ಚಕ್ಕಂದವಾಡುತ್ತಾ

ಎಂಬ ಕ್ರೂರ ವ್ಯಂಗ್ಯ ದೇಶದ ಸದ್ಯದ ಸ್ಥಿತಿಯನ್ನು ಜಾಲಾಡಿಸುತ್ತದೆ. ಛತ್ರಿ, ಚಾಮರ, ಭಜನೆ, ಭಜಂತ್ರಿಯ ಸಾಲು ಮೆರವಣಿಗೆಯಲ್ಲಿ ಬಾರಿಸುವ ಹರೆ, ತಮಟೆ, ಡೊಳ್ಳು, ಬಡವರ ಚರ್ಮ ಸುಲಿದು ಮಾಡಿದ್ದೆಂಬ ಧ್ವನಿ 'ಎಚ್ಚರಿಕೆಯ ಗಂಟೆ' ಪದ್ಯದಲ್ಲಿ ಪ್ರತಿಧ್ವನಿಗೊಳ್ಳುತ್ತದೆ.

ವೈಯಕ್ತಿಕವಾಗಿ ತನ್ನ ಜೀವನವನ್ನು ಅವಲೋಕಿಸಿಕೊಂಡಾಗ ತನ್ನ ದಾರಿಯ ತಗ್ಗು-ದಿನ್ನೆಗಳನ್ನು, ಎಡರು-ತೊಡರುಗಳನ್ನು ದಾಟಿ ಬಂದ ಕವಿಗೆ "ನನ್ನಂಥ ಸುಖಿ, ಇನ್ನಿಂಥ ದುಃಖಿ" ಬೇರೆಲ್ಲೂ ಕಾಣದೆಂದು ಅನಿಸುತ್ತದೆ. 'ಹುಟ್ಟಿನಲಿ ಮಹಾಶೂದ್ರನಾಗಿ ಕಲಿಕೆಯಲಿ ಅತಿ ಬ್ರಾಹ್ಮಣನಾಗಿ' ದೈನ್ಯವನ್ನು ಮೆಟ್ಟಿ ಸ್ವಾಭಿಮಾನದಿಂದ ವ್ಯಕ್ತಿತ್ವ ರೂಪಿಸಿಕೊಂಡದ್ದಕ್ಕೆ

ಇದ್ದವರ ಬಾಲ ಬಡಿಯದೆ
ಇಲ್ಲದವರ ಕಾಲು ತುಳಿಯದೆ
ನನ್ನ ಮಾದರಿ ರಾಜಮಾರ್ಗವಾಗಿ

ಪರಿಣಮಿಸಿದ್ದನ್ನು ನೆನೆದುಕೊಳ್ಳುತ್ತದೆ. ತನ್ನ ಜನಕ್ಕೂ ಅದು ಮಾದರಿಯಾಗಲೆಂಬ ಸೂಚನೆಯೂ ಅಲ್ಲಿರುವಂತಿದೆ. ಅಂತೆಯೇ ಪ್ರಸ್ತುತ ಸಂಕಲನದ ಶೀರ್ಷಿಕೆ "ನನ್ನ ಮಾದರಿ" ಅರ್ಥ ಪೂರ್ಣವಾಗಿದೆ. ಕವಿತೆ ೧, ೨, ೩, ೪, ೫, ೬, ೭, ೮, ೯, ೧೨, ೧೩, ೧೪, ೧೯, ೨೨, ೨೩, ೨೫, ೪೦ ಮತ್ತು ಐದಾರು ಹನಿಗವಿತೆಗಳು ಅರ್ಥಗಂಭೀರವಾಗಿವೆ.

ಕಾವ್ಯದ ಕಸುಬುದಾರಿಕೆಯ ದೃಷ್ಟಿಯಿಂದ ಈ ಕವಿ ಕಾಳಜಿವಹಿಸಬೇಕಾದ ಅಗತ್ಯವಿದೆ. ಅಭಿವ್ಯಕ್ತಿಯಲ್ಲಿ ಸಂಯಮವನ್ನು, ಸೂಚ್ಯತೆಯನ್ನು ಸಾಧಿಸುತ್ತ ಕವಿತೆಯ ರೂಪಾಂಶದ ಕಡೆಗೂ ಗಮನವೀಯಬೇಕಾಗಿದೆ. ಪದ್ಯದ ತಿರುಳಿಗೆ ತಕ್ಕ ಆಕಾರ ದೊರಕೊಳ್ಳದಿದ್ದರೆ ಭಾವಕ್ಕೆ ತಕ್ಕ ಭಾಷೆಯನ್ನು ಸಾಣೆ ಹಿಡಿಯದಿದ್ದರೆ ಕವಿತೆಯ ಆಶಯ ಸಫಲಗೊಳ್ಳದೆ ಹೋಗಬಹುದು. ಬರೆದ್ದನ್ನು ಮತ್ತೆ ಮತ್ತೆ ಪರಿಶೀಲಿಸಿ ಅರೆಕೊರೆಗಳನ್ನು ಸರಿಪಡಿಸುತ್ತ ಕಾವ್ಯ ಗುಣಕ್ಕೆ ಧಕ್ಕೆಬಾರದಂತೆ ನೋಡಿಕೊಂಡರೆ ಶ್ರೀ ಎಲ್ಲಪ್ಪ ಅವರ 'ನನ್ನ ಮಾದರಿ' ಸಾರ್ಥಕವಾಗಿ ಮುಂದುವರಿಯಬಹುದಾಗಿದೆ.

(೧೯೯೫)

## ೬೩

# ನನ್ನೊಳಗಿನ ಕವಿತೆ

ಹಳ್ಳಿಯ ಸಾಮಾನ್ಯ ಮನೆತನವೊಂದರಲ್ಲಿ ಹುಟ್ಟಿದ ವಿದ್ಯಾ ಕುಂದರಗಿ ಸಾಹಿತ್ಯಿಕ ವಾತಾವರಣದಲ್ಲಿ ಬೆಳೆದಿರದಿದ್ದರೂ ಪಿ.ಯು.ಸಿ.ಯಲ್ಲಿದ್ದಾಗಲೆ ಕಾವ್ಯದ ಕಡೆಗೆ ಅವರ ಮನಸ್ಸು ಹರಿಯಿತು. ಸ್ನಾತಕೋತ್ತರ ಶಿಕ್ಷಣಕ್ಕಾಗಿ ಧಾರವಾಡಕ್ಕೆ ಬಂದ ಮೇಲೆ ಒಳಗೇ ಹುದುಗಿದ್ದ ಕಾವ್ಯರಚನೆಯ ತುಡಿತಕ್ಕೆ ಮೂರ್ತಸ್ವರೂಪ ಬರತೊಡಗಿದ್ದನ್ನು ಅವರು ನೆನೆದುಕೊಳ್ಳುತ್ತಾರೆ. ಕಳೆದ ಐದಾರು ವರ್ಷಗಳಲ್ಲಿ ಅವರು ಬರೆದ ಹಾಗೂ ಆಗಾಗ ಪತ್ರಿಕೆಗಳಲ್ಲಿ ಪ್ರಕಟಗೊಂಡ ಕವಿತೆಗಳನ್ನು ಒಳಗೊಂಡಂತೆ ಪ್ರಥಮ ಸಂಗ್ರಹ ಇದೀಗ ಪ್ರಕಟಗೊಳ್ಳುತ್ತಿದೆ. ಈ ಸಂದರ್ಭದಲ್ಲಿ ಅವರ ಅಪೇಕ್ಷೆಯಂತೆ ಮುನ್ನುಡಿಯಾಗಿ ಎರಡು ಮಾತುಗಳನ್ನು ಸಂತೋಷದಿಂದ ಬರೆಯುತ್ತಿದ್ದೇನೆ.

ಈ ಸಂಗ್ರಹಕ್ಕೆ ಅವರು ಕೊಟ್ಟಿರುವ 'ನನ್ನೊಳಗಿನ ಕವಿತೆ' ಎಂಬ ಹೆಸರು ಹಲವಾರು ದೃಷ್ಟಿಯಿಂದ ಅರ್ಥಪೂರ್ಣವಾಗಿದೆ. ಕವಿತೆ ಏನೆಂದರೂ ಅದು ಮುಖ್ಯವಾಗಿ ಕವಿಯ ಅಂತರಂಗಕ್ಕೆ ಸಂಬಂಧಪಟ್ಟದ್ದು, ಹೊರಜಗತ್ತಿನ ಆಗು-ಹೋಗುಗಳಿಗೆ ಕವಿಯ ಮನಸ್ಸು ತೆರೆದುಕೊಂಡಿದ್ದರೂ ಅವನ(ಳ) ಅಂತರಂಗಕ್ಕೆ ತಟ್ಟುವ ಸಂಗತಿಗಳು ಕೆಲವು ಮಾತ್ರ. ಮೇಲು ಮೇಲಿನ ಅನಿಸಿಕೆಗಳು, ಅನುಮಾನಗಳು, ಅಹವಾಲುಗಳು ಎಷ್ಟೇ ಪ್ರಬಲವಾಗಿದ್ದರೂ ಅವನ ಹೃದಯವನ್ನು ತೀವ್ರವಾಗಿ ಕಲಕಿದಾಗ ಹೊಮ್ಮುವ ಭಾವನೆಗಳು. ಒಳ ಮನಸ್ಸಿನಲ್ಲಿ ಕನಸಿದ ವಿಚಾರಗಳು, ಸ್ವಾನುಭವದೊಡನೆ ಸೆಣಸಿ, ಪರಸ್ಪರ ಮೇಳೈಸಿ ಕವಿತೆಯನ್ನು ದಡಮುಟ್ಟಿಸಬಲ್ಲವು. ಆ ಮುಹೂರ್ತಕ್ಕಾಗಿ ಕಾಯಬೇಕಾಗುತ್ತದೆ. ಅದು ಒಂದು ರೀತಿ. ಆದರೆ ಇಂದಿನ ಜೀವನ ಎಷ್ಟೊಂದು ಆತಂಕಗಳಿಂದ ಕೂಡಿದೆಯೆಂದರೆ, ಬದುಕಿನ ಹೋರಾಟದಲ್ಲಿ, ಗಡಿಬಿಡಿಯಲ್ಲಿ, ಹಲಬಗೆಯ ಒತ್ತಡಗಳಲ್ಲಿ ಕವಿತೆ ಕಳೆದುಹೋಗುವ ಇಲ್ಲವೆ ಬತ್ತಿಹೋಗುವ ಪ್ರಸಂಗಗಳೇ ಹೆಚ್ಚಾಗಿವೆ. ಅದರಲ್ಲೂ ಮಹಿಳೆ ಹೆಚ್ಚಿನ ಪ್ರಮಾಣದಲ್ಲಿ ಇಂಥ ಆತಂಕಗಳನ್ನು ಎದುರಿಸಬೇಕಾಗುತ್ತದೆ. 'ನನ್ನೊಳಗಿನ ಕವಿತೆ' ಅದನ್ನು ಜೀವಂತವಾಗಿ ಚಿತ್ರಿಸುತ್ತದೆ.

ಆಧುನಿಕ ಜೀವನದ ಸಂಕಷ್ಟಗಳನ್ನು ತುಟಿಕಚ್ಚಿಕೊಂಡು ಅನುಭವಿಸುತ್ತಿರುವ ಕೆಳ ಮಧ್ಯಮ ವರ್ಗದ ಹೆಣ್ಣಿನ ಅಸಹಾಯಕತೆ, ನೋವು ಇಲ್ಲಿಯ ಕವಿತೆಗಳ ಸ್ಥಾಯೀಭಾವವಾಗಿದೆ. ಆ ನೋವು ನೇರವಾದ ನಿಷ್ಠುರ ಅಭಿವ್ಯಕ್ತಿ ಪಡೆದಿರುವುದು ಇಲ್ಲಿಯ ಹಲವು ಕವಿತೆಗಳಲ್ಲಿ ಎದ್ದುಕಾಣುವ ಗುಣವಾಗಿದೆ.

"ಆಗಂದರ ಹ್ಯಾಂಗ ಆಗಲಿ" ಕವಿತೆ ವರದಕ್ಷಿಣೆ ಬೇಡುವವರ ಮುಖಕ್ಕೆ ನೇರವಾಗಿ ತಿವಿಯುತ್ತದೆ :

ಸಂತ್ಯಾಗ ದನಕರಾ
ಮಾರಿದ್ಹಾಂಗ ಸರಸರಾ
ಹೇಳತೀರಿ ನಿಮ್ ನಿಮ್ಮ ರೇಟಿನ ರಾಶಿ
ಮತ್ಯಾಕೋ ನಿನಗ ಗಂಡಸನ್ನೊ ಮೀಸಿ ?

'ಅಜ್ಜನೆಟ್ಟ ಆಲದ ಮರ'ಕ್ಕೆ ಜೋತು ಬೀಳು ಎಂದು ಬೊಬ್ಬಿಡುತ್ತಿದ್ದರೂ ಅದಕ್ಕೆ ಜೋತು ಬಿದ್ದ ಬಿಳಲುಗಳಂತಾಗಿರುವ ಸ್ಥಿತಿಯನ್ನು 'ಅಸಹಾಯಕ ಸ್ತ್ರೀಯರು' ಪದ್ಯ ಚಿತ್ರಿಸಿದರೆ, ಮನುಷ್ಯ ಸಂಬಂಧಗಳು ತಣ್ಣಗೆ ಶಿಥಿಲಗೊಂಡಿರುವುದನ್ನು 'ಎತ್ತ ಹೊರಳಿದತ್ತ ಟರ್..... ಎನ್ನುತ್ತವೆ ಸಂಬಂಧಗಳು' - 'ಹೊರಳಿದಲ್ಲೊಂದು ಹರಕು' ಕವಿತೆ ಹರಕು ಹಾಸಿಗೆಯ ಸಂಕೇತದ ಮೂಲಕ ನಿರೂಪಿಸುತ್ತದೆ. ಅದು ಹರಕನ್ನು ಜೋಡಿಸಲಾರದ, ಕೂಡಿಸಿ ಹೊಲಿಯಲಾರದ, ಹೊಸದನ್ನು ಕೊಳ್ಳಲಾರದ ಶೋಚನೀಯ ಅವಸ್ಥೆ :

'ಸಂಬಂಧಗಳ ಸರಳುಗಳ ಹಿಂದೆ
ನಾನಾರಿಗೂ ಅರ್ಥವಾಗದವಳು'.

'ನಾವು-ನೀವು-ಅವರು' ಪದ್ಯದಲ್ಲಿ ಅದು ಭಾರತೀಯ ಪ್ರಜೆಗಳನ್ನೇ ಆವರಿಸಿಕೊಳ್ಳುತ್ತದೆ. ಇವರು -

ಮಾನಗಳ ಮಾರಿ
ಅಭಿಮಾನಗಳ ತೂರಿ
ಅವಮಾನಗಳ ಹೊದ್ದು
ಚಿಂತೆಗೆ ತಲೆಕೊಟ್ಟು
ಬದುಕಗೊಂಡವರು.

ಹೆಣ್ಣಿನ ಬದುಕಿನ ಬವಣೆಯನ್ನು ಯಾವ ಮುಜುಗರವಿಲ್ಲದೆ ಚಿತ್ರಿಸಿರುವ ಇಲ್ಲಿಯ ಪದ್ಯಗಳು ಸ್ತ್ರೀಸಂವೇದನೆಯಲ್ಲಿ ಅದ್ದಿ ತೆಗೆದಂತಿವೆ. ಈ ಕಾವ್ಯದ ನಾಯಕಿಗೆ ಯೌವನವೆಂದರೆ 'ಏರಿವ ವರ್ಷಗಳಲ್ಲಿ ಜಾರಿದ ಹರ್ಷ'. ತನ್ನ ಹುಟ್ಟುಹಬ್ಬದಂದು ಈಕೆ ಹೇಳಿಕೊಳ್ಳುತ್ತಾಳೆ :

ಚಿಂತೆಗಳ ಗದ್ದಲ-ಗುದ್ದಾಟದಲಿ
ಹೊರಟಿದ್ದೇನೆ ಗೆಳತಿ
ಹೊಸದಾದ ಒಂದು ಕನಸು ಕೊಳ್ಳಲು
ಏಕೆಂದರೆ ಇಂದು ಹುಟ್ಟಿದ ಹಬ್ಬ
(ತೊಟ್ಟುಕೊಳ್ಳಲು ಬೇಕಲ್ಲ

ಮತ್ತೆ ಬರಬಹುದಾದ ಈ ದಿನದವರೆಗೆ)

ಇಲ್ಲಿಯ ವ್ಯಂಗ್ಯ ಭಾವುಕತೆಗೆ ಎಡೆಗೊಡದೆ ವಾಸ್ತವತೆಯ ದರ್ಶನ ಮಾಡಿಸುತ್ತದೆ. 'ಬಡವರ ಬದುಕಿನ ಸೀಮೆಯ ಒಳಗೆ' ಪದ್ಯವೂ ಬಡತನದ ವಿವರಗಳನ್ನು ಜೀವಂತವಾಗಿ ಹಿಡಿದುಕೊಡುತ್ತವೆ. 'ಸಂದಿಗ್ಧ' ಇಂಥ ಬದುಕಿನ ಇತಿಮಿತಿಯನ್ನೂ ಸೂಚಿಸುತ್ತದೆ : 'ಬದುಕಿನ ನಶಿಸಿದ ದಾರ... ಜಗ್ಗಿ. ಕಟ್ಟಹೋದರೆ ಥಟ್ಟನೆ ಹರಿಯುತ್ತದೆ.'

ಪ್ರೇಮದ ಬಗೆಗೂ ಇದೇ ಹಾಡು. 'ಜಾತಿಯ ದಂಡೆಗುಂಟ ಹರಿದಾಗ' ಅದು ಹೊಳೆಯಾಗದೆ ಉಪ್ಪುನೀರಿನ ಸಾಗರವಾಗುತ್ತದೆ. 'ಪ್ರೇಮದ ಒಂದು ಗುಟುಕು ದಾಹ'ವನ್ನು ಅದು ತೀರಿಸಲಾರದು. ಪ್ರೇಮದ ಹಸಿರು ಕರಿಕೆಯ ಬೇರು ಅಲ್ಲಿ ಇಳಿಯಲಾರದು. ಆ ಮಳಲ ದಂಡೆಯಲ್ಲಿ ಪ್ರೀತಿಯ ಸಿಹಿನೀರಿನ ಒರತೆ ದೊರಕಲಾರದು.

'ಪ್ರಿಯಕರ'ನೇ 'ಪತಿ'ಯಾದ, ಹಿಂದಿನ ವಿರಹ ಯಾತನೆಗಳೇ ಮಧುರವಾಗಿದ್ದ ವಿಲಕ್ಷಣ ಸತ್ಯವನ್ನು 'ಹಸಿರಾಗುತ್ತವೆ ನೆನಪುಗಳು' ಅಭಿವ್ಯಕ್ತಿಗೊಳಿಸುತ್ತದೆ. 'ಕನಸಿನ ಕ್ಷಣಗಳು' ಪದ್ಯ ಅವನ್ನು ಹಿಡಿದುಕೊಡುವದು ಹೀಗೆ :

ನೀನಿಲ್ಲದೆ ಕಾಡುವ
ಮಧುರ ನೋವುಗಳಲ್ಲಿ
ನಿನ್ನ ರೂಪಿಸಿಕೊಳ್ಳುವದೇ ಚಂದ.
..................................
ಸಾಮೀಪ್ಯದ ಸುಖಕ್ಕಾಗಿ
ಕಾತರಿಸುವ ಆಟದಲಿ
ಬಿಸಿ ಏರುವದೇ ಚಂದ.

'ಬಯಲು ಸೀಮೆಯ ಹುಡುಗನ ಬರಿಯ ನಗು', 'ಕವಿ ಹೆತ್ತ ಕವನ' ಮೊದಲಾದ ಪದ್ಯಗಳಲ್ಲಿ ಕಾವ್ಯದ ವಸ್ತುವನ್ನು ಪೂರ್ಣ ರೂಪಕದಲ್ಲಿ ಹಿಡಿಯಲು ಪ್ರಯತ್ನಿಸಲಾಗಿದೆ. ಇನ್ನಿಷ್ಟು ಸಂಕ್ಷಿಪ್ತತೆಯನ್ನು ಇಲ್ಲಿ ಸಾಧಿಸಬಹುದಿತ್ತು. 'ಪ್ರೀತಿ ಸತ್ತಿಲ್ಲ', 'ಕಳೆದುಕೊಂಡಿದ್ದಾಳೆ' ಮತ್ತು 'ಪ್ರಮಾಣ ಪತ್ರಗಳು ಮಾರಾಟಕ್ಕಿವೆ' ಕವಿತೆಗಳಲ್ಲಿ ವಿಡಂಬನೆ ಪರಿಣಾಮಕಾರಿಯಾಗಿ ಕೆಲಸ ಮಾಡಿದೆ. 'ಜೋಗದ ಜಲಪಾತ' ದಲ್ಲಿ ಅದನ್ನು ಬಣ್ಣಿಸಲು ಶಬ್ದಗಳು ಧುಮ್ಮಿಕ್ಕಿ ಹರಿಯಲಿಲ್ಲ ಎಂದು ಹೇಳುವ ರೀತಿಯಲ್ಲಿಯೇ ಕಾವ್ಯದ ಮತ್ತೊಂದು ಮುಖವನ್ನು ಅದು ಎತ್ತಿ ಹಿಡಿಯುತ್ತದೆ-

ನನ್ನ ಹೈಬ್ರಿಡ್
ಕವಿತೆ - ಕಲ್ಪನೆಗಳಿಗಿಂದು
ಬಂಜೆತನದ ಭಣಭಣ.

'ನಾ ಹೇಗ ನಗಲೆ?' ಮತ್ತು 'ಶೇಷ' ಭಾವತೀವ್ರತೆಗೆ ನಿದರ್ಶನವಾಗಿ ನಿಲ್ಲುವ ಪದ್ಯಗಳು.

‘ಅನಾಥೆಗೆ’ ಕವಿತೆಯ ಆಶಾವಾದ ಅನುಭವದ ಮಾಗುವಿಕೆಯನ್ನು ಸೂಚಿಸುತ್ತದೆ:

ಮುಗಿಯಿತು ಬದುಕೆಂದು
ಕೈಚೆಲ್ಲಿ ಶೂನ್ಯಳಾಗಬೇಡವೇ.... ಹೀಗೆ
ಆರಂಭವಾದೀತು ಬದುಕು ಅಮರಗಾಥೆಯೊಡನೆ
ಸ್ವತಂತ್ರಳಾಗಿ ಬಿಡು ಧ್ರುವತಾರೆಯ ಹಾಗೆ.

ಈ ಸಂಗ್ರಹದ ಪದ್ಯಗಳಲ್ಲಿ ವಾಚ್ಯವಿಲ್ಲವೆಂದೇನೂ ಅಲ್ಲ. ಆದರೆ ನೈಜಾನುಭವಗಳಿಗೆ ಅನುರೂಪವಾದ ಭಾಷೆ-ಭಾವ-ಛಂದಗಳ ಸಾಮರಸ್ಯವನ್ನು ಸಾಧಿಸುತ್ತ ಲಯಗಾರಿಕೆಯ ಕೊರತೆಗಳನ್ನು ಹೋಗಲಾಡಿಸುತ್ತ ಮುಂದುವರಿದಲ್ಲಿ ಇನ್ನೂ ಉತ್ತಮ ರಚನೆಗಳನ್ನು ಈ ಕವಯಿತ್ರಿ ಕೊಡಬಹುದಾಗಿದೆ.

‘ಕವಿ ಹೆತ್ತ ಕವನ’ದಲ್ಲಿಯೇ ಆ ಹರಕೆಯಿದೆ :

‘ಕವನ......
ನನ್ನ ದೇಹದ ತುಣುಕು ನೀ
ಭಾವನೆಯ ಬದುಕು ನೀ....
ನನ್ನೊಲವಿನ ಹಸಿಯಲಿ
ನನ್ನೆದೆಯ ಸುಧೆ ಹೀರಿ
ಬೇರಿಳಿಸಬೇಕು ನೀ ಸಾಹಿತ್ಯದಾಳಕೆ
ಚಿಗುರೊಡೆಯಬೇಕು ನೀ ಕಾವ್ಯದೆತ್ತರಕೆ
ಇದು ಹೆತ್ತವಳ ಹರಕೆ.’

(೧೯೯೭)

೬೩

## ಚಂದಿರನೇತಕೆ ಓಡುವನಮ್ಮ ?

ಮಕ್ಕಳ ಶಿಕ್ಷಣ ಹಾಗೂ ಸಾಹಿತ್ಯದಲ್ಲಿ ಶ್ರೀ ನೀ. ರೇ ಹಿರೇಮಠ ಅವರಿಗಿರುವ ಆಸಕ್ತಿ ಇಂದು ನಿನ್ನೆಯದಲ್ಲ; ಸುಮಾರು ನಾಲ್ಕು ದಶಕಗಳಷ್ಟು ಹಿಂದಿನದು. ಮಕ್ಕಳ ಮನೋಧರ್ಮವನ್ನರಿಯಲು ೫ ರಿಂದ ೭ ವರ್ಷಗಳ ಮಕ್ಕಳ ಮೇಲೆ ಅವರು ಮಾಡಿದ ಪ್ರಯೋಗ (೧೯೫೧), ಅವರ ಪ್ರಕಟಿತ ಎಂ. ಈ. ಡಿ. ಪ್ರಬಂಧದ (೧೯೬೬) ವಸ್ತುವಾಗಿದೆ. ಮಕ್ಕಳ ಸಾಹಿತ್ಯ ರಚನೆಯಲ್ಲಿ ಅಖಿಲ ಭಾರತ ಕಾರ್ಯಾಗಾರದಲ್ಲಿ ತರಬೇತಿ ಪಡೆದ (೧೯೫೮-೫೯) ಅವರಿಗೆ ಬರಹಗಾರ ಶಿಕ್ಷಕರಿಗಾಗಿ ಮಕ್ಕಳ ಸಾಹಿತ್ಯ ರಚನಾಲಯದ ನಿರ್ದೇಶಕರಾಗಿ ಕಾರ್ಯನಿರ್ವಹಿಸಿದ ಅನುಭವವಿದೆ. ಇದೂ ಅಲ್ಲದೆ ಕರ್ನಾಟಕ ರಾಜ್ಯಕ್ಕಾಗಿ ಬಹಳ ಹಿಂದೆಯೇ ಪಠ್ಯಪುಸ್ತಕಗಳ ಯೋಜನೆಯ ಅಂಗವಾಗಿ ಪ್ರಾಥಮಿಕ ತರಗತಿಗಳಿಗಾಗಿ ವಾಚನಮಾಲೆಯನ್ನು ಅವರು ಉಪಯುಕ್ತವಾಗುವಂತೆ ರಚಿಸಿಕೊಟ್ಟಿದ್ದಾರೆ. 'ಶಿಕ್ಷಣ ಸಾಹಿತ್ಯದಲ್ಲಿ' ಉತ್ತಮ ವೈಚಾರಿಕ ಗ್ರಂಥಗಳೂ ಅವರ ಬರವಣಿಗೆಯಲ್ಲಿ ಸೇರಿವೆ.

"ಚಂದಿರನೇತಕೆ ಓಡುವನಮ್ಮಾ" ಹಾಗೂ "ಅಂಚೆಯ ಅಣ್ಣ" ಈ ಪದ್ಯಗಳು ೧೯೫೯ ರಷ್ಟು ಹಿಂದೆಯೇ ಮಕ್ಕಳಿಗೆ ಅತ್ಯಂತ ಪ್ರಿಯವಾಗಿದ್ದುದನ್ನು ನಾನು ಬಲ್ಲೆ. ಈಚೆಗೆ ಪ್ರಕಟವಾದ ಒಂದು ಮಹತ್ವದ ಸಂಗ್ರಹ "ತಟ್ಟು ಚಪ್ಪಾಳೆ ಪುಟ್ಟ ಮಗು" (೧೯೯೧)ರಲ್ಲಿ ಈ ಎರಡು ಪದ್ಯಗಳು ಮರಳಿ ಜೀವ ಪಡೆದಿರುವುದನ್ನು ಕಂಡು ಸ್ವತಃ ಹಿರೇಮಠರಿಗೇ ಆಶ್ಚರ್ಯವಾಯಿತು. ಅಷ್ಟೇ ಅಲ್ಲ, ಅವರಿಗೆ ಅದು ಪ್ರೇರಣೆಯನ್ನೂ ನೀಡಿತು. ಅವುಗಳನ್ನು ನಾನೊಮ್ಮೆ ನೋಡಬೇಕೆಂದೂ ಪ್ರಕಟಣೆಗೆ ಯೋಗ್ಯವಾಗಿವೆಯೇ ಇಲ್ಲವೇ ಎಂಬುದನ್ನು ತಿಳಿಸಬೇಕೆಂದೂ ಕೇಳಿ ಹಸ್ತಪ್ರತಿಗಳನ್ನು ಅವರು ನನ್ನ ಕೈಗಿತ್ತರು. ಈ ಇಳಿವಸ್ಸಿನಲ್ಲಿಯೂ - ಈಗ ಅವರಿಗೆ ೮೪ ವರ್ಷ - ಅವರಲ್ಲಿ - ಹುದುಗಿರುವ ಮಗುವಿನ ನಿರ್ಮಲವಾದ ಚೈತನ್ಯ ಇನ್ನೂ ಲವಲವಿಕೆಯಿಂದಿರುವುದನ್ನು ಕಂಡು ನನಗೆ ಆಶ್ಚರ್ಯವಾಯಿತು; ಅಷ್ಟೇ ಸಂತೋಷವೂ ಆಯಿತು. ಈ ಪದ್ಯಗಳಲ್ಲದೆ ಇನ್ನೂ ಕೆಲವು ಶಿಶು ಪ್ರಾಸಗಳನ್ನೂ, ಜೀವ ಜಗತ್ತಿನ ಪ್ರಾಣಿಗಳನ್ನು ಕುರಿತು 'ನಾನು ಯಾರು?' ಎಂಬ ಒಗಟಿನ ರೂಪದ ಪದ್ಯಮಾಲೆಯನ್ನೂ ರಚಿಸಿ ಹಿರೇಮಠರು ಹಿರಿಕಿರಿಯರ ಆಸಕ್ತಿಯನ್ನು ಕೆರಳಿಸಿದ್ದಾರೆ. ಅವು ಪ್ರತ್ಯೇಕವಾಗಿ ಪ್ರಕಟವಾಗಲಿವೆ. ಅರವತ್ತು

ವರುಷಗಳ ಹಿಂದೆ ಮಾಡಬಹುದಾಗಿದ್ದರೂ ಈಗ ಈ ಇಳಿವಯಸ್ಸಿನಲ್ಲಿ ಮಾಡಿದೆನಲ್ಲ ಎಂಬ ಅವರ ತೃಪ್ತಿಯಲ್ಲಿ ನಾನೂ ಭಾಗಿಯಾಗಿರುವುದರ ದ್ಯೋತಕವಾಗಿ ಅವರ ಅಪೇಕ್ಷೆಯಂತೆ ಈ ಸಂಗ್ರಹಕ್ಕೆ ಮುನ್ನುಡಿ ರೂಪದ ನಾಲ್ಕು ಮಾತುಗಳನ್ನು ಬಹಳ ಸಂತೋಷದಿಂದ ಬರೆಯುತ್ತಿದ್ದೇನೆ.

ಸಾಮಾನ್ಯವಾಗಿ ಕುಟುಂಬದ ಸದಸ್ಯರ ಮಧ್ಯದಲ್ಲಿ ಬೆಳೆಯುತ್ತಿರುವ ಮಗುವಿಗೆ ತಾಯಿಯೊಡನೆ ಉಳಿದವರಿಗಿಂತ ಭಿನ್ನವಾದ ಆತ್ಮೀಯ ಸಂಬಂಧವಿರುತ್ತದೆ. ತಂದೆ, ಅಣ್ಣ-ತಮ್ಮ, ಅಕ್ಕ-ತಂಗಿ, ಅಜ್ಜ-ಅಜ್ಜಿ ಮುಂತಾದವರೊಡನೆ ಮಗು ಮಾತನಾಡುವಾಗ, ಕಾಡಿಸಿ ಪ್ರಶ್ನೆ ಕೇಳುವಾಗ ಅದರ ವಿಷಯ, ರೀತಿ ಬೇರೆಬೇರೆಯಾಗಿರುವುದನ್ನು ಸೂಕ್ಷ್ಮವಾಗಿ ಕಂಡುಹಿಡಿಯಬಹುದು. ಮಗುವಿನ ಅವಸ್ಥೆಗೆ ಹಿಂತಿರುಗುತ್ತಿರುವ ಅಜ್ಜ-ಅಜ್ಜಿಯೊಡನೆ ಅದು ಹೆಚ್ಚಿನ ಸ್ವಾತಂತ್ರ್ಯ ವಹಿಸುವುದನ್ನು ಕಾಣುತ್ತೇವೆ. ಕತೆ ಕೇಳುವ ಅದರ ಆಸಕ್ತಿಯನ್ನು ಮಗುವಿನ ಮಾತಿನಲ್ಲಿಯೇ ಅವರು ಕೆರಳಿಸಿ, ತಣಿಸುವುದೂ ಈ ಹೆಚ್ಚಿನ ಸಲಿಗೆಗೆ ಕಾರಣವಾಗಬಹುದು. ಮನೆಯ ಹೊರಗೆ ಗೆಳೆಯರೊಡನೆ ಆಡುವಾಗ ಅದು ಬೇರೊಂದು ರೀತಿಯಲ್ಲಿ ತನ್ನ ಭಾವನೆ ಹಾಗೂ ವಿಚಾರಗಳನ್ನು ಅವರೊಡನೆ ಹಂಚಿಕೊಳ್ಳುತ್ತದೆ. ಗಿಡ, ಮರ, ಬಳ್ಳಿ, ಹೂವು, ಕಾಯಿ, ಹಣ್ಣು, ಮೋಡ, ಮಿಂಚು, ಗುಡುಗು, ಮಳೆ-ಗಾಳಿ, ಸೂರ್ಯ, ಚಂದ್ರ, ಚಿಕ್ಕೆ, ಪಶು, ಪ್ರಾಣಿ, ಕೀಟ ಹೀಗೆ ನಿಸರ್ಗದ ಹಾಗೂ ಪರಿಸರದ ಪ್ರತಿಯೊಂದು ವಸ್ತುವಿನ ಹಾಗೂ ಅದರ ಚಟುವಟಿಕೆಯ ಬಗ್ಗೆ ಅಚ್ಚರಿಯೊಂದಿಗೆ ಕುತೂಹಲ ತಾಳುತ್ತ, ಮನರಂಜನೆಯೊಡನೆ ಹೆಚ್ಚಿನ ವಿಷಯಗಳನ್ನು ತಿಳಿದುಕೊಳ್ಳುತ್ತ, ತಾನು ಕಂಡಂತೆ ಅವುಗಳನ್ನು ಅರ್ಥಮಾಡಿಕೊಳ್ಳುತ್ತ, ತಿಳಿಯದ್ದರ ಬಗ್ಗೆ ಹಿರಿಯರನ್ನು ಪದೇ ಪದೇ ಪ್ರಶ್ನಿಸುತ್ತ ಹೋಗುತ್ತಲೇ ಅದರ ವ್ಯಕ್ತಿತ್ವವೂ ಮೆಲ್ಲಮೆಲ್ಲಗೆ ರೂಪುಗೊಳ್ಳತೊಡಗುತ್ತದೆ. ಈ ಅವಸ್ಥೆಯಲ್ಲಿ ಅದರ ಹಂಬಲಕ್ಕೆ ಪೂರಕವಾಗಿ, ಪೋಷಕವಾಗಿ ಉತ್ತಮವಾದ ಮಕ್ಕಳ ಸಾಹಿತ್ಯವನ್ನು ಒದಗಿಸಿದರೆ, ಅವರ ಕುತೂಹಲವನ್ನು ಯೋಗ್ಯರೀತಿಯಲ್ಲಿ ತಣಿಸುವುದರ ಜೊತೆಗೆ ಮಕ್ಕಳ ಮನೋವಿಕಾಸಕ್ಕೂ ಆರೋಗ್ಯಕರವಾದ ರೀತಿಯಲ್ಲಿ ನೆರವಾದಂತಾಗುತ್ತದೆ.

ಕನ್ನಡ ಸಾಹಿತ್ಯದ ನವೋದಯ ಕಾಲದಲ್ಲಿಯೇ ಮಕ್ಕಳ ಸಾಹಿತ್ಯ ರಚನೆಗೂ ನಾಂದಿಯಾಯಿತು. ಸ್ವತಃ ಶಿಕ್ಷಕರಾಗಿ ಮಕ್ಕಳ ಮನೋಧರ್ಮವನ್ನು ಚೆನ್ನಾಗಿ ಮನವರಿಕೆ ಮಾಡಿಕೊಂಡಿದ್ದ ಹಾಗೂ ಉತ್ತಮ ಸಾಹಿತ್ಯ ಶಕ್ತಿಯಿಂದ ಕೂಡಿದ್ದ ಪಂಜೆ ಮಗೇಶರಾಯರಂಥ ಹಿರಿಯರು ಇದರ ಆದ್ಯಪ್ರವರ್ತಕರಾಗಿ ದೊರೆತದ್ದು ಕನ್ನಡದ ಪುಣ್ಯವೆನ್ನಬೇಕು. ಮುಂದೆ ಡಾ. ರಾಜರತ್ನಂ ಅಂಥವರ ಕೈಯಲ್ಲಿ ಮಕ್ಕಳ ಸಾಹಿತ್ಯ ತನ್ನ ಉತ್ಕರ್ಷವನ್ನು ಕಂಡುಕೊಂಡಿತು. ಹೊಯ್ಸಳ, ಮೇವುಂಡಿ ಮಲ್ಲಾರಿ, ಕುವೆಂಪು, ದಿನಕರ ದೇಸಾಯಿ, ಶಿವರಾಮ ಕಾರಂತ, ಸಿದ್ಧಯ್ಯ ಪುರಾಣಿಕ, ಬಿ.ಎ. ಸನದಿ. ಪಳಕಳ ಸೀತಾರಾಮ ಭಟ್ಟ, ಈಶ್ವರ ಕಮ್ಮಾರ, ಶಿಸು ಸಂಗಮೇಶ, ಎಂ.ಡಿ. ಗೋಗೇರಿ, ಬಿ.ಎಸ್. ನಾಗರಾಜಶೆಟ್ಟಿ, ಶಂ. ಗು. ಬಿರಾದಾರ

ಮುಂತಾದವರು ವಿವಿಧ ರೀತಿಯಲ್ಲಿ ಈ ಸಾಹಿತ್ಯದ ಬೆಳವಣಿಗೆಗೆ ತಮ್ಮ ತಮ್ಮ ಕಾಣಿಕೆ ಸಲ್ಲಿಸಿದ್ದಾರೆ. ಈಚೆಗೆ ಅಶೋಕ ಚೊಳಚಗುಡ್ಡ, ರಾಜಶೇಖರ ಕುಕ್ಕುಂದಾ, ಜಂಬುನಾಥ ಕಲ್ಯಾಣಿ, ಗುರುರಾಜ ಬೆಣಕಲ್, ಪ.ಗು. ಸಿದ್ದಾಪುರ, ಜಯಂತ ಕಾಡದೇವರ ಹೀಗೆಯೇ ಇನ್ನೂ ಅನೇಕರು ವಿನೋದ, ತುಂಟತನಗಳನ್ನು ಒಳಗೊಂಡು ಸಮಕಾಲೀನ ಸಂವೇದನೆಗೆ ಪ್ರತಿಸ್ಪಂದಿಸುವ ರಚನೆಗಳನ್ನು ನೀಡುತ್ತ, ನವ್ಯ ಸಾಹಿತ್ಯದ ಸಂದರ್ಭದಲ್ಲಿ ಅಲಕ್ಷಿತವಾಗಿಬಿಟ್ಟಿದ್ದ ಈ ಸಾಹಿತ್ಯ ಪ್ರಕಾರವನ್ನು ಉತ್ಸಾಹದಿಂದ ಮುಂದುವರಿಸಿರುವುದು ಶ್ಲಾಘನೀಯ. ಎಚ್.ಎಸ್. ವೆಂಕಟೇಶಮೂರ್ತಿ, ಎನ್. ಎಸ್. ಲಕ್ಷ್ಮೀನಾರಾಯಣ ಭಟ್ಟರಂಥ ಪ್ರೌಢ ಕವಿಗಳು, ಭಾಷೆಯ ಹೊಸ ನುಡಿಗಟ್ಟುಗಳನ್ನು ಹದವಾಗಿ ಬಳಸುತ್ತ, ಮಕ್ಕಳಲ್ಲಿ ಸಾಮಾಜಿಕ ಎಚ್ಚರವನ್ನು ಮೂಡಿಸಬಲ್ಲ, ನಾಟಕೀಯ ಗುಣವುಳ್ಳ ರಚನೆಗಳೊಂದಿಗೆ ಮಕ್ಕಳ ಸಾಹಿತ್ಯಕ್ಕೆ ಹೊಸ ಆಯಾಮವನ್ನು ನೀಡುತ್ತಿರುವುದು ಸ್ವಾಗತಾರ್ಹ.

ಈ ಸಂದರ್ಭದಲ್ಲಿ ಶ್ರೀ ನೀ.ರೇ. ಹಿರೇಮಠರ ಪ್ರಸ್ತುತ ಕವನ ಸಂಗ್ರಹ ಸದ್ದುಗದ್ದಲವಿಲ್ಲದೆ ತನ್ನೊಡನೆ ಹಿತವಾದ ತಂಗಾಳಿಯ ಅಲೆಯೊಂದನ್ನು ತಂದು ಮಕ್ಕಳ ಮನಸ್ಸನ್ನು ಅರಳಿಸುವ ಸನ್ನಾಹದಲ್ಲಿದೆ. ಇವು ನಿಜಕ್ಕೂ ಮಕ್ಕಳಿಗೆ ದಕ್ಕುವ ಕವನಗಳು.

ಇಲ್ಲಿಯ ಕವನಗಳನ್ನು ಸ್ಥೂಲವಾಗಿ ಐದು ಭಾಗಗಳಲ್ಲಿ ವಿಂಗಡಿಸಬಹುದು. ೧) ಪ್ರಾಣಿ ಪ್ರಪಂಚದೊಡನೆ ಪಡೆಯುವ ಶುದ್ಧ ಮನರಂಜನೆ : (ಬಾರೋ ಬಾರೋ ಮಂಗಣ್ಣ, ಬಾ ಅಳಿಲಮರಿ, ಟಾಮಿ ಆಟ), ೨) ಇದೇ ವಸ್ತು ಕಥನ ಪ್ರಧಾನವಾಗಿ ಬೆಳವಣಿಗೆ ಪಡೆದು ಪ್ರಾಣಿಗಳ ಹಾಗೂ ಮನುಷ್ಯ ಸ್ವಭಾವದ ನಡುವಿನ ಗೆರೆಯನ್ನು ಮೆಲ್ಲನೆ ಅಳಿಸಿ, ಹಾಲಿನಲ್ಲಿ ಸಕ್ಕರೆ ಬೆರೆತಂತೆ ಪರೋಕ್ಷವಾಗಿ ನೀತಿಯನ್ನು ಬೋಧಿಸುವುದು : (ಕಳ್ಳಕೋಗಿಲೆ, ಪೆದ್ದ ಮರಿಗಳು, ಸಂನ್ಯಾಸಿ ಬೆಕ್ಕು, ಲೋಕ ಮುಳುಗಿತು, ಬೆಕ್ಕಿಗೆ ಗಂಟೆ, ಆಸೆಬುರುಕ ನಾಯಿ, ಕಾಮಿ ಕುನ್ನಿ ಸ್ನೇಹ), ೩) ಆಟದ ಅಭಿನಯದೊಂದಿಗೆ ಆನಂದ ಪಡೆಯುವುದು : (ಬನ್ನಿರಿ ಗೆಳೆಯರೆ, ಕೋಲು ಕುದುರೆ, ಪಂಚಮಿಹಬ್ಬ, ಕುರಿಮರಿ ಬೇಕೆ), ೪) ವ್ಯಕ್ತಿ-ವೃತ್ತಿಯ ಚಿತ್ರಣದೊಂದಿಗೆ ಆತ್ಮೀಯವಾಗಿ ಅವರ ಬಗ್ಗೆ ಸಹಜವಾದ ಸಹಾನುಭೂತಿ ಮೊಳೆಯಿಸುವುದು : (ಅಂಚೆಯ ಅಣ್ಣ, ಬಲೂನುವಾಲಾ, ದುರಗಮುರಿಗಿ, ಕುರುಡ ಹೆಳವರ ಜೋಡಿ), ೫) ನಿಸರ್ಗಪ್ರೇಮದಿಂದ ಉಲ್ಲಾಸಗೊಂಡು ಅದರೊಡನೆ ಒಂದಾಗುವದು : (ಹಾಲುಜೇನು, ಮಿನುಗುವ ಚಿಕ್ಕೆ, ಚಂದಿರನೇತಕೆ ಓಡುವನಮ್ಮಾ, ವಸಂತಮಾಸ,) ಇದೂ ಅಲ್ಲದೆ ಯಾವುದೇ ಒಂದು ವಸ್ತುವಿನ ಎರಡೂ ಬದಿಗಳಿಗೆ ಬೆಳಕು ಬೀರಿ ಹೊಸ ತಿಳುವಳಿಕೆಯನ್ನು ನೀಡಬಲ್ಲ 'ಅಂಚೆಯ ಡಬ್ಬಿ', 'ಕೇಳೋ ತಮ್ಮಾ', 'ಬಾ ಬಾ ಗಿಳಿಯೇ', 'ಕೇಳೋ ಗೆಳೆಯಾ', 'ಕಳ್ಳ ಬೆಕ್ಕು', 'ಕೇಳೋ ಕುವರಾ'ದಂತಹ ಪದ್ಯಗಳೂ ಇಲ್ಲಿರುವುದು ಒಂದು ವಿಶೇಷ.

ವಸ್ತುವಿಗೆತಕ್ಕಂತೆ ಭಾವ, ಭಾಷೆ, ಲಯ, ನಾದ, ನಡಿಗೆ, ಧಾಟಿಗಳಲ್ಲಿಯ ಅಪರೂಪದ ಹೊಂದಾಣಿಕೆಯಿಂದ ಇಲ್ಲಿಯ ಅನೇಕ ಪದ್ಯಗಳು ಮಕ್ಕಳ ಮನಸ್ಸನ್ನು ಸಹಜವಾಗಿ ಆಕರ್ಷಿಸಬಲ್ಲವು. 'ಬಾರೋ ಬಾರೋ ಮಂಗಣ್ಣ'ದಲ್ಲಿ ಅಣಕಿಸುವ ಧಾಟಿಯಿದ್ದರೆ 'ಅಳಿಲಿ'ನ ಚುರುಕುತನಕ್ಕೆ ತಕ್ಕ ಚಿಕ್ಕ ಚಿಕ್ಕ ನುಡಿ, ಪ್ರಾಸಗಳನ್ನೊಳಗೊಂಡು ಕಣ್ಣ ಮುಂದೆಯೇ ಓಡಾಡಿದಂತೆ ಭಾಸವಾಗುತ್ತದೆ.

ಸರಸರ ಓಡಿ
ಗಿಡಮರವೇರಿ
ಮಾಡುವಿ ಏನನು ಮುದ್ದುಮರಿ?

ಬಿರಿಬಿರಿ ಕಣ್ಣನು
ಬಿಡುತಲಿ ನೀನು
ನೋಡುವುದೇನನು ಇಣಚಿಮರಿ?

'ಅಂಚೆಯಣ್ಣ'ನ ಅತ್ಮೀಯ ಧಾಟಿ ಮನಸೆಳೆದರೆ, 'ಹಾಲು-ಜೇನು'ದಲ್ಲಿ ಮುಗಿಲಿಗೆ ಹಾರುವ ತೇನೆ ಹಕ್ಕಿಗೆ

ಚಂದ್ರನ ಮನೆಯ ಚಿಕ್ಕೀಮಕ್ಕಳು
ಮಲಗಲು ಜೋಗುಳ ಹಾಡುವಿಯೇನು?

ಎಂಬ ಮುದ್ದು ಪ್ರಶ್ನೆ ತಾಯಿ-ಮಗುವಿನ ವಾತ್ಸಲ್ಯವನ್ನು ಮುಗಿಲಿನಲ್ಲಿಯೂ ಕಾಣುವಂತೆ ಮಾಡುತ್ತದೆ. 'ಮಿನುಗುವ ಚಿಕ್ಕಿ'ಯನ್ನು ಕುರಿತು

ಕೆಳಗಡೆ ಬೀಳುವ
ಅಂಜಿಕೆ ಇಲ್ಲದೆ
ಎಲ್ಲಿಯ ಆಸರೆ ಪಡೆದಿರುವೆ?

ಎಂಬ ಸೋಜಿಗ,

ಚಂದಿರನೇತಕೆ ಓಡುವನಮ್ಮಾ
ಮೋಡಕೆ ಹೆದರಿಹನೆ?

ನಾನೂ ಓಡಲು ತಾನೂ ಓಡುವ
ಚೆನ್ನಿಗ ಚಂದಿರನು

ಎನ್ನುವಲ್ಲಿಯ ಹರ್ಷಬೆರೆತ ಮುಗ್ಧತೆ, ಇಂಥ ಅನೇಕ ಉದಾಹರಣೆಗಳನ್ನು ಕೊಡಬಹುದಾಗಿದೆ.

'ಅಂಚೆಯಣ್ಣ', 'ಬಲೂನುವಾಲಾ' ಈ ಕವನಗಳ ವ್ಯಕ್ತಿಗಳು ತಾವೇ ಮಕ್ಕಳನ್ನು ಪ್ರೀತಿಯಿಂದ ಸಂಧಿಸಿ ತಮ್ಮ ವೃತ್ತಿ ಪರಿಚಯವನ್ನು ಕ್ರಿಯಾತ್ಮಕವಾಗಿ ಮಾಡಿಕೊಟ್ಟರೆ 'ದುರಗಮುರುಗಿ'

ಮಕ್ಕಳ ಕಣ್ಣಿನಿಂದ ಕಂಡು ಹೂಬಾಹೂಬೆ ಬಣ್ಣಿಸಿದಂತೆ ಮನಸ್ಸಿಗೆ ನಾಟುತ್ತದೆ. ಕೊನೆಯ ನುಡಿಯಲ್ಲಿ ಈ ದೃಶ್ಯದಿಂದ ಮಕ್ಕಳ ಕೋಮಲ ಮನಸ್ಸಿನ ಮೇಲಾದ ಪರಿಣಾಮವನ್ನು ಕಣ್ಣಮುಂದೆ ಕಟ್ಟಿದಂತಾಗಿ ಸಹಾನುಭೂತಿಯನ್ನು ಚಿಮ್ಮಿಸುತ್ತದೆ.

ಓಣಿಯ ಮಕ್ಕಳು ಬಂದಾರ
ಬಿರಿ ಬಿರಿ ಕಣ್ಣನು ಬಿಟ್ಟಾರ.,
ದುರಗ ಮುರಗೀ ಮೈ ಮ್ಯಾಲೀನ
ಬರೆಗಳ ನೋಡಿ ಮರುಗ್ಯಾರ

ಒಂದೇ ವಸ್ತುವನ್ನು ಇಬ್ಬರು ಕವಿಗಳು ಹೇಗೆ ಬೇರೆ ಬೇರೆ ಬಗೆಯಲ್ಲಿ ನಿರ್ವಹಿಸಬಲ್ಲರು ಎಂಬುದಕ್ಕೆ ಹಿರೇಮಠರ 'ಕೋಲು ಕುದುರೆ', 'ಕುರುಡ ಹೆಳವರ ಜೋಡಿ' ಹಾಗೂ 'ಕುರಿಮರಿ ಬೇಕೆ ?' ಪದ್ಯಗಳನ್ನು ಸಿದ್ಧಯ್ಯ ಪುರಾಣಿಕರ 'ನನ್ನ ಕುದುರೆ', ಕಯ್ಯಾರ ಕಿಂಞಣ್ಣ ರೈ ಅವರ 'ಕುಂಟ ಮತ್ತು ಕುರುಡ' ಹಾಗೂ ಎಂ.ಡಿ. ಗೋಗೇರಿ ಮತ್ತು ಮೇವುಂಡಿಯವರ 'ಕುರಿಮರಿ ಬೇಕೆ?' ಪದ್ಯಗಳೊಡನೆ ಹೋಲಿಸಿನೋಡಬಹುದು. 'ಕುರುಡ ಹೆಳವರ ಜೋಡಿ' ಪದ್ಯದಲ್ಲಿ ಕುರುಡ ಹಾಡುವ ಹಾಗೂ ಹೆಳವನು ಕತೆ ಹೇಳುವ ಕಲ್ಪನೆಯೂ ಸೇರಿಕೊಂಡು ಅವರ ಪರಸ್ಪರ ಸಹಕಾರಕ್ಕೆ ಹೆಚ್ಚಿನ ಮೆರುಗನ್ನು ತಂದಿದೆ. ಹಿರೇಮಠರ 'ಕುರಿಮರಿ'ಯ ಛಂದಸ್ಸು ಕುರಿಮರಿಯ ನಡಿಗೆಯಂತೆ (೪+೪-೫ ಮಾತ್ರೆಗಳ ದ್ವಿಪದಿ) ಚಿಕ್ಕ ಮಗುವಿನ ತುಂಟತನದ ವಿವಿಧ ಚೇಷ್ಟೆಗಳ ಮೋಡಿಯನ್ನು ಲವಲವಿಕೆಯಿಂದ ಭಾವಾಭಿನಯಗೊಳಿಸುವಲ್ಲಿ ಹೆಚ್ಚು ಯಶಸ್ವಿಯಾಗುತ್ತದೆ. ಮೇವುಂಡಿ ಮಲ್ಲಾರಿಯವರ ಇದೇ ಹೆಸರಿನ ಪದ್ಯ ನಾಟಕೀಯತೆಯಿಂದ ತನ್ನ ಸೊಗಸನ್ನು ತಕ್ಕ ಮಟ್ಟಿಗೆ ಉಳಿಸಿಕೊಂಡಿದ್ದರೆ, ಗೋಗೇರಿಯವರ ಪದ್ಯ ಐದು ಮಾತ್ರೆಗಳ ಗತಾನುಗತಿಕ ಧಾಟಿಯಲ್ಲಿದ್ದು ಮಗುವಿನ ವೈನೋದಿಕ ಕ್ರಿಯೆಗಳನ್ನು ಕುರಿತು ದೊಡ್ಡವರಿಗೆ ನಿವೇದಿಸಿದಂತಿರುವುದರಿಂದ ಜಡವಾಗಿದೆ.

ಭಾವದಲ್ಲಾಗಲಿ, ಭಾಷೆಯಲ್ಲಾಗಲಿ ಎಲ್ಲೂ ಭಾರವಾಗದಂತೆ ಕಲ್ಪನಾಶಕ್ತಿಯಿಂದ ಸಮೃದ್ಧವಾದ ಈ ಪದ್ಯಗಳನ್ನು ೫ರಿಂದ ೧೨ ವರ್ಷದ ವಯೋಮಾನದ ಮಕ್ಕಳು ತಮಗೆ ತಾವೇ ಹಾಡಿಕೊಂಡು ಆಡಿಕೊಂಡು ನಲಿದಾಡುವುದರಲ್ಲಿ ಸಂದೇಹವಿಲ್ಲ. ಮಕ್ಕಳ ಪಾಲಿಗೆ ಈ ಸವಿಸಂಪತ್ತನ್ನು ನೀಡಿದ ಶ್ರೀ ಹಿರೇಮಠರನ್ನು ನಾನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ. ಶ್ರೀ ಹಡಪದರಂಥ ಹಿರಿಯ ಕಲಾವಿದರು ಈ ಪದ್ಯಗಳ ವಿವಿಧ ಲಹರಿಗಳನ್ನು ತಮ್ಮ ಅಪರೂಪದ ಗೆರೆಗಳಲ್ಲಿ, ಬಣ್ಣಗಳಲ್ಲಿ ಸೆರೆಹಿಡಿದು ಈ ಕಾವ್ಯದ ಮೌಲ್ಯವನ್ನು ಖಂಡಿತವಾಗಿಯೂ ಹೆಚ್ಚಿಸಿದ್ದಾರೆ.

ಇಂಥ ಪುಸ್ತಕಗಳು ನಮ್ಮ ಮಕ್ಕಳ ಕೈಯಲ್ಲಿರುವಂತೆ ನೋಡಿಕೊಳ್ಳುವುದು ಶಿಕ್ಷಕರ ಹಾಗೂ ಪಾಲಕರ ಕರ್ತವ್ಯವಷ್ಟೇ ಅಲ್ಲ, ಅವರಿಗೆ ಸಲ್ಲಿಸಬೇಕಾದ ಋಣವೂ ಕೂಡ.

(೧೯೯೭)

೬೫

## ಪ್ರಶ್ನೆಯಾಗಿಯೇ ಉಳಿದವರು

ನನ್ನ ಆತ್ಮೀಯ ಸ್ನೇಹಿತರೂ ಗಣ್ಯ ಕವಿಗಳೂ ಆದ ಬಿ.ಎ. ಸನದಿಯವರ ಹುಟ್ಟೂರು ಶಿಂದೊಳ್ಳಿಗೆ (ಬೆಳಗಾವಿ ಹತ್ತಿರ) ಕಳೆದ ವರ್ಷ ಹೋದಾಗ ಅವರ ಬಳಗದ ಪರಿಚಯವಾಗಿ ಮನಸ್ಸು ಮುದಗೊಂಡಿತು. ಉರ್ದು ಮನೆಮಾತಾದರೂ ಇವರೆಲ್ಲರಿಗೂ ಕನ್ನಡದ ಬಗ್ಗೆ ವಿಶೇಷ ಅಭಿಮಾನ. ತಮ್ಮಂದಿರೆಲ್ಲ ಪದವೀಧರರಾಗಿ ಶಿಕ್ಷಣ ಕ್ಷೇತ್ರದಲ್ಲಿ ಕೆಲಸ ಮಾಡುತ್ತ ಸಾಹಿತ್ಯಾಭಿರುಚಿಯನ್ನು ಬೆಳೆಸಿಕೊಂಡು ಬಂದಿರುವುದಲ್ಲದೆ ಗ್ರಾಮದಲ್ಲಿ ಹಿತಕರವಾದ ಸಾಂಸ್ಕೃತಿಕ ವಾತಾವರಣಕ್ಕೂ ನೆರವಾಗುತ್ತಿದ್ದಾರೆ.

ಶ್ರೀ ಎ.ಎ. ಸನದಿ ಮೊದಲ ಕವನ ಸಂಗ್ರಹ 'ಮಜಾಪ್ರಭುತ್ವ'ದಲ್ಲಿಯೇ ತಮ್ಮ ಕಾವ್ಯಾಸಕ್ತಿಯನ್ನು ಸ್ಫುಟಗೊಳಿಸಿದ್ದರು. 'ಪ್ರಶ್ನೆಯಾಗಿಯೇ ಉಳಿದವರು' ಎಂಬ ಈ ಎರಡನೆಯ ಕೃತಿಯಲ್ಲಿ ಅದನ್ನು ಶ್ರದ್ಧೆಯಿಂದ ಮುಂದುವರಿಸಿರುವುದು ಸಂತೋಷದ ಸಂಗತಿ.

'ಕಂದ ಕೊಡುವ ಸುಖ' ಎಂಬ ವಾತ್ಸಲ್ಯಭಾವದ ಪದ್ಯವೊಂದನ್ನು ಬಿಟ್ಟರೆ ಈ ಸಂಗ್ರಹದ ಎಲ್ಲಾ ಕವನಗಳ ವಸ್ತು ಸಾಮಾಜಿಕ, ಕೆಲಮಟ್ಟಿಗೆ ರಾಜಕೀಯವಾಗಿರುವುದು ಕವಿಯ ಸಾಮಾಜಿಕ ಕಳಕಳಿಗೆ ನಿದರ್ಶನವಾಗಿದೆ. 'ಅಕ್ಷಯ', 'ಮಿತಸಂತಾನ'ದಂಥ ಪ್ರಚಾರ ಪದ್ಯಗಳಲ್ಲಿಯೂ 'ಅಕ್ಷರವೆಂದರೆ ಆರದ ದೀಪ', 'ನನ್ಹಂಗ ನೀವೂ ಆಗಬ್ಯಾಡ್ರಿ ಮಕ್ಕಳ ಭಾಳ ಹಡದ ಸಣ್ಣಿ' ಎಂಬಂಥ ಆಕರ್ಷಕ ನುಡಿಗಳಿವೆ. ಗಾಂಧೀಜಿಯ ಕನಸಿನ ಭಾರತದ ಇಂದಿನ ಸ್ಥಿತಿಗತಿ, ಭಾವೈಕ್ಯದ ಒಲವು ಇಲ್ಲಿಯ ಹೆಚ್ಚಿನ ಕವನಗಳ ವಸ್ತುವಾಗಿದ್ದು ಸಹಜವಾಗಿಯೇ ಅಲಲ್ಲಿ ವಿಡಂಬನೆಯೂ ಕಾಣಸಿಕೊಂಡಿದೆ. 'ನೀರುಬಂತು', 'ನನ್ನ ಕೋಳಿ', 'ಪ್ರಶ್ನೆಯಾಗಿಯೇ ಉಳಿದವರು' ಮೊದಲಾದವು ಇದಕ್ಕೆ ಉದಾಹರಣೆಯಾಗಿವೆ. 'ಜಾಲಿ' ಗಿಡದ ರಕ್ಷಕ ಗುಣವನ್ನು ಗುರುತಿಸಲಾಗಿದೆ. 'ಮಳೆ', 'ಗೆಳೆತನ', 'ಸಸ್ಯಾಹಾರಿ'ಯಂಥ ಹನಿಗವನಗಳು ಚುರುಕಾಗಿವೆ. ವ್ಯಕ್ತಿ ಚಿತ್ರಗಳಲ್ಲಿ ಕವಿಯ ಸಹೃದಯತೆ ಮೇಲುಗೈ ಸಾಧಿಸಿದೆ, 'ನಮ್ಮ ನೆರಮನಿ ಮುದುಕಿ ಅಂತತಿ!' 'ಇದು ಎಂಥಾ ಕಾಲ ಬಂದೈತಿ' - ಇಂದಿನ ಸಾಮಾನ್ಯ ಜೀವನದ ವಾಸ್ತವ ಚಿತ್ರಣ ಗೇಯ ಗುಣದೊಂದಿಗೆ 'ಎಂಥಾ ಕಾಲ' ಪರಿಣಾಮಕಾರಿಯಾಗಿದೆ.

ಶ್ರೀ ಎ.ಎ. ಸನದಿಯವರೇ ತಮ್ಮ ಪತ್ರದಲ್ಲಿ 'ಅಣ್ಣಂದಿರಂತೆ ಬರಹದಲ್ಲಿ ನನಗೆ ಹಿಡಿತ ಸಿಗಲಿಲ್ಲವಾದರೂ ಅಣ್ಣಂದಿರ ಹಾಗೂ ತಮ್ಮ ಪ್ರೇರಣೆಯಿಂದ ನಾನು ಇವುಗಳನ್ನು ಬರೆದಿದ್ದೇನೆ'

ಎಂಬ ಅಳುಕನ್ನು ಸೂಚಿಸಿದ್ದರೂ ಕಾವ್ಯ ರಚನೆಗೆ ಅವಶ್ಯವಾದ ವಿನಯಗುಣದಲ್ಲಿ ಇವರು ಹಿಂದೆ ಬಿದ್ದಿಲ್ಲವೆಂಬುದನ್ನು ಈ ಕೃತಿ ತೋರಿಸುತ್ತದೆ. ಸತತಾಭ್ಯಾಸ ಪ್ರಯತ್ನದಿಂದ ಇವರು ಇನ್ನೂ ಉತ್ತಮ ರಚನೆಗಳನ್ನು ಕೊಡಬಲ್ಲರೆಂಬ ಭರವಸೆಯಿಂದ ಇವರಿಗೆ ಶುಭ ಕೋರುತ್ತೇನೆ.

(೧೯೯೭)

೬೬

## ಹೊಸಿಲಾಚೆ ಹೊಸಹೆಜ್ಜೆ

ಶ್ರೀಮತಿ ಗೀತಾ ವಸಂತ ಅವರ ಈ ಪ್ರಥಮ ಕವನ ಸಂಕಲನಕ್ಕೆ ಮುನ್ನುಡಿ ಬರೆಯುವಲ್ಲಿ ನನಗೆ ಸಂತೋಷವಿದೆ. ಯಾಕೆಂದರೆ ಕಾವ್ಯ ತನ್ನ ಅಭಿವ್ಯಕ್ತಿಯ ಮಾಧ್ಯಮ ಹೌದೆ, ಅಲ್ಲವೆ ಎಂಬ ಬಗ್ಗೆ ಎಳ್ಳಷ್ಟೂ ವಿಚಾರ ಮಾಡದೆ ತಾನೂ ಕವಿಯಾಗಬೇಕೆಂದು ಹೊರಡುವವರ ಸಂಖ್ಯೆ ಇಂದು ಹೆಚ್ಚುತ್ತಿರುವಾಗ, 'ಒದ್ದೆ ನೆಲದಲ್ಲಿ ಹಸಿರು ಮೂಡಿದಷ್ಟು ಸಹಜವಾಗಿ' ಬಂದಿರುವ ಇಲ್ಲಿಯ ಕವನಗಳ ಹಿಂದೆ ಒಂದು ಬಗೆಯ ಅನಿವಾರ್ಯತೆಯಿರುವುದನ್ನು ಯಾರೂ ಗುರುತಿಸಬಹುದು. ಮಲೆನಾಡಿನ ತನ್ನ ಪರಿಸರದ ಗಾಢಮೌನಗಳಿಂದ ಅಂತರ್ಮುಖಿಯಾಗಿ ತನ್ನೊಡನೆ ತಾನೇ ಸಂವಾದಿಸುತ್ತ, ತನ್ನ ತುಡಿತ, ತವಕ, ತಲ್ಲಣಗಳಿಗೆ ಕವಿತೆಯ ರೂಪದಲ್ಲಿ ಇಲ್ಲಿ ಉಸಿರು ನೀಡಲಾಗಿದೆ.

ಹಳ್ಳಿಯ ಸಂಪ್ರದಾಯಸ್ಥ ಕುಟುಂಬದ ಹೆಣ್ಣುಮಕ್ಕಳಿಗೆ ಮನೆಯ ಹೊಸತಿಲು ಒಂದು ಗಡಿರೇಖೆಯಿದ್ದಂತೆ. ಹೀಗಿರುವಾಗ ಗೀತಾ ತನ್ನನ್ನು, ತನ್ನ ಭಾವನೆಗಳನ್ನು ಕವಿತೆಯಲ್ಲಿ ಮುಕ್ತವಾಗಿ ತೆರೆದುಕೊಳ್ಳುತ್ತ 'ಹೊಸಿಲಾಚೆ ಹೊಸ ಹೆಜ್ಜೆ' ಇಡುವ ಸಾಹಸಗೈದಿರುವದು ಸ್ವಾಗತಾರ್ಹ. ಈ ದಿಸೆಯಲ್ಲಿ ಇವರೇ ಮೊದಲನೆಯವಳೆಂದೇನೂ ಅಲ್ಲ. ಆದರೆ ಇಂಥ ಪ್ರಯತ್ನದಲ್ಲಿ ಪ್ರತಿಯೊಬ್ಬರದೂ ಒಂದು ಹೊಸ ಅನುಭವವಾಗಿರುತ್ತದೆ. ಅದರ ಅಭಿವ್ಯಕ್ತಿ ಹೊಸ ರೀತಿಯದಾಗಿದ್ದರೆ ಅದು ಇನ್ನಿಷ್ಟು ಗಮನಾರ್ಹವೆನಿಸಿಕೊಳ್ಳುತ್ತದೆ.

ಇಲ್ಲಿ ಮೊದಲ ಕವಿತೆಯೇ ಇಡೀ ಸಂಗ್ರಹದ ಹಿನ್ನಲೆ-ಮುನ್ನೆಲೆಗಳ ಒಟ್ಟು ಪ್ರತೀಕವಾಗಿ ನಾಟಕೀಯ ಅಭಿವ್ಯಕ್ತಿಯಿಂದ ಓದುಗರ ಗಮನ ಸೆಳೆದುಕೊಳ್ಳುತ್ತದೆ.

ಚಿಕ್ಕಂದಿನಿಂದಲೂ ಒಲೆ ಮುಂದೆ ಅಜ್ಜಿ, ಅಮ್ಮ
ಬೇಯುತ್ತ, ಕುದಿಯುತ್ತ
ಜೀವಂತಿಕೆಯ ಹಿಂಡಿ, ಹಿಪ್ಪೆ ಮಾಡಿ
ನೀರೆರೆದು ಬೆಳೆಸಿದ
ಕೋಮಲ ಕನಸುಗಳ ತರಕಾರಿಯಂತೆ
ಕಚ ಕಚನೆ ಕಡಿದು
ಬದುಕ ಇಡಿಯಾಗಿ

ಅರೆದರೆದು ಸವೆದು
ಬಡಿಸಲು ಸಜ್ಜಾಗುವ ಅದೇ ದಿನಚರಿಯ
ಕಂಡು ಕೇಳಿದೆ; ಏನಿದೆಯಮ್ಮಾ
ಅಡುಗೆಮನೆಯ ಆಚೆ ?

ಬೇರೆ ಹವ್ಯಾಸಗಳಿಗೆ ಆಸ್ಪದವೇ ಇಲ್ಲದ, ಹೆಣ್ಣಿನ ಬಂಧಿತ ಜೀವನದ ದಾರುಣತೆಯನ್ನು ಇಲ್ಲಿಯ ಪ್ರತಿಯೊಂದು ಪದವೂ ಸಮರ್ಥವಾಗಿ ಸೆರೆಹಿಡಿದಿದೆ. ಅದಕ್ಕೆ ಅಮ್ಮ ಕೊಡುವ ಉತ್ತರದಲ್ಲಿ ಗಂಡಸರ ಅಟ್ಟಹಾಸವನ್ನು ವ್ಯಂಗ್ಯವಾಗಿಯೇ ಸೂಚಿಸಲಾಗಿದೆ. ತೆರೆದ ಕಿಟಕಿಯಾಚೆಗೆ ಕಾಣುವ ನಿಸರ್ಗದ ದೃಶ್ಯಗಳೆಲ್ಲ ಸ್ವಾತಂತ್ರ್ಯದ ಸಂಭ್ರಮದ ಪ್ರತೀಕವಾಗಿ ಗೋಚರಿಸುತ್ತವೆ:

ಇಲ್ಲ ಅಮ್ಮ, ಇನ್ನು ಸಾಧ್ಯವಿಲ್ಲ
ನಾನು ಹೊಸಿಲು ದಾಟೇ ದಾಟುತ್ತೇನೆ
ಬಯಲ ತುಂಬ ಬದುಕುತ್ತೇನೆ.

ಎಂಬ ನಿರ್ಧಾರದಲ್ಲಿ ಆಧುನಿಕ ಪ್ರಜ್ಞೆಯಿದೆ. ಹೊಸಿಲು ದಾಟಿ ಹೊರಬರುವ ಈ ಕ್ರಿಯೆ ಸ್ತ್ರೀಯ ವಿಶಿಷ್ಟ ಸಂವೇದನೆಯಿಂದ ಕೂಡಿದ್ದು, ಈ ಭಾವಕ್ಕೆ ವಸ್ತು ಪ್ರತಿರೂಪವನ್ನು ನಿಸರ್ಗದಲ್ಲಿಯೇ ಕಂಡು ಚಿತ್ರಿಸುವ ಕವಿತೆಗಳೇ ಇಲ್ಲಿ ಹೆಚ್ಚಿನ ಸಂಖ್ಯೆಯಲ್ಲಿವೆ. ಉದಾಹರಣೆಗೆ 'ಅತ್ತುಬಿಡು ಆಗಸವೆ' ಕವಿತೆಯನ್ನೇ ನೋಡಬಹುದು. ತನ್ನ ಎದೆಯಾಳದ ದುಗುಡಗಳು ಒತ್ತರಿಸಿ ಬಂದಂತಿರುವ ಕಾರ್ಮೋಡಗಳ ಗುಡುಗಿನಾರ್ಭಟದಲ್ಲಿ ತನ್ನೊಳಗಿನ ಬಂಡಾಯದ ಮಾರ್ದನಿಯನ್ನೇ ಕೇಳಿದಂತಾಗಿ

ಅಯ್ಯೋ! ಹೆಣ್ಣಾಗಿರಬೇಕು ನನ್ನಂತೆ ನೀನೂ
ಮುಸುಕಿನಲ್ಲಿ ನಡೆದರೂ ಭಾವಗಳ ಬಂಡಾಯ
ಕೆಳಗುರುಳಿದ್ದು ಮಾತ್ರ ನಿಸ್ಸಹಾಯ ಕಂಬನಿ!
ಉಕ್ಕುವ ಕಣ್ಣೀರ ವರ್ಷಧಾರೆಯನೆಲ್ಲ
ಅಲ್ಲೇ ತಡೆದಿಡುವ ತವಕ.
..................................................
ಬಿಟ್ಟು ಬಿಡು ಇನ್ನಾದರೂ ನೋವ ನುಂಗಿ
ಬಾರದ ನಗುವ ಹುಚ್ಚು ಹುಚ್ಚಾಗಿ ಆಡುವ ಭ್ರಾಂತಿ
ಅತ್ತು ಬಿಡು ಮನ ಬಿಚ್ಚಿ ಸಿಗಬಹುದು ಶಾಂತಿ

ಬೆಂದ ಮೈ ಮನಸ್ಸುಗಳಿಗೆ ನೆರಳು, ಹಣ್ಣು, ಹೂವು ನೀಡುವ ವೃಕ್ಷ ಜಗದ ಎಲ್ಲ ಸಂತಸದ ಸಂಕೇತವಾಗಿದ್ದು, ಅದನ್ನೀಗ ಕಡಿದುರುಳಿಸಿದ ನೋವನ್ನು ತನ್ನ ಒಲವಿನ ಹುಡುಗನ ನೆನಪಿನೊಂದಿಗೆ ಹಂಚಿಕೊಳ್ಳುತ್ತ

ಹೀಂಗ ಹ್ಯಾಂಗ ಕಡಿದು ಬಿಡ್ತಾರೋ
ಬಲಿತಿರೋ ಭಾವನಾಗಳನ್ನ ?

ಆದರೂ ತನ್ನ ಒಲವಿನಂತೆ ಮಣ್ಣಿನಾಳಕ್ಕಿಳಿದ ಬೇರು ಮತ್ತೆ ಚಿಗುರಿ ಬರುತ್ತದೆಂಬ ಭರವಸೆಯನ್ನು ಜೀವ ತಾಳುತ್ತದೆ. ಕತ್ತಲು ಖಂಡದ ಕಪ್ಪು ಹುಡುಗಿ ಕ್ಲಾರಾ ಈಕೆಯ ಹೃದಯದಲ್ಲಿ ಕವಿತೆಯಾಗಿ ಆವಿರ್ಭಸುವುದಕ್ಕೆ ಮುಖ್ಯ ಕಾರಣ

ಜೀತಕ್ಕೆ ಹಗಲು ಕೊಟ್ಟು ಕೊಟ್ಟು
ಹೆಪ್ಪುಗಟ್ಟಿದ ಕಪ್ಪು ನೋವು
ಕೊಡವಿನಿಂತ ನಿನ್ನ ಸದೃಢ ಬಾಹುಗಳು
ಆತ್ಮವಿಶ್ವಾಸದ ನಡಿಗೆ
ದಿಗಂತದೆಡೆ ಕನಸು ತುಂಬಿದ ನೋಟ
.........................................
ಎಲ್ಲವೂ ನನ್ನೆದೆಯೊಳಗೆ
ಕಪ್ಪು ಬಿಳುಪಿನ ಚಿತ್ರ ಬಿಡಿಸಿದೆ.

'ಹೀಗೊಂದು ಮನೆವಾರ್ತೆ'ಯಲ್ಲಿಯೂ ಇಂಥ ಭಾವದ ತೀವ್ರತೆಯನ್ನೇ ಕಾಣಬಹುದು, 'ಅಬಲೆಯೆನ್ನುವ ಬಲೆಯ ತೂರಿಬರಬೇಕು', 'ಶೋಕೇಸಿನ ಬೊಂಬೆಗಳಿಗೆ ಜೀವಕೊಟ್ಟು ಜೀವಂತವಾಗಿ ಬದುಕಬೇಕು'.

ಇಂಥ ಜೀವನದ ಪ್ರೇಮದ ಹಂಬಲ, ಪ್ರೀತಿಯ ಬಯಕೆ ಇನ್ನುಳಿದ ಕವಿತೆಗಳ ಸ್ಥಾಯಿಭಾವ. ನಿರಂತರ ಹುಡುಕಾಟದಲ್ಲಿ ಎಂದೂ ನಿಲುಕದ ಇನಿಯನಾಗಿ 'ಕಾಡುವ ಗೆಳೆಯ' ಅಂಥಿಂಥವನಲ್ಲ

ಸ್ವರ್ಗ ಮರ್ತ್ಯ ಪಾತಾಳ ಪ್ರಜ್ಞೆ ದಾಟಿ
ಭಾವ ಮೀರಿದ ಅನುಭಾವದೊಳೆನ್ನ
ಜೀಕಿ ಜೋಗುಳ ಹಾಡಿದವನೇ
ಕಲ್ಪನೆ ಮಾತ್ರವೇ ನೀನು ?

'ಅಮ್ಮನೆಂದಳು ಒಂದಿರುಳು', 'ಕಣ್ತುಂಬಿ ನಿನ್ನದಲ್ಲ ಈ ಮನೆಯೂ', 'ಮನೆಮನೆಯ ಕದ ತಟ್ಟುವ ಹಣೆಬರಹ ತಪ್ಪದು' ಎಂಬ ಆಕೆಯ ನುಡಿ ಸಿಡಿಲಿನಿಂತೆ ಘಾತಿಸಿತು. ಅವನ ಮನೆಯ ಗೋಡೆಗಳು ಅಪರಿಚಿತ ನಗೆ ನಕ್ಕರೂ 'ತೆರೆದುಕೊಂಡವು ಕಿಟಕಿಗಳು ಮೆಲ್ಲ ಮೆಲ್ಲಗೆ'. ಆ ಮನೆಯೊಡನೆ ಮನವೂ ಬೆಸೆಯಿತು. ಆ ಕ್ಷಣದ ಅನುಭವ ಸಾಮಾನ್ಯವಾದದ್ದಲ್ಲ.

ಬಿಚ್ಚಿಕೊಂಡವು ಥಟ್ಟನೆ ಜೋಡಿ ಬಾಗಿಲು
ವ್ಯಕ್ತದಿಂದ ಅವ್ಯಕ್ತಕ್ಕೆ.

ಪ್ರೇಮಿಯ ಎದೆಯಾಳದ ಕನಸುಗಳು 'ನಾದವಾಗದೇ, ರೂಪವಾಗದೇ ಕವನವಾಗದೇ ಕನಲು'ವ ಸ್ಥಿತಿ 'ಕನಸಿ'ನಲ್ಲಿ ಕಾಣಿಸಿಕೊಳ್ಳುತ್ತದೆ. ಬಿರುಗಾಳಿಯ ರಭಸಕ್ಕೆ ಗೂಡೊಳಗಿನ ಕನಸುಗಳು ದಿಕ್ಕಾಪಾಲಾಗಬಹುದು. ಆದರೆ ಮನಸ್ಸು ದೃಢವಾಗಿ ಹೇಳಿಕೊಳ್ಳುತ್ತದೆ:

ಬಿರುಗಾಳಿಗೇನು ಗೊತ್ತು
ಬೀಜವಾಗಿ ಮೊಳೆಯುತ್ತಲೇ ಇರುವ
ಸೃಷ್ಟಿಯ ನಿರಂತರತೆ.

ಪ್ರೀತಿಯೇ ಬದುಕಾಗಿ ಬಿಟ್ಟಾಗ ಮತ್ತೇನೂ ಬೇಕಾಗುವುದಿಲ್ಲ. ನಲ್ಲನಿಗಾಗಿ ತಾನು ತೆರೆದುಕೊಳ್ಳುವ ಪ್ರತಿಕ್ಷಣದಲ್ಲಿಯೂ ತನ್ನ ಬದುಕಿನ ಜೀವಂತಿಕೆಯನ್ನು ಕಂಡುಕೊಳ್ಳುವ ಪ್ರೇಮದ ತೀವ್ರತೆ ಇಲ್ಲಿಯ ಕೆಲವು ಕವನಗಳಲ್ಲಿ ಅಭಿವ್ಯಕ್ತಿ ಪಡೆದಿದೆ. ಅಂತೆಯೇ ವಿರಹದ ತಲ್ಲಣವನ್ನು ತೀರ-ಅಲೆಗಳ ಪ್ರತಿಮೆಯಲ್ಲಿ ಅರ್ಥಪೂರ್ಣವಾಗಿ ಕೆತ್ತಲಾಗಿವೆ ('ಕಾಡುತ್ತದೆ ನನ್ನ')

ಸಾವಿರ ಸಾವಿರ ತೆರೆಗಳು ಚುಂಬಿಸಿ
ಸರಿದು ಹೋಗುತ್ತವೆ.....
ಕೊನೆಗೂ ಒಂಟಿಯಾಗಿ ನಿಂತ
ತೀರ ಕಾಡುತ್ತದೆ.
ಅಲೆ ಅಲೆದರೂ ತೀರದ ಪ್ರಣಯಿನಿಯ
ವಿರಹ ಕಾಡುತ್ತದೆ.
('ತೀರದ' ಶಬ್ದದಲ್ಲಿರುವ ಶ್ಲೇಷೆಯನ್ನು ಗಮನಿಸಿ)

'ಪ್ರೀತಿಯ ಎಳೆಗಳ ಹುಡುಕಾಟ'ದ ಸಂಕೀರ್ಣ ಚಿತ್ರಗಳಲ್ಲಿಯೂ ಸರಳತೆಯಿದೆ. ಭಾವುಕ ಬದುಕಿನ ಗೂಡಾಚೆ ಕಾದಾಡುವದು ಅನಿವಾರ್ಯವೆನಿಸಿದಾಗ ಕನಸು ಮರಿಗಳನ್ನು ಹದ್ದುಗಳಿಂದ ಕಾಪಾಡಲು ದಟ್ಟ ಪ್ರೀತಿ ದಿಟ್ಟತನದಿಂದ ನುಡಿಯುತ್ತದೆ:

ಆದರಾಗಲಿ ಪ್ರಳಯ
ನಮ್ಮ ಕನಸುಗಳ ಬದುಕಿಸೋಣ.

ಇಂಥ ಕವನಗಳ ಮಗ್ಗುಲಲ್ಲಿಯೇ ಬಾಳ ಮುಂಜಾವು ಹಾಗೂ ಸಂಜೆಯ ('ಬೆಳಗು ಸಂಜೆ') ಚಿಂತನೆಯಿದೆ. 'ಒಳಗೆಲ್ಲೋ ಸುಳಿವ ಬೆಂಕಿ'ಯ ಹಾಗೂ ಸುತ್ತಲೂ ಸೌಂದರ್ಯವಿದ್ದರೂ 'ಬದುಕಿನ ಸುತ್ತ ಗೋಡೆ'ಗಳಿರುವ ಅರಿವಿದೆ. ಕೊನೆಗೂ 'ನಾನು ನಾನಾಗಲೇ ಇಲ್ಲ' ಎಂಬ ಹೆಣ್ಣಿನ ಬದುಕಿನ ಸಾರ್ವತ್ರಿಕ ನೋವನ್ನು ತೋಡಿಕೊಳ್ಳಲಾಗಿದೆ. ತನ್ನವರಿಗೆ ಬದುಕ ಮುಡಿಪಿಟ್ಟ ಆದರೆ 'ನನ್ನೊಳಗಿನ ತಳಮಳ ಅರಿಯದೆ', 'ನನ್ನೊಳಗೆ ಹೊಸ ಬೆಳಕು ಮೂಡಿಮುದ ನೋಡದೆ' ಹೊಸಿಲ ಬಳಿ ದೀಪ ಹಚ್ಚುತ್ತ ತಣ್ಣಗಿರುವ 'ಅಮ್ಮ'ನ ವ್ಯಕ್ತಿ ಚಿತ್ರದಲ್ಲಿ ಅನುಕಂಪದ ಅಲೆಗಳಿವೆ. 'ಸಂಜೆ ಸರಕಲ್ಲ ಬದುಕು' ಕವಿತೆಯಲ್ಲಿ ಮಣ್ಣು ಮಡಿಕೆಯಾಗುವ ಕ್ರಿಯೆಯ ಪೂರ್ಣ ಪ್ರತಿಮೆಯ ಜೊತೆಗೆ 'ಜೀವ ಮಣ್ಣಾಗುವ ಮುನ್ನ ಸೃಜಿಸಿದ ಸುಂದರ ಕಲಾಕೃತಿ'ಯಾಗಿ ಬದುಕನ್ನು ಭಾವಿಸುವ ದರ್ಶನವಿದೆ. ವ್ಯಕ್ತಿಗೌರವದ ಸಶಕ್ತ ಚಿತ್ರಣ 'ಸರ್, ನೀವೆಂದರೆ....?'

ದೇಶದ ಸ್ಥಿತಿ-ಗತಿಯಲ್ಲಿ ಪರದೇಸಿಗಳಾಗಿಯೇ ಉಳಿದ ಬಡವರ ದಾರುಣ ಚಿತ್ರ 'ನಿಂಗೊತ್ತೇ ನಿಂಗಿ'ಯಲ್ಲಿ ಓದುಗರ ಮನಸ್ಸು ಕಲಕುವಂತಿದೆ. ಹಾಗೆಯೇ ತನ್ನೆಲ್ಲ ನೋವು ನಲಿವಿನೊಂದಿಗೆ 'ಹೂವು-ಹುಡುಗಿ'ಯ ಚಿತ್ರ ಕಣ್ಣಮುಂದೆ ಕಟ್ಟಿ ಬಿಡುತ್ತದೆ :

ಮುರುಕು ತಟ್ಟೆಯಲಿವಳ ಮೃದು ಮನ ನರಳುತ್ತಲೇ ಇದೆ
ಹರಕು ಬುಟ್ಟಿಯಲ್ಲಿ ಹೊಸ ಹೂವು ಅರಳುತ್ತಲೇ ಇದೆ.

'ಸ್ತ್ರೀವಾದಿ'ಯ ಬಿಂಕು-ಬಿಗುಮಾನದ ಸೋಂಕಿಲ್ಲದೆ ಹೆಣ್ಣಾಗಿ ತನ್ನನ್ನು ತೀವ್ರವಾಗಿ ಕಾಡಿದ ಭಾವನೆಗಳ ಪ್ರಾಮಾಣಿಕ ಅಭಿವ್ಯಕ್ತಿಯನ್ನು ಮನಮುಟ್ಟುವಂತೆ ನೀಡಿದ ಈ ಕವಿತೆಗಳನ್ನು ಓದುಗರು ಅಷ್ಟೇ ಮುಕ್ತ ಮನಸ್ಸಿನಿಂದ ಸ್ವಾಗತಿಸುತ್ತಾರೆಂದು ಆಶಿಸಿದ್ದೇನೆ. ಶ್ರೀಮತಿ ಗೀತಾ ವಸಂತರ ಹೊಸ ಹೆಜ್ಜೆಗಳು ಕಾವ್ಯ ಕಲೆಯ ಕಸುಬುಗಾರಿಕೆಯಿಂದ ಇನ್ನಷ್ಟು ದೃಢವಾಗಿ ನೆಲೆಯೂರುತ್ತ ಜೀವನಾನುಭವದ ವೈವಿಧ್ಯಕ್ಕೆ ತಮ್ಮನ್ನು ತೆರೆದುಕೊಳ್ಳಲೆಂದು ಹಾರೈಸಿ ಶುಭ ಕೋರುತ್ತೇನೆ.

(೧೯೯೯)

## ೬೭

# ನೆನಪುಗಳು ಸಾಯುವದಿಲ್ಲ

'ಎರಡು ಸೆಲೆ ಒಂದು ನೆಲೆ' (೧೯೮೨)ಯಲ್ಲಿ ತಮ್ಮ ಕಾವ್ಯದ ನೆಲೆಯನ್ನು ಕಂಡುಕೊಂಡು ಭರವಸೆ ಹುಟ್ಟಿಸಿದ ಕವಿ ಚನ್ನಪ್ಪ ಕಟ್ಟಿ, 'ಇಂಡಿಯಾದಲ್ಲಿ' (೧೯೯೩) ಸಂಕಲನದ ಮೂಲಕ ಖಚಿತವಾದ ಚಿಂತನಕ್ರಮವನ್ನು, ಜೀವನಪ್ರೀತಿಯನ್ನು, ನವಿರುಹಾಸ್ಯದ ಜೀವಂತಿಕೆಯನ್ನು ಸಾಧಿಸುತ್ತ, ಪ್ರಸ್ತುತ ಸಂಕಲನದಲ್ಲಿ ಕನಸಿಲ್ಲದೆ ಜೀವನವಿಲ್ಲವೆಂಬುದನ್ನು ವಾಸ್ತವದ ಅರಿವಿನಿಂದಲೇ ಅಭಿವ್ಯಕ್ತಿಸುವ ಬೆಳವಣಿಗೆಯ ಹಂತವನ್ನು ತಲುಪಿರುವುದು ನಿಜಕ್ಕೂ ಅಭಿನಂದನೀಯ.

"ನೆನಪುಗಳು ಸಾಯುವುದಿಲ್ಲ" ಎಂಬುದು ಅರ್ಥಪೂರ್ಣವಾಗಿದೆ. ನೆನಪು ಸತ್ತರೆ ಜೀವನವಿಲ್ಲ, ಕಾವ್ಯವಿಲ್ಲ, ಏನೂ ಇಲ್ಲ. ಜೀವಂತಿಕೆಯಿಂದ ಬಾಳುವವನ ಜೊತೆಗೆ ಅವೂ ಜೀವಂತವಾಗಿರುತ್ತವೆ. ಕವಿ ತನ್ನ ಸ್ಮೃತಿಕೋಶವನ್ನು ಜೋಪಾನವಾಗಿ ಬಳಸಿಕೊಳ್ಳಬೇಕಾಗುತ್ತದೆ. ಯಾಕೆಂದರೆ ನೆನಪುಗಳ ಹಿಂದೆ ಒಂದು ಅನುಭವವಿರುತ್ತದೆ. ಕಾಲಕಾಲಕ್ಕೆ ಆ ಅನುಭವದ ಅರ್ಥ ಆಳವಾಗುತ್ತ. ಹೊಸ ಅನುಭವದೊಂದಿಗೆ ವಿಸ್ತಾರಗೊಳ್ಳುತ್ತ, ಜೀವನವನ್ನೆಲ್ಲ ವ್ಯಾಪಿಸಿಕೊಳ್ಳುತ್ತದೆ. ಸಂದರ್ಭಾನುಸಾರ ಅದಕ್ಕೊಂದು ಆಕಾರ ನೀಡುವ ಕಾರ್ಯ ಕಾವ್ಯರಚನೆಯ ಮೂಲಕ ಮುಂದುವರಿಯುತ್ತದೆ.

"ನೆನಪುಗಳು ಸಾಯುವುದಿಲ್ಲ" ಕವಿತೆಯ ಒಂದೊಂದು ನುಡಿಯಲ್ಲಿ ಒಂದೊಂದು ಪ್ರತಿಮೆಯ ಮೂಲಕ ಅಜ್ಜಿಯ ಸೆರಗು, ಮಣ್ಣಪದರು, ಹೂಗಂಪು, ಸೀರೆ ನೆರಿಗೆ - ಕವಿ ಅದನ್ನು ಕಂಡರಿಸುತ್ತ ಹೋಗಿರುವುದು ತುಂಬಾ ಚೇತೋಹಾರಿಯಾಗಿದೆ:

ನೆನಪುಗಳು ಸಾಯುವುದೇ ಇಲ್ಲ
ಸದಾ ಉಳಿದುಕೊಂಡೇ ಇರುತ್ತವೆ
ನನ್ನವ್ವ ತಟ್ಟುವಾಗ ಕುರುಳು
ಅಲ್ಲಿ ಮೂಡಿದಂತೆ ಅವಳ ಬೆರಳು.

ಇಡೀ ಒಂದು ಜೀವನದ ಆತ್ಮೀಯ ಸಂದರ್ಭವನ್ನು ಭಾವಸಾಹಚರ್ಯದೊಡನೆ ತುಂಬ ಯಶಸ್ವಿಯಾಗಿ ಈ ಕವಿತೆಯಲ್ಲಿ ಸೆರೆಹಿಡಿಯಲಾಗಿದೆ.

ಹಾಗೆ ನೋಡಿದರೆ ನೆನಪು ಕನಸಿಗೆ ದಾರಿ ಮಾಡಿಕೊಡುತ್ತದೆ. ಆ ಕನಸು ಇಲ್ಲಿಯ ಬಹುತೇಕ ಕವಿತೆಗಳ ಸ್ಥಾಯಿಯಾಗಿರುವಂತಿದೆ. ಸಹಜ ಕನಸಲೋಕವ ತೊರೆದು ತಪದ ಲೋಕದಲ್ಲಿ ಕಾಲಿಟ್ಟ 'ಕನಸಬೇಕು' ಕವಿತೆಯ ನಾಯಕನಿಗ

ಹುತ್ತದೊಳಗಣ ಕತ್ತಲೆಯಲಿ
ಅರಿವುದೆಂತು ಸತ್ಯ ಮಿಥ್ಯ?
ಸತ್ಯ ಮಿಥ್ಯಗಳ ಮಥನದಲಿ
ಹುತ್ತ ಆಯಿತೊಂದೆ ಅವಗೆ ಸತ್ಯ

'ಇವನು' ನಮ್ಮ ನಿಮ್ಮಂತೆ ಎಲ್ಲರಲಿ ಒಂದಾಗಿ ಇದ್ದವನೇ ಎಂಬುದು ಇಲ್ಲಿ ಮುಖ್ಯ. ಆದ್ದರಿಂದ

ಎಲ್ಲ ನನಸಾಗದಿದ್ದರೇನಾಯ್ತು
ಕನಸಲೇಬೇಕು

ಎಂಬುದು ಕವಿಯ ಆಶಾವಾದದ ದ್ಯೋತಕವಾಗಿದೆ.

ನಿಸರ್ಗವೇ ಒಂದು ಕಾವ್ಯವಾಗಿರುವಾಗ ಅದನ್ನು ಕುರಿತು ಬರೆದ ತನ್ನ ಕವನ 'ವ್ಯರ್ಥಾಲಾಪ'ವೆಂಬ ಭಾವನೆ ಒಮ್ಮೊಮ್ಮೆ ಬರುವುದುಂಟು. ಚರಿತ್ರೆಯನ್ನು ಅರ್ಥಮಾಡಿಕೊಂಡು ಅದರಿಂದ ಪಾಠ ಕಲಿಯದೆ 'ಅಂದು ಮಾಡಿದುದನೆ ಇಂದು ಮಾಡ ಹೋಗುವ' ಹುಂಬತನ, ಅದರಿಂದಾಗುವ ಅನಾಹುತ - ಬಾಬ್ರಿ ಮಸೀದಿಯ ಸಂದರ್ಭದಲ್ಲಿ 'ಒಲವ ಝುರಿ'ಗೆ ದಾರಿ ತೋರಿಸಿದೆ. ಒಂದು ಕಾವ್ಯ ಸಂಪ್ರದಾಯವನ್ನೇ ವ್ಯಂಗ್ಯದಂಚಿನಲ್ಲಿ ಹಿಡಿದು ನಿಲ್ಲಿಸುವ ಪ್ರಯತ್ನ 'ಶಬ್ದಗಳು ನಾವು ಬಳಲಿದ್ದೇವೆ'ಯಲ್ಲಿದೆ:

ಆಕಾಶದೆಡೆ ರೆಕ್ಕೆ ಬಡಿದು ಸುಸ್ತಾಗಿದ್ದೇವೆ
ಮಣ್ಣಿಗೆ ಮೈಯಾನಿಸಿ ಒಂದಿಷ್ಟು ಒರಗಲು ಬಿಡಿ.

'ರವಿ ಕಾಣದ್ದು' ಕೂಡಾ ಇದೇ ಧಾಟಿಯದು. ಜನತೆ ಮತ್ತು ಮುಖಂಡರ ನಡುವಿನ ರಾಜಕೀಯ ದುರಂತದ ಚಿತ್ರ 'ನೆಲ ಮುಗಿಲು', 'ಪ್ರೀತಿಯೇ ನಿಜ ಜೀವ'ವೆಂಬುದನ್ನು 'ಸಂ-ವಾದ' ಮನಗಾಣಿಸಿಕೊಟ್ಟರೆ, 'ಭೂ-ಕಂಪ'ದಲ್ಲಿ ಸಮಷ್ಟಿ ಪ್ರಜ್ಞೆಯ ನೈಜ ಸೂಚನೆ ನವಿರು ಹಾಸ್ಯದೊಂದಿಗೆ ಮೂಡಿದೆ. ಬಾನು-ಭುವಿಗಳ ಋಣಾನುಬಂಧ 'ಋಣ'ದಲ್ಲಿ ಅರ್ಥವತ್ತಾಗಿ ಅಭಿವ್ಯಕ್ತಿ ಪಡೆದಿದೆ. ಇಂದಿನ ಜೀವನದ ಭೀಕರ ವಾಸ್ತವತೆಗೆ ಪೇಪರು ಸಂಕೇತವಾದರೆ ಅದನ್ನು ಮಾರಿ ತಾನೆಂದೂ ಸುದ್ದಿಯಾಗದಿರುವ ವಿರೋಧಾಭಾಸ 'ಪೇಪರು ಮಾರುವ ಹುಡುಗ' ಕವನದಲ್ಲಿ ಪರಿಣಾಮಕಾರಿಯಾಗಿದೆ. ಆತ್ಮವಿಶ್ಲೇಷಣೆಗೊಂದು ಉತ್ತಮ ಮಾದರಿ 'ನಮ್ಮೊಳಗಿನ ಗಾಂಧಿಗೆ', 'ಜನಪದರು' ನಕ್ಕು ಅತ್ತು ಹಾಡಾಗಿ ಜನರೆದೆಗೆ ಮತ್ತೆ ನಾಲಗೆಗೆ ಹರಿದಿರುವ ಸತ್ಯ, ಮೋಡ ಮಿಂಚು ಮಳೆಗಳ ರೂಪಕದಲ್ಲಿ ಅಡಗಿದೆ. 'ಕೆಂಡದೂರ ಜನಗಳ' ಜೀವನದ ವೈರುಧ್ಯಗಳು ಹಾಗೂ ಅವುಗಳ ನಡುವಿನ ಸಂಘರ್ಷ 'ಹಂಬಲ'ದಲ್ಲಿ ತುಂಬಿ ನಿಂತಿದೆ. ಒಂದು ವ್ಯಕ್ತಿತ್ವದ ಹಲವು ಮಗ್ಗಲುಗಳನ್ನು ಅಷ್ಟಪೈಲಿನಂತೆ ಹೊಳೆಯಿಸಿ ತೋರುವ

‘ಊರಿಗೆ ಉದಕವಾದವರು’ ಒಂದು ಸಫಲ ಪ್ರಯತ್ನ. ‘ಸಾಯಬೇಕೆಂದವನ ಆತ್ಮ ಚರಿತೆ’ಯಾಗಲಿ, ‘ವ್ಯಷ್ಟಿ-ಸಮಷ್ಟಿ’ಯಾಗಲಿ ವಾಸ್ತವಕ್ಕೆ ಪರಸ್ಪರ ಕನ್ನಡಿ ಹಿಡಿದು ನೋಡಿಕೊಂಡಂತಿವೆ. ಹಾರುವ ಪಕ್ಕಿ - ಮಾನವಲೋಕದ ಗಡಿ ನಿಯಂತ್ರಣ ರೇಖೆಯನ್ನು ಬೆರಳಿಟ್ಟು ತೋರಿಸುತ್ತದೆ.

ವೈವಿಧ್ಯಪೂರ್ಣವಾದ ಈ ಸಂಕಲನದ ಕವನಗಳನ್ನು ಹೊಂದುಹಿಡಿದು ಓದಿದಾಗ ಕೂಡಲೇ ಹೊಳೆಯುವುದೇನು ಎಂಬುದನ್ನು ಕೆಲಮಟ್ಟಿಗೆ ಮೇಲಿನ ಮಾತುಗಳಲ್ಲಿ ಕಾಣಬಹುದು. ಮತ್ತೆ ಮತ್ತೆ ಓದಿದಾಗ, ಇಡಿಯಾಗಿ ಅವುಗಳ ಸತ್ವ ಇನ್ನಷ್ಟು ಶಕ್ತಿ ಪಡೆದುಕೊಂಡು ದಟ್ಟವಾದ ಅನುಭವವವನ್ನು ಕಟ್ಟಿಕೊಡುತ್ತವೆ. ಒಂದು ಚಳುವಳಿಯಲ್ಲಿ ಹಾಯ್ದು ಬಂದಾಗಲೂ ತನ್ನ ಸೃಜನಶೀಲತೆಯ ಸಹಜಗುಣವನ್ನು ಸಂಯಮದಿಂದ ಕಾಪಾಡಿಕೊಂಡು ಮುನ್ನಡೆದ ಚನ್ನಪ್ಪ ಕಟ್ಟಿ ಅವರನ್ನು ಅಭಿನಂದಿಸದೆ ಇರಲಾರೆ.

(೧೯೯೯)

## ೬೮

# ಮಾತು - ಮಾಣಿಕ್ಯ

ನಮ್ಮ ಗ್ರಾಮೀಣ ಪ್ರದೇಶದಲ್ಲಿ 'ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳಾದ'ವರು ಈಗಲೂ ಅಲ್ಲಲ್ಲಿ ಕಂಡುಬರುತ್ತಿದ್ದು ಅಂಥ ಪ್ರತಿಭೆಗಳನ್ನು ಗುರುತಿಸಿ ಪ್ರೋತ್ಸಾಹಿಸುವದು ಸಾಹಿತ್ಯಪರಿಷತ್ತು ಹಾಗೂ ಅಕಾಡೆಮಿಗಳ ತುರ್ತು ಕರ್ತವ್ಯವಾಗಿದೆ. ಸರಿಯಾಗಿ ಓದಲೂ ಬರೆಯಲೂ ಬಾರದ ಬೀಳಗಿಯ ಸಿದ್ದಪ್ಪ ಬಿದರಿ ಎಂಬ ಅಪ್ಪಟ ಜಾನಪದ ಕವಿ ಸೊಗಸಾಗಿ ಹಾಡು ಕಟ್ಟಬಲ್ಲವನಾಗಿದ್ದು ಆ ಹಾಡುಗಳು ಈಗಾಗಲೇ ಮೂರು ಸಂಗ್ರಹಗಳಲ್ಲಿ ಪ್ರಕಟವಾಗಿರುವುದು ಇದಕ್ಕೊಂದು ಉತ್ತಮ ನಿದರ್ಶನವಾಗಿದೆ.

ಹಾಸನದಲ್ಲಿ ನೆರವೇರಿದ ೬೫ನೆಯ ಅ.ಭಾ. ಕನ್ನಡ ಸಾಹಿತ್ಯ ಸಮ್ಮೇಳನದ ನನ್ನ ಅಧ್ಯಕ್ಷ ಭಾಷಣದಲ್ಲಿ ಮೇಲಿನ ಮಾತುಗಳನ್ನು ಹೇಳಿದ್ದೆ. ಅವನ ಕಾವ್ಯವನ್ನು ಓದಿದ್ದೆನಾದರೂ ನಾನು ಅವನನ್ನು ನೋಡಿರಲಿಲ್ಲ. ಕಳೆದ ತಿಂಗಳು ನಾನು ಬೆಳಗಾವಿಗೆ ಹೋದಾಗ ಲಿಂಗಾಯತ ಸಂಶೋಧನ ಕೇಂದ್ರ ಗ್ರಂಥಾಲಯಕ್ಕೆ ಸಹಜ ಭೆಟ್ಟಿಕೊಟ್ಟಿದ್ದೆ. ಅದೇ ಹೊತ್ತಿಗೆ ಸಿದ್ದಪ್ಪನನ್ನು ನನಗೆ ಭೆಟ್ಟಿಮಾಡಿಸಲು ನಾಗನೂರು ರುದ್ರಾಕ್ಷಿ ಮಠಾಧ್ಯಕ್ಷರಾದ ಶ್ರೀ ಸಿದ್ಧರಾಮ ಸ್ವಾಮಿಗಳು ಧಾರವಾಡಕ್ಕೆ ಹೊರಟು ನಿಂತಿರುವುದನ್ನು ಗ್ರಂಥಾಲಯದ ನಿರ್ದೇಶಕರಾದ ಡಾ.ಎಸ್.ಆರ್. ಗುಂಜಾಳ ಅವರು ಹೇಳಿದಾಗ ನನಗೆ ಆಶ್ಚರ್ಯವೆನಿಸಿತು. ಸಂತೋಷವೂ ಆಯಿತು. ಅಲ್ಲಿಯೇ ಮಠದಲ್ಲಿ ಸ್ವಾಮಿಗಳು ನನಗೆ ಸಿದ್ದಪ್ಪನ ಪರಿಚಯ ಮಾಡಿಕೊಟ್ಟರು. ಅವನ ಜೊತೆಗೆ ಮಾತಾಡುತ್ತ ಅವನ ಹಾಡು ಕೇಳುತ್ತ ಒಂದು ಗಂಟೆ ಕಳೆದದ್ದೇ ಗೊತ್ತಾಗಲಿಲ್ಲ. ಅವನ ಹೊಸ ಕವನ ಸಂಗ್ರಹ 'ಮಾತು ಮಾಣಿಕ್ಯ'ಕ್ಕೆ ನಾನು ಮುನ್ನುಡಿ ಬರೆಯಬೇಕೆಂದು ಸಿದ್ದಪ್ಪ ವಿನಯದಿಂದ ಹಸ್ತಪ್ರತಿಯನ್ನು ನನ್ನ ಕೈಯಲ್ಲಿಟ್ಟ. ತಮ್ಮ ಊರಿನ ಈ ಕವಿಯ ಬಗ್ಗೆ ಸ್ವಾಮಿಗಳೂ ವಿಶೇಷ ಅಭಿಮಾನವನ್ನೂ, ಪ್ರೀತಿಯನ್ನೂ ವ್ಯಕ್ತಪಡಿಸಿದರು. ಪ್ರಸ್ತುತ ಕವನ ಸಂಗ್ರಹದ ಬಗ್ಗೆ ಬಹಳ ಸಂತೋಷದಿಂದ ಈ ನಾಲ್ಕು ಮಾತು ಬರೆಯುತ್ತಿದ್ದೇನೆ.

ಹಸ್ತ ಪ್ರತಿಯೆಂದರೆ ಸಿದ್ದಪ್ಪ ಅದನ್ನು ತನ್ನ ಕೈಯಿಂದ ಬರೆದದ್ದಲ್ಲ. ಅವನ ಓದು-ಬರಹ ಅಷ್ಟಕ್ಕಷ್ಟೆ, ಮೊದಲ ಸಂಗ್ರಹದಲ್ಲಿಯ "ನನ್ನ ಸಾಲಿ" ಎಂಬ ಕವನದಲ್ಲಿ ಅದನ್ನು ಸೂಚಿಸಿದ್ದಾನೆ:

ಸಾಲಿ ಕಲ್ಯಾಕ ಹೋಗತಿದ್ದೆನಾ ಸಣ್ಣಾವ ಇದ್ದಾಗ
ಓದಾಕ ಬರಿಯಾಕ ಬರಲಿಲ್ಲ ಬಡದಾ ಮಾಸ್ತರ ನನಗ

* * * *

ಅಪ್ಪ ಅವ್ವಾ ಅಂತಿದ್ದರ ನನ್ಮಗ ಸಾಲ್ಯಾಗ ಹುಸ್ಯಾರ
ಐದಾರು ವರ್ಷ ಕಲತರ ಬರಲಿಲ್ಲ ನನಗೊಂದ ಅಕ್ಷರ

* * * *

ನಮ್ಮಂಗ ನೀವು ಕಲಿಯಲಾರದ ಹಂಗ ತಿರಗಬ್ಯಾಡ್ರಿ
ಬೀಳಗಿ ಊರಾಂವ ಹಾಡಕಟ್ಟತಾನ ಸಿದ್ದಪ್ಪ ಬಿದರಿ.

ಈ ಜಾನಪದ ಕವಿಯ ಪ್ರತಿಭೆಯನ್ನು ಗುರುತಿಸಿ, ಪ್ರೋತ್ಸಾಹಿಸಿ ಮಾರ್ಗದರ್ಶನ ಮಾಡಿದವರು ಬೀಳಗಿ ಕಾಲೇಜಿನ ಕನ್ನಡ ಪ್ರಾಧ್ಯಾಪಕರೂ ಗಣ್ಯ ಕವಿಗಳೂ ಆದ ಡಾ. ಶ್ರೀರಾಮ ಇಟ್ಟಣ್ಣವರ ಅವರು. ಅವನು ಹೇಳಿದ್ದನ್ನು ಬರೆದಿಡುವ ಕೆಲಸವನ್ನು ಅವರ ವಿದ್ಯಾರ್ಥಿಗಳು ಹಾಗೂ ಇತರರು ಮಾಡುತ್ತ ಬಂದರು. 'ಹೊಳಿಸಾಲ ಹೋರಿ' ಎಂಬ ಪ್ರಥಮ ಸಂಗ್ರಹವನ್ನು ಪ್ರಕಟಿಸುವಲ್ಲಿ ಬೀಳಗಿಯ ಉತ್ಸಾಹಿ ತರುಣರು ಹಾಗೂ ಉಳಿದ ಅಭಿಮಾನಿಗಳು ನೆರವಾದರು. ಆ ಸಂಗ್ರಹದ ಮುನ್ನುಡಿಯಲ್ಲಿ ಶ್ರೀ ಇಟ್ಟಣ್ಣವರ ಸಿದ್ದಪ್ಪನ ಕಾವ್ಯರಚನಾ ಕ್ರಮದ ಬಗ್ಗೆ ಕೆಲವು ಮಾತುಗಳನ್ನು ಹೇಳಿ ಓದುಗರಿಗೆ ಅವರ ಕಾವ್ಯವನ್ನು ಪ್ರಥಮ ಬಾರಿಗೆ ಪರಿಚಯಿಸಿದರು. ಒಕ್ಕಲುತನವೇ ಉದ್ಯೋಗವಾಗಿರುವ ಸಿದ್ದಪ್ಪ ಹೊಲದಲ್ಲಿ ಕೆಲಸ ಮಾಡುತ್ತಿರುವಾಗಲೇ ಹಾಡುಕಟ್ಟುವದನ್ನು ರೂಢಿಸಿಕೊಂಡವನು. ತನ್ನ ಮನೆ, ಊರು, ಸಮಾಜ, ಆಟ-ನೋಟ-ಇವೆಲ್ಲದರ ಅನುಭವ ಸಾಮಗ್ರಿ ಹೊಲದಲ್ಲಿ ಇವನಿಗೆ ತನ್ನ ಹಾಡಿನ ಬುತ್ತಿಯಾಗಿ ಪರಿಣಮಿಸಿತು. ತೋಟದ ಬಾವಿಯ ಸೆಲೆಯಂತೆ ಸೃಜನಶಕ್ತಿ ಪುಟಿಯತೊಡಗಿತು. ಹೀಗೆ ಮನಸ್ಸಿನಲ್ಲಿಯೇ ಒಂದು ಕವನ ರೂಪುಗೊಂಡ ಮೇಲೆ ನೆನಪಿನ ಶಕ್ತಿಯಿಂದ ಅದನ್ನು ಹೇಳುವದೂ ಬರೆಯಿಸುವದೂ ಪ್ರಾರಂಭವಾಯಿತು. ವಸ್ತು ಭಾಷೆ, ರೀತಿ, ಧಾಟಿ ಎಲ್ಲದರಲ್ಲೂ ಸಹಜವಾಗಿಯೇ ಜಾನಪದದ ಸೊಗಡು ಹೊರ ಹೊಮ್ಮತೊಡಗಿತು.

ಕಳೆದ ಎಂಟು ವರುಷಗಳಲ್ಲಿ ಇವನ ಮೂರು ಕವನ ಸಂಗ್ರಹಗಳು ಪ್ರಕಟಗೊಳ್ಳುವಂತೆ ಊರಿನ ಜನ ಹಾಗೂ ಹಿತೈಷಿಗಳು ನೆರವಾಗಿದ್ದಾರೆ. ಪ್ರಥಮ ಸಂಗ್ರಹ 'ಹೊಳಿಸಾಲ ಹೋರಿ'ಯ ಕವನಗಳು ಹಳ್ಳಿಯ ಜನಜೀವನದಲ್ಲಿ ವ್ಯಕ್ತಗೊಳ್ಳುವ ಪ್ರೇಮದ ಹಲವು ಪರಿಗಳನ್ನು ಅದೇ ನುಡಿಗಟ್ಟಿನಲ್ಲಿ ಸೊಗಸಾಗಿ ಕಟ್ಟಿಕೊಡುತ್ತವೆ. ಎರಡನೆಯ ಸಂಕಲನ 'ಹತ್ತೂನ ಬಾ ಪ್ರೀತಿಯ ಗಾಡಿ'ಗೆ ಮುನ್ನುಡಿ ಬರೆದ ಶ್ರೀ ಬಿ.ಆರ್. ಪೋಲೀಸಪಾಟೀಲರು ಕವಿ ತನ್ನ ಧೋರಣೆಯನ್ನು ಸ್ಪಷ್ಟಪಡಿಸುತ್ತ ಸಾಗಿರುವುದನ್ನು ಎತ್ತಿ ಹೇಳಿ, ಮಾತೆತ್ತಿದರೆ ಉಪಮೆಗಳ ಮಾಲೆಯನ್ನೇ ಹೆಣೆಯುವ ಈತ ಪ್ರತಿಮೆಗಳನ್ನು ಸುಂದರವಾಗಿ ನುಡಿಯಲ್ಲಿ ನಿಲ್ಲಿಸುವ ಗುಣವನ್ನು ಗುರುತಿಸಿದ್ದಾರೆ. 'ಪ್ರೀತಿ ಹೊಳ್ಯಾಗ ಈಸ್ಯಾಡಿ ನಾವು ದಂಡಿ ಮುಟ್ಟೂಣು' ಎಂಬುದು ಈ ಸಂಗ್ರಹದ ಜೀವಸ್ವರವಾಗಿದೆ. 'ಹಾರಿತ ಗಿಣಿ'ಯಂಥ ಪದ್ಯದ ಪ್ರತೀಕಾತ್ಮತೆ ಬೆರಗುಗೊಳಿಸುವಂತಿದೆ. ಮೂರನೆಯ ಸಂಗ್ರಹ 'ಅನುಭವದ ಅಡಿಗಿ'ಗೆ ಬರೆದ ಚಿಕ್ಕ ಹಾಗೂ ಚೊಕ್ಕ ಮುನ್ನುಡಿಯಲ್ಲಿ ಶ್ರೀ ಸಿದ್ಧರಾಮ ಸ್ವಾಮಿಗಳು ಈತನ ನಿಸರ್ಗ ಸುಭಗ ಕವಿತೆಯನ್ನು ಮೆಚ್ಚಿಕೊಳ್ಳುತ್ತ ಸತ್ಯ, ಧರ್ಮ, ನ್ಯಾಯ, ನೀತಿಯಂತಹ ಮೌಲ್ಯಗಳು ನಮ್ಮ ಬದುಕಿನಿಂದ ದೂರವಾಗುತ್ತಿರುವುದರ ಕಡೆಗೂ ಈ ಕವಿ ಗಮನ ಹರಿಸಿರುವುದನ್ನು ಸೂಚಿಸಿದ್ದಾರೆ.

ಇವರ ನೋಡ್ರೆಪ್ಪ ನಮ್ಮೂರ ಹಿರಿಯರು
ಉರುವ ಬೆಂಕಿ ಒಳಗ ಹುಲ್ಲು ಒಗಿಯುವರು

('ಊರ ಹಿರಿಯರು')

ಎಂದು 'ಇದ್ದ ಮಾತನಾ ಇದ್ದಾಂಗ ಹೇಳ್ತೀನಿ' ಎಂಬ ದಿಟ್ಟತನ ಹಲವಾರು ಪದ್ಯಗಳಲ್ಲಿ ಒಡೆದು ಕಾಣುತ್ತದೆ. 'ಸಾಲವಲ್ಲದು ಜಾಗ'ದಂತಹ ಈ ಸಂಗ್ರಹದ ಪದ್ಯಗಳಲ್ಲಿಯ ವಾಸ್ತವ ಚಿತ್ರ ಹಾಗೂ ವಿಡಂಬನೆ ನಮ್ಮ ಗಮನವನ್ನು ಸೆಳೆಯುತ್ತದೆ.

ಪ್ರಸ್ತುತ ಸಂಗ್ರಹ 'ಮಾತು ಮಾಣಿಕ್ಯ'ದ ಅರುವತ್ತು ಕವನಗಳಲ್ಲಿ ಹಿಂದಿನವುಗಳಿಗಿಂತ ಹೆಚ್ಚಿನ ವಸ್ತುವೈವಿಧ್ಯವಿದೆ. ಇಲ್ಲಿಯೂ ಹಳ್ಳಿಯ ಬದುಕೇ ಸ್ಥಾಯಿಯಾಗಿದ್ದರೂ ಆಧುನಿಕ ಜೀವನದ ಸಂವೇದನೆಗೆ ಕವಿ ತನ್ನನ್ನು ಪೂರ್ಣ ತೆರೆದುಕೊಂಡಿರುವದು ಕಂಡು ಬರುತ್ತದೆ. 'ಆಗ ಹಾಂಗಿತ್ತು ಈಗ್ಯಾಕ ಹೀಂಗಾತು' ಎಂಬ ಕಾಲಮಾನ ಪರಿಸ್ಥಿತಿಯ ಚಿಂತನೆಯೂ ಇಲ್ಲಿ ಕೆಲಸ ಮಾಡಿರುವುದನ್ನು ಕಾಣಬಹುದು.

ಒಳ್ಳೊಳ್ಳೆವರು ಇಲ್ಲಿ ಹೋಗ್ಯಾರ ಉಳ್ಳಾಡಿ
ಕಳ್ಯಾನ ದೇವರತ್ತಾಂಗ ಕರ್ಪೂರ ಕಾಯಿ ಬೇಡಿ

('ಬಿಡಬೇಕು ತಮ್ಮ')

ಎಂಬ ಅಸಹಾಯಕತೆಯೊಂದಿಗೆ 'ಜಾತ್ಯಾಗೇನ ಬಳಕೋತಿರಿ' ಎಂಬ ಹಿತವಾದವೂ ಮೂಡಿಬಂದಿದೆ. ಹಿಂದಿನ ಸಂಗ್ರಹದ 'ಕನ್ನಡತೇರ' ಕವನದಲ್ಲಿ ಮೂರ್ತಗೊಂಡ ನಾಡು-ನುಡಿಯ ಪ್ರೇಮ ಇಲ್ಲಿ ಇನ್ನಷ್ಟು ವಿಸ್ತಾರಗೊಂಡಿದೆ. 'ಹಸಿಯದಿದ್ದರೂ ಹರದ ತಿನ್ನಾಕ ಹೊರಟೈತಲ್ಲೊ ಬಾಯಿ' ಎಂಬುದು ಇಂದಿನ ಭ್ರಷ್ಟತೆಗೆ ಕನ್ನಡಿ ಹಿಡಿದಂತಿದೆ.

ಬಡತನದೊಳಗ ನಂದು ನಿಂದು ಅನ್ನೊದೈತಿ ಅರುವ
ಸಿರಿತನದೊಳಗ ಯಾರದೇನ ಅಂತೈತಿ ಗರುವ

('ಬಡತನ-ಸಿರಿತನ')

ಬಡವರೊಳಗಿನ ಪರಸ್ಪರ ಅನುಕಂಪ ಸಿರಿವಂತರಲ್ಲಿ ಕಾಣದಾಗಿರುವದು ಇಂದಿನ ವಿಷಮತೆಯನ್ನು ಹೆಚ್ಚಿಸಿರುವುದನ್ನು ಇದು ಪರಿಣಾಮಕಾರಿಯಾಗಿ ಚಿತ್ರಿಸುತ್ತದೆ.

ಪ್ರೀತಿ ಸರಪಣಿ ಕೊಂಡಿ ಸಂವದ ಸಣ್ಣ ಆಗ್ಯವೋ
ಎಲ್ಲರ ಮನದಾಗ ಸಂಶದ ಬೀಜ ಮೊಳಕಿ ಒಡೆದಾವೋ

ಪರಸ್ಪರ ಬಾಂಧವ್ಯವನ್ನು ಬೆಸೆದ ಪ್ರೀತಿ ಕಡಿಮೆಯಾಗುತ್ತ ಸಂಶಯ ಹೆಡೆಯೆತ್ತಿ ನಿಂತಿದೆ. ಇಂಥ ಜೀವನಾನುಭವದ ಪಾಕ ಇಲ್ಲಿಯ ಅನೇಕ ಪದ್ಯಗಳ ಸತ್ವವಾಗಿದೆ.

ಗಾಂಧಿತಾತ ಬುದ್ಧ ಬಸವಣ್ಣ ಅಂಬೇಡ್ಕರ್
ಜಾತಿ ಚಳುವಳಿ ಅರ್ಥಮಾಡಿ ಬಿಟ್ಟು ಹೋಗ್ಯಾರ

(ಪೂರಾ ಮುಗಿದಿಲ್ಲ)

ಈ ಭೂಮಿಮ್ಯಾಗ ಪೂರ ಯಾರದು ಮುಗಿದಿಲ್ಲ. ಅದನ್ನು ಪೂರೈಸುವ ಕಾರ್ಯ ಮತ್ತೆ ನಡೆಯಬೇಕಾಗಿದೆ ಎಂಬ ಅರಿವನ್ನು ಕವಿ ಜನಮನದಲ್ಲಿ ಮೂಡಿಸುತ್ತಿದ್ದಾನೆ.

'ಕಣ್ಣೀಗಿ ಕಂಡರು ಬಾಯಿಮುಚ್ಚಿ ನಾ ಸುಮ್ಮಗ ಹ್ಯಾಂಗಿರಲಿ?' ಅದಕ್ಕೆ ಜನತೆಯ ನಾಲಗೆಯಾದ ಕವಿ ಅದಕ್ಕೆ ಅಭಿವ್ಯಕ್ತಿ ನೀಡಲೇಬೇಕಾಗುತ್ತದೆ. ಸಿದ್ದಪ್ಪನ ಕವನಗಳ ಅಂತರ್ಯದಲ್ಲಿ ಉದ್ದಕ್ಕೂ ಕಂಡುಬರುವ ಇಂಥ ಕಳಕಳಿ ಅವುಗಳ ಸಾಮಾಜಿಕ ಮಹತ್ವವನ್ನು ಹೆಚ್ಚಿಸಿದೆ. ದೇವರಲ್ಲಿ ಅವನಿಗೆ ಸಂಪೂರ್ಣ ನಂಬಿಕೆಯಿದೆ.

ಯಾರಿಗೂ ತಿಳಿದಿಲ್ಲ
ಆ ಭಗವಂತನ ಲೀಲ
ಜಗವೆಲ್ಲ ಬದುಕತೈತಿ ಅವನ ಹೆಸರ ಮ್ಯಾಲ

('ಕಾಣದಂಗ')

ಅದಕ್ಕಾಗಿ ಆ ಶಕ್ತಿಯನ್ನೇ ಆಹ್ವಾನಿಸುತ್ತಿದ್ದಾನೆ.

ಎದ್ದೇಳಮ್ಮ ಆದಿಶಕ್ತಿ
ಕೈಯೊಳಗ ಹಿಡಕೊಳ ಕತ್ತಿ
ಎದ್ದೈತಿ ಪುಂಡರ ದಂಡ
ಚೆಂಡಾಡಮ್ಮ ಇವರ ರುಂಡ

('ಮಾತಿನಮೃತ')

ಮನುಷ್ಯನಲ್ಲಿ ಹೆಚ್ಚುತ್ತಿರುವ ದುಷ್ಟತನಕ್ಕೆ ದೈವೀಶಕ್ತಿ ತಕ್ಕಶಾಸ್ತಿಯನ್ನು ಮಾಡದೇ ಇರಲಾರದು ಎಂಬ ನಂಬಿಕೆಯೊಂದಿಗೆ

ಎಷ್ಟ ಉರೀತೀರೆಪ್ಪ ನೀವು ಉರೀರಿ
ಕಬ್ಬಿಣಕಾಸಿ ಮ್ಯಾಲಿನಾವ ಕೊಡತಾನ ಕಾಣದಂಗ ಬರಿ

('ಉರೀರೆಪ್ಪ ಉರಿರಿ')

ಎಂಬ ಭರವಸೆಯನ್ನು ಈ ಜಾನಪದ ಕವಿ ತಾಳಿರುವದು ಸಹಜವೇ ಆಗಿದೆ. ಹೀಗೆ ಒಟ್ಟಾರೆ ನೋಡಿದಾಗ ಸಿದ್ದಪ್ಪನ ಕಾವ್ಯ ವ್ಯಕ್ತಿತ್ವದಲ್ಲಿ ಕೌಟುಂಬಿಕ ಪ್ರಜ್ಞೆ, ಸಾಮಾಜಿಕ ಪ್ರಜ್ಞೆ ಹಾಗೂ ನೈತಿಕ ಪ್ರಜ್ಞೆಗಳು ಒಟ್ಟಾಗಿ ಕೆಲಸ ಮಾಡಿರುವುದನ್ನು ಯಾರೂ ಮೆಚ್ಚುವಂತಿದೆ.

ಕವನಗಳ ಕೊನೆಯಲ್ಲಿ ಕವಿ ತನ್ನ ಅಂಕಿತದೊಂದಿಗೆ ಹೇಳುವ ಒಂದೊಂದು ನುಡಿಯೂ ಆ ಹಾಡಿನ ಆಶಯದೊಂದಿಗೆ ಅವನ ಕಾವ್ಯಶಕ್ತಿಗೂ ಉಜ್ವಲ ಉದಾಹರಣೆಯಾಗಿ ನಿಲ್ಲುತ್ತವೆ:

ಮುಂದ ಬರುವ ಗುಬ್ಬೀ ಮರೀಗಿ ಕಟ್ಟಿದಾಂಗ ಗೂಡ
ಬೀಳಗಿ ಊರಾಂವ ಬಿದರಿ ಸಿದ್ದ ಕಟ್ಟತಾನ ಹಾಡ

* * * *

ಅವನ ಹಾಡಾ ಮಾವಿನ ಗಿಡದಾಗ ಮಾಗಿದಾಂಗ ಹಣ್ಣೋ

* * * *

ಎಲ್ಲರ ಮನಸ್ಸಿನ ಬೆಣ್ಣೆ ಕರಗಿಸಿ ಕಾಸಿದಂಗ ತುಪ್ಪ
ಬೀಳಗಿ ಊರಾಂವ ಹಾಡ ಕಟ್ಟತಾನ ಬಿದರಿ ಸಿದ್ದಪ್ಪ

* * * *

ಬೀಳಗಿ ಬಿದರಿ ಸಿದ್ದಪ್ಪ ಹಾಡಕಟ್ಟತಾನ ನೋಡಿ
ರಾತ್ರಿಯಾಳೆ ಬೆಂಕಿ ಬಿದ್ದಾಂಗ ಬಿದರ ಮಸ್ದಾಡಿ

* * * *

ಬುದ್ದಿ ಆಕಳ ಒಂದ ಕಳಕೊಂಡೈತಿ ದುಡ್ಡಿನ ಜಾತ್ರ್ಯಾಗ
ಸಿಕ್ಕರ ಹೇಳಿ ಕಳಿಸಿರಿ ಸಿದ್ದಪ್ಪ ಇರತಾನ ಬೀಳಗ್ಯಾಗ

* * * *

ಕಲಿಯಲಿಲ್ಲ ಬರಿಯಲಿಲ್ಲ
ತಾಳ ತಂಬೂರಿ ತಂತಿ ನಾದಿಲ್ಲ
ಬೀಳಗಿ ಬಿದರಿ ಸಿದ್ದ ವಿಚಿತ್ರ
ಅದಾನೊ ಅವನು ಸರಸ್ವತಿ ಪುತ್ರ

ಸಿದ್ದಪ್ಪನ ಈ ನಾಲ್ಕೂ ಕವನ ಸಂಗ್ರಹಗಳನ್ನು ಓದಿದವರು ಈತ ನಿಜಕ್ಕೂ ಸರಸ್ವತಿಪುತ್ರ ಎಂದು ಉದ್ಗಾರವೆತ್ತದೆ ಇರಲಾರರು. ಹಲಸಂಗಿ ನಾಡಿನ (ಇಂಡಿ ತಾಲೂಕು) ಸಿದ್ದು ಶಿವಲಿಂಗ, ಖಾಜಾಬಾಯಿ, ಬಡೇಸಾಬರಂಥ ಪ್ರಸಿದ್ಧ ಲಾವಣಿಕಾರರನ್ನು ಪಡೆದ ಅದೇ ನಾಡಿನಲ್ಲಿ (ಬೀಳಗಿ ತಾಲೂಕು) ಇದೀಗ ಸಿದ್ದಪ್ಪನಂಥ ಜಾನಪದ ಭಾವಗೀತಕಾರನ ಪ್ರತಿಭೆ ಬೆಳಗುತ್ತಿರುವುದು ಕನ್ನಡ ನಾಡಿನ ಪುಣ್ಯವೆನ್ನಬೇಕು. ಇಂಥ ಕವಿಯನ್ನು ಗುರುತಿಸಿ, ಪ್ರೋತ್ಸಾಹಿಸಿ ಬೆಳಕಿಗೆ ತಂದ ಎಲ್ಲರಿಗೂ ಅಭಿನಂದನೆಗಳು ಸಲ್ಲಬೇಕು.

ಕೊನೆಯದಾಗಿ ಒಂದು ಮಾತು: ಸಿದ್ದಪ್ಪನ ಈ ನಾಲ್ಕೂ ಕವನ ಸಂಗ್ರಹಗಳು ಒಂದು ಸಂಪುಟದಲ್ಲಿ ಪ್ರಕಟಗೊಳ್ಳುವದು ಅತ್ಯಂತ ಅವಶ್ಯವೆಂದು ನಾನು ಭಾವಿಸಿದ್ದೇನೆ. ಕರ್ನಾಟಕ ಜಾನಪದ ಅಕಾಡೆಮಿಯಾಗಲಿ, ಕನ್ನಡ ಪುಸ್ತಕ ಪ್ರಾಧಿಕಾರವಾಗಲಿ ಈ ಕಾರ್ಯವನ್ನು ತುರ್ತಾಗಿ ಕೈಕೊಂಡಲ್ಲಿ ಒಂದು ಒಳ್ಳೆಯ ಕೆಲಸವನ್ನು ಮಾಡಿದ ಶ್ರೇಯಸ್ಸಿಗೆ ಅವರು ಖಂಡಿತವಾಗಿಯೂ ಪಾತ್ರರಾಗುತ್ತಾರೆ.

(೧೯೯೯)

## ೬೯

# ಋತು

ಶ್ರೀಮತಿ ಡಿ.ಬಿ. ರಜಿಯಾ ಕಾವ್ಯರಚನೆಗೆ ತೊಡಗಿ ಆಗಲೇ ದಶಕದ ಮೇಲಾಯಿತು. ಎರಡು ಕವನ ಸಂಗ್ರಹಗಳನ್ನೂ ಪ್ರಕಟಿಸಿ, ತಮ್ಮ ಸುಸಂಸ್ಕೃತ ಮನಸ್ಸಿನ ಒಲವನ್ನು ಸೂಚಿಸುತ್ತ ಹಲವು ಒಳ್ಳೆಯ ಕವನಗಳನ್ನು ನೀಡಿದ್ದಾರೆ. ಇದೀಗ ಹೊರಬರಲಿರುವ ಕಿರುಗವನಗಳ ಸಂಗ್ರಹ "ಋತು"ವಿಗೆ ನಾನು ನಾಲ್ಕು ಮಾತು ಬರೆಯಬೇಕೆಂದು ಅವರು ಅಪೇಕ್ಷಿಸಿದ್ದಾರೆ. ಆ ಕೆಲಸವನ್ನು ಸಂತೋಷದಿಂದ ಮಾಡುತ್ತಿದ್ದೇನೆ. ಕಾಲದ ಹಾಗೂ ಕಾವ್ಯರೂಪದ ಬದಲಾವಣೆಯ ಸಂಕೇತವಾಗಿ ಸಂಗ್ರಹಕ್ಕೆ ಕವಿ ಈ ಹೆಸರನ್ನು ಕೊಟ್ಟಿರುವಂತೆ ತೋರುತ್ತದೆ.

ಚುಟುಕು, ಹನಿಗವನ, ಮುಕ್ತಕ, ಹೀಗೆ ಹಲವಾರು ಹೆಸರುಗಳಿಂದ ಇಂದು ಓದುಗರಿಗೆ ಕಚಗುಳಿ ಇಡುತ್ತಿರುವ ಈ ಕಾವ್ಯಪ್ರಕಾರ ಯಾರ ಮುಲಾಜಿಗೂ ಒಳಗಾಗದೆ ಕಾವ್ಯಕ್ಷೇತ್ರದಲ್ಲಿ ತನ್ನ ಸ್ಥಾನವನ್ನು ಭದ್ರಪಡಿಸಿಕೊಳ್ಳುತ್ತ ಸಾಗಿದೆ. ಇದು ಯಾವ ಪಂಥಕ್ಕೂ ಸೇರಿದ್ದಲ್ಲ. ಆದರೆ ಎಲ್ಲ ಪಂಥದವರಿಗೂ ಇಷ್ಟವಾಗಬಹುದಾದ ಹಾಸ್ಯ, ವ್ಯಂಗ್ಯ, ವಿಡಂಬನ, ವಕ್ರೋಕ್ತಿ, ಇತ್ಯಾದಿ ಗುಣಗಳಿಂದ ಹಾಗೂ ತನ್ನದೇ ಆದ ಒಂದು ಬಗೆಯ ವಿಲಕ್ಷಣ ಸೌಂದರ್ಯದಿಂದ ಕವಿಗಳನ್ನೂ ಓದುಗರ ಬಳಗವನ್ನೂ ಕೂಡಿಯೆ ರಂಜಿಸುತ್ತ, ಆಕರ್ಷಿಸುತ್ತ ಬಂದಿದೆ.

ಕನ್ನಡದ ಮಟ್ಟಿಗೆ ಸರ್ವಜ್ಞನ ವಚನ ಹಾಗೂ ಜಾನಪದ ತ್ರಿಪದಿಗಳಲ್ಲಿಯೇ ಈ ಪರಂಪರೆಯ ಮೂಲಸ್ರೋತವಿರುವುದನ್ನು ಈ ಸಂದರ್ಭದಲ್ಲಿ ನೆನೆಯಬಹುದು. ಹೊಸಗನ್ನಡ ಸಾಹಿತ್ಯದಲ್ಲಿ "ಚುಟುಕಿ"ಗೆ ಮೊದಲು ಗುಟುಕು ಕೊಟ್ಟು ಬೆಳೆಸಿದವರು ಜಿ.ಪಿ. ರಾಜರತ್ನಂ ಅವರು. ಆಮೇಲೆ ವಸ್ತುವಿನ ದೃಷ್ಟಿಯಿಂದ ಈ ಪ್ರಕಾರವನ್ನು ವ್ಯಾಪಕವಾಗಿ ಚೌಪದಿಯ ಚೌಕಟ್ಟಿನಲ್ಲಿಟ್ಟರೂ ಸ್ವಚ್ಛಂದ ಸುಂದರವಾಗಿ ದುಡಿಸಿಕೊಂಡವರು ದಿನಕರ ದೇಸಾಯಿಯವರು. ಅಂದಿನ ದೇಸಾಯಿಯವರಿಂದ ಹಿಡಿದು ಇಂದಿನ ಡುಂಡಿರಾಜರವರೆಗೆ ನೂರಾರು (ಸಾವಿರಾರು?) ಜನ ಕವಿಗಳು (ಕವಿಗಳಲ್ಲದವರೂ) ಹನಿಹನಿ ಕೂಡಿ ಹಳ್ಳವಾಗಿ ಈ ಪ್ರವಾಹಕ್ಕೆ ನೆರೆ ಬರುವಂತೆ ಮಾಡಿದ್ದಾರೆ. ಅವರ ಪರಿಮಿತಿಯಲ್ಲಿಯೇ ಮುಕ್ತ ಅಭಿವ್ಯಕ್ತಿಗೆ ಮಾರ್ಗ ಕಲ್ಪಿಸಿಕೊಂಡು ತೀವ್ರತೆಯನ್ನೂ, ಮೊನಚನ್ನೂ, ಹೊಸತನದ ಕೌಶಲವನ್ನೂ ಸಾಧಿಸಿ ತೋರಿಸಿದ ಹತ್ತಿಪ್ಪತ್ತು ಜನ ಕವಿಗಳನ್ನು ನಾವು ಈ ಸಮೂಹದಲ್ಲಿ ಗುರುತಿಸಬಹುದು. ಆದರೆ ಬಹಳಷ್ಟು ಜನ ಸೌಲಭ್ಯಾಕಾಂಕ್ಷೆಯಿಂದ ಇವುಗಳ ರಚನೆಗೆ ತೊಡಗಿದ್ದಾರೆಯೆ ಹೊರತು ನಿಜವಾದ ಕಾವ್ಯಸಾಧನೆಯ

ಕಡೆಗೆ ಗಮನ ಹರಿಸದಿರುವುದನ್ನೂ ಅಷ್ಟೇ ಸುಲಭವಾಗಿ ಕಂಡುಹಿಡಿಯಬಹುದು. ಗಹನವಾದ, ಗಂಭೀರವಾದ, ಧ್ಯಾನ-ಚಿಂತನ-ಶೀಲವೆನಿಸುವ ಅನುಭವಗಳ ಅಭಿವ್ಯಕ್ತಿ ಮಾಧ್ಯಮವನ್ನಾಗಿಯೂ ಈ ಪ್ರಕಾರವನ್ನು ಬಳಸಿಕೊಂಡಾಗ ಅದು ಹೆಚ್ಚು ಕಾಲ ಬಾಳುವ ಸಾಧ್ಯತೆಯಿದೆ. ಈ ದಿಸೆಯಲ್ಲಿ ಅಲ್ಲಲ್ಲಿ ಪ್ರಯತ್ನ ನಡೆದಿದ್ದರೂ ಅಂಥವರ ಸಂಖ್ಯೆ ಕಡಿಮೆಯೆಂದೇ ಹೇಳಬಹುದು. ಟಾಗೋರರ "Stray Birds", "Fire Flies" ಸಂಗ್ರಹಗಳಲ್ಲಿ ಈ ಕಿರುಗವನ ಪ್ರಕಾರ ಅಪಥ್ಯವಾಗಿಲ್ಲವೆನ್ನುವುದನ್ನು ಇದು ಸೂಚಿಸುತ್ತದೆ.

ಚುಟುಕುಗಳಲ್ಲಿ ಇಂದು ಸಾಮಾನ್ಯವಾಗಿ ಕಂಡುಬರುತ್ತಿರುವ ವ್ಯಂಗ್ಯ, ವಿಡಂಬನೆ, ಮಾತಿನ ಚಮತ್ಕಾರ ರಜಿಯಾ ಅವರ ಹಾದಿಯಲ್ಲ. ಅವರದು ಏನಿದ್ದರೂ "ಅಂತರಂಗದ ಅಭೀಪ್ಸೆಗೆ ಶಬ್ದ ಹೇಗಾಗಬೇಕೆಂಬ" ಸ್ವಂತ ಚಿಂತನದ ಕ್ರಮ ಹಾಗೂ ಆ ಬಗೆಯ ಭಾವನೆಗಳನ್ನು ಚಿಕ್ಕ ಚಿಕ್ಕ ಪ್ರತಿಮೆ ಪ್ರತೀಕಗಳಲ್ಲಿ ಹಿಡಿದಿಡುವ ಪ್ರಯತ್ನ. ಪರಸ್ಪರ ಪ್ರೀತಿ, ಪ್ರೇಮ, ಪ್ರಕೃತಿ, ಸ್ಥಾಯಿಯಾಗಿ ಹೊರಹೊಮ್ಮಿಸುವ ಭಾವನಾಪ್ರಪಂಚದಲ್ಲಿಯೇ ಒಂದಿಷ್ಟು ವೈವಿಧ್ಯವನ್ನು ತರುವ ಪ್ರಯತ್ನವನ್ನೂ ಅಲ್ಲಲ್ಲಿ ಕಾಣಬಹುದು. ಅದಕ್ಕೆ ಉದಾಹರಣೆಯಾಗಿ ಕೆಲವು ಪದ್ಯಗಳನ್ನು ಮಾತ್ರ ಇಲ್ಲಿ ಕೊಡಬಹುದು.

ಕಟ್ಟುಪಾಡುಗಳನ್ನು ಮೀರಬೇಕೆಂಬ ತುಡಿತ ಹೃದಯದಲ್ಲಿದ್ದರೂ ಅದು ಸಾಧ್ಯವಾಗದಿರುವ ಅಭಾಗ್ಯ ಸ್ಥಿತಿಯನ್ನು ಭೋರ್ಗರೆವ ಕಡಲಿನ ಪ್ರದೇಶದಲ್ಲಿ 'ಕಟ್ಟು' ಚಿತ್ರಿಸುತ್ತಿದೆ.

ಭೋರ್ಗರೆವ
ಕಡಲಂತೆ
ಆಶೆಯ ತರಂಗಗಳು
ಒಡ್ಡು ಮೀರಿ
ಹರಿಯಲಾಗದೇ
ಶರಧಿಯ ಒಡಲೊಳಗೆ
ವಿಲೀನವಾಗಿ ವಿರಮಿಸುತ್ತವೆ.

ಒಲಿದವರ ಮಧುರ ಮಿಲನದಲ್ಲಿ ನೋವೂ ಇರುವುದು ಸೂಕ್ಷ್ಮ ಹೃದಯಕ್ಕೆ ಮಾತ್ರ ಗೊತ್ತಾಗಬಲ್ಲದು. ಆ "ಸಮಯ"ದ ಮೌನ ಹಾಗೂ ಮಾತು "ಮುತ್ತಾ"ಗುವ ನಿರೀಕ್ಷೆ ಕೆಳಗಿನ ಕವನದಲ್ಲಿ ಸಮರ್ಥವಾಗಿ ಅಭಿವ್ಯಕ್ತಿ ಪಡೆದಿದೆ:

ನಿನ್ನ ಅದೃಷ್ಟರೇಖೆ
ನಾನಾದಾಗಲೇ
ನೋವಿನ ರಾತ್ರಿ
ಮಂದಗತಿಯಂತೆ
ಕಳೆಯುತ್ತಾ....

ಮೌನದ-
ಆಚೆಗಿನ ಮಾತಿಗೆ
ಮುತ್ತಾಗುವ ಹೊತ್ತು
ಎತ್ತಲಿಂದ ಸಾಗಿ ಬರುವುದೋ.

ಕೊನೆಯ ಸಾಲುಗಳಲ್ಲಿ 'ತ'ಕಾರಕ್ಕೆ ಬೀಳುವ ಒತ್ತಿನಲ್ಲಿಯೇ ಪ್ರೇಮದ ಉನ್ಮತ್ತತೆಯೂ ಸಹಜವಾಗಿ ವ್ಯಕ್ತಗೊಳ್ಳುತ್ತದೆ.

ನಿಷ್ಫಲತೆಯ ಒಂದು ಭಾವ 'ಬರಡು' ಪದ್ಯದಲ್ಲಿ ಸಾರವತ್ತಾಗಿ ಚಿತ್ರಗೊಂಡಿದೆ :

ಎನ್ನೆದೆಯ ಗೂಡಿನಲ್ಲಿ
ಕಪ್ಪು ಮೋಡವಾಗಿ ದಟ್ಟೈಸಿದ
ನೆನಪುಗಳು ಧಾರಾಕಾರ ಕಂಬನಿಯ
ಮಳೆಯಾಗಿ ಸುರಿದರೂ ಫಲವಿಲ್ಲ.

ಇಲ್ಲಿ 'ಫಲ' ಶಬ್ದದಲ್ಲಿಯ ಶ್ಲೇಷೆಯನ್ನು ಗಮನಿಸಬಹುದು.

ಎರಡು ಸಂಗತಿಗಳನ್ನು ಎದುರು ಬದುರಾಗಿಸಿ ಅನನ್ಯ ಸಂಬಂಧವನ್ನು ಸಾಧಿಸುವ ಜಾಣ್ಮೆ 'ವ್ಯತ್ಯಾಸ', 'ವರುಷ', 'ದ್ವಂದ್ವ' ಮುಂತಾದ ಪದ್ಯಗಳಲ್ಲಿ ಗೋಚರಿಸುತ್ತದೆ. ಭಾವತೀವ್ರತೆಗೆ "ನನ್ನೊಡಲು" ಒಂದು ಉತ್ತಮ ಉದಾಹರಣೆ :

ನಿನ್ನೊಡಲ ಉಸಿರ ಕಾವು
ಬೂದಿ ಮುಚ್ಚಿದ
ಕೆಂಡವಾಗಿ
ನಿಗಿನಿಗಿಸುತ್ತದೆ
ನನ್ನೊಡಲಿನಲ್ಲಿ.

'ಒರತೆ', 'ಸೋಜಿಗ'ಗಳಲ್ಲಿ ಬಾಳಿನ ನಿಗೂಢತೆಯನ್ನು ಅರಿಯುವ ಹವಣಿಕೆಯಿದ್ದರೆ, 'ಸೆರೆ', 'ಸಮೀಕರಣ' ಮೊದಲಾದವು 'ಆಪ್ತಸಿಂಚನ'ದಿಂದ ಪರಿಣಾಮಕಾರಿಯಾಗಿವೆ. 'ಕಡಲು' ನಿತ್ಯ ಹೊಸತನ್ನು ಸಾರುವ ವಿಸ್ಮಯವನ್ನು ಸೂಚಿಸಿದರೆ, 'ಭಾವನೆಗಳ ಅನುಬಂಧ ಬುವಿ ಬಾನಿನ ಸಂಬಂಧದಂತೆ' ತೋರುವಲ್ಲಿ ಕಾವ್ಯದ ಸೆಲೆಯಿದೆ.

ಇಲ್ಲಿಯ ಎಲ್ಲ ಕವನಗಳೂ ಹನಿಗವನದ ಸ್ವಯಂಪೂರ್ಣ ಸ್ವರೂಪ ಪಡೆದಿವೆಯೆಂದೇನೂ ಹೇಳಲಾಗದು. 'ಉಪಾಸನೆ', 'ರಚನೆ', 'ಶಿಕಾರಿ', 'ಸ್ಪಂದನ' ಮೊದಲಾದವು ಅಭಿವ್ಯಕ್ತಿಯಲ್ಲುಂಟಾಗಿರುವ ಭಾಷೆಗಳ ತೊಡಕಿನಿಂದ ಅಸ್ಪಷ್ಟತೆಗೂ ಎಡೆಕೊಟ್ಟಿವೆ. ಇನ್ನುಳಿದವುಗಳಲ್ಲಿ ಕೆಲವು ಹೇಳಿಕೆಗಳಾಗಿ ವಾಚ್ಯವಾಗಿವೆ.

ಈ ಕವನಗಳ ಭಾಷೆ ಇನ್ನೂ ಹೆಚ್ಚು ಹದಗೊಳ್ಳಬೇಕಾಗಿದೆ. 'ಹನಿಗವನ'ವಾಗಬೇಕಾದ ಅನಿವಾರ್ಯತೆ ಈ ಭಾವಕ್ಕೆ ಅಥವಾ ಅನಿಸಿಕೆಗೆ ಇರಬೇಕು. ಇಲ್ಲವಾದರೆ ಅದು ಬೇರೊಂದು ಕವನದ ಒಂದು ಭಾಗ ಅಥವಾ ನುಡಿಯಂತೆ ಅರಕಳಿಯೆನಿಸುತ್ತದೆ. ಆದರೆ ಕೇವಲ ಲೇವಡಿ, ಶಬ್ದಾಡಂಬರ, ಕೆಳಮಟ್ಟದ ವಿಡಂಬನೆ, ತೋರಿಕೆಯ ಜಾಣತನಗಳಿಂದ ದೂರವಿದ್ದು "ಪ್ರೀತಿಯಿಂದ ಕೂಡಿದ ಭಾವನೆಗಳ ಆಪ್ತಸಂಬಂಧವನ್ನು ಚೊಕ್ಕವಾಗಿ ಮೂಡಿಸುವಲ್ಲಿ ರಜಿಯಾ ಹೆಚ್ಚು ಯಶಸ್ವಿಯಾಗಿದ್ದಾರೆ". ಈ ದಿಸೆಯಲ್ಲಿ ನಡೆಯಬೇಕಾದ ದಾರಿಯ ಪರಿಶ್ರಮದ ಕಲ್ಪನೆ ಅವರಿಗಿದೆಯೆಂದು ಭಾವಿಸಿ ತುಂಬುಹೃದಯದಿಂದ ಶುಭ ಕೋರುತ್ತೇನೆ.

(೧೯೯೮)

೯೦

## ಕಾವ್ಯಯಾನ

ಪ್ರಾಚೀನ ಮಂತ್ರವೊಂದರಲ್ಲಿ ವರ್ಷವನ್ನು ರಥಕ್ಕೂ, ಉತ್ತರಾಯಣ ಹಾಗೂ ದಕ್ಷಿಣಾಯನಗಳನ್ನು ಅದರ ಚಕ್ರಗಳಿಗೂ ಹೋಲಿಸಲಾಗಿದೆ. ಆದ್ದರಿಂದ ವರ್ಷವನ್ನು 'ಯುಗ' ಎಂತಲೂ, ಅದರ ಪ್ರಥಮ ದಿನವನ್ನು 'ಯುಗಾದಿ' ಎಂತಲೂ ರೂಢಿಯಲ್ಲಿ ಕರೆಯಲಾಗುತ್ತದೆ.

ನಾಗರಿಕರು, ಜಾನಪದರು ಎಂಬ ಭೇದಭಾವವಿಲ್ಲದೆ ಎಲ್ಲರೂ ಪೂರ್ವ ಪರಂಪರೆಯ ಭಾವನಾತ್ಮಕ ಕಾರಣಗಳಿಂದ ಹಾಗೂ ನಿಸರ್ಗ ನಮ್ಮೆದುರು ಪ್ರತ್ಯಕ್ಷವಾಗಿ ಚೈತ್ರಮಾಸದ ಹೊಸ ಚಿಗುರು, ಹೂವುಗಳಿಂದ ಚೈತನ್ಯಪೂರ್ಣವಾಗಿರುವುದರಿಂದ ವರ್ಷಾದಿಯ ಈ ಹಬ್ಬ ನಮ್ಮ ಸಂಭ್ರಮವನ್ನು ಸಹಜವಾಗಿಯೇ ಹೆಚ್ಚಿಸಿದೆ.

ನಮ್ಮ ಹಬ್ಬಗಳು ಸಾಮಾನ್ಯವಾಗಿ ಒಂದಿಲ್ಲ ಒಂದು ದೇವತೆಯ ಸಂಪರ್ಕ ಪಡೆದಿರುತ್ತವೆ. ಆದರೆ ಯುಗಾದಿ ಮಾತ್ರ ಯಾವ ದೇವತೆಗೂ ಸಂಬಂಧ ಪಡದ ಶುದ್ಧ ನಿಸರ್ಗದ ಹಬ್ಬವಾಗಿದೆ. ನಮ್ಮ ಸಾಂಸ್ಕೃತಿಕ ಆಚರಣೆಗಳು ಪರಂಪರೆಯ ಒಂದು ಭಾಗ. ಆದರೆ ಆ ಬಗ್ಗೆ ನಮಗೆ ವಸ್ತುನಿಷ್ಠ ಅರಿವೇ ಇಲ್ಲದಂತಾಗಿದೆ. ಚಿಕ್ಕಂದಿನಲ್ಲಿ ನಾವು ಇಂಥ ಹಬ್ಬಗಳ ಆಚರಣೆಗಳ ಮೂಲಕ ಪಡೆದುಕೊಂಡದ್ದು ಅಪಾರ. ಅವು ಈಗ ಕೇವಲ 'ವಿಧಿ'ಗಳಾಗಿ ಬಿಟ್ಟಿವೆ. ಹಬ್ಬಗಳು ಸಾಮಾಜಿಕವಾಗಿ ಹಾಗೂ ಸಾಂಸ್ಕೃತಿಕವಾಗಿ ಬಹಳ ಮುಖ್ಯವಾದವು ಎಂಬುದನ್ನು ನಾವು ಮರೆಯಬಾರದು.

ಹೊಸ ವರುಷ ಹೊಸ ಹರುಷವನ್ನು ತರಲಿ ಎಂದು ನಾವೆಲ್ಲರೂ ಹಾರೈಸುವುದು ಸಹಜವೇ ಆಗಿದೆ, ಅಲ್ಲವೆ? ಆದರೆ ಇಂದಿನ ಜೀವನದ ಸ್ಥಿತಿ-ಗತಿಯನ್ನು ನೋಡಿದಾಗ ಇಂತಹ ಸುಂದರ ಪ್ರಕೃತಿಯ ಮಧ್ಯದಲ್ಲಿ ಮನುಷ್ಯ ಮಾತ್ರ ಹಿಂಸೆ, ಕ್ರೌರ್ಯ, ವಂಚನೆ, ಶೋಷಣೆ, ಅಸಮಾನತೆಗಳಿಂದ ಯಾಕೆ ಇಷ್ಟು ವಿಕೃತನಾಗಿದ್ದಾನೆ? ಎನ್ನುವ ಚಿಂತೆ ನಮ್ಮನ್ನು ನಿತ್ಯವೂ ಕಾಡಿಸುತ್ತಿದೆ. ಇಂದು ನೀವು ಕೇಳಿದ ಈ ಕವಿಗಳ ಕಾವ್ಯನಿವೇದನೆಯ ಬಹುಮಟ್ಟಿನ ಚಿಂತನ ಇಂಥ ಸಂವೇದನೆಯಿಂದ ಕೂಡಿದ್ದು ಎಂದು ನಾನು ಭಾವಿಸಿದ್ದೇನೆ. ಸಂದರ್ಭ ಯುಗಾದಿ ಹಬ್ಬವಾಗಿದ್ದರೂ ಅದಕ್ಕೆ ಕವಿಗಳು ಸ್ಪಂದಿಸಿದ ರೀತಿ, ಅದನ್ನು ಕಾವ್ಯದಲ್ಲಿ ನಿರ್ವಹಿಸಿದ ಬಗೆ, ಪ್ರತಿಯೊಬ್ಬರದೂ ಬೇರೆ ಬೇರೆಯಾಗಿದ್ದು, ಅವರವರದೇ ಆದ ಭಾವ, ಭಾಷೆ, ವಿಚಾರ, ಕಲ್ಪನೆ, ಶೈಲಿಗಳಿಂದ ವೈವಿಧ್ಯಪೂರ್ಣವಾಗಿ ನಿಮ್ಮ ಮನಸ್ಸನ್ನು ಆಕರ್ಷಿಸಿ ಸಂತೋಷ ನೀಡಿರಬಹುದೆಂದು ನಾನು ಆಶಿಸಿದ್ದೇನೆ.

ಕವಿಗಳು ಕಾವ್ಯವಾಚನ ಮಾಡುತ್ತಿದ್ದಂತೆ ಆ ಕವಿತೆಗಳ ಮೂಲಕ ನಿಮ್ಮ ಕಣ್ಣಮುಂದೆ ಮೂಡಿದ ಚಿತ್ರಗಳನ್ನು ಒಂದೊಂದಾಗಿ ನೆನಪಿಸಿಕೊಳ್ಳಿ : ಎಂಥ ಚೇತೋಹಾರಿ ಅನುಭವ ! ರಕ್ತ ರಂಜಿತವಾಗದಿರಲಿ ಹೊಸ ಶತಮಾನದ ಮುಂಜಾನೆ ಎಂಬ ಹಾರೈಕೆ : ಬೇವು-ಬೆಲ್ಲ ಎರಡೂ ವಿದೇಶಕ್ಕೆ ಹೋಗಿಬಿಡಬಹುದು ಎಂಬ ಸಂದೇಹ ; ಗಡಿಯಾರದ ಮುಳ್ಳುಗಳು ಆಕಾಶದಲ್ಲಿ ಹಕ್ಕಿಯಾಗಿವೆ ; ಕಾಲದಾಚೆಯ ಕಡಲಿನಲ್ಲಿ ಪ್ರತಿಮೆಯೊಂದನ್ನು ಕಡೆದು ನಿಲ್ಲಿಸಬೇಕಂತೆ; ಬಾಲಸೂರ್ಯನ ಬೆನ್ನಿಗಂಟಿಸಿಕೊಂಡು ದುಡಿಮೆಯೇ ದೇವರೆಂದು ಹೊರಟವರನ್ನು ನೋಡಿ; ಪ್ರೀತಿ ಎಂಬ ಎರಡಕ್ಷರ ಇನ್ನೂ ಈ ಜಗತ್ತಿನಲ್ಲಿ ಉಳಿದಿರುವದು ನಮ್ಮ ಪುಣ್ಯ; ಯುಗ ಯುಗಾದಿ ಕಳೆದರೂ ಸಾಲ ಬಾಕಿ ಉಳಿದಿದೆ ಎಂಬ ವಾಸ್ತವವನ್ನು ಮರೆಯಲಿಕ್ಕಾದೀತೆ? ಮಾನವತೆಯ ಹೆಣವು ಬಿದ್ದಿದೆ, ಜೀವ ತುಂಬಲು ಬರುವರೆ ಎಂಬ ನಿರೀಕ್ಷೆ; ಈ ಎಲ್ಲದರ ಮಧ್ಯದಲ್ಲೂ ನಿಜದ ಚೆಲುವೊಂದು ಒಳಗಿಳಿಯುತಿದೆ; ಒಬ್ಬಂಟಿ ಪಯಣಿಗನಾಗಲು ಬಿಡಿ ನನ್ನ ಎಂಬ ಸ್ವಾತಂತ್ರ್ಯಾಪೇಕ್ಷೆ; ಮನುಷ್ಯ ಮನುಷ್ಯವಾಗಿರುವುದು ಯಾಕಿಷ್ಟು ಕಷ್ಟ ? ಎಂಬ ವಿಷಾದ; ಯುಗಾದಿಯಲ್ಲೂ ಬಿಡಿಸಲಾಗದ ಎಷ್ಟೊ ತಗಾದೆಗಳು; ಬರಿ ಹೊಟ್ಟೆ, ಭಾರಿ ಹೊಟ್ಟೆ; ನೋಡಿ: ಮುಳ್ಳ ಕಂಕುಳಲ್ಲಿ ಚೆಂಗುಲಾಬಿಯೊಂದು ನಗುತಿದೆ; ಕೇಳಿ; ಅಂಗಹೀನತೆಯಿಂದ ಕೂಗುತಿವೆ ಕಲ್ಲುಗಳು; ಕಾಮದಹನವಾದರೂ ಕಾಮಣ್ಣಗಳ ತಗಾದೆ ತಪ್ಪಿದ್ದಲ್ಲ, ಅಲ್ಲವೆ?; ಆಹ, ಗಾಳಿಯಲ್ಲಿ ಗೀತ ಹೆಣೆವ ಹಕ್ಕಿಗಳು! ಇಂದಿನ ಪರಿಸ್ಥಿತಿಯಲ್ಲಿ ಸತ್ಯದ ಸಮಾಧಿಗಳು ಭವ್ಯ ಮಂದಿರಗಳಾಗುವದುಂಟು; ಎಲ್ಲಿ ಹುಡುಕಲಿ ಕಂದ ಕವಿತೆಯನ್ನು? ಅಷ್ಟೊಂದು ಮಾಲಿನ್ಯ ಹಬ್ಬಿ ಹರಡಿದೆ. ಕಾಣದಾಗಿದೆ ಪುಟ್ಟ ಕಾಗದದ ದೋಣಿ - ಕಳೆದು ಹೋದ ಮುಗ್ಧತೆಯ ಸಂಕೇತ; ಸತ್ತ ಮೇಲೆ ಜೊತೆಗೆ ಬರುವುದು ತನ್ನ ಹಣಚಿ ಬಟ್ಟೊಂದೇ ಎಂಬ ಅರಿವು ಮುದುಕಿಗೆ ಮೂಡಿದ್ದರಲ್ಲಿ ಬದುಕಿನ ಎಂಥ ಸತ್ಯವಡಗಿದೆ!; ಮೂರು ದಿನದ ರಾಜನಾದವನ ಅನುಭವದ ಕಥೆ ಕೇಳಿದಿರಿ. ವಿಶ್ವದ ಪ್ರಯೋಗಾಲಯದಲ್ಲಿ ಅನೇಕ ಬಗೆಯ ರಾಸಾಯನಿಕಗಳು ತಯಾರಾಗುತ್ತಿವೆ; ಆದರೂ ಬದುಕಿನ ಗಂಧಗಾಳಿಯಲ್ಲಿ ಕಾವ್ಯ ಉಳಿಯುತ್ತದೆ; ಮಹಾಮಹಿಮರೂ ಕಳ್ಳಂಬಳ್ಳಿ ಆಡುತಿದ್ದಾರೆ, ಏನು ಮಾಡುವುದು? ಕಾಲಾತೀತ ಈ ಋತುಚಕ್ರ; ಗುಡಿಸಲ ಅಂಗಳದಲ್ಲಿ ಗುಲಾಬಿ ಬೆಳೆದು ಬಂದರೆ ಅಚ್ಚರಿಯೆ? ಯಾವ ವಿಶ್ವಾಸದ ಮೊಳೆಗೆ ತೂಗು ಹಾಕಲಿ ಎಂಬ ಹತಾಶೆ; ಬತ್ತಲಾರದ ಭಾವಗಳ ಯಾವ ಶೂನ್ಯದಲಿ ಬಿತ್ತಲಿ ಎಂಬ ಹುಡುಕಾಟ; ನರಭಕ್ಷಕರ ಕಂಡು ಹಸಿರು ಕನಸುಗಳು ಕನಸಾಗಿ ಹೋಗುತ್ತಿವೆ; 'ಪ್ರಮಾಥಿ' ಕರೆಯದೆ ಬಂದ ಅತಿಥಿ; ಹಬ್ಬದ ದಿನವೇ ಕರೆಂಟು ಹೋಗಬೇಕೆ?; ಕೊಂಚ ಅಲ್ಲಾಡುತ್ತದೆ ಮಂಚ. ಆದರೆ ಬೀಳುವುದಿಲ್ಲ ಎಂಬ ಭರವಸೆ ಮನಸ್ಸಿಗೆ; ದರ ಇಳಿದರೆ ಮುಂದಿನ ಸಲ ಆದರದ ಸ್ವಾಗತ ಯುಗಾದಿಗೆ; ..... ಕೇಳುಗರಲ್ಲಿ ಹೀಗೆ ವಿವಿಧ ಬಗೆಯ ಕಲ್ಪನಾಶಕ್ತಿಯನ್ನು ಬೆಳೆಸುವ ಕಾರ್ಯವನ್ನು ಯಶಸ್ವಿಯಾಗಿ ಈಡೇರಿಸಿದ ಈ ಕವಿ ಬಂಧುಗಳಿಗೆ ಮತ್ತೊಮ್ಮೆ ಧನ್ಯವಾದಗಳು.

ಈ ಕವಿತೆಗಳನ್ನು ಇಡಿಯಾಗಿ ಇನ್ನೊಮ್ಮೆ, ಮತ್ತೊಮ್ಮೆ ಓದಬೇಕೆಂದು ಮನಸ್ಸಾಗುತ್ತದಲ್ಲವೆ? ಅದಕ್ಕಾಗಿ ಆಕಾಶವಾಣಿ ಧಾರವಾಡ ಕೇಂದ್ರ ಕರ್ನಾಟಕ ವಿದ್ಯಾವರ್ಧಕ ಸಂಘದ ಸಹಯೋಗದೊಂದಿಗೆ ಅವುಗಳನ್ನು ಇದೀಗ ಪುಸ್ತಕ ರೂಪದಲ್ಲಿ ಸಹೃದಯರಿಗೆ ನೀಡಲು ಮುಂದೆ ಬಂದಿದೆ. ಈ ಕವಿಗೋಷ್ಠಿಯನ್ನು ಆಯೋಜಿಸಿ ಪ್ರಸ್ತುತಪಡಿಸಿದ ಡಾ. ಬಸವರಾಜ ಸಾದರ ಅವರು 'ಕಾವ್ಯಯಾನ'ದ ಸಂಪಾದಕರಾಗಿ ಆ ಕಾರ್ಯವನ್ನು ಪೂರೈಸುತ್ತಿದ್ದಾರೆ. ಅದಕ್ಕಾಗಿ ಅವರಿಗೆ ಹಾರ್ದಿಕ ಅಭಿನಂದನೆಗಳು.

೨

ಬೇವಿನ ಕಹಿ ಬಾಳಿನಲ್ಲಿ
ಹೂವಿನ ನರುಗಂಪು ಸೂಸಿ
ಜೀವ ಕಳೆಯ ತರುತಿದೆ

ಎಂಬ ವರಕವಿಯ ವಾಣಿಯನ್ನು ಯುಗ ಯುಗಾದಿ ಕಳೆದರೂ ಮರೆಯುವಂತಿಲ್ಲ, ಅಂಥ ಒಂದು ಜೀವನದರ್ಶನ ಆ ಕವಿತೆಯಲ್ಲಿದೆ. ಬೇವು ಮೂಲತಃ ಕಹಿಯೇ. ಯುಗಾದಿ, ವಸಂತಾಗಮನ ಅದನ್ನು ಸಿಹಿಗೊಳಿಸಲಾರದು. ಆದರೆ ಅದೇ ಬೇವಿನ ಮರದಲ್ಲಿ ಅದರದೇ ಆದ ಹೂವಿನ ನರುಗಂಪು ತುಂಬಿ ಆ ಕಹಿಯನ್ನೇ ಅದು ಸಹ್ಯಗೊಳಿಸಬಲ್ಲುದು. ಬಾಳಿನ ಬೇವಿನಂಥ ಅಸ್ತಿತ್ವದಲ್ಲಿಯೂ ಕಾವ್ಯ ಕೊಡುವ ಆನಂದ ಇದೇ ಬಗೆಯದು. ಜೀವನ ಸಂಪೂರ್ಣ ಸುಖ ಅಥವಾ ದುಃಖದ ನೆಲೆಯಲ್ಲ. ಪ್ರಕೃತಿಯ ಕತ್ತಲು-ಬೆಳಕಿನ ಚೆಲ್ಲಾಟದಂತೆಯೇ ಸುಖ-ದುಃಖಗಳು ಮಾನವ ಜೀವನದಲ್ಲಿ ನುಸುಳಿ ಹೋಗುತ್ತವೆ. ಈ ಎರಡನ್ನೂ ಸ್ವೀಕರಿಸುವ, ಸಾಮರಸ್ಯದ ತಿಳಿವಳಿಕೆ ಪಡೆಯುವ, ಹಮ್ಮು-ಬಿಮ್ಮುಗಳನ್ನು ಮುರಿಯುವ, ಮಧುರ ಮಧ್ಯಮಾರ್ಗವನ್ನು ನಾವು ಕಂಡುಕೊಳ್ಳಬೇಕಾಗಿದೆ. ಈ ದಿಸೆಯಲ್ಲಿ ಜನಾಂಗದ ಜೀವನಾಡಿಗಳೆನಿಸಿದ ಕವಿಗಳ ಪಾತ್ರ ಹಿರಿದಾದದ್ದು.

ಭಾರತದ ಇಂದಿನ ಸಂದರ್ಭ ಸಂಘರ್ಷಮಯವಾದದ್ದು ಮಾನವ ಸಂಬಂಧಗಳು ಸಿಡಿದು, ಒಡೆದು ದೂರಾಗುತ್ತಿವೆ. ಇದಕ್ಕೆ ನಮ್ಮಲ್ಲಿ ಪ್ರಬಲಗೊಂಡಿರುವ ಜಾತಿ, ಭಾಷೆ, ವರ್ಣ, ವರ್ಗ - ಇವೆಲ್ಲವೂ ಕಾರಣವಾಗಿವೆ. ಇಂದಿನ ರಾಜಕೀಯ ಹೊಸ ಹೊಸ ಬಿಕ್ಕಟ್ಟುಗಳನ್ನು ಸೃಷ್ಟಿಸುತ್ತಿದೆ. ಅದನ್ನು ನಿಯಂತ್ರಿಸುವುದು ಸಾಧ್ಯವೆ? ಎಂಬ ಸಂದೇಹ ದಿನೇ ದಿನೇ ಪ್ರಬಲಗೊಳ್ಳುತ್ತಿದೆ. ಇಂಥ ಸಂದರ್ಭದಲ್ಲಿ ಕವಿಯಾದವನು ಮಾನವೀಯತೆ, ಪ್ರೀತಿ, ಸಮಾನತೆಗಳನ್ನು ವಿಕೃತಗೊಳ್ಳದ ಹಾಗೆ, ಹಾಗೂ ಸಹನೀಯವಾಗುವಂತೆ ನೋಡಿಕೊಳ್ಳುವುದು ಸಾಧ್ಯವಾಗಬಹುದು.

ಇವತ್ತು ದೇಶ, ಅಷ್ಟೇ ಏಕೆ, ಇಡೀ ಜಗತ್ತೇ ಭ್ರಷ್ಟವಾಗಿದೆ. ವಿಚ್ಛಿದ್ರಗೊಂಡಿದೆ; ನಿಜ, ಇಂಥ ಪರಿಸ್ಥಿತಿಗೆ ಉಳಿದವರ ಕಡೆಗೆ ಬೊಟ್ಟು ಮಾಡುವ ಮೊದಲು ಇವಕ್ಕೆ ನಾವೂ ಕಾರಣ ಎನ್ನುವ ಪ್ರಜ್ಞೆ, ಎಚ್ಚರ ನಮ್ಮಲ್ಲಿ ಮೂಡಬೇಕಾಗಿದೆ. ಅಂದರೆ ಪರಿಸ್ಥಿತಿ ಸ್ವಲ್ಪ ಬದಲಾಗಬಹುದು;

ಹೊಸ ಜಗತ್ತಿನ ನಿರ್ಮಾಣದ ಹಾದಿಯಲ್ಲಿ ನಾಲ್ಕು ಹೆಜ್ಜೆ ಮುಂದಿಡಬಹುದು. ಎಲ್ಲೆಲ್ಲಿ, ಯಾವ್ಯಾವ ವ್ಯಕ್ತಿ, ವಸ್ತುಗಳಲ್ಲಿ ಒಳ್ಳೆಯತನ, ಪ್ರಾಮಾಣಿಕತೆ, ಸಾಮಾಜಿಕ ಕಳಕಳಿ, ನಿಸ್ವಾರ್ಥ ಎನ್ನುವುದಿದೆಯೋ ಅದನ್ನು ಒಂದುಗೂಡಿಸಬೇಕು. ಅದರ ಸಾತ್ವಿಕ ಶಕ್ತಿ ಕ್ರಿಯಾಶೀಲವಾಗುವಂತೆ ನೋಡಿಕೊಳ್ಳಬೇಕು.

ನಮ್ಮ ಅಧ್ಯಾತ್ಮಕ್ಕೂ ಈ ಭೂಮಿಯ ಮೇಲಿನ ಜೀವನವೇ ನೆಲೆಯಾಗಬೇಕು. 'ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರು' ಎಂಬ ರೀತಿಯಲ್ಲಿಯೇ ನಮ್ಮ ಆಚರಣೆ ದೃಢಗೊಳ್ಳಬೇಕಾಗಿದೆ. ಈಗಿನ ದುಸ್ಥಿತಿಯಿಂದ ತಾನೊಬ್ಬನೇ ಬಚಾವಾಗುವುದಲ್ಲ, ತನ್ನ ಪರಿಸರವೇ, ಇಡೀ ಸಮುದಾಯವೇ ಪಾರಾಗುವ ಬಗೆ ಹೇಗೆ ಎಂಬುದರ ಹುಡುಕಾಟ ನಮ್ಮಲ್ಲಿ, ನಮ್ಮ ಬರೆಹಗಾರರಲ್ಲಿ ನಡೆಯಬೇಕಾಗಿದೆ. ಈ ದಿಸೆಯಲ್ಲಿ ತಾವು ಕಂಡುಕೊಂಡ ದಾರಿಯನ್ನು ತಮ್ಮ ಕಾವ್ಯದ ಮೂಲಕ, ಬರವಣಿಗೆಯ ಮೂಲಕ ಉಳಿದವರಿಗೂ ಅವರು ತೋರಿಸಿಕೊಡಲಿ.

ಕಾವ್ಯ ಸೃಷ್ಟಿ ಮಾಡುವವರೂ, ಅದನ್ನು ಆಸ್ವಾದನ ಮಾಡುವವರೂ ಉನ್ನತ ಮೌಲ್ಯಗಳಿಂದ ಪ್ರೇರಿತರಾಗಿದ್ದರೆ ಮಾತ್ರ ಆ ಜನ ನಿಜಕ್ಕೂ ತೇಜಸ್ವಿಯಾಗಿ ಬಾಳಬಲ್ಲರು. ಕಾವ್ಯ ಕೇವಲ ಕಲ್ಪನಾ ಸೃಷ್ಟಿ, ಅಂಥ ಸೃಷ್ಟಿಕರ್ತರಾದ ಮಹಾನಿಷ್ಕ್ರಿಯವಾದಿಗಳಿಂದ ದೇಶಕ್ಕೆ ಏನು ಪ್ರಯೋಜನ ಎಂದು ಕೇಳುವವರಿದ್ದಾರೆ. ಅಂಥವರಿಗೆ ಟೆನಿಸನ್ ಕವಿ ಒಂದೆಡೆ ಉತ್ತರವಿತ್ತಿದ್ದಾನೆ:

A Song that stirs the nation's heart
Is in itself a splendid deed !

ಸ್ನೇಹಿತರೆ, ಹೊಸ ವರುಷ ನಮ್ಮ ನಾಡಿನ ಜನತೆಯಲ್ಲಿ ಪರಸ್ಪರ ಪ್ರೀತಿ ಹಾಗೂ ತಿಳಿವಳಿಕೆಯನ್ನು ಹೆಚ್ಚಿಸಿ, ಸುಖ, ಶಾಂತಿ, ನೆಮ್ಮದಿಗಳಿಂದ ಜೀವನದ ವೈಭವಕ್ಕೆ ಕಾರಣವಾಗಲಿ ಎಂದು ಹಾರೈಸುತ್ತೇನೆ.

ನಮಸ್ಕಾರ

(೧೯೯೯)

೭೧

## ಕನಸು ಕೋಳಿಯ ಕತ್ತು

ಕವನದಲ್ಲಿ ಒಂದು ಪದ, ಒಂದು ಚಿತ್ರ-ಯಾವುದೂ ಹುಸಿ ಹೋಗದಂತೆ, ಸಾಧ್ಯವಾದಲ್ಲಿ ಹೊಸ ಅರ್ಥಕ್ಕೆ ತೆರೆದುಕೊಳ್ಳುತ್ತ ಇಡಿಯಾದ ಒಂದು ಪರಿಣಾಮಕ್ಕೆ ತುಡಿಯುವ ಕಲೆಗಾರಿಕೆಯನ್ನು ತಮ್ಮ ಪ್ರಥಮ ಸಂಕಲನದಲ್ಲಿಯೇ ಸಾಧಿಸಲು ಪ್ರಯತ್ನಿಸಿರುವ ಕವಿ ಡಾ. ಗೋವಿಂದ ಹೆಗಡೆಯವರನ್ನು ಮೊದಲು ಅಭಿನಂದಿಸುತ್ತೇನೆ.

'ಇದು ಎಂಥ ಬೆಳಕು'ವಿನಲ್ಲಿ ಬದುಕಿನ ಬಗ್ಗೆ ಗಂಭೀರವಾದ ಚಿಂತನೆ ವಾಸ್ತವದ ಜೀವಂತ ವಿವರಗಳಿಂದಲೇ ಪ್ರಾರಂಭವಾಗಿ ('ಬೆಳಕು ಸಾಯುವ ಮುನ್ನ ಬೇಕು ಪರ್ಯಾಯ') ಕನಸಿನ ಕಡೆಗೆ ಕರೆದೊಯ್ಯುವ ರೀತಿ ('ಉರಿಯಿಂದ ಒಂದು ಕುಡಿ ಕಂಡಿದ್ದೆನಲ್ಲ, ಕನಸೇನು ಅದು') ಒಂದು ಬಗೆಯದಾದರೆ, ಸಾಮಾಜಿಕ ಸಂದರ್ಭದಲ್ಲಿ ಮನುಷ್ಯ ಸಂಬಂಧಗಳ ಅಂತರ್ಗತ ಅಂಜಿಕೆ, ಅನುಮಾನ, ಅಸಂಗತ ವ್ಯವಹಾರಗಳ ಕಣ್ಣುತಪ್ಪಿಸುವಾಟಗಳನ್ನು ('ಸುದ್ದಿ', 'ನಿರಾಜಿಯವ' ಇತ್ಯಾದಿ) ಚಿತ್ರಿಸುವಾಗ ಅದರ ಇನ್ನೊಂದು ಮಗ್ಗಲು ಗೋಚರಿಸುತ್ತದೆ. 'ಉದುರಿದ ಗರಿಗಳಲ್ಲಿ ನನ್ನದೆಷ್ಟು, ನಿನ್ನದೆಷ್ಟು' ಎಂದು 'ಪತನ'ದಲ್ಲಿ ವಿಶ್ಲೇಷಿಸುವಾಗ 'ಯಾಕೆ ಬದುಕು ವಿಷಾದ ಯೋಗವ ಮೀರಿ ಬೆಳೆಯುವದಿಲ್ಲ' ಎಂದು ಉತ್ತರ ಸಿಗದೆ ಚಡಪಡಿಸುವಾಗ, ದುರಂತಕ್ಕೆ ದಾಳಿಯಿಡುವ ವಿವಿಧ ಮುಖಗಳಲ್ಲಿ ವ್ಯಕ್ತಿ 'ಅವಸಾನ'ವನ್ನು ಅವಲೋಕಿಸಿಕೊಂಡಾಗ, 'ಗೋಡೆ ಇಲ್ಲದೆ ಬಾಗಿಲೂ ಇಲ್ಲ' ಎಂಬ ಸತ್ಯ ಹೊಳೆದಾಗ ಈ ಎಲ್ಲ ಪ್ರತಿಕ್ರಿಯೆ ಪ್ರತಿಮೆ ಪ್ರತೀಕಗಳ ಮೂಲಕ ಓದುಗನ ಅನುಭವಕ್ಕೆ ತಾಗುತ್ತದೆ. ಹೆಜ್ಜೆಗೆ ಹೆಜ್ಜೆ ಇಕ್ಕಿ ಹಾಡಿಗೆ ಉಸಿರು ನೀಡಲು ಆಹ್ವಾನಿಸುವ 'ಹಾಡಿ ಮುಗಿಸುವ ಮೊದಲು'ದಲ್ಲಿ ಚಿತ್ರವತ್ತಾಗಿ ಭಾವನೆಗಳು ಬಿಚ್ಚಿಕೊಳ್ಳುವ ತಂತ್ರ 'ಹಾಡು ಮುಗಿಯದಿರಲಿ' ಎಂಬ ವಿಶೇಷಾರ್ಥಕ್ಕೆ ಕೊಂಡೊಯ್ಯುವ ಅಭಿವ್ಯಕ್ತಿ ವಿಶಿಷ್ಟವಾಗಿದೆ.

'ಪಡೆದ ಹಾಗೆಲ್ಲ ಕಳೆದುಹೋಗುವ ಬೆಳಕ'ನ್ನು ಹರಳಾಗಿಸುವ, ಮೂಲ ಬಿಂಬದ ಬೆಳಕನ್ನು ತನ್ನ ಎದೆಯಲ್ಲಿ ಪ್ರತಿಫಲಿಸಿಕೊಳ್ಳುವ ಹಾಗೂ ಪ್ರೀತಿಯ ಪಿಸುಮಾತಿಗೆ ಪ್ರತಿಕ್ರಿಯಿಸುವ ಹಂಬಲ ಈ ಕಾವ್ಯದ ಕೇಂದ್ರ ಕಾಳಜಿಯಾಗಿದೆ. ವರ್ತಮಾನಕ್ಕೆ ತೀವ್ರವಾಗಿ ಸ್ಪಂದಿಸಿ, ಪ್ರಾಮಾಣಿಕವಾಗಿ ಅಭಿವ್ಯಕ್ತಿಸಿ ಅದರಲ್ಲೂ ಸಂಯಮ ಕಾಯ್ದುಕೊಳ್ಳುವ ('ಒಂದು ರಾತ್ರಿಯ ಪರಿಚಯ') ಶಕ್ತಿ, 'ಹಸಿರು ಸವಾಲಿನ ಗರುಕೆ ಸಂತಾನ'ದಂಥ ಹುಟ್ಟು ಪ್ರತಿಭೆಯ ಜಿಗುಟುಗಾರಿಕೆ, ಉದ್ವೇಗರಹಿತವಾದ ಉತ್ಕಟತೆ ಈ ಕಾವ್ಯದುದ್ದಕ್ಕೂ ಕಾಣುವಂಥದು.

ಜೀವನದ ಸಾಧ್ಯತೆಯಲ್ಲಿಯೇ ತನ್ನ ಕಾವ್ಯದ ಸಾಧ್ಯತೆಯನ್ನು ಕಂಡುಕೊಳ್ಳುವ ಹಾಗೂ ಪ್ರಚಲಿತ ಮಾದರಿಗಳಿಗಿಂತ ಭಿನ್ನವಾಗಿ ನಿಲ್ಲುವ ಪ್ರಯತ್ನ ಈ ಕಾವ್ಯದ ಗಮನಾರ್ಹ ಅಂಶವಾಗಿದೆ.

ನಾನು ಬೇರೆ ಕೆಲಸಗಳ ಒತ್ತಡದಲ್ಲಿದ್ದರೂ ಎರಡು ಮಾತು ಬರೆಯಬೇಕೆಂದು ಕವಿ ಹೆಗಡೆಯವರು ಬಯಸಿದ್ದರಿಂದ ಇದು ಅವಸರದ ಅವಲೋಕನವಾಯಿತು. ಆದರೆ ವಿಮರ್ಶಕರು ಈ ಕೃತಿಯನ್ನು ಖಂಡಿತವಾಗಿ ಗಮನಿಸುತ್ತಾರೆಂದು ಆಶಿಸಿದ್ದೇನೆ.

(೨೦೦೦)

## ೭೨

# ನಮ್ಮದೇ ದನಿಯೆತ್ತಿ ಎಂದು ಹಾಡೇವೋ

ಹಲವಾರು ವರ್ಷಗಳಿಂದ ಬೋಧನದೊಂದಿಗೆ ಬರೆವಣಿಗೆಯಲ್ಲಿಯೂ ತಮ್ಮನ್ನು ತೊಡಗಿಸಿಕೊಂಡಿರುವ ಡಾ. ಕೆ. ಸರೋಜಾ ಅವರು ಇಂಗ್ಲಿಷ್ ಹಾಗೂ ಕನ್ನಡದಲ್ಲಿ ಅನೇಕ ಸಂಶೋಧನ ಪ್ರಬಂಧಗಳೊಂದಿಗೆ ಜನಪ್ರಿಯ ಲೇಖನಗಳನ್ನೂ ಪ್ರಕಟಿಸಿ ಮನ್ನಣೆ ಪಡೆದಿದ್ದಾರೆ. "ತಾಯಿ ಹಾಲು" ಎಂಬ ಇವರ ವೈಜ್ಞಾನಿಕ ಸಾಹಿತ್ಯ ಕೃತಿಗೆ ೧೯೯೪ನೇ ಸಾಲಿನ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರೆತಿದೆ. 'ಮಹಿಳೆ ಮತ್ತು ಆರೋಗ್ಯ' ಎಂಬ ಮತ್ತೊಂದು ಗ್ರಂಥ ಪ್ರಕಟಣೆಗೆ ಸಿದ್ಧಗೊಂಡಿದೆ. ಮಹಿಳಾ ಅಧ್ಯಯನ, ಮಾನವ ವಿಕಾಸ ಮತ್ತು ಕೌಟುಂಬಿಕ ಬಾಂಧವ್ಯ ಇವು ಇವರ ಆಸಕ್ತಿಯ ಹಾಗೂ ಪರಿಣತಿಯ ವಿಷಯಗಳಾಗಿವೆ.

ಎರಡು ವರ್ಷಗಳ ಹಿಂದೆ ಶಸ್ತ್ರಚಿಕಿತ್ಸೆಗೊಳಗಾಗಿ ಮನೆಗೆ ಮರಳಿದ ಶ್ರೀಮತಿ ಸರೋಜ ಅವರನ್ನು ನೋಡಲು ನಾನು ಮನೆಯವರೊಂದಿಗೆ ಅವರಲ್ಲಿಗೆ ಹೋದಾಗ ಉಳಿದ ಮಾತುಗಳ ನಡುವೆ ಅವರು ಒಂದು ನೋಟಬುಕ್ಕನ್ನು ನನ್ನ ಕೈಗಿತ್ತರು. ನಾನು ಕುತೂಹಲದಿಂದ ಪುಟಗಳನ್ನು ತೆರೆದಾಗ ಅದರಲ್ಲಿ ಅವರು ಬರೆದ ತಾಜಾ ಕವಿತೆಗಳಿದ್ದವು. ಅವರು ಕವಿತೆ ಬರೆಯುವದು ನನಗೆ ಗೊತ್ತಿರಲಿಲ್ಲ. ಹಾಗೆ ನೋಡಿದರೆ, ತಾವು ಒಂದು ಮುಂಜಾನೆ ಹೀಗೆ ಕವಿತೆಗೆ ಕೈಹಚ್ಚಬಹುದೆಂದು ಅವರಿಗೂ ಅನಿಸಿರಲಿಲ್ಲವಂತೆ. ಅನಾರೋಗ್ಯದಿಂದ ಕಡ್ಡಾಯದ ವಿಶ್ರಾಂತಿಯಲ್ಲಿದ್ದಾಗ ಅವರು ಅನುಭವಿಸಿದ ತೀವ್ರ ಹತಾಶೆಯ, ನೋವಿನ ಅಸಹಾಯಕತೆಗಳಿಂದ ಮನಸ್ಸು ತಾಳಲಾರದಷ್ಟು ಖಿನ್ನತೆಗೊಳಗಾದಾಗ ಈ ಕವನಗಳು ಹೊರ ಹೊಮ್ಮಿದ್ದಾಗಿ ತಿಳಿಸಿದರು. ನೆನಪಿನ ಉಗ್ರಾಣದಿಂದ ಒಂದರ ಹಿಂದೊಂದು ಚಿಮ್ಮಿದ ಈ ರಚನೆಗಳು ಅವರ ಮನಸ್ಸಿನ ಭಾರವನ್ನು ಕಡಿಮೆ ಮಾಡಿದಂತೆಲ್ಲಾ, ರೋಗಿ ಔಷಧಿಯನ್ನು ಸೇವಿಸುವ ರೀತಿಯಲ್ಲಿ ಕವನ ಕಟ್ಟುವ ಕೆಲಸ ಮುಂದುವರಿದು ಈಗ ಸಂಗ್ರಹರೂಪದಲ್ಲಿ ಓದುಗರ ಕೈಸೇರುತ್ತಿರುವದು ಸಂತೋಷದ ವಿಷಯವಲ್ಲದೆ ಮತ್ತೇನು ? "ಹೀಗೆ ಹುಟ್ಟಿದ ಹೊಸ ಕವಿತೆಯೆಂಬ ಹಸುಗೂಸಿನ ಗಲ್ಲಗಳ ನೇವರಿಸುತ್ತ ಪುಳಕಗೊಳ್ಳುತ್ತೇನೆ", "ಕವನವೆ ಜೀವಭಾವನೆಗಳ ಕಾಯುವ ತಾಯಿ" ಎನ್ನುವಷ್ಟರಮಟ್ಟಿನ ತಾದಾತ್ಮ್ಯಭಾವ ಇವುಗಳಲ್ಲಿ ಸಹಜವಾಗಿಯೇ ಕಂಡು ಬರುತ್ತವೆ. ಈ ಕವಿತೆಗಳ ಬಗ್ಗೆ ನಾನೇ ನಾಲ್ಕು ಮಾತು ಬರೆಯಬೇಕೆಂದು ಅವರು ಅಪೇಕ್ಷಿಸಿದ್ದರಿಂದ ಅವರ ವಿಶ್ವಾಸವನ್ನು ಮನ್ನಿಸಿ ಆ ಕಾರ್ಯಕ್ಕೆ ಸಂತೋಷದಿಂದ ಕೈಗೂಡಿಸುತ್ತಿದ್ದೇನೆ.

ಈ ಕವನಗಳು ರೂಪಗೊಂಡದ್ದು ಈಗ ಒಂದೆರಡು ವರ್ಷವಾದರೂ ಇವುಗಳ ಆಳದಲ್ಲಿ ಒಂದು ಹೆಣ್ಣು ಜೀವ ಕಳೆದ ಐವತ್ತು ವರ್ಷಗಳಲ್ಲಿ ಜೀವನದಲ್ಲಿ ಕಂಡುಂಡ ನಾನಾ ಬಗೆಯ ನೋವಿನ ದಟ್ಟವಾದ ಅನುಭವವಿದೆ. ನಮ್ಮ ದೇಶದ ಹಾಗೂ ಸಮಾಜದ ಇಂದಿನ ಸಂದರ್ಭದಲ್ಲಿ ಹೆಣ್ಣು ಮಕ್ಕಳ ಎದೆಯೊಳಗಿನ ನೋವು, ದುಃಖ, ದುಮ್ಮಾನ, ಅವಮಾನ ಹಿಂಜರಿಕೆಗಳು ಭೀಕರ ಮೌನದ ಲಕ್ಷ್ಮಣರೇಖೆಗಳೊಳಗೇ ಒತ್ತೊತ್ತಾಗಿ ಕುಳಿತು ಹೆಪ್ಪುಗಟ್ಟಿರುವುದನ್ನು "ಲಕ್ಷ್ಮಣರೇಖೆಗಳಾಚೆಗಿನ ಹಾಡು" ಎಂಬ ಕವಿತೆ ಈ ಸಂಕಲನದ ಆಶಯವನ್ನು ಒಟ್ಟಾಗಿ ನಿವೇದಿಸುತ್ತದೆ :

ನೇರವಾಗಿ ಬಿಚ್ಚಿಕೊಳ್ಳದ
ಎದೆಗೊತ್ತಿ ತಬ್ಬಲಾಗದ
ಸ್ವಚ್ಛಂದವಾಗಿ ತುಡಿಯಲಾಗದ
ಎಷ್ಟೋ ಭಾವಗಳು ನೋವುಗಳು
ಹಾಡಾಗಿ ಹರಿಯುತಿವೆ
ನನ್ನ ಕವಿತೆಗಳಾಗಿ.

ಮೊದಮೊದಲು ತೀವ್ರವಾದ ಭಾವಲಹರಿಗಳಂತೆ ಕಂಡುಬಂದರೂ ಮರುಗಳಿಗೆಯಲ್ಲಿ ತಮ್ಮ ವೈಚಾರಿಕತೆಯ ಸೆಳಕುಗಳಿಂದ ಈ ಕವನಗಳು ನಮ್ಮ ಮನಸ್ಸನ್ನು ಸೆಳೆದುಕೊಂಡು ಬಿಡುತ್ತವೆ. ವೈಯಕ್ತಿಕವಾದ ಬೇಸರ, ದುಃಖ, ನಿರಾಶೆಗಳ ಭಾರವನ್ನು ಇಳುಹಿಕೊಳ್ಳುವುದರ ಜೊತೆಗೆ ಸಾಮಾಜಿಕ ಪರಿಸರಕ್ಕೆ ತೀವ್ರವಾಗಿ ಸ್ಪಂದಿಸಬಲ್ಲ ಶಕ್ತಿಯಿಂದ ಅನ್ಯಾಯ, ಶೋಷಣೆ, ಡಾಂಭಿಕತೆಗಳನ್ನು ಪ್ರತಿಭಟಿಸುವ ದನಿಯನ್ನು ಪಡೆದುಕೊಳ್ಳುತ್ತ ವಾಸ್ತವದ ನೆಲೆಯಲ್ಲಿ ತಮ್ಮನ್ನು ಕಂಡುಕೊಳ್ಳುವ ಪ್ರಯತ್ನ ಇಲ್ಲಿಯ ಅನೇಕ ಕವಿತೆಗಳಲ್ಲಿ ಕಂಡು ಬರುತ್ತದೆ. ಈ ಸಂಗ್ರಹದ ಹೆಸರಿನ ಕವಿತೆಯೇ 'ನಮ್ಮದೇ ದನಿ ಎತ್ತಿ ಎಂದು ಹಾಡೇವು' ಸ್ತ್ರೀ ಸಮುದಾಯದ ಹತಾಶೆಯನ್ನೂ ಹಂಬಲವನ್ನು ಕೂಡಿಯೇ ಮಿಡಿಯುತ್ತದೆ:

ಎಂದು ನಾವು ಆಮೆಗಳ ಚಿಪ್ಪಿಂದ ಹೊರ ಬೀಳುತ್ತೇವೊ ?
ನೆಲಬಿಟ್ಟು ಗರಿಬಿಚ್ಚಿ ಬಾನಾಡಿಗಳಂತೆ ಎಂದು ಹಾರಾಡುತ್ತೇವೋ ?
ಇನ್ನೂ ಯಾರೂ ಕೇಳದ ಹಲವಾರು ಪ್ರಶ್ನೆಗಳ ಕೇಳುತ್ತ,
ಯಾರಿಗೂ ಇನ್ನೂ ತಿಳಿದಿಲ್ಲದ ನಮ್ಮ ನೂರಾರು ನೋವುಗಳ,
ನಿರಾಸೆಗಳ, ನಲಿವುಗಳ, ಉತ್ಸಾಹದ, ಉತ್ಸವದ, ದಂಗೆ ಎಬ್ಬಿಸುವ
ಹಾಡುಗಳನೆಂದು ನಮ್ಮದೇ ದನಿ ಹಚ್ಚಿ ಹಾಡೇವೋ.

ಸ್ತ್ರೀಪರವಾದ ಕಾಳಜಿಗಳೇ ಇಲ್ಲಿಯ ಹೆಚ್ಚಿನ ಕವಿತೆಗಳ ವಸ್ತುವಾಗಿದ್ದು ಅದು ವೈವಿಧ್ಯದಿಂದಲೂ ಕೂಡಿದೆ. ಹೆಣ್ಣಿನ ಇಂದಿನ ಸ್ಥಿತಿಗತಿಯ ವಾಸ್ತವ ಚಿತ್ರವನ್ನು ನೀಡುತ್ತ :

ಎಚ್ಚರಿಕೆ, ನೀನು ನೀನಾಗಿಯೆ ಇರಲು
ನೀ, ನಿನ್ನೊಳಗೆ, ನಿನ್ನ ಹೊರಗೆ ಕಾಯಬೇಕಾಗಿದೆ ಕಾವಲು

ಎಂದು ಸೋದರಿಗೆ ಎಚ್ಚರಿಕೆ ನೀಡುವಂತೆಯೇ 'ನವವಿವಾಹಿತನಿಗೊಂದು ಕಿವಿಮಾತು' ಹೇಳುವಲ್ಲಿ ಅವನ ನೈತಿಕ ಹೊಣೆಗಾರಿಕೆಯ ಬಗ್ಗೆ ಸ್ವಲ್ಪ ದೀರ್ಘವಾಗಿಯೇ ನಿರೂಪಿಸಿ ಪರಸ್ಪರ ತಿಳಿವಳಿಕೆಯಲ್ಲಿ ಹೆಣ್ಣಿಗಿರುವ ವಿಶೇಷಗುಣವನ್ನು ಸೂಚಿಸಲಾಗಿದೆ :

ನಿಜಾರ್ಥದಲ್ಲಿ ನೀ ಜೀವದ ಗೆಳೆಯನಾದರೆ
ಮೆಚ್ಚಿ ಬಂದ, ಮನ ಕೊಟ್ಟ ಮಡದಿಯೊಬ್ಬಳಿಗೆ
ಮಾತ್ರ ಗೊತ್ತಿದೆ ಒಮ್ಮೆಲೆ ಮನದನ್ನನಿಗೆ
ಮಡದಿ, ಗೆಳತಿ, ತಾಯಾಗುವದು ಹೇಗೆಂದು

ಹೆಣ್ಣು ಉರಿಯುವ ಮೋಂಬತ್ತಿ, ಕರಗುವ ಕರ್ಪೂರ, ತೇಯುವ ಗಂಧದ ಕೊರಡು ಎಂಬ ಗಂಡಿನ ಅಥವಾ ಸಮಾಜದ ಭಾವನೆಯನ್ನು ಅಲ್ಲಗಳೆದು ಅವಳ ನಿಜರೂಪವನ್ನು 'ಪ್ರಕೃತಿ' ಪದ್ಯ ಪ್ರತೀಕಾತ್ಮಕವಾಗಿ ಪರಿಣಾಮಕಾರಿಯಾಗಿ ಅಭಿವ್ಯಕ್ತಗೊಳಿಸುತ್ತದೆ :

ನಾನು ಪ್ರಕೃತಿ, ಕರಗುವದು ಉರಿಯುವದು
ತನ್ನ ತಾನೇ ತೇಯ್ದು ಇಲ್ಲವಾಗುವದು
ನನ್ನ ಸಹಜಗುಣವಲ್ಲ.

ಹಸಿರುಟ್ಟು, ಹೂಮುಡಿದು ಉಲ್ಲಾಸದಿಂದ ಭೋರ್ಗರೆಯುವಳು ತಾನು, ಎಲ್ಲ ಕಾಲದಲ್ಲೂ ಬೇರೆ ಬೇರೆ ಮನುಗಳ ಬೋಧನೆ, ಹೊಸ ಹೊಸ ಸುಖಗಳ ಶೋಧನೆಯ ರೂಪದ ಶೋಷಣೆ ನಿಲ್ಲದೆ ಹೋದರೆ 'ಪ್ರಕೃತಿಯ ಕ್ಷಮೆಯ ಎಲ್ಲೆಗೆ ಇದೇ ಕೊನೆ' ಎಂದ ಮಾತ್ರಕ್ಕೆ ಈ ಕಾವ್ಯದ ನಾಯಕಿ ಪುರುಷದ್ವೇಷಿಯೆಂದು ಭಾವಿಸಬೇಕಿಲ್ಲ, ಅವನು ಸುಖದುಃಖಗಳನ್ನು ಪರಸ್ಪರ ಹಂಚಿಕೊಳ್ಳುವ ಬಗೆಯರಳಿಸಬಲ್ಲವನಾಗಿರಬೇಕು.

ನನ್ನದೆಲ್ಲವ ಹಂಚಿಕೊಳ್ಳ ಬಲ್ಲವ
ತನ್ನದೆಲ್ಲವ ಹಂಚುವ ತೋಳುಳ್ಳವ
ಅರಳಬಲ್ಲ ಎನ್ನೀ ನಗೆಯ ಅರಳಿಸಬಲ್ಲವ
ಸಿಗುವನೇನು ಎಂದಾದರೂ ನನಗೆ
ಈ ಕನಸುಗಳ ಜೊತೆಗಾರ ?

'ಪ್ರೀತಿ'ಪದ್ಯದಲ್ಲಿ ಹೆಣ್ಣಿನ ಪ್ರೀತಿ ಎಷ್ಟೊಂದು ಗಾಢವಾಗಿರಬಲ್ಲದೆಂಬುದನ್ನು ಸೂಚಿಸಲಾಗಿದೆ.

ತಾನು ಮನುಕುಲದ ಚೇತನ ಎಂಬ ಆತ್ಮವಿಶ್ವಾಸವುಳ್ಳ ಹೆಣ್ಣು ದಿಟ್ಟತನದಿಂದಲೇ ನುಡಿಯಬಲ್ಲಳು ಹೀಗೆ :

'ನೀವೆಂದುಕೊಂಡಂತೆ
ಹೊನ್ನು, ಮಣ್ಣುಗಳ ಪಟ್ಟಿಯಲ್ಲಿಯ
ವಸ್ತುವಾಗಿ ಇರುವುದಿಲ್ಲ ನಾನೆಂದಿಗೂ'

ಮೀರಾ, ಮಹದೇವಿಯಕ್ಕ ನಾರಿಯರ ಆದರ್ಶಗಳಾಗದಂತೆ ನಾರಿಯರ ನೆಲೆಯಿಂದ ಅವರನ್ನು ದೇವಿಯರ ಪೀಠಕ್ಕೇರಿಸಿ ಮತ್ತ ನಾರಿಯರ ಸುತ್ತ ಕಟ್ಟು ಕಟ್ಟಳೆಯ ಕೋಟೆ ಕಟ್ಟಿ ನಿಲ್ಲಿಸಿರುವದರ ಪ್ರತಿಭಟನೆ 'ಬಯಲ ದಕ್ಕಿಸುವವರು ಬೇಕಾಗಿದ್ದಾರೆ' ಕವಿತೆಯಲ್ಲಿ ನೇರವಾಗಿಯೇ ಬಂದಿದೆ.

'ಕಪ್ಪು ಕಮಲಗಳು' 'ಬೇಲಿಯಾಚೆಯ ಹೂಗಳು' ಕವಿತೆಗಳು 'ಕಾಮದ ಕ್ರೌರ್ಯದ ನಂಜನ್ನು ಉಣ್ಣುತ್ತಿರುವ' ವೇಶ್ಯಾಜೀವನದ ಮೇಲೆ ಬೆಳಕು ಚೆಲ್ಲುತ್ತವೆ.

ಏನಿದ್ದರೂ ಅಂತಃಕರಣದ ಸೆಲೆ ಬತ್ತಬಾರದು. ಸಂವೇದನೆ ಮೊಂಡಾದರೆ "ನನ್ನೊಳಗಿನ ನಾನು ಎಲ್ಲಿ ಕಳೆದು ಹೋಗುತ್ತಿದ್ದೇನೊ" ಎಂಬ ಭಯ ಕವಿಜೀವಕ್ಕೆ. ಇಷ್ಟೆಲ್ಲ ನೋವಿನ, ತಳಮಳದ ಹಿನ್ನೆಲೆಯಲ್ಲಿಯೂ ಆಕೆ ಆಶಾವಾದಿಯಾಗಿ

ಎನ್ನೀ ಕರುಳಿಗೆ ಕಿಚ್ಚಿಟ್ಟವರ
ಇಚ್ಛೆಗೆ ಬಾಗದೆ
ಸುಕ್ಕಾಗದೆ ಸೊರಗದೆ
ಎಂದಿಗೂ ಬತ್ತದ ಕಡಲ ತೆರದಿ
ಮೊರೆಯುತ ಉಕ್ಕುತ ಬರಲಿ
ಜೀವನ ಪ್ರೀತಿ

ಎಂದು ಜೀವನ ಶ್ರದ್ಧೆಗೆ ಎರವಾಗದಿರುವುದು ಇಲ್ಲಿ ಗಮನಾರ್ಹವಾಗಿದೆ. ಹಿಂದಿನದೇನೇ ಇರಲಿ, ನಮಗಿರುವ ವರ್ತಮಾನವನ್ನು ಸಾರ್ಥಕಗೊಳಿಸಿಕೊಳ್ಳಬೇಕೆಂಬ ಆರೋಗ್ಯಕರ ದೃಷ್ಟಿ ಈ ಕವಯಿತ್ರಿಗಿರುವದು ಮೆಚ್ಚತಕ್ಕ ಸಂಗತಿ :

'ಇಂದು' ಎಂಬುದರ ವರ್ತಮಾನ
ಬದುಕು ನಮಗಿತ್ತ ಬಹುಮಾನ.
ಅದರ ಅನಂತ ಸಾಧ್ಯತೆಗಳ ಸಾರ್ಥಕತೆಗಳ
ಕೆಡಿಸದಿರಲಿ ಭೂತಕಾಲದ ನೆನಪುಗಳು
ನೋವುಗಳು, ತಪ್ಪು ನೆಪ್ಪುಗಳು ಕಾಡದಿರಲಿ
ವರ್ತಮಾನಕೆ, ಅದರ ಸಾರ್ಥಕತೆಗೆ.

'ಚಮಚಾಗಳ ದರಬಾರು' 'ಸ್ವಾತಂತ್ರ್ಯದ ಬೆಳ್ಳಿಹಬ್ಬ' 'ಬರುತಿಹುದು ರಾಮರುಗಳ ರಾಜ್ಯ' 'ಮಹಿಳಾ ಮೀಸಲಾತಿ' ಗಳಂಥ ರಾಜಕೀಯ ವಿಷಯಗಳನ್ನೆತ್ತಿಕೊಂಡು ಬರೆದ ಕವಿತೆಗಳೂ ಇಲ್ಲಿವೆ. ಮೊಗವೆತ್ತಿ ನೋಡಿದರೆ ವಿಶಾಲವಾದ ಆಕಾಶ ಕಂಡೇ ಕಾಣುತ್ತದೆ. ಆದ್ದರಿಂದ 'ಬಗೆ

ಅರಳಿ ಬುದ್ಧಿ ಅರಿಯದ ಹರುಷದ ಸವಿ'ಯನ್ನು ಅನುಭವಿಸಬಹುದು. ಈ ಸಂದರ್ಭದಲ್ಲಿ ಕಣ್ಣಿದ್ದೂ ಕುರುಡರಾದವರನ್ನು, ಮಿಡಿವ ಕರುಳಿಲ್ಲದವರನ್ನು ಕುರಿತ ವ್ಯಂಗ್ಯ 'ಸ್ವಯಂ ಪ್ರತಿಭೆಯ ಕತ್ತಲೊಳಗೆ' ಸೂಚ್ಯವಾಗಿ ಕಾಣಿಸಿಕೊಂಡಿದೆ.

ತಮ್ಮ ಮೂಗ ನೇರಕೆ ಜಗವನಳೆಯುವವರಿಗೆ
ಅಹಂಕಾರ ಅಸೂಯೆಗಳ ಹೆಣಭಾರ ಹೊತ್ತಿರುವವರಿಗೆ
ಅನಂತ ಅಗಾಧ ಆಗಸ ಕಂಡೀತು ಹೇಗೆ ?
ಅವರಿರುವರು ತಮ್ಮ ಸ್ವಯಂಪ್ರಭೆಯ ಕತ್ತಲೊಳಗೆ

ಹಾಗೆಯೇ ಸಾಮಾಜಿಕ ನಿಷೇಧಗಳ ವಿರುದ್ಧ ದನಿ ಎತ್ತಿರುವ ಕವಿತೆಗಳಲ್ಲಿ ಆಕ್ರೋಶ ರೂಪತಾಳಿದ್ದರೂ ಅದರ ಹಿಂದಿರುವ ಪ್ರಾಮಾಣಿಕತೆಯನ್ನು ಅಲ್ಲಗಳೆಯುವಂತಿಲ್ಲ.

ಕಳೆದ ಎರಡು ಮೂರು ದಶಕಗಳಿಂದ ಹಲವಾರು ಪ್ರತಿಭಾನ್ವಿತ ಕವಯಿತ್ರಿಯರು ತಂತಮ್ಮ ಸಾಧನೆಯಿಂದ ಕನ್ನಡ ಸಾಹಿತ್ಯಕ್ಕೆ ಹೊಸ ಆಯಾಮವನ್ನೂ ಚೈತನ್ಯವನ್ನೂ ತಂದುಕೊಟ್ಟಿದ್ದಾರೆ. ಈ ಸಂದರ್ಭದಲ್ಲಿ ಕಾವ್ಯಕ್ಷೇತ್ರಕ್ಕೆ ಇದುವರೆಗೆ ತೀರ ಅಪರಿಚಿತರಾಗಿಯೇ ಉಳಿದಿದ್ದ ಶ್ರೀಮತಿ ಕೆ. ಸರೋಜಾ ಅವರು ಇದೀಗ ಒಮ್ಮೆಲೆ ಅನಿವಾರ್ಯವೆನ್ನುವಂತೆ ತಮ್ಮದೇ ದನಿಯೆತ್ತಿ ಹಾಡಿ ಈ ಪದ್ಯಗಳ ಮೂಲಕ ತಮ್ಮ ಒಳಗಿನ ಅಳಲನ್ನು ತೋಡಿಕೊಂಡಿದ್ದಾರೆ. ಅವರ ಈ ಚೊಚ್ಚಲು ಕೃತಿಯಲ್ಲಿ ಮಹಿಳಾ ಕಾವ್ಯದ ದೃಷ್ಟಿಯಿಂದ ಕೆಲವು ಮೆಚ್ಚುಗೆಯ ಅಂಶಗಳನ್ನು ಗುರುತಿಸಿ ಓದುಗರಿಗೆ ಪರಿಚಯಿಸುವದಷ್ಟೆ ಈ ಮುನ್ನುಡಿಯ ಉದ್ದೇಶ. ಮಾತಿನಲ್ಲಿ ಮಿತವ್ಯಯ, ಅಭಿವ್ಯಕ್ತಿಯಲ್ಲಿ ಸಂಯಮ, ಕಲೆಯ ಬಗ್ಗೆ ಕಾಳಜಿ ಹೆಚ್ಚಿದಂತೆಲ್ಲ ಇನ್ನೂ ಉತ್ತಮ ರಚನೆಗಳನ್ನು ಇವರು ಕೊಡಬಲ್ಲರೆಂಬ ಭರವಸೆಯನ್ನು ಪ್ರಸ್ತುತ ಸಂಗ್ರಹ ಖಂಡಿತವಾಗಿಯೂ ಮೂಡಿಸುತ್ತದೆ. ಈ ದಿಸೆಯಲ್ಲಿ ಅವರಿಗೆ ಎಲ್ಲ ಬಗೆಯ ಯಶಸ್ಸನ್ನೂ ಶುಭವನ್ನೂ ಕೋರುತ್ತೇನೆ

(೨೦೦೦)

## ೭೩

# ನಾಕ ಹೊತ್ತ ಮಲ್ಲಿಗೆ

ಕಾವ್ಯ, ಕಥೆ ಹಾಗೂ ವಿಮರ್ಶಾ ಬರವಣಿಗೆಯಲ್ಲಿ ತಮ್ಮನ್ನು ತೀವ್ರವಾಗಿ ತೊಡಗಿಸಿಕೊಂಡಿರುವ ಡಾ. ಗುಂಡಣ್ಣ ಕಲಬುರ್ಗಿ ಇದೀಗ ತಮ್ಮ ಮೂರನೆಯ ಕಾವ್ಯ ಸಂಕಲನವನ್ನು ಓದುಗರಿಗೆ ನೀಡುತ್ತಿದ್ದಾರೆ. ಅವರ ಕಾವ್ಯ ಶ್ರದ್ಧೆಯನ್ನು ಮೆಚ್ಚಿಕೊಂಡಿರುವಂತೆಯೇ ಕಾವ್ಯದ ಬೆಳವಣಿಗೆಯನ್ನು ಕಂಡು ಸಂತೋಷಪಟ್ಟಿದ್ದೇನೆ.

ಕಲಬುರ್ಗಿಯವರ ಪ್ರಥಮ ಸಂಕಲನಕ್ಕೆ (ಸತ್ತ ಹುಡುಗಿಯ ನೆನಪಿಗಾಗಿ ೧೯೮೯) ಮುನ್ನುಡಿ ಬರೆಯುತ್ತ ಡಾ. ಎಸ್.ಎಸ್. ಕೋತಿನ ಅವರು 'ಬಹಳಷ್ಟು ಕವನಗಳಲ್ಲಿ ಬದುಕಿನ ಶೋಧನೆಗಿಂತ ತನ್ನ ಕಾವ್ಯದ ಸ್ವರೂಪ ಧೋರಣೆಗಳನ್ನು ಕುರಿತೇ ನಡೆಸಿರುವ ಅನ್ವೇಷಣೆಯ ಸಾಚಾತನ'ವನ್ನು ಗುರುತಿಸುತ್ತ ಕಾವ್ಯ ರಚನೆಯ ಬಗ್ಗೆ ಅವರಿಗಿರುವ ಗಂಭೀರ ಕಾಳಜಿಯನ್ನು ಮೆಚ್ಚಿಕೊಂಡಿದ್ದುಂಟು. ತನ್ನ ಕಾವ್ಯದ ಸ್ವರೂಪವನ್ನು ಹಾಗೆ ನಿಶ್ಚಿತ ಪಡಿಸಿಕೊಳ್ಳುತ್ತಿರುವಂತೆಯೇ ಈ ಕವಿ ಬದುಕಿನ ಶೋಧನೆಯಲ್ಲಿಯೂ ಮುಂದುವರೆದಿರುವುದನ್ನು ಪ್ರಸ್ತುತ ಸಂಗ್ರಹ ಸೂಚಿಸುತ್ತದೆ.

ಕನ್ನಡ ಕಾವ್ಯ ನವೋದಯದಲ್ಲಿ ಸಮೃದ್ಧಿಯನ್ನು ಪಡೆದು, ನವ್ಯದ ಹಾದಿಯನ್ನು ಪರಿಶ್ರಮದಿಂದ ಕ್ರಮಿಸಿ, ಬಂಡಾಯದ ತೀವ್ರತೆಯನ್ನು ಪ್ರಕಟಿಸುತ್ತಿರುವ ಸಂದರ್ಭದಲ್ಲಿ ಕಾವ್ಯ ರಚನೆಗೆ ತೊಡಗಿದ ಈ ಕವಿ ತನ್ನಲ್ಲಿ ಉಂಟಾದ ಗೊಂದಲವನ್ನು ನಿವಾರಿಸಿಕೊಳ್ಳಲು ತನ್ನ ಕಾವ್ಯದ ಸ್ವರೂಪ ಹಾಗೂ ಧೋರಣೆಯ ಕಡೆಗೆ ಹೆಚ್ಚು ಲಕ್ಷ್ಯ ವಹಿಸಿದ್ದು ಸಹಜವೇ ಆಗಿದೆ. ಅಭಿವ್ಯಕ್ತಿಯಲ್ಲಿ ಹೃದ್ಯವೆನಿಸುವ ಸರಳತೆಯನ್ನು, ಭಾಷೆಯಲ್ಲಿ ಹೊಸ ನುಡಿಗಟ್ಟನ್ನು ಪ್ರಾರಂಭದ ದೆಸೆಯಲ್ಲಿಯೇ ಕಂಡುಕೊಳ್ಳಲು ಹವಣಿಸುತ್ತ ತನ್ನ ವ್ಯಕ್ತಿತ್ವವನ್ನು ರೂಪಿಸಿಕೊಳ್ಳುತ್ತಿರುವ ಸಂದರ್ಭದಲ್ಲಿ ಕೆಲವು ದ್ವಂದ್ವಗಳನ್ನು ವೈರುಧ್ಯಗಳನ್ನು ಎದುರಿಸಬೇಕಾಗಿ ಬಂದುದಕ್ಕೆ ಪ್ರಥಮ ಸಂಗ್ರಹದಲ್ಲಿ ನಿದರ್ಶನಗಳಿವೆ.

ಉಘೇ ಉಘೇ ಎಂದವರ ಹಿಂದೆ
ಉಘೇ ಎನ್ನುತ್ತ -
ತನ್ನತನವನ್ನೇ ಶೂನ್ಯದಲ್ಲಿ ಲಯವಾಗಿಸಿ
ಬೇರುಗಳ ಜಿಗಟುಗಳಿಲ್ಲದ
ಗೊಡ್ಡು ಪುರಾಣಗಳನ್ನೇ ಬಣ್ಣಿಸುತ್ತ
ಹುಂಬ ನಿದ್ರೆಯಲಿ ಧಿಮಿಗುಡಲು

ಹೊರಟ ನನ್ನ ಕವನಗಳು
ಇಂದೇಕೋ
ನಿಗಿನಿಗಿ ಬೆಂಕಿಯ ಕಾರುತ್ತ
ಎಚ್ಚರಿಸಿ ಎಚ್ಚರಾಗುತ್ತಿದೆ (ನನ್ನ ಕವನಗಳು)

ಹೊಟ್ಟೆಯೊಳಗಿನ ಸಿಟ್ಟನ್ನೆಲ್ಲ ಹೊರಹಾಕುವ ಭರದಲ್ಲಿ ಕವಿತೆ ವಾಚ್ಯಕ್ಕಿಳಿದದ್ದುಂಟು : (ಜನನಾಯಕರಲ್ಲವೇ ನೀವು ?) 'ವಾಸ್ತವದ ಬಲೆ'ಯಲ್ಲಿ ಮುಗ್ಗರಿಸುವ ಅನುಭವವೂ ಆಗದೆ ಹೋಗಿಲ್ಲ. ಬರಬರುತ್ತ ಭಾವದ ಕಾವಿನಲ್ಲಿ ಕಾವ್ಯ ಮೊಳೆಯುವ ಪ್ರಕ್ರಿಯೆ ಪ್ರಾರಂಭವಾಗುತ್ತದೆ.

ಮೂಕ ವೇದನೆಗಳ
ಕನಸು ಕುಸುಮಗಳ
ಹೊತ್ತು ನಿಂತ
ಸುಪ್ತ ಚೇತನಗಳೇ
ಸೆಲೆಗಳಿಲ್ಲದೇ ಆರಿ ಹೋದ ಅನಿಸಿಕೆಗಳೇ
ಅಭಿವ್ಯಕ್ತಗೊಳ್ಳಲು
ಬಸಿರು ಹೊತ್ತು ತರುವ
ನೂರು ಭಾವನೆಗಳೇ ಮಾತನಾಡಿ

(ಭಾವನೆಗಳೇ ಮಾತನಾಡಿ)

ಕೆಲವೆಡೆ ಜಾನಪದ ಲಯವನ್ನು ಹಿಡಿಯಲು ಕೈ ಚಾಚಿದ್ದರೂ ಶಿಷ್ಟಗತಿಯಲ್ಲಿಯೇ ತಿಳಿದು ತನ್ನೊಳು ತನ್ನ ಮೋಕ್ಷವಗಳಿಸಿಕೊಳ್ಳುವತ್ತ ಕವಿ ಸಾಗಿರುವುದನ್ನು ಈ ಮೊದಲ ಘಟ್ಟ ಸೂಚಿಸುತ್ತದೆ.

ನಾಲ್ಕು ವರ್ಷಗಳ ನಂತರ ಪ್ರಕಟಿಸಿದ 'ತಲ್ಲಣ'ದಲ್ಲಿ ಅಸಮಾಧಾನ, ಅಸಹಾಯಕತೆಯ ಮನಸ್ಥಿತಿಯಿದ್ದರೂ 'ಕಾವ್ಯ ವಿಶಾಲವಾಗಿ ಬೆಳೆಯುತ್ತಿರುವ ಅತ್ಯಂತ ಕುತೂಹಲಪೂರ್ಣ ಮಾಧ್ಯಮ' ಎಂಬ ಅರಿವು ದಟ್ಟವಾಗುತ್ತ ಬಂದಿರುವುದನ್ನು ಕಾಣಬಹುದು. ಜೊತೆಗೇ ಅದರ ಸಂಕೀರ್ಣತೆಯೂ ಕಾಣಿಸಿಕೊಳ್ಳತೊಡಗುತ್ತದೆ. 'ಸಾಮಾಜಿಕ ಬದುಕಿಗೆ ಪ್ರಾಮಾಣಿಕವಾಗಿ ಸ್ಪಂದಿಸಬೇಕೆನ್ನುವ ಶ್ರೀಸಾಮಾನ್ಯನಿಗೂ ಕ್ಷೋಭೆ ತಪ್ಪಿಲ್ಲ.... ಇಂತಹ ತಲ್ಲಣ, ಜಡತೆ, ಸಾಮಾಜಿಕ ದುರಂತಗಳ ನಡುವೆ ಗುಂಡಣ್ಣ ಕಲಬುರ್ಗಿ ತಮ್ಮ ತಲ್ಲಣದ ಅನುಭವಕ್ಕೆ ಭಾಷೆಯ ರೂಪ ಕೊಡುತ್ತಿರುವುದು ಜಡತೆಯಿಂದ ತಪ್ಪಿಸಿಕೊಳ್ಳಬೇಕೆನ್ನುವ ಅವರ ಜೀವಂತಿಕೆಯ ಪ್ರಯತ್ನ ಎಂಬುದನ್ನು' ಡಾ. ಶ್ಯಾಮಸುಂದರ ಬಿದರಕುಂದಿಯವರು ಎತ್ತಿ ತೋರಿಸಿರುವುದು ಸಮಂಜಸವಾಗಿದೆ.

ವ್ಯಕ್ತಿತ್ವದ ಮೂಲಸತ್ವವಾದ ಸ್ವಾತಂತ್ರ್ಯ ಹಾಗೂ ಆತ್ಮ ಗೌರವಕ್ಕೆ ಧಕ್ಕೆಯೊದಗಿರುವುದನ್ನು ಕವಿ ಲಕ್ಷಿಸಿದ್ದಾರೆ. ರಾಜಕೀಯ ಪರಿಸರದ ಭ್ರಷ್ಟಾಚಾರದಿಂದ ಪಾರಾಗುವ ದಾರಿಕಾಣದೆ ಕಂಗೆಟ್ಟಿರುವ ಸ್ಥಿತಿ ಈ ಸಂಗ್ರಹದ ಕವಿತೆಗಳ ವಸ್ತುವಾಗಿರುವುದು ಅವನ ಪ್ರಜ್ಞಾವಂತಿಕೆಯನ್ನು ಸೂಚಿಸುತ್ತದೆ. 'ನನ್ನ ಕವಿತೆ ಕಳೆದಿದೆ' ಎನ್ನುವಲ್ಲಿ ಅದರ ಅರಿವಿದೆ. ಹೀಗೆ ಸಾಮಾಜಿಕ

ಮೌಲ್ಯಕ್ಕೆ ಒತ್ತು ಕೊಟ್ಟಿರುವ ಕವಿ ಅದನ್ನು ಕಾವ್ಯವಾಗಿಸುವುದರ ಕಡೆಗೂ ಹೆಚ್ಚು ಗಮನ ಕೊಡುವ ಅಗತ್ಯವನ್ನು ಅಲ್ಲಗಳೆಯುವಂತಿಲ್ಲ. ಕವಿಯ ತಲ್ಲಣ ಸೃಜನಾತ್ಮಕವಾಗುವುದು 'ಕವಿತೆ' ಮತ್ತು ವರ್ತಮಾನದಂಥ ಕವಿತೆಯಲ್ಲಿ -

ಬೇಕಲ್ಲ, ಸಿದ್ಧಿಯನ್ನು ಸಾಧಿಸಲು ಶುದ್ಧ ಭಾವ,
ಒಳಗನ್ನು ಕಂಡು ನೆಚ್ಚುವ
ತಾರ್ಕಿಕ ಆಂತರ್ಯ,
ಇದೆಲ್ಲಕ್ಕೂ ಮಿಗಿಲಾಗಿ ಬೇಕು, ಸಾಂಪ್ರತಕ್ಕೆ
ತೆರೆದ ಕಣ್ಣು-ಮಾಗಿದೊಳನೋಟ.

ಕಾವ್ಯ ರಚನೆಯ ಮುಂದಿನ ಬಗೆಯನ್ನು ಹೀಗೆ ಚಿಂತಿಸುವುದು ಅದರ ಬೆಳವಣಿಗೆಯನ್ನು ಸೂಚಿಸುತ್ತದೆ. 'ನನ್ನ ನಿಮ್ಮ ಸುತ್ತಮುತ್ತ', 'ಕವಿತೆಯಾಗಲು ಹವಣಿಸಿದ ಸಂವೇದನೆಗಳು' ಕವನಗಳಲ್ಲಿಯೇ ಆ ಬಗೆಯ ಪ್ರಯೋಗ ಕಾಣಿಸಿಕೊಂಡಿದೆ. ಅಲ್ಲದೆ ರೂಪಕಗಳ ನಿರ್ಮಾಣದಿಂದ ವಾಚಾಳಿತನಕ್ಕೂ ಕಡಿವಾಣ ಹಾಕಲಾಗಿದೆ.

೩

ಈ ಹಿನ್ನೆಲೆಯಲ್ಲಿ 'ನಾಕ ಪೊತ್ತ ಮಲ್ಲಿಗೆ'ಯಲ್ಲಿ ಅಪೇಕ್ಷಿತ ಬದಲಾವಣೆಗಳಿಗೆ ತನ್ನನ್ನು ಒಡ್ಡಿಕೊಂಡು ಅಲ್ಲಲ್ಲಿ ಮಾಗಿದೊಳನೋಟ ನೀಡಲು ಕವಿ ಸಮರ್ಥವಾಗಿರುವುದು ಕಂಡು ಬರುತ್ತದೆ. ತನ್ನ ಒಳದನಿ ಹಾಗೂ ಹೊರಗಿನ ಜಗತ್ತಿನ ವಿದ್ಯಮಾನಗಳು ಎರಡನ್ನೂ ಸಮೀಕರಿಸುತ್ತ ಸಂಬೋಧಿಸುವ ಧಾಟಿಯಲ್ಲಿ ಇಲ್ಲಿಯ ಕವನಗಳ ವೈಶಿಷ್ಟ್ಯವಿದೆ. ಬಿಡಿ ಕವಿತೆಯ ಸೂಚನಾತ್ಮಕ ಸಾಲುಗಳನ್ನು ಹಿಡಿದು ಹೊರಡುವುದು ವಿಮರ್ಶೆಯ ರೀತಿಯಾಗಲಾರದಾದರೂ ಕವಿಯ ಆಶಯವನ್ನು ಗ್ರಹಿಸಲು ಅದರಿಂದ ನೆರವಾಗಬಹುದು.

ಭಾವದೀವಿಗೆಯಲ್ಲಿ ದೇಟಾಗಿ ಸಣ್ಣಗೆ ತಣ್ಣಗೆ
ಉರಿದು ಬೆಳಕಾಗಿಸುವ - ಬೆಳಕಿನೊಳಗೊಂದಾಗುವ
ಧವಳ ನಿಶ್ಚಲತೆ - ನಿರಹಂಕಾರಿ ನಿಲುವು.

('ಸಾವಿಗಲ್ಲ ಈ ಬದುಕು')

ಆತ್ಮೀಯ ಗುರುವಿನ ಸಾವಿನ ನೋವನ್ನನುಭವಿಸಿದಾಗ 'ಸಾವೇ ನೀನೇ ಹೇಳು ಯಾರ ಸಾವು?' ಎಂಬ ಪ್ರಶ್ನೆ ಸಾತ್ವಿಕನ ಸಿಟ್ಟಿನಲ್ಲಿಯೇ ಅದರ ಸಾತ್ವಿಕತೆಯನ್ನು ಹೊಳೆಯಿಸಬಲ್ಲುದು. ಅಪಾರವಾದ ಸಮುದ್ರದ ದಂಡೆಯಲ್ಲಿ ಕುಳಿತಾಗ 'ಮನುಷ್ಯ'ನನ್ನೇ ಕುರಿತ ಚಿಂತನೆಯ ಬಲ್ದೆರೆಗಳು ದಂಡೆಗಪ್ಪಳಿಸುತ್ತ 'ಪ್ರಳಯವಾಗುವ ಅಂಚಿನಲ್ಲಿ ನಿಂತಿದೆ ಬಾನು ಬುವಿ' ಎಂದು ಅನಿಸುತ್ತದೆ. ನಮಗೆ ದೊರೆತ ಸ್ವಾತಂತ್ರ್ಯ 'ಕವಿತೆಯ ಜೀವ ಹಿಂಡುವಂತಾ'ಗಿರುವ ಬಗ್ಗೆ ವಿಷಾದವಿದೆ. ಕುದಿದು ಮಿಂದು ಪದಗೊಳ್ಳುವ ದಾಂಪತ್ಯದ ನಿಜವಾದ ಸುಖದ ಅಭಿವ್ಯಕ್ತಿಗೆ 'ನಾಕಪೊತ್ತ ಮಲ್ಲಿಗೆ'ಯಲ್ಲಿ ಕಂಪು ಬೀರಿದೆ. ಸುಂದರವಾದ ಕಾಶ್ಮೀರಕ್ಕೆ 'ಬಂದೂಕುಗಳು ಮಾತ್ರ

ಮಾತನಾಡುವ' ಸ್ಥಿತಿಯೊದಗಿದ್ದರೂ ಕರುಣೆಯ ಕಣಿವೆಗಳಲ್ಲಿ 'ಕಟ್ಟಬೇಕು ಮತ್ತೆ' ಎಂಬ ಆಶಾವಾದ ವ್ಯಕ್ತವಾಗಿದೆ. 'ಭಾರತಿ ಮತ್ತು ಮಕ್ಕಳು' ಬೇಂದ್ರೆಯವರ 'ಮೂವತ್ತು ಮೂರು ಕೋಟಿ' ಯನ್ನು ನೆನಪಿಸುತ್ತ ಮನುಕುಲಕ್ಕಿರುವ ಹೃದಯ ದಾರಿದ್ರ್ಯಕ್ಕೆ ಕನ್ನಡಿ ಹಿಡಿಯುತ್ತದೆ. ಮನುಷ್ಯ ಜೀವನದಲ್ಲಿ ನಿಸರ್ಗ ಹಾಸುಹೊಕ್ಕಾಗಿ ಕರುಳಬಳ್ಳಿಯಂತೆ ಸುತ್ತಿಕೊಂಡಿರುವ ಚಿತ್ರ 'ಗುಬ್ಬಿ, ಮಗು, ಬಸಳೆಬಳ್ಳಿ-ನಾನು' ಕವಿತೆಯಲ್ಲಿ ತಂದೆ-ಮಗುವಿನ ಆತ್ಮೀಯ ಸಂಬಂಧವಾಗಿ ಮನಸ್ಸನ್ನು ಗಾಢವಾಗಿ ತಟ್ಟುತ್ತದೆ. ಬಡತನದ ಮೂಲಕ ಹಸಿವಿನಿಂದ ಕಂಗಾಲಾದ ಮಗುವಿನ ಕರುಣಾಜನಕ ಸ್ಥಿತಿ 'ಮರಣ ತಡುಹಿ ಮನವ ಒದ್ದು' ನಿಲ್ಲುತ್ತದೆ. 'ಕವಿತೆ ಮತ್ತು ದಲಿತ-ಬಂಡಾಯ' ಕವಿತೆ ಆ ಸಂದರ್ಭದ ಕನ್ನಡ ಕಾವ್ಯದ ಸಂದರ್ಭವನ್ನು ನಿರೂಪಿಸುವ ತಂತ್ರದಲ್ಲಿ ಹೊಸತನವಿದೆ. 'ಅವ್ವ: ಸಪ್ತ ಸ್ವರಗಳ ಸಾಮ್ರಾಜ್ಯ' ಮತ್ತು 'ನನ್ನ ಅಸ್ತಿತ್ವದ ಬೇರಿಗೆ ನಿನ್ನ ನೆನಪು' (ಅಪ್ಪನಿಗೆ) ಕವಿತೆಗಳಿಗೆ ಲಂಕೇಶರ 'ಅವ್ವ' ಪ್ರೇರಣೆಯಾಗಿರಬಹುದಾದರೂ ವ್ಯಕ್ತಿ ವೈಶಿಷ್ಟ್ಯಕ್ಕೆ ಭಂಗ ಬಂದಿಲ್ಲ. 'ಪೆಂಟಗಾನ್‌ಗೆ ಬೆಂಕಿ ಬಿದ್ದ ಮೇಲೆ' ಕವಿಯಲ್ಲಿ ಉಂಟಾದ ತಳಮಳ ಭಾರತದ ಸಂದರ್ಭದಲ್ಲಿ ದೀರ್ಘವಾದ ಆತ್ಮಾವಲೋಕನಕ್ಕೆ ಎಡೆಗೊಟ್ಟಿದೆ. ಗುಜರಾತಿನಲ್ಲಿ ಭೂಕಂಪ ಕವಿಹೃದಯದ ಅನುಕಂಪದೊಡನೆ 'ಸಂತೋಷದ ಕ್ಷಣದಲ್ಲಿ ಮೈ ಮರೆತಾಗ ಸಾವಿನ ರುಚಿ ನೀಡಿದೆಯಲ್ಲ ತಾಯಿ' ಎಂಬ ಉದ್ಗಾರ ಭರತ ಮಾತೆಗೆ ಭೂಮಾತೆ ಕೊಟ್ಟ 'ಉಡುಗೊರೆ'ಯಾಗುವ ವ್ಯಂಗ್ಯ ಕರುಣೆಯಲ್ಲಿ ಕೊನೆಗೊಳ್ಳುವುದು ಹೆಚ್ಚು ಪರಿಣಾಮಕಾರಿಯಾಗಿದೆ.

ಸುನೀತದ ಕೆಲವು ಲಕ್ಷಣಗಳನ್ನು ಮಾತ್ರ ಪಡೆದುಕೊಂಡಿರುವ ವಿವಿಧ ಬಗೆಯ ಹದಿಮೂರು ಕವಿತೆಗಳಲ್ಲಿ ಹತ್ತು ವ್ಯಕ್ತಿ ಚಿತ್ರಕ್ಕೆ ಮೀಸಲಾಗಿರುವುದು ಒಂದು ವಿಶೇಷ. ಈ ಕಾವ್ಯ ಶಿಲ್ಪ ಹೆಚ್ಚಿನ ಪರಿಶ್ರಮವನ್ನು ಬಯಸುವಂಥದೆಂಬುದನ್ನು ಬೇರೆ ಹೇಳಬೇಕಿಲ್ಲ.

ಪ್ರೀತಿಯನ್ನೇ ವಸ್ತುವಾಗಿಸಿದ ನಾಲ್ಕಾರು ಒಳ್ಳೆಯ ಪದ್ಯಗಳೂ ಇಲ್ಲಿವೆ. ಗಜಲ್ ೧ ಮತ್ತು ೨ ಪ್ರೀತಿಯ ಸುಖ-ದುಃಖ ಎರಡನ್ನೂ ಒಂದಾಗಿಸಿ ಹೃದಯದ ತಂತಿಯನ್ನು ಮೀಟುವಂತಿವೆ.

ಮಾತಿಗಿಂತಲೂ ಮಿಗಿಲು ನಿನ್ನ ಮೌನ, ಅದರ ದನಿ ಶಬ್ದಗಳಿಗೂ
ನಿಲುಕದು ನಲ್ಲೆ - ಎಂದು ಮಾರ್ಮಿಕವಾಗಿ ಮಾತನಾಡಿದ್ದೆಲ್ಲೋ

(ಗಜಲ್-೧)

ನಿನಗೆ ನಾನು ಸುಖದ ಒರತಿ, ನನಗೆ ನೀನು ಜೀವ ಮುಕುತಿ
ಯಾರಿಗೇನು ಎಂದೆಯಲ್ಲ, ನಿಂದ ನೀನು ತಿಳಿಯಲಿಲ್ಲ.

(ಗಜಲ್-೨)

'ಯಾಕೀ ಮೌನ', 'ಯಾರು ಕಸಿದರು' ಎಂಬ ಇನ್ನೆರಡು ಪದ್ಯಗಳಲ್ಲಿಯೂ ಯಾಕೆ 'ಮುರಿಯುತಿವೆ ಮನಸುಗಳು' ಎಂಬ ಭಾವತೀವ್ರತೆಯದೇ ಮೇಲುಗೈಯಾಗಿದೆ. 'ಕಳೆದು ಹೋದ ಸತ್ಯ', 'ಕದವಿಲ್ಲದ ಜಗದಲ್ಲಿ' ಹಾಗೂ 'ನೆನಪು ಮಲ್ಲಿಗೆ'ಯಂಥ ಪದ್ಯಗಳಲ್ಲಿ ಕಲಬುರ್ಗಿಯವರ ಕಾವ್ಯನಿರಾಳವಾಗಿ ಉಸಿರಾಡಿಸಬಲ್ಲುದು;

ಹೊಳೆಹಳ್ಳ ಹರಿಯುತ್ತಿಲ್ಲ, ಮಳೆ - ಬೆಳೆಗಳ
ತಳುಕಿಲ್ಲ, ಕಡಿದರು ಯಾರು -
ಕೂಡಿಕೊಂಡ ಸಲುಗೆ - ಸಂಬಂಧ ?

(ಕಳೆದು ಹೋದ ಸತ್ಯ)

ಗುಂಡಣ್ಣ ಕಲಬುರ್ಗಿಯವರ ಕಾವ್ಯದ ಬೆಳವಣಿಗೆ ಬದುಕಿನ ಸಂಕೀರ್ಣತೆಯನ್ನು ಚಿತ್ರಿಸುತ್ತ ಅದನ್ನು ತನ್ನಷ್ಟಕ್ಕೆ ಅರ್ಥಯಿಸುತ್ತ ಹೋಗುವ ರೀತಿಯದು. ಸಮಕಾಲೀನ ಸಾಮಾಜಿಕ ಮೌಲ್ಯಗಳ ಪಲ್ಲಟಗಳಿಗೆ ಸ್ಪಂದಿಸುವಂಥದು. ಅದೇ ಹೊತ್ತಿಗೆ ಸಾಮಾಜಿಕ ಪ್ರಜ್ಞೆ ಹಾಗೂ ಕಾವ್ಯ ಪ್ರಜ್ಞೆಯ ಬೆಸುಗೆ ಇನ್ನಷ್ಟು ಗಾಢವಾಗಬೇಕಾದುದು ಅಪೇಕ್ಷಣೀಯ. ಭಾವತೀವ್ರತೆಯೊಡನೆ ಬೌದ್ಧಿಕ ಚಿಂತನೆಯ ಎಳೆಗಳನ್ನು ಹಿಡಿದುಕೊಂಡು ತಮ್ಮದೇ ಆದ ಶಬ್ದ ಸಂಯೋಜನೆಯ ಮೂಲಕ ಅಭಿವ್ಯಕ್ತಿಗೊಳ್ಳುವ ಕ್ರಮದಲ್ಲಿ ಅನಗತ್ಯವಾಗಿ ಜಟಿಲತೆಗಳನ್ನು ತಂದುಕೊಳ್ಳುತ್ತಿದ್ದಾರೇನೊ ಎಂಬ ಸಂಶಯ ಒಮ್ಮೊಮ್ಮೆ ಬರಬಹುದು. ಸಂವಹನ ದೃಷ್ಟಿಯಿಂದ ಇದು ಲಕ್ಷ್ಯದಲ್ಲಿಟ್ಟುಕೊಳ್ಳಬೇಕಾದ ಅಂಶವೂ ಕೂಡ. ಬಂಧದಲ್ಲಿ ಇನ್ನಷ್ಟು ಬಿಗಿ, ಲಯಗಾರಿಕೆಯಲ್ಲಿ ಇನ್ನಷ್ಟು ಸೂಕ್ಷ್ಮತೆಯನ್ನು ಸಾಧಿಸುತ್ತ ಇನ್ನೂ ಉತ್ತಮವಾದ ರಚನೆಗಳನ್ನು ಇವರು ಕೊಡಬಲ್ಲರೆಂಬ ಭರವಸೆಯನ್ನು ಪ್ರಸ್ತುತ ಕೃತಿ ಮೂಡಿಸುತ್ತದೆ. ಅದೇನೇ ಇದ್ದರೂ ಇಂದಿನ ಕಾವ್ಯ ಸಂದರ್ಭದಲ್ಲಿ ತನ್ನದೇ ಆದ ಕಾವ್ಯ ಶೈಲಿಯನ್ನು ನಿರ್ಮಿಸಿಕೊಳ್ಳುತ್ತಿರುವ ಕವಿಯ ಪ್ರಯತ್ನ ಶ್ಲಾಘನೀಯ.

(೨೦೦೦)

ಸದ್ಭಾವ : ೨೦೦೮

# ೭೪

# ಕಾವ್ಯ ಸಂಗಮ

ಡಾ. ಸಂಗಮೇಶ ಹಂಡಿಗಿ ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಹೊಸಬರೇನೂ ಅಲ್ಲ, ವಿಮರ್ಶಾತ್ಮಕ ಪ್ರಬಂಧ, ಚರಿತ್ರೆ, ಸಂಪಾದನೆ, ವಚನ-ಹೀಗೆ ವಿವಿಧ ಪ್ರಕಾರದ ಹಲವಾರು ಕೃತಿಗಳನ್ನು ಪ್ರಕಟಿಸಿ ಓದುಗರಿಗೆ ಪರಿಚಿತರಾಗಿದ್ದಾರೆ. ಆಗಾಗ ಕವಿತೆಗಳನ್ನು ಬರೆಯುತ್ತ ಬಂದಿರುವ ಅವರು ಇದೀಗ ಕೆಲವನ್ನು ಆಯ್ದು 'ಕಾವ್ಯಸಂಗಮ'ದ ಮೂಲಕ ರಸಿಕರ ಪ್ರತ್ಯಕ್ಷಕ್ಕೆ ಒಡ್ಡುತ್ತಿರುವ ಸಂದರ್ಭದಲ್ಲಿ ನನ್ನಿಂದ ಎರಡು ಮಾತು ಅಪೇಕ್ಷಿಸಿದ್ದಾರೆ. ಅದನ್ನು ಅಷ್ಟೇ ಸಂತೋಷದಿಂದ ನೆರವೇರಿಸುತ್ತಿದ್ದೇನೆ.

ಇಲ್ಲಿಯ ಕವಿತೆಗಳ ಹಿಂದೆ ನಾಡು-ನುಡಿ, ದೇಶ, ಪ್ರಕೃತಿ, ಸಮಾಜ, ಪ್ರೀತಿ-ವಾತ್ಸಲ್ಯ, ಕಾವ್ಯ ಸ್ವರೂಪ-ಹೀಗೆ ವಿವಿಧ ಬಗೆಯ ಪ್ರೇರಣೆಗಳಿರುವುದನ್ನು ಮನಗಂಡು ಕವಿಯೇ ಅವುಗಳನ್ನು ಆ ರೀತಿ ವಿಂಗಡಿಸಿಕೊಟ್ಟಿದ್ದಾರೆ. ಕಾವ್ಯಸ್ವರೂಪವನ್ನು ಕುರಿತ ಕೊನೆಯ ಮೂರು-ನಾಲ್ಕು ಕವಿತೆಗಳಿಂದ ಅವರ ಕಾವ್ಯದೃಷ್ಟಿಯನ್ನು ಗುರುತಿಸಬಹುದು. ಕವಿತೆಯ ರಮ್ಯ ಹಾಗೂ ನವ್ಯಸ್ವರೂಪವನ್ನು 'ಹಳತು-ಹೊಸತು' ಕವಿತೆಯಲ್ಲಿ ಹೀಗೆ ಚಿತ್ರಿಸಲಾಗಿದೆ:

ಎತ್ತಲಾರದ ಹತ್ತುಮೊಳ ಸೀರೆಯನ್ನು ಮೈತುಂಬ ಸುತ್ತಿ
ಕಪ್ಪು ಹೊಲಗಳ ಮಧ್ಯೆ ಹರಿವ ಹೊಳೆಯಂತೆ
ಹೊಳೆವ ಬೈತಲೆ ಕೂಡ ಕಾಣದಂತೆ
...............................................
...............................................
ಬೆಣ್ಣೆಯಂತಹ ಗಲ್ಲಗಳ ಎಣ್ಣೆ ಬಸಿಯುವ ಮುಖವು
ಕಂಡ ಕಂಡವರಿಗೆ ಕಾಣದಂತೆ ತುಂಬು ಸೆರಗನು ಹೊದ್ದು
ಕೇಳಿದರೆ ಕಿವಿ ನಿಮಿರುವ ಕಾಜಿನ ಬಳೆಗಳನು ನುಡಿಸುತ್ತ
ಕಾಲ್ಬೆರಳ ಉಗುರು ಕಾಣಿಸದ ಸೀರೆಯಂಚು ನೆಲ ಗುಡಿಸುತ್ತ
ನಡೆವ ಪುರಾಣ ಕಾವ್ಯದ ಪರಿ ಹಳತು !
...............................................
...............................................

ಎಣ್ಣೆ ಕಾಣದ ಹುಡಿಯಡರಿದ ಬಾಬ್‌ಕಟ್ಟು
...............................................
ಮಿನಿಸ್ಕರ್ಟು ತೊಟ್ಟು ಬಿಳುಪು ತೊಡೆಗಳ ಹೊಳಪಿಸುತ್ತ
ಹೈಹೀಲ್ಡ ಶೂಗಳ ಮೇಲೆ ಸರ್ಕಸ್ ಮಾಡುತ್ತ
ಮುಂಗಾಲ್ ಪುಟಿಗೀ ಕೊಟ್ಟು ಮುಂಜೋಲಿಯಲಿ ಸಾಗುವ
ನವ್ಯಕಾವ್ಯದ ಬಗೆ ಹೊಸತು !

ಈ ಎರಡು ಬಗೆಯ ಅತಿರೇಕಗಳ ನಡುವಿನ ದಾರಿಯನ್ನು ಕಂಡುಕೊಳ್ಳಲು ಕವಿ ಪ್ರಯತ್ನಿಸಿರುವುದುಂಟು. 'ಭಾವದ ಬೀಜ ಮೊಳೆತಾಗ' ಕವಿತೆ ಸ್ವಲ್ಪ ವಾಚ್ಯವೆನಿಸಿದರೂ 'ಮೊಳೆತ ಬೀಜದ ಬದುಕು ಸಾರ್ಥಕ'ವಾಗುವ ಪರಿಯನ್ನು ಹಿಡಿದಿಟ್ಟ ರೂಪಕ ಗಮನಾರ್ಹವಾಗಿದೆ. ಪ್ರತಿಭೆಯ ಅಮಾಯಕತ್ವವನ್ನು ಚಿತ್ರಿಸುವ 'ಮಾಯಕಾರ್ತಿ' ಕವಿತೆ 'ಓ ಪ್ರತಿಭೆ, ನಿನಗಾಗಿ ಎಷ್ಟು ಬೇನೆ ತಿನ್ನಬೇಕೆ ?' ಎನ್ನುವಲ್ಲಿ ಪರಿಣಾಮಕಾರಿಯಾಗಿ ಕೊನೆಗೊಳ್ಳುತ್ತದೆ.

'ಕಾನ್ವೆಂಟಿನ ಕಗ್ಗಂಟನ್ನು ಕಂದಮ್ಮಗಳ ಕೊರಳಿಗೆ ಬಿಗಿಯುವ'ದನ್ನು ತಪ್ಪಿಸುವಂತೆ 'ಕನ್ನಡ ದೀಕ್ಷೆ' ಸೂಚಿಸುತ್ತದೆ. 'ದೇಶದರ್ಶನ' ಕುರಿತ ಪದ್ಯಗಳು ಹೆಚ್ಚಾಗಿ ಭಾವೋದ್ವೇಗದಿಂದ ಕೂಡಿವೆ:

ಚೀನಿ ದೈತ್ಯನಂ ಪದತಲದಿ ತುಳಿತುಳಿದು
ತ್ರಿಶೂಲದಿಂ ತಿವಿದು ರಣಚಂಡಿಯಾಗು (ಭಾರತಿ-ಚಾಮುಂಡಿ)

* * * *

ನಿದ್ದೆ ತಿಳಿದೆದ್ದೇಳು ವೀರ ಭಾರತ ಸಿಂಹವೆ
ನಿನ್ನ ಗರ್ಜನೆಯ ಗಂಭೀರ ನಾದಕ್ಕೆ
ಗಡಗಡ ನಡುಗಿ ದಿಕ್ಕೆಟ್ಟು ಚದುರಿ ಹೋಗಲಿ
ಗಡಿಯಲಿ ನಿಂತು ಕಾಲ್ಕೆದರುತಿಹ ಗುಳ್ಳೆನರಿ (ತಾಳಿಬಾ ವೀರಾವತಾರ)

ಇಲ್ಲೆಲ್ಲ ದೇಶಾಭಿಮಾನ ಉಕ್ಕಿಹರಿದರೂ ವಾಸ್ತವವನ್ನು ಅಲಕ್ಷಿಸಿರುವುದರಿಂದ ವಿಚಾರಪರತೆಯ ಕೊರತೆ ಕಂಡುಬರುತ್ತದೆ. ಆದರೆ 'ಮಹಾವೃಕ್ಷ' ಹಾಗೂ 'ಗಣರಾಜ್ಯ' ಪದ್ಯಗಳಲ್ಲಿ ಆತ್ಮಾವಲೋಕನಕ್ಕೆ ಎಡೆಗೊಟ್ಟಾಗ ಉದ್ವೇಗಕ್ಕೆ ಒಳಗಾಗದೆ ನಿಯಂತ್ರಣವನ್ನು ಸಾಧಿಸಲು ಕವಿಗೆ ಸಾಧ್ಯವಾಗಿದೆ :

ದೇವಗಣವೋ, ದೈತ್ಯ ಗಣವೋ
ಮಾನವಗಣವಾದರೆ ನಮ್ಮ ಪುಣ್ಯ
ಅವರ ವಿಲಾಸ ವೈಭವವೂ ಬೇಡ,
ಇವರ ಸುಲಿಗೆ ಶೋಷಣೆಯೂ ಬೇಡ,
ಸಾಧಿಸಿದರೆ ಸಾಕು
ಸಾಮಾನ್ಯ ಮಾನವ ಕಲ್ಯಾಣ (ಗಣರಾಜ್ಯ)

ಪ್ರೀತಿ-ವಾತ್ಸಲ್ಯ ಭಾವವನ್ನು ಬಿಂಬಿಸುವ ಪದ್ಯಗಳಲ್ಲಿ 'ನೆತ್ತರದ ಹೂವು' ತನ್ನ ಕಲ್ಪನೆಯಿಂದ ಕುತೂಹಲ ಹುಟ್ಟಿಸುತ್ತದೆ.

ಸಂಗ್ರಹದ ಹೆಚ್ಚಿನ ಕವಿತೆಗಳ ವಸ್ತು ಸಾಮಾಜಿಕ. ನಿತ್ಯವೂ ನಡೆಯುವ 'ಶ್ರಮದ ಪೂಜೆ'ಯಿಂದ ರೈತನನ್ನು 'ಅನ್ನಪೂರ್ಣೆಯ ಅರ್ಚಕ'ನಾಗಿ ಕವಿ ಕಂಡಿದ್ದಾನೆ. 'ಬಸ್ ನಿಲ್ದಾಣ'ದ ವ್ಯಕ್ತಿ ಚಿತ್ರ ವಿವರಗಳಲ್ಲಿ ಜೀವಂತಿಕೆಯಿದೆ. ನಗರಜೀವನದ ಏಕತಾನತೆಯ ಬೇಸರ 'ಸಂಕೀರ್ಣ'ದಲ್ಲಿ ತಲೆದೋರಿದರೆ 'ನಡುರಾತ್ರಿಯಲ್ಲಿ ನಿಲ್ದಾಣ', 'ಹದಿವಯರ ಹುಡುಗರು' ಮೊದಲಾದ ಕವಿತೆಗಳ ಚಿತ್ರಕ ಶಕ್ತಿಗೆ ನವ್ಯತೆಯ ನೆಲೆಯಿದೆ, 'ಬಿರುಗಾಳಿ-ಮಹಾಪೂರ' ನವಜೀವನದ ಸಂಕೇತವಾಗಿದೆ.

ಸತ್ತ ಕಪ್ಪೆ ಹಾವುಗಳನ್ನು ಒಳಗಿರಿಸಿಕೊಂಡು
ಪಾಚಿಗಟ್ಟನಿಂತ ನೀರಾಗಿ ಗಬ್ಬು ನಾರಬೇಕೆ ?
ಅದಕೆಂದೇ ಈವಿಪ್ಲವ !

'ಬಹು ಅಂತಸ್ತಿನ ಕಟ್ಟಡ' ಹಾಗೂ ' ಗುಡಿಸಲುಗಳ ಗೂಡಿ'ನಲ್ಲಿ 'ದೀಪಾವಳಿ'ಯ ಕತ್ತಲೆ ಬೆಳಕು ಮುಖಾಮುಖಿಯಾಗಿದ್ದರೆ ವಿಧವೆಯ ಬಾಳಿನ ನೋವು 'ನೊಂದಜೀವಿ'ಯಲ್ಲಿ ಅಭಿವ್ಯಕ್ತಿ ಪಡೆದಿದೆ.

ಭಾವ-ಭಾಷೆಯಲ್ಲಿ ನೂತನತೆಯನ್ನು ಸಾಧಿಸಿರುವ ನಿಸರ್ಗ ಕುರಿತ ಕವಿತೆಗಳು ಇಲ್ಲಿ ಹೆಚ್ಚು ಯಶಸ್ವಿಯಾಗಿವೆ. 'ಹೂವ ಬಿಟ್ಟ ಮಾವು' ಭಾವಗೀತವಾಗಿದ್ದರೆ 'ಕಲಾವಿದರ ರವಿ', 'ಬರಿದಾದ ಬೆಟ್ಟ', 'ಪ್ರಕೃತಿ ಧರ್ಮ', 'ನೆರೆದ ನೀರೆ' ಮೊದಲಾದವು ಮುಕ್ತ ಛಂದದಲ್ಲಿ ತಕ್ಕ ರೂಪಕ ಸಂಕೇತಗಳಿಂದ ಕಾವ್ಯಮಯವಾಗಿವೆ.

ಹೊಲದ ಬೇಲಿಯಗುಂಟ ಅರಳಿ
ಕುಲುಕುಲು ನಗುವ ಚದುರಂಗಿ

* * * *

ಹದಿಹರೆಯದ ಗುಲ್‌ಮೊಹರ್ ಹುಡುಗಿ

ಮೊದಲಾದ ಚಿಕ್ಕ ಚಿತ್ರಗಳೂ ಚೇತೋಹಾರಿಯಾಗಿವೆ.

ಕವಿಯ ಆಧ್ಯಾತ್ಮಿಕ ಒಲವಿಗೆ 'ಆತ್ಮಕಥೆ' ಒಳ್ಳೆಯ ನಿದರ್ಶನವಾಗಿದೆ :

ನಾನು ವೇಷದಲ್ಲಿಲ್ಲ; ಭಾಷೆಯಲ್ಲಿಲ್ಲ
ಭಾವದಲ್ಲಿದ್ದೇನೆ ; ಬದುಕಿನ ಮೂಸೆಯಲ್ಲಿದ್ದೇನೆ
ಆಡಂಬರ ಅಟ್ಟಹಾಸಗಳಲ್ಲಿಲ್ಲ
ಅಂತರಂಗದ ವಿಕಾಸದಲ್ಲಿದ್ದೇನೆ.

ಡಾ. ಸಂಗಮೇಶ ಹಂಡಿಗಿಯವರಿಗೆ ನಿಜವಾದ ಕವಿಹೃದಯವಿದೆ. ಇಲ್ಲಿಯ ಪದ್ಯಗಳಲ್ಲಿ ಹೆಚ್ಚಿನ ಮಹತ್ವಾಕಾಂಕ್ಷೆ ಕಾಣದಿದ್ದರೂ ಬೊಗಸೆ ನೀರಿನಿಂದ ದಾಹವನ್ನು ತಣಿಸುವ ಗುಣವಿದೆ; ಹಸಿರಿನ ಹೊರೆಯಿರದಿದ್ದರೂ ಚಿಗುರು, ಹೂವುಗಳ ಚಿತ್ತಾರವಿದೆ. ಕಾವ್ಯದ ಕಸಬುಗಾರಿಕೆಗೆ ಹೆಚು ಲಕ್ಷ್ಯಗೊಡದಿದ್ದರೂ ಅಲ್ಲಲ್ಲಿ ಕಣ್ಣು ಸೆಳೆಯುವ ಸುಳುಹು ಹೊಳಹುಗಳಿವೆ. ಪ್ರಸ್ತುತ ಸಂಗ್ರಹದ ಹಿಂದೆಯೇ ಸಿದ್ಧವಾಗಿರುವ ಇನ್ನೊಂದು ಸಂಗ್ರಹ 'ಕಾವ್ಯ ಗೌರವ' ಪ್ರಕಟವಾದಾಗ ಅವರ ಒಟ್ಟು ಸಾಧನೆಯನ್ನು ಗುರುತಿಸಲು ನೆರವಾಗಬಹುದು.

ಹೀಗೆ ಕಳೆದ ನಾಲ್ಕೈದು ದಶಕಗಳಿಂದ ಕಾವ್ಯದ ಒಲವನ್ನು ವಿನಯಪೂರ್ವಕ ಕಾಪಾಡಿಕೊಂಡು ಬಂದಿರುವ ಡಾ. ಸಂಗಮೇಶ ಹಂಡಿಗಿಯವರನ್ನು ಹಾರ್ದಿಕವಾಗಿ ಅಭಿನಂದಿಸುತ್ತೇನೆ.

(೨೦೦೩)

ಸದ್ಭಾವ ೨೦೦೮

೭೫

# ಹಾಡ ಬರೆದೆನವ್ವಾss

ಶ್ರೀಮತಿ ವಿಮಲಾ ಇನಾಮದಾರ ಅವರದು ಕೋಮಲವಾದ ಕವಿಹೃದಯ. ಕಾದಂಬರಿಗಳನ್ನೂ ಅವರು ಬರೆದದ್ದುಂಟು. ಕಳೆದ ವರ್ಷವೇ ಪುಸ್ತಕ ರೂಪದಲ್ಲಿ ಪ್ರಕಟವಾಗಿರುವ ಜಾನಪದ ಗೀತೆಗಳು 'ಮಲ್ಲಿಗೆ ಮಾಲೆ', ಚುಟುಕುಗಳು - 'ಚುರುಕು ಚುಟುಕು' ಓದುಗರ ಗಮನ ಸೆಳೆಯಬಲ್ಲವು. ಗ್ರಾಮೀಣ ಮುಗ್ಧತೆಯನ್ನು ಕೈಬಿಡದ ವಿವಿಧ ಭಾವಲಹರಿಗಳಿಂದ ಕೂಡಿದ ಅವರ ತ್ರಿಪದಿಗಳು 'ಗರತಿಯ ಹಾಡು'ಗಳ ಒರತೆಯ ನೀರನ್ನು ಮತ್ತೆ ಮತ್ತೆ ಬೊಗಸೆಯಿಂದ ಎತ್ತಿ ಕೊಡುವಂತಿವೆ. ದಿನಕರ ದೇಸಾಯಿಯವರ ಚೌಪದಿಗಳಿಂದ ಪ್ರೇರಣೆ ಪಡೆದು ಚುರುಕು ಮುಟ್ಟಿಸುವ ಚುಟುಕುಗಳನ್ನು ಬರೆಯಲು ಪ್ರಯತ್ನಿಸಿದ್ದರೂ, 'ಹನಿಗವನ'ಗಳಲ್ಲಿ ಸ್ವಂತಿಕೆಯನ್ನು ವ್ಯಕ್ತಪಡಿಸಿರುವದು ಸಂತೋಷದ ಸಂಗತಿ.

ಪ್ರಸ್ತುತ ಕವನ ಸಂಗ್ರಹ 'ಹಾಡ ಬರೆದೆನವ್ವಾsss' ಅವೆರಡು ಸಂಗ್ರಹಗಳಿಗಿಂತಲೂ ಗಾತ್ರದಲ್ಲಿ ದೊಡ್ಡದು. ವಿವಿಧ ಹಂತಗಳಲ್ಲಿಯ ಗಂಡು-ಹೆಣ್ಣಿನ ಪ್ರೇಮ, ನಿಸರ್ಗ ಪ್ರಿಯತೆ, ಭಕ್ತಿಭಾವ, ವಾತ್ಸಲ್ಯ ಇತ್ಯಾದಿ ವಸ್ತುಗಳನ್ನು ಕುರಿತು ಭಾವನಾತ್ಮಕತೆಯಿಂದ ಬರೆದ ಹಲವಾರು ಚಿಕ್ಕ ದೊಡ್ಡ ಪದ್ಯಗಳನ್ನು ಈ ಸಂಗ್ರಹ ಒಳಗೊಂಡಿದೆ. ಅದರಲ್ಲೂ ದಾಂಪತ್ಯ ಜೀವನದ ಪ್ರೇಮಗೀತೆಗಳದೇ ಮೇಲುಗೈಯಾಗಿರುವುದನ್ನು ಮುಂದಿನ ಸಾಲುಗಳು ಎತ್ತಿ ಹಿಡಿಯುತ್ತವೆ.

ಹೃದಯ ನನ್ನದಾದರೇನು ಬಡಿತ ನಿಮ್ಮದು
ನನ್ನ ಎದೆಯ ತುಂಬಿನಿಂತ ನೆನಪು ನಿಮ್ಮದು (ಪ್ರೀತಿ-ಸ್ಫೂರ್ತಿ)

ಜೊತೆಯನರಸಿ ಬದುಕ ಬಯಸಿ
ಮನಸು ನಿನ್ನ ಬೇಡಿದೆ.
ಯಾರ ಹಂಗು ಬೇಡ ನಮಗೆ
ನಮಗೆ ನಾವೆ ಆಸರೆ (ಪಯಣ)

ಯಾರ ಮಗಳೊ ಯಾರ ಮಗನೊ
ಹರಯ ಕೂಗಿ ಕರೆಯಿತು.
ಜನುಮ ಜನುಮದ ನಂಟು ಆಗಿ
ಭಾವ ಬಂಧ ಬೆಸೆಯಿತು. (ಬಂಧನ)

'ಗಂಡಿಗೊಂದು ಹೆಣ್ಣಿಗೊಂದು ನೀತಿ ಏತಕೋ' ಎಂಬ ಪ್ರಶ್ನೆಯನ್ನು ಅಲ್ಲಲ್ಲಿ ಎತ್ತಿದ್ದರೂ ಹೆಣ್ಣು ಸಹನೆಯ ಮೂರ್ತಿಯಾಗಿಯೇ ಇಲ್ಲಿ ಕಾಣುತ್ತಾಳೆ.

ಎದೆ ತುಂಬಾ ನೋವ ತುಂಬಿ
ನಗುತಲಿರುವೆ ನಾನು
ಬೆಟ್ಟದಂಥ ಕಷ್ಟ ಬರಲಿ
ಸಹಿಸಿಕೊಂಡೆ ಇರುವೆನು (ಹೆಣ್ಣು)

ತಾಯಿ-ಮಕ್ಕಳ ವಾತ್ಸಲ್ಯ, ಕೆಲವು ಪದ್ಯಗಳಲ್ಲಿ ಸಹಜವಾಗಿ ಚಿತ್ರಣಗೊಂಡಿದೆ.

ಗಂಡನ ಮನೆಯಲಿ ವೈಭವವಿದ್ದರೂ
ಮನ ತವರ ನೆನಸತೈತಿ,
ಮಹಡಿಯ ಮನೆಯಲಿ ಮಲಗಿದ್ದರು ಸಹ
ತಾಯ ನೆನಪು ಕಾಡತೈತಿ (ಅಮೃತ)

ಮೋಡದಲ್ಲಿ ಹೊಳೆವ ತಾರೆಯಂತೆ
ನೀನೆ ಬೆಳಕು ಬಾಳಿಗೆ ;
ತಾಯಿ ಎಂಬ ಪಟ್ಟಪಡೆದ
ಭಾಗ್ಯ ನನ್ನ ಪಾಲಿಗೆ (ಪಾರು)

ಕಂದಾ ನೀ ನಗುತಿರು ಈ ಬಾಳಬನದಲಿ
ಬರುವ ಬೇಗುದಿಯೆಲ್ಲ ನನ್ನದಾಗಿರಲಿ

'ಮುಂಜಾವು', 'ವಸಂತ ಋತು', 'ಪ್ರಕೃತಿ', 'ಹೂವು', 'ಸೃಷ್ಟಿ', 'ಮಳೆಗಾಲ', 'ಕಡಲ ಮೊರೆತ' ಮೊದಲಾದ ಕವಿತೆಗಳಲ್ಲಿ ನಿಸರ್ಗದ ಸೊಬಗು ಸೌಂದರ್ಯವನ್ನು ಸೆರೆಹಿಡಿಯುವ ಪ್ರಯತ್ನವಿದೆ. ಅದಕ್ಕಾಗಿ ಕವಿ ಹೃದಯದಲ್ಲಿ ಕೃತಜ್ಞತೆಯಿದೆ.

ಹಸಿರಿನ ಹೊದಿಕೆಯ ಹೊದ್ದಿಹ ಬೆಳಕಿಗೆ
ಇದೊ ನನ್ನ ನಮನ ;
ಭೂಮಿಗೆ ಬೆಳಕನು ಚೆಲ್ಲಿದ ರವಿಗೆ
ಇದೊ ನನ್ನ ನಮನ.

ಭಕ್ತಿಗೀತೆಗಳೆಲ್ಲ ಸಾಂಪ್ರದಾಯಿಕವಾಗಿವೆ.

'ಶೃತಿ' 'ವ್ಯರ್ಥ' 'ನಟನೆ' 'ಕಾಲ' 'ಕಪ್ಪು' 'ಅಳಲು' 'ಹರಿಜನರು ನಾವು' 'ಕಣೆಕವ್ವ ಸೋಜಿಗ' 'ಮೇಲು ಕೀಳು' 'ಹಕ್ಕು' 'ವರದಕ್ಷಿಣೆ' 'ಹಾಡ ಬರೆದೆನವ್ವಾ...' - ಈ ಕವನಗಳು ಮಾತ್ರ ಅಲ್ಲಲ್ಲಿ ಸಾಮಾಜಿಕವಾಗಿಯೂ ಧ್ವನಿಯಲ್ಲಿ ಭಿನ್ನವಾಗಿದ್ದು, ಭಾವ ಭಾಷೆಯಲ್ಲಿ ಲವಲವಿಕೆಯಿಂದ ಕೂಡಿವೆ.

ಉದಾಹರಣೆಗೆ

ಬದುಕಿನಲ್ಲಿ ಹುಟ್ಟಿ ಬಂದು
ಪಡೆದುದೇನನು ?
ವ್ಯಕ್ತಿ ಸ್ವಾತಂತ್ರ್ಯವನ್ನು
ಕಳೆದುಕೊಂಡೆನು. (ವ್ಯರ್ಥ)

ಯಾರ ಕಷ್ಟ-ಸುಖವ ಕೇಳಿ ಕಾಲನಿಲ್ಲದು
ತನ್ನ ಪಾಡಿಗದುವೆ ತಾನು ಉರುಳುತಿರುವುದು (ಕಾಲ)

ಕಪ್ಪು ಕಲ್ಲ ಶಿಲೆಯಲಿ
ಕಲೆಯು ಅರಳಿ ನಿಂತಿದೆ,
ಕಪ್ಪು ಮೋಡ ಮಳೆಯ ಸುರಿಸಿ
ಇಳೆಗೆ ಕಳೆಯ ತಂದಿದೆ. (ಕಪ್ಪು)

ಊರಿನಲ್ಲೆ ನಾವಿದ್ದರೂ
ಉಸಿರು ಕಳೆದುಕೊಂಡವರು,
ಬದುಕಿದ್ದರು ಸತ್ತಂತೇ
ದಿನವ ಕಳೆಯುವವರು (ಹರಿಜನರು ನಾವು)

ಕರುಣೆ ಇಲ್ಲದ ಕಟುಕರ ಮನೆಯ
ಗಿಳಿಯಾಗಲು ಒಲ್ಲೆ - ನನ್ನನೆ
ಮಾರಿಕೊಳ್ಳಲೊಲ್ಲೆ (ವರದಕ್ಷಿಣೆ)

ಪುಟಗಳೆಷ್ಟು ಎಣಿಸಲುಂಟೆ ?
ದಣಿವನರಿಯೆನು, ಬರೆದು ಬರೆದು
ಹೃದಯವನ್ನು ಹಗುರ ಮಾಡಿಕೊಳ್ಳುವೆ,

ಅಂದಹಾಗೆ, ಶ್ರೀಮತಿ ವಿಮಲಾ ಅವರು ಬಿಡುವಿಲ್ಲದಂತೆ ಈ ಪದ್ಯಗಳನ್ನು ಬರೆದಿರುವುದರಿಂದ ಪುಟ ಪುಟದಲ್ಲಿಯೂ ಪುನರುಕ್ತಿಯಿದೆ. ಬರೆದು ಸ್ವಲ್ಪ ನಿಂತು ಯೋಚಿಸಿ, ವಿಮರ್ಶೆ ಮಾಡಿಕೊಂಡು ಮುಂದುವರಿಯುವದು ಒಳ್ಳೆಯದು. ಭಾಷೆ, ಛಂದಸ್ಸು, ನಿರೂಪಣಾ ವಿಧಾನಗಳ ಬಗ್ಗೆ ಅವರೀಗ ಹೆಚ್ಚು ಲಕ್ಷ್ಯಗೊಡುವದು ಅವಶ್ಯವಿದೆ.

'ಜೇಡನ ಬಲೆ' ಕವನದಲ್ಲಿ ಅವರೇ ಬರೆದಿರುವ ಒಂದು ನುಡಿಯಲ್ಲಿ ನನ್ನ ಹಾರೈಕೆಯೂ ಅಡಗಿದೆ.

ನೀ ಬರೆದ ಕವನದ ಸಾಲು
ನೀರು ಮಜ್ಜಿಗೆಯಾಗದಿರಲಿ,
ಪರಿಮಳ ಸೂಸುವ ತುಪ್ಪವಾಗಿರಲಿ
ಜೊಳ್ಳಾಗದಿರಲಿ.

(೨೦೦೨)

೭೬

## ಕಾಡಿದೆ ತವರಿನ ನೆನಪು

ಅಮೇರಿಕೆಯಲ್ಲಿ ವಾಸಿಸುತ್ತಿರುವ ಶ್ರೀಮತಿ ಮಾಯಾ ಹರಪನಹಳ್ಳಿಯವರ ಈ ಪ್ರಥಮ ಕವನ ಸಂಕಲನಕ್ಕೆ ಮುನ್ನುಡಿ ರೂಪದ ಎರಡು ಮಾತುಗಳನ್ನು ಬಹಳ ಸಂತೋಷದಿಂದ ಬರೆಯುತ್ತಿದ್ದೇನೆ.

ಕಂಗಳು ಏನು ನೋಡಿದರೇನು ಕನಸು ಕನ್ನಡ
ನಾವು ಎಲ್ಲಿದ್ದರೇನು, ನಮ್ಮ ಹೃದಯ ಕನ್ನಡ

'ಹೃದಯ ಕನ್ನಡ' ಪದ್ಯದ ಈ ಎರಡು ಸಾಲುಗಳು ನನ್ನ ಮನಸ್ಸನ್ನು ಹಿಡಿದು ನಿಲ್ಲಿಸಿದವು. 'ಎಲ್ಲಾದರೂ ಇರು, ಎಂತಾದರು ಇರು, ಎಂದೆಂದಿಗೂ ನೀ ಕನ್ನಡವಾಗಿರು' ಎಂಬ ಕುವೆಂಪು ಅವರ ನುಡಿ ಈ ರೀತಿ ಸಫಲಗೊಂಡಿರುವುದನ್ನು ಕಂಡು ಮನಸ್ಸು ಮುದಗೊಂಡಿತು. ಇದಕ್ಕೆಲ್ಲ ತಕ್ಕ ವಾತಾವರಣವನ್ನು ಸೃಷ್ಟಿಸಿರುವ 'ಅಕ್ಕ'ದ ಬಳಗಕ್ಕೆ ಮೊದಲು ಅಭಿನಂದನೆಗಳು ಸಲ್ಲಬೇಕು. ಈ ಕೃತಿಯಲ್ಲಿ ಸಹಜವಾದ, ಸರಳವಾದ ಅಭಿವ್ಯಕ್ತಿ ದೊರೆತಿರುವದು ಮೊದಲ ನೋಟಕ್ಕೇ ಒಡೆದು ಕಾಣುವಂತಿದೆ.

ಹೊಸ ವರ್ಷದ ಹೂ ಬಿಸಿಲಿನ ಹೊಂಗಿರಣದಲ್ಲಿ
ಹೊಸತನ ತುಂಬಿ ಬರಲಿ ಆಶಾಕಿರಣದಲ್ಲಿ
ನೋವು-ನಲಿವು, ಬೇವು-ಬೆಲ್ಲದ ಸೇವನೆಯಲ್ಲಿ
ಸುಖ-ದುಃಖದಲ್ಲಿಯೂ ಇರಲಿ ಸ್ಮರಣೆ ಭಗವಂತನಲ್ಲಿ

ಸಂಗ್ರಹದ ಮೊದಲ ಕವನ 'ಹೊಸ ಚೇತನ'ದಲ್ಲಿಯೇ ಈ ಸಂಗ್ರಹದ ಒಟ್ಟು ಆಶಯ ಮೂಡಿ ಬಂದಹಾಗಿದೆ. 'ಬೆಳಕು', 'ಚಂದ್ರಮ', 'ಕಾಗೆ', 'ಕವಲು ದಾರಿ', 'ಮನಸಿನ ಪಯಣ', 'ನಾಟಕ' ಮೊದಲಾದ ಕವನಗಳಲ್ಲಿ ಮೊದಲ ಎರಡು ಸಾಲುಗಳು ಪಲ್ಲವಿಯಾಗಿ ಭಾವದ ಮುಂದಿನ ಬೆಳವಣಿಗೆಗೆ ದಾರಿ ಮಾಡಿಕೊಡುವದುಂಟು. 'ಬೆಳಕು' ಕವಿತೆಯ ಪ್ರಾರಂಭ ಇದಕ್ಕೊಂದು ಒಳ್ಳೆಯ ಉದಾಹರಣೆ :

ಕತ್ತಲೆಯನು ಸರಿಸಿ ಹರಿದಿದೆ ಬೆಳಕು
ಈ ಬೆಳಕನ್ನು ಹೊತ್ತು ಸಾಗಿದೆ ಬದುಕು

ಕನ್ನಡ ಕಾವ್ಯ ಪರಂಪರೆಯನ್ನು ನೆನೆದು ಪಡೆದ ರೋಮಾಂಚನ 'ಅಮೃತ ಸಿಂಚನ'ದಲ್ಲಿದ್ದರೆ 'ಮೌನದಿ ಏಕೆ ಕುಳಿತಿರುವೆ ಮುನಿಯಂತೆ' ಎಂದು 'ಕಾಗೆ'ಯನ್ನು ಸಂಬೋಧಿಸುವಲ್ಲಿ ಕವಿಯ ಸಹಾನುಭೂತಿ ವ್ಯಕ್ತವಾಗಿದೆ. ಹೊಸ ದೇಶದ ಪರಿಚಿತರಲ್ಲಿ ತಾಯಿ ನಾಡಿನ ಮುಖ ಕಂಡರೂ 'ಕಾಡಿದೆ ತವರಿನ ನೆನಪು' ಕವಿತೆಯಲ್ಲಿ ಆತ್ಮೀಯ ಭಾವನೆಗಳಿಗೆ ತುಂಬಿದ ಅಭಿವ್ಯಕ್ತಿಯಿದೆ. ಅಂಥದೇ ಭಾವನೆ ಇನ್ನಷ್ಟು ಸಂಕೀರ್ಣತೆಯನ್ನು ಪಡೆದು 'ಪರದೇಶಿ ಪಕ್ಷಿ'ಯಲ್ಲಿ ಪರಿಣಾಮಕಾರಿಯಾಗಿ ಬಂದಿರುವುದಕ್ಕೆ ಇಲ್ಲಿ ಎರಡು ನುಡಿ ಉದಾಹರಿಸಬಹುದು :

ಮನದ ಅಂಗಳದಿ ನೂರು ಆಶೆ ಉಕ್ಕಿ
ವಿಮಾನದಿ ಬಾನಲಿ ಹಾರಿದ ಹಕ್ಕಿ
ವಿದೇಶಕ್ಕೆ ಬಂದಿರುವ ಪರದೇಶಿ ಪಕ್ಷಿ
ಮರೆತಿಲ್ಲ ತನ್ನತನ ಹೃದಯ ಸಾಕ್ಷಿ

* * * *

ಪಿಜ್ಜಾ, ಪಾಸ್ತಾ, ಟಾಕೊದ ಮೃಷ್ಟಾನ್ನ
ಆದರೂ ಮರೆತಿಲ್ಲ ಅಮ್ಮನ ಕೈಯ ಮೊಸರನ್ನ
ಮಲಗಿದರೂ ದೊಡ್ಡ ಮಂಚದ ಮೇಲೆ
ಮೆರೆಯುತಿಹುದು ತವರಿನ ಕನಸಿನ ಮಾಲೆ

ಈ ಕವನಗಳಲ್ಲಿ ಅಲ್ಲಲ್ಲಿ ಕಂಡು ಬರುವ ನುಡಿಚಿತ್ರಗಳು ಮನ ಸೆಳೆಯುವಂತಿವೆ :

ಹಕ್ಕಿಯಂತೆ ಬಾನಿಗೆ ಹಾರಿದೆ
ಚುಕ್ಕಿಯಂತೆ ಆಗಸದಿ ಮೂಡಿದೆ
ಮಳೆಯ ಬಿಲ್ಲಿನಂತೆ ಹರಡಿದೆ
ಮೋಡದಂತೆ ಗಗನದಲ್ಲಿ ಈಜಿದೆ (ಮನಸಿನ ಪಯಣ)

* * * *

ಇಂದು ಏನೊ ಹೊಸತು ಚೇತನ
ಬಾನು ಭುವಿಯ ಮಧುರ ಮಿಲನ (ಮೊದಲ ಮತ್ತಿನ ಮಳೆ)

* * * *

ಮೋಡ ಕರಗಿ ತಿಳಿಯಾಗಿದೆ ಗಗನ
ಕಾಮನ ಬಿಲ್ಲಿನ ಬಣ್ಣದ ಜನ (ನೀಲಾಕಾರ)

ಇವೆಲ್ಲವೂ ನಿಸರ್ಗ ಚಿತ್ರಗಳಾಗಿರುವುದು ಕವಯಿತ್ರಿಯ ಪ್ರಕೃತಿ ಪ್ರೇಮವನ್ನು ಸೂಚಿಸುತ್ತವೆ. 'ರವಿ', 'ಸಂಗಾತಿ' ಪತಿಯ ಪ್ರೇಮವನ್ನು ಎದೆದುಂಬಿ ಹಾಡುತ್ತವೆ.

ಬಾಳಬಾನಿನಲ್ಲಿ ಮೂಡಿದ ರವಿ
ಒಲವಿನ ಕವನವ ಬರೆದ ಕವಿ.

'ಸಾವು', 'ಸುಂಟರಗಾಳಿ' ಕವನಗಳು ಸಂಗ್ರಹಕ್ಕೆ ವೈವಿಧ್ಯವನ್ನು ತಂದುಕೊಟ್ಟಿವೆ. ಸ್ತ್ರೀಯ ವಿವಿಧ ಬಗೆಯ ಸಂಬಂಧಗಳ ಹಿತೈಷಿ ಸ್ವರೂಪವನ್ನು 'ನಾರಿ' ನಿರೂಪಿಸಿದರೆ ಸಂಗ್ರಹದ ಉತ್ತಮ ಕವಿತೆಯೆನ್ನಬಹುದಾದ 'ಅಳಲು' ಸ್ತ್ರೀ ಜನಾಂಗದ ಪ್ರತಿನಿಧಿಯಾಗಿ ತನ್ನ ಭಾವನೆಗಳಿಗೆ ಬಿಡುಗಡೆ ಬಯಸುತ್ತದೆ.

'ಕಲ್ಲಿನಲ್ಲಿ ಅರಳುವ ಹೂವು', 'ಕರುಣೆಯಿಂದ ಹರಿಯುವ ನದಿ', 'ಮಮತೆ ತುಂಬಿದ ಧರಣಿ'ಯಾಗಿರುವ ಸ್ತ್ರೀ ಶಕ್ತಿ ಅರಳಲು, ಹರಿಯಲು, ಹಸಿರಾಗಲು, ಬದುಕಲು ಬಿನ್ನವಿಸಿಕೊಳ್ಳುವ ರೀತಿ ತುಂಬಾ ಪರಿಣಾಮಕಾರಿಯಾಗಿ ಬಂದಿದೆ.

ಹೃದಯದ ಮಾರ್ದವತೆ ಈ ಕವನಗಳ ಮುಖ್ಯಗುಣ. ಅಂತ್ಯಪ್ರಾಸದ ಅನಗತ್ಯ ಕಟ್ಟಿಗೆ ಒಳಗಾಗದೆ ಅನುಪ್ರಾಸದ ಅರ್ಥಪೂರ್ಣತೆಯ ಕಡೆಗೆ ಲಕ್ಷ್ಯ ವಹಿಸಿದರೆ ಕವಿತೆಗೆ ಹೆಚ್ಚಿನ ಜೀವಕಳೆ ಬರಬಲ್ಲದು. ಜೀವನದ ಅನುಭವ ಹಾಗೂ ಕಾವ್ಯದ ಅಭ್ಯಾಸ ಮೇಳೈಸಿ ಮುಂದುವರಿದಂತೆ ಇನ್ನೂ ಉತ್ತಮ ರಚನೆಗಳನ್ನು ಈ ಕವಯಿತ್ರಿ ಕೊಡಬಲ್ಲರು. ಪ್ರಥಮ ಸಂಕಲನದಲ್ಲಿಯೇ ಭರವಸೆ ಹುಟ್ಟಿಸಿರುವ ಶ್ರೀಮತಿ ಮಾಯಾ ಹರಪನಹಳ್ಳಿಯವರಿಗೆ ಈ ದಿಸೆಯಲ್ಲಿ ಒಳ್ಳೆಯ ಭವಿಷ್ಯವನ್ನು ಹಾರೈಸಿ ಶುಭಕೋರುತ್ತೇನೆ.

(೨೦೦೬)

ಸದ್ಭಾವ - ೨೦೦೮

೭೭

## ಮೊಬೈಲ್ ಧ್ವನಿಗಳು

ಬೇರೆ ಬಗೆಯ ಬರವಣಿಗೆಗಳನ್ನು ಸಾಕಷ್ಟು ಮಾಡಿದ್ದರೂ ಎಸ್.ಎಸ್. ಶ್ರೀಧರಮೂರ್ತಿಯವರು ಹೆಸರು ಮಾಡಿದ್ದು ಮರುಓದಿನ ವಿಮರ್ಶಕರೆಂದೇ. ಸಾಹಿತ್ಯದಲ್ಲಿ ಮರು ಓದುವ ಕ್ರಿಯೆ ಬಹಳ ಮುಖ್ಯವಾದದ್ದು ಎಂದು ನಂಬಿರುವ ಅವರು ಆಧುನಿಕ ಕನ್ನಡ ಸಾಹಿತ್ಯದ ನಾಲ್ವತ್ತು ಜನ ಲೇಖಕರ ಕೃತಿಗಳನ್ನು ಅಂಥ ಓದಿಗೆ ಒಳಗಾಗಿಸಿದಾಗ ಕಂಡ 'ಬೆಳಕಿನ ಬೆರಗು' (೨೦೦೫) ವಿಮರ್ಶಾ ಕ್ಷೇತ್ರಕ್ಕೆ ಒಂದು ಮಹತ್ವದ ಕೊಡುಗೆಯಾಗಿದೆ. ಕಳೆದ ಎರಡು ದಶಕಗಳಿಂದ ಅವರು ಆಗಾಗ ಕವಿತೆಗಳನ್ನೂ ಬರೆದಿದ್ದಾರೆ. 'ನನ್ನ ಬರಹಗಳಲ್ಲಿ ನನಗೆ ವೈಯಕ್ತಿಕವಾಗಿ ಪ್ರಿಯವಾದರೂ ಸಾಕಷ್ಟು ಗಣನೆಗೆ ಬಾರದೆ ಹೋದದ್ದು ಕಾವ್ಯರಚನೆ' ಎಂದು ಪತ್ರವೊಂದರಲ್ಲಿ ನನಗೆ ಅವರು ಬರೆದದ್ದುಂಟು. ಪ್ರಸ್ತುತ ಸಂಕಲನವನ್ನು ಕಾವ್ಯಾಸಕ್ತರು ಪರಿಗಣಿಸದೇ ಇರಲಾರರು ಎಂದು ಆಶಿಸಿದ್ದೇನೆ.

ಈ ಸಂಗ್ರಹದ ಯಶಸ್ವಿ ಕವಿತೆಗಳಲ್ಲಿ ಒಂದಾದ 'ಮೊಬೈಲ್ ಧ್ವನಿಗಳು' ಸಂಗ್ರಹದ ಶೀರ್ಷಿಕೆಯೂ ಆಗಿರುವುದು ಅರ್ಥಪೂರ್ಣವಾಗಿದೆ. ತಕ್ಷಣದ ಸಂಪರ್ಕದ ಸ್ಫೂರ್ತಿಗೆ, ಒಂಟಿತನದ ನಿವಾರಣೆಗೆ, ಆತ್ಮೀಯತೆಗೆ, ಸ್ನೇಹಪರ ಸಂವಾದಕ್ಕೆ ಸುಲಭ ಸಾಧನವಾಗಿ ಇಂದು ಈ ಚಿಕ್ಕ ಯಂತ್ರ ಬಳಸಲ್ಪಡುತ್ತಿದೆ. 'ಬಳಸಿಕೊಂಡೆವದನೆ ನಾವು ಅದಕು ಇದಕು ಎದಕು' ಎಂದು ಬೇಂದ್ರೆಯವರ ಕ್ಷಮೆ ಕೋರಿ ಹೇಳಬಹುದು. ಈ ಅತ್ಯಾಧುನಿಕ ಯಂತ್ರವನ್ನು ಕಾವ್ಯವಸ್ತುವಾಗಿಸಿ ಅದನ್ನೇ ಕವಿತೆಗೂ ಪ್ರತೀಕವಾಗಿಸುವಲ್ಲಿ ಮೂರ್ತಿಯವರ ಕೌಶಲ್ಯವನ್ನು ಕಾಣಬಹುದು.

ಕಣ್ಣಲ್ಲಿ ಕಣ್ಣಿಟ್ಟು ನೋಡಲೆಲ್ಲಿ ಅವಕಾಶ?
ಧ್ವನಿಗಳನ್ನು ಕೇಳುತ್ತಲೆ ಹಿಡಿಯಬೇಕು ಆಕಾಶ.
ಕೇಳಬೇಕು ಮೊಬೈಲ್ ಧ್ವನಿಗಳ ಏಕಾಂತದಲ್ಲಿ
ನಾಡಿ ಹಿಡಿದು ಬಿಸಿಯುಸಿರ ಏರಿಳಿತ ಅಳೆಯಬೇಕು
ಬದುಕ ಕಡೆವ ದಾರಿಗೆ ಅದನು ಒಪ್ಪಿಸಬೇಕು
ಅಲ್ಲಿಯವರೆಗೆ ಅಳಿದುಳಿದ ಶಬ್ದಾರ್ಥಗಳೇ ಸಾಕು

ಹೀಗೆ ವಿವರಗಳನ್ನು ನುಡಿಚಿತ್ರಗಳ ಮೂಲಕ ಜೀವಂತವಾಗಿ ಕವಿತೆಯ ಆಶಯಕ್ಕೆ ಒಗ್ಗಿಸಿಕೊಂಡು ಆಕಾರಗೊಳಿಸಿದ ಇನ್ನೊಂದು ಕವಿತೆ 'ವಿಂಬಲ್ಡನ್ ೧೯೮೭'

ಅಗಮ್ಯ ಅನುಭವದ ಆನಂದಕ್ಕೆ
ಲಂಡನ್ ಹಸಿರು ಅಂಗಣವೊಂದು
ವರ್ಷಕ್ಕೊಮ್ಮೆ ಸಜ್ಜುಗೊಂಡು ನಿಲ್ಲುತ್ತದೆ

ಈ ಕ್ರೀಡೆಯ ಅಂಗಳದಲ್ಲಿ ಪುಟದೇಳುವ ಆಶೆ ಆಕಾಂಕ್ಷೆಗಳು, ಕನಸುಗಳು, ಹಾಗೆಯೇ ಅಚ್ಚರಿಯ ನಡುವೆ ಬೆಳಗಾಗುವ ಕ್ರಿಯೆ, ಕಾಲಪುರುಷ ಮೌನವಾಗಿ ನೀಡುವ ತೀರ್ಪು ಇವೆಲ್ಲವನ್ನೂ ಒಳಗೊಂಡು ಒಂದು ಕತೆಯ ನಂತರ ಮತ್ತೊಂದಕ್ಕೆ ಹಸಿರು ಅಂಕಣ ಸಜ್ಜಾಗುವುದನ್ನು ಚಿತ್ರಿಸುತ್ತ 'ಅಂದಹಾಗೆ ಇದು ಯಾರ ಕತೆಯಲ್ಲ ಹೇಳಿ' ಎಂಬ ಕೊನೆಯ ಸಾಲಿನಲ್ಲಿ ಅದು ಎಲ್ಲರ ಬದುಕಿನ ಆಚೆ ಎಂಬುದನ್ನು ಧ್ವನಿಸಿ ಕವಿತೆ ಸಾರ್ಥಕಗೊಳ್ಳುತ್ತದೆ.

ಇಲ್ಲಿಯ ಕೆಲವು ಕವಿತೆಗಳ ಅಂತರಂಗದ ಬೆಳವಣಿಗೆ ಮೂರು ಹಂತಗಳಲ್ಲಿ ನಡೆಯುವುದುಂಟು: 'ದೇವರಂತಹ ದೇವರಲ್ಲಿ' ಪ್ರೀತಿಯಲ್ಲಿ ಕೋರಿ, ಅದರ ವಿವಿಧ ಪರಿಣಾಮಗಳಿಗೆ ತಕ್ಕ ರೀತಿಯಲ್ಲಿ ಸಜ್ಜಾಗುವ ಪ್ರತಿಕ್ರಿಯೆಯನ್ನು 'ಪ್ರಾರ್ಥನೆ'ಯಲ್ಲಿ ಕಂಡರೆ, 'ಕಥಾಸಮಯ'ದಲ್ಲಿ ಕತೆ ಹೇಳುವ ಕೇಳುವ ಪ್ರಕ್ರಿಯೆಯಲ್ಲಿ ಮೂರು ತಲೆಮಾರಿನ ಮನೋಧರ್ಮ ಅಭಿವ್ಯಕ್ತಿ ಪಡೆಯುತ್ತದೆ. ಮೊದಲನೆಯ ತಲೆಮಾರಿಗೆ (ತಾತ) ಅದು ಪುಣ್ಯದ ಕೆಲಸವೆನಿಸಿದರೆ ಎರಡನೆಯ ತಲೆಮಾರಿಗೆ (ತಂದೆ) ಅದು ಬದುಕುವ ದಾರಿ ಕಲಿಸುವ ಮಾರ್ಗವಾಗಿ ಪ್ರಶ್ನೆಗಳನ್ನು ಇಷ್ಟಪಡುವದಿಲ್ಲ. ಮೂರನೆಯ ತಲೆಮಾರಿನಲ್ಲಿ (ನನ್ನ) ಮಗ ಕಥೆ ಕೇಳುವ ಮೊದಲೆ ಪ್ರಶ್ನೆಗಳನ್ನು ಸಿದ್ಧಿ ಮಾಡಿಕೊಂಡಿರುತ್ತಾನೆ. ಉತ್ತರಿಸುವುದಕ್ಕೆ ಅಧ್ಯಯನ ಮಾಡಬೇಕಾಗುತ್ತದೆ. ಹೀಗೆ ಕಥೆಯ ಮೂಲಕ ನಾವಿಬ್ಬರೂ ಬೆಳೆಯುತ್ತಿದ್ದೇವೆ. ಕವನದ ಒಟ್ಟು ಸ್ವರೂಪದಲ್ಲಿ 'ಗದ್ಯತೆ'ಯನ್ನು ನಿವಾರಿಸಬಹುದಿತ್ತು. ಅದೇ 'ಶೆಹಜಾದೆ ಕತೆಯ ನಿಲ್ಲಿಸಿದ ರಾತ್ರಿ' ಕವನ ಸಾರವತ್ತಾಗಿ ಕಾವ್ಯ ಗುಣವನ್ನು ಕಾಪಾಡಿಕೊಂಡಿದೆ.

'ಅರೆಬರೆ ರೊಮ್ಯಾಂಟಿಕ್ ಕವಿತೆ', 'ಇರುವುದೆಲ್ಲ ನಮ್ಮದೇ ಮನೆ', 'ಜಾಂಡೀಸ್ ದಿನಗಳು' ಮುಂತಾದವು ಕಥನ ಕವನಗಳೇನೂ ಅಲ್ಲ. ಆದರೆ ಕತೆ ಮಾಡಿ ಹೇಳುವಲ್ಲಿ ಅವುಗಳ ಕಾವ್ಯಾತ್ಮದ ಅಭಿವ್ಯಕ್ತಿ ಮುಖ್ಯವೆನಿಸುತ್ತದೆ. 'ಸರಯೂನದಿ ಪಿಸುಗುಟ್ಟಿದ್ದು' ಅಯೋಧ್ಯೆಯ ಚರಿತ್ರೆಗೆ ಕಣ್ಣೀರ ಸಾಕ್ಷಿಯಾಗಿ ನಿಲ್ಲುವಂಥದ್ದು, ರಾಮಾಯಣದ ಕಾಲದಲ್ಲಿ ಜಾನಕಿ, ರಾಘವರ ಕಂಬನಿಗಳಿಗೆ ಆಶ್ರಯವಾಗಿ, ಮಧ್ಯಕಾಲದ ಪರಕೀಯರ ದಾಳಿಗಳಿಗೆ ಹರಿದ ರಕ್ತಕ್ಕೆ ಕಂಬನಿಯ ತೆರೆಗಳಾಗಿ, ಆಧುನಿಕ ಕಾಲದಲ್ಲಿ ತನ್ನಲ್ಲಿ ತಂಗಿದ್ದ ಹಡಗಲ್ಲಿ ಅಡಗಿದ್ದ ಪ್ರೇತಗಳು ಅಯೋಧ್ಯೆಯ ಮಣ್ಣಲ್ಲಿ ಎಬ್ಬಿಸಿದ ತಲ್ಲಣದ ಬಿರುಗಾಳಿ (ಬಾಬರಿ ಮಸೀದಿ ಧ್ವಂಸ)ಯಿಂದ ಒಡಲಿಗೆ ಮತ್ತು ಉಪ್ಪುನೀರಿನ ಸೋಂಕು ಹೀಗೆ ಪಿಸುದನಿ ಕವಿತೆಗಳಾಗಿ ಪರಿಣಾಮಕಾರಿಯಾಗಬಲ್ಲದು. ಗುಂಜನೂರಿನ ಮನೆ, ಸೋಮೇಶ್ವರ ದೇವಸ್ಥಾನದ ಕಟ್ಟೆ ಮೊದಲಾದ ಪದ್ಯಗಳು ಗತಕಾಲದ

ಸ್ಮರಣೆಯನ್ನೇ ಕವಿತೆಯಾಗಿಸಿದರೆ 'ಇದು ಬೆಂಗಳೂರು' ಪ್ರಸ್ತುತ ಸ್ಥಿತಿಯನ್ನು ಪ್ರತ್ಯಕ್ಷವಾಗಿ ಚಿತ್ರೀಕರಿಸುತ್ತದೆ.

ಗಾಳಿಯಲ್ಲಿ ತೇಲುವ 'ಪ್ರೀತಿ'ಯ ಎರಡನೆಯ ಗುಂಪಿನ ಕವಿತೆಗಳಲ್ಲಿ ಮೆಲುದನಿಯ ಸಲ್ಲಾಪದ ಜೊತೆಗೆ ಪ್ರೀತಿ ಕಡಲಿನ ಉಬ್ಬರ-ಇಳಿತ 'ಬೆಚ್ಚಗಿನ ವಿರಹ', 'ಕಣ್ಣಂಚಲ್ಲಿ ಕನಸುಗಳ ಮೂಟೆ' 'ಸ್ಪರ್ಶದೊಡಲಲ್ಲಿ ಬೆರಗಿನ ಲಜ್ಜೆ' ಮುಂತಾದವು ನಿಸರ್ಗದ ನುಡಿಚಿತ್ರಗಳೊಂದಿಗೆ ಒಡನುಡಿಯುವಂತೆ ತೋರುತ್ತದೆ. ಒಟ್ಟಾರೆ ನೋಡಿದಾಗ ಭಾವಾಭಿವ್ಯಕ್ತಿ ಅನುಭವಕಥನವಾಗಿ ಪರಿಣಮಿಸುವುದು ಈ ಕಾವ್ಯದ ಮುಖ್ಯ ಲಕ್ಷಣವಾಗಿ ಕಂಡು ಬರುತ್ತದೆ. ಕಾವ್ಯಸೃಷ್ಟಿಯ ಅಸಲು ಕಸಬುಗಾರಿಕೆಯಲ್ಲಿ ನುರಿತಂತೆ ಶ್ರೀಧರ ಮೂರ್ತಿಯವರು ಇನ್ನೂ ಉತ್ತಮ ಕಾವ್ಯವನ್ನು ಕೊಡಬಲ್ಲರೆಂಬ ಭರವಸೆಯೊಂದಿಗೆ ಅವರಿಗೆ ಶುಭ ಕೋರುತ್ತೇನೆ.

(೨೦೦೭)

ಸದ್ಭಾವ - ೨೦೦೮

೭೮

# ನಾನೂರುವ ಹೆಜ್ಜೆಗಳು

ಇಪ್ಪತ್ನಾಲ್ಕು ವರ್ಷಗಳ ಹಿಂದೆ ಹಾಯ್‌ಸ್ಕೂಲಿನ ಒಂಬತ್ತನೆ ತರಗತಿಯಲ್ಲಿ ಓದುತ್ತಿದ್ದ ವಿದ್ಯಾರ್ಥಿಯೊಬ್ಬ ನನಗೆ ಪತ್ರ ಬರೆದಿದ್ದ. ಬರೆಯುವ ಉತ್ಸಾಹದಲ್ಲಿದ್ದ ಅವನಿಗೆ ನಾನು ಉತ್ತರವನ್ನೂ ಬರೆದಿದ್ದೆ. ಈಚೆಗೆ ಮುನ್ನುಡಿಯನ್ನು ಕೋರಿದ ಪತ್ರದೊಂದಿಗೆ ಕವಿತೆಗಳ ಹಸ್ತಪ್ರತಿಯೊಂದು ನನ್ನ ಕೈಸೇರಿತು. ಅಷ್ಟು ವರ್ಷಗಳ ಹಿಂದಿನ ಸಂಗತಿಯನ್ನು ಕೃತಜ್ಞತೆಯಿಂದ ನೆನೆಸಿಕೊಂಡು ಬರೆದ ಪತ್ರದ ರೀತಿ, ಭಾಷೆ, ಶೈಲಿ ನನಗೆ ಮೆಚ್ಚುಗೆಯನ್ನುಂಟು ಮಾಡಿತು. ಆ ವ್ಯಕ್ತಿಯೇ ಮಾರುತಿ ದಾಸಣ್ಣವರ. ಬೆಳಗಾವಿ ಜಿಲ್ಲೆಯ ಹೊಸಟ್ಟಿ ಗ್ರಾಮದ ಇವರು ಎಂ.ಎ., ಬಿ.ಇಡಿ ಮಾಡಿಕೊಂಡು, ಮಧ್ಯ ಪ್ರದೇಶದ ನವೋದಯ ವಿದ್ಯಾಲಯದಲ್ಲಿ ಹತ್ತು ವರ್ಷ ಕನ್ನಡ ಅಧ್ಯಾಪಕರಾಗಿ ಕೆಲಸ ಮಾಡಿ, ಕಳೆದ ಐದು ವರ್ಷಗಳಿಂದ ಕೊಡಗಿನ ಗಾಳಿಬೀಡು, ಜವಾಹರ ನವೋದಯ ವಿದ್ಯಾಲಯದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಈ ನಡುವೆ ಅವರ ಕಥೆ, ಕವಿತೆಗಳು 'ಮಯೂರ', 'ತುಷಾರ', 'ಹೊಸತು' ಮೊದಲಾದ ಪತ್ರಿಕೆಗಳಲ್ಲಿ ಪ್ರಕಟಗೊಂಡಿರುವುದಲ್ಲದೇ ಕೆಲವು ಬಹುಮಾನಗಳನ್ನೂ ಅವರಿಗೆ ತಂದುಕೊಟ್ಟಿವೆ. ಕವನ ಸಂಕಲನವೊಂದನ್ನು ಪ್ರಕಟಿಸಬೇಕೆಂಬ ಅವರ ಬಹುದಿನಗಳ ಹಂಬಲ ಇದೀಗ ಕೈಗೂಡುತ್ತಿರುವುದು ಸಂತೋಷದ ಸಂಗತಿ. ಇದಕ್ಕೆ ಮುನ್ನುಡಿ ರೂಪದ ಎರಡು ಮಾತುಗಳನ್ನು ಸಂತೋಷದಿಂದ ಬರೆಯುತ್ತಿದ್ದೇನೆ.

ವ್ಯಕ್ತಿಯ ಜೀವನದಲ್ಲಿ ಕಂಡು ಬರುವ ದ್ವಂದ್ವ, ಒಳಿತಿನ ಅಭೀಪ್ಸೆ ಸಾಮಾಜಿಕ ನಡುವಳಿಕೆಯಲ್ಲಿಯ ಏರುಪೇರು, ಬದುಕಿನ ಅಸ್ತವ್ಯಸ್ತತೆ, ಸುತ್ತಲೂ ಹೊಗೆಯಾಡುತ್ತಿರುವ ದ್ವೇಷ-ಹಿಂಸೆ ಮುಂತಾದವಕ್ಕೆ ಕವಿ ಹೃದಯವೊಂದು ತೀವ್ರವಾಗಿ ಸ್ಪಂದಿಸಿರುವುದನ್ನು ಇಲ್ಲಿಯ ಕವಿತೆಗಳಲ್ಲಿ ಕಾಣಬಹುದು. ಹಾಗೆಯೇ ಅಭಿವ್ಯಕ್ತಿಯಲ್ಲಿ ತೋರಿದ ಸಂಯಮ ಕೂಡ ಮೆಚ್ಚುವಂತಹದು.

ಈ ಕವಿಯ ಕನಸು ಕಾಣುವ ಪ್ರವೃತ್ತಿ, ಆ ದಿಸೆಯಲ್ಲಿ ಒದಗಿದ ಆಶೆ ನಿರಾಶೆಗಳು ಹಾಗೂ ವಾಸ್ತವದ ಬಿಸಿ ಓದುಗರನ್ನು ತಟ್ಟುತ್ತವೆ. 'ಹ್ಯಾಂಗ ಕಾಣಲಿ ಕನಸ' ಕವಿತೆ ಈ ಭಾವವನ್ನು ಪರಿಣಾಮಕಾರಿಯಾಗಿ ಚಿತ್ರಿಸುತ್ತದೆ :

ಹ್ಯಾಂಗ ಕಾಣಲಿ ನಾ...
ಸುಖದ ಸುಂದರ ಕನಸ,
ವಾಸ್ತವದ ಹೆಣ
ಹೀಂಗss ಬಿದ್ದಿರುವಾಗ !

ಕವಿತೆ ಮುಂದುವರಿದು ಜಾತಿಗೊಬ್ಬ ಜಗದ್ಗುರು ಪಲ್ಲಕ್ಕಿಯಲ್ಲಿ ಮೆರೆಯುತ್ತಿರುವಾಗ ವಿಶ್ವಮಾನ ವಿಶಾಲ ಧರ್ಮದ ಕನಸನ್ನು, ಭ್ರಷ್ಟರಾಜಕಾರಣದ ಮಧ್ಯದಲ್ಲಿ ರಾಮರಾಜ್ಯದ ಸುಂದರ ಕನಸನ್ನು ಓಣಿಗೊಬ್ಬ ಲಾಡೆನ್ ಅವಿತು ಕುಳಿತಿರುವಾಗ ಶಾಂತಿ, ನೆಮ್ಮದಿಯ ಕಲ್ಯಾಣ ರಾಜ್ಯದ ಕನಸನ್ನು ಹೇಗೆ ಕಾಣುವುದು ಸಾಧ್ಯ ? ಎನ್ನುತ್ತಾನೆ ಕವಿ. ಇನ್ನು ಕೆಲವು ಕವಿತೆಗಳಲ್ಲಿಯೂ ಈ ಕನಸು ಕಾಣಿಸಿಕೊಳ್ಳುತ್ತದೆ ಬೇರೆ ಬೇರೆ ಸಂದರ್ಭಗಳಲ್ಲಿ :

ನಿರಂತರ ಉಕ್ಕೇರುತ್ತಿದ್ದ ಭವ್ಯ ಕನಸುಗಳು
ಮಾಂಸ ಖಂಡ ರಕ್ತರಹಿತ ಅಸ್ಥಿಗಳು (ವಿಪರ್ಯಾಸ)

* * * *

ಅಜ್ಜನೆಟ್ಟಾಲದ ಬಿಳಲುಗಳಲಿ
ಜೋಕಾಲಿ ಜೀಕುವೆಳೆಯಳು
ಕನಸುಗಳ ಚೆಲ್ಲಿದ್ದಾಳೆ -
ಬೇರ ಬಿಗು ಕೋಟೆಯಂಗಳದಿ
ತರಗೆಲೆಗಳಾಗಿ... (ಬೇರು, ಬಿಳಲು, ಬಾಲೆ)

* * * *

ಇವನ ಕನಸುಗಳ ಹೊರೆ
ಅಪ್ಪನ ನಿಶೆಯ ನೊರೆಯಲಿ
ತೆಪ್ಪದಂತೆ ಸಲೀಸಾಗಿ
ತೇಲಿ ಹೋಗುತ್ತವೆ (ಹೀಗೊಬ್ಬ ಪುಟ್ಟನ ಹೋಂವರ್ಕ್)

* * * *

'ಯಾಕ್ರೀ ಕನಸಾ.... ?'
ಎಂದಳೆನ್ನ ಯಶೋಧರೆ
'ಕನಸು ? ಅಲ್ಲಲ್ಲಬು... ಬು...ಬುದ್ಧ'
ಎಂದವನೇ ಅವಳೆದೆಯ ಮೃದುವಲ್ಲಿ
ಹುದುಗಿಬಿಟ್ಟೆ (ಬುದ್ಧನೊಡನೊಂದು ರಾತ್ರಿ)

* * * *

ಹರಿದ ಹೊನ್ನ ಕನಸಿನಲ್ಲಿ
ಬಾಳ ನಿಜದ ಬೆಳಗಳು (ಭಾವಬಂಧ)

ಹೀಗೆ ಕನಸು ಕಟ್ಟಿಕೊಡುವ ಚಿತ್ರ ರೂಪಕಗಳು ಆಯಾ ಸಂದರ್ಭದ ಕಾವ್ಯಗುಣಕ್ಕೆ ಮೆರುಗನ್ನಿತ್ತಿವೆ. ಹಿಂಸೆಯ ವಾತಾವರಣದಲ್ಲಿ ನಿರಾಶಾದಾಯಕ ಜೀವನದ ಭೀಕರ ಪರಿಸ್ಥಿತಿಯ ಚಿತ್ರಣ 'ಹೀಗೊಂದು ಪಯಣ' ಕವಿತೆಯಲ್ಲಿ ಹೀಗೆ ಕೊನೆಗೊಳ್ಳುತ್ತದೆ :

ಬಾಯಾರಿ ಬಸವಳಿದು
ಏದುತ್ತ ಹೊರಟೆ,
ಹೊರಟ ದಾರಿಯೇ ಮರೆತು
ಗಾಬರಿಯಾಯ್ತು
ಓಹ್! ಅಲ್ಲಿದೆ ಓಯಾಸಿಸ್ಸು ....
ಒಂದು ಬೊಗಸೆ ನೀರೆತ್ತಿಕೊಂಡರೆ
ಅದೂ ಕೆಂಪು!

ಅಮ್ಮನ ದುಡಿತ ಅಪ್ಪನ ಕುಡಿತದಲ್ಲಿ ಕರಗಿ ಹೋದಾಗ ಬಡ ಮಕ್ಕಳ ವಿದ್ಯಾಭ್ಯಾಸದ ದುರ್ಗತಿಯ ಪ್ರತೀಕವಾಗಿದೆ ಹೀಗೊಬ್ಬ ಪುಟ್ಟನ ಹೋಂವರ್ಕ್‌ದ ಕಂದೀಲು -

ಕತ್ತಲಿನ ದರ್ಪವ ಸಹಿಸುತ
ಕಂದೀಲು ಕಂದಿ, ಕುಂದಿ
ಸೋತು ಉರಿಯುತಿದೆ
ಈ ಇವನ ಕಣ್ಣಲ್ಲೂ
ಬೆಳಕ ತುಂಬಲಾಗದೆ.

ಪ್ರಕೃತಿಯನ್ನು ಮನುಷ್ಯ ಹೇಗೆ ವಿಕೃತಗೊಳಿಸುತ್ತಿದ್ದಾನೆಂಬುದನ್ನು 'ನಮ್ಮ ಕಾರುಣ್ಯ' ವ್ಯಂಗ್ಯದ ಧ್ವನಿಯಲ್ಲಿ ಚಿತ್ರಿಸುತ್ತದೆ. ಒಂದು ಜನಾಂಗದ ಭವಿಷ್ಯವನ್ನು ಉತ್ತಮಗೊಳಿಸಲು ದುಡಿದು ಮಡಿದ ಮಹಾಜೀವಗಳನ್ನು ನೆನೆಯದ ಇಂದಿನವರ ಕೃತಘ್ನತೆಯನ್ನು 'ಇಂದಿನೀ ದಿನದ ಹಿಂದೆ' ತೀಕ್ಷ್ಣವಾಗಿ ಪ್ರಶ್ನಿಸುತ್ತದೆ :

ಇಂದಿನೀ ....
ಹಬ್ಬದ ಬೆಳಕಿನ ಹಣತೆಯಲಿ, ಬತ್ತಿಯಾಗಿ
ಸುಟ್ಟು ಎಣ್ಣೆಯಾಗಿ ಉರಿದು ಹೋದ
ಆ ಅಸಂಖ್ಯ ಅನಾಮಧೇಯರುಗಳು
ನಮಗೆ ನೆನಪಾಗುವುದಿಲ್ಲವೇಕೆ ?

ರಾಮನನ್ನು ಅಲ್ಲಿ ಇಲ್ಲಿ, ಅಯೋಧ್ಯೆಯಲ್ಲಿ ಹುಡುಕಲು ಕೆಲವರು ಹುಡದಿ ಹಾಕುತ್ತಿರುವ ಸಂದರ್ಭದಲ್ಲಿ ಗ್ರಾಮೀಣ ಜನತೆ 'ರಾಮನಿಲ್ಲೇ ಇದ್ದಾನೆ' ಎಂದು ನಂಬಿಕೊಂಡಿರುವ ಬಗೆ ಮಾರ್ಮಿಕವಾಗಿದೆ :

ಇದೇ ನಮ್ಮ ಕಂಟೆವ್ವನ
ಮರಡಿಯಲಿ...
ರಾಮಲಸುಮಣ್ಣರು
ಜಿರಿಕಿ ಕಾಲ್ಮರಿ ಹಾಕಿಕೊಂಡು
ಅಡ್ಡಾಡಿದಾಗ ಮೂಡಿದ
ಹೆಜ್ಜೆ ಗುರುತುಗಳಿವೆ...

'ಅಂಬೇಡ್ಕರರಿಗೆ', 'ಶಿಕ್ಷಕನಿಗೆ' ತಕ್ಕ ವ್ಯಕ್ತಿ ಚಿತ್ರಗಳಾಗಿವೆ. ಶ್ರೇಷ್ಠ ಮೌಲ್ಯಗಳಿಗಾಗಿ ಹಪಹಪಿಸುವ ಭಾವ 'ನಾ ಕರುಬಿದೆ' ಕವಿತೆಯಲ್ಲಿ ಸಂಕೇತಗಳ ಮೂಲಕ ಅಭಿವ್ಯಕ್ತಿ ಪಡೆದಿದೆ.

(೨)

'ಮೂಕ ಭಾವಗಳೆಲ್ಲಾ ಮೀಟಿರುವ ರಾಗ'ದ ಭಾವಗೀತೆಗಳಲ್ಲಿಯೂ ಒಂದು ಬಗೆಯ ವಿಷಾದದ ಮಿಡಿತವಿದೆ :

ಕೂಗ್ಯಾವೋ ಮಣ್ಣಾಗ, ಬಾಯಾಗ ಬಲಾಯಿಲ್ಲ
ದನಿಗೋಳು ಬರುತಿಲ್ಲ, ಮೇಲ್ತುಳಿವ ಕಾಲ!
ನಾಟ್ಯಾವೋ ಇರಿದಾವೋ ಹಲವಾರು ಶೂಲ
ಕಂಡಿಲ್ಲ ಮೊಗವೆತ್ತಿ ಬೆಳ್ಳನ್ನ ಮುಗಲ! (ಹ್ಯಾಂಗ ಪಾಡಲಿ ನಾನು)
ಆದರೆ ಮರುಕ್ಷಣದಲ್ಲಿಯೇ
ಮಣ್ಣುಂಡು ಬದುಕ್ಯಾವೋ ಭಾವ ಸತ್ತಿಲ್ಲ ;
ಸುತ್ತಲ್ಲ ಮೊಳಿತಾವು ಭೀತಿಯೇನಿಲ್ಲ

ಎಂಬ ಸಾಂತ್ವನದಲ್ಲಿ ಆಶಾದಾಯಕ ಸೂಚನೆಯಿದೆ. 'ಹೇಳು ಹೃದಯದ ಕಿವಿಯಲಿ' 'ಈಗೇಕೆ ಬಂದಿರುವೆ?' 'ಮನ್ನಿಸು' ಮೊದಲವು ಪ್ರೀತಿಯ ನೋವು-ನಲಿವನ್ನು ಹಾಡಾಗಿಸಿದ ಕವನಗಳಾಗಿವೆ.

ಚುಟುಕುಗಳಲ್ಲಿಯೂ ಚಿಂತನೆಯಿದೆ :

ನಾವು ಗುಂಡಗೆ
ಉರುಳುವ ಉರುಳಿನಂತೆ
ಚಂದದ ಚೆಂಡಿನಂತೆ

ಜಿಗಿಯುತ್ತ ಪುಟಿಯುತ್ತ
ಹೊರಟಿದ್ದವು.
ಕಾಲ ನಮ್ಮನು
ಕೆತ್ತಿ, ಕಡಿದು,
ಕೊರೆದು ಈಗ
ಚೌಕು ಮಾಡಿಬಿಟ್ಟ (ಕಾಲ)

ಮಾರುತಿ ದಾಸಣ್ಣವರ ಅವರ ಕವಿ ಹೃದಯದ ತುಡಿತ-ಮಿಡಿತಗಳನ್ನು ಒಳಗೊಂಡ 'ನಾನೂರುವ ಹಜ್ಜೆಗಳು', 'ಮಾತಾಡುತ್ತಿವೆ ಮೂಡುತ್ತಿಲ್ಲ' ಎಂದು ಸಂದೇಹ ಪಡುವ ಕಾರಣವಿಲ್ಲ. ಜೋಕೆ ತೂಕಗಳಿಂದ ಅವು ದೃಢವಾಗುತ್ತ ಸಾಗಲಿ ಎಂದು ಹಾರೈಸಿ ಶುಭ ಕೋರುತ್ತೇನೆ.

(೨೦೦೭)

ಸದ್ಭಾವ - ೨೦೦೮

## ೭೯

## ಲಿಕ್ಕಿ - ಚುಕ್ಕಿ

"ತಲೆ ತಲಾಂತರದಿಂದ ವ್ಯಾಪಾರ ವಹಿವಾಟಿನಲ್ಲಿ ಮುಳುಗಿರುವ ಮಾರವಾಡಿ ಬಂಧುಗಳು ಕಾವ್ಯ ಕೃಷಿಯಲ್ಲಿ ತೊಡಗುವುದು ಅಪರೂಪ. ಇಡೀ ಕರ್ನಾಟಕದಲ್ಲಿ ಕೇವಲ ಇಬ್ಬರು ಮಾರವಾಡಿ ಸಾಹಿತ್ಯ ರಚನಾಕಾರರಿರುವುದು ಇದಕ್ಕೆ ಸಾಕ್ಷಿ. ಆ ಇಬ್ಬರಲ್ಲಿ ಒಬ್ಬರಾದ ಶ್ರೀ ರೋಷನ್ ಛೋಪ್ರಾ ಕವನ ರಚನೆಗೆ ಮನತೆತ್ತು ಗಮನ ಸೆಳೆದಿದ್ದಾರೆ". ರೋಷನ್ ಛೋಪ್ರಾರವರ ಪ್ರಥಮ ಕವನ ಸಂಕಲನ 'ಮನ ಮಲ್ಲಿಗೆ'ಗೆ ಮುನ್ನುಡಿ ಬರೆಯುತ್ತ ಪ್ರೊ॥ ಡಿ. ಲಿಂಗಯ್ಯನವರು ಹೇಳಿದ ಈ ಮಾತುಗಳನ್ನು ಓದಿದಾಗ ನನಗೆ ಹೆಚ್ಚಿನ ಸಂತೋಷವಾಯಿತು. ಭಿನ್ನ ಭಾಷೆ ಹಾಗೂ ಬದುಕಿನ ಹಿನ್ನೆಲೆಯ ಜೀವವೊಂದು ಕನ್ನಡದಲ್ಲಿ ಕವಿಯಾಗಿ ಈ ನಾಡಿನ ಮಣ್ಣಿನ ಋಣಕ್ಕೆ ತಾನು ಬಾಧ್ಯಸ್ಥನೆಂದು ಹೇಳಿಕೊಂಡು ಹೆಮ್ಮೆ ಪಡುವ ಭಾಗ್ಯ ಎಷ್ಟು ಜನಕ್ಕಿದೆ? ಡಾ॥ ಸಿದ್ದಲಿಂಗಯ್ಯನವರು ಹಾರೈಸಿದಂತೆ ರೋಷನ್‌ರವರ ಮನಮಲ್ಲಿಗೆಯ ರಸಬಳ್ಳಿ ಹಬ್ಬಿ ಕಂಪು ಬೀರುತ್ತ 'ಲಿಕ್ಕಿಚುಕ್ಕಿ'ಯಲ್ಲಿ ಬಹುಬೇಗ ಕುಡಿ ಚಾಚಿಕೊಂಡಿರುವುದು ಗಮನಾರ್ಹವೆನಿಸಿದೆ.

ಈ ಯುವ ಕವಿಯ ಎರಡನೆಯ ಸಂಕಲನವೆ ಮಕ್ಕಳ ಕವನ ಸಂಕಲನವಾಗಿ ಹೊರಬಂದಿರುವುದು ಸ್ವಲ್ಪ ಸೋಜಿಗವೆನಿಸಿದರೂ ಸಹಜತೆಗೆ ಹೊರತಾಗಿಲ್ಲ, 'ಮನೆ ಪ್ರಥಮ ಗೌರವ ವೇದಿಕೆ' ಎಂದು ಭಾವಿಸಿ 'ಮನ ಮಲ್ಲಿಗೆ'ಯಲ್ಲಿಯೇ ಪ್ರೀತಿಯಬಾಲ್ಯವನ್ನು ನೆನೆದು ಅಮ್ಮನ ವಾತ್ಸಲ್ಯವನ್ನು ಕುರಿತು ಕವನಿಸಿದ ಕವಿ ಈಗ ಮಗ 'ಲಿಕ್ಕಿ' (ಲಿಖಿತ್)ಯ ತುಂಟಾಟದಲ್ಲಿ ಅದನ್ನು ಪುನರನುಭವಿಸಿ ಅಭಿವ್ಯಕ್ತಿಗೆ ಹೊಸ ದಾರಿಯನ್ನು ಕಂಡುಕೊಂಡಿದ್ದಾನೆ.

ವಾತ್ಸಲ್ಯ, ಮಗುವಿನ ಮುಗ್ಧತೆ ಕುತೂಹಲ ಹಾಗೂ ಜಾಣತನಗಳೇ ಸ್ಥಾಯಿಯಾಗಿರುವ ಈ ಕವಿತೆಗಳಲ್ಲಿ ಕುಟುಂಬ ಜೀವನದ ಸೊಗಸಿನೊಂದಿಗೆ ಮಗುವಿನ ಮನೋಲಹರಿಯ ನುಡಿ ಚಿತ್ರಗಳಿವೆ:

ಮನೆಯಲಿ ಒಬ್ಬನೆ ಮುದ್ದಿನ ಮಗನಿವ
ಕೂಗುತ ಕರೆದರೆ ಲಿಕ್ಕಿ
ಬಗ್ಗಿದ ತಲೆಯನು ಎತ್ತಿ ನೋಡುತ
ನಗುವನು ಸಂತಸ ಉಕ್ಕಿ (ಲಿಕ್ಕಿಚುಕ್ಕಿ)

ಇವನ ತುಂಟಾಟ ಓಡಾಟಗಳು ಮನೆಯಲ್ಲಿಯೇ ಗಾಳಿಪಟ ಹಾರಿಸಿದಂತೆ:

ನೆಲದಲಿ ಹಾರುವ ಬಿಳಿ ಗಾಳಿಪಟ
ಮನಸಿವನದು ಬಿರುಗಾಳಿ
ಮನಬಂದೆಡೆ ಇವಹಾರಿದ ಹಿಂದೆ
ಅಜ್ಜಿಯ ಬಾಲಂಗೋಚಿ (ಕೋಟಿ ರೂಪಾಯಿ)

ಉಪಕಾರ, ಮಂದಬುದ್ಧಿ, ಸಿಂಹದ ತ್ಯಾಗ, ದುರಾಸೆ ಕವನಗಳಲ್ಲಿಯ ಕಥಾಂಶ ಮಕ್ಕಳಿಗೆ ಹಿಡಿಸಬಹುದು. ಮಗುವಿನ ಮನೋಲಹರಿಯನ್ನು ಚಿತ್ರಿಸುವ ಕವನಗಳು ಹೆಚ್ಚು ಲವಲವಿಕೆಯಿಂದ ಕೂಡಿವೆ:

ಬಾನೊಳು ಓಡಿ ಮೋಡದಿ ಈಜಿ
ದಾಟಿದ ನಮ್ಮ ಮನೆ
ತುಂಬು ನಗುವಲಿ ಕೈಯನು ಬೀಸಿ
ಸೆಳೆದವ ಚಂದ್ರಮನೆ (ಚಂದಿರ ಕಾಜಾಣ)

(ನೀ. ರೇ. ಹಿರೇಮಠರ 'ಚಂದಿರನೇತಕೆ ಓಡುವನಮ್ಮ' ಕವಿತೆಯನ್ನು ಇದರ ಜೊತೆಗೆ ನೆನಪಿಸಿಕೊಳ್ಳಬಹುದು)

ಉಪಮೆ, ರೂಪಕಗಳಲ್ಲಿ, ನಿರೂಪಣಾ ವಿಧಾನದಲ್ಲಿ ಸ್ವಂತಿಕೆಯಿದೆ :

ಮುಗಿಲೆತ್ತರದಲಿ ಹಗಲು
ಬೆಳ್ಳಿ ಚಂದ್ರಬಾನಿಗೆ
ಮೋಡದೊಳಗೆ ನುಗ್ಗುವ
ವಿಮಾನ ಪುಟ್ಟ ಕಣ್ಣಿಗೆ (ಗಾಳಿಪಟ)

'ಹುಣ್ಣಿಮೆ ಚಂದಿರ' ಬರಬರುತ್ತಾ ಕಿರಿದಾಗುತ್ತ ಹೋಗುವುದನ್ನು (ಅದನ್ನು ಹಣ್ಣೆಂದು ಭಾವಿಸಿ)

ಕಳ್ಳ ಮೋಡದಲವಿತು
ಕದ್ದು ತಿಂದಿರಲು
ವಾರ ತುಂಬಿರಲೆರಡು
ಒಬ್ಬನೇ ಮುಗಿಸಿದನು (ಹುಣ್ಣಿಮೆ ಚಂದಿರ)

ಎನ್ನುವಲ್ಲಿ ಮಗುವಿನ ಸಹಜವಾದ ಕಲ್ಪನೆ ರೋಚಕವಾಗಿದೆ.

('ದೇವರ ಪೆಪ್ಪರಮೆಂಟೇನಮ್ಮ' ಎಂದು ಕೇಳುವ ಕುವೆಂಪು ಕವಿತೆಯಮಗುವನ್ನು ಇಲ್ಲಿ ನೆನೆಯಬಹುದು)

'ಕಬಡ್ಡಿ ಟ್ರೋಫಿ' ಇಡೀ ಆಟವನ್ನು ಕ್ರಿಯಾತ್ಮಕವಾಗಿ ಕಣ್ಣ ಮುಂದೆ ಕಟ್ಟುವಂತಿದೆ.

'ಗಾಂಧಿಕೋಲು' ಆಧುನಿಕ ಸಂವೇದನೆಯಿಂದ ಚುರುಕಾಗಿದೆ. ಖಾಕಿ ಕೋಟಿನ 'ಆಟೋ

ಮಾಮ', ಹೆಗಲ ಚೀಲದ 'ಅಂಚೆ ಮಾಮ', ಚಡ್ಡಿಯು ಕಾಣದ ದೊಗಳೆ ಅಂಗಿಯ 'ಕಡಲೆಕಾಯಿ' ಮಾರುವ ಪೋರ, ಮಗವಿಗೆ ಹೆಚ್ಚು ಆತ್ಮೀಯರು. ಹೊಸ ವಸ್ತುಗಳಲ್ಲಿ ಕೆರಳಿದ ಮಗುವಿನ ಆಸಕ್ತಿಗೆ 'ಕಂಪ್ಯೂಟರ್ ಅಜ್ಜ' ಉದಾಹರಣೆಯಾಗಿದೆ. ಕನ್ನಡ ನಾಡು-ನುಡಿಯ ಮೇಲಿನ ಪ್ರೀತಿ ಅಭಿಮಾನ 'ಮೊಳಗುತಿರಲಿ ಕನ್ನಡ'ದಲ್ಲಿ ಸಹಜವಾಗಿ ಅಭಿವ್ಯಕ್ತಿ ಪಡೆದಿದೆ:

ಈಜು ಮೀನು ಹೊಳೆವ ತಾರೆ
ಚಂದಮಾಮ ಕನ್ನಡ
ಬೆಳಗೊ ಸೂರ್ಯ ಕನ್ನಡ
ಹಾಡುಹಕ್ಕಿ ಕನ್ನಡ
ಅಜ್ಜ ಅಜ್ಜಿ ಬೋಂಡ ಬಜ್ಜಿ
ಲಾಡು ಕಡಬು ಕನ್ನಡ. (ಮೊಳಗುತಿರಲಿ ಕನ್ನಡ)

'ಲಿಕ್ಕಿ ಚುಕ್ಕಿ'ಯ ಈ ಬಗೆಯ ಚೊಕ್ಕ ಕವನಗಳನ್ನು ಮಕ್ಕಳು ಓದಿ, ಕೇಳಿ ನಕ್ಕು ನಲಿಯಲಿ. ಯುವ ಕವಿ ರೋಷನ್ ಛೋಪ್ರಾ ಕನ್ನಡ ಕಾವ್ಯ ಪರಂಪರೆಯ ಸಾರವನ್ನು ಹೀರಿಕೊಂಡು ಇನ್ನೂ ಸಾರವತ್ತಾದ ಉತ್ತಮ ರಚನೆಗಳನ್ನು ಕನ್ನಡಕ್ಕೆ ನೀಡಲಿ ಎಂದು ಹೃತ್ಪೂರ್ವಕವಾಗಿ ಹಾರೈಸುತ್ತೇನೆ.

(೨೦೦೭)
ಸದ್ಭಾವ - ೨೦೦೮

## ೮೦

## ಸಿಂಪು - ಹನಿ

ಈ ಒಂದು ಹನಿ ಕಡಲ ಸಿಂಪನು ಸೇರಿ
ಮುತ್ತಾಗಲೆಂಬಾಸೆ ಎಲ್ಲರಂತೆ
ಇಲ್ಲ, ಸಾಗರವ ಸೇರಿಹೋಗಲಿ ಬಿಡಿ
ಇದು ಉಳಿದೆಲ್ಲ ಹನಿಗಳಂತೆ.

ಕಳೆದ ಐವತ್ತು ವರುಷಗಳಿಂದ ಆಗಾಗ ಬರೆಯುತ್ತ ಬಂದಿದ್ದರೂ ಈ ಬಗೆಯ ಸಂಕೋಚದ ಸ್ವಭಾವದಿಂದಾಗಿ ಶ್ರೀ ಮಧುಕರ ಯಕ್ಕುಂಡಿಯವರ ಕವನಸಂಗ್ರಹ ಬರುವ ಕಾಲಕ್ಕೆ ಬರಲಿಲ್ಲವೆಂದು ತೋರುತ್ತದೆ. ಹಾಗೆ ನೋಡಿದರೆ ಅವರ ಸುತ್ತು ಮುತ್ತು ಇದ್ದದ್ದು ಕಾವ್ಯದ ವಾತಾವರಣವೇ. ಕನ್ನಡ ಕಾವ್ಯಕ್ಕೆ ತಮ್ಮದೇ ಆದ ವಿಶಿಷ್ಟ ಕೊಡುಗೆ ನೀಡಿದ ಸು.ರಂ. ಯಕ್ಕುಂಡಿಯವರು ಇವರ ಅಣ್ಣಂದಿರು. ವಿದ್ಯಾಭ್ಯಾಸದ ವಿವಿಧ ಹಂತಗಳಲ್ಲಿ ಕೀರ್ತಿನಾಥ ಕುರ್ತಕೋಟಿ, ಪ್ರಹ್ಲಾದ ನರೇಗಲ್ಲ, ಡಾ. ಡಿ.ಎಸ್.ಕರ್ಕಿ, ಶ್ರೀನಿವಾಸ ತೋಫಖಾನೆ ಮೊದಲಾದವರ ಮಾರ್ಗದರ್ಶನ ಅವರಿಗೆ ದೊರೆತಿದೆ. ಗದ್ಯದಲ್ಲಿ ನಾಟಕ, ಕಥೆ, ವ್ಯಕ್ತಿಚಿತ್ರ, ವಿಮರ್ಶೆ, ಪ್ರಬಂಧಗಳನ್ನು ರಚಿಸಿದ್ದರೂ 'ಪ್ರಾರಂಭದಿಂದಲೂ ಪದ್ಯವೆ ನನ್ನ ಮೆಚ್ಚಿನ ಪ್ರಕಾರ' ಎಂದು ಅವರು ಹೇಳಿದ್ದಾರೆ. ಇಷ್ಟೊಂದು ಪ್ರೀತಿಯಿಂದ ನಂಬಿದವರನ್ನು ಕವಿತೆ ಕೈಬಿಡಲಿಲ್ಲವೆನ್ನುವದಕ್ಕೆ ಮಧುಕರ ಯಕ್ಕುಂಡಿಯವರ ಪ್ರಸ್ತುತ ಸಂಕಲನ ಸಾಕ್ಷೆ ನುಡಿಯಬಲ್ಲದು.

ಕವಿಯ ಕೋರಿಕೆಯಂತೆ ಈ ಸಂಗ್ರಹದ ಬಗ್ಗೆ ಎರಡು ಮಾತು ಸಂತೋಷದಿಂದ ಬರೆಯುತ್ತಿದ್ದೇನೆ.

ನಿಸರ್ಗ, ದೈವಿಕತೆ, ಬದುಕಿನ ಜಿಜ್ಞಾಸೆ, ನಾಡು-ನುಡಿಯ ಅಭಿಮಾನ, ವ್ಯಕ್ತಿಗೌರವ, ಒಲವು ಚೆಲುವು ಹೀಗೆ ಈ ಕವಿತೆಗಳಲ್ಲಿ ಒಂದಲ್ಲ ಒಂದು ರೀತಿಯಲ್ಲಿ ಒಡಮೂಡಿರುವುದರಿಂದ ಕವಿ ಅದಕ್ಕೆ ತೋರಿಸಿದ ಪ್ರತಿಕ್ರಿಯೆ ಓದುಗರ ಮನಸ್ಸನ್ನು ಹಿತವಾಗಿ ತಟ್ಟುತ್ತದೆ. 'ದೈವಬೇರೆ, ತಾಯಿಬೇರೆ ಎಂಬುದಿಲ್ಲ' ಎಂಬ ನಂಬಿಕೆಯೇ ಇದರ ಸ್ಥಾಯಿ; 'ದೇವನೆಲ್ಲು ಬೇರೆಯಿಲ್ಲ ಬಿಟ್ಟು ಹೃದಯ ದೇಗುಲ' ಎಂಬುದು ಅದರ ಬಾಯಿ. 'ನೀನು' 'ದೇವದೂತ' 'ಪ್ರಾರ್ಥನೆ' 'ಅರಿವು' ಮುಂತಾದ ಕವಿತೆಗಳ ಭಾವವೂ 'ನೀನು ನನ್ನೊಳಗೆ, ನಾನು ನಿನ್ನೊಳಗೆ, ಅದೆ ನಿತ್ಯಸತ್ಯವಂತೆ' ಎಂಬ ನಿಲುವಿಗೇ ಬಂದು ತಲುಪುತ್ತದೆ.

ಹೆಚ್ಚಿನ ಕವನಗಳಲ್ಲಿ ಹುಟ್ಟು-ಸಾವು, ಬದುಕಿನ ಜಿಜ್ಞಾಸೆ ಮುಖ್ಯವಾಗಿದೆ. 'ಜೀವನದಿ' 'ಬದುಕು' 'ಎರಡು ದಡ' 'ದಾರಿ' 'ಕ್ಷಣದ ಬದುಕು' 'ನಂಬಿಕೆ' ಮೊದಲಾದ ಕವನಗಳಲ್ಲಿ ಅದು ವಿವಿಧ ವಿನ್ಯಾಸವನ್ನು ಪಡೆದುಕೊಂಡಿದೆ.

ಕಡಲ ಕೂಡುವದು ದಿಟವೆ ಆದರು
ನದಿಗೆ ತನ್ನದೆಂಬುದುಂಟು
ಹುಟ್ಟು ಸಾವುಗಳು ಆಚೆಈಚೆ ಇವೆ
ನಡುವೆ ಬದುಕು ಉಂಟು.

ಎನ್ನುವಲ್ಲಿ ನದಿ ಬದುಕಿನ ಪ್ರತೀಕವಾಗಿದೆ. 'ಹೋದಮೇಲೂ ಬದುಕಬೇಕು' ಎಂಬುದು ಕವಿಯ ಬದುಕಿನ ಆದರ್ಶವಾಗಿದೆ. 'ನಿಜಕು ಎಲ್ಲರೂ ದಾರಿಹೋಕರು ತಾನೆ' ಎಂಬ ಅರಿವು 'ತನ್ನ ದಾರಿಯ ತಾಕಂಡು ನಡೆ'ಯಲು ಪ್ರಚೋದಿಸುತ್ತವೆ. 'ನಂಬಿಕೆ' ಕವಿತೆಯಲ್ಲಿ ಜೀವನಾನುಭವದ ವಿವಿಧ ಮುಖಗಳ ಅಭಿವ್ಯಕ್ತಿ ಸರಳಸುಂದರವಾಗಿದೆ. ನೋವಿನಂತೆ, ಸುಖವು ಮಿತಿಮೀರಿದರೂ ಕಣ್ಣು ಹನಿಗೂಡುವದು ಇಲ್ಲಿಯ ವಿಶೇಷವಾಗಿದೆ.

ನಮ್ಮ ಸುಮಧುರ ಹಾಡು ಎಲ್ಲವು
ನೋವಿನಲ್ಲಿಯೆ ಮೂಡಿವೆ,
ಸುಖವು ಮೇರೆಯ ಮೀರಿದಾಗಲು
ಕಣ್ಣು ತಾ ಹನಿಗೂಡಿವೆ.
.....................................
ಕಾಳರಾತ್ರಿಯು ಕವಿದು ಬಂದರೆ
ಶುಭದ ಬೆಳಗಿನ ಸೂಚನೆ
ಕಷ್ಟ ಕಡಲನು ಈಜಿ ಕಳೆವುದೆ
ನಮ್ಮ ಬದುಕಿನ ಸಾಧನೆ.

ಈ ಕವನಗಳ ಇನ್ನೊಂದು ಮುಖ್ಯವಸ್ತು ಒಲವು - ಚೆಲುವನು ಕುರಿತದ್ದು. 'ಎಷ್ಟೋಕಾಲ ಕಳೆದರು ಮಧುರ ನೆನಪು ತರುವದು' ಚೆಲುವಿನ ಗುಣ; ಅದರೆ ಆಶೆ ಸಲ್ಲದು. 'ಚೆಲುವನೊಂದು ಕಂಡರೆ' ಕವಿತೆ ಅರ್ಥವತ್ತಾಗಿ ಮುಕ್ತಾಯಗೊಳ್ಳುವದು ಹೀಗೆ;

ಮೆಚ್ಚಬೇಕು ಚೆಲುವು ಕಂಡು
ಪಡೆವ ಆಸೆ ಇಲ್ಲದೆ
ನೋಡಿದಾಗ ಮುದವು ಮೂಡೆ
ಅದಕು ಹೆಚ್ಚು ಎಲ್ಲಿದೆ.

ಪ್ರೀತಿಯ ಲೋಹಚುಂಬಕಶಕ್ತಿ ತರುವ ಮಾಯೆಗೆ 'ಕಾಲ ಚಲಿಸದೆ ನಿಂತಿತು' ಎನ್ನುತ್ತಾರೆ ಕವಿ. 'ಎಂಥ ಚೆಲುವು ಕಾಣುವುದಕು ಬೇಕು ಮೊದಲು ಒಲವು', ಪ್ರೀತಿಯ ವಿಲಕ್ಷಣತೆಯನ್ನು

'ಹಂಸಗೀತೆ'ಯ ಕೊನೆಯ ಸಾಲುಗಳು ಪರಿಣಾಮಕಾರಿಯಾಗಿ ಬಿಂಬಿಸುತ್ತವೆ :

ಪ್ರೀತಿಯೊಂದು ಗಗನಕುಸುಮ ಯಾರು ಪಡೆದರು?
ಪ್ರೀತಿಯೊಂದು ಮುಗಿಲಮಿಂಚು ಯಾರು ತಡೆದರು?

ತಮ್ಮ ಮೇಲೆ ನಡೆಯುವ ದಾಳಿಗೆ ಪ್ರತಿಕ್ರಿಯೆ ತೋರದೆ ಸುಮ್ಮನಿದ್ದುಬಿಡುವ ಕನ್ನಡಿಗರ ಸ್ವಭಾವವು 'ನಿಂತವರು' ಕವಿತೆಯಲ್ಲಿ ವ್ಯಂಗ್ಯವಾಗಿ ವಿಡಂಬಿತವಾಗಿದೆ. 'ಹೊರಟಿದ್ದೇನೆ' ಪದ್ಯ ನಿವೃತ್ತಿಯ ನಂತರದ ಬೀಳ್ಕೊಡುಗೆಯ ಭಾವತೀವ್ರತೆಯೊನ್ನೊಳಗೊಂಡು ಹೃದಯಸ್ಪರ್ಶಿಯಾಗಿದೆ. ವ್ಯಕ್ತಿಗಳನ್ನು ಕುರಿತ ಕವಿತೆಗಳಲ್ಲಿ 'ಅನಕೃ' 'ಕನ್ನಡದ ಕೈ' 'ನಮನ' (ಪ್ರಹ್ಲಾದ ನರೇಗಲ್ಲ) 'ಗಾನಗಂಗಾ' ಮೊದಲಾದವು ಅವರವರ ವಿಶಿಷ್ಟ ಸಾಧನೆಗಳನ್ನು ತಕ್ಕಮಟ್ಟಿಗೆ ಚಿತ್ರಿಸುತ್ತವೆ.

ರಾಮಾಯಣದಲ್ಲಿ ಮೊದಲಿನಿಂದ ಕೊನೆಯವರೆಗೆ ಒಬ್ಬರಲ್ಲ ಒಬ್ಬರು ರಾಮನಿಗಾಗಿ ಕಾಯುತ್ತಿರುವದನ್ನು ಕವಿ ಗುರುತಿಸಿ ಅಂಥ ಕೆಲವು ಪ್ರಮುಖ ಸಂದರ್ಭಗಳನ್ನು ಒಂದೊಂದು ನುಡಿಯಲ್ಲಿ ಹಿಡಿದಿಡುವ ಪ್ರಯತ್ನ 'ನಿರೀಕ್ಷೆ' ಕಥನ ಕವನದಲ್ಲಿ ಕುತೂಹಲಕಾರಿಯಾಗಿ ಚಿತ್ರಣಗೊಂಡಿದೆ.

ಇನ್ನಷ್ಟು ಏಕಾಗ್ರತೆವಹಿಸಿ ಪದ್ಯಗಳ ಲಯಗಾರಿಕೆಯಲ್ಲಿ ವೈವಿಧ್ಯವನ್ನು ತರಬಹುದಾಗಿತ್ತು. ಆದರೆ ಅಂಥ ಯಾವ ಮಹತ್ವಾಕಾಂಕ್ಷೆಯನ್ನೂ ಕವಿ ಇಟ್ಟುಕೊಂಡಿಲ್ಲವಾದ್ದರಿಂದ ಒಂದು ಮಿತಿಯಲ್ಲಿ ಇಲ್ಲಿಯ ಪದ್ಯಗಳು ಓದುಗರಿಗೆ ಮುದವನ್ನು ನೀಡಬಲ್ಲವು. ವಿನಯಶಾಲಿಗಳಾದ ಶ್ರೀ ಮಧುಕರ ಯಕ್ಕುಂಡಿಯವರಿಗೆ ಶುಭಕೋರುತ್ತೇನೆ.

(೨೦೦೮)

## ೮೧

## ಕಾಲವಾಹಿನಿ

ದಿನವೂ ಅದೇ ನದಿಯಲ್ಲಿ, ಅದೇ ನೀರಿನಲ್ಲಿ ಮುಳುಗು ಹಾಕಿ ಬಂದೆವೆಂದುಕೊಂಡರೂ ಪ್ರತಿದಿನವೂ ಹೊಸ ನೀರಿನಲ್ಲೇ ಮೀಯುತ್ತೇವೆ ಎಂಬುದು ವಿಚಾರವಂತರಿಗೆ ಹೊಳೆಯದಿರದು. 'We cannot dip twice into the same river' ಎಂಬ ಮಾತು ಕಾಲಪ್ರವಾಹದ ನಿರಂತರ ಬದಲಾವಣೆಯನ್ನು ಅರ್ಥಪೂರ್ಣವಾಗಿ ಸೂಚಿಸುತ್ತದೆ. ನಿಂತ ನೀರು ಕೊಳಚೆಯಾಗಿ ಹೊಂಡವೆನಿಸಿಕೊಂಡರೆ ಹರಿಯುವ ನೀರು ನಿರ್ಮಲತೆಯನ್ನು ಕಾಪಾಡಿಕೊಂಡು ಹೊಸ ನೀರಿಗೆ ಹಾದಿ ಮಾಡಿಕೊಡುತ್ತದೆ. ಹೀಗೆ ಕಾಲವಾಹಿನಿಯು ಅವಿಚ್ಛಿನ್ನವಾಗಿದ್ದು ಅನಂತವಾಗಿದೆ. ಜಗತ್ತಿನ ಜೀವನದಲ್ಲಿಯ ಎಲ್ಲ ವಿದ್ಯಮಾನಗಳನ್ನೂ, ಘಟನೆಗಳನ್ನೂ ತನ್ನ ಹೊಟ್ಟೆಯಲ್ಲಿ ಹಾಕಿಕೊಂಡು ದಿನಬೆಳಗೂ ಅದು ನಿರಾಯಾಸವಾಗಿ ಮುಂದುವರಿಯುತ್ತದೆ. ಅದರಲ್ಲಿ ಅಡಗಿರುವ ಪ್ರಯತ್ನಗಳಿಗೆ, ಸಾಹಸಕ್ಕೆ, ದುಡಿಮೆಗೆ ಕಾಲಪರಿಪಾಕದಿಂದ ಒಮ್ಮಿಲ್ಲೊಮ್ಮೆ ಫಲ ದೊರೆಯುತ್ತದೆ. ಆಕಸ್ಮಿಕವೆಂದು ಕಂಡುಬರುವ ಅನೇಕ ಸಂಗತಿಗಳಿಗೆ ಹೀಗೆ ಕಾಲಗರ್ಭದಲ್ಲಿ ಕಾರಣ ಮೀಮಾಂಸೆ ದೊರೆಯುವದುಂಟು.

ಆಧುನಿಕ ಕರ್ನಾಟಕದ ಇಂದಿನ ಆಗು-ಹೋಗುಗಳಿಗೆಲ್ಲ ಕಳೆದ ಅರ್ಧಶತಮಾನದಲ್ಲಿ - ಅಂದರೆ ಅದರ ನವೋದಯ ಕಾಲದಲ್ಲಿ - ಅದರ ಬೇರೆ ಬೇರೆ ಕ್ಷೇತ್ರಗಳಲ್ಲಿ ನಡೆದ ಹಲವಾರು ಘಟನೆಗಳು, ಕಾರ್ಯಪ್ರವೃತ್ತವಾಗಿದ್ದ ಸಂಘ-ಸಂಸ್ಥೆಗಳು, ಕೂಡಿದ ಸಭೆ-ಸಮ್ಮೇಳನಗಳು, ಪ್ರಭಾವಶಾಲಿಗಳಾದ ವ್ಯಕ್ತಿಗಳು ಕಾರಣರಾಗಿದ್ದರೆಂದು ಬೇರೆ ಹೇಳಬೇಕಾಗಿಲ್ಲ. ಹಿಂದೆ ನಡೆದ ಎಷ್ಟೋ ಮಹತ್ವದ ಸಂಗತಿಗಳು ಸಾಮಾನ್ಯ ಜನದ ಸ್ಮೃತಿಯಿಂದ ಮಾಸಿ ಹೋಗಿದ್ದರೂ ಐತಿಹಾಸಿಕ ದೃಷ್ಟಿಯುಳ್ಳ ವ್ಯಕ್ತಿಯ ಮನಸ್ಸಿನಲ್ಲಿ ಅವು ಗೂಡು ಕಟ್ಟಿರುತ್ತವೆ. ದೂರದೃಷ್ಟಿಯ ಲೇಖಕನು ಕಾಲಕಾಲಕ್ಕೆ ಬರೆದ ತನ್ನ ಲೇಖನಗಳಲ್ಲಿ ಒಂದಿಲ್ಲ ಒಂದು ರೀತಿಯಿಂದ ಅವುಗಳನ್ನು 'ಚಿರಸ್ಥಾಯಿ'ಗೊಳಿಸಿರುತ್ತಾನೆ. ಹಿರಿಯರಾದ ಪ್ರೊ. ಮಾಳವಾಡರ ಪ್ರಕೃತ ಲೇಖನ ಸಂಗ್ರಹದಲ್ಲಿ ಕರ್ನಾಟಕದ ಶೈಕ್ಷಣಿಕ, ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಚರಿತ್ರೆಗೆ ಸೂಚಕವಾಗಬಲ್ಲ ಹಾಗೂ ಪೋಷಕವಾಗಬಲ್ಲ ಹಲವಾರು ಅಂಶಗಳು ಮೂಡಿಬಂದಿವೆ. ಕಳೆದ ಮೂರು ದಶಕಕ್ಕೂ ಮಿಕ್ಕಿದ ಕಾಲಾವಕಾಶದಲ್ಲಿ ಅವರು ಬರೆದಿರುವ ಲೇಖನಗಳನ್ನು ಈಚೆಗೆ ಮೂರು-ನಾಲ್ಕು ಗ್ರಂಥಗಳ ಪರಿಮಿತಿಯಲ್ಲಿ ಅಳವಡಿಸುತ್ತಿರುವಾಗ ಪ್ರಥಮವಾಗಿ ರೂಪುಗೊಂಡಿರುವ ಈ

'ಕಾಲವಾಹಿನಿ'ಯ ಲೇಖನಗಳು ಬಹುಮಟ್ಟಿಗೆ ಐತಿಹಾಸಿಕ ಮಹತ್ವವನ್ನೂ ಪಡೆದಿರುವದು ಕಂಡುಬಂದಿತು. ಆದುದರಿಂದ ಅವರ ಇನ್ನುಳಿದ ಪ್ರೌಢ ಸಾಹಿತ್ಯಿಕ ಪ್ರಬಂಧಗಳ ಸಂಗ್ರಹ ಬರುವ ಮೊದಲೇ 'ಕಾಲವಾಹಿನಿ'ಯು ಕಾಣಿಸಿಕೊಂಡುದು ಸಹಜವೂ ಸಕಾಲಿಕವೂ ಆಗಿದೆ.

ಈ ಸಂಗ್ರಹದ ಕೊನೆಯ ಲೇಖನದಲ್ಲಿ ಉದ್ಧರಿಸಿರುವ ಶ್ರೀ ಅರವಿಂದರ ವಿಚಾರಪೂರ್ಣವಾದ ಮಾತನ್ನು ಮೊದಲಿಗೇ ಮನಸ್ಸಿಗೆ ತಂದುಕೊಂಡು ಮುಂದೆ ಸಾಗಬಹುದು.'ಕಾಲವಾಹಿನಿಯಲ್ಲಿ ಹಿಂದು-ಇಂದು-ಮುಂದುಗಳ ಸಂತತ ಧಾರೆಯನ್ನು ನಾವು ಗುರುತಿಸಬೇಕಾಗುತ್ತಿದೆ. ಕಳೆದು ಹೋದದ್ದೆಂದೂ ಅಳಿದು ಹೋಯಿತೆಂದಲ್ಲ; ಅದರ ರೂಪಗಳಿಗೆ ಮಾತ್ರ ಅಳಿವು. ಅದು ಅನಿವಾರ್ಯ. 'ನಿನ್ನೆ' ಅಳಿಯದಿದ್ದರೆ 'ಇಂದು' ಅಸ್ತಿತ್ವಕ್ಕೆ ಬರುತ್ತಿರಲಿಲ್ಲ. ಗತಕಾಲದ ಶಕ್ತಿ ವಿಶೇಷಗಳು ವರ್ತಮಾನ ಕಾಲದಲ್ಲಿ ಪ್ರಚ್ಛನ್ನವಾಗಿದ್ದು ಎಂದೆಂದಿಗೂ ವೃದ್ಧಿಯನ್ನು ಹೊಂದುವ, ವಿಕಾಸಗೊಳ್ಳುವ, ಆಳವಾಗುವ ಇಚ್ಛಾಶಕ್ತಿಯಾಗಿ ಭವಿಷ್ಯದತ್ತ ಹರಿಯುವವು'. ಕನ್ನಡ ನಾಡಿನ ಅಂದಿನ ಶಕ್ತಿ ವಿಶೇಷಗಳು ಇಂದಿನ ಜೀವನದಲ್ಲಿ ವಿಕಾಸಗೊಂಡಿರುವದನ್ನೂ, ಅದರ ಇಚ್ಛಾಶಕ್ತಿಗೆ ಕೆಲಮಟ್ಟಿನ ಮೂರ್ತಸ್ವರೂಪ ಒದಗಿರುವದನ್ನೂ ಇಲ್ಲಿಯ ಕೆಲವು ಲೇಖನಗಳು ಗುರುತಿಟ್ಟು ತೋರಿಸಿವೆ. 'ಕನ್ನಡ: ಕರ್ನಾಟಕ' ಎಂಬ ಮೊದಲ ಲೇಖನದಲ್ಲಿ ಒಂದೆಡೆ 'ಇಷ್ಟ ವಸ್ತುವಿನ ಪ್ರಾಪ್ತಿಗಿಂತಲೂ ಅದನ್ನು ಪಡೆಯುವ ಹಂಬಲದಲ್ಲಿ ಒಂದು ತರದ ಸೊಗಸು ಇರುತ್ತದೆ' ಎಂದಿದ್ದಾರೆ. ಅಂಥ ಹಂಬಲದ ಸೊಗಸನ್ನು ಇಲ್ಲಿಯ ಬಹುಮಟ್ಟಿನ ಬರೆಹಗಳು ಬೊಗಸೆಯಲ್ಲಿ ಹಿಡಿದು ನಿಂತಿವೆ.

ಇಲ್ಲಿ ಸಂಗ್ರಹಗೊಂಡಿರುವ ಮೂವತ್ತೆರಡು ಬರೆಹಗಳನ್ನು ಸ್ಥೂಲವಾಗಿ ಐದು ವಿಭಾಗಗಳಲ್ಲಿ ವಿಂಗಡಿಸಿ ನೋಡಬಹುದು. ನವಕರ್ನಾಟಕದ ನಿರ್ಮಾಣ ಅದರ ಸ್ಥಿತಿ-ಗತಿಗಳನ್ನು ವಿವರಿಸುವ, ಸುಸಂಘಟಿತ ಪ್ರಯತ್ನದ ಅಭಾವದಿಂದ ಕನ್ನಡದ ಕೂಗಿಗೆ ಬೆಲೆ ಬಾರದಿರುವ ಪರಿಸ್ಥಿತಿಯ ಅರಿವನ್ನುಂಟು ಮಾಡಿಕೊಡುವ, ಕರ್ನಾಟಕಕ್ಕೆ ಸ್ವತಂತ್ರ ವಿದ್ಯಾಪೀಠವಿಲ್ಲದಿದ್ದಾಗಿನ ಕನ್ನಡಿಗರ ಗೋಳನ್ನು ತೋಡಿಕೊಂಡಿರುವ ಹಾಗೂ ನಮ್ಮ ನಾಡಿಗೆ ಹೊಸ ಚೈತನ್ಯವಿತ್ತಿರುವ ನಾಡಹಬ್ಬದ ವೈಶಿಷ್ಟ್ಯವನ್ನು ಪರಂಪರೆಯೊಂದಿಗೆ ಬಿಂಬಿಸುವ-ಲೇಖನಗಳು ಒಂದು ಬಗೆಯವು. ಕನ್ನಡದ ಏಳಿಗೆಯ ಬಗ್ಗೆ ಲೇಖಕರಿಗಿರುವ ಕಳಕಳಿಯನ್ನೂ ನಿಷ್ಠೆಯನ್ನೂ ಇವು ಎತ್ತಿ ತೋರಿಸುತ್ತವೆ. 'ಈಗಿನ ಗ್ರಾಮದೇವತೆಗಳ ಗುಡಿಗಳಿಗೆ ಪ್ರತಿಯಾಗಿ ಕನ್ನಡ ದೇವಿಯ ಗುಡಿಗಳನ್ನು ನಾವೇಕೆ ಕಟ್ಟಿಸಬಾರದು?' ಎಂಬ ಅವರ ಪ್ರಶ್ನೆ ಈಗ ಮೂವತ್ತು ವರ್ಷಗಳ ಹಿಂದಿನ ಕನ್ನಡಿಗರ ಭಾವ ತೀವ್ರತೆಗೆ ಸಾಕ್ಷಿಯಾಗಿದೆ. ಇತಿಹಾಸ ಸಂಶೋಧನೆಯನ್ನು ಕುರಿತ ಎರಡು ಲೇಖನಗಳಲ್ಲಿ ಲೇಖಕರ ಸಂಶೋಧನಾಸಕ್ತಿ ವ್ಯಕ್ತವಾಗಿದೆಯಲ್ಲದೆ 'ನಡೆದ ಕಾರ್ಯವನ್ನು ಅರಿತುಕೊಳ್ಳಲು, ಮುಂದೆ ಹಿಡಿಯಬೇಕಾದ ಹಾದಿಯನ್ನು ಗುರುತಿಸಕೊಳ್ಳಲು' ಅವು ಸಹಾಯಕವಾಗಿವೆ.

ಗ್ರಂಥ,-ಗ್ರಂಥ ಪ್ರದರ್ಶನ, ಭಾರತದ ಇತರ ಭಾಷೆಗಳ ಸಾಹಿತ್ಯ ಹಾಗೂ ಸಾಹಿತ್ಯ ಸಂಘಗಳ ಪರಿಚಯವನ್ನೊದಗಿಸುವ ಲೇಖನಗಳು ಮತ್ತೊಂದು ಬಗೆಯವು. ಸಾಹಿತ್ಯ ಪ್ರೇಮದ

ಮೂಲಕ ಜಗತ್ತಿನಲ್ಲಿ ಸ್ನೇಹದ ವಾತಾವರಣವನ್ನುಂಟುಮಾಡುವ ಸವಿಗನಸನ್ನಿಟ್ಟುಕೊಂಡಿರುವ ಪಿ.ಇ.ಎನ್. ಸಂಸ್ಥೆಯ ಬಗೆಗೆ ಹಾಗೂ ಅದು ಪ್ರಕಟಿಸಿರುವ 'ಬಂಗಾಲಿ ಸಾಹಿತ್ಯ' ಗ್ರಂಥವನ್ನು ಕುರಿತು ಉಪಯುಕ್ತವಾದ ವಿವೇಚನೆಯನ್ನು ಎರಡು ಲೇಖನಗಳು ಒದಗಿಸುತ್ತವೆ.

ಪ್ರವಾಸ ವರ್ಣನೆಯನ್ನೊಳಗೊಂಡಿರುವ ಹಾಗೂ ಹಳ್ಳಿಗರ ಸುಧಾರಣೆ, ವೈವಾಹಿಕ ಸಂಬಂಧ, ಕಲಾವಿದ, ಶಿಕ್ಷಣ ಮಾಧ್ಯಮ, ಕಾಲವಾಹಿನಿ ಇತ್ಯಾದಿ ವಿವಿಧ ವಿಚಾರ ಲಹರಿಗಳನ್ನು ಚೊಕ್ಕವಾಗಿ ಮೂಡಿಸಿರುವ ಚಿಕ್ಕ ಪ್ರಬಂಧಗಳನ್ನು ಮೂರನೆಯ ಭಾಗದಲ್ಲಿ ಸೇರಿಸಬಹುದು.

ಸಭೆ-ಸಮ್ಮೇಳನಗಳ ಹಾಗೂ ಹಿರಿಯ ಕವಿಗಳ ಮತ್ತು ಶಿಕ್ಷಣ ತಜ್ಞರ ಸನ್ಮಾನ ಸಮಾರಂಭಗಳ ಸ್ವಾರಸ್ಯಪೂರ್ಣವಾದ ವರದಿಯೊಂದಿಗೆ ಆಯಾ ವ್ಯಕ್ತಿಗಳ ವ್ಯಕ್ತಿತ್ವದ ಸುವರ್ಣರೇಖೆಗಳನ್ನು ಬಿಡಿಸಿ ತೋರಿಸುವ ಬರವಣಿಗೆಯನ್ನು ನಾಲ್ಕನೆಯ ಗುಂಪಾಗಿ ನೋಡಬಹುದು. ಸಹಜ ಸುಮ್ಮಾನದಿಂದ ಕೂಡಿದ ಇಲ್ಲಿಯ ತಿಳಿಯಾದ ಬರವಣಿಗೆಯಲ್ಲಿ ಪ್ರೊ.ಮಾಳವಾಡರ ಲೇಖನ ಕಲೆಯ ಸಮೀಕ್ಷಕ ದೃಷ್ಟಿಯ ಸೊಗಸನ್ನು ನಾವು ಕಾಣುತ್ತೇವೆ. 'ಪಂಪನ ಹಬ್ಬ', 'ಪಾವಟೆ ಹಬ್ಬ' ಹಾಗೂ 'ಬೇಂದ್ರೆ ಹಬ್ಬ' ಮೊದಲಾದವು ಇದಕ್ಕೆ ಉತ್ತಮ ಉದಾಹರಣೆಯಾಗಿವೆ. ವ್ಯಕ್ತಿನಿಷ್ಠೆ ವಸ್ತುನಿಷ್ಠೆಯಾಗಿ ಮಾರ್ಪಡುವ ಸಹಜ ಕಲಾವಂತಿಕೆ ಇಲ್ಲಿ ಸಿದ್ಧಿಸಿದೆ.

ಕನ್ನಡದ ಶ್ರೇಯಸ್ಸಿಗಾಗಿ ಶ್ರದ್ಧೆಯಿಂದ ದುಡಿದು ಕೀರ್ತಿಶೇಷರಾದ ಹಳಕಟ್ಟಿ, ಕುಂದಣಗಾರ, ತೀ.ನಂ.ಶ್ರೀ ಹಾಗೂ ಆರ್.ಎ.ಜಾಗಿರದಾರರ ವ್ಯಕ್ತಿ ಚಿತ್ರಗಳನ್ನೊಳಗೊಂಡ ಲೇಖನಗಳನ್ನು ಐದನೆಯ ಭಾಗವಾಗಿ ಪರಿಶೀಲಿಸಬಹುದು.ಈ ಗೌರವಾನ್ವಿತ ಹಿರಿಯರೆಲ್ಲ ಲೇಖಕರ ಸ್ನೇಹಿತರಾಗಿ, ಗುರುಗಳಾಗಿ, ಸಹೋದ್ಯೋಗಿಗಳಾಗಿ ಬಾಂಧವ್ಯ ಪಡೆದವರು. ಇವರೆಲ್ಲರ ಆತ್ಮೀಯ ಸಂಪರ್ಕದಿಂದ ಅವರ ಗುಣ-ಸ್ವಭಾವಗಳ ಚಿತ್ರಣ ಕಳೆಗೊಂಡು ನಿಂತಿದೆ. 'ನಿಷ್ಠಾವಂತ ಧಾರ್ಮಿಕರಾದ ಅವರ ಬಾಳಿನ ಎಲ್ಲ ಲಕ್ಷಣಗಳಲ್ಲಿ ನಿಜವಾಗಿ ಧರ್ಮದ ಹಿರಿಮೆ ಗೋಚರವಾಗುತಿತ್ತು' ಎಂದು ವಚನ ಪಿತಾಮಹ ಫ.ಗು.ಹಳಕಟ್ಟಿಯವರನ್ನು ಕುರಿತು ನುಡಿಯುವಾಗ; ಪ್ರಾಧ್ಯಾಪಕ ಕುಂದಣಗಾರರ ಸವಿಯಾದ ವ್ಯಕ್ತಿತ್ವವನ್ನು ಚಿತ್ರಿಸುತ್ತ ಪ್ರಾರಂಭದಲ್ಲಿಯೇ 'ಕರ್ನಾಟಕ ಸಾಹಿತ್ಯ-ಸಂಸ್ಕೃತಿಗಳ ವ್ಯಾಸಂಗದ ಬಗೆಗೆ ಉತ್ತರ ಕರ್ನಾಟಕದಲ್ಲಿ ಪ್ರೊ.ಕುಂದಣಗಾರರು ಗುರುವಿನ ಗುರು ಪರಮಗುರು ಇದ್ದಂತೆ' ಎಂದು ಹೇಳುವಾಗ; ಕರ್ನಾಟಕ ವಿಶ್ವವಿದ್ಯಾಲಯದ ಪ್ರಥಮ ಉಪಕುಲಪತಿ ಆರ್.ಎ.ಜಾಗಿರದಾರರ ಸರಸ ಸಜ್ಜನಿಕೆಯನ್ನೂ, ಅವರ ಕಾರ್ಯ ಪದ್ಧತಿಯ ಪ್ರಮುಖ ಲಕ್ಷಣಗಳೆಂದು ಅವರ ಉತ್ಸಾಹಯುಕ್ತ ದುಡಿಮೆ,ಅಭ್ಯಾಸ,ವಸ್ತುನಿಷ್ಠ ನ್ಯಾಯಬದ್ಧ ನಿಲುಮೆಯನ್ನು ಎತ್ತಿ ತೋರಿಸುವಾಗ; ಅಖಿಲ ಭಾರತದ, ಅಂತಾರಾಷ್ಟ್ರೀಯ ಮನ್ನಣೆಯನ್ನು ಗಳಿಸಿದ ಕನ್ನಡ ಪ್ರಾಧ್ಯಾಪಕ ತೀ.ನಂ.ಶ್ರೀ.ಯವರ ಬಗೆಗೆ ಬರೆಯುತ್ತ 'ಕಣ್ಣು ತುಂಬುವ ಆಕೃತಿ; ಮನತುಂಬುವ ಮುಖದ ಕಳೆ; ಸದಾಸ್ಮಿತ ವದನ; ತುಂಬು ಪಾಂಡಿತ್ಯ; ವಿಶುದ್ಧ ಅಭಿರುಚಿ; ರಸಿಕತೆ;ಗಾಂಭೀರ್ಯ; ಸ್ನೇಹಪರತೆ; ಖಂಡಿತವಿಚಾರ ಸರಣಿ; ನಯವಾದ ಮಾತುಗಾರಿಕೆ; ಕಂಠಶ್ರೀ-ಇವುಗಳ ಮೂರ್ತಿಯಂತಿದ್ದರು ತೀ.ನಂ.ಶ್ರೀ.'ಎಂದು

ಮುಗಿಸುವಾಗ ಅವರವರ ವ್ಯಕ್ತಿತ್ವದ ವೈಶಿಷ್ಟ್ಯಪೂರ್ಣವಾದ ಚಿತ್ರ ನಮ್ಮ ಮನಸ್ಸಿನಲ್ಲಿ ಅಚ್ಚೊತ್ತಿ ನಿಲ್ಲುತ್ತದೆ.

ಸಕ್ರಿಯ ಸಾಹಿತ್ಯ ವಿಮರ್ಶಕರಾಗಿರುವ ಶ್ರೀ ಮಾಳವಾಡರ ಈ ವೈಚಾರಿಕ ಪ್ರಬಂಧಗಳಲ್ಲಿ ವಸ್ತುನಿಷ್ಠದೃಷ್ಟಿ ಬೆಳೆದುಬಂದಿದೆ. ನುರಿತ ಪ್ರಾಧ್ಯಾಪಕರಾಗಿ, ವಿಚಾರವಂತ ಲೇಖಕರಾಗಿ, ತೂಕದ ಮಾತುಗಾರರಾಗಿ ಹೆಸರಾದ ಅವರು ಕರ್ನಾಟಕದ ಹಿತಚಿಂತನೆಗೆ ಸಂಬಂಧಪಟ್ಟ ಅನೇಕ ಸಂಘ ಸಂಸ್ಥೆಗಳ ಪೊಕ್ಕು ಬಳಕೆಯನ್ನು ಪಡೆದಿದ್ದಾರೆ. ಆದುದರಿಂದ ಆಯಾ ಸಂದರ್ಭಕ್ಕೆ ತಕ್ಕಂತೆ ಅವರು ಮಾಡಿದ ಭಾಷಣದಲ್ಲಿ, ಬರೆದ ಲೇಖನದಲ್ಲಿ ಅವರದೇ ಆದ ನಿಲುಮೆಯನ್ನು ಕಾಣಬಹುದು. ಭಾವನಾವಶರಾಗದೆ ಸಮಸ್ಯೆಗಳನ್ನು ವಿಂಗಡಿಸಿ, ವಿಶ್ಲೇಷಿಸಿ ನೋಡುವ, ಸಂಗಡಿಸಿ ಸಮಾಲೋಚಿಸುವ ಹಾಗೂ ಸಮಯೋಚಿತ ಸಲಹೆ ನೀಡುವ ಗುಣ ಈ ಲೇಖನಗಳ ವಿಧಾನದಲ್ಲಿದೆ. ಬಹುಮಟ್ಟಿನ ಲೇಖನಗಳು ಗಾತ್ರದಲ್ಲಿ ಚಿಕ್ಕವಾಗಿದ್ದರೂ ಆಯಾಕಾಲದ ಸಂಗತಿಗಳ ಸ್ವಾರಸ್ಯವಾದ ದಾಖಲೆಯಿಂದಾಗಿ 'ಕಾಲೋಚಿತಕ್ಕೈದಿದಾ ತೃಣವೇ ಪರ್ವತವಲ್ಲವೇ?' ಎಂದು ಸಮಾಧಾನಪಟ್ಟುಕೊಳ್ಳಬಹುದಾಗಿದೆ. 'ಕಾಲೋಹ್ಯಯಂ ನಿರವಧಿಃ' ಎಂಬ ಮಾತು ನಿಜವಾದರೂ ಒಂದು ಕಾಲಖಂಡದ ನಾಡಿನ ಸಾಂಸ್ಕೃತಿಕ ಚರಿತ್ರೆಯ ಸಿಂಹಾವಲೋಕನಕ್ಕೆ ಈ ಬಗೆಯ ಲೇಖನಗಳು ನೆರವಾಗಬಲ್ಲವು.

ಈ ದೃಷ್ಟಿಯಿಂದ 'ಕಾಲವಾಹಿನಿ'ಯ ಲೇಖನಗಳನ್ನು ಓದಿ ನಾನು ಪ್ರಯೋಜನ ಪಡೆದಿರುವ ಸಂದರ್ಭದಲ್ಲಿಯೇ ಅವುಗಳ ಬಗ್ಗೆ ನನಗೆ ಅನಿಸಿದ ನಾಲ್ಕು ಮಾತುಗಳನ್ನು ಬರೆಯಲೂ ಸೂಚಿಸಿದ ಗುರುವರ್ಯ ಪ್ರೊ.ಮಾಳವಾಡರ ಶಿಷ್ಯ ವಾತ್ಸಲ್ಯಕ್ಕೆ ನಾನು ಋಣಿಯಾಗಿದ್ದೇನೆ.

(೧೯೬೮)

('ಸದ್ಭಾವ' ೨೦೦೮)

# ೮೨

## ಸಾಮಾಜಿಕನ ಸಂವಚನಗಳು

ಆಧುನಿಕ ಕನ್ನಡ ಸಾಹಿತ್ಯದ ಬುನಾದಿಯನ್ನು ಭದ್ರಗೊಳಿಸಿದವರಲ್ಲಿ ಡಾ|| ಬೆಟಗೇರಿ ಕೃಷ್ಣಶರ್ಮರು ಒಬ್ಬರೆಂಬುದು ನಿರ್ವಿವಾದ. 'ಆನಂದಕಂದ' ಎಂಬ ವಿನಯಪೂರ್ಣವಾದ ಕಾವ್ಯನಾಮದಿಂದ ಬರವಣಿಗೆಯನ್ನು ಪ್ರಾರಂಭಿಸಿದ ಅವರು ನಮ್ಮ ಹಿರಿಯ ತಲೆಮಾರಿನ ಗಣ್ಯ ಕವಿಗಳಲ್ಲಿ ಒಬ್ಬರಾಗಿ ಅತ್ಯುತ್ತಮ ಸಣ್ಣಕಥೆಗಳನ್ನೂ, ಮರೆಯಲಾಗದ ಐತಿಹಾಸಿಕ ಕಾದಂಬರಿಗಳನ್ನೂ, ಸೊಗಸಾದ ಗೀತರೂಪಕಗಳನ್ನೂ ನೀಡಿರುವುದಲ್ಲದೆ ವಿಮರ್ಶೆ-ಸಂಶೋಧನೆಯಲ್ಲಿಯೂ ಕೃತಿರಚನೆ ಮಾಡಿದ್ದಾರೆ. ಜನತೆಯ ಸಂಸ್ಕೃತಿಯ ವಿಶ್ವಕೋಶದಂತಿರುವ ಅವರು ಕನ್ನಡದ ಸಾಮಾನ್ಯ ಜನತೆಯ ಜೀವನ ಸಂಸ್ಕೃತಿ, ನಡವಳಿ, ನುಡಿವಳಿಗಳನ್ನು ಕುರಿತು ಹಲವಾರು ಲೇಖನ ಹಾಗೂ ಭಾಷಣಗಳ ಮೂಲಕ ಈ ದಿಸೆಯಲ್ಲಿ ಸಾಕಷ್ಟು ಸಾಮಗ್ರಿಯನ್ನು ಒದಗಿಸಿದ್ದಾರೆ. ತೀವ್ರ ಅನಾರೋಗ್ಯದಿಂದ ಈಗವರು ಹಾಸಿಗೆ ಹಿಡಿದಿದ್ದರೂ ಯಾರಾದರೂ ಆ ವಿಷಯದಲ್ಲಿ ಆಸಕ್ತಿ ತೋರಿಸಿದರೆ ಉತ್ಸಾಹಗೊಂಡು ಎದ್ದು ಕುಳಿತುಕೊಳ್ಳುತ್ತಾರೆ. ಆದರೇನು ಮಾಡುವದು? ಅವರ ಬಾಯಿಂದ ಮಾತು ಹೊರಡದು. ಜನತೆಗೆ ತಾನು ನಿರುಪಯೋಗಿಯಾಗುತ್ತಿದ್ದೇನಲ್ಲ ಎಂಬ ದುಃಖದಿಂದ ಮೌನವಾಗಿ ಕಂಬನಿ ಮಿಡಿಯುತ್ತಾರೆ. ಅವರ ಸಾಹಿತ್ಯ ನಿರ್ಮಿತಿಯ ಜೀವಾಳವಾದ ಆಶಾವಾದಿತ್ವವೇ ಅವರನ್ನು ಇನ್ನಿಷ್ಟು ಕಾಲ ನಮ್ಮ ಮಧ್ಯದಲ್ಲಿರುವಂತೆ ಸಾಹಿತ್ಯ ಶಾರದೆ ಅನುಗ್ರಹಿಸಲಿ.

ತಮ್ಮ ಜೀವಮಾನದಲ್ಲಿ ಎಂಥ ಪ್ರಸಂಗದಲ್ಲಿಯೂ ಆತ್ಮಗೌರವವನ್ನು ಕಾಪಾಡಿಕೊಂಡು ಬಂದಿರುವ ಶ್ರೀ ಬೆಟಗೇರಿಯವರು ನನ್ನ ಅತ್ಯಂತ ಗೌರವಕ್ಕೆ ಪಾತ್ರರಾದ ಹಿರಿಯರಲ್ಲಿ ಒಬ್ಬರು. ಪ್ರಸ್ತುತ 'ಸಾಮಾಜಿಕನ ಸಂವಚನಗಳು' ಕೃತಿಗೆ ನಾನೇ ಮುನ್ನುಡಿ ಬರೆಯಬೇಕೆಂದು ಅವರು ಅಪೇಕ್ಷಿಸಿರುವದು ಒಂದು ದೊಡ್ಡ ಗೌರವವೆಂದು ನಾನು ಭಾವಿಸಿದ್ದೇನೆ. ಅವರ ಪ್ರೀತಿ ವಿಶ್ವಾಸಗಳಿಗೆ, ಅಂತಃಕರಣದ ಔದಾರ್ಯಕ್ಕೆ ನಾನು ಚಿರಕೃತಜ್ಞ.

೧೯೩೮ ರಿಂದ ೧೯೬೦ ರವರೆಗೆ 'ಜಯಂತಿ'ಯ ಸಂಪಾದಕರಾಗಿ, ಆರ್ಥಿಕಬಲ ವಿಲ್ಲದಿದ್ದರೂ ಅದನ್ನೊಂದು ವ್ರತದಂತೆ ಸಮರ್ಥರೀತಿಯಿಂದ ನಡೆಸಿಕೊಂಡು ಬಂದದ್ದು ಕನ್ನಡ ಪತ್ರಿಕೋದ್ಯಮದ ಚರಿತ್ರೆಯಲ್ಲಿ ಉಲ್ಲೇಖಾರ್ಹವೆನಿಸಿದೆ. 'ಜಯಂತಿ'ಯಲ್ಲಿ ಆಗ ಒಂದು ಲೇಖನ ಇಲ್ಲವೆ ಕವಿತೆ ಪ್ರಕಟಗೊಂಡರೆ ಆ ಲೇಖಕನಿಗೆ ಅದೊಂದು ಹೆಮ್ಮೆಯ

ವಿಷಯವಾಗಿರುತ್ತಿತ್ತು. ಹಾಗೆ ಹೆಮ್ಮೆಪಟ್ಟುಕೊಂಡವರಲ್ಲಿ ನಾನೂ ಒಬ್ಬ. ಸಮರ್ಥ ಲೇಖಕರ ನಿರ್ಮಾಣದಲ್ಲಿ, ಓದುಗರಲ್ಲಿ ಸದಭಿರುಚಿಯನ್ನು ಬೆಳೆಸುವಲ್ಲಿ ತನ್ಮೂಲಕ ಸಾಹಿತ್ಯದ ಬೆಳವಣಿಗೆಯಲ್ಲಿ, ಮಹತ್ವದ ಪಾತ್ರವಹಿಸಿದ 'ಜಯಂತಿ'ಯ ಸೇವೆಯನ್ನು ಮರೆಯುವಂತಿಲ್ಲ. ಆರ್ಥಿಕವಾಗಿ ಹೊರಲಾರದ ಭಾರವನ್ನು ಹೊರಬೇಕಾಗಿಬಂದರೂ ತಮ್ಮ ಆದರ್ಶದಿಂದ ಅವರು ಎಷ್ಟೂ ದೂರ ಸರಿಯಲಿಲ್ಲ. ಅಕ್ಷರಮಟ್ಟಿಗೆ 'ಜಯಂತಿ' ಅವರ ವ್ಯಕ್ತಿತ್ವದ ಒಂದು ಭಾಗವೇ ಆಗಿತ್ತು. ೧೯೪೦ ರ ನವಂಬರ 'ಕಸ್ತೂರಿ'ಯಲ್ಲಿ ನಮ್ಮ ಹಿರಿಯ ಕಥೆಗಾರರಲ್ಲಿ ಒಬ್ಬರಾದ ಶ್ರೀ ಅಶ್ವತ್ಥರು 'ಜಯಂತಿ' ಹೇಗೆ ಬೆಟಗೇರಿಯವರ ಮಾನಸಪುತ್ರಿ ಎನಿಸಿಕೊಂಡಿತ್ತು ಎಂಬುದನ್ನು ಕಥೆಯಾಗಿಯೇ ಬರೆದಿರುವದನ್ನು ಕೆಲವರಾದರೂ ಗಮನಿಸಿರಬಹುದೆಂದು ಭಾವಿಸಿದ್ದೇನೆ.

ವಚನ ಪ್ರಕಾರ ಹೊಸಗನ್ನಡದಲ್ಲಿಯೂ ಒಂದು ಅಭಿವ್ಯಕ್ತಿಯ ಕ್ರಮವಾಗಿ ಸಮಕಾಲೀನ ಅನುಭವ, ಸಂವೇದನ ಹಾಗೂ ಚಿಂತನಲಹರಿಗಳಿಗೆ ಒಡ್ಡಿಕೊಂಡು ಈಗಾಗಲೇ ಪ್ರಸಿದ್ಧರಾದ ನಮ್ಮ ನಾಲ್ಕೈದು ಜನ ಲೇಖಕರ ಕೈಯಲ್ಲಿ ಅದು ಹೊಸ ಸಾಧ್ಯತೆಗಳನ್ನು ಪಡೆದಿರುವುದನ್ನು ಕಂಡಿದ್ದೇವೆ. ಬಹಳ ಹಿಂದೆಯೇ 'ಸಾಮಾಜಿಕ' 'ಕಾಲರಾಯ' ಇತ್ಯಾದಿ ಅಂಕಿತಗಳಿಂದ 'ಜಯಂತಿ'ಯಲ್ಲಿ ಪ್ರಕಟನೆಗೊಂಡ ಬೆಟಗೇರಿಯವರ ವಚನಗಳಿಗೆ ಒಂದು ಐತಿಹಾಸಿಕ ಮಹತ್ವವಿರುವುದನ್ನು ಯಾರೂ ಅಲ್ಲಗಳೆಯಲಾರರು. ಅವುಗಳಲ್ಲಿ ಕೆಲವು ಆಯ್ಕೆಗೊಂಡು ಈಗ ಈ ಪುಸ್ತಕರೂಪದಲ್ಲಿ ಬಂದಿರುವದರಿಂದ ಗಾತ್ರದಲ್ಲಿ ಚಿಕ್ಕದಾದರೂ ಪಾತ್ರದಲ್ಲಿ ತಮ್ಮ ಮಹತ್ವವನ್ನು ಸಾರಬಲ್ಲವು. ಈ ವಚನಗಳ ವಸ್ತುವನ್ನು ಸಾಹಿತ್ಯಕ, ಸಾಮಾಜಿಕ ಹಾಗೂ ತಾತ್ವಿಕ ಹಂತಗಳಲ್ಲಿ ಗುರುತಿಸಿ ಅದೇ ರೀತಿಯಲ್ಲಿ ಸಂಪಾದಕರು ಅವುಗಳನ್ನು ವಿಂಗಡಿಸಿಕೊಂಡಿರುವುದು ಅಭ್ಯಾಸದ ದೃಷ್ಟಿಯಿಂದ ಅನುಕೂಲವಾಗಿದೆ.

ಕನ್ನಡನಾಡು ನುಡಿಯ ಅಭಿಮಾನವನ್ನು ಜಾಗೃತಗೊಳಿಸುವ ಕಾರ್ಯವನ್ನು ಬೆಟಗೇರಿಯವರು ತಮ್ಮ ಸಾಹಿತ್ಯಕ ಜೀವನದ ಪ್ರಾರಂಭದಿಂದಲೂ ನಡೆಸಿಕೊಂಡು ಬಂದವರು. ಕನ್ನಡ ನಮ್ಮ ಬಾಳಿನ ಮಂತ್ರವಾಗಿ, ಸೂತ್ರವಾಗಿ, ಶಾಸ್ತ್ರವಾಗಿ, ಶಾಸನವಾಗಿ ಸಲ್ಲುವುದನ್ನು ಸಾರಿ ಹೇಳುತ್ತಲೇ ಬಂದವರು. ಕರ್ನಾಟಕ ರಾಜ್ಯೋದಯದ ಈ ಬೆಳ್ಳಿಯ ಹಬ್ಬದ ಸಂದರ್ಭದಲ್ಲಿ ಅವರ ಈ ವಚನವನ್ನು ಮತ್ತೆ ಮನನ ಮಾಡಬೇಕಾಗಿದೆ:

ಓ, ಕನ್ನಡವೆ!ಕನ್ನಡಿಗನ ಉಸಿರೆ, ಕರುಳೆ,
ಬಾಳೆ, ಬಿಡುಗಡೆಯೆ! ನಿನ್ನ ಮರೆದೆನಪ್ಪೊಡೆ
ನಾನು ಬೀಳ್ವೆ, ಆಳಾಗುವೆ ಗೋಳಿಡುವೆ!
ನಿನ್ನನರಿದೆನಪ್ಪೊಡೆ ಏಳುವೆ, ಬಾಳುವೆ, ಆಳುವೆ!

'ಇದ್ದುದನ್ನು ಇದ್ದಂತೆಯೆ ಬರೆದೊರೆಯುವದು ಅದೆಂತಹ ಸಾಹಿತ್ಯವಯ್ಯಾ?' ಎಂದು ಕೇಳುವ ಲೇಖಕರು

ವಾಸ್ತವವನ್ನು ಆದರ್ಶದ ಕಡೆಗೆ ಒಲಿಸುವ
ಆದರ್ಶವನ್ನು ವಾಸ್ತವ ಪ್ರಪಂಚಕ್ಕೆ ಎಳೆಯುವ
ಎದೆಯ ಮಾತುಗಳ ಸ್ರೋತವೇ ನಿಜವಾದ ಸಾಹಿತ್ಯವೆನ್ನುವಳಯ್ಯಾ
ನಮ್ಮ ಭಾವರಾಜ್ಯದ ರಾಣಿ ವಾಗೀಶ್ವರಿ!

ಎಂದು ನಿರೂಪಿಸುವಲ್ಲಿ ಅವರ ಸಾಹಿತ್ಯಕ ಧೋರಣೆ ಸಮಂಜಸವಾಗಿರುವದನ್ನು ಕಾಣುತ್ತೇವೆ. ಅವರ ಅಭಿಪ್ರಾಯದಲ್ಲಿ 'ಪ್ರಕೃತಿಯ ನಿತ್ಯಸತ್ಯದ ದರ್ಶನಕಾರನೆ ನಿಜವಾದ ಸಾಹಿತ್ಯಕ'.

ದುಡಿಯುವವರ ದುಡಿತದ ಪಡಿ ಯಾರ ಬಾಯಿಗೋ ಬಿದ್ದು ಹೆಚ್ಚುತ್ತಿರುವ ಬಡತನದ ಬಾಳು; ಮತ-ಮತಗಳಲ್ಲಿ ಹರಿದುಹಂಚಿಹೋಗಿ ಖತಿಗೊಂಡ ಧರ್ಮಜ್ಞಾನ; 'ಆದರ್ಶ' ಎಂಬ ನುಡಿಯನ್ನು ಕೇಳಿದೊಡನೆ ಅಣಕದ ನಗೆ ನಗುವ ಅಣ್ಣಂಗಳು; ಆಭಾಸವೇ ಸರ್ವಸಮ್ಮತವಾಗಿರುವ ಬಹುಮತದ ಯುಗ; ಅರ್ಥರಹಿತ ಅಕ್ಷರ ಮಾಲಿಕೆಯಾಗಿ ಬಿಟ್ಟಿರುವ 'ಸರ್ವೋದಯ'; ಲೋಕದ ಸುಖ ಶಾಂತಿಗಳನ್ನು ಕಡೆಗಣಿಸಿರುವ ಆಡಳಿತ; ಇಂಥ ಇಂದಿನ ಪರಿಸ್ಥಿತಿಯನ್ನು ಕಂಡು, ಸಾಮಾಜಿಕ ಕಳಕಳಿಯಿಂದ ತುಂಬಿ ತುಳುಕುತ್ತಿರುವ ಹಲವಾರು ವಚನಗಳಲ್ಲಿ ಅದನ್ನು ಕಟುವಾಗಿ ಖಂಡಿಸಿ ಇರಬೇಕಾದ ಚಿತ್ರವನ್ನೂ ಬರೆದು ಕಣ್ಣಿಗೆ ಹಿಡಿಯುವದು ಅವುಗಳ ವಿಶೇಷತೆಯಾದರೆ, ಪರಿಪರಿಯಾಗಿ ಮನಸ್ಸಿಗೆ ಬಂಬಿಸುಮಂತೆ ಬಿಡಿ ಬಿಡಿಸಿ ಹೇಳುವದು ಈ ವಚನಗಳ ರೀತಿ-ನೀತಿಯಾಗಿದೆ:

ಲೌಕಿಕವನ್ನು ಕಡೆಗಣಿಸಿ ಪರಮಾರ್ಥವನ್ನೇ ಕೊಂಡಾಡುವವರನ್ನು ಕುರಿತು 'ಪರಮಾರ್ಥದ ಪಿಡುಗನ್ನು ಹರಡುತಿರುವ ಪರದೇಶಿಗಳೆ' ಎಂದು ಸಂಬೋಧಿಸಿ ಬೋಧಿಸುತ್ತಾರೆ:

ಪರಮಾರ್ಥವೇ ಪುರುಷಾರ್ಥದ ಚರಮ ಸೀಮೆಯೆಂದೊರೆದು
ಲೌಕಿಕವನು ಹಳಿದು ಗಳಹುವ ಗಣಂಗಳೆ ನೀವು ಕೇಳಿರಯ್ಯಾ!
ಪರಮಾರ್ಥ ಸಾಧಿಸುವದಕ್ಕೆ ಮೊದಲು ಬೇಕಲ್ಲವೆ ಮೈ?
ಮೈಯಿದ್ದಲ್ಲಿಯೆ ಮನವಿರುವುದಲ್ಲವೆ, ಮನವಿದ್ದಲ್ಲಿಯೆ ಭಾವನೆಯಿರುವುದಲ್ಲವೆ?
ಪರಮಾರ್ಥವೆಂಬ ವಿಷಯ ಭಾವನೆಯ ಬಳ್ಳಿಗೆ ಅರಳಿದ ಮುಗಿಲ
ಮಲ್ಲಿಗೆಯೆಂಬುದನು ಅದೆಂದೊ ಕಂಡಿರುವ ನಮ್ಮ ಕಾಲರಾಯ!

ಹೇಳಿದ ಮಾತನ್ನೇ ಬೇರೆ ಬೇರೆ ಉದಾಹರಣೆಗಳಿಂದ ಸ್ಪಷ್ಟಪಡಿಸುವುದು ಈ ವಚನಗಳ ಸಾಮಾನ್ಯ ರೀತಿಯಾಗಿದ್ದರೂ ಕಿರುನುಡಿಗಳಲ್ಲಿಯೇ ಹಿರಿದಾದ ಅರ್ಥವನ್ನು ಲೇಖಕರು ಅಲ್ಲಲ್ಲಿ ಪರಿಣಾಮಕಾರಿಯಾಗಿ ಹೊಳೆಯಿಸಬಲ್ಲರು:

ಹೊಸನೀರ ಹುರುಪಿನಿಂದ ಹೊರಟ ಹೊಳೆಯಿಂದು, ಕೊಳಚೆಯ
ನೆರೆಯಾದುದನು ಕಂಡನಯ್ಯ ನಮ್ಮ ಕಾಲರಾಯ

ಭಾವನೆಯನ್ನು ಗದ್ದುಗೆಗೇರಿಸಿ ಬುದ್ಧಿಯನ್ನು ಮಂತ್ರಿಣಿ
ಯನ್ನಾಗಿ ಮಾಡುವದು ಮಾನವ ನೀತಿ
ಇರುವೆ ಕಿರಿಯದಾದರೂ ಅರಿಯದಯ್ಯ ಸೆರೆಯಾಳಿನ ಸಂಕಟವನು!
ಆನೆ ಹಿರಿಯದಾದರೂ ಬಿಗಿವುದಯ್ಯ ಅರಸರ ಸರಪಣಿಯದರ ಅಡಿಗಳನು!
ಹೇಡಿಯಾಗಿ ನೆಲದಲ್ಲಿ ಬದುಕುವುದಕ್ಕಿಂತ ಏಡಿಯಾಗಿ ನೀರೊಳೀಜಾಡು
ತಿರುವುದೇ ಲೇಸು ಕಣಾ.
ತಿರೆಯ ತಣಿಸುವ ಹುರುಪಿನಿಂದ ಹೊನಲಿಡುತಿರುವಾಗ
ಅರಿಯದೆ ಬಂದು ಕಡಲಿಗೆ ಬಿದ್ದು ಮರುಗುತಿವೆ ಕಾಣಾ ಹಿರಿದೊರೆಗಳೆಲ್ಲ!

ಇವರ ತಾತ್ವಿಕ ಚಿಂತನೆಯೂ ಬದುಕನ್ನಾಧರಿಸಿ ಅದನ್ನೆ ಗುರಿಯಾಗಿಸಿಕೊಂಡಿರುವುದು ಗಮನಾರ್ಹವಾಗಿದೆ.

ತನ್ನ ಬದುಕಿನ ಸುಖವ ಮರೆತು ಇನ್ನೆಲ್ಲರ ಇರವನರಿತು
ಕರುಣೆ ಮೈತ್ರಿಗಳನ್ನು ಕರುಳಲ್ಲಿ ಬೆಳೆಯಿಸುವದೇ ಬದುಕಿನ
ಹದಗಾರಿಕೆಯೆಂಬ ನಮ್ಮ ಕಣ್ಣುಳ್ಳ ಕಾಲರಾಯ...
ತನ್ನ-ಕಜ್ಜವೆಂಬುದೆ ಮಾನವನಿಗೊಂದು ಮಹಾ ತಪಸ್ಸು ಕಾಣಯ್ಯ!.....
ಲೋಕದ ಬದುಕಿನ ಕಹಿ-ಕಷ್ಟಗಳ ಅನುಭವದಿಂದ ನಲಿದ ಮಾನವ, ತನ್ನ
ಎದೆಯ ಹಾರಯಿಕೆಯ ಬದುಕೊಂದನು ಭಾವಿಸಿದನಯ್ಯ!
ಆ ಭಾವನೆಯ ಬದುಕಿನ ಮೋಕ್ಷವೆಂದು ಕರೆದನು ಕೇಳಯ್ಯ...
ಮಾನವನ ಒಳಬಾಳಿನ ಅರಳಿಕೆ ಪ್ರೀತಿಯಿಂದ
ಹೊರಬಾಳಿನ ಅರಳಿಕೆ ರೀತಿಯಿಂದ.

ಹೀಗೆ ಲೇಖಕರ ಬದುಕಿನ ಅನುಭವ, ಅಭ್ಯಾಸಗಳ ಹಿನ್ನೆಲೆಯಲ್ಲಿ, ಸಮಾಜದ ಬಗೆಗಿನ ಸಮಗ್ರವಾದ ನೋಟದಿಂದ ಈ ವಚನಗಳು ಹುರಿಕಟ್ಟಾಗಿ ಹೊರಬಂದಿವೆ. ಅಲ್ಲಲ್ಲಿ ಕಾವ್ಯಾಂಶ ಅವಕ್ಕೆ ಕಳೆ ನೀಡಿರಬಹುದಾದರೂ ಜೀವನದ ಬಗ್ಗೆ ಸರಿಯಾದ ತಿಳಿವಳಿಕೆಯನ್ನು ಜನತೆಗೆ ನೀಡುವದೇ ಅವುಗಳ ಗುರಿಯಾಗಿದೆ. 'ಹೋದ ದಾರಿಯಿಂದಲೇ ಹೋಗುವವರು ಗೊತ್ತಿದ್ದ ಚೆಲುವನ್ನೇ ಕಾಣುತ್ತಾರೆ. ಹೊಸದಾರಿಯನ್ನು ಹಿಡಿದವರು ಗೊತ್ತಿಲ್ಲದ ಚೆಲುವನ್ನು ಹೊರಗೆಳೆಯುತ್ತಾರೆ. ನಾವದನ್ನು ಮಾಡೋಣ!' ಎಂದು ಅವರು ಓದುಗರನ್ನು ಹುರಿದುಂಬಿಸುತ್ತಾರೆ. 'ನಿನ್ನ ಮನದ ಅರಿವೆ ಗುರುವಾಗಿ ಗುರಿಯತ್ತ ನಿನ್ನನ್ನು ಕೈ ಹಿಡಿದು ಕರೆದೊಯ್ಯಬಲ್ಲದು' ಎಂದು ತಮ್ಮದೇ ದಾರಿಯಲ್ಲಿ ನಡೆದಿದ್ದಾರೆ. ವಚನ ಪ್ರಕಾರದ ಸತ್ವ ಹೀಗೆ ಆಧುನಿಕ ಲೇಖಕರಲ್ಲಿಯೂ 'ಅನುರಣನ'ಗೊಂಡು ಮುನ್ನಡೆದಿರುವದು ಗಮನಾರ್ಹವಾಗಿದೆ. ಉತ್ತರ ಕರ್ನಾಟಕದ ಶಿಕ್ಷಣ ಕ್ಷೇತ್ರದಲ್ಲಿ ಈಗಾಗಲೇ ಹೆಸರುವಾಸಿಯಾಗಿರುವ ಜೆ.ಎಸ್.ಎಸ್.ಕಾಲೇಜು ಈ ಜನತಾ ಗ್ರಂಥಮಾಲೆಯನ್ನು ಪ್ರಾರಂಭಿಸಿ ತನ್ನ ಇತಿಹಾಸದಲ್ಲಿ

ಹೊಸ ಅಧ್ಯಾಯವೊಂದನ್ನು ತೆರೆಯುತ್ತಿರುವುದು ಅತ್ಯಂತ ಸಂತೋಷದ ಸಂಗತಿ. 'ವಿದ್ಯಾಗಿರಿ' ಎಂಬ ತನ್ನ ಸ್ಥಳನಾಮವನ್ನು ಅದು ಸಾರ್ಥಕಗೊಳಿಸುವಲ್ಲಿ ಇದೊಂದು ಮಹತ್ವದ ಹೆಜ್ಜೆ ಎಂದು ನಾನು ಭಾವಿಸಿದ್ದೇನೆ. ಸೃಜನಾತ್ಮಕ ಹಾಗೂ ವೈಚಾರಿಕ ಬರಹಗಳನ್ನು ಪ್ರಕಟಿಸುವ ಉದ್ದೇಶವನ್ನು ಹೊಂದಿರುವ ಈ ಗ್ರಂಥಮಾಲೆಯಲ್ಲಿ ಹಿರಿಯರಾದ ಶ್ರೀ ಬೆಟಗೇರಿ ಕೃಷ್ಣಶರ್ಮರ 'ಸಾಮಾಜಿಕನ ಸಂವಚನಗಳು' ಮೊದಲ ಹೂವಾಗಿ ಅರಳಿರುವದು ಔಚಿತ್ಯಪೂರ್ಣವಾಗಿದೆ. ಒಂದು ಗ್ರಂಥಮಾಲೆಯನ್ನು ಸಮರ್ಥವಾಗಿ ನಡೆಸಿಕೊಂಡು ಹೋಗಲು ಯಾವ ಪ್ರೇರಣೆ,ಪೋಷಣೆ,ದಕ್ಷತೆ,ಕಾರ್ಯತತ್ಪರತೆ, ವ್ಯವಹಾರ ಕೌಶಲ್ಯಗಳು ಬೇಕೋ ಅವೆಲ್ಲವನ್ನೂ ಈ ಶಿಕ್ಷಣ ಸಂಸ್ಥೆ ಹೊಂದಿರುವದು ಒಂದು ಸುಯೋಗ. ನಿಜವಾದ ಪ್ರತಿಭೆ ಎಲ್ಲಿದ್ದರೂ ಅದನ್ನು ಗುರುತಿಸಿ, ಉತ್ತಮ ಗುಣಮಟ್ಟದ ಗ್ರಂಥಗಳು ಹೊರಬರುವಂತೆ ಈ ಗ್ರಂಥಮಾಲೆ ಪ್ರಯತ್ನಿಸಲಿ, ಅದಕ್ಕೆ ಜನತೆಯಿಂದ ತಕ್ಕ ಪ್ರೋತ್ಸಾಹವೂ ದೊರೆಯುವಂತಾಗಲಿ ಎಂದು ಹಾರೈಸುತ್ತೇನೆ.

೧೯೮೧

('ಸದ್ಭಾವ' ೨೦೦೮)

## ೮೩

# ನುಡಿ-ಮಿಡಿ

ನನ್ನ ಮಿತ್ರರಾದ ಶ್ರೀ ಸಂಗಮೇಶ ಹಂಡಿಗಿಯವರ ಸ್ವರಚಿತ ವಚನ ಸಂಕಲನಕ್ಕೆ ಮುನ್ನುಡಿಯ ರೂಪದಲ್ಲಿ ನಾಲ್ಕು ಮಾತು ಬರೆಯಲು ಸಂತೋಷವೆನಿಸುತ್ತದೆ. ಹಲವಾರು ವರ್ಷಗಳಿಂದ ಬರವಣಿಗೆಯಲ್ಲಿ ತೊಡಗಿರುವ ಅವರದು ಇದೇ ಮೊದಲ ಕೃತಿಯೇನೂ ಅಲ್ಲ. ಪ್ರಬಂಧ, ಚರಿತ್ರೆಗಳನ್ನು ಪ್ರಕಟಿಸುವುದಲ್ಲದೆ ಅವರ ಕವನ, ಕಥೆ,ವ್ಯಕ್ತಿ ಚಿತ್ರ,ವಿಮರ್ಶೆಯ ಸಂಕಲನಗಳೂ ಪ್ರಕಟನೆಯ ದಾರಿಯಲ್ಲಿವೆ. ಆಧುನಿಕ ಪ್ರಜ್ಞೆಯಲ್ಲಿ ಕನ್ನಡ ಆಧ್ಯಾತ್ಮಿಕ ಸಾಹಿತ್ಯವನ್ನು ಅಧ್ಯಯನ ಮಾಡುತ್ತ, ಸಾಧ್ಯವಿದ್ದಷ್ಟು ಅದನ್ನು ಮೈಗೂಡಿಸಿಕೊಂಡು ಬಂದಿರುವುದು ಅವರ ಬರವಣಿಗೆಗಳಲ್ಲಿ ಈಗಾಗಲೇ ವ್ಯಕ್ತವಾಗಿದೆ. ಅದರ ಪ್ರಸಾದ ಗುಣವನ್ನು ಈ 'ನುಡಿ-ಮಿಡಿ'ಯ ಗೊಂಚಲಿನಲ್ಲಿ ಗುರುತಿಸಬಹುದಾಗಿದೆ.

ಆದ್ಯರು ಬಿತ್ತಿದ ವಚನದ ಬೀಜ ಕನ್ನಡದ ನೆಲದಲ್ಲಿ ಅಂಕುರಿಸಿ, ಪಲ್ಲವಿಸಿ ಬೆಳೆದು, ಆಧುನಿಕ ಯುಗದಲ್ಲಿಯೂ ಮತ್ತೆ ಚೇತನ ಪಡೆದಿರುವುದನ್ನು, 'ವಚನ ವೃಕ್ಷ'ವೆಂಬ ವಚನದಲ್ಲಿ ಲೇಖಕರೇ ನಿರೂಪಿಸಿದ್ದಾರೆ. 'ವಚನೋದ್ಯಾನದಲ್ಲಿ ವಿಹರಿಸಿದೆನಾಗಿ ಸೂರೆಗೊಂಡು ಮಾರು ಹೋಯಿತ್ತಯ್ಯಾ ಎನ್ನ ಮನ' ಎಂದು ನೆನೆದಿದ್ದಾರೆ. (೧೨೫ ಆಧುನಿಕ ವಚನಕಾರರ ಒಂದು ಪಟ್ಟಿಯನ್ನು ಈ ಗ್ರಂಥದ ಕೊನೆಯಲ್ಲಿ ಕೊಟ್ಟು ಉಪಕರಿಸಿದ್ದಾರೆ.) ಶಿವಶರಣರ ವಚನ ಸಾಹಿತ್ಯ ಕನ್ನಡ ಸಾಹಿತ್ಯದುದ್ದಕ್ಕೂ ತನ್ನ ಪ್ರಭಾವವನ್ನು ಒಂದಿಲ್ಲ ಒಂದು ರೀತಿಯಲ್ಲಿ ಬೀರುತ್ತಲೇ ಬಂದಿರುವುದು ನಿಜವಾದರೂ ಅದು ಮೂಲ ಪ್ರಕಾರದಲ್ಲಿಯೇ ಹೊಸಗನ್ನಡವಲ್ಲಿ ಒಂದು ಅಭಿವ್ಯಕ್ತಿಯ ಕ್ರಮವಾಗಿ ಹಲವಾರು ಸೃಜನಶೀಲ ಲೇಖಕರನ್ನು ತನ್ನೆಡೆಗೆ ಸೆಳೆದುಕೊಂಡಿರುವುದು ಗಮನಾರ್ಹವಾಗಿದೆ. ಮೂಲತಃ ಒಂದು ವಿಚಾರ ಕ್ರಾಂತಿಯಿಂದ, ವ್ಯಕ್ತಿ, ಧರ್ಮ ಹಾಗೂ ಸಮಾಜಗಳ ಸಂಘರ್ಷದಿಂದ ರೂಪುಗೊಂಡ ಈ ಸಾಹಿತ್ಯ ಪ್ರಕಾರ ಇಂದಿನ ವೈಚಾರಿಕ ಯುಗದ ಒಲವು-ನಿಲುವುಗಳಿಗೆ ಮತ್ತೆ ಪ್ರಸ್ತುತವೆನಿಸಿರುವುದು ನಮ್ಮ ಸಾಹಿತ್ಯ ಚರಿತ್ರೆಯಲ್ಲಿ ಒಂದು ಮಹತ್ವದ ಸಂಗತಿಯಾಗಿದೆ.

ಮಾತಿನ ಸರಳತೆ, ಅನುಭವದ ತೀವ್ರತೆ, ಆತ್ಮ ವಿಮರ್ಶೆಯ ಪ್ರಾಮಾಣಿಕತೆಗಳು ಮುಪ್ಪುರಿಗೊಂಡು ಸಹಜವಾದ ಕಲೆಗಾರಿಕೆಯಿಂದ, ಸಮಕಾಲೀನ ಸಮಾಜದ ಸಂದರ್ಭದಲ್ಲಿ ತಮ್ಮ ವಿಶಿಷ್ಟವಾದ ಕೊಡುಗೆ ನೀಡಿರುವ ಆಧುನಿಕ ವಚನಕಾರರಲ್ಲಿ ನಾಲ್ಕೈದು ಜನ ಹಿರಿಯರೂ,

ಆರೇಳು ಜನ ಕಿರಿಯ ತಲೆಮಾರಿನವರೂ ಮುಖ್ಯರಾಗಿ ನಮ್ಮ ಗಮನವನ್ನು ಸೆಳೆದಿದ್ದಾರೆ. ಇಂದು ಸೃಷ್ಟಿಗೊಳ್ಳುತ್ತಿರುವ ವಚನಗಳ ರೂಪಾಂಶ ಹಿಂದಿನದಾದರೂ ಭಾವಾಂಶ ಚಿಂತನಾಂಶಗಳು ಇಂದಿನವಾದಾಗಲೇ ಅವುಗಳ ಜೀವಂತಿಕೆ ಒಡೆದು ಕಾಣಬಲ್ಲುದು. ಸಮಕಾಲೀನ ಬದುಕಿನ ಸಂವೇದನೆಯಿಲ್ಲದೆ ರೂಢಿಗತವಾದ ಹಿಂದಿನ ಸ್ಥಲ ಕಟ್ಟಿನಲ್ಲಿಯೇ ಸಾವಿರ ವಚನಗಳನ್ನು ಬರೆದರೂ ಹೊಸಶಕ್ತಿಯನ್ನು ಅರ್ಥವನ್ನು ಸ್ಫುರಿಸದೆ ಅವೆಲ್ಲ 'ಕೊಟ್ಟಣವ ಕುಟ್ಟುತ್ತ ನುಚ್ಚು ತೌಡು ಕಾಣೆ ಭೋ' ಎಂದು ಹೇಳಬೇಕಾಗುತ್ತದೆ. ವಾಕ್ಯಕ್ಕೊಮ್ಮೆ 'ಅಯ್ಯಾ' ಎಂದು ಸೇರಿಸಿಬಿಟ್ಟರೆ ವಚನವಾಗುತ್ತದೆಂದು ಭಾವಿಸಿ ಬರೆಯತೊಡಗಿದ ಕೆಲವರಿಗೆ ಅದೊಂದು ಸುಲಭವಾದ ರಚನೆಯಾಗಿ ಬಿಟ್ಟಿರುವುದನ್ನೂ ಜೊತೆಯಲ್ಲಿಯೇ ಕಾಣುತ್ತಿದ್ದೇವೆ. ನಿಜವಾದ ವಚನ ರಚನೆ ಮಾತಿನ ಲಯ, ಓಟ, ಬೀಸು, ಕಾವ್ಯದ ಹೊಳಹಿನೊಂದಿಗೆ ಭಾಷೆಯ ಸಾಧ್ಯತೆಗಳನ್ನು ಸೂರೆಗೊಂಡು ವಿನೂತನ ಸೊಬಗನ್ನು ಪಡೆದಿರುತ್ತದೆ.

ಶ್ರೀ ಸಂಗಮೇಶ ಹಂಡಿಗಿಯವರು ವಚನ ರಚನೆಯ ಈ ಗುಟ್ಟನ್ನು ಬಲ್ಲರೆಂಬುದಕ್ಕೆ ಈ ಸಂಕಲನದಲ್ಲಿಯ ಕೆಲವು ಉತ್ತಮ ರಚನೆಗಳು ಸಾಕ್ಷಿಯಾಗಿವೆ. ಇಲ್ಲಿಯ ವಿಭಾಗಗಳನ್ನು ಗಮನಿಸಿದರೆ ಅವುಗಳ ವಸ್ತು ವೈವಿಧ್ಯವೂ ಗೋಚರಿಸುತ್ತದೆ. ವ್ಯಕ್ತಿ-ಶಕ್ತಿ, ದೇಶ-ಭಾಷೆ, ಸಹಕಾರ, ದಾನ, ಲೋಕವ್ಯವಹಾರ, ಜ್ಞಾನಾಜ್ಞಾನ, ವಿದ್ಯಾರ್ಥಿ, ಕೀರ್ತಿ-ಪ್ರತಿಷ್ಠೆ, ಮಾತು, ಜಾತಿ-ಧರ್ಮ, ಸಂಸಾರ, ಸಾಹಿತ್ಯ-ಸಂಸ್ಕೃತಿ, ಹಣ-ಅಧಿಕಾರ, ವಿಜ್ಞಾನ ವಿಚಿತ್ರ, ಭಕ್ತಿ, ಜೀವ-ದೇವ, ಮಠ-ಮಠಾಧಿಪತಿ, ಹರಕೆ-ಹಾರೈಕೆ, ಹೀಗೆ ಅವರು ತಮ್ಮ ವಿವಿಧ ಭಾವನೆ, ವಿಚಾರ, ಅನುಭವಗಳ ಅಭಿವ್ಯಕ್ತಿಗೆ ವಚನ ಮಾಧ್ಯಮವನ್ನು ಬಳಸಿಕೊಂಡಿದ್ದಾರೆ. ಅವುಗಳಲ್ಲಿ ಕೆಲವಾದರೂ ವಚನಗಳ ಖಚಿತ ರೂಪವನ್ನು ಪಡೆದಿರುವುದು ಸಂತೋಷದ ಸಂಗತಿ. ಅಂಥ ಕೆಲವನ್ನಿಲ್ಲಿ ಉದಾಹರಿಸಬಹುದು.

'ಪಡುವಣ ಕಡಲಿ'ನಲ್ಲಿ ಕಡಲನ್ನು ಕಂಡ ವಿಸ್ಮಯಭಾವ ಕಾವ್ಯದ ಹೊಳಹನ್ನು ಪಡೆದು ಪರಿಣಾಮಕಾರಿಯಾಗಿ ಹೊರಹೊಮ್ಮಿದೆ:

... ... ... ...
ಜಗವ ಬೆಳಗುವ ಸೂರ್ಯನೂ ಶಿಶುವಾಗಿ
ಕಡಲ್ತಾಯಿಯ ಒಡಲ ಸೇರುವ ಸೊಬಗನೇನ ಬಣ್ಣಿಸುವೆನಯ್ಯಾ
ಸಮುದ್ರ ರುದ್ರಕ್ಕೆ ರುದ್ರ: ಸುಂದರಕ್ಕೆ ಸುಂದರ
ವಾರ್ಧಿ ಉಕ್ಕೇರಿದರೂ ಮೇರೆ ಮೀರಿದುದಿಲ್ಲವಯ್ಯಾ
... ... ... ...
ಅಪಾರ ಕಡಲಿನ ಉಪ್ಪು ನೀರನು
ಸೂರ್ಯಶಕ್ತಿಯ ಫಿಲ್ಟರಿನಲ್ಲಿ ಸೋಸಿ, ಸಿಹಿಮಾಡಿ
ಮೋಡದ ಬಾನಿನಿಂದಿಳೆಗೆ ಸುರಿಯುವ ನಿನ್ನ
ಕೃಪೆಯ ವಿಜ್ಞಾನ ಇನ್ನಾರಿಗಿದೆಯಯ್ಯಾ!

ಕೆಲವು ದೀರ್ಘವಾದ ವಚನಗಳಲ್ಲಿಯು ವಿವರಣೆಗಳು ಬೋಧಕವಾಗಿದ್ದರೂ ಮನೋವೇದಕವಾಗಿರುವುದು ಕಡಿಮೆ. 'ರಾಷ್ಟ್ರವೃಕ್ಷ'ದಲ್ಲಿ ವೃಕ್ಷದ ಪ್ರತಿಮೆ ಇಡಿಯಾಗಿ ಮೂಡಿ ಸಾರ್ಥಕಗೊಂಡಿದೆ. ಮನುಷ್ಯ ಸ್ವಭಾವದ ಗುಣಾವಗುಣಗಳನ್ನು, ಸಾಮಾಜಿಕ ಲೋಪದೋಷಗಳನ್ನು ತಕ್ಕ ರೂಪಕ, ದೃಷ್ಟಾಂತಗಳಲ್ಲಿ ಚಿತ್ರಿಸಿ ಮನಸ್ಸನ್ನು ಸೆರೆ ಹಿಡಿಯುವ ವಚನಗಳೂ ಇಲ್ಲಿ ಸಾಕಷ್ಟಿವೆ. ಮಾತ್ಸರ್ಯದ ಬದಲು ಸಹಕಾರವನ್ನು ಬಯಸುವ ಹಸನಾದ ಮಾತಿನ ಸೊಗಸನ್ನು ನೋಡಿ:

ಒಬ್ಬರ ಅಭ್ಯುದಯವ ಕಂಡು ಇನ್ನೊಬ್ಬರು ಉರಿದರೆ
ಮಾತ್ಸರ್ಯದ ಹೊಗೆಸುತ್ತಿ, ಮನದ ಮನೆಯ
ಹಸಗೆಡಿಸುವುದಲ್ಲದೆ ಹಸನಾಗಿಸಬಲ್ಲುದೆ?
ಶಾಂತಿ-ಸಹಕಾರಗಳ ಸುಣ್ಣ-ಬಣ್ಣ ಬಳಿದಲ್ಲದೆ
ಹಸನಾಗದು, ಹೊಸತಾಗದು.

ಕಿಡಿಕಿಯ ಕದ ಮುಚ್ಚಿ ತೆರೆಯುವಲ್ಲಿ ಕತ್ತಲೆ-ಬೆಳಕಿನ ಒಳಹೊರಗನ್ನು ಕ್ರಿಯಾತ್ಮಕವಾಗಿ ಪ್ರಕಾಶಗೊಳಿಸುತ್ತದೆ ಮುಂದಿನ ವಚನ:

ಕಣ್ಣ ಕಿಡಿಕಿಯ ಕದ ಮುಚ್ಚಿದರೆ ಹೊರಗೆ ಕತ್ತಲೆಯಯ್ಯಾ,
ಹೃದಯ ಕುಡಿಕೆಯ ಮುಚ್ಚಳ ಮುಚ್ಚಿದರೆ ಒಳಗೆ ಕತ್ತಲೆಯಯ್ಯಾ,
ಕರುಳು ಕರಗಿದಾಗ ಮಿದುಳು ಕಿರಣಿಸಿದಾಗ
ಪ್ರೀತಿ-ಜ್ಞಾನಗಳ ಪ್ರಕಾಶವೆಲ್ಲೆಡೆಗೆ ಪಸರಿಸುವುದಯ್ಯಾ.
ಆಗ ಒಳಗೂ ಬೆಳಗು; ಹೊರಗೂ ಬೆಳಗು
ಇಹಪರಗಳೆರಡಕೂ ಬೆಳಗು ನೋಡಾ.

ಸಮಕಾಲೀನ ಸಮಾಜದ ಚಿತ್ರಣವನ್ನು ಕೊಡುವಾಗ, ಅದರ ಲೋಪ ದೋಷಗಳನ್ನು ಕಾಣಿಸುವಾಗ ಈ ಲೇಖಕರು ಪಡೆದಿರುವ ಯಶಸ್ಸು ಮೆಚ್ಚುವಂಥದು. ಸಹಕಾರಿ ಉಗ್ರಾಣಗಳನ್ನು ಛಿದ್ರಗೊಳಿಸುವ ಈ ಹೆಗ್ಗಣಗಳು.

ಸಿಮೆಂಟು,ಕಬ್ಬಿಣ, ಕಲ್ಲುಗಳಿಂದ ಭದ್ರವಾಗಿಹ
ಸಹಕಾರಿ ಉಗ್ರಾಣಗಳ ಛಿದ್ರಮಾಡಿ-ಒಳಸೇರಿದ
ಸಣ್ಣನೆಯ ಇಲಿಗಳು ತಿಣ್ಣನೆಯ ಹೆಗ್ಗಣಗಳಾಗಿ
ಹೋರಿನಿಂದ ಹೊರಬೀಳುವ ಅಚ್ಚರಿಯ ನೋಡಾ!
ಈ ಹೆಗ್ಗಣಗಳನು ಬಲೆಹಾಕಿ ಹಿಡಿವ
ಕಲೆಗಾರನೊಬ್ಬರನಾದರೂ ತೋರಾ.

ಭಾವ-ಭಾಷೆಗಳೆರಡರಲ್ಲೂ ಶರಣರ ವಚನಗಳ ನೇರವಾದ ಪ್ರಭಾವಕ್ಕೆ ಒಳಗಾದಾಗ ಲೇಖಕನ ಸ್ವಂತಿಕೆಗೆ ಆಸ್ಪದವಿಲ್ಲದಾಗುತ್ತದೆ. 'ಎತ್ತಣ ಸೂರ್ಯ, ಎತ್ತಣ ಸಾಗರ.' 'ಸತ್ಯ

ನುಡಿದರೆ ನಿಷ್ಠುರಿಯೆಂಬರು.,' 'ನುಡಿದರೆ ಶಬ್ದ ಸೌಷ್ಟವ ಸೂಸುವಂತಿರಬೇಕು,' 'ಅಂದಣವನೇರಿದೊಡೇನು' ಇವೇ ಮೊದಲಾದ ವಚನಗಳು ತಮ್ಮದೇ ಆದ ಹೊಸದೇನನ್ನು ಹೇಳುವದಿಲ್ಲ. ಆದರೆ 'ಚರಣಕ್ಕೆ ಶರಣು' 'ವಿರಹದ ಕುಲುಮೆ'ಯಂಥ ವಚನಗಳು ರಚನಾವಿನ್ಯಾಸದಲ್ಲಿ ಹಿಂದಿನ ಶ್ರೇಷ್ಠ ವಚನಗಳನ್ನು ನೆನಪಿಗೆ ತಂದರೂ ತನ್ನತನವನ್ನು ತೋರ್ಪಡಿಸುತ್ತವೆ.

ಉದಾಹರಣೆಗೆ ಈ ವಚನ:

ವಿರಹದ ಕುಲುಮೆಯಲಿ
ಕಾದು ಕಾದು ಕೆಂಡವಾಗಿಹೆನವ್ವಾ
ಬಡಿದತ್ತ ಮಣಿಯುವ ಮೆತ್ತಗಿನ ಕಬ್ಬಿಣವಾಗಿಹೆನವ್ವಾ
ಒಲುಮೆಯ ಚಿಲುಮೆಯ ಚಿಮ್ಮಿಸಿ
ಎನ್ನ ಮನವನು ಎಂದು ತಣಿಸುವನವ್ವಾ ಕೆಳದಿ
ಸಂಗಮೇಶಪ್ರಿಯ ನಿಡುಮಾಮಿಡಿ ಚನ್ನಬಸವೇಶ್ವರನು?

'ನೀನೆ ಇರುವೆ', ಅಂಚೆಯಾಳು', 'ಶಿವನಬುಟ್ಟಿ'ಯಂಥ ವಚನಗಳು ನೂತನ ರೂಪಕ ಪ್ರತಿಮೆಗಳಿಂದ ಓದುಗನನ್ನು ಆಕರ್ಷಿಸುತ್ತವಲ್ಲದೆ ಪರಿಣಾಮ ರಮಣೀಯತೆಯನ್ನೂ ಪಡೆದಿವೆ.

ಅಭಿವ್ಯಕ್ತಿಯ ನಾವೀನ್ಯವೂ ಅಲ್ಲಲ್ಲಿ ಮನಸ್ಸನ್ನು ಸೆಳೆಯುತ್ತದೆ:

ಪೆನ್ನು ಪುಸ್ತಕಗಳಿಲ್ಲದೆ ಕಾಲೇಜಿಗೆ ಬರುವ ವಿದ್ಯಾರ್ಥಿ
ಕತ್ತಿ-ಢಾಲುಗಳಿಲ್ಲದೆ ಕಾಳಗಕೆ ಬರುವ ಯೋಧನಂತೆ.

* * *

ಪಕ್ಕದ ಮನೆಯವರ ಪರಿಚಯವಿಲ್ಲದ
ಪಟ್ಟಣಿಗರ ಬಾಳೆತ್ತಣದು?

* * *

ಕೀರ್ತಿ ಕನ್ಯೆ ಕಣ್ಣು ಹೊಡೆದು ಓಡಿದಾಗ
ಬೆನ್ನು ಹತ್ತದ ಅಣ್ಣಗಳಾರಯ್ಯಾ?

ಗಾದೆಗಳಂತೆ ಕೋದು ನಿಲ್ಲುವ ಸಾರವತ್ತತೆಯನ್ನೂ ಕೆಲವು ಸಲ ಮಾತು ಪಡೆದಿರುವದುಂಟು:

ನಂಬಿಗೆಯಿಲ್ಲದ ಹೃದಯ ನೀರಿಲ್ಲದ ತಂಬಿಗೆಯಯ್ಯಾ
ಹಣವುಳ್ಳೊಡೆ ಕತ್ತೆ ಸತ್ತಿಗೆಯ ಹಿಡಿಸಿಕೊಂಬುದು ನೋಡಾ.

ಈ ಸಂಗ್ರಹದ ಕೊನೆಯಲ್ಲಿ ಕವಿಯ ಪ್ರರ್ಥನೆ ಹೀಗಿದೆ:

ನೆನಪಿನುಯ್ಯಾಲೆಯಲಿ ಜೀಕುತ್ತ ಜೀಕುತ್ತ
ಕಲ್ಪನೆಯ ಗಗನಕೇರುವೆ
ಮತ್ತೆ ಮಣ್ಣಿನ ನೆನಪಾಗಿ ನೆಲಕ್ಕಿಳಿಯುವೆ
ಈ ಏರಿಳಿತದಾಟದಲ್ಲಿ ನೆಲವ ಮರೆಯದಂತಿರಿಸಯ್ಯಾ
ಏಕೆನುವೆಯಾ? ಜೋಕಾಲಿ ನಿಂತಾಗ
ಮತ್ತೆ ನೆಲೆಯೂರುವದು ನೆಲದಲ್ಲಿಯೇ ಅಲ್ಲವೆ?

ಇಂಥ ಜೀವನ ಶ್ರದ್ಧೆಯನ್ನು ಹೊಂದಿರುವ ಶ್ರೀ ಹುಡಿಗಿಯವರು ನೆಲದ ಗಾಢ ಪ್ರಜ್ಞೆಯೊಂದಿಗೆ ಮುಗಿಲ ಕನಸನ್ನು ತಮ್ಮ ವಚನಗಳಲ್ಲಿ ಕಂಡರಿಸುತ್ತ ತಮ್ಮ ಜೀವನ ದರ್ಶನವನ್ನು ಬೆಳಗುವಂತಾಗಲಿ ಎಂದು ಹಾರೈಸುತ್ತೇನೆ.

೧೯೮೫
('ಸದ್ಭಾವ' ೨೦೦೮)

೮೪

## ಮೌನದ ಮಾತುಗಳು

ಉದ್ವೇಗ,ಆವೇಶ,ಆಕ್ರೋಶದ ನುಡಿಗಳು ಚುರುಕಾಗಿಯೂ ಚೂಪಾಗಿಯೂ ಇರಬಹುದು. ಆದರೆ ಅವು ಮನಸ್ಸನ್ನು ಇರಿಯುತ್ತವೆ. ನೋಯಿಸುತ್ತವೆ, ಮಾಯದ ಗಾಯವನ್ನುಂಟುಮಾಡುತ್ತವೆ, ಒಟ್ಟಿನಲ್ಲಿ ಅಪಾಯಕಾರಿಯಾಗಿರುತ್ತವೆ. ಒಂದು ಸಂದರ್ಭದಲ್ಲಿ ಅವು ತೀವ್ರ ಪರಿಣಾಮಕಾರಿ ಯೆನಿಸಿದರೂ ಅನೇಕ ಸಂದರ್ಭದಲ್ಲಿ ಅವು ಮನಸ್ಸಿನ ನೆಮ್ಮದಿಯನ್ನು ಕೆಡಿಸಿ ವಿರಸವನ್ನು ಹೆಚ್ಚಿಸುತ್ತವೆ. ಸಮಾಧಾನದಿಂದ ಸಂಗತಿಗಳನ್ನು ಸಮಾಲೋಕನ ಮಾಡಿದಾಗ, ಸಮಗ್ರದೃಷ್ಟಿಯಿಂದ ಸಮಾಲೋಚಿಸಿದಾಗ, ಅನುಭವದ ಆಳದಲ್ಲಿ ಅದ್ದಿ, ಚಿಂತನೆಯ ಮೂಸೆಯಿಂದ ಹೊರಬಂದಾಗ ಮಾತು ಬರಿ ಮಾತಾಗಿ ಉಳಿಯದೆ ಜ್ಯೋತಿಯಾಗಿ ಬದುಕಿನ ದಾರಿಯನ್ನು ಬೆಳಗುತ್ತ ಎಲ್ಲ ಕಾಲಕ್ಕೂ ಸಲ್ಲುವ ಗುಣದಿಂದ ಕಂಗೊಳಿಸುತ್ತದೆ. ಯಾಕೆಂದರೆ, ತೆರೆಗಳ ಅಬ್ಬರ ಕೋಲಾಹಲದಿಂದ ದೂರ; ಮೌನಶರಧಿಯ ತಳದಲ್ಲಿ ಅವು ಮುತ್ತಾಗಿ ಮಾರ್ಪಟ್ಟಿರುತ್ತವೆ. ಸರ್ವಜ್ಞಕವಿಯ ಒಂದು ನುಡಿಯನ್ನು ಇಲ್ಲಿ ನೆನೆಯಬಹುದು.

ಧ್ಯಾನದ ಹೊಸ ಬತ್ತಿ ಮೌನದ ತಿಳಿದುಪ್ಪ
ಸ್ವಾನುಭವವೆಂಬ-ಬೆಳಗಿನಾ ಜ್ಯೋತಿಯ-
ಜ್ಞಾನವನು ಸುಡುಗು ಸರ್ವಜ್ಞ

ಸೂಕ್ಷ್ಮವಾದ ವ್ಯಂಗ್ಯ ವಿಡಂಬನೆಯಿಂದ ಅದು ಇನ್ನಿಷ್ಟು ಪರಿಣಾಮಕಾರಿಯಾಗಬಲ್ಲದು; ಹೀಗೆ:

ನಾನು ದೇವರನ್ನು ನಂಬುತ್ತಿದ್ದೆ
ಮತ ಧರ್ಮಗಳು ಇಲ್ಲದೆ ಹೋಗಿದ್ದರೆ.

ಧರ್ಮ-ಗುರುವಿನ ಕಥಾ ಪ್ರಸಂಗದಲ್ಲಿ ಈ ಗುಣ ಮಿಂಚಿ ಪ್ರಜ್ವಲಿಸುತ್ತದೆ. ಕೊನೆಯಲ್ಲಿ ಕೆಲವು ಮಿನಿಗವನಗಳ ರೂಪಗಳನ್ನೇ ಪಡೆದಿವೆ.

ಮಾತು ನವುರಾಗಿದ್ದರೂ ಹೇಳುವ ರೀತಿ ತೀಕ್ಷ್ಣ-ಕೋಮಲತೆಯಿಂದ ಮನಸ್ಸನ್ನು ಕರಗಿಸಿ ಬಿಡಬಲ್ಲದೆಂಬುದಕ್ಕೆ ಇವೆರಡನ್ನು ನೋಡಿ:

ಮರದ ಎಲೆ ಕಿತ್ತುವಾಗ ನೆನಪಿಸಿಕೋ
ಮಗುವಿನ ಬೆರಳುಗಳ
ಮೊನ್ನೆ ಹೂ ಕಿತ್ತಿದಾಗ ಗೊತ್ತಾಯ್ತು
ರಕ್ತ ಕೆಂಪಗೇ ಇರಬೇಕು ಎಂದೇನಿಲ್ಲ ಎಂದು.

ಅರಿವು, ಅನುಭವ, ಆಲೋಚನೆಗಳನ್ನೆಲ್ಲ ಭಟ್ಟಿಯಿಳಿಸಿದಂತೆ, ಹತ್ತು ಮಾತಿನಲ್ಲಿ ಹೇಳಬಹುದಾದದ್ದನ್ನು ಒಂದೇ ಮಾತಿನಲ್ಲಿ ಹೊಳೆಯಿಸುವದಕ್ಕೂ ಸಾಕಷ್ಟು ಪ್ರತಿಭೆ ಬೇಕು.

ಮುಂದಿನವುಗಳನ್ನು ಪರಿಶೀಲಿಸಿ ಪರಿಭಾವಿಸಿ:

ಅನುಭವ ವಾಚಾಳಿ, ಅನುಭಾವ ಮೌನಿ.

...

ಬೇಕುಗಳಿಗೆ ಕಣ್ಮುಚ್ಚು, ಬೆಳಕು ಕಣ್ತೆರೆಯುತ್ತದೆ.

...

ಮದುವೆ ಬಂಧನವಲ್ಲ, ಕುತೂಹಲದ ಬಿಡುಗಡೆ.

...

ತನ್ನ ಸುಖವನ್ನು ಇನ್ನೊಬ್ಬರಲ್ಲಿ ಹುಡುಕುವ ಪ್ರಯತ್ನ ಕಾಮ.

...

ಕತ್ತಲೆಯ ಬಗ್ಗೆ ಕನಿಕರಿಸದ ಬೆಳಕು ಹೇಗೆ ಬೆಳಕಾದೀತು?

...

ಭಗವಂತ ಮಾತನಾಡಬೇಕಾದಾಗ ಮಗುವಿನ ನಾಲಿಗೆಯಾಗುತ್ತಾನೆ.

ಸರ್ವಜ್ಞ ಹೇಳಿದ್ದಾನೆ. 'ಓದಿದಾ ಓದು ತಾ ಮೇದ ಕಬ್ಬಿನ ಸಿಪ್ಪೆ, ಓದಿನಾ ಒಡಲನರಿತಿಹರೆ ಸಿಪ್ಪೆ ಕಬ್ಬಾದಂತೆ' ಎಂದು. ಅಂಥ ಓದಿನ ಒಡಲನ್ನರಿಯುವ ಪ್ರಯತ್ನದ ಫಲವೇ ಚಂದ್ರಶೇಖರ ವಸ್ತ್ರದ ಅವರ ಈ ಚಿಕ್ಕ ಹೊತ್ತಗೆ ಎಂದು ನಾನು ಭಾವಿಸಿದ್ದೇನೆ. ಅವರ ಈ 'ಮೌನದ ಮಾತುಗಳ' ಭಂಡಾರ ಬೆಳೆದು ಇನ್ನಷ್ಟು ದೊಡ್ಡದಾಗಿ ಕನ್ನಡಿಗರ ಕೈಗೆ ದೊರಕುವಂತಾಗಲಿ ಎಂದು ಹಾರೈಸುತ್ತೇನೆ.

೧೯೮೫

('ಸದ್ಭಾವ' ೨೦೦೮)

೮೫

## ದಿನಕ್ಕೊಂದು ನುಡಿಮುತ್ತು

'ಪರಂಜ್ಯೋತಿ' ಪತ್ರಿಕೆಯಲ್ಲಿ ಈ 'ನುಡಿಮುತ್ತು' ಗಳು ಪ್ರಕಟವಾಗುತ್ತಿದ್ದಾಗ ಶ್ರೀ ಬಸವರಾಜ ಸಾದರ ಅವರ ಪರಿಚಯ ನನಗಿರಲಿಲ್ಲ. ಅವುಗಳಲ್ಲಿ ಕೆಲವನ್ನು ನಾನು ಮೆಚ್ಚಿಕೊಳ್ಳುತ್ತಿದಂತೆ ಅವುಗಳ ಲೇಖಕರು ಯಾರಾದರೂ ಹಿರಿಯ ಅನುಭವಸ್ಥರಿರಬೇಕೆಂದುಕೊಂಡಿದ್ದೆ. ಕಳೆದ ವರ್ಷ ಅವರ ಪ್ರತ್ಯಕ್ಷ ಪರಿಚಯವಾದಾಗ ಮೂವತ್ತು ವರ್ಷದ ವಿನಯಶಾಲಿ ಬಸವರಾಜರನ್ನು ಕಂಡು ನಿಜಕ್ಕೂ ಸಂತೋಷವೆನಿಸಿತು. ಇವುಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಬಹುದೆಂದೂ ಸೂಚಿಸಿದೆ. ಈಗ ಅದಕ್ಕೆ ಮುನ್ನುಡಿಯನ್ನು ನಾನೇ ಬರೆಯಬೇಕೆಂದು ಅವರು ಪ್ರೀತಿಯಿಂದ ಒತ್ತಾಯಿಸಿದ್ದಾರೆ. ಒಳಿತಾದದ್ದು ಎಲ್ಲಿದ್ದರೂ ಅದರ ಗುಣ ಹತ್ತು ಜನಕ್ಕೆ ಗೊತ್ತಾಗಬೇಕೆಂಬ ಅಪೇಕ್ಷೆ ನನ್ನದಾದ್ದರಿಂದ ಈ ಎರಡು ಮಾತು ಬರೆಯುವದು ನನಗೆ ಸಂತೋಷದ ಹಾಗೂ ಸಮಾಧಾನದ ವಿಷಯ.

ಮನುಷ್ಯನ ಸಂಪತ್ತುಗಳಲ್ಲಿ ಮಿಗಿಲಾದದ್ದು ಅವನ ಸ್ವಂತ ಗಳಿಕೆಯಾದ ಅನುಭವ ಸಂಪತ್ತು. ಅದನ್ನು ಸರಿಯಾಗಿ ಬಳಸಿಕೊಳ್ಳುವವನ ಜೀವನದ ದಾರಿ ಸುಗಮವಾಗುತ್ತದೆ. ಆ ಅನುಭವದ ಪೂರ್ವಾಪರ ವಿವೇಚನೆ ಹಾಗೂ ಪರಿಣಾಮದಿಂದ ಬದುಕಿಗೊಂದು ಹದ, ಬಾಳಿಗೊಂದು ಬೆಳಕು ದೊರೆಯಬಲ್ಲದು. ಓದು-ವಾದಗಳಿಂದ, ನೋಟ-ಕೂಟಗಳಿಂದ ಅಷ್ಟಿಷ್ಟು ವಿವೇಕ ಒಡಮೂಡಬಹುದಾದರೂ ಸ್ವಂತ ಅನುಭವದ ಒರೆಗಲ್ಲಿಗೆ ಹಚ್ಚಿ ನೋಡಿದಾಗಲೇ ಅವುಗಳ ಬೆಲೆ ಗೊತ್ತಾಗುವದು. ಸರ್ವಜ್ಞ ಕವಿಯ ಒಂದು ನುಡಿ ಇದನ್ನು ಗಟ್ಟಿಗೊಳಿಸುತ್ತದೆ.

ವೇದವೇ ಹಿರಿದೆಂದು । ವಾದವನು ಮಾಡುವಿರಿ
ವೇದದಲಿ ಏನು - ಅರಿದಿಹುದು । ಅನುಭವಿಯ
ವೇದವೇ ವೇದ ಸರ್ವಜ್ಞ

ಪ್ರಸ್ತುತ ಸಂಗ್ರಹದ ಮೊದಲನೆಯ ನುಡಿಮುತ್ತಿನಲ್ಲಿಯೇ ಈ ವಿಚಾರ ಹೊಳೆದಿರುವದು ಗಮನಾರ್ಹ.

'ಬದುಕುವುದನ್ನು ಓದಿ, ಕೇಳಿ, ತಿಳಿದುಕೊಳ್ಳುವುದು ಸಾಧ್ಯವಿಲ್ಲ. ಅದನ್ನು ಬದುಕಿಯೇ ಅರಿಯಬೇಕು. ಆದರೂ ಒಳ್ಳೆಯ ಬದುಕಿಗೆ ಓದು ಹಾಗೂ ಕೇಳುವಿಕೆಯಿಂದ ಮಾರ್ಗದರ್ಶನವಿದೆಯೆಂಬುದನ್ನು ಮರೆಯುವಂತಿಲ್ಲ'.

ಈ 'ನುಡಿಮುತ್ತು'ಗಳಲ್ಲಿ ಹೆಚ್ಚಿನವು ಜೀವನದ ವಾಸ್ತವ ಅನುಭವದಿಂದ ಹೊಳವುಗೊಂಡಿವೆ ಯೆಂದು ನಾನು ಭಾವಿಸಿದ್ದೇನೆ. ಅಂಥವುಗಳನ್ನೋದಿದಾಗ ಅವು ನಮ್ಮ ಅನುಭವದೊಂದಿಗೂ ಸಮೀಕರಣಗೊಂಡು ನಮ್ಮನ್ನು ತಲೆದೂಗಿಸುತ್ತವೆ. ಸಮಾಧಾನಚಿತ್ತದಿಂದ ಅವುಗಳ ಸತ್ಯಾಸತ್ಯತೆಯನ್ನು ಮತ್ತೆ-ಮತ್ತೆ ಆಲೋಚಿಸುವಂತಾಗುತ್ತದೆ. ಮಾತಿನ ಚಮತ್ಕಾರವಿರದೆ ಇಲ್ಲಿ ಅನುಭವದ ಆವಿಷ್ಕಾರವೇ ಮುಖ್ಯವಾಗಿ ಅವು ನಮ್ಮ ಗಮನವನ್ನು ಸೆಳೆದುಕೊಳ್ಳುತ್ತವೆ. ಇಲ್ಲಿ ಕೆಲವನ್ನು ಅವಲೋಕಿಸಬಹುದು.

'ಅರ್ಹತೆಗೆ ಸ್ಥಾನವಿಲ್ಲದ ಇಂದಿನ ಕಾಲದಲ್ಲಿ ಅದೆಷ್ಟೋ ಅನರ್ಘ್ಯ ರತ್ನಗಳು ಬೆಳಕಿಗೆ ಬಾರದಾಗಿದೆ. ಇದರಿಂದ ಇಬ್ಬಗೆಯ ಹಾನಿಯಾಗುತ್ತಿದೆ. ಒಂದು ಅನರ್ಹತೆಯನ್ನೇ ಸ್ವೀಕರಿಸುತ್ತಿರುವದರಿಂದ ಪ್ರಗತಿಯಿಲ್ಲದಾಗಿದೆಯಾದರೆ, ಅರ್ಹತೆಯಿದ್ದ ರತ್ನಸದೃಶ ವ್ಯಕ್ತಿಗಳ ಬಾಳು ಗೋಳಿನದಾಗಿ ಅವರೂ ಮಂದಗಾಮಿಗಳಾಗುತ್ತಿದ್ದಾರೆ.'

'ಉದರದ ಹಸಿವನ್ನು ಹೊಟ್ಟೆ ತುಂಬ ಊಟಮಾಡಿ ತಣಿಸಬಹುದು. ಜ್ಞಾನದ ದಾಹವನ್ನು ಪ್ರಯತ್ನಪೂರ್ವಕವಾಗಿ ಹಿಂಗಿಸಿಕೊಳ್ಳಬಹುದು. ಆದರೆ 'ಆಸೆ'ಯೆಂಬ ಕೊನೆಯಿಲ್ಲದ ದಾಹವನ್ನು ಹಿಂಗಿಸುವದು ಅಸಾಧ್ಯ. ಅದು ದುರಾಸೆಯಾಗಿದ್ದರಂತೂ ಇನ್ನೂ ಅಸಾಧ್ಯ.'

'ಜೀವನದಲ್ಲಿ ಸಾಧಿಸಬೇಕಾದ ಏನಾದರೊಂದು ನಿಶ್ಚಿತ ಗುರಿ ಇದ್ದರೆ ಆ ಗುರಿಯತ್ತ ಗಮಿಸುವ ಮಾರ್ಗಕ್ಕಾಗಿ ಪ್ರಯತ್ನಪಡಲು ಸಾಧ್ಯವಿರುತ್ತದೆ. ಗುರಿಯೇ ಇಲ್ಲದಿದ್ದರೆ ಜೀವನಕ್ಕೆ ನಿರ್ದಿಷ್ಟ ಗತಿಯೂ ಇರುವುದಿಲ್ಲ. ಗಮನವೂ ಇರುವುದಿಲ್ಲ.'

'ಕರ್ತವ್ಯ ನಿರ್ವಹಿಸಿ ಮಾಡಬೇಕಾದುದನ್ನು ಮಾಡಿದಾಗ ದೊರಕುವ ಆನಂದ ಅಸದೃಶವಾದದ್ದು' ಇದು ಅನುಭವ ಜನ್ಯ ಹಾಗೂ ಅನುಭವಗಮ್ಯ ವಿಷಯ.

'ದೊಡ್ಡ ವ್ಯಕ್ತಿಗಳು ಸಾಧಿಸಲಾಗದ್ದನ್ನು ಸಣ್ಣ ವ್ಯಕ್ತಿಗಳು ಸಾಧಿಸಬಾರದೆಂದೇನೂ ಅಲ್ಲ; ಸಾಧನೆಯೆಂಬುದು ಸಾಧಕನ ಪ್ರಯತ್ನದ ಮೇಲೆಯೇ ಅವಲಂಬಿತವಾಗಿರುವದರಿಂದ ಯಾರಾದರೂ ತಮ್ಮ ಪ್ರಯತ್ನದಿಂದ ಏನನ್ನಾದರೂ ಸಾಧಿಸಬಹುದು'

ಅರ್ಹತೆ, ಆಸೆ, ಗುರಿ, ಕರ್ತವ್ಯ ಪ್ರಯತ್ನ ಇವೇ ಮೊದಲಾದ ವಿಷಯಗಳ ಚಿಂತನೆ ಇಲ್ಲಿ ಎಷ್ಟೊಂದು ಪ್ರಾಮಾಣಿಕವಾಗಿ, ಸಹಜವಾಗಿ, ಅಷ್ಟೇ ಸರಳವಾಗಿ ಮೂಡಿದೆಯೆಂಬುದನ್ನು ಮನಗಾಣಬಹುದು.

ಈ ಮೊದಲು ಎಲ್ಲೋ ಕೇಳಿದಂತೆ, ಓದಿದಂತೆ ಅನಿಸುವ ಸರ್ವಸಾಮಾನ್ಯ ವಿಷಯಗಳು ಇಲ್ಲಿದ್ದರೂ ಕೆಲವೆಡೆ ಹೊಸಬಗೆಯ ವಿಚಾರಗಳು ಆಲೋಚನೆಗಳೂ ಇಲ್ಲದೆ ಇಲ್ಲ. ಉದಾಹರಣೆಗೆ ಇಲ್ಲಿ ಎರಡನ್ನು ನೋಡಬಹುದು.

'ಕಲ್ಪನೆಯ ಲೋಕಕ್ಕಿಂತ ಕನಸಿನ ಲೋಕ ವ್ಯಾಪ್ತಿ ದೊಡ್ಡದು. ಕನಸು ಕಲ್ಪನಾತೀತವಾದದ್ದು, ಕಲ್ಪನೆಗೆ ಅಭಿವ್ಯಕ್ತಿ ಸಾಧ್ಯವಿದೆ. ಆದರೆ ಕನಸಿಗೆ ಸಂಪೂರ್ಣ ಅಭಿವ್ಯಕ್ತಿ ಅಸಾಧ್ಯ. ಎಂಥ ಮನೋವಿಜ್ಞಾನಿಗಳೂ ಅವರವರು ಕಾಣುವ ಕನಸುಗಳನ್ನು ಸೈದ್ಧಾಂತಿಕವಾಗಿ ವಿವರಿಸುವದು ಕಷ್ಟಕರ.'

'ಪ್ರೇಮ-ಕಾಮ ಪದಗಳು ದೂರ ದೂರದ ಸಂಬಂಧ ಹೊಂದಿದವುಗಳು. ಒಂದು ಆದರ್ಶ ತತ್ವವಾದರೆ ಇನ್ನೊಂದು ಕೇವಲ ಕ್ಷಣಿಕ ತೃಪ್ತಿಯಾಗಿದೆ. ಹೀಗಾಗಿ 'ಪ್ರೇಮ-ಕುರುಡು' ಎಂಬ ಮಾತಿಗೆ ಯಾವ ಅರ್ಥವೂ ಹೊಂದುವದಿಲ್ಲ. ನಿಜವಾಗಿಯೂ 'ಕಾಮ-ಕುರುಡು' ಎಂಬುದು ಸತ್ಯ.' ಹೇಳುವ ರೀತಿಯಲ್ಲಿ ಸಂಕ್ಷಿಪ್ತತೆ ಸಾಧ್ಯವಾದಾಗ ಮಾತು ಹೆಚ್ಚು ಸಾರವತ್ತಾಗುತ್ತದೆ. ನೋಡಿ:

'ಭೂತಕಾಲ, ಭವಿಷ್ಯಕ್ಕೆ ದಾರಿಯಾಗಬೇಕಾದರೆ ಅದರಲ್ಲಿನ ದೋಷಗಳನ್ನು ಕಳಚಿಕೊಂಡಾಗ ಮಾತ್ರ ಸಾಧ್ಯ.'

'ಆಂತರಿಕ ಪ್ರಜ್ಞೆ ಜಾಗೃತವಾಗಿದ್ದರೆ ಎಂತಹ ಬೀಳುವ ಪ್ರಸಂಗದಲ್ಲೂ ಸಾವರಿಸಿಕೊಳ್ಳಲು ಸಾಧ್ಯವಿದೆ.'

'ಸುಂದರವಾದುದನ್ನು ಕಂಡು ಆನಂದಿಸಬೇಕೇ ಹೊರತು ಅದನ್ನು ಪಡೆಯುವ ದುರಾಸೆಯಿರಬಾರದು.'

'ನೂರು ಆದೇಶಗಳನ್ನು ಸಾವಿರ ಉಪದೇಶಗಳನ್ನು ಕೇಳಿಯೂ ಅಂತಿಮ ನಿರ್ಧಾರ ನಮ್ಮದೇ ಆಗಿರಬೇಕು.'

ಚೆನ್ನಾಗಿ ತಿಳಿಯಪಡಿಸುವದೇ ಈ ನುಡಿಗಳ ಉದ್ದೇಶವಾಗಿರುವದರಿಂದ ವಿವರಣಾತ್ಮಕ ನಿರೂಪಣೆ ಇದಕ್ಕೆ ಅನಿವಾರ್ಯವಾಗಿದೆ. ಸಾಮಾನ್ಯ ಓದುಗರ ದೃಷ್ಟಿಯಿಂದಲೂ ಅದು ಅಪೇಕ್ಷಣೀಯವೆನಿಸಬಹುದು. ಅವು ಒಮ್ಮೊಮ್ಮೆ ಉಪದೇಶದ ಧಾಟಿಯಲ್ಲಿದ್ದರೂ ತಪ್ಪೆನಿಸುವುದಿಲ್ಲ. ಸ್ವಾನುಭವದ ವಿಚಾರವಂತಿಕೆಯ ಅಭಿವ್ಯಕ್ತಿಗಳಾಗಿ ಪರಿಭಾವನೆಗೆ ಸಲ್ಲುವಂತಿರುವದೇ ಈ 'ನುಡಿಮುತ್ತು'ಗಳ ವಿಶೇಷ. ಐದು ವರುಷಗಳ ಹಿಂದೆ ಇವು ಬರೆದವುಗಳಾದ್ದರಿಂದ ಕೆಲವೊಂದು ಬದಲಾವಣೆಗಳಿಗೆ ಲೇಖಕರು ಇಷ್ಟಪಡಬಹುದು. ಜೀವನದ ರಹಸ್ಯದ ಬಗ್ಗೆ ವಿಚಾರ ಮಾಡಿದಾಗಲೆಲ್ಲ ಅದರ ಅದ್ಭುತ ನಮ್ಮನ್ನು ಬೆರಗುಗೊಳಿಸುತ್ತಲೇ ಇರುತ್ತದೆ. ಇಲ್ಲಿಯ ಒಂದು ನುಡಿಯಲ್ಲಿಯೂ ಅದು ಕಾಣಿಸಿಕೊಂಡಿದೆ. 'ಎಂಥೆಂಥ ವಿಚಾರವಾದಿಗಳಿಗೆ, ಪಂಡಿತರಿಗೆ, ವಿಜ್ಞಾನಿಗಳಿಗೆ ತತ್ವಜ್ಞಾನಿಗಳಿಗೆ ಈ ಜೀವನದ ಅಜ್ಞಾತ ರಹಸ್ಯವೇನೆಂಬುದನ್ನು ಬಿಚ್ಚಿ, ಒಂದೇ ಸರ್ವಸಮ್ಮತವಾದ ಸಿದ್ಧಾಂತವನ್ನು ರಚಿಸಿ ಹೇಳಲಾಗದಿರುವುದು ಒಂದು ಜಾಗತಿಕ ಅದ್ಭುತ.'

ಈಗ್ಗೆ ಹದಿನಾರು ವರ್ಷಗಳ ಹಿಂದೆ, ಬೇರೆ ಬೇರೆ ಕವಿಗಳ, ದಾರ್ಶನಿಕರ, ಮಹಾನುಭಾವರ ಅನುಭವೋಕ್ತಿಗಳನ್ನು ದೊಡ್ಡ ಪ್ರಮಾಣದಲ್ಲಿ ಸಂಗ್ರಹಿಸಿದ ಶ್ರೀ ಡಿ. ಟಿ. ರಂಗಸ್ವಾಮಿಯವರ 'ಮುತ್ತಿನಂಥ ಮಾತುಗಳು' ಗ್ರಂಥಕ್ಕೆ ನಾನು ಮೆಚ್ಚುಗೆಯ ಎರಡು ಮಾತು ಬರೆದದ್ದುಂಟು. ಇದೀಗ ಸ್ವತಂತ್ರವಾಗಿ 'ದಿನಕ್ಕೊಮ್ಮೆ ನುಡಿಮುತ್ತ'ನ್ನು ಕೊಟ್ಟಿರುವ ಉದಯೋನ್ಮುಖ ಲೇಖಕ ಡಾ॥ ಬಸವರಾಜ ಸಾದರ ಅವರನ್ನು ಹೃತ್ಪೂರ್ವಕ ಅಭಿನಂದಿಸಿ ಶುಭಕೋರುತ್ತೇನೆ.

(೧೯೮೭)

('ಸದ್ಭಾವ' ೨೦೦೮)

೮೬

# ಬೇಂದ್ರೆ ಕಾವ್ಯದ ವಿಭಿನ್ನ ನೆಲೆಗಳು

ಶ್ರೀ ಸುಮತೀಂದ್ರ ನಾಡಿಗರ ಈ ಮಹಾ ಪ್ರಬಂಧವನ್ನು ನಾನು ಆಸಕ್ತಿಯಿಂದ ಓದಿದ್ದೇನೆ. ಆಧುನಿಕ ಕನ್ನಡದ ಬಹುಮುಖ್ಯ ಕವಿಯೆನಿಸಿಕೊಂಡ ಬೇಂದ್ರೆಯವರ ಕಾವ್ಯಕ್ಕೆ ಅನೇಕ ನೆಲೆಗಳಿರುವುದನ್ನು ಗುರುತಿಸಿ, ವೈಯಕ್ತಿಕ ನೆಲೆಯಿಂದ ವಿಶ್ವಾತ್ಮಕ ನೆಲೆಯವರೆಗೆ ಅವರ ಕಾವ್ಯದ ಏರಿಕೆಯಲ್ಲಿಯ ಏಳು-ಬೀಳುಗಳನ್ನು ವಿವೇಚಿಸಿ, ವಿಮರ್ಶಿಸಿ, ನಮ್ಮ ಪ್ರಮುಖ ಕವಿಗಳಲ್ಲಿ ಬೇಂದ್ರೆ ಹೇಗೆ ಮಹತ್ವದ ಭಾವಗೀತಕಾರರಾಗಿರುವರೆಂಬುದನ್ನು ಕೃತಿನಿಷ್ಠ ವಿಶ್ಲೇಷಣೆಯ ಮೂಲಕ ಈ ಪ್ರಬಂಧದಲ್ಲಿ ಪ್ರತಿಪಾದಿಸಲಾಗಿದೆ.

೧

ಬೇಂದ್ರೆಯವರ ಕಾವ್ಯವನ್ನು ಇಡಿಯಾಗಿ ಅಭ್ಯಾಸ ಮಾಡುವದು ತಮ್ಮ ಪ್ರಬಂಧದ ಉದ್ದೇಶವಾಗಿರುವುದನ್ನು ಸಂಶೋಧನ ದಾರಿಯಲ್ಲಿನ ಮೊದಲ ಮಾತುಗಳಲ್ಲಿ ಲೇಖಕರು ಸೂಚಿಸಿದ್ದಾರೆ. ಈ ಕವಿ ತಮ್ಮದಾಗಿಸಿಕೊಂಡ ಸತ್ವ, ಪಡೆದ ಆಯಾಮ, ಬಳಸಿದ ಅನೇಕ ಪ್ರಕಾರಗಳು, ಕಾವ್ಯದ ವಸ್ತು, ಧೋರಣೆಗಳು, ಬಳಸಿದ ಭಾಷೆಯ ಸಾಧ್ಯತೆಗಳು ಹಾಗೂ ಅದರ ಅನೇಕ ಸ್ತರಗಳು, ಧ್ವನಿ ಸಂಪತ್ತು, ಕಾವ್ಯಕ್ಕೆ ಚಾಚಿಕೊಂಡಿರುವ ಆಸಕ್ತಿಗಳು, ಇತರ ಕವಿಗಳ ಮೇಲೆ ಪ್ರಭಾವ, ಈ ಕವಿಯ ಕಾವ್ಯಕ್ಕಿರುವ ಉಳಿದ ಕವಿಗಳ ಹಿನ್ನೆಲೆ-ಇತ್ಯಾದಿಗಳ ವಿವೇಚನೆಯನ್ನು ಇದು ಒಳಗೊಂಡಿದೆ.

ಬೇಂದ್ರೆಯವರ ಕಾವ್ಯಕ್ಕಿರುವ ನೆಲೆಗಳನ್ನು ಭಾಷೀಯ ನೆಲೆ, ಪ್ರಾಯೋಗಿಕ ನೆಲೆ, ಪ್ರಸಿದ್ಧಿಯ ನೆಲೆ ಹಾಗೂ ಸಿದ್ಧಿಯ ನೆಲೆ ಎಂದು ವಿಂಗಡಿಸಿಕೊಳ್ಳಲಾಗಿದೆ.

'ಭಾಷೀಯ ನೆಲೆ' ಅಧ್ಯಾಯ ಮರಾಠಿ ಹಿನ್ನೆಲೆಯಿಂದ ಪ್ರಾರಂಭವಾಗುತ್ತದೆ. ಮರಾಠಿಯಲ್ಲಿ ಭಾವಗೀತ ಪ್ರಕಾರ ರೂಪುಗೊಂಡಿರುವ ಹೊತ್ತಿಗೆ ಬೇಂದ್ರೆಯವರ ಕಾವ್ಯ ರಚನೆಗೆ ಕೇಶವಸುತರ ಕಾವ್ಯ ಸ್ಫೂರ್ತಿಯನ್ನೊದಗಿಸಿರುವುದನ್ನು ಗುರುತಿಸಿರುವದಲ್ಲದೆ ಭಾವಗೀತೆಯ ಲಕ್ಷಣಗಳನ್ನು ಕನ್ನಡ ಕಾವ್ಯ ಸಂಪ್ರದಾಯದಲ್ಲಿ ಅವರು ಕಸಿ ಮಾಡುವ ಪ್ರಯತ್ನವನ್ನು ಸೂಚಿಸಿದೆ; ಅಲ್ಲದೆ ಕೆಲವು ಕವನಗಳ ವಸ್ತುವನ್ನೂ ರಚನಾಕ್ರಮವನ್ನೂ ಅವು ಸೂಚಿಸಿರಬಹುದೆಂಬುದನ್ನು ಉದಾಹರಣೆಗಳಿಂದ ವಿವರಿಸಲಾಗಿದೆ. ಕೇಶವಸುತ, ಗೋವಿಂದಾಗ್ರಜ, ವಿನಾಯಕ ಜನಾರ್ದನ ಕರಂದೀಕರ ಮೊದಲಾದ ಆಧುನಿಕ ಮರಾಠಿ ಕವಿಗಳು ಹಾಗೂ ಅಲ್ಲಿಯ ಸಂತ ವಾಙ್ಮಯರು

ಬೇಂದ್ರೆಯವರನ್ನು ಪ್ರಭಾವಗೊಳಿಸಿದ್ದಲ್ಲದೆ ಬೇಂದ್ರೆಯವರು ತಮ್ಮ ಮನೆಮಾತಾದ ಮರಾಠಿಯ ಮೂಲಕವೇ ರೊಮ್ಯಾಂಟಿಕ್ ಸತ್ವವನ್ನು ಪಡೆದರೆನ್ನುವುದು ಈ ದಿಸೆಯಲ್ಲಿ ಮಹತ್ವದ ಸಂಶೋಧನೆಯಾಗಿದೆ. ಹೀಗೆ ಬೇಂದ್ರೆಯವರ ಕಾವ್ಯ ರಚನೆಯ ಪ್ರಥಮ ಘಟ್ಟದಲ್ಲಿ ಮರಾಠಿ ಕಾವ್ಯದ ಪ್ರಭಾವ ಇತ್ಯಾತ್ಮಕವಾಗಿತ್ತೆಂಬುದನ್ನು ಇಲ್ಲಿಯ ವಿವೇಚನೆ ದೃಢಪಡಿಸುತ್ತದೆ.

ಹೊಸಕಾವ್ಯ ಮಾರ್ಗವನ್ನು ಹುಡುಕುತ್ತಿದ್ದ ಬೇಂದ್ರೆಯವರ ಮೇಲೆ ಜಾನಪದ ಕಾವ್ಯದ ಪ್ರಭಾವವೂ ಅಷ್ಟೇ ಮಹತ್ವದ್ದಾಗಿದೆಯೆಂಬುದನ್ನು ಬೇಂದ್ರೆ ಕಾವ್ಯದ ಅನೇಕ ಉದಾಹರಣೆಗಳಿಂದ ಕಾಣಿಸಿಕೊಡಲಾಗಿದೆ. ಸಂಸ್ಕೃತದ ಕಾವ್ಯದ ಬಗ್ಗೆ ಬೇಂದ್ರೆ ಪಾಂಡಿತ್ಯ, ಪ್ರಭುತ್ವಗಳನ್ನು ಸಂಪಾದಿಸಿದ್ದರೂ ಅವರ ಕಾವ್ಯದಲ್ಲಿ ಅದು ಸಂವೇದನೆಯ ಒಂದು ಅಂಗವಾಗಿ ಬರುತ್ತದೆಯೇ ವಿನಃ ಅವರ ಮೇಲೆ ಸವಾರಿ ಮಾಡುವುದಿಲ್ಲ. ಮೊದಲು ಅವರು ಕನ್ನಡಕ್ಕೆ ಅಧೀನವಾಗಿದ್ದ ಸಂಸ್ಕೃತ, ಅನಂತರ ಇಳಿವಯಸ್ಸಿನಲ್ಲಿ ಅವರ ಕನ್ನಡ ಆಗಿಂದಾಗ್ಗೆ ಅವರ ಸಂಸ್ಕೃತಕ್ಕೆ ಅಧೀನವಾಗುತ್ತ ಹೋದುದನ್ನು ಅವರ ಕಾವ್ಯದಿಂದಲೇ ತೋರಿಸಕೊಡಲಾಗಿದೆ.ಆದರೆ ಬೇಂದ್ರೆ ಕಾವ್ಯದ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ ನೇರವಾಗಿ ಅಷ್ಟೊಂದು ಆಗಲಿಲ್ಲವೆಂಬುದು ಕುತೂಹಲಕಾರಿಯಾಗಿದೆ. ಇಂಗ್ಲಿಷಿನಲ್ಲಿ ಬರೆದ ಭಾರತೀಯ ಲೇಖಕರಾದ ರವೀಂದ್ರನಾಥ ಟಾಗೋರ, ಅರಬಿಂದೊ ಮತ್ತು ಸರೋಜಿನಿ ನಾಯಿಡು ಅವರ ಪ್ರಭಾವವೂ ಬೇಂದ್ರೆಯವರಲ್ಲಿ ಸಿಗುತ್ತದೆಂಬುದಕ್ಕೆ ಆಧಾರಗಳನ್ನು ಒದಗಿಸಲಾಗಿದೆ.ಅರವಿಂದರ ಕಾವ್ಯಕಲ್ಪನೆ, ಬೇಂದ್ರೆ ಮುಂದೆ ಎಂತಹ ಕವಿಯಾದರೆಂಬುದನ್ನು ಸಾಬೀತುಗೊಳಿಸುತ್ತದಲ್ಲದೆ ಅವರ ಕಾವ್ಯ ತತ್ವವನ್ನು ಬೇಂದ್ರೆ ಸ್ವೀಕರಿಸಿದ ಬಗೆಯನ್ನು ಸಮರ್ಥವಾಗಿ ಪ್ರತಿಪಾದಿಸಲಾಗಿದೆ.

ಕನ್ನಡ ಕವಿಗಳಾದ ವಚನಕಾರರು, ಹರಿಹರ, ಕುಮಾರವ್ಯಾಸ, ಪುರಂದರದಾಸ, ಸರ್ವಜ್ಞ, ನಿಜಗುಣಶಿವಯೋಗಿ, ಲಕ್ಷ್ಮೀಶ, ಶಿಶುನಾಳ ಶರೀಫರ ಪ್ರಭಾವ ಬೇಂದ್ರೆ ಕಾವ್ಯದಲ್ಲಿ ಮಾರ್ದನಿಗೊಳ್ಳುವುದನ್ನು ಸೂಕ್ತವಾಗಿ ಕಂಡುಹಿಡಿಯಲಾಗಿದೆ.

ಹೀಗೆ ಬೇಂದ್ರೆಯವರ ವ್ಯುತ್ಪತ್ತಿ ದೊಡ್ಡ ಪ್ರಮಾಣದ್ದೆಂಬುದನ್ನು, ಕನ್ನಡ ಭಾಷೆಯ ಅನೇಕ ವಾಣಿಗಳು ಅವರ ಕಿವಿತುಂಬಿದ್ದನ್ನು ಹಾಗೂ ಅಖಂಡ ಕರ್ನಾಟಕದ ಕನಸು, ಭಾರತದ ಸ್ವಾತಂತ್ರ್ಯ ಹೋರಾಟ ಅವರ ಭಾವಲೋಕವನ್ನು ಹಿಗ್ಗಿಸುತ್ತ ಹೊರಟದ್ದನ್ನು ಸೂಚಿಸಿ ಈ ಎಲ್ಲ ಪ್ರಭಾವಗಳನ್ನು ಬೇಂದ್ರೆ ತಮ್ಮದನ್ನಾಗಿ ಮಾಡಿಕೊಳ್ಳುತ್ತ ಪಡೆದ ಸಂಸ್ಕಾರದ ಸ್ಥೂಲವಾದ ಒಂದು ನೋಟ ನಿಚ್ಚಳವಾಗಿ ಈ ಅಧ್ಯಾಯದಲ್ಲಿ ಪಡಿಮೂಡಿದೆ.

೨

ಭಾಷೀಯ ನೆಲೆಯಲ್ಲಿ ತಮ್ಮತನದ ಹುಡುಕಾಟವನ್ನು ಪ್ರಾರಂಭಿಸಿ, ಅಲ್ಲಿ ಸಿಕ್ಕ ಹೊಳಹುಗಳನ್ನು ತಮ್ಮತನದ ಅಭಿವ್ಯಕ್ತಿಯಲ್ಲಿ ಪ್ರಯೋಗಿಸಲು ಹೊರಟ ನೆಲೆಯನ್ನು ಪ್ರಾಯೋಗಿಕ ನೆಲೆಯೆಂದು ಕರೆದಿರುವುದು ಸಮಂಜಸವಾಗಿದೆ. ಆದರೆ ಇವು ಬುದ್ಧಿಪೂರ್ವಕವಾಗಿ, ಯೋಜನಾಬದ್ಧವಾಗಿ ಮಾಡಿದ ಪ್ರಯೋಗವಲ್ಲ. ಅವರು ತಮ್ಮ ಮನಬಂದಂತೆ ಹಾಡುತ್ತ ಹೋದವುಗಳೇ ನಿಜ,

ಅವರ ಕಿವಿಯೇ ಅವರಿಗೆ ಪ್ರಮಾಣವಾಗಿತ್ತು. 'ಬೆಳಗು' ಕವಿತೆಯಲ್ಲಿ ಕೆಲವು ಸಾರ್ಥಕ ಸಾಲುಗಳಿದ್ದರೂ ಈ ಮಟ್ಟದ ಸಾರ್ಥಕತೆ ಇಡೀ ಕವಿತೆಯಲ್ಲಿ ಕಾಣಿಸದೆ ಹೋಗಿರುವುದನ್ನು ಇಲ್ಲಿ ಮೊದಲ ಸಲ ಎತ್ತಿ ತೋರಿಸಲಾಗಿದೆ. ಯಾವ ಕಾಲದಲ್ಲೋ ಬರೆದ ಕವಿತೆಗಳನ್ನು ಇನ್ಯಾವ ಕಾಲದಲ್ಲೋ ಬೇಂದ್ರೆ ಪ್ರಕಟಿಸುತ್ತ ಹೋದದ್ದು ಅವರ ಬೆಳವಣಿಗೆಯ ಜಾಡನ್ನು ಗುರುತಿಸಲು ಅಡ್ಡ ಬರುತ್ತದೆಂಬ ಮಾತು ಕೆಲಮಟ್ಟಿಗೆ ನಿಜವೆನಿಸುತ್ತದೆ. ಆದರೂ ಈ ಕವಿ ಕೊನೆಯವರೆಗೂ ಪ್ರಯೋಗಶೀಲರಾಗಿಯೇ ಇದ್ದುದನ್ನು ಕಂಡುಕೊಂಡಿರುವ ಲೇಖಕರು ಮೊದಲಿನ ಪ್ರಯೋಗಗಳಿಗೂ ನಂತರದ ಪ್ರಯೋಗಗಳಿಗೂ ಇರುವ ವ್ಯತ್ಯಾಸವನ್ನು ಗುರುತಿಸಲು ಮರೆತಿಲ್ಲ. ಮೊದಲಿನ ಪ್ರಯೋಗಗಳಲ್ಲಿ ಜನ ಹೇಗೆ ಮೆಚ್ಚುವರೋ ಎಂಬ ಭಯವಿದ್ದರೆ ಆ ಮೇಲಿನ ಪ್ರಯೋಗಗಳಲ್ಲಿ ಹೆಚ್ಚಿನ ಆತ್ಮವಿಶ್ವಾಸ ಕಂಡುಬರುತ್ತದೆ.

೩

ಬೇಂದ್ರೆಯವರನ್ನು ಪ್ರಸಿದ್ಧಿಯ ನೆಲೆಗೇರಿಸಿದ ನಿಲುವು ಕೆಲವು ಸುಪ್ರಸಿದ್ಧ ಕವಿತೆಗಳ ವಿಶ್ಲೇಷಣೆ ಮುಂದಿನ ಅಧ್ಯಾಯದಲ್ಲಿದೆ. 'ಹಕ್ಕಿ ಹಾರುತಿದೆ ನೋಡಿದಿರಾ?' ಕವಿತೆಯ ಯಾಂತ್ರಿಕ ಲಯಗಳ ಮಾಂತ್ರಿಕತೆಯಿಂದ ಕವಿ ಗಾರುಡಿಗನಾಗಿ ಕಂಡರೂ ನಾದದ ಒಂದು ಕ್ರಮಕ್ಕೆ ಕಟ್ಟುಬಿದ್ದು, ಅರ್ಥಪೂರ್ಣತೆಯನ್ನು ಸಾಧಿಸುವ ಸ್ವಾತಂತ್ರ್ಯವನ್ನು ಕವಿ ಇಲ್ಲಿ ಕಳೆದುಕೊಂಡಿದ್ದಾನೆಂಬ ಲೇಖಕನ ಅಭಿಪ್ರಾಯ ಒಪ್ಪವಂತಿದ್ದರೂ, ಈ ಕವಿತೆಯ ವಿಶ್ಲೇಷಣೆ ಕೂದಲು ಸೀಳುವಿಕೆಯ ಜಾಣ್ಮೆಯನ್ನು ಪ್ರದರ್ಶಿಸುತ್ತದೆ ಎನಿಸುತ್ತದೆ. ಹಾಗಿದ್ದೂ ವಿಮರ್ಶೆ ಬೇಂದ್ರೆಯವರ ಕಾವ್ಯ ಸೃಷ್ಟಿಯ ಒಂದಂಶವಾಗಿ ಕೆಲಸ ಮಾಡಲೇ ಇಲ್ಲ ಎಂಬ ಅವರ ಮಾತು ಪರಿಶೀಲನೆಗೆ ಅರ್ಹವಾಗಿದೆ. 'ಬೇಂದ್ರೆತನ' ಎದ್ದು ಕಾಣುವ 'ಕುಣಿಯೋಣು ಬಾರಾ' ಕವಿತೆಯ ವಿಶ್ಲೇಷಣೆ ಗಮನಾರ್ಹವಾಗಿದೆ. ಇಲ್ಲಿ ವಾಗರ್ಥಪ್ರತಿಪತ್ತಿಗಿಂತ ಲಯಾನ್ವಿತ ಶಬ್ದಗಳಲ್ಲಿ ತನ್ಮಯವಾಗುವ ಮತ್ತು ತನ್ಮಯಗೊಳಿಸುವ ಗುಣವನ್ನು ಕಂಡುಕೊಳ್ಳಲಾಗಿದೆ. ಆದರೆ 'ಹೀಗೆ ಅರ್ಥ ಅಪಾರ್ಥ, ಅರ್ಥಹೀನತೆ, ಅನರ್ಥಗಳನ್ನು ಸೇರಿಸಿಕೊಂಡ ಬೇಂದ್ರೆಯವರ ಜಾದೂಗಾರಿಕೆಗೆ 'ಕುಣಿಯೋಣುಬಾರಾ' ಉದಾಹರಣೆಯಾಗಿದೆ' ಎಂಬ ಲೇಖಕರ ಮಾತು ಸ್ವಲ್ಪ ದುಡುಕಿನದಾಗಿದೆ ಎನಿಸುತ್ತದೆ. ಯಾಕೆಂದರೆ ಸ್ವತಃ ಲೇಖಕರೇ ಈ ಕವಿತೆಯ ಕೆಲ ಸಾಲುಗಳನ್ನು ಅರ್ಥಮಾಡಿಕೊಂಡಿಲ್ಲದಿರುವುದು ಕಂಡು ಬರುತ್ತದೆ. ಅಂಥ ಕೆಲವಕ್ಕೆ ಸರಿಯಾದ ಅರ್ಥವನ್ನು ಮುಂದೆ ಕಾಣಿಸಿದಂತೆ ಸೂಚಿಸಬಹುದು:

ನಾಲ್ಕನೆಯ ಪದ್ಯದಲ್ಲಿ 'ನಕ್ಕಸೂಸ' ಎಂದರೆ 'ನಕ್ಕಷ್ಟೂ'ಎಂಬ ಅರ್ಥ.

ಆರನೆಯ ಪದ್ಯದಲ್ಲಿ 'ಹೂನೀರನುರುಳಿಸಿ' ಎಂಬುದು ಹರ್ಷಬಾಷ್ಪವಾಗಬಹುದು.

ಎಂಟನೆಯ ಪದ್ಯದಲ್ಲಿ ಲೇಖಕರು 'ಕೋಲುಹಿಡಿದ ಸಾಲಿಮಾಸ್ತರರ 'ಚಿತ್ರವನ್ನು ಕಲ್ಪಿಸಿಕೊಂಡದ್ದು ಹಾಸ್ಯಾಸ್ಪದವಾಗಿದೆ. ಕವಿ ಅಲ್ಲಿ ಕೊಟ್ಟಿರುವುದು ಸಾಲಾಗಿಹೆಜ್ಜೆ ಹಾಕುತ್ತ ಕುಣಿಯುವ ಕೋಲಾಟದ ಚಿತ್ರವನ್ನು.

ಹದಿನಾಲ್ಕನೆಯ ಪದ್ಯದಲ್ಲಿ 'ಇಳಿಗೂದಲೀಸಾಡಿ' ಎಂಬಲ್ಲಿ 'ಈಸಾಡಿ' ಎನ್ನುವ ಪದ ಲೇಖಕರು ಭಾವಿಸಿದಂತೆ ಬರೀ ಪ್ರಾಸಕ್ಕಾಗಿ ಬಂದದ್ದಲ್ಲ. ಸ್ವಚ್ಛಂದವಾಗಿ ಕುಣಿಯುವಾಗ ಹೆಣ್ಣಿನ ಕೇಶರಾಶಿ ಗಾಳಿಯಲ್ಲಿ ಈಸಾಡಿದಂತೆ ಕಾಣುವ ರಮ್ಯ ಚಿತ್ರದಿಂದಾಗಿ 'ಈಸಾಡಿ' ಪದ ಪ್ರಯೋಗ ಸಾರ್ಥಕವಾಗಿದೆ.

ಹದಿನೆಂಟನೆ ಪದ್ಯದಲ್ಲಿ 'ಸಾವೊಮ್ಮೆ ತಪ್ಪಿತು' ಎಂದಾಗ ಕುಣಿತದ ಸಂತೋಷ ಮೃತ್ಯುವನ್ನು ಕಡೆಗಣಿಸಿದ ಅಥವಾ ಗೆದ್ದುದರ ಭಾವವನ್ನು ವ್ಯಕ್ತಗೊಳಿಸುವದರಿಂದ ಕಾವ್ಯ ಸಂದರ್ಭದಲ್ಲಿ ಅರ್ಥಪೂರ್ಣವಾಗಿಯೇ ಇದೆ.

'ಗಂಗಾವತರಣ' ಕವಿತೆಯ ವಿಶ್ಲೇಷಣೆ ಮಾಡುತ್ತ 'ಭಾವನೆಯ ಕಲ್ಪನೆಯ ಅಂತಃಸತ್ವವಿಲ್ಲದಿದ್ದಾಗಲೂ ತನ್ನ ಸಂಗೀತದಿಂದ ಜನತೆಯ ಮನಸ್ಸಿನ ಮೇಲೆ ಕೆಲವು ಕವನಗಳು ಒಮ್ಮೊಮ್ಮೆ ಪರಿಣಾಮ ಮಾಡಬಲ್ಲವು' ಎಂಬ ಅಭಿಪ್ರಾಯಕ್ಕೆ ಬಂದಿರುವ ಲೇಖಕರು ಅದಕ್ಕೆ ಕವಿತೆಯಿಂದಲೇ ಸಾಕಷ್ಟು ಆಧಾರಗಳನ್ನು ಒದಗಿಸಿರುವುದು ಮಾತ್ರ ಮೆಚ್ಚುಗೆ ಪಡೆಯುತ್ತದೆ.

೪

ಬೇಂದ್ರೆಯವರ ಕೆಲವು ಮುಖ್ಯ ಸಿದ್ಧ ಕವನಗಳನ್ನು ವಿಶ್ಲೇಷಿಸಿದ 'ಸಿದ್ಧಿಯ ನೆಲೆ' ಅಧ್ಯಾಯ ಅತ್ಯಂತ ಮಹತ್ವದ್ದಾಗಿದ್ದು ಬೇಂದ್ರೆ ಕಾವ್ಯದ ನಿಜವಾದ ಹಿರಿಮೆಯನ್ನು ಸಕಾರಣವಾಗಿ ಎತ್ತಿ ತೋರಿಸುತ್ತದೆ. ಬೇಂದ್ರೆಯವರ ಪ್ರಸಿದ್ಧ ಕವನಗಳು ಬೇರೆ ಮತ್ತು ಸಿದ್ಧ ಕವನಗಳು ಬೇರೆ ಎಂಬುದನ್ನು ಇದು ಮನಗಾಣಿಸಿಕೊಡುತ್ತದೆ. ಗೇಯತೆಯನ್ನು ಕಾವ್ಯಕ್ಕೆ ರೂಢಿಸಿಕೊಂಡು ಸಾರ್ಥಕ ಭಾವಗೀತೆಯಾಗಿ 'ಮಾಯಾ ಕಿನ್ನರಿ' ಹೇಗೆ ಸಿದ್ಧಿಯ ಹತ್ತಿರಕ್ಕೇ ಮುಟ್ಟಿದೆಯೆಂಬ ವಿಶ್ಲೇಷಣೆ ತುಂಬ ಚೇತೋಹಾರಿಯಾಗಿದೆ. ಬೇಂದ್ರೆಯವರ ಕಾವ್ಯಶಕ್ತಿಯ ಅನೇಕ ಸಾಕ್ಷಾತ್ಕಾರಗಳಿಗೆ ಲೇಖಕರು ಈ ಕವನದಲ್ಲಿ ಉದಾಹರಣೆಗಳನ್ನು ಕಂಡುಕೊಂಡಿದ್ದಾರೆ.

ಬೇಂದ್ರೆ ಸಿದ್ಧ ಕವಿಯೆಂಬುದನ್ನು ಸಾಲು ಸಾಲಿಗೆ ತೋರ್ಪಡಿಸುವ 'ಸಖೀಗೀತ'ದ ವಸ್ತು ಕವಿಯ ಕಾವ್ಯ ವ್ಯಕ್ತಿತ್ವವೇ ಆಗಿದೆ. ಪ್ರಕೃತಿ ಮತ್ತು ಮನುಷ್ಯನ ಬದುಕು ಬೇರೆ ಬೇರೆಯಾಗಿರದೆ ಒಂದು ಇನ್ನೊಂದರೊಡನೆ ಅವಿಭಾಜ್ಯ ಸಂಬಂಧ ಹೊಂದಿರುವುದನ್ನು ಈ ಕಾವ್ಯದ ವಿಶ್ಲೇಷಣೆ ಎತ್ತಿ ತೋರಿಸುತ್ತದೆ. ಕಾವ್ಯದ ತಂತ್ರಗಳೆಲ್ಲವನ್ನೂ ಉಪಯೋಗಿಸಿ, ಭಾಷೆಯ ಸಾಧ್ಯತೆಗಳೆಲ್ಲವನ್ನೂ ಸೂರೆಗೊಂಡೂ ಸಹ ಮುಖ್ಯವಾದ ಮಾತುಗಳನ್ನು ಹೇಳುವ ಈ ಕಾವ್ಯದ ಶ್ರೇಷ್ಠತೆಯನ್ನು ಚೆನ್ನಾಗಿ ಇಲ್ಲಿ ಗುರುತಿಸಲಾಗಿದೆ. ಸ್ವಾನುಭಾವದ ಪರಿಪಾಕದೊಡನೆ ಲೋಕಕಲ್ಯಾಣ ಚಿಂತನೆಯನ್ನು ಮೈಗೂಡಿಸಿಕೊಂಡಿರುವ ಹಾಗೂ ಭಾರತೀಯ ಸಾಂಸ್ಕೃತಿಕ ನೆಲೆಯಲ್ಲಿ ನಿಂತು ಕಾವ್ಯ ವಸ್ತುವಿಗೆ ಹೊಸತೊಂದು ಆಯಾಮವನ್ನು ಕೊಟ್ಟಿರುವ ಮಹತ್ವದ ಅಂಶವನ್ನು ಲೇಖಕರು ಇಲ್ಲಿ ಕಂಡಿರುವುದು ಅವರ ಸೂಕ್ಷ್ಮದೃಷ್ಟಿಯ ದ್ಯೋತಕವಾಗಿದೆ. ಹೀಗೆ ಅನೇಕ ನೆಲೆಗಳಲ್ಲಿ ನಿಂತು ನೋಡುತ್ತ ಅವೆಲ್ಲವನ್ನೂ ಏಕೀಕರಣಗೊಳಿಸುವ ಈ ಕಾವ್ಯ ಹೇಗೆ ಬೇಂದ್ರೆಯವರ ಪ್ರಾತಿನಿಧಿಕ

ಕಾವ್ಯವಾಗಿದೆಯೆಂಬುದನ್ನು ಬಹುಶಃ ಮೊಟ್ಟ ಮೊದಲಬಾರಿಗೆ ಇಷ್ಟೊಂದು ಸಮಗ್ರವಾಗಿ ಹಾಗೂ ಸಮರ್ಥವಾಗಿ ಇಲ್ಲಿ ಪ್ರತಿಪಾದಿಸಲಾಗಿದೆ.

ಆತ್ಮೀಯ ಭಾಷೆಯನ್ನು ವಿಶೇಷ ರೀತಿಯಲ್ಲಿ ಬಳಸಿಕೊಂಡ, ತನ್ನ ಅನುಭವವನ್ನು ಭಾಷೆಯಲ್ಲಿ ಸಾಕ್ಷಾತ್ಕರಿಸಿ 'ವಸ್ತುರೂಪ' ವನ್ನು ಕೊಡುವುದರಿಂದಾಗಿ ಉತ್ತಮ ಕವಿತೆಯಾಗಿರುವ 'ಜೋಗಿ', ಇದರಂತೆಯೇ ಆಧ್ಯಾತ್ಮಿಕ ಅನುಭವವನ್ನು ಚಿತ್ರಿಸುವ 'ಅರಳು-ಮರಳು' ಸಂಗ್ರಹದ ನಂತರ ಬಂದ ಗಮನಾರ್ಹ ಕವಿತೆ 'ಸಣ್ಣ ಸೋಮವಾರ' ಸೃಷ್ಟಿಯ ಸಂಕೇತವೊಂದನ್ನು ಮೂಡಿಸುವ 'ಸ್ವರೂಪ ದೀಪ' ಇವುಗಳ ವಿಶ್ಲೇಷಣೆ ಮನಂಬುಗುವಂತಿದೆ.

ಮಹತ್ವದ ಕವಿತೆಯಾಗಿದ್ದರೂ ತನ್ನ ಕೇಂದ್ರವನ್ನು ಸ್ಪಷ್ಟವಾಗಿಸದ 'ನೃತ್ಯ ಯಜ್ಞ' ಕವಿತೆಯ ತಾತ್ಪರ್ಯಕ್ಕೆ ಮಾತ್ರ ಉಳಿದ ವಿಮರ್ಶಕರೂ ಮಹತ್ವ ಕೊಟ್ಟಿರುವಾಗ ಈ ಲೇಖಕರು ಅದರ ರಚನೆಯ ದೃಷ್ಟಿಯಿಂದ ನೋಡಿ ಕವಿಯ ನಾದಲೋಲುಪತೆಯಿಂದ ಇದೊಂದು ಅಸಫಲ ಕವನವಾಗಿರುವುದನ್ನು ತೋರಿಸಿಕೊಡುತ್ತ ಬೇಂದ್ರೆಯವರ ಸಾಮರ್ಥ್ಯಕ್ಕೂ ಅದರ ಕಾವ್ಯದ ದೌರ್ಬಲ್ಯಕ್ಕೂ ಈ ಕವಿತೆ ಒಂದು ಉತ್ತಮ ಉದಾಹರಣೆಯಾಗಿದೆಯೆಂದು ಹೇಳುತ್ತಾರೆ. ಹಾಗೆಯೇ ಕಾವ್ಯ ಸೃಷ್ಟಿಯನ್ನು ಕುರಿತು ವಿಚಿತ್ರ ಪ್ರತಿಮೆಗಳಿಂದ ಕೂಡಿದ 'ಮೀನ-ಕೇತು'ವನ್ನು ವಿಶ್ಲೇಷಿಸಿ ಕಾವ್ಯದ ಬಗ್ಗೆ ಬೇಂದ್ರೆಯವರ ಧೋರಣೆ ಒಂದು ರೀತಿಯ ಸ್ವಯಂಚಾಲಿತ ಬರವಣಿಗೆಯಾಗಿರಬಹುದೆನ್ನುವ ಅನುಮಾನವನ್ನು ವ್ಯಕ್ತಪಡಿಸಲಾಗಿದೆ.

ಬೇಂದ್ರೆಯವರ ಸಿದ್ಧಿಯ ನೆಲೆಯನ್ನು ಗಮನದಲ್ಲಿಟ್ಟುಕೊಂಡು ಕನಿಷ್ಠ ೧೩೦ ಕವನಗಳನ್ನು ಆರಿಸಬಹುದೆನ್ನುವ ಲೇಖಕರು ಅವುಗಳ ಶೀರ್ಷಿಕೆಗಳನ್ನು ಅವರ ಎಲ್ಲ ಸಂಗ್ರಹಗಳಿಂದ ಆಯ್ದುಕೊಟ್ಟಿದ್ದಾರೆ.ಅವರ ಅತ್ಯುತ್ತಮ ಕವನಗಳ ಸಾರಸ್ಯವನ್ನೂ, ಸತ್ವವನ್ನೂ, ಮಾಂತ್ರಿಕತೆಯನ್ನೂ ಯಾವ ವ್ಯಾಖ್ಯಾನವೂ ಸಂಪೂರ್ಣವಾಗಿ ಹಿಡಿಯುವುದು ಸಾಧ್ಯವಿಲ್ಲವೆನ್ನುವ ಅರಿವು ಲೇಖಕರಿಗಿದೆ. ಪ್ರಪಂಚದ ಶ್ರೇಷ್ಠ ಕವಿಗಳಲ್ಲಿ ಈ ಕವಿ ಒಬ್ಬರೆಂದು ಹೇಳಲು ನಾವು ಹಿಂಜರಿಯಬೇಕಾಗಿಲ್ಲವೆಂದೂ ಅವರು ಅಭಿಪ್ರಾಯಪಟ್ಟಿದ್ದಾರೆ. ಹಾಗೆಯೇ ೧೯೫೭ರ 'ಅರಳು-ಮರಳು' ಸಂಗ್ರಹದಿಂದ ಈಚೆಗೆ ಅವರ ಕಾವ್ಯ ಆಡುಭಾಷೆಯಿಂದ ದೂರ ಸರಿಯುತ್ತ, ಚಮತ್ಕಾರ, ಚತುರೋಕ್ತಿ, ವಿಡಂಬನೆ, ಮನರಂಜನೆಯ ರೀತಿ, ಇಂಗ್ಲಿಷ್ ಮತ್ತು ಸಂಸ್ಕೃತ ಶಬ್ದಗಳ ಹಾವಳಿಯಿಂದಲೂ ಹಾಗೂ ಸಂವಾದಕ್ಕಿಂತ ಅಂತರ್ಮುಖತೆಗೆ ಹೆಚ್ಚಾಗಿ ಅವರ ಕಾವ್ಯ ಇಳಿಮುಖವಾದದ್ದನ್ನು ಗುರುತಿಸಲಾಗಿದೆ.

೫

ಅನುಬಂಧ-೧ರಲ್ಲಿ ಬೇಂದ್ರೆಯಯವರ ಸಮಕಾಲೀನರಾದ ಬೆಟಗೇರಿ ಕೃಷ್ಣಶರ್ಮ, ಶ್ರೀಧರ ಖಾನೋಳಕರ ಕವಿಗಳ ಬಗೆಗೂ ಕೆಲವು ಸಂಗತಿಗಳನ್ನು ಉಲ್ಲೇಖಿಸಿ, ಅವರ ಕವನಗಳಿಂದ ಅನೇಕ ಸೂಚನೆಗಳನ್ನು ಬೇಂದ್ರೆ ಪಡೆದಿರಬಹುದೆಂಬ ಶೋಧನೆಯಿದೆ, ಅನುಬಂಧ -೨ ರಲ್ಲಿ ನವ್ಯ ಕಾವ್ಯ ಮಾರ್ಗದ ಪ್ರಮುಖ ಕವಿ ಅಡಿಗ ಮತ್ತು ಬೇಂದ್ರೆಯವರ ಕಾವ್ಯ ಸಂಬಂಧವನ್ನು

ಸ್ಪಷ್ಟಪಡಿಸಿ, ಬೇಂದ್ರೆಯವರು ನವ್ಯಕಾವ್ಯ ಮಾರ್ಗವನ್ನು ಅಣಕ ಮಾಡುತ್ತಲೇ ಆ ಮಾರ್ಗದ ಶಕ್ತಿಗಳನ್ನು ಕಂಡು ಅದನ್ನು ತಮ್ಮದನ್ನಾಗಿ ಮಾಡಿಕೊಂಡಿರುವುದನ್ನು ಲೇಖಕರು ಇಲ್ಲಿ ಎತ್ತಿತೋರಿಸಿದ್ದಾರೆ. ಅನುಬಂಧ-೩ರಲ್ಲಿ ಬೇಂದ್ರೆಯವರ 'ನಾಕುತಂತಿ', ಹಾಗೇ 'ಇದು ನಭೋವಾಣಿ' ಕವನ ಸಂಗ್ರಹಗಳ ವಿಮರ್ಶೆ ಕೊಡಲಾಗಿದ್ದು ಇಲ್ಲಿಯ ಕವನಗಳಲ್ಲಿ ತಾಂತ್ರಿಕ ಕುಶಲತೆ ಕಡಿಮೆಯಾಗಿಲ್ಲದಿದ್ದರೂ ಕಾವ್ಯಸತ್ವ ಕುಂಠಿತವಾಗುತ್ತಿರುವುದರ ಸೂಚನೆಗಳನ್ನು ನೀಡಲಾಗಿದೆ.

ಬೇಂದ್ರೆಯವರ ಕಾವ್ಯವನ್ನು ಕುರಿತು ಇದುವರೆಗೆ ಬಂದಿರುವ ವಿಮರ್ಶಾ ಬರವಣಿಗೆಯನ್ನು ಲಕ್ಷ್ಯದಲ್ಲಿಟ್ಟುಕೊಂಡು ಮುಂದುವರಿದಿರುವ ಈ ಸಂಶೋಧನ ಪ್ರಬಂಧದಲ್ಲಿ ಬೇಂದ್ರೆಯವರ ಮೇಲಾದ ಪ್ರಭಾವಗಳು, ಅವರ ಬೆಳವಣಿಗೆಯ ಹಿಂದಿರುವ ಸ್ಥಳೀಯ, ಪ್ರಾಂತೀಯ, ರಾಷ್ಟ್ರೀಯ ಮತ್ತು ಸಾಂಸ್ಕೃತಿಕ ಹಿನ್ನೆಲೆಯನ್ನು ಕುರಿತು ಅಭ್ಯಾಸದೊಂದಿಗೆ ಕೆಲವು ಹೊಸ ಅಂಶಗಳನ್ನು ಲೇಖಕರು ಮಂಡಿಸಿದ್ದಾರೆ. ಅವರ ಬಿಡಿ ಕವನಗಳ ವಿಶ್ಲೇಷಣೆಯಿಂದ 'ಬೇಂದ್ರೆತನ' ವನ್ನು ಚೆನ್ನಾಗಿ ಗುರುತಿಸಲಾಗಿದೆ. ಕನ್ನಡ ಕಾವ್ಯ ಪರಂಪರೆಗೆ ಬೇಂದ್ರೆಯವರು ಸೇರಿಸಿದ ಹೊಸತನ್ನು, ಹುಟ್ಟಿಸಿದ ಹೊಸ ಅಭಿರುಚಿಯನ್ನು, ಮೆರೆಸಿದ ತನ್ನತನವನ್ನು ಸಮರ್ಥವಾಗಿ ಎತ್ತಿ ತೋರಿಸಲಾಗಿದೆ. ಬೇಂದ್ರೆ ಕಾವ್ಯದ ವಿಭಿನ್ನ ನೆಲೆಗಳನ್ನು ಗುರುತಿಸುತ್ತಲೇ ಅವರ ಕಾವ್ಯದ ಮೌಲ್ಯಮಾಪನವನ್ನು ಮಾಡುವ ಪ್ರಯತ್ನ ಇಲ್ಲಿ ಬಹುಮಟ್ಟಿಗೆ ಸಫಲವಾಗಿದೆ. ಸಂಶೋಧನೆ ಹಾಗೂ ವಿಮರ್ಶೆ ಪರಸ್ಪರ ಪೋಷಕವಾಗಿ, ಬೇಂದ್ರೆ ಕಾವ್ಯದ ವೈವಿಧ್ಯಗಳನ್ನು ಒಟ್ಟಿಗೆ ಹಿಡಿದು, ಅವುಗಳ ಪರಸ್ಪರ ಸಂಬಂಧವನ್ನು ಕೃತಿನಿಷ್ಠ ವಿಶ್ಲೇಷಣೆಯ ಮೂಲಕ ವ್ಯಾಖ್ಯಾನಿಸುವ ರೀತಿ ಮೆಚ್ಚುವಂತಿದೆ.

ಲೇಖಕರ ಆಳವಾದ ಅಧ್ಯಯನ, ತೌಲನಿಕ ಅಭ್ಯಾಸ, ಸಂಶೋಧನ ದೃಷ್ಟಿ, ವಿಮರ್ಶಾಶಕ್ತಿ, ನಿರೂಪಣಾ ಕೌಶಲ-ಇವುಗಳನ್ನು ಪ್ರಬಂಧದ ಉದ್ದಕ್ಕೂ ಕಾಣಬಹುದು, ಅವರು ಮಂಡಿಸುವ ವಾದದಲ್ಲಿ ನಿಸ್ಸಂದಿಗ್ಧತೆಯ ಜೊತೆಗೆ ಆತ್ಮವಿಶ್ವಾಸವೂ ಇದೆ. ಶೈಲಿ ಸರಳವಾಗಿದ್ದು ವಿಮರ್ಶೆಯ ಪರಿಭಾಷೆಯನ್ನು ಗೊಂದಲಕ್ಕೀಡು ಮಾಡದೆ ನಿರ್ದುಷ್ಟತೆಯನ್ನು ಕಾಪಾಡಿಕೊಂಡಿದೆ. ಒಬ್ಬ ಆಧುನಿಕ ಕವಿಯ ಎಲ್ಲ ಕೃತಿಗಳನ್ನು ಒಟ್ಟಿಗೆ ಅಭ್ಯಾಸ ಮಾಡುವ, ವಿಶ್ಲೇಷಿಸಿ ಬೆಲೆಗಟ್ಟುವ ವಿರಳ ಕೃತಿಗಳಲ್ಲಿ ಇದು ನಿಸ್ಸಂದೇಹವಾಗಿ ಮೇಲ್ಮಟ್ಟದ್ದಾಗಿದೆ.

(೧೯೮೯)
('ಸದ್ಭಾವ' ೨೦೦೮)

೮೭

## ನಾ ಕಂಡ ಬೇಂದ್ರೆ:ಜೀವನ ಮತ್ತು ಸಾಹಿತ್ಯ

ಕನ್ನಡ ಕಾವ್ಯದ ಸಂದರ್ಭದಲ್ಲಿ 'ಗೆಳೆಯರ ಗುಂಪು' ಒಂದು ಮಹತ್ವದ ದಾಖಲೆಯನ್ನು ಉಳಿಸಿ ಹೋದ ಮೇಲೆ ಅರವತ್ತರ ದಶಕದಲ್ಲಿ ಧಾರವಾಡದಲ್ಲಿ ಅಭ್ಯಾಸ ಮಾಡುತ್ತಿದ್ದ ಕೆಲವು ಯುವಕರು ಬೇಂದ್ರೆಯವರಿಗೆ ಅತ್ಯಂತ ಸಮೀಪವರ್ತಿಗಳಾಗಿ, ಅವರನ್ನೂ ಅವರ ಕಾವ್ಯವನ್ನೂ ಆತ್ಮೀಯವಾಗಿ ಅರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತ ಕೊನೆಯವರೆಗೂ ಅವರ ಸೇವಾನುರಾಗಿಗಳಾಗಿ ಅರ್ಥಪೂರ್ಣವಾದ ಗುರು-ಶಿಷ್ಯ ಸಂಬಂಧವನ್ನು ಸ್ಥಾಪಿಸಿಕೊಂಡದ್ದುಂಟು. ಅವರಲ್ಲಿ, ಈಗ ಮುಂಬಯಿಯಲ್ಲಿ ಪ್ರಾಧ್ಯಾಪಕರಾಗಿರುವ 'ಜೀವಿ' (ಡಾ|| ಜಿ.ವಿ.ಕುಲಕರ್ಣಿ) ಅವರೂ ಒಬ್ಬರು. ಈ ಸಂಬಂಧ ಎಂಥದೆಂಬುದನ್ನು ಅವರೇ ಹೇಳಿದ್ದಾರೆ. "ನನ್ನ ಹಾಗೂ ವರಕವಿ ಬೇಂದ್ರೆಯವರ ಸಂಬಂಧ ಒಂದು ಋಣಾನುಬಂಧ.... ಬೇಂದ್ರೆಯವರು ನನಗೆ 'ಜೀವಿ' ಎಂಬ ಕಾವ್ಯನಾಮ ನೀಡಿದರು. ಕನಸಿನಲ್ಲಿ ಬಂದು ಕವಿತೆ ಬರೆಸಿದರು. ನನ್ನಿಂದ 'ಆರತೀ ಪದ್ಯ' ಬರೆಸಿದರು. ನನ್ನ ಎಲ್ಲ ಕವನ ಸಂಗ್ರಹಗಳೊಂದಿಗೆ ಅವರ ಸಂಬಂಧವಿದೆ. ನನ್ನ ನಾಟಕಗಳ ಮೇಲೆ ಪ್ರಭಾವ ಬೀರಿದರು. ಜೀವನದಲ್ಲಿ ಮಾರ್ಗದರ್ಶನ ಮಾಡಿದರು."

೧೯೫೭ ರಿಂದಲೂ ಬೇಂದ್ರೆಯವರ ನಿಕಟವರ್ತಿಗಳಾಗಿದ್ದ ಜೀವಿ ಸ್ವತಃ ಕಥೆ, ಕಾದಂಬರಿ, ನಾಟಕದಂತಹ ಸಾಹಿತ್ಯ ಪ್ರಕಾರಗಳಲ್ಲಿ ಕೈಯಾಡಿಸಿದ್ದರೂ ಅವರು ಮುಖ್ಯತಃ ಕವಿ, ಒಳ್ಳೆಯ ಕವಿ. ಐದು ಕವನ ಸಂಗ್ರಹಗಳನ್ನು ನೀಡಿರುವ (೧೯೫೮-೧೯೮೩) ಅವರು 'ದಶಪದಿ' ಎಂಬ ಈ ಚಿಕ್ಕ ಸಂಗ್ರಹದಲ್ಲಿ ಕನ್ನಡಕ್ಕೆ ಹೊಸತಾದ ಬೇಂದ್ರೆಯವರ 'ಚತುರೋಕ್ತಿ'ಯ ಮಾದರಿಯನ್ನು ಸುಲಭಗ್ರಾಹ್ಯವಾಗುವಂತೆ 'ದಶಪದಿ' ಹೆಸರಿನಲ್ಲಿ ಮುಂದುವರಿಸಿ ಸ್ವಂತಿಕೆಯನ್ನು ಮೆರೆದಿದ್ದಾರೆ. ತಮ್ಮ ಕಾವ್ಯ ಸಾಧನೆಯುದ್ದಕ್ಕೂ ಬೇಂದ್ರೆ ಮನೋಧರ್ಮವನ್ನೇ ಇವರು ಅಂಗೀಕರಿಸಿದ್ದರೂ ತಮ್ಮ ಮನೆಯ ಮನದ ಹಣತೆಯ ಬೆಳಕಿಗೆ ಎರವಾಗದಂತೆ ನೋಡಿಕೊಂಡಿದ್ದಾರೆ. ತ್ಯಾಗದ ಮೌಲ್ಯವನ್ನು ಎತ್ತಿ ಹಿಡಿಯುವ ಅವರ ದಶಪದಿಯೊಂದರ ಎರಡು ಸಾಲುಗಳನ್ನು ಈ ಸಂದರ್ಭಕ್ಕೆ ಅನ್ವಯಿಸಬೇಕೆಂದು ಮನಸ್ಸಾಗುತ್ತಿದೆ:

'ಜೀವನದಲ್ಲಿ ಪಡೆಯುವವನಿಗಿಂತ ನೀಡುವವನೇ ಹಿರಿಯ
ಸೇವೆಯ ಮಾಡುವ ಜೀವಿಯು ಎಂದಿಗೂ ಆಗಲಾರ ಕಿರಿಯ.'

ಬೇಂದ್ರೆಯವರೊಂದಿಗಿನ ತಮ್ಮ ಕಾಲು ಶತಮಾನದ ನಿರಂತರ ಒಡನಾಟವನ್ನು, ಅವರ ವ್ಯಕ್ತಿತ್ವದ ವಿವಿಧ ಮುಖಗಳನ್ನು ಹಾಗೂ ಅವರ ಕಾವ್ಯ ಮಹತಿಯನ್ನು ಅರಿಯುವ ದಿಸೆಯಲ್ಲಿ ಸಾರ್ಥಕ ಪಡಿಸಿಕೊಂಡಿರುವುದರ ಪ್ರತಿಫಲ: 'ನಾ ಕಂಡ ಬೇಂದ್ರೆ: ಜೀವನ ಮತ್ತು ಸಾಹಿತ್ಯ' ಕೃತಿ. ಇಲ್ಲಿ ನಿರೂಪಣೆಗೊಂಡಿರುವ ಹಲವಾರು ವಿಷಯಗಳೊಂದಿಗೆ, ಪರಸ್ಪರ ವೈಯಕ್ತಿಕ ಸಂಗತಿಗಳೂ ಸಾಹಿತ್ಯಕವಾಗಿ ಸಾರ್ವಜನಿಕ ಮಹತ್ವವನ್ನು ಪಡೆದುಕೊಳ್ಳುವುದು ಇಲ್ಲಿಯ ಬರವಣಿಗೆಯ ವೈಶಿಷ್ಟ್ಯವಾಗಿದೆ. ಮುಕ್ತ ಮನಸ್ಸಿನ ಸಹೃದಯ ಸಂವಾದಕ್ಕೆ ಜೀವಿ ಯೋಗ್ಯ ವ್ಯಕ್ತಿಯಾಗಿ ಬೇಂದ್ರೆಯವರಿಗೆ ಕಂಡಿರಬೇಕು. ಉದ್ದಕ್ಕೂ ಅವರು ಮನಸ್ಸು ತೆರೆದು, ಹೃದಯ ಬಿಚ್ಚಿ ಮಾತನಾಡಿದ್ದಾರೆ. ಚರ್ಚೆಗಳಲ್ಲಿ ಆಸ್ಥೆಯಿಂದ ಪಾಲುಗೊಂಡಿದ್ದಾರೆ. ಈ ಪುಸ್ತಕದ ನಡುವಿನ ಮೂರು ಅಧ್ಯಾಯಗಳು ಲೇಖಕರು, ಬೇಂದ್ರೆ ಶತಮಾನೋತ್ಸವ ಸಂದರ್ಭದಲ್ಲಿ ಬರೆದು ಪತ್ರಿಕೆಯಲ್ಲಿ ಪ್ರಕಟಿಸಿದ ಲೇಖನಗಳನ್ನು ಒಳಗೊಂಡಿದ್ದರೆ, ಮೊದಲ ಹಾಗೂ ಕೊನೆಯ ಅಧ್ಯಾಯಗಳನ್ನು ಹೊಸತಾಗಿ ಬರೆಯಲಾಗಿದೆ.

'ಬೇಂದ್ರೆ: ಜೀವನ ದರ್ಶನ'ದಲ್ಲಿ ಬೇಂದ್ರೆಯವರ ಜೀವನ ಹಾಗೂ ಸಾಹಿತ್ಯದ ಸಾರವತ್ತಾದ ಪರಿಚಯವಿದ್ದು ಕೆಲವು ಮಹತ್ವದ ಹಾಗೂ ಸ್ವಾರಸ್ಯಕರ ಸಂಗತಿಗಳನ್ನು ಕೂಡ ಅದು ಒಳಗೊಂಡಿದೆ. 'ಬೇಂದ್ರೆಯವರ ಜೀವನವೇ ಒಂದು ಕಾವ್ಯ, ಅವರ ಕಾವ್ಯವೇ ಅವರ ಜೀವನ' ಎಂಬ ಲೇಖಕರ ತೀರ್ಮಾನ ಅತ್ಯಂತ ಸಹಜವೇ ಆಗಿದೆ.

'ಬೇಂದ್ರೆ ಕಾವ್ಯ: ಸ್ವಾದ-ಆಸ್ವಾದ' ಎಂಬ ಎರಡನೆಯ ಅಧ್ಯಾಯದಲ್ಲಿ ಅವರ ಜ್ಞಾನಪೀಠ ಪ್ರಶಸ್ತಿ ವಿಜೇತ ಕೃತಿ 'ನಾಕುತಂತಿ'ಯ ಕೆಲವು ಕವಿತೆಗಳ ಬಗ್ಗೆ ಬೇಂದ್ರೆಯವರೇ ವಿವರಣೆ ನೀಡಿದ ಅಂಶಗಳನ್ನು ಬಳಸಿಕೊಂಡು ಮಾಡಿರುವ ರಸ ವಿಮರ್ಶೆಯಿದೆ. ಅವರೊಡನೆ ಚರ್ಚಿಸಿದ ಫಲವಾಗಿ ಮೂಡಿಬಂದ 'ಪರಾಶರಾರೂಪಾ' ಎಂಬ ವೈದಿಕ ಛಂದಸ್ಸಿನ ಪದ್ಯದ ವಿಶ್ಲೇಷಣೆ ಗಮನಾರ್ಹವಾಗಿದೆ. ಈ ಕವಿತೆಯ ವಾಚನ ಮಾಡುತ್ತಲೇ ಬೇಂದ್ರೆ ಪರಾವಾಣಿಯ ಆವಾಹನೆ ಮಾಡಿದ ರೀತಿಯನ್ನು ಲೇಖಕರು ಕಣ್ಣೆದುರು ನಿಲ್ಲಿಸುತ್ತಾರೆ. ಹಾಗೆಯೇ 'ಡೂ' ಕವಿತೆ 'ಹುಡುಕು' ಎಂಬ ಕೇಂದ್ರ ವಿಚಾರವನ್ನು ಒಳಗೊಂಡ ಬಗೆ. ಈ ಸಂದರ್ಭದಲ್ಲಿ ಬೇಂದ್ರೆಯವರು ಹೇಳಿರುವ ಮಾತು ಅವರ ಕವಿತೆಯ ಸ್ವರೂಪವನ್ನು ತಿಳಿಸುತ್ತದೆ:'ನನ್ನ ಬಹಳಷ್ಟು ಕವಿತಾದಾಗ Architectural development ಇರ್ತದೆ. ಯಾರಿಗೆ ಇದು ತಿಳಿಯೋದಿಲ್ಲ ಅವರಿಗೆ ನನ್ನ ಕವಿತಾ ತಿಳಿಯೋದಿಲ್ಲಾ'. ಶಬ್ದದ ಹಿಂದಿರುವ ಧ್ವನಿಯನ್ನು ಹಿಡಿದು ಮುನ್ನಡೆಯುವ ಈ ಕವಿಯ ರೀತಿಗೆ 'ನೋ' ಎಂಬ ಪದ್ಯ ಉದಾಹರಣೆಯಾಗಿರುವುದನ್ನು ತೋರಿಸಲಾಗಿದೆ. ಧ್ವನಿ ಮುದ್ರಣ ತೆಗೆದು ಇದನ್ನು ಲೇಖಿಸಿರುವುದರಿಂದ ಅದಕ್ಕೊಂದು ಅಧಿಕೃತತೆ ಉಂಟಾಗಿದೆ. 'ಒಂದೇ ಕರ್ನಾಟಕ' ಕವಿತೆಯ 'ಉಗ್ಗಡಿಸಿರಿ ನಾಸ್ತಿಗೆ ಜಯ ಜಯ ಜಯವೆಂದೇ' ಎಂಬ ಸಾಲಿನ ಅರ್ಥದ ಬಗ್ಗೆ ಲೇಖಕರಿಗುಂಟಾದ ಸಂದೇಹ ಆ ಕವಿತೆಯನ್ನು ಬರೆದ ಸಂದರ್ಭ ಹಾಗೂ ಪ್ರೇರಣೆಗಳನ್ನು ಕವಿಯೇ ನೀಡಿದಾಗ ನಿವಾರಣೆಯಾಗುತ್ತದೆ. 'ಹುಬ್ಬಳಿಯಾಂವಾ' ಕವಿತೆಯ

ಬಗೆಗಿನ ವಿವೇಚನೆ ಅದರ ಯೋಗ್ಯತೆಗೆ ತಕ್ಕ ನ್ಯಾಯವನ್ನು ಒದಗಿಸಿದೆ. ತನ್ನ ರಹಸ್ಯಮಯತೆಯಿಂದ ಪ್ರಸಿದ್ಧವಾದ 'ಜೋಗಿ' ಕವಿತೆ ಅಪೂರ್ಣವಾಗಿರಬಹುದೆಂಬ ವಿಮರ್ಶಕರ ಸಂದೇಹವನ್ನು ಬೇಂದ್ರೆಯವರ ವಿವರಣೆ ನಿಜಗೊಳಿಸಿದೆ. ಹಾಗೆಯೇ 'ರುದ್ರವೀಣೆ' ಕವಿತೆಯ ಕೊನೆಯ ಚರಣದಲ್ಲಿಯ 'ಸಾಯಲಾರದಳುತಿದೆ' ಎಂಬ ಸಾಲು 'ಸಾಯಲಾರದರಳುತಿದೆ' ಎಂದಿರಬೇಕಾಗಿತ್ತೆಂಬುದನ್ನು ಬೇಂದ್ರೆಯವರ ಮೂಲಕವೇ ಜೀವಿ ದೃಢಪಡಿಸಿಕೊಂಡುದು ಮೆಚ್ಚುವಂತಿದೆ.

'ಮೇಘದೂತ'ವನ್ನು ಒಳಗೊಂಡ ಬೇಂದ್ರೆಯವರ ಎಲ್ಲ ಅನುವಾದಗಳು ಕನ್ನಡದ ಸ್ವತಂತ್ರ ಕಾವ್ಯದ ಸತ್ವ ಪಡೆದಿರುವುದಕ್ಕೆ 'ಮುಕ್ತಕಂಠ'ದ ಅನೇಕ ಪದ್ಯಗಳು ನಿದರ್ಶನ ಒದಗಿಸುತ್ತವೆ. ಕನ್ನಡದ ಲಾವಣಿ ಛಂದಸ್ಸಿನ ಗತ್ತಿನಲ್ಲಿ ಹರಿದಿರುವ 'ನಮ್ಮ ಕೊನೆಯ ಶರಣು' (ಮೂಲ ಸ್ಪ್ಯಾನಿಷ್ ದೇಶಭಕ್ತಿಗೀತೆ) ಅನುವಾದಿತ ಕವಿತೆಯೆಂದು ಅನಿಸದೇ ಇರುವಷ್ಟು ಅದ್ಭುತವಾಗಿದೆ. ಇದರ ಯಶಸ್ಸಿಗೆ ಮೂಲ ಕಾರಣ ಬೇಂದ್ರೆಯವರು ಜೀವಿಗೆ ಹೇಳಿರುವ ಮುಂದಿನ ಮಾತಿನಲ್ಲಿ ಅಡಗಿದೆ: 'ಇದರಲ್ಲಿಯ ರಾಷ್ಟ್ರಪ್ರೇಮ ನನ್ನ ಅಂತರಂಗವನ್ನು ಕಡೆಯಿತು... ಅನುವಾದ ಮಾಡ್ತಾ ಮಾಡ್ತಾ ಇದರ ಹುತಾತ್ಮ ನನ್ನ ಮೈಯಲ್ಲಿ ಹೊಕ್ಕಂಗಾತು. ನಾನೇ ಇದರ ನಾಯಕನಾಗಿ ಬಿಟ್ಟೆ. ಇದು ನನ್ನದೇ ಹಾಡಾಯಿತು.'

'ಬೇಂದ್ರೆ: ಸಂಗ-ಸಾನಿಧ್ಯ' ಅಧ್ಯಾಯದಲ್ಲಿ ಅವರೊಡನೆ ಸಂಬಂಧ ಪಡೆದ ಮಾಸ್ತಿ, ಅಡಿಗ, ಹೆಬ್ಬಾರ, ಕಾರ್ನಾಡ ಮುಂತಾದವರ ಸಂಪರ್ಕದಲ್ಲಿ ಬೇಂದ್ರೆಯವರನ್ನಿಟ್ಟು ನೋಡಲಾಗಿದೆ. ಇದರ ಜೊತೆಗೆ ಸಾನಿಧ್ಯದಲ್ಲಿ, ವಿವಿಧ ಸನ್ನಿವೇಶಗಳಲ್ಲಿ ಲೇಖಕನು ಪಡೆದ ವಿಶೇಷ ಬಗೆಯ ಅನುಭವಗಳ ರೋಚಕ ವಿವರಣೆಯಿದೆ. ಕಾವ್ಯ ಬೇಂದ್ರೆಯವರ ಜೀವನದಲ್ಲಿ ಹಾಸು ಹೊಕ್ಕಾದ ಯೋಗವಾಗಿತ್ತೆಂಬುದನ್ನು ಜೀವಿ ಕಂಡುಕೊಂಡಿದ್ದಾರೆ.

'ಬೇಂದ್ರೆ : ಒಲವು-ನಿಲುವು' ಅಧ್ಯಾಯದ ಒಂಬತ್ತು ಪ್ರಬಂಧಗಳು ಲೇಖಕನ ಜೀವನ ಹಾಗೂ ಸಾಹಿತ್ಯವನ್ನು ರೂಪಿಸುವಲ್ಲಿ ಬೇಂದ್ರೆಯವರು ಆಡಿದ ಪಾತ್ರವನ್ನು ಆತ್ಮೀಯವಾಗಿ ನಿರೂಪಿಸುತ್ತದೆ. 'ಬೇಂದ್ರೆಯವರ ಕೊನೆಯ ದಿನಗಳು' ಆ ಅವಧಿಯ ಸನ್ನಿವೇಶಗಳನ್ನು ಆತ್ಮೀಯ ಘಟನೆಗಳನ್ನು ಚಿತ್ರವತ್ತಾಗಿ ಕೊಟ್ಟಿದೆ. ಅಂಥ ಸ್ಥಿತಿಯಲ್ಲಿಯೂ ಬೇಂದ್ರೆಯವರು ವಿಜ್ಞಾನದ ಅಭ್ಯಾಸ ಮುಂದುವರಿಸಿದ್ದು ಅವರ ಚೈತನ್ಯಕ್ಕೆ ಸಾಕ್ಷಿಯಾಗಿದೆ. 'ಜೀವಿ, ನನಗೆ ಮತ್ತೊಮ್ಮೆ ಹುಟ್ಟುವ ಪ್ರಸಂಗ ಬಂದರೆ ನಾನು ವಿಜ್ಞಾನಿಯಾಗಬಯಸುವೆ. ನನ್ನ ಅನೇಕ ಸಂಶೋಧನೆಗಳು ಅರ್ಧದಲ್ಲಿಯೇ ಉಳಿದಿವೆ' ಎಂದು ಒಮ್ಮೆ ಅವರು ಉದ್ಗಾರ ತೆಗೆದುದನ್ನು ಈ ಸಂದರ್ಭದಲ್ಲಿ ಲೇಖಕರು ನೆನಪಿಸಿಕೊಂಡಿದ್ದಾರೆ. "ನನ್ನ ಜೀವನವನ್ನೇ ಕರ್ನಾಟಕಕ್ಕೆ ಕೊಟ್ಟಿದ್ದೇನೆ, ದೇಹವನ್ನು ಬಹುಶಃ ಮಹಾರಾಷ್ಟ್ರದಲ್ಲಿ ಬಿಡುವೆ" ಎಂದಿದ್ದ ಅವರ ಭವಿಷ್ಯವಾಣಿ ನಿಜವಾಗಿಬಿಟ್ಟಿತು.

ವಿಶ್ವಮಾನವತೆಯ ಸಿದ್ಧಾಂತವನ್ನು ರೂಪಿಸುವಾಗ ಶಬ್ದಕ್ಕಿಂತಲೂ ಸಾಂಖ್ಯದಲ್ಲಿ ನಿರೂಪಿಸುವದು ಹೆಚ್ಚು ಸಮರ್ಪಕವೆಂದು ಬೇಂದ್ರೆ ಭಾವಿಸಿದ್ದರ ವಿಚಾರ ಕೊನೆಯ ಪ್ರಬಂಧ

('ಬೇಂದ್ರೆ : ಸಿದ್ಧಾಂತ-ಸಂದೇಶ')ದಲ್ಲಿ ಬಂದಿದೆ. ಸಮಗ್ರವಾಗಿ ಜ್ಞಾನವಿಜ್ಞಾನಗಳ ಸಾಮರಸ್ಯವನ್ನು ಸಾಧಿಸುವ ಸಂಶೋಧನೆಯ ಸಾಹಸ ಅವರದಾಗಿತ್ತೆಂಬುದನ್ನು ಜೀವಿ ಪ್ರತ್ಯಕ್ಷ ಕಂಡಿದ್ದಾರೆ. 'ಹೃದಯ-ವಿವೇಕ ತತ್ವ' ಪರಿಪಾಕವನ್ನು ತಮ್ಮ ಕೊನೆಯ ಸಂದೇಶವಾಗಿ ಪ್ರತಿಪಾದಿಸಿದ ಬೇಂದ್ರೆಯವರ 'ವಿಶ್ವಧಾರಣ ಸೂತ್ರ' ಬೆಳಕಿಗೆ ಬರಬೇಕೆಂಬುದು ಲೇಖಕರ ಹಂಬಲವಾಗಿದೆ. ಕಾವ್ಯದ ಇತಿಹಾಸದಲ್ಲಿ 'ಗಾರುಡಿಗ' ಎಂದು ಕರೆಯಿಸಿಕೊಂಡ ಬೇಂದ್ರೆ ಸಮಾಜದ ವಿಷವನ್ನು ಪರಿಹರಿಸುವ ವಿಷವೈದ್ಯರೂ ಆಗಿದ್ದರೆಂಬುದನ್ನು ಜೀವಿ ಚೆನ್ನಾಗಿ ಮನವರಿಕೆ ಮಾಡಿಕೊಂಡಿದ್ದಾರೆ.

'ನನ್ನ ತಲೆಯಲ್ಲಿ ಅವರು ಹೇಳಿದ ಜ್ಞಾನವೆಲ್ಲ ಇಳಿಯಲಿಲ್ಲ' ಎಂಬುದು ಜೀವಿಯ ಕೊರಗು. ಆದರೂ ಸಾಧಕ ಜೀವನದ ಅನುಭವವುಳ್ಳ ಜೀವಿಯವರಿಗೆ ಇಳಿದಷ್ಟನ್ನು, ತಾವು ತಿಳಿದಷ್ಟನ್ನು ಕೊಂಕು ಬಿಂಕಗಳಿಲ್ಲದೆ, ಅತ್ಯಂತ ಶ್ರದ್ಧೆಯಿಂದ ನಿರೂಪಿಸುವುದು ಸಾಧ್ಯವಾಗಿದೆ. ಅದಕ್ಕಾಗಿ ಬೇಂದ್ರೆ ಕಾವ್ಯಾಭ್ಯಾಸಿಗಳು ಅವರಿಗೆ ಕೃತಜ್ಞರಾಗಿದ್ದಾರೆ. ಇಂಥ ವಿಶಿಷ್ಟ ಕೃತಿಯನ್ನು ಸಮಯೋಚಿತವಾಗಿ ಬೆಳಕಿಗೆ ತರಲು ಸಹಕಾರ ನೀಡುತ್ತಿರುವ ಕವಿಮಿತ್ರ ಡಾ. ಕೆ.ಎಸ್. ಶರ್ಮಾ ಅವರನ್ನು ಅಭಿನಂದಿಸುತ್ತೇನೆ.

(೧೯೯೭)

## ೮೮

# ಹಣತೆಗಳು

ಕರ್ನಾಟಕ ಸರಕಾರದ ಸ್ವಾಯತ್ತ ಸಂಸ್ಥೆಯಾದ ಬರ ಪರಿಹಾರ ಉಸ್ತುವಾರಿ ಕೋಶದ ನಿವೃತ್ತ ನಿರ್ದೇಶಕರಾದ ಡಾ. ಎಚ್. ಚಂದ್ರಶೇಖರ ತಮ್ಮ ಸೇವೆಯಲ್ಲಿ ನಿಷ್ಠೆಯಿಂದ ಕೆಲಸ ಮಾಡುತ್ತಲೇ ತಜ್ಞರಾದ ಭೂಮಿವಿಜ್ಞಾನಿಯಾಗಿ, ಹವ್ಯಾಸಿ ಫೋಟೋ ಕಲಾವಿದರಾಗಿ, ಚಿತ್ರ-ಲೇಖನದಲ್ಲಿ ಪಳಗುತ್ತ ಕರ್ನಾಟಕದ ನೈಸರ್ಗಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸುತ್ತ ಬಂದಿದ್ದಾರೆ. ಅವರ ವೈಜ್ಞಾನಿಕ ಲೇಖನಗಳು ಸಾಹಿತ್ಯಿಕ ಸ್ಪರ್ಶದಿಂದ ಜನಪ್ರಿಯತೆ ಪಡೆದಿವೆ. ಫೋಟೋಗ್ರಫಿ ಕಲೆಯಲ್ಲಿ ಹಲವು ಪ್ರಶಸ್ತಿಗಳನ್ನು ಪಡೆದಿರುವ ಅವರು ದೇವಾಲಯಗಳ, ವಾಸ್ತುಶಿಲ್ಪಗಳ ಹಾಗೂ ಜಾನಪದ ಕಲೆಗಳ ಹಲವು ಮಹತ್ವದ ಮುಖಗಳನ್ನು ಸೆರೆಹಿಡಿದು ಉಪಯುಕ್ತವೆನಿಸುವ ಚಿತ್ರ-ಲೇಖನಗಳನ್ನು ಆಗಾಗ ಬರೆಯುತ್ತ ಬಂದಿದ್ದಾರೆ. ಕೆಲವು ಶಿವಶರಣರು ಹಿಂದೆ ವಾಸಿಸುತ್ತಿದ್ದ ಸ್ಥಳಗಳಿಗೇ ಹೋಗಿ ಅಲ್ಲಿಯ ಪರಿಸರವನ್ನು ಅಭ್ಯಸಿಸಿ, ಅವರ ವಚನಗಳಲ್ಲಿ ಕಾಣಿಸುವ ಕೆಲವು ಪರಿಕಲ್ಪನೆ, ಪದಗಳ ವಿಶಿಷ್ಟ ಅರ್ಥಕ್ಕೆ ಅನುವಾಗುವಂಥ ಲೇಖನಗಳನ್ನು ಬರೆದಿರುವುದು ಒಂದು ವಿಶೇಷ ಸಾಧನೆಯೆನ್ನಬಹುದು.

ಈ ಎಲ್ಲ ಹಿನ್ನೆಲೆಯಲ್ಲಿ ಪ್ರಕಟವಾಗುತ್ತಿರುವ ಚಂದ್ರಶೇಖರ ಅವರ ಮೊದಲ ಪುಸ್ತಕ 'ಹಣತೆಗಳು' ಅವರ ವ್ಯಕ್ತಿತ್ವ ಹಾಗೂ ಬರವಣಿಗೆಯ ಮತ್ತೊಂದು ಮುಖವನ್ನು ಕನ್ನಡಿಗರಿಗೆ ಪರಿಚಯಿಸುವಂಥದು. ಅವರ ಈ ಪ್ರಥಮ ಕೃತಿ ಓದುಗರ ಕೈ ಸೇರುವ ಮುನ್ನ ಕಾವ್ಯ ಪ್ರೇಮಿಗಳಾದ ಅವರು ನನ್ನಿಂದ ಮುನ್ನುಡಿ ರೂಪದ ನಾಲ್ಕು ಮಾತುಗಳನ್ನು ಅಪೇಕ್ಷಿಸಿದ್ದಾರೆ. ಮೊದಲೇ ಕುಡಿವೆಳಕಿನಿಂದ ಬೆಳಗುತ್ತಿರುವ ಹಣತೆಗೆ ಒಂದಿಷ್ಟು ಎಣ್ಣೆ ಎರೆಯುವ ಕಾರ್ಯ ಈ ದೀಪಾವಳಿಯ ಸಂದರ್ಭದಲ್ಲಿ ನನಗೆ ಹೆಚ್ಚಿನ ಸಂತೋಷವನ್ನುಂಟು ಮಾಡಿದೆ.

ಒಂದಲ್ಲ ಒಂದು ಕಲೆಯಲ್ಲಿ ನಿಷ್ಣಾತರಾಗಿ, ತಮ್ಮ ಜೀವನವನ್ನೇ ಅದಕ್ಕಾಗಿ ಮುಡುಪಿಟ್ಟು, ನಾಡು-ನುಡಿಗೆ ಕೀರ್ತಿ ತಂದ ಒಂಬತ್ತು ವ್ಯಕ್ತಿಗಳ ಜೀವನ ಸಾಧನೆಯನ್ನು ಕುರಿತು ಬರೆದ, ಸಂದರ್ಭಾನುಸಾರ ಪತ್ರಿಕೆಗಳಲ್ಲಿ ಪ್ರಕಟಿಸಿದ (೧೯೭೧-೧೯೯೭) ಲೇಖನಗಳನ್ನು ಅಥವಾ ವ್ಯಕ್ತಿಚಿತ್ರಗಳನ್ನು ಈ ಸಂಕಲನ ಒಳಗೊಂಡಿದೆ. ಈ ಮಹನೀಯರು ಕಾವ್ಯ, ಚಿತ್ರಕಲೆ, ಗಮಕ, ನಟನ, ಛಾಯಾಚಿತ್ರ, ಪತ್ರಿಕಾ ವ್ಯವಸಾಯ, ಯಂತ್ರಶಾಸ್ತ್ರ, ವಾಸ್ತು ವಿದ್ಯೆ - ಹೀಗೆ ಬೇರೆ ಬೇರೆ ಕ್ಷೇತ್ರಗಳಲ್ಲಿ ನಿಷ್ಠೆಯಿಂದ ಕೃಷಿಗೈದು ಹಿರಿಮೆಯನ್ನು ಮೆರೆದವರು. ಒಬ್ಬ ವ್ಯಕ್ತಿಯನ್ನು ಅವರ

ಕೃತಿಗಳ ಮೂಲಕ ಅಭ್ಯಸಿಸಿ ಪರಿಚಯಿಸುವದು ಒಂದು ಬಗೆಯಾದರೆ, ಅವರ ಸಾಮೀಪ್ಯದ ಸಂಪರ್ಕವನ್ನು ಪಡೆದು ಒಳ-ಹೊರಗನ್ನು ಅರ್ಥಮಾಡಿಕೊಂಡು, ಅವರ ಕೊಡುಗೆಯನ್ನು ಸಾಧ್ಯವಿದ್ದ ಮಟ್ಟಿಗೆ ಬೆಲೆಗಟ್ಟಿ ನೋಡುವದು ಮತ್ತೊಂದು ಬಗೆ. ಇದು ಹೆಚ್ಚು ಆತ್ಮೀಯವಾಗಿರುತ್ತದೆಂಬ ಒಂದೇ ಕಾರಣದಿಂದಲ್ಲದೆ, ಲೇಖಕನ ಸಾಂಸ್ಕೃತಿಕ ಕಾಳಜಿಗಳು ಹೆಚ್ಚು ಕ್ರಿಯಾಶೀಲವಾಗಿ ವ್ಯಕ್ತಿ ಚಿತ್ರದೊಡನೆ ಸಮೀಕರಣಗೊಳ್ಳುವುದರಿಂದ ಹೆಚ್ಚಿನ ಮಹತ್ವವನ್ನು ಪಡೆದುಕೊಳ್ಳುತ್ತವೆ.

ಮಖದೂಮ್ ಕುರಿತು ಲೇಖನ ಪ್ರಾರಂಭದಲ್ಲಿಯೇ ಈ ಕವಿಯ ಕ್ರಾಂತಿಕಾರಕ ಚಟುವಟಿಕೆಗಳ ಸೂಚನೆಗಳಿಂದ ಓದುಗರ ಗಮನವನ್ನು ಸೆಳೆದುಕೊಳ್ಳುತ್ತದೆ. ಜನಪ್ರಿಯ ಕವಿ ಹಾಗೂ ಜನಪ್ರಿಯ ನಾಯಕ ಈ ಎರಡೂ ವ್ಯಕ್ತಿತ್ವ ಒಂದರಲ್ಲಿಯೇ ಒಳಗೊಂಡಿರುವ ಚಿತ್ರಣ ಇಲ್ಲಿ ಸ್ಫುಟವಾಗಿ ಮೂಡಿದೆ. ದೀನದಲಿತರಿಗಾಗಿ, ರೈತ ಕಾರ್ಮಿಕರಿಗಾಗಿ, ಸತ್ಯ, ಸಮತೆ, ನ್ಯಾಯಕ್ಕಾಗಿ ಹೋರಾಟವನ್ನು ಸಂಘಟಿಸಿ ಅದರ ಪ್ರಾಣವಾಗಿದ್ದುದರ ಈ ಕವಿಯ ಚಿತ್ರವನ್ನು ಅವನ ಕವಿತೆಗಳ ಉದಾಹರಣೆಗಳಿಂದಲೇ ಕಟ್ಟಿಕೊಡಲಾಗಿದೆ. ಇವನ ಕ್ರಾಂತಿಕಾರಕ ಹಾಡುಗಳು ಕಲಾತ್ಮಕತೆಯಲ್ಲಿ ಹಿಂದೆ ಬಿದ್ದು, ಪ್ರಣಯ ಗೀತೆಗಳೂ, ಗಜಲ್‌ಗಳೂ ಕಾವ್ಯ ಗುಣದಲ್ಲಿ ಮುಂದಾಗಿರುವುದು ಅಭ್ಯಸನೀಯವೆನಿಸುತ್ತದೆ.

ಕನ್ನಡದ ಸುಪ್ರಸಿದ್ಧ ಕವಿ, ವಿದ್ವಾಂಸ ಹಾಗೂ ಆಡಳಿತಗಾರ ಡಾ|| ಸಿದ್ಧಯ್ಯ ಪುರಾಣಿಕರನ್ನು ಕುರಿತು ಮೂಲ ಉರ್ದುವಿನಲ್ಲಿ ಬಂದ ಲೇಖನವನ್ನು ಚಂದ್ರಶೇಖರ ಸೊಗಸಾಗಿ ಕನ್ನಡದಲ್ಲಿ ಅನುವಾದಿಸಿ ಕೊಟ್ಟಿದ್ದಾರೆ. ಪುರಾಣಿಕರು ಕಾರ್ಮಿಕ ಕಮೀಷನರಾಗಿದ್ದಾಗ ಅವರ ಆಪ್ತ ಸಹಾಯಕರಾಗಿ ಕೆಲಸ ಮಾಡಿದ ಉರ್ದು ಕವಿ ಹಮೀದ್ ಅಲ್ಮಾಸ್ ಪುರಾಣಿಕರ ಜೀವನ, ಸಾಹಿತ್ಯ ಹಾಗೂ ಕಾರ್ಯಶೈಲಿಯ ಬಗ್ಗೆ ಅನೇಕ ಒಳನೋಟಗಳನ್ನು ನೀಡಿದ್ದಾರೆ. ತಮ್ಮ ಕಾಯಕಕ್ಕೆ ಯಾವ ಕಾರಣಕ್ಕೂ ಬಾಧೆಯಾಗದಂತೆ ಎಚ್ಚರವಹಿಸಿ ಸಾಹಿತ್ಯ ಸೇವೆಗೈದ ಸಿದ್ಧಯ್ಯನವರ ವ್ಯಕ್ತಿತ್ವದ ಹಲವಾರು ಮುಖಗಳನ್ನು ಕೆಲವೊಂದು ನೈಜ ಘಟನೆಗಳೊಂದಿಗೆ ಆಪ್ತವಾಗಿ ಚಿತ್ರಿಸಿರುವ ಅಲ್ಮಾಸ್ ಅವರ ಇಲ್ಲಿಯ ಬರವಣಿಗೆ ಉನ್ನತ ಮಟ್ಟದ್ದಾಗಿದೆ.

ಕರ್ನಾಟಕ ಶ್ರೇಷ್ಠ ಕಲಾವಿದರಲ್ಲಿ ಒಬ್ಬರೆನಿಸಿದ ಕಲಬುರ್ಗಿಯ ಆಳಂದಕರ್ ಶಂಕರರಾಯರು ಜೀವನದುದ್ದಕ್ಕೂ ನಿರಾಶೆ, ಬಡತನ, ಕಷ್ಟ, ಕಾರ್ಪಣ್ಯಗಳ ಮೂಸೆಯಲ್ಲಿ ಬೆಂದು ಹೇಗೆ ಅಪರಂಜಿಯಂತಾಗಿದ್ದರೆಂಬುದನ್ನು ಅವರ ಸಂದರ್ಶನವನ್ನು ಒಳಗೊಂಡ ಈ ಲೇಖನ ಕಣ್ಣಿಗೆ ಕಟ್ಟುವಂತಿದೆ, ಮನಸ್ಸಿಗೆ ನಾಟುವಂತಿದೆ. ಕವಿವರ ಬೇಂದ್ರೆಯವರನ್ನು ಅವರು ತಮ್ಮ ಗುರುವಾಗಿ ಸ್ವೀಕರಿಸಿದ ಘಟನೆ ಸ್ಮರಣೀಯವಾಗಿದೆ. ಇಂಥ ಕಲಾವಿದ ಆತ್ಮತೃಪ್ತಿಗಾಗಿ ಚಿತ್ರಗಳನ್ನು ರಚಿಸಿದಂತೆ ಹಣದ ಸಹಾಯಕ್ಕಾಗಿಯೂ ಚಿತ್ರಗಳನ್ನು ರಚಿಸಬೇಕಾಗಿ ಬಂದುದನ್ನು ಲೇಖಕರು ಎತ್ತಿ ತೋರಿಸಿದ್ದಾರೆ. ಹಳೆಯ ಸಂಪ್ರದಾಯದ ಶೈಲಿಯಲ್ಲಿ ಶಂಕರರಾಯರು ಕೃತಿಗಳನ್ನು ನಿರ್ಮಿಸಿದ್ದರೂ ಯಾವುದೊಂದು ಗುಂಪಿಗೆ ಸೇರದೆ ಕವಿಹೃದಯದ, ಧಾರ್ಮಿಕ ಪ್ರವೃತ್ತಿಯ ಹಾಗೂ ರಾಷ್ಟ್ರ ಪ್ರೇಮದ ಪ್ರತೀಕವಾಗಿದ್ದ ಚಿತ್ರ ಮನ ಮುಟ್ಟುವಂತೆ ಅಭಿವ್ಯಕ್ತಿ ಪಡೆದಿದೆ.

ಸಾವಿರದ ಹಾಡುಗಳ ಸರದಾರ ಎನಿಸಿದ ಬಾಳಪ್ಪ ಹುಕ್ಕೇರಿಯವರ ವ್ಯಕ್ತಿ ಚಿತ್ರಣದಲ್ಲಿ ಅವರ ಸರಳವಾದ ಗುಣಸ್ವಭಾವವನ್ನೂ ಕುಂಠಸಿರಿಯನ್ನೂ, ಜಾನಪದ ರೀತಿಯ ಹಾವಭಾವಗಳನ್ನೂ ಸಮಗ್ರವಾಗಿ ಸೆರೆಹಿಡಿಯಲಾಗಿದೆ. ಕನ್ನಡ ಕವಿಗಳ, ಶರಣರ, ದಾಸರ ಹಾಡುಗಳನ್ನು ಮತ್ತು ಜನಪದ ಗೀತೆಗಳನ್ನು ಉತ್ಸಾಹಪೂರ್ಣವಾಗಿ ತನ್ಮಯತೆಯಿಂದ ಹೊರ ಹೊಮ್ಮಿಸುವ ಅವರ ಹಾಡಿನ ಮೋಡಿ ಹೇಗೆ ಭಾಷೆಯ ಗಡಿ ಮೀರಿ ಸಹೃದಯರನ್ನು ಸೆಳೆದುಕೊಳ್ಳುತ್ತಿತ್ತೆಂಬುದು ತುಂಬ ಚೇತೋಹಾರಿಯಾಗಿ ಬಂದಿದೆ. ಬಾಳಪ್ಪ ಸರಕಾರಿ ಪ್ರಚಾರಕರಾಗಿ ಉಳಿಯದೆ ಕನ್ನಡದ ಪರಿಚಾರಕರಾದದ್ದು ಕನ್ನಡದ ಪುಣ್ಯವೆಂಬ ಲೇಖಕರ ಮಾತು ಸಮಂಜಸವಾಗಿದೆ.

ತಮ್ಮ ಸಾಧನೆಯಿಂದ ತುಂಬ ಭರವಸೆ ಹುಟ್ಟಿಸಿರುವ ಛಾಯಾಚಿತ್ರಕಾರ ಎಂ. ಜನಾರ್ಧನನ್ ಅವರ ಸಂದರ್ಶನ ಅನೌಪಚಾರಿಕವಾಗಿದ್ದು ಅವರ ವಿನಯ, ಸ್ನೇಹಪರತೆ ಹಾಗೂ ನಿರಹಂಕಾರ ಪ್ರವೃತ್ತಿಗಳನ್ನು ಓದುಗರ ಗಮನಕ್ಕೆ ತಂದುಕೊಡಲಾಗಿದೆ. ಇನ್ನೋರ್ವ ಪ್ರಖ್ಯಾತ ಛಾಯಾಗ್ರಾಹಕ ಇ. ಹನುಮಂತರಾವ್ ವನ್ಯಜೀವಿಗಳ ಛಾಯಾಚಿತ್ರಕಲೆಯಲ್ಲಿ ಹೇಗೆ ಅದ್ವಿತೀಯರಾಗಿರುವರೆಂಬುದನ್ನು ಹತ್ತಿರದಿಂದ ಕಂಡು ನಿರೂಪಿಸಲಾಗಿದೆ. ಅವರ ಎಲ್ಲ ಚಿತ್ರಗಳಲ್ಲಿ ಸಂಬಂಧಿತ ವನ್ಯಜೀವಿಯ ಚಟುವಟಿಕೆಗಳು ಅದರ ಪರಿಸರ, ವರ್ಣವೈವಿಧ್ಯ, ಕಲಾತ್ಮಕತೆ ಮತ್ತು ನಿಖರತೆಗಳು ಸ್ಫುಟಗೊಂಡಿರುವುದನ್ನು ಎತ್ತಿ ತೋರಿಸಲಾಗಿದೆ. 'ಭಾರತದ ಮಟ್ಟಿಗೆ ಏಕಮೇವಾದ್ವಿತೀಯ ವೆನ್ನಬಹುದಾದ ಈ ವನ್ಯಜೀವಿ ಛಾಯಾಗ್ರಾಹಕ' ಯುವಕರಿಗೆ ಅವಕಾಶ ಮಾಡಿಕೊಡುವುದಕ್ಕಾಗಿ ತಾವು ಸ್ಪರ್ಧೆಗಳಲ್ಲಿ ಭಾಗವಹಿಸದೆ ಇರುವುದು ನಿಜಕ್ಕೂ ಆದರ್ಶಪ್ರಾಯವಾಗಿದೆ.

ಹುಟ್ಟಿದ್ದು ರೈತ ಕುಟುಂಬದಲ್ಲಿ, ಓದಿದ್ದು ಕೇವಲ ನಾಲ್ಕನೇ ವರ್ಗದವರೆಗೆ, ಸ್ವಂತ ಸಾಧನೆಯ ಬಲದಿಂದ ಉಭಯ ಭಾಷಾ (ಕನ್ನಡ-ತೆಲುಗು) ಕವಿಯಾಗಿ, ಲೇಖಕರಾಗಿ, ಗಮಕಿಯಾಗಿ, ನಟರಾಗಿ ಅಚ್ಚರಿಗೊಳಿಸುವಷ್ಟು ಖ್ಯಾತಿ ಪಡೆದಿರುವ ಡಾ।। ಜೋಳದರಾಶಿ ದೊಡ್ಡನಗೌಡರ ಸಂದರ್ಶನ ಆಯಾ ಕ್ಷೇತ್ರಗಳಲ್ಲಿ ನಡೆಸಿದ ಅವರ ಸಾಧನೆಯ ಬಗ್ಗೆ ಅನೇಕ ಮೌಲಿಕ ವಿಷಯಗಳನ್ನು ತಿಳಿಯಪಡಿಸುತ್ತದೆ. ಅವರು ದಿವಂಗತರಾದ ಮೇಲೆ ಬರೆದ ಇನ್ನೊಂದು ಲೇಖನ 'ಕಾವ್ಯ ದಾಸೋಹಿ' ಎಂಬ ಸಮುಚಿತವಾದ ಶೀರ್ಷಿಕೆಯೊಂದಿಗೆ ಲೇಖಕರು ಅರ್ಪಿಸಿದ ನುಡಿಗಾಣಿಕೆಯಾಗಿದೆ.

ಕರ್ನಾಟಕದ ಗಾಂಧಿ ಎಂದೇ ಹೆಸರಾಗಿದ್ದ ಹರ್ಡೇಕರ ಮಂಜಪ್ಪನವರನ್ನು ಕುರಿತ ಲೇಖನದಲ್ಲಿ ಹರಿಹರದ ಅವರ ಸತ್ಯಾಗ್ರಹ ಆಶ್ರಮ, ಆಲಮಟ್ಟಿಯ ಆಶ್ರಮ, ಅಲ್ಲಿ ನೀಡುತ್ತಿದ್ದ ನೈತಿಕ ಶಿಕ್ಷಣದ ಪರಿಚಯದೊಂದಿಗೆ ಅವರೊಬ್ಬ ಸಾಹಿತಿಯಾಗಿ, ಪತ್ರಿಕಾಕರ್ತರಾಗಿ, ವಾಗ್ಮಿಯಾಗಿ ನಾಡಿಗೆ ಸಲ್ಲಿಸಿದ ಬಹುಮುಖ ಸೇವೆಯ ಮಹತ್ವವನ್ನು ಪ್ರಸ್ತುತ ಲೇಖನ ಸಮೃದ್ಧವಾಗಿ ಒಳಗೊಂಡಿದೆ. ಆಲಮಟ್ಟಿ ಆಶ್ರಮದಲ್ಲಿರುವ ಈ ಮಹಾವ್ಯಕ್ತಿಯ ಸಮಾಧಿಯ ಸದ್ಯದ ಶೋಚನೀಯ ಸ್ಥಿತಿಯ ಬಗ್ಗೆ ಸರಕಾರದ ಹಾಗೂ ಸಾರ್ವಜನಿಕರ ಗಮನ ಸೆಳೆಯುವ ಟಿಪ್ಪಣಿಯೊಂದನ್ನು ಲೇಖಕರು ಇಲ್ಲಿ ಸೇರಿಸಿರುವುದು ಅತ್ಯಂತ ಸಮಯೋಚಿತವಾಗಿದೆ.

ಹೆಸರಿನ ಮೂಲಕವಷ್ಟೇ ಅಲ್ಲ, ಪ್ರತಿಭಾ ಸಂಪನ್ನತೆಯಿಂದಲೂ ಸರ್.ಎಂ.ವಿಶ್ವೇಶ್ವರಯ್ಯನವರನ್ನು ನೆನಪಿಗೆ ತರುವ, ದೆಹಲಿಯ ಭಾರತೀಯ ಸಿಮೆಂಟ್ ಸಂಶೋಧನ ಸಂಸ್ಥೆಯ ಸ್ಥಾಪಕ ನಿರ್ದೇಶಕರೂ ಕನ್ನಡಿಗರೂ ಆದ ಡಾ|| ಎಚ್. ಸಿ. ವಿಶ್ವೇಶ್ವರಯ್ಯನವರ ವ್ಯಕ್ತಿ ಚಿತ್ರ ಈ ಸಂಕಲನದ ವ್ಯಕ್ತಿ ಚಿತ್ರಗಳ ವೈವಿಧ್ಯಕ್ಕೆ ಒಂದು ಉತ್ತಮ ನಿದರ್ಶನದಂತಿದೆ. ತಮ್ಮ ಸಂಶೋಧನ ಸಾಮರ್ಥ್ಯದೊಂದಿಗೆ ಅವರು ರೂಪಿಸಿದ ಅಣೆಕಟ್ಟುಗಳಿಗೆ ಸಂಬಂಧಿಸಿದ ಮಾನಕಗಳ ಸೃಷ್ಟಿಯು ಜಗತ್ತಿನಲ್ಲಿಯೇ ಅಪರೂಪದ ಸಾಧನೆ ಎನ್ನುವ ಚಂದ್ರಶೇಖರ ಅವರು ತಾವು ಅವರೊಡನೆ ನಡೆಸಿದ ಸಂದರ್ಶನದ ಆಯ್ದ ಭಾಗಗಳಿಂದ ಸಿಮೆಂಟ್ ಉದ್ಯಮದ ಬಗ್ಗೆ ಅನೇಕ ಮಹತ್ವದ ಅಂಶಗಳನ್ನು ಇಲ್ಲಿ ದಾಖಲಿಸಿದ್ದಾರೆ.

ವಿವಿಧ ಕ್ಷೇತ್ರಗಳಲ್ಲಿಯ ತಮ್ಮ ಉತ್ಕೃಷ್ಟ ಸಾಧನೆಯಿಂದ ನಾಡಿನ ಸಾಂಸ್ಕೃತಿಕ ಜೀವನವನ್ನು ಸಮೃದ್ಧಗೊಳಿಸಿ ಆದರ್ಶಪ್ರಾಯರಾಗಿರುವ ಒಂಬತ್ತು ಪ್ರತಿಭಾವಂತ ವ್ಯಕ್ತಿಗಳನ್ನು ಕುರಿತ ಈ ಲೇಖನಗಳು ಆಯಾ ವ್ಯಕ್ತಿಗಳ ಜೀವನದ ಉಪಯುಕ್ತ ವಿವರಣೆಗಳೊಂದಿಗೆ ಒಳ್ಳೆಯ ವ್ಯಕ್ತಿ ಚಿತ್ರಗಳಾಗಿಯೂ ಪರಿಣಮಿಸಿವೆ. ಆಯಾ ವಿಷಯಗಳಲ್ಲಿ ಸ್ವತಃ ಚಂದ್ರಶೇಖರರಿಗಿರುವ ಅಪಾರ ಆಸಕ್ತಿಯಿಂದಾಗಿ ಈ ಚಿತ್ರಗಳು ಆಪ್ತತೆಯನ್ನು ಪಡೆದು ಹೃದಯಂಗಮವಾಗಿವೆ. ಕಳೆದ ಇಪ್ಪತ್ತೈದು ವರ್ಷಗಳಲ್ಲಿ ಕಾಲೋಚಿತವಾಗಿ ಇವು ಪತ್ರಿಕೆಗಳಲ್ಲಿ ಪ್ರಕಟಗೊಂಡಿದ್ದರೂ ಈಗ ಸಂಗ್ರಹ ರೂಪದಲ್ಲಿಯೂ ಇವು ತಮ್ಮ ತಾಜಾತನವನ್ನು ಉಳಿಸಿಕೊಂಡಿರುವುದು ಲೇಖಕರ ಆತ್ಮೀಯ ಶೈಲಿಗೆ ಒಂದು ಉತ್ತಮ ನಿದರ್ಶನವೂ ಹೌದು.

ಅನೇಕ ವರ್ಷಗಳಿಂದ ಲೇಖನ ವ್ಯವಸಾಯದಲ್ಲಿ ತೊಡಗಿದ್ದರೂ ಇದೀಗ ಪ್ರಥಮವಾಗಿ ಪುಸ್ತಕವನ್ನು ಹೊರತರಲು ಮನಸ್ಸು ಮಾಡಿರುವ ಲೇಖಕರ ಸಂಯಮ ಮೆಚ್ಚತಕ್ಕುದ್ದು. ಇತಿಹಾಸ, ಕಲೆ, ಸಾಹಿತ್ಯ, ಸಂಶೋಧನೆಗೆ ಸಂಬಂಧಪಟ್ಟ ಅವರ ಇನ್ನುಳಿದ ಹಲವಾರು ಮಹತ್ವದ ಲೇಖನಗಳು ಬೇಗ ಪುಸ್ತಕ ರೂಪದಲ್ಲಿ ಪ್ರಕಟವಾದರೆ ಆಯಾ ಕ್ಷೇತ್ರದಲ್ಲಿ ಕೆಲಸ ಮಾಡುವವರಿಗೆ ಉಪಕಾರವೆನಿಸುವುದರಲ್ಲಿ ಸಂದೇಹವಿಲ್ಲ.

ಈ ವರ್ಷದ ದೀಪಾವಳಿಯ ಸಂದರ್ಭದಲ್ಲಿ ನವ 'ಹಣತೆಗಳ'ನ್ನು ಹಚ್ಚಿ ಪ್ರಶಾಂತವಾದ ಬೆಳಕನ್ನು ಓದುಗರಿಗೆ ನೀಡಿರುವ ಡಾ.ಎಚ್. ಚಂದ್ರಶೇಖರ ಅವರ ಬರವಣಿಗೆ ಕನ್ನಡ ತಾಯಿಯ ದೇಗುಲದಲ್ಲಿ ದೀಪಮಾಲೆಯ ಕಂಬವನ್ನೇ ಬೆಳಗುವಂತಾಗಲಿ ಎಂದು ಹೃದಯ ತುಂಬಿ ಹಾರೈಸಿ, ಶುಭ ಕೋರುತ್ತೇನೆ.

(೧೯೯೭)
('ಸದ್ಭಾವ' ೨೦೦೮)

೮೯

## ಬಸವರಾಜ ಕಟ್ಟೀಮನಿಯವರ ಕಾದಂಬರಿಗಳು

ಶತಮಾನದ ಕನ್ನಡ ಸಾಹಿತ್ಯದ ಪುನರವಲೋಕನ ನಡೆಯುತ್ತಿರುವ ಇಂದಿನ ಸಾಹಿತ್ಯಕ ಸನ್ನಿವೇಶದಲ್ಲಿ ಡಾ.ಬಸವರಾಜ ಸಾದರ ಅವರ ಆಳವಾದ ಹಾಗೂ ವ್ಯಾಪಕವಾದ ಅಧ್ಯಯನವನ್ನೊಳಗೊಂಡ 'ಬಸವರಾಜ ಕಟ್ಟೀಮನಿಯವರ ಕಾದಂಬರಿಗಳು' ಪ್ರಕಟಗೊಳ್ಳುತ್ತಿರುವುದು ಸಂದರ್ಭೋಚಿತವೂ ಅರ್ಥಪೂರ್ಣವೂ ಆಗಿದೆ. ಒಂದು ಭಾಷೆಯ ಸಾಹಿತ್ಯ ಚರಿತ್ರೆ ಮುಖ್ಯವಾಗಿ ಆ ಭಾಷೆಯ ಮಹತ್ವದ ಲೇಖಕರ ಅಥವಾ ಕೃತಿಗಳ ಅಧ್ಯಯನವೇ ಆಗಿದೆ. ಈ ದಿಸೆಯಲ್ಲಿ ಆಧುನಿಕ ಕನ್ನಡ ಸಾಹಿತ್ಯದ ಅಂಥ ಕೆಲವು ಲೇಖಕರ ಜೀವನ ಹಾಗೂ ಕೃತಿಗಳನ್ನು ಕುರಿತು ಪ್ರೌಢ ಪ್ರಬಂಧಗಳು ಈಚೆಗೆ ಕನ್ನಡದಲ್ಲಿ ಬಂದಿರುವುದು ಲಕ್ಷಿಸತಕ್ಕ ಸಂಗತಿಯಾಗಿದೆ. ಕನ್ನಡ ಕಾದಂಬರಿ ಪ್ರಪಂಚದಲ್ಲಿ ಸಮರ್ಥವಾದ ಸಾಧನೆಗೈದು ಪ್ರಗತಿಶೀಲ ಸಾಹಿತ್ಯ ಸಂದರ್ಭಕ್ಕೆ ತಮ್ಮದೇ ಆದ ರೀತಿಯಲ್ಲಿ ಅರ್ಥಪೂರ್ಣತೆಯನ್ನು ತಂದುಕೊಟ್ಟದ್ದಲ್ಲದೆ, ಅದರ ಸೀಮಿತ ಚೌಕಟ್ಟನ್ನು ಮೀರಿ ಕಟ್ಟೀಮನಿಯವರ ಬರವಣಿಗೆ ಬೆಳೆದು ಬಂದ ಬಗೆಯನ್ನು ವಿವೇಚಿಸುವ ಪ್ರಸ್ತುತ ಕೃತಿ,ಕನ್ನಡ ವಿಮರ್ಶೆ ನಿರ್ಲಕ್ಷಿಸಿದ ಕೆಲವು ಒಳನೋಟಗಳಿಂದ ಹೆಚ್ಚು ಮಹತ್ವದ್ದಾಗಿ ತೋರುತ್ತದೆ.

ಮಹತ್ವದ ಸಾಹಿತಿಯೊಬ್ಬನ ಕೃತಿಗಳ ಹಿಂದೆ ಒಂದು ವ್ಯಕ್ತಿತ್ವವಿರುತ್ತದೆ. ಆ ವ್ಯಕ್ತಿತ್ವ ಪರಿಸರದಿಂದ ನಿರ್ಮಾಣಗೊಳ್ಳುತ್ತದೆ. ಅವೆರಡನ್ನೂ ಸರಿಯಾಗಿ ತಿಳಿದುಕೊಂಡು ಅವನ ಕೃತಿಗಳ ಪರಿಶೀಲನೆಗೆ ತೊಡಗುವುದರಿಂದ ಅವುಗಳನ್ನು ಅರ್ಥವಿಸಲು ಹಾಗೂ ಅವುಗಳ ನೆಲೆ-ಬೆಲೆಗಳನ್ನು ಗುರುತಿಸಲು ಹೆಚ್ಚು ಅನುಕೂಲವಾಗುತ್ತದೆ. ಕಟ್ಟೀಮನಿಯವರ ಸಾಹಿತ್ಯ ಸಾಧನೆಗೆ ಬಹುಮುಖ್ಯ ಪ್ರೇರಣೆಯಾದ ಅವರ ಬದುಕಿನ ಸಂಕ್ಷಿಪ್ತ ಅವಲೋಕನದಲ್ಲಿ ಲೇಖಕರು ಅದನ್ನು ಕಾಳಜಿಪೂರ್ವಕ ಒದಗಿಸಿದ್ದಾರೆ. ಹಳ್ಳಿಯ ಜೀವನ, ಬಡತನದ ಬಾಳು, ತಾಯ ಮಮತೆ, ಬಾಲ್ಯದಿಂದಲೆ ಓದುವ ಚಟ, ದೇಶವಿದೇಶಗಳ ಸಾಹಿತಿಗಳ ಪ್ರಭಾವ,ಪ್ರತಿಕೂಲ ಪರಿಸ್ಥಿತಿಯೊಡನೆ ಹೋರಾಡಿ ಮುನ್ನುಗ್ಗಿದ ನಿರ್ಭಿಡೆಯ ಸ್ವಭಾವ, ಅನ್ಯಾಯ-ಶೋಷಣೆಗಳೆದುರು ಸಿಡಿದು ನಿಲ್ಲುವ ಮನೋಧರ್ಮ, ದೀನ-ದಲಿತರ, ರೈತ ಕಾರ್ಮಿಕರ ಬಗ್ಗೆ ಅನುಕಂಪ, ಸ್ವಾತಂತ್ರ್ಯ ಚಳುವಳಿಯಲ್ಲಿ ಜೈಲುವಾಸ, ಸಮಾಜವಾದದ ಒಲವು-ಇವೆಲ್ಲವೂ ಕಟ್ಟೀಮನಿಯವರ ವ್ಯಕ್ತಿತ್ವ ರೂಪುಗೊಳ್ಳಲು ಕಾರಣವಾಗಿರುವುದನ್ನು ಗುರುತಿಸಿ, ಶಾಲೆಯಲ್ಲಿ ಕಲಿತದ್ದಕ್ಕಿಂತ ಅವರು

ವಿಶಾಲವಾದ ಜಗತ್ತಿನಲ್ಲಿ ಜೀವನದುದ್ದಕ್ಕೂ ಅನುಭವಿಸಿ ಕಲಿತದ್ದೇ ಹೆಚ್ಚು ಎಂಬುದಕ್ಕೆ ನಿದರ್ಶನಗಳನ್ನು ನೀಡಲಾಗಿದೆ.

ಕನ್ನಡದಲ್ಲಿ ಪ್ರಗತಿಶೀಲ ಸಾಹಿತ್ಯದ ಆಂದೋಲನ ಅಲ್ಪಾವಧಿಯದಾಗಿದ್ದರೂ ಅದೊಂದು ಪ್ರಭಾವಶಾಲಿ ಘಟ್ಟವಾಗಿದ್ದು, ಕಟ್ಟೀಮನಿಯವರು ಆ ಸಾಹಿತ್ಯ ಸಂದರ್ಭದ ಪ್ರಮುಖ ಲೇಖಕರೆಂದು ಹೆಸರಾಗಿರುವುದರಿಂದ ಪ್ರಬಂಧದ ಮೂರನೆಯ ಅಧ್ಯಾಯದಲ್ಲಿ ಪ್ರಗತಿಶೀಲ ಚಳುವಳಿಯ ಸ್ವರೂಪವನ್ನು ವಿಮರ್ಶಾತ್ಮಕವಾಗಿ ವಿವೇಚಿಸಲಾಗಿದೆ. ಕನ್ನಡದ ನವೋದಯ ಮತ್ತು ನವ್ಯ ಸಾಹಿತ್ಯಗಳೆರಡರ ಮಧ್ಯೆ ೧೯೪೦-೪೩ ರಿಂದ ೧೯೫೦ರವರೆಗೆ ಸ್ಥೂಲವಾಗಿ ಅದರ ಅವಧಿಯನ್ನು ಗುರುತಿಸಿ, ಸಾಹಿತ್ಯದಲ್ಲಿ ವಾಸ್ತವತೆ, ಯಥಾರ್ಥತೆ, ಶೀಲಾಶ್ಲೀಲದ ಮಡಿ ಮೈಲಿಗೆ ತೊಡೆದು ಬರೆಯುವ ಪ್ರವೃತ್ತಿ ಮೊದಲಾದ ಅದರ ಲಕ್ಷಣಗಳನ್ನು ಎತ್ತಿ ತೋರಿಸಲಾಗಿದೆ. ಪ್ರಗತಿಶೀಲ ಸಾಹಿತ್ಯ ಕನ್ನಡದಲ್ಲಿ ರೂಪಗೊಂಡರೂ ಬಹುಕಾಲ ಆ ಮಾದರಿಯ ಸಾಹಿತ್ಯ ಸೃಷ್ಟಿಗೆ ಅನುಕೂಲಕರವಾದ ಸೈದ್ಧಾಂತಿಕ ತತ್ವಗಳು ಅದಕ್ಕಿರಲಿಲ್ಲವಾದುದರಿಂದ ಅದರ ಸ್ವರೂಪ, ಉದ್ದೇಶಗಳನ್ನು ನಿರೂಪಿಸುವಲ್ಲಿ ಪ್ರಬಂಧಕಾರರ ಶ್ರಮ ಸಾರ್ಥಕವಾಗಿದೆ. ಆ ಸಾಹಿತ್ಯದ ಸರಿಯಾದ ಮೌಲ್ಯಮಾಪನವಾಗದಿರುವ ಸಂದರ್ಭದಲ್ಲಿ ಪ್ರಗತಿಶೀಲರ ಮುಖ್ಯ ಕೊಡುಗೆಗಳನ್ನು ಕ್ರೋಡೀಕರಿಸಿಕೊಟ್ಟಿರುವುದು ಓದುಗರ ದೃಷ್ಟಿಯಿಂದ ತುಂಬ ಉಪಯುಕ್ತವಾಗಿದೆ. ಕಟ್ಟೀಮನಿಯವರ ಮೇಲೆ ಪ್ರಭಾವ ಬೀರಿದ್ದು ಬರೀ ಸಾಮ್ಯವಾದಿ ಹಿನ್ನೆಲೆಯ ಪ್ರಗತಿಶೀಲ ಚಳುವಳಿಯಲ್ಲ; ಭಾರತೀಯ ಸಮಾಜದ ಸಮಸ್ಯೆಗಳ ಹಿನ್ನೆಲೆಯಲ್ಲಿ ಬದಲಾವಣೆ ಕಂಡ ಸಮಾಜವಾದಿ ಪ್ರಗತಿಶೀಲ ಚಳುವಳಿ, ಎಂಬ ಲೇಖಕರ ನಿಲುವು ಸಮಂಜಸವಾಗಿದೆ.

ಈ ಸಮಾಜವಾದಿ ಪ್ರಗತಿಶೀಲ ಲೇಖಕನ, ವಸ್ತು ವೈವಿಧ್ಯದಿಂದ ಕೂಡಿದ ನಲವತ್ತು ಕಾದಂಬರಿಗಳ ಆಮೂಲಾಗ್ರ ಪರಿಶೀಲನೆಯನ್ನೊಳಗೊಂಡ ಮುಂದಿನ ಆರು ಅಧ್ಯಾಯಗಳು ಈ ಕೃತಿಯ ಹೃದಯದಂತಿದ್ದು, ಅವುಗಳ ವಿಸ್ತಾರ ಎರಡುನೂರು ಪುಟಗಳಿಗೂ ಮೀರಿದುದು ಸಹಜವೇ ಆಗಿದೆ. ಕಾದಂಬರಿಗಳ ವರ್ಗೀಕರಣ ಒಂದು ಜಟಿಲ ಸಮಸ್ಯೆಯಾಗಿದ್ದರೂ ಅವು ಒಳಗೊಂಡಿರುವ ವಸ್ತು ಅಥವಾ ಕಥೆಯನ್ನು ಹಿನ್ನೆಲೆಯಾಗಿಟ್ಟುಕೊಂಡು ಅಭ್ಯಾಸದ ಅನುಕೂಲತೆಗಾಗಿ ಅವುಗಳನ್ನು ೧) ರಾಷ್ಟ್ರೀಯತೆ ೨) ಕಾರ್ಮಿಕ ಹೋರಾಟ ೩) ಸಾಮಾಜಿಕ ೪)ರಾಜಕೀಯ ಹಾಗೂ ೫) ಐತಿಹಾಸಿಕ ಎಂದು ವರ್ಗೀಕರಿಸಿಕೊಳ್ಳಲಾಗಿದೆ. ಅವರ ಒಟ್ಟು ಕಾದಂಬರಿಗಳಲ್ಲಿ ಮುಕ್ಕಾಲು ಪಾಲು ಸಾಮಾಜಿಕವಾಗಿದ್ದು ವಿವಿಧ ಬಗೆಯ ಸಾಮಾಜಿಕ ಸಮಸ್ಯೆಗಳ ಮೇಲೆ ಬೆಳಕು ಚೆಲ್ಲುತ್ತವೆ. ಪ್ರತಿಯೊಂದು ಕಾದಂಬರಿಯ ಕಥಾ ವಸ್ತುವನ್ನು ಸಂಗ್ರಹವಾಗಿ ಕೊಟ್ಟು, ಪಾತ್ರ ಚಿತ್ರಣವನ್ನು ವಿವರಿಸಿ, ಗುಣದೋಷಗಳೊಂದಿಗೆ ಅವುಗಳನ್ನು ವಿವರಿಸುವಲ್ಲಿ ಲೇಖಕರ ವಿಮರ್ಶನ ಪ್ರಜ್ಞೆ ಉದ್ದಕ್ಕೂ ತನ್ನ ಸಮತೋಲನವನ್ನು ಕಾಯ್ದುಕೊಂಡಿರುವುದು ಗಮನಾರ್ಹವಾಗಿದೆ. ಸಾಹಿತ್ಯಿಕವಾಗಿ ಅವುಗಳ ಸೋಲು-ಗೆಲುವುಗಳನ್ನು ಅಲ್ಲಲ್ಲಿಯೇ ಸೂಚಿಸುತ್ತ ಬಂದಿರುವುದರಿಂದ ಬರವಣಿಗೆ ಪುನರುಕ್ತಿಯಿಂದ ಮುಕ್ತವಾಗಿದೆ.

ರಾಷ್ಟ್ರೀಯತೆಯ ಪರಿಕಲ್ಪನೆಯನ್ನು ಸಾಕಾರಗೊಳಿಸಿದ 'ಮಾಡಿ ಮಡಿದವರು' ಕೃತಿ ಅಸದೃಶ ಪಾತ್ರ ಚಿತ್ರಣದಿಂದ ಮತ್ತು ಸಮರ್ಪಕವಾದ ಸನ್ನಿವೇಶಗಳ ನಿರ್ಮಾಣದಿಂದ ಹೇಗೆ ಉತ್ತಮ ಸಾಹಿತ್ಯಕೃತಿಯಾಗಿದೆಯೆಂಬುದನ್ನು ತೋರಿಸಿದಂತೆಯೇ, ಕಾರ್ಮಿಕ ಹೋರಾಟದ ಚಿತ್ರಣವುಳ್ಳ ಮಹತ್ವದ ಪ್ರಗತಿಶೀಲ ಕಾದಂಬರಿ 'ಜ್ವಾಲಾಮುಖಿಯ ಮೇಲೆ' ವಾಸ್ತವತೆ,ಕಲ್ಪನೆ, ಆದರ್ಶಗಳ ಸಮನ್ವಯವನ್ನೂ, ಸ್ವಾನುಭವದ ಪರಿಪಾಕವನ್ನೂ ಏಕಕಾಲಕ್ಕೆ ಕಟ್ಟಿಕೊಡುವುದನ್ನು ವಿವರಿಸುವಲ್ಲಿಯೂ ಲೇಖಕರ ಸಂಯಮ ಮೆಚ್ಚುವಂತಿದೆ. ವ್ಯಾಪಕವಾದ ವಸ್ತು ವೈವಿಧ್ಯದಿಂದ ಕೂಡಿದ ಕಟ್ಟೀಮನಿಯವರ ಸಾಮಾಜಿಕ ಕಾದಂಬರಿಗಳ ಮುಖ್ಯ ಧ್ಯೇಯ ಸಮತೆಯುಳ್ಳ ಸಮಾಜ ರಚನೆ ಎಂಬುದನ್ನು ಸರಿಯಾಗಿಯೇ ಗುರುತಿಸಲಾಗಿದೆ. 'ಧರ್ಮಡಂಭಕರ ಬಿಂಬ ಚಿತ್ರಿಸುವ ಕಾದಂಬರಿಗಳಲ್ಲಿ ಪ್ರಸಿದ್ಧಿ ಪಡೆದಿರುವ 'ಮೋಹದ ಬಲೆಯಲ್ಲಿ' ಹಾಗೂ 'ಜರತಾರಿ ಜಗದ್ಗುರು' ಕಾದಂಬರಿಗಳನ್ನು ವಿಸ್ತಾರವಾಗಿಯೇ ವಿವೇಚಿಸಲಾಗಿದೆ. ರಂಜನೆಯ ಜೊತೆಗೆ ವಿಚಾರ ಪ್ರಚೋದಕವಾಗಿರುವ 'ಮೋಹದ ಬಲೆಯಲ್ಲಿ' ಕಾದಂಬರಿಯ ವೈಶಿಷ್ಟ್ಯವನ್ನು ಎತ್ತಿ ತೋರಿಸುತ್ತಲೇ ಕ್ರಿಯಾಪ್ರಧಾನವಾದ ಈ ಕೃತಿಯ ಬಹುತೇಕ ಪಾತ್ರಗಳಲ್ಲಿ ಜೀವನ ಶೋಧನೆಯ ಕೊರತೆಯಿರುವುದನ್ನು ಸೂಚಿಸಲಾಗಿದೆ. ಜಾತಿ ಸಮಸ್ಯೆ ಹಾಗೂ ಅಸ್ಪೃಶ್ಯ ಜನಾಂಗಗಳ ಮೇಲೆ ಬೆಳಕು ಬೀರುವ ಕಾದಂಬರಿಗಳ ಗುಂಪಿನಲ್ಲಿ 'ಜನಿವಾರ ಮತ್ತು ಶಿವದಾರ' ಉತ್ತಮ ವರ್ಗದ ಜಾತಿಗಳಲ್ಲಿಯ ವೈಷಮ್ಯವನ್ನೂ, 'ನೀ ನನ್ನ ಮುಟ್ಟಬೇಡ' ಉಚ್ಚವರ್ಣದವರಿಂದ ನಡೆಯುವ ಶೋಷಣೆ, ಅತ್ಯಾಚಾರ, ಅನಾಚಾರಗಳಿಗೊಳಗಾದ ಅಸ್ಪೃಶ್ಯರ ಜೀವನಚಿತ್ರವನ್ನೂ ಕೊಟ್ಟಿದ್ದರೆ, 'ಹರಿಜನಾಯಣ'ದಲ್ಲಿ ಅಸ್ಪೃಶ್ಯರಲ್ಲಿಯೇ ಇರುವ ಆಂತರಿಕ ತರತಮಗಳನ್ನು ಎತ್ತಿ ತೋರಿಸಲಾಗಿದೆ. ಇವುಗಳಲ್ಲಿ ಮೊದಲನೆಯದು ಅವರ ಉತ್ತಮ ಕಾದಂಬರಿಗಳಲ್ಲಿ ಒಂದಾಗಿರುವುದಕ್ಕೂ, ಎರಡನೆಯದು ನಿಜವಾದ ಪ್ರಗತಿಶೀಲ ಕಾದಂಬರಿ ಎನಿಸಿರುವುದಕ್ಕೂ ನೀಡಿರುವ ಕಾರಣಗಳು ಸಮಂಜಸವಾಗಿದೆ. ವೇಶ್ಯಾ ಸಮಸ್ಯೆಯ ಚಿತ್ರಣವನ್ನೊಳಗೊಂಡಿರುವ 'ಬೀದಿಯಲ್ಲಿ ಬಿದ್ದವಳು' ಹಾಗೂ 'ಪಾತರಗಿತ್ತಿ' ಕಾದಂಬರಿಗಳಲ್ಲಿ ಈ ಸಮಸ್ಯೆಗೆ ಸಾಮಾಜಿಕ ಇಲ್ಲವೆ ಬಾಹ್ಯ ಕಾರಣಗಳಂತೆಯೇ ವೈಯಕ್ತಿಕ ದೌರ್ಬಲ್ಯಗಳೂ ಕಾರಣವಾಗಿರುವುದನ್ನು ಸೂಚಿಸಿರುವುದು ಗಮನಾರ್ಹವಾಗಿದೆ. ವೇಶ್ಯಾ ಸಮಸ್ಯೆಯ ಬಗ್ಗೆ ಪ್ರಗತಿಶೀಲರು ತಳೆದ ನಿಲುಮೆಯ ಹಿನ್ನೆಲೆಯಲ್ಲಿ ಈ ಕಾದಂಬರಿಗಳು ಮಹತ್ವದ ಸ್ಥಾನ ಪಡೆದಿರುವುದನ್ನು ಲೇಖಕರು ಮನಗಾಣಿಸಿಕೊಟ್ಟಿದ್ದಾರೆ.

ಕಟ್ಟೀಮನಿಯವರ ಬಹುತೇಕ ಕಾದಂಬರಿಗಳಲ್ಲಿ ಗ್ರಾಮೀಣ ಬದುಕಿನ ಚಿತ್ರಣ ಸಮೃದ್ಧವಾಗಿ, ವೈವಿಧ್ಯಪೂರ್ಣವಾಗಿ ಬಂದಿರುವುದರಿಂದ ಅವರ ಗ್ರಾಮೀಣ ಸಮಾಜದ ಕಾದಂಬರಿಗಳು ಎಂದು ಪ್ರತ್ಯೇಕವಾಗಿ ವಿವೇಚಿಸಿರುವುದು ಯೋಗ್ಯವೇ ಆಗಿದೆ. ಅವುಗಳಲ್ಲಿ ಪ್ರಮುಖವಾದ 'ಮಣ್ಣು ಮತ್ತು ಹೆಣ್ಣು' ಹಾಗೂ 'ಹೆಂಡತಿ' ಕಾದಂಬರಿಗಳಲ್ಲಿ ವಸ್ತುವಿನ ಮೇಲೆ ಲೇಖಕರಿಗಿರುವ ಸಂಪೂರ್ಣ ಹಿಡಿತ ಹಾಗೂ ಸಾಹಿತ್ಯ ನಿರ್ಮಾಣ ಶಕ್ತಿಯ ವಿಶ್ಲೇಷಣೆಯ ಜೊತೆಗೆ ಅವರ ಸಾಧಾರಣೀಕೃತ ಮನೋಭಾವ ಹಾಗೂ ಜನಪದ ಸತ್ವವನ್ನು ಹೀರಿಕೊಂಡ ಬೆಳವಣಿಗೆಯನ್ನು

ಮುಖ್ಯ ಅಂಶಗಳಾಗಿ ಸೂಚಿಸಲಾಗಿದೆ. ಕನ್ನಡದಲ್ಲಿ ಪೊಲೀಸರ ಜೀವನವನ್ನು ಮೊಟ್ಟ ಮೊದಲು ಸಮಗ್ರವಾಗಿ ಅಷ್ಟೇ ಸ್ವಾರಸ್ಯಕರವಾಗಿ ಕೊಟ್ಟವರು ಕಟ್ಟೀಮನಿಯವರು. 'ನಾನೂ ಪೊಲೀಸನಾಗಿದ್ದೆ' ಹಾಗೂ 'ಬಂಗಾರದ ಜಿಂಕೆಯ ಹಿಂದೆ' ಕಾದಂಬರಿಗಳು ಪೊಲೀಸರನ್ನು ಮಾನವೀಯ ದೃಷ್ಟಿಯಿಂದ ಕಾಣುವ ಪ್ರೇರಣೆ ನೀಡುತ್ತವೆಂಬ ಅನಿಸಿಕೆಯನ್ನು ಪ್ರಬಂಧಕಾರರು ವ್ಯಕ್ತಪಡಿಸಿದ್ದಾರೆ. ವಸ್ತುವಿನ ನಾವೀನ್ಯತೆಯಿಂದ ಇವು ಅಪೂರ್ವವಾಗಿದ್ದರೂ ಕೆಲಮಟ್ಟಿಗೆ ವರದಿ ರೀತಿಯ ಶೈಲಿಯಿಂದ ಬಂಧ ಶಿಥಿಲಗೊಂಡಿರುವುದನ್ನು ಎತ್ತಿ ತೋರಿಸಲು ಲೇಖಕರು ಮರೆತಿಲ್ಲ. 'ಇತರ ಸಾಮಾಜಿಕ ಕಾದಂಬರಿಗಳು' ಗುಂಪಿನಲ್ಲಿ ಸಮಾಜದ ವ್ಯಕ್ತಿ-ವ್ಯಕ್ತಿಗಳಲ್ಲಿನ ಇತರ ಸಾಮಾಜಿಕ ಸಂಬಂಧಗಳನ್ನು ಕುರಿತಾಗಿ ರಚಿಸಿದ ಕಾದಂಬರಿಗಳನ್ನು ಸೇರಿಸಲಾಗಿದೆ. ಹಸಿವು, ನಿರುದ್ಯೋಗ ಮೊದಲಾದ ಸಮಸ್ಯೆಗಳ ಮೇಲೆ ಇವು ಬೆಳಕು ಬೀರುವಂಥವು.

ದಲಿತರ ಮತ್ತು ನಿರ್ಲಕ್ಷಿತರ ಬಗ್ಗೆ ಕಟ್ಟೀಮನಿಯವರಿಗಿರುವ ಸಹಾನುಭೂತಿ ಮತ್ತು ಕಳಕಳಿಯಿಂದ 'ಬೆಳಗಿನ ಗಾಳಿ' ಒಂದು ವಿಶಿಷ್ಟ ಕಾದಂಬರಿಯಾಗಿರುವುದನ್ನು ವಿಶ್ಲೇಷಣೆಯ ಮೂಲಕ ತೋರಿಸಲಾಗಿದೆ. ಅನಂತರ ಬಂದಿರುವ ಅವರ ಕೆಲವು ಕಾದಂಬರಿಗಳು ಸ್ವಾತಂತ್ರ್ಯಾನಂತರದ ನಾಡಿನ, ಸಮಾಜದ ಅವನತ, ಅವ್ಯವಸ್ಥಿತ ಹಾಗೂ ವಿಕೃತ ಮುಖಗಳನ್ನು ವಿಡಂಬನೆಯ ಸೂಕ್ಷ್ಮ ಮೊನಚನ್ನು ಅಳವಡಿಸದೇ ಬಿಂಬಿಸುವ ಕೃತಿಗಳೆಂಬ ಅಭಿಪ್ರಾಯವನ್ನು ಲೇಖಕರು ಒಟ್ಟು ನೋಟದಲ್ಲಿ ಕಾಣಿಸಿದ್ದಾರೆ. ಜೊತೆಗೆ ಖಂಡಿತವಾದದ ಮತ್ತು ಕಟುಟೀಕೆಯ ಒಂದು ಪರಂಪರೆಯನ್ನು ಇವು ಕನ್ನಡದಲ್ಲಿ ನಿರ್ಮಿಸಿರುವುದನ್ನು ಇಲ್ಲಿ ಉಲ್ಲೇಖಿಸಲು ಮರೆತಿಲ್ಲ. ಸಮಾಜದ ಕೊಳಕನ್ನು ಬಯಲಿಗೆಳೆದಂತೆಯೇ ಹೆಚ್ಚು ಭ್ರಷ್ಟಗೊಳ್ಳುತ್ತಿರುವ ರಾಜಕೀಯರಂಗವೂ ಕಟ್ಟೀಮನಿಯವರ ನಾಲ್ಕು ಕಾದಂಬರಿಗಳಿಗೆ ವಸ್ತುವಾಗಿದೆ. ಇವುಗಳಲ್ಲಿ ಸುಧಾರಣೆಯ ಪ್ರಯತ್ನ ಕಂಡು ಬಂದರೂ ಕಾದಂಬರಿಕಾರರ 'ನಿರ್ಲಿಪ್ತ ಭಾವದ ಕೊರತೆ'ಯಿಂದ ಹಾಗೂ ಗಂಭೀರ ಸಮಸ್ಯೆಗಳನ್ನು ಸರಳೀಕರಿಸುವುದರಿಂದ ಅವು ಸಾಮಾನ್ಯ ಮಟ್ಟಕ್ಕೆ ಇಳಿದಿವೆ ಎಂಬ ವಿವೇಚನೆ ನಮ್ಮ ಗಮನವನ್ನು ಸೆಳೆಯಬಲ್ಲದು.

ನಾಲ್ಕು ಐತಿಹಾಸಿಕ ಕಾದಂಬರಿಗಳನ್ನು ನೀಡಿರುವ ಕಟ್ಟೀಮನಿಯವರಿಗೆ ಐತಿಹಾಸಿಕ ಕಾದಂಬರಿಯ ರಚನೆ ಹೆಚ್ಚಿನ ಹೊಣೆಗಾರಿಕೆಯದೆಂಬ ಅರಿವಿದೆ. ಐತಿಹಾಸಿಕ ಸತ್ಯಗಳ ಆವರಣದಲ್ಲಿ ಲೇಖಕನ ಕಲ್ಪನೆ ಕೆಲಸ ಮಾಡಬೇಕಾಗುತ್ತದೆ ಎಂದು ಅವರೇ ಹೇಳಿದ್ದುಂಟು. ಕನ್ನಡ ನಾಡಿನ ದೇಶೀಯ ಸಂಸ್ಥಾನಿಕರು ನಡೆಸಿದ ದಂಗೆ, ಹೋರಾಟಗಳೇ ಈ ಕೃತಿಗಳ ವಸ್ತು. ಕಿತ್ತೂರಿನ ಇತಿಹಾಸವನ್ನು ಕುರಿತ ಅವರ ಎರಡು ಕಾದಂಬರಿಗಳಲ್ಲಿ 'ಪೌರುಷ ಪರೀಕ್ಷೆ' ಮಹತ್ವದ ಕೃತಿಯೆನಿಸಲು ಅದರ ರಭಸದ ಏಕಮುಖ ಪ್ರವಾಹ, ಕಾರ್ಯಕಾರಣ ಸಂಬಂಧಗಳ ಬಂಧ, ಬಿಗುವಿನ ಭಾಷೆ ಇವು ಮುಖ್ಯವೆಂದು ಸಮರ್ಪಕವಾಗಿ ಗುರುತಿಸಲಾಗಿದೆ. 'ಸಂಗೊಳ್ಳಿ ರಾಯನಾಯಕ'ದಲ್ಲಿ ರೋಮಾಂಚನಕಾರಿ ವಸ್ತುವನ್ನು ಪರಿಣಾಮಕಾರಿಯಾಗಿ ನಿರ್ವಹಿಸಲಾಗಿದೆ. 'ಗಿರಿಯ ನವಿಲು' ಕೆಲವರು ಭಾವಿಸಿದಂತೆ ಅಕ್ಕನ ದಿವ್ಯ ವ್ಯಕ್ತಿತ್ವಕ್ಕೆ ಕಳಂಕ ಹಚ್ಚುವ ಪ್ರಯತ್ನವಲ್ಲ ಎಂಬುದನ್ನು ಡಾ. ಸಾದರ ಅವರು ಸಾಧಾರವಾಗಿ ತೋರಿಸಿದ್ದಾರೆ.

ಕಟ್ಟೀಮನಿ ಮುಖ್ಯವಾಗಿ ಕಾದಂಬರಿಕಾರರೆಂದು ಹೆಸರಾಗಿದ್ದರೂ ಸಣ್ಣಕತೆಗಾರರಾಗಿ ಸಾಹಿತ್ಯ ಕ್ಷೇತ್ರವನ್ನು ಪ್ರವೇಶಿಸಿ ಅದರಲ್ಲೂ ಕೆಲವು ಉತ್ತಮ ಕೃತಿಗಳನ್ನು ರಚಿಸಿರುವುದನ್ನು 'ಕಾರವಾನ್'ದಿಂದ 'ಕಾಡಿನಹಾಡು'ವರೆಗಿನ ಹನ್ನೊಂದು ಕಥಾ ಸಂಗ್ರಹಗಳ ಸಮೀಕ್ಷೆಯ ಮೂಲಕ ಓದುಗರ ಗಮನಕ್ಕೆ ತಂದುಕೊಟ್ಟಿದ್ದಾರೆ. ಇಲ್ಲಿಯೂ ಅವರು ಕಂಡಿರುವುದು ಕಟ್ಟೀಮನಿಯವರ ಮಾನವೀಯತೆಯ ಆರಾಧನೆ ಹಾಗೂ ಪ್ರಗತಿಪರ ಮನೋಧರ್ಮವನ್ನೆ. 'ಕಾದಂಬರಿಕಾರನ ಕಥೆ' ಕಟ್ಟೀಮನಿಯವರ ಪ್ರಬುದ್ಧ ಆತ್ಮಕಥೆಯೊಂದಿಗೆ ಅವರ ಸಾಹಿತ್ಯ ಸೃಷ್ಟಿಯ ಸಮಗ್ರ ಪರಿಚಯವನ್ನೊದಗಿಸುವುದರಿಂದ ಪ್ರಬಂಧಕಾರರು ಕಾದಂಬರಿಗಳನ್ನು ಅವಲೋಕಿಸುವಾಗ ಈ ಕೃತಿಯ ನೆರವನ್ನು ಸಾಕಷ್ಟು ಪಡೆದುಕೊಂಡಿದ್ದಾರೆ.

'ಕಟ್ಟೀಮನಿಯವರ ಕಾದಂಬರಿಗಳ ಶೈಲಿ'ಯನ್ನು ಕುರಿತು ಲೇಖಕರು ಸಮಗ್ರವಾಗಿ ವಿವೇಚಿಸುವಾಗ ಸಾಹಿತ್ಯದ ಅಭಿವ್ಯಕ್ತಿಯಲ್ಲಿ ಎದ್ದು ಕಾಣುವ ವಿವಿಧ ಪರಿಕರಗಳ ಸೋದಾಹರಣಾತ್ಮಕ ವಿಶ್ಲೇಷಣೆ ಕಂಡು ಬರುತ್ತದೆ. ಒಬ್ಬ ಸಾಹಿತಿಯ ಶೈಲಿಯು ಆತನ ವ್ಯಕ್ತಿತ್ವವನ್ನಷ್ಟೇ ಅಲ್ಲ. ಆತ ಬದುಕಿದ ಸಮಾಜದ ಸಂಸ್ಕೃತಿಯ ದರ್ಶನವನ್ನೂ ಮಾಡಿಸುತ್ತದೆಂಬ ಪ್ರಬಂಧಕಾರರ ದೃಷ್ಟಿಕೋನ ನಿರ್ವಿವಾದವಾದದ್ದು. ಕೃತ್ರಿಮತೆಗೆ ಪಕ್ಕಾಗದೆ ತಮ್ಮ ಅನುಭವ ಸಮೃದ್ಧಿಯನ್ನು ಅತ್ಯಂತ ನೇರವಾಗಿ, ಸರಳವಾಗಿ ಅಭಿವ್ಯಕ್ತಿಪಡಿಸುವ ಜನಪರ ಮಾಧ್ಯಮವನ್ನು ಕಟ್ಟೀಮನಿ ಸಹಜವಾಗಿ ರೂಪಿಸಿಕೊಂಡವರು. ನೇರನುಡಿ, ಸಂದರ್ಭೋಚಿತ ಭಾಷೆ, ಅಸದೃಶ ಸನ್ನಿವೇಶ ನಿರ್ಮಾಣ, ಸಂಭಾಷಣೆಯ ಸ್ವಾರಸ್ಯ, ಉಪಮೆ-ರೂಪಕಗಳು, ಗ್ರಾಮೀಣ ಭಾಷೆಯ ಸತ್ವಯುತ ಬಳಕೆ, ಗಾದೆ ಮಾತುಗಳು, ವಿಶಿಷ್ಟಾರ್ಥದ ಗ್ರಾಮೀಣ ಪದಪುಂಜಗಳು, ಗ್ರಾಮೀಣ ಬೈಗುಳಗಳು-ಇವುಗಳೆಲ್ಲ ಹಾಸುಹೊಕ್ಕಾಗಿರುವ ಕಟ್ಟೀಮನಿಯವರ ಶೈಲಿಯ ವಿವೇಚನೆ ತುಂಬ ರೋಚಕವಾಗಿದೆ. ಆದರೆ ತಟಸ್ಥಭಾವ, ಕಲಾದೃಷ್ಟಿ ಹಾಗೂ ವಸ್ತುವಿನೊಂದಿಗೆ ಇಟ್ಟುಕೊಳ್ಳಬೇಕಾದ ಮಾನಸಿಕ ದೂರ ಇವುಗಳ ಬಗ್ಗೆ ಕಟ್ಟೀಮನಿ ಕೊನೆಯವರೆಗೂ ಲಕ್ಷ್ಯಗೊಡದಿದ್ದುದು ಅವರ ಕಾದಂಬರಿಗಳ ಬಹುಮುಖ್ಯ ದೋಷ ಹಾಗೂ ಕೊರತೆಯಾಗಿ ಉಳಿದುಬಿಟ್ಟದ್ದನ್ನು ಲೇಖಕರು ಎತ್ತಿ ತೋರಿಸುವುದು ಅವರ ಬರವಣಿಗೆಯ ತೂಕವನ್ನು ಖಂಡಿತವಾಗಿಯೂ ಹೆಚ್ಚಿಸಿದೆ.

ಪ್ರತಿಯೊಂದು ಕಾದಂಬರಿಯಲ್ಲಿ ಒಂದು ಹೊಸ ಲೋಕ ಸೃಷ್ಟಿಸಬೇಕೆಂಬ ಹಟವಿದ್ದರೂ ಕಟ್ಟೀಮನಿಯವರಿಗೆ ತಾವು ಬರೆದದ್ದೆಲ್ಲ ಶ್ರೇಷ್ಠವೆಂಬ ಭ್ರಮೆಯೇನೂ ಇರಲಿಲ್ಲ. ಆದರೆ, ಉಳಿದ ಪ್ರಗತಿಶೀಲ ಲೇಖಕರಿಗಿಂತ ಸಾಮಾಜಿಕ ಬದ್ಧತೆ ಮತ್ತು ಸಮಾಜವಾದಿ ಧೋರಣೆಯ ಕ್ರಿಯಾತ್ಮಕ ಸಂಘರ್ಷಗಳ ಹಿನ್ನೆಲೆಯಲ್ಲಿ ಒಂದಿಷ್ಟು ಭಿನ್ನವೇ ಆಗಿದ್ದ ಕಟ್ಟೀಮನಿಯವರ ಸಾಹಿತ್ಯವನ್ನು ವಸ್ತುನಿಷ್ಠ ನೆಲೆಯಲ್ಲಿ ಕನ್ನಡ ವಿಮರ್ಶಕರನೇಕರು ಪರಿಭಾವಿಸಲಿಲ್ಲ, ಗುರುತಿಸಲಿಲ್ಲ ಎಂಬುದನ್ನು ಕಂಡುಕೊಂಡ ಡಾ. ಸಾದರ ಅದನ್ನು ಹೋಗಲಾಡಿಸುವ ಪ್ರಾಮಾಣಿಕ ಪ್ರಯತ್ನವನ್ನು ಈ ಕೃತಿಯಲ್ಲಿ ಮಾಡಿದ್ದಾರೆ. 'ಕಾದಂಬರಿಗಳಿಗೆ ಮೊದಲು' ಅಧ್ಯಾಯದಲ್ಲಿಯೇ ಸಾರಾಂಶ ರೂಪದಲ್ಲಿ ಅವರು ಇಂಥ ಕೆಲವು ಮಾತುಗಳನ್ನು ಹೇಳಿದ್ದಾರೆ. ಅವರ ಬದುಕಿನಲ್ಲಿ ಅವರ

ಬರಹದ ಮೂಲವನ್ನು ಹಾಗೂ ಬರಹದಲ್ಲಿ ಅವರ ಬದುಕಿನ ವಿಸ್ತಾರವಾದ ಅನುಭವ ದ್ರವ್ಯವನ್ನು ಸುಲಭವಾಗಿ ಗುರುತಿಸಬಹುದು.... ಅವರು ಹುಟ್ಟಾ ಪ್ರಗತಿಶೀಲರೇ? ಅಥವಾ ಅಧ್ಯಯನದಿಂದಾದ ಪ್ರಗತಿಶೀಲರೇ? ಎಂಬ ಸಂದೇಹ ಮತ್ತು ಪ್ರಶ್ನೆಗಳಿಗೆ ಸಮಾಧಾನ ಕಂಡುಕೊಳ್ಳುವ ಕ್ರಿಯೆಯೇ ಅವರ ಬದುಕು ಬರಹಗಳನ್ನು ಸರಿಯಾದ ರೀತಿಯಲ್ಲಿ ಅರಿಯುವ ಹಾಗೂ ಅರ್ಥೈಸುವ ಕ್ರಿಯೆಯೂ ಆಗುತ್ತದೆ ಎಂದಿದ್ದಾರೆ. ಅವರ ಸಂವೇದನೆಯಲ್ಲಿ ಮೊದಲು ಬೀಜಾಂಕುರವಾದದ್ದು ಬಂಡಾಯದ ಮನೋಧರ್ಮ. ಅದು ಕ್ರಮೇಣ ಪ್ರತಿಭಟನೆಯ ಹೆಮ್ಮರವಾಗಿ ಬೆಳೆದು ಕ್ರಾಂತಿಯ ಹೋರಾಟಕ್ಕೆ ಟೊಂಗೆ ಟಿಸಿಲು ಪಡೆಯಿತು. ಈ ಬಗೆಯ ಆಯಾಮವೇ ಅವರ ಬರವಣಿಗೆಯ ಮೂಲದ್ರವ್ಯವಾಯಿತು ಎನ್ನುವ ಅಭಿಪ್ರಾಯಕ್ಕೆ ಲೇಖಕರು ತಲುಪಿರುವುದು ನಿಜಕ್ಕೂ ವಿಚಾರಾರ್ಹವಾಗಿದೆ. ಹೀಗೆ ಪೂರ್ವನಿರ್ಧಾರಿತ ಗ್ರಹಿಕೆಗಳಿಂದ ಮುಕ್ತವಾದ ಡಾ. ಸಾದರ ಅವರ ಈ ಅಧ್ಯಯನ ಕನ್ನಡ ಸಾಹಿತ್ಯದ ಪುನರವಲೋಕನದ ಈ ಸಂದರ್ಭದಲ್ಲಿ ಒಂದು ಮಹತ್ವದ ಕೊಡುಗೆಯಾಗಿದೆಯೆಂದು ನಾನು ಭಾವಿಸಿದ್ದೇನೆ.

ಒಂದು ದೃಷ್ಟಿಯಿಂದ ಈ ಮುನ್ನುಡಿಯ ಸ್ವರೂಪ ಕೆರೆಯ ನೀರನು ಕೆರೆಗೆ ಚೆಲ್ಲಿ ವರವ ಪಡೆದಂತಾಯಿತೋ ಏನೋ. ಆದರೆ ಯಾವುದನ್ನೂ ಮುಗುಳುನಗೆಯಿಂದಲೇ ಸ್ವೀಕರಿಸುವ ಡಾ. ಬಸವರಾಜ ಸಾದರ ನನ್ನ ಬಗ್ಗೆ ಇಟ್ಟಿರುವ ವಿಶ್ವಾಸ ಮಾತ್ರ ಬಹಳ ದೊಡ್ಡದು. ಈ ಬೆಲೆಯುಳ್ಳ ಕೃತಿಗಾಗಿ ಅವರನ್ನು ಅಭಿನಂದಿಸುತ್ತೇನೆ.

(೨೦೦೦)
('ಸದ್ಭಾವ' ೨೦೦೮)

೬೦

## ಜಯಂತಿ ರೂಪಕಗಳು

ಲೇಖನಗಳನ್ನು ಬರೆದವರ ಹೆಸರಿನಿಂದ ನೋಡದೆ ಅವುಗಳ ಗುಣದಿಂದ ಗುರುತಿಸಿ ಪ್ರೋತ್ಸಾಹಿಸುವ ಕೆಲವು ಮಾಸಪತ್ರಿಕೆಗಳು ಹಿಂದೆ ಕನ್ನಡದಲ್ಲಿದ್ದವು. ಅವುಗಳಲ್ಲಿ ಧಾರವಾಡದ 'ಜಯಂತಿ' ಪತ್ರಿಕೆಯನ್ನು ಅದರ ಸಂಪಾದಕರಾಗಿದ್ದ ಶ್ರೀಬೆಟಗೇರಿ ಕೃಷ್ಣಶರ್ಮ (ಆನಂದಕಂದ) ಅವರನ್ನು ಈ ಸಂದರ್ಭದಲ್ಲಿ ನೆನೆಯಬೇಕು (ಇದು ಅವರ ಜನ್ಮ ಶತಮಾನೋತ್ಸವ ವರ್ಷ). ಹೀಗೆ ಪ್ರೋತ್ಸಾಹ ಪಡೆದ ಅಂದಿನ ತರುಣ ಲೇಖಕರಲ್ಲಿ ಪ್ರೊ. ಹಾ. ವೆಂ. ನಾಗೇಶ, ಅವರೂ ಒಬ್ಬರು. ಐವತ್ತರ ದಶಕದಲ್ಲಿ 'ಜಯಂತಿ'ಯಲ್ಲಿ ಪ್ರಕಟಗೊಳ್ಳುತ್ತಿದ್ದ ಗದ್ಯಗೀತೆಗಳೆಂದು ಕರೆಯಬಹುದಾಗಿದ್ದ, ಆದರೆ ಪರಿಣಾಮಕಾರಿಯಾದ ಕತೆಯ ಅಂಶವನ್ನು ಒಳಗೊಂಡ ಈ ರೂಪಕಗಳನ್ನು ನಾನು ಆಗ ಆಸ್ಥೆಯಿಂದ ಓದುತ್ತಿದ್ದೆ. ಹಾ.ವೆಂ. ನಾಗೇಶ, ಕಲಬುರಗಿ ಎಂಬ ಹೆಸರು ನನಗೆ ಪರಿಚಿತವಾದದ್ದು ಹೀಗೆ. ಆಗಿನ್ನೂ ಅವರು ಕಾಲೇಜು ವಿದ್ಯಾರ್ಥಿ. ೧೯೫೭ರಲ್ಲಿ ಎಂ.ಎ ಓದಲು ಅವರು ಧಾರವಾಡಕ್ಕೆ ಬಂದಾಗ ಒಂದು ದಿನ ನಮ್ಮ ಪ್ರಸಾರಾಂಗಕ್ಕೆ ಬಂದು ನನ್ನನ್ನು ಭೆಟ್ಟಿಯಾದರು. ಉತ್ಸಾಹಶಾಲಿಯಾದ, ನಗೆಮೊಗದ ಈ ವ್ಯಕ್ತಿ ನನ್ನ ಸ್ನೇಹಿತರ ಬಳಗದಲ್ಲಿ ಒಬ್ಬರಾಗಿಬಿಟ್ಟರಲ್ಲದೆ ಕೊನೆಗೆ ಅವರೂ ಧಾರವಾಡದವರೇ ಆಗಿಬಿಟ್ಟದ್ದು ಒಂದು ಸುದೈವ. ಇಷ್ಟೇ ಅಲ್ಲ. ನಾನು ನಿರ್ದೇಶಕನಾಗಿ ಕೆಲಸ ಮಾಡಿದ ಕರ್ನಾಟಕ ವಿಶ್ವವಿದ್ಯಾಲಯದ ಪ್ರಸಾರಾಂಗದಲ್ಲಿಯೇ ತಮ್ಮ ನಿವೃತ್ತಿಯ ನಂತರ ಅವರೂ ಕೆಲಕಾಲ ನಿರ್ದೇಶಕರಾಗಿ ಸೇವೆ ಸಲ್ಲಿಸಿದ್ದು ಯೋಗಾಯೋಗವೆಂದೇ ಹೇಳಬೇಕು.

ಶ್ರೀ ನಾಗೇಶ ಅವರ ಬರವಣಿಗೆಯ ಬಹುಪಾಲು ಮುಂದೆ ಅವರ ಅಧ್ಯಾಪನದ ವಿಷಯವಾದ ಸಮಾಜವಿಜ್ಞಾನ ಕ್ಷೇತ್ರಕ್ಕೆ ಮೀಸಲಾಗಿಬಿಟ್ಟಿತು. ಅನೇಕ ಮಹತ್ವದ ಕೃತಿಗಳನ್ನು ಈ ದಿಸೆಯಲ್ಲಿ ಅವರು ಕನ್ನಡಕ್ಕೆ ನೀಡಿದ್ದಲ್ಲದೆ, ಮೊದಲೇ ಕರಗತವಾಗಿದ್ದ ಸಾಹಿತ್ಯಿಕ ಭಾಷೆ ಮತ್ತು ಶೈಲಿಯಿಂದ ಅವು ತಮ್ಮ ಆಕರ್ಷಣೆಯನ್ನು ಹೆಚ್ಚಿಸಿಕೊಂಡವು.

'ಜಯಂತಿ ರೂಪಕಗಳು' ಎಂಬ ಅನ್ವರ್ಥಕ ಹೆಸರಿನಿಂದ ಸಂಗ್ರಹಗೊಂಡಿರುವ ಇಲ್ಲಿಯ ಭಾವರೂಪಕಗಳನ್ನು ಓದುವವರು, ಲೇಖಕರು ಇಂಥವನ್ನು ಇನ್ನಷ್ಟು ಕೊಟ್ಟಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು ಎಂದು ಅಂದುಕೊಳ್ಳದೆ ಇರಲಾರರು. ಯಾಕೆಂದರೆ ಈ ಪ್ರಕಾರದಲ್ಲಿ ಕೈಯಾಡಿಸಿದವರು ನಮ್ಮಲ್ಲಿ ಬಹಳ ವಿರಳ. ಬಹುಶಃ ಅನೇಕ ಬರೆಹಗಾರರ ಲಕ್ಷ್ಯ ವಚನಗಳ

ರಚನೆಯು ಕಡೆಗೆ ಹೊರಳಿದ್ದು ಇದಕ್ಕೆ ಕಾರಣವಾಗಿರಲೂಬಹುದು. 'ಮನೆಯೊಳಗೆ ಮನೆಯೊಡೆಯನಿದ್ದಾನೊ ಇಲ್ಲವೊ' ಎಂಬಂತಹ ವಚನಗಳಲ್ಲಿಯ ಸಾಂಕೇತಿಕತೆ, ಪ್ರತೀಕಾತ್ಮಕತೆ ಹಾಗೂ ಪ್ರತಿಮಾ ವಿಧಾನ ಹೆಚ್ಚು ಜನರನ್ನು ಆಕರ್ಷಿಸಿದ್ದರಲ್ಲಿ ಅಚ್ಚರಿಯೇನೂ ಇಲ್ಲ.

ಭಾರತೀಯ ಕಾವ್ಯ ಮೀಮಾಂಸೆಯ ಪ್ರಕಾರ ರೂಪಕ, ದೃಶ್ಯಕಾವ್ಯವನ್ನು ಒಳಗೊಳ್ಳುತ್ತದಲ್ಲದೆ ಮುಖ್ಯ ಅಲಂಕಾರಗಳಲ್ಲಿ ಒಂದಾಗಿ ಪರಿಗಣಿಸಲ್ಪಟ್ಟಿದೆ. ಆಧುನಿಕ ಕಾವ್ಯ ವಿಮರ್ಶೆಯಲ್ಲಿ ರೂಪಕವನ್ನು ಪಾಶ್ಚಾತ್ಯರ Metaphor ಗೆ ಸಂವಾದಿಯಾಗಿ ಬಳಸಲಾಗುತ್ತದೆ. ಒಂದು ವಸ್ತುವಿನ ಭಾವಕೋಶವನ್ನು ಮತ್ತೊಂದು ವಸ್ತುವಿಗೆ ಆರೋಪಿಸುವದು ಇದರ ಮುಖ್ಯ ಲಕ್ಷಣ. ಅಂದರೆ ಅದು ನಿರೂಪಿಸುತ್ತಿರುವ ಸಂಗತಿ, ಘಟನೆ ಹಾಗೂ ನೀಡುತ್ತಿರುವ ಚಿತ್ರ ಮೇಲ್ನೋಟಕ್ಕೆ ಒಂದಾಗಿದ್ದರೆ ಅದರ ಒಳಗಿನ ಅರ್ಥ ಬೇರೆ ಏನೊ ಒಂದನ್ನು ಸೂಚಿಸುವಂತಿರುತ್ತದೆ. ಆದ್ದರಿಂದ ಅದನ್ನು ಕವಿಯ ಭಾವಾನುಭವವೆಂದು ಕರೆದದ್ದುಂಟು. ಅಂತೆಯೇ ಈ ಸಂಗ್ರಹದಲ್ಲಿಯ ರೂಪಕಗಳು ಲೇಖಕರ ಭಾವಾನುಭವಗಳನ್ನು ಓದುಗರ ಮನಸ್ಸಿನಲ್ಲಿ ವಿಶಿಷ್ಟ ರೀತಿಯಲ್ಲಿ ಮೂಡಿಸುವುದರಲ್ಲಿ ಬಹುಮಟ್ಟಿಗೆ ಸಫಲವಾಗಿವೆ.

'ಬಾಳಿನ ಒಳದಿರುಳ ರುಚಿನೋಡ' ಹಚ್ಚುವ ಇಲ್ಲಿಯ ಪ್ರತಿಯೊಂದು ಬರೆಹವೂ ಇಡಿಯಾಗಿಯೇ ಓದಿ ಸವಿಯಬೇಕಾದಂತಹದು. ವಸ್ತು ಹಾಗೂ ಶೈಲಿ ನಾಗೇಶರ ಕೈಯಲ್ಲಿ ಎಂಥ ಅನ್ಯೋನ್ಯತೆಯನ್ನು ಪಡೆದುಕೊಂಡಿದೆಯೆಂಬುದಕ್ಕೆ ಇಲ್ಲಿ ಒಂದನ್ನು ಮಾತ್ರ ಉದಾಹರಿಸಿ ತೃಪ್ತಿಪಡಬಹುದು: 'ಪ್ರೀತಿ'.

'ಪ್ರೀತಿಯೆನ್ನುವುದು ಮುಂಜಾವಿನಲ್ಲಿ ಕಿಟಕಿಯಿಂದ ಇಣಿಕಿ ಬರುವ ತಂಗಾಳಿ. ಕಣ್ಣೆವೆಗಳನ್ನು ತುಸು ತುಸುವಾಗಿ ತುಂಬಿಕೊಳ್ಳುವ ನಸುಬೆಳಕು. ನೆಲದಾಳದಿಂದ ಅಂಗುಲಂಗುಲ ಬೆಳೆವ ಹೂಗಿಡ, ತನಗರಿಯದಂತೆಯೇ ನಸುಬಿರಿದ ಹೂಮೊಗ್ಗೆ. ಮರಿಬೆಕ್ಕಿನ ಮೈಯನ್ನು ಸವರುವ ಎಳೆಮಗುವಿನ ಕೈ, ಮಿದು ಸ್ಪರ್ಶದಿಂದ ಪುಳಕಗೊಂಡು ಮೈ ನಿಮಿರುವ ಮಿದು ಮೈಯ ಬಿಳಿ ಉಣ್ಣೆಯ ಮುದ್ದು ಮೊಲ... ಅದು ನಿಮಗರಿಯದಂತೆಯೇ ಕಳ್ಳ ಹೆಜ್ಜೆಯಿಂದ ಬೆಂಬಿಡಿದು ಬಂದು ನಿಮ್ಮನ್ನಾವರಿಸುವ ಮಾಯಾಶಕ್ತಿ !'

ಈ ಬರವಣಿಗೆ ನಾಗೇಶರ ಪ್ರಾರಂಭದ ಸೃಷ್ಟಿಯಾಗಿದ್ದರೂ ಅವುಗಳದು ಇಂದಿಗೂ ಹೊಚ್ಚ ಹೊಸ ಪ್ರಾಯ ಎನ್ನುವಂತಿದೆಯಲ್ಲವೆ? ತೀವ್ರವಾದ ತಮ್ಮ ಅನಾರೋಗ್ಯದ ಸ್ಥಿತಿಯಲ್ಲಿಯೂ ಅವುಗಳನ್ನು ಸಂಗ್ರಹಿಸುವ ಶ್ರಮವಹಿಸಿದ್ದಕ್ಕೆ ಓದುಗರು ಅವರಿಗೆ ತುಂಬ ಋಣಿಯಾಗಿದ್ದಾರೆ. ಹಾ.ವೆಂ. ನಾಗೇಶರ ಭಾವರೂಪಕಗಳು ವಿವಿಧ ಪತ್ರಿಕೆಗಳಲ್ಲಿ ಹಂಚಿಹೋಗಿದ್ದು ಅವುಗಳನ್ನು ಸಮಗ್ರವಾಗಿ ಸಂಗ್ರಹಿಸಿ ಪ್ರಕಟಿಸುವ ಕಾರ್ಯ ಆಗಬೇಕು. ಗೆಳೆಯ ನಾಗೇಶರು ಬೇಗ ಗುಣಮುಖರಾಗಲೆಂದು ಹಾರೈಸಿ, ಅವರು ನನ್ನಲ್ಲಿಟ್ಟಿರುವ ಪ್ರೀತಿ ವಿಶ್ವಾಸಗಳಿಗಾಗಿ ಮತ್ತೊಮ್ಮೆ ಕೃತಜ್ಞತೆಗಳನ್ನು ಸೂಚಿಸಿ ಈ ಚಿಕ್ಕ ಮುನ್ನುಡಿಯನ್ನು ಮುಕ್ತಾಯಗೊಳಿಸುತ್ತೇನೆ.

(೨೦೦೦)

('ಸದ್ಭಾವ' ೨೦೦೮)

# ೯೧

# ಸಹೃದಯಿ

ಅಭಿನಂದನ ಗ್ರಂಥಗಳಿಗೆ ಸಾಮಾನ್ಯವಾಗಿ ಬೇರೆಯವರ ಮುನ್ನುಡಿ ಇರುವುದಿಲ್ಲ. ಆದರೆ ಆತ್ಮೀಯರೂ ಸುಸಂಸ್ಕೃತ ರಾಜಕಾರಣಿಗಳೂ ಆದ ಶ್ರೀ ಎಂ.ಪಿ. ಪ್ರಕಾಶ ಅವರಿಗೆ ಅರ್ಪಿಸಲಿರುವ 'ಸಹೃದಯಿ' ಗ್ರಂಥಕ್ಕೆ ಅದರ ಸಂಪಾದಕರ ಅಪೇಕ್ಷೆಯ ಮೇರೆಗೆ, ಬಹಳ ಸಂತೋಷದಿಂದ ನಾಲ್ಕು ಮಾತು ಬರೆಯುತ್ತಿದ್ದೇನೆ.

ಕಳೆದ ಏಳು ವರ್ಷಗಳ ಅವಧಿಯಲ್ಲಿ ಶ್ರೀ ಎಂ.ಪಿ. ಪ್ರಕಾಶ ಅವರಿಗೆ ನಾಲ್ಕು ಅಭಿನಂದನ ಗ್ರಂಥಗಳನ್ನು ಸಲ್ಲಿಸಲಾಗಿದ್ದು ಇದೀಗ ಐದನೆಯದೊಂದು ಸಿದ್ಧವಾಗಿರುವುದು ಅವರ ಜನಪ್ರಿಯತೆಯನ್ನು ಹಾಗೂ ಅವರ ವ್ಯಕ್ತಿತ್ವದ ಹಿರಿಮೆಯನ್ನು ಸಾರಿ ಹೇಳುವಂತಿದೆ. ಪ್ರಜಾಪ್ರತಿನಿಧಿಯಾಗಿ, ಮಂತ್ರಿಯಾಗಿ ಸೇವೆ ಸಲ್ಲಿಸಿರುವುದರ ಜೊತೆಗೆ ಅವರು ಯಾವುದೇ ಖಾತೆಯನ್ನು ಹೊಂದಿದ್ದರೂ ಜನತೆಯ ಆಶಯಗಳಿಗೆ ಸ್ಪಂದಿಸುತ್ತ ಬಂದಿರುವುದು ಜನರ ಮನಸ್ಸನ್ನು ಗೆದ್ದುಕೊಂಡಿದೆ. ಅಲ್ಲದೆ ಲೇಖಕರಾಗಿ, ಕಲಾವಿದರಾಗಿ, ಹೋರಾಟಗಾರರಾಗಿ ನಾಡಿನ ಸಾಮಾಜಿಕ, ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡುದು ಅವರ ವ್ಯಕ್ತಿತ್ವಕ್ಕೆ ಹೆಚ್ಚಿನ ಆಕರ್ಷಣೆಯನ್ನು ತಂದುಕೊಟ್ಟಿದೆ. ಗ್ರಾಮೀಣ ಬದುಕಿನ ಅನುಭವದ ಹಿನ್ನೆಲೆಯುಳ್ಳ ಅವರ ವೈಚಾರಿಕತೆ ಸಮಾಜವಾದಿ ಸಿದ್ಧಾಂತದ ತಳಹದಿಯಿಂದ ಸ್ಫೂರ್ತಿಗೊಂಡಿರುವುದರಿಂದ ಅವರಿಗೆ ಇಷ್ಟವಾದ ರಂಗಭೂಮಿ, ಸಾಹಿತ್ಯ, ಸಂಗೀತ ನೃತ್ಯಾದಿ ಕಲಾಕ್ಷೇತ್ರಗಳಲ್ಲಿಯೂ ಅದರ ದಟ್ಟವಾದ ಛಾಯೆಯನ್ನು ಕಾಣಬಹುದು. ಈ ದೃಷ್ಟಿಯಿಂದ ಬೆಂಗಳೂರಿನ ಭಾರತ ಯಾತ್ರಾಕೇಂದ್ರ ಅವರನ್ನು 'ಬಹುಮುಖಿ'ಯಾಗಿ ಕಂಡು ಅಭಿನಂದಿಸಿದ್ದು (೨೦೦೧) ಯಥಾರ್ಥವಾಗಿದೆ. ಅದೇ ಸಂದರ್ಭದಲ್ಲಿ ಅವರದೇ ಕ್ಷೇತ್ರವಾದ ಹೂವಿನ ಹಡಗಲಿಯ 'ರಂಗಭಾರತಿ', ಸೂಕ್ಷ್ಮಸಂವೇದನೆಯ ಸೃಜನಶೀಲ ಮನಸ್ಸಿನ ಸಕ್ರಿಯ ರಾಜಕಾರಣಿ ಎಂಬ ಅಭಿಮಾನದಿಂದ ಇವರಿಗೆ 'ಕ್ರಿಯಾಶೀಲ' ಅಭಿನಂದನ ಗ್ರಂಥವನ್ನು ಅರ್ಪಿಸಿದೆ. ಗುಲಬರ್ಗಾದ ಅಭಿಮಾನಿ ಬಳಗ ಶ್ರೀ ಪ್ರಕಾಶ ಅವರ ಸಾಂಸ್ಕೃತಿಕ ಪ್ರಜ್ಞೆ ವಿವಿಧ ಕ್ಷೇತ್ರಗಳಲ್ಲಿ ಹೇಗೆ ತನ್ನ ಮುದ್ರೆಯೊತ್ತಿದೆಯೆಂಬುದನ್ನು 'ಜನಮುಖಿ' ಎಂಬ ಅನ್ವರ್ಥಕ ಹೆಸರಿನ ಗ್ರಂಥದ ಮೂಲಕ ಪ್ರಕಾಶಪಡಿಸಿದೆ. ಮೂರು ವರ್ಷಗಳ ಹಿಂದೆ ದಾವಣಗೆರೆಯ ಅಭಿಮಾನಿಗಳು ಅಪ್ಪಟ ಸಮಾಜವಾದಿಯಾದ ಅವರನ್ನು 'ಸಮಾಜವಾದಿ' ಎಂಬ ಗ್ರಂಥಾರ್ಪಣೆಯಿಂದ ಅಭಿನಂದಿಸಿದ್ದೂ ಸೂಕ್ತವಾಗಿಯೇ ಇದೆ.

ಹೂವಿನ ಹಡಗಲಿಯಲ್ಲಿ ಈಚೆಗೆ ಶ್ರೀ ಎಂ.ಪಿ. ಪ್ರಕಾಶ ಪ್ರತಿಷ್ಠಾನ ಸ್ಥಾಪನೆಗೊಂಡಿದ್ದು ಅವರ ಅಭಿರುಚಿಗಳನ್ನೆಲ್ಲ ಸಂಭಾವ್ಯ ಪ್ರತಿಷ್ಠಾನದ ಧ್ಯೇಯೋದ್ದೇಶಗಳ ಕಾರ್ಯಸೂಚಿಯಲ್ಲಿ ಅಳವಡಿಸಿಕೊಂಡು ಕಾರ್ಯಪ್ರವೃತ್ತವಾಗಿರುವುದು ಸಂತೋಷದ ಸಂಗತಿ. ಪ್ರಸ್ತುತ 'ಸಹೃದಯಿ' ಅಭಿನಂದನ ಗ್ರಂಥ ಈ ಪ್ರತಿಷ್ಠಾನದಿಂದ ಬೆಳಕು ಕಾಣುತ್ತಿದೆ. 'ಮತ್ತೊಂದು ಇಂತಹ ಅಭಿನಂದನ ಗ್ರಂಥದ ಅಗತ್ಯವಿತ್ತೇ?' ಎಂಬ ಪ್ರಶ್ನೆಯನ್ನು ತಾವೇ ಕೇಳಿಕೊಂಡಾಗ ಪ್ರಕಾಶಕರಿಗೆ ಅನಿಸಿದ್ದು: 'ಕಾಲ ಕಾಲಕ್ಕೆ ಎಂ.ಪಿ. ಪ್ರಕಾಶರವರ ಸಾಧನೆ, ಕೊಡುಗೆಗಳ ಸಮಗ್ರ ಚರ್ಚೆಯಾಗಬೇಕು. ಅದೆಲ್ಲವೂ ಯಥಾವತ್ತಾಗಿ ದಾಖಲಾಗಬೇಕು. ನಮ್ಮ ತಲೆಮಾರಿನ ಅಪರೂಪದ ರಾಜಕಾರಣಿ, ಮಹಾನ್ ಸಾಧಕರ ಬದುಕಿನ ಎಲ್ಲ ಸೊಬಗನ್ನು ದಾಖಲಿಸುವುದು ನಮ್ಮ ಆದ್ಯ ಕರ್ತವ್ಯ'. ಇಲ್ಲಿ ಒಳಗೊಂಡಿರುವ ಸುಮಾರು ನಾಲ್ವತ್ತು ಲೇಖನಗಳನ್ನು ನೋಡಿದಾಗ ಅಲ್ಲಲ್ಲಿಯ ಪುನರುಕ್ತಿಗಳನ್ನು ಹೊರತುಪಡಿಸಿಯೂ ಪ್ರತಿಷ್ಠಾನದ ಉದ್ದೇಶಕ್ಕೆ ಒಳ್ಳೆಯ ಚಾಲನೆ ನೀಡಿದೆ ಎಂದೇ ಹೇಳಬಹುದು.

ಪ್ರತಿಯೊಬ್ಬ ವ್ಯಕ್ತಿಯಲ್ಲಿಯೂ ಯಾವುದೋ ಒಂದು ಗುಣ, ಲಕ್ಷಣ ವ್ಯಕ್ತವಾಗುತ್ತದೆ. ಪ್ರಕಟವಾಗುತ್ತದೆ. ಆದ್ದರಿಂದ ಅವನೊಬ್ಬ 'ವ್ಯಕ್ತಿ'. ಮೂಲ ಸಂಸ್ಕೃತದಲ್ಲಿ 'ವ್ಯಕ್ತಿ' ಎಂದರೆ ವ್ಯಕ್ತವಾಗುವಿಕೆ. ಉದಾ: ಅಭಿವ್ಯಕ್ತಿ, Expression. ವ್ಯಕ್ತಿ ಎಂದರೂ ಅಭಿವ್ಯಕ್ತಿಯೇ. 'ವ್ಯಕ್ತಿತ್ವ' ಎನ್ನುವದು ಹೀಗೆ ಇತರರ ಕಣ್ಣಿನಲ್ಲಿ ಮಾನ್ಯತೆ ಪಡೆಯುವ ಲಕ್ಷ್ಯ. ಅದು ರೂಪುಗೊಳ್ಳುವದು ನಮ್ಮ ಪರಿಸರದ ಮಧ್ಯದಲ್ಲಿಯೇ. ಆದ್ದರಿಂದ ನಾವು ಒಬ್ಬ ವ್ಯಕ್ತಿಯಾಗಿ ಅರ್ಥಪೂರ್ಣವಾಗುವದು ನಾವು ಬದುಕುವ ಸಮಾಜದಲ್ಲಿ; ಮನುಷ್ಯ ಸಂಬಂಧಗಳಲ್ಲಿ. ನಮ್ಮ ಮಾನವೀಯತೆ ಸಾರ್ಥಕವಾಗುವುದೂ, ಸಿದ್ಧವಾಗುವುದೂ ಮನುಕುಲದ ಇತರ ಸಮಾಜ ಹಾಗೂ ಧರ್ಮಗಳ ನಡುವೆ. ಬಿಡಿಯಾದ ಬದುಕಿಗೆ ಹಾಗೆ ನೋಡಿದರೆ ಅಸ್ತಿತ್ವವೇ ಇಲ್ಲ. ನಾವು ಪ್ರಾಮಾಣಿಕರು, ನಿಸ್ಪೃಹರು, ನೀತಿವಂತರು ಎಂದು ನಮ್ಮ ಮಟ್ಟಿಗೆ ಭಾವಿಸಿಕೊಂಡರೆ ಸಾಲದು, ಸುತ್ತಲಿನ ಸಮಾಜ, ಹತ್ತಿರದ ಬಂಧುಗಳು ಅದನ್ನು ಗುರುತಿಸಬೇಕು. ನಾವು ನ್ಯಾಯ ನಿಷ್ಠರಾಗಿದ್ದರೆ ಅದು ಉಳಿದವರಿಗೂ ಮನವರಿಕೆಯಾಗಬೇಕು. ಶ್ರೀ ಎಂ.ಪಿ. ಪ್ರಕಾಶ ಅವರಲ್ಲಿ ಕನ್ನಡ ಜನತೆ ಗುರುತಿಸಿಕೊಂಡಿರುವುದು ಇಂಥ ಒಂದು ವಿಶೇಷ ವ್ಯಕ್ತಿತ್ವವನ್ನು.

ಈ ಗ್ರಂಥದಲ್ಲಿ ಶೇಖರಣಗೊಂಡ ಲೇಖನಗಳ ಆಶಯವನ್ನು ಸಂಪೂರ್ಣವಾಗಿ ಅಲ್ಲದಿದ್ದರೂ ಸಂಕ್ಷಿಪ್ತವಾಗಿ ಹೀಗೆ ದಾಖಲಿಸಬಹುದು:

ನಾಡಿನ ಸಮಗ್ರ ಅಭಿವೃದ್ಧಿಯ ಸುಂದರ ಕನಸುಕಂಡ ಪ್ರಕಾಶ ಅವರು ಮಾತನಾಡಿದರೆ ಅದೊಂದು ಸಿದ್ಧಾಂತವಾಗುತ್ತದೆ. ಕಟೌಟ್ ಪ್ರಿಯರಲ್ಲದ ಅವರು ದೂರದೃಷ್ಟಿಯುಳ್ಳ ನಾಯಕರು. ಸಂಸ್ಕೃತಿಯನ್ನು ಜೀವಂತವಾಗಿರಿಸಿದರೆ ಮಾತ್ರ ಸುಂದರ ಬದುಕು ಸಾಧ್ಯವೆಂದು ನಂಬಿದವರು. ಸರ್ವರೊಂದಿಗೆ ಸಮಭಾವದಿಂದ ಸದ್ಭಾವನೆಯಿಂದ ಕೆಲಸ ಮಾಡುವ ಜಾಯಮಾನದವರು. ಲೋಹಿಯಾ ಅನುಯಾಯಿಯಾದ ಅವರ ವೈಚಾರಿಕತೆಯು ಮತ್ತು ಚಿಂತನೆಯು ಸಮಾಜವಾದದ ತಳಹದಿಯ ಮೇಲೆ ರಚನೆಗೊಂಡುದು. ಅವರ ರಾಜಕಾರಣ, ಅಭಿವೃದ್ಧಿ ಮತ್ತು ಸಾಮಾಜಿಕ

ಬದಲಾವಣೆಯನ್ನು ಅಳವಡಿಸಿಕೊಂಡಿರುವಂಥದು. ಯಾವ ಪ್ರಶ್ನೆಗೂ ಅವರು ಈವರೆಗೆ 'ಉತ್ತರ ಗೊತ್ತಿಲ್ಲ' ಎಂದು ಹೇಳಿಲ್ಲ. ಕನ್ನಡ ವಿಶ್ವವಿದ್ಯಾಲಯವಾಗಲಿ. ಹಂಪಿ ಉತ್ಸವವಾಗಲಿ ಅಸ್ತಿತ್ವದಲ್ಲಿ ಬರಲು ಅವರಲ್ಲದೆ ಬೇರಾರು ಮಾಡಲು ಸಾಧ್ಯವಿರಲಿಲ್ಲ. ಸರಕಾರದಲ್ಲಿ ಲಭ್ಯವಿರುವ ಎಲ್ಲಾ ಯೋಜನೆಗಳನ್ನೂ ಜನೋಪಯೋಗಿಯಾಗುವಂತೆ ಹಡಗಲಿಗೆ ಹರಿಸಿದರು. ಅಧಿಕಾರವನ್ನು ದರ್ಪದಿಂದ, ರೋಷದಿಂದ ಅಥವಾ ಪ್ರತೀಕಾರ ಮನೋಭಾವದಿಂದ ಅವರು ಎಂದೂ ಉಪಯೋಗಿಸಲಿಲ್ಲ. ಅವರ ಸೌಜನ್ಯಪೂರಿತ ವರ್ತನೆಗೆ ಎಲ್ಲರೂ ಸೋಲುತ್ತಾರೆ. ರಾಜಕಾರಣದಲ್ಲಿ ವ್ಯಸ್ತರಾಗಿದ್ದರೂ ಅವರ ಓದಿಗೆ ಸದಾ ಸಮಯಾವಕಾಶವಿದ್ದೇ ಇರುತ್ತದೆ. ಬಿ.ಜೆ.ಪಿ.-ಜೆ.ಡಿ.ಎಸ್., ಸರಕಾರದಲ್ಲೂ ಸಂಘ ಪರಿವಾರದ ಒತ್ತಡಕ್ಕೆ ಮಣಿದು ನಕ್ಸಲರ ಹೆಣಕೆಡವಲು ಅವಕಾಶ ಕೊಡಲಿಲ್ಲ. ಅವರನ್ನು ಶಾಂತಿ ಮಾತುಕತೆಗೆ ಆಹ್ವಾನಿಸಿದ್ದು ಕರ್ನಾಟಕದ ರಾಜಕೀಯ ರಂಗದಲ್ಲಿ ಗಮನಾರ್ಹವಾದದ್ದು. ದಿವಂಗತ ರಾಮಕೃಷ್ಣ ಹೆಗಡೆಯವರು ಒಮ್ಮೆ ಇವರನ್ನು ಜನತಾ ಪರಿವಾರದ ಶಾಶ್ವತ ವಕ್ತಾರ ಎಂದು ಕರೆದಿದ್ದರು. ಇದುವರೆಗೆ ಹಲವಾರು ಬಾರಿ ತಮ್ಮ ಪ್ರತಿಷ್ಠೆಯನ್ನು ಎತ್ತಿ ಹಿಡಿಯಲು ರಾಜಿನಾಮೆ ಪತ್ರವನ್ನು ಬಿಸಾಕಬಹುದಿತ್ತು. ಆಗ ಅವರು ಹುತಾತ್ಮರಾಗಬಹುದಿತ್ತೇನೊ. ಆದರೆ ಅವರ ದೃಷ್ಟಿಯಲ್ಲಿ ಅದು ಪಲಾಯನವಾದವಾಗುತ್ತಿತ್ತು. ಸದಾ ತಮ್ಮೊಳಗೆ ಒಂದು ಗ್ರಾಮವನ್ನು, ಒಂದು ಗ್ರಂಥಾಲಯವನ್ನು ಜೀವಂತವಾಗಿ ಹಾಗೂ ಸಕ್ರಿಯವಾಗಿ ಇರಿಸಿಕೊಂಡಿರುವುದರಿಂದಲೇ ರಾಜಕೀಯ ಅಹಂಕಾರವನ್ನು ಪ್ರಶ್ನಿಸುವ ಎದೆಗಾರಿಕೆ ಲಭಿಸಿದೆ. ತಾವೂ ವ್ಯವಸ್ಥೆಯ ಒಂದು ಭಾಗ ಎಂದು ಎಷ್ಟೋ ಸಂದರ್ಭಗಳಲ್ಲಿ ನಿರ್ಭಿಡೆಯಿಂದ ಹೇಳಿಕೊಂಡದ್ದುಂಟು. ಐ.ಟಿ.ಬಿ.ಟಿ.ಯವರಿಗೆ ಬೆಂಗಳೂರಲ್ಲಿ ಸೌಲಭ್ಯ ಸಾಲದೆಂದಾದರೆ ಧಾರವಾಡಕ್ಕೊ ಗುಲಬರ್ಗಾಕ್ಕೊ ಹೋಗಬಹುದಲ್ಲ, ಬೆಂಗಳೂರಿಗೆ ಯಾಕೆ ಜೋತು ಬೀಳುತ್ತಾರೆ ಎಂದು ಒಮ್ಮೆ ತರಾಟೆಗೆ ತೆಗೆದುಕೊಂಡಿದ್ದುಂಟು. ಇಂದಿನ ರಾಜಕೀಯ ಅವರಿಗೆ ಭಾರಿ ಮುಜುಗರವನ್ನುಂಟು ಮಾಡಿದೆ. ಮುಂದಿನ ಚುನಾವಣೆಗೆ ನಿಲ್ಲುವುದಿಲ್ಲವೆಂದು ಘಂಟಾಘೋಷವಾಗಿ ಹೇಳಿದ್ದಾರೆ. ೬೭ ವರ್ಷ ವಯಸ್ಸಿನ ಆರೋಗ್ಯವಂತ ಪ್ರಕಾಶಕರಿಗೆ ಇಂಥ ಆಲೋಚನೆ ಬಂದುದು ಇಂದಿನ ರಾಜಕೀಯ ಬೆಳವಣಿಗೆಯಿಂದಾಗಿ. ತತ್ವಸಿದ್ಧಾಂತವನ್ನು ನಂಬಿದವರಿಗೆ ಈ ರೀತಿಯ ನೋವು ಉಂಟಾಗುವುದು ಸಹಜ. ರಾಜಕೀಯ ಅನಿವಾರ್ಯತೆಯ ನೆಪದಲ್ಲಿ ಅವಮಾನವನ್ನು ಸಹಿಸಿಕೊಳ್ಳುವುದು ಭಾವನಾತ್ಮಕವಾಗಿ ಪ್ರಕಾಶರವರನ್ನು ನಂಬಿದವವರಿಗೆ ಅವಮಾನ ಮಾಡಿದಂತೆ ಎಂಬ ಸೂಕ್ಷ್ಮವನ್ನು ಪ್ರಕಾಶರಂತಹ ಕಲಾವಿದರು ಅರಿಯದಿದ್ದರೆ ಹೇಗೆ ? ಎಂದು ಜನತೆಗೆ ಅನಿಸದೆಯಿಲ್ಲ, ಇತ್ಯಾದಿ, ಇತ್ಯಾದಿ.

ಕನ್ನಡ-ಕನ್ನಡಿಗ-ಕರ್ನಾಟಕ ಈ ತ್ರಿಪದಿಯಲ್ಲಿ ತಮ್ಮನ್ನು ಗಾಢವಾಗಿ ತೊಡಗಿಸಿಕೊಂಡ ಯಾರೂ ಎಂ.ಪಿ. ಪ್ರಕಾಶರಂಥ ಸುಸಂಸ್ಕೃತ ರಾಜಕಾರಣಿಯನ್ನು ಅರಿಯದಿರುವದು ಸಾಧ್ಯವೇ ಇಲ್ಲ. ಸಮಾಜವಾದವನ್ನು ಒಂದು ಮೌಲ್ಯವಾಗಿ ಜೀವನದರ್ಶನವಾಗಿ ಅವರು ಸ್ವೀಕರಿಸಿರುವುದು ಸ್ಪಷ್ಟ. ಅವರ ಯೋಚನೆ-ಯೋಜನೆಗಳ ವ್ಯಾಪ್ತಿ, ಅವುಗಳ ಸಾಫಲ್ಯ-ವೈಫಲ್ಯ ಎಲ್ಲವನ್ನೂ ಆದಷ್ಟು ವಸ್ತುನಿಷ್ಠ ದೃಷ್ಟಿಯಿಂದ, ಕೆಲವೊಂದು ಸಲ ಭಾವುಕವಾಗಿ ಈ ಗ್ರಂಥದ ಲೇಖನಗಳು ನಿರೂಪಿಸುತ್ತವೆ.

೧೯೯೯ರಲ್ಲಿ ಬಳ್ಳಾರಿಯಲ್ಲಿ ೧೧ನೇ ಸಾಹಿತ್ಯ ಸಮ್ಮೇಳನವನ್ನು ಹೂವಿನ ಹಡಗಲಿಯಲ್ಲಿ ಏರ್ಪಡಿಸಿದಾಗ ಅದರ ಉದ್ಘಾಟಕನಾಗಿ ನಾನು ಭಾಗವಹಿಸಿದ್ದೆ. ಕುಂ.ವೀ. ಸಮ್ಮೇಳನದ ಅಧ್ಯಕ್ಷತೆ ವಹಿಸಿದ್ದರು. ಆ ಸಂದರ್ಭದಲ್ಲಿ ಶ್ರೀ ಪ್ರಕಾಶ ಅವರ ಸಾಹಿತ್ಯ ಶ್ರದ್ಧೆ, ಸಂಘಟನಾಶಕ್ತಿ ಹಾಗೂ ಸಂಸ್ಕೃತಿ ಪ್ರೀತಿಯನ್ನು ಸಮೀಪದಿಂದ ಕಂಡವನಾಗಿದ್ದೇನೆ. ಹವಿನಹಡಗಲಿ ಹಾಗೂ ಸುತ್ತಮುತ್ತ ಪ್ರದೇಶದಲ್ಲಿ ಆಗಿರುವ ಅಚ್ಚುಕಟ್ಟಾದ ಅಭಿವೃದ್ಧಿ ಕಾರ್ಯಗಳನ್ನು ಕಣ್ಣಾರೆ ಕಂಡು ಅಚ್ಚರಿಗೊಂಡಿದ್ದೇನೆ. ಹೋದ ಹೋದಲ್ಲಿ ಜನ ಪ್ರಕಾಶರನ್ನು ಕೃತಜ್ಞತೆಯಿಂದ ನೆನೆದುಕೊಳ್ಳುವುದನ್ನು ಕಿವಿಯಾರೆ ಕೇಳಿದ್ದೇನೆ. ನಮ್ಮ ನಾಡಿನ ಯಾವುದೇ ಶಾಸಕನಾಗಲಿ, ಮಂತ್ರಿಯಾಗಲಿ ಇಡೀ ರಾಜ್ಯದ ಅಭಿವೃದ್ಧಿಗೆ ಬಾಧೆ ಬರದಂತೆ ತಂತಮ್ಮ ಕ್ಷೇತ್ರದಲ್ಲಿ ಇಂಥ ಜನಹಿತ ಕಾರ್ಯಗಳನ್ನು ಕೈಗೊಂಡರೆ ಇಡೀ ರಾಜ್ಯದ ನಕಾಶವನ್ನೇ ಬದಲಿಸಬಹುದು. "ರಾಜಕಾರಣಿಗಳು ಆದರ್ಶರಲ್ಲ, ಅವರ ಮೇಲೆ ಕಣ್ಣಿಡಿ" ಎಂದು ಸ್ವತಃ ಪ್ರಕಾಶರು ಹೇಳುವುದನ್ನು ನೋಡಿದರೆ ಅವರ ಪಾರದರ್ಶಕ ವ್ಯಕ್ತಿತ್ವದ ಬಗ್ಗೆ ಯಾರಿಗಾದರೂ ಅಭಿಮಾನವೆನಿಸುತ್ತದೆ. ಚುನಾವಣೆಯಲ್ಲಿ ಸೋತಾಗ ನಿರುತ್ಸಾಹಗೊಳ್ಳದೆ ತಮ್ಮ ಕ್ಷೇತ್ರದಲ್ಲಿ ಅಡ್ಡಾಡಿ ಅಭಿಮಾನಿಗಳಿಗೆ ಧೈರ್ಯ ತುಂಬಿದ್ದಾರೆ. ಸೋಜಿಗದ ಸಂಗತಿ ಎಂದರೆ ಇವರು ಸೋತಾಗ ಇವರ ಪಕ್ಷದ ಸರಕಾರವಿರುತ್ತಿರಲಿಲ್ಲ. ಗೆದ್ದಾಗ ಅವರ ಪಕ್ಷದ್ದೇ ಸರಕಾರವಿರುತ್ತಿತ್ತು. ರಾಜಕೀಯ ಕ್ಷೇತ್ರದಲ್ಲಿರುವ ಉಳಿದ ವ್ಯಕ್ತಿಗಳಿಗೂ ಎಂ.ಪಿ. ಪ್ರಕಾಶ ಅವರಿಗೂ ಇರುವ ವ್ಯತ್ಯಾಸ ಏನು ಅಂದರೆ, ಇವರು ನಿಶ್ಚಿತ ಪಕ್ಷದಿಂದ ಗುರುತಿಸಿಕೊಂಡಿದ್ದರೂ ಸರ್ವಪಕ್ಷದವರನ್ನು ವಿಶ್ವಾಸಕ್ಕೆ ತೆಗೆದುಕೊಳ್ಳುವ ಕೌಶಲ್ಯ ಇವರಿಗೆ ಸಾಧಿಸಿದೆ. ಎಷ್ಟೋ ಪ್ರಸಂಗಗಳಲ್ಲಿ ಪರಸ್ಪರ ವೈಮನಸ್ಸುಂಟಾದಾಗ ಇವರು ಮಧ್ಯಸ್ಥಿಕೆ ವಹಿಸಿ ಸಂಧಾನಕಾರರಾಗಿ ಕೆಲಸ ಮಾಡಿದ್ದುಂಟು. ಆದರೆ ಒಂದು ವಿಷಯದಲ್ಲಿ ಇವರ ಅಭಿಮಾನಿಗಳಿಗೆ ನಿರಾಶೆಯಾಗಿರುವುದು ನಿಜ. ಇಂಥ ಒಬ್ಬ ಸಂವೇದನಾಶೀಲ ಬುದ್ಧಿಜೀವಿ ರಾಜಕಾರಣಿ ರಾಜಕೀಯದಲ್ಲಿ ಯಾವ ಎತ್ತರದ ಪ್ರಮುಖ ಸ್ಥಾನವನ್ನು ಪಡೆಯಬೇಕಾಗಿತ್ತೊ ಅದನ್ನು ಪಡೆಯಲಿಲ್ಲವಲ್ಲ ಎನ್ನುವದು. ಅಂಥ ಸಂದರ್ಭಗಳಿದ್ದಾಗಲೂ ಯಾವುದೋ ಒಂದು ಸಂಕೋಚ ಇವರನ್ನು ಹಿಂದೆ ಸರಿಯುವಂತೆ ಮಾಡಿ ಬಿಡುತ್ತದಲ್ಲ - ಯಾಕೆ ? ಯಾಕೆಂದರೆ ರಾಜಕೀಯಕ್ಕೆ ಬೇಕಾವ ಭಂಡತನ ಇವರಲ್ಲಿಲ್ಲದಿರುವುದೇ ಬಹುಶಃ ಅದಕ್ಕೆ ಕಾರಣ ಎನ್ನಬಹುದು. ೨೦೦೫ ಜುಲೈ ೧೧ರಂದು ದಾವಣಗೆರೆಯಲ್ಲಿ ಏರ್ಪಡಿಸಿದ ಒಂದು ಬೃಹತ್ ಸನ್ಮಾನ ಸಭೆಯಲ್ಲಿ 'ಸಮಾಜ ಮುಖಿ' ಅಭಿನಂದನ ಗ್ರಂಥವನ್ನು ಬಿಡುಗಡೆಗೊಳಿಸುವ ಗೌರವವನ್ನು ನನಗೆ ದಯಪಾಲಿಸಲಾಗಿತ್ತು. ಅಂದಿನ ಸಭೆಯ ಸ್ವರೂಪ ಅವರು ಗಳಿಸಿದ ಜನಾನುರಾಗದ ಪ್ರತೀಕವಾಗಿತ್ತು. ಅಂದು ಅಭಿನಂದನ ಭಾಷಣ ಮಾಡಿದವರಲ್ಲಿ ಒಬ್ಬರಾದ ಖ್ಯಾತ ಕಿರುತೆರೆಯ ನಿರ್ದೇಶಕ ಹಾಗೂ ನಟ ಶ್ರೀ ಟಿ.ಎಸ್. ಸೀತಾರಾಂ ಅವರು ಒಂದು ಮಾತನ್ನು ಹೇಳಿದರು: "ಪ್ರಕಾಶ ಅವರೇ, ನೀವು ಈ ರಾಜ್ಯದ ಮುಖ್ಯಮಂತ್ರಿಗಳಾದರೂ ಆಗಬೇಕು ಇಲ್ಲವೆ ವಿರೋಧ ಪಕ್ಷದ ನಾಯಕರಾದರೂ ಅಗಬೇಕು. ಅದನ್ನೇ ನಾವು ನೋಡಬಯಸುವದು". ಸಾವಿರಾರು ಸಭಿಕರ ಪ್ರಚಂಡ ಚಪ್ಪಾಳೆ ಅದನ್ನು ಅನುಮೋದಿಸಿತು. 'ಮುಹೂರ್ತ ಘಟಿಸಿದಲ್ಲದೆ ಮುತ್ತು ಉದಕದಲಾಗದು' ಎಂದಿದ್ದಾರೆ ಬಸವಣ್ಣನವರು. ಅಂಥ ಮುಹೂರ್ತ ಬಂದೇ ಬರುತ್ತದೆಂಬ ಭರವಸೆ ಜನಕ್ಕಿದೆ.

ರಾಜಕೀಯ ಸ್ವಭಾವವನ್ನು ಸಾಹಿತ್ಯದ ಸ್ವಭಾವವನ್ನು ಎರಡನ್ನೂ ಬಲ್ಲವರು ರಾಜಕೀಯದ ಸಹಜ ವಿಷಕ್ಕೆ ಸತ್ಕಾವ್ಯದ ಸಹಜ ಅಮೃತವನ್ನು ಎರೆಯಬಲ್ಲರು. ಡಿ.ವಿ.ಜಿ. ಹೇಳುತ್ತಾರೆ: ರಾಜಕೀಯ ಎಂಬುದು ಲಕ್ಷೋಪಲಕ್ಷ ಮಂದಿಯ ಇಷ್ಟಾನಿಷ್ಟಗಳ ಹಿತಾಹಿತಗಳ ಸಂಘಾತ. ಸಾರ್ವಜನಿಕ ಮನುಷ್ಯನಲ್ಲಿರಬೇಕಾದ ಮೊದಲನೆಯ ಅರ್ಹತೆ ನ್ಯಾಯವೆಂಬುದರ-ಹಿತವೆಂಬುದರ-ಸ್ವರೂಪಜ್ಞಾನವೇ. ಆ ಅರ್ಹತೆಗೆ ಸಾಧನ ಸಾಹಿತ್ಯ ವ್ಯಾಸಂಗ''. ಅಂಥ ಅರ್ಹತೆ ಪ್ರಕಾಶ ಅವರಿಗೆ ಇದ್ದಷ್ಟು ಉಳಿದವರಿಗಿದೆಯೋ ಇಲ್ಲವೊ ನನಗೆ ಗೊತ್ತಿಲ್ಲ. ಡಿ.ವಿ.ಜಿ. ಇದಕ್ಕೆ ಅನೇಕ ಉದಾಹರಣೆಗಳನ್ನು ಕೊಟ್ಟಿದ್ದಾರೆ. ಇಂಗ್ಲಂಡಿನ ಗ್ಲಾಡ್‌ಸ್ಟನ್ ತನ್ನ ರಾಜ್ಯಸೇವೆಗೆ ಸ್ಫೂರ್ತಿಯನ್ನು ಹೋಮರ್, ಷೇಕ್ಸ್‌ಪಿಯರ್, ಮಿಲ್ಟನ್ ಕವಿಗಳಿಂದ ಪಡೆದಿದ್ದ. ಅಮೆರಿಕದ ಲಿಂಕನ್ ತನ್ನ ರಾಷ್ಟ್ರಪೋಷಣ ವ್ರತಕ್ಕೆ ತಕ್ಕ ತತ್ವಶುದ್ಧಿಯನ್ನು ಬೈಬಲ್‌ನಿಂದ, ಷೇಕ್ಸ್‌ಪೀಯರ್‌ನ ನಾಟಕಗಳಿಂದ, ಇತರ ಧರ್ಮ ಕಾವ್ಯಗಳಿಂದ ಸಂಪಾದಿಸಿಕೊಂಡಿದ್ದನೆಂದು ಹೇಳಲಾಗುತ್ತದೆ. ಇಟಲಿಯ ಮಜ್ಜಿನಿ ತನ್ನ ದೇಶೋಜ್ಜೀವನ ಸದರ್ಭಕ್ಕೆ ಮಹಾಕವಿ ಡಾಂಟೆಯಿಂದ ಬೆಳಕು ಕಂಡಿದ್ದ. ನಮ್ಮ ಗಾಂಧೀಜಿಯವರು, ವಾಲ್ಮೀಕಿಯ ವರಪ್ರಸಾದರಿಂದ ರಾಮರಾಜ್ಯದ ಆದರ್ಶಗಳನ್ನು ಕಂಡಿದ್ದರು. ನಮ್ಮ ನಾಡಿನ ಹಿರಿಯ ನಾಯಕರಾದ ನಿಜಲಿಂಗಪ್ಪನವರು ರಾತ್ರಿ ಮಲಗುವ ಮುನ್ನ ಬಸವಣ್ಣನವರ ವಚನಗಳನ್ನು ತಪ್ಪದೆ ಓದುತ್ತಿದ್ದರು.

ಹೀಗೆ ಉತ್ತಮ ಕಾವ್ಯ ಅಥವಾ ಸಾಹಿತ್ಯಾಭ್ಯಾಸದ ಪರಿಣಾಮ ಉತ್ತಮ ರಾಜಕೀಯ. ರಾಜಕೀಯವೇ ಪೌರುಷ ಪ್ರಕಾರದ ಭೂಮಿ ಎನ್ನುವುದರಲ್ಲಿ ಎರಡು ಮಾತಿಲ್ಲ. ಡಿ.ವಿ.ಜಿ.ಯವರು ಇನ್ನೊಂದು ಕಡೆ ಹೇಳುತ್ತಾರೆ: ರಾಜಕೀಯ ದುರ್ವಿಕಾರಕವಾಗಿದ್ದರೂ ಅದು ಆತ್ಮ ಸಂಸ್ಕಾರಕ್ಕೆ ಸಾಧಕ ಎಂದು. ಯಾಕೆಂದರೆ ಅದು ನಮ್ಮನ್ನು ನಾನಾ ಸಂಕಟಗಳಲ್ಲಿ ಸಿಕ್ಕಿಸಿ, ನೀತಿ ಪರೀಕ್ಷೆ ನಡೆಸುತ್ತದೆ. ಆ ಪರೀಕ್ಷೆಯಲ್ಲಿ ಉತ್ತೀರ್ಣನಾದವನೇ ನಿಜವಾದ ಅರ್ಥದಲ್ಲಿ ಸುಸಂಸ್ಕೃತ. ಕಾವ್ಯ ಸಂಸ್ಕಾರವಿಲ್ಲದವನು ಮಾಡುವ ರಾಜ್ಯಶಾಸನವನ್ನು ಕುರುಡನು ಹಿಡಿದ ಬಂದೂಕಿಗೆ ಹೋಲಿಸಲಾಗುತ್ತದೆ. ಗುರಿಯೇ ಗೊತ್ತಿಲ್ಲದೆ ಬಂದೂಕು ಹಿಡಿದರೆ ಪ್ರಯೋಜನವೇನು? ಜೀವನದ ಉತ್ಕರ್ಷವನ್ನು ಕಾಲ್ಪನಿಕ ಪ್ರಪಂಚದಲ್ಲಿ ತೋರುವವನು ಕವಿ; ವಾಸ್ತವಿಕ ಪ್ರಪಂಚದಲ್ಲಿ ತೋರಬಲ್ಲವನು ರಾಜ್ಯಕರ್ಮಿ. ಬುದ್ಧಿವಂತರು ವಿವಿಧ ಕ್ಷೇತ್ರಗಳಲ್ಲಿ ಪರಿಣತರಾಗಿ ರಾಜ್ಯಕರ್ಮಿಗಳಿಗೆ ನೆರವಾಗಬೇಕು. ಆದರೆ ಇಂದಿನ ಬಹುತೇಕ ಬುದ್ಧಿಜೀವಿಗಳ ಸ್ಥಿತಿ ಹೇಗಿದೆ ? ಮಹಾಭಾರತದಲ್ಲಿ ಒಂದು ಮಾತು ಇದೆ. ದುರ್ಯೋಧನ ಹೇಳಿದ್ದು:

ಜಾನಾಮಿಧರ್ಮಂ, ನಚಮೇ ಪ್ರವೃತ್ತಿಃ
ಜಾನಾಮಿ ಅಧರ್ಮಂ ನಚಮೇ ನಿವೃತ್ತಿಃ

ನ್ಯಾಯವಾದದ್ದು ಯಾವುದು ಎಂಬುದು ನನಗೆ ಗೊತ್ತಿದೆ. ಆದರೆ ಅದರಂತೆ ನಡೆಯಲು ಮನಸ್ಸಿಲ್ಲ. ಅನ್ಯಾಯವಾದದ್ದು ಯಾವುದು ಎಂಬುದೂ ನನಗೆ ಗೊತ್ತಿದೆ. ಆದರೆ ಅದನ್ನು ಬಿಡಲು ನನ್ನ ಕೈಲಿ ಆಗುತ್ತಿಲ್ಲ.

ನಮ್ಮ ಬುದ್ಧಿಜೀವಿಗಳಿಗೆ ಎಲ್ಲ ಸುಖಸೌಕರ್ಯಗಳೂ ಬೇಕು. ಆದರೆ ಯಾವ ಜವಾಬ್ದಾರಿಯೂ ಬೇಡ. ಮುಖಂಡರ ಮುಖಸ್ತುತಿ ಮಾಡಿ, ಅವರ ಅಪಕ್ವ ವಿಚಾರಗಳಿಗೆ ನೆರವಾಗಿ, ತಮ್ಮ ಸುಖಸೌಕರ್ಯಗಳನ್ನು ಒದಗಿಸಿಕೊಳ್ಳುತ್ತಾರೆ. ನಿಜವಾದ ಕರ್ತವ್ಯಪ್ರಜ್ಞೆ ಇಲ್ಲದೇ ಇರುವುದೇ ಇದಕ್ಕೆ ಕಾರಣ.

ಜಗತ್ತಿನಲ್ಲಿ ಕೆಟ್ಟವರ ಅಭ್ಯುದಯಕ್ಕೆ ಮತ್ತು ಕೆಟ್ಟದ್ದರ ವಿಜೃಂಭಣೆಗೆ ಕಾರಣವೇನು? ಈ ಬಗ್ಗೆ ಎಡ್ಮಂಡ್ ಬರ್ಕನ ಹೇಳಿಕೆಯೊಂದು ತುಂಬ ಪ್ರಸಿದ್ಧ ಹಾಗೂ ವಿಚಾರಯೋಗ್ಯವಾಗಿದೆ. "The only thing necessary for evil to flourish is for goodmen to do nothing" ಒಳ್ಳೆಯವರು ಅಂತ ಅನಿಸಿಕೊಂಡವರು ಏನನ್ನೂ ಮಾಡದೇ ಇರುವುದೇ ಕೆಟ್ಟದ್ದರ ಏಳ್ಗೆಗೆ ಬೇಕಾದ ಏಕೈಕ ಸಂಗತಿ. ಎಂದರೆ, ಕೆಟ್ಟದ್ದರ ವಿರುದ್ಧ ಸಜ್ಜನರ ನಿಷ್ಕ್ರಿಯತೆ, ಅಥವಾ ಪ್ರತಿಭಟನಾರಾಹಿತ್ಯ ಅದಕ್ಕೆ ಕೊಟ್ಟ ನೇತ್ಯಾತ್ಮಕ ಪ್ರೋತ್ಸಾಹವೇ ಆಗುತ್ತದೆ. ಹಿರಿಯರು, ಸತ್ಪುರುಷರು ಅನ್ಯಾಯ, ಅಧರ್ಮಗಳನ್ನು ಪ್ರತಿಭಟಿಸದಿದ್ದರೆ ಅವು ಹೇಗೆ ಅಂಕೆಶಂಕೆ ಇಲ್ಲದ ಆಧಿಪತ್ಯ ನಡೆಸುತ್ತವೆ ಎಂಬುದಕ್ಕೆ ಮಹಾಭಾರತದ ದ್ರೌಪದೀಮಾನಭಂಗದ ಪ್ರಸಂಗವೇ ಉಜ್ವಲವಾದ ನಿದರ್ಶನ.

ಸ್ವಾತಂತ್ರ್ಯ ಸಂಗ್ರಾಮದ ಕಾಲಕ್ಕೆ ಇದ್ದ ಹಾಗೆ ದೇಶದ ಸಮಸ್ಯೆಗಳನ್ನು ತಿಳಿದವನೂ, ಜನತೆಯ ವಿಶ್ವಾಸಕ್ಕೆ ಪಾತ್ರನಾದವನೂ, ನಿಸ್ವಾರ್ಥನೂ, ಚಾರಿತ್ರ್ಯವಂತನೂ ಆದ ಸಮರ್ಥನಾದ ನಾಯಕನ ಆವಶ್ಯಕತೆ ನಮ್ಮ ದೇಶಕ್ಕೂ ಇದೆ, ನಮ್ಮ ರಾಜ್ಯಕ್ಕಂತೂ ಇದ್ದೇ ಇದೆ. ಈಗ ಅಂಥ ನಾಯಕರಾಗಬಲ್ಲವರು ಇಲ್ಲವೆಂದಲ್ಲ. ಆದರೆ ಬಹಳ ಜನ ನಾಯಕತ್ವವನ್ನು ಪಡೆಯಲು ಅಲ್ಲಸಲ್ಲದ ಮಾರ್ಗವನ್ನು ಅನುಸರಿಸುತ್ತಿರುವುದೇ ಪ್ರಶ್ನೆ. ಈ ನಾಯಕತ್ವದ ಪದವಿಗೆ ಏರಲು ಇವರು ಅನುಸರಿಸುತ್ತಿರುವ ವಿಧಾನ, ಪರಸ್ಪರ ನಿಂದೆ, ಜಾತಿ-ಮತ-ಧರ್ಮಗಳ ಆಧಾರದ ಹಕ್ಕುಗಳ ಬೇಡಿಕೆ - ಇತ್ಯಾದಿ. ಇವೆಲ್ಲ ನಾಯಕತ್ವದ ಮುಖ್ಯ ಅಗತ್ಯಕ್ಕೆ ವ್ಯತಿರಿಕ್ತವಾದ ಅಂಶಗಳು. ದೇಶದ ಸಮಸ್ಯೆಗಳನ್ನು ಬಿಡಿಸುವ ಕಾತರ, ದಕ್ಷತೆ, ಚಾರಿತ್ರ್ಯ, ಜನತೆಯ ವಿಶ್ವಾಸ ಇವೆಲ್ಲ ಗೌಣವಾಗಿವೆ. ಇಂಥ ಬಹು ನಾಯಕರಲ್ಲಿ ಯಾರನ್ನು ಆರಿಸಿಕೊಳ್ಳಲೂ ಜನತೆಗೆ ಮನಸ್ಸಿಲ್ಲ. ಈ ನಾಯಕರುಗಳೇ ಒಬ್ಬ ನಾಯಕನನ್ನು ಆರಿಸಿಕೊಳ್ಳಲು, ಒಪ್ಪಿಕೊಳ್ಳಲು ಸಮರ್ಥರಾಗುತ್ತಿಲ್ಲ. ಹೀಗಾಗಿ ಬಹುನಾಯಕತ್ವ, ಅನಾಯಕತ್ವ - ಎರಡೂ ಕಷ್ಟಗಳು ದೇಶಕ್ಕೆ ಬಂದಿವೆ.

ಇಂಥ ಒಂದು ರಾಜಕೀಯ ಹಾಗೂ ಸಾಂಸ್ಕೃತಿಕ ಬಿಕ್ಕಟ್ಟಿನ ಸಂದರ್ಭದಲ್ಲಿ 'ಸಹೃದಯಿ'ಯನ್ನು ಕಣ್ಣಮುಂದೆ ನಿಲ್ಲಿಸಿದ ಗ್ರಂಥದ ಸಂಪಾದಕರಾದ ಪ್ರೊ. ಶಾಂತಮೂರ್ತಿ ಬಿ. ಕುಲಕರ್ಣಿಯವರನ್ನು ಹಾಗೂ ಪ್ರಕಾಶಕರಾದ ಶ್ರೀ ಎಂ.ಪಿ. ಪ್ರಕಾಶ ಪ್ರತಿಷ್ಠಾನದ ಶ್ರೀ ಸೊಪ್ಪಿನ ಬಾಳಪ್ಪನವರನ್ನು ಹಾರ್ದಿಕವಾಗಿ ಅಭಿನಂದಿಸುತ್ತೇನೆ.

(೨೦೦೮)

೧

## ನಾನು ಕಂಡ ಗೆಳೆಯರ ಗುಂಪು

**ಸಂಪುಟ ೧**

ಉತ್ತರ ಕರ್ನಾಟಕದ ಅನೇಕ ಕವಿಗಳಿಗೆ ಪ್ರೇರಣೆ ನೀಡಿ, ಜನಸಾಮಾನ್ಯರಲ್ಲಿ ಕಾವ್ಯಾಭಿರುಚಿಯನ್ನು ಬೆಳೆಸಿದ ಧಾರವಾಡದ 'ಗೆಳೆಯರ ಗುಂಪಿ'ನ ಕತೆಯನ್ನು, 'ಗುಂಪಿನ' ಸಂಕಲ್ಪದಲ್ಲಿ ನಿಷ್ಠೆ ತಾಳಿ, ಅದರಿಂದ ಸ್ಫೂರ್ತಿ ಪಡೆದವರಲ್ಲಿ ಒಬ್ಬರಾದ ಶ್ರೀ ಶೇ. ಗೋ. ಕುಲಕರ್ಣಿಯವರು ಬರೆಯ ಹೊರಟಿರುವದು ಅತ್ಯಂತ ಸ್ವಾಗತಾರ್ಹ. 'ನಾನು ಕಂಡ ಗೆಳೆಯರ ಗುಂಪು' ಮೂರುಭಾಗಗಳಲ್ಲಿ ರೂಪುಗೊಳ್ಳಲಿದ್ದು ಮೊದಲನೆಯ ಭಾಗ 'ಶಾಂತಿನಿಕೇತನ'ವೆಂಬ ಹೆಸರಿನಿಂದ ಇದೀಗ ಪ್ರಕಟಗೊಳ್ಳುತ್ತಿದೆ.

'ಗೆಳೆಯರ ಗುಂಪು' ತಮ್ಮ ಜೀವನದ ಆದರ್ಶವೆಂದು ಭಾವಿಸಿ, ವೈಯಕ್ತಿಕ ಜೀವನದೊಂದಿಗೆ ಸಾಮೂಹಿಕ ಜೀವನದ ಸಾಧನೆಯನ್ನು ಅಂತಿಮ ಗುರಿಯನ್ನಾಗಿ ಮಾಡಿಕೊಂಡಿದ್ದ ಈ ಲೇಖಕರು ಆದಷ್ಟು ಮಟ್ಟಿಗೆ 'ವಾಸ್ತವ'ವಾಗಿ ಹಾಗೂ ಪ್ರಾಮಾಣಿಕವಾಗಿ 'ಗುಂಪಿ'ನ ಸ್ವರೂಪವನ್ನು ಮೂಡಿಸಲು ಪ್ರಯತ್ನಿಸಿದ್ದಾರೆ. ಆತ್ಮನಿರೀಕ್ಷಣೆಯೇ ಇಲ್ಲಿ ಮುಖ್ಯವಾಗಿರುವುದರಿಂದ ಇದು ಕೆಲಮಟ್ಟಿಗೆ ಲೇಖಕರ ಆತ್ಮವೃತ್ತಾಂತವಾಗಿಯೂ ಕುತೂಹಲವನ್ನು ಹುಟ್ಟಿಸುತ್ತದೆ. ಯಾವ ದೊಡ್ಡಸ್ತಿಕೆಯ ಸೋಗನ್ನೂ ಹಾಕದೆ ತಮ್ಮ ಸ್ವಭಾವದ ಲೋಪ ದೋಷಗಳನ್ನು ಕೂಡ ನಿಸ್ಸಂಕೋಚವಾಗಿ ನಿರೂಪಿಸುತ್ತ ಹೋಗುವ ಇಲ್ಲಿಯ ಬರವಣಿಗೆ ಓದುಗರ ಮೆಚ್ಚುಗೆಯನ್ನು ಪಡೆಯಬಲ್ಲದು.

ಶಾಂತಿನಿಕೇತನದಲ್ಲಿ ತಾವು ಕಳೆದ ದಿನಗಳ ಸೊಗಸನ್ನು, ಅಲ್ಲಿ ಸಂಭವಿಸಿದ ಹಲವಾರು ಘಟನೆಗಳ ಸ್ವಾರಸ್ಯವನ್ನು ಹೃದಯ ಸ್ಪರ್ಶಿಯಾಗಿ ಇಲ್ಲಿ ಚಿತ್ರಿಸಲಾಗಿದೆ. 'ಗುಂಪಿ'ನ ಹಾಗೂ ಇತರ ಕೆಲವು ವ್ಯಕ್ತಿಗಳ ಮಿನುಗುನೋಟವೂ ಸಂದರ್ಭಾನುಸಾರ ಅಲ್ಲಲ್ಲಿ ನಮಗೆ ದೊರೆಯುತ್ತದೆ.

'ಸತ್ಯ ಯಾರೊಬ್ಬರ ಸೊತ್ತಾಗಿರದೆ ಅದು ಎಲ್ಲರ ಸೊತ್ತೂ ಆಗಿದೆ' ಎಂಬ ಧೈರ್ಯದಿಂದ ಸಾಗಿರುವ ಶ್ರೀ ಶೇ. ಗೋ. ಕುಲಕರ್ಣಿಯವರ ಪ್ರಸ್ತುತ ಗ್ರಂಥ ಅವರ ಮುಂಬರುವ ಸಂಪುಟಗಳ ಬಗ್ಗೆ ಹೆಚ್ಚಿನ ನಿರೀಕ್ಷೆಯನ್ನು ಹುಟ್ಟಿಸುತ್ತದೆ.

## ಸಂಪುಟ ೨

'ಜಯ ಕರ್ನಾಟಕ' ಪತ್ರಿಕೆಯನ್ನು ಗೆಳೆಯರ ಗುಂಪು ಪಡೆದ ಮೇಲೆ, ಅದರ ಪ್ರಸಾರಕ್ಕಾಗಿ ಅಹರ್ನಿಶಿ ದುಡಿದ, ಗುಂಪಿನ ನಿಷ್ಠಾವಂತ ಕಾರ್ಯಕರ್ತರಾಗಿದ್ದ ಶ್ರೀ ಶೇ. ಗೋ. ಕುಲಕರ್ಣಿಯವರು ಅದಕ್ಕೆ ಸಂಬಂಧಪಟ್ಟಂತೆ - ಒಮ್ಮೊಮ್ಮೆ ಸಂಬಂಧವಿರದಿದ್ದರೂ-ಹಲವಾರು ವ್ಯಕ್ತಿ ಸಂಗತಿಗಳ ಬಗೆಗೆ ಎಷ್ಟೋ ವಿಷಯಗಳನ್ನು ನಿಷ್ಠುರವಾಗಿ, ಬಹುಶಃ ಪ್ರಥಮವಾಗಿ ಈ ಎರಡನೆಯ ಸಂಪುಟದಲ್ಲಿ ದಾಖಲೆಗೊಳಿಸಿದ್ದಾರೆ. ಪತ್ರಿಕೋದ್ಯಮ, ಪುಸ್ತಕದಂಗಡಿ, ಮುದ್ರಣಾಲಯ, ಗ್ರಂಥಮಾಲೆ, ಸಾಹಿತ್ಯ ಪ್ರಚಾರ-ಹೀಗೆ ಎಲ್ಲವನ್ನೂ ಮೆಲ್ಲಗೆ ವ್ಯಾಪಿಸಿಕೊಳ್ಳುತ್ತ ಹೋಗುವ ಇಲ್ಲಿಯ ಬರವಣಿಗೆ ಗೆಳೆಯರ ಗುಂಪಿನ ಮೂಲಕ ನಾಡಿನ ಉಜ್ವಲ ಭವಿಷ್ಯವನ್ನು ಕಾಣುವ ಅವರ ಹಂಬಲವನ್ನು ಹೆಜ್ಜೆ ಹೆಜ್ಜೆಗೆ ಮೂಡಿಸುತ್ತ ಹೋಗುತ್ತದೆ. ಒಂದು ಸಮಗ್ರ ಕಲ್ಪನೆಯಿಂದ ಭವಿಷ್ಯವನ್ನು ರೂಪಿಸಬಲ್ಲ ಶಕ್ತಿಯನ್ನು ಹಿರಿಯ ವ್ಯಕ್ತಿಗಳು ತೋರಿಸದಿದ್ದುದು ಹಾಗೂ ಸಾಹಿತ್ಯ ದರ್ಶನದೊಂದಿಗೆ ವ್ಯವಹಾರ ದರ್ಶನವನ್ನು ಪಡೆಯದಿದ್ದುದು ಗುಂಪಿನ ಸೋಲಿಗೆ ಮುಖ್ಯ ಕಾರಣವಾಗಿ ಲೇಖಕರು ಕಂಡಿದ್ದಾರೆ. ಅಲ್ಲಲ್ಲಿ ವಿಷಯಾಂತರವಾಗಿದ್ದರೂ ಲೇಖಕರು ಹೇಳುತ್ತ ಹೋದಂತೆ ನಾವು ಕೇಳುತ್ತ ಹೋಗುವ ಆಸ್ಥೆಯನ್ನು ಅವರು ಹುಟ್ಟಿಸುತ್ತಾರೆ.

ಇಲ್ಲಿ ನಿರೂಪಿಸಿರುವ ಕೆಲವೊಂದು ಘಟನೆ-ಸನ್ನಿವೇಶ ವ್ಯಕ್ತಿಗಳನ್ನು ಕುರಿತು ಲೇಖಕರ ಅಭಿಪ್ರಾಯಗಳಿಗೆ ಬೇರೊಂದು ಮಗ್ಗಲು ಇರಬಾರದೆಂದಲ್ಲ. ಆದರೆ ಗುಂಪಿನ ಬಗ್ಗೆ ಅವರಿಗಿರುವ ಕಳಕಳಿಯನ್ನು ಯಾರೂ ಪ್ರಶ್ನಿಸಲಾರರು. "ಇನ್ನು ಮುಂದೆ ಕರ್ನಾಟಕದಲ್ಲಿ ಗೆಳೆಯರ ಗುಂಪಿನಂತಹ ಪ್ರಯೋಗಗಳು ಆಗಲಿಕ್ಕಿಲ್ಲ. ಒಂದು ವೇಳೆ ಆದರೆ ಈ ನನ್ನ ಬರವಣಿಗೆ ಅದಕ್ಕೆ ಸಹಾಯವಾಗಲಿ" ಎಂಬುದೇ ಲೇಖಕರ ಅಪೇಕ್ಷೆಯಾಗಿದೆ.

ಸ್ವತಃ ಸಾಹಿತಿ ಎನಿಸಿಕೊಳ್ಳುವ ಹಂಬಲವಿಲ್ಲದಿದರೂ ಕನ್ನಡ ನಾಡು-ನುಡಿಯ ಏಳಿಗೆಯ ಸಂಕಲ್ಪ ಹೊಂದಿದ ಗೆಳೆಯರೊಂದಿಗೆ, ನವೋದಯ ಕಾಲದ ಒಂದು ಮಹತ್ವದ ಸಾಹಿತ್ಯಿಕ ಸಂದರ್ಭದ ಚಟುವಟಿಕೆಗಳಲ್ಲಿ ಭಾಗಿಯಾಗಿದ್ದ ಆದರ್ಶವಾದಿಯೊಬ್ಬನ ಅನುಭವಗಳ ಅಮೂಲ್ಯ ದಾಖಲೆಯಾಗಿದೆ ಈ ಗ್ರಂಥ.

## ಸಂಪುಟ ೩

ಪ್ರಾರಂಭದಲ್ಲಿಯೇ ಕುತೂಹಲವನ್ನು ಕೆರಳಿಸಿದ 'ನಾನು ಕಂಡ ಗೆಳೆಯರ ಗುಂಪು' ಈ ಮೂರನೆಯ ಸಂಪುಟದೊಂದಿಗೆ ಮುಕ್ತಾಯಗೊಳ್ಳುತ್ತಿದೆ. 'ಸಾಧನ ಮುದ್ರಣಾಲಯ ಮತ್ತು ಜೀವನ ಮಾಸ ಪತ್ರಿಕೆ'ಗಳನ್ನು ಕೇಂದ್ರವಾಗಿಟ್ಟುಕೊಂಡು, ತಮಗೆ ಸ್ನೇಹ-ಸಂಪರ್ಕವನ್ನೊದಗಿಸಿದ ಮತ್ತೆ ಹಲವಾರು ವ್ಯಕ್ತಿಗಳನ್ನು, ಸಂದರ್ಭಾನುಸಾರ ಅವರ ಸ್ವಭಾವ ವೈವಿಧ್ಯದೊಂದಿಗೆ ಗೆಳೆಯರ ಗುಂಪಿನ ಮೂಲ ಸೂತ್ರವನ್ನು ಕೈಬಿಡದೆ ಲೇಖಕರು ಈ ಸಂಪುಟದಲ್ಲಿ ಚಿತ್ರಿಸಿದ್ದಾರೆ. 'ಗೆಳೆಯರ ಗುಂಪು ಕೇವಲ ಸಾಹಿತಿಗಳ ಗುಂಪುಮಾತ್ರ ಆಗಿರಲಿಲ್ಲ. ಗೆಳೆತನವು ಅದರ ಗುರಿಯಾಗಿತ್ತು. ಸಾಹಿತ್ಯವು ಅದಕ್ಕೊಂದು ಸಾಧನವಾಗಿತ್ತು' ಎಂಬುದನ್ನು ಇವರು ನಿದ್ದೆಯಲ್ಲಿಯೂ

ಮರೆಯುವುದಿಲ್ಲ.

ಸಾಮೂಹಿಕ ಗುರಿಯನ್ನಿರಿಸಿಕೊಂಡು, ತಮ್ಮ ಗೆಳೆತನದ ಸೆಲೆಗಳು ಬತ್ತದಂತೆ, ನೋಡಿಕೊಂಡ ಗ್ರಂಥಕರ್ತರ ವೈಯಕ್ತಿಕ ವಿಷಯಗಳೆಷ್ಟೋ ಇಲ್ಲಿ ಬಂದಿದ್ದರೂ ಆಯಾ ಸಾಹಿತ್ಯಿಕ ಸಂದರ್ಭದಿಂದ ಅವು ಮಹತ್ವದ ದಾಖಲೆಯಾಗಿ ಪರಿಣಮಿಸಬಹುದಾಗಿದೆ. ಆರ್ಥಿಕ ಬಡತನಕ್ಕಿಂತ ಮನೋದಾರಿದ್ರ್ಯವೇ 'ಗುಂಪಿ'ನ ವಿಫಲತೆಗೆ ಕಾರಣವೆಂಬುದನ್ನು ತೀವ್ರವಾಗಿ ಅನುಭವಿಸಿದ, ಅದರ ಹುಚ್ಚು ಹವ್ಯಾಸದಲ್ಲಿ ಕೊನೆಗೂ ಏಕಾಕಿಯಾಗಿ ಉಳಿದ ಲೇಖಕರು ಓದುಗರಿಂದ ಸಹಾನುಭೂತಿಯನ್ನು ಪಡೆಯದೆ ಇರಲಾರರು.

'ಸಾಮೂಹಿಕ ಕೆಲಸ ಮಾಡುವುದಕ್ಕೆ ಅವಶ್ಯವಾಗಿ ಬೇಕಾಗುವ ಔದಾರ್ಯ, ವಿಶಾಲ ಮನಸ್ಸು, ಸಾಮರಸ್ಯ, ಹೊಂದಿಕೊಂಡು ಹೋಗುವ ಸ್ವಭಾವ, ಆದರ್ಶ ಜೀವನದ ಪ್ರೇರಣೆ-ಇತ್ಯಾದಿ ಗುಣಗಳು ಕನ್ನಡಿಗರಲ್ಲಿ ವಿರಳವೆಂದೇ ಹೇಳಬಹುದು' ಎಂಬ ಲೇಖಕರ ಅಂದಿನ ಅನುಭವಕ್ಕೂ ಕನ್ನಡಿಗರ ಇಂದಿನ ಪರಿಸ್ಥಿತಿಗೂ ವ್ಯತ್ಯಾಸವಿಲ್ಲದಿರುವದು ವಿಚಾರ ಮಾಡತಕ್ಕ ಸಂಗತಿಯಾಗಿದೆ.

'ನಾನಿದನ್ನು ಬರೆಯುವ ಮೊದಲು ಅಲ್ಪನಾಗಿದ್ದೆ, ಬರೆದು ಮತ್ತಿಷ್ಟು ಅಲ್ಪನಾದೆ. ಬರೆಯದೇ ಇರುವಷ್ಟು ದೊಡ್ಡವನೂ ನಾನಲ್ಲ' ಎಂದು ಗ್ರಂಥದ ಕೊನೆಯಲ್ಲಿ ಲೇಖಕರು ನುಡಿದಿದ್ದಾರೆ. ಆದರೆ ಈ ಬರವಣಿಗೆಯ ದೊಡ್ಡಸ್ತಿಕೆ ಕನ್ನಡ ಸಾಹಿತ್ಯದಲ್ಲಿಯೇ ಅಪೂರ್ವ ಎಂಬುದನ್ನು ವಿಮರ್ಶಕರು ತಪ್ಪದೆ ಗುರುತಿಸುತ್ತಾರೆಂಬುವ ಭರವಸೆ ನನಗಿದೆ.

(೧೯೮೧)

೨

# ಶೋಕ ಸಭೆ

ತನ್ನ ದೇಶ, ತನ್ನ ಜನ, ತನ್ನ ಪರಿಸರ, ಬದುಕಿನ ಇಂದಿನ ಅಸ್ತವ್ಯಸ್ತತೆ - ಇವುಗಳ ಬಗ್ಗೆ ಈ ಎಳೆಯ ವಯಸ್ಸಿನಲ್ಲಿ ಇಷ್ಟೊಂದು ಪ್ರೌಢವಾದ ಪ್ರಜಾಸತ್ತಾತ್ಮಕ ದೃಷ್ಟಿಯನ್ನು ಬೆಳೆಸಿಕೊಳ್ಳುತ್ತ, ತನ್ನ ನೋವನ್ನು, ಅತೃಪ್ತಿಯನ್ನು ಆಕ್ರೋಶಕ್ಕೆ ಎಡೆಗೊಡದೆ, ಸ್ವಸ್ಥ ಚಿತ್ತದಿಂದ ಕಾವ್ಯದಲ್ಲಿ ಮೂಡಿಸಲು ಹವಣಿಸುತ್ತಿರುವ ಬಸವರಾಜ ವಕ್ಕುಂದ ಅವರ 'ಶೋಕಸಭೆ' ಅವರ ಪ್ರಥಮ ಸಂಕಲನವೆಂದರೆ ಯಾರಿಗೂ ಆಶ್ಚರ್ಯವಾಗಬಹುದು. ಯಾವುದೇ ಪ್ರತಿಮೆ, ಪ್ರತೀಕಗಳ ಜಟಿಲ ಜಾಲದಲ್ಲಿ ತನ್ನ ಕಾವ್ಯದ ಆಶಯವನ್ನು ಹಿಡಿಯಲು ಕಾಯುತ್ತ ಕೂಡದೆ, ನೇರ ನಿರೂಪಣೆಯಿಂದ, ಒಡೆದು ತಿಳಿಹೇಳುವಂತೆ, ಅದೇ ಹೊತ್ತಿಗೆ ಆಡಿದ ಮಾತು ಅದಷ್ಟು ಕಾವ್ಯವಾಗುವಂತೆ ನೋಡಿಕೊಂಡಿರುವ ಈ ಕವಿಯ ಸದ್ದುಗದ್ದಲವಿಲ್ಲದ ಸಾಧನೆ ಗಮನಾರ್ಹವಾಗಿದೆ. ತಾನು ನಂಬಿದ ರಾಜಕೀಯ ಪ್ರಣಾಲಿ ಒಂದು ಘೋಷಣೆಯಾಗಿ ಅಭಿವ್ಯಕ್ತಿಗೆ ಅಡ್ಡಗಾಲು ಹಾಕದಂತೆ ತನ್ನ ಒಟ್ಟು ಇಂಗಿತವನ್ನು ಕಾವ್ಯದಲ್ಲಿಯೇ ಕರಗಿಸಿಕೊಡುವ ಪ್ರಯತ್ನ ಈ ಕವಿಯ ಬಗ್ಗೆ ಬಹಳಷ್ಟು ಭರವಸೆಯನ್ನು ಹುಟ್ಟಿಸುತ್ತದೆ.

(೧೯೮೨)

೩

# ಗಲ್ಲುಗಳಲಿ ಗುಲಾಬಿ

ಅಹಮಿಕೆ, ಆತುರ, ಆಕ್ರೋಶಗಳ ಪ್ರದರ್ಶನವಿಲ್ಲದೆ ತನ್ನ ಸುತ್ತಲಿನ ಸಮಾಜದ ನೋವು, ನರಳಾಟಗಳನ್ನು ಗಂಭೀರವಾಗಿ ಅರ್ಥೈಸಿಕೊಳ್ಳಲು ಪ್ರಯತ್ನಿಸುತ್ತ ಅದಕ್ಕೆ ತಕ್ಕ ಅಭಿವ್ಯಕ್ತಿಯನ್ನು ಕಾವ್ಯರಚನೆಯಲ್ಲಿ ಹೊಸ ರೀತಿಯಿಂದ ಕಂಡುಕೊಳ್ಳುತ್ತಿರುವ ಪ್ರಹ್ಲಾದ ಅಗಸನ ಕಟ್ಟೆ ಒಬ್ಬ ಗಮನಾರ್ಹ ಕವಿ. ಪ್ರಥಮ ಸಂಗ್ರಹ 'ನನ್ನ ಧಣಿಗೆ ನನ್ನ ದನಿ'ಯಿಂದ ಈ ಎರಡನೆಯ ಸಂಕಲನ 'ಗಲ್ಲುಗಳಲಿ ಗುಲಾಬಿ'ಯವರೆಗೆ ಅವರು ಇಟ್ಟಿರುವ ಸಂಯಮದ ಹೆಜ್ಜೆಗಳು ಕಾವ್ಯವನ್ನು ಕೈಗೂಡಿಸಿಕೊಂಡು ಸಾಗಿರುವುದು ಸಂತೋಷದ ಸಂಗತಿ. ನೋವು, ಯಾತನೆ, ಹಿಂಸೆಗಳ ಏರಾಟದಿಂದ ನಿರಾಶೆಯ ಅಂಚಿಗೆ ತಲುಪುವ ಸ್ಥಿತಿಯಲ್ಲಿಯೂ ಜೀವನೋತ್ಸಾಹವನ್ನು ಬದುಕಿನ ಭರವಸೆಯನ್ನು ಕಳೆದುಕೊಳ್ಳದ ಅವರ ಮನೋಧರ್ಮ ಮಾನವೀಯತೆಗೆ ಒಲಿದದ್ದು: ನೀರ ಹನಿಯಲ್ಲಿ ಕಡಲ ಸಂಬಂಧವನ್ನು ಕಂಡುಕೊಂಡಿದ್ದು.

'ನವಲಗುಂದದಲಿ ಮಧ್ಯಾಹ್ನ' 'ಬರುವ ಮಗುವಿಗೆ ಏನಿದೆ ಕೊಡುಗೆ' 'ಪೋಸ್ಟ ಮಾರ್ಟಂ ಗೃಹದ ಮುಂದೆ' 'ಒಬ್ಬನ ಸಾವು' 'ಮಧ್ಯಾಹ್ನದಲಿ ಒಂದು ಥೇಟರ್' ಮೊದಲಾದ ಕವಿತೆಗಳು ವಾಸ್ತವ ಪ್ರಜ್ಞೆಯೊಂದಿಗೆ ಕವಿಯ ಮಾಗಿದ ಜೀವನಾನುಭವಕ್ಕೆ ಸಾಕ್ಷಿಯಾಗಿವೆ. 'ಎಂಥ ಸುಖ,' 'ಹುಲಿ-ಅಶ್ರುದಲಿ' ಕವಿತೆಗಳು ಅನುಭಾವದ ತುಡಿತದಲ್ಲಿ ಜೀವನದ ಅರ್ಥವನ್ನು ಶೋಧಿಸುವ ಒಳ್ಳೆಯ ಪ್ರಯತ್ನಗಳು. ಕವಿಯ ಎಲ್ಲ ಬಗೆಯ ಭಾವಾನುಭವಗಳ ಸುಂದರ ಸಾಮರಸ್ಯವನ್ನು ಅನನ್ಯವಾಗಿ ಮೂಡಿಸಿರುವ 'ಹುಯ್ಯನುವ ಗಾಳಿಯೇ' ಒಂದು ಯಶಸ್ವಿ ರಚನೆ.

ಸಂಕಲನಗಳ ಮೇಲೆ ಸಂಕಲನಗಳು ಹೊರ ಬರುತ್ತಿರುವ ಇಂದಿನ ಕಾವ್ಯ ಸಂದರ್ಭದಲ್ಲಿ ಕೇವಲ ಬಂಡಾಯಕ್ಕೆ ಸೀಮಿತವೆನಿಸದ, ಆದರೂ ಅದರ ತಿರುಳನ್ನು ಪಡೆದ ಇಂಥ ಕಾವ್ಯವನ್ನು ಓದುಗರು ಹೆಚ್ಚು ಪ್ರೀತಿಸುತ್ತಾರೆಂದು ನಾನು ಆಶಿಸಿದ್ದೇನೆ.

(೧೯೯೩)

# ೪

# ಆತ್ಮಶೋಧ

ಕನ್ನಡ ನವೋದಯ ಸಾಹಿತ್ಯದಲ್ಲಿ ಮಧುರಚೆನ್ನರಿಗೆ ಅನುಭಾವಿ ಕವಿ ಎಂಬ ಅಗ್ರ ಪಟ್ಟ ಒದಗಿಸಿದ 'ನನ್ನನಲ್ಲ' ಅದರ ಉನ್ನತ ಕಾವ್ಯ ಪ್ರತಿಭೆಯೊಂದಿಗೆ ಯೌಗಿಕ ಹಾಗೂ ಅನುಭಾವೀ ಆಶಯಗಳನ್ನು ಅನನ್ಯವಾಗಿ ಅಭಿವ್ಯಕ್ತಿಗೊಳಿಸಿದ ಒಂದು ವಿಶಿಷ್ಟ ಕೃತಿ. ಎಲ್ಲಾ ಮತ ಧರ್ಮದ ಸಂಕೇತಗಳಿಂದ ಅನುಭಾವವನ್ನು ಮುಕ್ತಗೊಳಿಸಿದ ಕಾವ್ಯ ಎಂಬ ಶ್ರೇಯಸ್ಸೂ ಅದಕ್ಕಿದೆ. 'ಪೂರ್ವರಂಗ', 'ಕಾಳರಾತ್ರಿ', 'ಬೆಳಗು' ಈ ಕಾದಂಬರಿ ರೂಪದ ಆತ್ಮಕಥನಗಳು ಅವರು ತಮ್ಮ 'ಆತ್ಮಗೀತೆಯ ಹೊಲಬು ಹೊಳೆಯಲೆಂದು' ಬರೆದ ಗದ್ಯ ಕೃತಿಗಳು.

ಸಂಪಾದನಾಶಾಸ್ತ್ರದಲ್ಲಿ ಪಳಗಿದ ಹಾಗೂ ಕವಿಯ ಜೀವಿತಾವಧಿಯಲ್ಲಿ ಅವರ ನಿಕಟವರ್ತಿ ಶಿಷ್ಯರಾಗಿದ್ದ ಡಾ. ಗುರುಲಿಂಗ ಕಾಪಸೆಯವರು ಮೇಲೆ ಉಲ್ಲೇಖಿಸಿದ ಕೃತಿಗಳನ್ನು ಪ್ರಥಮ ಬಾರಿಗೆ ಒಂದು ಸಂಪುಟದಲ್ಲಿ ವಿದ್ವತ್ಪೂರ್ಣವಾಗಿ ಸಂಪಾದಿಸಿಕೊಟ್ಟು ಅಧ್ಯಾತ್ಮ ಸಾಧಕರ ಹಾಗೂ ಸಾಹಿತ್ಯಾಭಿಮಾನಿಗಳ ಕೃತಜ್ಞತೆಗೆ ಪಾತ್ರರಾಗಿದ್ದಾರೆ. ಮಧುರಚೆನ್ನರು ಸತ್ಯದ ಭಕ್ತರಾಗಿ ಕನ್ನಡ ಪರಂಪರೆಯಲ್ಲೇ ಅತ್ಯಂತ ವಿಶಿಷ್ಟ ಕವಿ ಹಾಗೂ ಸಾಧಕಜೀವಿಯಾಗಿರುವುದನ್ನು ಪ್ರಸ್ತುತ ಸಂಪುಟ 'ಆತ್ಮಶೋಧ' ಚೆನ್ನಾಗಿ ಮನಗಾಣಿಸಿಕೊಡಬಲ್ಲುದು.

'ಮಧುರ ಚೆನ್ನ : ಜೀವನ ಹಾಗೂ ಕೃತಿಗಳ ಸಮೀಕ್ಷೆ' (೧೯೭೬) ಯಂಥ ಪ್ರೌಢ ಪ್ರಮಾಣ ಗ್ರಂಥವನ್ನು ಕೊಟ್ಟ ಕಾಪಸೆಯವರು ಅತ್ಯಂತ ಪರಿಶ್ರಮದಿಂದ ಸಂಪಾದಿಸಿದ 'ಮಧುರ ಚೆನ್ನರ ಲೇಖನಗಳು' (೧೯೯೩) ಗ್ರಂಥದ ಮೂಲಕ ಕನ್ನಡಿಗರಿಗೆ ಇನ್ನೂ ಅಪರಿಚಿತವಾಗಿ ಉಳಿದಿದ್ದ ಮಧುರಚೆನ್ನರ ಸಾಹಿತ್ಯಿಕ, ಭಾಷಿಕ ಸಂಶೋಧನೆ ಹಾಗೂ ವೈಚಾರಿಕ ಪ್ರಜ್ಞೆಯ ವಿವಿಧ ಆಸಕ್ತಿಗಳ ಬಗ್ಗೆ ಕುತೂಹಲ ಕೆರಳಿಸಿದ್ದನ್ನು ಇಲ್ಲಿ ನೆನೆಯಬಹುದು.

(೧೯೯೮)

೫೯

## ಆಕಾಶ ಕಳೆದಿದೆ

'ಕಳೆದು ಹೋಗಿದೆ' ಎಂದು ಭಾವಿಸಿರುವ 'ಆಕಾಶ'ವನ್ನು ಈ ಪಂಚಕಾವ್ಯ ಗುಚ್ಛದ ಭಾವ-ಬಂಧದಲ್ಲಿ ಮತ್ತೆ ಹಿಡಿದಿಡಲು ನಡೆಸಿರುವ ಪ್ರಯತ್ನವೇ ಶ್ರೀಮತಿ ಜಯಶ್ರೀಯವರ ಪ್ರಥಮ ಕಾಳಜಿ. ಅನಂತತೆ, ಆದರ್ಶ, ಬೆರಗು, ಮುಗ್ಧತೆ, ಮುಗಿದಿರದ ಬದುಕಿನ ಎಲ್ಲೆ, ನೋವಿನ ವ್ಯಾಪಕತೆ, 'ಮುಖವಾಡಗಳು', 'ಮುಟ್ಟಲಾರದ ಸತ್ಯ' - ಇವಕ್ಕೆಲ್ಲ ಆಕಾಶ ಸಂಕೇತವಾಗಿ ಸುಳಿದಾಡುತ್ತ, ಅನುಭವಗಳ ಸಂಕೀರ್ಣತೆಯಲ್ಲಿ ಹಾಸು-ಹೊಕ್ಕಾಗಿರುವುದನ್ನು ಇಲ್ಲಿಯ ಸಾಲುಗಳ ನಡುವೆ ಓದಿಕೊಳ್ಳಬಹುದು. ಬದುಕಿನ ಬಗೆಗಳ ಚಿಂತನೆ-ಅವಲೋಕನ, ಹೆಣ್ಣಿನ ನೋವಿನ ಅನಿವಾರ್ಯತೆ, ನಗರೀಕರಣದಿಂದ ಸಂಸ್ಕೃತಿಗೆ ಒದಗಿರುವ ಧಕ್ಕೆ, ಸಮಾಜದಲ್ಲಿ ಬಡವರ, ಶೋಷಿತರ ಬಗೆಗಿನ ಕಳವಳ-ಈ ಬಗೆಯ ವಸ್ತುವಿನ ಹರಹಿನಲ್ಲಿ ಆತ್ಮಕಥನದ ಎಳೆಗಳೂ ಸೇರಿಕೊಂಡ ಅನುಭವದ ಜೊತೆಗೇ 'ಕಳೆದು ಹೋದ ಕಾತರದ ಸ್ವಪ್ನ ಸಂಜೆ', 'ಬಳೆಯ ಚೂರುಗಳು ಬಣ್ಣದ ಕನಸು'ಗಳ ವಿಷಾದವೂ ಸೇರಿ ಸ್ವಂತಿಕೆಗೆ ಒತ್ತು ನೀಡುತ್ತವೆ.

ನಿಸರ್ಗದೊಡನೆ ಒಂದಾಗಿ ಬದುಕಿದ ಕವಯಿತ್ರಿಯ ಬಾಲ್ಯದ ಅನುಭವ, ಅದರ ಸವಿನೆನಪಿನ ಬುತ್ತಿ, ಅಮ್ಮನ ಅಪಾರ ಅಂತಃಕರಣ ('ನೂರಾರು ಹಬ್ಬಕ್ಕೆ ಕೈ ಹಿಡಿದ ಹೆಮ್ಮರ') ಎಲ್ಲವೂ ಸಂಸ್ಕೃತಿ ಸಮೇತವಾಗಿ ಕಾವ್ಯದಲ್ಲಿ ಮಡುಗೊಂಡು 'ಸರ್ವಕ್ಷೇಮಕ್ಕಾಗಿ ಮೆರೆವ ಕರುಣೆ'ಯನ್ನು ಗುರುತಿಸುತ್ತ, 'ನೂರು ಹೂವುದುರಿ ನಾಕು ಮಿಡಿ ನಿಲ್ಲುವುದೇ ಇಲ್ಲಿ ನಿಯಮ' ಎಂಬ ದರ್ಶನವನ್ನು ಹೊಳೆಯಿಸುತ್ತದೆ.

ಪ್ರಕೃತಿಯಲ್ಲಿ ಸಂಸ್ಕೃತಿಯನ್ನು ಹೀರಿ ಬೆಳೆದು, ಸುತ್ತಣ ಜೀವನದ ವಿಕೃತಿಗೆ ವಿಷಾದಗೊಂಡರೂ ನಿರಾಶೆಗೊಳ್ಳದ ('ಪಂಚಮಿ ಬಂದೀತೆ ಮೋಡಗಳ ಹಿಡಿದುಕೊಂಡು, ಮಳೆಹನಿಗಳ ಮುಡಿದುಕೊಂಡು ?') ಹೆಣ್ಣು ಜೀವದ ಈ ಹಂಬಲದ ಮುಂಬರುವ ಹಾಡಿನಲ್ಲಿ ಆಕಾಶ ತನ್ನ ನೂರು ನಕ್ಷತ್ರಗಳನ್ನು ಮಿನುಗಿಸಲಿ ಎಂದು ಹಾರೈಸುತ್ತೇನೆ.

(೧೯೯೯)

೬

# ಮುಚ್ಚಿದ ಬಾಗಿಲು ಮತ್ತು ಮರಿಗುಬ್ಬಿ

ಕವಿ-ಕರ್ಮಯೋಗಿ ಡಾ।। ದಿನಕರ ದೇಸಾಯಿಯವರ ಗರಡಿಯಲ್ಲಿ ಪಳಗಿದ ವಿಷ್ಣುನಾಯ್ಕ ತಮ್ಮ ಬದುಕು-ಬರವಣಿಗೆ ಎರಡರಲ್ಲಿಯೂ ಅವರ ಛಲಗಾರಿಕೆಯನ್ನು ಮೆರೆದಿದ್ದಾರೆ. ಡಾ।। ಗೌರೀಶ ಕಾಯ್ಕಿಣಿಯವರಂಥ ಪ್ರಾಜ್ಞ ವಿಚಾರವಾದಿ ಸಾಹಿತಿಗಳನ್ನು ಬೆನ್ನಿಗೆ ಕಟ್ಟಿಕೊಂಡಿರುವ ಇವರು ರಂಗಕರ್ಮಿಯಾಗಿ, ಸಾರ್ವಜನಿಕ ಸಂಘ ಸಂಸ್ಥೆಗಳ ಕಾರ್ಯಕರ್ತರಾಗಿ, ಪ್ರಕಾಶನಸಾಹಸಿಯಾಗಿ ತಮ್ಮ ವ್ಯಕ್ತಿತ್ವಕ್ಕೆ ಹೆಚ್ಚಿನ ಮೆರುಗನ್ನು ತಂದುಕೊಂಡಿದ್ದಾರೆ; ಬೆರಗನ್ನೂ ಹುಟ್ಟಿಸಿದ್ದಾರೆ.

ಸಮಾಜವಾದಿ ಕಾಳಜಿ ಹಾಗೂ ವಾಸ್ತವ ಚಿಂತನೆಗಳಿಂದ ತನ್ನದೇ ಆದ ಸತ್ವವನ್ನು ಮೈಗೂಡಿಸಿಕೊಂಡಿರುವ ಇವರ ಕಾವ್ಯ ಪ್ರಾದೇಶಿಕ ಭಾಷೆಯ ಸೊಗಡಿನಿಂದ ಜನತೆಗೆ ಹತ್ತಿರವಾಗುತ್ತ ಬಂದಿರುವುದನ್ನು ಇದುವರೆಗಿನ ಕಾವ್ಯ ರಚನೆಯ ಬೆಳವಣಿಗೆಯಿಂದ ಕಂಡುಕೊಳ್ಳಬಹುದು. ಪ್ರಸ್ತುತ ಸಂಕಲನದಲ್ಲಿ ಅದೇ ಧೈರ್ಯ, ಛಲಗಾರಿಕೆ, ಸಾಮಾಜಿಕ ನ್ಯಾಯ ಕಾವ್ಯದ ಮುಖ್ಯ ಆಶಯವಾಗಿ ಇನ್ನಷ್ಟು 'ಕಾವ್ಯಮಯ'ವಾಗಿ ಅಭಿವ್ಯಕ್ತಿ ಪಡೆಯಲು ಹವಣಿಸಿದೆ. ವಿಷಾದಕ್ಕೂ ಅಲ್ಲಲ್ಲಿ ಎಡೆಯಿದ್ದರೂ 'ಸ್ವಂತಿಕೆ'ಗೆ ಮೊದಲ ಪಟ್ಟ. ('ಸ್ವಂತಿಕೆ' ಇಲ್ಲದ ಸಾವಿರ ಇದ್ದರೂ ನೆಮ್ಮದಿ ಹೆರುವುದೇ ಬಾಳು?) 'ಯುದ್ಧಮೀಮಾಂಸೆ'ಯ ವಿಚಾರವಂತಿಕೆ ಉಳಿದ ಪದ್ಯಗಳಲ್ಲಿಯೂ ಕಾಣಿಸಿಕೊಂಡಿದೆ. 'ವರದಿಯ ವರದಿ'ಯಂಥ ಕವನಗಳಲ್ಲಿ ವ್ಯಂಗ್ಯ ಪರಿಣಾಮಕಾರಿಯಾಗಿದೆ. ನೋವು ಸಿಟ್ಟನ್ನು ಮರೆಸುವುದಿಲ್ಲ. ('ನಿತ್ಯ ಅವಮಾನ') 'ಬನ್ನ-ಬೆವರು'ಗಳನ್ನು ಕವಿತೆಯಾಗಿಸುವಲ್ಲಿ ಹೆಚ್ಚಿನ ಒಲವು.

'ಮನೆ ತುಂಬಿದವಳಿಗೆ' 'ಹೀಗೊಂದು ಸಮಜಾಯಿಷಿ' 'ಹೆಣ್ಣಿಗೆ' 'ಅನಿರ್ವಚನೀಯ' - ಈ ಬಗೆಯ ಕವಿತೆಗಳ ಭಾವಸೂಕ್ಷ್ಮತೆ ಮೆಚ್ಚುವಂತಿದೆ. ಕನ್ನಡದಲ್ಲಿ ಬಂದಿರುವ ಆಧುನಿಕ ಸಂವೇದನೆಯ ಮಾತೃಸಂಹಿತೆಯ ಅತ್ಯುತ್ತಮ ಪದ್ಯಗಳ ಸಾಲಿನಲ್ಲಿ 'ಅವ್ವ ಮತ್ತು ನಾನು' ಖಂಡಿತವಾಗಿಯೂ ಸ್ಥಾನ ಪಡೆದುಕೊಳ್ಳುತ್ತದೆ.

(೨೦೦೦)

೭

## ಜಾನಪದ ಸೃಷ್ಟಿ-ದೃಷ್ಟಿ

ರಿವಾಯತಗಳನ್ನು ಸಮರ್ಥವಾಗಿ ಸಂಪಾದಿಸಿ, ಶಿವಶರಣೆಯರ ಜೀವನ ಮತ್ತು ಸಾಧನೆಯನ್ನು ವ್ಯಾಪಕವಾಗಿ ಮತ್ತು ಅರ್ಥಪೂರ್ಣವಾಗಿ ಗುರುತಿಸಿ, ಮೇಲ್ವರ್ಗದ ಮತ್ತು ಕೆಳವರ್ಗದ ವಚನಕಾರ್ತಿಯರ ವೈಚಾರಿಕ ನಿಲುವಿನಲ್ಲಿಯ ಸೂಕ್ಷ್ಮ ವ್ಯತ್ಯಾಸಗಳನ್ನು ಎತ್ತಿ ತೋರಿಸಿ, 'ಶಬ್ದ ಮಣಿದರ್ಪಣ'ವನ್ನು ಸಾಧಾರವಾಗಿ ನಿರೂಪಿಸಿ, ಸ್ವಂತಿಕೆಯನ್ನೂ, ಚಿಂತನಶೀಲತೆಯನ್ನೂ ಮೈಗೂಡಿಸಿಕೊಂಡ ಶ್ರೀಮತಿ ಎಚ್.ಎಂ. ಬೀಳಗಿಯವರ ಇದುವರೆಗಿನ ಬರವಣಿಗೆ ಮೆಚ್ಚಬೇಕಾದ ಒಂದು ಸದ್ದಿಲ್ಲದ ಸಾಧನೆ.

ಪ್ರಸ್ತುತ ಸಂಕಲನದಲ್ಲಿಯ ಪ್ರಬಂಧಗಳು ಬೀಳಗಿಯವರ ಜಾನಪದ ಆಸಕ್ತಿ ಹಾಗೂ ಅಧ್ಯಯನವನ್ನು ಚೆನ್ನಾಗಿ ಪ್ರತಿಬಿಂಬಿಸುವಂತಿವೆ. ಜನಪದ ಕಲೆಗಳು ಮತ್ತು ಮಹಿಳೆ ಕುರಿತ ದೀರ್ಘ ಲೇಖನ ತನ್ನ ಸಮಗ್ರತೆಯಿಂದ ಮಹತ್ವದ್ದೆನಿಸಿದರೆ ಜನಪದ ಕಾವ್ಯ ಮತ್ತು ಮಹಿಳಾ ಪ್ರತಿಭಟನೆ ಕುತೂಹಲಕರವಾದ ಅಂಶಗಳನ್ನು ಒಳಗೊಂಡಿದೆ. ಇಲ್ಲಿಯೂ ರಿವಾಯತುಗಳನ್ನು ಕುರಿತ ಅವರ ಅಧ್ಯಯನ ಫಲಪ್ರದವಾಗಿ ಮುಂದುವರೆದಿದೆ. 'ಮುಸ್ಲಿಂ ಹಬ್ಬ, ಜಾತ್ರೆ, ಉತ್ಸವಗಳು' ಯಾವುದೇ ವೈಭವೀಕರಣಕ್ಕೆ ಎಡೆಗೊಡದೇ, ಮಹತ್ವದ ವಿವರಗಳ ಯಥಾರ್ಥ ವಿವೇಚನೆಯಿಂದ ಗಮನಾರ್ಹವೆನಿಸಿದೆ.

ಲೇಖಕಿಯ ಅಂತರ್ಯದಲ್ಲಿರುವ ಸ್ತ್ರೀಪರ ಕಾಳಜಿ ಹಾಗೂ ಮತೀಯ ಬಾಂಧವ್ಯದ ಹಂಬಲ ಅಬ್ಬರವಿಲ್ಲದೆ ಅರಿವು ಮೂಡಿಸುವಂಥದು. ಸಂಯಮಪೂರ್ಣವಾದ ಸರಳ ಭಾಷೆ ಹಾಗೂ ಅಚ್ಚುಕಟ್ಟಾದ ನಿರೂಪಣೆ ಲೇಖಕಿಯ ಶೈಲಿಗೆ ಮೆರುಗನ್ನು ತಂದುಕೊಟ್ಟಿವೆ. ಇಂಥ ಬೆಲೆ ಬಾಳುವ ಕೃತಿಯನ್ನು ನೀಡಿದ ಶ್ರೀಮತಿ ಹಸನಬಿ ಬೀಳಗಿಯವರನ್ನು ಹಾರ್ದಿಕವಾಗಿ ಅಭಿನಂದಿಸುತ್ತೇನೆ.

(೨೦೦೦)

## ೮

## ಸಾಹಿತ್ಯ ಬಿಲ್ವ

ಶ್ರೀಮತಿ ಎಂ.ಕೆ. ಇಂದಿರಾ ಅವರ ಕಾದಂಬರಿಗಳನ್ನು ಕುರಿತ ತಮ್ಮ ಸಂಶೋಧನ ಗ್ರಂಥದಿಂದ ವಾಚಕರಿಗೆ ಪರಿಚಿತರಾಗಿರುವ ಡಾ. ಮಂದಾಕಿನಿ ಪುರೋಹಿತ ಅವರು ತಮ್ಮ ಸಾಹಿತ್ಯಾಭ್ಯಾಸವನ್ನು ಆಸ್ಥೆಯಿಂದ ಮುಂದುವರಿಸಿಕೊಂಡು ಬಂದುದರ ಫಲ 'ಸಾಹಿತ್ಯ ಬಿಲ್ವ'. ಕಳೆದ ಹತ್ತು-ಹನ್ನೆರಡು ವರ್ಷಗಳಿಂದ ಅವರು ಬರೆಯುತ್ತ ಬಂದಿರುವ ಲೇಖನ, ವಿಮರ್ಶೆ ಹಾಗೂ ವ್ಯಕ್ತಿ ಪರಿಚಯಗಳನ್ನು ಈ ಸಂಗ್ರಹ ಒಳಗೊಂಡಿದೆ.

ಮೊದಲ ಭಾಗದ ಲೇಖನಗಳಲ್ಲಿ ವಿಮರ್ಶಾತ್ಮಕ ಅಂಶಗಳು ಹೆಚ್ಚಾಗಿದ್ದು, ಕಥೆ-ಕಾದಂಬರಿಗಳ ವಿವೇಚನೆಯಲ್ಲಿ ಲೇಖಕಿಯ ಹೆಚ್ಚಿನ ಒಲವನ್ನು ಹಾಗೂ ಅಲ್ಲಲ್ಲಿ ಸ್ವಂತಿಕೆಯನ್ನು ಗುರುತಿಸಬಹುದು. 'ಚದುರಂಗರ ಮೂರು ಕಾದಂಬರಿಗಳು' ಅದಕ್ಕೊಂದು ನಿದರ್ಶನ. ಎರಡನೆಯ ಭಾಗದಲ್ಲಿಯ ಬರವಣಿಗೆ ವೈವಿಧ್ಯಪೂರ್ಣವಾಗಿದ್ದರೂ ಪತ್ರಿಕಾ ವಿಮರ್ಶೆಯ ಮಿತಿಗೆ ಒಳಪಟ್ಟಿರುವುದರಿಂದ ಅವು ಅನಿವಾರ್ಯವಾಗಿ ಪರಿಚಯಾತ್ಮಕವಾಗಿವೆ. ಮೂರನೆಯ ಭಾಗದಲ್ಲಿ ಸಾಹಿತಿಗಳೊಡನೆ ತಮಗಿರುವ ಸಂಪರ್ಕವನ್ನು ಬಳಸಿಕೊಂಡು ಅವರ ವ್ಯಕ್ತಿತ್ವದ ಕೆಲವು ಮುಖಗಳನ್ನು ಆತ್ಮೀಯವಾಗಿ ಚಿತ್ರಿಸಲು ಪ್ರಯತ್ನಿಸಲಾಗಿದೆ. (ಎಂ.ಕೆ. ಇಂದಿರಾ, ಶಾಂತಾದೇವಿ ಮಾಳವಾಡ, ಡಾ. ಸರೋಜಿನಿ ಶಿಂತ್ರಿ, ವರದರಾಜ ಹುಯಿಲಗೋಳ ಮೊದಲಾದವು ಹೆಚ್ಚು ವಿವರಗಳನ್ನು ಒಳಗೊಂಡಿವೆ)

ಡಾ. ಮಂದಾಕಿನಿ ಪುರೋಹಿತ ಅವರ ಅಧ್ಯಯನಶೀಲತೆ ಇನ್ನಷ್ಟು ವಿಮರ್ಶಾತ್ಮಕ ಒಳನೋಟಗಳೊಂದಿಗೆ ಮುಂದಿನ ಅವರ ಸಾಹಿತ್ಯ ವ್ಯವಸಾಯವನ್ನು ಹೆಚ್ಚು ಸಫಲಗೊಳಿಸಲಿ ಎಂದು ಹಾರೈಸುತ್ತೇನೆ.

(೨೦೦೦)

೬

## ಬಸವೋತ್ತರ ಯುಗದ ವಚನಕಾರರು

ಇಪ್ಪತ್ತೈದು ವರ್ಷಗಳ ಹಿಂದೆ ಸ್ವತಂತ್ರ ಕೃತಿರಚನೆಯ (ನಾಟಕ) ಬಳಿಕ ಸಂಶೋಧನೆಯಲ್ಲಿ ಆಸ್ಥೆ ವಹಿಸಿ ಹಂತ ಹಂತವಾಗಿ ಆಳಕ್ಕಿಳಿದು ಮೂವತ್ತೈದಕ್ಕೂ ಮಿಕ್ಕಿ ವಚನ ಸಾಹಿತ್ಯದ ಮಹತ್ವದ ಕೃತಿಗಳ (ಸಂಪಾದಿತ) ಪ್ರಕಟಣೆಯ ಮೂಲಕ ಶರಣ ಸಾಹಿತ್ಯದ ಅಧ್ಯಯನ, ಸಂಶೋಧನ ಹಾಗೂ ಸಂಪಾದನ ಕಾರ್ಯದಲ್ಲಿ ಶ್ರದ್ಧೆಯಿಂದ ತಮ್ಮನ್ನು ಸಮರ್ಪಿಸಿಕೊಂಡ ಡಾ. ವೀರಣ್ಣ ರಾಜೂರ ಅವರ ಇದುವರೆಗಿನ ಕೊಡುಗೆ ಗಮನಾರ್ಹವಾದದ್ದು. ಪ್ರಸ್ತುತ ಕೃತಿ 'ಬಸವೋತ್ತರ ಯುಗದ ವಚನಕಾರರು' (೧೩ರಿಂದ ೧೯ನೆಯ ಶತಮಾನದ ಅವಧಿ) ವಿಷಯದ ಸಮಗ್ರತೆ ಹಾಗೂ ವಿವೇಚನೆಯ ದೃಷ್ಟಿಯಿಂದ ವಚನ ಸಾಹಿತ್ಯದ ಅಭ್ಯಾಸಿಗಳ ಲಕ್ಷ್ಯವನ್ನು ಸಹಜವಾಗಿ ತನ್ನೆಡೆಗೆ ಸೆಳೆದುಕೊಳ್ಳಬಲ್ಲುದು.

'ಬಸವ ಪೂರ್ವ ಯುಗ' ಹಾಗೂ 'ಬಸವ ಯುಗ'ದ ವಚನ ಸಾಹಿತ್ಯ ಕುರಿತು ಸಾಕಷ್ಟು ಅಧ್ಯಯನ ಈಗಲೂ ಮುಂದುವರಿದಿದೆಯಾದರೂ ಕೆಲವೊಂದು ಪ್ರಸಿದ್ಧ ವಚನಕಾರರನ್ನು ಹೊರತುಪಡಿಸಿದರೆ ಬಸವೋತ್ತರ ಯುಗ ಬಹುಮಟ್ಟಿಗೆ ನಿರ್ಲಕ್ಷಿತವಾಗಿಯೇ ಉಳಿದಿದೆ. ಈ ಸಂದರ್ಭದಲ್ಲಿ ಹೊಸದಾಗಿ ಬೆಳಕಿಗೆ ಬಂದವರನ್ನು ಹಿಡಿದು ಇನ್ನೂ ಹೆಚ್ಚಿನ ಸಂಖ್ಯೆಯ ಮಹತ್ವದ ವಚನಕಾರರ ಬಗೆಗೆ ಅನೇಕ ಹೊಸ ಸಂಗತಿಗಳೊಂದಿಗೆ ಕಾಲಾನುಕ್ರಮದಲ್ಲಿ ಅವರ ಬದುಕು-ಬರೆಪಗಳನ್ನು ನಿಶ್ಚಿತರೂಪದಲ್ಲಿ ಕಟ್ಟಿಕೊಡಲು ಡಾ. ರಾಜೂರ ಇಲ್ಲಿ ಪ್ರಯತ್ನಿಸಿದ್ದಾರೆ. ಸೂಕ್ತ ಆಧಾರಾಂಶಗಳ ಹಿನ್ನೆಲೆಯಲ್ಲಿ, ಬಾಲಸಂಗಯ್ಯ (ಅಪ್ರಮಾಣದೇವ) ನೆಂಬ ಮಹತ್ವದ ವಚನಕಾರನ ಹೆಸರು-ಕಾಲ-ಜೀವನ ಸಂಗತಿಗಳ ಸಮಸ್ಯೆಗೆ ಪರಿಹಾರ ಸೂಚಿಸಿರುವುದು ಇದಕ್ಕೊಂದು ಉತ್ತಮ ಉದಾಹರಣೆಯಾಗಿದೆ. ಪ್ರಥಮ ಬಾರಿಗೆ ಬೆಳಕಿಗೆ ಬಂದಿರುವವರ ಕುರಿತು ಸಾಧ್ಯವಿದ್ದಷ್ಟು ಹೆಚ್ಚಿನ ವಿವರಗಳನ್ನು ನೀಡಿರುವುದು ಇಲ್ಲಿಯ ವಿಶೇಷ. ಬಸವೋತ್ತರ ಯುಗದ ವಚನಕಾರರ ವೈಶಿಷ್ಟ್ಯಗಳನ್ನು ಹತ್ತೊಂಬತ್ತು ಅಂಶಗಳಲ್ಲಿ ಸಮರ್ಪಕವಾಗಿ ಗುರುತಿಸಲಾಗಿದೆ.

ಪ್ರಚಲಿತ ಜ್ಞಾನವನ್ನು ಹೆಚ್ಚಿಸುವ ಸಂಶೋಧನೆಯ ಶಿಸ್ತಿನೊಂದಿಗೆ ಸಾಹಿತ್ಯಕ ಸ್ಪರ್ಶದಿಂದ ಮೆರುಗು ಪಡೆದು ತಿಳಿಯಾದ ಶೈಲಿಯೂ ಕೂಡಿ ಡಾ. ವೀರಣ್ಣ ರಾಜೂರ ಅವರ ಪ್ರಸ್ತುತ ಕೃತಿ ಈ ಕ್ಷೇತ್ರದಲ್ಲಿ ಅವರು ಮುಂದಿಟ್ಟ ಮತ್ತೊಂದು ಮಹತ್ವದ ಹೆಜ್ಜೆಯೆಂದು ಧಾರಾಳವಾಗಿ ಹೇಳಬಹುದು.

(೨೦೦೧)

೧೦

## ದೆವ್ವದ ಜೊತೆ ಮಾತುಕಥೆ

ಕೆಲಮಟ್ಟಿಗೆ ಇಳಿಮುಖವಾದಂತೆ ತೋರುತ್ತಿರುವ ಕನ್ನಡ ಕಾವ್ಯದ ಇಂದಿನ ಅವಸ್ಥೆಯಲ್ಲಿ ಈ ಸಂಕಲನ ಒಂದು ವಿಶಿಷ್ಟ ಕೊಡುಗೆಯಾಗಿ ಹೊರಬಂದಿದೆ. ಕೆಲವರು ಮುಖ್ಯ ಕವಿಗಳು ನವ್ಯದ ಕಣಿವೆ ಕಂದರಗಳಲ್ಲಿ ಹಾದು ಬಂದರೂ ನವೋದಯದ ಜೀವಸ್ವರಕ್ಕೆ ವಿಮುಖರಾಗದೆ "ನಮ್ಮ ಪರಂಪರೆಯಲ್ಲಿ ಚೈತನ್ಯದಾಯಕವಾದುದನ್ನು ಉಳಿಸಿಕೊಂಡು ಸ್ವೋಪಜ್ಞತೆಯನ್ನು ಬೆಳೆಸಿಕೊಂಡು" ಕಾವ್ಯ ರಚನೆಯನ್ನು ಮುಂದುವರಿಸಿಕೊಂಡು ಬಂದಿದ್ದಾರೆ. ಅಂಥವರಲ್ಲಿ ಅರ್ಥಪೂರ್ಣ ಬೆಳವಣಿಗೆಯನ್ನು ತೋರಿದ ಎಸ್.ಎಸ್. ಲಕ್ಷ್ಮೀನಾರಾಯಣ ಭಟ್ಟರ ಕಾವ್ಯ ಅತ್ಯಂತ ಗಮನಾರ್ಹವಾದದ್ದು.

'ದೆವ್ವದ ಜೊತೆ ಮಾತುಕಥೆ' ತುಂಬ ಕುತೂಹಲಕಾರಿಯಾಗಿದ್ದು ಭಟ್ಟರ ವಿಶಿಷ್ಟ ಕೊಡುಗೆಯಾಗಿ ನಿಲ್ಲುತ್ತದೆ. ಆರೋಗ್ಯಕರವಾದ ವಿಮರ್ಶೆಯ ನೋಟ ಇಲ್ಲಿದೆ. ಭಾಷಾ ಶೈಲಿ ಕೂಡ ಒಮ್ಮೆಲೇ ಭಿನ್ನವಾಗಿರುವುದನ್ನು ಕಾಣಬಹುದು. ಕವಿಯ ಸಾಕ್ಷೀ ಪ್ರಜ್ಞೆ ಇಲ್ಲಿ ಪ್ರಖರವಾಗಿ ಕಾಣಿಸಿಕೊಂಡಿದೆ. ಈ ಕವಿತೆಗಳ ನಾಯಕ ಇಂದಿನ ಬುದ್ಧಿ ಜೀವಿಗಳ ಪ್ರತಿನಿಧಿಯಾಗಿರುತ್ತ ಕನ್ನಡವಲ್ಲಿ ಇದೊಂದು ಅಪರೂಪದ ಕವನ ರೂಪದ ಕಥಾನಕವಾಗಿದೆ. ಭಟ್ಟರ ಈ ಹೊಸ ರಚನೆಗಳು ಬೇಂದ್ರೆಯವರ ವಿಶಿಷ್ಟ ಭಾವಗೀತಾತ್ಮಕತೆ ಹಾಗೂ ಅಡಿಗರ ವ್ಯಂಗ್ಯದ ಸ್ಫೋಟಕತೆಯ ಬೆಸುಗೆಯಂತಿದೆ.

(೨೦೦೦)

೧೧

# ಮಹಾನಿರ್ಗಮನ

'ಮುಗಿಯದ ದಂಡಯಾತ್ರೆಗೆ ಹೊರಟ ಒಂಟಿಯೋಧ'
'ಕುಣಿವ ಭಾವಗಳ ಮೆರವಣಿಗೆಗೆ ಮೈತುಂಬಿದರೂ
ಜಗ ಕಂಡಂತೆ ಬಯಲಗೊಮ್ಮಟ'
'ಏಳೇಳು ಜನ್ಮಕ್ಕೆಂದು ನಾವೊಟ್ಟಿಕೊಂಡು ಪ್ರೀತಿ ಬಣವೆ'
'ದ್ವೇಷವೆಂದರೆ ಆತ್ಮಹತ್ಯೆಯಲ್ಲದೆ ಬೇರೇನೂ ಅಲ್ಲ'
'ಪ್ರಳಯ ಪೂರ್ವದ ಮೌನದೊಡಲಲ್ಲೇ ವಿಪ್ಲವದ ಬೀಜಗಳು'
'ದಹಿಸಲೆಂದು ಧಗಧಗಿಸುವ ಬೆಂಕಿಗುಳಿವುದು ಬರಿ ಬೂದಿ'

- ಹೀಗೆ ವೈಯಕ್ತಿಕ ಹಾಗೂ ಸಾಮಾಜಿಕ ವಾಸ್ತವವನ್ನು ಅರಗಿಸಿಕೊಂಡು ಅರ್ಥದ ಹೊಸ ಸಾಧ್ಯತೆಗಳತ್ತ ಕೈ ಚಾಚುತ್ತಿರುವ ವಸ್ತು, ರೀತಿ ಆಶಯಗಳಲ್ಲಿ ಸಾಮರಸ್ಯಗಳನ್ನು ಕಂಡುಕೊಳ್ಳುತ್ತಿರುವ ಮೋಹನ ನಾಗಮ್ಮನವರ ಅವರ ಕಾವ್ಯ ಕೃಷಿಗೆ ಮಹಾನಿರ್ಗಮನದಲ್ಲಿ ಒಂದು ಬಗೆಯ ಸೂಕ್ಷ್ಮಾಭಿವ್ಯಕ್ತಿ ದಕ್ಕಿರುವುದು ಮಹತ್ವದ ಬೆಳವಣಿಗೆಯಾಗಿದೆ. ದಲಿತ, ಬಂಡಾಯ ಪ್ರಜ್ಞೆಯಲ್ಲಿ ತನ್ನ ನೆಲೆಯನ್ನು ಈ ಮೊದಲೇ ಕಂಡುಕೊಂಡಿದ್ದರೂ, ಯಾವುದೇ ನಿಯಂತ್ರಣಕ್ಕೆ ಒಳಗಾಗದೇ ಆಶಾವಾದ, ನಿರಾಶವಾದಗಳ ದಂಡೆಗೆ ಆಗೀಗ ಅಪ್ಪಳಿಸಿದರೂ ಮಧ್ಯದಲ್ಲಿಯೇ ತನ್ನ ಸೆಳವನ್ನು ಉಳಿಸಿಕೊಳ್ಳುವ ಪ್ರವಾಹದಂತೆ ಈ ಕಾವ್ಯದ ಗತಿ ಇದೆ. ಅದೇನೇ ಇದ್ದರೂ ತನ್ನ ಮೊದಲಿನ ಸಿಟ್ಟನ್ನು ಹಿಟ್ಟು ಮಾಡಿ ರೊಟ್ಟಿ ಬಡಿದು ಹಂಚಿನಿಂದ ಹೊರತೆಗೆದು ಹಂಚುವ ಈ ಗುಣ ಇಂದಿನ ಸಂದರ್ಭದಲ್ಲಿ ನಿಜಕ್ಕೂ ಅಪೇಕ್ಷಣೀಯ. ಅಂತೆಯೇ ಸ್ವಾಗತಾರ್ಹ.

(೨೦೦೩)

## ೧೨

## ಆಳು ಕೂಗಿನ ಹಕ್ಕಿ

ಕಳೆದ ಎರಡು ಎರಡೂವರೆ ದಶಕಗಳಿಂದ ಕಾವ್ಯ ಕ್ಷೇತ್ರದಲ್ಲಿ ಮನಸ್ಸುಗೊಟ್ಟು ಕೃಷಿಗೈದ ಬಸವರಾಜ ವಕ್ಕುಂದ ಅವರ ಸಾಧನೆ ಭಾವ, ಭಾಷೆ ಹಾಗೂ ಅಭಿವ್ಯಕ್ತಿಯ ದೃಷ್ಟಿಯಿಂದ ವಿಶಿಷ್ಟವಾದುದು. ಈಡಾಗಿ ಬೆಳೆ ತೆಗೆಯುವ ಆಶೆಯಿಂದ ಸುಧಾರಿಸಿದ ಬೀಜ, ರಾಸಾಯನಿಕ ಗೊಬ್ಬರ, ಕ್ರಿಮಿನಾಶಕ ಔಷಧಿ, ಯಾಂತ್ರಿಕ ಉಪಕರಣ ಇವುಗಳಾವನ್ನೂ ಬಳಸದೆ, ಆಧುನಿಕತೆಯ ಗಾಳಿಗೆ ತನ್ನನ್ನು ಮುಕ್ತವಾಗಿ ಒಡ್ಡಿಕೊಂಡರೂ ತನ್ನ ನೆಲದ ಜೀವಸತ್ವವನ್ನು ಹೀರಿಕೊಂಡು ಬೆಳೆದ ಇವರ ಕಾವ್ಯ ತನ್ನಷ್ಟಕ್ಕೇ ಹೆಚ್ಚು ಆರೋಗ್ಯಕರವಾಗಿರುವುದು ಇಂದಿನ ಸಂದರ್ಭದಲ್ಲಿ ಗಮನಿಸಬೇಕಾದ ಸಂಗತಿಯಾಗಿದೆ. ಮೊದಲಿನಿಂದಲೂ ತನ್ನ ಹಾಗೂ ತನ್ನ ಪರಿಸರದ ಸಂಘರ್ಷಕ್ಕೆ ಪ್ರಸ್ತಾರ ಹಾಕುತ್ತ ಅದರ ಲಯವನ್ನು ಕಂಡುಕೊಂಡು ಹತಾಶೆ, ಅತೃಪ್ತಿಯ ಸ್ಥಿತಿಯಲ್ಲಿಯೂ ಭಿನ್ನವಾಗಿ ಯೋಚಿಸಬಲ್ಲ ಕವಿಯಾಗಿ ಇವರು ರೂಪುಗೊಂಡಿರುವುದು ಒಂದು ವಿಶೇಷ. ವ್ಯಂಗ್ಯ ವಿಡಂಬನೆಗೂ ಚಾಚಿಕೊಂಡು, ಸೋಲು ಗೆಲವುಗಳ ದಂಡೆ ಬಂಡೆ ನಡುವೆ ಈ ಕಾವ್ಯ ಜೀವಂತ ವಾಹಿನಿಯಾಗಿರುವುದು ಕವಿಯ ಜೀವನ ಶ್ರದ್ಧೆಗೆ ಸಂಕೇತವಾಗಿದೆ. 'ಆಳು ಕೂಗಿನ ಹಕ್ಕಿ'ಯಲ್ಲಿ ನೋವನ್ನು ಅವುಡುಗಚ್ಚಿ ಹಿಡಿದ ಪ್ರೌಢವಾದ ಚಿಂತನೆ ಹಾಗೂ ತಾತ್ವಿಕ ಜಿಜ್ಞಾಸೆ ಓದುಗರ ಹಾಗೆಯೇ ವಿಮರ್ಶಕರ ಮನಸ್ಸನ್ನು ಸೆಳೆದುಕೊಳ್ಳದೆ ಇರಲಾರದು. ಇಲ್ಲಿಯ ಅಭಿವ್ಯಕ್ತಿಗೆ, ಕಾಣ್ಕೆಗೆ ಹೊಸ ಆಯಾಮ ಪ್ರಾಪ್ತವಾಗಿರುವುದರಿಂದ ವಸ್ತು ಸತ್ಯವನ್ನು ಮೀರಿದ ಕಾವ್ಯ ಸತ್ಯವನ್ನು ಕಾಣಿಸುವುದು ಈ ಸಂಗ್ರಹದ ಕೆಲವು ಕವಿತೆಗಳಿಗೆ ಸಾಧ್ಯವಾಗಿದೆ. ಪ್ರಚಲಿತ ಚಳುವಳಿಗಳ ಮಧ್ಯದಲ್ಲಿಯೂ ವಿಚಲಿತರಾಗದೆ ಸ್ವಂತಿಕೆಯಿಂದ ಬೆಳೆದು ಬಂದ ವಕ್ಕುಂದ ನವ್ಯೋತ್ತರ ಸಂದರ್ಭದಲ್ಲಿ ಇನ್ನಷ್ಟು ಒಡೆದು ಕಾಣುತ್ತಾರೆ.

೨೦೦೪

೧೩

# ಮೌನ ಮಾತಾಡಿತು

ಏನನ್ನಾದರೂ ಬರೆಯಬಹುದು, ಆದರೆ ಆತ್ಮಕಥೆಯನ್ನು ಬರೆದು ನಿತ್ತರಿಸುವುದು ಅಷ್ಟು ಸುಲಭವಲ್ಲ. ಅದೊಂದು ಅಸಿಧಾರಾವ್ರತ. ನನ್ನ ಹಿರಿಯ ಹಾಗೂ ಆತ್ಮೀಯ ಸ್ನೇಹಿತರಾದ (ಸಹೋದ್ಯೋಗಿಗಳೂ ಆಗಿದ್ದ) ಶ್ರೀ ಎಸ್.ಬಿ. ಶಾಪೇಟಿಯವರು ಎಂಬತ್ತರ ಗಡಿಯನ್ನು ದಾಟುತ್ತಿರುವ ಈ ಪಕ್ವಕಾಲದಲ್ಲಿ ತಾವು ನಡೆದು ಬಂದ ದಾರಿಯ ಕಡೆಗೆ ಒಂದು ಹೊರಳು ನೋಟವನ್ನು ಬೀರಿರುವದು ತುಂಬ ಅರ್ಥಪೂರ್ಣವಾಗಿದೆ. ವಿಜಾಪುರದಲ್ಲಿ ಕಳೆದ ಬಾಲ್ಯದ ರೋಚಕ ನೆನಹುಗಳೊಂದಿಗೆ ಪ್ರಾರಂಭವಾಗಿ ಉಚ್ಚಶಿಕ್ಷಣ ಪಡೆಯುವದರೊಂದಿಗೆ ಅಲ್ಲಿಯೇ (ರಾಜಾರಾಮ ಕಾಲೇಜ) ಅಧ್ಯಾಪಕ ವೃತ್ತಿಯನ್ನು ಕೈಕೊಂಡ ಕೊಲ್ಲಾಪುರದ ಗಾಢವಾದ ಋಣಾನುಬಂಧಕ್ಕೆ ಕೃತಜ್ಞರಾಗಿರುತ್ತ ಶಿಕ್ಷಣ ಕ್ಷೇತ್ರದ ವಿಶಿಷ್ಟ ಅನುಭವಗಳೊಂದಿಗೆ ಅವರು ಧಾರವಾಡಕ್ಕೆ ಬಂದು ನೆಲೆಸಿದ ಚಿತ್ರ ಚಿತ್ತವೇಧಕವಾಗಿದೆ.

ಡಾ. ಡಿ.ಸಿ. ಪಾವಟೆಯವರಂಥ ಶ್ರೇಷ್ಠ ಶಿಕ್ಷಣ ತಜ್ಞ ಹಾಗೂ ದಕ್ಷ ಆಡಳಿತಗಾರರ ಕೈಯಲ್ಲಿ ಪಳಗಿ, ಅವರಿಂದಲೇ ಸೈ ಎನ್ನಿಸಿಕೊಂಡ ಶಾಪೇಟಿಯವರು ಎರಡು ದಶಕಗಳ ತಮ್ಮ ಕರ್ನಾಟಕ ವಿಶ್ವವಿದ್ಯಾಲಯದ ಆಡಳಿತಾನುಭವಗಳನ್ನು (ವಿಶೇಷವಾಗಿ ಪರೀಕ್ಷಾ ವಿಭಾಗದ ನಿಯಂತ್ರಣಾಧಿಕಾರಿಯಾಗಿ) ಅತಿರಂಜಿತಗೊಳಿಸದೆ, ಸ್ವಪ್ರಶಂಸೆಯ ನೆರಳು ಕೂಡ ಬೀಳದಂತೆ ಜಾಗ್ರತೆವಹಿಸಿ ವಸ್ತುನಿಷ್ಠವಾಗಿ ನಿರೂಪಿಸಿರುವದು ನಿಜಕ್ಕೂ ಮೆಚ್ಚತಕ್ಕ ಸಂಗತಿ. ಮಾನವೀಯತೆಯನ್ನು ಕಳೆದುಕೊಳ್ಳದ ಅವರ ಕರ್ತವ್ಯನಿಷ್ಠೆ ಹಾಗೂ ಶಿಸ್ತುಬದ್ಧ ಜೀವನಕ್ಕನುಗುಣವಾಗಿ ನೇರ ಹಾಗೂ ಸರಳವಾಗಿ ಸಾಗುವ ಇಲ್ಲಿಯ ಬರವಣಿಗೆ ತನ್ನ ನಿರ್ಲಿಪ್ತತೆಯಲ್ಲಿಯೇ ಒಂದು ಬಗೆಯ ಆಪ್ತತೆಯನ್ನು ಪಡೆದುಕೊಳ್ಳುತ್ತದೆ. ಸಾಕ್ಷೀಪ್ರಜ್ಞೆಯಿಂದ ನೋಡಿಕೊಂಡಾಗ ತಮ್ಮ ಬದುಕಿನ ರೀತಿ-ನೀತಿಗಳು ಅವರಿಗೆ ತೃಪ್ತಿ ನೀಡಿವೆ. ಆದ್ದರಿಂದಲೇ 'ಮೌನ ಮಾತನಾಡಿ'ದ್ದೂ ಸಾರ್ಥಕವೆನಿಸಿದೆ.

(೨೦೦೦)

೧೪

# ನಿರ್ಭಯದ ನಿಲುವು

ಅಕ್ಕಮಹಾದೇವಿ ಕುರಿತ ಸಮಗ್ರ ವಿವೇಚನೆಯ ಮಹಾಪ್ರಬಂಧ, ಅದಕ್ಕೆ ಪೂರಕವೆನ್ನುವಂತೆ ಪ್ರಕಟವಾದ 'ಧರ್ಮ-ಮಹಿಳೆ ಮತ್ತು ಸಮಾಜ' ಹಾಗೂ ಮಹಿಳಾವಾದಿ ಓದಿನ ಕ್ರಮದಿಂದ ರೂಪುಗೊಂಡ ಚಿಂತನೆಗಳ 'ಮಹಿಳೆ-ಸಾಹಿತ್ಯ-ಸಂಸ್ಕೃತಿ'ಯಂಥ ಗಮನಾರ್ಹ ಕೃತಿಗಳನ್ನು ನೀಡಿದ ಡಾ. ಶಾಂತಾ ಇಮ್ರಾಪುರ ಅವರ ವಚನ ಸಾಹಿತ್ಯದ ಆಳವಾದ ಅಧ್ಯಯನ ಹಾಗೂ ಸ್ತ್ರೀ ಪರ ಚಿಂತನೆಯ ಮುಂದಿನ ಮಜಲನ್ನು ಪ್ರಸ್ತುತ ಕೃತಿಯಲ್ಲಿ ಕಾಣಬಹುದು.

ಯಾವುದೇ ವಿಷಯವನ್ನು ಎತ್ತಿಕೊಂಡಾಗಲೂ ಅದರ ಹಿನ್ನೆಲೆ, ಮುನ್ನೆಲೆಗಳನ್ನು ಸರಿಯಾಗಿ ಗಮನದಲ್ಲಿಟ್ಟುಕೊಂಡು ವಿವರವಾಗಿ ಪರಿಶೀಲಿಸಿ ತಮ್ಮ ವಿಚಾರಗಳನ್ನು ಪ್ರತಿಪಾದಿಸುವುದರಿಂದ ಒಂದು ಸಮುಚಿತವಾದ ಸಮಗ್ರ ನೋಟ ಇಲ್ಲಿ ಓದುಗರಿಗೆ ದೊರೆಯುತ್ತದೆ. ಶಿವಶರಣೆಯರ ವಚನಗಳ ಸಾಹಿತ್ಯಿಕ ನೆಲೆ, ಅನುಭಾವ, ದಾಂಪತ್ಯ ಮೀಮಾಂಸೆ, ಬಸವಯುಗದ ಮಹಿಳೆಯರ ಅಸ್ತಿತ್ವ ಮತ್ತು ಅನನ್ಯತೆಯ ಶೋಧ, ಅಲ್ಲಿ ಒಡಮೂಡಿದ ಸ್ತ್ರೀತ್ವದ ಮಾದರಿಗಳು ಇತ್ಯಾದಿಗಳನ್ನು ಗುರುತಿಸಿ ವಿಶ್ಲೇಷಿಸುವಲ್ಲಿ ಯಾವುದೇ ಬಗೆಯ ಅತಿರೇಕವಿರದೆ ಸಂಯಮದಿಂದ ವಾಸ್ತವತೆಯನ್ನು ಮನಗಾಣಿಸಿಕೊಡಲು ಇಲ್ಲಿಯ ಬರವಣಿಗೆ ಸಮರ್ಥವಾಗಿದೆ. ಶರಣ ಸಂಸ್ಕೃತಿಯಲ್ಲಿ ವ್ಯಕ್ತಿ ಸಮಾಜ ಮೌಲ್ಯಗಳ ಸಾಹಚರ್ಯವನ್ನು ಎತ್ತಿತೋರಿಸಿರುವುದು ಹೆಚ್ಚು ಪ್ರಸ್ತುತವೆನಿಸುತ್ತದೆ. 'ಜೈನ ಧರ್ಮ ಮತ್ತು ಮಹಿಳೆ', 'ವೇಮನರ ವಚನಗಳಲ್ಲಿ ಮಹಿಳಾ ಸಂಬಂಧಿ ಧೋರಣೆಗಳು' 'ಆಧುನಿಕ ವಚನಕಾರ್ತಿಯರು' ಲೇಖನಗಳು ಲೇಖಕಿಯ ವಿಮರ್ಶಾತ್ಮಕ ದೃಷ್ಟಿಯಿಂದಾಗಿ ತಮ್ಮ ಸಮತೋಲನವನ್ನು ಕಾಯ್ದುಕೊಂಡಿವೆ.

ವಚನ ಸಾಹಿತ್ಯವನ್ನು ಅದರ ಮುಖ್ಯ ಉದ್ದೇಶಕ್ಕೆ ಭಂಗ ಬರದಂತೆ ಸ್ತ್ರೀಪರ ಚಿಂತನೆಯ ದೃಷ್ಟಿಯಿಂದ ಪರಿಶೀಲಿಸಿ ಅದರ ಮೌಲ್ಯವನ್ನು ಕಂಡುಹಿಡಿಯುವಲ್ಲಿ 'ನಿರ್ಭಯದ ನಿಲುವು' ಒಂದು ಮಹತ್ವದ ಕೃತಿಯಾಗಿ ನಿಲ್ಲಬಲ್ಲದು.

(೨೦೦೫)

೧೫

## ನೂರು ಕಣ್ಣಿನ ಗರಿ

‘ಎಷ್ಟು ನೋಡಿದರೂ ಕಂಡಿಲ್ಲ ಪೂರ್ತಿ, ಹಿಡಿಯಬೇಕೆನ್ನಿಸಿತು ಇಡಿಯ ಮೂರ್ತಿ’ ಸಮಕಾಲೀನ ಕಾವ್ಯರಚನೆಯ ಸಂದರ್ಭದಲ್ಲಿ ಕವಿ ವಿಜಯ ಧಾರವಾಡ ಅವರ ಇಂಥ ಒಂದು ನಿರಂತರ ಪ್ರಯತ್ನ ಫಲ ‘ನೂರು ಕಣ್ಣಿನ ಗರಿ’. ಜೀವನದ ವಿವಿಧ ಬಗೆಯ ಅನುಭವಗಳಿಗೆ ವೈಯಕ್ತಿಕವಿರಲಿ, ಸಾಮಾಜಿಕವಿರಲಿ, ಕವಿ ತೋರಿಸುವ ಪ್ರತಿಕ್ರಿಯೆಯಲ್ಲಿ ವಸ್ತುನಿಷ್ಠ ದೃಷ್ಟಿ ಒಡೆದು ಕಾಣುತ್ತಿರುವುದು ಅವರ ಈ ಪ್ರಥಮ ಕವನ ಸಂಗ್ರಹದ ಒಂದು ಗಮನಾರ್ಹ ಅಂಶವಾಗಿದೆ. ಭಾಷೆಯನ್ನು ಯಾವ ಮುಲಾಜೂ ಇಲ್ಲದೆ, ಬಿಗುಮಾನವಿಲ್ಲದೆ ತಮ್ಮ ಅಭಿವ್ಯಕ್ತಿಗೆ ದುಡಿಸಿಕೊಂಡಿದ್ದಾರೆ. ಕಾವ್ಯವಸ್ತುವನ್ನು ಅದರ ವಿವಿಧ ಮಗ್ಗಲುಗಳೊಂದಿಗೆ, ಜೀವಂತ ವಿವರಗಳ ಮೂಲಕ ತನ್ನ ಆಶಯಕ್ಕನುಗುಣವಾಗಿ ಚಿತ್ರಿಸುವ ಒಂದು ವಿಶಿಷ್ಟ ಕ್ರಮವನ್ನು ಇಲ್ಲಿಯ ಬಹುತೇಕ ಕವನಗಳಲ್ಲಿ ಕಾಣಬಹುದು. ವರ್ಣ ಚಿತ್ರದ ಆಡಿಯಲ್ಲಿರುವ ಕಲಾವಿದನ ರುಜುವಿನಲ್ಲಿಯೂ ಒಂದು ವಿಶೇಷವಿರುವಂತೆ ಇಲ್ಲಿಯ ಕೆಲವು ಕವಿತೆಗಳು ಕೊನೆಗಾಣುವ ರೀತಿ ಅನನ್ಯವಾಗಿದೆ. ಜೀವನದಲ್ಲಿ ಯಾರ ಹಂಗೂ ಇಲ್ಲದ ಆತ್ಮಸ್ಥೈರ್ಯದಿಂದ ಸಾಹಸಗೈದು ಮುನ್ನಡೆಯಬೇಕೆಂಬ, ಹುಡುಕುವ ಹೆಜ್ಜೆಗೆ ನೂರೆಂಟು ದಾರಿಗಳಿವೆ ಎಂಬ ಕೆಚ್ಚು, ಪೌರುಷ ಇಲ್ಲಿಯ ಮುಖ್ಯ ಕವಿತೆಗಳ ಸ್ಥಾಯಿಯಾಗಿ ಗಮನ ಸೆಳೆಯುತ್ತವೆ. ಹಾಗೆಯೇ ವಿವಿಧ ಸಂದರ್ಭಗಳಲ್ಲಿ ಕಂಡುಬರುವ ಆತ್ಮಾವಲೋಕನ, ಸ್ವ-ಪರ ವಿಮರ್ಶೆ ಸ್ವಲ್ಪ ಆಕ್ರೋಶಕ್ಕೆಡೆಗೊಟ್ಟಿದ್ದರೂ ಕವಿಯ ಆರೋಗ್ಯಕರವಾದ ಜೀವನ ಧೋರಣೆಯನ್ನೇ ಬಿಂಬಿಸುತ್ತವೆ. ಸರಳತೆಯಿಂದ ಸಂಕೀರ್ಣತೆಗೆ ಬೆಳವಣಿಗೆ ಹೊಂದಿರುವ ವಿಜಯ ಧಾರವಾಡ ಅವರಲ್ಲಿ ಒಬ್ಬ ಭರವಸೆಯ, ಭಿನ್ನ ಶೈಲಿಯ ಕವಿಯನ್ನು ಕಾವ್ಯ ಪ್ರೇಮಿಗಳು ಗುರುತಿಸುತ್ತಾರೆಂದು ಆಶಿಸುತ್ತೇನೆ.

(೨೦೦೫)

## ೧೬

## ಕೊರಳು-ಕೊಳಲು

'ಕನ್ನಡ ಕಥನ ಸಾಹಿತ್ಯ : ಕಾದಂಬರಿ' (೧೯೯೪), 'ಕನ್ನಡ ಕಥನ ಸಾಹಿತ್ಯ : ಸಣ್ಣಕತೆ' (೨೦೦೩) ಯಂಥ ಮೌಲಿಕ ಗ್ರಂಥಗಳನ್ನು ನೀಡಿದ ಡಾ. ಜಿ.ಎಸ್. ಆಮೂರ ಅದೇ ಉತ್ಕೃಷ್ಟ ಮಾದರಿಯಲ್ಲಿ 'ಕೊರಳು-ಕೊಳಲು' ಸಂಪುಟವನ್ನು ಸಿದ್ಧಪಡಿಸಿ ಇಪ್ಪತ್ತನೆಯ ಶತಮಾನದ ಕನ್ನಡ ಕಾವ್ಯದ ಸಾಧನೆಯನ್ನು ಎಲ್ಲ ಬಗೆಯ ಸೂಕ್ಷ್ಮಗಳೊಂದಿಗೆ ಎತ್ತಿ ತೋರಿಸಿರುವುದು ಸಾಹಿತ್ಯದ ಪ್ರಮುಖ ಪ್ರಕಾರಗಳಲ್ಲಿ ಅವರಿಗಿರುವ ಸಮಾನ ಆಸಕ್ತಿ ಹಾಗೂ ತೀವ್ರ ಕಾಳಜಿಗಳ ದ್ಯೋತಕವಾಗಿದೆ.

ಈ ಗ್ರಂಥದ ಮೊದಲ ಭಾಗದ ಲೇಖನದಲ್ಲಿಯೇ 'ಕವಿರಾಜಮಾರ್ಗ'ದ ಈಚಿನ ರಾಜಕೀಯ ವ್ಯಾಖ್ಯಾನಗಳು, ಒಳ್ಳೆಯ ಸಾಹಿತ್ಯ ಸೃಷ್ಟಿಯ ಅದರ ಉದ್ದೇಶಗಳನ್ನು ಗೌಣವಾಗಿಸಿರುವುದರ ಬಗ್ಗೆ ಎಚ್ಚರಿಕೆ ನೀಡಿರುವುದು ಆಮೂರರ ವಿಮರ್ಶಾವಿವೇಕಕ್ಕೂ ಪ್ರಸ್ತುತ ಕೃತಿಗೂ ನಾಂದಿಯಾದಂತಿದೆ. ನವೋದಯ, ನವ್ಯ ಹಾಗೂ ಬಂಡಾಯ ಕಾವ್ಯಗಳ ವಿಸ್ತೃತವಾದ ಹಿನ್ನೋಟ ಶೋಧನ ದೀವಿಗೆಯಂತೆ ಬೆಳಕುಬೀರಿದೆ. ಆಧುನಿಕತೆ ನವ್ಯತೆಗಿಂತ ಹೆಚ್ಚಿನ ವ್ಯಾಪ್ತಿ ಹೊಂದಿರುವುದರೆಡೆ ಗಮನ ಸೆಳೆಯುತ್ತ, ನವ್ಯೋತ್ತರಕ್ಕೆ ಕೇಂದ್ರಗಳಿಲ್ಲದಿರುವುದು ವಿಕೇಂದ್ರಿಕರಣವನ್ನೇ ಲಕ್ಷಣವಾಗಿಸಿಕೊಂಡ ಅದರ ಸಹಜ ಬೆಳವಣಿಗೆಯಾಗಿ ಗುರುತಿಸಿದ್ದು ವಿಶೇಷವೆನಿಸುತ್ತದೆ

ಮಹಿಳಾ ಕಾವ್ಯದ ಸಾಧನೆ ಹಾಗೂ ಸಮಸ್ಯೆಗಳ ಬಗೆಗಿನ ಸಮಗ್ರವಾದ ಹಾಗೂ ಸಮುಚಿತವಾದ ಅಧ್ಯಯನದ ಒಂದು ನೋಟ ಮೊದಲ ಬಾರಿಗೆ ಇಲ್ಲಿ ದೊರೆಯುತ್ತದೆ. 'ರಾಮಾಯಣ ದರ್ಶನಂ', 'ಭಾರತ ಸಿಂಧು ರಶ್ಮಿ' ಹಾಗೂ 'ಭವ್ಯ ಮಾನವ' ಕೃತಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡು 'ಆಧುನಿಕ ಕನ್ನಡ ಸಾಹಿತ್ಯದಲ್ಲಿ ಮಹಾಕಾವ್ಯ' ಲೇಖನ ಆಯಾ ಕಾವ್ಯಗಳಲ್ಲಿ ಕಂಡು ಬರುವ ಅಖಂಡ ದರ್ಶನ, ಸಾಂಸ್ಕೃತಿಕ ಐಕ್ಯದ ಆದರ್ಶ ಹಾಗೂ ದೇಸೀ ಪರಂಪರೆಯ ಪುನರ್ನಿರ್ಮಾಣ ಮೊದಲಾದ ಇನ್ನೂ ಹಲವು ಮಹತ್ವದ ಅಂಶಗಳನ್ನು ವಿವೇಚಿಸುವ, ಪೂರ್ವಗ್ರಹಮುಕ್ತ ಬರವಣಿಗೆಯಾಗಿ ಗಮನಸೆಳೆಯುತ್ತದೆ.

ಎರಡನೆಯ ಭಾಗದಲ್ಲಿ, ಗೋವಿಂದ ಪೈಯವರಿಂದ ಮೊದಲ್ಗೊಂಡು ಮೂರು ತಲೆಮಾರಿನ ಇಪ್ಪತ್ತೈದು ಮಹತ್ವದ ಕವಿಗಳ ಕಾವ್ಯದೊಡನೆ ನಡೆಸಿದ ಅನುಸಂಧಾನ ಇದುವರೆಗಿನ ವಿಮರ್ಶೆಯನ್ನು

ಲಕ್ಷ್ಯಕ್ಕೆ ತೆಗೆದುಕೊಂಡು ಹಲವುಬಗೆಯ ಒಳನೋಟಗಳೊಂದಿಗೆ ಕುತೂಹಲ ಹುಟ್ಟಿಸುತ್ತದೆ. ಡಾ. ಆಮೂರ ಅವರೇ ಬೇರೆಡೆ ಹೇಳಿರುವಂತೆ ಇಲ್ಲಿಯೂ ವಿಸ್ತಾರಕ್ಕಿಂತ ಆಳ, ಸಮೀಕ್ಷೆಗಿಂತ ಅಧ್ಯಯನ, ಸಮಗ್ರತೆಗಿಂತ ಆಯ್ಕೆ ಅವರ ಪ್ರಾಶಸ್ತ್ಯಗಳಾಗಿವೆ. ಸಾಹಿತ್ಯ, ವಿಮರ್ಶೆ, ಸಂಸ್ಕೃತಿ ಹಾಗೂ ಪರಂಪರೆಯ ಪಾಕದಂತಿರುವ ಪ್ರಸ್ತುತ ಕೃತಿ ಕನ್ನಡದ ಅಭಿವ್ಯಕ್ತಿ ಸಾಮರ್ಥ್ಯವನ್ನು ಆತ್ಮವಿಶ್ವಾಸವನ್ನು ಎಂದಿಲ್ಲದಷ್ಟು ಹಿಗ್ಗಿಸಿದೆ.

(೨೦೦೫)

## ೧೭

## ಬಟ್ಟ ಬಯಲಲ್ಲಿ ನಿಂದು

ಕಳೆದ ಕಾಲು ಶತಮಾನದಿಂದ ಕನ್ನಡ ಸಾಹಿತ್ಯದ ಒಂದು ಮುಖ್ಯ ಪ್ರವಾಹವಾಗಿ ಬೆಳೆದು ಬಂದ ಮಹಿಳಾ ಕಾವ್ಯದ ಉತ್ಕರ್ಷದಲ್ಲಿ ಪಾಲ್ಗೊಂಡ ವಿಶಿಷ್ಟ ಪ್ರತಿಭೆಯ ಕವಯಿತ್ರಿಯರಲ್ಲಿ ಶಶಿಕಲಾ ವಸ್ತ್ರದ ಅವರ ಸಾಧನೆ ಗಮನಾರ್ಹವಾದದ್ದು. ಪುರುಷ ಪ್ರಧಾನ ಸಮಾಜದಲ್ಲಿ 'ಮೇಣ ಬತ್ತಿಯಂತೆ ಸುಟ್ಟಿಕೊಳ್ಳುತ್ತಿ'ರುವ ಸ್ತ್ರೀ ಜೀವನದ ಹಲವು ಬಗೆಯ ನೋವುಗಳು, ಆಶೋತ್ತರಗಳು ತೀವ್ರ ಬಯಕೆಗಳೇ ಸ್ಥಾಯಿಯಾಗಿರುವ ಇವರ ಕಾವ್ಯ ವಾಸ್ತವಿಕತೆಯನ್ನು ಅಪ್ಪಿಕೊಂಡೇ ಜೀವನದ ಒಳಸತ್ಯಗಳನ್ನು ಧ್ವನಿಸುವಂತಹದು. ಅನುಭವಗಳನ್ನು ಸಂವೇದನಾತ್ಮಕವಾಗಿ ಪಡೆದು, ಹೆಣ್ತನದ ವಿವಿಧ ಆಯಾಮಗಳಿಗೆ ಪ್ರತೀಕವಾಗುತ್ತ ಸಂಕೀರ್ಣತೆಯ ಸತ್ವವಾಗಿ ನಿಲ್ಲುವ ಪ್ರಯತ್ನ ಇಲ್ಲಿಯ ಮುಖ್ಯ ರಚನೆಗಳಲ್ಲಿ ಕಂಡು ಬರುತ್ತದೆ. ನಿಷೇಧಗಳ ಕಟ್ಟುನಿಟ್ಟುಗಳನ್ನು ಸೀಳಿಕೊಂಡು ಹೊಮ್ಮುವ ಭಾವನೆಗಳು ತಮ್ಮ ಸೂಕ್ಷ್ಮ ಗ್ರಹಿಕೆಯಿಂದ ಓದುಗರ ಮನಸ್ಸನ್ನು ಮುಟ್ಟುತ್ತದೆ. ಜೀವನಾನುಭವ ವಿಸ್ತಾರವಾದಂತೆ ಹೊಸ ಧ್ವನಿ-ಲಯಗಳನ್ನು ಕಂಡುಕೊಳ್ಳುವ ಹವಣಿಕೆ ಇಲ್ಲಿದೆ. ಬದುಕು ನೀಡುವುದನ್ನು ಬಾಚಿಕೊಳ್ಳುತ್ತ 'ಬಿದ್ದಲ್ಲಿ ಜಿಗಿತು ಆಕಾಶದಗಲಕ್ಕೆ ಕೈ ಚಾಚುವ' ಕವಿಯ ಛಲಗಾರಿಕೆ ಕಾವ್ಯದ ಕಸುಬುಗಾರಿಕೆಯೂ ಆಗಿರುವುದು ಒಂದು ವಿಶೇಷ.

ಪರಿಸರಕ್ಕೆ ತೀವ್ರವಾಗಿ ಸ್ಪಂದಿಸುತ್ತ ಅಸ್ಮಿತೆಯನ್ನು ನುಂಗುವ ದುಷ್ಟ ಶಕ್ತಿಗಳನ್ನು ಪ್ರತಿಭಟಿಸುವ 'ದಾರುಣದ ದಾರಿಯಲ್ಲಿ ಪಯಣ' ಮಾಡುತ್ತಿದ್ದರೂ ಮರಳುಗಾಡನ್ನು ದಾಟಿದಾಗ 'ಗುಡ್ಡದಾಚೆ ಕಾಣುವ ಮಿನುಗುದೀಪ' ಈ ಕಾವ್ಯದ ಮುಖ್ಯ ಆಶಯವಾಗಿದೆ. ಪೌರಾಣಿಕ ವ್ಯಕ್ತಿ ಚಿತ್ರಗಳು ವೈಯಕ್ತಿಕ ನೆಲೆಯಲ್ಲಿ ತನ್ನನ್ನು ನಿಚ್ಚಳವಾಗಿ ಶೋಧಿಸಿಕೊಳ್ಳುವುದನ್ನೇ ಗುರಿಯಾಗಿಸಿಕೊಂಡಿವೆ. ವಿವರಣಾತ್ಮಕ ಅಂಶ ಸ್ವಲ್ಪ ಹೆಚ್ಚೆನಿಸಿದರೂ ಆಡು ಮಾತಿನ ಲಯದ ಆಪ್ತವಾದ ದೇಸೀ ಅಭಿವ್ಯಕ್ತಿ ಶಶಿಕಲಾ ಅವರ ಶೈಲಿಯ ವೈಶಿಷ್ಟ್ಯವಾಗಿ ಉಳಿಯಬಲ್ಲುದು. ಮಹಿಳಾ ಕಾವ್ಯದ ಸಿದ್ಧಪಡಿಯಚ್ಚಿಗೆ ಹೊರತಾಗಿ ಪ್ರಯೋಗಶೀಲವಾಗಿ ಬೆಳೆದು ತನ್ನತನವನ್ನು ಕಂಡುಕೊಂಡುದರ ಒಂದು ಉತ್ತಮ ನಿದರ್ಶನ ಇಲ್ಲಿದೆ.

(೨೦೦೬)

## ೧೮

## ಕಿಂಕಿಣಿ

ಪ್ರಸ್ತುತ ಸಮಾಜದಲ್ಲಿ ಹೆಣ್ಣಿನ ಅಸಹಾಯಕತೆ, ಆತಂಕ, ಒತ್ತಿಟ್ಟ ನೋವು, ಕೊರಗು, ಅನುತಾಪ, ವ್ಯವಸ್ಥೆಯ ಕ್ರೌರ್ಯ ಇವೇ ಮೊದಲಾದವುಗಳನ್ನು ಕಟುವಾಗಿ, ಆದರೆ ಅಷ್ಟೇ ಅನುಭೂತಿಯಿಂದ ಚಿತ್ರಿಸುವ ಇಲ್ಲಿಯ ಹೆಚ್ಚಿನ ಕವನಗಳು ಕನ್ಯಾದಾನ, ಮದುವೆ ಹೇಗಾಗುತ್ತದೆ? ಅವಳಿಗೂ ಒಂದು ಹೆಸರಿದೆಯೇ? ಎಂಬ ದಿಟ್ಟ ಪ್ರಶ್ನೆಗಳ ಮೂಲಕ ಓದುಗರ ಮನಸ್ಸನ್ನು ತಟ್ಟದೆ ಇರಲಾರವು. ಈ ಕಾವ್ಯದಲ್ಲಿ 'ನಾನೆಂದರೆ ನಾನಲ್ಲ. ಅವಳೆಂದರೆ ಅವಳಲ್ಲ, ಅವಳು ನಾನಾಗಬಹುದು ನಾನು ಅವಳಾಗಬಹುದು'. ಯಾಕೆಂದರೆ 'ನಮ್ಮ ಗುಂಡಿಗೆಯ ಬಡಿತದ ಲಯ ಒಂದೇ' ಎಂಬ ಸಂಭಾವ್ಯತೆಗೆ ಇಲ್ಲಿ ಒತ್ತು ಕೊಟ್ಟಿರುವುದು ಗಮನಾರ್ಹ. ವಾಚ್ಯದಲ್ಲಿ ಪ್ರಾರಂಭವಾಗಿ ವ್ಯಂಗ್ಯದಲ್ಲಿ ಕೊನೆಗೊಳ್ಳುವ ಕವನಗಳೇ ಹೆಚ್ಚು ಗಮನ ಸೆಳೆಯುತ್ತವೆ.

ಈ ವಸ್ತುವಿಗೆ ಹೊರತಾದ 'ಕಲ್ಲಾಗಿ ಬಿಡಿ', 'ಅಂತರ', 'ಗೆಳೆತನ', 'ಆಟ', 'ಧನ್ಯವಾದಗಳು', 'ವಸುಂಧರಾ ಪರಿಕಾಮ', 'ಕಲಿಕೆ', 'ನದೀಗೀತ', 'ಕೊಳವೆ ಬಾವಿ', 'ಛಾಯೆ' ಮೊದಲಾದ ಕವಿತೆಗಳು ಅಲ್ಲಲ್ಲಿ ಸಾಂಕೇತಿಕತೆಯನ್ನೊಳಗೊಂಡು ಸಹಜವಾದ ಭಾವಾಭಿವ್ಯಕ್ತಿಯಿಂದ ಭಾಷೆಯ ಲವಲವಿಕೆಯಿಂದ ಪ್ರಸ್ತುತ ಸಂಗ್ರಹಕ್ಕೆ ಸಮತೂಕವನ್ನು ತಂದುಕೊಟ್ಟಿವೆ. 'ನನಸಾಗಿದಿದ್ದರೂ ಕನಸು ಬೇಕು ಮನಸು ಜೀವಂತವಿಡಲಿಕ್ಕೆ' ಎಂಬ ಆಶಾವಾದದಿಂದ ಕೂಡಿದ ಈ ಕವಯಿತ್ರಿಯ ಜೀವನ ಪ್ರೀತಿ ಇನ್ನೂ ಉತ್ತಮ ರಚನೆಗಳಿಗೆ ನಾಂದಿಯಾಗಲಿ.

(೨೦೦೬)

೧೯

## ದೂರದ ಪದ

ಎದೆಯ ನಾದದಲ್ಲಿ ಪದವ ಪವಣಿಸುತ್ತಿರುವಾಗ ಬೆಳಕು ಬೆರಗಿನ ಬದಿಗೆ ಹಾಡು ಕೇಳಿಸುತ್ತಿತ್ತು ಎಂದು ಭಾವಿಸುವ, 'ನಸುಕೊಂದು ಹಸುಗೂಸು', 'ಮುಗಿಲೆಲ್ಲಾ ಮುಂಜಾವು' ಎಂಬಂಥ ನುಡಿಚಿತ್ರಗಳನ್ನು ಕೊಡಬಲ್ಲ ಮಹಾಂತಪ್ಪ ಸಂದೂರ ಅವರದು ಸಹಜವಾದ ಕವಿ ಹೃದಯ ಎಂಬುದಕ್ಕೆ ಎರಡು ಮಾತಿಲ್ಲ. ಭಾವದ ಬಾಗಿಲು ತೆರೆದು ಬುದ್ಧಿಯನ್ನು ಬರಮಾಡಿಕೊಳ್ಳುವುದು ಅವರ ಕಾವ್ಯರಚನೆಯ ರೀತಿ ಎಂಬುದಕ್ಕೆ 'ಜಾಗತೀಕರಣ' 'ನಾನೊಂದು ಕನಸ ಕಂಡೆ' 'ಹೊಲೆಗೂಸು' ಮೊದಲಾದ ಹಲವು ಕವನಗಳನ್ನು ಉದಾಹರಿಸಬಹುದು. 'ಹಾಡು ಕಟ್ಟುವ ಘಳಿಗೆ ಮೋಡ ಚಂದಿರನಾವರಿಸಿ, ಕೊನೆಯ ಸಾಲಿನ ಅರ್ಥ ಪೂರ್ಣ ಅರ್ಧ' ಎಂಬುದು ಕವಿಗೆ ಗೋಚರಿಸದೆಯಿಲ್ಲ. ಮೂಢನಂಬಿಕೆಗಳ ವಿರಾಟ್ ಸ್ವರೂಪವನ್ನು 'ನಮ್ಮೂರ ಸುದ್ದಿ'ಯಲ್ಲಿ ಕೊಟ್ಟಂತೆ 'ಕೈಚಾಚಿದೆ ಆಕಾಶದತ್ತ'ದಲ್ಲಿ ಸುನಾಮಿ ದುರಂತವನ್ನು ಪರಿಣಾಮಕಾರಿಯಾಗಿ ಚಿತ್ರಿಸಬಲ್ಲರು. 'ನಾನು ನೋಡುತ್ತಲಿರಲು' 'ನಗರದ ವರ್ತುಲದಲ್ಲಿ'ಯಂಥ ಕವಿತೆಗಳಲ್ಲಿ ಒಡಮೂಡಿದ ಚಿತ್ರಗಳು ಬಿಡಿಬಿಡಿಯಾಗಿ ಕಂಡರೂ ಮುಖ್ಯ ಆಶಯಕ್ಕೆ ಪೋಷಕವಾಗಿ ಕೊನೆಗೊಳ್ಳುತ್ತವೆ.

ಈ ಸಂಗ್ರಹದ ಎರಡನೆ ಭಾಗದಲ್ಲಿರುವ ಸುನೀತ ಮಾದರಿಯ ಪದ್ಯಗಳು ಆ ಪ್ರಕಾರದ ನಿಯಮಗಳನ್ನು ನಿಯಮಿತವಾಗಿ ಪಾಲಿಸದಿದ್ದರೂ ಪ್ರಯೋಗದ ದೃಷ್ಟಿಯಿಂದ ಗಮನಾರ್ಹವಾಗಿವೆ. 'ಮಂಗಳದ ಬೆಳಕು' 'ಆರೂಢ' 'ಜಿನುಗು' 'ಮಳೆ' 'ಮಾರ್ಗ' ಮೊದಲಾದವು ಕವಿಯ ಚಿತ್ರಶಕ್ತಿಯನ್ನು ಸಮರ್ಥಿಸುವಂತಿವೆ.

ತಮ್ಮ ಎರಡನೆಯ ಕೃತಿ 'ದೂರದ ಪದ'ದಿಂದ ಕಾವ್ಯಾಸಕ್ತರಿಗೆ ಹೆಚ್ಚು ಸಮೀಪವಾಗುತ್ತಿರುವ ಈ ಕವಿ ಇನ್ನೂ ಉತ್ತಮ ಕೃತಿಗಳನ್ನು ಕೊಡಬಲ್ಲರೆಂಬ ಭರವಸೆ ಮೂಡಿಸಿರುವುದು ಅಭಿನಂದನೀಯ.

(೨೦೦೮)

## ೨೦

# ಅಮರಾನಂದರ ಹರಟೆಗಳು

ಹೈದರಾಬಾದ ಕರ್ನಾಟಕದ ಸಾಂಸ್ಕೃತಿಕ ಪುನರುಜ್ಜೀವನ ಕಾರ್ಯವನ್ನು ಎಲ್ಲ ಕಷ್ಟ-ನಿಷ್ಠುರಗಳ ನಡುವೆಯೂ ನಿಷ್ಠೆಯಿಂದ ಮುಂದವರಿಸಿದವರಲ್ಲಿ ರಾಯಚೂರಿನ ಸತ್ಯಸ್ನೇಹಿ ಬಳಗದ ಶಾಂತರಸ ಹಾಗೂ ಚೆನ್ನಬಸವಪ್ಪ ಬೆಟದೂರ ಇವರ ಜೋಡಿ ಎದ್ದು ಕಾಣುವಂಥದು. (ಇಬ್ಬರೂ ಈಗ ನಮ್ಮ ಮಧ್ಯದಲ್ಲಿಲ್ಲ). ಸ್ವತಃ ರೈತರಾದ ಚೆನ್ನಬಸಪ್ಪನವರ ಹೋರಾಟದ ಮನೋಧರ್ಮ, ಪ್ರಗತಿಪರ ಚಿಂತನೆ ಹಾಗೂ ವಚನಸಾಹಿತ್ಯದ ಅಧ್ಯಯನ ಅವರ ವೈಚಾರಿಕತೆಯನ್ನು ಹರಿತಗೊಳಿಸಿರುವುದನ್ನು ಅವರ ಬರವಣಿಗೆಯಲ್ಲಿ ಗುರುತಿಸಬಹುದು. ನಿಜವಾದ ಧಾರ್ಮಿಕ ವಿವೇಚನೆಯನ್ನೊಳಗೊಂಡ ಅವರ ಇತ್ತೀಚಿನ ಕೃತಿ 'ಸಲ್ಲಲಿತ ಸನ್ಮಾರ್ಗ' ಅನೇಕ ಪ್ರಶಸ್ತಿಗಳಿಗೆ ಭಾಜನವಾಗಿರುವುದನ್ನು ಇಲ್ಲಿ ಸ್ಮರಿಸಬಹುದು.

ಚೆನ್ನಬಸಪ್ಪನವರು ಕಥೆ, ಹರಟೆ, ಅನುವಾದ, ಪ್ರಬಂಧ, ವ್ಯಕ್ತಿ ಚಿತ್ರ ಹಾಗೂ ವೈಚಾರಿಕ ಲೇಖನಗಳನ್ನು ಕಳೆದ ಐದಾರು ದಶಕಗಳಿಂದ ನಾಡಿನ ಹಲವಾರು ಪತ್ರಿಕೆಗಳಲ್ಲಿ ಬರೆಯುತ್ತ ಬಂದಿದ್ದರೂ ಅವು ಪುಸ್ತಕರೂಪದಲ್ಲಿ ಬಾರದಿರುವುದು ಆಶ್ಚರ್ಯದ ಸಂಗತಿಯಾಗಿದೆ. ಈ ದಿಸೆಯಲ್ಲಿ ಪ್ರಥಮ ಪ್ರಯತ್ನವೆಂಬಂತೆ 'ಅಮರಾನಂದರ ಹರಟೆಗಳು' ಪ್ರಕಟವಾಗುತ್ತಿರುವುದು ಸ್ವಾಗತಾರ್ಹ.

ಹರಟೆ ಅಥವಾ ಲಲಿತ ಪ್ರಬಂಧಕ್ಕೆ ಇಂಥದೇ ವಿಷಯವಿರಬೇಕೆಂದಿಲ್ಲ. ಅದನ್ನು ಬರೆಯುವ ಬಗೆ ಹಾಗೂ ಲೇಖಕನ ವ್ಯಕ್ತಿತ್ವ ಇಲ್ಲಿ ಮುಖ್ಯವಾಗುತ್ತದೆ. ಮನಸ್ಸನ್ನು ಹಿಡಿಯುವ ಸಾಮರ್ಥ್ಯದ ಮೇಲೆ ಅದರ ಯಶಸ್ಸು ಕೂಡ ಅವಲಂಬಿಸಿದೆ. ಊಹೆ, ಅನಿಸಿಕೆ, ಅನುಭವ, ಅನುಭಾವ, ವಿಡಂಬನ - ಯಾವುದೂ ವಸ್ತುವಾಗಬಹುದು. ಹರಟೆಯ ಮಾದರಿಯ ಈ ಪ್ರಬಂಧಗಳು ಕೇವಲ ಹುಡುಗಾಟವೆನಿಸದೆ ಮನಸ್ಸಿನ ಲಹರಿಗಳೊಂದಿಗೆ ಹುರುಳನ್ನೂ, ವಿಚಾರದ ತಿರುಳನ್ನೂ ಒಳಗೊಂಡು ಆತ್ಮಾಭಿವ್ಯಕ್ತಿಯೊಂದಿಗೆ ಸಾರ್ವಜನಿಕ ವಸ್ತು-ಸಂಗತಿಗಳನ್ನು ಆಪ್ತವಾಗಿಸುತ್ತ ಸಾಗುತ್ತವೆ. ಪ್ರಸ್ತುತ ಸಂಗ್ರಹದ 'ಕೂಳಿನ ಕಗ್ಗಂಟು', 'ಎದ್ದೇಳು ಮಂದನ ಮತಿಯೇ' ಪ್ರಬಂಧಗಳು ವಿಷಯಾಂತರ ಮಾಡಿ ವಿಷಯದ ಪರಿಜ್ಞಾನವನ್ನು ಉಂಟು ಮಾಡುವ ವೈಚಾರಿಕ ಮಾದರಿಯವಾಗಿದ್ದರೆ, ಉಳಿದವುಗಳು ಸಾಮಾನ್ಯವಾಗಿ ವ್ಯಕ್ತಿ, ಸಮಾಜ ಹಾಗೂ ಸಂಘ-ಸಂಸ್ಥೆ ಮೊದಲಾದವುಗಳ ಒರೆಕೋರೆಗಳನ್ನು ವ್ಯಂಗ್ಯ ಹಾಗೂ ವಿಡಂಬನೆಯ ನೆಲೆಯಲ್ಲಿ ನಿರೂಪಿಸುವ

ಸ್ವರೂಪದವಾಗಿವೆ. ಸರಸಲ್ಲಾಪದ ಶೈಲಿಗಿಂತ ಚುಚ್ಚಿ ಎಚ್ಚರಿಸುತ್ತ ಪರೋಕ್ಷವಾಗಿ ನೀತಿಯನ್ನು ಮನಗಾಣಿಸುವದು ಈ ಬರವಣಿಗೆಯ ಧ್ಯೇಯವಾಗಿ ತೋರುತ್ತದೆ.

'ನಾನು ಬಾಯಿ ಮುಚ್ಚಿ ಅಲ್ಲ, ಹೃದಯ ಬಿಚ್ಚಿ ಮಾತನಾಡಬಯಸುತ್ತೇನೆ' ಎನ್ನುವ ಚೆನ್ನಬಸವಪ್ಪನವರ ಮಾತು ಅವರ ಬರಹಗಳ ಪ್ರಮುಖ ಕಾಳಜಿಯಾಗಿದೆ.

(೨೦೦೮)

## ೨೧

## ಬಾನಂಚು

'ಮತ್ತೆ ಚಿಗುರುವೆವು' ಎಂಬ ಆಶಾವಾದದಿಂದ ಭರವಸೆ ಹುಟ್ಟಿಸಿದ ಶ್ರೀಮತಿ ಶೀಲಾ ಅಂಕೋಲಾ ಅವರು ಇಪ್ಪತ್ತು ವರ್ಷಗಳ ನಂತರ ಪ್ರಕೃತಿ ಮತ್ತು ಜೀವನ ವಿಮರ್ಶೆಯ ಸುಂದರ ಸಮನ್ವಯಕ್ಕೆ ಸಂಯಮದ ಬೆಳ್ಳಿಯ ಗೆರೆಯಾಗಿ 'ಬಾನಂಚು'ವಿನಲ್ಲಿ ಕಾಣಿಸಿ ಕೊಂಡಿರುವುದು ಸಂತೋಷದ ಸಂಗತಿ. ಬದುಕಿನಲ್ಲಿ ಹೇಗೋ ಹಾಗೇ ಕಾವ್ಯರಚನೆಯಲ್ಲಿಯೂ ಕಾಯುವ ಕಾಯಕದಲ್ಲಿ ನೆಮ್ಮದಿ ಕಾಣುವ ಇಲ್ಲಿಯ ಕವನಗಳು ಹೂತು, ಕಾತು, ಫಲಿಸುವ ಪ್ರಕ್ರಿಯೆಯಿಂದ ಓದುಗರ ಗಮನ ಸೆಳೆಯಬಲ್ಲವು.

ನಿಸರ್ಗದ ನುಡಿಚಿತ್ರಗಳ ನೆಯ್ಗೆಯಲ್ಲಿಯೇ ಸಾಂತ್ವನವನ್ನೂ ಭವಿಷ್ಯದ ಕನಸನ್ನೂ ಕಾಣುವ ಕವಯಿತ್ರಿ ವಾಸ್ತವವನ್ನೂ ಅಷ್ಟೇ ದಿಟ್ಟತನದಿಂದ ಎದುರಿಸಿ ಹೆಜ್ಜೆ ಹೆಜ್ಜೆಗೆ ತಾನು ಮುಕ್ತಳಾಗುತ್ತಿರುವ ಭಾವವನ್ನು ಬಲಗೊಳಿಸುತ್ತ ಜೀವಂತಿಕೆಯ ಅನುಭವವನ್ನು ಅಭಿವ್ಯಕ್ತಿಗೊಳಿಸುತ್ತಿರುವುದು ನಿಜಕ್ಕೂ ರೋಚಕವಾಗಿದೆ. ಜನಸಾಮಾನ್ಯರ ಆಡುಮಾತಿನಲ್ಲಿ ಅಭಿವ್ಯಕ್ತಿ ಪಡೆದ, ಗಂಡುಹೆಣ್ಣಿನ ಪ್ರೀತಿ-ವಿರಹ-ಆರ್ತ ಭಾವದ ಕವನಗಳೂ ಈ ಸಂಗ್ರಹದ ವೈವಿಧ್ಯಕ್ಕೆ ತಕ್ಕ ಕಾಣಿಕೆ ನೀಡಿವೆ.

'ಅಸಹನೀಯವೆನಿಸಿದರೂ ಇದು ನಮ್ಮ ಪ್ರೀತಿಯ ಬದುಕು' ಎಂಬ ಜೀವನಪ್ರೀತಿ ಹಾಗೂ ಆರೋಗ್ಯಕರವಾದ ಜೀವನ ದೃಷ್ಟಿ,' 'ಸೃಷ್ಟಿಯಾಗುವುದ ಕಲಿತು ಭೂತಾಯಿಯಾಗುವ' ಅಭೀಪ್ಸೆ ಈ ಕಾವ್ಯದ ಆಶಯವನ್ನು ಆಪ್ತವಾಗಿ ಸೂಚಿಸುತ್ತವೆ. 'ತನ್ನತನವಿರದ ಬದುಕ'ನ್ನು ಕೆಳಗಿಳಿಸಿ, ಪೊರೆಗಳಚಿ, ಹೊಸತಿರುವನ್ನು ದಾಟಿ, 'ನಿಜವನರಸಲು' ಹೊರಟಿರುವ ಶ್ರೀಮತಿ ಶೀಲಾ ಅಂಕೋಲಾ ಅವರು ಕಾವ್ಯಾಸ್ತಕರನ್ನು ಕುತೂಹಲದಿಂದ ಕಾಯುವಂತೆ ಮಾಡಿದ್ದಾರೆ.

(೨೦೦೭)

# ೨೨

# ಒಳಗಿನ ಮಳೆ

ಬಹಳ ಕಾಲದ ನಂತರ 'ಮಾಗಿ' (೨೦೦೮)ಯನ್ನು ಪ್ರಕಟಿಸಿ ತಮ್ಮ ಜೀವನಾನುಭವ ಹಾಗೂ ಕಾವ್ಯಾನುಭವದ ಮಾಗುವಿಕೆಯನ್ನು ಒಡೆದು ಕಾಣುವ ಮೊತ್ತದಲ್ಲಿ ಕಾವ್ಯರಸಿಕರ ಪ್ರತ್ಯಕ್ಷಕ್ಕೊಡ್ಡಿದ್ದ ಜಿನದತ್ತ ದೇಸಾಯಿಯವರು ಇದೀಗ 'ಒಳಗಿನ ಮಳೆ'ಯಿಂದ ಇನ್ನಿಷ್ಟು ಜಳಜಳಿಸಿದ್ದಾರೆ. ಅಂತರ್ಮುಖಿ, ನಿಸರ್ಗಮುಖಿ ಹಾಗೂ ಸಮಾಜಮುಖಿಯಾಗಿ ತಮ್ಮ ಕವಿತೆಗಳನ್ನು 'ಮಾಗಿ'ಯಲ್ಲಿ ವಿಂಗಡಿಸಿಕೊಂಡುದನ್ನು ಇಲ್ಲಿಗೂ ಅನ್ವಯಿಸಬಹುದು. ಅಲ್ಲಿಯ 'ಒಳಾಂಗಣ ಚಿತ್ರೀಕರಣ' ಇಲ್ಲಿ ಹೊರಾಂಗಣವನ್ನು ಬಳಸಿ ಕೆಲಮಟ್ಟಿಗೆ ಪರಿಷ್ಕಾರಗೊಂಡಂತಿದೆ.

ಬದುಕಿನ ಆಗು-ಹೋಗು, ಸಣ್ಣಪುಟ್ಟ ಘಟನೆ, ಸನ್ನಿವೇಶ, ವ್ಯಕ್ತಿಗಳ ರೀತಿ-ನಡಾವಳಿ, ಧಾರ್ಮಿಕ-ರಾಜಕೀಯ ವಿದ್ಯಮಾನ - ಮೊದಲಾದ ಹತ್ತು ಹಲವು ಸಂಗತಿಗಳ ಬಗ್ಗೆ ವಿರಾಮವಾಗಿ ಓದುಗರೊಡನೆ ಕಾವ್ಯಮುಖದಿಂದ ಸಂವಾದಕ್ಕೆಳೆಯುವಂತಿರುವ ಇಲ್ಲಿಯ ಕವನಗಳು ಸರಳ ನಿರೂಪಣೆಯೊಂದಿಗೆ ತಕ್ಕ ಆಕಾರವನ್ನು ಪಡೆದುಕೊಂಡು ಕೊನೆಯಸಾಲಿನ ಪರಿಣಾಮ ರಮಣೀಯತೆಯಿಂದ ಗಮನ ಸೆಳೆಯುತ್ತವೆ.

ಕವಿತೆ ಹಾಗೂ ಹನಿಗವನಗಳ ಸಮನ್ವಯವನ್ನು ಸಾಧಿಸಲು ಪ್ರಯತ್ನಿಸಿರುವ ಜಿನದತ್ತ ದೇಸಾಯಿಯವರು ಈ ಸಂಪುಟದಲ್ಲಿ ಸೌಮನಸ್ಸಿನ ದವನದೆಸಳುಗಳನ್ನು ಅಡಗಿಸಿಟ್ಟಿರುವುದನ್ನು ಸಹೃದಯರು ಅರಿಯದಿರಲಾರರು.

(೨೦೦೮)

# ೨೩

# ಬರುವೆನೆಂದವನು

'ಗರಳ ಕುಡಿದಿದ್ದೇವೆ, ಬದುಕಿದ್ದೇವೆ' ಎಂದುಸುರುವ ಈ ಕಾವ್ಯದ ಆಳದಲ್ಲಿ ನೋವಿದ್ದರೂ ನಿರಾಶೆಯ ಸುಳಿವಿಲ್ಲದಿರುವುದು ಗಮನಾರ್ಹ. ಜೀವನದ ಸಂಕಷ್ಟಗಳು ವೈಯಕ್ತಿಕ ಮಟ್ಟದಲ್ಲಿ ಉಳಿಯದೆ ಸಮಷ್ಟಿ ಪ್ರಜ್ಞೆಯಲ್ಲಿ ಕರಗಿ ಹೊಸ ಬಾಳಿಗೆ ದಾರಿಯನ್ನು ಕಂಡುಕೊಳ್ಳುವದು ಜಗದೀಶ ಮಂಗಳೂರಮಠರ ಕಾವ್ಯದ ವೈಶಿಷ್ಟ್ಯ. 'ಮಹಾಮನೆ' ('ಜೀವಜಲ ಹಣಿಸುತಿರಲಿ ದುಡಿವ ಕೈಗಳಿಗೆ') 'ಲೆಕ್ಕ' ('ತಿಂಗಳಿನ ಸಂಬಳಕೆ ಎಲ್ಲ ಋಣವೂ ಚುಕ್ತ) ಮುಂತಾದ ಕವಿತೆಗಳು ಸಂಸ್ಕೃತಿಯ ಪ್ರತೀಕವಾಗಿ ಬದುಕಿಗೆ ಒಂದು ಬಗೆಯ ಧನ್ಯತೆಯನ್ನು ತಂದುಕೊಟ್ಟಿವೆ. 'ವಿಪರ್ಯಾಸ' ('ಹಾರುತ್ತಿವೆ ರಕ್ಕಸ ರಣಹದ್ದುಗಳು') 'ಏನು ಕಾದಿದೆ ನಾಳೆಗೆ' ('ರಾಜಪಥ ಕಂಡೊಡನೆ ಹೀಗೇಕೆ ಮರುಳಾದರು?')- ಇಂಥ ಪದ್ಯಗಳು ಸದ್ಯದ ಸಾಮಾಜಿಕ ಧಾರ್ಮಿಕ ಹಾಗೂ ರಾಜಕೀಯ ದುರವಸ್ಥೆಗಳನ್ನು, ಅದರ ಒಡಲಲ್ಲಿರುವ ಹಾಗೆ, ಶೋಷಣೆ, ಕೃತಘ್ನತೆಗಳನ್ನು ಸೂಚ್ಯವಾಗಿ ಚಿತ್ರಿಸುತ್ತವೆ. 'ಕಣ್ಣುದೀಪ' ಕಾಂಬುದಷ್ಟೇ ಕೊನೆಯಲ್ಲ, ಹೊರಗಣ್ಣು ಒಳಗಣ್ಣಿಗೆ ಸೇತುವೆಯಾಗಬೇಕೆಂಬ ಹಂಬಲ ಹೊತ್ತಿದೆ. ನಡೆವ, ಓಡುವ ಹುಡುಕುವ ಕ್ರಿಯೆಗಳೆಲ್ಲ ಮಾಯವಾಗಿ 'ಹಾದಿ ಹಾದಿಗೆ ಡಿಕ್ಕಿಹೊಡೆಯುವ, ಕಣ್ಣು ಕುಕ್ಕುವ ವರ್ತಮಾನದ ವ್ಯಥೆ'ಯನ್ನು 'ಪಯಣ' ವಿಷಾದದಲ್ಲಿ ಹಿಡಿಯುತ್ತದೆ.

ಬದುಕಿನ ಅನೇಕ ದುರ್ಭರ ಸನ್ನಿವೇಶಗಳಲ್ಲಿ ಚಕ್ಕನೆ ಮೂಡಿ ಭರವಸೆ ಮೂಡಿಸಿ ಮೃತ್ಯುವಿನಿಂದ ಪಾರುಮಾಡಿ, ಗುರುತಿಸಿಕೊಳ್ಳದೆ ಮರೆಯಾಗುವ ವ್ಯಕ್ತಿಯ ಅಥವಾ ದಿವ್ಯ ಶಕ್ತಿಯ ಬಗೆಗಿನ ಚಿಂತನೆ ಭಾವ-ಬುದ್ಧಿಯ ನಡುವಿನ ಗೆರೆಯನ್ನು ಅಳಿಸಿ, ಅನುಭಾವದ ಹಂತವನ್ನು ತಲುಪುವ 'ಬರುವೆನೆಂದವನು', ಸಂಗ್ರಹದ ಅತ್ಯುತ್ತಮ ಕವಿತೆ. 'ಗಂಗಪ್ಪವಾಲಿ' 'ನೆಲದ ಋಣ' 'ಕನ್ನಡಿಯ ಮುಂದೆ' 'ಒಂದು ಬೆಳಗು' ಪದ್ಯಗಳು ಹೃದ್ಯವಾಗಿದ್ದು ಮನಸ್ಸಿಗೆ ಮುದನೀಡುತ್ತವೆ. ಅದಕ್ಕಾಗಿಯೇ 'ಹೋಗದಿರಿ ಪದ್ಯಗಳೆ' ('ನೀವಿಲ್ಲದಿರೆ ನನ್ನ ಬಾಳೊಂದು ಕೊರಡು') ಎಂದು ಕವಿಜೀವ ಎಲ್ಲ ದಿಕ್ಕಿನ ಜೀವಪಕ್ಷಿಗಳನ್ನು ಆಹ್ವಾನಿಸುತ್ತದೆ.

ಅನುಭವದ ವಾಸ್ತವತೆ ಸಜೀವ ವಿವರಗಳೊಂದಿಗೆ ಸಂವಹನಗೊಳ್ಳುವ ಸಂಕೀರ್ಣತೆ ಈ ಸಂಕಲನದ ವಿಶೇಷ ಗುಣವಾಗಿದೆ. 'ಉರಿಯ ಚಪ್ಪರ' ಪ್ರಕಟವಾದ ಹತ್ತು ವರ್ಷಗಳ ನಂತರದ ಈ ಬೆಳವಣಿಗೆ ಇವತ್ತಿನ ಸಂದರ್ಭದಲ್ಲಿ ಮಹತ್ವದ್ದಾಗಿದೆ. (೨೦೦೮)

## ೨೪

## ಸಲ್ಲಲಿತ ಸನ್ಮಾರ್ಗ

'ಧರ್ಮ' ಪದಕ್ಕೆ ನಾನಾರ್ಥಗಳಿರುವುದರಿಂದ ತಮಗೆ ಬೇಕಾದ ಅರ್ಥದಲ್ಲಿ ಜನರು ಅದನ್ನು ಬಳಸಿಕೊಳ್ಳುತ್ತ ಬಂದಿರುವದುಂಟು. ಆದರೆ ಪ್ರಸ್ತುತ ಸಂದರ್ಭದಲ್ಲಿ ಭಾರತೀಯರಲ್ಲಿ ಈ ಪದ ನಡೆಸಿರುವ ದಾಂಧಲೆಯನ್ನು ಮನದಂದು, ಹಿರಿಯ ವಿಚಾರವಾದಿಗಳಾದ ಶ್ರೀ ಚೆನ್ನಬಸಪ್ಪನವರು ಅದರ ಮೂಲವನ್ನು ಹಿಡಿದು ಜಾಲಾಡಿಸುವ ಪ್ರಾಮಾಣಿಕ ಅನ್ವೇಷಣೆಯಲ್ಲಿ ತಮ್ಮನ್ನು ಸಂಪೂರ್ಣ ತೊಡಗಿಸಿಕೊಂಡಿರುವುದನ್ನು ಈ ಕೃತಿ ಎತ್ತಿ ತೋರಿಸುತ್ತದೆ. ಇಂದಿಗೂ ಬೇರೆ ಬೇರೆ ರೂಪದಲ್ಲಿ 'ಮನುಧರ್ಮ' ಶಾಸ್ತ್ರವನ್ನೇ ಆಚರಣೆಯಲ್ಲಿ ತರುತ್ತಿರುವ ವರ್ಣಾಶ್ರಮ ಧರ್ಮದ ಶ್ರೇಣೀಕೃತ ವ್ಯವಸ್ಥೆಯ ಅವೈಜ್ಞಾನಿಕ ರೀತಿಯನ್ನು ಹಾಗೂ 'ಇಲ್ಲದೆ ಇರುವ ಹಿಂದೂ ಧರ್ಮ'ಕ್ಕಾಗಿ ಜನಸಾಮಾನ್ಯರ ರಕ್ತಪಾತವಾಗುತ್ತಿರುವ ದುರಂತವನ್ನು ಲೇಖಕರು ಇಲ್ಲಿ ಮುಕ್ತ ಮನಸ್ಸಿನಿಂದ ವಿಶ್ಲೇಷಿಸಿದ್ದಾರೆ. ಜೈನ, ಬೌದ್ಧ, ಇಸ್ಲಾಂ ಧರ್ಮಗಳು ಮಾನವತೆಯ ವಿರೋಧಿಯಾಗಿರಲಿಲ್ಲವೆಂಬುದನ್ನು ಆಧಾರಪೂರ್ವಕ ವಿವರಿಸುತ್ತ, ಬಸವಣ್ಣ ಜೈನರ ಅಹಿಂಸೆಯನ್ನು ದಯೆಯಾಗಿ ರೂಪಿಸಿ, ಬುದ್ಧನ ಸಮಾನತೆಯನ್ನು ಮನ್ನಿಸಿ ಅದಕ್ಕೆ ಗೃಹಸ್ಥ ಧರ್ಮದ ದೀಕ್ಷೆಯಿತ್ತು, ಕಾಯಕವನ್ನು ಕಡ್ಡಾಯಗೊಳಿಸಿ, ಇಸ್ಲಾಮಿನ 'ಝಕಾತ್'ನನ್ನು ದಾಸೋಹವಾಗಿ ಮಾರ್ಪಡಿಸಿರಬಹುದೆಂಬ ಅವರ ಊಹೆ ಗಮನಾರ್ಹವಾಗಿದೆ.

ಈ ಎಲ್ಲಾ ಮಹಾನುಭಾವರು ಹೇಗೆ ಸನ್ಮಾರ್ಗದಲ್ಲಿ ನಡೆಯಬೇಕೆಂದು ಹೇಳಿದರೇ ಹೊರತು 'ಈ ಧರ್ಮ'ದಂತೆ ನಡೆಯಿರಿ ಎಂದು ಬೊಟ್ಟು ತೋರಿಸಿ ಕಟ್ಟಪ್ಪಣೆ ಮಾಡಲಿಲ್ಲವೆಂಬ ಲೇಖಕರ ಮಾತು ವಿಚಾರಾರ್ಹವಾಗಿದೆ. 'ಧರ್ಮ' ಶಬ್ದವಿಡಿದು ಬಂದಿರುವ ಅನಿಷ್ಟಗಳನ್ನು ತೊಡೆದು ಹಾಕಲು, ಆ ಪದವನ್ನು ಗೌಣವಾಗಿಸಿ, ಬಸವಾದಿ ಶರಣರು 'ಶಿವಪಥ', 'ಭಕ್ತಿಪಥ', 'ವೀರಶೈವ ಮಾರ್ಗ', 'ವೀರಶೈವಾಚಾರ', 'ಷಟ್ಸ್ಥಲಮಾರ್ಗ', 'ಶರಣ ಮಾರ್ಗ' ಮೊದಲಾದ ಪರ್ಯಾಯ ಪದಗಳನ್ನು ಉಪಯೋಗಿಸಿ, ಪೂರ್ವಾಗ್ರಹದಿಂದ ಕೂಡಿರದ ಸಹಜವಾದ ಹೆದ್ದಾರಿಯನ್ನಾಗಿ ಅದನ್ನು ಪರಿವರ್ತಿಸಿರುವುದನ್ನು ವಚನ ಸಾಹಿತ್ಯದ ನೂರಾರು ಉಲ್ಲೇಖಗಳಿಂದ ಈ ಗ್ರಂಥದಲ್ಲಿ ಸ್ಪಷ್ಟಪಡಿಸಲಾಗಿದೆ.

'ಧರ್ಮ' ಶಬ್ದಕ್ಕಿಂತ 'ಮಾರ್ಗ' ಎಂಬ ಮಾತಿನಲ್ಲಿ, ನಡೆದು ಗುರಿ ಸೇರಲು ಎಲ್ಲರಿಗೂ ಅಧಿಕಾರವಿದೆಯೆಂಬ ಭಾವಧ್ವನಿತವಾಗುವುದನ್ನು ಎತ್ತಿ ಹಿಡಿಯುವ 'ಸಲ್ಲಲಿತ ಸನ್ಮಾರ್ಗ' ಬಹುಶಃ ಇದುವರೆಗೆ ಯಾರೂ ಲಕ್ಷಿಸದಿರುವ ಮಹತ್ವದ ವಿಷಯವೊಂದನ್ನು ನಿಚ್ಚಳವಾಗಿ ಪ್ರತಿಪಾದಿಸುತ್ತದೆ.

(೨೦೦೫)

೨೫

## ದಿಲ್ಲಿ ಮತ್ತು ಪಾರಿವಾಳ

ಬದುಕಿನ ಬಗೆಗಿನ ಕಳಕಳಿಯೊಂದಿಗೆ ಕಾವ್ಯದ ಕಾಳಜಿಯನ್ನೂ ಹೊಂದಿರುವ ರವಿ ಉಪಾಧ್ಯ ಎರಡು ದಶಕಗಳಲ್ಲಿ 'ಪರಿಧಿ'ಯಿಂದ ಪ್ರಸ್ತುತ ಸಂಕಲನದವರೆಗೆ ನಿಷ್ಠೆಯಿಂದ ಅಷ್ಟೇ ಸಂಯಮದಿಂದ ಕಾವ್ಯರಚನೆ ಮಾಡಿಕೊಂಡು ಬಂದವರು. 'ಏನು ಬರೆದರೂ ಏನು, ನೀನು ನೀನಾಗಬಲ್ಲೆಯಾ?' ಎಂದು ತಮ್ಮಷ್ಟಕ್ಕೆ ಕೇಳಿಕೊಳ್ಳುತ್ತ ಬಂದುದರಿಂದ ಅವರು ಯಾರ ಥರವೂ ಆಗದೆ ತಮ್ಮ ಅನುಭವ ಸ್ತರಗಳಲ್ಲಿಯೇ ಕಂಡುಕೊಂಡದ್ದನ್ನು ಕಾಣಿಸಲು ಪ್ರಯತ್ನಿಸಿದವರು. 'ಒಂದು ಜಾಹೀರಾತು ಪದ್ಯ', 'ಇಲ್ಲಿಯವರೆಗೆ', 'ಅಂತರ'ದಂತಹ ಸಲೀಸಾದ ಪದ್ಯಗಳ ಜೊತೆಗೇ 'ನಾವಕೆ ಬಡವರು ?' 'ದಿಲ್ಲಿ ಮತ್ತು ಪಾರಿವಾಳ', 'ಚುನಾವಣಾ ಗೋಡೆ', 'ಕೊನೆಯತನಕ'ದಂಥ ಕವಿತೆಗಳಲ್ಲಿ ರಾಜಕೀಯವನ್ನು ಹಾಗೂ ದೇಶದ ವಿದ್ಯಮಾನಗಳನ್ನು ಕರಗಿಸಿಕೊಂಡಿರುವ ರೀತಿ ಮೆಚ್ಚುವಂಥದು.

ವ್ಯಕ್ತಿಗಳನ್ನು ಕುರಿತು ಬರೆಯುವಾಗ ಹೆಚ್ಚಿನ ಆತ್ಮವಿಶ್ವಾಸ, ಆಪ್ತತೆ ಹಾಗೂ ಆಲೋಚನಾಪರತೆ ಒಗ್ಗೂಡಿ ಬರುವುದರಿಂದ 'ಭೀಮರಾಯನಿಗೆ', 'ರಶ್ದಿ', 'ಕುಸನೂರ', 'ದ್ರೋಣಾಚಾರಿಗೆ ಏಕಲವ್ಯ ಹೇಳಿದ್ದು', 'ಗುಣಕ್ಕೆ ಮತ್ಸರವುಂಟೇ?' 'ಯಾವಾಗ ನೀನು', 'ಸುಬ್ಬಣ್ಣ' - ಈ ಕವಿತೆಗಳು ಸಂಕೀರ್ಣತೆಯನ್ನು ಪಡೆದುಕೊಂಡು ಯಶಸ್ಸಿನ ಹೊಸ್ತಿಲಲ್ಲಿ ನಿಲ್ಲುತ್ತವೆ. ವಿವರಗಳ ಸಜೀವತೆ ಹಾಗೂ ಸೂಕ್ಷ್ಮ ವ್ಯಂಗ್ಯದಿಂದ 'ಭಾನುವಾರ', ಉಪಾಧ್ಯ ಅವರ ಕಾವ್ಯದ ಮುಖ್ಯ ಲಕ್ಷಣಗಳನ್ನೆಲ್ಲ ರೋಚಕವಾಗಿ ಪ್ರತಿನಿಧಿಸುತ್ತದೆ.

ಪ್ರಚಲಿತ ಪಂಥಾಭಿಮಾನ ಹಾಗೂ ಸಾಮಾನ್ಯೀಕೃತ ಧೋರಣೆಗಳಿಂದ ದೂರವಿರುವ ಉಪಾಧ್ಯ 'ಒರೆಗೆ ಹಚ್ಚುವ ಸಂಬಂಧ'ಗಳ ಸ್ವಂತಿಕೆಯಿಂದ ಇನ್ನೂ ಹೆಚ್ಚು ಅರ್ಥಪೂರ್ಣವಾದ ಕಾವ್ಯ ರಚಿಸಬಲ್ಲ ಸಾಧ್ಯತೆಯನ್ನು ಈ ಸಂಕಲನ ಸೂಚಿಸುತ್ತದೆ.

೧

# ಅಖಿಲ ಭಾರತ ೬೫ನೆಯ ಕನ್ನಡ ಸಾಹಿತ್ಯ ಸಮ್ಮೇಳನ, ಹಾಸನ ಅಧ್ಯಕ್ಷರ ಆಶಯ ಭಾಷಣ

ದೇವಲೀಲೆಯೊ ಕಾಣೆ, ಕರ್ಮಜಾಲವೊ ಕಾಣೆ
ಅದು ನಮ್ಮ ಬುದ್ಧಿಯಾಚೆಗಿನ ಮಾತು,
ಯಾವುದೇನೇ ಇರಲಿ, ಪ್ರೀತಿಯಂಥಾ ವಸ್ತು
ಭವದಲ್ಲಿ ಕಾಣೆ, ಮನಗಂಡ ಮಾತು

- ಮಧುರಚೆನ್ನ

ನನ್ನ ಪ್ರೀತಿಯ ಕನ್ನಡ ಬಂಧುಗಳೇ,

ನಮ್ಮ ಹಿರಿಯ ಕವಿ ಪು.ತಿ.ನ. ಅವರು ನನಗೆ ಬರೆದ ಅಭಿನಂದನ ಪತ್ರದಲ್ಲಿಯ ಒಂದು ಮಾತು ಹೀಗಿದೆ : "ಕನ್ನಡ ನಾಡಿನ ಎಲ್ಲ ಭಾಗಗಳಿಂದಲೂ ಮತ್ತು ಹೊರನಾಡುಗಳಿಂದಲೂ ಹೊಮ್ಮಿಹರಿದು ಬರುವ ಕನ್ನಡಿಗರ ನೆರವಿಯನ್ನು ನೋಡುವುದೇ ಒಂದು ಸಂತೋಷ. ಅದರಲ್ಲೂ ವೇದಿಕೆ ಮೇಲಿನ ಅಧ್ಯಕ್ಷ ಸ್ಥಾನದಿಂದ ಅವರ ದರ್ಶನ ಇನ್ನೂ ಆನಂದದಾಯಕವಾದದ್ದು". ಅಂಥ 'ದರ್ಶನ'ದ ಆನಂದವನ್ನು ತಾವೆಲ್ಲರೂ ನನಗೆ ದಯಪಾಲಿಸಿರುವ ಇಂದಿನ ಸಂದರ್ಭದಲ್ಲಿ ೫೨ವರ್ಷಗಳ ಹಿಂದೆ ನಾನು ಹಾಯಸ್ಕೂಲ್ ವಿದ್ಯಾರ್ಥಿಯಾಗಿದ್ದಾಗ ನೋಡಿದ ಮೊಟ್ಟ ಮೊದಲ ಸಾಹಿತ್ಯ ಸಮ್ಮೇಳನದ ನೆನಪಾಗುತ್ತದೆ.

೧೯೪೪ರಲ್ಲಿ ರಬಕವಿಯಲ್ಲಿ ನಡೆದ ಆ (೨೮ನೆಯ) ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ ವಹಿಸಿದವರು ಧಾರವಾಡದ ಪ್ರೊ. ಶಿ.ಶಿ. ಬಸವನಾಳರು. ಅಂದು ಜೋಳದರಾಶಿ ದೊಡ್ಡನಗೌಡರ ಕಂಚಿನ ಕಂಠದಿಂದ ಹೊಮ್ಮಿದ ಪ್ರಾರ್ಥನೆ ಸುತ್ತಲಿನ ಕಟ್ಟಡಗಳಿಂದ ಪ್ರತಿಧ್ವನಿಗೊಂಡಿತ್ತು. ಒಬ್ಬರು ಮೆಲ್ಲನೆ ಮೇಲೆದ್ದು ಮುಗುಳು ನಗುತ್ತಲೇ ಪ್ರೀತಿ ತುಂಬಿದ ಧ್ವನಿಯಲ್ಲಿ 'ಅಣ್ಣಂದಿರೇ, ತಾಯಂದಿರೇ' ಎಂದು ಸಂಬೋಧಿಸಿ ಕನ್ನಡದ ಬಗ್ಗೆ ಅತ್ಯಂತ ಕಳಕಳಿಯಿಂದ ಮಾತನಾಡಿದ್ದನ್ನು ನಾನು ಮಂತ್ರಮುಗ್ಧನಾಗಿ ಕೇಳಿದೆ. ಅವರೇ ಮಾಸ್ತಿಯವರು ಎಂದು ತಿಳಿದಾಗ ನನಗೆ ನಿಜಕ್ಕೂ ರೋಮಾಂಚನವಾಯಿತು. ಕವಿಗೋಷ್ಠಿಯ ಉದ್ಘಾಟಕರಾಗಿ ಬಿ.ಎಂ.ಶ್ರೀ. ಅವರ ಕಾವ್ಯವಾಣಿ ಕಿವಿಗಳನ್ನು ತುಂಬಿತು. ಆಗ ಪ್ರಗತಿಶೀಲ ಸಾಹಿತ್ಯ ಕುರಿತು ಪತ್ರಿಕೆಗಳಲ್ಲಿ ನಡೆಯುತ್ತಿದ್ದ (ಮುಖ್ಯವಾಗಿ 'ಉಷಾ' ಮಾಸಪತ್ರಿಕೆ) ವಾದ-ವಿವಾದವನ್ನು ನಾನು ಗಮನಿಸಿದ್ದೆನಾದ್ದರಿಂದ ಗೋಕಾಕರ

ಅಧ್ಯಕ್ಷತೆಯಲ್ಲಿ ನಡೆದ ಪ್ರಗತಿಶೀಲ ಸಾಹಿತ್ಯ ಗೋಷ್ಠಿ ಸಹಜವಾಗಿಯೇ ನನ್ನ ಕುತೂಹಲವನ್ನು ಕೆರಳಿಸಿತ್ತು. ಆಗ ಗೋಷ್ಠಿಯಲ್ಲಿ ಅ.ನ.ಕೃ., ತ.ರಾ.ಸು. ಕುಳಕುಂದ ಶಿವರಾಯ (ನಿರಂಜನ), ನಾಡಿಗೇರ ಕೃಷ್ಣರಾಯ, ಅರ್ಚಕ ವೆಂಕಟೇಶ, ಮಾ.ನಾ ಚೌಡಪ್ಪ ಇವರು ಭಾಗವಹಿಸಿ ಆವೇಶದಿಂದ ಮಾತನಾಡಿದ್ದು ನನಗಿನ್ನೂ ನೆನಪಿದೆ. ಉತ್ತಂಗಿ ಚೆನ್ನಪ್ಪನವರು, ಜಿ.ಪಿ. ರಾಜರತ್ನಂ, ಸಿಂಪಿ ಲಿಂಗಣ್ಣ, ಈಶ್ವರ ಸಣಕಲ್ ಮೊದಲಾದವರು ಬೇರೆ ಬೇರೆ ಗೋಷ್ಠಿಗಳ ಅಧ್ಯಕ್ಷರಾಗಿ, ಉದ್ಘಾಟಕರಾಗಿ ತಮ್ಮ ತಮ್ಮ ವಿಶಿಷ್ಟ ಶೈಲಿಯಲ್ಲಿ ಭಾಷಣ ಮಾಡಿದ್ದನ್ನು ನಾನು ಇಂದಿಗೂ ಮರೆತಿಲ್ಲ. ಮಲ್ಲಿಕಾರ್ಜುನ ಮನಸೂರ ಅವರ ಸಂಗೀತವಂತೂ ಸಭಿಕರನ್ನು ಮಂತ್ರಮುಗ್ಧರನ್ನಾಗಿಸಿತ್ತು.

ನಾನು ಮೇಲೆ ಹೆಸರಿಸಿದ ಈ ಎಲ್ಲ ಮಹನೀಯರು ಇಂದು ಕಣ್ಮರೆಯಾಗಿದ್ದರೂ ತಮ್ಮ ಅಮೂಲ್ಯವಾದ ಸಾಹಿತ್ಯ ಕೃತಿಗಳ ಮೂಲಕ ಜೀವಂತವಾಗಿ ನಮ್ಮಲ್ಲಿ ಉಸಿರಾಡುತ್ತಿದ್ದಾರೆ. ಸ್ಫೂರ್ತಿದಾಯಕವಾದ ಈ ಪ್ರಸಂಗವನ್ನು ಇಲ್ಲಿ ಹೇಳಬೇಕಾಗಿ ಬಂದ ಉದ್ದೇಶವಿಷ್ಟೆ. ಸಾಹಿತ್ಯ ಸಮ್ಮೇಳನ ಬಹಿರಂಗದಲ್ಲಿ, ಸಂಖ್ಯಾಬಾಹುಳ್ಯದಿಂದ 'ಜಾತ್ರೆ'ಯ ಸ್ವರೂಪವನ್ನು ಪಡೆದಿದ್ದರೂ ಅಂತರಂಗದಲ್ಲಿ ಸಾಹಿತ್ಯಯಾತ್ರೆಯಾಗಿ ಪರಿಣಮಿಸುವುದನ್ನು ಮರೆಯಬಾರದು. ಸಾಹಿತ್ಯ ಪ್ರೇಮಿಗಳ, ವಾಚನಾಸಕ್ತರ ದೊಡ್ಡ ಜನಸಮೂಹದ ಸಮ್ಮುಖದಲ್ಲಿಯೂ ಸಾರ್ವಜನಿಕ ಆವೇಶ, ಭಾವುಕ ಪ್ರತಿಕ್ರಿಯೆಗಳನ್ನು ದೂರವಿಟ್ಟು, ಮೌಲಿಕ ಚರ್ಚೆ ನಡೆಸುವುದು ಅಸಾಧ್ಯವೇನೂ ಅಲ್ಲ. ಅಸಾಹಿತ್ಯಕವಾದ ರಾಜಕೀಯ ಒತ್ತಡಗಳಿಂದ ಮಾತ್ರ ಪರಿಷತ್ತು ಮಣಿಯದಂತಿದ್ದರೆ ಸಾಕು, ಅದರ ಗೌರವ ಹೆಚ್ಚುವುದರಲ್ಲಿ ಸಂದೇಹವಿಲ್ಲ. ನಿಜವಾದ, ಜೀವಂತವಾದ ಸಾಹಿತ್ಯದ ಕೆಲಸಗಳಿಗೂ ಇದರಿಂದ ದಾರಿ ಸುಗಮಗೊಳ್ಳಬಹುದೆಂದು ನಾನು ಆಶಿಸಿದ್ದೇನೆ.

ಉಜ್ವಲವಾದ ಇತಿಹಾಸ, ಸಾಹಿತ್ಯ, ಶಿಲ್ಪಕಲೆ ಹಾಗೂ ನಿಸರ್ಗ ಸೌಂದರ್ಯದ ನೆಲೆವೀಡಾದ ಹಾಸನ ಜಿಲ್ಲೆಯ ಕೇಂದ್ರ ಸ್ಥಳದಲ್ಲಿ ಸಮಾವೇಶಗೊಂಡಿರುವ ಅರವತ್ತೈದನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಸ್ಥಾನದಲ್ಲಿ ನನ್ನನ್ನು ನಿಲ್ಲಿಸಿ, ನಿಮ್ಮ ಅತಿಶಯವಾದ ಪ್ರೀತಿ, ಗೌರವಗಳಿಂದ ನನ್ನನ್ನು ಮೂಕವಿಸ್ಮಿತನನ್ನಾಗಿ ಮಾಡಿದ್ದೀರಿ. ಈ ಗೌರವಕ್ಕೆ ಹೆಚ್ಚು ಅರ್ಹರಾದ ಹಿರಿಯರಿಗೆ, 'ಎನಗಿಂತ ಕಿರಿಯರಿಲ್ಲ' ಎಂದು ನಂಬಿರುವ ನಾನು, ಮೊಟ್ಟಮೊದಲು ನಮಸ್ಕರಿಸುತ್ತೇನೆ. ತಾವು ತೋರಿಸಿದ ಗೌರವಕ್ಕಿಂತ ಪ್ರೀತಿ ದೊಡ್ಡದು ಎಂದು ಭಾವಿಸಿ ಇದಕ್ಕೆಲ್ಲ ಮುಖ್ಯ ಕಾರಣರಾದ ಕನ್ನಡ ಸಾಹಿತ್ಯ ಪರಿಷತ್ತಿನ ಮಾನ್ಯ ಅಧ್ಯಕ್ಷರಿಗೆ, ಕಾರ್ಯಕಾರಿ ಸಮಿತಿಯ ಸದಸ್ಯರಿಗೆ ಹಾಗೂ ಸಮ್ಮೇಳನದ ಸ್ವಾಗತ ಸಮಿತಿಯ ಅಧ್ಯಕ್ಷರನ್ನೊಳಗೊಂಡು ಎಲ್ಲ ಕಾರ್ಯಕರ್ತರಿಗೆ ನನ್ನ ತುಂಬು ಹೃದಯದ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ದೇಶಕ್ಕೆ ಸ್ವಾತಂತ್ರ್ಯ ಬಂದ ನಂತರದಲ್ಲಿ ಕರ್ನಾಟಕದ ಮುಖಂಡರೊಬ್ಬರು ಪ್ರಪ್ರಥಮವಾಗಿ ರಾಷ್ಟ್ರದ ಪ್ರಧಾನಮಂತ್ರಿ ಹುದ್ದೆಯನ್ನು ಅಲಂಕರಿಸಿರುವ ಈ ಪರ್ವಕಾಲದಲ್ಲಿ, ಈ ಸಾಹಿತ್ಯ ಸಮ್ಮೇಳನ ಅವರಿಂದಲೇ ಉದ್ಘಾಟನೆಯಾದುದು ಕನ್ನಡಿಗರಿಗೆಲ್ಲ ಅತ್ಯಂತ ಹೆಮ್ಮೆಯನ್ನುಂಟು

ಮಾಡಿದೆ. ಸರಳತೆಯನ್ನೂ ಪ್ರಬುದ್ಧತೆಯನ್ನೂ ತಮ್ಮ ವ್ಯಕ್ತಿತ್ವದಲ್ಲಿ ಮೇಳವಿಸಿಕೊಂಡು, ದುಡಿತವೇ ದೊಡ್ಡ ಗುಣವಾಗಿರುವ ಹರದನಹಳ್ಳಿ ದೊಡ್ಡೇಗೌಡ ದೇವೇಗೌಡರು ಪ್ರಬಲವಾದ ಕರ್ತವ್ಯ ಪ್ರಜ್ಞೆ ಹಾಗೂ ಕಾರ್ಯಸಾಧನೆಗೆ ಪೂರಕವಾದ ಪರಿಶ್ರಮದಿಂದ ತಮ್ಮ ದಕ್ಷತೆಯನ್ನು ಪ್ರಕಟಪಡಿಸಿದ್ದಾರೆ. ತಮ್ಮ ಮುಂದಿರುವ ಸಮಸ್ಯೆಗಳನ್ನು, ಸವಾಲುಗಳನ್ನು ಧೈರ್ಯದಿಂದ ಎದುರಿಸಿ ರಾಷ್ಟ್ರವನ್ನು ಪ್ರಗತಿಪಥದಲ್ಲಿ ಮುನ್ನಡೆಸುವ ಶಕ್ತಿ, ಸೌಭಾಗ್ಯಗಳನ್ನು ಕನ್ನಡ ಜನಶಂಕರಿ ಅವರಿಗೆ ದಯಪಾಲಿಸಲೆಂದು ಸಮಸ್ತ ಕನ್ನಡಿಗರ ಪರವಾಗಿ ಹಾರೈಸುತ್ತೇನೆ.

ಸಂಸತ್ತಿನಲ್ಲಿ ಮೊಟ್ಟಮೊದಲ ಬಾರಿ ಕನ್ನಡದಲ್ಲಿ ಮಾತನಾಡಿ ಇತಿಹಾಸವನ್ನು ನಿರ್ಮಿಸಿದ, ಸಮಾಜವಾದಿ ವಿಚಾರಧಾರೆಯ ವ್ಯಕ್ತಿತ್ವದ, ಸನ್ಮಾನ್ಯ ಶ್ರೀ ಜಯದೇವಪ್ಪ ಹಾಲಪ್ಪ ಪಟೇಲ ಅವರು ಸಾಹಿತ್ಯ ಮತ್ತು ಸಂಸ್ಕೃತಿ ಸಂವರ್ಧನೆಯಲ್ಲಿ ವಿಶೇಷ ಕಾಳಜಿಯುಳ್ಳವರು. ಅವರು ಕರ್ನಾಟಕದ ಮುಖ್ಯಮಂತ್ರಿಗಳಾಗಿರುವ ಈ ಸಂದರ್ಭದಲ್ಲಿ, ಅಭಿವೃದ್ಧಿಯ ಮಾರ್ಗದಲ್ಲಿ ಪ್ರಾದೇಶಿಕ ಅಸಮತೋಲನದಿಂದಾಗಿ ನಾಡಿನ ವಿವಿಧ ಭಾಗದ ಕನ್ನಡಿಗರಲ್ಲಿ ಉಂಟಾಗಿರುವ ಅಸಮಾಧಾನವನ್ನು ಹೋಗಲಾಡಿಸಿ, ಸಮಗ್ರ ಕರ್ನಾಟಕದ ಸರ್ವತೋಮುಖ ಪ್ರಗತಿಗೆ ಕಾರಣರಾಗುವರೆಂಬ ಭರವಸೆಯಿಂದ ಅವರಿಗೆ ಶುಭ ಕೋರುತ್ತೇನೆ.

ಕನ್ನಡ ಸಾಹಿತ್ಯ ಪರಿಷತ್ತು ನಮ್ಮ ನಾಡಿನ ಬಹು ದೊಡ್ಡ ಪ್ರಾತಿನಿಧಿಕ ಸಂಸ್ಥೆ. ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದ ತರುವಾಯ ಸಮಸ್ತ ಕರ್ನಾಟಕದ ವ್ಯಾಪ್ತಿಯುಳ್ಳ ಸಂಸ್ಥೆಯೆಂದರೆ ಇದೊಂದೇ. ಇದರ ಕಾರ್ಯರಂಗ ಹಾಗೂ ಹೊಣೆಗಾರಿಕೆ ಹರಡಿಕೊಂಡು ಬಂದಂತೆ, ತಮ್ಮನ್ನು 'ತಾಯ್ನುಡಿಯ ತಮ್ಮಡಿ' ಎಂದು ಕರೆದುಕೊಂಡ ನಾಡಿನ ಹಿರಿಯರು ಕನ್ನಡ ನಾಡು, ನುಡಿ, ಸಂಸ್ಕೃತಿಗಳ ಬೆಳವಣಿಗೆಗಾಗಿ ಹಿರಿದಾದ ಸೇವೆಯನ್ನು ಸಲ್ಲಿಸಿ, ನುಡಿಯ ಮಕ್ಕಳನ್ನು ಒಂದಾಗಿಸಿ, ಸೌಹಾರ್ದದಿಂದ ಬೆಳೆಸಿ, ಕನ್ನಡಿಗರೆಲ್ಲರ ಸಾಂಸ್ಕೃತಿಕ ಆಶೋತ್ತರಗಳನ್ನು ರೂಪಿಸುವಲ್ಲಿ ತಮ್ಮ ಆತ್ಮಶಕ್ತಿಯನ್ನು ಈ ಸಂಸ್ಥೆಗೆ ಧಾರೆಯೆರೆದು ಇದರ ಕ್ರಿಯಾಶಕ್ತಿಯನ್ನು ಹೆಚ್ಚಿಸುತ್ತ ಬಂದಿದ್ದಾರೆ. ಆ ಎಲ್ಲ ಹಿರಿಯ ಚೇತನಗಳನ್ನು ಸ್ಮರಿಸಿಕೊಂಡು, ಹೊಸ ಕಾಲದ ಅಗತ್ಯಗಳನ್ನು ಅರಿತುಕೊಂಡು ಎಲ್ಲರೂ ಒಂದಾಗಿ ಮುಂದುವರಿಯೋಣ.

ತಮ್ಮ ಕಲೆ, ಪ್ರತಿಭೆ ಹಾಗೂ ಗುಣ ಸಂಪನ್ನತೆಯಿಂದ ಕನ್ನಡಿಗರ ಹೃದಯದಲ್ಲಿ ಶಾಶ್ವತ ಸ್ಥಾನ ಪಡೆದಿರುವ ನಮ್ಮ ಮೇರು ನಟ ಪದ್ಮಭೂಷಣ ಕರ್ನಾಟಕ ರತ್ನ ಡಾ. ರಾಜಕುಮಾರ ಅವರಿಗೆ ದಾದಾ ಸಾಹೇಬ ಫಾಲ್ಕೆ ಪ್ರಶಸ್ತಿ ಸಂದಿರುವುದು ಅತ್ಯಂತ ಅಭಿಮಾನದ ಸಂಗತಿಯಾಗಿದೆ. ಸಿನಿಮಾ ಮಾಧ್ಯಮದ ಒಟ್ಟು ವಿಶಿಷ್ಟ ಕೊಡುಗೆಗಾಗಿ ಈ ಪ್ರಶಸ್ತಿ ಸಂದಿದ್ದರೂ ಡಾ. ರಾಜಕುಮಾರ ಅದನ್ನೆಲ್ಲ ಮೀರಿ ಅಗಾಧವಾಗಿ ಬೆಳೆದವರು. ಕನ್ನಡತನಕ್ಕೂ ತಮಗೂ ಇರುವ ಕಳ್ಳುಬಳ್ಳಿಯನ್ನು ಗೋಕಾಕ ಚಳವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸುವುದರ ಮೂಲಕ ವ್ಯಕ್ತಪಡಿಸಿದ ಈ ಕನ್ನಡದ ಕಣ್ಮಣಿಗೆ ದೊರೆತ ಅಪ್ರತಿಮ ಗೌರವಕ್ಕಾಗಿ ಸಮಸ್ತ ಕನ್ನಡಿಗರ ಪರವಾಗಿ ಹಾರ್ದಿಕ ಅಭಿನಂದನೆಗಳನ್ನು ಸಲ್ಲಿಸುತ್ತೇನೆ.

ಕನ್ನಡ ನಾಡು ಮುಧೋಳ ಸಾಹಿತ್ಯ ಸಮ್ಮೇಳನದಿಂದೀಚೆಗೆ ಹಲವಾರು ಅಮೂಲ್ಯವಾದ ಜೀವರತ್ನಗಳನ್ನು ಕಳೆದುಕೊಂಡು ನಿಜಕ್ಕೂ ಬಡವಾಗಿದೆ. ಕಲೆಯಲ್ಲಿ ಉತ್ತುಂಗ ಸಾಧನೆಯನ್ನು ಮಾಡಿ, ರಾಷ್ಟ್ರೀಯ ಪ್ರಶಸ್ತಿಗಳನ್ನು ಗಳಿಸಿ, ಅಪಾರವಾದ ಕಲಾ ಸಂಪತ್ತನ್ನು ಮುಂದಿನ ತಲೆಮಾರಿಗೆ ಬಿಟ್ಟುಕೊಟ್ಟ ಪದ್ಮಭೂಷಣ ಕಟ್ಟಂಗೇರಿ ಕೃಷ್ಣ ಹೆಬ್ಬಾರರು; ಸೃಜನಶೀಲ ಪ್ರತಿಭೆ ಮತ್ತು ಪಾಂಡಿತ್ಯಗಳು ಅಪೂರ್ವ ರೀತಿಯಲ್ಲಿ ಮೇಳವಿಸಿದ ಧೀಮಂತ ಲೇಖಕ ಸೇಡಿಯಾಪು ಕೃಷ್ಣ ಭಟ್ಟರು; ಆಧುನಿಕ ಕನ್ನಡ ಕಥನ ಕಾವ್ಯಮಾರ್ಗ ಕಂಡ ಸಜ್ಜನ ಕವಿ ಸು.ರಂ. ಎಕ್ಕುಂಡಿಯವರು; ಕನ್ನಡದಲ್ಲಿ ಲಿಮರಿಕ್‌ಗಳನ್ನು ಹದಗೊಳಿಸಿದ ರಸಿಕತೆಯ ಕುಶಲ ಕವಿ ಹಾಗೂ ಭಾಷಾಶಾಸ್ತ್ರಜ್ಞ ಬಿಳಿಗಿರಿಯವರು, ಪ್ರಶಸ್ತಿಗಳನ್ನು ತಿರಸ್ಕರಿಸಿ, ನಿಜವಾದ ಸಮಾಜ ಸೇವಕರಾಗಿದ್ದ, ಕಾವಿ ಬಟ್ಟೆಯ ಸೋಗಿಲ್ಲದ 'ತಿರುಕ' ಕಾವ್ಯನಾಮದ ಮಲ್ಲಾಡಿಹಳ್ಳಿ ರಾಘವೇಂದ್ರ ಸ್ವಾಮಿಗಳು, ನರ್ಮ ವಿನೋದದ ಪ್ರಬಂಧಕಾರ, ಎನ್.ಎಸ್. ಗದಗಕರ, ಹಿರಿಯ ಸ್ವಾತಂತ್ರ್ಯ ಹೋರಾಟಗಾರ, ಮಾಜಿ ಸಚಿವ ಹಾಗೂ ಗ್ರಂಥಕರ್ತ ಕೆ.ಎಫ್. ಪಾಟೀಲರು, ಕರ್ನಾಟಕ ವಿಶ್ವವಿದ್ಯಾಲಯದ ಮಾಜಿ ಕುಲಪತಿ, ಶಿಕ್ಷಣ ತಜ್ಞ ಹಾಗೂ ಲೇಖಕ ಸದಾಶಿವ ಒಡೆಯರ, ಪಂಡಿತವರೇಣ್ಯ ವೆಂಕಟರಾಯ ಸುರತ್ಕಲ್ ಅವರು, ಅಕಾಲ ಮರಣಕ್ಕೀಡಾದ ನಟ ಹಾಗೂ ಲೇಖಕ ಗುತ್ತಿಗೇರಿ ಮಾನಪ್ಪ ನಾಯಕ ಅವರು (ಮಾನು), ರಂಗೋಲಿ ಕಲೆಯಲ್ಲಿ ಅನೇಕ ವಿನ್ಯಾಸಗಳನ್ನು ನಿರ್ಮಿಸಿದ ಕಲಾವಿದ ಬಾಯಿರಿ ಅವರು, 'ಇಂಗ್ಲೀಷ್-ಕನ್ನಡ ವೈದ್ಯ ಪದಕೋಶಗಳ ಹುಟ್ಟು ರಚನೆ'ಯಂಥ ಗ್ರಂಥಗಳನ್ನು ಏಕಾಂಗಿಯಾಗಿ ರಚಿಸಿದ್ದಲ್ಲದೆ ಕನ್ನಡದಲ್ಲಿ ವೈದಕ್ಯೀಯ ಬರವಣಿಗೆಗೆ ಮಾದರಿ ಒದಗಿಸಿದ ಡಾ. ಡಿ.ಎಸ್. ಶಿಪಪ್ಪ ಅವರು, 'ಕನ್ನಡವ ಕೂಲಿ' ಎಂಬ ನಮ್ರತೆಯ ಕನ್ನಡದ ಕಟ್ಟಾಳು ಶ್ರೀ ರಾಮ ಜಾಧವ, ಕನ್ನಡದಲ್ಲಿ ಅರ್ಥಶಾಸ್ತ್ರ ಸಾಹಿತ್ಯವನ್ನು ಬೆಳೆಸಿದ ಹಾಗೂ 'ಭಾರತದ ಸ್ವಾತಂತ್ರ್ಯ ಚಳುವಳಿ' ಮೊದಲಾದ ಗ್ರಂಥಗಳ ಕರ್ತೃಗಳಾದ ಪ್ರೊ. ಎ.ಪಿ. ಶ್ರೀನಿವಾಸಮೂರ್ತಿ ಅವರು, ಆಧುನಿಕರಲ್ಲಿ ಅತ್ಯಧಿಕ ವಚನಗಳನ್ನೂ, ಮಹಾಕಾವ್ಯಗಳನ್ನೂ ರಚಿಸಿದ ಡಾ. ಜ.ಚ.ನಿ.ಯವರು, ಹುಬ್ಬಳ್ಳಿಯ ಹಿರಿಯ ಕವಿ ಕಾವ್ಯಕಿನ್ನರಿ ಗಂಗಪ್ಪ ವಾಲಿ, ಹೆಸರಿಸಲಾಗದೆ ಉಳಿದಿರಬಹುದಾದ ಇನ್ನೂ ಹಲವು ಹಿರಿ ಕಿರಿಯ ಪ್ರತಿಭಾವಂತರು, ಭಾವಗೋಚರವಾಗಿ ಚಿರಸ್ಮರಣೀಯರಾಗಿದ್ದಾರೆ. ಈ ಎಲ್ಲ ಚೇತನಗಳನ್ನು ಸ್ಮರಿಸಿಕೊಂಡು ಮುಂದೆ ಸಾಗುತ್ತೇನೆ.

೨

ಆಡುಮುಟ್ಟದ ಗಿಡವಿಲ್ಲವೆನ್ನುವಂತೆ ಈವರೆಗಿನ ಸಮ್ಮೇಳನಾಧ್ಯಕ್ಷರುಗಳು ಪ್ರತಿಪಾದಿಸದೆ ಇರುವ ವಿಷಯಗಳೇ ಇಲ್ಲವೆಂದು ಹೇಳಬಹುದು. ತಮ್ಮ ಪಾಂಡಿತ್ಯ, ಅನುಭವ, ಸ್ಫೂರ್ತಿ, ದಕ್ಷತೆಗಳಿಂದ ನಾಡು-ನುಡಿ-ಸಂಸ್ಕೃತಿಗೆ ಸಂಬಂಧಪಟ್ಟಂತೆ ಅವರು ಅನೇಕ ಸಲಹೆಗಳನ್ನು ನೀಡಿ ಮಾರ್ಗದರ್ಶನ ಮಾಡಿರುವುದಲ್ಲದೆ ಕಾಲಕಾಲಕ್ಕೆ ಕನ್ನಡಿಗರಲ್ಲಿ ತಮ್ಮ ಕರ್ತವ್ಯದ ಅರಿವನ್ನು ಮೂಡಿಸುತ್ತ ಬಂದಿದ್ದಾರೆ. ಇಂಥ ಸಂದರ್ಭದಲ್ಲಿ ಹೊಸದೇನನ್ನೋ ಹೇಳುತ್ತಿದ್ದೇನೆಂಬ ಭ್ರಮೆ ನನಗೆ ಎಳ್ಳಷ್ಟೂ ಇಲ್ಲ. ನಮ್ಮ ಜನರಲ್ಲಿ ಸಾಹಿತ್ಯದ ಬಗೆಗೆ ಸದಭಿರುಚಿಯನ್ನೂ

ಸಂಸ್ಕೃತಿ ಸಂವರ್ಧನೆಯಲ್ಲಿ ಆಸಕ್ತಿಯನ್ನೂ ಸಮಾಜದಲ್ಲಿ ಸಾಮರಸ್ಯವನ್ನೂ ನಾಡು-ನುಡಿಗಳಲ್ಲಿ ಅಭಿಮಾನವನ್ನೂ ಅಭಿವೃದ್ಧಿಗೊಳಿಸುವ ದಿಸೆಯಲ್ಲಿ ನಾಲ್ಕು ಮಾತುಗಳನ್ನು ಆಡಬೇಕಾದುದು ನನ್ನ ಕರ್ತವ್ಯವೆಂದು ಭಾವಿಸಿದ್ದೇನೆ.

ನಾವು ಕೂಡಿರುವ ಈ ಜಿಲ್ಲೆಯ ಸಾಂಸ್ಕೃತಿಕ ಪರಿಸರದಲ್ಲಿಯೇ ನಮಗೆ ಇಂದಿಗೂ ಪ್ರಸ್ತುತವಾಗಬಲ್ಲ ಒಂದೆರಡು ಸಂಗತಿಗಳನ್ನು ಮೊದಲು ಪ್ರಸ್ತಾಪಿಸಬಹುದಾಗಿದೆ :

ಕಾಲದಿಂದ ಕಾಲಕ್ಕೆ ರಾಜಕೀಯ ಜೀವನದಲ್ಲಿ ಸ್ಥಿತ್ಯಂತರಗಳುಂಟಾಗುತ್ತಿದ್ದರೂ ಜನಜೀವನ ಅದರ ಪೆಟ್ಟುಗಳನ್ನು ಸಹಿಸಿಕೊಂಡು, ಸಾಂಸ್ಕೃತಿಕ ಪರಂಪರೆಯೊಂದನ್ನು ಸತತವಾಗಿ ಕಾಯ್ದುಕೊಂಡು ಬರಲು ಶಕ್ತವಾಗಿರುವುದನ್ನು ಕನ್ನಡ ನಾಡಿನ ಶಾಸನಗಳಿಂದ ತಿಳಿಯಬಹುದಾಗಿದೆ.

ಇದುವರೆಗೆ ದೊರೆತಿರುವ ಕನ್ನಡ ಶಾಸನಗಳಲ್ಲಿ ಅತ್ಯಂತ ಪ್ರಾಚೀನವಾದ ಕನ್ನಡದ ದಾಖಲೆ ಹೊಂದಿರುವ ಶಾಸನ (ಸುಮಾರು ಕ್ರಿ.ಶ. ೪೫೦) ಈ ಜಿಲ್ಲೆಯ ಬೇಲೂರು ತಾಲೂಕಿನ ಹಲ್ಮಿಡಿ ಎಂಬ ಊರಿನಲ್ಲಿ ಸಿಕ್ಕಿದ್ದು. ಶೈಲಿಯಲ್ಲಿ ಸ್ವಲ್ಪಮಟ್ಟಿನ ಸಾಹಿತ್ಯಿಕ ಸಂಸ್ಕಾರದಿಂದ, ಹಳಗನ್ನಡ ಪ್ರಾರಂಭಿಕ ಸಾಹಿತ್ಯಕ್ಕೆ ಒಂದು ಉದಾಹರಣೆಯಾಗಿಯೂ, ಮೊಟ್ಟಮೊದಲ ಗದ್ಯದ ಮಾದರಿಯಾಗಿಯೂ ಬನವಾಸಿಯ ಆದಿ ಕದಂಬರ ಈ ಶಿಲಾಲಿಪಿ ವಿಶೇಷ ಮಹತ್ವವನ್ನು ಪಡೆದುಕೊಂಡಿದೆ. ಕನ್ನಡ ಭಾಷೆ ಪಂಡಿತರ ಗಮನ ಸೆಳೆದದ್ದನ್ನೂ, ಕನ್ನಡಕ್ಕೆ ರಾಜ ಮನ್ನಣೆ ದೊರೆಯ ತೊಡಗಿದ್ದನ್ನೂ ಇದರಿಂದ ಗುರುತಿಸಬಹುದು. ತೀರ ಇತ್ತೀಚಿನ ಶೋಧನೆಯಿಂದ ಕಂಡು ಬಂದಂತೆ (ಡಾ. ಎಚ್.ಆರ್. ರಘುನಾಥ ಭಟ್) ಇದರ ಶೀರ್ಷ ಶಿಲ್ಪ (Head-Piece) ದಲ್ಲಿರುವ ಸುದರ್ಶನ ಚಕ್ರದ ಭಾಗವಾಗಿ 'ಜ್ಯೋತಿ'ಯ ಸಂಕೇತವನ್ನು ಕಂಡರಿಸಿರುವುದು ಶಾಸನ ಪಾಠದಷ್ಟೇ ಮಹತ್ವಪೂರ್ಣವೂ ಅರ್ಥಗರ್ಭಿತವೂ ಆಗಿದೆ.

ಶಿಲ್ಪ ಮತ್ತು ವಾಸ್ತುಶಿಲ್ಪಗಳಿಂದಲೂ 'ಗೊಮ್ಮಟ' ವಿಗ್ರಹದ ಶಿಲ್ಪ ಪರಿಣತಿಯ ಪರಾಕಾಷ್ಠೆಯಿಂದಲೂ ಪ್ರಸಿದ್ಧವಾಗಿರುವ ಶ್ರವಣಬೆಳಗೊಳ ಅತ್ಯಂತ ಪ್ರಾಚೀನ ಸಾಂಸ್ಕೃತಿಕ ಕೇಂದ್ರವಾಗಿ, ಕಳೆದ ಎರಡೂವರೆ ಸಾವಿರ ವರುಷಗಳ ನಿರಂತರ ಇತಿಹಾಸವಿರುವ ಹಾಗೂ ತನ್ನ ಪರಂಪರೆಯನ್ನು ಇಂದಿಗೂ ಜೀವಂತವಾಗಿ ಉಳಿಸಿಕೊಂಡು ಬಂದಿರುವ ಸಾಂಸ್ಕೃತಿಕ ಕೇಂದ್ರವಾಗಿ ತನ್ನ ವೈಶಿಷ್ಟ್ಯವನ್ನು ಮೆರೆದಿದೆ. ಕನ್ನಡ ಭಾಷೆ ಮತ್ತು ಸಾಹಿತ್ಯಿಕ ಪರಂಪರೆಗಳ ಜೊತೆಗೆ ಅದಕ್ಕಿದ್ದ ಸಂಬಂಧ ಅತ್ಯಂತ ಗಮನಾರ್ಹವಾದದ್ದು. ಇನ್ನೂ ಒಂದು ವಿಶೇಷವೆಂದರೆ ಇಲ್ಲಿಯ ಶಾಸನಗಳಲ್ಲಿ ಎದ್ದು ಕಾಣುವ ಸಾಹಿತ್ಯ ಗುಣ. ಸಾಹಿತ್ಯ ಹೊಸ ರೂಪಗಳನ್ನು ಪಡೆಯುತ್ತ ಹೋದರೂ ಒಂದೆರಡು ಅಪವಾದಗಳನ್ನು ಬಿಟ್ಟರೆ ಶಾಸನಗಳು ಮಾತ್ರ ಚಂಪೂ ಶೈಲಿಯೊಂದನ್ನೇ ಅವಲಂಬಿಸಿದ್ದು ಕುತೂಹಲಕರವಾಗಿದೆ. ಹಾಗೆಯೇ ಬೇಲೂರು ಶಾಸನದ ಕಂದ ಪದ್ಯಗಳಲ್ಲಿ ಮೂಡಿಬಂದಿರುವ ಸುಟಿಯಾದ ವ್ಯಕ್ತಿ ಚಿತ್ರಗಳು ಚೊಕ್ಕವಾದ ಸಾಹಿತ್ಯ ರೂಪಕ್ಕೆ ಮಾದರಿಯಾಗಿವೆ. ಗಣ್ಯರ ವ್ಯಕ್ತಿಚಿತ್ರಗಳೊಂದಿಗೆ ಪರೋಪಕಾರಿಯಾದ ಜನ

ಸಾಮಾನ್ಯನೊಬ್ಬನ ಶಬ್ದಚಿತ್ರವೂ ಅಲ್ಲಿ ಮೂಡಿರುವುದು ಗಮನಾರ್ಹ :

ಹಸುಗೂಸುಗಳ್ಗೆ ಹಾಲಂ
ಹಸಿದರ್ಗನ್ನಮುಮನಳ್ಕರಿಂದಂ ನಿಚ್ಚಂ
ಹಸಗಾಲದೊಳಂ ಸಲಿಸುವ
ಬೆಸನದಿನಾರಾದಿಗೌಂಡನಂ ಪೋಲ್ವನ್ನರ್

ಭಾರತೀಯ ವಾಸ್ತುಶಿಲ್ಪದಲ್ಲಿಯೇ ಅಗ್ರಸ್ಥಾನವನ್ನು ಪಡೆಯಲರ್ಹವಾದ ಹಳೇಬೀಡಿನ ಹೊಯ್ಸಳೇಶ್ವರ ದೇವಾಲಯ ಮತ್ತು ವಾಸ್ತುಶಿಲ್ಪ ಹಾಗೂ ಶಿಲ್ಪಗಳ ಸಮನ್ವಯದಿಂದ ಒಂದು ಉತ್ಕೃಷ್ಟ ಕಲಾಕೃತಿಯಾಗಿ ಪರಿಣಮಿಸಿದ ಬೇಲೂರಿನ ಚೆನ್ನಕೇಶವ ದೇವಾಲಯ ಇವುಗಳಲ್ಲಿ ಕಂಡುಬರುವ ಸಂಕರವಿಲ್ಲದ ಶುದ್ಧ ಕರ್ನಾಟಕ ಕಲೆ ಭಾವಸಂಪತ್ತಿನ ಅಭಿವ್ಯಕ್ತಿಯಲ್ಲಿ ನಯಗೆಲಸಗಳ ನಿಪುಣತೆಯಲ್ಲಿ ವಿಶ್ವದ ಯಾವುದೇ ಶಿಲ್ಪಗಳನ್ನು ಮೀರಿಸಿದೆ. ಈ ಸಂದರ್ಭದಲ್ಲಿ ನಾವು ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ಸಾಹಿತ್ಯ, ಕಲೆ, ಧರ್ಮ ಮತ್ತು ಬದುಕಿನಲ್ಲಿ ಸಮನ್ವಯವನ್ನು ಸಾಧಿಸಿದ ಕರ್ನಾಟಕ ಸಂಸ್ಕೃತಿಯ ಸ್ವರೂಪವನ್ನು. ಅನೇಕ ಧರ್ಮಗಳಿಗೆ ಆಶ್ರಯಸ್ಥಾನವಾಗಿದ್ದ ಕರ್ನಾಟಕ ನಿಜವಾದ ಅರ್ಥದಲ್ಲಿ ಧರ್ಮಸಮನ್ವಯ ಭೂಮಿಯಾಗಿತ್ತು. ಎಲ್ಲ ಧರ್ಮಗಳನ್ನು ಸಮಾನದೃಷ್ಟಿಯಿಂದ ಕಾಣುವ ಸಮನ್ವಯ ಸಂಸ್ಕೃತಿ ಕರ್ನಾಟಕದ ಸಹಜ ಗುಣವಾಗಿತ್ತಲ್ಲದೆ ಕನ್ನಡ ರಾಜರ ಉದಾತ್ತ ಆದರ್ಶವೂ ಆಗಿತ್ತು. ಬೇಲೂರಿನ ಶಾಸನದಲ್ಲಿರುವ ಒಂದು ಪದ್ಯ ಧಾರ್ಮಿಕ ಕ್ಷೇತ್ರಗಳಲ್ಲಿರಬೇಕಾದ ವಿಶಾಲ ದೃಷ್ಟಿಗೆ ಚಿರಂತನವಾದ ಆದರ್ಶವನ್ನು ಒದಗಿಸಿದೆ :

ಯಂ ಶೈವಾಸ್ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇಂದಾತಿನೋ ।
ಬೌದ್ಧಾ ಬುದ್ಧ ಇತಿ ಪ್ರಮಾಣ ಪಟವಃ ಕರ್ತೇತಿ ನೈಯ್ಯಾಯಿಕಾಃ ॥
ಅರ್ಹನ್ನಿತ್ಯಥ ಜೈನಶಾಸನರತಾಃ ಕರ್ಮೇತಿ ಮೀಮಾಂಸಕಾಃ ।
ಸೋಯಂ ವೋ ವಿಧಧಾತು ವಾಂಛಿತ ಫಲಂ ಶ್ರೀ ಕೇಶವೇಶಸ್ಸದಾ ॥

ಶಿವ, ವಿಷ್ಣು, ಜಿನ, ಬುದ್ಧ ಈ ಮೊದಲಾದ ಅನಂತ ನಾಮರೂಪಗಳನ್ನುಳ್ಳ ಆ ವಿಶ್ವಚೈತನ್ಯ ಶಕ್ತಿ ಒಂದೇ ಎಂಬುದನ್ನು ಹೀಗೆ ಹೇಳಿದುದು ಮಾತ್ರವಲ್ಲದೆ ಅದನ್ನು ನಿತ್ಯಜೀವನದಲ್ಲಿ ಅಳವಡಿಸಿಕೊಂಡು ಮುನ್ನಡೆದ ಧಾರ್ಮಿಕ ಜೀವನದ ಚಿತ್ರವನ್ನು ಈ ಶಾಸನ ಮೂಡಿಸುತ್ತದೆ.

ಇನ್ನೂ ಒಂದು ಪ್ರಸಂಗವನ್ನು ಈ ಸಂದರ್ಭದಲ್ಲಿ ಅವಶ್ಯವಾಗಿ ನೆನೆಯಬೇಕು. ಕ್ರಿ.ಶ. ೧೩೬೮ರ ಶ್ರವಣಬೆಳ್ಗೊಳದ ಶಾಸನದಲ್ಲಿ ಅದು ಉಲ್ಲೇಖಿತವಾಗಿದೆ.

ಒಮ್ಮೆ ಶ್ರೀವೈಷ್ಣವರಿಗೂ ಜೈನರಿಗೂ ವ್ಯಾಜ್ಯವಾಗಿ ಜೈನರಿಗೆ ಹಾನಿ ತೊಂದರೆಗಳೊದಗಿರಲು, ಜೈನರು ವೀರ ಬುಕ್ಕರಾಯನಲ್ಲಿಗೆ ದೂರನ್ನೊಯ್ಯಲು ಆತನು, 'ಎರಡು ಧರ್ಮಗಳೂ ಒಂದು; ಬೇಧವೆಣಿಸಲಾಗದು' ಎಂಬುದಾಗಿ ಹೇಳಿ, ಎರಡೂ ಪಂಗಡದ ಧುರೀಣರನ್ನು ಕೈ ಕೈ ಹಿಡಿಸಿ ಸ್ನೇಹವನ್ನುಂಟು ಮಾಡಿದನು. ಜೈನ ಬಸದಿಗಳ ರಕ್ಷಣೆಗಾಗಿ ವೈಷ್ಣವರು, ವೈಷ್ಣವ ದೇವಾಲಯಗಳ

ರಕ್ಷಣೆಗಾಗಿ ಜೈನರು ಹಣವನ್ನು ಕೊಡಬೇಕೆಂಬ ನಿಯಮ ಮಾಡಿದನಂತೆ. ಕೋಮು ಗಲಭೆಗಳಿಂದ ಆಗಾಗ ಜನಜೀವನ ಅಸ್ತವ್ಯಸ್ತಗೊಂಡು ಕುದಿಯುತ್ತಿರುವ ನಮ್ಮ ದೇಶದ ಇಂದಿನ ಸಂದರ್ಭದಲ್ಲಿ ಈ ಘಟನೆಗಳನ್ನಿಟ್ಟು ನೋಡಬೇಕು. ಕನ್ನಡ ನಾಡಿನ ಸಾಂಸ್ಕೃತಿಕ ಪರಂಪರೆಯಲ್ಲಿ ಹೀಗೆ ಆದರ್ಶವಾದದ್ದನ್ನು ನಮ್ಮ ಲೇಖಕರು ಮತ್ತೆ ಮತ್ತೆ ಪರಿಭಾವಿಸಿ ತಮ್ಮ ಕೃತಿಗಳ ಮೂಲಕ ಅಂಥ ತಿಳಿವಳಿಕೆಯನ್ನು ಹರಡುವುದಕ್ಕೆ ಕಾರಣರಾಗಬೇಕು. ನಮ್ಮ ಸಂಸ್ಕೃತಿಯಲ್ಲಿ ಶ್ರೇಷ್ಠವಾದದ್ದೆಲ್ಲ ನಮಗೆ ಸ್ಫೂರ್ತಿಯಾಗಿ ನಿಲ್ಲಬೇಕು.

೩

ಸಾವಿರ ವರ್ಷಗಳಷ್ಟು ಸಮೃದ್ಧಿಯುಳ್ಳ ಕನ್ನಡ ಸಾಹಿತ್ಯ ಚರಿತ್ರೆಯನ್ನು ಅವಲೋಕಿಸಿದರೆ ಜೀವನದಂತೆ ಸಾಹಿತ್ಯವೂ ಚಲನಶೀಲವಾಗಿ ಬದಲಾವಣೆಗೊಳ್ಳುತ್ತ ಬಂದರೆ ಮಾತ್ರ ತನ್ನ ಜೀವಂತಿಕೆಯನ್ನು ಅದು ಕಾಪಾಡಿಕೊಳ್ಳಬಲ್ಲದೆಂಬುದು ಸ್ಪಷ್ಟವಾಗುತ್ತದೆ. ಭಾಷೆ, ಛಂದಸ್ಸು, ರಾಜಕೀಯ, ಸಾಮಾಜಿಕ ಪರಿಸ್ಥಿತಿಗಳು, ಅಂದಂದಿನ ಕಾವ್ಯಕ್ಕೆ ಪ್ರಮುಖ ಪ್ರೇರಣೆಗಳಾಗಿದ್ದ ಮತ ಧರ್ಮಗಳು - ಇವೇ ಮೊದಲಾದವು ನಿಧಾನವಾಗಿಯಾದರೂ ಬದಲಾವಣೆ ಪಡೆಯುತ್ತ ಬಂದಿವೆ. ತಮ್ಮ ಕಾಲದ ಪ್ರಮುಖ ಮೌಲ್ಯಗಳನ್ನು ಪ್ರತಿಪಾದಿಸುವುದರೊಂದಿಗೆ ಯುಗಶಕ್ತಿಯನ್ನು ತಮ್ಮ ಕಾವ್ಯದಲ್ಲಿ ಹಿಡಿದಿಟ್ಟ ಪಂಪ, ರನ್ನರಂಥ ಮಹಾಕವಿಗಳಿದ್ದಾಗಲೂ ಪಂಡಿತರ ಹಾಗೂ ವಿವಿಧ ಕಳಾಮಂಡಿತರ ಆಸಕ್ತಿ, ಅಭಿಪ್ರಾಯಗಳು ಅಂದಿನ ಕಾವ್ಯರೂಪ ಹಾಗೂ ಧೋರಣೆಗಳನ್ನು ನಿಯಂತ್ರಿಸಿರುವುದು ಕಂಡು ಬರುತ್ತದೆ. ಪ್ರೌಢವಾದ ಚಂಪೂ ಕಾವ್ಯಗಳ ಭಾಷೆ ಜನಸಾಮಾನ್ಯಕ್ಕೆ ನಿಲುಕುವಂತಿರಲಿಲ್ಲ. ಇಂಥ ಸಂದರ್ಭದಲ್ಲಿ ಧಾರ್ಮಿಕ ಹಾಗೂ ಸಾಮಾಜಿಕ ಜೀವನದಲ್ಲಿ ಉಂಟಾದ ಮೂಲಭೂತ ವ್ಯತ್ಯಾಸಗಳಿಂದಾಗಿ, ಹಾಗೆಯೇ ಸ್ವತಂತ್ರವಾದ ಮನೋಧರ್ಮ ಹಾಗೂ ದೃಷ್ಟಿಯಿಂದ ಹನ್ನೆರಡನೆಯ ಶತಮಾನದಲ್ಲಿ ವಚನಕಾರರಿಂದ ಸಾಹಿತ್ಯ ರೂಪದಲ್ಲಿ ಕ್ರಾಂತಿಕಾರಕ ಬದಲಾವಣೆಯಾಗಿ ಸಾಹಿತ್ಯದ ಭಾಷೆ, ಸುಲಭವಾಗಿ, ಸರಳವಾಗಿ ಸಾಮಾನ್ಯ ಜನಕ್ಕೆ ತಲುಪುವಂತಾಯಿತು.

ಹೀಗೆ ಹಿಂದಿನ ಕಾವ್ಯ ಬೇರೆ ಬೇರೆ ಹಂತಗಳಲ್ಲಿ ಒಂದು ಹೊಸ ತಿರುವನ್ನು ಪಡೆಯುತ್ತ ಬಂದಾಗ ಈ ಬದಲಾವಣೆ ಕವಿಗಳ ದೃಷ್ಟಿ, ಧ್ಯೇಯ, ಧೋರಣೆಗಳಲ್ಲಿ ಮಾತ್ರವಲ್ಲದೆ ಕಾವ್ಯದ ಭಾಷಾರೂಪ ಹಾಗೂ ಛಂದೋ ರೂಪುಗಳಲ್ಲಿಯೂ ಕಾಣಿಸಿಕೊಂಡಿತು. ೧. ಚಂಪೂ ೨. ವಚನ, ರಗಳೆ, ಷಟ್ಪದಿ ೩. ಕೀರ್ತನ, ಸಾಂಗತ್ಯ ೪. ಭಾವಗೀತೆಗಳು ಎಂದು ನಾಲ್ಕು ವರ್ಗಗಳಲ್ಲಿ ಈ ತಿರುವುಗಳನ್ನು ಗುರುತಿಸಿ, ಅವುಗಳನ್ನು ನಾಲ್ಕು ಕ್ರಾಂತಿ ಘಟ್ಟಗಳೆಂದು ವಿಮರ್ಶಕರು ಸಮರ್ಪಕವಾಗಿಯೇ ಗುರುತಿಸಿದ್ದಾರೆ. ಕನ್ನಡ ಸಾಹಿತ್ಯದಲ್ಲಿಯೇ ವಿಶಿಷ್ಟವಾದ ಆಡುಮಾತಿನ ಲಯದಲ್ಲಿ ರೂಪುಗೊಂಡ 'ವಚನ' ಸಮಾಜದ ವಿವಿಧ ಸ್ತರಗಳಿಂದ ಬಂದ ಶ್ರೀಸಾಮಾನ್ಯನ ಸಾಹಿತ್ಯಾಭಿವ್ಯಕ್ತಿಯಾಗಿ ಭಾವ, ಭಾಷೆ, ಧೋರಣೆಗಳಲ್ಲಿ ಸಂಪೂರ್ಣ ಭಿನ್ನವಾಗಿರುವುದನ್ನು ಕಾಣುತ್ತೇವೆ. ವಚನ ಸಾಹಿತ್ಯದ ಈ ಪರಂಪರೆ ಹೊಸಗನ್ನಡ ಸಾಹಿತ್ಯದ

ಮುಖ್ಯ ಪ್ರೇರಣೆಗಳಲ್ಲಿ ಒಂದಾಗಿದ್ದಲ್ಲದೆ ಮುಂದಿನ ಎಲ್ಲ ಘಟ್ಟಗಳ ಕಾವ್ಯ-ಸಾಹಿತ್ಯ ನಿರ್ಮಾಣದಲ್ಲಿ ತನ್ನ ದಟ್ಟವಾದ ಪ್ರಭಾವವನ್ನು ಬೀರಿದೆ.

'ಪತ್ತು ಸಾವಿರ ಗೀತವ ಹಾಡಿ, ಅರ್ಥವಿಟ್ಟಲ್ಲಿ ಫಲವೇನು?
ಮುಟ್ಟುವ ತೆರನನರಿಯದನ್ನಕ್ಕ'

ಬಸವಣ್ಣನವರ ಈ ಮಾತು ಕಾವ್ಯದ ಸಂವಹನ ಗುಣಕ್ಕೆ ಕೊಟ್ಟಿರುವ ಮಹತ್ವದಿಂದಾಗಿ ಇಂದಿಗೂ ಪ್ರಸ್ತುತವಾಗಿದೆ.

ಹರಿಹರ, ರಾಘವಾಂಕ, ಕುಮಾರವ್ಯಾಸ, ಚಾಮರಸ, ಲಕ್ಷ್ಮೀಶ, ರತ್ನಾಕರವರ್ಣಿ ಇವರು ಒಬ್ಬೊಬ್ಬರೂ ಒಂದು ದೇಸಿ ಪರಂಪರೆಯ ಶಿಖರಗಳಾಗಿ ಕಾವ್ಯದ ಹೊನಲನ್ನು ಜನತೆಯ ಸಮೀಪಕ್ಕೆ ಒಯ್ದರು. ಸಂಸ್ಕೃತಿಯ ದೃಷ್ಟಿಯಿಂದ ಗಮನಿಸತಕ್ಕ ಮಾತೆಂದರೆ, ಅವುಗಳಲ್ಲಿ ಅನೇಕ ಕಾವ್ಯಗಳು ಜನಜೀವನದಲ್ಲಿ ಹಾಸುಹೊಕ್ಕಾಗಿ ಸೇರಿರುವುದು. ಕಾವ್ಯಗಳನ್ನು ಓದುವುದು, ಸಾರ್ವತ್ರಿಕವಾಗಿ ಕುಳಿತು ಕೇಳುವುದು - ಈ ಪದ್ಧತಿ ಬೆಳೆದು ಬಂದಿತು. ಹೀಗೆ ಕಾವ್ಯವಾಚನ ಅಥವಾ 'ಗಮಕ' ಎಂಬ ವಿಶಿಷ್ಟ ಕಲೆಯೇ ರೂಪುಗೊಂಡದ್ದು ಗಮನಾರ್ಹವಾಗಿದೆ.

ಇದೇ ರೀತಿ ಭಾಗವತ ಸಂಪ್ರದಾಯದ ಉಚ್ಛ್ರಾಯ ಕಾಲದಲ್ಲಿ ಹುಟ್ಟಿಕೊಂಡ ಕೀರ್ತನೆ ದಾಸವಾಙ್ಮಯವನ್ನು ಸಮೃದ್ಧಗೊಳಿಸಿ ಪುರಂದರ-ಕನಕದಾಸರಲ್ಲಿ ತನ್ನ ಉನ್ನತಿಯನ್ನು ಪಡೆಯಿತು. ಸಾಹಿತ್ಯಕ್ಕಿಂತ ಸಂಗೀತಕ್ಕೆ ಇದರ ಕೊಡುಗೆ ವಿಶೇಷವಾದದ್ದು. ಅತ್ಯಂತ ಜನಪ್ರಿಯ ಕಾವ್ಯರೂಪಗಳಾದ ತ್ರಿಪದಿ, ಸಾಂಗತ್ಯಗಳು ಸರ್ವಜ್ಞ ಹಾಗೂ ರತ್ನಾಕರವರ್ಣಿ ಇವರ ಕಾವ್ಯದಲ್ಲಿ ತಮ್ಮ ಸಿದ್ಧಿಯನ್ನು ಕಂಡುಕೊಂಡವು. ಹೊಸಗನ್ನಡದ ಆಧುನಿಕ ಛಂದಸ್ಸಿಗೂ ಈ ದೇಸೀ ಕಾವ್ಯಪರಂಪರೆ ತನ್ನ ಸತ್ವವನ್ನು ಧಾರೆಯೆರೆದು ಇಂದಿಗೂ ತನ್ನ ಜೀವಧ್ವನಿಯನ್ನು ಉಳಿಸಿಕೊಂಡಿದೆ.

ಗದ್ಯ ಮತ್ತು ಭಾವಗೀತೆ ಹೊಸಗನ್ನಡ ಯುಗದ ಮುಖ್ಯ ರೂಪಗಳಾಗಿ, ಹೊಸ ಸಾಹಿತ್ಯ ಪ್ರಕಾರಗಳಲ್ಲಿ ಕಾಣಿಸಿಕೊಂಡು, ವಿಷಯದ ಆಯ್ಕೆಯಲ್ಲಿ, ವ್ಯಕ್ತಿತ್ವ ನಿರೂಪಣೆಯಲ್ಲಿ ಹೆಚ್ಚು ಸ್ವತಂತ್ರವಾಗಿ ಮತ್ತು ಸಾಮಾಜಿಕವಾಗಿ ಬೆಳೆಯುತ್ತಲಿದ್ದ ನವೀನ ಜೀವನಶಕ್ತಿಯ ಕೇಂದ್ರವಾಗುತ್ತ ಬಂದಿವೆ. ಆಧುನಿಕ ಸಾಹಿತ್ಯ ಪ್ರಾಚೀನ ಸತ್ವವನ್ನು ಮೈಗೂಡಿಸಿಕೊಂಡು ಸಾವಿರಾರು ವರ್ಷಗಳ ಸಂಸ್ಕಾರದಿಂದ ಸಂಪನ್ನವಾಗಿದ್ದ ಭಾಷೆಯನ್ನು ಹೊಸ ಬಗೆಯ ಅಭಿವ್ಯಕ್ತಿಗೆ ಸಮರ್ಥವಾಗಿ ಬಳಸಿಕೊಂಡಿತು. ಇಂದಿಗೂ ಕನ್ನಡ ಸಾಹಿತ್ಯದ ದಿಗ್ಗಜಗಳೆನಿಸಿಕೊಂಡವರು ನವೋದಯ ಕಾಲದ ಹಿರಿಯರು ಹಾಗೂ ಆ ಕಾಲದ ಸ್ಫೂರ್ತಿಯಿಂದ ಸ್ವತಂತ್ರರಾಗಿ ಬೆಳೆದ ಎರಡನೆಯ ತಲೆಮಾರಿನ ಲೇಖಕರು. ಅವರ ಮಹತ್ವದ ಕೃತಿಗಳನ್ನು ಪರಿಶೀಲಿಸಿದಾಗ ಸಾಹಿತ್ಯ ನಿರ್ಮಿತಿಯ ಕಾವು ಹಾಗೂ ಹೊಸತನದ ಪ್ರಜ್ಞೆ ಆಗ ಎಷ್ಟು ಗಾಢವೂ ತೀವ್ರವೂ ಆಗಿತ್ತೆಂಬುದನ್ನು ಈಗ ಕಲ್ಪಿಸಿಕೊಳ್ಳಬಹುದು.

ಹೊಸಗನ್ನಡ ಸಾಹಿತ್ಯ ಪಡೆದ ಬಹು ದೊಡ್ಡ ಪ್ರತಿಭಾನ್ವಿತರಲ್ಲಿ ಒಬ್ಬರಾದ ಬೇಂದ್ರೆಯವರು ದೇಸಿ ಪರಂಪರೆಯನ್ನು ಮೈಗೂಡಿಸಿಕೊಂಡು ಆಧುನಿಕ ಕಾವ್ಯ ರಚನೆಯಲ್ಲಿ ಹುಮ್ಮಸ್ಸಿನಿಂದ

ತೊಡಗಿ ಅದನ್ನು ಎಲ್ಲ ದೃಷ್ಟಿಯಿಂದಲೂ ಶ್ರೀಮಂತಗೊಳಿಸಿದವರು. ನವೀನವಾದ ಶ್ರೇಷ್ಠ ತರಗತಿಯ ಕಾವ್ಯಾಭಿವ್ಯಕ್ತಿ, ಚೈತನ್ಯಪೂರ್ಣವಾದ ಕಲ್ಪನಾಶಕ್ತಿ ಹಾಗೂ ತಾತ್ವಿಕ ಮನೋಧರ್ಮದ ಸಂಕೀರ್ಣತೆಯಿಂದ ಉನ್ನತ ಮಟ್ಟದ ಕಾವ್ಯ ನೀಡಿದ ಬೇಂದ್ರೆ ನಿಸರ್ಗವನ್ನೂ, ಜನವನ್ನೂ ಸಮನಾಗಿಯೇ ಪ್ರೀತಿಸಿದವರು. ಈ ವರಕವಿಯ ಶತಮಾನೋತ್ಸವವನ್ನು ನಾಡು ತುಂಬ ಉತ್ಸಾಹ ಹಾಗೂ ಪ್ರೀತಿ, ಗೌರವಗಳಿಂದ ಕಳೆದ ವರ್ಷದ ಉದ್ದಕ್ಕೂ ಆಚರಿಸಿತು. ನಾಡಿನ ಒಳಗೂ ಹೊರಗೂ ನಾನೂರಕ್ಕೂ ಹೆಚ್ಚು ಸಂಘ ಸಂಸ್ಥೆಗಳು ಇದರಲ್ಲಿ ಪಾಲ್ಗೊಂಡಿದ್ದು ಕವಿಯ ಶ್ರೇಷ್ಠತೆಗೂ ಜನಪ್ರಿಯತೆಗೂ ಸಾಕ್ಷಿಯಾಗಿದೆ.

ಶತಮಾನೋತ್ಸವದ ಸಂದರ್ಭದಲ್ಲಿ ಕೇವಲ ಗುಣಗಾನವಾಗದಂತೆ, ಅವರ ಕಾವ್ಯದ ಸಂಮೋಹನ ಶಕ್ತಿಯಿಂದ ದೂರ ನಿಂತು, ಅದನ್ನು ತೂಗಿ ಬೆಲೆ ಕಟ್ಟುವ ಕಾರ್ಯ ಕೆಲಮಟ್ಟಿಗಾದರೂ ಅಲ್ಲಲ್ಲಿ ನಡೆದದ್ದು ಸಂತೋಷದ ಸಂಗತಿ. 'ಭುವನದ ಭಾಗ್ಯ', 'ಬಾರೋ ಸಾಧನಕೇರಿಗೆ'ಯಂಥ ಕೃತಿಗಳಿಗೆ ಸಂವಾದಿಯಾಗಿ 'ಹಾಡೆ ಹಾದಿಯ ತೋರಿತು' (ಎಚ್.ಎಸ್. ರಾಘವೇಂದ್ರರಾವ್) ಮಾದರಿಯ ಹೊಸ ಬಗೆಯ ಚಿಂತನೆ ಹಾಗೂ ವಿಶ್ಲೇಷಣೆಗೆ ಒತ್ತು ಕೊಟ್ಟ ಕೃತಿಗಳನ್ನು ಹೊಸ ಪೀಳಿಗೆಯವರಿಂದಲೂ ನಿರೀಕ್ಷಿಸಬಹುದಾಗಿದೆ.

ಧಾರವಾಡದಲ್ಲಿಯ ಬೇಂದ್ರೆ ಸ್ಮಾರಕ ಶತಮಾನೋತ್ಸವ ಭವನದ ನಿರ್ಮಾಣ ಕಾರ್ಯ ಬೇಗ ಮುಗಿಯುವಂತೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ತೀವ್ರ ಲಕ್ಷ್ಯ ವಹಿಸಬೇಕಾಗಿದೆ. ಸಾಧನಕೇರಿಯಲ್ಲಿಯ ಕೆರೆಯ ಸುತ್ತಮುತ್ತಲಿನ ಜಾಗವನ್ನು ಸುಂದರ ಉದ್ಯಾನವನ್ನಾಗಿ ಮಾರ್ಪಡಿಸಿ, 'ನಂದನದ ತುಣುಕೊಂದು ಬಿದ್ದಿದೆ, ನೋಟ ಸೇರದು ಯಾರಿಗೆ?' ಎಂದು ಕೇಳಿದ ಕವಿಯ ಮಾತು ಇಂದಿಗೂ ಸಾರ್ಥಕವಾಗುವಂತೆ ನೋಡಿಕೊಳ್ಳಬೇಕು. ಬೇಂದ್ರೆ ಸ್ಮಾರಕ ಪ್ರತಿಷ್ಠಾನ ಎಲ್ಲಕ್ಕೂ ಮುಖ್ಯವಾಗಿ ಕೈಗೊಳ್ಳಬೇಕಾದ ಅಗತ್ಯದ ಕೆಲಸವೆಂದರೆ ಬೇಂದ್ರೆ ಸಮಗ್ರ ಕಾವ್ಯ ಸಂಪುಟಗಳನ್ನು ಬೇಗ ಪ್ರಕಟಿಸಿ, ಆದಷ್ಟು ಸುಲಭ ಬೆಲೆಗೆ ಓದುಗರಿಗೆ ಒದಗಿಸುವುದು.

ಕನ್ನಡ ಸಾಹಿತ್ಯದ ವಿವಿಧ ಕ್ಷೇತ್ರಗಳಿಗೆ ಮಹತ್ವದ ಕೊಡುಗೆ ಸಲ್ಲಿಸಿರುವ ಮೂವರು ಮಹನೀಯರ ಶತಮಾನೋತ್ಸವನ್ನು ಆಚರಿಸುವ ಅವಕಾಶ ಈ ವರ್ಷ ಕನ್ನಡಿಗರಿಗೆ ಒದಗಿದೆ. ಕನ್ನಡ ಮತ್ತು ಮರಾಠಿ ಸಂಸ್ಕೃತಿಗಳ ಹಿಂದಿನ ಅವಿಭಕ್ತ ತತ್ತ್ವವನ್ನು ಕಂಡುಹಿಡಿದ ಹಾಗೂ ಪ್ರಜ್ಞಾಪ್ರಕಾಶ ಪಾತಳಿಯ ನೆಲೆಯಲ್ಲಿ ಕಂನಾಡ ಸಂಸ್ಕೃತಿ, ಭಾರತೀಯ ಸಂಸ್ಕೃತಿ ಮತ್ತು ಮಾನವ ಸಂಸ್ಕೃತಿಗಳ ಬೆಳವಣಿಗೆಯನ್ನು ವಿವರಿಸಿದ ಶಂಬಾ ಅವರು ಪ್ರಖರವಾದ ಸಂಶೋಧನ ಪ್ರಯತ್ನದಿಂದ ಕನ್ನಡ ಚಿಂತನ ಲೋಕಕ್ಕೆ ಹೊಸ ಬೆಳಕು ನೀಡಿದವರು. ಎರಡನೆಯದಾಗಿ, 'ವಿಶ್ವ ಕರ್ನಾಟಕ'ದ ಮೂಲಕ ಪ್ರಭುತ್ವದ ವಿರುದ್ಧ ತತ್ವಬದ್ಧವಾದ ಪ್ರತಿರೋಧವೊಡ್ಡಿದ, ಇತಿಹಾಸ ಸಂಶೋಧನೆಗಳಲ್ಲಿ ವಿಶೇಷ ಆಸಕ್ತಿ ವಹಿಸಿ ಗಣನೀಯ ಕಾರ್ಯಗೈದ ತಿ.ತಾ. ಶರ್ಮರು ಕರ್ನಾಟಕದ ಸಾಂಸ್ಕೃತಿಕ ಹಾಗೂ ಸಾರ್ವಜನಿಕ ಜೀವನದಲ್ಲಿ ಮಹತ್ವದ ಪಾತ್ರ ವಹಿಸಿದವರು. ಮೂರನೆಯದಾಗಿ, ಬರೆದಷ್ಟು ಕಾದಂಬರಿಗಳನ್ನು ಒಂದೊಂದು ಮಾದರಿಯಾಗಿ ನಿಲ್ಲಿಸಿದ,

ಸಾಹಿತ್ಯದ ಸತ್ವಕ್ಕೆ ಎರವಾಗದಂತೆ ಬೌದ್ಧಿಕತೆಯನ್ನು ಬಳಸಿ ಪೌರಾಣಿಕ ಕಾದಂಬರಿಗಳ ಮೂಲಕ ತಮ್ಮ ಕಲ್ಪನಾ ಸೃಷ್ಟಿಯ ಮಹತಿಯನ್ನು ಸಾಧಿಸಿದ ದೇವುಡು ಅವರು.

ಈ ಎಲ್ಲ ಸಾಹಿತ್ಯ ಶ್ರೇಷ್ಠರ ಜನ್ಮ ಶತಮಾನೋತ್ಸವವನ್ನು ಸಾರ್ಥಕಗೊಳಿಸುವಂತೆ ಆಚರಿಸುವಲ್ಲಿ ಕನ್ನಡ ಸಾಹಿತ್ಯ ಪರಿಷತ್ತನ್ನು ಮೊದಲುಗೊಂಡು ಇತರ ಸಂಘ ಸಂಸ್ಥೆಗಳು ಹಾಗೂ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಪ್ರಮುಖ ಪಾತ್ರವಹಿಸಿ ಈ ಲೇಖಕರ ಅಪ್ರಕಟಿತ ಕೃತಿಗಳ ಹಾಗೂ ಸಮಗ್ರ ಗ್ರಂಥಗಳ ಪ್ರಕಟಣೆಯ ಮೂಲಕ ಅದನ್ನು ಸಾರ್ಥಕಗೊಳಿಸಬೇಕು.

ಈ ಸಂದರ್ಭದಲ್ಲಿ ಎರಡು ವರ್ಷಗಳ ಹಿಂದೆ ಕುಪ್ಪಳ್ಳಿಯಲ್ಲಿ ನಡೆದ 'ಕುವೆಂಪು : ಸಾಂಸ್ಕೃತಿಕ ನೆನಪು' ಕಾರ್ಯಕ್ರಮದ ವೈಶಿಷ್ಟ್ಯ ನೆನಪಿಗೆ ಬರುತ್ತದೆ. ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿಯೂ ಅಪೂರ್ವ ಸಾಧನೆಗೈದು ಸಿದ್ಧಿ ಪಡೆದ ಕುವೆಂಪು 'ಭಾರತೀಯ ಸಾಹಿತ್ಯ, ಕನ್ನಡದ ಸಂದರ್ಭದಲ್ಲಿ ಪಡೆದುಕೊಂಡ ಉತ್ಕರ್ಷದ ಪ್ರತೀಕ' ಎನ್ನಬಹುದು. ಮೂಢನಂಬಿಕೆ, ಜಾತೀಯತೆ ಹಾಗೂ ಪುರೋಹಿತಶಾಹಿ ಪ್ರವೃತ್ತಿಗಳ ವಿರುದ್ಧ ಸಮರ ಸಾರಿ, ವಿಚಾರ ಕ್ರಾಂತಿಯ ಪ್ರವರ್ತಕರಾಗಿದ್ದ ಅವರ ಬದುಕು-ಬರಹಗಳ ಬಗ್ಗೆ ಮೆಲುಕು ಹಾಕುವ, ಒರೆಗೆ ಹಚ್ಚುವ ಮತ್ತು ಸಮಕಾಲೀನ ಸಂದರ್ಭದಲ್ಲಿ ಮತ್ತೆ ಚರ್ಚೆಗೆ ಗುರಿಪಡಿಸಿದ ಒಂದು ಅರ್ಥಪೂರ್ಣ ಕಾರ್ಯಕ್ರಮವಾಗಿ ಇದು ನನ್ನ ಹಾಗೂ ಕೆಲವು ಲೇಖಕ ಮಿತ್ರರ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿದಿದೆ. ನಮ್ಮ ಎಲ್ಲ ಹಿರಿಯ ಮಹಾಚೇತನಗಳನ್ನು ಕುರಿತು ಇಂಥ ಕಾರ್ಯಕ್ರಮಗಳು ಅವರ ಜನ್ಮ ಸ್ಥಳಗಳಲ್ಲಿಯೇ ವ್ಯವಸ್ಥಿತವಾಗಿ ನಡೆಯುವಂತಾದರೆ ಆ ವಾತಾವರಣದಲ್ಲಿ ಅವರ ವಿಚಾರಧಾರೆಗೆ ಆತ್ಮೀಯವಾದ ಒಂದು ಹೊಸ ಕಳೆ ಬರುವುದೆಂದು ನನ್ನ ನಂಬಿಕೆ.

ಕವಿಯ ಕುಪ್ಪಳ್ಳಿಯ ಮನೆಯನ್ನು ಸ್ಮಾರಕವಾಗಿಸಿ, ಮಲೆನಾಡಿನ ಪರಂಪರೆಯ ಸಾಂಸ್ಕೃತಿಕ ಕೊಡುಗೆ ಎಂಬಂತೆ ಅದರ ನವೀಕರಣ ಕಾರ್ಯವನ್ನು ಕೈಗೆತ್ತಿಕೊಂಡಿರುವ ರಾಷ್ಟ್ರಕವಿ ಕುವೆಂಪು ಪ್ರತಿಷ್ಠಾನ ಕನ್ನಡಿಗರ ಅಭಿನಂದನೆಗೆ ಪಾತ್ರವಾಗಿದೆ. ಪ್ರತಿಷ್ಠಾನದ ಯೋಜನೆಯ ಎರಡನೆಯ ಹಂತವೂ ಬೇಗ ಕಾರ್ಯರೂಪದಲ್ಲಿ ಬರಲೆಂದು ಹಾರೈಸುತ್ತೇನೆ.

೪

ಇತ್ತೀಚಿನ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಯಾವುದೇ ಹೊಸ ಚಳುವಳಿಗಳಾಗಲಿ ಇದ್ದವುಗಳು ಪೊರೆಗಳಚಿ ಹೊಸತಾಗುವ ಲಕ್ಷಣಗಳಾಗಲಿ ಕಂಡು ಬರದಿದ್ದರೂ ಎಲ್ಲ ತಲೆಮಾರಿನ ಲೇಖಕರೂ ತಮ್ಮ ತಮ್ಮ ಶಕ್ತಿಗನುಗುಣವಾಗಿ ಸಾಹಿತ್ಯ ನಿರ್ಮಿತಿಯಲ್ಲಿ ತೊಡಗಿರುವುದು ಕಂಡು ಬರುತ್ತಿವೆ. 'The oldest and the youngest are at work with the strongest' ಎಂಬ ವರ್ಡ್ಸ್‌ವರ್ಥ್‌ನ ಮಾತು ನಮ್ಮ ಇಂದಿನ ಸಾಹಿತ್ಯ ಪ್ರವೃತ್ತಿಗೂ ಅನ್ವಯವಾಗುವಂತಿದೆ.

ಕಾವ್ಯಕ್ಷೇತ್ರ ಎಂದಿನಂತೆ ಹುಲುಸಾಗಿಯೇ ಕಂಗೊಳಿಸುತ್ತಿದೆ. ಕಾವ್ಯ ಪ್ರೇಮಿಗಳಾದ ಇವತ್ತಿನ ವಾಚಕರೂ ಎಂದಿಗಿಂತಲೂ ಹೆಚ್ಚಿನ ಸಂಸ್ಕಾರವನ್ನು ಪಡೆದಿದ್ದಾರೆ ಎಂದು ನನ್ನ ಅನಿಸಿಕೆ. ಯಾವುದು ನಿಜವಾದ ಕಾವ್ಯ ಎಂಬುದನ್ನು ಅವರು ತಕ್ಕಮಟ್ಟಿಗಾದರೂ ಗುರುತಿಸಬಲ್ಲರು.

ಕವಿಯ ಆತ್ಮಚೈತನ್ಯದ ಹರಳಿನಂತಿರುವ ಕಾವ್ಯ, ಬೆಳಕಿನಲ್ಲಿ ನಿಜವನ್ನು ಕಾಣುವ ಹಂಬಲವುಳ್ಳದ್ದು. ಕಾಲ, ದೇಶ, ಪರಿಸರದ ಪ್ರಭಾವದಿಂದ ಯಾವ ಕಾವ್ಯವೂ ಮುಕ್ತವಾಗಿರುವುದು ಸಾಧ್ಯವಿಲ್ಲ. ಕವಿ ಮತ್ತು ಸಮಾಜ ಪರಸ್ಪರ ಪ್ರಭಾವಕ್ಕೆ ಒಳಗಾಗಿಯೂ ಅವರವರ ಚಿತ್ತವೃತ್ತಿಗಳನ್ನವಲಂಬಿಸಿ ಒಂದೇ ಪರಿಸರ ವಿಭಿನ್ನವೂ ವಿಶಿಷ್ಟವೂ ಆದ ಅಭಿವ್ಯಕ್ತಿಯನ್ನು ಪ್ರೇರಿಸಬಹುದಾಗಿದೆ. ಸ್ವಪ್ರಜ್ಞೆ ಹಾಗೂ ಸಮಾಜ ಪ್ರಜ್ಞೆ ಎರಡೂ ಗಾಢವಾಗಿ ಬೆಸೆದುಕೊಂಡಾಗ ಬದಲಾವಣೆಗೆ ಬೇಕಾದ ಅಭಿವ್ಯಕ್ತಿಯ ಸ್ವರೂಪ ನಿರ್ಧರಿತವಾಗುತ್ತದೆ. ಯಾವುದೇ ಮೌಲ್ಯ ಅಥವಾ ಆದರ್ಶ ನಮ್ಮ ಬದುಕಿನ ಸಂದರ್ಭಕ್ಕೆ ಅನ್ವಯಗೊಂಡಾಗ ನಮ್ಮ ಕಾಲದ ಸಾಂಸ್ಕೃತಿಕ ಘರ್ಷಣೆಯಿಂದ ಕವಿಯ ತೀವ್ರ ಸಂವೇದನೆಗೆ ಒಳಗಾದ ಅಂಥ ಕಾವ್ಯಾನುಭವಕ್ಕೆ ಹೆಚ್ಚಿನ ಮಹತ್ವವುಂಟಾಗುತ್ತದೆ. ಸಮಕಾಲೀನ ಜೀವನದ ಅನುಭವ, ಆಲೋಚನೆ, ಆದರ್ಶ, ಆಹ್ವಾನಗಳು ನಮ್ಮ ಇಂದಿನ ಕಾವ್ಯದ ಸಾಮಗ್ರಿಯಾಗಿ ಒದಗುತ್ತಿರುವ ಸಂದರ್ಭದಲ್ಲಿ ಜನರನ್ನು ಮೆಚ್ಚಿಸುವ ಬಗ್ಗೆ ಹೆಚ್ಚಿನ ಆತುರವನ್ನು ಪ್ರಕಟಪಡಿಸುವುದಕ್ಕಿಂತ ತನ್ನ ಅನುಭವದ ಅಂತಸ್ಸಾಕ್ಷಿಯನ್ನು ಮೆಚ್ಚಿಸುವುದೇ ನಿಜವಾದ ಕಾವ್ಯ ಸಾಧನೆಯೆಂಬುದನ್ನು ನಾವು ಮರೆಯಬಾರದು.

ಕೆಲವು ಕಾವ್ಯ ಪ್ರಯೋಗ ಪರಿಣತಮತಿಗಳನ್ನು ಹೊರತುಪಡಿಸಿದರೆ ಇಂದು ಕಾವ್ಯಕ್ಷೇತ್ರಕ್ಕೆ ಹೊಸದಾಗಿ ನುಗ್ಗುತ್ತಿರುವವರ ರಭಸವೇ ಹೆಚ್ಚಾಗಿದೆ. ಅವುಗಳಲ್ಲಿ ಓದಿಸಿಕೊಳ್ಳುವಂಥ ಅಥವಾ ಮತ್ತೆ ಓದಬೇಕೆನಿಸುವಂಥ ರಚನೆಗಳು ತೀರ ವಿರಳ. ಕನ್ನಡ ಕಾವ್ಯಪರಂಪರೆಗೆ ಅಪರಿಚಿತರಾಗಿಯೇ ಉಳಿದಿರುವವರಿಂದ ಯಾವ ಒಳ್ಳೆಯ ಬರವಣಿಗೆಯನ್ನು ಅಪೇಕ್ಷಿಸುವುದು ಸಾಧ್ಯ? ಕಾವ್ಯಕ್ಕೇ ವಿಶಿಷ್ಟವಾದ ಒಂದು ಲಯವಿದೆ, ನಾದ ಗುಣವಿದೆ ಎಂಬುದನ್ನು ಕೂಡ ಇವರು ಅರಿಯದಿರುವುದು ಆಶ್ಚರ್ಯವನ್ನುಂಟುಮಾಡುತ್ತದೆ.

ಕವಿತೆ ತುಂಬ ಗಂಭೀರವಾದ ಹಾಗೂ ಜವಾಬ್ದಾರಿಯಿಂದ ನಿರ್ಮಿತವಾದ ಒಂದು ಕಲೆ ಎಂಬುದನ್ನು ನಮ್ಮ ಯುವ ಕವಿಗಳು ತಿಳಿದುಕೊಳ್ಳಬೇಕು. ಕಾವ್ಯಕ್ಷೇತ್ರದಲ್ಲಿ ಈಗಾಗಲೇ ನಡೆದಿರುವ ಪ್ರಯೋಗಗಳನ್ನು ಲಕ್ಷ್ಯಗೊಟ್ಟು ಗಮನಿಸಬೇಕು. ಬರೆದದ್ದನ್ನು ಹಲವಾರು ಸಲ ಪರಿಶೀಲಿಸಿ, ಅರೆಕೊರೆಗಳನ್ನು ಸರಿಪಡಿಸಿಕೊಳ್ಳುವ ಸಂಯಮವನ್ನು ಬೆಳೆಸಿಕೊಳ್ಳಬೇಕು. ಪರಿಷತ್ತು ಹಾಗೂ ಅಕಾಡೆಮಿಗಳು ಅವರ ಆಸೆಗೆ ಅನುಗುಣವಾದ ತರಬೇತಿ ಹಾಗೂ ಪೂರ್ವ ಸಿದ್ಧತೆಗಳನ್ನು ಒದಗಿಸುವ ಸನ್ನಿವೇಶಗಳನ್ನು ಸೃಷ್ಟಿಸಬೇಕು. ತಾಲೂಕು ಮಟ್ಟದಲ್ಲಿ ಕಾವ್ಯ ಕಮ್ಮಟಗಳನ್ನು ನಡೆಸಿದರೆ ಕೆಲಮಟ್ಟಿಗಾದರೂ ಅವರಿಗೆ ಪ್ರಯೋಜನವಾಗಬಹುದು.

ಚುಟುಕು ಅಥವಾ ಹನಿಗವನಗಳಿಗೆ ಈಗ ಸುಗ್ಗಿಯ ಕಾಲವಿದ್ದಂತೆ ತೋರುತ್ತದೆ. ಕನ್ನಡದಲ್ಲಿಯೂ ಇಂಥ ಮುಕ್ತಕಗಳಿಗೆ ಒಂದು ಪರಂಪರೆಯಿರುವುದನ್ನು ಅಲ್ಲಗಳೆಯುವಂತಿಲ್ಲ. ಆಧುನಿಕರಲ್ಲಿ ದಿನಕರ ದೇಸಾಯಿಯವರಿಂದ ಹಿಡಿದು ಎಚ್. ಡುಂಡೀರಾಜರವರೆಗೆ ಅನೇಕರು ಈ ಪ್ರಕಾರವನ್ನು ದುಡಿಸಿಕೊಳ್ಳಲು ಪ್ರಯತ್ನಿಸಿದ್ದಾರೆ. ಆದರೆ ಯಶಸ್ಸು ಗಳಿಸಿದವರು ಬೆರಳೆಣಿಕೆಯಷ್ಟು ಮಾತ್ರ. ಇದರಲ್ಲೂ ಈಗ ಅನುಕರಣೆ ವಿಪರೀತವಾಗಿ, ಸತ್ತ್ವವಿಲ್ಲದ ಕೃತಕ

ರಚನೆಗಳೇ ಹೆಚ್ಚಾಗಿ ಕಂಡು ಬರುತ್ತಿವೆ. ಈ ರಾಶಿಯನ್ನು ಗಾಳಿಗೆ ತೂರಿದಾಗ ಒಂದು ಬೊಗಸೆಯಷ್ಟಾದರೂ ಗಟ್ಟಿ ಕಾಳುಗಳು ಉಳಿದರೆ ಓದುಗರ ಪುಣ್ಯವೆನ್ನಬೇಕು. ವಿಮರ್ಶಕರಂತೂ ಇವುಗಳ ಕಡೆಗೆ ಕಣ್ಣು ಹೊರಳಿಸಿದಂತೆಯೇ ತೋರುವುದಿಲ್ಲ.

ಈ ಎಲ್ಲ ಪ್ರಕಾರಗಳಲ್ಲಿಯೂ ಅಪವಾದಕ್ಕೆಂಬಂತೆ ಭರವಸೆ ಹುಟ್ಟಿಸುವಂಥವರು ಹಾಗೂ ಗಂಭೀರವಾಗಿ ತಮ್ಮ ಕಾವ್ಯ ರಚನೆಯನ್ನು ಮುಂದುವರಿಸಿಕೊಂಡು ಬರುತ್ತಿರುವವರು ಇದ್ದೇ ಇದ್ದಾರೆ. ನಮ್ಮ ಕಾಲದ ಮುಖ್ಯ ಅನುಭವಗಳನ್ನು ಹೊಸದೊಂದು ದೃಷ್ಟಿಕೋನದಲ್ಲಿ, ಹೊಸ ನುಡಿಗಟ್ಟಿನಲ್ಲಿ, ಪರಂಪರೆಯ ಅರಿವಿನೊಂದಿಗೆ ತಾವೇ ಕಂಡುಕೊಂಡ ವಿಶಿಷ್ಟ ಲಯಗಳಲ್ಲಿ ಅಭಿವ್ಯಕ್ತಿಗೊಳಿಸುತ್ತಿರುವ ಕವಿಗಳೂ, ಕವಯತ್ರಿಯರೂ ಕನ್ನಡ ಕಾವ್ಯದ ಆಯಾಮಗಳನ್ನು ವಿಸ್ತರಿಸುವ ಕಾರ್ಯದಲ್ಲಿ ತೊಡಗಿರುವುದು ನಿಜಕ್ಕೂ ಚೇತೋಹಾರಿಯಾಗಿದೆ. ವಿವಿಧ ಪಂಥಗಳಿಗೆ ಹೊರತಾಗಿಯೂ ಕವಿತೆಯ ಮಾಧ್ಯಮಕ್ಕೆ ನಿಷ್ಠೆ ಉಳಿಸಿಕೊಂಡು ಬಂದವರೇ ಒಂದು ದೃಷ್ಟಿಯಿಂದ ಇಂದು-ಹಿರಿಯರಾಗಲಿ, ಕಿರಿಯರಾಗಲಿ-ಉತ್ತಮ ಕೊಡುಗೆ ಸಲ್ಲಿಸುತ್ತಿದಾರೆ ಎನಿಸುತ್ತದೆ. ಮಾನವ ಜೀವನ ಕೇಂದ್ರವಾಗುಳ್ಳ ಕಾವ್ಯಕ್ಕೆ ಯಾವುದೂ ಹೊರತಾಗಿಲ್ಲದಿರುವುದನ್ನು ಮನಗಂಡಿರುವ ಇವತ್ತಿನ ಕನ್ನಡ ಕಾವ್ಯ ಯಾವ ಪಂಥಕ್ಕೆ ಸೇರಿದ್ದು ಎನ್ನುವ ಪ್ರಶ್ನೆಯೇ ಅಪ್ರಸ್ತುತವೆನಿಸಬಹುದು. ಹೊರಗಿನ ಸದ್ದುಗದ್ದಲಗಳ ನಡುವೆಯೂ ಒಳಗಿನ ದನಿಗೆ ಕಿವಿಗೊಟ್ಟು, ಬದುಕಿನ ಸೂಕ್ಷ್ಮಾನುಭವಗಳಿಗೆ ಸೂಕ್ತ ಅಭಿವ್ಯಕ್ತಿಯನ್ನು ನೀಡುತ್ತ ತನ್ನ ಜನಾಂಗವನ್ನು ತಲ್ಲಣಗೊಳಿಸುತ್ತಿರುವ ಭಯಾನಕ ವಿದ್ಯಮಾನಗಳನ್ನು ಅರ್ಥ ಮಾಡಿಕೊಳ್ಳುವ ರೀತಿಯಲ್ಲಿ ಹೊಸ ಹುಟ್ಟಿನ ನೋವನ್ನು ಅದು ಅನುಭವಿಸುತ್ತಿರುವಂತಿದೆ.

ಹೊಸ ಕಾವ್ಯಲೋಕವೊಂದನ್ನು ಸೃಷ್ಟಿಸಬಲ್ಲ, ವಿಭಿನ್ನ ಲಯಗಾರಿಕೆಯ, ಪೌರಾಣಿಕ ವಸ್ತುಗಳಲ್ಲಿಯೂ ಸಮಕಾಲೀನ ಅರಿವನ್ನು ತುಂಬಿಕೊಡುವ 'ಸೂರ್ಯ ಜಲ' (ಎಚ್.ಎಸ್. ಶಿವಪ್ರಕಾಶ), ಲೌಕಿಕ ಹಾಗೂ ಅಲೌಕಿಕ ಜಗತ್ತುಗಳನ್ನು ಒಟ್ಟಿಗೆ ಐಕ್ಯಗೊಳಿಸುವ, ಕನ್ನಡ ಕಾವ್ಯ ಪರಂಪರೆಗಳ ವಿನೂತನ ಅಭಿವ್ಯಕ್ತಿಯಾಗಿ ತೋರುವ ವಿಶೇಷ ಬಗೆಯ ನಿರೂಪಣಾ ಕೌಶಲದಿಂದ ಕೂಡಿದ ಕಥನರೂಪೀ ಕೃತಿ 'ಚಕೋರಿ' (ಚಂದ್ರಶೇಖರ ಕಂಬಾರ) ಈಚಿನ ಮಹತ್ವದ ರಚನೆಗಳಾಗಿ ಹೊರಬಂದಿವೆ. ನಮ್ಮ ಗ್ರಾಮೀಣ ಪ್ರದೇಶಗಳಲ್ಲಿ 'ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತಮತಿಗಳಾದ'ವರು ಈಗಲೂ ಅಲ್ಲಲ್ಲಿ ಕಂಡು ಬರುತ್ತಿದ್ದು ಅಂಥ ಪ್ರತಿಭೆಗಳನ್ನು ಗುರುತಿಸಿ ಪ್ರೋತ್ಸಾಹಿಸುವುದು ಸಾಹಿತ್ಯ ಪರಿಷತ್ತು ಹಾಗೂ ಅಕಾಡೆಮಿಗಳ ತುರ್ತು ಕರ್ತವ್ಯವಾಗಿದೆ. ಸರಿಯಾಗಿ ಓದಲು ಬರೆಯಲೂ ಬಾರದ ಬೀಳಗಿಯ ಸಿದ್ದಪ್ಪ ಬಿದರಿ ಎಂಬ ಅಪ್ಪಟ ಜಾನಪದ ಕವಿ ಸೊಗಸಾಗಿ ಹಾಡು ಕಟ್ಟಬಲ್ಲವನಾಗಿದ್ದು ಆ ಹಾಡುಗಳು ಈಗಾಗಲೆ ಮೂರು ಸಂಗ್ರಹಗಳಲ್ಲಿ ಪ್ರಕಟವಾಗಿರುವುದು ಇದಕ್ಕೊಂದು ಉತ್ತಮ ನಿದರ್ಶನವಾಗಿದೆ.

ಕಾವ್ಯ ಗಾಯನಕ್ಕೆ ಒಂದು ವಿನೂತನವಾದ ರುಚಿಯನ್ನೂ ಸೊಗಸನ್ನೂ ತಂದು ಕೊಟ್ಟು, ಜನತೆಯಲ್ಲಿ ಕಾವ್ಯಾಭಿರುಚಿಯನ್ನು ಬೆಳೆಸುತ್ತಿರುವ ಸುಗಮ ಸಂಗೀತಗಾರರ ಒಂದು ತಂಡವೇ

ಸಾಧನೆಯಲ್ಲಿ ತೊಡಗಿರುವುದು ಗಮನಾರ್ಹವಾಗಿದೆ. ಈ ಗಾಯನ ಪದ್ಧತಿ ಒಂದು ಬೆಳೆಯುವ ಕಲೆ ಎಂಬುದನ್ನು ಇವರು ಅರಿತಿರುವುದು ಅಷ್ಟೇ ಮಹತ್ವದ್ದಾಗಿದೆ. ನಮ್ಮ ಸಾಹಿತ್ಯ ಪರಂಪರೆಯಲ್ಲಿ ನಾವು ಸ್ಪಷ್ಟವಾಗಿ ಗುರುತಿಸಬಹುದಾದ ಮೂರು ಕಾವ್ಯ ಸಂಪ್ರದಾಯಗಳೆಂದರೆ, ೧. ವಿದ್ವತ್ ಸಂಪ್ರದಾಯ (ಚಂಪೂ ಕಾವ್ಯ ಇತ್ಯಾದಿ), ೨. ದೇಸೀ ಸಂಪ್ರದಾಯ (ಕನ್ನಡದಲ್ಲಿ ಹುಟ್ಟಿ ಬೆಳೆದ ದೇಸೀ ಛಂದಸ್ಸಿನ ಕಾವ್ಯಗಳು), ೩. ವಾಕ್ ಸಂಪ್ರದಾಯ (ಜನಪದೀಯವಾದದ್ದು). ಕನ್ನಡಿಗರ ಮನಸ್ಸನ್ನು ಶತಮಾನಗಳಿಂದ ಸೂರೆಗೊಂಡಿರುವ ಕಾವ್ಯ ಸಂಪ್ರದಾಯವೆಂದರೆ ದೇಸೀ ಸಂಪ್ರದಾಯ. ಇದಕ್ಕೆ 'ಹಾಡುಗಬ್ಬ' ಎಂದು ಕರೆದಿರುವುದು ತುಂಬ ಅರ್ಥಪೂರ್ಣವಾಗಿದೆ. ಈ ಪ್ರಕಾರ ಸಾಹಿತ್ಯ ಪರಂಪರೆ ಕನ್ನಡದಲ್ಲಿ ಅತಿ ಪ್ರಾಚೀನವಾಗಿರುವಂತೆಯೇ ಅತ್ಯಾಧುನಿಕವೂ ಆಗಿದೆ.

ಸುಗಮ ಸಂಗೀತ, ಕಾವ್ಯವನ್ನು ಜನಪ್ರಿಯಗೊಳಿಸುವ, ಜನತೆಯಲ್ಲಿ ಕಾವ್ಯಾಭಿರುಚಿಯನ್ನು ಬೆಳೆಸುವ ಒಂದು ಸಾಧನ ಮಾತ್ರ. ಅದೇ ಕಾವ್ಯದ ಸರ್ವಸ್ವವಲ್ಲ ಎನ್ನುವುದನ್ನು ಮರೆಯಬಾರದು. ಶ್ರೇಷ್ಠ ಕಾವ್ಯಕ್ಕೆ ಸಂಗೀತದ ಅವಶ್ಯಕತೆಯಿಲ್ಲ ಎಂಬ ವಾದವೂ ಇದೆ. ಅದರಲ್ಲಿ ಸತ್ಯಾಂಶವಿಲ್ಲದೆಯಿಲ್ಲ. ಆದರೆ ಕಾವ್ಯದ ಶ್ರೇಷ್ಠತೆಯನ್ನು ಎತ್ತಿ ಹಿಡಿಯಲು ಸಂಗೀತ ಪೂರಕವಾಗುವಂತಿದ್ದರೆ ಹಾಗೂ ಅದರಿಂದ ಸಂವಹನ ಶಕ್ತಿ ತೀವ್ರಗೊಳ್ಳುವಂತಿದ್ದರೆ ಅದು ಸ್ವಾಗತಾರ್ಹವೇ. ಸ್ವತಃ ಕವಿಯ ಪ್ರಭಾವಶಾಲಿಯಾದ ವಾಚನಕ್ಕೆ, ಅದರ ಸರ್ವಗ್ರಾಹಿ ಸಮ್ಮೋಹಕತೆಗೆ ಮೊದಲ ಸ್ಥಾನ. ಕಾವ್ಯ ಗಾಯನದ ಧ್ವನಿಸುರುಳಿಗಳಂತೆ ಕವಿಗಳ ಕಾವ್ಯ ವಾಚನದ ಧ್ವನಿಸುರುಳಿಗಳೂ ಪ್ರಚಾರದಲ್ಲಿ ಬರಬೇಕಾದುದು ಅತ್ಯಂತ ಅವಶ್ಯವಾಗಿವೆ.

ಸಮೂಹ ಮಾಧ್ಯಮಗಳ ಪ್ರಾಬಲ್ಯದಲ್ಲೂ ಓದುಗರನ್ನು ತನ್ನ ಕಡೆಗೆ ಸೆಳೆದುಕೊಳ್ಳುವಂಥ ಸತ್ವಪೂರ್ಣವಾದ, ಭಿನ್ನ ಮಾದರಿಯ, ಗಮನಾರ್ಹ ಕೃಷಿಯಿಂದ ಕೂಡಿದ ಇಂದಿನ ನಮ್ಮ ಸಣ್ಣ ಕಥಾ ಕ್ಷೇತ್ರದ ಎದುರು, ತನ್ನ ಪ್ರಕಾರಕ್ಕೆ ಹೊಸ ಆಯಾಮವನ್ನು ನೀಡುವಷ್ಟು ಶಕ್ತವಾಗಿರದ ಕಾದಂಬರಿ ಸಾಹಿತ್ಯ ಕೆಲಮಟ್ಟಿಗೆ ಮಂಕಾಗಿರುವಂತೆ ತೋರುತ್ತಿದೆ. ರಂಗಭೂಮಿ ಕ್ರಿಯಾಶೀಲವಾಗಿದ್ದರೂ ಹೇಳಿಕೊಳ್ಳುವಂಥ ಕೃತಿ ಹೊರ ಬಂದಿಲ್ಲ. ಈಚೆಗೆ 'ಊರ್ವಶಿ' (ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟ) ಎಂಬ ಮಹತ್ವದ ಕಾವ್ಯ ನಾಟಕವೊಂದು ಪ್ರಕಟವಾಗಿದ್ದು ಗೀತರೂಪಕಕ್ಕೆ ಹೊಸ ನಿರೂಪಣಾ ಶೈಲಿಯ ಹೊಳಪನ್ನು ನೀಡಲಾಗಿದೆ. ಉಪೇಕ್ಷೆಗೆ ಒಳಗಾದ ಸಾಹಿತ್ಯ ಪ್ರಕಾರಗಳಲ್ಲಿ ಲಲಿತ ಪ್ರಬಂಧವೂ ಒಂದಾಗಿ ಬಿಟ್ಟಿದ್ದರೂ ಕೆಲವರಾದರೂ (ಉದಾ : ಪ್ರಭುಶಂಕರ, ಕೆ. ಸತ್ಯನಾರಾಯಣ, ವೈದೇಹಿ, ಭುವನೇಶ್ವರಿ ಹೆಗಡೆ) ಅದನ್ನು ಆಕರ್ಷಕವಾಗಿ ಬೆಳೆಸುತ್ತಿರುವುದು ಸಂತೋಷದ ಸಂಗತಿ. ಉಳಿದಂತೆ ಹರಟೆ ಅಥವಾ ನಗೆಬರಹಗಳಿಗೆ ಪತ್ರಿಕೆಗಳು ಸಾಕಷ್ಟು ಅವಕಾಶ ಒದಗಿಸಿಕೊಡುತ್ತಿದ್ದು ಅಲ್ಲಿಯೂ ಕೆಲವು ಹೊಸ ಹೊಸ ಲೇಖಕರು ಮುಂದೆ ಬರುತ್ತಿದ್ದಾರೆ. ಆಗೊಂದು ಈಗೊಂದು ಆತ್ಮಕಥೆ ಕನ್ನಡದಲ್ಲಿ ಕಾಣಿಸಿಕೊಳ್ಳುತ್ತ ಬಂದಿದ್ದರೂ ಅದನ್ನೊಂದು ಪ್ರಕಾರವಾಗಿ ಚರ್ಚಿಸಲು ಆಸ್ಪದವೀಯಬಲ್ಲ ಕೆಲವು ಕೃತಿಗಳು ಈಚೆಗೆ ಬಂದಿರುವುದೊಂದು ವಿಶೇಷ. 'ಹೋರಾಟದ

ಹಾದಿಯಲ್ಲಿ' (ಎಚ್. ನರಸಿಂಹಯ್ಯ), 'ಭಿತ್ತಿ' (ಎಸ್.ಎಲ್. ಭೈರಪ್ಪ), 'ಊರುಕೇರಿ' (ಸಿದ್ಧಲಿಂಗಯ್ಯ) ಈ ಮೂರೂ ವಿಭಿನ್ನ ಮಾದರಿಗಳಾಗಿ ನಮ್ಮ ಗಮನವನ್ನು ಸೆಳೆಯುತ್ತವೆ. ಪರಿಸರಕ್ಕೆ ಆರೋಗ್ಯಕರವಾಗಿ ಸ್ಪಂದಿಸುತ್ತ ಅನುಭವಗಳನ್ನು ದೂರದಿಂದ ಪರಿಭಾವಿಸಿ ಯಾವುದೇ ಬಗೆಯ ಸಮರ್ಥನೆಗೆ ತೊಡಗದೆ ಪರಾನುಕಂಪೆಯೊಂದಿಗೆ ತನ್ನನ್ನು ಕಂಡುಕೊಳ್ಳುವ ರೀತಿ ಈ ದಿಸೆಯಲ್ಲಿ ಹೆಚ್ಚು ಅಪೇಕ್ಷಣೀಯವೆನಿಸುತ್ತದೆ.

ಆಧುನಿಕ ಸಾಹಿತ್ಯದ ವಿವಿಧ ಘಟ್ಟಗಳಲ್ಲಿ ಕಾಣಿಸಿಕೊಂಡ ಸಾಹಿತ್ಯ ವಿಮರ್ಶೆಯಲ್ಲಿ ಕಾಲಕಾಲಕ್ಕೆ ಕವಿ, ಕೃತಿ ಹಾಗೂ ಸಮಾಜ ಕೇಂದ್ರ ಸ್ಥಾನ ಪಡೆಯುತ್ತ ಬಂದಿರುವುದನ್ನು ಕಾಣುತ್ತೇವೆ. ಓದುಗನಿಗೆ ಪ್ರಾಶಸ್ತ್ಯ ನೀಡಿದ ವಿಮರ್ಶೆಯ ರೀತಿಯೂ ಈ ನಡುವೆ ರೂಪುಗೊಳ್ಳುತ್ತ ಬಂದಿರುವುದುಂಟು. ಕೃತಿಯನ್ನು ಅದರ ಆಕೃತಿಯೊಳಗಡೆಗೆ ಅರ್ಥ ಮಾಡಿಕೊಳ್ಳಬೇಕೆಂಬ ನವ್ಯ ವಿಮರ್ಶೆ ಸಾಮಾಜಿಕ ಹೊಣೆಗಾರಿಕೆಯಿಂದ ದೂರ ಸರಿದ ನಿಲವಿನದಾಗಿದ್ದರೆ, ಸಾಂಸ್ಕೃತಿಕ ಬದಲಾವಣೆಗಾಗಿ ಸಾಹಿತ್ಯ ಎನ್ನುವ ನಿಲುವು ಬಂಡಾಯ ವಿಮರ್ಶೆಯದಾಗಿದೆ. ಇಂದು ಅದು ಸಂಸ್ಕೃತಿ ವಿಮರ್ಶೆಯಲ್ಲಿ ಮುಂದುವರಿದಿರುವುದು ಹೊಸ ಆಶಯಗಳಿಗೆ ಕರೆದೊಯ್ಯುವ ಸಹಜ ಬೆಳವಣಿಗೆ ಎನ್ನಬಹುದು. ಅದೇನೇ ಇದ್ದರೂ ವಿಮರ್ಶಾ ಕ್ಷೇತ್ರದಲ್ಲಿ ನಡೆಯುತ್ತಿರುವ ಚರ್ಚೆಗಳು, ವಾದ-ವಿವಾದಗಳು ಒಟ್ಟಿನಲ್ಲಿ ಕನ್ನಡ ವಿಮರ್ಶೆಯ ತತ್ವಗಳನ್ನು ಹಿಗ್ಗಿಸುತ್ತಲಿರುವುದು ಸ್ವಾಗತಾರ್ಹ. 'ಆಶಯ-ಆಕೃತಿ' (ಸಿ.ಎನ್. ರಾಮಚಂದ್ರನ್), 'ಸಾತ್ವಿಕ ಪಥ' (ಜಿ.ಎಸ್. ಆಮೂರ), 'ಸಕಾಲಿಕ' (ಜಿ.ಎಚ್. ನಾಯಕ), 'ತಿಳಿವ ತೇಜದ ಮುಂದೆ' (ಮಲ್ಲೇಪುರಂ ಜಿ. ವೆಂಕಟೇಶ), 'ಮರದೊಳಗಣ ಕಿಚ್ಚು' (ರಹಮತ್ ತರೀಕೆರೆ), 'ಬೆತ್ತಲೆ ಪೂಜೆ ಯಾಕೆ ಕೂಡದು?' (ಯು.ಆರ್. ಅನಂತಮೂರ್ತಿ), 'ಮೊದಲ ಕಟ್ಟಿನ ಗದ್ಯ' (ಎಚ್.ಎಸ್. ಶಿವಪ್ರಕಾಶ), 'ವಿಚಯ' (ಬಿ.ಎನ್. ಸುಮಿತ್ರಬಾಯಿ) ಇವೇ ಮೊದಲಾದ ಕೃತಿಗಳನ್ನು ಈ ಸಂದರ್ಭದಲ್ಲಿ ಗಮನಿಸಬಹುದು. ಆದರೆ ಕ್ಲಿಷ್ಟ ಹಾಗೂ ಪಾರಿಭಾಷಿಕ ಶಬ್ದಗಳ ಮೂಲಕ ವಿಮರ್ಶೆಯನ್ನು ಜಟಿಲಗೊಳಿಸುವ ಅಗತ್ಯವಿಲ್ಲವೆಂಬುದನ್ನು ಮರೆಯಕೂಡದು.

ಕನ್ನಡ ಸಾಹಿತ್ಯ ಸ್ತ್ರೀವಾದಿ ಅಧ್ಯಯನ ಈಚೆಗೆ ನಡೆಯುತ್ತಿದ್ದು ಆ ಬಗೆಯ ಚಿಂತನೆಯ-ನೆಲೆಗಳನ್ನು ಇನ್ನಷ್ಟು ವ್ಯಾಪಕವಾಗಿ ಗಟ್ಟಿಯಾದ ರೀತಿಯಲ್ಲಿ ನೋಡುವ ಅಗತ್ಯವಿದೆ. ಕೇವಲ ಹೆಣ್ಣುಮಗಳು ತನ್ನ ಅನುಭವವನ್ನು ಹೀಗೆ ವಿಶಿಷ್ಟವಾಗಿ ಅಭಿವ್ಯಕ್ತಿಗೊಳಿಸಬಲ್ಲಳು ಎನ್ನುವಂತಹ ಬರವಣಿಗೆಯನ್ನು ನಮ್ಮ ಸಾಹಿತ್ಯದಲ್ಲಿ ಅಲ್ಲಲ್ಲಿ ವಿಶೇಷವಾಗಿ ಕಾವ್ಯ ಪ್ರಕಾರದಲ್ಲಿ ಗುರುತಿಸಬಹುದು. ಸ್ತ್ರೀತ್ವ ಹಾಗೂ ಸ್ತ್ರೀವಾದ ಎರಡರ ಸಮನ್ವಯ ಈ ದಿಸೆಯಲ್ಲಿ ಸರಿಯಾದ ದಾರಿಯಾಗಿ ತೋರುತ್ತದೆ. " 'A room of my own' ಗೆ ಹಂಬಲಿಸುವುದರಿಂದ ಒಂದು ಹೆಜ್ಜೆ ಮುಂದೆ ಹೋಗಿ ಅದನ್ನು ನಾವೇ ಸೃಷ್ಟಿಸಿಕೊಳ್ಳುವತ್ತ ಸಾಗಬೇಕಾಗಿದೆ" (ಪ್ರತಿಭಾ ನಂದಕುಮಾರ್) ಎಂಬ ಅರಿವು ನಮ್ಮ ಲೇಖಕಿಯರಲ್ಲಿ ಮೂಡಿರುವುದು ಸ್ವಾಗತಾರ್ಹ.

ತನ್ನದೇ ಆದ ಭಾಷೆ ಹಾಗೂ ಪರಿಭಾಷೆಗಳನ್ನು ನಿರ್ಮಿಸಿಕೊಳ್ಳುತ್ತ ಆಧುನಿಕ ಸಾಹಿತ್ಯ ವಿಮರ್ಶೆ ವೈವಿಧ್ಯಮಯವಾಗಿ ಬೆಳೆಯುತ್ತಿರುವ ಇಂದಿನ ಸಂದರ್ಭದಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಹಿಂದೆ ಪ್ರಾರಂಭಿಸಿದ 'ಸಾಹಿತ್ಯ ಪಾರಿಭಾಷಿಕ ಮಾಲೆ'ಯ ಮಹತ್ವದ ಯೋಜನೆ ಅರ್ಧಕ್ಕೇ ನಿಂತು ಹೋಗಿರುವುದು ದುರದೃಷ್ಟಕರ.

ಕನ್ನಡ ಸಾಹಿತ್ಯ ಚರಿತ್ರೆ ಒಂದು ಸಾವಿರ ವರ್ಷಗಳ ಹಾದಿಯಲ್ಲಿ ನಿರಂತರವಾಗಿ ಸಾಗಿ ಬಂದಿರುವ ಸಂದರ್ಭದಲ್ಲಿ ಪ್ರಾಚೀನ ಕನ್ನಡ ಸಾಹಿತ್ಯವನ್ನು ವಿವಿಧ ಮಗ್ಗಲುಗಳಿಂದ ವಿಶ್ಲೇಷಿಸಿ ಕಾವ್ಯ ಚಿಂತನ ಮತ್ತು ಕಥನ ಪರಂಪರೆಯನ್ನು ಒಟ್ಟಿಗೆ ಮಂಡಿಸುವ, ಈ ಕಾಲದ ಅಗತ್ಯವನ್ನು ಪೂರೈಸುವ ರೀತಿಯಲ್ಲಿ ಮೂಡಿರುವ ಒಂದು ಪ್ರಯತ್ನ 'ಸಾಹಿತ್ಯ ಸಂಗಾತಿ' (ಕೀರ್ತಿನಾಥ ಕುರ್ತಕೋಟಿ)ಯಲ್ಲಿ ಕಂಡು ಬರುತ್ತದೆ. ಇದಕ್ಕೆ ಸಂವಾದಿಯಾಗಿ ಸಮಸ್ತ ಜ್ಞಾನವೂ ಒಂದು ಬಗೆಯ ಕಥನ ಎಂಬ ಶ್ರದ್ಧೆ, ಎಲ್ಲ ಜ್ಞಾನಗಳನ್ನು ಸಾಹಿತ್ಯ ಮೀಮಾಂಸೆಯ ಪರಿಕರಗಳಿಂದ ಪ್ರವೇಶಿಸಲು ಸಾಧ್ಯ ಎಂಬ ನಿಲುವಿನಿಂದ ಕೂಡಿದ 'ಸಾಹಿತ್ಯ ಕಥನ' (ಡಿ.ಆರ್. ನಾಗರಾಜ) ಈ ಶತಮಾನದ ಅಂತ್ಯದಲ್ಲಿ ರೂಪುಗೊಳ್ಳುತ್ತಿರುವ ಕನ್ನಡದ ಚಿಂತನ ಕ್ರಮದ ಹೊಸ ದಿಕ್ಕನ್ನು ಸೂಚಿಸುವಂತಿದೆ. ಇವುಗಳ ಜತೆಗೆ ಲಂಕೇಶ, ದೇವನೂರ ಮಹಾದೇವ ಹಾಗೂ ತೇಜಸ್ವಿಯವರ ಚೇತೋಹಾರಿಯಾದ ಗದ್ಯದಲ್ಲಿ ಕೇಳಿಸುವ ಕನ್ನಡದ ಜೀವಧ್ವನಿ ಕನ್ನಡ ಗದ್ಯದ ಪುನರುಜ್ಜೀವನದ ದೃಷ್ಟಿಯಿಂದ ಗಮನಾರ್ಹ ಸಾಧನೆಯಾಗಿದೆ. ದಲಿತ ಸಾಹಿತ್ಯದ ಸಾಂಸ್ಕೃತಿಕ ಹಾಗೂ ರಾಜಕೀಯ ಮುಖಗಳನ್ನು ಅರಿತು ಅರ್ಥೈಸುವ ಒಂದು ಒಳ್ಳೆಯ ಪ್ರಯತ್ನ 'ಕನ್ನಡ-ಮರಾಠಿ ದಲಿತ ಸಾಹಿತ್ಯ' (ಸರಜೂ ಕಾಟ್ಕರ್) ಸಂಪ್ರಬಂಧದಲ್ಲಿ ಎದ್ದು ಕಾಣುತ್ತದೆ. ಸಮೃದ್ಧವಾದ ೨೦ನೇ ಶತಮಾನದ ಕನ್ನಡ ಸಾಹಿತ್ಯವನ್ನು ಅರ್ಥೈಸುವ ಹಾಗೂ ಬೆಲೆಗಟ್ಟುವ ದೊಡ್ಡ ಪ್ರಯತ್ನವೊಂದು ನಡೆಯಬೇಕಾದ ಈ ಸಂದರ್ಭದಲ್ಲಿ ವೈಯಕ್ತಿಕವಾಗಿ ಹಾಗೂ ಕೆಲಮಟ್ಟಿಗೆ ಸಾಂಸ್ಥಿಕವಾಗಿ ಅಲ್ಲಲ್ಲಿ ನಡೆದಿರುವ ಅರ್ಥಪೂರ್ಣವಾದ ಇಂಥ ವಿಮರ್ಶೆ ಹಾಗೂ ಮರುವಿಮರ್ಶೆಗಳು, ಚಿಂತನ ಕ್ರಮಗಳು, ವಿಶಿಷ್ಟ ಗ್ರಹಿಕೆಗಳು, ಸಾಹಿತ್ಯಿಕ ಕಾಳಜಿಗಳು ಒಟ್ಟಾಗಿ ಅದಕ್ಕೆ ನೆರವಾಗಬಲ್ಲವು.

ನವೋದಯ ಕಾವ್ಯದಲ್ಲಿ ಮಕ್ಕಳ ಸಾಹಿತ್ಯಕ್ಕೂ ತಕ್ಕ ಪ್ರಾಶಸ್ತ್ಯವನ್ನು ನೀಡಿದ ಹಿರಿಯರಾದ ಪಂಜೆ, ರಾಜರತ್ನಂ, ಕುವೆಂಪು, ದಿನಕರ ದೇಸಾಯಿ, ಹೊಯಿಸಳ, ಕಾವ್ಯಾನಂದ, ಮೇವುಂಡಿ, ಮಲ್ಲಾರಿ, ಬಿ.ಎ. ಸನದಿ ಮೊದಲಾದವರ ಕೊಡುಗೆಯನ್ನು ಈಗಲೂ ಮರೆಯುವಂತಿಲ್ಲ. ಅವರ ಅನೇಕ ಪದ್ಯಗಳು ಇಂದಿಗೂ ಮಕ್ಕಳ ಮನಸ್ಸನ್ನು ರಂಜಿಸುತ್ತ ಅವರ ಕಾವ್ಯಾಭಿರುಚಿಯನ್ನು ಬೆಳೆಸಲು ನೆರವಾಗುತ್ತಿವೆ. ಮಕ್ಕಳಿಗಾಗಿ ಬರೆಯುವುದು ತಮ್ಮ ಅಂತಸ್ತಿಗೆ ಕುಂದು ಎಂದು ಭಾವಿಸದೆ ಅವರು ಸಮಾನ ಶ್ರದ್ಧೆಯಿಂದ ಈ ಕಾರ್ಯಕ್ಕೂ ತೊಡಗಿ ಕನ್ನಡ ಸಂಸ್ಕೃತಿಯ ವಾತಾವರಣವನ್ನು ಜೀವಂತವಾಗಿಟ್ಟರು. ಆದರೆ ಮುಂದಿನ ತಲೆಮಾರಿನ ಲೇಖಕರ ಅನಾಸಕ್ತಿಯಿಂದ ಇಂಥ ಒಂದು ಆರೋಗ್ಯಕರ ಸಂಪ್ರದಾಯ ಮುಂದುವರಿಯದೆ ನಮ್ಮ ಮಕ್ಕಳ ಕಲ್ಪನೆ, ಕನಸುಗಳ ಲೋಕ ಬಣಗುಟ್ಟತೊಡಗಿತು. ಈ ಅವಧಿಯಲ್ಲಿ ಕೆಲಮಟ್ಟಿಗಾದರೂ

ಅದನ್ನು ಹರಿಗಡಿಯದಂತೆ ನೋಡಿಕೊಂಡ ಶ್ರೇಯಸ್ಸು ಪ್ರಾಥಮಿಕ ಶಾಲೆಯ ಶಿಕ್ಷಕರನೇಕರಿಗೆ ಸಲ್ಲಬೇಕು. ವಿಜಾಪುರದ ಭಾರತೀ ಸಾಹಿತ್ಯ ಭಂಡಾರ (ಸಿಸು ಸಂಗಮೇಶ) ಕಳೆದ ನಾಲ್ಕು ದಶಕಗಳಿಂದ ಮಕ್ಕಳ ಸಾಹಿತ್ಯ ಪ್ರಕಾಶನಕ್ಕೆ ಮೀಸಲಾಗಿ ನೂರಾರು ಲೇಖಕರಿಗೆ ಪ್ರೋತ್ಸಾಹ ನೀಡುತ್ತ ಬಂದಿರುವುದನ್ನು ಇಲ್ಲಿ ಸ್ಮರಿಸಬಹುದು. ಆದರೆ ಅವರಲ್ಲೂ ಎಲ್ಲೋ ಕೆಲವರನ್ನು ಬಿಟ್ಟರೆ ಉಳಿದವರ ರಚನೆಗಳಲ್ಲಿ ಬಹುಪಾಲು ಅಸಂಬದ್ಧ ಹಾಗೂ ನೀರಸವಾಗಿ ಭಾವ, ಭಾಷೆ, ಕಲ್ಪನೆ, ಲಯಗಾರಿಕೆ ಯಾವುದರಲ್ಲೂ ಹೊಸತನದ ಮಿಡಿತ ಅಷ್ಟಾಗಿ ಕಂಡುಬರಲಿಲ್ಲ. ಆದರೆ ಕಳೆದ ಒಂದೆರಡು ದಶಕಗಳಲ್ಲಿ ಶಿಶುಕಾವ್ಯ ಮತ್ತೆ ಹೊಸ ಗರಿ ಮೂಡಿಸಿಕೊಂಡು ಹೊಸಹಾಡು ಹೊಮ್ಮಿಸುತ್ತಿರುವುದು ಅತ್ಯಂತ ಸ್ವಾಗತಾರ್ಹ. ಮಕ್ಕಳ ಮನಸ್ಸಿನ ಹೊಲಬುಗಳನ್ನು ಸೂಕ್ಷ್ಮವಾಗಿ ನಿರೀಕ್ಷಿಸಿ ಅವರ ಮಾನಸಿಕ ಇತಿಮಿತಿಗಳನ್ನು ತಿಳಿದುಕೊಂಡು, ಅಂತರಂಗದ ಭಾವಗುಣ, ಗೀತಗುಣಗಳನ್ನು ತೃಪ್ತಿಪಡಿಸುತ್ತಾ ಅವರ ಕುತೂಹಲವನ್ನು ತಣಿಸುವ ಬಗೆ ಬಗೆಯ 'ಹಕ್ಕಿ ಸಾಲು' ಗೋಚರಿಸಿರುವುದು ಆಶಾದಾಯಕ ಸಂಗತಿಯಾಗಿದೆ. ನಮ್ಮ ಶಿಕ್ಷಣ ಇಲಾಖೆ ಆಯ್ದ ಮಕ್ಕಳ ಕಥೆ ಹಾಗೂ ಕವಿತೆಗಳ ಸಂಗ್ರಹಗಳನ್ನು, ಹಾಡುಗಳ ಧ್ವನಿಮುದ್ರಿಕೆಗಳನ್ನು ಸಿದ್ಧಪಡಿಸಿ ಪ್ರಾಥಮಿಕ ಶಾಲೆಯ ವಿದ್ಯಾರ್ಥಿಗಳಿಗೆ ತೀರ ಸುಲಭ ಬೆಲೆಯಲ್ಲಿ ಒದಗಿಸುವ ವ್ಯವಸ್ಥೆಯನ್ನು ಏಕೆ ಕೈಕೊಳ್ಳಬಾರದು?

ಇದೇ ಸಂದರ್ಭದಲ್ಲಿ ಅತ್ಯಂತ ವಿವಂಚನೆಗೀಡುಮಾಡಿರುವ ನಮ್ಮ ಮಕ್ಕಳ ಶಿಕ್ಷಣ ಕ್ರಮದ ಬಗ್ಗೆ ಎರಡು ಮಾತು ಹೇಳದೆ ನಾನು ಮುಂದುವರಿಯಲಾರೆ. ಜಡತೆ ಹಾಗೂ ಉದಾಸೀನತೆಯ ಪ್ರತೀಕದಂತಿರುವ ನಮ್ಮ ಆಡಳಿತಗಾರರು, ಶೈಕ್ಷಣಿಕ 'ವ್ಯಾಪಾರಿಗಳು' ಹಾಗೂ ಹಣದ ಬಗೆಗಿನ ಅವರ ಗೀಳಿನಿಂದ ಉಂಟಾದ ಮಕ್ಕಳ ಬಗೆಗಿನ ಯಾಂತ್ರಿಕ ಸಂಬಂಧ ಮುಂತಾದ ದೋಷಗಳನ್ನು ಶೀಘ್ರವಾಗಿ ನಿವಾರಿಸುವ ಕಾಲ ಈಗ ಒದಗಿದೆ. ಅಮಾನವೀಯವಾದ ನಮ್ಮ ಶಿಕ್ಷಣ ಪದ್ಧತಿಯನ್ನು ಸುಧಾರಿಸಲು ಕಳೆದ ನಾಲ್ಕೈದು ದಶಕಗಳಿಂದ ನೇಮಕಗೊಂಡ ಅಸಂಖ್ಯ ಆಯೋಗಗಳು, ಸಮಿತಿಗಳು ವರದಿಗಳನ್ನೂ ಶಿಫಾರಸ್ಸುಗಳ ಹೊರೆಯನ್ನೂ ಉತ್ಪಾದಿಸುವ ಹೊರತು ಏನನ್ನೂ ಸಾಧಿಸದೆ ಹೋಗಿರುವುದು ಅತ್ಯಂತ ದುರ್ದೈವದ ಸಂಗತಿಯಾಗಿದೆ. ಕಾಲಕಾಲಕ್ಕೆ ಅಧಿಕಾರಕ್ಕೆ ಬಂದ ಸರಕಾರಗಳು ಶಿಕ್ಷಣದ ಬಗ್ಗೆ ಬಾಯಿ ಮಾತಿನ ಸೇವೆಯನ್ನು ಸಲ್ಲಿಸುತ್ತ ಯಾವ್ಯಾವುದೋ ಆಡಂಬರದ ಹಾಗೂ ನಿರರ್ಥಕ ಯೋಜನೆಗಳಿಗೆ ಕೋಟಿಗಟ್ಟಲೆ ಹಣ ವೆಚ್ಚ ಮಾಡುತ್ತ ಬಂದಿವೆ. ಆದರೆ ಶಿಕ್ಷಣದ ವಿಷಯಕ್ಕೆ ಬಂದಾಗ ಮಾತ್ರ ಸಂಪನ್ಮೂಲಗಳ ಕೊರತೆ ಅವರಿಗೆ ಎದುರಾಗುತ್ತದೆ.

ರಾಜಕೀಯ ಧುರೀಣರನೇಕರು ತಮ್ಮ ಕಿಕ್ ಬ್ಯಾಕ್ಸ್ ಮತ್ತು ಹಗರಣಗಳಲ್ಲಿ ಒಬ್ಬರನ್ನೊಬ್ಬರು ಮೀರಿಸುತ್ತಾರಲ್ಲದೆ ರಾಷ್ಟ್ರದ ಮಕ್ಕಳ ಭವಿಷ್ಯದ ಬಗ್ಗೆ ವಿಚಾರಿಸಲು ಅವರಿಗೆ ಪುರಸೊತ್ತಿಲ್ಲದಾಗಿದೆ. ಇದೂ ಅಲ್ಲದೆ ಹೆಚ್ಚುತ್ತಲೇ ಇರುವ ಟಿವಿ ಚಾನೆಲ್ಲುಗಳ ಹಾಗೂ ವಾಣಿಜ್ಯ ಪ್ರೇರಿತ ಚಲನಚಿತ್ರಗಳ ಮೂಲಕ ಎಳೆಯ ಮನಸ್ಸುಗಳನ್ನು ವ್ಯವಸ್ಥಿತವಾಗಿ ಕಲುಷಿತಗೊಳಿಸುತ್ತ, ಮಕ್ಕಳ ಕಾತರಗಳನ್ನು, ವಿಲೋಭನೆಗಳನ್ನು ಹೆಚ್ಚಿಸುತ್ತಿವೆ. ಇಷ್ಟೇ ಅಲ್ಲದೇ ಮಕ್ಕಳನ್ನೇ ಗುರಿಯಾಗಿಟ್ಟುಕೊಂಡ

ಜಾಹೀರಾತುಗಳು ಎಳೆಯ ಮನಸ್ಸುಗಳನ್ನು ಗ್ರಾಹಕ ಕೇಂದ್ರಿತ ವ್ಯವಸ್ಥೆಯೆಡೆಗೆ ಸೆಳೆದುಕೊಳ್ಳುತ್ತಿರುವುದು ಮಕ್ಕಳ ಭವಿಷ್ಯದ ಬಗ್ಗೆ ಹೆಚ್ಚಿನ ಕಳವಳಕ್ಕೆ ಕಾರಣವಾಗುತ್ತಿವೆ. ಇಂಥ ಪರಿಸ್ಥಿತಿಯಲ್ಲಿ ಎಳೆಯ ಮಕ್ಕಳನ್ನು ಉಪಯುಕ್ತವೆನಿಸದ ಯಾವುದೋ ಶೈಕ್ಷಣಿಕ ಚೌಕಟ್ಟುಗಳ ಬಿಗಿ ಕವಚದಲ್ಲಿ ಒತ್ತಾಯದಿಂದ ದೂಡಲಾಗುತ್ತಿರುವುದಂತೂ ಶೋಚನೀಯವಾಗಿದೆ. ಇವೆಲ್ಲದರ ಒತ್ತಡದಲ್ಲಿ ಶಿಕ್ಷಣದ ಯೋಜಕರು, ಆಡಳಿತಗಾರರು ಮತ್ತು ಪಾಲಕರು ನಮ್ಮ ಮಕ್ಕಳ ಭವಿಷ್ಯದ ಬಗ್ಗೆ ಹೊಸದಾಗಿ ಯೋಚನೆ ಮಾಡಬೇಕಾಗಿದೆ. ಪ್ರಾಥಮಿಕ ಶಾಲಾ ಮಟ್ಟದಲ್ಲಿಯೂ ಕೆಲವೊಂದು ತೀವ್ರ ಬದಲಾವಣೆಗಳಾಗುವುದು ಅತ್ಯಂತ ಅವಶ್ಯವಿದೆ.

೧. ಪ್ರಾಥಮಿಕ ಶಿಕ್ಷಣ ಮುಗಿಯುವವರೆಗೆ ಪ್ರತಿಯೊಂದು ವಿಷಯವನ್ನು ಅವರ ಮಾತೃಭಾಷೆಯ ಮೂಲಕವೇ ಕಲಿಸಬೇಕು. ಹೆಚ್ಚಿನ ಭಾಷೆಗಳನ್ನು ಪ್ರಾಥಮಿಕ ಮಟ್ಟದ ನಂತರವೇ ಬೋಧಿಸಬೇಕು.

೨. ಪುಸ್ತಕಗಳ ಹಾಗೂ ಭಾರವಾದ ಪಠ್ಯಕ್ರಮಗಳ ಹೊರೆಯನ್ನು ಕೂಡಲೆ ತಗ್ಗಿಸಬೇಕು. ಹತ್ತು ವರ್ಷ ವಯಸ್ಸಿನವರೆಗೂ ವಿರಾಮವಾದ ಹರ್ಷದಾಯಕ ವಾತಾವರಣದಲ್ಲಿ ಶಿಕ್ಷಣ ನೀಡುವಂತಾಗಬೇಕು. ಆಟಗಳಿಗೆ, ನಿಸರ್ಗದ ಒಡನಾಟಕ್ಕೆ, ಸಾಹಸ ಮನೋಭಾವದಿಂದ ಕಲಿಯುವುದಕ್ಕೆ ಅವರಿಗೆ ಹೆಚ್ಚಿನ ವೇಳೆ ದೊರೆಯಬೇಕು.

೩. ಮಿತಿ ಮೀರಿದ ಪರೀಕ್ಷೆಗಳಿಗೆ, ಸಂದರ್ಶನಗಳಿಗೆ ಮಕ್ಕಳನ್ನು ಈಡು ಮಾಡಕೂಡದು.

೪. ಶಿಕ್ಷಕರು, ವರ್ಗಗಳು ನಡೆಯುತ್ತಿರುವ ಅವಧಿಯಲ್ಲಿಯೇ ತಮಗೆ ಒಪ್ಪಿಸಿದ ಪಾಠ ಪ್ರವಚನಗಳನ್ನು ಮುಗಿಸುವಂತೆ ಕಡ್ಡಾಯಗೊಳಿಸಬೇಕಲ್ಲದೆ ಖಾಸಗಿಯಾಗಿ ಅವರು ಮನೆ ಪಾಠ ಹೇಳುವುದನ್ನು ನಿರ್ಬಂಧಿಸಬೇಕು.

೫. ಅಗತ್ಯವಿದ್ದಷ್ಟು ಕನಿಷ್ಠ ಪ್ರಮಾಣದ ಮನೆಯ ಅಭ್ಯಾಸವನ್ನು ಮಾತ್ರ ಮಕ್ಕಳಿಗೆ ಕೊಡಬೇಕು.

೬. ದೊಡ್ಡವರು ಹಾಕಿಕೊಟ್ಟ ಮಟ್ಟದಲ್ಲಿ ಮಕ್ಕಳು ಕಲಿಯಬೇಕೆಂದೂ, ನಡೆದುಕೊಳ್ಳಬೇಕೆಂದೂ ಪಾಲಕರಾಗಲಿ, ಶಿಕ್ಷಕರಾಗಲಿ ನಿರೀಕ್ಷಿಸಬಾರದು. ಅವರು ತಮ್ಮ ರೀತಿಯಲ್ಲಿ ತಪ್ಪುಗಳನ್ನು ಎಸಗಿದರೂ ಸಹಜವಾಗಿ ರಚನಾತ್ಮಕವಾಗಿ ಅವರು ಮಾಡಿ ತೋರಿಸುವ ದಿಕ್ಕಿನಲ್ಲಿಯೇ ಅವರು ಬೆಳೆಯುವಂತೆ ನೆರವಾಗುವುದು ಮಾತ್ರ ತಮ್ಮ ಕೆಲಸವೆಂದು ದೊಡ್ಡವರು ತಿಳಿಯಬೇಕು.

೭. ಪುಸ್ತಕ, ಗಣಕಯಂತ್ರ, ಪದವಿ, ಹಣ ಇವುಗಳಿಗಿಂತ ಜೀವನ ಹೆಚ್ಚು ಮಹತ್ವದ್ದು. ಶಿಕ್ಷಣವೆನ್ನುವುದು ಕೊಳ್ಳುವ ಹಾಗೂ ಮಾರುವ ಮಾರಾಟದ ವಸ್ತುವಾಗಿರುವುದು ಕೂಡಲೇ ನಿಲ್ಲಬೇಕು. ವೈಯಕ್ತಿಕ ಹಾಗೂ ಸಾಮೂಹಿಕ ಸಂದರ್ಭಗಳಲ್ಲಿ ಮಾನವನ ಬದುಕನ್ನು ಮತ್ತು ಕೌಶಲ್ಯವನ್ನು ಸರಿಯಾಗಿ ಬಳಸಿ ಸುಧಾರಿಸುವ ಸಾಧನವಾಗಿ ಅದನ್ನು ಭಾವಿಸಬೇಕು.

ಭಾರತದ ವೈವಿಧ್ಯಮಯ ಪ್ರಾದೇಶಿಕ ಭಾಷಾ ಸಾಹಿತ್ಯವನ್ನು ಪರಸ್ಪರ ಪರಿಚಯಿಸಲು ಸ್ವೋಪಜ್ಞ ಅನುವಾದದ ಅಗತ್ಯವಿದೆ. ಈಚೆಗೆ ದೇಶದ ವಿವಿಧ ಭಾಷಾ ಪ್ರದೇಶಗಳಲ್ಲಿ ನಡೆಯುತ್ತಿರುವ ಮಹತ್ವದ ಸಾಹಿತ್ಯಿಕ ಚಟುವಟಿಕೆಗಳಿಗೆ ಒತ್ತಾಸೆಯಾಗಿ ನಿಂತಿರುವ ಕೇಂದ್ರ ಸಾಹಿತ್ಯ ಅಕಾಡೆಮಿ ಈ ವಿಷಯದಲ್ಲಿ ಹೆಚ್ಚು ಮುತುವರ್ಜಿ ವಹಿಸಿ ಬೆಂಗಳೂರಿನಲ್ಲಿ ಭಾಷಾಂತರ ಕೇಂದ್ರವೊಂದನ್ನು ಸ್ಥಾಪಿಸಿರುವುದು ತುಂಬಾ ಸ್ವಾಗತಾರ್ಹ. ಒಂದು ಭಾಷೆಯ ಗಣ್ಯ ಲೇಖಕರು ಮತ್ತೊಂದು ಪ್ರದೇಶದಲ್ಲಿ ಅಪರಿಚಿತರಾಗಿ ಇರುವ ವಿಪರೀತ ಸ್ಥಿತಿ ಆದಷ್ಟು ಬೇಗ ದೂರವಾಗಬೇಕಾಗಿದೆ. ಕಥಾ ಸಾಹಿತ್ಯದ ಅನುವಾದ ಕೆಲಮಟ್ಟಿಗೆ ಸುಲಭದ್ದೆನಿಸೀತು. ಆದರೆ ಕಾವ್ಯದ ಅನುವಾದ ಕಷ್ಟದ ಕೆಲಸ. ಆದರೂ ಸಾಧ್ಯವಿದ್ದಷ್ಟು ಕವಿಯ ಅಭಿವ್ಯಕ್ತಿಯ ಮೂಲ ಸತ್ವ, ಹೊಳಹು ಹಾಗೂ ಬಣ್ಣ ವೈವಿಧ್ಯಗಳೊಡನೆ ಹಿಡಿದು ಬೇರೊಂದು ಭಾಷೆಗೆ ತರುವ ಕೆಲಸ ನಡೆಯಬೇಕಾಗಿದೆ. ಭಾರತೀಯ ಭಾಷೆಗಳ ಕಾವ್ಯಾನುವಾದದಲ್ಲಿ ಶಾ. ಬಾಲೂರಾವ್, ಎಚ್.ಎಸ್. ಶಿವಪ್ರಕಾಶರಂಥವರು ಒಳ್ಳೆಯ ಮಾದರಿ ಹಾಕಿಕೊಟ್ಟಿದ್ದಾರೆ. ಈ ದಿಸೆಯಲ್ಲಿ ಬೇರೆ ಬೇರೆ  ಸಾಹಿತ್ಯ ಸಂಸ್ಥೆಗಳು, ವಿಶ್ವವಿದ್ಯಾಲಯಗಳು ಕೆಲಸವನ್ನು ಹಂಚಿಕೊಂಡು ಅಣಿಯಾಗಬೇಕು. 'ಹಳಗನ್ನಡ ಮತ್ತು ಮರಾಠಿ' ಕುರಿತ ಉನ್ನತ ಮಟ್ಟದ ಗ್ರಂಥವನ್ನು ರಚಿಸಿದ ರಂ.ಶಾ. ಲೋಕಾಪುರ ಈಚೆಗೆ ಮರಾಠಿಯಲ್ಲಿ 'ಜ್ಞಾನೇಶ್ವರೀ ಕಾಲೀನ ಮರಾಠೀ ಭಾಷೇವರ ಕನ್ನಡ ಚಾ ಪ್ರಭಾವ' ('ಜ್ಞಾನೇಶ್ವರಿ' ಕಾಲದ ಮರಾಠಿ ಭಾಷೆಯ ಮೇಲೆ ಕನ್ನಡದ ಪ್ರಭಾವ) ಎಂಬ ಉದ್ಗ್ರಂಥವನ್ನು ಪ್ರಕಟಿಸಿದ್ದು ರಾಜ್ಯದ ಯಾವುದಾದರೊಂದು ಸಾಹಿತ್ಯ ಸಂಸ್ಥೆ ಅದರ ಕನ್ನಡ ಅನುವಾದ ಪ್ರಕಟಣೆಯನ್ನು ಕೂಡಲೆ ಕೈಗೆತ್ತಿಕೊಳ್ಳುವುದು ತೀರಾ ಪ್ರಸ್ತುತವಾಗಿದೆ.

೧೨ನೆಯ ಶತಮಾನದ ಕಲ್ಯಾಣ ಚಾಲುಕ್ಯ ಚಕ್ರವರ್ತಿ ಸರ್ವಜ್ಞ ಸೋಮೇಶ್ವರನಿಂದ ಸಂಸ್ಕೃತದಲ್ಲಿ ರಚಿತವಾದ 'ಮಾನಸೋಲ್ಲಾಸ' ಪ್ರಾಚೀನ ಕರ್ನಾಟಕದ ಒಂದು ಸುಪ್ರಸಿದ್ಧ ವಿಶ್ವಕೋಶ. ಕನ್ನಡಿಗರಿಗೆ ಹೆಚ್ಚು ಕಡಿಮೆ ಅಪರಿಚಿತವಾಗಿಯೇ ಉಳಿದಿದ್ದ ಈ ಅಪೂರ್ವ ಕೃತಿಯನ್ನು ಕರ್ನಾಟಕ ವಿಶ್ವವಿದ್ಯಾಲಯದ ಪ್ರಸಾರಾಂಗ ಕನ್ನಡಕ್ಕೆ ಪ್ರಮಾಣಭೂತವಾಗಿ ಅನುವಾದಿಸಿ ಪ್ರಕಟಿಸಿ (ಸಂ.ಡಾ. ಎಂ.ಎಂ. ಕಲಬುರ್ಗಿ) ಪ್ರಶಂಸನೀಯ ಕಾರ್ಯವೆಸಗಿದೆ. 'ವೈದ್ಯ ವಿಶ್ವಕೋಶ'ದಂಥ ಸ್ವತಂತ್ರ ಬರವಣಿಗೆಯನ್ನು ವೈಜ್ಞಾನಿಕವಾಗಿ ಅತ್ಯಂತ ಯಶಸ್ವಿಯಾಗಿ ನೀಡಬಲ್ಲ ಸಾಮರ್ಥ್ಯ ಕನ್ನಡಕ್ಕೆ ಒದಗಿರುವುದನ್ನು ಹಂಪಿ ವಿಶ್ವವಿದ್ಯಾಲಯ ತೋರಿಸಿಕೊಟ್ಟಿದೆ.

ಕನ್ನಡ-ಕನ್ನಡ ನಿಘಂಟಿನ ಎಂಟನೆಯ ಸಂಪುಟದೊಂದಿಗೆ ಬಹುದೊಡ್ಡ ಯೋಜನೆಯೊಂದನ್ನು ಪೂರ್ಣಗೊಳಿಸಿರುವ ಕನ್ನಡ ಸಾಹಿತ್ಯ ಪರಿಷತ್ತು ಈ ದಿಸೆಯಲ್ಲಿ ಹಾಕಿಕೊಂಡಿರುವ ಯೋಜನೆಗಳು ತುಂಬ ಆಶಾದಾಯಕವಾಗಿವೆ. ಎಂಟೂ ಸಂಪುಟಗಳ ಪರಿಷ್ಕರಣ ಯೋಜನೆಯನ್ನು ಪರಿಷತ್ತು ಈಗ ಕೈಗೆತ್ತಿಕೊಂಡಿದ್ದು ಇಂಗ್ಲೀಷ್ ಸಂವಾದಿ ಪದಗಳನ್ನು ಕೊಡುವ ಮೂಲಕ ಕನ್ನಡ-ಇಂಗ್ಲೀಷ್ ನಿಘಂಟುವಾಗಿಯೂ ಇದರ ವ್ಯಾಪ್ತಿ ವಿಸ್ತಾರಗೊಳ್ಳಲಿದೆ. ಇದರೊಂದಿಗೆ 'ಜಟಿ' ಶಬ್ದಕೋಶ ಹಾಗೂ ಶಕಟರೇಫ ಶಬ್ದಕೋಶಗಳೆರಡೂ ಪ್ರತ್ಯೇಕವಾಗಿ ಸಿದ್ಧಗೊಂಡಿದ್ದು ಹಳಗನ್ನಡದ ಅಭ್ಯಾಸಕ್ಕೆ ಇವು ತುಂಬ ಪ್ರಯೋಜನಕಾರಿಯಾಗಿವೆ.

ವಿಮರ್ಶೆ ಸೃಜನಶೀಲವಾಗಿರುವುದು ಸಾಧ್ಯವಾಗಿರುವಂತೆಯೇ ಸಂಶೋಧನೆಯೂ ಸೃಜನಾತ್ಮಕವಾಗಬಲ್ಲದು. ಸಾಹಿತ್ಯ ಮತ್ತು ವಿಮರ್ಶೆಗಿರುವ ಪ್ರಾಶಸ್ತ್ಯವನ್ನು ಸಂಶೋಧನೆಗೂ ನೀಡಬೇಕಾದುದು ಅಗತ್ಯವಾಗಿರುವ ಈ ಸಂದರ್ಭದಲ್ಲಿ ಸಂಶೋಧನೆಯ ಬಗ್ಗೆ ಯುವಕರಲ್ಲಿ ಆಸ್ಥೆಯನ್ನು ಹುಟ್ಟಿಸಲು ಕರ್ನಾಟಕ ಇತಿಹಾಸ ಅಕಾಡೆಮಿ ಕೈಕೊಂಡ ಕಾರ್ಯ ಪ್ರಶಂಸನೀಯ.

ಹತ್ತು ಬಗೆಯ ವಸ್ತು, ವಿಷಯಗಳ ನೆಲೆಯಲ್ಲಿ ಗುಣ ಗಾತ್ರಗಳೆರಡರಲ್ಲೂ 'ಗೋವಿಂದ ಪೈ ಅವರ ಸಮಗ್ರ ಸಂಶೋಧನೆ' ಸಂಪುಟ ಗೊಮ್ಮಟನಂತೆ ಕನ್ನಡ ಗ್ರಂಥ ಲೋಕದ ಬೃಹತ್ ಸ್ಮಾರಕವೆನಿಸಿದೆ. ಸಂಶೋಧನ ಸಾಂಸ್ಕೃತಿಕ ಜವಾಬ್ದಾರಿಯನ್ನು ಎತ್ತಿ ತೋರಿಸುವ ಇಂಥ ಮೌಲಿಕ ಗ್ರಂಥವನ್ನು ಪ್ರಕಟಿಸಿ ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ ಕನ್ನಡಕ್ಕೆ ಬಹುದೊಡ್ಡ ಸೇವೆಯನ್ನು ಸಲ್ಲಿಸಿದೆ.

ಇಂಥದೇ ಇನ್ನೊಂದು ಮಹತ್ಕಾರ್ಯವನ್ನು ಮಂಗಳೂರು ವಿಶ್ವವಿದ್ಯಾಲಯದ ಪ್ರಸಾರಾಂಗ ಪೂರೈಸಿಕೊಟ್ಟಿದೆ. ಸಂಪಾದಕಿ ಬಿ. ಮಾಲಿನಿ ಮಲ್ಯ ಅವರಿಂದ ರೂಪುಗೊಂಡ ಶಿವರಾಮ ಕಾರಂತರ ಬಿಡಿ ಬರಹಗಳ ಈ ಎಂಟು ಸಂಪುಟಗಳ ಪ್ರಕಟಣೆಗೆ ಐತಿಹಾಸಿಕ ಹಾಗೂ ಸಾಂಸ್ಕೃತಿಕ ಕಾರಣಗಳಿಂದಾಗಿ ಕನ್ನಡ ಸಾರಸ್ವತ ಪ್ರಪಂಚದಲ್ಲಿ ಮಹತ್ವದ ಸ್ಥಾನವಿದೆ.

ಖಾಸಗಿ ಪ್ರಕಾಶನ ಸಂಸ್ಥೆಯೊಂದು ಇಂಥದೇ ಒಂದು ಮಹತ್ವದ ಕಾರ್ಯಕ್ಕೆ ಕೈ ಹಾಕಿರುವುದು ಈ ಸಂದರ್ಭದಲ್ಲಿ ಉಲ್ಲೇಖನೀಯ. ಅಂಕೋಲಾ (ಅಂಬಾರ ಕೊಡ್ಲ) ರಾಘವೇಂದ್ರ ಪ್ರಕಾಶನ, ಗೌರೀಶ ಕಾಯ್ಕಿಣಿಯವರ ಸಮಗ್ರ ಸಾಹಿತ್ಯವನ್ನು ಹತ್ತು ಸಂಪುಟಗಳಲ್ಲಿ ಪ್ರಕಟಿಸುವ ಸಾಹಸಕ್ಕೆ ಕೈ ಹಾಕಿದ್ದು ಐದು ಸಂಪುಟಗಳು ಈಗಾಗಲೇ ಹೊರ ಬಂದಿವೆ. ಕನ್ನಡದಲ್ಲಿ ವೈಚಾರಿಕ ಕ್ಷೇತ್ರವನ್ನು ಶ್ರೀಮಂತಗೊಳಿಸಿದವರಲ್ಲಿ ವಿಚಾರವಾದಿಗಳಾದ ಗೌರೀಶ ಕೈಕಿಣಿ ಅಗ್ರಗಣ್ಯರು. ಅವರ ಬರವಣಿಗೆ ಒಂದು ನಿರಂತರ ಚೈತನ್ಯ ಪ್ರವಾಹ. ಅವರ ಸಂವೇದನೆ ಇಂದಿಗೂ ಅಷ್ಟೇ ಸೂಕ್ಷ್ಮ. ಲೇಖನಿ ಅಷ್ಟೇ ಹರಿತ, ಚಿಂತನೆ ಅಷ್ಟೇ ಪ್ರಖರ, ಜ್ಞಾಪಕ ಶಕ್ತಿ ಅಷ್ಟೇ ಅದ್ಭುತ. ಮನುಷ್ಯನ ಬುದ್ಧಿಶಕ್ತಿ ಯಾವ ಯಾವ ಸಂದರ್ಭದಲ್ಲಿ ಯಾವ ಯಾವ ದಿಸೆಯಲ್ಲಿ ಜೀವನದ ಮೂಲಭೂತವಾದ ಆಧಾರಗಳನ್ನು, ಆಶಯಗಳನ್ನು ಆಕಾಂಕ್ಷೆಗಳನ್ನು ಒಳಗೊಂಡು ವಿಶ್ಲೇಷಣೆಗೆ ತೊಡಗಬಹುದು ಎಂಬುದನ್ನು ಗೌರೀಶರು ತೋರಿಸಿಕೊಟ್ಟಿದ್ದಾರೆ.

ಸಾಹಿತ್ಯ ಸಂಶೋಧನ ಹಾಗೂ ಪ್ರಕಾಶನ ಕ್ಷೇತ್ರದಲ್ಲಿ ನಮ್ಮ ನಾಡಿನ ಕೆಲವು ಮಠಗಳು ಸಲ್ಲಿಸುತ್ತಿರುವ ಸೇವೆ ಅನುಪಮವಾದದ್ದು. ಗದಗಿನ ತೋಂಟದಾರ್ಯ ಮಠದ ವೀರಶೈವ ಅಧ್ಯಯನ ಸಂಸ್ಥೆ, ಬೆಳಗಾವಿಯ ನಾಗನೂರು ರುದ್ರಾಕ್ಷಿ ಮಠದ ವೀರಶೈವ ಅಧ್ಯಯನ ಅಕಾಡೆಮಿ, ಮೈಸೂರಿನ ಸುತ್ತೂರು ಮಠದ ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ ಮುಂತಾದವನ್ನು ಇಲ್ಲಿ ಎತ್ತಿ ಹೇಳಬಹುದು. ಅಪ್ರಕಟಿತ ಕಾವ್ಯ, ವಚನ, ಸ್ವರವಚನ ಇತ್ಯಾದಿಗಳನ್ನು ವ್ಯವಸ್ಥಿತ ಕ್ರಮದಲ್ಲಿ ಹೊರತರುತ್ತಿರುವುದಲ್ಲದೆ ಮಹತ್ವದ ಪಿಎಚ್.ಡಿ. ಪ್ರಬಂಧಗಳ ಪ್ರಕಟಣೆಗೂ ಅವು ಮುಂದಾಗಿರುವುದನ್ನು ಕಂಡು ವಿಶ್ವವಿದ್ಯಾಲಯಗಳೂ ಕಣ್ ಕಣ್ ಬಿಡುವಂತಾಗಿದೆ.

ಪ್ರಾಚೀನ ಗ್ರಂಥಗಳನ್ನು ಪರಿಷ್ಕರಿಸಿ ಹಲವಾರು ಹಸ್ತಪ್ರತಿಗಳ ಸಹಾಯದಿಂದ ಶುದ್ಧಪಾಠಗಳನ್ನು ನಿರ್ಣಯಿಸುವುದು ಗ್ರಂಥ ಸಂಪಾದನೆಯಲ್ಲಿ ಮುಖ್ಯ ಅಂಶವಾಗಿದೆ. ಇದಕ್ಕೆ ಹೊರತಾದ ಯಾವುದೇ ಬದಲಾವಣೆಯನ್ನು ಮೂಲಕೃತಿಯಲ್ಲಿ ಮಾಡುವ ಹಕ್ಕು ಸಂಪಾದಕನಿಗಿರುವುದಿಲ್ಲ. ಇದು ವಿಶೇಷ ಪರಿಶ್ರಮ ಹಾಗೂ ವಿದ್ವತ್ತನ್ನು ಅಪೇಕ್ಷಿಸುವ ಶಾಸ್ತ್ರವೆಂಬುದಕ್ಕೆ ಉದಾಹರಣೆಯಾಗಿ ಕನ್ನಡದಲ್ಲಿ ಈವರೆಗೆ ಅನೇಕ ಸಂಪಾದಿತ ಗ್ರಂಥಗಳು ಪ್ರಕಟವಾಗಿರುವುದುಂಟು. ವಚನಸಾಹಿತ್ಯವೂ ಇದಕ್ಕೆ ಹೊರತಾಗಿಲ್ಲ. ಆದರೆ ಈಚೆಗೆ ಮಾತೆ ಮಹಾದೇವಿಯವರು ('ಬಸವಾತ್ಮಜೆ') ಸಂಪಾದಿಸಿರುವ 'ಬಸವ ವಚನ ದೀಪ್ತಿ'ಯಲ್ಲಿ ಬಸವಣ್ಣನ ವಚನಗಳ ಅಂಕಿತವಾದ 'ಕೂಡಲಸಂಗಮದೇವಾ'ಕ್ಕೆ ಬದಲಾಗಿ 'ಲಿಂಗದೇವ' ಎಂಬ ಕಲ್ಪಿತ ಅಂಕಿತವನ್ನು ಹಾಕಿರುವುದು 'ಅಸಾಧು', 'ಉದ್ಧಟತನ' ಎಂಬುದು ಅವರಿಗೂ ಗೊತ್ತಿಲ್ಲದೆಯಿಲ್ಲ. 'ಕೂಡಲ ಸಂಗಮ' ಪದದಲ್ಲಿಯ ಔಚಿತ್ಯಪೂರ್ಣವಾದ ಕಾವ್ಯ ಪ್ರತಿಮೆಯನ್ನು ಸರಿಯಾಗಿ ಅರ್ಥ ಮಾಡಿಕೊಳ್ಳಲಾರದ ಇವರು ಬಸವಣ್ಣನ ಕ್ಷಮೆ ಕೋರಿ ಹೀಗೆ ಮಾಡಿರುವುದಾಗಿ ಹೇಳಿಕೊಂಡಿರುವುದಂತೂ ಅತ್ಯಂತ ಬಾಲಿಶ ಹಾಗೂ ಹಾಸ್ಯಾಸ್ಪದ. ಇಂಥ ಅನುಚಿತ ಕಾರ್ಯಕ್ಕಾಗಿ ಅವರು ಕ್ಷಮೆ ಕೋರಿ ಈ ಗ್ರಂಥವನ್ನು ಕೂಡಲೆ ಹಿಂತೆಗೆದುಕೊಳ್ಳುತ್ತಾರೆಂದು ನಾನು ಆಶಿಸುತ್ತೇನೆ.

ಬೆಲೆಯುಳ್ಳ ನೂರು ಪ್ರಕಟನೆಗಳ ಗಡಿ ದಾಟಿ ಸಾವಿರದ ಕವನಗಳ ಸಂಪುಟದ ಯೋಜನೆಯಲ್ಲಿ ತೊಡಗಿರುವ ಕ್ರೈಸ್ತ ಕಾಲೇಜಿನ ಕನ್ನಡ ಸಂಘದ ಮಹತ್ಕಾರ್ಯದೊಂದಿಗೆ ಹುಬ್ಬಳ್ಳಿಯ 'ಮಹಿಳಾ ಸಾಹಿತ್ಯಿಕಾ', ಹೆಗ್ಗೋಡಿನ 'ಅಕ್ಷರ ಚಿಂತನ ಮಾಲೆ' ಹಾಗೂ ಪುತ್ತೂರಿನ ಕರ್ನಾಟಕ ಸಂಘದಂತಹ ಖಾಸಗಿ ಸಂಸ್ಥೆಗಳ ಸದಭಿರುಚಿಯ ಸಾಹಿತ್ಯ ಸೇವೆಯನ್ನು ಈ ಸಂದರ್ಭದಲ್ಲಿ ನೆನೆಯುವುದು ಅಗತ್ಯ.

ಧಾರವಾಡದ ಸುವಿರೇಕ ಪ್ರಕಾಶನ ಈಚೆಗೆ ಕನ್ನಡ ಪತ್ತೇದಾರಿ ಸಾಹಿತ್ಯದ ಶತಮಾನೋತ್ಸವವನ್ನು ಆಚರಿಸಿ, ಪತ್ತೇದಾರಿ ಸಾಹಿತ್ಯವೂ ಸಾಹಿತ್ಯದ ಒಂದು ಅಂಗ ಎಂಬುದರ ಕಡೆಗೆ ವಿಮರ್ಶಕರ ಗಮನ ಹರಿಯುವಂತೆ ಮಾಡಿದೆ. ನಾಡಿನ ಒಳಗೂ ಹೊರಗೂ ಅನೇಕ ಕಡೆಗಳಲ್ಲಿ ಸಾಹಿತ್ಯಿಕ-ವೈಚಾರಿಕ ವೇದಿಕೆಗಳೂ, ಚಿಕ್ಕಚಿಕ್ಕ ಪತ್ರಿಕೆಗಳೂ ಅಲ್ಲಲ್ಲಿಯ ಸಾಹಿತ್ಯಿಕ ವಾತಾವರಣವನ್ನು ಜೀವಂತವಾಗಿಡಲು ನೆರವಾಗುತ್ತಿವೆ. ಹಿಂದೆ 'ಗ್ರಂಥ ಲೋಕ' ಇಟ್ಟುಕೊಂಡಿದ್ದ ಉದ್ದೇಶವನ್ನು ಇನ್ನಿಷ್ಟು ವ್ಯಾಪಕವಾಗಿ ಹಾಗೂ ಸಮರ್ಥವಾಗಿ ನಿರ್ವಹಿಸುತ್ತಿರುವ 'ಪುಸ್ತಕ ಮಾಹಿತಿ' (ಹಂಪಿ ಕನ್ನಡ ವಿಶ್ವವಿದ್ಯಾಲಯ) ಹಾಗೂ 'ವಿಜ್ಞಾನ ಸಂಗಾತಿ' ನಿಯತಕಾಲಿಕೆಗಳು ಉಪಯುಕ್ತ ಕಾರ್ಯಗೈಯುತ್ತಿವೆ. ಸೃಜನಶೀಲ ಕಲೆಗಳ ದ್ವೈಮಾಸಿಕ 'ಸಂಕುಲ'ಕ್ಕೆ ಇನ್ನೂ ಹೆಚ್ಚಿನ ಪ್ರೋತ್ಸಾಹ ದೊರೆಯುವುದು ಅಗತ್ಯವಾಗಿದೆ. ೪೫ ವರ್ಷಗಳಿಂದ ನಿರಂತರವಾಗಿ ಪ್ರಕಟವಾಗುತ್ತ, ಹಾಸ್ಯದ ಹಿತಕರ ವಾತಾವರಣವನ್ನು ನಿರ್ಮಿಸಿಕೊಂಡು ಬಂದಿರುವ 'ವಿನೋದ' ಚಿನ್ನದ ಹಬ್ಬವನ್ನು ಆಚರಿಸಿ ಮುನ್ನಡೆಯುವಂತೆ ಕನ್ನಡಿಗರು ನೋಡಿಕೊಳ್ಳಬೇಕು. ಪ್ರಾಥಮಿಕ ಶಿಕ್ಷಣ ಇಲಾಖೆಯ 'ಕಲಿ-ನಲಿ' ದ್ವೈಮಾಸಿಕ, ಶಿಕ್ಷಣ ವಿಧಾನ ಹಾಗೂ ಶಿಕ್ಷಕರ ಮನೋಭಾವದಲ್ಲಿ ಬದಲಾವಣೆಯನ್ನು ತರಬಹುದಾದ ಒಂದು ಒಳ್ಳೆಯ ಪ್ರಯತ್ನವಾಗಿದೆ.

ಇಷ್ಟೆಲ್ಲ ಕೆಲಸ ನಡೆದಿರುವಾಗ ಒಳ್ಳೆಯ ಪುಸ್ತಕಗಳು ಓದುಗರ ಕೈಗೆ ವಿಲಂಬವಿಲ್ಲದೆ ದೊರೆಯುವ ವ್ಯವಸ್ಥೆ ಇನ್ನೂ ಸರಿಯಾಗಿ ಆಗುತ್ತಿಲ್ಲ. ಕನ್ನಡ ಪುಸ್ತಕ ಪ್ರಾಧಿಕಾರ ಇದನ್ನೇ ತನ್ನ ಆದ್ಯ ಕರ್ತವ್ಯವೆಂದು ಪರಿಗಣಿಸಿ ಇನ್ನಿಷ್ಟು ವೇಗವಾಗಿ ಕಾರ್ಯ ಪ್ರವೃತ್ತವಾದರೆ ಇದಕ್ಕೊಂದು ಚಾಲನೆ ದೊರೆತಂತಾಗುತ್ತದೆ. ಹಾಗೆಯೇ ಪ್ರಾಧಿಕಾರ ಪ್ರತಿ ತಿಂಗಳು 'ಸಂಕ್ಷಿಪ್ತ ಕೃತಿ ವಿವರಣ ಸೂಚಿ'ಯೊಂದನ್ನು ಪ್ರಕಟಿಸುವುದಾದರೆ ಪುಸ್ತಕಗಳ ಬಳಕೆದಾರರಿಗೆಲ್ಲ ಹೆಚ್ಚಿನ ಅನುಕೂಲವನ್ನು ಒದಗಿಸಿಕೊಟ್ಟಂತಾಗುತ್ತದೆ. ತಾಂತ್ರಿಕ ಹಾಗೂ ಇಲೆಕ್ಟ್ರಾನಿಕ್ ಕ್ಷೇತ್ರದಲ್ಲಿನ ಕ್ರಾಂತಿಯ ಧಾವಂತದಲ್ಲಿ ಪುಸ್ತಕ ಸಂಸ್ಕೃತಿ ಮರೆಯಾಗದಂತೆ ನೋಡಿಕೊಳ್ಳುವುದು ಸಾಹಿತ್ಯ ಪ್ರೇಮಿಗಳ ಹಾಗೂ ಜ್ಞಾನ ಪಿಪಾಸುಗಳ ಕರ್ತವ್ಯವಾಗಿದೆ.

೬

ಕನ್ನಡವನ್ನು ಕಟ್ಟುವ ಕೆಲಸವಂತೂ ಸದಾ ನಮ್ಮ ಕಣ್ಣಮುಂದೆ ಇರಬೇಕಾದದ್ದು. 'ಕನ್ನಡ ನಾಡು ಕಟ್ಟುವುದೆಂದರೆ ಬರಿ ರಾಜಕೀಯ-ಭೌಗೋಳಿಕ ಸೀಮಾರೇಖೆಯಲ್ಲ; ಅದು ಜೀವಂತ, ಚಿಂತನಶೀಲ, ಸೃಜನಶೀಲ ಜನಪದ ಸೃಷ್ಟಿ'. ಕನ್ನಡದ ಸರ್ವತೋಮುಖ ಪ್ರಗತಿಗೆ ಕೈಕೊಳ್ಳಬೇಕಾದ ಕರ್ತವ್ಯಗಳ ಬಗ್ಗೆ ಕಾಲಕಾಲಕ್ಕೆ ಹಿರಿಯರು, ವಿಚಾರಶೀಲರು ಪ್ರಸ್ತಾಪಿಸುತ್ತ, ಮಾರ್ಗದರ್ಶನ ಮಾಡುತ್ತ ಅವಶ್ಯ ಬಿದ್ದಾಗ ಹೋರಾಟದ ಕಣಕ್ಕಿಳಿದು ಕ್ರಿಯಾಶೀಲರಾಗಿ ಕೆಲಸ ಮಾಡುತ್ತ ಬಂದಿದ್ದಾರೆ. ನಾನು ಮತ್ತೆ ಅವನ್ನಿಲ್ಲಿ ಪುನರುಕ್ತಿಗೊಳಿಸಬಯಸುವುದಿಲ್ಲ. ಕನ್ನಡದ ಕೆಲಸಗಳನ್ನು ಆಡದೆ ಮಾಡಿ, ರೂಢಿಯಲ್ಲಿ ಉತ್ತಮವೆನಿಸಿಕೊಳ್ಳುವಂಥ ಸರಕಾರ ಇನ್ನೂ ಕನಸಾಗಿಯೇ ಉಳಿದಿದೆ. ಕಳೆದ ದಶಕಗಳಲ್ಲಿ ರಾಜ್ಯ ಸರಕಾರಗಳು ಬದಲಾದರೂ ಕನ್ನಡದ ಅಭಿವೃದ್ಧಿ ಮತ್ತು ಕನ್ನಡದ ಸ್ಥಿತಿಯಲ್ಲಿ ಹೇಳಿಕೊಳ್ಳುವಂಥ ಯಾವ ಬದಲಾವಣೆಗಳೂ ಆಗಿಲ್ಲ. ಕನ್ನಡ ಚಳವಳಿಗೆ ಗೌರವ ಮತ್ತು ವಿಶ್ವಾಸಾರ್ಹತೆಯನ್ನು ತಂದು ಕೊಟ್ಟ ವ್ಯಕ್ತಿಗಳನ್ನು, ಸಂಘ ಸಂಸ್ಥೆಗಳನ್ನು ಸರಕಾರ ಗೌರವದಿಂದ ಕಾಣಬೇಕಲ್ಲದೆ ಕನ್ನಡದ ಹೊಣೆಗಾರಿಕೆಯ ಮಹತ್ವದ ಕೆಲಸಗಳನ್ನು ಅವರಿಗೆ ವಹಿಸಬೇಕು. ಕನ್ನಡ ಶಕ್ತಿ ಕೇಂದ್ರ (ಬೆಂಗಳೂರು), ಅ.ಕ. ಕೇಂದ್ರ ಕನ್ನಡ ಕ್ರಿಯಾ ಸಮಿತಿ (ಧಾರವಾಡ), ಉತ್ತರ ಕರ್ನಾಟಕ ಅಭಿವೃದ್ಧಿಪರ ಹೋರಾಟ ವೇದಿಕೆ (ಹುಬ್ಬಳ್ಳಿ), ಕನ್ನಡ ಸಂಘರ್ಷ ಸಮಿತಿ (ಬೆಂಗಳೂರು) ಮೊದಲಾದ ಇನ್ನೂ ಕೆಲವು ಕನ್ನಡ ಪರ ಸಂಘ ಸಂಸ್ಥೆಗಳು ಕನ್ನಡದ ಜಾಗ್ರತಿಯನ್ನು ನಿರಂತರವಾಗಿ ಮುನ್ನಡೆಸಿವೆ. ನಾಡಿನ ಹಿತರಕ್ಷಣೆಯ ಪ್ರಶ್ನೆ ಬಂದಾಗ ಈ ಬಗೆಯ ಎಲ್ಲ ಸಂಘಟನೆಗಳ ಧ್ವನಿ ಒಂದೇ ಆಗಿ ಮೊಳಗಬೇಕು.

ಕರ್ನಾಟಕದ ಎಷ್ಟೋ ಭಾಗಗಳು ಇಂದಿಗೂ ಅಭಿವೃದ್ಧಿಯಿಂದ ವಂಚಿತವಾಗಿ ಪ್ರಾದೇಶಿಕ ಅಸಮತೋಲನದಿಂದ ನರಳುವಂತಾಗಿವೆ. ಕನ್ನಡದ ಹಾಗೂ ಕರ್ನಾಟಕದ ಎಲ್ಲ ತೊಂದರೆಗಳಿಗೆ ಬೆಂಗಳೂರು ರಾಜಧಾನಿಯಾಗಿರುವುದೇ ಕಾರಣವೆಂಬುದು ಇಂದು ಕಣ್ಣಿಗೆ ಹೊಡೆದು ಕಾಣುತ್ತಿದೆ. ವೈದ್ಯಕೀಯ ವಿಶ್ವವಿದ್ಯಾಲಯಕ್ಕೆ ದಾವಣಗೆರೆ ಅಥವಾ ಬೆಳಗಾವಿ ಯೋಗ್ಯ ಸ್ಥಳವಾಗಿರಲಿಲ್ಲವೆ? ರೈಲ್ವೆ ನೈಋತ್ಯ ವಲಯದ ಸ್ಥಾಪನೆಗೆ ಸರ್ವಾನುಕೂಲವಾದ ಹುಬ್ಬಳ್ಳಿಯನ್ನು ಕಡೆಗಣಿಸುವುದು

ಯಾವ ನ್ಯಾಯ? ಹೈಕೋರ್ಟ್ ಪೀಠವನ್ನು ಉತ್ತರ ಕರ್ನಾಟಕದಲ್ಲಿ ಪ್ರಾರಂಭಿಸಲು ಏಕೆ ಪ್ರಾಮಾಣಿಕವಾದ ಪ್ರಯತ್ನ ನಡೆಯುತ್ತಿಲ್ಲ? ಎಲ್ಲ ಅಕಾಡೆಮಿಗಳನ್ನು ಒಳಗೊಳ್ಳುವ ಕಟ್ಟಡ ಸಮುಚ್ಚಯವನ್ನು ಬೆಂಗಳೂರಲ್ಲಿ ಕಟ್ಟುವ ಬದಲು ಕೆಲವು ಅಕಾಡೆಮಿಗಳನ್ನಾದರೂ ಧಾರವಾಡ-ಹುಬ್ಬಳ್ಳಿ ನಡುವೆ ಸ್ಥಾಪಿಸುವುದು ಅವಶ್ಯವಾಗಿದೆ. ಭೋಪಾಲದ ಭಾರತ ಭವನದ ಮಾದರಿಯಲ್ಲಿ ಅಥವಾ ಅದಕ್ಕೂ ಉತ್ತಮವಾದ ರೀತಿಯಲ್ಲಿ ಅಂಥ ಒಂದು ಭವನದ ನಿರ್ಮಾಣ ಈ ಭಾಗದಲ್ಲಿ ಆಗುವುದು ಅಪೇಕ್ಷಣೀಯ.

ಕನ್ನಡಿ ಹರಳನ್ನು ಎಸೆದ ಮೇಲೆ ಬೆಸೆದರೂ ಅದು ಕೂಡಲಾರದೆನ್ನುವ ಸತ್ಯವನ್ನು ನಮ್ಮ ರಾಜಕಾರಣಿಗಳು ಬೇಗ ಮನವರಿಕೆ ಮಾಡಿಕೊಂಡು ನಾಡಿನ ಏಕತೆಯ ದೃಷ್ಟಿಯಿಂದ ಆಗಬಹುದಾದ ಅನಾಹುತವನ್ನು ತಪ್ಪಿಸುವ ಮುತ್ಸದ್ದಿತನವನ್ನು ತೋರಿಸುತ್ತಾರೆಂದು ಆಶಿಸೋಣ.

ಕರ್ನಾಟಕದಲ್ಲಿ ಭಾಷಾ ಅಲ್ಪಸಂಖ್ಯಾತರಿಗೆ ಕೊಡುತ್ತಿರುವ ಸೌಲಭ್ಯಗಳು ಬೇರೆ ಯಾವ ರಾಜ್ಯದಲ್ಲಿಯೂ ಕಂಡು ಬರುವುದಿಲ್ಲವೆನ್ನುವುದನ್ನು ಭಾಷಾ ಆಯೋಗ ಒಪ್ಪಿಕೊಂಡಿದೆ. ಧಾರವಾಡ, ಕಲುಬುರ್ಗಿ ಆಕಾಶವಾಣಿ ನಿಲಯಗಳು ನಿಷ್ಠೆಯಿಂದ ಮರಾಠಿ ಕಾರ್ಯಕ್ರಮಗಳನ್ನು ಬಿತ್ತರಿಸುವುದಷ್ಟೇ ಅಲ್ಲದೆ ವಂದನಾ ಗೀತಗಳಲ್ಲಿ ನೆರೆಹೊರೆಯ ಭಾಷಾ ಗೀತಗಳಿಗೆ ಧಾರಾಳವಾಗಿ ಎಡೆಗೊಡಲಾಗುತ್ತಿದೆ. ನೆರೆಹೊರೆಯ ರಾಜ್ಯಗಳೂ ಈ ನೀತಿಯನ್ನು ಅನುಸರಿಸಿದರೆ ಪರಸ್ಪರ ಬಾಂಧವ್ಯ ಬೆಳೆಯಲು ಸಾಧ್ಯ. ಪುಣೆ, ಸಾಂಗಲಿ, ಸೊಲ್ಲಾಪುರ ಆಕಾಶವಾಣಿ ನಿಲಯಗಳಲ್ಲಿ ಕನ್ನಡದ ಗಾಳಿ ಕೂಡ ಸುಳಿಯುವುದಿಲ್ಲ. ಕನ್ನಡ ಸಾಹಿತ್ಯ ಪರಿಷತ್ತು ಹಾಗೂ ಕರ್ನಾಟಕ ಸರಕಾರ ಕೂಡಿಯೇ ಈ ದಿಸೆಯಲ್ಲಿ ಸೂಕ್ತ ಕ್ರಮಕೈಗೊಳ್ಳಲು ಮುಂದಾಗಬೇಕು. ಪುಣೆಯ ಮರಾಠಿ-ಕನ್ನಡ ಸ್ನೇಹವರ್ಧನ ಕೇಂದ್ರದ ಚಟುವಟಿಕೆಗಳು ಈ ದಿಸೆಯಲ್ಲಿ ಹೆಚ್ಚಿನ ಪ್ರೋತ್ಸಾಹಕ್ಕೆ ಅರ್ಹವಾಗಿವೆ.

ಕರ್ನಾಟಕದ ಗಡಿಭಾಗದ ಊರುಗಳಲ್ಲಿ ಕನ್ನಡ ಶಿಕ್ಷಣ ಕುಗ್ಗುತ್ತ ನಡೆದಿದೆ. ಅಲ್ಲಿ ಕನ್ನಡ ಶಾಲೆಗಳನ್ನು ತೆರೆದು, ಇತರ ಶಾಲೆಗಳಿಂತ ಅವು ಬಲಗೊಳ್ಳುವಂತೆ ನೋಡಿಕೊಂಡು ಸಾಂಸ್ಕೃತಿಕ ಚಟುವಟಿಕೆಗಳು ನಿರಂತರವಾಗಿ ನಡೆಯುವುದಾದರೆ ಅಲ್ಲಿ ಕನ್ನಡದ ವಾತಾವರಣ ಉಳಿದೀತು. ಪಾಟೀಲ ಪುಟ್ಟಪ್ಪನವರು ಅಧ್ಯಕ್ಷರಾಗಿದ್ದ ಕನ್ನಡ ಕಾವಲು ಸಮಿತಿ ಈ ದಿಸೆಯಲ್ಲಿ ಸಾಕಷ್ಟು ಕಾರ್ಯಗೈದದ್ದನ್ನು ಮರೆಯುವಂತಿಲ್ಲ. ಕನ್ನಡ ಅಭಿವೃದ್ಧಿ ಪ್ರಾಧಿಕಾರ ನೂತನ ಅಧ್ಯಕ್ಷರ ಸಾರಥ್ಯದಲ್ಲಿ ಶಾಸನಬದ್ಧ ಅಧಿಕಾರವನ್ನು ಪಡೆದು ಹಿಂದೆ ನಡೆದ ಕಾರ್ಯಕಲಾಪಗಳ ಅನುಭವದ ಹಿನ್ನೆಲೆಯಲ್ಲಿ ತನ್ನ ಕ್ರಿಯಾಶೀಲತೆಯನ್ನು ಹೆಚ್ಚಿಸಿಕೊಂಡು ಕನ್ನಡದ ಕೆಲಸಗಳಿಗೆ ತೀವ್ರ ಚಾಲನೆಯನ್ನು ಒದಗಿಸುವುದೆಂದು ಆಶಿಸಲಾಗಿದೆ. ದೂರದರ್ಶನದಲ್ಲಿ ಕನ್ನಡಕ್ಕಾಗಿ ಪ್ರತ್ಯೇಕ ಚಾನೆಲ್ ಪ್ರಾರಂಭಿಸುವಂತೆ ಕೇಂದ್ರವನ್ನು ಒತ್ತಾಯಿಸುವುದು ಹಾಗೂ ಕರ್ನಾಟಕ ಲೋಕ ಸೇವಾ ಆಯೋಗದ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಕನ್ನಡ ಪತ್ರಿಕೆಯನ್ನು ಕಡ್ಡಾಯವಾಗಿಸುವುದು ಅತ್ಯಂತ ಅಗತ್ಯವಾಗಿದೆ.

ಕರ್ನಾಟಕದಿಂದ ಹೊರಗುಳಿದ ಗಡಿನಾಡ ಕನ್ನಡಿಗರ ಸಾಂಸ್ಕೃತಿಕ ಉನ್ನತಿಗೆ ಸ್ಪಷ್ಟವಾದ ಮತ್ತು ಬಲವಾದ ಸಾಂಸ್ಕೃತಿಕ ನೀತಿಯೊಂದನ್ನು (Cultural Policy) ಕರ್ನಾಟಕ ಸರಕಾರ ಕೂಡಲೇ ರೂಪಿಸಬೇಕು. ಗಡಿನಾಡ ಕನ್ನಡಿಗರನ್ನು ಹಾಗೂ ಹೊರನಾಡ ಕನ್ನಡಿಗರನ್ನು ಒಂದೇ ಮಾನದಂಡದಿಂದ ಅಳೆಯುವ ಧೋರಣೆ ತಪ್ಪು. ಗಡಿನಾಡ ಕನ್ನಡಿಗರು ಮುಂದೆ ಹಲವಾರು ತಲೆಮಾರುಗಳತನಕ ಕನ್ನಡ ಸಂಸ್ಕೃತಿಯನ್ನು ಉಳಿಸಿಕೊಂಡು ಬರಲು ಕರಾರುವಾಕ್ಕಾದ ಮತ್ತು ಯೋಜನಾಬದ್ಧವಾದ ಕಾರ್ಯಕ್ರಮವನ್ನು ಹಾಕಿಕೊಳ್ಳುವುದು ಹೇಗೆ ಅದರ ಕರ್ತವ್ಯವೋ ಅಂತೆಯೇ ಅದಕ್ಕೆ ಅನುವು ಮಾಡಿಕೊಡುವುದು ಮತ್ತು ಸೂಕ್ತ ನೀತಿಗಳ ಆಧಾರದಲ್ಲಿ ಅದನ್ನು ಬೆಂಬಲಿಸುವುದು ಕರ್ನಾಟಕ ಸರಕಾರದ ಹೊಣೆಗಾರಿಕೆಯೂ ಹೌದು. ೧೯೫೬ರಲ್ಲಿ ಬೇಜವಾಬ್ದಾರಿತನ ಹಾಗೂ ಇಚ್ಛಾಶಕ್ತಿಯ ಕೊರತೆಯಿಂದ ಕರ್ನಾಟಕ ಕಳೆದುಕೊಂಡ ಹಲವು ಕನ್ನಡ ಪ್ರದೇಶಗಳ ಕುರಿತು ಇಷ್ಟನ್ನಾದರೂ ಈಗ ಮಾಡಬೇಕಿದೆ. ಕನ್ನಡ ಅಭಿವೃದ್ಧಿ ಪ್ರಾಧಿಕಾರದ ರೀತಿಯಲ್ಲಿ ಗಡಿನಾಡು ಕನ್ನಡ ಪ್ರದೇಶಗಳ ಅಭಿವೃದ್ಧಿ ಪ್ರಾಧಿಕಾರವೊಂದನ್ನು ಸ್ಥಾಪಿಸಿ ಈ ನಿಟ್ಟಿನಲ್ಲಿ ಪ್ರಯತ್ನಿಸುವುದು ಸೂಕ್ತ. ಇಲ್ಲವಾದಲ್ಲಿ ಆಗಾಗ ಅಷ್ಟಿಷ್ಟು ಮೊತ್ತವನ್ನು ದೇಣಿಗೆ ನೀಡಿ ಕೈತೊಳೆದುಕೊಂಡರೆ ಏನನ್ನೂ ಮಾಡಿದಂತಾಗುವುದಿಲ್ಲ.

ಕನ್ನಡಿಗರು ಹೊಸದನ್ನು ಗಳಿಸುವುದಿರಲಿ, ಇದ್ದುದನ್ನು ಕಳೆದುಕೊಳ್ಳದ ಹಾಗಾದರೂ ನೋಡಿಕೊಳ್ಳಬೇಕಲ್ಲವೆ? ಹಾಗಾದರೆ ವ್ಯವಹಾರದಲ್ಲಿ ಕನ್ನಡ ಅಂಕಿಗಳಿಗೂ ಪ್ರಾಧಾನ್ಯ ನೀಡಬೇಕು. ಕನ್ನಡ ಮಾಧ್ಯಮದ ತರಗತಿಗಳಲ್ಲಿ ಗಣಿತವನ್ನು ಕನ್ನಡ ಅಂಕಿಗಳಲ್ಲಿಯೇ ಕಲಿಸಬೇಕು. ಈಗ ಮಹಾರಾಷ್ಟ್ರದಲ್ಲಿ ೧ ರಿಂದ ೪ನೇ ವರ್ಗದವರೆಗೆ ಕನ್ನಡ ಮಾಧ್ಯಮದ ಮಕ್ಕಳಿಗೆ ಕನ್ನಡ ಅಂಕಿಗಳಲ್ಲಿಯೇ ಗಣಿತವನ್ನು ಕಲಿಸುವ ಕ್ರಮವಿದೆ. ಸಮೂಹ ಮಾಧ್ಯಮಗಳು, ಕನ್ನಡ ಪತ್ರಿಕೆ, ದೂರದರ್ಶನ ಮೊದಲಾದವುಗಳಲ್ಲಿ ಕನ್ನಡ ಅಂಕಿಗಳನ್ನೇ ಬಳಸಬೇಕು. ರಾಜ್ಯದಲ್ಲಿ ನೋಂದಣಿಯಾದ ವಾಹನಗಳ ಮೇಲೆ ಕನ್ನಡದಲ್ಲಿ ಪ್ರಧಾನವಾಗಿ ನೋಂದಣಿ ಫಲಕಗಳಿರಬೇಕು. ಇದನ್ನು ಬೆಂಗಳೂರು ನಗರ ಸಾರಿಗೆ, ಧಾರವಾಡ-ಹುಬ್ಬಳ್ಳಿ ನಗರ ಸಾರಿಗೆ, ಧಾರವಾಡ ಜಿಲ್ಲೆಯ ವಾಹನಗಳು ಬಳಕೆಗೆ ತಂದಿರುವುದು ಸ್ವಾಗತಾರ್ಹ. ಕನ್ನಡ ಅಂಕಿಗಳ ಬಳಕೆಯನ್ನು ಹಳೆಯ ಮೈಸೂರು, ಅದರಲ್ಲೂ ಬೆಂಗಳೂರು ತರುವ ಪ್ರತಿರೋಧ ಖಂಡನಾರ್ಹ. ಮಹಾರಾಷ್ಟ್ರದವರು ಅಂತಾರಾಷ್ಟ್ರೀಯ ನಗರ 'ಬಾಂಬೆ'ಯನ್ನು 'ಮುಂಬಯಿ', 'ಆಮಚಿ ಮುಂಬಯಿ' ಎಂದು ಆಗಿಸಿಕೊಂಡಿರುವುದು ಸಾಧ್ಯವಾದರೆ ಕರ್ನಾಟಕದ ರಾಜಧಾನಿ ಕನ್ನಡದ ಸಂಸ್ಕೃತಿಯ ಪ್ರತೀಕವಾಗಿರಬಾರದೆ? ಮುಂಬಯಿಯನ್ನು ಒಳಗೊಂಡು ಮಹಾರಾಷ್ಟ್ರ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ ಬಸ್ಸುಗಳ ತಿಕೀಟುಗಳಲ್ಲಿ ಇಂಗ್ಲಿಷ್ ಅಂಕಿಗಳೇ ಇಲ್ಲದಿರುವುದನ್ನು ಕನ್ನಡಿಗರು ಕಣ್ತೆರೆದು ನೋಡಬೇಕು.

ಕನ್ನಡ ಕರ್ನಾಟಕದ ಉಸಿರಾಗಬೇಕಾದರೆ ಶಾಲಾ ಹಂತದಿಂದಲೇ ಕನ್ನಡ ಭಾಷಾ ಬೋಧನ ಕ್ರಮದಲ್ಲಿ ಸುಧಾರಣೆಗಳನ್ನು ಕೈಗೊಳ್ಳುವುದು ಅವಶ್ಯವಿದೆ. ಇಂಗ್ಲಿಷ್, ಹಿಂದಿ ಮುಂತಾದ

ಭಾಷೆಗಳನ್ನು ಪೂರ್ವ ಪ್ರಾಥಮಿಕ, ಪ್ರಾಥಮಿಕ, ಪ್ರೌಢ, ಪದವಿಪೂರ್ವ, ಪದವಿ ಮಟ್ಟ ಮತ್ತು ಸ್ನಾತಕೋತ್ತರ ಹಂತಗಳಲ್ಲಿ ಹೇಗೆ ಬೋಧಿಸಬೇಕು ಎಂಬ ಬಗ್ಗೆ ತಿಳಿವಳಿಕೆ ನೀಡುವ ಅನೇಕ ಸಂಸ್ಥೆಗಳಿವೆ. ಕೇಂದ್ರೀಯ ಮತ್ತು ಪ್ರಾದೇಶಿಕ ಭಾಷೆ ಬೋಧನ ಸಂಸ್ಥೆಗಳನ್ನು ಇಂಗ್ಲಿಷ್ ಮತ್ತು ಹಿಂದೀ ಭಾಷೆಗಳು ಹೊಂದಿವೆ. ಕಳೆದ ನಾಲ್ಕು ದಶಕಗಳಿಂದ ಈ ಸಂಸ್ಥೆಗಳಲ್ಲಿ ಇಂಗ್ಲಿಷ್, ಹಿಂದಿ ಭಾಷಾ ಬೋಧನೆಯ ಬಗೆಗೆ ಅಧ್ಯಯನ, ಸಂಶೋಧನೆ ಮತ್ತು ತರಬೇತಿಗಳು ಅವ್ಯಾಹತವಾಗಿ ಕೇಂದ್ರ ಮತ್ತು ರಾಜ್ಯ ಸರಕಾರಗಳ ಪುರಸ್ಕಾರದಿಂದ ಜರುಗುತ್ತಿವೆ. ದಕ್ಷಿಣ ಭಾರತದ ಹಿಂದೀ ಪ್ರಚಾರ ಸಭಾದಂಥ ಸಂಸ್ಥೆಗಳಿಗೆ ವಿಶ್ವವಿದ್ಯಾಲಯದ ಸ್ಥಾನಮಾನಗಳಿದ್ದು ಸರಕಾರಗಳ ಅನುದಾನದಿಂದ ಹಿಂದೀ ಅಧ್ಯಯನದ ಬಗೆಗೆ ಈ ಸಂಸ್ಥೆ ಗಣನೀಯ ಕಾರ್ಯ ಮಾಡುತ್ತಿದೆ. ಕರ್ನಾಟಕ ರಾಜ್ಯ ಸರಕಾರವೇ ಆರು ಇಂಗ್ಲಿಷ್ ಭಾಷಾ ಬೋಧನಾ ತರಬೇತಿ ಸಂಸ್ಥೆಗಳನ್ನು ನಡೆಸುತ್ತಿದೆ. ಆಧುನಿಕ ಕಲಿಯುವ ಪದ್ಧತಿಗಳಿಗನುಗುಣವಾಗಿ, ಶಾಸ್ತ್ರೀಯವಾಗಿ ಶಿಕ್ಷಣ ತಂತ್ರಜ್ಞಾನವನ್ನು ಅಳವಡಿಸಿ ಕನ್ನಡವನ್ನು ವಿವಿಧ ಶಾಲಾ ಹಂತಗಳಲ್ಲಿ ಹೇಗೆ ಬೋಧಿಸಬೇಕು? ಎಂಬ ಬಗೆಗೆ ತಿಳಿವಳಿಕೆ ನೀಡುವ ಒಂದಾದರೂ ಸ್ವತಂತ್ರ ಸಂಸ್ಥೆ ನಮ್ಮಲ್ಲಿಲ್ಲ. ವಿಶ್ವವಿದ್ಯಾಲಯಗಳ ಕನ್ನಡ ಅಧ್ಯಯನ ಸಂಸ್ಥೆಗಳು ಭಾಷೆ, ಸಾಹಿತ್ಯ, ಸಂಶೋಧನೆಗಳತ್ತ ವಿಶೇಷ ಗಮನ ಹರಿಸಿರುವುದು ಸಹಜವೇ ಆದರೂ ಕನ್ನಡ ಭಾಷಾ ಬೋಧನೆಯ ವಿಧಿ ವಿಧಾನಗಳನ್ನು ಕುರಿತು ಯಾವ ಕೆಲಸವನ್ನೂ ಮಾಡಿಲ್ಲ. ಬಿ.ಇಡಿ. ಮತ್ತು ಟಿ.ಸಿ.ಎಚ್. ಶಿಕ್ಷಕ ತರಬೇತಿಗಳಲ್ಲಿಯ ಕನ್ನಡ ಭಾಷಾ ಬೋಧನೆ ಪರಿಮಿತ ಅವಧಿಗಳಿಂದಾಗಿ, ವರ್ಗ ಪಾಠಗಳಿಗೆ ಅಲ್ಲಿ ನೀಡುವ ಒತ್ತಡಗಳಿಂದಾಗಿ ಅದು ಸಮಗ್ರವಾಗಿ ಹಾಗೂ ವೈಜ್ಞಾನಿಕವಾಗಿ ಸಾಗುತ್ತಿಲ್ಲ.

ಮಾನಸಿಕ ಬೆಳವಣಿಗೆ, ಸುಸಂಗತ ಚಿಂತನೆ ಮತ್ತು ಅಭಿವ್ಯಕ್ತಿ ಸಾಮರ್ಥ್ಯಗಳ ವಿಕಾಸದ ತಳಹದಿಯೇ ಮಾತೃಭಾಷಾ ಬೋಧನೆಯಲ್ಲಿ ಅಡಕವಾಗಿದೆ. ಕನ್ನಡಿಗರಲ್ಲಿ ಸ್ವತಂತ್ರ ವ್ಯಕ್ತಿತ್ವ ಮತ್ತು ಕನ್ನಡ ಸಾಹಿತ್ಯಾಭಿರುಚಿ ಬೆಳೆಯಬೇಕಾದರೆ ಶಾಲಾ ಹಂತಗಳಲ್ಲಿ ಕನ್ನಡ ಭಾಷಾ ಬೋಧನೆಯ ಆಳ, ಅಗಲಗಳು ವಿಸ್ತಾರಗೊಳ್ಳಬೇಕು. ಸಮಗ್ರ ಕರ್ನಾಟಕದ ಚಿಂತನ ಕ್ರಮದ ಬೀಜ ಕನ್ನಡ ಭಾಷಾ ಬೋಧನ ಕ್ರಮದಲ್ಲಿ ಸುಪ್ತವಾಗಿ ಅಂತರ್ಗತವಾಗಿದೆ. ಕಾರಣ ಕನ್ನಡ ಭಾಷಾ ಬೋಧನ, ಅಧ್ಯಯನ, ಸಂಶೋಧನ ಮತ್ತು ತರಬೇತಿ ಸಂಸ್ಥೆಯೊಂದನ್ನು ಶೀಘ್ರವೇ ಸ್ಥಾಪಿಸುವ ಅವಶ್ಯಕತೆಯಿದೆ. ಕೇಂದ್ರ ಸರಕಾರದ ಭಾಷಾ ನೀತಿ ಕೂಡ ಇಂತಹ ಪ್ರಾದೇಶಿಕ ಭಾಷಾ ಅಭಿವೃದ್ಧಿಯ ಕಾರ್ಯಕ್ರಮಗಳನ್ನು ಪುರಸ್ಕರಿಸುತ್ತದೆ. ಕರ್ನಾಟಕ ಸರಕಾರ ಈ ದಿಸೆಯಲ್ಲಿ ಕೂಡಲೆ ಕಾರ್ಯ ಪ್ರವೃತ್ತವಾಗಬೇಕು. ಧಾರವಾಡದಲ್ಲಿರುವ ಸರಕಾರಿ ಶಿಕ್ಷಕರ ಕೇಂದ್ರ ಕಾರಣಾಂತರಗಳಿಂದ ಕಳೆದ ಎರಡು ಮೂರು ವರ್ಷಗಳಿಂದ ಸ್ಥಗಿತಗೊಂಡಿದ್ದು, ಈ ಸಂಸ್ಥೆಯನ್ನೇ ಕನ್ನಡ ಭಾಷಾ ಬೋಧನ, ಅಧ್ಯಯನ, ಸಂಶೋಧನ ಮತ್ತು ತರಬೇತಿ ಸಂಸ್ಥೆಯನ್ನಾಗಿ ಮಾರ್ಪಡಿಸುವದರಿಂದ ಸರಕಾರಕ್ಕೆ ಹೆಚ್ಚಿನ ವೆಚ್ಚವಿಲ್ಲದೆ ಒಂದು ಹೊಸ ಮಹತ್ವದ ಸಂಸ್ಥೆಯೊಂದನ್ನು ಹುಟ್ಟುಹಾಕಿದಂತಾಗುತ್ತದೆ.

ಈ ವರ್ಷದ ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಕನ್ನಡ ಮಾಧ್ಯಮದ ವಿದ್ಯಾರ್ಥಿಗಳಿಗೆ ಪ್ರತ್ಯೇಕವಾಗಿ ಶ್ರೇಯಾಂಕ ನೀಡುವ ಪರಿಪಾಠ ಪ್ರಾರಂಭಿಸಿರುವುದರಿಂದ ಕನ್ನಡ ಶಾಲೆಗಳಿಗೆ ವಿಶೇಷ ಪ್ರೋತ್ಸಾಹ ನೀಡಿದಂತಾಗಿದೆಯಲ್ಲದೆ ಕನ್ನಡ ಮಾಧ್ಯಮದಲ್ಲಿ ಕಲಿಯುವ ನಗರ ಹಾಗೂ ಗ್ರಾಮೀಣ ವಿದ್ಯಾರ್ಥಿಗಳ ಆತ್ಮವಿಶ್ವಾಸವನ್ನು ಹೆಚ್ಚಿಸಿದಂತಾಗಿದೆ. ಇದು ನಿಜಕ್ಕೂ ಸ್ತುತ್ಯ ಉಪಕ್ರಮ.

ಕರ್ನಾಟಕದಲ್ಲಿ ಭಾಷಾ ನೀತಿಯನ್ನು ಕುರಿತು ಯಾವುದೇ ನಿರ್ಣಯ ತೆಗೆದುಕೊಳ್ಳುವ ಮೊದಲು ನಮ್ಮ ಮಂತ್ರಿ ಮಹೋದಯರು ತಜ್ಞರೊಂದಿಗೆ ಸಮಾಲೋಚಿಸುವುದು ಅತ್ಯಂತ ಅಗತ್ಯವಾದದ್ದು. ತಮಿಳು ಮಾಧ್ಯಮದಲ್ಲಿ ಟಿ.ಸಿ.ಎಚ್. ತರಗತಿಗಳನ್ನು ಆರಂಭಿಸುವುದಾಗಿ ಈಚೆಗೆ ನಮ್ಮ ಮುಖ್ಯಮಂತ್ರಿಗಳು ತಮಿಳುನಾಡಿನ ಮುಖ್ಯಮಂತ್ರಿಗಳಿಗೆ ಆಶ್ವಾಸನೆ ಕೊಟ್ಟಿದ್ದಾರೆ. ಹಿಂದಿ ಮಾಧ್ಯಮದ ವೈದ್ಯಕೀಯ ಕಾಲೇಜನ್ನು ಕರ್ನಾಟಕದಲ್ಲಿ ಸ್ಥಾಪಿಸಲಾಗುತ್ತದೆಂದು ಹಿಂದೀ ಸಂಸ್ಥೆಯೊಂದು ಹೇಳಿದೆ. ಹಿಂದಿ ಮಾತನಾಡುವ ಪ್ರದೇಶದಲ್ಲಿ ಇಂಥ ಒಂದಲ್ಲ ಹತ್ತು ಕಾಲೇಜುಗಳನ್ನು ಸ್ಥಾಪಿಸಿಕೊಳ್ಳಲಿ. ಆದರೆ ಕರ್ನಾಟಕದಲ್ಲಿ ಅದರ ಅಗತ್ಯವೇನಿದೆ? ಗೋಕಾಕ ಚಳುವಳಿಯ ಮುಖ್ಯ ಆಶಯವನ್ನು ಕನ್ನಡಿಗರು ಎಂದಿಗೂ ಮರೆಯಕೂಡದು.

ಮಾಸ್ತಿಯವರು ಪರಿಷತ್ತಿನ ಉಪಾಧ್ಯಕ್ಷರಾಗಿದ್ದಾಗ ಕನ್ನಡದ ಕೆಲಸವನ್ನು ಕುರಿತು ಮಾತನಾಡುತ್ತ ಒಮ್ಮೆ ಹೀಗೆ ಅಂದಿದ್ದರಂತೆ : 'ನನಗೆ ಒಂದು ನೂರು ಜನ ಒಳ್ಳೇ ಕಾರ್ಯಕರ್ತರನ್ನು ಕೊಡಿ. ಕನ್ನಡದಲ್ಲಿ ಒಂದು ಕ್ರಾಂತಿಯನ್ನೇ ಮಾಡಿ ತೋರಿಸುತ್ತೇನೆ'. ಕನ್ನಡದ ಬಗ್ಗೆ ನಿಜವಾದ ಕಳಕಳಿಯುಳ್ಳ ಅಂಥ ಕಾರ್ಯಕರ್ತರ ಒಂದು ಪಡೆಯನ್ನೇ ನಿರ್ಮಿಸಿಕೊಂಡು ಕನ್ನಡ ಸಾಹಿತ್ಯ ಪರಿಷತ್ತು, ಕನ್ನಡಪರ ಸಂಘಸಂಸ್ಥೆಗಳು ಒಟ್ಟಾಗಿ ಕಾರ್ಯೋನ್ಮುಖವಾಗುವ ಅಗತ್ಯ ಎಂದಿಗಿಂತಲೂ ಇಂದು ಹೆಚ್ಚಾಗಿದೆ.

೭

ಭಾರತ ಇಂದು ಮಹತ್ತರವಾದ ಸೈದ್ಧಾಂತಿಕ, ಸಾಂಸ್ಕೃತಿಕ, ರಾಜಕೀಯ ಹಾಗೂ ಆರ್ಥಿಕ ಗೊಂದಲಗಳಿಂದ ತತ್ತರಿಸಿದೆ.

ಬ್ರಿಟಿಶ್ ವಸಾಹತುಶಾಹಿಯಿಂದ ಬಿಡುಗಡೆ ಪಡೆದ ಮೇಲೆ ಪ್ರತಿಯೊಬ್ಬ ಬಡ ಭಾರತೀಯನ ಕಣ್ಣೀರನ್ನು ತೊಡೆದು ಹಾಕುವ ಧ್ಯೇಯ ಸಾಧನೆಯ ಆಶೆಗಳಿದ್ದರೂ ಆರ್ಥಿಕ ನಿರ್ವಹಣೆ ಮಾತ್ರ ತೀವ್ರ ಅಸಮತೆಗೆ ಒಳಗಾಗಿರುವುದನ್ನು ನಾವು ಕಾಣುತ್ತಿದ್ದೇವೆ. ಹಳೆಯ ಮಹಾರಾಜರು ಹೋದರು; ಹಾಗೆಯೇ ಬಹಳ ಮಟ್ಟಿಗೆ ದುರುಳ ಜಮೀನುದಾರರು ಕೂಡ. ಆದರೆ ಸಮಾಜವಾದ, ಗರೀಬಿ ಹಟಾವೋ ಮೊದಲಾದ ಘೋಷಣೆಗಳ ನಡುವೆಯೂ ಆರ್ಥಿಕ ಶಕ್ತಿಯನ್ನು ತಮ್ಮ ಮುಷ್ಟಿಯಲ್ಲಿಟ್ಟುಕೊಂಡ ದೊಡ್ಡ ದೊಡ್ಡ ಉದ್ಯಮಿಗಳ ಗುಂಪುಗಳು ಅವರ ಜಾಗದಲ್ಲಿ ತಲೆ ಎತ್ತುತ್ತಿವೆ. ೧೯೯೪-೯೫ರಲ್ಲಿ ಭಾರತದಲ್ಲಿ ಅಗ್ರಸ್ಥಾನದಲ್ಲಿದ್ದ ನೂರು ಕಂಪನಿಗಳು ೬೬,೦೦೦ ಕೋಟಿಗಿಂತಲೂ ಹೆಚ್ಚಿನ ಆಸ್ತಿಯನ್ನು ಹೊಂದಿದ್ದುವಲ್ಲದೆ ಅವುಗಳ ಲಾಭದ ಮೊತ್ತವೇ ೧೦,೬೪೦ ಕೋಟಿ ರೂ.ಗಳಷ್ಟಾಗಿದ್ದಿತು. ನಮ್ಮ ದೇಶದ ಎಷ್ಟೋ ಜನಕ್ಕೆ ಈ ಕೋಟಿಗಟ್ಟಲೆ

ಹಣದ ಅಂಕಿಗಳಲ್ಲಿಯ ಸೊನ್ನೆಗಳನ್ನು ಸರಿಯಾಗಿ ಎಣಿಸಲಿಕ್ಕೂ ಬರಲಾರದೇನೊ. ನಗರದ ಹಾಗೂ ಗ್ರಾಮೀಣ ಪ್ರದೇಶದ ಮಧ್ಯಮ ವರ್ಗದ ಕೆಲವು ಗುಂಪಿನ ಜನಕ್ಕೆ ಈ ಸಂಪತ್ತಿನ ಸ್ವಲ್ಪ ಭಾಗ ದೊರಕಿರಬಹುದಾದರೂ ಅಲ್ಲಿಯೇ ವಾಸಿಸುತ್ತಿರುವ ಬಹುಸಂಖ್ಯಾತ ಜನರ ಜೀವನ ನಿರುದ್ಯೋಗ ಹಾಗೂ ರೋಗರುಜಿನಗಳಿಗೆ ಈಡಾಗಿ ದಿನ ದಿನಕ್ಕೂ ಕುಸಿದು ಹೋಗುತ್ತಿದೆ.

ರಾಜಕೀಯವಾಗಿ ನೋಡಿದಾಗಲೂ ಜನತೆ ತಮ್ಮಷ್ಟಕ್ಕೆ ಅತ್ಯಂತ ಶಕ್ತಿಹೀನರಾಗಿ ಹೋಗಿದ್ದಾರೆ. ಪ್ರಜಾಪ್ರಭುತ್ವವೆಂದರೆ ಜನಶಕ್ತಿ. ಆದರೆ ನಮ್ಮ ಪ್ರಜಾಸತ್ತೆ ಓಟು ನೀಡುವುದಕ್ಕೆ ಮಾತ್ರ ಸೀಮಿತವಾಗಿ ಹೆಚ್ಚಿನದೇನನ್ನೂ ಸಾಧಿಸಿಲ್ಲ. ಒಮ್ಮೆ ಆರಿಸಿ ಬಂದರೊ, ನಮ್ಮ ಪ್ರತಿನಿಧಿ ಮಹಾಶಯರು ಆಮೇಲೆ ಜನರಿಗೆ ಮುಖ ಕೂಡ ತೋರಿಸದೆ ಹೋಗುತ್ತಾರೆ. ಚುನಾವಣೆಯ ಕಾಲಕ್ಕೆ ಕೊಟ್ಟ ಆಶ್ವಾಸನೆಗಳನ್ನು ಈಡೇರಿಸುವ ಮಾತಂತೂ ದೂರವೇ ಉಳಿಯಿತು. ಇಂಥ ಪ್ರತಿನಿಧಿಗಳ ಮೇಲೆ ನಾಗರಿಕರ ನಿಯಂತ್ರಣವೇನಾದರೂ ಇದೆಯೇ ಎಂದರೆ ಅದೂ ಇಲ್ಲ. ಅಧಿಕಾರವೆಲ್ಲ ರಾಜಕೀಯ ಪಕ್ಷಗಳಲ್ಲಿ, ಮಂತ್ರಿಮಂಡಲದಲ್ಲಿ, ಅಧಿಕಾರ ವರ್ಗಗಳಲ್ಲಿ ಕೇಂದ್ರೀಕೃತವಾಗಿ ಬಿಟ್ಟಿದೆ. ಎಷ್ಟೇ ಪ್ರಾಮಾಣಿಕವಾಗಿ ಜೀವನ ಸಾಗಿಸಬೇಕೆಂದು ನಾಗರಿಕ ಪ್ರಯತ್ನ ಪಡುತ್ತಾನಾದರೂ ಅವನು ಇವರನ್ನು ಸಂತೋಷಪಡಿಸಬೇಕು, ಇವರಿಗೆ ಲಂಚ ನೀಡಬೇಕು, ಇಲ್ಲವೆ ಯಾವಾಗಲೂ ಅವರ ಅಂಜಿಕೆಯಲ್ಲಿಯೇ ಇರಬೇಕು.

ರಾಜಕಾರಣದ ಅಪರಾಧೀಕರಣ (Criminalisation) ತನ್ನ ತುತ್ತ ತುದಿಯನ್ನು ತಲುಪಿದೆ. ಪಾತಕೀಕರಣ ಕೆಲವು ಪ್ರಸಿದ್ಧ ಅಪರಾಧಸ್ಥರು ಅಥವಾ ಸಮಾಜ ಕಂಟಕರೊಂದಿಗೆ ಸಂಬಂಧವಿಟ್ಟುಕೊಂಡ, ಆಡಳಿತವರ್ಗದ ಜನಕ್ಕೆ ಸಂಬಂಧಿಸಿದ್ದಷ್ಟೆ ಆಗಿರದೆ ಅಧಿಕಾರಕ್ಕೆ ಬರಲು ಇಲ್ಲವೆ ಅಧಿಕಾರ ಉಳಿಸಿಕೊಳ್ಳಲು ಯಾವುದೇ ಬಗೆಯ ಪಾತಕೀ ಸಾಧನವನ್ನು ಉಪಯೋಗಿಸಲು ತಯಾರಾಗಿರುವ ಮುಖ್ಯ ರಾಜಕೀಯ ಪಕ್ಷಗಳಿಗೂ ಸಂಬಂಧಿಸಿದೆ.

ಧರ್ಮ, ಜಾತಿ, ನದೀನೀರು, ಗಡಿವಿವಾದ ಇತ್ಯಾದಿಗಳ ನೆಪದಲ್ಲಿ ಕಳೆದ ಐದಾರು ವರ್ಷಗಳಲ್ಲಿ ಭಾರತದ ಎಲ್ಲ ಕಡೆಗಳಲ್ಲಿಯೂ ಮುಗ್ಧ ನಾಗರಿಕರ ಮೇಲೆ ನಡೆದ ಭಯಾನಕ ಹಿಂಸೆ ಮೊದಲಾದವು, ಅಧಿಕಾರಕ್ಕೆ ಹಪಹಪಿಸುತ್ತಿರುವ ಪಕ್ಷಗಳಿಂದಲೇ ನಡೆದಿರುವುದು ಸತ್ಯಕ್ಕೆ ದೂರವಾದ ಮಾತೇನೂ ಅಲ್ಲ. ಅಂಥ ಕ್ರೌರ್ಯ ಹಾಗೂ ಅನಿಶ್ಚಿತತೆಯ ಎದುರು ನಾಗರಿಕರು ತೀರ ನಿರ್ವೀರ್ಯರಾಗಿ ಹೋಗಿದ್ದಾರೆ.

ದೇಶದ ಅನೇಕ ಭಾಗಗಳಲ್ಲಿ ಜನತೆ ತಮ್ಮ ದೈನ್ಯಾವಸ್ಥೆಯ ಬಗ್ಗೆ ಅತೃಪ್ತರಾಗಿದ್ದಾರೆ. ದಿಲ್ಲಿಯ ನಿಯಂತ್ರಣವಿರದಿದ್ದರೆ ಅವರು ಬಹುಶಃ ಇದಕ್ಕೂ ಉತ್ತಮ ಸ್ಥಿತಿ ಪಡೆಯಬಹುದೆಂಬ ಸಲಹೆಗಳೂ ಈಚೆಗೆ ಕೇಳಿ ಬರುತ್ತಿವೆ. ಭಾರತದ ಒಕ್ಕೂಟದ ಬಗ್ಗೆ ಪುನಾರಾಲೋಚನೆ ಮಾಡಬೇಕು ಎಂಬ ಅಭಿಪ್ರಾಯಗಳನ್ನು ಉಗ್ರ ಹಿಂಸಾಚಾರದಿಂದ ಹತ್ತಿಕ್ಕಲಾಗುತ್ತಿದೆ. ಈ ಪ್ರದೇಶಗಳ ಜನ, ಸರಕಾರದ ವ್ಯೂಹ ಹಾಗೂ ಉಗ್ರಗಾಮಿಗಳು, ಈ ಎರಡು ಕಡೆಗಳಿಂದ ದಾಳಿಗೆ ಒಳಗಾಗಿ ಸಂಪೂರ್ಣ ಹತಾಶರಾಗಿರುವುದು ಕಂಡುಬರುತ್ತಿದೆ.

ವಿಚಾರವಂತನಾದ ಭಾರತೀಯ ಪ್ರಜೆ ಇಂದು ತೀವ್ರವಾಗಿ ಎದುರಿಸುತ್ತಿರುವ ಪ್ರಶ್ನೆ 'ಭಾರತ ಎತ್ತ ಸಾಗಿದೆ ?' ಈ ಪ್ರಶ್ನೆಯನ್ನು ೧೯ನೆಯ ಶತಮಾನದ ಮಧ್ಯಕಾಲದಿಂದಲೇ ಮತ್ತೆ ಮತ್ತೆ ಕೇಳುತ್ತ ಬರಲಾಗಿದೆ. ಭಾರತದ ತಳಹದಿಯನ್ನೇ ಅಲುಗಾಡಿಸಿದ ವಸಾಹತುಶಾಹಿಯ ಅಘಾತದೊಡನೆ ಭಾರತೀಯ ಮನಸ್ಸು ನಿತ್ಯವೂ ಹೋರಾಡಬೇಕಾಯಿತು. ರಾಷ್ಟ್ರೀಯ ಆಂದೋಲನಕ್ಕೆ ರಾಜಕೀಯ ದೃಷ್ಟಿಯೊಂದೇ ಅಲ್ಲದೆ ಭಾರತೀಯ ವ್ಯಕ್ತಿತ್ವದ ಗಾಢ ಶೋಧದ ಬೌದ್ಧಿಕ ಮುಖವೂ ಇದ್ದಿತು. ರಾಷ್ಟ್ರ ಕಟ್ಟುವ ಕಾರ್ಯಕ್ಕೆ ನಾವು ಅಣಿಯಾಗಿದ್ದರೆ ಅಥವಾ ಅದಕ್ಕಾಗಿ ಹೋರಾಡುತ್ತಿದ್ದರೆ, ಭಾರತದ ಎಲ್ಲ ವಿಶೇಷ ಗುಣಧರ್ಮಗಳನ್ನೂ ವೈಶಿಷ್ಟ್ಯಗಳನ್ನೂ ಒಳಗೊಂಡ ಸ್ಪಷ್ಟ ನೋಟ ನಮಗೆ ಅತ್ಯವಶ್ಯ. ರಾಷ್ಟ್ರದ ನವೀಕರಣಕ್ಕೆ ಬೇಕಾಗುವ ದೃಷ್ಟಿಯನ್ನು ನಿಚ್ಚಳಗೊಳಿಸುವಾಗ ಅದರ ಸಂಪ್ರದಾಯದಲ್ಲಿರುವ ಕಾಲ ವಿರೋಧಿ ಅಥವಾ ದುಷ್ಕೃತ್ಯಕಾರಿ ಅಂಶಗಳನ್ನು ವಿಸರ್ಜಿಸಬೇಕಾಗುತ್ತದೆ. ಹಾಗೆಯೇ ಪ್ರಜಾಪ್ರಭುತ್ವಕ್ಕೆ ಸಲ್ಲುವ ದಯಾಪರ ಮೌಲ್ಯ ಪದ್ಧತಿಗಳನ್ನು (Value System), ನ್ಯಾಯಬದ್ಧವಾದ ಹಾಗೂ ಆರೋಗ್ಯಕರ ಅಂಶಗಳನ್ನು ಉಳಿಸಿಕೊಳ್ಳಬೇಕಾಗುತ್ತದೆ. ಅದೇ ಕಾಲಕ್ಕೆ ವಿದೇಶೀ ಮೂಲದ ವಿಚಾರಗಳು, ತೀರ ಆಧುನಿಕವಾಗಿದ್ದು ಅಪೇಕ್ಷಣೀಯವೆನಿಸಿದರೆ ಅವುಗಳನ್ನು ಭಾರತೀಯ ಮನೋಭಾವದೊಂದಿಗೆ ಸಂಯೋಜಿಸಿಕೊಳ್ಳಲು ನಾವು ಕಲಿಯಬೇಕು. ಆದರೆ ತಿರುಳು ಮುಖ್ಯ: ಕೇವಲ ಹೊಸತನಕ್ಕಾಗಿ ಅವುಗಳನ್ನು ಕಿತ್ತು ತಂದು ಇಲ್ಲಿ ಊರಬೇಕಾಗಿಲ್ಲ. ಯಾವುದು ಭಾರತ? ಯಾವುದು ಭಾರತೀಯ? ಭಾರತೀಯತೆ ಎಂದರೆ ಏನು ? ಇವು ಅಪ್ರಯೋಜನಕವಾದ ಬೌದ್ಧಿಕ ಪ್ರಶ್ನೆಗಳಲ್ಲ; ಇವೆಲ್ಲ ರಾಷ್ಟ್ರದ ವರ್ಧಿಷ್ಣು ವಿದ್ಯಾವಂತ ವರ್ಗ ಮನಸ್ಸುಗೊಟ್ಟು ವಿವೇಚಿಸಬೇಕಾದ ಸಂಗತಿಗಳು.

ರಾಜಾರಾಮಮೋಹನ್‌ರಾಯ್, ವಿವೇಕಾನಂದ, ಅರವಿಂದ ಘೋಷ್, ಟಾಗೋರ, ಮಹಾತ್ಮಾಗಾಂಧಿ, ನೆಹರು, ಜಯಪ್ರಕಾಶ ನಾರಾಯಣ, ರಾಮಮನೋಹರ ಲೋಹಿಯಾ, ಅಂಬೇಡ್ಕರ ಮುಂತಾಗಿ ಇನ್ನೂ ಅನೇಕರು ತಮ್ಮ ತಮ್ಮ ರೀತಿಯಲ್ಲಿ ಇದಕ್ಕೆ ಉತ್ತರ ನೀಡಲು ಪ್ರಯತ್ನಿಸಿದ್ದಾರೆ. ಸಮಾಜವಾದಿ ಹಾಗೂ ಸಮತಾವಾದಿ ಆಂದೋಲನಗಳ ವಿವಿಧ ಮುಖಂಡರು ಹಾಗೂ ಅವರಿಂದ ಸ್ಫೂರ್ತಿ ಪಡೆದ ಲೇಖಕರು ಕೂಡ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಈ ಶತಮಾನದ ಕನ್ನಡ ಸಾಹಿತ್ಯವೂ ಕೂಡ ನಮ್ಮ ಸೃಜನಶೀಲ ಸಾಹಿತಿಗಳ ಮನಸ್ಸಿನಲ್ಲಿ ಪ್ರತಿಬಿಂಬಿಸಿದಂತೆ ಭಾರತೀಯ ಸತ್ಯವನ್ನು ಅಭಿವ್ಯಕ್ತಿಸಿದೆ. ಭಾರತ ಶೋಧದ ಈ ಸಮಸ್ಯೆಯನ್ನು ಬಿ.ಎಂ.ಶ್ರೀ. ಕಾಲದಿಂದ ಇಂದಿನತನಕ ನಾವು ನಮ್ಮದೇ ಆದ ರೀತಿಯಲ್ಲಿ ಬಿಡಿಸಲು ಪ್ರಯತ್ನಿಸಿಲ್ಲವೇ? ವಿದೇಶೀ ಮೂಲದ ಹಾಗೂ ಭಾರತದ ಒಳಗಿನ ವಿವಿಧ ಪ್ರಭಾವಗಳಿಗೆ ನಾವು ಈಡಾಗಿದ್ದು ಪ್ರತಿಯೊಬ್ಬ ಲೇಖಕನೂ ಅವುಗಳನ್ನು ಅಂತಸ್ಥಗೊಳಿಸಲು ಹೆಣಗಾಡಿದ್ದುಂಟು. ಇಡೀ ಚಳವಳಿ ಅವುಗಳನ್ನು ನೈಜಗೊಳಿಸಲು ಹೋರಾಡಿದೆ. ಆಧುನಿಕ ಕನ್ನಡ ಸಾಹಿತ್ಯದ ಎಲ್ಲ ಘಟ್ಟಗಳ ಹಾಗೂ ಒಲವುಗಳ ಅತ್ಯುತ್ತಮ ರಚನೆಗಳು ಈ ಹೋರಾಟದ ಫಲಗಳೇ ಆಗಿವೆ. ಇದು ಒಂದು ರೀತಿಯಲ್ಲಿ ಭಾರತದ ಶೋಧನೆಯ ಮೂಲಕ ನಮ್ಮನ್ನು ನಾವೇ ಕಂಡುಕೊಳ್ಳುವುದಾಗಿದೆ.

ಇದು ಇಂದಿಗೂ ಮುಂದುವರಿಯುತ್ತಿರುವ ಪ್ರಕ್ರಿಯೆಯಾಗಿದ್ದರೆ ಅದನ್ನು ಮತ್ತೆ ಎತ್ತಿ ಆಡುವ ಅವಶ್ಯಕತೆ ಇರುತ್ತಿರಲಿಲ್ಲ. ಸ್ವತಂತ್ರ ಭಾರತದಲ್ಲಿಯ ಜನತೆಯ ಈಡೇರದ ಆಶೆಗಳು ಮತ್ತು ಅವನತಿ ಹೊಂದುತ್ತಿರುವ ರಾಜಕೀಯ, ಆರ್ಥಿಕ ಹಾಗೂ ಸಾಂಸ್ಕೃತಿಕ ಬಿಕ್ಕಟ್ಟು ಲೇಖಕರಾದ ನಮ್ಮಿಂದ ಒಂದು ನಿರ್ಣಾಯಕ ಪ್ರಯತ್ನವನ್ನು ಬಯಸುತ್ತಿದೆ. ಅದಾವುದೆಂದರೆ ಭಾರತದ ಹಾಗೂ ನಮ್ಮೆಲ್ಲರ ಪ್ರಜ್ಞಾಪೂರ್ವಕವಾದ ಆತ್ಮಶೋಧ. ರಾಜಕೀಯ ಕ್ರಿಯೆ ನಮ್ಮ ಸಮಾಜದಲ್ಲಿ ಬದಲಾವಣೆಗಳನ್ನು ತರಬಹುದಾದರೆ ಸಾಹಿತ್ಯ ಮತ್ತು ಸಮಾಜದ ಕಾಳಜಿ ಅಂಥ ರಾಜಕೀಯ ಕ್ರಿಯೆಗೆ ಸ್ಫೂರ್ತಿಯನ್ನೊದಗಿಸಿ ಯೋಗ್ಯ ಮಾರ್ಗದರ್ಶನ ಮಾಡಬಲ್ಲದು. ಇಂಥ ರಾಜಕೀಯ ಕ್ರಿಯೆಯ ಅಗತ್ಯವನ್ನು ನಿರಾಕರಿಸದೆ ಲೇಖಕ ಬಂಧುಗಳಲ್ಲಿ ನಾನು ಅರಿಕೆ ಮಾಡಿಕೊಳ್ಳುವದೇನೆಂದರೆ, ಭಾರತೀಯ ದೃಷ್ಟಿಯನ್ನು ಬೆಳೆಸುವಲ್ಲಿ ಲೇಖಕರಾದ ನಾವು ಗಂಭೀರವಾಗಿ ಪಾಲ್ಗೊಳ್ಳಬೇಕು. ರಾಜಕೀಯದಲ್ಲಿ ಕಾರ್ಯಪ್ರವೃತ್ತರಾದ ಲೇಖಕರು ನಮ್ಮಲ್ಲಿದ್ದರೆ ಅಂಥವರೂ ಈ ಆಂದೋಲನದಲ್ಲಿ ಭಾಗವಹಿಸಿ ಬದಲಾವಣೆಗಾಗಿ ಹೋರಾಡಲಿ. ಆದರೆ ಅಂಥ ಸಂದರ್ಭದಲ್ಲಿ ನಾವು ಪೂರ್ಣ ರಾಜಕೀಯ ಕಾರ್ಯಕರ್ತರಂತೆ ವರ್ತಿಸಬೇಕಾಗುತ್ತದೆ. ಭಾರತ ತನ್ನನ್ನು ತಾನು ಸ್ಪಷ್ಟಗೊಳಿಸಿಕೊಳ್ಳಬೇಕಾದ ಅವಶ್ಯಕತೆಯನ್ನು ಮೊದಲು ತಿಳಿದುಕೊಂಡು ಲೇಖಕರಾದ ನಾವು ಸೃಜನಾತ್ಮಕ ಬರವಣಿಗೆ ಹಾಗೂ ವಿಮರ್ಶೆಯ ಮೂಲಕ ಅದಕ್ಕೆ ದಾರಿ ಮಾಡಿಕೊಡೋಣ. ಸಂಧಿಕಾಲದಲ್ಲಿರುವ ರಾಷ್ಟ್ರದ ಕಾರ್ಯಸೂಚಿಯನ್ನು ಖಚಿತಗೊಳಿಸಲು ನಾವು ಸಲ್ಲಿಸುವ ಕಾಣಿಕೆಯೆಂದರೆ ಇದೇ.

ಇಂದು ಅಸಂಖ್ಯ ಪ್ರಮಾಣದ ಅಮಾನುಷ ತೆರೆಗಳೆದ್ದು ಜಗತ್ತನ್ನು ಹೊಯ್ದಾಡಿಸುತ್ತಿವೆ. ಇದರ ಪರಿಣಾಮ ಭಾರತದ ಮೇಲೂ ಆಗಿರುವುದನ್ನು ನಾವು ಕಾಣುತ್ತಿದ್ದೇವೆ. ಅವುಗಳಲ್ಲಿ ಅಪಾಯಕಾರಿಯಾದದ್ದೆಂದರೆ ಪ್ರತಿಬಂಧಕವಿಲ್ಲದ ವ್ಯಕ್ತಿವಾದ ಮತ್ತು ಬೇರುಗಳಚಿದ ವಿಶ್ವವಾದ. ಬೇರೆ ಬೇರೆ ರಾಷ್ಟ್ರಗಳಲ್ಲಿಯ ಜನತೆಯ ಸಂಸ್ಕೃತಿಯನ್ನು, ಮೌಲ್ಯ ಪದ್ಧತಿಗಳನ್ನು ಪ್ರಾಂತೀಯವೆಂದೂ, ಸಂಕುಚಿತ ಮನೋಭಾವವೆಂದೂ ಅಷ್ಟೇ ಅಲ್ಲ, ಪ್ರಗತಿ ವಿರೋಧಿ ಮತ್ತು ಮೂಲಭೂತವಾದಿಯೆಂದು ಹತ್ತಿಕ್ಕಿ ಬೇರುಗಳಿಲ್ಲದ ಸಂಸ್ಕೃತಿಯೊಂದನ್ನು ವಿಶ್ವವ್ಯಾಪಕತ್ವದ ಸೋಗಿನಲ್ಲಿ ಇದು ಮುಂಚಾಚುತ್ತಿದೆ. ಈ ಬಗೆಯ ವಿಶ್ವವಾದದ ಮತ್ತೊಂದು ಮುಖವೆಂದರೆ ಸ್ಥಳೀಯ ಸಂಸ್ಕೃತಿಗಳನ್ನು, ಮೌಲ್ಯ ಪದ್ಧತಿಗಳನ್ನು ವಸ್ತುಸಂಗ್ರಹಾಲಯಕ್ಕೆ ಸೇರಿಸಿ ಅವುಗಳನ್ನು ನೋಡಿ, ಅಚ್ಚರಿಗೊಂಡು ಮಾನವಶಾಸ್ತ್ರದ ದೃಷ್ಟಿಯಿಂದ ಅದರ ಅಭ್ಯಾಸಕ್ಕೆ ಅನುವು ಮಾಡಿಕೊಟ್ಟು ಅನುಗ್ರಹ ತೋರಿಸಿದಂತೆ ಮಾಡುವುದು. ಇದಕ್ಕೆ ಬಲಿ ಬೀಳುವ ಭಾರತೀಯನು ನಮ್ಮ ಜನರ ನಿಜವಾದ ಸಮಸ್ಯೆಗಳನ್ನರಿಯಲು ಪ್ರವರ್ತಿಸದೆ ಸಮಾಜೋ-ಆರ್ಥಿಕ ಮಾದರಿಗಳ ನಿರ್ಮಾಣದಲ್ಲಿ ತೊಡಗುತ್ತಾನೆ.

ವೆಸ್ಟ್ ಮಿನಿಸ್ಟರ್ ಮಾದರಿಯ ಮೇಲೆ ನಿಂತಿರುವ ನಮ್ಮ ಪಾರ್ಲಿಮೆಂಟರಿ ಪದ್ಧತಿ ಹಾಗೂ ಇಂದು ಅದು ಪಡೆದ ವಿಕೃತ ರೂಪ ಇಂಥ ಬೇರು ರಹಿತ ಅನುಕರಣೆಯ ಅಪಾಯಕಾರಿ ನಿದರ್ಶನವಾಗಿದೆ.

ಇದೇ ರೀತಿ ಎಲ್ಲ ರಾಷ್ಟ್ರಗಳ ಸಮಸ್ಯೆಗಳಿಗೆ ಸರ್ವರೋಗ ಪರಿಹಾರಕವೆಂಬಂತೆ ದಲ್ಲಾಳಿ ಹಿಡಿದ ಮುಕ್ತ ಮಾರುಕಟ್ಟೆಯ ಅರ್ಥ ವ್ಯವಸ್ಥೆ ಮತ್ತು ಉದಾರೀಕರಣದ ತತ್ವ ಸೂತ್ರಗಳು ಈ 'ವಿಶ್ವವಾದ'ದ ಮತ್ತೊಂದು ಉದಾಹರಣೆ.

'ಪ್ರತಿಯೊಬ್ಬ ವ್ಯಕ್ತಿ ತನ್ನ ರಕ್ಷಣೆಯನ್ನು ತಾನೇ ಮಾಡಿಕೊಳ್ಳಬೇಕು' 'ಯೋಗ್ಯತೆಯುಳ್ಳವನು ಬದುಕುತ್ತಾನೆ' ವ್ಯಕ್ತಿಯ ಆರೋಗ್ಯ, ಶಿಕ್ಷಣ, ಯೋಗಕ್ಷೇಮ, ಪ್ರತಿಭಾ ವಿಕಾಸಕ್ಕೆ ಅವಕಾಶ ಇತ್ಯಾದಿ ಇತ್ಯಾದಿಗಳ ಬಗ್ಗೆ ಸಮಾಜದ ಕರ್ತವ್ಯವೇನೂ ಇಲ್ಲ - ಇವು ಉದಾರೀಕರಣದ ತತ್ವ ಸೂತ್ರಗಳು. ವ್ಯಕ್ತಿ ಸಮಾಜದಲ್ಲಿ ಹುಟ್ಟಿದವನು, ಅದರಿಂದ ರೂಪುಗೊಂಡವನು ಮತ್ತು ಸಾಮಾಜಿಕ ಉತ್ಪಾದನೆಯ ಪ್ರಕ್ರಿಯೆಯ ಮೂಲಕವೇ, ತನ್ನ ಜೀವನ ಮಾಡುವನೇ ಹೊರತು ಪ್ರತ್ಯೇಕವಾಗಿ ಅಲ್ಲ ಎಂಬೀ ಅಂಶಗಳನ್ನು ಗಮನಿಸದಿರುವ ಈ ತತ್ವ ಸಮಾಜ ಪೋಷಣೆಯ ಜವಾಬುದಾರಿಯನ್ನು ವಹಿಸಿಕೊಳ್ಳುವುದರಿಂದಲೇ ಅವನು ಸಮಾಜದ ಸೊತ್ತಾಗಬಲ್ಲನು. ಈ ಮಾನವ ಶಿಶು ಕಾರ್ಯರೂಪಕ್ಕೆ ಬರುವ ತನ್ನ ಸಾಮರ್ಥ್ಯವನ್ನು ನಿಜವಾಗಿ ಸಾಧಿಸುವಂತೆ ಮಾಡಲು ಸಮಾಜ ತನ್ನ ಈ ಅವಶ್ಯ ಕರ್ತವ್ಯಗಳನ್ನು ನಿರಾಕರಿಸಿದರೆ ಮತ್ತು ಉಳಿದವರೊಡನೆ ಸ್ಪರ್ಧೆಯಲ್ಲಿ ಅವನು ಬದುಕುಳಿಯಲು ಅಸಮರ್ಥನೆಂದು ನಿರ್ಧರಿಸಿದರೆ ಅದು ಜಂಗ್ಲೀ ಕಾಯದೆ (Jungle Law) ಗಿಂತ ಹೀನವಾದದ್ದು. ಯಾಕೆಂದರೆ ಪ್ರಾಣಿಗಳೂ ಸಹ ಎಷ್ಟೋ ಮಟ್ಟಿಗೆ ತಮ್ಮ ಮರಿಗಳಿಗೆ ಪಾಲನೆ ಪೋಷಣೆಯೊದಗಿಸಿ ತರಬೇತಿ ನೀಡುತ್ತವೆ. ಈಗ ನಡೆದಿರುವುದರ ಮೇಲಿಂದ ಅದರ ನಿಜವಾದ ಅರ್ಥ ಇಷ್ಟೆ. ಈಗಾಗಲೇ ಯಾರು ವಿಶೇಷ ಸವಲತ್ತು ಹೊಂದಿದ್ದಾರೊ ಅಥವಾ ವಿಶೇಷಾಧಿಕಾರ ಪಡೆದಿದ್ದಾರೊ ಅವರು ಆ ಸುಖಭೋಗದಲ್ಲಿ ಮುಂದುವರಿಯುವುದು, ಅದನ್ನೆಲ್ಲ ಕಳೆದುಕೊಂಡ ಉಳಿದ ನತದೃಷ್ಟ ಜನ ಆಳುವ ವರ್ಗದ ಗುಲಾಮರಾಗಿ ಬಾಳುವುದು.

ನಮ್ಮ ಸಂಸ್ಕೃತಿ ಇದನ್ನು ಒಪ್ಪುವುದಿಲ್ಲ. ಭಾರತೀಯ ಸಮಾಜ ಕುಟುಂಬ, ಬಣ, ಗ್ರಾಮ, ಜಾತಿ, ಜನಾಂಗತ್ವದಂಥ ಸಾಮಾಜಿಕ ಸಂಸ್ಥೆಗಳಿಂದ ತುಂಬಿಕೊಂಡಿದ್ದು, ಸಮುದಾಯ ವ್ಯಕ್ತಿಗೆ ಸಲ್ಲಿಸಬೇಕಾದ ಕೆಲವು ಕರ್ತವ್ಯಗಳನ್ನು ಅದು ಹೊಂದಿದೆ. ಉದಾಹರಣೆಗೆ ತನ್ನ ಸದಸ್ಯರ ಯೋಗಕ್ಷೇಮವನ್ನು ನೋಡಿಕೊಳ್ಳುವುದು ಅವರು ಪ್ರತಿಯಾಗಿ ತಮ್ಮ ವ್ಯಕ್ತಿತ್ವದ ಕೆಲವು ಅಂಶಗಳನ್ನು ಬಿಟ್ಟುಕೊಡಲು ಬದ್ಧರಾಗಿರುವುದು, ಸಾಮುದಾಯಿಕ ಶಿಸ್ತು ಮತ್ತು ಕೆಲಸ ಕಾರ್ಯಗಳಿಗೆ ಒಳಗಾಗಿರುವುದು ಇತ್ಯಾದಿ. ಸಮಾಜವನ್ನು ಛಿದ್ರೀಕರಿಸುವ ಅನಿರ್ಬಂಧಿತವಾದ ವ್ಯಕ್ತಿ ಸ್ವಾತಂತ್ರ್ಯ ಹಾಗೂ ಜಂಗ್ಲೀ ಕಾಯಿದೆ ಭಾರತೀಯ ಸಂಸ್ಕೃತಿಗೆ ಪರಕೀಯವಾದದ್ದು. ಭಾರತೀಯ ಮೌಲ್ಯ ಪದ್ಧತಿಗಳ ತಿಳುವಳಿಕೆಯ ನೆಲೆಗಟ್ಟಿನ ನಮ್ಮ ಸಮಾಜೋ-ಆರ್ಥಿಕ ವ್ಯವಸ್ಥೆ ಇರಬೇಕೆಂಬುದರ ಅರ್ಥ ಇದೇ ಆಗಿದೆ.

ಮನುಷ್ಯ ಸಂಬಂಧಗಳ ಸ್ವರೂಪ, ವ್ಯಕ್ತಿ ಮತ್ತು ಸಮುದಾಯಗಳ ನಡುವಿನ ದ್ವಂದ್ವಾತ್ಮಕ ಸಂಬಂಧ ಇವುಗಳ ಪರಿಶೋಧ ಕನ್ನಡ ಸಾಹಿತ್ಯದ ಅತ್ಯುತ್ತಮ ಕೃತಿಗಳಲ್ಲಿ ನಡೆದಿದೆ. ಈಗ

ನಾವು ಮಾಡಬೇಕಾದುದೆಂದರೆ ಇಂಥ ಕೃತಿಗಳಿಂದ ಭಾರತೀಯತೆಯ ಸಾರವನ್ನು ಎತ್ತಿ ತೋರಿಸುವುದು, ಸಾಹಿತ್ಯಿಕ ವಾಸ್ತವತೆಯ ಉತ್ಕೃಷ್ಟ ಕೃತಿಗಳ್ನು ಪ್ರಕಟಿಸುವುದು ಮತ್ತು ಸ್ವಲ್ಪಮಟ್ಟಿಗೆ ಸಿದ್ಧಾಂತಿಗಳಾಗುವುದು.

ವ್ಯಕ್ತಿಗತ ಆಸಕ್ತಿಗಳನ್ನು ಸಾಮುದಾಯಿಕ ಆಸಕ್ತಿಗಳೊಂದಿಗೆ ಹಾಗೂ ಒಟ್ಟಾಗಿ ಸಮಾಜದ ಆಸಕ್ತಿಗಳೊಂದಿಗೆ ಸಮರಸಗೊಳಿಸದ ಸಾಮಾಜಿಕ ಸಂರಚನೆ, ಸುಸಂಗತವಾದ ಬೆಳವಣಿಗೆಯನ್ನು ಸಾಧಿಸಲಾರದು. ಕೇವಲ ವ್ಯಕ್ತಿಗತ ಆಸಕ್ತಿಗಳಿಗೆ ಪ್ರಥಮ ಪ್ರಾಶಸ್ತ್ಯವೀಯುವುದಾಗಲಿ ಅಥವಾ ಸಾಮುದಾಯಿಕ ಆಸಕ್ತಿಗಳೇ ಮುಖ್ಯ ಎಂದು ಸಾಧಿಸುವ ಸಾಮಾಜಿಕ ಸ್ವರೂಪ ಅಪೇಕ್ಷಣೀಯವಾದದ್ದಲ್ಲ. ಕಾಲ ಗತಿಸಿದಂತೆ ಎರಡೂ ದಬ್ಬಾಳಿಕೆಯ ಸಮಾಜಗಳೇ ಆಗಿ ಪರಿಣಮಿಸುತ್ತವೆ. ಪಶ್ಚಿಮದ ಬಂಡವಾಳಶಾಹಿ ಸಮಾಜಗಳು ಹಾಗೂ ಕುಸಿದು ಬಿದ್ದ ಸೋವಿಯತ್ ಶೈಲಿಯ ಸಮಾತಾವಾದ ಇದನ್ನೇ ಸಿದ್ಧ ಮಾಡಿದೆ. ಸಾಮಾಜಿಕ ಕರ್ತವ್ಯಗಳಿನ್ನಿಟ್ಟುಕೊಂಡು ವ್ಯಕ್ತಿ ಸ್ವಾತಂತ್ರ್ಯವನ್ನು ಮಿತಿಗೊಳಿಸಿದ ಭಾರತೀಯ ದೃಷ್ಟಿ ಮಾತ್ರ ನಾವು ಶೋಧಿಸುತ್ತಿರುವ ಸಾಮರಸ್ಯವನ್ನು ಒದಗಿಸಬಲ್ಲ ಸಾಮರ್ಥ್ಯವನ್ನು ಪಡೆದಿದೆ.

ನಮ್ಮ ರಾಜ್ಯನೀತಿಯನ್ನು ರೂಪಿಸಿದ ಹಲವು ಪ್ರಭೃತಿಗಳು ನಮ್ಮ ರಾಜಕೀಯ ಮತ್ತು ಆರ್ಥಿಕ ಪದ್ಧತಿಯನ್ನು ಬ್ರಿಟಿಶ್, ಸೋವಿಯತ್, ಚೈನೀಸ್ ಮತ್ತು ಅಮೆರಿಕನ್ ಮಾದರಿಗಳ ಪರವಾಗಿ ವಾದಿಸಿದ್ದರಿಂದ ನಾವು ಸಾಕಷ್ಟು ಪಾಡು ಪಡಬೇಕಾಯಿತು. ಈ ಮಾದರಿಗಳು ಭಾರತೀಯ ಸಮಸ್ಯೆಗಳನ್ನು ಬಗೆಹರಿಸಲಾರವು. ಇಂದಿನ ಸಂದಿಗ್ಧ ಪರಿಸ್ಥಿತಿಯೇ ಅದಕ್ಕೆ ನಿದರ್ಶನವಾಗಿದೆ. ಭಾರತದ ನಿಜವಾದ ಸ್ಥಿತಿಯನ್ನು ತಿಳಿದುಕೊಂಡು, ಅದಕ್ಕೆ ಭಾರತೀಯ ಪರಿಹಾರಗಳನ್ನು ಕಂಡುಕೊಂಡು ಭಾರತೀಯರಾದ ನಾವೇ ನಮ್ಮ ಮಾದರಿಗಳಾಗಬೇಕಾಗಿದೆ.

ನಮ್ಮ ಮಾದರಿಯನ್ನು ನಿರ್ಮಿಸುವ ಈ ಪ್ರಯತ್ನಕ್ಕೆ ಭಾರತೀಯ ಚೈತನ್ಯ, ದರ್ಶನ, ಇತಿಹಾಸ ಮತ್ತು ಸಂಸ್ಕೃತಿಗಳ ಆಳವಾದ ಜ್ಞಾನ ಅಗತ್ಯ. ಈಗ ಪ್ರಚಲಿತವಿರುವ ಯುರೋ-ಕೇಂದ್ರಿತ ದೃಷ್ಟಿಯಿಂದಾಗಲಿ, ಭಾರತ ಶಾಸ್ತ್ರೀಯ ಇಲ್ಲವೆ ಪೌರಸ್ತ್ಯ ಪಂಡಿತನ ದೃಷ್ಟಿಯ ಮೂಲಕವಾಗಲಿ ಇದನ್ನು ರೂಪಿಸುವುದು ಸಾಧ್ಯವಿಲ್ಲ. ಸಾಹಿತಿಗಳು, ವಿಮರ್ಶಕರು ಮತ್ತು ಸಮಾಜಶಾಸ್ತ್ರಜ್ಞರು ಪಾತ್ರವಹಿಸಬೇಕಾದ ಸಮಯೋಚಿತ ಸಂದರ್ಭ ಇಲ್ಲಿದೆ.

ಬಾಬರಿ ಮಸೀದಿಯ ಪತನ ಹಾಗೂ ನಂತರ ನಡೆದ ಕೋಮುಗಲಭೆಗಳಿಂದಾಗಿ ಜಾತ್ಯಾತೀತತೆಯ ಬಗ್ಗೆ ಬಹಳ ಜನರಲ್ಲಿ ಆಸ್ಥೆ ಕುದುರಿದೆ. ಆದಾಗ್ಯೂ ಈ ಬಗೆಗಿನ ಚರ್ಚೆ ಆಳಕ್ಕಿಳಿಯುತ್ತಿಲ್ಲ. ಉದಾಹರಣೆಗೆ, ಜಾತ್ಯಾತೀತೆಯನ್ನು ಕಲಿಯಲು ನಾವು ೧೮ನೇ ಶತಮಾನದ ಫ್ರೆಂಚ್ ವಿಚಾರ ವಾದಕ್ಕೇಕೆ ಹೋಗಬೇಕು? ನಮ್ಮ ಭಕ್ತರು, ಶರಣರು ಇಂಥ ಸಮಾಜಕ್ಕಾಗಿ ಹೋರಾಡಲಿಲ್ಲವೆ? 'ನನ್ನ ಮತ್ತು ನನ್ನ ದೇವರ ನಡುವಿನ ಸಂಬಂಧ ಎಷ್ಟೊಂದು ವೈಯಕ್ತಿಕವಾದದ್ದೆಂದರೆ (ಅವನು ನನ್ನ ಮಗ, ನನ್ನ ತಂದೆ, ನನ್ನ ತಾಯಿ, ನನ್ನ ಪತಿ, ನನ್ನ ಪ್ರಿಯತಮ ಇತ್ಯಾದಿ) ನನಗೆ ಯಾವ ಮಧ್ಯಸ್ಥರದೂ ಅಗತ್ಯವಿಲ್ಲ' ಎಂದಿದ್ದಾರೆ ಭಕ್ತರು. ಈ

ನೆಲೆಯಿಂದ ಅವರು ಇನ್ನೂ ಮುಂದೆ ಹೋಗಿ ಹೇಳಿದರು : 'ದೇವರ ಸಂಬಂಧವಿರುವುದು ನನ್ನೊಂದಿಗೆ. ಸಾಮಾಜಿಕ ನಿಯಮಗಳಿಗೆ ಅವನು ಸಂಬಂಧಪಟ್ಟವನಲ್ಲ. ಎಲ್ಲ ಸಾಮಾಜಿಕ ನೀತಿ ನಿಯಮಗಳು ಮನುಷ್ಯ ನಿರ್ಮಿತ. ಆದ್ದರಿಂದ ಅವು ಪ್ರಶ್ನಾತೀತವೇನೂ ಅಲ್ಲ. ಅವುಗಳನ್ನು ಬದಲು ಮಾಡಬಹುದು'. ಶೋಷಣೆಯಿಂದ ಕೂಡಿದ ಸಾಮಾಜಿಕ ನಿಬಂಧನೆಗಳಿಗೆ ತಳಕು ಹಾಕಿದ್ದ ದೈವೀಕರಣವನ್ನು ಈ ವಿಚಾರಧಾರೆ ತೆಗೆದು ಹಾಕಿತು. ೧೧ ರಿಂದ ೧೭ನೇ ಶತಮಾನಗಳ ಕಾಲಾವಧಿಯಲ್ಲಿ ಭಾರತದ ತುಂಬೆಲ್ಲ ಜಾತಿ ಪದ್ಧತಿಯ ವಿರುದ್ಧ ನಡೆದ ದೊಡ್ಡ ಕಲ್ಲೋಲಕ್ಕೆ ಇದು ಕಾರಣವಾಯಿತು. ಭಾರತೀಯ ಜಾತ್ಯತೀತತೆಯ ಮೂಲ ಪುರುಷರೆಂದರೆ ಅವರೇ. ದುರ್ದೈವದಿಂದ ಅನೇಕರು ಯುರೋ-ಕೇಂದ್ರಿತ ದೃಷ್ಟಿಕೋನದಿಂದ ಅವರ ಬರೆಹಗಳ ಧಾರ್ಮಿಕ ಸ್ವರೂಪವನ್ನು ಮಾತ್ರ ನೋಡಿ, ದೈವಶಕ್ತಿಗೆ ಶರಣಾಗುವ ಆ ಚೈತನ್ಯವನ್ನು 'ಊಳಿಗಮಾನ್ಯ ಪದ್ಧತಿ'ಯ ಮೌಲ್ಯ ಪದ್ಧತಿಯೆಂದು ತಪ್ಪಾಗಿ ಭಾವಿಸಿದರು.

ಭಾರತೀಯ ಜಾತ್ಯತೀತತೆ ಎಂದರೆ ಎಲ್ಲ ಧರ್ಮಗಳಿಗೂ ಸರಕಾರಿ ಬೆಂಬಲವಲ್ಲ. ಧರ್ಮವನ್ನು ನಾಗರಿಕರ ಖಾಸಗಿ ಆಧಿಪತ್ಯಕ್ಕೆ ಬಿಟ್ಟು ದುಷ್ಟತನ ಮತ್ತು ಸಮಾಜೋ-ಆರ್ಥಿಕ ವಲಯದ ಅನ್ಯಾಯಗಳ ವಿರುದ್ಧ ಹೋರಾಡುವುದೇ ಅದರ ನಿಜವಾದ ಲಕ್ಷಣವಾಗಿದೆ.

ತುರ್ತಾಗಿ ಮತ್ತು ಅಗತ್ಯವಾಗಿ ನಡೆಯಬೇಕಾದ ಭಾರತದ ಪುನಶ್ಶೋಧನೆಯ ಬೌದ್ಧಿಕ ಕಾರ್ಯವನ್ನು ಹಿಂದುತ್ವದ ಬೆಂಬಲಿಗರು ತಮ್ಮ ಹಸಿ ಬಿಸಿ ಜಾತೀಯ ವಾದದಿಂದ ಬೇರೆಡೆಗೆ ಹೊರಳಿಸುತ್ತಿರುವುದು ದುರ್ದೈವದ ಸಂಗತಿಯಾಗಿದೆ. ಭಾರತೀಯತೆಯ ಪುನರ್ವ್ಯಾಖ್ಯಾನಕ್ಕೆ ಅಂಥವರಿಂದ ಯಾವ ಕಾಣಿಕೆಯೂ ಸಂದಿಲ್ಲ. ತಮ್ಮ ಅಭಿಪ್ರಾಯದ ಪ್ರಕಾರ ಹಿಂದು ಎನಿಸದವರ ವಿರುದ್ಧ ಕಿರಿಚಾಡುವುದೇ ಅಂಥವರ ಉದ್ಯೋಗವಾಗಿ ಬಿಟ್ಟಿದೆ. ಹೊರ ತೋರಿಕೆಗೆ ವಿಶ್ವವಾದವನ್ನು ತಿರಸ್ಕರಿಸುತ್ತ, ಒಳಗೊಳಗೆ ಪ್ರಗತಿ ವಿರೋಧದತ್ತ ಹಾಗೂ ಉಳಿದ ಭಾರತೀಯರನ್ನು ದ್ವೇಷಿಸುವತ್ತ ಅವರು ನಮ್ಮನ್ನು ಎಳೆಯಬಯಸುತ್ತಾರೆ. ತನ್ನ ಸ್ವಂತ ಅಂಗಾಂಗಗಳನ್ನೇ ದ್ವೇಷಿಸುವುದರ ಮೂಲಕ ಒಂದು ರಾಷ್ಟ್ರ ಹೇಗೆ ತನ್ನ ಪುನಶ್ಶೋಧ ಮಾಡಿಕೊಳ್ಳಬಲ್ಲದು? ಅವರ ಸಮಾಜೋ-ಆರ್ಥಿಕ ಸಿದ್ಧಾಂತಗಳು ಪಶ್ಚಿಮದಿಂದ ಕಡ ತಂದ ಸ್ವತಂತ್ರ ಮಾರುಕಟ್ಟೆಯ ಸಿದ್ಧಾಂತಗಳಿಗಿಂತ ಯಾವ ರೀತಿಯಿಂದಲೂ ಭಿನ್ನವಾಗಿಲ್ಲ. ಸ್ವದೇಶಿ ಹೆಸರಿನಲ್ಲಿ ಭಾರತೀಯ ಬೃಹತ್ ಉದ್ಯಮಿಗಳ ರಕ್ಷಣೆಯೂ ಅದೇ ರೀತಿಯದಾಗಿದ್ದು, ಹಿಂದುತ್ವ ಇಂದು ವ್ಯಾಪಕವಾಗಿ ನಡೆಸಬೇಕಾದ ಚರ್ಚೆಯ ವ್ಯಂಗ್ಯ ಚಿತ್ರ ಮಾತ್ರ.

ಯಾವುದು ನಿಜವಾಗಿ ಭಾರತೀಯ? ಎಂಬುದರ ಬಗ್ಗೆ ಗಾಢವಾದ ತಿಳಿವಳಿಕೆ ನಮಗಿದ್ದರೆ, ಅದರ ಮೂಲಕ ಎಂಥದು ಭಾರತೀಯವಾಗಿರತಕ್ಕದ್ದು ಎಂದು ಸ್ಪಷ್ಟಪಡಿಸಬಲ್ಲೆವಾದರೆ, ಸ್ಯಾಟ್‌ಲೈಟ್, ಟೆಲಿವಿಜನ್ ಮುಂತಾದವುಗಳ ಮೂಲಕ ನಡೆಸುವ ಸಾಂಸ್ಕೃತಿಕ ದಾಳಿಯ ಬಗ್ಗೆ ನಾವು ಚಿಂತಿಸಬೇಕಾಗಿಲ್ಲ. ಯಾಕೆಂದರೆ ಭಾರತೀಯತೆಯ ಈ ತಿಳಿವಳಿಕೆ ನಮ್ಮನ್ನು ಭದ್ರವಾದ ತಳಹದಿಯ ಮೇಲೆ ನಿಲ್ಲಿಸುತ್ತದೆ. ಆಗ ಭಾರತದ ಬಡತನ ಹಾಗೂ ಅನ್ಯಾಯದ

ಸಮಸ್ಯೆಗಳನ್ನು ಭಾರತೀಯ ಮಾದರಿಯಲ್ಲಿ ಬಗೆಹರಿಸಲು ನಾವು ಕೊನೆಗೂ ಸಮರ್ಥರಾಗುತ್ತೇವೆ.

ನಮ್ಮ ದೇಶ, ನಮ್ಮ ಸಮಾಜ ಅತ್ಯಂತ ಸಂದಿಗ್ಧ ಪರಿಸ್ಥಿತಿಯಲ್ಲಿರುವಾಗ ಲೇಖಕನಾದವನು ಅದರಿಂದ ಪ್ರತ್ಯೇಕವಾಗಿ ಉಳಿಯಲಾರ. ನಮ್ಮ ದೇಶ ಇಂದು ಎದುರಿಸುತ್ತಿರುವ ಹಲವಾರು ಸಮಸ್ಯೆಗಳ ಬಗ್ಗೆ ರಾಜಕೀಯ ಕ್ರಿಯಾಸ್ತಕರು ವಿಚಾರ ಮಗ್ನರಾಗಿದ್ದಾರೆ. ಇಂಥ ಸಂದರ್ಭದಲ್ಲಿ ಲೇಖಕರಾಗಿ ನಾವೇನು ಮಾಡಬಲ್ಲೆವು? ನಮ್ಮ ಎಲ್ಲ ಬಗೆಯ ಸೃಜನಾತ್ಮಕ ಬರವಣಿಗೆ ಹಾಗೂ ವಿಮರ್ಶೆಯ ಮೂಲಕ ಭಾರತದ ಪುನಶ್ಯೋಧ ಹಾಗೂ ಭಾರತೀಯತೆಯ ಪುನರ್ವ್ಯಾಖ್ಯಾನ ಅತ್ಯಂತ ಅಗತ್ಯವಾಗಿದೆಯೆಂದು ನಾನು ಭಾವಿಸಿದ್ದೇನೆ. ಭಾರತೀಯತೆಯ ಪುನರ್ವ್ಯಾಖ್ಯಾನವೆಂದರೆ ಈ ಮೊದಲೇ ಇದ್ದು ಸ್ಥಾವರವಾಗಿರುವುದರ ಗುಣ ವಿಶೇಷದ ವರ್ಣನೆ ಮಾಡುತ್ತ ಹೋಗುವುದಲ್ಲ. ಆದರೆ ಅದು ಹೇಗಿರತಕ್ಕದ್ದು ಎಂಬುದನ್ನು ಕ್ರಿಯಾತ್ಮಕವಾಗಿ ಸ್ಪಷ್ಟಗೊಳಿಸುವ ಪ್ರಕ್ರಿಯೆ ಕೂಡ ಆಗಿದೆ.

ಬಂಧುಗಳೇ,

ನೀವು ಪ್ರೀತಿಯಿಂದ, ಗೌರವದಿಂದ ಆಲಿಸುತ್ತಿದ್ದೀರೆಂದು ನಾನು ಒಂದಿಷ್ಟು ದೀರ್ಘವಾಗಿಯೇ ಮಾತನಾಡಿದೆ. ಬೇಸರವಾಗಿದ್ದರೆ ದಯವಿಟ್ಟು ಕ್ಷಮಿಸಬೇಕು.

ಕೊನೆಯದಾಗಿ ಆತ್ಮನಿವೇದನೆಯನ್ನೊಳಗೊಂಡ ನನ್ನ ಅಭಿನಂದನೆಯ ಕವಿತೆಯೊಂದಿಗೆ ಈ ಮಹಾಸಭೆಗೆ ಇನ್ನೊಮ್ಮೆ ಕೃತಜ್ಞತೆ ವ್ಯಕ್ತಪಡಿಸಿ ವಂದಿಸುತ್ತೇನೆ.

ನೀವೆಲ್ಲಿಯವರು, ನಾವಲ್ಲಿಯವರೆ ನಮ್ಮೂರು ದೂರವಿಲ್ಲ,
ಕನ್ನಡದ ತವರು ಕರೆದಾಗ ನಮಗೆ ಮೈನವಿರು, ಮಾತ್ರವಲ್ಲ-
ಗಂಗೋತ್ರಿಯಲ್ಲಿ ಮೂಡಿರುವ ಕನಸು ಮಾನಸದ ಹಂಸದಂತೆ
ಹಾಲು-ನೀರು ಬೇರ್ಪಡಿಸಿ ಮೇಲೆ ದಿಗ್ವಲಯಕೇರಿದಂತೆ.

ದೂರ-ಸನಿಹ ಆಧಾರ ಹಿಡಿದು ಹೊರಟಿಲ್ಲ ನಮ್ಮ ದಾರಿ;
ಸುತ್ತು ಬಳಸಿದರು ಹತ್ತು ಗಡಿಯ ಬತ್ತಿಗಳ ಕುಡಿಯ ಚಾಚಿ
ನೆಳಲು-ಬೆಳಕು ನಸುನಕ್ಕು ಮಿಕ್ಕ ಅಕ್ಕರತೆ ಬೆಂಬಲಾಗಿ
ತುಂಬು ನಂಬಿಗೆಯ ಬುತ್ತಿ ಬಿಚ್ಚುವೆವು ಸ್ವಸ್ಥಚಿತ್ತರಾಗಿ.

ಬದುಕು ಎಲ್ಲ ಹೊತ್ತಗೆಯಲಿಲ್ಲ, ಹುಗಿದಿಲ್ಲ ದುಡ್ಡಿನಂತೆ
ಮಾಡಿದಂತೆ ಅದರಾಟ ಮಾಟ, ಒಟ್ಟಿದರೆ ಗುಡ್ಡದಂತೆ
ಕೈಗೆ ಸಿಕ್ಕು ಸಿಗದಂತೆ, ಬೂರಲದ ಅರಳಿ ಹೊರಳಿದಂತೆ
ಬಟ್ಟ ಬಯಲಿನಲಿ ಗುಟ್ಟನೊಡೆದು ಗಾಳಿಯಲಿ ಹರಡಿದಂತೆ.

ಸುತ್ತಮುತ್ತ ಒತ್ತಡದ ನಡುವೆ ಕಾರಂಜಿ ಪುಟಿವ ಜೀವ
ಮುತ್ತಿನಂತೆ ಮಾತೆತ್ತಿ ಹಿಡಿದು ಹೊಳೆಯಿಸುವ ಹಾವ-ಭಾವ
ಚಿತ್ತದಲ್ಲಿ ಮತ್ತಿಳಿದು ಮೇಲೆ ಪಲ್ಲವಿಸಿ ಹಿಗ್ಗುವರಳು

ಹುತ್ತದಿಂದ ಹೊರ ಬಂದ ಹಾಗೆ ಈ ಧ್ವನಿಗೆ ಇಂಥ ಕೊರಳು.

ಈ ಜನದ ಮಾತು ರೀತಿಯಲಿ ಹುದುಗಿ ಹದಗೊಂಡ ನೋವು-ಕಾವು-
ನೆಲದ ಜೊತೆಗೆ ಮಲಗೆದ್ದು ಹೊಲದ ಬದುವಿನಲಿ ಬಂದ ಮಾವು.
ಪ್ರೀತಿ, ಮುನಿಸು, ಮಾತ್ಸರ್ಯ ಆರ್ಯ-ದ್ರಾವಿಡರ ದ್ವಾರಬಂಧ
ದಾಟಿ ಹೊರಗೆ ನಿಜಗುಣಿಯು ಕಂಡ ಕನ್ನಡದ ನಾಟ್ಯಬಂಧ.

ಬರೆದುದೇನೊ ನಮಗರಿಯಲೆಂದೆ; ಅರಿತಾಗ ಬೇರೆ ಕೊರತೆ
ಮರೆತ ಮಾತು ನೂರೆಂಟು ಆದರೂ ಬೆರೆತ ಕುದಿಯು ಹೊರತೆ?
ಹಳತು-ಹೊಸತು ಎಳೆದಾಡಿ ಹರಿದು ಹೊಸ ಬಟ್ಟೆ ಬೇಡುತಿಹವು-
ಅಳತೆ ಕೊಟ್ಟು ಹೊಲಿಸಿದರು ತೊಟ್ಟು ಮೈ ಕಟ್ಟು ಸಡಿಲು-ಬಿಗಿಯು.

ತಲೆಮಾರಿಗೊಂದು ಹೊಸ ಸುಗ್ಗಿ ಹಿಗ್ಗಿ ಬೆಳೆದಿಹುದು ತುಂಬಿ ಕಣಜ
ಸೋಮಾರಿಗೊಂದೆ ಬರಗಾಲ, ಸೃಷ್ಟಿ ಪರಮೇಷ್ಠಿ ಕಲೆಯ ತೇಜ.
ನೀರು-ಹಸಿರು, ಬಂಗಾರ-ಬಸಿರು ಒಳಗೊಳಗೆ ತಿರುಗಿ ಮಾಗಿ
ಹಗಲು-ಇರುಳು ಹಿಡಿದಿಹುದು ತೂಕ ನೆಲ-ಮುಗಿಲು ಪರಡೆಯಾಗಿ.

ಏಳುತಿಹುದು ಯೌವನವು ಕೊಡವಿ ಭಿಡೆ-ಭಾರ ತೂರಿ ಒಗೆದು
ಎಲ್ಲರೆದುರು ಮುಖವಾಡ ಕಿತ್ತು ನಿಜ ಬಣ್ಣ ಬಯಲಿಗೆಳೆದು.
ತುಳಿತ ಸಹಜ ನಡೆಯಲ್ಲ, ದಲಿತ ಹೆಸರಲ್ಲ ಮಾರಿಕೊಳಲು
ಹಂಡಬಂಡ ಜೀವನವ ಹಿಂಡಿ ಕುಡಿದಂತೆ ಕಳ್ಳಿ-ಹಾಲು.

ನೂರು ದಾರಗಳ ಗೋಜು ವ್ಯಕ್ತಿ ಅವ್ಯಕ್ತ ತಳಕು-ಮಳಕು;
ಒಳಗಿನೊರತೆ ತಿಳಿದಿಲ್ಲ, ಇಲ್ಲ ಔದಾರ್ಯದೊಂದು ಹಳಕು.
ಮೂಲೆ ಮೂಲ ಚಿಂತನೆಗೆ, ಬಯಲು ಆಗೀಗ ಎಷ್ಟೊ ಅಷ್ಟೆ
ಬೆಳೆವ ಬದುಕು ಕಂಡಲ್ಲೆ ಹಿಗ್ಗಿ ಉಳಿದೆಲ್ಲ ಮರೆತು ಬಿಟ್ಟೆ.

ಎದೆಯ ಕರೆಗೆ ಓಗೊಡುವುದೊಂದೆ ಒಡಗೂಡಿ ನಡೆವುದೊಂದೆ
ಹಿಡಿದ ದಾರಿ; ಅನುಮಾನಿಸಿದರು ಆಯಾಸವಿರದೆ ಬಂದೆ-
ಸ್ನೇಹ, ಪ್ರೀತಿ, ವಿಶ್ವಾಸ, ಹಾಸ ಮಧುಹಾಸ ತುಂಬಿದೊಸಗೆ
ವಧುವಿನಂತೆ ನಸುನಾಚಿ, ನಮಿಸಿ, ಈ ಜೀವ ಬಂತು ಹಸೆಗೆ.

(೧೯೯೬)

(ಸಾಹಿತ್ಯ ಸಮಾಹಿತ - ೨೦೦೭)

೨

## ಅ.ಭಾ. ೬೬ನೆಯ ಕನ್ನಡ ಸಾಹಿತ್ಯ ಸಮ್ಮೇಳನ ಮಂಗಳೂರು: ನಿಕಟಪೂರ್ವ ಅಧ್ಯಕ್ಷರ ನುಡಿ

ಸ್ವಾತಂತ್ರ್ಯ ಹೋರಾಟದ ಹಿನ್ನೆಲೆಯಲ್ಲಿ ಕನ್ನಡದ ಚಳುವಳಿಯನ್ನು ತಮ್ಮ ಜೀವನದ ಉಸಿರಾಗಿ ಮಾಡಿಕೊಂಡಿರುವ, ನಾಡಿನ ಹಿರಿಯ ಕವಿ, ವಿದ್ವಾಂಸ ಶ್ರೀ ಕಯ್ಯಾರ ಕಿಞ್ಞಣ್ಣ ರೈ ಅವರನ್ನು ಅಖಿಲ ಭಾರತ ೬೬ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪೀಠವನ್ನು ಅಲಂಕರಿಸಬೇಕೆಂದು ಗೌರವಪೂರ್ವಕ ಕೇಳಿಕೊಳ್ಳುತ್ತೇನೆ. ಅವರ ಪದ್ಯದ ('ಭಾಗವತ') ಒಂದು ನುಡಿ ನೆನಪಾಗುತ್ತಿದೆ :

ಇಂದು 'ಕಲ್ಯಾಣ', ನಾಳೆ 'ಕಾಳಗ'ವು
ಈ 'ಪ್ರಸಂಗ'ಗಳೆ ಮರಳಿ
ಅದನೆ ಉಚ್ಚರಿಸಿ, ನಾಡನೆಚ್ಚರಿಸಿ
ಬಾಳಿಗರ್ಥವನು ಹೇಳಿ.
ಜೀವ ಚೈತನ್ಯ ಚಿಮ್ಮಿ ಹೊಮ್ಮಿಸಿದೆ
ಧಿಮ್ಮಿ ಧೀಂಕಿಟಂ ನೃತ್ಯ;
ಬಿಂಬವೆಂತೊ ಪ್ರತಿಬಿಂಬವಂತೆಯೆ
ನೀನೆ ಭಾಗವತ, ಸತ್ಯ.

ಹಿಂದಿನ ಅಧ್ಯಕ್ಷರು ಇಂದಿನ ಅಧ್ಯಕ್ಷರಿಗೆ ಅಧಿಕಾರ ವಹಿಸಿಕೊಡುವುದು ಎನ್ನುವ ಮಾತು ಕೇವಲ ಅಲಂಕಾರ ಪ್ರಾಯವಾದದ್ದು. ಯಾಕೆಂದರೆ, ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದವರಿಗೆ ಹಾಗೆ ಹೇಳಿಕೊಳ್ಳುವಂತಹ ಯಾವ ಅಧಿಕಾರಗಳೂ ಇಲ್ಲ. ಆದರೆ, ನಾಡಿನ ಜನತೆ ಅವರ ಸಾರಸ್ವತ ಸೇವೆಯನ್ನು, ನಾಡಿನಳ್ಕರೆಯನ್ನು ಅಭಿಮಾನದಿಂದ ಒಪ್ಪಿಕೊಂಡು ಮೆಚ್ಚುಗೆಯಿಂದ ನೀಡುವ ಒಂದು ಅತ್ಯುಚ್ಚ ಗೌರವ ಇದು ಎಂಬುದೇ ಇಲ್ಲಿ ಮುಖ್ಯ.

ಒಂದು ವರ್ಷ, ಅಥವಾ ಮುಂದಿನ ಸಮ್ಮೇಳನ ನಡೆಯುವವರೆಗೆ ಸಾಹಿತ್ಯ ಪರಿಷತ್ತಿನ ಕಾರ್ಯಕಲಾಪಗಳಲ್ಲಿ ಭಾಗವಹಿಸಿ, ತಮ್ಮ ಅನುಭವದಿಂದ ಮಾರ್ಗದರ್ಶನ ಮಾಡುತ್ತ, ನಾಡಿನ ವಿವಿಧ ಕಡೆಗಳಲ್ಲಿ ನಡೆಯುವ ಕನ್ನಡದ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುವುದರ ಮೂಲಕ ಪರಿಷತ್ತಿನ ಕಾರ್ಯಗಳಲ್ಲಿ ಅವರು ಹೆಚ್ಚಿನ ಉತ್ಸಾಹವನ್ನು ತುಂಬಬಹುದು.

ಇಂಥ ಕಾರ್ಯಕ್ಕೆ ಅನುಕೂಲವಾಗುವಂತೆ ಸಮ್ಮೇಳನಾಧ್ಯಕ್ಷರಿಗೆ ವಾಹನ ಸೌಕರ್ಯ ಹಾಗೂ ಅಗತ್ಯವಾದ ಕೆಲವು ಸೌಲಭ್ಯಗಳನ್ನು ಒದಗಿಸಿಕೊಡುವ ಏರ್ಪಾಡು ಮಾಡುವುದಾಗಿ ಹಿಂದೆ ಮುಖ್ಯಮಂತ್ರಿಗಳಾಗಿದ್ದ, ಇದೇ ಜಿಲ್ಲೆಯವರಾದ ಮಾನ್ಯ ಶ್ರೀ ವೀರಪ್ಪ ಮೊಯ್ಲಿಯವರು ಮಂಡ್ಯ ಸಾಹಿತ್ಯ ಸಮ್ಮೇಳನದ ವೇದಿಕೆಯಿಂದ ಹೇಳಿದ್ದುಂಟು.

ತರುವಾಯ ಬಂದ ಮಂತ್ರಿವರ್ಯರು ಅಂಥ ಒಂದು ಅವಶ್ಯಕ ಯೋಜನೆಯನ್ನು ಯಾಕೆ ಮುಂದುವರಿಸಲಿಲ್ಲವೊ ತಿಳಿಯದು.

ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಪಟೇಲರು, ವಯೋವೃದ್ಧರೂ ಜ್ಞಾನ ವೃದ್ಧರೂ ಆದ ಶ್ರೀ ಕಿಞ್ಞಣ್ಣ ರೈ ಅವರಿಗೆ ಈ ಸೌಲಭ್ಯವನ್ನು ಕೂಡಲೆ ಒದಗಿಸಿಕೊಡಬೇಕೆಂದು ವೈಯಕ್ತಿಕವಾಗಿ ಹಾಗೂ ಇಲ್ಲಿ ನೆರೆದ ಸಮಸ್ತ ಕನ್ನಡಿಗರ ಪರವಾಗಿ ಬಿನ್ನವಿಸಿಕೊಳ್ಳುತ್ತೇನೆ.

ಕಳೆದ ಒಂದು ವರ್ಷದಲ್ಲಿ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಡಾ. ಸಾ.ಶಿ. ಮರುಳಯ್ಯನವರ ಸಹಕಾರದೊಂದಿಗೆ ಪರಿಷತ್ತಿನ ಕಾರ್ಯಕಲಾಪಗಳಲ್ಲಿ ಭಾಗವಹಿಸಿ, ನಾಡಿನ ವಿವಿಧ ಭಾಗಗಳಲ್ಲಿ ಹಾಗೂ ಗಡಿನಾಡಿನ ಕೆಲವು ಪ್ರದೇಶಗಳಲ್ಲಿ ಸಂಚರಿಸಿ ಸಾಧ್ಯವಿದ್ದಷ್ಟು ಕಾರ್ಯಕ್ರಮಗಳಲ್ಲಿ ನಾನು ಪಾಲ್ಗೊಂಡಿದ್ದೇನೆ. ಈ ಹಿನ್ನೆಲೆಯಲ್ಲಿ ಎರಡು ಮಾತು ಹೇಳುವುದು ಉಚಿತ ಎಂದು, ನಾನು ಭಾವಿಸಿದ್ದೇನೆ.

ಸಾಹಿತ್ಯ ಸಮ್ಮೇಳನ ನಡೆಸಲು ಸರಕಾರ ಪ್ರತಿವರ್ಷ ಮೀನಮೇಷ ಎಣಿಸಿ ಧನಸಹಾಯ ಮಾಡುವ ಬದಲು, ಗಟ್ಟಿ ಮನಸ್ಸು ಮಾಡಿ ಒಂದು ಅಥವಾ ಎರಡು ಕೋಟಿ ಹಣವನ್ನು ಸಾಹಿತ್ಯ ಪರಿಷತ್ತಿನ ಹೆಸರಿನಲ್ಲಿ ಖಾಯಂ ಠೇವಣಿಯಿಟ್ಟು ಅದರ ಬಡ್ಡಿಯಲ್ಲಿ ಪ್ರತಿವರ್ಷ ಸಮ್ಮೇಳನವನ್ನು ಅರ್ಥಪೂರ್ಣವಾಗಿ ನಡೆಸಿಕೊಂಡು ಹೋಗುವ ಹೊಣೆಯನ್ನು ಪರಿಷತ್ತಿಗೆ ವಹಿಸುವುದು ಎಲ್ಲ ದೃಷ್ಟಿಯಿಂದಲೂ ಒಳ್ಳೆಯದೆಂದು ನನ್ನ ಅನಿಸಿಕೆ.

ತಾಲೂಕು ಮತ್ತು ಜಿಲ್ಲಾಮಟ್ಟದ ಸಾಹಿತ್ಯ ಸಮ್ಮೇಳನಗಳನ್ನು ವ್ಯಾಪಕವಾಗಿ ನಡೆಸುವುದರ ಕಡೆಗೆ ಹೆಚ್ಚು ಲಕ್ಷ್ಯಗೊಟ್ಟು, ಅಖಿಲ ಭಾರತ ಮಟ್ಟದ ಇಂಥ ಸಮ್ಮೇಳನಗಳನ್ನು ಪರಿಷತ್ತು ಎರಡು ವರ್ಷಕ್ಕೊಮ್ಮೆ ಯಾವ ಅವಸರವೂ ಇಲ್ಲದೆ, ಹೆಚ್ಚು ವ್ಯವಸ್ಥಿತವಾಗಿ, ಹೆಚ್ಚು ಉಪಯುಕ್ತವಾಗಿ ನಡೆಸಿದರೆ ಸಾಕು ಎಂದು ತೋರುತ್ತದೆ.

ಕರ್ನಾಟಕದ ಐದೂ ಗಡಿ ಪ್ರದೇಶಗಳಲ್ಲಿ, ಗಡಿಯಾಚೆಯ ಮತ್ತು ಈಚೆಯ ಕನ್ನಡಿಗರ ಸ್ಥಿತಿಯನ್ನು ಸುಧಾರಿಸುವ ಪ್ರಯತ್ನದಲ್ಲಿ ಕಳೆದ ನಾಲ್ವತ್ತು ವರ್ಷಗಳಲ್ಲಿ ಯಾವುದೇ ಬಗೆಯ ತೀವ್ರತೆಯಾಗಲಿ, ಕಾಳಜಿಯಾಗಲಿ ಕಂಡುಬರುತ್ತಿಲ್ಲ.

ಗಡಿನಾಡಿನ ಆರ್ಥಿಕ, ಔದ್ಯೋಗಿಕ, ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಅಭಿವೃದ್ಧಿಗಾಗಿ ಪ್ರತ್ಯೇಕ ಪ್ರಾಧಿಕಾರವನ್ನು ನಿರ್ಮಿಸಿ ಸರಕಾರ ಕೂಡಲೆ ಕಾರ್ಯಪ್ರವೃತ್ತವಾಗುವುದು ಅತ್ಯಂತ ಅಗತ್ಯವಾಗಿದೆ. ರಾಜಕೀಯ ಸಂಕಲ್ಪ ಶಕ್ತಿ ಇಲ್ಲದೆ ಹೋದರೆ ಕನ್ನಡದ ಬೆಳವಣಿಗೆ ಕಷ್ಟವೆಂದೇ ಹೇಳಬಹುದು.

ನಮ್ಮ ರಾಜ್ಯದಲ್ಲಿರುವ ಎಲ್ಲ ಅಕಾಡೆಮಿಗಳು ತಮ್ಮ ಮೂರು ವರ್ಷದ ಅವಧಿಯಲ್ಲಿ ಒಂದು ವರ್ಷಪೂರ್ತಿ ತಮ್ಮ ಎಲ್ಲ ಬಗೆಯ ಚಟುವಟಿಕೆಗಳನ್ನು ಗಡಿಭಾಗಗಳಲ್ಲಿ ನಡೆಸುವುದನ್ನು ಕಡ್ಡಾಯಗೊಳಿಸಬೇಕು. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯೂ ಇದಕ್ಕೆ ಹೊರತಾಗಲಾರದು. ಇದು ಕಾರ್ಯರೂಪದಲ್ಲಿ ಬಂದದ್ದಾದರೆ ೩ ವರ್ಷಗಳಲ್ಲಿ ಇಡೀ ಚಿತ್ರವೇ ಬದಲಾಗಬಹುದು.

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಜಿಲ್ಲಾ ಕಚೇರಿಗಳ ಸ್ಥಿತಿ ಯಾವ ರೀತಿಯಿಂದಲೂ ಸಮಾಧಾನಕರವಾಗಿಲ್ಲವೆಂಬುದು ವಿಷಾದದ ಸಂಗತಿ. ಅಲ್ಲಲ್ಲಿಯ ಅವಶ್ಯಕತೆಗಳ ಹಾಗೂ ಸೌಕರ್ಯಗಳ ಕಡೆಗೆ ಇಲಾಖೆ ತೀವ್ರ ಗಮನಹರಿಸುವುದೆಂದು ಆಶಿಸುತ್ತೇನೆ.

ಕನ್ನಡ ಅಭಿವೃದ್ಧಿ ಪ್ರಾಧಿಕಾರ ಕನ್ನಡದ ಪ್ರತಿಷ್ಠಾಪನೆಯ ದಿಸೆಯಲ್ಲಿ ದಿಟ್ಟತನದ ಕ್ರಮಗಳನ್ನು ಕೈಗೊಳ್ಳುತ್ತಿದ್ದು ಕೆಲದಿನಗಳ ಮಟ್ಟಿಗಾದರೂ ಅದು ತನ್ನ ಚಟುವಟಿಕೆಗಳನ್ನು ಬೆಂಗಳೂರಿನಲ್ಲಿಯೇ ಕೇಂದ್ರೀಕರಿಸುವುದು ಸೂಕ್ತವೆಂದು ನನ್ನ ಅಭಿಪ್ರಾಯ.

ಎರಡು ಕರ್ನಾಟಕ, ಮೂರು ಕರ್ನಾಟಕ ಇತ್ಯಾದಿ ಮಾತುಗಳು ಇತ್ತೀಚೆಗೆ ಕೇಳಿಬರತೊಡಗಿವೆ. ಅದನ್ನು ಲಘುವಾಗಿ ಭಾವಿಸದೆ ನಾಡಿನ ಆಡಳಿತ ಸೂತ್ರ ಹಿಡಿದವರು ಅದರ ಮೂಲ ಕಾರಣಗಳನ್ನು ಕಂಡು ಹಿಡಿದು, ಸಮಗ್ರ ನಾಡಿನ ಅಭಿವೃದ್ಧಿಯಲ್ಲಿ ಸಮತೋಲನವನ್ನು ಕಾಯ್ದುಕೊಳ್ಳುವತ್ತ ಸರಕಾರ ಗಮನವೀಯ ಬೇಕಾದುದು ಅಗತ್ಯವಾಗಿದೆ.

ಕರ್ನಾಟಕದ ಅಖಂಡತ್ವದ ತೇಜಸ್ಸಿನಲ್ಲಿ ಸಂಕ್ಷಿಪ್ತ ಭರತಖಂಡವೇ ಅಡಗಿದೆ :

ಇದು ನೆಲದ ತುಂಡಲ್ಲ,
ಐದು ಖಂಡದ ಅಖಂಡ ಜೀವ ಪಿಂಡ.
ಇದರ ಬದುಕಿನ ಮೇರೆ ಭೋರ್ಗರೆವ ಸಾಗರವು
ಜೊಂಡು ಪಾಚಿಯ ಚಿಕ್ಕ ಹೊಂಡವಲ್ಲ.

ಕೂಡಿ ಬಾಳುತ ಕೂಡಿ ಬೆಳೆಯೋಣ ಕಾಂತಿಯಲಿ
ಸೂರ್ಯಪಾನದ ಹಾಗೆ ವೀರ್ಯ ತಳೆದು
ಸಕಲ ಜೀವದ ಭಾವ ಹಿಗ್ಗಿ ಪರಿಮಳಿಸಿರಲಿ
ಬರುವ ಸುಗ್ಗಿಗೆ ನೂರು ಬೀಜ ಹಿಡಿದು.

ಇವತ್ತು 'ಸೃಜನಶೀಲ ಮನಸ್ಸು' ಅನೇಕ ಆತಂಕಗಳ ನಡುವೆ ಕೆಲಸ ಮಾಡಬೇಕಾಗಿದೆ. ಒಂದು ಬಗೆಯ ಗೊಂದಲದ ವಾತಾವರಣದಲ್ಲಿ ನಾವಿದ್ದೇವೆ.

ಸರಳತೆ, ನಿರಾಡಂಬರತೆ ಮಾಯವಾಗಿ ತೋರಿಕೆ, ಆಡಂಬರ ಎಲ್ಲ ರಂಗಗಳನ್ನು ಆಕ್ರಮಿಸಿದೆ. ನಿಜ ಹಾಗೂ ಕಪಟಗಳ ನಡುವೆ ಅಂತರ ಕಡಿಮೆಯಾಗಿದೆ. ಸೃಜನಶೀಲ ಮನಸ್ಸು ಮೊದಲಿಗೆ ಈ ಸವಾಲನ್ನು ಗೆಲ್ಲಬೇಕಿದೆ. ಜೊತೆಗೆ ನಮ್ಮ ಮೂಲ ನಂಬಿಕೆಗಳನ್ನೇ ಅಲುಗಾಡಿಸುವಂಥ ಘಟನೆಗಳು ನಡೆಯುತ್ತಿದೆ. ನಿಜವಾದ ಸಂವಾದ ವ್ಯಕ್ತಿ ವ್ಯಕ್ತಿಗಳ ನಡುವೆ ಮಾತ್ರವಲ್ಲ, ಸೃಜನಶೀಲ ಮನಸ್ಸು ಹಾಗೂ ಸಮಾಜದ ನಡುವೆ ಸಹ ಸಾಧ್ಯವಾಗುತ್ತಿಲ್ಲ.

ಇದನ್ನು ಎದುರಿಸಬೇಕಾದರೆ ನಿಜದ ನೆಲೆಗಳನ್ನು ಅನ್ವೇಷಿಸಬೇಕು. ಅದಕ್ಕಿರುವ ಒಂದೇ ದಾರಿ ಮನುಷ್ಯ ಮತ್ತೆ ಪ್ರಕೃತಿಗೆ ಹೋಗುವುದು. ಸೃಜನಶೀಲ ಮನಸ್ಸು ಪ್ರಕೃತಿಯ ಜೊತೆ ಅರ್ಥಪೂರ್ಣ ಸಂಬಂಧ ಸೃಷ್ಟಿಸಿಕೊಳ್ಳಲು ಸಾಧ್ಯವಾಗಬೇಕು.

ಯಾವುದೇ ಕ್ಷೇತ್ರದಲ್ಲಾಗಲಿ ತನ್ನ ತಿಳಿವಳಿಕೆಯನ್ನು, ಸೃಜನಶೀಲತೆಯನ್ನು 'ವ್ಯಾವಹಾರಿಕ ಲಾಭ'ಕ್ಕಾಗಿ ಬಳಸಿಕೊಂಡಾಗ ಅದು ಮಾರಾಟದ ಸರಕಾಗಿ ಬಿಡುತ್ತದೆ. ಸಾಹಿತ್ಯದಲ್ಲೂ ಈ ಅಪಾಯವಿದೆ.

ಆದರೆ ಶ್ರೇಷ್ಠ ಸಾಹಿತ್ಯ ಹೀಗೆ ವ್ಯಾಪಾರದ ಸರಕಾಗುವುದಿಲ್ಲ. ಸೃಜನಶೀಲ ಮನಸ್ಸು 'ವ್ಯಾವಹಾರಿಕ ಜಗತ್ತಿ'ನ ಲಾಭ ನಷ್ಟಗಳ ಬಗ್ಗೆ ಎಂದೂ ತಲೆಕೆಡಿಸಿಕೊಳ್ಳುವುದಿಲ್ಲ.

ಇಂಥ ಒಂದು ಸಂದರ್ಭದಲ್ಲಿ, ನವೋದಯ ಸಾಹಿತ್ಯದ ಪ್ರಾರಂಭ ಕಾಲದಿಂದಲೂ ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿಯ ಮುಖ್ಯ ಕೇಂದ್ರಗಳಲ್ಲಿ ಒಂದಾಗಿರುವ ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರಿನಲ್ಲಿ ಈ ಸಾಹಿತ್ಯ ಸಮ್ಮೇಳನ ನೆರವೇರುತ್ತಿದೆ.

ಶ್ರೇಷ್ಠ ಬರವಣಿಗೆಗೆ, ವಿಶಿಷ್ಟ ಪತ್ರಿಕಾ ವ್ಯವಸಾಯಕ್ಕೆ, ಅಮೂಲ್ಯ ಸಂಶೋಧನೆಗೆ, ಅಪಾರ ಕಾರ್ಯಶ್ರದ್ಧೆಗೆ, ಶಿಸ್ತಿಗೆ, ಸಾಹಸಕ್ಕೆ, ಸಂಘಟನೆಗೆ, ವ್ಯವಹಾರ ಕುಶಲತೆಗೆ, ಮುಖ್ಯವಾಗಿ ಭಾಷಾಬಾಂಧವ್ಯಕ್ಕೆ ಹೆಸರಾಗಿರುವ ಈ ಪ್ರದೇಶದಲ್ಲಿ ಸಮ್ಮೇಳನ ಹೆಚ್ಚು ಅರ್ಥಪೂರ್ಣವಾಗಿ ಜರುಗುವುದೆಂಬ ಭರವಸೆ ನನಗಿದೆ.

ನಮ್ಮ ಮುಂದೆ ಮೊರೆಯುತ್ತಿರುವ ಈ ಪಡುಗಡಲು, ಈ ಜೀವನ ಸಮುದ್ರ ಯಾರ್‍ಯಾರಿಗೆ ಏನೇನು ಕೊಟ್ಟಿರುವುದೊ ಯಾರು ಬಲ್ಲರು? ಆದರೆ ಕವಿಗೆ, ಸಾಹಿತಿಗೆ ಬಹಳ ಮಹತ್ವದ್ದೆಂದರೆ ಅದು ಕೊಟ್ಟ ಉಪ್ಪು- Salt of life. ಆ ಉಪ್ಪಿನ ಋಣವನ್ನು ನಾವು ತೀರಿಸಬೇಡವೆ?

ಪ್ರೊ. ಎಸ್.ವಿ. ಪರಮೇಶ್ವರಭಟ್ಟರ ಶ್ರೇಷ್ಠ ಕೃತಿ 'ಉಪ್ಪುಕಡಲು' ಗ್ರಂಥದಿಂದ ಜೀವನ ಸಮುದ್ರದ ದುಃಖ-ಧನ್ಯತೆಗಳೆರಡನ್ನೂ ಧ್ವನಿಸುವ ಒಂದು ಅಪೂರ್ವವಾದ ವಚನವನ್ನು ಉದಾಹರಿಸಿ ತಮ್ಮ ಅಪ್ಪಣೆ ಪಡೆಯುತ್ತೇನೆ.

ನೀನು ಕೆಲವರಿಗೆ ಕಂಚು ಕೊಟ್ಟೆ, ಕೆಲವರಿಗೆ ಬೆಳ್ಳಿ ಕೊಟ್ಟೆ
ಕೆಲವರಿಗೆ ಬಂಗಾರ ಕೊಟ್ಟೆ.
ಕಂಚು ಪಡೆದವರು ಕೆಲರು ತಾಳ ಮಾಡಿಕೊಂಡರು,
ಕೆಲರು ತಂಬಾಣ ಮಾಡಿಕೊಂಡರು,
ಕೆಲರು ದೀಪದ ಕಂಬ ಮಾಡಿ ದೇವಾಲಯಕ್ಕೆ ಕೊಟ್ಟರು.
ಬೆಳ್ಳಿ ಪಡೆದವರು ಕೆಲರು ಚೆಂಬು, ಲೋಟ ಹರಿವಾಣಗಳು
ಮಾಡಿಕೊಂಡರು,

ಕೆಲರು ಬಳೆ, ಕಡಗ, ಅಂದುಗೆ ಮಾಡಿಕೊಂಡರು.
ಚಿನ್ನ ಪಡೆದವರು ಕೆಲರು ಅದನು ಹೂತಿಟ್ಟರು,
ಕೆಲರು ದೇವರಿಗೆ ಕಿರೀಟ ಹಾರಾದಿಗಳ ಮಾಡಿಸಿ ಹಾಕಿದರು.
ನನಗೆ ನೀನುಕಂಚು ಕೊಡಲಿಲ್ಲ, ಬೆಳ್ಳಿ ಕೊಡಲಿಲ್ಲ
ಬಂಗಾರ ಕೊಡಲಿಲ್ಲ.

ನನಗೆ ನೀನು ಕೊಟ್ಟುದು ಉಪ್ಪು.
ನಾನು ಅದನ್ನು ಕೃತಜ್ಞತೆಯಿಂದ ಸ್ವೀಕರಿಸಿ, ಗಂಜಿಗೆ ಬೆರಸಿ
ನನ್ನವರಿಗೆ ಉಣಬಡಿಸಿದೆನು, ನಾನು ಉಂಡೆನು.
ಈಗ ಹಾಡುವೆನು ಆ ಅದನೆ ಕುರಿತು
ಹೇಗಾದರೂ ಉಪ್ಪಿನ ಋಣ ತೀರಿದರಾಯಿತಲ್ಲವೆ
ಸದಾಶಿವ ಗುರುವೆ ?

(೧೯೯೭)

(ಸಾಹಿತ್ಯ ಸಮಾಹಿತ : ೨೦೦೭)

೩

# ಮಧುರೈ ಕಾಮರಾಜ ವಿಶ್ವವಿದ್ಯಾಲಯದ ಕನ್ನಡ ವಿಭಾಗದ ಬೆಳ್ಳಿಹಬ್ಬ

ಎಲ್ಲರಿಗೂ ನಮಸ್ಕಾರ.

ಸಮಾರಂಭದ ಅಧ್ಯಕ್ಷರೂ, ಮಧುರೈ ಕಾಮರಾಜ ವಿಶ್ವವಿದ್ಯಾಲಯದ ಕುಲಪತಿಗಳೂ ಆದ ಸನ್ಮಾನ್ಯ ಪ್ರೊ. ಕೆ. ಆಳುದೈಯ ಪಿಳ್ಳೈ ಅವರೆ, ಕುಲಸಚಿವರಾದ ಡಾ.ಎ. ರಾಮಸ್ವಾಮಿ ಅವರೆ, ಡಾ. ಪಾ.ಶ. ಶ್ರೀನಿವಾಸ ಅವರೆ, ಸಿಂಡಿಕೇಟ್ ಸದಸ್ಯರಾದ ಡಾ. ಎ. ಶ್ರೀನಿವಾಸನ್ ಅವರೆ, ಕನ್ನಡ ವಿಭಾಗದ ಮುಖ್ಯಸ್ಥರಾದ ಡಾ. ಪಿ.ವಿ. ಕುಲಕರ್ಣಿಯವರೆ, ವಿಭಾಗದ ಅಧ್ಯಾಪಕ ಮಿತ್ರರೆ, ವಿಶ್ವವಿದ್ಯಾಲಯದ ವಿವಿಧ ವಿಭಾಗಗಳ ಮುಖ್ಯಸ್ಥರೆ, ವಿಚಾರ ಸಂಕಿರಣದಲ್ಲಿ ಭಾಗವಹಿಸಲಿರುವ ವಿದ್ವಾಂಸರೆ, ವಿದ್ಯಾರ್ಥಿ ಮಿತ್ರರೆ, ಮಹನೀಯರೆ ಹಾಗೂ ಮಹಿಳೆಯರೆ,

ಮಧುರೆಯ ಮೀನಾಕ್ಷಿ ದೇವಾಲಯದಷ್ಟೇ ಪ್ರಸಿದ್ಧವಾದ ಹಾಗೂ ದೇಶದ ವಿದ್ವಾಂಸರ ಗಮನವನ್ನು ಸೆಳೆದ ಇನ್ನೊಂದು ಹೆಸರು, ಮಧುರೈ ಕಾಮರಾಜ ವಿಶ್ವವಿದ್ಯಾಲಯವೆಂಬ ಜ್ಞಾನದೇಗುಲ. ಈ ವಿಶ್ವವಿದ್ಯಾಲಯದ ಪ್ರಥಮ ಕುಲಪತಿಗಳೂ ಪ್ರಸಿದ್ಧ ಭಾಷಾವಿಜ್ಞಾನಿಯೂ ಆಗಿದ್ದ ಪ್ರೊ. ಟಿ.ಪಿ. ಮೀನಾಕ್ಷಿ ಸುಂದರನಾಯನಾರ್ ಅವರ ದೂರದೃಷ್ಟಿಯ ಫಲವಾಗಿ ರೂಪುಗೊಂಡ, ಪ್ರಮುಖ ಭಾಷಾ ವಿಭಾಗಗಳಲ್ಲಿ ಒಂದಾದ, ಕನ್ನಡ ಪೀಠದ ಬೆಳ್ಳಿಹಬ್ಬದ ಸಂಭ್ರಮದಲ್ಲಿ ಮುಖ್ಯ ಅತಿಥಿಯಾಗಿ ಪಾಲ್ಗೊಳ್ಳುವ ಅವಕಾಶ ದೊರೆತದ್ದು ನನ್ನ ಭಾಗ್ಯವೆಂದು ನಾನು ಭಾವಿಸಿದ್ದೇನೆ. ಈ ಅವಕಾಶವನ್ನು ಒದಗಿಸಿಕೊಟ್ಟ ಕನ್ನಡ ವಿಭಾಗದ ಮುಖ್ಯಸ್ಥರಾದ ಡಾ. ಪಿ.ವಿ. ಕುಲಕರ್ಣಿಯವರಿಗೆ, ಇನ್ನುಳಿದ ಅಧ್ಯಾಪಕ ಮಿತ್ರರಿಗೆ, ವಿಶ್ವವಿದ್ಯಾಲಯದ ಆಡಳಿತಾಧಿಕಾರಿಗಳಿಗೆ ಹಾಗೂ ಇಲ್ಲಿ ನೆರೆದಿರುವ ತಮ್ಮೆಲ್ಲರಿಗೆ ನನ್ನ ಕೃತಜ್ಞತಾಪೂರ್ವಕ ವಂದನೆಗಳನ್ನು ಸಲ್ಲಿಸುತ್ತೇನೆ.

ಕನ್ನಡ ವಿಭಾಗದ ಸ್ಥಾಪಿತ ಮುಖ್ಯಸ್ಥರಾಗಿ ಅದರ ಬಹುಮುಖ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರವಹಿಸಿದ ಡಾ. ಪಾ.ಶ. ಶ್ರೀನಿವಾಸರೊಂದಿಗೆ, ಕರ್ನಾಟಕದ ಹಾಗೂ ನೆರೆಯ ವಿಶ್ವವಿದ್ಯಾಲಯಗಳ ಹಿರಿಯ ವಿದ್ವಾಸರು ಈ ಸಮಾರಂಭದಲ್ಲಿ ಭಾಗವಹಿಸುತ್ತಿರುವುದು ಈ ವಿಶ್ವವಿದ್ಯಾಲಯದ ಕನ್ನಡ ವಿಭಾಗದ ಬಗೆಗಿರುವ ಅವರ ಪ್ರೀತಿ, ಅಭಿಮಾನಗಳಿಗೆ ಸಾಕ್ಷಿಯಾಗಿದೆ.

ಕಳೆದ ಇಪ್ಪತ್ತೈದು ವರ್ಷಗಳಲ್ಲಿ ಈ ವಿಭಾಗ ಹಂತ ಹಂತವಾಗಿ ಬೆಳೆದು ಬಂದ ರೀತಿ

ಹಾಗೂ ಸದ್ದುಗದ್ದಲವಿಲ್ಲದೆ ನಡೆಸಿದ ಭಾಷಾ ಬಾಂಧವ್ಯದ ಸಾಧನೆಗಳನ್ನು ಗಮನಿಸಿದರೆ, ಈ ಕಾರ್ಯ ಸಾಂಸ್ಕೃತಿಕ ರಾಯಭಾರತ್ವಕ್ಕಿಂತ ಕಡಿಮೆಯದೇನೂ ಅಲ್ಲ ಎಂದು ಹೇಳಬೇಕೆನಿಸುತ್ತದೆ. ಕನ್ನಡೇತರರಿಗೆ ಕನ್ನಡವನ್ನು ಕಲಿಸುವ ಡಿಪ್ಲೊಮಾ ಕೋರ್ಸುಗಳಿಂದ ಮೊದಲುಗೊಂಡು, ಕನ್ನಡ ಭಾಷೆ, ಸಾಹಿತ್ಯಗಳಲ್ಲಿ ಪಿಎಚ್.ಡಿ ಪದವಿಗಾಗಿ ವ್ಯಾಸಂಗ, ಅದಕ್ಕಾಗಿ ವಿಶ್ವವಿದ್ಯಾಲಯದ ವತಿಯಿಂದ ಸಂಶೋಧನಾ ವೇತನ, ಎಂ.ಫಿಲ್. ವ್ಯಾಸಂಗ ಹಾಗೂ ಸ್ನಾತಕೋತ್ತರ ತರಗತಿಗಳ ಪ್ರಾರಂಭ-ಇವಕ್ಕೆಲ್ಲ ಅವಕಾಶ ಕಲ್ಪಿಸಿಕೊಟ್ಟಿರುವುದು ಒಂದು ಮಹತ್ವದ ಸಾಧನೆಯೆಂದೇ ಹೇಳಬಹುದು. ಅತ್ಯಂತ ಪರಿಶ್ರಮದಿಂದ ಪ್ರಕಟಣೆಗೆ ಸಿದ್ಧಗೊಂಡಿರುವ ತಮಿಳು-ಕನ್ನಡ ಭಾಷಾ ನಿಘಂಟುವಿನ ಕಾರ್ಯವಂತೂ ಕನ್ನಡ ಪೀಠದ ಬೆಳ್ಳಿಹಬ್ಬಕ್ಕೆ ಬಂಗಾರದ ಕಳಸವಿಟ್ಟಂತಾಗಿದೆ. ಈ ಹಿಂದೆಯೇ ೧೯೮೨ರಲ್ಲಿ 'ತಿರುಕ್ಕುರುಳ್' ಅನ್ನು ಸಮಗ್ರವಾಗಿ ಹಾಗೂ ಸಮರ್ಥವಾಗಿ ಕನ್ನಡಕ್ಕೆ ನೀಡಿದ ಡಾ. ಪಾ.ಶ. ಶ್ರೀನಿವಾಸರ ಕೃತಿ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಪಡೆದು ಕನ್ನಡ ಓದುಗರ ಅಪಾರ ಮೆಚ್ಚುಗೆಗೆ ಪಾತ್ರವಾಗಿದೆ. ಪ್ರಸ್ತುತ ಕನ್ನಡ ವಿಭಾಗದ ಅಧ್ಯಾಪಕವರ್ಗ ಸೃಜನ ಹಾಗೂ ಸಂಶೋಧನ ಎರಡರಲ್ಲೂ ನಿಷ್ಣಾತರಾಗಿರುವುದು ಅಭಿನಂದನೀಯ.

ಸದ್ಯಕ್ಕೆ ಈ ವಿಭಾಗ ಎದುರಿಸುತ್ತಿರುವ ಸಿಬ್ಬಂದಿಯ ಕೊರತೆಯನ್ನು ನೀಗಿಸುವಲ್ಲಿ ಹಾಗೂ ಮತ್ತೊಂದು ಪ್ರವಚನ ಕೊಠಡಿಯನ್ನು ವಿಭಾಗಕ್ಕೆ ಪೂರೈಸುವಲ್ಲಿ ವಿಶ್ವವಿದ್ಯಾಲಯ ದಯವಿಟ್ಟು ಸಹಕರಿಸಿ, ಅದು ಹಾಕಿಕೊಂಡಿರುವ ಮಹತ್ವದ ಯೋಜನೆಗಳ ಯಶಸ್ಸಿನಲ್ಲಿ ಸಂಪೂರ್ಣ ಭಾಗಿಯಾಗುವುದಾಗಿ ಹಾರೈಸುತ್ತೇನೆ. ಕರ್ನಾಟಕ ಸರಕಾರವು ಕೂಡ ಹಿಂದೆ ನೀಡಿದ ಆಶ್ವಾಸನೆಯನ್ನು ಪುನರ್‌ಪರಿಶೀಲಿಸಿ ಸೂಕ್ತ ನಿಧಿಯನ್ನು ಒದಗಿಸಿ ತನ್ನ ಕರ್ತವ್ಯವನ್ನು ಪಾಲಿಸುವುದೆಂದು ಆಶಿಸಿದ್ದೇನೆ. ತಿರುಕ್ಕುರುಳ್‌ನ ಒಂದು ಪದ್ಯ ಈ ಸಂದರ್ಭದಲ್ಲಿ ನೆನಪಾಗುತ್ತದೆ:

ಈ ನ್ಱ ಪೊೞುದಿಱ್‌ಪೆರಿದುವಕ್ಕುವರ್ ತನ್ ಮಗನ್ನೈ
ಚ್ಚಾ ನೋನ್ಱ್ ಎನಕ್ಕೇಟ್ಟ ತಾಯ್

ತನ್ನ ಮಗ ಕೀರ್ತಿಶಾಲಿಯೆಂದು ಹೆರರಿಂದ ಕೇಳಿದಾಗ ತಾಯಿಗೆ ಆಗುವ ಆನಂದ, ತಾನು (ಮಗನಿಗೆ) ಜನ್ಮವಿತ್ತಾಗ ಪಡೆದ ಆನಂದಕ್ಕಿಂತ ಮಿಗಿಲಾದುದು.ಈ ವಿಶ್ವವಿದ್ಯಾಲಯದ ಮಗನಂತಿರುವ ಕನ್ನಡ ವಿಭಾಗಕ್ಕೆ ಇಷ್ಟೊಂದು ಪ್ರಶಂಸೆ ಸಲ್ಲುತ್ತಿರುವ ಸಂದರ್ಭದಲ್ಲಿ ಅದರ ಕುಲಪತಿಗಳು ಈ ತಾಯಿಗಾದ ಮಿಗಿಲಾದ ಆನಂದವನ್ನೆ ಈಗ ಅನುಭವಿಸುತ್ತಿರಬಹುದೆಂದು ನಾನು ಭಾವಿಸಿದ್ದೇನೆ.

ಮಾನ್ಯರೆ, ನಾನು ಈ ಸಂದರ್ಭದಲ್ಲಿ ಹೇಳಬೇಕೆಂದಿರುವ ಇನ್ನೂ ಕೆಲವು ಮಾತುಗಳನ್ನು ದಯವಿಟ್ಟು ಆಲಿಸಬೇಕಾಗಿ ತಮ್ಮಲ್ಲಿ ಬಿನ್ನವಿಸಿಕೊಳ್ಳುತ್ತೇನೆ.

ಸರ್ವಜ್ಞಂ ತದಹಂವಂದೇ ಪರಂಜ್ಯೋತಿಸ್ತಮೋಪಹಂ
ಪ್ರವೃತ್ತಾಯನ್ನುಖಾದ್ದೇವೀ ಸರ್ವಭಾಷಾ ಸರಸ್ವತಿ

The Supreme Light (or Intelligence) do I adore, that All-knowing dispenser of the darkness (of ignorance), from whose mouth proceeded the goddess, the sarasvati of all languages.

ಪ್ರಪಂಚದ ಎಲ್ಲಾ ಭಾಷೆಗಳಿಗೂ ದೇವಿ ಸರಸ್ವತಿ ಒಬ್ಬಳೇ. ಈ ಸತ್ಯವನ್ನು ಜಗತ್ತಿಗೆ ಸಾರಿದವನು ಕನ್ನಡ ವೈಯಾಕರಣ ಕವಿ 'ಕರ್ನಾಟಕ ಭಾಷಾಭೂಷಣ'ದ ನಾಗವರ್ಮ (ಸು. ೧೦೫೦). ಇದು ಕವಿ ಸಹಜ ಭಾವುಕತೆಯ ಮಾತಲ್ಲ, ವೈಜ್ಞಾನಿಕ ಸತ್ಯ. ಪಂಚೇಂದ್ರಿಯಗಳ ಮೂಲಕ ಪಡೆಯುವ ಎಲ್ಲ ಅನುಭವಗಳನ್ನು ಅಭಿವ್ಯಕ್ತಗೊಳಿಸಲು ಎಲ್ಲ ಜನಕ್ಕೂ ತಾಯಿಯ ಎದೆಹಾಲಿನೊಂದಿಗೆಯೇ ದಕ್ಕಿರುವ ಒಂದೇ ಒಂದಾದ ಉಪಕರಣ ಭಾಷೆ. ಈ ವಿಚಾರವನ್ನು ಕನ್ನಡ ವ್ಯಾಕರಣಕಾರ ಕೇಶಿರಾಜ (ಸು. ೧೨೬೦) ವಾಗ್ದೇವಿಯ ಸ್ತೋತ್ರದಲ್ಲಿ ಹೀಗೆ ಹೇಳಿದ್ದಾನೆ:

ಶ್ರೀ ವಾಗ್ದೇವಿಗೆ ಶಬ್ದ -
ನಾನಾವಿಂದ್ರಿಯದ ವಿಷಯಮಂ ಶ್ರೋತ್ರದೊಳು-
ದ್ಭಾವಿಪ ನಿರ್ಮಲ ಮೂರ್ತಿಗಿ-
ಳಾವಂದ್ಯೆಗೆ ಶಾಸ್ತ್ರಮುಖದೊಳವನತನಪ್ಪೆಂ

ಶಬ್ದ, ಸ್ಪರ್ಶ, ರೂಪ, ರಸ, ಗಂಧ - ಈ ಪಂಚೇಂದ್ರಿಯ ವಿಷಯಗಳನ್ನು ಶ್ರೋತ್ರೇಂದ್ರಿಯ ಒಂದರಲ್ಲಿಯೇ ಶಬ್ದ ಮುಖದಿಂದ ಅಭಿವ್ಯಕ್ತಿಗೊಳಿಸುವ, ನಿರ್ಮಲ ಸ್ವರೂಪಿಯೂ ಭುವನಸ್ತುತ್ಯಳೂ ಆದ 'ವಾಕ್' ಎಂಬ ದೇವಿಗೆ ಶಾಸ್ತ್ರ ಪ್ರಾರಂಭದಲ್ಲಿ ನಮಸ್ಕರಿಸುತ್ತೇನೆ.

ಭಾರತದ ಭಾಷೆಗಳ ಬಾಂಧವ್ಯ - ನುಡಿಗಳ ನಂಟು - ಬೇರೆ ಬೇರೆ ತೆರನಾಗಿರಬಹುದು. ತಾಯಿ-ಮಗಳ, ಸಾಕುತಾಯಿ-ಸಾಕುಮಗಳ, ಅಕ್ಕ-ತಂಗಿ, ಸಂಬಂಧಗಳಾಗಿರಬಹುದು. ಭಾರತದ ಕೆಲವಾದರೂ ಭಾಷೆಗಳು ಸ್ವಾಭಿಮಾನವನ್ನು ಕಾಯ್ದುಕೊಂಡು ತಲೆಯೆತ್ತಿ ಮೆರೆದಿವೆ. ಆ ಕೆಲವಲ್ಲಿ ಕನ್ನಡ, ತಮಿಳುಗಳನ್ನು ಎತ್ತಿ ಹೇಳಬಹುದು.

ಪ್ರತಿಯೊಂದು ಭಾಷೆಯೂ, ಭಾಷೆಯನ್ನಾಡುವ ಜನವೂ ಭಾರತದ ಒಂದು ಅಂಗ. ದೇಹದ ಒಟ್ಟಿನ ಬಲಕ್ಕೆ, ಆರೋಗ್ಯಕ್ಕೆ ಪ್ರತಿ ಅಂಗದ ಪ್ರತ್ಯೇಕ ಬೆಳವಣಿಗೆಗೆ ಎಲ್ಲ ಅಂಗಗಳ ಪರಸ್ಪರ ಸಹಕಾರ ಅಗತ್ಯ. ಅಂಗೋಪಾಂಗಗಳಲ್ಲಿ ತಲೆ ಮುಖ್ಯವೊ ಪಾದ ಮುಖ್ಯವೊ ಎಂಬ ಪ್ರಶ್ನೆ ಅರ್ಥವಿಲ್ಲದ್ದು ಎಂದೇ ಭಾರತದ ಎಲ್ಲ ಅಂಗೀಕೃತ ಭಾಷೆಗಳೂ ರಾಷ್ಟ್ರ ಭಾಷೆಗಳು, ಸಮಾನವಾದವು. ಅವು ಕೊಟ್ಟು - ತಂದು ಕೂಡಿ ಬಾಳಬೇಕು. ಹಾಗೆ ಬೆಳೆಯಬೇಕು. ಸ್ಪಷ್ಟವಾಗಿ ದೃಷ್ಟಿಗೋಚರವಾಗುತ್ತಿರುವ ವೈವಿಧ್ಯದಲ್ಲಿಯೂ ಅವೆಲ್ಲವನ್ನೂ ಒಂದುಗೂಡಿಸಿರುವುದು ತಾಯಿ ಭಾರತಮಾತೆಗೆ ಅವರೆಲ್ಲರೂ ಹರಿಯಲಾಗದ ಪ್ರೇಮದ ಕಟ್ಟುಗಳಿಂದು. ಭಾರತ ದೇಶದಲ್ಲಿ ಅಂತರ್ಗತವಾಗಿರುವ ಹಲವಾರು ಜನವರ್ಗಗಳ ವಿಷಯವನ್ನು ಬಲ್ಲವರಾಗಿದ್ದ ಕವಿ ಸುಬ್ರಹ್ಮಣ್ಯ ಭಾರತಿ ಹಾಡಿರುವುದೂ ಅದನ್ನೇ :

ಮುಖಗಳವಳಿಗೆ ಮೂವತ್ತು ಕೋಟಿ
ಆದರೊಂದೇ ಹೃದಯ;
ಭಾಷೆ ಹದಿನೆಂಟನಾಡುವಳು ಅವಳು
ಆದರೊಂದೇ ಮನಸು.

ಮೂವತ್ತು ಕೋಟಿ ಮುಖಗಳಿದ್ದರೂ ಅವಳಿಗಿರುವುದು ಒಂದೇ ಹೃದಯ. ಹದಿನೆಂಟು ಭಾಷೆಗಳನ್ನು ಆಕೆ ಆಡುತ್ತಿದ್ದರೂ ಮನಸ್ಸು ಒಂದೇ.

ಕನ್ನಡ, ಪ್ರಾಚೀನ ಕಾಲದಲ್ಲಿ ಸಂಸ್ಕೃತದಿಂದ ಪ್ರಯೋಜನ ಪಡೆದಂತೆ, ಇಪ್ಪತ್ತನೇ ಶತಮಾನದಲ್ಲಿ ಇಂಗ್ಲಿಷಿನಿಂದಲೂ ಅದೇ ಪ್ರಮಾಣದ ಪ್ರಯೋಜನ ಪಡೆದಿದೆ. ಉಳಿದ ಭಾಷೆಗಳಿಗೂ ಈ ಮಾತು ಹೆಚ್ಚು ಕಡಿಮೆ ಅನ್ವಯಿಸುತ್ತದೆ. ಇಂಗ್ಲಿಷ್ ಕೂಡ ಈಗ ಭಾರತದ ಭಾಷಾ ಕುಟುಂಬಕ್ಕೆ ಸೇರಿ ಹೋಗಿದೆ. 'ಇಂಗ್ಲಿಷ್' ಮಗಳಲ್ಲದಿರಬಹುದು; ಸೊಸೆ ಎನ್ನಬಹುದಲ್ಲವೆ?

ಕೇಂದ್ರ ಸಾಹಿತ್ಯ ಅಕಾಡೆಮಿ, ರಾಷ್ಟ್ರೀಯ ಪುಸ್ತಕ ಸಂಸ್ಥೆ (ನ್ಯಾಶನಲ್ ಬುಕ್ ಟ್ರಸ್ಟ್), ದಕ್ಷಿಣ ಭಾಷಾ ಪುಸ್ತಕ ಸಂಸ್ಥೆ - ಇವು ಒಂದು ಭಾಷೆಯ ಪುಸ್ತಕವನ್ನು ಇನ್ನೊಂದು ಭಾಷೆಯಲ್ಲಿ ಪ್ರಕಟಿಸುವ ವ್ಯವಸ್ಥಿತ ಕಾರ್ಯಕ್ರಮವನ್ನು ಅನೇಕ ವರ್ಷಗಳಿಂದ ನಡೆಸಿಕೊಂಡು ಬರುತ್ತಿವೆ. ಈ ಕೆಲಸ ಇನ್ನೂ ವೇಗದಿಂದ - ಆದರೆ ಗುಣಮಟ್ಟಕ್ಕೆ ಬಾಧೆ ಬರದಂತೆ - ಮುಂದುವರಿಯಬೇಕಾಗಿದೆ. ಇದಕ್ಕೆ ಕಾರಣ, ಮಾಡಿದ ಕೆಲಸ ಸಾಲದೆಂದಲ್ಲ, ಪ್ರಕಟವಾದ ಪುಸ್ತಕಗಳ ವಿಚಾರವಾಗಿ ಪ್ರಚಾರ, ಮಾರಾಟದ ವ್ಯವಸ್ಥೆ ಅಷ್ಟೊಂದು ಸಮರ್ಪಕವಾಗಿಲ್ಲ. ಭಾಷಾಂತರ ಕಾರ್ಯಕ್ಕೆ ಮೊದಮೊದಲು ಜನ ಸಿಕ್ಕುವುದು ಕಷ್ಟವಾಗಿದ್ದರೂ ಈಗೀಗ ಪರಿಸ್ಥಿತಿ ಸ್ವಲ್ಪ ಸುಧಾರಿಸಿದೆ. ಪ್ರತಿಯೊಂದು ಭಾಷಾ ಪ್ರದೇಶದಲ್ಲಿಯೂ ಮಾತೃಭಾಷೆಯ ಜೊತೆಗೆ ಭಾರತದ ಇತರ ಮುಖ್ಯ ಭಾಷೆಗಳು ಒಂದೊಂದರಲ್ಲಿಯೂ ಪರಿಣತಿ ಪಡೆದ ಭಾಷಾಂತರಕಾರರ ತರಬೇತಿಗೆ ಆದ್ಯ ಗಮನ ಕೊಡಬೇಕಾಗಿದೆ.

ಕನ್ನಡ ಮತ್ತು ತಮಿಳು ಬಹು ಪ್ರಾಚೀನ ಕಾಲದಿಂದಲೂ ಭಾಷೆ ಹಾಗೂ ಸಾಹಿತ್ಯ ಕ್ಷೇತ್ರದಲ್ಲಿ ಬಲು ಹತ್ತಿರದ ಸಂಬಂಧವನ್ನು ಬೆಳಸಿಕೊಂಡು ಬಂದಿರುವುದು ತಮಗೆಲ್ಲ ಗೊತ್ತಿರುವ ಸಂಗತಿ. ತಮಿಳು ಮೂಲ ದ್ರಾವಿಡ ಲಕ್ಷಣಗಳನ್ನು ಉಳಿದೆಲ್ಲ ದ್ರಾವಿಡ ಭಾಷೆಗಳಿಗಿಂತಲೂ ಹೆಚ್ಚಾಗಿ ಉಳಿಸಿಕೊಂಡಿದ್ದರೆ ತಮಿಳು ಕೈಬಿಟ್ಟ ಪ್ರಾಚೀನ ರೂಪಗಳನ್ನು ಕನ್ನಡ ಉಳಿಸಿಕೊಂಡು ಬಂದಿರುವುದು ಕಂಡುಬರುತ್ತಿದೆ. ಪೂರ್ವದ ಹಳಗನ್ನಡವೆಂದು ಕರೆಯುವ ಭಾಷಾರೂಪವನ್ನು 'ಕನ್ನಮಿಳು' ಎಂದೊ 'ತಮಿಳ್ಕನ್ನಡ' ಎಂದೋ ಕರೆದರೂ ಆಗುತ್ತದೆ.

ಕನ್ನಡ-ತಮಿಳುಗಳು ಒಂದು ಮರದ ಎರಡು ಕೊಂಬೆಗಳ ಹಾಗೆ ವಿಶೇಷ ಸಾಮ್ಯವುಳ್ಳದ್ದು. ಮೂಲ ದ್ರಾವಿಡ ಭಾಷೆಯ ಬಹು ಹತ್ತಿರದ ಶಾಖೆಗಳಿವು. ಎಷ್ಟೋ ಶಬ್ದಗಳು ಕನ್ನಡ ತಮಿಳುಗಳೆರಡರಲ್ಲಿಯೂ ರೂಪಭೇದ, ಅರ್ಥಭೇದಗಳಿಲ್ಲದೆ ಒಂದೇ ರೀತಿ

ಪ್ರಯೋಗವಾಗುತ್ತಿರುವುದೇ ಇದಕ್ಕೆ ನಿದರ್ಶನ. (ಉದಾ : ತಾಯ್, ಪೆಣ್, ಅಡಿ, ಮುಡಿ, ಪಗಲ್, ಅಱಿವು; ನಾನ್, ನೀನ್, ಅದು, ಇದು; ನಲ್, ನೇರ್, ಮೆಲ್, ಇನಿಯ; ಆಡು, ಅಱಿ, ಓದು, ಓಡು, ನಂಬು;-ಆರು, ಏೞ್, ಪತ್ತು, ನೂರು ಇತ್ಯಾದಿ). ಇಷ್ಟೇ ಇಲ್ಲದೆ ವ್ಯಾಕರಣ ಪ್ರಕ್ರಿಯೆ, ನುಡಿಗಟ್ಟು, ಭಾಷಾ ಮರ್ಯಾದೆ - ಇವು ಎರಡೂ ಭಾಷೆಗಳಲ್ಲಿ ಒಂದೇ ಬಗೆಯಾಗಿರುವುದನ್ನು ಭಾಷಾತಜ್ಞರು ಗುರುತಿಸಿದ್ದಾರೆ.

ತಮಿಳು ಹೊರಗಿನ ಪ್ರಭಾವಗಳನ್ನು ಸುಲಭವಾಗಿ ಸ್ವೀಕರಿಸದೆ ತನ್ನತನವನ್ನು ಪಟ್ಟುಹಿಡಿದು ಕಾಪಾಡಿಕೊಳ್ಳುವುದು ತಮಿಳಿನವರ ಸ್ವಭಾವವೆಂದು ತೋರುತ್ತದೆ. ಕನ್ನಡ, ತೆಲುಗು, ಮಲಯಾಳಗಳು ಸಂಸ್ಕೃತ ಶಬ್ದಭಂಡಾರವನ್ನೂ, ಭಾವಸಮೃದ್ಧಿಯನ್ನೂ, ರಚನಾವಿಶೇಷವನ್ನೂ ನಿರರ್ಗಳವಾಗಿ ಉಪಯೋಗಿಸಿಕೊಂಡಿವೆ. ತಮಿಳು ಬಹು ಸಂಯಮದಿಂದ, ಅತ್ಯಂತ ಮಿತವಾಗಿ ಈ ಎರವಲನ್ನು ಪಡೆದುಕೊಂಡಿದೆ. ಶಾಸ್ತ್ರ ಪರಿಭಾಷೆಗೆ ಕೂಡ ಸ್ವಾವಲಂಬನೆಯಿಂದಲೇ ಶಬ್ದಗಳನ್ನು ಸೃಷ್ಟಿಸಿಕೊಂಡಿದೆ. ಕೆಲವು ಸಂದರ್ಭಗಳಲ್ಲಿ ಸಂಸ್ಕೃತ ಶಬ್ದಗಳನ್ನು ತೆಗೆದುಕೊಂಡಿದ್ದರೂ ಅದನ್ನು ತನ್ನ ಜಾಯಮಾನಕ್ಕೆ ತಕ್ಕಂತೆ ಮಾರ್ಪಡಿಸಿಕೊಂಡು ಬಳಸುತ್ತದೆ. (ಉದಾ: ತರುಮಮ್ (ಧರ್ಮ), ಕರುಮಮ್ (ಕರ್ಮ), ಪತ್ತಿ (ಭಕ್ತಿ), ಇಲಕ್ಕಣಮ್ (ಲಕ್ಷಣ, ವ್ಯಾಕರಣ). ಉದ್ದಾಮ ಸಂಸ್ಕೃತ ವಿದ್ವಾಂಸರೂ ಕೂಡ ತಮಿಳಿನಲ್ಲಿ ಬರೆಯುವಾಗ ಸಂಸ್ಕೃತ ಶಬ್ದಗಳನ್ನು ಅತಿಯಾಗಿ ಬೆರಸದೆ ಅಚ್ಚ ತಮಿಳನ್ನೇ ವಿಶೇಷವಾಗಿ ಬಳಸುತ್ತಿರುವುದು ಕಂಡುಬರುತ್ತದೆ.

ಸಾಹಿತ್ಯ ಕ್ಷೇತ್ರದಲ್ಲೂ ಕನ್ನಡ-ತಮಿಳುಗಳ ಬಾಂಧವ್ಯ ಗಾಢವಾಗಿದೆ. ಜನಪದ ಸಾಹಿತ್ಯದಲ್ಲಿ ತಾನೇ ತಾನಾಗಿ, ಅಚ್ಚಗನ್ನಡ ಸಾರ್ವಭೌಮ ಛಂದಸ್ಸು ಎನಿಸಿದ 'ತ್ರಿಪದಿ', ತಮಿಳು 'ಕುಱಳ್'ನ ಒಡಹುಟ್ಟು. ಮಹಾಕವಿ ಹರಿಹರನ ಕೃತಿಗಳಲ್ಲಿ ನಾನಾ ಗತಿಗಳಲ್ಲಿ ನರ್ತಿಸುತ್ತಿರುವ 'ರಗಳೆ' 'ತಮಿಳು' 'ಅಗಬಟ್ಟು'ವಿನ (ಅಗವಲ್ ಛಂದಸ್ಸಿನ) ಪ್ರತಿಬಿಂಬ. ಅಕ್ಕರ ವೃತ್ತಜಾತಿಗೂ, ತಮಿಳು 'ಅಶಿರಿಯಪ್ಪಾ'ನಿಗೂ ಸಂಬಂಧವಿದ್ದರೂ ಇರಬಹುದೆಂದು ವಿದ್ವಾಂಸರ ಊಹೆ.

ಕನ್ನಡ-ತಮಿಳು ಸಾಹಿತ್ಯಗಳನ್ನು ತುಲನಾತ್ಮಕವಾಗಿ ಅಭ್ಯಾಸ ಮಾಡುವುದು ಉಭಯ ಭಾಷೆಗಳ ಪಂಡಿತರಿಗೂ ಲಾಭದಾಯಕವೆಂಬುದನ್ನು ಈ ವಿಶ್ವವಿದ್ಯಾಲಯದ ಕನ್ನಡ ವಿಭಾಗ ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ತೋರಿಸಿಕೊಡಬಹುದೆಂದು ಆಶಿಸಿದ್ದೇನೆ.

ಈಗ ತಿಳಿದು ಬಂದಿರುವಂತೆ ಕನ್ನಡದ ಪ್ರಸಿದ್ಧ ಕವಿಗಳಲ್ಲೊಬ್ಬನಾದ ಹರಿಹರನು ರಚಿಸಿರುವ 'ಪುರಾತನ ರಗಳೆ'ಗಳ ನಾಯಕರೆಲ್ಲ ತಮಿಳುನಾಡಿನ ಶಿವಭಕ್ತರು. ತಮಿಳಿನಲ್ಲಿ ಅವರ ಚರಿತ್ರೆ 'ಪೆರಿಯ ಪುರಾಣಂ' ಎಂಬ ಪ್ರಸಿದ್ಧ ಕಾವ್ಯದಲ್ಲಿ ವಿಶದವಾಗಿ ನಿರೂಪಿತವಾಗಿದೆ.ಅದು ಹರಿಹರನಿಗಿಂತ ಸ್ವಲ್ಪ ಹಿಂದಿನ ಗ್ರಂಥ. ಕನ್ನಡದ ಪ್ರಸಿದ್ಧ ಚಂಪು 'ರಾಜಶೇಖರ ವಿಳಾಸ'ದ ವಸ್ತು ಗುಬ್ಬಿ ಮಲ್ಲಣಾರ್ಯನ 'ಭಾವಚಿಂತಾರತ್ನ'ದಿಂದ ತೆಗೆದುಕೊಂಡದ್ದು. 'ಭಾವಚಿಂತಾರತ್ನ'ದ ಕಥೆ ತಮಿಳು ಮೂಲದ್ದಂತೆ.

ಇದೇ ರೀತಿ ಕನ್ನಡದಿಂದ ತಮಿಳಿಗೆ ಹೋಗಿರುವುದೂ ಉಂಟು. ಪ್ರಸಿದ್ಧ ಶಿವಶರಣೆ

ಮಹಾದೇವಿಯಕ್ಕ ಮತ್ತು ಪರಶಿವನ ಅವತಾರವೆನಿಸಿದ ಅಲ್ಲಮಪ್ರಭು - ಇವರ ಜೀವನ ವೃತ್ತಾಂತವನ್ನೊಳಗೊಂಡ ಚಾಮರಸನ 'ಪ್ರಭುಲಿಂಗಲೀಲೆ' ತಮಿಳಿಗೆ ಭಾಷಾಂತರವಾಗಿದೆ. ೧೭ನೇ ಶತಮಾನದ ಪ್ರಸಿದ್ಧ ಕವಿ ಶಿವಪ್ರಕಾಶಸ್ವಾಮಿಗಳು ಈ ಕಾವ್ಯವನ್ನು ತಮಿಳು ಕಾವ್ಯವಾಗಿ ಪರಿವರ್ತಿಸಿದ್ದಾರೆ. 'ತಮಿಳು ಸಾಹಿತ್ಯ ಚರಿತ್ರೆ'ಯಲ್ಲಿಯೂ ಈ ವಿಷಯ ಉಲ್ಲೇಖಗೊಂಡಿದೆ. ಡಾ. ಪ್ರ.ವಿ. ಕುಲಕರ್ಣಿಯವರ 'ತಮಿಳಿನಲ್ಲಿ ಕನ್ನಡ ವೀರಶೈವ ಸಾಹಿತ್ಯ' ಎಂಬ ಸಂಪ್ರಬಂಧ ಹಾಗೂ ಡಾ. ಪಾ.ಶ. ಶ್ರೀನಿವಾಸರ 'ಸಾಹಿತ್ಯ ಕಾವೇರಿ' ಕೃತಿಗಳಲ್ಲಿ ಅನೇಕ ಮೌಲಿಕ ಸಂಗತಿಗಳನ್ನು ಸಂಶೋಧನಾತ್ಮಕವಾಗಿ ವಿವರಿಸಲಾಗಿದೆ.

ಆಧುನಿಕ ಕಾಲದಲ್ಲಿ ಸ್ವಾತಂತ್ರ್ಯ ಚಳವಳಿಯ ಹೊತ್ತಿಗೆ ಮತ್ತು ಅನಂತರ ರಾಷ್ಟ್ರದ ಬೇರೆ ಬೇರೆ ಪ್ರದೇಶಗಳ ಜನರಲ್ಲಿ ಹೆಚ್ಚಾಗುತ್ತ ಬಂದು ಅವರ ಭಾಷಾ ಸಾಹಿತ್ಯಗಳಲ್ಲೂ ಪರಸ್ಪರ ಕೊಳು-ಕೊಡೆಗಳು ಹೆಚ್ಚತೊಡಗಿದವು. ಕನ್ನಡ-ತಮಿಳುಗಳಿಗೂ ಈ ಮಾತು ಅನ್ವಯಿಸುತ್ತದೆ. ಪತ್ರಿಕೆಗಳ ಮೂಲಕ, ವಿಶ್ವವಿದ್ಯಾಲಯಗಳೇ ಮೊದಲಾದ ಸಂಸ್ಥೆಗಳ ಮೂಲಕ ಎಷ್ಟೋ ಭಾಷಾಂತರಗಳೂ ರೂಪಾಂತರಗಳೂ ಪ್ರಕಟಗೊಂಡಿವೆ.

ತಮಿಳಿನಿಂದ ಕನ್ನಡಕ್ಕೆ ರಾಜಾಜಿಯವರ ಹಲವು ಸಣ್ಣಕಥೆಗಳು, ಭಗವದ್ಗೀತೆ, ರಾಮಾಯಣ (ದಿ. ಕೆ. ಸಂಪದ್ಗಿರಿರಾಯರು), ನಮ್ಮಾಳ್ವಾರರ 'ತಿರುವಾಯ್ ಮೊಳಿ'ಯ ಕೆಲವು ಪಾಶುರಗಳನ್ನು 'ಸಿರಿಬಾಯಿನುಡಿ'ಯೆಂದು ಹಿರಿಯ ಕವಿ ಪು.ತಿ. ನರಸಿಂಹಾಚಾರ್ ಕನ್ನಡಿಸಿದ್ದಾರೆ. ಅಬುನ್ ಅವರ ಕೆಲವು ಕಾದಂಬರಿಗಳನ್ನು ಮತ್ತೂರು ಕೃಷ್ಣಮೂರ್ತಿ ಕನ್ನಡಕ್ಕೆ ತಂದಿದ್ದಾರೆ. ಜಯಲಕ್ಷ್ಮೀ ಶ್ರೀನಿವಾಸನ್ ಅವರು ತಮಿಳಿನಿಂದ ಕನ್ನಡಕ್ಕೂ, ಕನ್ನಡದಿಂದ ತಮಿಳಿಗೂ ಅನೇಕ ಕತೆ ಕಾದಂಬರಿಗಳನ್ನು ಭಾಷಾಂತರ ಮಾಡಿದ್ದಾರೆ. ಅವುಗಳಲ್ಲಿ ಮಾಸ್ತಿ ವೆಂಕಟೇಶ ಅಯ್ಯಂಗಾರ್, ಅ.ನ. ಕೃಷ್ಣರಾಯ, ದೇವುಡು ನರಸಿಂಹಶಾಸ್ತ್ರೀ, ಸಿ.ಕೆ. ವೆಂಕಟರಾಮಯ್ಯ, ಬಿ.ಟಿ.ಜಿ. ಕೃಷ್ಣ, ಮೊದಲಾದವರ ಸಣ್ಣಕತೆ, ಕಾದಂಬರಿಗಳು ಮುಖ್ಯವಾಗಿವೆ.

ರೈಟ್ ಆನರೇಬಲ್ ಶ್ರೀನಿವಾಸಶಾಸ್ತ್ರೀಗಳ ಅಪೂರ್ವ ಬರಹಗಳು ತಮಿಳಿನಿಂದ ಕನ್ನಡಕ್ಕೆ ಬಂದಿವೆ. 'ಕಲ್ಕಿ' ಕೆ.ಎಸ್. ವೆಂಕಟರಮಣ, ಕೆ.ವಿ. ಜಗನ್ನಾಥನ್, 'ಗುಹಪ್ರಿಯೆ', 'ಕುಮುದಿನಿ', 'ಅನುತ್ತಮಾ', 'ಚೂಡಾಮಣಿ, ಬಾಲಾಂಬಾಳ್, ಪುರಸು, ಬಾಲಕೃಷ್ಣನ್, ಕ.ನಾ. ಸುಬ್ರಹ್ಮಣ್ಯಂ - ಮೊದಲಾದವರ ಕತೆ, ಕಾದಂಬರಿಗಳ ಕನ್ನಡಾನುವಾದಗಳನ್ನು ಇಲ್ಲಿ ಹೆಸರಿಸಬಹುದು. ಹಾಗೆಯೇ ಕಾವ್ಯ ಪ್ರಕಾರದಲ್ಲಿ ತಿರುವಳ್ಳುವರ್, ಮಹಾಕವಿ ಭಾರತಿ, ನಾಮಕ್ಕಲ್ ರಾಮಲಿಂಗಂ ಪಿಳ್ಳೈ, ಶುದ್ಧಾನಂದ ಭಾರತಿ, ಅವ್ವೈಯಾರ ಕೃತಿಗಳು, ಪೆರಿಯ ಪುರಾಣ ಮೊದಲಾದುವಲ್ಲದೆ ಇತ್ತೀಚಿನ ಲೇಖಕರ ಕೃತಿಗಳೂ ಕನ್ನಡದ ಕಣಜವನ್ನು ಸೇರುತ್ತಿರುವುದು ಸಂತೋಷದ ಸಂಗತಿ.

ಭಾರತದ ವೈವಿಧ್ಯಮಯ ಪ್ರಾದೇಶಿಕ ಭಾಷಾ ಸಾಹಿತ್ಯವನ್ನು ಪರಸ್ಪರ ಪರಿಚಯಿಸಲು ಸ್ವೋಪಜ್ಞ ಅನುವಾದಕರ ಅಗತ್ಯವಿದೆ. ಭಾರತೀಯ ಭಾಷಾ ಕೃತಿಗಳ ಪರಸ್ಪರ ಅತ್ಯುತ್ತಮ ಅನುವಾದಗಳಿಗೂ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ನೀಡುವ ಯೋಜನೆಯನ್ನು

ಕೆಲವರ್ಷಗಳಿಂದ ಜಾರಿಗೆ ತಂದಿರುವುದು ಮೆಚ್ಚತಕ್ಕ ಸಂಗತಿ. ಕನ್ನಡದ ಶ್ರೀಮತಿ ಸಾರಾ ಅಬೂಬಕರ್ ಅವರ 'ಚಂದ್ರಗಿರಿಯ ತೀರದಲ್ಲಿ' ಕಾದಂಬರಿಯ ತಮಿಳು ಭಾಷಾಂತರ ಕೃತಿ ಹಾಗೂ ಅದರ ಅನುವಾದಕ ಟಿ.ಎಸ್. ಸದಾಶಿವಂ ಅವರನ್ನು ೧೯೯೦ನೇ ಸಾಲಿನ ಪ್ರಶಸ್ತಿಗೆ ಆಯ್ಕೆ ಮಾಡಿರುವುದನ್ನು ಇಲ್ಲಿ ನೆನೆಯಬಹುದು. ಹಾಗೆಯೇ ಕೇಂದ್ರ ಸಾಹಿತ್ಯ ಅಕಾಡೆಮಿ ಬೆಂಗಳೂರಲ್ಲಿ ಭಾಷಾಂತರ ಕೇಂದ್ರವೊಂದನ್ನು ಸ್ಥಾಪಿಸಿ ಕಾರ್ಯಪ್ರವೃತ್ತವಾಗಿರುವುದು ತುಂಬ ಸ್ವಾಗತಾರ್ಹವಾಗಿದೆ.

ಭಾಷಾ ದೃಷ್ಟಿಯಿಂದ ಕನ್ನಡ-ತೆಲುಗುಗಳ ನಂಟು ಕನ್ನಡ-ತಮಿಳುಗಳ ನಂಟಿನಷ್ಟು ಹತ್ತಿರದ್ದಲ್ಲದಿದ್ದರೂ ಸಾಹಿತ್ಯಕ್ಷೇತ್ರದ ಕೊಳು-ಕೊಡೆಯ ದೃಷ್ಟಿಯಿಂದ ಈ ಉಭಯ ಭಾಷೆಗಳ ನಂಟು ಪ್ರಾಚೀನ ಕಾಲದಿಂದ ಗಮನಾರ್ಹವಾಗಿ ಸಾಗಿಬಂದಿದೆ. ಕೆಲವು ಸಣ್ಣ ವ್ಯತ್ಯಾಸಗಳನ್ನು ಬಿಟ್ಟರೆ ಎರಡೂ ಭಾಷೆಗಳ ಲಿಪಿಯೂ ಒಂದೇ ಆಗಿದೆ. ತೆಲುಗಿನ ಭಾರತದ ಮೇಲೆ ಪಂಪ ಭಾರತದ ಪ್ರಭಾವವಾಗಿದೆ. ವೀರಶೈವ ಧರ್ಮ ಪಾಲ್ಕುರಿಕೆ ಸೋಮನಾಥನಂಥ ಉಭಯಭಾಷಾ (ಕನ್ನಡ-ತೆಲುಗು) ಕವಿಗಳನ್ನು ಸೃಷ್ಟಿಸಿದೆ. ಬಸವೇಶ್ವರರ ಪ್ರಭಾವ ಆಂಧ್ರ ಪ್ರಾಂತದ ಸಾಹಿತ್ಯದ ಮೇಲೆ ತನ್ನ ಮುದ್ರೆಯನ್ನೊತ್ತಿದೆ. "ದ್ರಾವಿಡ ಸೋತ್ರಕ್ಕೆ ಸೇರಿದ ಕನ್ನಡ-ಮಲಯಾಳ ಭಾಷೆಗಳ ಬಾಂಧವ್ಯದ ವ್ಯಾಪ್ತಿಯನ್ನು ಪರಿಶೀಲಿಸಿದಾಗ ತಮಿಳು-ಮಲಯಾಳ ಭಾಷೆಗಳು ಕೈ ಕೈ ಹಿಡಿದು ಬಾಳಿದಂತಹ ಪ್ರಾಚೀನ ಉಲ್ಲೇಖಗಳು ಮಲಯಾಳ ಮತ್ತು ಕನ್ನಡ ಭಾಷೆಗಳಿಗೆ ಸಂಬಂಧಪಟ್ಟಂತೆ ದೊರೆಯುವುದಿಲ್ಲ" ಎಂಬ ಸಂಶೋಧಕರ (ಬಿ.ಕೆ. ತಿಮ್ಮಪ್ಪ) ಹೇಳಿಕೆ ಸತ್ಯ ಸಂಗತಿಯಾಗಿರುವಷ್ಟೇ ನಮ್ಮನ್ನು ವಿಚಾರಕ್ಕೆ ತೊಡಗಿಸುವ ಸಂಗತಿಯೂ ಆಗಿದೆ. ಆದರೆ ಆಧುನಿಕ ಯುಗದಲ್ಲಿ ಕನ್ನಡ-ಮಲಯಾಳ ಪರಸ್ಪರ ಭಾಷಾಂತರಗೊಂಡ ಕೃತಿಗಳ ಸಂಖ್ಯೆ ಹೆಚ್ಚುತ್ತಿರುವುದು ಆಶಾದಾಯಕವಾಗಿದೆ.ಹಾಗೆಯೇ ಕನ್ನಡದಿಂದ ಮಲಯಾಳಂದಲ್ಲಿ ಅನುವಾದಗೊಂಡ ಈ ಕೃತಿಗಳ ಮಾರಾಟ ಕನ್ನಡಕ್ಕಿಂತಲೂ ಹೆಚ್ಚಿನ ಸಂಖ್ಯೆಯಲ್ಲಿ ನಡೆಯುತ್ತಿರುವುದು ಶುಭದಾಯಕವಾಗಿದೆ.

ನಾವಿಂದು ಕನ್ನಡ, ತಮಿಳು, ತೆಲುಗು, ಮಲಯಾಳಂ ಭಾಷೆಗಳಲ್ಲಿ ಬರೆಯುತ್ತಿದ್ದರೂ ನಾವೆಲ್ಲರೂ ಭಾರತೀಯ ಲೇಖಕರೇ ಅಲ್ಲವೇ? ಆ ದೃಷ್ಟಿಯಿಂದ ಇಲ್ಲಿ ಒಂದು ವಿಷಯವನ್ನು ಪ್ರಸ್ತಾಪಿಸಬಯಸುತ್ತೇನೆ.

ವಿಚಾರವಂತನಾದ ಭಾರತೀಯ ಪ್ರಜೆ ಇಂದು ತೀವ್ರವಾಗಿ ಎದುರಿಸುತ್ತಿರುವ ಪ್ರಶ್ನೆ : "ಭಾರತ ಎತ್ತ ಸಾಗಿದೆ?" ಈ ಪ್ರಶ್ನೆಯನ್ನು ೧೯ನೆಯ ಶತಮಾನದ ಮಧ್ಯಕಾಲದಿಂದಲೇ ಮತ್ತೆ ಮತ್ತೆ ಕೇಳುತ್ತ ಬರಲಾಗಿದೆ. ಭಾರತದ ತಹಳದಿಯನ್ನೇ ಅಲುಗಾಡಿಸಿದ ವಸಾಹತುಶಾಹಿಯ ಆಘಾತದೊಡನೆ ಭಾರತೀಯ ಮನಸ್ಸು ನಿತ್ಯವೂ ಹೋರಾಡಬೇಕಾಯಿತು. ರಾಷ್ಟ್ರೀಯ ಆಂದೋಲನಕ್ಕೆ ರಾಜಕೀಯ ದೃಷ್ಟಿಯೊಂದೇ ಅಲ್ಲದೆ ಭಾರತೀಯ ವ್ಯಕ್ತಿತ್ವದ ಗಾಢ ಶೋಧದ ಬೌದ್ಧಿಕ ಮುಖವೂ ಇದ್ದಿತು. ರಾಷ್ಟ್ರ ಕಟ್ಟುವ ಕಾರ್ಯಕ್ಕೆ ನಾವು ಅಣಿಯಾಗಿದ್ದರೆ ಅಥವಾ ಅದಕ್ಕಾಗಿ ಹೋರಾಡುತ್ತಿದ್ದರೆ, ಭಾರತದ ಎಲ್ಲ ವಿಶೇಷ ಗುಣಧರ್ಮಗಳನ್ನು, ವೈಶಿಷ್ಟ್ಯಗಳನ್ನು

ಒಳಗೊಂಡ ಸ್ಪಷ್ಟ ನೋಟ ನಮಗೆ ಅತ್ಯವಶ್ಯ. ರಾಷ್ಟ್ರದ ನವೀಕರಣಕ್ಕೆ ಬೇಕಾಗುವ ದೃಷ್ಟಿಯನ್ನು ನಿಚ್ಚಳಗೊಳಿಸುವಾಗ ಅದರ ಸಂಪ್ರದಾಯದಲ್ಲಿರುವ ಕಾಲ ವಿರೋಧಿ ಅಥವಾ ದುಷ್ಕೃತ್ಯಕಾರಿ ಅಂಶಗಳನ್ನು ವಿಸರ್ಜಿಸಬೇಕಾಗುತ್ತದೆ. ಹಾಗೆಯೇ ಪ್ರಜಾಪ್ರಭುತ್ವಕ್ಕೆ ಸಲ್ಲುವ ದಯಾಪರ ಮೌಲ್ಯ ಪದ್ಧತಿಗಳನ್ನು, ನ್ಯಾಯಬದ್ಧವಾದ ಹಾಗೂ ಆರೋಗ್ಯಕರ ಅಂಶಗಳನ್ನು ಉಳಿಸಿಕೊಳ್ಳಬೇಕಾಗುತ್ತದೆ. ಅದೇ ಕಾಲಕ್ಕೆ, ವಿದೇಶೀ ಮೂಲದ ವಿಚಾರಗಳು, ತೀರ ಆಧುನಿಕವಾಗಿದ್ದು ಅಪೇಕ್ಷಣೀಯವೆನಿಸಿದರೆ ಅವುಗಳನ್ನು ಭಾರತೀಯ ಮನೋಭಾವದೊಂದಿಗೆ ಸಂಯೋಜಿಸಿಕೊಳ್ಳಲು ನಾವು ಕಲಿಯಬೇಕು. ಆದರೆ ತಿರುಳು ಮುಖ್ಯ; ಕೇವಲ ಹೊಸತನಕ್ಕಾಗಿ ಅವುಗಳನ್ನು ಕಿತ್ತು ತಂದು ಇಲ್ಲಿ ಊರಬೇಕಾಗಿಲ್ಲ. ಯಾವುದು ಭಾರತ? ಯಾವುದು ಭಾರತೀಯ? ಭಾರತೀಯತೆ ಎಂದರೆ ಏನು? ಇವು ಅಪ್ರಯೋಜಕವಾದ ಬೌದ್ಧಿಕ ಪ್ರಶ್ನೆಗಳಲ್ಲ; ಇವೆಲ್ಲ ರಾಷ್ಟ್ರದ ವರ್ಧಿಷ್ಣು ವಿದ್ಯಾವಂತ ವರ್ಗ ಮನಸ್ಸುಗೊಟ್ಟು ವಿವೇಚಿಸಬೇಕಾದ ಸಂಗತಿಗಳು.

**ಮಿತ್ರರೆ,**

ನೀವು ಪ್ರೀತಿಯಿಂದ, ಗೌರವದಿಂದ ಆಲಿಸುತ್ತೀರೆಂದು ನಾನು ಒಂದಿಷ್ಟು ದೀರ್ಘವಾಗಿಯೇ ಮಾತನಾಡಿದೆ.

ಈ ವಿಶ್ವವಿದ್ಯಾಲಯದ ಕನ್ನಡ ವಿಭಾಗ ಎಂದಿನಂತೆ ವಿಶ್ವವಿದ್ಯಾಲಯದ ಹಾಗೂ ಸಂಬಂಧಪಟ್ಟ ಎಲ್ಲರ ಸಹಕಾರದೊಂದಿಗೆ ಇನ್ನೂ ಹೆಚ್ಚಿನ ಬೆಳವಣಿಗೆಯನ್ನು ಪ್ರಗತಿಯನ್ನು ಸಾಧಿಸಲೆಂದು ಹಾರೈಸಿ ನನ್ನ ಕವಿತೆಯೊಂದರ ವಾಚನದೊಂದಿಗೆ ತಮ್ಮ ಅಪ್ಪಣೆ ಪಡೆಯುತ್ತೇನೆ.

ನೂರು ಮನಸು, ನೂರು ಕನಸು
ಏಳಿ, ಬೆಳ್ಳಿ ಮೂಡಿದೆ -
ರಜತೋತ್ಸವ ರಥಕೆ ಮುಂದೆ
ಧ್ರುವಮಂಡಲ ಹರಡಿದೆ.

ಇದು ವಾಸ್ತವ, ಇದು ಕಲ್ಪನೆ
ಸದ್ದಿಲ್ಲದ ಸಾಧನೆ;
ಹೊಸ ಯುಗಾದಿ, ಹೊಸ ದಿಗಂತ
ಹೊಸ ಗುರಿಗಳ ಶೋಧನೆ.

ವಿಶ್ವದೆದೆಯ ತೆರೆದನುಭವ -
ಕನ್ನಡಕುಲ ಚಿಂತನೆ;
ಎದ್ದೇಳುವ ಜನಪದವೇ
ಸದ್ಭಾವಕೆ ವಂದನೆ.

ಅಸಂತೋಷ, ಅಸಹನೆಗಳ

ತಿರುಗಣೆಮಡು ಆಚೆಗೆ;
ಸೌಹಾರ್ದದ, ಸೌಂದರ್ಯದ
ಒಲುಮೆಯ ದಡ ಈಚೆಗೆ.

ನಯವಿನಯವೆ, ಸೌಜನ್ಯವೆ
ವಿದ್ಯೆಯ ತವರ್ಮನೆಯೆ,
ಬುದ್ಧಿಗೆ ಹೃದ್ಗತವು ಹೊಳೆಯೆ
ಉದ್ಧಾರವು ಸನಿಹವೆ.

ನೂರು ಮನಸು, ನೂರು ಕನಸು
ಏಳಿ : ಬೆಳ್ಳಿ ಮೂಡಿದೆ;
ದಣಿವಿಲ್ಲದ ದುಡಿಮೆಗಾಗಿ
ಇಡಿ ಹಗಲೇ ಕಾದಿದೆ.

(ಸಾಹಿತ್ಯ ಸಮಾಹಿತ : ೨೦೦೭)

೪

# ಕನ್ನಡ ನವೋದಯ ಮತ್ತು ಸಾಲಿರಾಮಚಂದ್ರರಾಯರ ಕಾವ್ಯ : ವಿಚಾರ ಸಂಕಿರಣದ ಸಮಾರೋಪ ಭಾಷಣ

'ನವೋದಯ ಮತ್ತು ಸಾಲಿರಾಮಚಂದ್ರರಾಯರ ಕಾವ್ಯ' ಕುರಿತ ಈ ವಿಚಾರಸಂಕಿರಣ ಅರ್ಥಪೂರ್ಣವಾಗಿ ನೆರವೇರುವಂತೆ ನೋಡಿಕೊಂಡ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾದ ಡಾ. ಗಿರಡ್ಡಿ ಗೋವಿಂದರಾಜ ಅವರಿಗೆ ಮೊದಲು ಹಾರ್ದಿಕ ಅಭಿನಂದನೆಗಳು. ಇಂಥ ಒಂದು ಮಹತ್ವದ ಸಾಹಿತ್ಯಿಕ ಸಂದರ್ಭದಲ್ಲಿ ನನಗೆ ಈ ಕಾರ್ಯಕ್ರಮದ ಸಮಾರೋಪದ ಅಧ್ಯಕ್ಷತೆಯ ಗೌರವನ್ನು ನೀಡಿದ್ದಕ್ಕಾಗಿ ಅವರಿಗೂ ಸಾಲಿರಾಮಚಂದ್ರರಾಯ ಪ್ರತಿಷ್ಠಾನಕ್ಕೂ ನನ್ನ ಕೃತಜ್ಞತೆಗಳು.

ಇಂದು ಬೆಳಗಿನಿಂದ ನಡೆದ ಎರಡೂ ಗೋಷ್ಠಿಗಳ ವಿಷಯಗಳು ಸಾಲಿಯವರ ಮನೋಧರ್ಮ ಹಾಗೂ ಕಾವ್ಯಸೃಷ್ಟಿಗೆ ಅನುಗುಣವಾಗಿದ್ದು, ನವೋದಯ ಕಾವ್ಯದ ಹಿನ್ನೆಲೆಯಲ್ಲಿ ಅವುಗಳ ಪರಿಶೀಲನೆ ನಡೆಸಿದ್ದು ಸಮಂಜಸವಾಗಿದೆ.

ಕಳೆದ ವರ್ಷವೇ ಧಾರವಾಡದಲ್ಲಿ ಸಾಲಿರಾಮಚಂದ್ರರಾಯ ಪ್ರತಿಷ್ಠಾನ ಸ್ಥಾಪನೆಗೊಂಡದ್ದು ಹಾಗೂ ಅದೇ ಸಂದರ್ಭದಲ್ಲಿ 'ಕನ್ನಡ ಪುಸ್ತಕ ಪ್ರಾಧಿಕಾರ' ಪ್ರಕಟಿಸಿದ ಸಾಲಿಯವರ 'ಸಮಗ್ರಕಾವ್ಯ'ದ ಬಿಡುಗಡೆಯಾಗಿ ಸಾಲಿಯವರ ಕಾವ್ಯದ ಅಭ್ಯಾಸಕ್ಕೆ ಒಳ್ಳೆ ಅನುಕೂಲ ಒದಗಿದಂತಾಯಿತು. ಅದರ ಮುಂದುವರಿಕೆ ಎನ್ನುವಂತೆ ಈ ವರ್ಷ ಈ ವಿಚಾರಸಂಕಿರಣ ಏರ್ಪಡಿಸಿದ್ದು ಅವರ ಕಾವ್ಯದ ಮರುಚಿಂತನೆಯ ದೃಷ್ಟಿಯಿಂದ ಮಹತ್ವದ್ದಾಗಿದೆ.

ಹೀಗೇ ಹತ್ತು ವರ್ಷಗಳ ಹಿಂದೆ ಡಾ. ಜಿ.ಎಸ್. ಶಿವರುದ್ರಪ್ಪನವರು ಅಧ್ಯಕ್ಷರಾಗಿದ್ದಾಗ ಸಾಹಿತ್ಯ ಅಕಾಡೆಮಿ ಇದೇ ಸ್ಥಳದಲ್ಲಿ ಎರಡು ದಿನಗಳ ವಿಚಾರಸಂಕಿರಣವೊಂದನ್ನು ಏರ್ಪಡಿಸಿತ್ತು. ಅದರ ವಿಷಯ: 'ಆಧುನಿಕ ಕನ್ನಡ ಕಾವ್ಯ : ಉತ್ತರ ಕರ್ನಾಟಕದ ಕೊಡುಗೆ' ಎಂಬುದಾಗಿತ್ತು. ಅದರ ಉದ್ಘಾಟನೆ ನೆರವೇರಿಸಿ ಉದ್ಬೋಧಕ ಭಾಷಣ ಮಾಡಿದ ದಿವಂಗತ ಡಾ. ಶಾಂತಿನಾಥ ದೇಸಾಯಿಯವರನ್ನು ಈ ಸಂದರ್ಭದಲ್ಲಿ ನೆನೆದುಕೊಳ್ಳಬೇಕು. ಹದಿಮೂರು ವಿಮರ್ಶಾತ್ಮಕ ಪ್ರಬಂಧಗಳನ್ನೊಳಗೊಂಡ ಸಂಕಲನವನ್ನು ಡಾ. ಗಿರಡ್ಡಿಯವರು ದೀರ್ಘವಾದ ಉಪಯುಕ್ತ ಪ್ರಸ್ತಾವನೆಯೊಂದಿಗೆ ಸಂಪಾದಿಸಿಕೊಟ್ಟಿರುವುದನ್ನು ಅಭ್ಯಾಸಿಗಳು ಆಗಲೇ ಗಮನಿಸಿರಬಹುದು. ಆಗ ಆಯ್ದುಕೊಂಡ ಕವಿಗಳಲ್ಲಿ ಉತ್ತರ ಕರ್ನಾಟಕದ ಹಿರಿಯ ಕವಿಗಳಲ್ಲಿ ಒಬ್ಬರಾದ

ಸಾಲಿಯವರೊಬ್ಬರು ಉಳಿದುಕೊಂಡು ಬಿಟ್ಟಿದ್ದರು. ಅದಕ್ಕೆ ಯೋಜಕರು ಕೊಟ್ಟ ಮುಖ್ಯಕಾರಣ 'ಹೊಸ ವಸ್ತುಗಳ ಬಗ್ಗೆ ಕೂಡ ಅವರು ಹಳೆಯ ರೀತಿಯಲ್ಲಿ ಬರೆದರು' ಎನ್ನುವುದಾಗಿತ್ತು. ಪ್ರಸ್ತುತ ವಿಚಾರಸಂಕಿರಣದ ಮೂಲಕ ಆ ಕೊರತೆಯನ್ನು ಈಗ ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ತುಂಬಿಕೊಟ್ಟಿರುವುದು ಸಮಾಧಾನಕರ ಸಂಗತಿಯಾಗಿದೆ. ಈ ಪ್ರಬಂಧಗಳು ಪುಸ್ತಕ ರೂಪದಲ್ಲಿ ಪ್ರಕಟವಾದಾಗ ಸಾಲಿಯವರ ಕಾವ್ಯದ ನೆಲೆ-ಬೆಲೆಯನ್ನು ಗುರುತಿಸಲು ಕೆಲಮಟ್ಟಿಗಾದರೂ ಸಾಧ್ಯವಾಗಬಹುದೆಂದು ನಾನು ಆಶಿಸಿದ್ದೇನೆ.

ಕನ್ನಡ ನವೋದಯ ಸಾಹಿತ್ಯ ಸಂದರ್ಭದಲ್ಲಿ ಧಾರವಾಡ, ಮೈಸೂರು, ಮಂಗಳೂರು ಮೂರು ಮಹತ್ವದ ಪಾತ್ರವಹಿಸಿದ ಕೇಂದ್ರಗಳಾಗಿದ್ದವು. (ಈಚೆಗೆ ಡಾ. ಜಿ.ಎಸ್. ಶಿವರುದ್ರಪ್ಪನವರು ಹಲಸಂಗಿಯನ್ನು ನಾಲ್ಕನೆಯ ಕೇಂದ್ರವಾಗಿ ಗುರುತಿಸಿರುವುದುಂಟು.) ಆಗ ಈ ಭಾಗದ ಕವಿಗಳನ್ನು ಆಳವಾಗಿ ಪ್ರಭಾವಿಸಿದ್ದು ದೇಸೀಯ ಮೂಲಗಳು ಎನ್ನುವ ಕಾರಣದಿಂದ ಧಾರವಾಡಕ್ಕೆ ಹೆಚ್ಚಿನ ಮಹತ್ವ ಬಂದಿದೆ. ಅಂಥ ಕವಿಗಳಲ್ಲಿ ಹೆಸರಿದ್ದರೂ ಹೆಸರಾಗದೇ ಹೋದ - ಹಿಂಡನಗಲಿದ ಹಸುವಿನಂತಿದ್ದ - ಸಾಲಿರಾಮಚಂದ್ರರಾಯರೂ ಒಬ್ಬರು. ಈ ಸಂದರ್ಭದಲ್ಲಿ, 'ಸತ್ಯವಾಕ್ಯಕೆ ತಪ್ಪಿ ನಡೆದರೆ ಮೆಚ್ಚನಾ ಜಗದೀಶನು' ಎಂಬ 'ಗೋವಿನ ಹಾಡಿ'ನ ಸಾಲು ನೆನಪಾಗುತ್ತದೆ. ಇರಲಿ.

೧೯೪೦-೫೦ರ ದಶಕದ ಧಾರವಾಡದ ನನ್ನ ವಿದ್ಯಾರ್ಥಿ ಜೀವನದಲ್ಲಿ ದಿನವೂ ನನ್ನ ದೃಷ್ಟಿಗೆ ಬೀಳುತ್ತಿದ್ದ - ತಮ್ಮ ವಿಶಿಷ್ಟ ಚಹರೆ, ನಡಿಗೆ, ಮಾತು, ವೇಷಭೂಷಣ ಹಾಗೂ ಶೈಲಿಯಿಂದ ನನ್ನ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿದ - ಸಾಹಿತ್ಯ ಕ್ಷೇತ್ರದ ಹಿರಿಯ ಜೀವಗಳಲ್ಲಿ ಸಾಲಿರಾಮಚಂದ್ರರಾಯರೂ ಒಬ್ಬರು. ನಾನು ಕಲಿಯುತ್ತಿದ್ದ ರಾಜಾಲಖಮಗೌಡ ಸರದೇಸಾಯಿ ಹಾಯ್‌ಸ್ಕೂಲಿನ ಮಗ್ಗುಲಲ್ಲಿಯೇ ಇದ್ದ (ಇರುವ) ಕರ್ನಾಟಕ ಹಾಯ್‌ಸ್ಕೂಲಿನಲ್ಲಿ ಸಾಲಿಯವರು ಶಿಕ್ಷಕರಾಗಿದ್ದರು. ಶುಭ್ರಖಾದಿಧಾರಿಯಾಗಿದ್ದ ಸೌಮ್ಯ ವ್ಯಕ್ತಿತ್ವದ ತೆಳ್ಳಗಿನ ಈ ವ್ಯಕ್ತಿ ದಿನವೂ ಸಾಯಂಕಾಲ ಶಾಲೆಯಿಂದ ಮನೆಗೆ ಹೋಗುವಾಗ ರಸ್ತೆಯ ಒಂದು ಬದಿಯನ್ನು ಹಿಡಿದು ನೆಲಕ್ಕೆಲ್ಲಿ ನೋವಾಗುತ್ತದೆಯೋ ಎನ್ನುವಂತೆ ಮೆಲ್ಲಗೆ ನಡೆದು ಹೋಗುತ್ತಿದ್ದುದು ದಿನವೂ ನನ್ನ ಲಕ್ಷ್ಯವನ್ನು ಸೆಳೆದುಕೊಳ್ಳುತ್ತಿತ್ತು. ಕರ್ನಾಟಕ ವಿದ್ಯಾವರ್ಧಕ ಸಂಘದಲ್ಲಿ ನಡೆಯುತ್ತಿದ್ದ ಸಭೆ ಸಮಾರಂಭಗಳಲ್ಲಿ ಅವರು ಪ್ರೇಕ್ಷಕರ ಮಧ್ಯದಲ್ಲಿಯೇ ಇರುತ್ತಿದ್ದರೇ ಹೊರತು ವೇದಿಕೆಯ ಮೇಲೆ ಕಾಣಿಸಿಕೊಂಡದ್ದು ತೀರ ಎಂದರೆ ತೀರ ವಿರಳ. 'ಕನ್ನಡ ಬಾವುಟ' ಸಂಗ್ರಹದಲ್ಲಿ ನಾನು ಓದಿ ಮೆಚ್ಚಿಕೊಂಡಿದ್ದ 'ಆವಿನದು ನೊರೆಹಾಲನೊಲ್ಲೆನು' 'ಕನ್ನಡದ ಪುಲ್ಲೆನಗೆ ಪಾವನ ತುಲಸಿ' 'ಕೊಡಗು ಬೆಡಗಿನ ಬೀಡು' ಇತ್ಯಾದಿ ಕವಿತೆಗಳನ್ನು ಬರೆದವರು ಇವರೇ ಎಂದು ತಿಳಿದಾಗ ಅವರ ಬಗ್ಗೆ ನನ್ನಲ್ಲಿ ಹೆಚ್ಚಿನ ಗೌರವ ಉಂಟಾಯಿತು. ಆಗಿನ ದಿನಗಳಲ್ಲಿ ಅವರ ಷಟ್ಪದಿಗಳ ಸೊಗಸಿಗೆ ಮಾರುಹೋಗದವರೇ ಇರಲಿಲ್ಲವೆಂದು ಹೇಳಬಹುದು.

ಸಾಲಿಯವರ ಕಾವ್ಯದಲ್ಲಿ ಕೂಡಲೆ ನಮ್ಮ ಮನಸ್ಸನ್ನು ತಟ್ಟುವಂಥದು ಅದರಲ್ಲಿ ಅಡಕವಾದ

ಪರಿಶುದ್ಧವಾದ ಉತ್ಕಟ ಭಾವನೆ. ಒಂದು ಬಗೆಯ ಪ್ರಶಾಂತ - ಗಂಭೀರ ಮನೋಧರ್ಮ ಅವರ ಬರೆವಣಿಗೆಯಲ್ಲಿ ಉದ್ದಕ್ಕೂ ಒಡೆದು ಕಾಣುತ್ತದೆ. ಹೊಸಗನ್ನಡ ಕಾವ್ಯಕ್ಕೆ ಮುಖ್ಯ ಪ್ರೇರಕ ಶಕ್ತಿಯಾದದ್ದು ದೇಶಾಭಿಮಾನ. ಆಗಿನ ಎಲ್ಲ ಕವಿಗಳಲ್ಲಿಯೂ ಸಾಮಾನ್ಯವಾಗಿ ಅದೊಂದು ಹೊಸ ಭಾವನೆಯ ಹೊಸ ಅನುಭವವನ್ನು ಪ್ರಕಟಪಡಿಸಿತು. ನಾಡುನುಡಿಯ ಅಭಿಮಾನವೂ ಅದರಲ್ಲಿ ಸಮಾವೇಶಗೊಂಡಿತ್ತು. ಎರಡನೆಯ ಪ್ರೇರಕಶಕ್ತಿಯೆಂದರೆ ನಿಸರ್ಗ ಪ್ರೇಮ. ವ್ಯಕ್ತಿ ಪ್ರಧಾನತೆಯಿಂದ ಈ ಹೊಸ ಕಾವ್ಯ ಪ್ರಾಚೀನ ಕಾವ್ಯದಿಂದ ಭಿನ್ನವಾದ ರೀತಿಯಲ್ಲಿ ತನ್ನ ಸಂವೇದನೆಗಳನ್ನು ಅಭಿವ್ಯಕ್ತಿಗೊಳಿಸಿತು. ಸಾಲಿರಾಮಚಂದ್ರರಾಯರ ಕಾವ್ಯದಲ್ಲೂ ಹಳಗನ್ನಡದ ಗಾಢ ಸಂಸ್ಕಾರದೊಂದಿಗೆ ಈ ಎಲ್ಲ ಗುಣಗಳನ್ನು ಕಾಣಬಹುದು. ಪುಸ್ತಕ ಪಾಂಡಿತ್ಯಕ್ಕಿಂತ ಜೀವನ ದರ್ಶನ ಅವರಿಗೆ ಹಿರಿದಾಗಿತ್ತು. ಮಾನವ ಜೀವನಕ್ಕೆ ಅತ್ಯವಶ್ಯಕವಾದ ಸದಸದ್ವಿವೇಕ ಬುದ್ಧಿಯನ್ನು ವಿವರಿಸುವ, ಸೃಷ್ಟಿ ಸೌಂದರ್ಯವನ್ನು ಬಗೆದುಂಬಿ ಬಣ್ಣಿಸುವ, ವಿಧಾಯಕ ವಿಚಾರಗಳ ಕವನಗಳನ್ನೇ ಅವರು ಹೆಚ್ಚಾಗಿ ಬರೆದರು. ಹೈದರಾಬಾದದಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಕವಿಗೋಷ್ಠಿಯ ಅವರ ಅಧ್ಯಕ್ಷ ಭಾಷಣದಲ್ಲಿ ಅವರ ಕಾವ್ಯದೃಷ್ಟಿ ಹೀಗೆ ವ್ಯಕ್ತವಾಗಿದೆ : "ಮಗು ಬೆಳೆದು ಮಾನವನಾಗಲು ತಾಯಿಬೇಕು. ಜನ ಬೆಳೆದು ಸುಸಂಸ್ಕೃತ ಜನಾಂಗವಾಗಲು ಕವಿ ಬೇಕು".

ಸಾಲಿಯವರ ಕಾವ್ಯದಲ್ಲಿ ಅಲ್ಲಲ್ಲಿ ಭಾವ ಹೊಸತಾಗಿದ್ದರೂ ಅವರ ಕಾವ್ಯ ಕಂದ, ಷಟ್ಪದಿಗಳ ಛಂದೋ ಶರೀರವನ್ನೇ ಹೆಚ್ಚಾಗಿ ಅವಲಂಬಿಸಿ ಬಿಟ್ಟಿದ್ದರಿಂದ ಆ ದಿಸೆಯಲ್ಲಿ ಹೊಸತನ್ನು ಮಾಡಿ ತೋರಿಸಲು ಅವರಿಗೆ ಅವಕಾಶವಿಲ್ಲದೆ ಹೋಯಿತು. ಆದರೂ ಅವರಿಗೆ ಪ್ರಿಯವಾಗಿದ್ದ ವಾರ್ಧಕ ಷಟ್ಪದಿಯನ್ನು ಜಾತ್ಯಶ್ವದಂತೆ ಸಮಯೋಚಿತವಾದ ಗತಿಗಳಿಂದ ಅವರು ನಡೆಸಿದರು ಎಂಬ ಗೋವಿಂದ ಪೈ ಅವರ ಮಾತನ್ನು ಒಪ್ಪಬಹುದು. 'ಅಭಿಸಾರ' ಹಾಗೂ 'ತಿಲಾಂಜಲಿ' ಕಾವ್ಯಗುಣದ ದೃಷ್ಟಿಯಿಂದ, ಚಿಕ್ಕವಾದರೂ ಮಹತ್ವದ ಕೃತಿಗಳು. 'ತಿಲಾಂಜಲಿ'ಗೆ ಹೊಸಗನ್ನಡ ಕಾವ್ಯದ ಮೊದಲ ಶೋಕಗೀತವೆಂಬ ಹೆಗ್ಗಳಿಕೆ ಖಂಡಿತವಾಗಿಯೂ ಸಲ್ಲುತ್ತದೆ. 'ಒಂದೇ ಒಂದು ದೀಪದ ಕುಡಿ ಇಲ್ಲಿ ನಿಶ್ಚಲವಾಗಿ ಉರಿಯುತ್ತಿದೆ' ಎಂದು ಈ ಕಾವ್ಯದ ಬಗ್ಗೆ ಗೋಕಾಕರು ಹೇಳಿದ ಮಾತು ಸಮಂಜಸವಾಗಿದೆ. 'ರಾಮಾಯಣ'ದ ಕಾಂಡಗಳು ಅದೇಕೊ ನಿರೀಕ್ಷಿಸಿದಷ್ಟು ಯಶಸ್ಸನ್ನು ಪಡೆಯಲಿಲ್ಲ. ಅವಕ್ಕೆ ದೊರೆತ ಕಟು ವಿಮರ್ಶೆ ಅದನ್ನು ಮುಂದೆ ಬೆಳೆಯಗೊಡದಂತೆ ಮಾಡಿದ್ದು ಒಂದು ದುರ್ದೈವದ ಘಟನೆ.

ಅಪ್ಪಟ ಗಾಂಧೀವಾದಿಗಳಾಗಿದ್ದ ಸಾಲಿರಾಮಚಂದ್ರರಾಯರಂಥ ಸಾತ್ವಿಕ ಶಿರೋಮಣಿಗಳ ಜೀವನ ಹಾಗೂ ಕಾವ್ಯದಿಂದ ನಮಗೆ ದೊರೆಯುವ ಆದರ್ಶವೆಂದರೆ - 'ನಾವು ಬರೆಯುವ ಕಾವ್ಯಕ್ಕಿಂತ ನಾವು ಬದುಕುವ ಕಾವ್ಯ ಬಹಳ ಮಹತ್ವದ್ದು'. ನವೋದಯದ ಈ ವಿಶಿಷ್ಟ ಕವಿಯ ಜೀವನ ಹಾಗೂ ಕೃತಿಗಳ ಅಧ್ಯಯನ ನಮಗೆ ಹೊಸ ಶಕ್ತಿಯನ್ನು ದೃಷ್ಟಿಯನ್ನು ತಂದು ಕೊಡಬಲ್ಲುದು. ಜೀವನ ಸತ್ವಕ್ಕೆ ಅಲ್ಲಿ ಕೊರತೆಯೆಂಬುದೇ ಇಲ್ಲ. ಸಾಹಿತ್ಯ ಕ್ಷೇತ್ರದಲ್ಲಿ ನಿರ್ಲಕ್ಷಿತರಾಗಿ,

ಅಜ್ಞಾತವಾಸವನ್ನು ಅನುಭವಿಸಬೇಕಾಗಿ ಬಂದದ್ದಕ್ಕೆ ಅವರ ಮಿತಿ ಮೀರಿದ ಸಾತ್ವಿಕ ಸ್ವಭಾವ ಕೆಲಮಟ್ಟಿಗೆ ಕಾರಣವಾಗಿದ್ದರೂ ಅವರ ಸ್ವಾಭಿಮಾನಕ್ಕೆ ಎಂದೂ ಕುಂದುಂಟಾಗಲಿಲ್ಲ. ಸರಕಾರ ಅವರಿಗೆ ಗೌರವಧನ ಕೊಡಮಾಡಿದ್ದು ಕೂಡ ಜೀವನದ ಕೊನೆಯಲ್ಲಿ. ಅದು ಅವರಿಗೆ ದೊರೆಯುವ ಮುನ್ನವೇ ಅವರು ತಮ್ಮ ಇಹಲೋಕಯಾತ್ರೆಯನ್ನು ಮುಗಿಸಿದರು. ಅವರದು ತೊಂಬತ್ತು ವರ್ಷಗಳ ತುಂಬು ಜೀವನ; ಕಷ್ಟಸಹಿಷ್ಣುತೆಯ ಪವಿತ್ರ ಜೀವನ.

ಇಂದು ನಡೆದ ಗೋಷ್ಠಿಗಳಲ್ಲಿ ಸಾಲಿಯವರ ಕಾವ್ಯದಲ್ಲಿ ಪ್ರಕೃತಿ, ದೇಶಪ್ರೇಮ ಹಾಗೂ ಅಧ್ಯಾತ್ಮವನ್ನು ಕುರಿತು ಮಾತನಾಡಿದವರೆಲ್ಲರೂ ಅವರ ಕಾವ್ಯದ ಈ ಮೂರು ಮುಖ್ಯ ಆಶಯಗಳನ್ನು ಚೆನ್ನಾಗಿ ಪ್ರತಿಪಾದಿಸಿದ್ದಾರೆ. ಸಾಲಿಯವರ ಆಧ್ಯಾತ್ಮಿಕ ಅಭಿವ್ಯಕ್ತಿ ದಾಸರ ಕೀರ್ತನೆಗಳ ಮಾದರಿಯ ಅವರ ಸಮರ್ಪಣಭಾವದ ಭಕ್ತಿಗೀತಗಳಿಗೆ ಸೀಮಿತಗೊಂಡಿರುವುದು ಕಂಡುಬರುತ್ತದೆ.

ಇವತ್ತಿನ ಭಾಷಣಕಾರರು ಎತ್ತಿಕೊಂಡ ಸಾಲಿಯವರ ಕಾವ್ಯದ ಉದಾಹರಣೆಗಳು ಸಾಮಾನ್ಯವಾಗಿ ಎಲ್ಲರ ಮಾತಿನಲ್ಲಿಯೂ ಪುನರುಕ್ತಿಗೊಂಡದ್ದು ಆಕಸ್ಮಿಕವೇನೂ ಆಗಿರಲಿಕ್ಕಿಲ್ಲ. ಅವುಗಳನ್ನು ಪದೇ ಪದೇ ಕೇಳುವುದರಲ್ಲಿಯೇ ಒಂದು ಬಗೆಯ ಸುಖವಿರುವುದನ್ನು ಶ್ರೋತೃಗಳು ಅನುಭವಿಸಿದ್ದಾರೆ. ಈ ಸಂದರ್ಭದಲ್ಲಿ ಸರ್ವಜ್ಞನ ಒಂದು ನುಡಿ ನೆನಪಾಗುತ್ತದೆ.

ಹೇಳಿದ್ದೆ ಹೇಳುವರು । ಕೇಳಿದ್ದೆ ಕೇಳುವರು
ಕೇಳಿದ್ದೆ ಕೇಳಿ ಸುಖಿಸುವರು ಗುರುಗಳಾ ।
ಹೇಳಿಕೆಯೆ ಬೇರೆ ಸರ್ವಜ್ಞ

(ಸಾಹಿತ್ಯ ಸಮಾಹಿತ : ೨೦೦೭)

೫

# ಚಲೇಜಾವ್ ಚಳುವಳಿ : ಅರುವತ್ತರ ನೆನಪು ಹಾಗೂ ಬಸವರಾಜ ಕಟ್ಟೀಮನಿ ಸ್ಮರಣೆ

## ಆಶಯ ಭಾಷಣ

ಕಳೆದ ವರ್ಷ ಅಕ್ಟೋಬರ್ ೨೪ರಂದು ಧಾರವಾಡದ 'ಬಸವರಾಜ ಕಟ್ಟೀಮನಿ ವಿಚಾರ ವೇದಿಕೆ' ದಶಮಾನೋತ್ಸವವನ್ನು ಆಚರಿಸುವ ಸಂದರ್ಭದಲ್ಲಿ ಅದರ ನೆನಪಿಗಾಗಿ ಬೇರೆ ಊರಲ್ಲಿಯೂ ಒಂದು ಕಾರ್ಯಕ್ರಮ ನೆರವೇರಿಸಬೇಕೆಂದು ವೇದಿಕೆಯ ಕಾರ್ಯಕಾರಿ ಸಮಿತಿ ನಿರ್ಧರಿಸಿತು. ಅದಕ್ಕನುಸಾರವಾಗಿ ಘಟಪ್ರಭಾದಲ್ಲಿ ಈ ಕಾರ್ಯಕ್ರಮ ನಡೆಯುತ್ತಿರುವುದು ಮೂರು ಕಾರಣಗಳಿಂದ ಮಹತ್ವದ್ದಾಗಿದೆ :

೧. ಚಲೇಜಾವ್ ಚಳುವಳಿಯ ವಜ್ರಮಹೋತ್ಸವದಂದೇ ಈ ಕಾರ್ಯಕ್ರಮ ಕಟ್ಟೀಮನಿಯವರ ಜಿಲ್ಲೆಯಲ್ಲಿ ನಡೆಯುತ್ತಿರುವುದು.
೨. ಕರ್ನಾಟಕ ಸಾಹಿತ್ಯ ಅಕಾಡೆಮಿ ಈ ಕಾರ್ಯಕ್ರಮದಲ್ಲಿ ಪ್ರಮುಖ ಪಾತ್ರವಹಿಸಿರುವುದು.
೩. ಸ್ಥಳೀಯ ಬಸವರಾಜ ಕಟ್ಟೀಮನಿ ಸಾಹಿತ್ಯ ಸಾಂಸ್ಕೃತಿಕ ವೇದಿಕೆ ಇದರ ಸಂಘಟನೆಯ ಹೊಣೆಯನ್ನು ಹೊತ್ತಿರುವುದು.

'ಚಲೇಜಾವ್ ಚಳುವಳಿ ೬೦'ರ ನೆನಪಿನ ಜೊತೆಗೆ ಆ ಚಳುವಳಿಯಲ್ಲಿ ತಮ್ಮನ್ನು ಸಂಪೂರ್ಣ ತೊಡಗಿಸಿಕೊಂಡ ಲೇಖಕರಲ್ಲಿ ಪ್ರಮುಖರಾದ ಬಸವರಾಜ ಕಟ್ಟೀಮನಿಯವರನ್ನು ಸ್ಮರಿಸಿಕೊಂಡು ಈ ಸಂದರ್ಭದ ಹಿನ್ನೆಲೆಯಲ್ಲಿ ಅವರ ಸಾಹಿತ್ಯ ಕೃತಿಗಳನ್ನು ಪುನಃ ಅವಲೋಕಿಸುವುದು ಔಚಿತ್ಯಪೂರ್ಣವಾಗಿದೆ. ಎರಡು ಗೋಷ್ಠಿಗಳಲ್ಲಿ ಆ ಬಗ್ಗೆ ಆರು ಜನ ಲೇಖಕರು ವಿವೇಚನೆ ಮಾಡಲಿದ್ದಾರೆ. ಅದಕ್ಕೆ ಹಿನ್ನೆಲೆಯಾಗಿ ಆಶಯ ಭಾಷಣದ ರೂಪದಲ್ಲಿ ನಾನು ನಾಲ್ಕು ಮಾತು ಹೇಳಬೇಕೆಂದು ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾದ ಡಾ. ಗುರುಲಿಂಗ ಕಾಪಸೆಯವರು ಅಪೇಕ್ಷಿಸಿರುವುದರಿಂದ ನಾನೀಗ ತಮ್ಮೆದುರು ನಿಂತಿದ್ದೇನೆ.

ಮಹಾತ್ಮಾ ಗಾಂಧೀಜಿಯವರ ನಾಯಕತ್ವದಲ್ಲಿ ಬ್ರಿಟಿಶ್ ಆಡಳಿತದಿಂದ ಸ್ವತಂತ್ರರಾಗಲು ಭಾರತೀಯ ಜನತೆ ಅನೇಕ ಸಂಕಷ್ಟಗಳನ್ನು ಅನುಭವಿಸಿ ಹೋರಾಟ ಚಳುವಳಿಗಳನ್ನು ನಡೆಸಿದ್ದನ್ನು ತಾವೆಲ್ಲ ಬಲ್ಲಿರಿ. ೧೯೨೦ರಿಂದ ೧೯೪೨ರವರೆಗೆ ಸತ್ಯಾಗ್ರಹ ರೂಪದಲ್ಲಿ ಈ ಹೋರಾಟ ನಿರಂತರವಾಗಿ ನಡೆದೇ ಇತ್ತು. ೧೯೪೨ ಆಗಸ್ಟ್ ೮ರಂದು ಅಂತಿಮವಾಗಿ ರೂಪುಗೊಂಡ

Quit India Movement ಅಥವಾ ಚಲೇಜಾವ್ ಚಳುವಳಿ ಮಾತ್ರ ಅವೆಲ್ಲವನ್ನೂ ಮೀರಿದ ಮಹತ್ವದ ಸ್ಥಾನ ಪಡೆದುಕೊಂಡಿದೆ.

೬೦ ವರ್ಷಗಳಾಗಿ ಹೋದವು. ನಾನಾಗ ಹಾಯ್‌ಸ್ಕೂಲಿನ ವಿದ್ಯಾರ್ಥಿ. ವರ್ಗಗಳಿಗೆ ಬಹಿಷ್ಕಾರ ಹಾಕಿ, ಮೆರವಣಿಗೆಗಳಲ್ಲಿ ಭಾಗವಹಿಸಿ ಮುಖಂಡರ ಭಾಷಣಗಳನ್ನು ಆಸ್ಥೆಯಿಂದ ಆಗ ಕೇಳಿದ್ದುಂಟು. ಮುಂದೆ ೧೯೪೭ ಆಗಸ್ಟ್ ೧೫ರಂದು ಭಾರತ ಸ್ವತಂತ್ರವಾದಾಗ ಧಾರವಾಡದ ಕರ್ನಾಟಕ ಕಾಲೇಜಿನ ವಿಶಾಲ ಬಯಲಿನಲ್ಲಿ ಸಾರ್ವಜನಿಕ ಸಭೆ ನಡೆದಾಗ ನಾನು 'ಬಂಧದಿಂ ಬಿಡುಗಡೆಗೆ' ಎಂಬ ಕವಿತೆಯನ್ನೋದಿದ್ದೆ. ಅದೇ ನನ್ನ ಪ್ರಥಮ ಸಾರ್ವಜನಿಕ ಕಾವ್ಯವಾಚನ. ನಾನಾಗ ಇಂಟರ್ ಮಿಡಿಯೇಟ್ ಆರ್ಟ್ಸ್‌ನ ವಿದ್ಯಾರ್ಥಿ.

ಬಸವರಾಜ ಕಟ್ಟೀಮನಿಯವರ ಪ್ರಥಮ ಪರಿಚಯವಾದದ್ದು ೧೯೪೫ರಲ್ಲಿ, ನಾನು ಕಾಲೇಜಿನ ಪ್ರಥಮ ವರ್ಷದಲ್ಲಿದ್ದಾಗ. ಅಲ್ಲಿಂದ ಅವರ ಜೀವನದ ಕೊನೆಯ ಗಳಿಗೆಯವರೆಗೂ ನಮ್ಮ ಸ್ನೇಹ ಬೆಳೆದುಕೊಂಡು ಬಂದಿತು. ಪ್ರಾರಂಭದಲ್ಲಿ ನನ್ನ ಬರವಣಿಗೆಗೆ ಅವರಿಂದ ದೊರೆತ ಪ್ರೋತ್ಸಾಹ ಮರೆಯುವಂಥದಲ್ಲ. ಆಗ ಅವರು ಪ್ರಗತಿಶೀಲ ಲೇಖಕರ ಮುಖವಾಣಿಯಂತಿದ್ದ 'ಉಷಾ' ಪತ್ರಿಕೆಯ ಸಂಪಾದಕತ್ವವನ್ನು ತ್ಯಜಿಸಿ ಧಾರವಾಡಕ್ಕೆ ಬಂದಿದ್ದರು. ಮುಂದೆ ದಾವಣಗೆರೆಯಲ್ಲಿ 'ಸ್ವತಂತ್ರ' ಮಾಸಪತ್ರಿಕೆಯನ್ನು ಪ್ರಾರಂಭಿಸಿದರು. ವೈಯಕ್ತಿಕ ವಿಷಯ ಈಗ ಇಷ್ಟು ಸಾಕು.

೧೯೪೨ರ ಹೊತ್ತಿಗೆ ಎರಡನೆಯ ಮಹಾಯುದ್ಧ ಅನೇಕ ರಾಷ್ಟ್ರಗಳನ್ನು ರಕ್ತದಲ್ಲಿ ತೋಯಿಸಿತ್ತು. ಬ್ರಿಟಿಶ್ ಆಡಳಿತ ಭಾರತವನ್ನು ಬಲಾತ್ಕಾರವಾಗಿ ಈ ಯುದ್ಧದಲ್ಲಿ ಪಾಲುಗೊಳ್ಳುವಂತೆ ಮಾಡಿತು. ಈ ದೇಶದ ಸಂಪನ್ಮೂಲಗಳೆಲ್ಲ ಯುದ್ಧಕ್ಕಾಗಿ ಮೀಸಲಾದವು. ಬೇರೆ ದೇಶದ ಲಕ್ಷಾಂತರ ಯುದ್ಧ ಕೈದಿಗಳನ್ನು ತಂದು ಭಾರತದಲ್ಲಿಡಲಾಯಿತು. ಸಹಜವಾಗಿಯೇ ಸರಕಾರದ ವೆಚ್ಚ ಮಿತಿ ಮೀರತೊಡಗಿತು. ಇದರಿಂದ ಉಂಟಾದ ಎಲ್ಲಾ ಬಗೆಯ ಕೊರತೆಗಳು ಕೊರಗುಗಳು ಈ ದೇಶದ ಜನತೆಯನ್ನು ಕಂಗೆಡಿಸಿದವು. ಇಂಥ ಪರಿಸ್ಥಿತಿಯಲ್ಲಿಯೂ ಭಾರತೀಯ ನಾಯಕರನ್ನು, ದೇಶಭಕ್ತರನ್ನು ವಿಶ್ವಾಸಕ್ಕೆ ತೆಗೆದುಕೊಳ್ಳದ, ಸರ್ವಾಧಿಕಾರದ ದರ್ಪ ಹಾಗೂ ಕಠಿಣವಾದ ಕಾನೂನು ಕ್ರಮಗಳು ಜನತೆಯ ಮೂಲಭೂತ ಹಕ್ಕುಗಳಿಗೇ ಧಕ್ಕೆ ತಂದವು. ಗಾಂಧೀಜಿ, ನೆಹರು, ಪಟೇಲ, ರಾಜೇಂದ್ರ ಪ್ರಸಾದ, ಮೌಲಾನಾ ಆಜಾದ್, ರಾಜಗೋಪಾಲಾಚಾರಿ ಮೊದಲಾದ ನಾಯಕರು ಈ ಸರ್ವಾಧಾರಿ ಆಡಳಿತದ ವಿರುದ್ಧವಿದ್ದರೂ ಈ ಜಾಗತಿಕ ಯುದ್ಧದಲ್ಲಿ ಮಿತ್ರರಾಷ್ಟ್ರಗಳು ಜಯಿಸಬೇಕು ಎಂದೂ ಅಪೇಕ್ಷೆ ಪಟ್ಟಿದ್ದರು. ಈ ಸಂದಿಗ್ಧ ಪರಿಸ್ಥಿತಿಯಲ್ಲಿ ಬ್ರಿಟಿಶ್ ಆಡಳಿತಕ್ಕೆ ಪೇಚಿನ ಸ್ಥಿತಿ ಉಂಟು ಮಾಡಬಾರದು ಎಂಬ ಸದುದ್ದೇಶದಿಂದ ಬ್ರಿಟಿಶ್ ಆಡಳಿತ ತನ್ನ ವಸಾಹತು ರಾಷ್ಟ್ರಗಳಿಗೆ ಸ್ವಾತಂತ್ರ್ಯ ನೀಡಬೇಕು, ಪ್ರಜಾಪ್ರಭುತ್ವದ ಉಳಿವಿಗಾಗಿ ಭಾರತದ ಜನತೆ ಕೂಡ ಸ್ವಂತ ಇಚ್ಛೆಯಿಂದ ಬ್ರಿಟಿಶ್ ಆಡಳಿತಕ್ಕೆ ಸಹಾಯ ಮಾಡಬೇಕೆಂದು ಮನವಿ ಮಾಡಿತು. ಇದು ಗಾಂಧೀಜಿಯವರ ವಿಶಾಲಹೃದಯದ ದ್ಯೋತಕವಾಗಿತ್ತು. ಆದರೆ

ಇದನ್ನು ಅರ್ಥಮಾಡಿಕೊಳ್ಳದೆ ಬ್ರಿಟಿಶ್ ಪ್ರಧಾನಮಂತ್ರಿ ಚರ್ಚಿಲ್ ದುರಹಂಕಾರದಿಂದ ಈ Half naked fakir ನೊಡನೆ ಯಾವ ಸಂಧಾನದ ಮಾತನ್ನೂ ಆಡುವುದಿಲ್ಲವೆಂದು ಅಟ್ಟಹಾಸಗೈದ.

ಈ ದರ್ಪದಿಂದ ನೊಂದ ಗಾಂಧೀಜಿ ವೈಯಕ್ತಿಕ ಸತ್ಯಾಗ್ರಹದ ಬಗ್ಗೆ ಚಿಂತಿಸಿ, ಉಳಿದ ನಾಯಕರೊಡನೆ ಚರ್ಚಿಸಿ ಸತ್ಯಾಗ್ರಹವನ್ನು ಘೋಷಿಸಿದರು. ವಿನೋಬಾ ಭಾವೆ ಪ್ರಥಮ ಸತ್ಯಾಗ್ರಹಿಯಾಗಿ ೧೯೪೧ ಅಕ್ಟೋಬರ್ ೧೭ ರಂದು ಬ್ರಿಟಿಶ್ ವಿರುದ್ಧ ಭಾಷಣ ಮಾಡಿ ಬಂಧನಕ್ಕೊಳಗಾದರು. ನಂತರ ನೆಹರು, ಪಟೇಲ, ಆಜಾದ್, ಒಬ್ಬೊಬ್ಬರಾಗಿ ಬ್ರಿಟಿಶ್ ದುರಾಡಳಿತವನ್ನು ಖಂಡಿಸಿ ಸೆರೆಮನೆಗೆ ತೆರಳಿದರು. ರಾಷ್ಟ್ರಾದ್ಯಂತ ಇಪ್ಪತ್ತು ಸಾವಿರಕ್ಕೂ ಹೆಚ್ಚು ಸತ್ಯಾಗ್ರಹಿಗಳು ದಸ್ತಗಿರಿಯಾದರು. 'ಹರಿಜನ' ಪತ್ರಿಕೆಯನ್ನು ಗಾಂಧೀಜಿ ನಿಲ್ಲಿಸಿದರು. ಈ ಬಗೆಯ ಸೌಮ್ಯವಾದ ಸತ್ಯಾಗ್ರಹಕ್ಕೆ ಬ್ರಿಟಿಶ್ ಆಡಳಿತ ಮಣಿಯಲಿಲ್ಲ. ಆದ್ದರಿಂದ ಬೇರೆ ಮಾರ್ಗ ಅನಿವಾರ್ಯವಾಯಿತು. ಈ ಹಿಂದೆಯೇ ವಿವಿಧ ಪ್ರಾಂತಗಳಲ್ಲಿದ್ದ ಕಾಂಗ್ರೆಸ್ ಸರಕಾರಗಳು ರಾಜೀನಾಮೆ ನೀಡಿದವು. ನೇತಾಜಿ ಸುಭಾಚಂದ್ರ ಬೋಸರು ಇದೇ ಸಮಯದಲ್ಲಿ ಸೆರೆಯಿಂದ ತಪ್ಪಿಸಿಕೊಂಡು, ಜರ್ಮನಿಯನ್ನು ಸೇರಿ, ಹಿಟ್ಲರನ ಸಹಾಯ ಪಡೆದು, ಬರ್ಮಾಕ್ಕೆ ಬಂದು, ಜಪಾನದ ಸ್ನೇಹಹಸ್ತದೊಡನೆ ರಂಗೂನಿನಲ್ಲಿ ಸ್ವತಂತ್ರವಾದ Indian National Army (INA) ಕಟ್ಟಿದ್ದರು. ಅಲ್ಲಿ ಬ್ರಿಟಿಶ್ ಸೇನೆಯಲ್ಲಿದ್ದ ಭಾರತೀಯ ಸೈನಿಕರು ನೇತಾಜಿಯವರ ಆಕರ್ಷಣೆಯಿಂದ INA ಸೇರಿದರು. ಅದು ಬಲಗೊಂಡು ಬಂಗಾಳದ ಕಡೆಗೆ ಬಂದು ಭಾರತದ ವಿಮೋಚನೆಗಾಗಿ ದಾಳಿ ಮಾಡಿತು. ಜಪಾನಿನ ವಾಯುಪಡೆ ಭಾರತದ ಮೇಲೂ ಬಾಂಬು ಹಾಕಿತು.

ಈಗ ಬ್ರಿಟಿಶ್ ಆಡಳಿತಕ್ಕೆ ದಿಕ್ಕು ತೋಚದಂತಾಯಿತು. ರಾಷ್ಟ್ರದಲ್ಲೆಲ್ಲ ಸತ್ಯಾಗ್ರಹ ಬಲವಾಗಿಯೇ ಸಾಗಿತ್ತು. ಈ ವೇಳೆಗೆ ಬಂದ ಸ್ಟಾಫರ್ಡ ಕ್ರಿಪ್ಸ್‌ನ ಸಂಧಾನವೂ ಯಶಸ್ವಿಯಾಗಲಿಲ್ಲ. ಇಂಥ ಬಿಕ್ಕಟ್ಟಿನ ಪ್ರಸಂಗದಲ್ಲಿ ಜನತೆ ಗಾಂಧೀಜಿಯನ್ನೇ ಅವಲಂಬಿಸಿತು. ೧೯೪೨ ಆಗಸ್ಟ ೮ನೆಯ ತಾರೀಖು ಮುಂಬಯಿಯ ಚೌಪಾಟಿಯಲ್ಲಿ ಸೇರಿದ ಅಖಿಲ ಭಾರತ ಕಾಂಗ್ರೆಸ್ ಅಧಿವೇಶನದಲ್ಲಿ ರಾಷ್ಟ್ರದ ಎಲ್ಲ ಭಾಗದ ಜನರೂ ಭಾಗವಹಿಸಿದ್ದರು. ಆಜಾದ್ ಅವರು ಅದರ ಅಧ್ಯಕ್ಷತೆ ವಹಿಸಿದ್ದರು. ಈ ಅಧಿವೇಶನ ಕಾಂಗ್ರೆಸ್ ನಾಯಕತ್ವವನ್ನು ಗಾಂಧೀಜಿಗೆ ನೀಡಿ ಸತ್ಯಾಗ್ರಹಕ್ಕೆ ಕರೆ ಕೊಡಿ ಎಂದು ಮನವಿ ಮಾಡಿಕೊಂಡಿತು. ಸಮಸ್ತಜನತೆ ನೆಹರೂ ಮಂಡಿಸಿದ್ದ, ಪಟೇಲರು ಅನುಮೋದಿಸಿದ್ದ Quit India ನಿರ್ಣಯಕ್ಕೆ ಅಂಗೀಕಾರ ನೀಡಿತು. ಇದೊಂದು ಮಹಾ ಐತಿಹಾಸಿಕ ಸಂದರ್ಭ. ಆ ಸಂದರ್ಭದಲ್ಲಿ ಗಾಂಧೀಜಿ ಹೇಳಿದ ಮಾತುಗಳು ಇವು : "ಅಹಿಂಸೆಯ ಆಯುಧ ದೇವರು ನನಗೆ ನೀಡಿದ ವರದಾನ. ಈಗ ಅದರ ಅಂತ್ಯ ಪರೀಕ್ಷೆ. ಹಿಂಸೆಯ ಜ್ವಾಲೆಯಲ್ಲಿ ಉರಿದು ಬೂದಿಯಾಗುತ್ತಿರುವ ಮಾನವ ಜಗತ್ತು ವಿಮುಕ್ತಿಗಾಗಿ ಮೊರೆಯಿಡುತ್ತಿದೆ. ಈಗ ನಾನು ಕಾರ್ಯೋನ್ಮುಖನಾಗದಿದ್ದರೆ ದೇವರು ನನ್ನನ್ನು ಕ್ಷಮಿಸಲಾರ. ಇದು ಪ್ರಜಾಪ್ರಭುತ್ವಕ್ಕಾಗಿ ನಡೆಸುವ ಶುದ್ಧ ಅಹಿಂಸಾತ್ಮಕ ಹೋರಾಟ. ಸರ್ವಾಧಿಕಾರಿ ಸೈನ್ಯಶಕ್ತಿಗೆ ನಾವು ಎಂದೂ ಮಣಿಯುವುದಿಲ್ಲ."

"ವಾಸ್ತವವಾಗಿ ಬ್ರಿಟಿಶರ ಮೇಲೆ ನನಗೆ ಯಾವುದೇ ದ್ವೇಷವಿಲ್ಲ. ಅವರಿಗೆ ಈಗ ನೈತಿಕ ಶಕ್ತಿ ಇಲ್ಲದಂತಾಗಿದೆ. ಭಾರತಕ್ಕೆ ಸ್ವಾತಂತ್ರ್ಯ ನೀಡುವುದರಿಂದ ಅವರಿಗೂ ಶಕ್ತಿಬಂದಂತಾಗುತ್ತದೆ ಎಂಬುದನ್ನು ಅವರು ಅರಿಯಬೇಕು. ಆಗ ಸ್ವತಂತ್ರ ಭಾರತವೂ ಸಹ ಅವರ ಸಹಾಯಕ್ಕೆ ನಿಲ್ಲುತ್ತದೆ. ಜಪಾನಿಗೆ ಒಂದಂಗುಲ ನೆಲವನ್ನೂ ಬಿಡುವುದಿಲ್ಲ. ಎಲ್ಲ ಬಲಿದಾನಕ್ಕೂ ನಾವು ಸಿದ್ಧರಿದ್ದೇವೆ. ಯಾರ ಗುಲಾಮಗಿರಿಯನ್ನೂ ನಾವು ಒಪ್ಪಲು ಸಾಧ್ಯವಿಲ್ಲ. ಈ ಸಂದರ್ಭದಲ್ಲಿ 'ಮಾಡು ಇಲ್ಲವ ಮಡಿ' ಎಂಬ ಘೋಷಣೆಯನ್ನು ಭಾರತದ ಜನಕೋಟಿಗೆ ಕೊಡಲು ಬಯಸುತ್ತೇನೆ. "ಬ್ರಿಟಿಶರೇ ಭಾರತ ಬಿಟ್ಟು ತೊಲಗಿ, ಸ್ನೇಹಿತರಾಗಿ ಉಳಿಯಿರಿ; ಎಂದು ಧೈರ್ಯದಿಂದ ಹೇಳುತ್ತಿದ್ದೇನೆ".

ಭಾರತದ ಸ್ವಾತಂತ್ರ್ಯ ಹೋರಾಟದ ಇತಿಹಾಸದಲ್ಲಿ ಗಾಂಧೀಜಿಯವರ ಈ ಭಾಷಣ ಅಮೋಘವೆಂದೇ ಪರಿಗಣಿಸಲ್ಪಟ್ಟಿದೆ. ಇದರಿಂದ ಉತ್ತೇಜಿತರಾದ ಲಕ್ಷಾಂತರ ಸತ್ಯಾಗ್ರಹಿಗಳು ಸೆರೆಮನೆ ಸೇರಿದರು. ಗಾಂಧೀಜಿ, ಕಸ್ತೂರಿಬಾ, ಮಹದೇವ ದೇಸಾಯಿ, ಸರೋಜಿನಿ ನಾಯ್ಡು ಅವರನ್ನು ಪುಣೆಯ ಆಗಾಖಾನ್ ಅರಮನೆಯಲ್ಲಿಡಲಾಯಿತು. ೧೯೪೨ ಆಗಸ್ಟ ೧೫ರಂದು ಮಹದೇವ ದೇಸಾಯಿ ಸೆರೆಮನೆಯಲ್ಲಿಯೇ ಹಠಾತ್ತಾಗಿ ನಿಧನರಾದರು. ಚಳುವಳಿ ಮತ್ತಷ್ಟು ಚುರುಕಾಯಿತು. ಜಯಪ್ರಕಾಶ ನಾರಾಯಣ, ಲೋಹಿಯಾ, ಅಚ್ಯುತ ಪಟವರ್ಧನ, ಅರುಣಾ ಅಸಫ್ ಅಲಿ ಸೆರೆಮನೆಯಿಂದ ತಪ್ಪಿಸಿಕೊಂಡು ಭೂಗತ ಚಟುವಟಿಕೆಗಳಲ್ಲಿ ತೊಡಗಿ ತರುಣರನ್ನು ಆಕರ್ಷಿಸಿದರು. ಗೆರಿಲ್ಲಾ ಹೋರಾಟಕ್ಕೆ ತರಬೇತಿ ನೀಡಿದರು. ಬ್ರಿಟಿಶ್ ಸರಕಾರದ ಯುದ್ಧತಂತ್ರಗಳಿಗೆ ಅಡ್ಡಿಯುಂಟು ಮಾಡಲು ಸಂಪರ್ಕ ಸಾಧನಗಳನ್ನು, ರೈಲು ಮಾರ್ಗಗಳನ್ನು ಅಸ್ತವ್ಯಸ್ತ ಗೊಳಿಸತೊಡಗಿದರು. ಹೋರಾಟಕ್ಕೆ ಪುನಶ್ಚೇತನ ದೊರೆತು ಜೆ.ಪಿ. ನೆಚ್ಚಿನ ನಾಯಕರಾದರು.

ಅಗ್ರಗಣ್ಯ ನಾಯಕರು ಸೆರೆಮನೆಯಲ್ಲಿದ್ದ ಸಮಯದಲ್ಲಿ ಅಸಂಘಟಿತ ಜನಸಮೂಹ ವಿಧ್ವಂಸಕ ಚಟುವಟಿಕೆಗಿಳಿಯಿತು. ಇದನ್ನು ಹತ್ತಿಕ್ಕಲು ಸರಕಾರ ಕ್ರೂರವಾಗಿ ವರ್ತಿಸಿತು. ಪೋಲಿಸರ ಲಾಠಿ ಏಟು, ಗೋಲಿಬಾರ್‌ನಿಂದಾಗಿ, ಸಾವಿರಾರು ಜನ ಪ್ರಾಣಕ್ಕೆರವಾದರು. ಕೆಲವು ಕಡೆ ಆಡಳಿತ ಕುಸಿದುಬಿದ್ದು ಪ್ರತಿ ಸರಕಾರಗಳು ಅಸ್ತಿತ್ವಕ್ಕೆ ಬಂದವು. (ಮಿರ್ಜಿ ಅಣ್ಣಾರಾಯರ 'ಪತ್ರಿಸರಕಾರ' ಕಾದಂಬರಿಯನ್ನು ಇಲ್ಲಿ ಸ್ಮರಿಸಬಹುದು.)

೧೮೫೭ರ ಸಿಪಾಯಿದಂಗೆಯ ನಂತರ ನಡೆದ ಅತ್ಯಂತ ಭಯಂಕರ ಬಂಡಾಯವಿದು ಎಂದು ವೈಸ್‌ರಾಯ್ ಲಿನ್‌ಲಿಥಗೊ ಚರ್ಚಿಲ್‌ಗೆ ಕಳಿಸಿದ ಸುದ್ದಿಯಲ್ಲಿ ತಿಳಿಸಿದ್ದರಂತೆ. ಭೀಕರ ಬರಗಾಲ, ಯುದ್ಧ, ಯುದ್ಧದ ನಿರ್ಬಂಧಗಳು, ಅವಶ್ಯಕ ವಸ್ತುಗಳ ಕೊರತೆಯಿಂದ ಜನರು ತೀವ್ರ ಅಸಮಾಧಾನಗೊಂಡಿದ್ದರು. ಇದಕ್ಕೆಲ್ಲ ಗಾಂಧೀಜಿಯೇ ಕಾರಣ ಎಂದು ಬ್ರಿಟಿಶರು ಪ್ರಪಂಚದಾದ್ಯಂತ ಪ್ರಚಾರ ಮಾಡಿದ್ದರು. ೧೯೪೪ ಮಹಾಶಿವರಾತ್ರಿಯಂದು ಕಸ್ತೂರಬಾ ಹೃದಯ ಬೇನೆಯಿಂದ ನಿಧನರಾದರು. ೧೯೪೪ ಮೇ ೫ರಂದು ಅನಿರೀಕ್ಷಿತವಾಗಿ ಸರಕಾರ ಗಾಂಧೀಜಿಯವರನ್ನು ಸೆರೆಮನೆಯಿಂದ ಬಿಡುಗಡೆ ಮಾಡಿತು.

ಬ್ರಿಟಿಶ್ ಸರಕಾರ ಮತ್ತೊಮ್ಮೆ ಸಂಧಾನದಲ್ಲಿ ಆಸಕ್ತಿ ವಹಿಸಿತು. ಬ್ರಿಟನ್ನಿನಲ್ಲಿ ಈಗ ಲೇಬರ್ ಪಕ್ಷ ಅಧಿಕಾರಕ್ಕೆ ಬಂದಿತ್ತು. ಜಾಗತಿಕ ಯುದ್ಧದ ಭೀಕರತೆ ಭಾರತದ ಗಡಿಯವರೆಗೂ ಕಾಣಿಸತೊಡಗಿತು. ೧೯೪೫ ಆಗಸ್ಟ ೬ನೆಯ ತಾರೀಖು ಜಪಾನದ ನಾಗಾಸಾಕಿ ಹಿರೋಶಿಮಾ ನಗರಗಳ ಮೇಲೆ ಅಮೇರಿಕ ವಿಮಾನ ಅಣುಬಾಂಬು ಹಾಕಿದವು. ಲಕ್ಷಾಂತರ ಜನ ಅಸುನೀಗಿದರು. ಯುದ್ಧ ಹಠಾತ್ತನೇ ನಿಂತುಹೋಯಿತು.

ಹಲವಾರು ಕಾರಣಗಳಿಂದ ಬಳಲಿದ ಗಾಂಧೀಜಿ ಆರೋಗ್ಯ ಸುಧಾರಣೆಗಾಗಿ ಮುಂಬಯಿ ಸಮುದ್ರ ತೀರಕ್ಕೆ ಬಂದು ೧೫ ದಿನ ಪೂರ್ಣ ಮೌನ ಆಚರಿಸಿದರು. ಬ್ರಿಟಿಶರ ಒಡೆದು ಆಳುವ ನೀತಿಯಿಂದಾಗಿ ಕೋಮುದ್ವೇಷದ ವಿಷಜ್ವಾಲೆ ರಾಷ್ಟ್ರದ ವಿವಿಧೆಡೆಗಳಲ್ಲಿ ಹರಡಿತು. ಹಿಂದು-ಮುಸ್ಲಿಂ ಶಿಖ್ ಜನಾಂಗ ಹೋಳಾಗಿ ಪರಸ್ಪರ ಕಾದಾಡತೊಡಗಿದರು. ಮುಸ್ಲಿಂ ಲೀಗ್ ಬಹಿರಂಗ ದಂಗೆ ಎಬ್ಬಿಸಿತು. ಬ್ರಿಟಿಶ್ ಸಂಸತ್ತು ರಾಜಕೀಯ ಸಂಧಾನಕ್ಕೆಂದು ಲಾರ್ಡ್ ಪೆಥಿಕ್ ಲಾರೆನ್ಸ್ ನಾಯಕತ್ವದಲ್ಲಿ ಭಾರತಕ್ಕೆ ಬಂದು ಸಾಕಷ್ಟು ಚರ್ಚೆ ನಡೆಸಿತು. ಜಿನ್ನಾರ ಹಟಮಾರಿತನದಿಂದ ಕಾಂಗ್ರೆಸ್ ಮತ್ತು ಲೀಗ್ ನಡುವೆ ಒಡಂಬಡಿಕೆಯಾಗಲಿಲ್ಲ. ವೈಸ್‌ರಾಯ್ ಮಂತ್ರಿ ಮಂಡಳದಲ್ಲಿ ಕಾರ್ಮಿಕ ಸಚಿವರಾಗಿದ್ದ ಡಾ. ಅಂಬೇಡ್ಕರ್ ೧೯೪೬ರವರೆಗೆ ಸಚಿವರಾಗಿ ಮುಂದುವರಿದಿದ್ದರಿಂದ ಕ್ವಿಟ್ ಇಂಡಿಯಾ ಚಳುವಳಿಯನ್ನು ಅವರು ಬೆಂಬಲಿಸಲಾಗಲಿಲ್ಲ.

ಸ್ವಾತಂತ್ರ್ಯ ಹೋರಾಟದ ಪ್ರಖರತೆಯನ್ನು ಕಂಡ ಬ್ರಿಟಿಶರು ಇನ್ನು ಮುಂದೆ ಭಾರತವನ್ನು ಆಳುವುದು ಸಾಧ್ಯವಾಗುವುದಿಲ್ಲವೆಂದು ಮನಗಂಡರು. ಎರಡನೆಯ ಮಹಾಯುದ್ಧ ನಿಲ್ಲುತ್ತಿದ್ದಂತೆ ಭಾರತಕ್ಕೆ ಸ್ವಾತಂತ್ರ್ಯ ನೀಡಲು ನಿರ್ಧಾರ ಮಾಡಿತು. ಅಂತೆಯೇ ೧೯೪೭ ಆಗಸ್ಟ್ ೧೫ರಂದು ಭಾರತ ಸ್ವಾತಂತ್ರ್ಯ ಪಡೆದು ಚಲೇಜಾವ್ ಚಳುವಳಿ ಫಲ ನೀಡಿತು.

ಈ ಚಳುವಳಿಯಲ್ಲಿ ಬಸವರಾಜ ಕಟ್ಟೀಮನಿಯವರ ಪಾತ್ರ ಕುರಿತು ಎರಡು ಮಾತು ಹೇಳಬಹುದು. ಗದಗಿನ 'ಕರ್ನಾಟಕ ಬಂಧು' ಪತ್ರಿಕೆಯ ಕೆಲಸ ಬಿಟ್ಟು ೧೯೪೨ ಏಪ್ರಿಲ್‌ದಲ್ಲಿ ಧಾರವಾಡಕ್ಕೆ ಬಂದು ಕಟ್ಟೀಮನಿಯವರು ಶಂಭೂರಾವ್ ಜಠಾರ ಅವರು ಹೊರಡಿಸುತ್ತಿದ್ದ ದಿನಪತ್ರಿಕೆಯಲ್ಲಿ ಕೆಲಸಕ್ಕೆ ಸೇರಿದರು. ಆಗ ಅವರಿಗೆ ೨೩ ವರ್ಷ ವಯಸ್ಸು. ಪತ್ರಿಕಾಕರ್ತರಾದ್ದರಿಂದ ದೇಶದ ರಾಜಕೀಯವನ್ನು ಚೆನ್ನಾಗಿ ಬಲ್ಲವರಾಗಿದ್ದರು. ಆಗಸ್ಟ ೮ರಂದು ತಿಳಿದುಬಂದ ಸುದ್ದಿಯಿಂದ ಅವರು ಭಾವನಾವಶರಾದರು. ಒಂದು ರೀತಿ ಹುಚ್ಚು ಹಿಡಿದವರಂತೆ ಅವರು ಧಾರವಾಡದಲ್ಲಿ ಅಲೆದರು. ಕಾರ್ಯಕರ್ತರನ್ನು ಭೇಟಿಯಾಗುತ್ತ ಮಾಳಮಡ್ಡಿಯ ಓಣಿಯೊಂದರಲ್ಲಿ ನಡೆದು ಬರುತ್ತಿರುವಾಗ ಖಾದೀಧಾರಿಯಾಗಿದ್ದ ಯುವಕನೊಬ್ಬ ಇವರನ್ನು ಮಾತಾಡಿಸಿದ. "ತಾಯಿ ಭಾರತಿಗಾಗಿ ನಾವು ಪ್ರಾಣಾರ್ಪಣೆ ಮಾಡುವ ಕಾಲ ಬಂದಿದೆ. ಭಗತ್‌ಸಿಂಗ್, ಚಂದ್ರಶೇಖರ ಅಜಾದ್‌ರವರ ಹಾಗೆ ನೀವು ತಯಾರಾಗಿದ್ದೀರಾ?" ಎಂದು ಸವಾಲು ಹಾಕಿದ. 'ತಯಾರು' ಎಂದು ಅನುಮಾನವಿಲ್ಲದೆ ಇವರು ಹೇಳಿದರು. ಅವನು ಕಿಸೆಯಿಂದ ಬ್ಲೇಡು ತೆಗೆದು ತನ್ನ ಮುಂಗೈಗೆ ಗಾಯ ಮಾಡಿಕೊಂಡು ಆ ರಕ್ತದಿಂದ ಇವರ

ಹಣೆಗೆ ತಿಲಕವಿಟ್ಟು, ಕಂಪಿಸುವ ಧ್ವನಿಯಲ್ಲಿ 'ಇಂಕ್ವಿಲಾಬ್ ಜಿಂದಾಬಾದ್' ಎಂದು ಹೇಳಿದ (ಈ ವಿಷಯವೆಲ್ಲ ಮುಂದೆ ಅವರು ಬರೆದ 'ಕಾದಂಬರಿಕಾರನ ಕಥೆ'ಯಲ್ಲಿ ರೋಚಕವಾಗಿ ನಿರೂಪಿತಗೊಂಡಿದೆ).

ಈ ಕ್ರಾಂತಿ ಘೋಷಣೆ ಇವರ ಮನಸ್ಸಿನಲ್ಲಿ ದುಮುದುಮಿಸತೊಡಗಿತು. ಮಾರನೇ ದಿನ ಧಾರವಾಡ ಕಡಪಾ ಮೈದಾನದಲ್ಲಿ ಡಾ. ಕಬ್ಬೂರ ಅವರ ಭಾಷಣ. ಅವರ ಬಂಧನ ಹಾಗೂ ಸಭಿಕರ ಮೇಲೆ ಬೆತ್ತಪ್ರಹಾರ. ಕಟ್ಟೀಮನಿ ಬೆನ್ನಿಗೂ ಏಟು. ರಾತ್ರಿ ತಮ್ಮ ಕೊಠಡಿಯಲ್ಲಿ ಕರಪತ್ರ ಹೊರಡಿಸುವದು, ಹಸ್ತಪತ್ರಿಕೆ 'ರಣಭೇರಿ' ಸಂಪಾದಕಿ: ಸ್ವಾತಂತ್ರ್ಯದೇವಿ. - ಗಾಂಧಿ, ನೆಹರು, ಆಜಾದರ ಹೆಸರಿನಲ್ಲಿ ಇವರೇ ಸಂದೇಶಗಳನ್ನು ಬರೆದು ಪತ್ರಿಕೆ ತುಂಬಿಸುತ್ತಿದ್ದರು. ಅವುಗಳನ್ನು ಹಂಚುವುದು, ಅಂಗಡಿಗಳ ಬಾಗಿಲಿಗೆ ಹಚ್ಚುವುದು. ಆಗಸ್ಟ ೧೯ರಂದು ನಡೆದ ವಿದ್ಯಾರ್ಥಿಗಳ ಸಭೆಯಲ್ಲಿ ಸರಕಾರದ ದಮನ ನೀತಿಯನ್ನು ಖಂಡಿಸಿ ಭಾಷಣ ಮಾಡಿದ್ದಕ್ಕಾಗಿ ಅಂದು ರಾತ್ರಿ ಕಟ್ಟೀಮನಿಯವರ ಬಂಧನವಾಯಿತು. ಆರು ತಿಂಗಳ ಕಠಿಣ ಶಿಕ್ಷೆಯಾಯಿತು. ಹಿಂಡಲಗಿ ಸೆರೆಮನೆಯ ವಾಸ. ಜೇಲಿನಲ್ಲಿ ಸಮಾಜವಾದ ಹಾಗೂ ಸಾಮ್ಯವಾದ ಕುರಿತು ಪುಸ್ತಕಗಳನ್ನು ಓದಿದರು. ವೇಣೀಪ್ರಸಾದರ 'ಹಿಂದೂ-ಮುಸ್ಲಿಂ ಸಮಸ್ಯೆ' ಸೇನ್‌ರ 'ಬ್ರಿಟಿಶ್ ರೂಲ್ ಇನ್ ಇಂಡಿಯಾ', ಜಾನ್‌ಗುಂಥರ್ ಅವರ Inside Asia, ಸಿ. ಕೃಷ್ಣಶರ್ಮರ 'ಪರ್ಣಕುಟಿ', ಡೆಲ್‌ಕಾರ್ನೆಗೀಯ 'Public Speaking' ಗಾಂಧೀಜಿ ಆತ್ಮಕಥೆ ಮೊದಲಾದವನ್ನು ಆಸ್ಥೆಯಿಂದ ಓದಿದರು. ಈ ಎಲ್ಲ ಓದು-ವಾದಗಳ ಪರಿಣಾಮ ಎಂದರೆ ಕಟ್ಟೀಮನಿ 'ನೆಹರೂ ಮಾದರಿಯ ಸಮಾಜವಾದಿ'ಯಾಗಿ ರೂಪುಗೊಂಡದ್ದು.

ಸೆರೆಮನೆಯಲ್ಲಿದ್ದಾಗಲೇ ಹತ್ತಾರು ಸಣ್ಣ ಕಥೆಗಳನ್ನು ಬರೆದರು. 'ಜೀವನಕಲೆ' 'ಎರಡು ಗುಲಾಬಿ' 'ಪರಾಜಿತೆ' 'ಬರದ ದೇವಿ' 'ಹೊಸಹುಟ್ಟು' ಮೊದಲಾದವು. ಜೇಲಿನಲ್ಲಿ ನೂರಾರು ಚಳುವಳಿಗಾರರ ನಿಕಟ ಪರಿಚಯವಾಯಿತು. ದೇಶದಲ್ಲಿ ಅಲ್ಲಲ್ಲಿ ನಡೆದಿದ್ದ ಹೋರಾಟದ ನೈಜಚಿತ್ರಗಳು ತಿಳಿದು ಬಂದವು. ಮುಂದೆ 'ಆಗಸ್ಟ ಒಂಬತ್ತು' 'ಸ್ವಾತಂತ್ರ್ಯದೆಡೆಗೆ' 'ಮಾಡಿ ಮಡಿದವರು' ಮೊದಲಾದ ಕೃತಿಗಳಿಗೆ ಅವು ಪ್ರೇರಣೆ ನೀಡಿದವು. ೧೯೪೩ ಜನವರಿ ೨೭ರಂದು ಬಿಡುಗಡೆಯಾಗಿ ಹೊರಬಂದಾಗ ನಗರಗಳಲ್ಲಿ ಚಳವಳಿ ಸ್ತಬ್ಧವಾಗಿದ್ದಂತೆ ತೋರಿದರೂ ಗ್ರಾಮಾಂತರ ಸ್ಥಳಗಳಲ್ಲಿ ಇನ್ನೂ ಬಿರುಸಾಗಿ ನಡೆಯುತ್ತಿತ್ತು. ಆ ವರ್ಷ ದೇಶದಲ್ಲೆಲ್ಲ ಭೀಕರ ಬರಗಾಲ. ಬರಗಾಲದಲ್ಲಂತೂ ಲಕ್ಷಾಂತರ ಜನ ಕ್ಷಾಮಕ್ಕೆ ಬಲಿಯಾದರು. 'ಕಾರವಾನ್' ಕಥಾಸಂಗ್ರಹದಲ್ಲಿ ಗುಳೇಕಾರರ ಸಂಸಾರದ ಬವಣೆ ಚಿತ್ರಿತವಾಗಿದೆ. ಆ ಮೇಲಿನ ವರ್ಷಗಳಲ್ಲಿ ಕಟ್ಟೀಮನಿ ಸುಮಾರು ೪೦ ಕಾದಂಬರಿಗಳನ್ನೂ ಹತ್ತಾರು ಕಥಾಸಂಕಲನಗಳನ್ನೂ ಬರೆದು ಪ್ರಗತಿಶೀಲ ಲೇಖಕರಲ್ಲಿ ಪ್ರಮುಖರೆನಿಸಿದರು.

ಇನ್ನೋರ್ವ ಖ್ಯಾತ ಪ್ರಗತಿಶೀಲ ಲೇಖಕರಾದ ನಿರಂಜನರು ಬರೆದಂತೆ "ಕಟ್ಟೀಮನಿಯವರ ಎಲ್ಲ ಯಶಸ್ಸುಗಳಿಗೆ ಅವರ ಸೂಕ್ಷ್ಮ ಸಂವೇದನಾ ಶಕ್ತಿ, ಸ್ವಚ್ಛ ಬರವಣಿಗೆ, ಧೀರ ನಿಲುವು,

ಕ್ರಾಂತಿಕಾರಕ ಮನೋಧರ್ಮಗಳೇ ಕಾರಣ. ಅವರಲ್ಲಿ ಮಾತು-ಕೃತಿಗಳ ಅಂತರವಿಲ್ಲ, ಒಳಹೊರಗೆ ಎರಡೂ ಒಂದಾದ ವ್ಯಕ್ತಿತ್ವ ಅವರದು."

ಮುಂದೆ ನಡೆಯಲಿರುವ ಗೋಷ್ಠಿಗಳಲ್ಲಿ ಅವರ ಬದುಕು-ಬರೆಹಗಳ ಬಗ್ಗೆ ವಿಮರ್ಶೆ-ವಿಶ್ಲೇಷಣೆ ನಡೆಯಲಿರುವುದರಿಂದ ಈಗ ಇಷ್ಟು ಮಾತು ಸಾಕು ಎಂದು ತೋರುತ್ತದೆ. ಯಾವುದೇ ಚಳವಳಿ ಮುಗಿದ ಮೇಲೂ ಅದರ ಆಶಯಗಳು ಜೀವಂತವಾಗಿರುವುದನ್ನು ಲಕ್ಷ್ಯದಲ್ಲಿಡುವುದು ಒಳ್ಳೆಯದು.

ಆಗಸ್ಟ ೯, ೨೦೦೩

(ಸಾಹಿತ್ಯ ಸಮಾಹಿತ : ೨೦೦೭)

೬

## ಮಕ್ಕಳ ಸಾಹಿತ್ಯ ಚಿಂತನೆ ಮತ್ತು 'ಸಿಸು' ಸಂಗಮೇಶ ಸ್ಮರಣೆ: ಉದ್ಘಾಟನೆ ಭಾಷಣ

ಕರ್ನಾಟಕ ಸಾಹಿತ್ಯ ಅಕಾಡೆಮಿ ಈ ವರ್ಷದ ತನ್ನ ಕಾರ್ಯಕ್ರಮಗಳಲ್ಲಿ ಮೊದಲನೆಯ ಸಮಾರಂಭವನ್ನು ವಿಜಾಪುರದಲ್ಲಿ 'ಮಕ್ಕಳ ಸಾಹಿತ್ಯ ಚಿಂತನೆ' ಹಾಗೂ 'ಸಿಸು ಸಂಗಮೇಶ್ವರ ಸ್ಮರಣೆ'ಯೊಂದಿಗೆ ಪ್ರಾರಂಭ ಮಾಡುತ್ತಿರುವುದು ಔಚಿತ್ಯಪೂರ್ಣವಾಗಿದೆ. ಇಂಥ ಒಂದು ಮಹತ್ವದ ಕಾರ್ಯಕ್ರಮದಲ್ಲಿ ಉದ್ಘಾಟಕನಾಗಿ ಭಾಗವಹಿಸುವ ಗೌರವವನ್ನು ನೀಡಿರುವ ಕರ್ನಾಟಕ ಸಾಹಿತ್ಯ ಅಕಾಡಮಿಗೆ ಹಾಗೂ ವಿಜಾಪುರದ ಸಹೃದಯ ಶ್ರೋತೃಗಳಿಗೆ ನನ್ನ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಎರಡು ಅಂಶಗಳಿಂದ ಈ ಸಮಾರಂಬ ವೈಶಿಷ್ಟ್ಯಪೂರ್ಣವಾಗಿದೆ. ಒಂದು : ಕಾಲಕಾಲಕ್ಕೆ ನಿರ್ಲಕ್ಷ್ಯಕ್ಕೆ ಒಳಗಾಗುತ್ತ ಬಂದಿರುವ ಮಕ್ಕಳ ಸಾಹಿತ್ಯ ಚಿಂತನೆಗೆ ಸಾಹಿತ್ಯ ಅಕಾಡೆಮಿ ತನ್ನ ವಾರ್ಷಿಕ ಕಾರ್ಯ ಚಟುವಟಿಕೆಗಳಲ್ಲಿ ಆದ್ಯತೆ ನೀಡಿದ್ದು. ಎರಡು: ವಿಜಾಪುರ ಜಿಲ್ಲೆಯನ್ನು ಶಿಶು ಸಾಹಿತ್ಯದ ಕಾಶಿ ಎಂದೇ ಕರೆಯಬಹುದು. ಅದಕ್ಕಾಗಿ ತಮ್ಮ ಇಡೀ ಜೀವನವನ್ನೇ ಮುಡುಪಾಗಿಟ್ಟು, ನೆರೆಯ ಭಾಷಾ ರಾಜ್ಯಗಳಿಂದಲೂ ಗೌರವಿಸಲ್ಪಟ್ಟು, ಶಿಶು ಸಾಹಿತ್ಯದ ಪರವಾದ ತಮ್ಮ ಹೋರಾಟವನ್ನು ಕೊನೆಯವರೆಗೂ ನಡೆಸುತ್ತ ಬಂದ ಸಿಸು ಸಂಗಮೇಶರ ಬದುಕು-ಬರಹಕ್ಕಾಗಿಯೇ ಒಂದು ಗೋಷ್ಠಿಯನ್ನು ಏರ್ಪಡಿಸಿದ್ದು.

ಸಿಸು ಸಂಗಮೇಶರ ಪರಿಚಯ ನನಗಾದದ್ದು ಸುಮಾರು ಐವತ್ತು ವರ್ಷಗಳ ಹಿಂದೆಯೇ. ಅವರ ಪ್ರಥಮ ಕವನ ಸಂಕಲನ 'ತೋಳಬಂದಿ'ಗೆ ೧೯೫೬ರಲ್ಲಿ ನಾನು ಮುನ್ನುಡಿ ಬರೆದಿದ್ದೆ. ಅದೊಂದು ಒಳ್ಳೆಯ ಪ್ರೇಮಗೀತೆಗಳ ಸಂಕಲನ, ಹಾಗೆಯೇ ಮುಂದುವರಿದಿದ್ದರೆ ಈ ದಿಸೆಯಲ್ಲಿ ಅವರು ಇನ್ನೂ ಉತ್ತಮ ರಚನೆಗಳನ್ನು ಕೊಡಬಹುದಾಗಿತ್ತು. ಆದರೆ ಮುಂದೆ ಅವರು ತಮ್ಮ ಲಕ್ಷ್ಯವನ್ನೆಲ್ಲ ಶಿಶು ಸಾಹಿತ್ಯಕ್ಕೇ ಕೇಂದ್ರೀಕರಿಸಿದರು. ೧೯೫೫ರಷ್ಟು ಹಿಂದೆ ಮೈಸೂರಿನಲ್ಲಿ ಕಾರಂತರ ಅಧ್ಯಕ್ಷತೆಯಲ್ಲಿ ನಡೆದ ಸಾಹಿತ್ಯ ಸಮ್ಮೇಳನದ ಹೊತ್ತಿಗೆ ಅವರು ಶಿಶು ಸಾಹಿತ್ಯಕ್ಕೆ ಸಂಬಂಧಪಟ್ಟ ಎರಡು ಸಂಕಲನಗಳನ್ನು - 'ಪುಟಚೆಂಡು' 'ಹಿಗ್ಗಿನ ಬುಗ್ಗೆ' - ಸಂಪಾದಿಸಿ ತಂದು ಸಮ್ಮೇಳನಕ್ಕೆ ಬಂದಿದ್ದ ಹಿರಿಕಿರಿಯ ಸಾಹಿತಿಗಳ ಗಮನ ಸೆಳೆದುಕೊಂಡದ್ದಲ್ಲದೆ ಆ ಸಾಹಿತ್ಯ ಪ್ರಕಾರದ ಬಗ್ಗೆ ತಮಗಿರುವ ಕಾಳಜಿಯನ್ನು ವ್ಯಕ್ತಪಡಿಸಿದ್ದರು. ಅಂದಿನಿಂದ ಅವರು

ಮತ್ತೆ ಎಂದೂ ಹಿನ್ನಡೆಯಲಿಲ್ಲ. ತಾವೂ ಬರೆದರು, ತಮ್ಮಂತೆಯೇ ಪ್ರಾಥಮಿಕ ಶಾಲಾ ಶಿಕ್ಷಕರಾಗಿರುವ ಗೆಳೆಯರ ಬಳಗಕ್ಕೂ ಬರೆಯಲು ಪ್ರೋತ್ಸಾಹಿಸಿದರು. ಸ್ವತಂತ್ರವಾಗಿ 'ಭಾರತೀ ಸಾಹಿತ್ಯ ಭಂಡಾರ'ವನ್ನು ನಿರ್ಮಿಸಿದ್ದಲ್ಲದೆ ಅದಕ್ಕಾಗಿಯೇ 'ಶ್ರೀಶಕ್ತಿ ಮುದ್ರಣಾಲಯ'ವನ್ನು ಸ್ಥಾಪಿಸಿದರು. ತಮ್ಮ ಪ್ರಕಾಶನದಿಂದ ನನ್ನ 'ಹಕ್ಕೀಪುಚ್ಚ' ಎನ್ನುವ ಮಕ್ಕಳ ಕವನ ಸಂಕಲನವನ್ನು ನಾಲ್ಕು ಆವೃತ್ತಿಗಳಲ್ಲಿ ಹೊರತಂದದ್ದನ್ನು ನಾನಿಲ್ಲಿ ಸ್ಮರಿಸಿಕೊಳ್ಳದಿರಲಾರೆ.

ಶಿಶು ಸಾಹಿತ್ಯದ ವಿವಿಧ ಪ್ರಕಾರಗಳನ್ನೆಲ್ಲ ಅವರು ಸಾಧ್ಯವಿದ್ದಷ್ಟು ಕೈವಶಮಾಡಿಕೊಂಡಿದ್ದರು. ಸಮಕಾಲೀನ ಸಂವೇದನೆ ಅವರಲ್ಲಿ ವಿಪುಲವಾಗಿತ್ತು. ಮಕ್ಕಳ ಮನೋಧರ್ಮಕ್ಕನುಗುಣವಾಗಿ ಕಥೆ, ಕವನಗಳ ಮೂಲಕ ತಕ್ಕ ಸೃಜನಶೀಲ ಪ್ರತಿಕ್ರಿಯೆ ವ್ಯಕ್ತಪಡಿಸಿದರು. ೧೯೬೭ರಲ್ಲಿ ಅವರು ಪ್ರಕಟಿಸಿದ 'ಶಾಲೆಗಿಂತ ಚೀಲಭಾರ' ಕವನ ಸಂಗ್ರಹ ಇದಕ್ಕೊಂದು ನಿದರ್ಶನವೆನ್ನಬಹುದು. ಅದರಲ್ಲಿಯ ಒಂದು ಚುಟುಕನ್ನು ಇಲ್ಲಿ ಉದಾಹರಿಸಬಹುದು. ಮಗು ತನ್ನ ಭಾರವಾದ ಪುಸ್ತಕಗಳ ಚೀಲಕ್ಕೆ ಹೇಳುತ್ತದೆ.

"ಶಾಲೆ ಸೂಟಿ ಬಿಡುವವರೆಗೂ
ಹೊತ್ತು ತಿರುಗಿದೆ ನಿನ್ನನು;
ಪಾಸ್, ನಪಾಸ್ ಏನೇ ಆಗಲಿ
ಬಿಟ್ಟುಬಿಡು ನೀ ಬೆನ್ನನು"

ಆ ಚೀಲದ ಭಾರಕ್ಕೆ ಮಕ್ಕಳ ಮಾನಸಿಕ ತಿರಸ್ಕಾರದ ತೀವ್ರತೆಯನ್ನು ಇಲ್ಲಿ ಕಾಣಬಹುದು.

ಮಕ್ಕಳ ಸಾಹಿತ್ಯಕ್ಕಾಗಿಯೇ ಪ್ರತ್ಯೇಕ ಅಕಾಡೆಮಿ ಸ್ಥಾಪಿಸಬೇಕೆಂಬುದು ಅವರ ಹಂಬಲವಾಗಿತ್ತು. ಈಚೆಗೆ ಧಾರವಾಡದಲ್ಲಿ ನಡೆದ ರಾಜ್ಯಮಟ್ಟದ ಮಕ್ಕಳ ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ನಾನು ಒಂದು ಮಾತನ್ನು ಹೇಳಿದ್ದೆ: - ಕೇವಲ ಮಕ್ಕಳ ಸಾಹಿತ್ಯ ಅಕಾಡಮಿ ಎಂಬ ಬೇಡಿಕೆ ಬೇಡ. ಮಕ್ಕಳ ಸರ್ವತೋಮುಖ ಬೆಳವಣಿಗೆಯ ದೃಷ್ಟಿಯಿಂದ ಅದರ ವ್ಯಾಪ್ತಿಯನ್ನು ವಿಸ್ತಾರಗೊಳಿಸಿ 'ಮಕ್ಕಳ ಶಿಕ್ಷಣ ಸಾಹಿತ್ಯ ಕಲಾಭಿವೃದ್ಧಿ ಅಕಾಡೆಮಿ' ಎಂದು ಹೆಸರಿಟ್ಟು ಬೇಡಿಕೆ ಸಲ್ಲಿಸಬಹುದು ಎಂದು. ಶ್ರೀ ಕಂಬ್ಳ್ಯಾಣೆ ಶರಣಪ್ಪ ಅವರು ಅಧ್ಯಕ್ಷತೆ ವಹಿಸಿದ ಆ ಸಮ್ಮೇಳನದಲ್ಲಿ ಅದೇ ರೀತಿ ಒಂದು ನಿರ್ಣಯವನ್ನು ಸ್ವೀಕರಿಸಲಾಯಿತು. ಜಿಲ್ಲಾಧಿಕಾರಿಗಳು ವಿಜಾಪುರದಲ್ಲಿ ಸುಸಜ್ಜಿತವಾದ ಒಂದು 'ಬಾಲಭವನ'ವನ್ನು ನಿರ್ಮಿಸಿ ಅದಕ್ಕೆ 'ಸಿಸು ಸಂಗಮೇಶ ಬಾಲಭವನ' ಎಂದು ನಾಮಕರಣ ಮಾಡಿ ಮಕ್ಕಳ ಚಟುವಟಿಕೆಗಳಿಗೆ ಇಂಬುಗೊಡುವರೆಂದು ಆಶಿಸುತ್ತೇನೆ.

'ಮಕ್ಕಳ ಸಾಹಿತ್ಯ ಚಿಂತನೆ'ಗಾಗಿ ಪ್ರತ್ಯೇಕ ಒಂದು ಗೋಷ್ಠಿಯೇ ನಡೆಯಲಿರುವುದರಿಂದ ನಾನು ಆ ಬಗ್ಗೆ ಹೆಚ್ಚು ಹೇಳಲು ಬಯಸುವುದಿಲ್ಲ. ಎರಡು ಮಾತುಗಳನ್ನು ಇಲ್ಲಿ ಪ್ರಸ್ತಾಪಿಸಬಹುದು. ಯಾರನ್ನೆಲ್ಲ ಮಕ್ಕಳೆಂದು ಕರೆಯಬೇಕು? ಎಷ್ಟು ವಯಸ್ಸಿನಿಂದ ಎಷ್ಟು ವಯಸ್ಸಿನವರೆಗೆ? ಅವರಿಗೆ ಕೊಡಬಹುದಾದ ಅಥವಾ ಅವರನ್ನು ಉದ್ದೇಶಿಸಿ ರಚಿಸಬಲ್ಲ ಸಾಹಿತ್ಯದ ರೂಪ

ಯಾವುದು? ಈ ದಿಸೆಯಲ್ಲಿ ಕಾರಂತರ ವಿಚಾರಗಳು ಗಮನಾರ್ಹವಾಗಿವೆ. ನಾವು ಲಕ್ಷ್ಯದಲ್ಲಿಟ್ಟುಕೊಳ್ಳಬೇಕಾದವರೆಂದರೆ ಕಿರಿಯ-ಹಿರಿಯ ಪ್ರಾಥಮಿಕ ಶಾಲೆಗಳ ಮಕ್ಕಳು. ಅವರಿಗಾಗಿ ರಚನೆಗೊಂಡ ಸಾಹಿತ್ಯವನ್ನು ಪಾಶ್ಚಾತ್ಯರು 'ಸಿಸು ಗೀತೆಗಳು' Nursery Rhymes ಎಂದು ಕರೆದರು. ಅದರಲ್ಲಿ ವಿಷಯಗಳ ಬೋಧನೆ ಮುಖ್ಯವಲ್ಲ. ಕಿವಿಗೆ ಹಿತವಾಗಿ ಸಂತೋಷ ಹೆಚ್ಚಿಸುವ ಲಯಬದ್ಧವಾದ ಗುಣ ಮುಖ್ಯ. ಅದು ಅರ್ಥವನ್ನು ಕೊಡಲೇಬೇಕೆಂದಿಲ್ಲ. ಉದಾಹರಣೆಗೆ 'ಮುಟ್ಟಾಕ ಬಾರ ಮೂಲಂಗಿ ಜಾಣೆ'. ಇಲ್ಲಿ 'ಮೂಲಂಗಿ'ಗೆ ಯಾವ ಅರ್ಥವೂ ಇಲ್ಲ, ಆದರೆ ಕಿವಿಗೆ ಹಿತವಾಗಿದೆ. ನಾವೆಲ್ಲ ಬಾಲ್ಯದಲ್ಲಿ ಆಟವಾಡುತ್ತಲೇ ಇಂಥ ಅನೇಕ ಹಾಡುಗಳನ್ನು ಹೇಳಿಕೊಳ್ಳುತ್ತಿದ್ದುದು.

ಗದ್ಯ, ಪದ್ಯ ಏನೇ ಇದ್ದರೂ ಅದು ಉಪದೇಶವನ್ನು ಮಾಡಬೇಕೆಂಬ ಹಟ ಮಕ್ಕಳ ಸಾಹಿತಿಗಳಿಗಿರಬಾರದು. ಮಕ್ಕಳಿಗೆ ಸಂತೋಷ ಕೊಡಬಲ್ಲ, ಅವರ ಮನಸ್ಸಿಗೆ ಮುದ ನೀಡಬಲ್ಲ ಯಾವುದೇ ವೈಚಿತ್ರ್ಯ, ಅದ್ಭುತ ಅಸಂಬದ್ಧಗಳೆಲ್ಲವೂ ಪ್ರಾಸಬದ್ಧವಾಗಿ, ಅವರದೇ ಆದ ಭಾಷೆಯಲ್ಲಿ ಆಡುಮಾತಿನಲ್ಲಿ ಮೂಡಿ ಬರಬೇಕು. ಅವರಿಗೆ ಹಿಗ್ಗನ್ನುಂಟುಮಾಡಿ ಕುತೂಹಲ ಕೆರಳಿಸಬೇಕು. ಯಾಕೆಂದರೆ ಮಕ್ಕಳ ಲೋಕ ಹಿರಿಯರ ಲೋಕಕ್ಕಿಂತ ಭಿನ್ನವಾಗಿದೆ.

ಕನ್ನಡದ ಅತ್ಯುತ್ತಮ ಮಕ್ಕಳ ಹಾಡುಗಳಲ್ಲಿ ಒಂದು ಎಂದರೆ ಪಂಜೆಯವರ 'ತೆಂಕಣಗಾಳಿ' ಎಂದು ಹೇಳಬಹುದು. ಕವಿಶಿಷ್ಯರೆಂದೇ ಪ್ರಖ್ಯಾತರಾಗಿದ್ದ ಪಂಜೆಯವರು, ಶಾಲಾಮಾಸ್ತರರಾಗಿ, ಶಾಲಾ ಪರೀಕ್ಷಕರಾಗಿ ಮಕ್ಕಳ ಒಡನಾಟದಲ್ಲಿ ಗಳಿಸಿದ ಅನುಭವವೆಲ್ಲವನ್ನು ಅವರು ಮಕ್ಕಳಿಗಾಗಿಯೇ ಧಾರೆಯೆರೆದರು. ಕನ್ನಡದಲ್ಲಿ ಮೊದಲು 'ಬಾಲಸಾಹಿತ್ಯ ಮಂಡಲ'ದ ಮೂಲಕ ಹಲವಾರು ಕೃತಿಗಳನ್ನು ಪ್ರಕಟಿಸಿ ಬಾಲ ಸಾಹಿತ್ಯಕ್ಕೆ ಒಂದು ಅಗತ್ಯವಾದ ಮಹತ್ವದ ಸ್ಥಾನವನ್ನು ಕಲ್ಪಿಸಿಕೊಟ್ಟರು. ಜಿ.ಪಿ. ರಾಜರತ್ನಂ ಅವರು ಮಕ್ಕಳ ಕಾವ್ಯ ಪ್ರಪಂಚದ 'ರಾಜ' ಮತ್ತು 'ರತ್ನ' ಎರಡೂ ಆಗಿದ್ದರು.

೧೯೫೫ರಲ್ಲಿ ಸಿಸು ಸಂಗಮೇಶರು 'ಪುಟಚೆಂಡು' ಸಂಕಲನ ಸಿದ್ಧಗೊಳಿಸುವಾಗ, ಆಗ ಸೊಲ್ಲಾಪುರದಲ್ಲಿದ್ದ ಬೇಂದ್ರೆಯವರನ್ನು ಕಂಡು ಕವಿತೆ ಕೇಳಿದರು. ಅವರು 'ನಾನು ಮಕ್ಕಳಿಗಾಗಿ ಕವಿತೆ ಬರೆದಿಲ್ಲವಲ್ಲ' ಎಂದಾಗ 'ಪಾತರಗಿತ್ತಿ ಪಕ್ಕ' ಕವನ ತೆಗೆದುಕೊಳ್ಳಬಹುದೆ? ಎಂದು ಸಂಗಮೇಶ ಕೇಳಿದರು. ಅದನ್ನು ತಾವು ಮಕ್ಕಳಿಗಾಗಿ ಬರೆದಿಲ್ಲ ಎಂದು ಹೇಳಿ 'ಕರಡಿ ಕುಣಿತ' ಎಂಬ ಪದ್ಯ ಬರೆದುಕೊಟ್ಟರಂತೆ.

'ಪಾತರಗಿತ್ತಿ ಪಕ್ಕ'ವಾಗಲಿ 'ಕರಡಿ ಕುಣಿತ'ವಾಗಲಿ ಅವುಗಳ ಕೆಲವು ಭಾಗ ಛಂದಸ್ಸು, ನಾಟಕೀಯತೆ, ವರ್ಣನೆ ಮುಂತಾದವುಗಳಿಂದ ಮಕ್ಕಳನ್ನು ರಂಜಿಸಬಲ್ಲವು. ಹಾಗೆಯೇ ದೊಡ್ಡವರ ಮಟ್ಟದಲ್ಲಿಯೂ ವಿಶೇಷ ಅರ್ಥ ನೀಡಬಲ್ಲವು.

ಒಟ್ಟಾರೆಯಾಗಿ ಒಂದು ಮಾತು ಹೇಳಬಹುದು: ನಮ್ಮ ಈ ಬಗೆಯ ಸಾಹಿತ್ಯ ರಚನೆ ಮಕ್ಕಳ ಮನಸ್ಸಿನಲ್ಲಿರಬಹುದಾದ ಕಾಲ್ಪನಿಕ ಪ್ರಪಂಚವನ್ನು ಹೆಚ್ಚು ಕ್ರಿಯಾಶೀಲವಾಗಿ ಮಾಡಲು,

ಸೃಜನಶೀಲಗೊಳಿಸಲು ಸಹಾಯ ಮಾಡುವುದು. ಅವರಲ್ಲಿರುವ ಸಾಹಸ ಪ್ರವೃತ್ತಿಗೆ ಚಾಲ್ತಿ ನೀಡುವುದು. ಅವರ ವೈಜ್ಞಾನಿಕ ಚಿಂತನೆಯನ್ನು ಮತ್ತು ಅವರಲ್ಲಡಗಿದ ಕುತೂಹಲವನ್ನು ವೃದ್ಧಿಗೊಳಿಸುವುದು. ಅವರನ್ನು ಲಿಂಗಭೇದವಿಲ್ಲದೆ ಬೆಳೆಯುವಂತೆ ನೋಡಿಕೊಳ್ಳುವುದು. ಹಾಗೆಯೇ ಅದು ಪಶು, ಪಕ್ಷಿ, ಪ್ರಾಣಿ, ಪ್ರಕೃತಿ, ಪರಿಸರ ಎಲ್ಲದರ ಬಗೆಗೂ ಪ್ರೀತಿಯನ್ನು ಬೆಳೆಸುವಂತಿರಬೇಕು.

ಈ ದೃಷ್ಟಿಯಿಂದ ಎರಡು ಬೃಹತ್ ಪ್ರಮಾಣದ ಹಾಗೂ ಸಾರ್ಥಕವೆನಿಸುವ ಶಿಶು ಸಾಹಿತ್ಯ ಸಂಕಲನಗಳನ್ನು ಇಲ್ಲಿ ಹೆಸರಿಸಬಹುದು. ಒಂದು: ಬೋಳುವಾರು ಮಹಮ್ಮದ ಕುಂಞ ಸಂಪಾದಿಸಿದ, ಮಕ್ಕಳಿಂದಲೇ ಆಯ್ಕೆ ಮಾಡಲ್ಪಟ್ಟ ನೂರಾರು ಪದ್ಯಗಳ, ಸಚಿತ್ರ ಸಂಕಲನ 'ತಟ್ಟು ಚಪ್ಪಾಳೆ ಪುಟ್ಟ ಮಗು'. ಮುದ್ರಣಯುಗದಿಂದ ಪ್ರಾರಂಭವಾಗಿ ೧೯೭೫ರವರೆಗೆ ಬಂದ ಆಯ್ದ ಉತ್ತಮ ಕವನಗಳ ಸಂಗ್ರಹ. ಇನ್ನೊಂದು ಕರ್ನಾಟಕ ಸಾಹಿತ್ಯ ಅಕಾಡೆಮಿ ಇದೇ ವರ್ಷ ಹೊರತಂದಿರುವ ಎನ್.ಎಚ್.ರಘುನಾಥ ಅವರು ಸಂಪಾದಿಸಿದ ಸುಮಾರು ೬೦೦ ಪುಟಗಳ 'ಶತಮಾನದ ಮಕ್ಕಳ ಸಾಹಿತ್ಯ'. ಇವುಗಳನ್ನು ಅವಲೋಕಿಸಿದಾಗ ನಮ್ಮಲ್ಲಿ ಬೆಳೆದು ಬಂದ ಶಿಶುಸಾಹಿತ್ಯದ ಬಗ್ಗೆ ಕೆಲಮಟ್ಟಿಗಾದರೂ ಸಮಾಧಾನ ಪಡೆಯಬಹುದೆಂದು ತೋರುತ್ತದೆ.ಇವುಗಳ ಹಿನ್ನೆಲೆಯಲ್ಲಿ ಹೊಸ ಸಹಸ್ರಮಾನದಲ್ಲಿ ಹೊಸ ರೀತಿಯಲ್ಲಿ ಮಕ್ಕಳ ಸಾಹಿತ್ಯ ಸೃಷ್ಟಿಯಾದೀತೆಂದು ಆಶಿಸೋಣ. ಸಿಸು ಸಂಗಮೇಶರ ಶಿಶುಸಾಹಿತ್ಯದ ಸಮಗ್ರ ಸಂಪುಟವನ್ನು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಾಗಲಿ, ಕನ್ನಡ ಪುಸ್ತಕ ಪ್ರಾಧಿಕಾರವಾಗಲಿ ಪ್ರಕಟಿಸಿದರೆ ಮಕ್ಕಳ ಸಾಹಿತ್ಯಕ್ಕೆ ಅದೊಂದು ಒಳ್ಳೆಯ ಕೊಡುಗೆಯಾಗುವುದರಲ್ಲಿ ಸಂದೇಹವಿಲ್ಲ.

ಈ ವೈಜ್ಞಾನಿಕ ಯುಗದಲ್ಲಿ, ಸಮೂಹ ಮಾಧ್ಯಮಗಳ ಪರಿಸರದಲ್ಲಿ ಮಕ್ಕಳ ಗ್ರಹಣಶಕ್ತಿ ಹೆಚ್ಚು ತೀವ್ರತೆಯನ್ನು ಪಡೆದಿರುತ್ತದೆಂಬುದನ್ನು ನಾವು ಮರೆಯಬಾರದು. ಕೆಲವು ಸಂದರ್ಭಗಳಲ್ಲಿ ಅವರು ನಮಗಿಂತಲೂ ಹೆಚ್ಚು ಜಾಣರಾಗಿರುತ್ತಾರೆ. ನಮ್ಮ ಮೊಮ್ಮಗಳಿಗೆ ಕಥೆ ಬಹಳ ಇಷ್ಟ. ಹಾಗೆಯೇ ದೂರದರ್ಶನದ ಆಕರ್ಷಣೆ ಕೂಡ. ಕಥೆ ಹೇಳುವ ಆಶೆಹಚ್ಚಿ ಆಕೆಯನ್ನು ಟಿವಿಯಿಂದ ಎಳೆದುಕೊಳ್ಳುವ ಪ್ರಯತ್ನ ಮಾಡಿದಾಗ ಆಕೆ ಏನು ಹೇಳಿದಳು ಗೊತ್ತೆ? 'ಅಜ್ಜ, ಈಗ ಲೈಟು ಹೋಗ್ತದಲ್ಲಾ, ಆವಾಗ ಕಥಿ ಹೇಳು' ಎಂದಳು. ಎರಡನ್ನು ಉಳಿಸಿಕೊಳ್ಳುವ ಅವಳ ಹವಣಿಕೆ ನನಗೆ ಅಚ್ಚರಿಯನ್ನುಂಟುಮಾಡಿತು. ಇನ್ನೊಬ್ಬ ಮೊಮ್ಮಗಳು, ಆಕೆಗೂ ಆರು ವರ್ಷ. ಈಚೆಗೆ ಒಂದು ಮಕ್ಕಳ ಕವನ ಸಂಗ್ರಹ 'ಮುದ್ದಿನ ಗಿಣಿ'ಯನ್ನು ನಾನು ಬಿಡುಗಡೆ ಮಾಡಬೇಕಾಗಿತ್ತು. ಅದರಲ್ಲಿಯ ಕೆಲವು ಪದ್ಯಗಳನ್ನು ಆಕೆಗೆ ಓದಿ ತೋರಿಸಿದಾಗ ಒಳ್ಳೆಯ ಪ್ರತಿಕ್ರಿಯೆ ಕಂಡುಬಂದಿತು. 'ಆ ಪುಸ್ತಕ ನನಗೆ ಕೊಡು' ಎಂದು ಕೇಳಿದಳು. 'ಸಂಜೆ ಸಭೆಯಲ್ಲಿ ಆ ಪುಸ್ತಕ ಬಿಡುಗಡೆಯಾದ ಮೇಲೆ ನಿನಗೆ ಕೊಡುತ್ತೇನೆ' ಎಂದು ಹೇಳಿದೆ. ಆಕೆ ತಕ್ಷಣ ಕೇಳಿದಳು. 'ರಾಜಕುಮಾರನ್ನ ಬಿಡುಗಡೆ ಮಾಡಿದರಲ್ಲ, ಹಾಂಗ?' 'ಬಿಡುಗಡೆ' ಎಂಬ ಪದ ಆ ಸಂದರ್ಭದಲ್ಲಿ ಜನಜನಿತವಾಗಿ ಹೋದದ್ದನ್ನು ಮಗು ಹೇಗೆ ಗ್ರಹಿಸಿಕೊಂಡಿದೆ ನೋಡಿ. ಹೊಸಕಾಲದ ಹಸುಮಕ್ಕಳ ಈ

ಮನೋಧರ್ಮವನ್ನು ಲೇಖಕರು ಚೆನ್ನಾಗಿ ಅರಿತುಕೊಳ್ಳಬೇಕು. ಖಲೀಲ್ ಗಿಬ್ರಾನ್ ಮಕ್ಕಳ ಬಗ್ಗೆ ಹೇಳಿದ ಮಾತನ್ನು ಇಲ್ಲಿ ಲಕ್ಷಿಸಬೇಕು: "ಅವರಂತಾಗಲು ನೀವು ಹವಣಿಸಿರಿ. ಆದರೆ ನಿಮ್ಮಂತೆ ಅವರನ್ನು ಮಾಡಲು ಮಾತ್ರ ಪ್ರಯತ್ನಿಸಬೇಡಿ. ನೀವು ಬಿಲ್ಲುಗಳು, ಅವುಗಳಿಂದ ಬಿಟ್ಟ ಬಾಣಗಳೇ ನಿಮ್ಮ ಮಕ್ಕಳು" ಆದ್ದರಿಂದ ಮಕ್ಕಳನ್ನು ಬೆಳೆಸುತ್ತೇವೆ ಎನ್ನುವುದಕ್ಕಿಂತ, ಅವರಿಗೆ ಬೆಳೆಯಲು ಅವಕಾಶ ಮಾಡಿಕೊಡುವುದು ಯೋಗ್ಯ.

(೨೦೦೨)

(ಸಾಹಿತ್ಯ ಸಮಾಹಿತ : ೨೦೦೭)

೭

## ಮಧುರಚೆನ್ನ : ಬದುಕು-ಬರಹ-ಚಿಂತನೆ :
## ವಿಚಾರ ಸಂಕಿರಣ ಸಮಾರೋಪ ಭಾಷಣ

'ಆತ್ಮಶೋಧ'ದಲ್ಲಿ ಬರೆದಿರುವಂತೆ ಮಧುರಚೆನ್ನರಿಗೆ ಬಾಗಲಕೋಟೆಯ ಆರೋಗ್ಯಧಾಮದಲ್ಲಿದ್ದಾಗ (೧೯೨೯) 'ಬ್ರಹ್ಮಸಂಸ್ಪರ್ಶ' ಅಥವಾ ವಿಶ್ವಪ್ರಜ್ಞೆಯೊಂದಿಗೆ ಸಾಧಕನು ಪಡೆಯುವ ಸಂಪರ್ಕದ ಅನುಭವ ಉಂಟಾಯಿತು. ಹೀಗೆ ಅವರಿಗೆ 'ದೇವನ ರಾಜ್ಯ ಲಭಿಸಿದ' ಸ್ಥಳದಲ್ಲಿ ಅವರ ಜನ್ಮಶತಮಾನೋತ್ಸವದ ವಿಚಾರಸಂಕಿರಣ ಮತ್ತು ಕವಿಗೋಷ್ಠಿ ನಡೆದದ್ದು ಅತ್ಯಂತ ಔಚಿತ್ಯಪೂರ್ಣವಾಗಿದೆ. ಅದಕ್ಕಾಗಿ ಈ ಕಾರ್ಯಕ್ರಮವನ್ನು ಸಂಘಟಿಸಿದ ಕರ್ನಾಟಕ ಸಾಹಿತ್ಯ ಅಕಾಡೆಮಿಗೆ ಹಾಗೂ ಅದಕ್ಕೆ ನೆರವಾದ ಬಸವೇಶ್ವರ ವಿದ್ಯಾವರ್ಧಕ ಸಂಘಕ್ಕೆ ವೈಯಕ್ತಿಕವಾಗಿ ಹಾಗೂ ನಿಮ್ಮೆಲ್ಲರ ಪರವಾಗಿ ಹಾರ್ದಿಕ ಅಭಿನಂದನೆಗಳನ್ನು ಸಲ್ಲಿಸುತ್ತೇನೆ. ಮಧುರಚೆನ್ನರಂಥ ಮಹಾನುಭಾವಿಗಳಿಂದ ಹಾಗೂ ಅವರ ಪ್ರಭಾವಕ್ಕೊಳಗಾದ ಈ ಭಾಗದ ಜನರ ರೀತಿ-ನಡಾವಳಿಗಳಿಂದ ಈ ಪ್ರದೇಶಕ್ಕೆ 'ಹಲಸಂಗಿ ನಾಡು' ಎಂಬ ಹೆಸರು ತಾನಾಗಿಯೇ ಪ್ರಚಲಿತವಾಗಿರುವುದು ಒಂದು ಚಾರಿತ್ರಿಕ ಘಟನೆಯೆಂದು ನಾನು ಭಾವಿಸಿದ್ದೇನೆ.

ಕಳೆದು ಏಳೆಂಟು ವರ್ಷಗಳ ಅವಧಿಯಲ್ಲಿ ಬೇಂದ್ರೆ, ಶಂ.ಬಾ. ಜೋಶಿ, ತಿ.ತಾ. ಶರ್ಮ, ದೇವುಡು, ಸೇಡಿಯಾಪು ಹಾಗೂ ಇದೀಗ ಕಾರಂತ ಹಾಗೂ ಮಧುರಚೆನ್ನರ ಜನ್ಮಶತಮಾನೋತ್ಸವವನ್ನು ಆಚರಿಸುವ ಸುಯೋಗ ಕನ್ನಡಿಗರಿಗೆ ಒದಗಿದೆ. ಮುಂದಿನ ವರ್ಷ ಕುವೆಂಪು, ಶ್ರೀರಂಗ, ಜಿ.ಬಿ. ಜೋಶಿ, ಗೊರೂರ ಮೊದಲಾದವರನ್ನು ಇದೇ ನಿಮಿತ್ತದಿಂದ ಸ್ಮರಿಸಿಕೊಳ್ಳುವ ಸಂದರ್ಭ ಬರಲಿದೆ. ಈ ಎಲ್ಲ ಹಿರಿಯರನ್ನು ನೆನೆದಾಗ ಇಪ್ಪತ್ತನೆಯ ಶತಮಾನ ಹೊಸಗನ್ನಡ ಸಾಹಿತ್ಯ ಚರಿತ್ರೆಯಲ್ಲಿ ಎಂಥ ಉಜ್ವಲವಾದ ಕಾಲಮಾನ ಎನ್ನುವುದರ ಕಲ್ಪನೆ ನಮಗುಂಟಾಗದಿರದು. ಕನ್ನಡ ನವೋದಯ ಸಾಹಿತ್ಯದ ಈ ಹಿರಿಯ ಚೇತನಗಳನ್ನು, ಅವರ ಸಾಧನೆಗಳನ್ನು ಇನ್ನಷ್ಟು ಅರಿತುಕೊಂಡು ಕೇವಲ ಗುಣಗಾನದಲ್ಲಿ ಮೈಮರೆಯದೆ ಅವರ ಕೃತಿಗಳನ್ನು ಕುರಿತು ಹೆಚ್ಚಿನ ಚರ್ಚೆ, ಆಲೋಚನೆಗೆ ಆಸ್ಪದವೀಯುವದು ನಮ್ಮ ಸಾಹಿತ್ಯ ಪರಂಪರೆಯ ಮುಂದುವರಿಕೆಯ ದೃಷ್ಟಿಯಿಂದ ಹೆಚ್ಚು ಪ್ರಯೋಜನಕಾರಿಯಾಗಿದೆ. ಈ ದಿಸೆಯಲ್ಲಿ ಮಧುರಚೆನ್ನರನ್ನು ಕುರಿತು ಈ ಎರಡು ದಿನ ನಡೆದ ಮೂರು ವಿಚಾರಗೋಷ್ಠಿಗಳು ಅರ್ಥಪೂರ್ಣವಾದ ಸಂವಾದಕ್ಕೆ ಎಡೆಗೊಟ್ಟಿರುವುದು ಸಂತೋಷದ ಸಂಗತಿಯಾಗಿದೆ. ಅದಕ್ಕಾಗಿ ಇದರಲ್ಲಿ ಭಾಗವಹಿಸಿದ ಎಲ್ಲ ವಿದ್ವಾಂಸರನ್ನು ಹಾರ್ದಿಕವಾಗಿ ಅಭಿನಂದಿಸುತ್ತೇನೆ.

ಹಲಸಂಗಿ ಒಂದು ಕೊಂಪೆಹಳ್ಳಿಯಾಗಿದ್ದರೂ ಲೌಕಿಕವಾಗಿ, ಆಧ್ಯಾತ್ಮಿಕವಾಗಿ ಅಲ್ಲಿ ಚೈತನ್ಯಪೂರ್ಣವಾದ ನವಿಲ ಕುಣಿತ ಕಂಡುಬಂದಿತು. ಕನ್ನಡ ಸಂಸ್ಕೃತಿ ಪ್ರೇಮಿಗಳಿಗೆ ಅದು ಒಂದು ಯಾತ್ರಾ ಸ್ಥಳವಾಯಿತು. ಕರ್ನಾಟಕದ ಹತ್ತು ದಿಕ್ಕಿನ ವಿಚಾರಶೀಲರನ್ನು ತನ್ನೆಡೆಗ ಸೆಳೆದುಕೊಂಡಿತು. ಅಲ್ಲಿಯ ಜನರ ಜೀವನಬಾಂಧವ್ಯ ಅಪರೂಪವಾದದ್ದು. ಮಧುರಚೆನ್ನರು ಇವರೆಲ್ಲರೊಡನೆ ಸಮರಸವಾಗಿರುತ್ತಿದ್ದರು. ಹಾಗಿದ್ದರೂ ಮಧುರಚೆನ್ನರ ಜೀವನದ ರೀತಿ ಬೇರೆ ಬಗೆಯದಾಗಿತ್ತು. ಅದೊಂದು ವಿಶಿಷ್ಟ ಚೇತನ. ಎಲ್ಲರಲ್ಲಿ, ಎಲ್ಲದರಲ್ಲಿ ಆಸಕ್ತಿಯಿದ್ದರೂ ಯಾವುದರಲ್ಲೂ ಲಂಪಟರಲ್ಲ. ಅವರದು ರತ್ನಾಕರವರ್ಣಿಯ ಪಂಥ, ರಸಿಕ - ಅನುಭಾವಿ, ಕವಿ, ಗೃಹಸ್ಥನಂತೆ ಎಲ್ಲವನ್ನೂ ಸ್ವೀಕರಿಸಬೇಕು ಎಂಬುದು ಬೇಂದ್ರೆಯವರ ಮತ. ಆಧ್ಯಾತ್ಮಿಕತೆ ಬೇಂದ್ರೆಯವರ ಬದುಕನ್ನೇ ಆವರಿಸಿದ್ದರೂ ಮಧುರಚೆನ್ನರಂತೆ ಅವರು ಸಾಧನೆಯ ಹಾದಿ ಹಿಡಿದವರಲ್ಲ. ಇಬ್ಬರೂ ಅರವಿಂದರ ಪ್ರಭಾವಕ್ಕೆ ಒಳಗಾಗಿದ್ದರೂ ಸ್ವಂತದ ಆಧ್ಯಾತ್ಮಿಕತೆಯನ್ನು ರೂಪಿಸಿಕೊಂಡವರು. ಕಾರಂತರು ಹಿಂದೆ ಗಡ್ಡ ಬೆಳೆಸಿದ್ದರು. ಆಗ 'ದೇವರೆಲ್ಲಿ?' ಎಂದು ಮಧುರಚೆನ್ನರು ಅವರನ್ನು ಕೇಳಿದ್ದರಂತೆ. ಅದರ ಪರಿಣಾಮ ಏನಾಯಿತೆಂದರೆ ಕಾರಂತರ ಆತ್ಮಸಾಕ್ಷಿ ಕೆಣಕಿ ಗಡ್ಡ ಬೋಳಿಸಿದರು. ಮಧುರಚೆನ್ನರ ಅನುಭಾವದ ಆಳವನ್ನೂ, ಅದರ ವಿಸ್ತಾರವನ್ನೂ ಅರಿತವರು ಬಹುಶಃ ಬೇಂದ್ರೆ ಅವರೊಬ್ಬರೇ ಎಂದು ತೋರುತ್ತದೆ. ಅವರಿಬ್ಬರ ಸಖ್ಯ, ಜಗತ್ತಿನ ಸಾಹಿತ್ಯೇತಿಹಾಸದಲ್ಲಿಯೇ ಅಪರೂಪವಾದದ್ದು. ವರ್ಡ್ಸ್‌ವರ್ತ್-ಕೋಲರಿಜ್‌ರ ಸಖ್ಯವನ್ನು ನೆನಪಿಸುವಂಥದು. ಮಧುರಚೆನ್ನರ ಕಾವ್ಯ, ಆತ್ಮಕಥೆ, ಸಂಶೋಧನೆ ಇತ್ಯಾದಿ ಸಮಗ್ರ ಸಾಹಿತ್ಯವನ್ನು ಪುನಃ ಶೋಧಿಸಿ, ಪರಿಶೀಲಿಸಿ ಸಮರ್ಥವಾಗಿ ಸಂಪಾದಿಸಿಕೊಟ್ಟ ಶ್ರೇಯಸ್ಸು ಡಾ. ಗುರುಲಿಂಗ ಕಾಪಸೆಯವರಿಗೆ ಸಲ್ಲುತ್ತದೆ.

ಸಮಾರಂಭವನ್ನು ಉದ್ಘಾಟಿಸಿ ಆಶಯಭಾಷಣ ಮಾಡಿದ ಡಾ. ಜಿ.ಎಸ್. ಶಿವರುದ್ರಪ್ಪನವರು ತಮ್ಮ ಹೊಸ ವಿಚಾರಗಳನ್ನು ಮಂಡಿಸುವುದರ ಮೂಲಕ ಮುಂದಿನ ಉಪನ್ಯಾಸಕರಿಗೂ ಯೋಗ್ಯ ಚಾಲನೆ ದೊರಕಿಸಿಕೊಟ್ಟರೆಂದು ಹೇಳಬಹುದು. ಮಧುರಚೆನ್ನರ ಕವನಮಾರ್ಗ ಭಕ್ತಿಯ ಗೆರೆಯನ್ನು ಅತಿಕ್ರಮಿಸುವಂಥದು. ಅದು ಸಾಂಸ್ಥಿಕ ಧರ್ಮದ ಉಪಾಧಿಗಳನ್ನು ಮೀರುವಂಥದು. ಆಧುನಿಕ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ನಿಜವಾದ ಅರ್ಥದಲ್ಲಿ 'ಅನುಭಾವಕವಿ' ಎಂದು ಕರೆಯಿಸಿಕೊಳ್ಳಲು ಅರ್ಹರಾದವರು ಮಧುರಚೆನ್ನರೊಬ್ಬರೇ ಎಂಬುದನ್ನು ಅವರು ಎತ್ತಿ ಹೇಳಿದ್ದಾರೆ. ಆ ಕಾಲದ ಉಳಿದ ಕವಿಗಳ ಮೊದಲ ಕವನ ಸಂಕಲನಗಳಿಗೂ ಮಧುರಚೆನ್ನರ ಏಕಮಾತ್ರ ಕವನ ಸಂಕಲನ 'ನನ್ನ ನಲ್ಲ'ಕ್ಕೂ ಇರುವ ವ್ಯತ್ಯಾಸವನ್ನು ಹೇಳುತ್ತ ಇದು ಬೀಜವೂ ಆಗಿದೆ, ಹಣ್ಣೂ ಆಗಿದೆ ಎಂದು ಗುರುತಿಸಿದ್ದು ಮಹತ್ವದ ಅಂಶ. ನಮ್ಮ ನವೋದಯ ಸಾಹಿತ್ಯದ ಕೇಂದ್ರಗಳೆಂದು ಮೂರು ಸ್ಥಳಗಳನ್ನು - ಧಾರವಾಡ, ಮೈಸೂರು, ಮಂಗಳೂರು - ಹೇಳುತ್ತ ಬಂದಿರುವ ಸಂದರ್ಭದಲ್ಲಿ ಹಲಸಂಗಿಯನ್ನು ನಾಲ್ಕನೆಯ ಕೇಂದ್ರವೆಂದು ಗುರುತಿಸಿ ಅದಕ್ಕೆ ಸಮರ್ಥನೆ ನೀಡಿದ್ದಲ್ಲದೆ ಪಂಪ ಮತ್ತು ಕುವೆಂಪು ಅವರು ಕಂಡ 'ವಿಶ್ವಮಾನವ ಪ್ರಜ್ಞೆ'ಯನ್ನು ತೀರ ಸಹಜವಾಗಿ ಎತ್ತಿಹಿಡಿದ ಮಧುರಚೆನ್ನರ ನಿಲುವು ಪ್ರಸ್ತುತ ಹಾಗೂ ಮಾರ್ಗದರ್ಶಕ ಎಂದು ಹೇಳಿದ್ದು ಗಮನಾರ್ಹವಾಗಿದೆ.

ಪರಂಪರೆ ಮತ್ತು ಸಮಕಾಲೀನ ಜ್ಞಾನಾನುಭವ ಮಧುರಚೆನ್ನರ ಆತ್ಮಶೋಧದ ಸ್ತರಗಳಲ್ಲಿ ಸ್ಪಷ್ಟವಾಗಿ ಗೋಚರಿಸುವುದನ್ನು ನಿರೂಪಿಸಿದ ಡಾ.ಎ.ಎಂ. ಪಡಶೆಟ್ಟಿಯವರು ಬಾಲಭಕ್ತಿ, ಮುಗ್ಧ ಭಕ್ತಿಯಿಂದ ಹಿಡಿದು, ಈ ಜಗತ್ತಿನ ಪರಮಾತ್ಮನ ಪ್ರತ್ಯಕ್ಷಾನುಭವವನ್ನು ಪಡೆಯುವುದಕ್ಕಿಂತ ಹೆಚ್ಚಿನದೇನೂ ಇಲ್ಲವೆಂದು ಮನವರಿಕೆಯಾಗುವವರೆಗಿನ ವಿವಿಧ ಹಂತಗಳನ್ನು ಗುರುತಿಸಿದ್ದಾರೆ. ವೇದಾಂತದ ನೆಲೆಯನ್ನು ತಿಳಿದುಕೊಂಡಿದ್ದ ಮಧುರಚೆನ್ನರ ಆತ್ಮಶೋಧದಲ್ಲಿ ಶರಣರ ಷಟ್ಸ್ಥಲವೂ ಬೆರೆತಿದೆ. ರಮಣ ಮಹರ್ಷಿಗಳ ದರ್ಶನದಿಂದ (೧೯೪೭) ಆತ್ಮಶೋಧದ ಉನ್ನತ ಶಿಖರವನ್ನು ಮುಟ್ಟಿ ಆತ್ಮ ತತ್ತ್ವವನ್ನು ಕಂಡುಕೊಂಡದ್ದು, ಹಾಗೆಯೇ ಅರವಿಂದರ ದರ್ಶನದಿಂದ (೧೯೩೮) ಬುದ್ಧಿ ನೂರ್ಮಡಿ ಬೆಳೆದದ್ದು, 'ಮಾತಾರವಿಂದರ ಸಮನ್ವಯ ಯೋಗಸಾಧನೆ'ಯನ್ನು ಅಳವಡಿಸಿಕೊಂಡು ಶ್ರೀಮಾತೆಯರ ಪ್ರೇಮಸ್ಪರ್ಶ ಹಳ್ಳಿಯ ಜನರಿಗೂ ಮುಟ್ಟುವಂತೆ ಮಾಡಿದ್ದು ಮಧುರಚೆನ್ನರ ಸಾಧನೆಯ ಫಲಪ್ರದತೆಯನ್ನು ಸೂಚಿಸುತ್ತದೆಂಬ ಅವರ ಅಭಿಪ್ರಾಯ ಎಲ್ಲರೂ ಕಂಡ ಸಂಗತಿಯೇ ಆಗಿದೆ.

ಮಧುರಚೆನ್ನರ ಕಾವ್ಯದ ಬಗ್ಗೆ ಇದುವರೆಗೆ ಬಂದಿರುವ ವಿಮರ್ಶೆಯನ್ನು ಓದಿದವರಿಗೆ ಅದರ ಬಗ್ಗೆ ಹೇಳಬೇಕಾದ ಹೆಚ್ಚಿನ ಮಾತುಗಳಿರಲಿಕ್ಕಿಲ್ಲವೆಂದುಕೊಂಡಾಗ ಡಾ. ಎಚ್.ಎಸ್. ರಾಘವೇಂದ್ರರಾವ್ ಅವರ ಭಾಷಣ ಹೊಸ ಒಳನೋಟಗಳನ್ನೊದಗಿಸಿದ್ದು ಅದರ ವೈಶಿಷ್ಟ್ಯವಾಗಿತ್ತು. ಮಧುರಚೆನ್ನರ ಮಾನುಷ ಆಯಾಮಗಳನ್ನು ಅರಿತುಕೊಂಡ ರಾಘವೇಂದ್ರರಾವ್ ಅನುಭಾವಿಜೀವನದ ಒಂದು ನಿರ್ಣಾಯಕ ಬಿಂದುವಿನ ಎಡಬಲದಲ್ಲಿ ರಚಿತವಾದ ಕಾವ್ಯವಾಗಿ 'ನನ್ನ ನಲ್ಲ'ವನ್ನು ಅವರು ವಿವೇಚಿಸುತ್ತಾರೆ. ಆರ್ತಭಾವನೆ ಸ್ಥಾಯಿಯಾದ 'ವ್ಯಾಕುಲಸಾಧಕ' ತನ್ನ ಪಯಣದ ಸಾಕ್ಷಾತ್ಕಾರದ ಅಂತಿಮ ನಿಲ್ದಾಣವನ್ನು ತಲುಪಿದರೆ? ಎಂಬ ಪ್ರಶ್ನೆಯನ್ನೆತ್ತಿದರೂ ಇದರಿಂದ ಅವರ ಕಾವ್ಯ ಸಾಧನೆ ಸೌಂದರ್ಯಗಳಿಗೆ ಕೊರತೆ ಒದಗಿಲ್ಲವೆಂಬುದನ್ನು ಕಂಡುಕೊಂಡಿದ್ದಾರೆ. ಅವರ ಕಾವ್ಯದ ಶಕ್ತಿಯಿರುವುದು ಹುಡುಕಾಟದ ತಲ್ಲಣ ಆತಂಕಗಳ ಇಂದ್ರಿಯಗಮ್ಯ ನಿರೂಪಣೆಯಲ್ಲಿಯೇ ಹೊರತು ಕೊನೆಯ ನೆಲೆಗಳ ನಿರೂಪಣೆಯಲ್ಲಿ ಅಲ್ಲ. ಹಾಗೆಯೇ ಅನುಭವಗಳ ಭಾವಸತ್ಯ, ಬುದ್ಧಿಸತ್ಯಗಳು ಕವಿತೆಯ ಸಂದರ್ಭದಲ್ಲಿ ಗೊಂದಲಗೊಳಿಸದಿರುವುದನ್ನು ಅವರು ತೋರಿಸಿರುವುದು ಗಮನಾರ್ಹ ಅಂಶ. ಮಧುರಚೆನ್ನರ ಸಾಧನೆಯ ಹಾದಿಯಲ್ಲಿ ವೀರಶೈವಮಾರ್ಗ ಮತ್ತು ಅರವಿಂದರ ಮಾರ್ಗಗಳ ಮುಖಾಮುಖಿ ಕುತೂಹಲಕರವಾಗಿದೆ. ಈ ಕವಿಯ ಅಂತಿಮ ಮಾನದಂಡ ಸ್ವಾನುಭವ, ಸ್ವಾಧ್ಯಾಯಗಳೇ ಹೊರತು ಗುರುಕರುಣೆ, ಅನುಕರಣೆಯಲ್ಲವೆಂಬುದು ಮಹತ್ವದ್ದಾಗಿದೆ. ರಾಘವೇಂದ್ರರಾವ್ ಅವರ ಈ ಬಗೆಯ ಸೂಕ್ಷ್ಮವಾದ ವಿಶ್ಲೇಷಣೆ ಸಹೃದಯತೆಗೆ ಹೊರತಾಗಿಲ್ಲವೆಂಬುದು ಮೆಚ್ಚತಕ್ಕ ಸಂಗತಿಯಾಗಿದೆ.

ಮಧುರಚೆನ್ನರ ಬಹುಮುಖ ಪ್ರತಿಭೆ ಕಾವ್ಯಕ್ಷೇತ್ರವನ್ನು ಮೀರಿ ಕೆಲಸ ಮಾಡಿರುವುದನ್ನು ಡಾ.ಎಸ್. ಕೆ. ಕೊಪ್ಪ ಅವರು ತಮ್ಮ 'ಮಧುರಚೆನ್ನರ ಸಂಶೋಧನೆಯ ಸ್ವರೂಪ ಮತ್ತು

ವೈಚಾರಿಕ ನಿಲುವು' ಪ್ರಬಂಧದಲ್ಲಿ ಸಮರ್ಪಕವಾಗಿ ವಿವರಿಸಿದ್ದಾರೆ. 'ನಾನು ಸತ್ಯದ ಭಕ್ತ, ಗ್ರಹಿಕೆಯ ದಾಸನಲ್ಲ' ಎಂಬ ಮಧುರಚೆನ್ನರ ಹೇಳಿಕೆಯನ್ನು ಹಿಡಿದುಕೊಂಡು ಆಕರ ನಿರ್ಮಾಣಕಾಲಕ್ಕೆ ಸೇರಿದ ಅವರ ಲೇಖನಗಳಲ್ಲಿ ಕಂಡುಬರುವ ವಿಶ್ಲೇಷಣಾತ್ಮಕ ಹಾಗೂ ವ್ಯಾಖ್ಯಾನಾತ್ಮಕ ಶೋಧದ ಗುಣಲಕ್ಷಣಗಳನ್ನು ಚೆನ್ನಾಗಿ ಗುರುತಿಸಿ, ಆಧುನಿಕ ಸಂಶೋಧನೆ ಅವರನ್ನು ಏಕೆ ಉಪೇಕ್ಷಿಸುವಂತಿಲ್ಲ ಎನ್ನುವುದನ್ನು ಸಕಾರಣವಾಗಿ ನಿರೂಪಿಸಿರುವುದು ಮಹತ್ವದ್ದಾಗಿದೆ.

ಗ್ರಾಮೀಣ ಬದುಕಿನ ಬಗೆಗೆ ಅವರಿಗಿದ್ದ ಆಸಕ್ತಿ ಮತ್ತು ಕಾಳಜಿಗಳೇ ಜನಪದ ಸಾಹಿತ್ಯದತ್ತ ಮಧುರಚೆನ್ನರು ಹಾಗೂ ಹಲಸಂಗಿಯ ಗೆಳೆಯರು ಲಕ್ಷ್ಯವೀಯಲು ಮುಖ್ಯಕಾರಣ, 'ಗರತಿಯ ಹಾಡು', 'ಮಲ್ಲಿಗೆ ದಂಡೆ', 'ಜೀವನ ಸಂಗೀತ' ಸಂಗ್ರಹಗಳ ಮೂಲಕ ಇಡೀ ಕರ್ನಾಟಕದ ಜನತೆಗೆ ಜನಪದ ಗೀತಗಳ ಸವಿಯನ್ನು ಉಣಬಡಿಸಿ ಕೃತಕೃತ್ಯರಾದ ಬಗೆಯನ್ನು ಡಾ. ಕೆ.ಆರ್. ದುರ್ಗಾದಾಸ್ ತಮ್ಮ ಪ್ರಬಂಧದಲ್ಲಿ ಆಸ್ಥೆಯಿಂದ ವಿವರಿಸಿದ್ದಾರೆ.

ಮಧುರಚೆನ್ನರ ತಾತ್ವಿಕ ಹಾಗೂ ಇತರ ಲೇಖನಗಳನ್ನು ಕುರಿತು ವಿವರವಾಗಿ ವಿವೇಚಿಸಿದ ಪ್ರೊ. ವೀರೇಂದ್ರ ಸಿಂಪಿಯವರು, "ಅರುವತ್ತೊಂದು ವರ್ಷಗಳ ನಂತರವೂ ಅರವಿಂದರ ಪೂರ್ಣಯೋಗದ ವೈಶಿಷ್ಟ್ಯವನ್ನು ಮಧುರಚೆನ್ನರಂತೆ ಯಾರೂ ಹೇಳಿಲ್ಲ" ಎಂದು ಹೇಳಿದ್ದು ಸತ್ಯಕ್ಕೆ ಹೆಚ್ಚು ಸಮೀಪದ ಮಾತೇ ಆಗಿದೆಯೆನ್ನಬಹುದು.

'ಮಧುರಚೆನ್ನರ ಗೆಳೆತನದ ವಿಶೇಷತೆ'ಯನ್ನು ಕುರಿತು ಮಾತಾಡಿ ಶ್ರೀ ಚಿ. ಶ್ರೀನಿವಾಸರಾಜು ಅವರು ನವೋದಯದ ಸಂದರ್ಭದಲ್ಲಿ ಹಲಸಂಗಿಯ ಗೆಳೆಯರಿಗೆ ಪ್ರತ್ಯೇಕ ಅಸ್ತಿತ್ವವಿದ್ದುದನ್ನು ಪುನಃ ಸ್ಥಾಪಿಸಿದ್ದಾರೆ. ಅಲ್ಲದೆ ಧಾರವಾಡದ ಗೆಳೆಯರ ಗುಂಪಿಗೂ ಹಲಸಂಗಿಯ ಗೆಳೆಯರಿಗೂ ಇರುವ ವ್ಯತ್ಯಾಸವನ್ನು ಚೆನ್ನಾಗಿ ಗುರುತಿಸಿದ್ದಾರೆ. ಹಲಸಂಗಿಯ ಗೆಳೆಯರೆಲ್ಲ ಆ ಊರಿನ ಸುತ್ತಮುತ್ತಲಿನವರು. ಹೆಚ್ಚಾಗಿ ಕೆಳ ಮಧ್ಯಮವರ್ಗದವರು, ಹಿಂದುಳಿದವರು, ಹೆಚ್ಚೆಂದರೆ ಕನ್ನಡ ಮುಲ್ಕೀಪರೀಕ್ಷೆ ಪಾಸಾದವರು. ಕೃಷಿ, ವ್ಯಾಪಾರ, ನೇಕಾರಿಕೆಯಲ್ಲಿ ತೊಡಗಿದವರು. ಸಮಾನಮನಸ್ಕರಾಗಿ ಹತ್ತಿರದ ಗೆಳೆಯರಾದವರು. ಆದರೆ ಧಾರವಾಡದ ಗೆಳೆಯರ ಗುಂಪಿನಲ್ಲಿದ್ದವರು ಬೇರೆ ಬೇರೆ ಕಡೆಗಳಿಂದ ಬಂದು ಸೇರಿದವರು. ಹೆಚ್ಚಾಗಿ ಒಂದೇ ವರ್ಗದವರು, ಮುಂದುವರಿದವರು. ನಗರದ ಕಡೆಗೆ ಆಕರ್ಷಿತರಾದವರು. ಹೆಚ್ಚಿನ ವಿದ್ಯಾಭ್ಯಾಸ ಮಾಡಿ ಇಂಗ್ಲಿಷ್ ಕಲಿತವರು. ಹಲಸಂಗಿ ಗುಂಪು ನಿಧಾನವಾಗಿ ಅರವಿಂದ ಮಂಡಲವಾಗಿ ಒಂದು ವಿದ್ಯಾಲಯದಂತೆ ಮುಂದುವರಿದರೆ ಧಾರವಾಡದ ಗೆಳೆಯರ ಗುಂಪು ಹನ್ನೆರಡು ವರ್ಷಗಳಲ್ಲಿಯೆ ಸ್ವಂತಿಕೆಯ ಉಲ್ಲೇಖ ಹಾಗೂ ಒಡೆತನದ ಮೋಹದಿಂದ ಅಸ್ತಂಗತವಾಯಿತು. ನಾಡಹಬ್ಬದ ಆಚರಣೆ, 'ಸ್ವಧರ್ಮ', 'ಜಯಕರ್ನಾಟಕ', 'ಜೀವನ' ಪತ್ರಿಕೆಗಳನ್ನು ಕೈಗೆತ್ತಿಕೊಂಡು ಧಾರವಾಡದ ಗೆಳೆಯರ ಗುಂಪು ಉತ್ತಮ ಫಲ ನೀಡಿದ್ದನ್ನು ಅಲ್ಲಗಳೆಯುವಂತಿಲ್ಲ. ಎರಡೂ ಗುಂಪಿನ ಗುರಿ ಮನೋಧರ್ಮ ಬೇರೆಯಾಗಿದ್ದರೂ ಪರಸ್ಪರ ಸ್ನೇಹಕ್ಕೆ ಯಾವ ಕೊರತೆಯೂ ಇರಲಿಲ್ಲ.

ಡಾ. ಎಂ.ಎಚ್. ಮದಭಾವಿಯವರು 'ನವೋದಯ ಸಾಹಿತ್ಯದ ಒಂದು ಕೇಂದ್ರವಾಗಿ ಹಲಸಂಗಿ' ರೂಪಗೊಂಡದ್ದನ್ನು ಕುರಿತು ಮಾತನಾಡಿದ್ದೂ ಡಾ. ಜಿ.ಎಸ್. ಶಿವರುದ್ರಪ್ಪನವರ ಹೇಳಿಕೆಯನ್ನು ಪುಷ್ಟೀಕರಿಸುವಂತಿತ್ತು. ಜೊತೆಗೆ ಹಲಸಂಗಿ ಗೆಳೆಯರ ಬಗ್ಗೆ ಸಾಕಷ್ಟು ಮಾಹಿತಿಯನ್ನು ಮದಭಾವಿ ನೀಡಿದರು.

ಮಧುರಚೆನ್ನರ ಮಾತಾರವಿಂದರ ಭಕ್ತಿ ಶ್ರೀ ಅರವಿಂದ ಮಂಡಳದ ಕಾರ್ಯಕಲಾಪಗಳ ಮೂಲ ಶಕ್ತಿಯಾಗಿದ್ದುದನ್ನು ಶ್ರೀ ಪುರುಷೋತ್ತಮ ಗಲಗಲಿಯವರು ವಿವರಿಸಿದ ರೀತಿ ಹೆಚ್ಚು ಅಧಿಕೃತವೆನಿಸಿತು. ರಾಮಕೃಷ್ಣ ಪರಮಹಂಸರು ಕಾಲಿಮಾತೆಯನ್ನು ಕೇಳಿ ಹೇಳುತ್ತೇನೆ ಎಂದು ಹೇಳುತ್ತಿದ್ದಂತೆ ಮಧುರಚೆನ್ನರು ತಾಯಿಯವರನ್ನು ಕೇಳಿ ಹೇಳುತ್ತೇನೆಂದು ಅನೇಕ ಸಂದರ್ಭಗಳಲ್ಲಿ ನುಡಿಯುತ್ತಿದ್ದುದು ಮಾತಾರವಿಂದರಲ್ಲಿ ಅವರಿಗಿರುವ ಭಕ್ತಿಯ ಪರಾಕಾಷ್ಠತೆಯನ್ನು ಸೂಚಿಸುತ್ತದೆ. ಹಲಸಂಗಿ ಗೆಳೆಯರ ಗುಂಪು ಸದ್ದಿಲ್ಲದೆ ಅದು ಚಡಚಣ, ವಿಜಾಪುರ ಮೊದಲಾದ ಹಲವಾರು ಊರುಗಳಲ್ಲಿ ಅರವಿಂದ ಮಂಡಲವಾಗಿ ಮೈದಾಳಿತು. ಮಂಡಲದ ವಾರ್ಷಿಕ ಕಾರ್ಯಕ್ರಮ ಇಂದಿಗೂ ಹಲಸಂಗಿಯಲ್ಲಿ ನಡೆಯುತ್ತಿದ್ದು, ಕಾರ್ಯಕ್ರಮಕ್ಕೆ ಶ್ರೀಮಾತೆಯವರ ಪ್ರತಿನಿಧಿಯಾಗಿ ಆಶ್ರಮದಿಂದ ಒಬ್ಬ ಸಾಧಕರನ್ನು ಕರೆಯಿಸಿಕೊಳ್ಳುವ ಸಂಪ್ರದಾಯ ಬೆಳೆದು ಬಂದಿತು. ಹಲಸಂಗಿ ಅರವಿಂದ ಮಂಡಲ ವಿಜಾಪುರ ಜಿಲ್ಲಾ ಮಂಡಲವಾಗಿ, ಮುಂದೆ ಕರ್ನಾಟಕ ಅರವಿಂದ ಮಂಡಲವಾಗಿ ಪರಿವರ್ತನಗೊಂಡುದರ ಚಾರಿತ್ರಿಕ ಮಹತ್ವವನ್ನು ಪುರುಷೋತ್ತಮ ಚೆನ್ನಾಗಿ ಬಿಂಬಿಸಿದರು. ಕರ್ನಾಟಕದಲ್ಲಿ ಪ್ರಪ್ರಥಮವಾಗಿ ಶ್ರೀ ಅರವಿಂದರ ಅವಶೇಷ ಬಂದುದು ಹಲಸಂಗಿಗೆ ಎಂಬುದನ್ನು ನೆನೆದರೆ ಮಧುರಚೆನ್ನರು ಅಲ್ಲಿ ಎಂಥ ವಾತಾವರಣವನ್ನು ನಿರ್ಮಿಸಿದ್ದರೆಂಬುದರ ಕಲ್ಪನೆಯಾಗುತ್ತದೆ. ಪಾಂಡಿಚೇರಿ ಹಾಗೂ ಹಲಸಂಗಿಗಿರುವ ಗಾಢಸಂಬಂಧ ನಮಗೆ ಮನವರಿಕೆಯಾಗುತ್ತದೆ.

ಅಧ್ಯಾತ್ಮ, ಅನುಭಾವ, ಕಾವ್ಯಪ್ರತಿಭೆ, ತೀಕ್ಷ್ಣ ಬುದ್ಧಿಶಕ್ತಿ, ಸಂಶೋಧನ ಪ್ರವೃತ್ತಿ ಹಾಗೂ ಪ್ರೀತಿ ಇವುಗಳ ಪಾಕದಿಂದ ಪರಿಪಕ್ವಗೊಂಡ ಮಧುರಚೆನ್ನರ ವ್ಯಕ್ತಿತ್ವ ನಾಡಿನ ಅನೇಕ ಸಾಹಿತಿಗಳ ಮೇಲೆ ಪ್ರಭಾವ ಬೀರಿದ್ದು ಸರಿಯೆ. ಅದಕ್ಕಿಂತ ಹೆಚ್ಚಾಗಿ ಹಳ್ಳಿಯ ಸಾಮಾನ್ಯ ಜನರಲ್ಲಿ ಅದು ಹೆಚ್ಚು ಆತ್ಮೀಯವಾಗಿ ಪಸರಿಸಿ ಅಧ್ಯಾತ್ಮ ಪಥದಲ್ಲಿ ನಡೆಯಲು ಅವರನ್ನು ಪ್ರೇರೇಪಿಸಿದ್ದನ್ನು ಶ್ರೀ ಎನ್.ಜಿ. ಕರೂರ ಅವರು ಪ್ರಸ್ತುತಪಡಿಸಿದ್ದಾರೆ. ಬಸವಣ್ಣನಂತೆ ಚೆನ್ನಮಲ್ಲ ಗಣಜೀವಿ, ಗಣಸಹಿತ ಕೈಲಾಸ ಕಾಣಬೇಕು ಎಂದುಕೊಂಡವರು, ಎಂಬ ಬೇಂದ್ರೆಯವರ ಮಾತನ್ನು ಈ ಸಂದರ್ಭದಲ್ಲಿ ನೆನೆಯಬೇಕು.

ಮೂರೂ ಗೋಷ್ಠಿಗಳಲ್ಲಿ ನಡೆದ ಉಪನ್ಯಾಸಗಳು, ಮಂಡಿಸಿದ ಪ್ರಬಂಧಗಳು ಮಧುರಚೆನ್ನರ ಬದುಕು-ಬರಹ-ಚಿಂತನಕ್ಕೆ ಸಾಕಷ್ಟು ಸಾಮಗ್ರಿಯನ್ನು ಒದಗಿಸಿದ್ದಲ್ಲದೆ ಆ ಬಗ್ಗೆ ನಮ್ಮ ತಿಳಿವಳಿಕೆಯನ್ನು ಖಂಡಿತವಾಗಿಯೂ ಹೆಚ್ಚಿಸಿವೆ. ನಮ್ಮ ಹಿರಿಯ ಸಾಹಿತಿಗಳ ಜನ್ಮಶತಮಾನೋತ್ಸವವನ್ನು ಈ ರೀತಿ ಆಚರಿಸುವುದೇ ಹೆಚ್ಚು ಸಾರ್ಥಕವೆಂದು ಬೇರೆ ಹೇಳಬೇಕಿಲ್ಲ.

ಸಮಾರಂಭದ ಕೊನೆಯಲ್ಲಿ ಕವಿಗೋಷ್ಠಿಯನ್ನು ಏರ್ಪಡಿಸಿರುವುದು ಕಾರ್ಯಕ್ರಮಗಳಿಗೆ ಕಾವ್ಯಾತ್ಮಕ ಮುಕ್ತಾಯವನ್ನು ಒದಗಿಸಿದಂತಾಗಿದೆ. ಭಾಗವಹಿಸಿದ ಹನ್ನೆರಡು ಜನ ಪ್ರತಿಷ್ಠಿತ ಕವಿಗಳು ತಮ್ಮ ಸತ್ವಪೂರ್ಣವಾದ ಕಾವ್ಯವಾಚನದಿಂದ ಸಹೃದಯರನ್ನು ಸಂತೋಷಗೊಳಿಸಿದ್ದಾರೆ. ಇಂದಿನ ಕನ್ನಡ ಕಾವ್ಯದ ಗತಿಯನ್ನು ಇಲ್ಲಿಯ ಕವಿತೆಗಳು ಸೂಚಿಸುವಂತಿರುವುದು ಗಮನಾರ್ಹ.

ದೇಶದ ಸ್ಥಿತಿಗತಿಗಳಲ್ಲಿ ತೀವ್ರ ಬದಲಾವಣೆಗಳಾಗುತ್ತಿರುವ ಈ ಸಂದರ್ಭದಲ್ಲಿ ಕನ್ನಡ ಕಾವ್ಯ ಮತ್ತೆ ಸಂಕ್ರಮಣದ ತಿರುವಿಗೆ ಬಂದಿದೆ. ನಮ್ಮ ದೇಶದ ಬಹುಮುಖಿ ಸಂಸ್ಕೃತಿಯ ತಿಳಿವಳಿಕೆ ಭವಿಷ್ಯದ ದಿಕ್ಕನ್ನು ಸೂಚಿಸಬಹುದು. ಅಮಾನವೀಯ ಅಂಶಗಳನ್ನು ನಿಷ್ಠುರವಾಗಿ ತಿರಸ್ಕರಿಸಿ ಮಾನವೀಯತೆಯನ್ನು ಅನುಷ್ಠಾನಗೊಳಿಸಲು ಅನುಭಾವಿಕ ನೆಲೆಯಲ್ಲಿ ದೇಸೀಮೂಲದ ಕಡೆಗೆ ಕನ್ನಡ ಕವಿತೆ ಚಲಿಸುತ್ತಿರುವ ಲಕ್ಷಣ ಕಂಡುಬರುತ್ತಿದೆ. ಧಾರ್ಮಿಕ ಸ್ವಾತಂತ್ರ್ಯದ ವಿಷಯದಲ್ಲಂತೂ ಬಹಳ ಹಿಂದೆಯೇ ಮಧುರಚೆನ್ನರು ತಾಳಿದ ನಿಲುವುಗಳು ಪರಸ್ಪರ ತಪ್ಪು ತಿಳಿವಳಿಕೆಯ ಇಂದಿನ ಗೊಂದಲದ ಪರಿಸ್ಥಿತಿಯಲ್ಲಿ ತುಂಬ ಪ್ರಸ್ತುತ ಹಾಗೂ ಮಾರ್ಗದರ್ಶಕವಾಗಿವೆ.

(೨೦೦೩)

(ಸಾಹಿತ್ಯ ಸಮಾಹಿತ : ೨೦೦೭)

## ೮

## ಸಿಂಪಿ ಲಿಂಗಣ್ಣ : ಅಪ್ಪಟ ಜಾನಪದ ಪ್ರತಿಭೆ
## ವಿಚಾರ ಸಂಕಿರಣದ ಉದ್ಘಾಟನಾ ಭಾಷಣ

ಕನ್ನಡದ ಹಿರಿಯಣ್ಣ ಸಿಂಪಿ ಲಿಂಗಣ್ಣನವರ ಜನ್ಮಶತಮಾನೋತ್ಸವದ ಸಂದರ್ಭದಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿ, ಅವರು ಹುಟ್ಟಿ, ಬೆಳೆದು, ಬಾಳಿ ಕಣ್ಮರೆಯಾದ ಊರಿನಲ್ಲಿಯೇ ಅವರ ಬದುಕು-ಬರೆಹವನ್ನು ಕುರಿತು ವಿಚಾರ ಸಂಕಿರಣವನ್ನು ಏರ್ಪಡಿಸಿರುವುದು ಔಚಿತ್ಯಪೂರ್ಣವಾಗಿದೆ. ಚಡಚಣದ ಕಲಾ ಹಾಗೂ ವಾಣಿಜ್ಯ ಮಹಾವಿದ್ಯಾಲಯ ಹಾಗೂ ಅದರ ಪ್ರಾಚಾರ್ಯರಾದಿಯಾಗಿ ಎಲ್ಲ ಅಧ್ಯಾಪಕವರ್ಗ ಅದಕ್ಕೆ ಬೇಕಾದ ಎಲ್ಲ ಏರ್ಪಾಡುಗಳನ್ನು ಅತ್ಯಂತ ಶ್ರದ್ಧೆಯಿಂದ ಕೈಕೊಂಡಿರುವುದು ನಿಜಕ್ಕೂ ಮೆಚ್ಚತಕ್ಕ ಸಂಗತಿ. ಹಲಸಂಗಿ ನಾಡಿನ ಜನ ಬಂಧುಬಳಗದಂತೆ ಇಲ್ಲಿ ಕೂಡಿರುವುದನ್ನು ನೋಡಿದರೆ, ಈ ಬಗೆಯ ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ ಅವರ ಆಸ್ಥೆ ಅಚ್ಚಳಿಯದೆ ಉಳಿದುಕೊಂಡು ಬಂದಿರುವುದು ಸ್ಪಷ್ಟವಾಗಿ ಗೋಚರಿಸುತ್ತದೆ. ಲಿಂಗಣ್ಣನವರ ವ್ಯಷ್ಟಿ ಜೀವನ, ಸಮಷ್ಟಿ ಜೀವನ ಪರಸ್ಪರ ಪೂರಕ ಹಾಗೂ ಪೋಷಕವಾಗಿದ್ದುದೇ ಇದಕ್ಕೆ ಮುಖ್ಯಕಾರಣವೆಂದು ನಾನು ಭಾವಿಸುತ್ತೇನೆ. ಇಂಥ ಒಂದು ಸಮಾರಂಭದ ಉದ್ಘಾಟನೆ ನೆರವೇರಿಸುವ ಭಾಗ್ಯ ಇಂದು ನನ್ನದಾಗಿದೆ. ಅದಕ್ಕಾಗಿ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರೂ ಸನ್ಮಿತ್ರರೂ ಆದ ಡಾ. ಗುರುಲಿಂಗ ಕಾಪಸೆಯವರಿಗೆ ಹಾಗೂ ಸಹೃದಯರಾದ ತಮ್ಮೆಲ್ಲರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು.

ಈ ಸಂದರ್ಭದಲ್ಲಿ ಜ್ಯೋತಿಯನ್ನು ಬೆಳಗಿಸುವುದು ಒಂದು ಸತ್ ಸಂಪ್ರದಾಯವಾಗಿರುವಂತೆಯೇ ಅದು ವಿಸ್ಮೃತಿಯನ್ನು ತೊಡೆದು ಹಾಕುವ ಸಂಕೇತವೂ ಹೌದು. ಜೀವನದಲ್ಲಿ ಸಾಧಿಸಿದ್ದನ್ನು ತಮ್ಮ ಕೃತಿಗಳಲ್ಲಿ ಬಿಂಬಿಸುತ್ತ ನಾಡಿನ ಸಂಸ್ಕೃತಿಯನ್ನು ರೂಪಿಸುವ ಸ್ವಾಭಾವಿಕ ಕ್ರಿಯೆಯಲ್ಲಿ ತಮ್ಮನ್ನು ತೊಡಗಿಸಿಕೊಂಡ ಸಾಧಕಜೀವಿ ಸಿಂಪಿ ಲಿಂಗಣ್ಣನವರಂಥ ಹಿರಿಯರನ್ನು ಮರೆಯುವುದಾದರೂ ಹೇಗೆ? ಕನ್ನಡ ನವೋದಯದ ಇಂಥ ಮಹಾನುಭಾವರನೇಕರ ಜನ್ಮಶತಮಾನೋತ್ಸವಗಳನ್ನು ಕಳೆದ ಹತ್ತಾರುವರ್ಷಗಳಿಂದ ನಾವು ಆಚರಿಸುತ್ತಿರುವುದು ಕಳೆದ ಶತಮಾನದ ಕನ್ನಡ ಸಾಹಿತ್ಯದ ಹಿರಿಮೆಗೆ ಸಾಕ್ಷಿಯಾಗಿದೆ. ಈ ಬಗೆಯ ಆಚರಣೆಗಳು ಕೇವಲ ಔಪಚಾರಿಕವಾಗಿರದೆ ಒಂದು ಜನಾಂಗವನ್ನು ಸಂಸ್ಕಾರದಲ್ಲಿ ಮುಂದಕ್ಕೆ ತೆಗೆದುಕೊಂಡು ಹೋಗುವುದಾಗಿರುತ್ತದೆ. ಅಲ್ಲದೆ ಅದು ಜನತೆಯ ಜಾಗೃತಾವಸ್ಥೆಯ ಸಂಕೇತವೂ ಹೌದು.

ಸಾಹಿತ್ಯ ಪರಂಪರೆಯ ನಿರ್ಮಾಣ ಮತ್ತು ಅದರ ಮುಂದುವರಿಕೆಯ ದೃಷ್ಟಿಯಿಂದ ನಮ್ಮ ಹಿರಿಯ ಸಾಹಿತಿಗಳ ಕೊಡುಗೆಯನ್ನು ನಾವು ಗೌರವದಿಂದ ಪರಿಗಣಿಸುವುದು ಅಗತ್ಯವಾಗಿದೆ.

ಸಿಂಪಿ ಲಿಂಗಣ್ಣನವರನ್ನು ನಾನು ಮೊಟ್ಟಮೊದಲು ನೋಡಿದ್ದು ಈಗ್ಗೆ ಸರಿಯಾಗಿ ಅರುವತ್ತು ವರ್ಷಗಳ ಹಿಂದೆ-ನಾನು ಹಾಯ್‌ಸ್ಕೂಲ್ ವಿದ್ಯಾರ್ಥಿಯಾಗಿದ್ದಾಗ. ರಬಕವಿಯಲ್ಲಿ ಪ್ರೊ. ಶಿ.ಶಿ. ಬಸವನಾಳರ ಅಧ್ಯಕ್ಷತೆಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ (೧೯೪೪) ಜನಪದ ಸಾಹಿತ್ಯ ಗೋಷ್ಠಿಯ ಅಧ್ಯಕ್ಷ ಭಾಷಣದ ನಡುನಡುವೆ ಲಿಂಗಣ್ಣನವರು 'ಗರತಿಯ ಹಾಡು' 'ಜೀವನ ಸಂಗೀತ'ದ ಪದ್ಯಗಳನ್ನು ಸಾಂದರ್ಭಿಕವಾಗಿ ಹಾಡಿ ತೋರಿಸಿದರು. ಜಾನಪದ ಜಗತ್ತಿನ ಆ ಅಚ್ಚ ಹಾಡಿನ ಮೋಡಿಗೆ ನಾನು ಅಂದೇ ಮಾರುವೋದೆ. ಅವನ್ನು ಕೇಳಿದ ಮೇಲೆ ನನ್ನ ಮುಂದಿನ ವಿದ್ಯಾರ್ಥಿ ಜೀವನದಲ್ಲಿ ಆ ಸಂಗ್ರಹಗಳು ನನ್ನ ಸಂಗಾತಿಗಳೇ ಆದವು. ಸಮ್ಮೇಳನದ ಮರುವರ್ಷದಿಂದಲೇ ರಬಕವಿಯಂಥ ಊರಿನಿಂದ 'ಪ್ರಗತಿ' ಎಂಬ ಮಾಸಪತ್ರಿಕೆ ಪ್ರಾರಂಭವಾಯಿತು. ಪ್ರಗತಿಶೀಲ ಸಾಹಿತ್ಯದ ಆಂದೋಲನದ ಕಾಲವದು. ಲಿಂಗಣ್ಣನವರ ವಿಶಿಷ್ಟ ಕೃತಿಯಾದ 'ಸ್ವರ್ಗದೋಲೆಗಳು' (೧೯೫೦) ಗ್ರಂಥದ ಕೆಲವು ಲೇಖನಗಳನ್ನು ಮೊದಲು ನಾನು ಆ ಪತ್ರಿಕೆಯಲ್ಲಿ ಓದಿದ್ದು ನನಗಿನ್ನೂ ನೆನಪಿದೆ. ಬೇಂದ್ರೆಯವರ ಐವತ್ತನೆಯ ಹುಟ್ಟುಹಬ್ಬದ ಸಂದರ್ಭದಲ್ಲಿ (೧೯೪೫) ಲಿಂಗಣ್ಣನವರ 'ದತ್ತಸಾಹಿತ್ಯ' ಪ್ರಕಟವಾಯಿತು. ೧೯೪೯ರಲ್ಲಿ ಪ್ರಕಟವಾದ 'ಬೆಟ್ಟದ ಹೊಳೆ' ಕಾದಂಬರಿಯನ್ನು ನಾನು ಅದೇ ವರ್ಷ 'ಜಯಕರ್ನಾಟಕ'ದಲ್ಲಿ ವಿಮರ್ಶೆ ಮಾಡಿದ್ದೆ. ಹಳ್ಳಿಯ ಪರಿಸರದಲ್ಲಿ ಬೆಳೆದ ಕನ್ನಡ ಶಿಕ್ಷಕ-ಸಾಹಿತಿಯೊಬ್ಬನ ಸಂಘರ್ಷಮಯ ಜೀವನವನ್ನು ಚಿತ್ರಿಸಿದ ಆ ಚಿಕ್ಕ-ಚೊಕ್ಕ ಕೃತಿ ಇಂದಿಗೂ ಎಲೆಯ ಮರೆಯ ಕಾಯಾಗಿಯೇ ಉಳಿದಿದೆ. ಹಿರೇಮಲ್ಲೂರು ಈಶ್ವರನ್ ತಮ್ಮ ಕಲ್ಪನಾ ಗ್ರಂಥಮಾಲೆಯಲ್ಲಿ ನನ್ನ ಪ್ರಥಮಸಂಕಲನ 'ಕಾವ್ಯಾಕ್ಷಿ' (೧೯೪೯)ಯನ್ನು ಪ್ರಕಟಿಸಿದ ವರ್ಷವೇ ಸಿಂಪಿ ಲಿಂಗಣ್ಣನವರ 'ಮುಗಿಲ ಜೇನು' ಕವನ ಸಂಗ್ರಹವನ್ನೂ ಹೊರತಂದರು. ಬಹುಶಃ ಅದೇ ಕಾಲಕ್ಕೆ ಧಾರವಾಡದಲ್ಲಿ ಲಿಂಗಣ್ಣನವರ ಪ್ರಥಮ ಪರಿಚಯ ನನಗಾದದ್ದು. ಆಮೇಲೆ ನಮ್ಮ ಸಾಹಿತ್ಯ ಬಾಂಧವ್ಯ ಹಾಗೂ ವೈಯಕ್ತಿಕ ಒಡನಾಟಗಳು ಅನ್ಯೋನ್ಯವಾಗಿ ಬೆಳೆದು ಬಂದದ್ದನ್ನು ಈ ಸಂದರ್ಭದಲ್ಲಿ ಸ್ಮರಿಸಿಕೊಳ್ಳುತ್ತೇನೆ.

ಕೊಪ್ಪಳದಲ್ಲಿ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯ ಗೌರವ ಅವರಿಗೆ ಸಂದಾಗ (೧೯೮೨) ಅವರಿಗೆ ಎಂಬತ್ತೇಳು ವರ್ಷ ವಯಸ್ಸು. ಕೆಲವು ದೈಹಿಕ ತೊಂದರೆಗಳಿದ್ದಾಗಲೂ ಅವರ ತುಂಬು ಮೊಗದ ಕಾಂತಿ ಕುಂದಿರಲಿಲ್ಲ. ಬೆಳ್ನಗೆ ಮಾಸಿರಲಿಲ್ಲ, ಕಂಠದ ಸಿರಿ ಕುಗ್ಗಿರಲಿಲ್ಲ. ಅವರು ಆತ್ಮಕಥೆಯಲ್ಲಿ ಬರೆದ ಎರಡು ಸಾಲುಗಳನ್ನು ಈಗ ನೆನಪಿಸಿಕೊಳ್ಳುತ್ತೇನೆ. "ಎರಡು ವರ್ಷದ ನಾಗಲಿಂಗ ಹೇಗಿದ್ದ?" ಅಂಬಲ ಮೈಕಟ್ಟಿನ ಚುರುಕು ಬುದ್ಧಿಯ ಕೂಸು. ಕಸೂತಿ ಬಿಡಿಸಿದ ಕರಿಯಂಗಿ ಮೈಯಲ್ಲಿ. ತಲೆತುಂಬ ಜಾವುಳ. ನೋಡಿದ ಹೆಣ್ಣು ಮಕ್ಕಳಿಗೆ ಬಸುರಿನ ಬಯಕೆ ಹತ್ತಬೇಕು". ಅವರು ಸರಸ ವಾಗ್ಮಿಗಳೆಂಬುದನ್ನು ಬಲ್ಲ ನಾವು (ನಾನು, ಡಾ. ಹಾ.ಮಾ. ನಾಯಕ, ಡಾ. ಗುರುಲಿಂಗ ಕಾಪಸೆ) ಅವರು ತಮ್ಮ ಲಿಖಿತ

ಭಾಷಣವನ್ನೋದದೆ ಹಾಗೇ ಮಾತನಾಡಿದರೆ ಸೊಗಸಾಗಿರುತ್ತದೆಂದು ಮೊದಲೇ ಸೂಚಿಸಿದ್ದೆವು. ಗ್ರಾಮೀಣ ಸೊಗಡಿನಿಂದ ಕೂಡಿದ, ನಿರರ್ಗಳವಾದ, ನಿರ್ಮಲ ಹಾಸ್ಯದಿಂದೊಡಗೂಡಿದ ಅಂದಿನ ಅವರ ಭಾಷಣ ನೆರೆದ ಸಹಸ್ರಾರು ಜನರನ್ನು ಸಂಪೂರ್ಣ ತಣಿಸಿ ಬಿಟ್ಟಿತು. ಅವರು ಕುಳಿತುಕೊಂಡೇ ಮಾತನಾಡಿದರೂ ಅವರ ದನಿ ಕೊನೆಯವರೆಗೂ ತನ್ನ ಎತ್ತರವನ್ನು ಕಾದುಕೊಂಡಿತ್ತು.

ಲಿಂಗಣ್ಣನವರ ಸಾಹಿತ್ಯ ಸೇವೆ ವಿಪುಲವಾದುದು, ಹಾಗೆಯೇ ವೈವಿಧ್ಯಪೂರ್ಣವಾದುದು. ಕಾವ್ಯ, ನಾಟಕ, ಕಾದಂಬರಿ, ಮಕ್ಕಳ ಸಾಹಿತ್ಯ, ಪ್ರಬಂಧ, ಜಾನಪದ ವಿಚಾರ, ಅಧ್ಯಾತ್ಮ, ಜೀವನ ಚರಿತ್ರೆ, ಆತ್ಮಕಥೆ, ವಿಡಂಬನ - ಹೀಗೆ ನೂರಕ್ಕೂ ಮಿಕ್ಕ ಅವರ ಕೃತಿಗಳು ನಾನಾ ಬಗೆಯವು. ಪ್ರೌಢ ಸಾಕ್ಷರರಿಗಾಗಿ ಬರೆದ ಕಿರುಕೃತಿಗಳೂ ತಮ್ಮ ಉದ್ದೇಶವನ್ನು ಸಫಲಗೊಳಿಸಿವೆ. ಸಾಹಿತ್ಯವನ್ನು ಒಂದು ಯೋಗವೆಂದು ಭಾವಿಸಿದ ಅವರು ಸಾಹಿತ್ಯ ಸೃಷ್ಟಿಯನ್ನು ಒಂದು ತಪಸ್ಸೆಂದು ಸ್ವೀಕರಿಸಿದರು. ಹಳ್ಳಿಯನ್ನೇ ತಮ್ಮ ದಿಳ್ಳಿಯಾಗಿ ಮಾಡಿಕೊಂಡರು. ತಮ್ಮ ಪರಿಸರವನ್ನು ಪರಿಭಾವಿಸುತ್ತಲೇ ಅದನ್ನು ಮೀರಿ ಬೆಳೆದರು. ಸಾಹಿತ್ಯ ರಚನೆ, ಪ್ರಕಾಶನ (ಅರವಿಂದ ಗ್ರಂಥಮಾಲೆ), ಸಮಾಜಸೇವೆ, ನಿರಂತರ ಅಧ್ಯಯನ - ಈ ಬಗೆಗಿನ ಚಟುವಟಿಕೆಗಳಲ್ಲಿಯೇ ಸಂತುಷ್ಟರು. ಇದೆಲ್ಲದರ ನಡುವೆ ಅವರ ವಿಶೇಷತೆ ಪ್ರಕಟಗೊಂಡುದು ಜನಪದ ಸಾಹಿತ್ಯ ಕುರಿತು ಚಿಂತನೆ, ವಿವರಣೆ, ವ್ಯಾಖ್ಯಾನಗಳಲ್ಲಿ ಎನ್ನಬಹುದು. ಗ್ರಾಮೀಣ ಜೀವನದ ಅವರ ಅನುಭವ ಅನನ್ಯವಾದುದು. ಅದೇ ಅವರ ಶಕ್ತಿಯೂ ಆಗಿತ್ತು. ಅವರ ಮಾತು-ಕತೆಗಳಲ್ಲಿ ಮಿಂಚುತ್ತಿದ್ದುದೂ ಅದೇ. ಓದಿನಿಂದ ಅವರು ಜನಪದ ವಿದ್ವಾಂಸರಾದವರಲ್ಲ. ಅದನ್ನೇ ಬಾಳಿ ಬದುಕಿದವರು. ಉಳಿದವರ ಅಧ್ಯಯನಕ್ಕೆ ಆಧಾರ ಸಾಮಾಗ್ರಿಯಾದವರು. 'ಜೀವನದೃಷ್ಟಿ', 'ಬಾಳಬಟ್ಟೆ' ಮೊದಲಾದವು ಅವರ ಚಿಂತನೆ ಹರಳುಗಟ್ಟಿದ ಬರೆಹಗಳು. ಚರಿತ್ರಗ್ರಂಥಗಳಲ್ಲಿ ಆಯಾ ವ್ಯಕ್ತಿಗಳ ವ್ಯಕ್ತಿತ್ವ-ಸಾಧನೆ-ಸಂದೇಶಗಳು ಸುವ್ಯಕ್ತ. ಈ ದಿಸೆಯಲ್ಲಿ ಹರ್ಡೇಕರ ಮಂಜಪ್ಪನವರ ಬರೆವಣಿಗೆ ಅವರಿಗೆ ಆದರ್ಶವಾಗಿದ್ದಿರಬಹುದು.

ಡಾ. ಎಂ.ಎನ್. ವಾಲಿಯವರು ಲಿಂಗಣ್ಣನವರ ಬದುಕು ಬರೆಹ ಕುರಿತು ವಿದ್ವತ್‌ಪೂರ್ಣ ಪ್ರಬಂಧ (ಪಿಎಚ್.ಡಿ) ಬರೆದಿದ್ದಾರೆ. ಪ್ರೊ. ಚ.ವಿ. ಮುಳಗುಂದ ೧೯೯೩ರಲ್ಲಿ 'ಸಿಂಪಿಯ ಮುತ್ತು' ಅಭಿನಂದನ ಗ್ರಂಥವನ್ನು ಉಪಯುಕ್ತ ರೀತಿಯಲ್ಲಿ ಸಂಪಾದಿಸಿಕೊಟ್ಟಿದ್ದಾರೆ. ಡಾ. ಕಾಪಸೆಯವರು ಅನೇಕ ಸಂದರ್ಭಗಳಲ್ಲಿ ಲಿಂಗಣ್ಣನವರ ಬಗ್ಗೆ ಅಧಿಕೃತವಾಗಿ ಬರೆದಿದ್ದಾರೆ. ಹಲಸಂಗಿ ಗೆಳೆಯರಿಗೆ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಪ್ರತ್ಯೇಕವಾದ ವಿಶಿಷ್ಟ ಸ್ಥಾನವಿದೆ. ಅದು ಧಾರವಾಡದ ಗೆಳೆಯರ ಗುಂಪಿನಂತೆ ನಡುವೆಯೇ ಒಡೆದು ಹೋಗದೆ ಕೊನೆಯವರೆಗೂ ಬಾಳಿದೆ. ಅವರು ಆಚರಿಸುತ್ತಿದ್ದ ನಾಡಹಬ್ಬ, ಮಹಾನುಭಾವರ ಜನ್ಮೋತ್ಸವ ಇತ್ಯಾದಿ ಎಲ್ಲದರಲ್ಲಿಯೂ ಅವರದೇ ಮುದ್ರೆ. ಮಧುರಚನ್ನರು ಲಿಂಗಣ್ಣನವರ ಅಂತರಾತ್ಮ, ಲಿಂಗಣ್ಣ ಮಧುರಚೆನ್ನರ ಇನ್ನೊಂದು ಮೈ ಎಂಬ ಮಾತಿನಲ್ಲಿ ಅತಿಶಯೋಕ್ತಿಯಿಲ್ಲ. ಮೊದಲಿನಿಂದಲೂ

ಇವರೊಡನೆ ಆತ್ಮೀಯ ಸಂಪರ್ಕ ಪಡೆದಿದ್ದವರಲ್ಲಿ ಒಬ್ಬರಾದ ಡಾ. ರಂ. ಶ್ರೀ. ಮುಗಳಿಯವರು "ನವೋದಯದ ಸಂದರ್ಭದಲ್ಲಿ ಬಹುರೂಪಿ ನಟನಂತೆ ತಲೆಯೆತ್ತಿನಿಂತ ಸಾಹಿತ್ಯ ಶಿಲ್ಪಿಗಳಲ್ಲಿ ಲಿಂಗಣ್ಣ ಒಬ್ಬರು" ಎಂದು ನುಡಿದಿರುವುದು ಸಾಹಿತ್ಯ ಚರಿತ್ರಕಾರನ ಸಮಗ್ರ ದೃಷ್ಟಿಗೆ ನಿದರ್ಶನದಂತಿದೆ.

ಲಿಂಗಣ್ಣನವರ ಶಾಲಾ ಶಿಕ್ಷಕವೃತ್ತಿ ಕಾಯಕವೇ ಕೈಲಾಸ ಎಂಬ ಮಾತಿಗೆ ಭಾಷ್ಯ ಬರೆದಂತಿತ್ತು. ಅವರು ಸಾಹಿತಿಯಾಗಿ ಶಿಕ್ಷಕನ ಕೆಲಸ ಮಾಡಿದರು. ಶಿಕ್ಷಕನಾಗಿ ಸಾಹಿತಿಯ ಕೆಲಸ ಮಾಡಿದರು. ಅವು ಒಂದೇ ನಾಣ್ಯದ ಎರಡು ಮಗ್ಗಲುಗಳಂತಿದ್ದವು. ಅವರ ವೃತ್ತಿ ಜೀವನದೃಷ್ಟಿಯ ಬಗ್ಗೆ ಇಂದು ಅಧ್ಯಾಪಕ ವರ್ಗವೇ ಗಮನಿಸಬೇಕಾದ ಮಾತಿದೆ : "೩೫ ವರ್ಷ ಪ್ರಾಥಮಿಕ ಶಾಲೆಯಲ್ಲಿ ಕೆಲಸ ಮಾಡುವಾಗ ಕೊಟ್ಟ ಶಿಕ್ಷಣಕ್ಕಿಂತ ಅಲ್ಲಿ ಪಡೆದ ಶಿಕ್ಷಣವೇ ಹೆಚ್ಚಾಗಿದೆಯೆಂದು ಪ್ರಾಂಜಲತೆಯಿಂದ ಒಪ್ಪಿಕೊಳ್ಳಬೇಕು. ಮಾಡಿದ್ದು ವಿದ್ಯಾರ್ಥಿಯ ಕೆಲಸ, ಪಡೆದದ್ದು ಶಿಕ್ಷಕನ ಸಂಬಳ" ಎಂಥ ಮಾತು!

ಲಿಂಗಣ್ಣನವರು ಹುಟ್ಟಾ ಹಾಸ್ಯಪಟುವಾಗಿದ್ದರು. ಅವರೊಡನೆ ಮಾತಾಡಿದರೆ ರಸಿಕತೆ ಅವರ ಜೀವಾಳವಾಗಿದ್ದುದನ್ನು ತಟ್ಟನೆ ಗುರುತಿಸಬಹುದಿತ್ತು. 'ಅವರು ನಗುವುದನ್ನು ಕಂಡು ಜನ ಅವರನ್ನು ಶ್ರೀಮಂತರೆಂದುಕೊಂಡರು' ಎಂದಿದ್ದಾರೆ ಅವರ ಹಿರಿಯಮಗ ಪ್ರಸಿದ್ಧ ಲಲಿತ ಪ್ರಬಂಧಕಾರ ವೀರೇಂದ್ರ ಸಿಂಪಿ. ಲಿಂಗಣ್ಣನವರ ಜೀವನದ ಬಗ್ಗೆ ಅತ್ಯಂತ ಸಾರವತ್ತಾದ ಒಳನೋಟವನ್ನೊದಗಿಸುವ ಮಾತಿದು ಎಂದು ನನ್ನ ಅನಿಸಿಕೆ. ಗುಲ್ಬರ್ಗಾ ವಿಶ್ವವಿದ್ಯಾಲಯ ಲಿಂಗಣ್ಣನವರಿಗೆ ಗೌರವ ಡಾಕ್ಟರೇಟ್ ಪದವಿ ನೀಡಿದಾಗ ಅವರು ಹೇಳಿದರು 'ನಾನು ಎಂ.ಎ. ಅಲ್ಲ. ಅದರಪ್ಪ' (ಅವರ ಮೂವರು ಮಕ್ಕಳು ಎಂ.ಎ. ಆಗಿದ್ದಾರೆ).

ಲಿಂಗಣ್ಣನವರ ಜೀವನದೃಷ್ಟಿ ಆರೋಗ್ಯಪೂರ್ಣವಾದದ್ದು; ಅಂತೆಯೇ ಅವರ ಸಾಹಿತ್ಯವೂ ಕೂಡ. ಜೀವನದ ವಾಸ್ತವಕ್ಕೆ ಅವರು ಎದೆಯೊಡ್ಡಿದರೇ ವಿನಃ ಎಂದೂ ಬೆನ್ನು ತೋರಿಸಲಿಲ್ಲ. ಶ್ರೀ ಅರವಿಂದರ ವಿಚಾರಧಾರೆಯನ್ನು ಸ್ವಂತ ಪರಾಮರ್ಶೆಯಿಂದ ಸ್ವೀಕರಿಸಿದರು. ಯಾರಿಗೂ ಬಾಗದ, ಎಂದಿಗೂ ಕುಗ್ಗದ ಲಿಂಗಣ್ಣನವರ ಬದುಕನ್ನು ಶ್ರೀಮಾತಾರವಿಂದರ ವಿಚಾರ ಸರಣಿ ಸಮಗ್ರವಾಗಿ ವ್ಯಾಪಿಸಿಕೊಂಡಿದೆ. ಈ ಸಂದರ್ಭದಲ್ಲಿ ಡಾ. ಕಾಪಸೆಯವರು ಹೇಳುವುದು ಹೀಗೆ : "ಮಧುರಚೆನ್ನರ ಆತ್ಮೀಯ ಸ್ನೇಹಿತರಾದ ಸಿಂಪಿಯವರ ಜೀವನವು ಎಂಥ ವ್ಯವಹಾರ ಚಾತುರ್ಯದಿಂದ ಕೂಡಿದ್ದರೂ 'ನರ್ತಿಪ ಗಾಯಕಿಗೆ ಶಿರದ ಕುಂಭದಲ್ಲಿ ಧ್ಯಾನವಿರ್ಪಂತೆ' ಶ್ರೀ ಮಾತಾರವಿಂದರಲ್ಲಿ ಅವರ ಲಕ್ಷ್ಯ ಕೇಂದ್ರೀಕೃತವಾಗಿತ್ತು". ಹಲಸಂಗಿಯ ಗೆಳೆಯರನ್ನು ತಮ್ಮ ಜೀವಕ್ಕಿಂತ ಹೆಚ್ಚು ಹಚ್ಚಿಕೊಂಡಿದ್ದ ಬೇಂದ್ರೆಯವರು ಲಿಂಗಣ್ಣನವರ ಒಟ್ಟಿನ ಸಾಧನೆಯನ್ನು ತಮ್ಮದೇ ಆದ ವಿಶಿಷ್ಟ ಶೈಲಿಯಲ್ಲಿ ಹೀಗೆ ಕಂಡರಿಸಿದ್ದಾರೆ : "ಎಂತಹ ದೊಡ್ಡವರ ಸಭೆಯಲ್ಲಿಯೂ ಲಿಂಗಣ್ಣ ಸಣ್ಣವನಾಗಿ ಕಾಣಲಿಲ್ಲ; ಎಂತಹ ಸಣ್ಣವರ ಗುಂಪಿನಲ್ಲಿಯೂ ಲಿಂಗಣ್ಣ ದೊಡ್ಡವನಾಗಿ ಕಾಣಲಿಲ್ಲ. ಈ ಸಾಧನೆ ಬಹುಜನರ ಪಾಲಿಗೆ ಇಲ್ಲ".

ಇಂದು ನಡೆಯಲಿರುವ ಮೂರು ಗೋಷ್ಠಿಗಳಲ್ಲಿ ಮಂಡಿಸಲಿರುವ ಪ್ರಬಂಧಗಳಿಂದ, ವಿವಿಧ ವಿಷಯಗಳ ವಿವೇಚನೆಯಿಂದ ಲಿಂಗಣ್ಣನವರ ಬದುಕು ಬರೆಹದ ಮೇಲೆ ಹೆಚ್ಚಿನ ಬೆಳಕು ಬೀಳಬಹುದೆಂದು ಆಶಿಸುತ್ತೇನೆ.

(೨೦೦೪)

(ಸಾಹಿತ್ಯ ಸಮಾಹಿತ : ೨೦೦೭)

೬

## ಜಾನಪದ ದೀಪಾರಾಧನೆ : ಉದ್ಘಾಟನೆ

'ಜಾನಪದ ದೀಪಾರಾಧನೆ' ಎಂಬ ಕಲ್ಪನೆಯೇ ಸಾಂಸ್ಕೃತಿಕವಾಗಿ ಭವ್ಯ ಮನೋಹರವಾದದ್ದು. ಈ ಆರಾಧನೆಯಲ್ಲಿ ನನ್ನ ಕೈಗೂ ಒಂದು ದೀಪ ಕೊಟ್ಟಿದ್ದೀರಿ. ಅದಕ್ಕಾಗಿ ಹೊನ್ನಾವರದ ಜಾನಪದ ಪ್ರಕಾಶನ ಹಾಗೂ ಕರ್ನಾಟಕ ವಿಶ್ವವಿದ್ಯಾನಿಲಯದ ಜಾನಪದ ಅಧ್ಯಯನ ವಿಭಾಗದ ಅಧ್ಯಕ್ಷರಿಗೆ ನನ್ನ ಕೃತಜ್ಞತೆಗಳು.

ಆಕಾಶದಲ್ಲಿ ಸೂರ್ಯ, ಚಂದ್ರ, ನಕ್ಷತ್ರಗಳು ಹಗಲಿರುಳು ಬೆಳಗುತ್ತಿದ್ದರೂ ನಮ್ಮ ಮನೆಗೆ, ನಮ್ಮ ಮನಕ್ಕೆ ಕತ್ತಲೆ ಆವರಿಸದಂತೆ ನಮ್ಮದೇ ಆದ ಒಂದು ದೀಪದ ಅಗತ್ಯವಿದೆ. ಅದು ನಮ್ಮ ಸ್ವಂತಿಕೆಯ ಹಾಗೂ ಸಂಸ್ಕೃತಿಯ ಪ್ರತೀಕವೂ ಹೌದು. ಅದಕ್ಕೆ ಪೋಷಕವಾದ ಹಾಗೂ ಅದನ್ನು ಆರದಂತಿಡುವ ಎಣ್ಣೆ, ಬತ್ತಿಗಳು ಎಂದರೆ ನಮ್ಮ ಭಾಷೆ, ಸಾಹಿತ್ಯ, ಕಲೆ ಇತ್ಯಾದಿಗಳು. ನಮ್ಮ ದೈನಂದಿನ ಎಲ್ಲ ಕಾರ್ಯ ಚಟುವಟಿಕೆಗಳೂ ಪರಸ್ಪರ ಕೊಳು-ಕೊಡುಗೆಗಳೂ ನಡೆಯುವುದು ಬಹುಮಟ್ಟಿಗೆ ಮಾತಿನ ಅಥವಾ ಭಾಷೆಯ ಮೂಲಕ. ಪ್ರಾಚೀನ ಆಲಂಕಾರಿಕನಾದ ದಂಡಿ ಒಂದು ಕಡೆ ಹೇಳುತ್ತಾನೆ - "ಮಾತೆಂಬ ಜ್ಯೋತಿ, ಸೃಷ್ಟಿ ಕಾಲದಿಂದ ಇಲ್ಲಿಯವರೆಗೂ ಬೆಳಗದೆ ಹೋಗಿದ್ದರೆ ಮೂರು ಲೋಕವೆಲ್ಲ ಕಗ್ಗತ್ತಲಲ್ಲಿ ಮುಳುಗಿ ಹೋಗುತ್ತಿತ್ತು", ಎಷ್ಟು ನಿಜ! ಅಲ್ಲಮಪ್ರಭುವಂತೂ ಅದು ಜ್ಯೋತಿಯಷ್ಟೇ ಅಲ್ಲ. 'ಜ್ಯೋತಿರ್ಲಿಂಗ' ಎಂದಿದ್ದಾನೆ. ಆದ್ದರಿಂದ ಭಾಷೆ ಎನ್ನುವದು ಕೇವಲ ವ್ಯವಹಾರಕ್ಕಾಗಿರದೆ ಒಂದು ಜನಾಂಗವನ್ನು ನಾನಾ ಬಗೆಯ ವಿದ್ಯೆ ಹಾಗೂ ಕಲೆಗಳ ಮೂಲಕ ಸುಸಂಸ್ಕೃತರನ್ನಾಗಿಸಿ ಮುಂದಕ್ಕೆ ತೆಗೆದುಕೊಂಡು ಹೋಗುವುದಾಗಿರುತ್ತದೆ.

ಅಂಥ ಭಾಷಾ ಮಾಧ್ಯಮದಲ್ಲಿ ಒಬ್ಬ ಲೇಖಕ ತನ್ನ ಬುದ್ಧಿ, ಭಾವನೆ, ಕಲ್ಪನೆ, ಅನುಭವ ಜೀವನತತ್ವಗಳಿಗೆ ಸೃಜನಾತ್ಮಕ ರೂಪ ಕೊಟ್ಟಾಗ ಅದೊಂದು ಕೃತಿಯಾಗುತ್ತದೆ. ಪುಸ್ತಕವಾಗುತ್ತದೆ; ಗ್ರಂಥವಾಗುತ್ತದೆ. ಅಂಥ ಪುಸ್ತಕ ಯಾರ ಕೈಯಲ್ಲಿರುತ್ತದೆಯೊ, ಯಾರ ಮನೆಯಲ್ಲಿರುತ್ತದೆಯೋ, ಯಾರ ಮನದಲ್ಲಿರುತ್ತದೆಯೊ ಅಲ್ಲೆಲ್ಲ ದೀಪಗಳನ್ನು ಹಚ್ಚಿಟ್ಟ ಹಾಗೆ. ಇಂದಿನ ದೀಪ ಸಮಾರಾಧನೆಯಲ್ಲಿ ನಾಲ್ಕು ಪುಸ್ತಕಗಳನ್ನು ಸಂತೋಷವಾಗಿ ಬಿಡುಗಡೆ ಮಾಡಿ ನಿಮ್ಮ ಓದಿಗೆ ಒಪ್ಪಿಸುತ್ತಿದ್ದೇನೆ. ಇವುಗಳ ಲೇಖಕರಾದ ಡಾ. ಎನ್.ಆರ್. ನಾಯಕ, ಶ್ರೀಮತಿ ಶಾಂತಿ ನಾಯಕ, ಡಾ. ವಿ.ಎಲ್. ಪಾಟೀಲ ಅವರನ್ನು ಹಾರ್ದಿಕವಾಗಿ ಅಭಿನಂದಿಸುತ್ತೇನೆ.

‘ಕಾಡು-ಹಾಡು’ ಡಾ. ಎನ್.ಆರ್. ನಾಯಕರ ಮೂರನೇ ಕವನ ಸಂಕಲನ. ೧೯೬೯ರಿಂದ ಜಾನಪದಕ್ಕೆ ತಮ್ಮನ್ನು ಗಾಢವಾಗಿ ತೊಡಗಿಸಿಕೊಂಡಿದ್ದರಿಂದ ಅವರ ನೆಚ್ಚಿನ ಹವ್ಯಾಸಗಳಾದ ನಾಟಕ ರಚನೆ, ಕಾವ್ಯ ರಚನೆಗಳಿಗೆ ಅವಕಾಶ ದೊರೆಯದಂತಾಗಿರಬಹುದು. ಆದರೂ ಕಾವ್ಯದ ಕಿಡಿಯನ್ನು ಆರದಂತೆ ಕಾಪಾಡಿಕೊಂಡು ಬಂದಿದ್ದಾರೆನ್ನುವುದನ್ನು ಈ ಸಂಕಲನ ಸೂಚಿಸುತ್ತದೆ. ‘ಹಾಡಿ ಎದೆ ಹಗುರು ಮಾಡುವುದೆನಗೆ ರೂಢಿ’ ಎಂದಿದ್ದಾರೆ. ‘ಒಮ್ಮೊಮ್ಮೆ ನನಗೆ ಭಗವತಿಯ ಭಾರ’ ಎಂದರೆ, ದೇವರು ಮೈದುಂಬಿ ಬಂದ ಹಾಗೆ. ಹಾಗೆ ಭಾವದ ಉಕ್ಕಂದದಲ್ಲಿ ಬರೆದ ಕೆಲವು ಒಳ್ಳೆಯ ಕವಿತೆಗಳು ಈ ಸಂಗ್ರಹದಲ್ಲಿವೆ. ‘ವೀರಪ್ಪನೊಡ್ಡೋಲಗ’ ಕವಿತೆ, ಯಕ್ಷಗಾನದ ಸಂಭಾಷಣೆಯ ತಂತ್ರದಿಂದ ವಸ್ತುವಿನ ನಿರ್ವಹಣೆಯಲ್ಲಿ ಸಹಜಾಭಿವ್ಯಕ್ತಿ ಪಡೆದ ಅವರ ವಿಶಿಷ್ಟ ಕೊಡುಗೆ. ಡಾ. ನಾಯಕರು ಪ್ರಮುಖ ಜಾನಪದ ವಿದ್ವಾಂಸರಲ್ಲಿ ಒಬ್ಬರಾಗಿದ್ದು ಅವರ ಐದು ಕೃತಿಗಳು ನಮ್ಮ ವಿಶ್ವವಿದ್ಯಾಲಯದ ಪ್ರಸಾರಾಂಗದಿಂದ ಪ್ರಕಟವಾಗಿರುವುದನ್ನು ಇಲ್ಲಿ ನೆನೆಯಬಹುದು.

ಇವರ ಪ್ರಸ್ತುತ ಕೃತಿ ‘ಗಣಪಾ ಬಾ ನಮ್ಮ ಮನೆಗೆ’. ಶಿವ-ಗಂಗೆ-ಗೌರಿ-ಗಣಪರಿಗೆ ಸಂಬಂಧಿಸಿದ ಕೆಲವು ಕಥೆಗಳು, ಗೌರಿ ಗಣೇಶರ ಹಬ್ಬದಂದು ಹಾಡಲಾಗುವ ಕೆಲವು ಗೀತಗಳನ್ನು ಜನರ ಬಾಯಿಂದ ಕೇಳಿ ಕಷ್ಟಪಟ್ಟು ಸಂಗ್ರಹಿಸಿದ ಸಂಕಲನ. ಇಲ್ಲಿಯ ಹಾಡುಗಳಿಗೆ ಹೊರತಾಗಿ ಇದಕ್ಕೆ ಬರೆದ ಇಪ್ಪತ್ತು ಪುಟಗಳ ಪೀಠಿಕೆ ಸಂಶೋಧನದೃಷ್ಟಿಯಿಂದ ಮಹತ್ವದ್ದಾಗಿದೆ. ಈ ಹಾಡುಗಳಿಗೆ ಮತ್ತೆ ಚಾಲನೆ ದೊರೆತು ಗಣೇಶನ ಹಬ್ಬದಲ್ಲಿ ಮನೆಮನೆಯಲ್ಲಿ ಈ ಹಾಡುಗಳನ್ನು ಕೇಳುವಂತಾಗಬೇಕು. ಜಾನಪದರ ಆ ಕಲ್ಪನೆಯ ಸೊಗಸು - ಸ್ವಾರಸ್ಯಗಳನ್ನು ಶಿಷ್ಟರು ಪರಿಭಾವಿಸುವಂತಾಗಬೇಕು. ಆದರೆ ಅದೆಲ್ಲ ನಮ್ಮಂಥವರ ಕನಸು, ಅಷ್ಟೆ. ಮುಂದೆ ಎಂಥ ಕಾಲ ಬರುತ್ತದೆಯೊ. ಈಗ ಸಿಕ್ಕದ್ದನ್ನು ಸಂಗ್ರಹಿಸಿಡುವ ಒಂದು ಕರ್ತವ್ಯವನ್ನು ನೆರವೇರಿಸಿದ ತೃಪ್ತಿ ಡಾ. ನಾಯಕ ದಂಪತಿಗಳದು.

ಶ್ರೀಮತಿ ಶಾಂತಿ ನಾಯಕರು ಮುಖ್ಯವಾಗಿ ಜಾನಪದಕ್ಕೆ ಸಂಬಂಧಪಟ್ಟಂತೆ ವೈವಿಧ್ಯಪೂರ್ಣ ಕೃತಿಗಳನ್ನು ಹೊರತಂದಿದ್ದಾರೆ. ದಂಪತಿಗಳಿಬ್ಬರಿಗೂ ಜಾನಪದದಲ್ಲಿ ವಿಶೇಷ ಆಸಕ್ತಿಯಿರುವುದರಿದ ಅದರ ಪ್ರಸಾರಕ್ಕಾಗಿ ೨೩ ವರ್ಷಗಳ ಹಿಂದೆಯೆ ‘ಜಾನಪದ ಪ್ರಕಾಶನ’ ಎಂಬ ಸಂಸ್ಥೆಯನ್ನು ಹುಟ್ಟು ಹಾಕಿ, ಈವರೆಗೆ ಸುಮಾರು ನಾಲ್ವತ್ತು ಗ್ರಂಥಗಳನ್ನು ಹೊರತಂದಿದ್ದಾರೆ. ಹೀಗೆ ತಮ್ಮ ಆಸಕ್ತಿಯನ್ನೇ ಒಂದು ಸಂಸ್ಥೆಯಾಗಿ ರೂಪುಗೊಳಿಸಿ, ಅದನ್ನೇ ತಮ್ಮ ಜೀವನಧ್ಯೇಯವನ್ನಾಗಿಸಿಕೊಂಡು ಕಾರ್ಯನಿರತರಾದ ಜನ ಈ ಭಾಗದಲ್ಲಿ ಕಡಿಮೆ ಡಾ. ಎಲ್. ಆರ್. ಹೆಗಡೆಯವರಂತೆ ಉತ್ತರ ಕನ್ನಡ ಜಿಲ್ಲೆಯಲ್ಲಿ ಹಾಗೇ ಕರ್ನಾಟಕದಲ್ಲಿ ಜಾನಪದವನ್ನು ಜೀವದಂತೆ ಹಂಚಿಕೊಂಡವರು ಡಾ.ಎನ್.ಆರ್. ನಾಯಕ ಹಾಗೂ ಶಾಂತಿ ನಾಯಕ ದಂಪತಿಗಳು.

ಇವರು ಸಂಗ್ರಹಿಸಿದ ಜಾನಪದ ಸಾಮಗ್ರಿ-ಗೀತ, ಕಥೆ, ಗಾದೆ, ಒಗಟು, ನಂಬಿಕೆ,

ಸಂಪ್ರದಾಯ, ರಂಗೋಲಿ ಕಲೆ, ಕಸುಬು, ಅಡಿಗೆ, ವೈದ್ಯಕೀಯ, ಕ್ರೀಡೆ-ಹೀಗೆ ಸುಮಾರು ಇಪ್ಪತ್ತು ಸಾವಿರ ಪುಟಗಳಾಗುವಷ್ಟಿದೆಯೆಂದರೆ ನಂಬಬೇಕು. 'ಯಾರಿಗೇತರಲಿ ಜೀವ, ಅವರವರಿಗದುವೆ ಹಬ್ಬ'.

ಇವರ ಕಾರ್ಯ ಇಲ್ಲಿಗೇ ನಿಲ್ಲಲಿಲ್ಲ. ಅದಕ್ಕೆ ಸಂಬಂಧಪಟ್ಟಂತೆ ಇನ್ನೊಂದು ಬಗೆಯ ಯೋಜನೆ ಕೈಕೊಂಡರು. ೧೯೮೩ರಿಂದ 'ಜಾನಪದ ದೀಪಾರಾಧನೆ'ಯೆನ್ನುವ ವಿಶಿಷ್ಟ ಕಾರ್ಯಕ್ರಮವನ್ನು ಹಮ್ಮಿಕೊಂಡು ನಾಡಿನ ಒಳಗೂ ಹೊರಗೂ ಇಪ್ಪತ್ಮೂರು ದೀಪಾರಾಧನೆಯ ಕಾರ್ಯಕ್ರಮಗಳನ್ನು ಸಂಘಟಿಸಿ, ಹಲವಾರು ಜಾನಪದ ವಿದ್ವಾಂಸರನ್ನು, ಕಲಾವಿದರನ್ನು ಸನ್ಮಾನಿಸಿ, ಗೌರವಿಸಿ, ಕಲಾಮೇಳಗಳನ್ನು ಸಂಘಟಿಸಿ ಜಾನಪದ ಸಾಹಿತ್ಯ, ಕಲೆ, ಸಂಸ್ಕೃತಿಯ ಪ್ರಸಾರ ಕಾರ್ಯ ನಡೆಸುತ್ತಿರುವುದು ನಿಜವಾಗಿಯೂ ವೈಯಕ್ತಿಕ ನೆಲೆಯಲ್ಲಿ ಒಂದು ಅದ್ಭುತವಾದ ಸಾಧನೆಯೆಂದೇ ಹೇಳಬೇಕು. ಇದು ಉತ್ತರ ಕನ್ನಡ ಜಿಲ್ಲೆಗೆ ಮಾತ್ರವಲ್ಲ, ಉತ್ತರ ಕರ್ನಾಟಕಕ್ಕೇ ಹೆಮ್ಮೆಯ ಸಂಗತಿ. ಇಂದು ಇಲ್ಲಿ ನಡೆಯುತ್ತಿರುವುದು ಅಂಥ ಒಂದು ಮಾದರಿ ಕಾರ್ಯಕ್ರಮ.

ಪರಕೀಯ ಸಂಸ್ಕೃತಿಯ ದಾಳಿಯ ಬಿರುಗಾಳಿ ಬಲವಾಗಿ ಬೀಸುತ್ತಿದ್ದರೂ ಡಾ. ನಾಯಕರಂಥವರ ಪ್ರಯತ್ನದಿಂದ ಈ ದೀಪ ಆರದಂತೆ ಬೆಳಗುತ್ತ ಬಂದಿದೆ. ಇದು ಉಳಿಯಲಿಕ್ಕೆ ಮುಖ್ಯ ಕಾರಣ ಕೃಷಿ ಮೂಲವಾದ ಭಾರತೀಯ ಸಂಸ್ಕೃತಿ. ಪ್ರಣತಿ-ಹಣತೆ ಈ ನೆಲದ ಮಣ್ಣಿನಿಂದ ಮಾಡಿದ್ದು; ಬತ್ತಿ, ಈ ನೆಲದಲ್ಲಿ ಬೆಳೆದ ಹತ್ತಿ, ಎಣ್ಣೆ ಇಲ್ಲಿ ಬೆಳೆದ ಸೇಂಗಾ. ಇದನ್ನು ನಾವು ತಿದ್ದಬಹುದು, ತೀಡಬಹುದು. ಬೆಳೆಸಬಹುದು. ಅದು ನಮ್ಮ ರೀತಿ ನೀತಿಗಳನ್ನೇ ಅವಲಂಬಿಸಿದೆ. ಆದರೆ ಈ ಪ್ರಶಾಂತತೆಯ ವಿದ್ಯುದ್ದೀಪಕ್ಕಿಲ್ಲ. ವಿದ್ಯುಚ್ಛಕ್ತಿ ಕೈ ಕೊಟ್ಟರೆ ಬಲ್ಬಿಗೆ ಬೆಳಕೇ ಇಲ್ಲ. ವಿದ್ಯುದ್ದೀಪ ನಾಗರಿಕತೆ ಬೆಳವಣಿಗೆಯನ್ನು ಸೂಚಿಸಿದರೆ, ಹಣತೆ ಸಂಸ್ಕೃತಿಯ ಕುರುಹಾಗಿದೆ. ಮನೆ ತುಂಬ ವಿದ್ಯುದ್ದೀಪಗಳಿದ್ದರೂ ದೇವರ ಕೋಣೆಯಲ್ಲಿ ಮಾತ್ರ ನಂದಾದೀಪ. ನಾಯಕ ದಂಪತಿಗಳಿಗೆ ಸಲ್ಲಿಸಿದ ಅಭಿನಂದನ ಗ್ರಂಥದ ಹೆಸರೇ 'ದೀಪಾರಾಧನೆ'. ಇದು ಶ್ಲಾಘನೀಯವಾದದ್ದು.

ನಮ್ಮ ಕನ್ನಡ ಕಾವ್ಯ-ಸಾಹಿತ್ಯದುದ್ದಕ್ಕೂ ಈ ದೀಪ ಅಥವಾ ದೀವಿಗೆ ವಿವಿಧ ಸಂದರ್ಭಗಳಲ್ಲಿ ಸಂಸ್ಕೃತಿಯ ಪ್ರತೀಕ ಅಥವಾ ಪ್ರತಿಮೆಯಾಗಿ ವಿಶೇಷಾರ್ಥವನ್ನು ನೀಡುತ್ತ ಬಂದಿದೆ. ಭೀಷ್ಮರ ಅವಸಾನ ಕಾಲದಲ್ಲಿ ಕಂಡ ಸೂರ್ಯಾಸ್ತವನ್ನು 'ಪಡುವಣ ಶೈಲ ವಿಪುಲಸ್ತಂಭ ದೀವಿಗೆಯಂತೆ ರವಿ ಮೆರೆದ' ಎಂದು ವರ್ಣಿಸುತ್ತದೆ ಕುಮಾರವ್ಯಾಸನ ಪ್ರತಿಭೆ. ದ್ವಾಪರಯುಗದ ಸತ್ಯದ ಪ್ರತೀಕದಂತಿದ್ದ ಮಹಾವ್ಯಕ್ತಿ ಭೀಷ್ಮರ ಅವಸಾನ ಸಮಯದಲ್ಲಿ ಪ್ರಕೃತಿಯೇ ದೀಪ ಹಚ್ಚಿಟ್ಟಿತು. ಕುವೆಂಪು 'ಮಂಗಳಾರತಿ' ಎಂಬ ಪದ್ಯದಲ್ಲಿ ಭೂಮಿಯನ್ನೇ ಹಣತೆಯ ಪ್ರತಿಮೆಯಾಗಿ ಕಂಡರಿಸಿದ್ದಾರೆ-

ಮೇರೆಯೆ ಇರದಾಕಾಶ ಸಮುದ್ರದಿ
ಸೂರ್ಯನ ಜ್ಯೋತಿರ್ಮೂರ್ತಿಯ ಸುತ್ತಿ

ಶಾಶ್ವತ ಮಂಗಳದಾರತಿಯೆತ್ತಿ
ತೇಲುತ್ತಿದೆ ಭೂಮಿಯ ಹಣತೆ.

ಪು.ತಿ.ನ. ಅವರಿಗೆ ಈ ದೀವಿಗೆ ಎಲ್ಲಿಂದ ಬಂತು ಎನ್ನುವ ಕುತೂಹಲ :

ಎಲ್ಲಿಂ ಬಂದಿತೀ ದೀವಿಗೆ
ಸಿಡಿಯಿತೊ ತಾರೆಯಿಂ ತಾರೆಗೆ
ಇಳಿಯಿತೊ ವ್ಯೋಮದಿಂ ಭೂಮಿಗೆ
ಬೆಳಗೆ ನಮ್ಮೀ ದೀವಿಗೆ
ಕಳೆಯ ಚೆಲ್ಲುತ ಎಲ್ಲ ತಾಯಿಗೆ.

ಬೇಂದ್ರೆಯವರ ಬಹಳ ಸುಂದರವಾದ ಭಾವಗೀತೆಗಳಲ್ಲಿ 'ದೀಪ'ವೂ ಒಂದು. ಕಾಶೀಯಾತ್ರೆಗೆ ಹೋದಾಗ ಗಂಗಾನದಿಯಲ್ಲಿ ದಂಪತಿಗಳಿಬ್ಬರೂ ದೀಪ ತೇಲಿಬಿಟ್ಟ ಸಂದರ್ಭ-

ನಾನು ನೀನು ಜೊತೆಗೆ ಬಂದು
ಈ ನದಿಗಳ ತಡಿಗೆ ನಿಂದು
ಸಾನುರಾಗದಿಂದ ಇಂದು
ದೀಪ ತೇಲಿ ಬಿಟ್ಟೆವೂ
ದೀಪ ತೇಲಿ ಬಿಟ್ಟೆವು.

ನಮ್ಮ ಕವಿಗಳ ಕವನ ಸಂಗ್ರಹಗಳ ಹೆಸರನ್ನೇ ನೋಡಿ - ಪು.ತಿ.ನ. ಅವರ ಪ್ರಥಮ ಕವನಸಂಗ್ರಹದ ಹೆಸರೇ 'ಹಣತೆ'. ವಿ.ಸೀ. ಯವರ ಕವನ ಸಂಗ್ರಹ 'ದೀಪಗಳು', ಕೆ.ಎಸ್.ನ. ಅವರದು 'ದೀಪದ ಮಲ್ಲಿ', ಜಿ.ಎಸ್. ಶಿವರುದ್ರಪ್ಪನವರದು 'ದೀಪದ ಹೆಜ್ಜೆ', ನನ್ನ ಐದನೆಯ ಕವನ ಸಂಗ್ರಹ 'ದೀಪಧಾರಿ', ಗೋವಿಂದ ಪೈ ಅವರ ಮರಣೋತ್ತರ ಕವನ ಸಂಗ್ರಹದ ಹೆಸರು 'ನಂದಾದೀಪ' (೧೯೬೮). ಹೀಗೆ ದೀಪ, ದೀಪಾರಾಧನೆ, ದೀಪೋತ್ಸವ, ದೀಪಲಕ್ಷ್ಮಿ, ದೀಪದಾನ - ಇವು ಭಾರತೀಯರ ಬದುಕಿನ ಜೀವಾಳವಾಗಿಬಿಟ್ಟಿವೆ.

ಕನ್ನಡ ಜಾನಪದ ಸಂಪತ್ತು ಒಂದು ಅಕ್ಷಯ ನಿಧಿ. ಕ್ರೈಸ್ತ ಮಿಶನರಿಗಳ ಕಾಲದಲ್ಲಿಯೇ ಜಾನಪದ ಸಂಗ್ರಹ, ಅಧ್ಯಯನ ಪ್ರಾರಂಭವಾಯಿತು. ಮುಂದೆ, ಜಾನಪದವನ್ನು ಸಂಗ್ರಹಿಸಿ, ಪ್ರಕಟಿಸಿ, ಮುಂದಿನ ತಲೆಮಾರುಗಳಿಗೆ ಉಳಿಸಿಕೊಳ್ಳಬೇಕು, ಅದರ ಸತ್ವವನ್ನು ಬಳಸಿಕೊಂಡು ಶಿಷ್ಟ ಸಾಹಿತ್ಯ ಶಕ್ತಿಶಾಲಿಯಾಗಬೇಕು ಎಂಬುದು ನವೋದಯ ಸಾಹಿತ್ಯದ ಆದ್ಯ ಪ್ರವರ್ತಕರ ಉದ್ದೇಶವಾಗಿತ್ತು. ಆ ದಾರಿಯಲ್ಲಿ ಸಾವಿರಾರು ಪುಟಗಳಷ್ಟು ವೈವಿಧ್ಯಪೂರ್ಣ ಸಾಹಿತ್ಯ ಸಂಗ್ರಹಗೊಂಡಿತು. ೧೯೬೬ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಡಾ. ದೇ. ಜವರೇಗೌಡರು ಜಾನಪದವನ್ನು ಕನ್ನಡ ಎಂ.ಎ. ಮಟ್ಟದಲ್ಲಿ ಅಭ್ಯಾಸ ಮಾಡಲು ಯೋಗ್ಯವಾದದ್ದು ಎಂದು ಪರಿಗಣಿಸಿ ಅದಕ್ಕೆ ಹಂತಹಂತವಾಗಿ ಹೆಚ್ಚಿನ ಸ್ಥಾನಮಾನಗಳನ್ನು ದೊರಕಿಸಿಕೊಟ್ಟ ಮೇಲೆ ಕನ್ನಡದಲ್ಲಿ ಜಾನಪದ ಕಲ್ಪನೆಯೇ ಬದಲಾಯಿತು. ಜಾನಪದ ಎನ್ನುವದನ್ನು ಇಂಗ್ಲಿಷಿನ Folklore

ಎಂಬ ಪದಕ್ಕೆ ಸಂವಾದಿಯಾಗಿ ಪರಿಗಣಿಸಿ ಅದು ತುಂಬ ವ್ಯಾಪಕವಾದ ಕ್ಷೇತ್ರವೆಂದೂ, ಜಾನಪದ ಜೀವನದ ಎಲ್ಲಾ ಕ್ಷೇತ್ರಗಳನ್ನು ಒಳಗೊಳ್ಳುವದೆಂದೂ ಕಂಡಿತು. ಜನಪದ ಸಾಹಿತ್ಯ, ಕಲೆ, ಸಂಗೀತ, ನೃತ್ಯ, ಸಂಪ್ರದಾಯ, ನಂಬಿಕೆ, ಆಟ, ಉಡುಗೆ-ತೊಡುಗೆ ಮೊದಲಾದ ಅನೇಕ ಕ್ಷೇತ್ರಗಳು ಜಾನಪದದ ವಿವಿಧ ಘಟಕಗಳೆಂದೂ ಪ್ರತಿಪಾದಿಸಲಾಯಿತು. ಡಾ. ಹಾ. ಮಾ. ನಾಯಕರು 'ಜಾನಪದಸ್ವರೂಪ' ಕೃತಿಯ ಮೂಲಕ ಜಾನಪದದ ಪರಿಕಲ್ಪನೆಯನ್ನು ಸ್ಪಷ್ಟವಾಗಿ ಮೂಡಿಸಿದರು. ಭಾರತದಲ್ಲಿಯೇ ಮೊದಲ ಬಾರಿಗೆ ಜಾನಪದಕ್ಕೆ ಪ್ರತ್ಯೇಕವಾದ ಎಂ.ಎ. ಕೋರ್ಸನ್ನು ಆರಂಭ ಮಾಡಿದ್ದು ಈ ದಿಸೆಯಲ್ಲಿ ಮೈಸೂರು ವಿಶ್ವವಿದ್ಯಾಲಯದ ಪ್ರಮುಖ ಸಾಧನೆ ಹಾಗೂ ಐತಿಹಾಸಿಕ ಮಹತ್ವದ ಘಟನೆ ಎಂದರೆ ತಪ್ಪಾಗದು. ೧೯೬೬ರಲ್ಲಿ ದೇಜಗೌ ಅರಂಭಿಸಿ, ಹಾ.ಮಾ. ನಾಯಕ ಮತ್ತು ಜೀಶಂಪ ಅವರ ನೇತೃತ್ವದಲ್ಲಿ ಪಿ.ಆರ್. ತಿಪ್ಪೇಸ್ವಾಮಿ ಅವರು ಅಪಾರ ಪರಿಶ್ರಮದಿಂದ ರೂಪಿಸಿದ ಜಾನಪದ ವಸ್ತು ಸಂಗ್ರಹಾಲಯ ಭಾರತದಲ್ಲಿ ಅತ್ಯಂತ ದೊಡ್ಡ ಪ್ರಮಾಣದ ವಸ್ತು ಸಂಗ್ರಹಾಲಯವೆಂದು ಪ್ರಖ್ಯಾತವಾಗಿದೆ.

ಕರ್ನಾಟಕ ವಿಶ್ವವಿದ್ಯಾಲಯ ಪ್ರಕಟಿಸಿದ ಡಾ.ಬಿ.ಎಸ್. ಗದ್ದಗಿಮಠರ 'ಜಾನಪದ ಗೀತೆಗಳು' ಕನ್ನಡದಲ್ಲಿ ಜಾನಪದವನ್ನು ಕುರಿತು ಪ್ರಕಟವಾದ ಮೊಟ್ಟ ಮೊದಲ ಥೀಸಿಸ್. ಅವರು ಪಿಎಚ್.ಡಿ ಪಡೆದಿದ್ದು ೧೯೫೫ರಲ್ಲಿ. ಉಪನ್ಯಾಸ ಗ್ರಂಥಮಾಲೆಯಲ್ಲಿ ಡಾ.ಎ. ಕೆ. ರಾಮಾನುಜನ್‌ರ 'ಗಾದೆಗಳು' ಪ್ರಕಟವಾದದ್ದು ೧೯೫೫. ರಾಜ್ಯದ ಎಲ್ಲ ವಿಶ್ವವಿದ್ಯಾಲಯಗಳೂ ಸಾಮಾನ್ಯವಾಗಿ ಈ ದಿಸೆಯಲ್ಲಿ ಹೇಳಿಕೊಳ್ಳುವಂಥ ಕೆಲಸ ಮಾಡಿವೆ. ಹಂಪಿ ಕನ್ನಡ ವಿಶ್ವವಿದ್ಯಾಲಯದಲ್ಲಿಯೂ ಜಾನಪದ ಅಧ್ಯಯನಕ್ಕೆ ಮತ್ತು ಬುಡಕಟ್ಟು ಅಧ್ಯಯನಕ್ಕೆ ಪ್ರತ್ಯೇಕವಾದ ವಿಭಾಗಗಳಿದ್ದು ಒಳ್ಳೆಯ ಕೆಲಸ ನಡೆದಿದೆ. ಕರ್ನಾಟಕ ಜನಪದ ಕಲೆಗಳ ಕೋಶ ಹೊರಬಂದಿದೆ. ಕರ್ನಾಟಕ ಜನಪದ ಗ್ರಾಮ ದೇವತೆಗಳ ವಿಶ್ವಕೋಶ ಸಿದ್ಧವಾಗಿದೆ. ಹಂಪಿ ವಿಶ್ವವಿದ್ಯಾಲಯ ಬುಡಕಟ್ಟು ವಿಭಾಗದಿಂದ 'ಮಲೆಯ ಮಾದೇಶ್ವರ', 'ಮಂಟೇಸ್ವಾಮಿ', 'ಜುಂಜಪ್ಪ', 'ಕುಮಾರರಾಮ' ಮತ್ತು 'ಕೃಷ್ಣಗೊಲ್ಲರ ಕಾವ್ಯ', 'ತುಳುನಾಡ ಸಿರಿ' ಈ ಮಹಾಕಾವ್ಯಗಳು ಪ್ರಕಟವಾಗಿ ಹೊಸ ಲೋಕವನ್ನೇ ತೆರೆದಿವೆ. ಈ ಎಲ್ಲಾ ಪ್ರಯತ್ನಗಳಿಂದಾಗಿ ಕಳೆದ ಮೂರು ದಶಕಗಳಲ್ಲಿ ಜಾನಪದ ಅಧ್ಯಯನ ಶೈಕ್ಷಣಿಕವಾಗಿ ಮತ್ತು ಸಂಶೋಧನಾತ್ಮಕವಾಗಿ ಭದ್ರವಾದ ನೆಲೆಯನ್ನು ಪಡೆದಿದೆ. ಜೊತೆಗೆ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಕರ್ನಾಟಕ ಜಾನಪದ ಟ್ರಸ್ಟ್ (ನಾಗೇಗೌಡರು) ಜಾನಪದ ಲೋಕ, ಕನ್ನಡ ಸಾಹಿತ್ಯ ಪರಿಷತ್ತು ಇವುಗಳ ಕಾರ್ಯವೂ ಸ್ಮರಣೀಯ.

ಕರ್ನಾಟಕ ಜಾನಪದ ಅಧ್ಯಯನಕ್ಕೆ ರಾಷ್ಟ್ರೀಯ ಹಾಗೂ ಅಂತಾರಾಷ್ಟ್ರೀಯ ಮಹತ್ವವನ್ನು ತಂದುಕೊಟ್ಟ ಸಂಸ್ಥೆಯೆಂದರೆ ಉಡುಪಿಯ ಪ್ರಾದೇಶಿಕ ರಂಗ ಕಲೆಗಳ ಅಧ್ಯಯನ ಕೇಂದ್ರ. ಕಳೆದ ಇಪ್ಪತ್ತು ವರ್ಷಗಳಲ್ಲಿ ಪ್ರೊ. ಕು.ಶಿ. ಹರಿದಾಸ ಭಟ್ಟರ ನಿರ್ದೇಶನದಲ್ಲಿ ಇದು ಭಾರತದಲ್ಲಿಯೇ

ಅತ್ಯುತ್ತಮ ಮಟ್ಟದ ಜಾನಪದ ದಾಖಲಾತಿ ಕೇಂದ್ರ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ಜಾನಪದ ವೈಜ್ಞಾನಿಕ ಅಧ್ಯಯನಕ್ಕೆ ಮೈಸೂರು ವಿಶ್ವವಿದ್ಯಾಲಯ ಮೊದಲನೆಯ ಆಯಾಮವನ್ನು ನೀಡಿದ್ದರೆ ಈ ಸಂಸ್ಥೆ ಎರಡನೆಯ ಆಯಾಮವನ್ನು ನೀಡಿರುವ ಅಂಶ ಸ್ಪಷ್ಟವಾಗುತ್ತದೆ. ಕರ್ನಾಟಕ ವಿಶ್ವವಿದ್ಯಾಲಯ ಕನ್ನಡ ಅಧ್ಯಯನ ಪೀಠ ಕಳೆದ ಮೂವತ್ತು ವರ್ಷಗಳಿಂದಲೂ ಅಖಿಲ ಕರ್ನಾಟಕ ಜಾನಪದ ಸಮ್ಮೇಳನಗಳನ್ನು ನಡೆಸುತ್ತ ಬಂದಿದ್ದು, ಇವೆಲ್ಲ ಗ್ರಂಥ ರೂಪದಲ್ಲಿ ಪ್ರಕಟವಾಗಿದ್ದು ಅವೆಲ್ಲ ಉಪಯುಕ್ತವಾದ ಆಕರಗ್ರಂಥಗಳಾಗಿವೆ. ಇದನ್ನು ಹೊರತುಪಡಿಸಿ ಜಾನಪದ ಗ್ರಂಥಮಾಲೆಯಲ್ಲಿಯೇ ಅನೇಕ ಮಹತ್ವದ ಗ್ರಂಥಗಳು ಬೆಳಕು ಕಂಡಿವೆ. ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಕೆಲವು ವಿದ್ವಾಂಸರು ವೈಯಕ್ತಿಕ ನೆಲೆಯಲ್ಲಿ ಈ ಕ್ಷೇತ್ರಕ್ಕೆ ತಮ್ಮ ಕೊಡುಗೆ ನೀಡಿದ್ದರೂ ಜಾನಪದ ಅಧ್ಯಯನ ಅಲ್ಲಿ ಸಾಂಸ್ಥಿಕ ಮಟ್ಟದಲ್ಲಿ ನೆಲೆಗೊಳ್ಳಲಿಲ್ಲ.

'ಜಾನಪದ ದೀಪಾರಾಧನೆ'ಯಂಥ ಅರ್ಥಪೂರ್ಣವಾದ ಪರಿಕಲ್ಪನೆಯ ಮೂಲಕ ಹೊಸ ಬಗೆಯ ಕಾರ್ಯಕ್ರಮವನ್ನು ನಡೆಸಿಕೊಂಡು ಬಂದಿರುವ ಡಾ. ಎನ್.ಆರ್. ನಾಯಕ ದಂಪತಿಗಳನ್ನು ಮತ್ತೊಮ್ಮೆ ಹಾರ್ದಿಕವಾಗಿ ಅಭಿನಂದಿಸಿ, ಇದರ ಅಂಗವಾಗಿ ಸಂಯೋಜಿಸಿದ ವಿಚಾರ ಸಂಕಿರಣ ಹಾಗೂ ಪ್ರಶಸ್ತಿ ಪ್ರದಾನ ಕಾರ್ಯಕ್ರಮಗಳೆಲ್ಲ ಯಶಸ್ವಿಯಾಗಿ ನೆರವೇರಲೆಂದು ಹಾರೈಸುತ್ತೇನೆ.

(೨೦೦೬)

(ಸದ್ಭಾವ : ೨೦೦೮)

## ೧೦

# ದಸರಾ ಕವಿಗೋಷ್ಠಿ : ೨೦೦೫ ಉದ್ಘಾಟನೆ

ವರುಣದೇವನ ಕೃಪೆಯಿಂದ ಕೆರೆಕಟ್ಟೆ, ಹಳ್ಳ, ಹೊಳೆಗಳು ಮೈದುಂಬಿಕೊಂಡು, ನೆಲವೆಲ್ಲ ಹಸಿರು ಮುರಿಯುತ್ತಿರುವ ಈ ಸಂತಸದ ಸಂದರ್ಭದಲ್ಲಿ ಈ ಸಲದ ದಸರಾ ಕವಿಗೋಷ್ಠಿ ಸಾಕಷ್ಟು ಸಶಕ್ತವಾಗಿ, ಬರಲಿರುವ ಸುವರ್ಣ ಕರ್ನಾಟಕ ಉತ್ಸವಕ್ಕೆ ನಾಂದಿಯಾಗುವ ರೀತಿಯಲ್ಲಿ ಏರ್ಪಾಟಾಗಿರುವುದು ತುಂಬ ಸಂತೋಷದ ಸಂಗತಿ. ಈ ಗೋಷ್ಠಿಯ ಉದ್ಘಾಟನೆಯ ನೆಪದಲ್ಲಿ ಹಿರಿಯರು, ಮಧ್ಯವಯಸ್ಕರು ಹಾಗೂ ಯುವ ಕವಿಗಳು ಸೇರಿದಂತೆ ಮೂರು ತಲೆಮಾರಿನ ಕವಿಗಳ ಕವಿತೆಗಳನ್ನು ಕೇಳುವ ಸುಯೋಗ ನನಗೆ ಒದಗಿದೆ. ಈ ಅವಕಾಶವನ್ನು ಒದಗಿಸಿದ ದಸರಾ ಕವಿಗೋಷ್ಠಿಯ ಉಪಸಮಿತಿಗೆ ಹಾಗೂ ಸಹೃದಯರಾದ ಶ್ರೋತೃಗಳಿಗೆ ನನ್ನ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಕೆಲವು ವರ್ಷಗಳ ಹಿಂದೆ ಡಾ. ಹಾ.ಮಾ. ನಾಯಕರು ಅರಮನೆಯ ದರ್ಬಾರ್ ಹಾಲಿನಲ್ಲಿಯೇ ದಸರಾ ಕವಿಗೋಷ್ಠಿ ನಡೆಯುವಂತೆ ಮಾಡಿ ಕಾವ್ಯಗೌರವದ ತಮ್ಮ ಹಂಬಲವನ್ನು ಈಡೇರಿಸಿಕೊಂಡದ್ದು ಈ ಸಂದರ್ಭದಲ್ಲಿ ನೆನಪಾಗುತ್ತದೆ. ಈ ಸಲದ ಸಮಿತಿಯ ಸದಸ್ಯರು ಕವಿಗಳನ್ನೆಲ್ಲ ಟಾಂಗಾ ಮೆರವಣಿಗೆಯಲ್ಲಿ ಜಗನ್ಮೋಹನ ಅರಮನೆಯ ಬಾಗಿಲಿಗೆ ಕರೆತಂದು, ಸಾಂಪ್ರದಾಯಿಕ ಸ್ವಾಗತ ನೀಡಿ ಹೊಸತನವನ್ನು ಮೆರೆದಿದ್ದಾರೆ. ಕವಿತೆ ಕುದುರೆಯ ಮೇಲೆ ಸವಾರಿ ಮಾಡಿದ್ದರಿಂದ ಅದಕ್ಕೊಂದು ಹೊಸ ಲಯ ಒದಗಿದ್ದಲ್ಲದೆ ಇದರಿಂದ ಇನ್ನೂ ಎರಡು ಪ್ರಯೋಜನಗಳಾದವು ; ಇಂಧನದ ಉಳಿತಾಯವಾಯಿತು. ಹಾಗೆಯೇ ಕವಿಗಳು ಬಂಧನದಿಂದ ಪಾರಾಗಿ ಜನಸಮುದಾಯದೊಡನೆ ಸಂತಸವನ್ನು ಹಂಚಿಕೊಳ್ಳುವಂತಾಯಿತು.

ಈ ಬಗೆಯ ಮರ್ಯಾದೆ ಸಾಮೂಹಿಕವಾಗಿ ಸಂದಾಗ ಯಾವುದೇ ಬಗೆಯ ಮುಜುಗರ ಉಂಟಾಗುವುದಿಲ್ಲ. ಮರ್ಯಾದೆಯ ಮಾತುಬಂದಾಗ ಬೇಂದ್ರೆಯವರ ಅದೇ ಹೆಸರಿನ ಕವಿತೆ ನೆನಪಾಗುತ್ತದೆ.

"ನೆಲದ ಮ್ಯಾಲೆ ನಡೀಲಿಕ್ಕೆ ಬರವೊಲ್ಲದು
ಅಂತ-ರಿಕ್ಷಾದೊಳಗೆ ಹೋಗಿದ್ದೆ"

ಇಲ್ಲಿಯ ಶ್ಲೇಷೆಯನ್ನು ಸರಿಯಾಗಿ ಅರ್ಥಮಾಡಿಕೊಳ್ಳಬೇಕು. ಕೊನೆಯಲ್ಲಿ ಕವಿ ಹೇಳುತ್ತಾರೆ.

"ಸಾವಿರದ ಹಾದಿ ಮ್ಯಾಲೆ
ಹತ್ತು ಹತ್ತಿ ನೂರಾದೆ;
ಕೆಳಗೆ ಬೇರಾದೆ
ಮ್ಯಾಲೆ ಮರಾ ಆದೆ
ಅದೇ ಮರ್ಯಾದೆ"

ಹೀಗೆ ಮರ್ಯಾದೆ ಕೊಡುವುದು, ಮರ್ಯಾದೆ ತೆಗೆದುಕೊಳ್ಳುವದು-ಎರಡರ ಘನತೆಯಲ್ಲಿಯೂ ಸಮಾನತೆಯನ್ನು ಕಂಡು ಕವಿ ತಾನು ಸಾಧಿಸಿದ ಆಧ್ಯಾತ್ಮಿಕ ಉನ್ನತಿಯ ಸಾರ್ಥಕತೆಯಿಂದ ಸಮಾಧಾನಗೊಂಡಿರುವುದನ್ನು ಇಲ್ಲಿ ಕಾಣಬಹುದು.

ಕನ್ನಡ ನಾಡು ಬಹಳ ಹಿಂದೆ ತನ್ನ ರಾಜಕೀಯ ಸ್ವಾತಂತ್ರ್ಯವನ್ನು ಕಳೆದುಕೊಂಡು ಉಳಿದ ಪ್ರದೇಶಗಳಂತೆಯೇ ಪರದಾಸ್ಯದ ನೊಗವನ್ನು ಹೊತ್ತುನಿಂತಾಗ ಈ ನಾಡಿನ ಬಹುಭಾಗ ತುಂಡು ತುಂಡುಗಳಾಗಿ, ಬೇರೆ ಬೇರೆ ಆಡಳಿತಕ್ಕೆ ಸೇರಿ, ಕನ್ನಡಿಗರಲ್ಲಿ ಪರಸ್ಪರ ಬಾಂಧವ್ಯ ಏರ್ಪಡದೆ ತಮ್ಮ ಭಾಷೆ-ಸಾಹಿತ್ಯ-ಸಂಸ್ಕೃತಿಗಳಿಂದಲೂ ದೂರವಾಗುವ ದುರ್ಭರ ಪ್ರಸಂಗವನ್ನು ಎದುರಿಸಬೇಕಾಯಿತು. ಎಲ್ಲ ಕಡೆಗಳಲ್ಲಿಯೂ ಪರಭಾಷೆ-ಪರಕೀಯ ಸಂಸ್ಕೃತಿಗಳ ಒತ್ತಾಯಕ್ಕೆ ಒಳಗಾಗಿ ಕನ್ನಡ ಜನ ತಮ್ಮ ಅಸ್ತಿತ್ವದ ವಾಸ್ತವ ಸ್ವರೂಪವನ್ನೇ ಮರೆತು ಬಿಟ್ಟಿದ್ದರು. ಇಂತಹ ಕಾಲದಲ್ಲಿ ನಾಡಿನ ಜನರನ್ನೆಲ್ಲ ಒಂದುಗೂಡಿಸಿ ನಲಿಯುವಂತಹ ನಾಡಹಬ್ಬದ ಆಚರಣೆಗೆ ಅವಕಾಶವೇ ಇರಲಿಲ್ಲ.

ಮೈಸೂರಿನ ಒಡೆಯರು ನಾಡಹಬ್ಬದ ಪರಂಪರೆಯನ್ನು ವಿಜೃಂಭಣೆಯಿಂದ ಜರುಗಿಸುತ್ತಿದ್ದರಾದರೂ ತಮ್ಮತನವನ್ನು ಮರೆತಿದ್ದ ಮಿಕ್ಕೆಡೆಯ ಕನ್ನಡಿಗರನ್ನು ಅದು ತನ್ನ ಕಡೆಗೆ ಆಕರ್ಷಿಸಲು ಸಮರ್ಥವಾಗಲಿಲ್ಲ. ಒಂದು ಕಾಲದಲ್ಲಿ ಕನ್ನಡಿಗರ ಹೃದಯಗಳನ್ನೆಲ್ಲ ತನ್ನೆಡೆಗೆ ಸೆಳೆದುಕೊಂಡಿದ್ದ ಹಂಪೆಯ ತುಂಗಭದ್ರೆ ಕಾಲದ ದುರ್ವಿಪಾಕದ ಪರಿಣಾಮವಾಗಿ ಮೈಸೂರು ಪ್ರದೇಶದಿಂದ ಮಿಕ್ಕ ಕನ್ನಡ ಪ್ರದೇಶವನ್ನು ವಿಭಾಗಿಸಿ ಗೆರೆಕೊರೆದಂತೆ ಪರಸ್ಪರ ಪರಿಚಯ ತಪ್ಪಿ ಹೋಗುವಂತೆ ಮಾಡಿದ್ದಳು. ಸರ್ವಸಂಪನ್ನ ಭಾಷೆ, ಪ್ರಭಾವಶಾಲಿ ಸಾಹಿತ್ಯ, ವೀರವೈಭವದ ಇತಿಹಾಸ - ಇಷ್ಟೆಲ್ಲ ತಮ್ಮವಾಗಿದ್ದರೂ ಅದರ ಅರಿವು ಒಬ್ಬನಿಗೂ ಇರದಂಥ ಪರಿಸ್ಥಿತಿ ಒದಗಿದ್ದಿತು.

ಇದೇ ಹೊತ್ತಿಗೆ ವಿಧಾಯಕ ಶಕ್ತಿಯ ಬಲದಿಂದ ಬಂಗಾಲಿಗಳು ಒಡೆದ ನಾಡನ್ನು ಒಂದುಗೂಡಿಸಿ, ಹೊಸ ಚೈತನ್ಯ ಪಡೆದು ದುರ್ಗಾಪೂಜಾ ಪರ್ವವನ್ನು ನಾಡಹಬ್ಬವನ್ನಾಗಿ ಆಚರಿಸತೊಡಗಿದರು. ಸ್ವಾತಂತ್ರ್ಯಪೂರ್ವದ ಸ್ಮೃತಿಕಾಲದಲ್ಲಿ ಹುಟ್ಟಿ ಬೆಳೆದ ಲೋಕಮಾನ್ಯ ತಿಲಕರು ಮಹಾರಾಷ್ಟ್ರೀಯರಲ್ಲಿ ಸಂಘಟನಾಶಕ್ತಿಯನ್ನು ಹುಟ್ಟಿಸಿದ್ದರಿಂದ ಗಣೇಶೋತ್ಸವ ಮಹಾರಾಷ್ಟ್ರೀಯರ ನಾಡಹಬ್ಬವಾಗಿ ಪರಿಣಮಿಸಿತು. ಧಾರವಾಡದಲ್ಲಿ ಕರ್ನಾಟಕ ವಿದ್ಯಾವರ್ಧಕ ಸಂಘ ಸ್ಥಾಪನೆಗೊಂಡು ಅಖಿಲ ಕರ್ನಾಟಕದ ಏಕೀಕರಣದ ಕನಸನ್ನು ಕಂಡು ಅದಕ್ಕಾಗಿ ಹೋರಾಟವನ್ನು ಪ್ರಾರಂಭಿಸಿತು. ಆಲೂರ ವೆಂಕಟರಾಯರ 'ಕರ್ನಾಟಕ ಗತವೈಭವ' ಗ್ರಂಥ

ಬೆಳಕಿಗೆ ಬಂದು ಕನ್ನಡಿಗರ ಸ್ವಾಭಿಮಾನ, ಸಂಸ್ಕೃತಿ ಪ್ರಜ್ಞೆಯನ್ನು ಬಡಿದೆಬ್ಬಿಸಿತು. ಅವರು ಟಂಕಿಸಿದ 'ಕರ್ನಾಟಕತ್ವ' ಶಬ್ದದಲ್ಲಿ ರಾಜಕಾರಣ, ಧರ್ಮ, ವಾಙ್ಮಯ, ಇತಿಹಾಸ, ಕಲೆ ಮುಂತಾದ ವಿಷಯಗಳು ಸೇರ್ಪಡೆಯಾದವು. ಅದರ ಮೂಲಕ ಭಾರತವರ್ಷ್ವೇ ಅಲ್ಲ ವಿಶ್ವವೇ ನಮಗೆ ಗೋಚರವಾಗುತ್ತದೆಂಬ ಹೊಸ ದೃಷ್ಟಿಯನ್ನು ಅವರು ನೀಡಿದರು. ಕನ್ನಡಿಗರು ಕರ್ನಾಟಕತ್ವವನ್ನು ಬೆಳೆಸಿಕೊಳ್ಳದೆ ಪೂರ್ಣ ಭಾರತೀಯರಾಗುವುದು ಸಾಧ್ಯವಿಲ್ಲವೆಂಬುದನ್ನು ಖಚಿತಪಡಿಸಿದರು.

ಹೀಗೆ ತಮ್ಮ ಇತಿಹಾಸ-ಸಂಸ್ಕೃತಿಗಳ ನೆರವಿನಿಂದ ಜನತೆಯಲ್ಲಿ ಸ್ಫೂರ್ತಿ ಹುಟ್ಟಿಸುವ ನಾಡಹಬ್ಬ ಯಾವುದೆಂದು ಶೋಧಿಸತೊಡಗಿದಾಗ ಮೈಸೂರು ಒಡೆಯರು ನೆರವೇರಿಸುತ್ತಿದ್ದ ನವರಾತ್ರಿಯ ಹಬ್ಬ, ಅದಕ್ಕೆ ಮೂಲವಾದ ವಿಜಯನಗರದ ರಾಜರು ನಡೆಯಿಸುತ್ತಿದ್ದ ನವರಾತ್ರಿಯ ಮಹೋತ್ಸವದ ಚಿತ್ರ ನಮ್ಮ ಹಿರಿಯರ ಮನದಲ್ಲಿ ಮೂಡಿನಿಂತವು. ರತ್ನಾಕರವರ್ಣಿ ತನ್ನ ಕಾವ್ಯ ನಾಯಕನಾದ ಭರತ ಚಕ್ರವರ್ತಿಯಿಂದ ಕನ್ನಡ ರಾಯರಂತೆಯೆ ನವರಾತ್ರಿ ಹಬ್ಬದ ರಾಷ್ಟ್ರೀಯ ಮಹೋತ್ಸವವನ್ನು ಮಾಡಿಸಿದ್ದಾನೆ. ಹದಿನೇಳನೇ ಶತಮಾನದ ಗೋವಿಂದ ವೈದ್ಯಕವಿಯು ತನ್ನ ಕಾವ್ಯ ನಾಯಕನಾದ ಕಂಠೀರವ ನರಸರಾಜನು ಶ್ರೀರಂಗಪಟ್ಟಣದಲ್ಲಿ ಆಚರಿಸಿದ ನವರಾತ್ರಿ ಉತ್ಸವದ ಬಣ್ಣನೆಗಾಗಿ ಮೂರು ಸಂಧಿಗಳನ್ನು ಮೀಸಲಾಗಿರಿಸಿದ್ದಾನೆ. ಕನ್ನಡ ಜನಪದವಂತೂ ನವರಾತ್ರಿಯ ಹಬ್ಬ ನಾಡಹಬ್ಬವೆಂಬುದನ್ನು ಎಂದೊ ಒಪ್ಪಿಕೊಂಡಿದೆ. ಈ ರೀತಿ ಸಂಸ್ಕೃತಿಯ ಅಭ್ಯಾಸಿಗಳಿಗೆ ಶರನ್ನವರಾತ್ರಿಯೆ ಕನ್ನಡಿಗರ ನಾಡಹಬ್ಬವಾಗಿ ಗೋಚರಿಸಿದ್ದಲ್ಲಿ ಆಶ್ಚರ್ಯವಿಲ್ಲ.

ಇದನ್ನೆಲ್ಲ ಮನಗಂಡು ೧೯೨೫ರಲ್ಲಿ ಧಾರವಾಡದಲ್ಲಿ ಪ್ರಾರಂಭವಾಗಿ ಈ ನಾಡಹಬ್ಬದ ಉತ್ಸವ ವರ್ಷವರ್ಷಕ್ಕೆ ಲೋಕಪ್ರಿಯವಾಗುತ್ತ ಉತ್ತರ ಕರ್ನಾಟಕ, ನಿಜಾಮ ಕರ್ನಾಟಕ ಹಾಗೂ ಹೊರನಾಡುಗಳಲ್ಲಿ, ಕನ್ನಡಿಗರಿರುವಲ್ಲೆಲ್ಲ ಅದರ ವ್ಯಾಪ್ತಿ ಹರಡಿತು. ಕರ್ನಾಟಕ ಏಕೀಕರಣದ ಭಾವನೆಯನ್ನು ಜಾಗೃತಗೊಳಿಸುವ ಕಾರ್ಯಕ್ಕೆ ಈ ಉತ್ಸವದಿಂದ ಹೆಚ್ಚಿನ ಪ್ರೇರಣೆ ದೊರೆಯಿತು.

ದೇಶಕ್ಕೆ ರಾಜಕೀಯ ಸ್ವಾತಂತ್ರ್ಯ ದೊರೆತು, ಕನ್ನಡ ರಾಜ್ಯ ನಿರ್ಮಾಣವಾದ ಮೇಲೆ ನಾಡಹಬ್ಬವನ್ನು ಆಚರಿಸುವ ಉತ್ಸಾಹ ನಮ್ಮ ಜನರಲ್ಲಿ ಕಡಿಮೆಯಾದಂತೆ ತೋರುತ್ತದೆ. ನಾಡಿನ ಭವಿಷ್ಯದ ದೃಷ್ಟಿಯಿಂದ ಇದು ಒಳ್ಳೆಯ ಲಕ್ಷಣವಲ್ಲ. ರಾಜಕೀಯ ಕಾಯಿದೆಗಳು ಜನರನ್ನು ಎಂದೂ ಸುಸಂಸ್ಕೃತರನ್ನಾಗಿ ಮಾಡಲಾರವು. ಸಂಸತಿ ಪ್ರಸಾರವಾಗದೆ ಜನರಲ್ಲಿ ಸುಖಸಮಾಧಾನಗಳು ಕಾಲೂರಿ ನಿಲ್ಲಲಾರವು. ಆದುದರಿಂದ ನಾಡಹಬ್ಬದಂತಹ ಸಾಂಸ್ಕೃತಿಕ ಮಹೋತ್ಸವ ಕೇವಲ ಮೈಸೂರಿನಲ್ಲಿ ಮಾತ್ರವಲ್ಲ ನಾಡಿನ ಎಲ್ಲೆಡೆಗಳಲ್ಲಿಯೂ ಅವಿಚ್ಛಿನ್ನವಾಗಿ ನಡೆಯುತ್ತಿರಬೇಕು.

ಇಂದಿನ ಕವಿಗೋಷ್ಠಿಯಲ್ಲಿ ಪ್ರತಿಸಲದಂತೆ ಕನ್ನಡದ ಜೊತೆ ಸಂಸ್ಕೃತ, ಉರ್ದು, ಕೊಡವ, ಕೊಂಕಣಿ ಮತ್ತು ತುಳುಭಾಷೆಯ ಕವಿಗಳನ್ನೂ ಆಹ್ವಾನಿಸುವ ಸತ್ಸಂಪ್ರದಾಯವನ್ನು ಪಾಲಿಸಿಕೊಂಡು

ಬಂದಿರುವುದು ಸ್ವಾಗತಾರ್ಹ. ಕನ್ನಡ ವ್ಯಾಕರಣವನ್ನು ಸಂಸ್ಕೃತದಲ್ಲಿ ಬರೆದ ಎರಡನೆಯ ನಾಗವರ್ಮ ತನ್ನ 'ಕರ್ನಾಟಕ ಭಾಷಾಭೂಷಣಂ' ಕೃತಿಯ ಪ್ರಾರಂಭದ ಪದ್ಯದಲ್ಲಿ 'ಸರ್ವಭಾಷಾ ಸರಸ್ವತೀ' ಎಂಬ ಉದಾತ್ತ ಕಲ್ಪನೆಯನ್ನು ಜಗತ್ತಿಗೆ ನೀಡಿರುವದು ಕನ್ನಡಿಗರು ಅಭಿಮಾನಪಡತಕ್ಕಂತಹ ಸಂಗತಿಯಾಗಿದೆ. ಆಧುನಿಕ ಸಂದರ್ಭದಲ್ಲಿ ಕುವೆಂಪು, ತಮ್ಮ ಶ್ರೀರಾಮಾಯಣದರ್ಶನಂ ಮಹಾಕಾವ್ಯದ 'ಕವಿಕೃತು ದರ್ಶನಂ' ಭಾಗದಲ್ಲಿ ಎಲ್ಲ ಭಾಷೆಯ ಮಹಾಕವಿಗಳಿಗೆ ಕೈಜೋಡಿಸಿ ವಂದಿಸುವ ಮೂಲಕ ಈ ಉದಾತ್ತ ಭಾವವನ್ನೇ ಹೃದಯಂಗಮವಾಗಿ ಅಭಿವ್ಯಕ್ತಿಗೊಳಿಸಿದ್ದಾರೆ. ಪರಂಪರೆಯ ಸಾರವನ್ನು ಹೀರಿಕೊಂಡು ಬೆಳೆಯುವ ಈ ವಿಷಯ ಮತ್ತು ಸಹೃದಯತೆ ಕನ್ನಡ ಕಾವ್ಯ ಪ್ರವಾಹವನ್ನು ಎಂದೂ ಹರಿಗಡಿಯದಂತೆ ಸತ್ವಶಾಲಿಯಾಗಿ ಮುಂದುವರೆಸಿಕೊಂಡು ಬಂದಿದೆ.

ಕನ್ನಡ ನಾಡಿನ ಇತಿಹಾಸ, ಧರ್ಮ, ಸಾಹಿತ್ಯ, ಕಲೆ-ಹೀಗೆ ಎಲ್ಲಾ ರಂಗಗಳಲ್ಲಿಯೂ ಸಮನ್ವಯದ ಅಂಶವೇ ಪ್ರಮುಖವಾಗಿ ಕಂಡುಬರುತ್ತಿದೆ. ಪರವಿಚಾರವನ್ನೂ ಪರಧರ್ಮವನ್ನೂ ಸೈರಿಸಿಕೊಂಡ ಬಾಳು ಬಂಗಾರವಾಗುತ್ತದೆಂಬ ಮಾತು ಕನ್ನಡದ ಆದಿಗ್ರಂಥವಾದ ಕವಿರಾಜಮಾರ್ಗದಲ್ಲಿಯೇ ವ್ಯಕ್ತವಾಗಿದೆ. ಪ್ರಾದೇಶಿಕ ಭೇದಗಳೇನಿದ್ದರೂ ಈ ಸಂಸ್ಕೃತಿಯ ಅಭಿವ್ಯಕ್ತಿಗೆ ವೈವಿಧ್ಯವನ್ನು ಒದಗಿಸಿವೆ. ದೇಶದ ವಿವಿಧ ಭಾಷೆಗಳಲ್ಲಿ ಅಭಿವ್ಯಕ್ತಿಗೊಂಡಿರುವ ಕಾವ್ಯ-ಸಾಹಿತ್ಯವನ್ನು ಪರಿಶೀಲಿಸಿದಾಗಲೂ ಮನುಷ್ಯಜೀವನದ ಸಾಮರಸ್ಯದ ಕನಸುಗಳೇ ಒಡೆದು ಕಾಣುತ್ತವೆ. ಹೀಗಿದ್ದೂ ಇಂದು ದೇಶದಲ್ಲಿ ವಿಚ್ಛಿದ್ರಕಾರಕ ಶಕ್ತಿಗಳ ಪ್ರಾಬಲ್ಯ ದಿನದಿಂದ ದಿನಕ್ಕೆ ಹೆಚ್ಚುತ್ತಿರುವದು ಆತಂಕಕಾರಿಯಾಗಿದೆ. ಮಾನವೀಯತೆಯ ಸೂತ್ರದಿಂದ, ಒಡೆದುಹೋಗುತ್ತಿರುವ ಮನುಷ್ಯ ಸಂಬಂಧವನ್ನು ಜೋಡಿಸುವ, ಬೆಸೆಯುವ ಕಾರ್ಯ ನಿರಂತರ ಮುಂದುವರಿಯಬೇಕಾಗಿದೆ. ಈ ದೇಶದ ಸಂಸ್ಕೃತಿಯ ಬಹುಮುಖತ್ವವನ್ನು ಕಾಪಾಡಿಕೊಂಡು ಪೋಷಿಸಿಕೊಂಡು ಹೋಗುವುದರಿಂದ ಮಾತ್ರ ಭಾರತೀಯನ ಬದುಕು ಸುಂದರವಾಗಬಲ್ಲದು.ಇಂಥ ಪರಿವರ್ತನೆಯ ಕನಸನ್ನು ನಮ್ಮ ಕವಿಗಳು ಕಾಣುತ್ತಿದ್ದಾರೆ ಎಂದು ನನಗನಿಸುತ್ತದೆ.

ಜೀವನದ ಸೌಂದರ್ಯ, ಸೋಜಿಗ, ಕುತೂಹಲ, ಇವುಗಳ ಜೊತೆಗೆ ಅದರ ವೈರುಧ್ಯಗಳು, ದ್ವಂದ್ವಗಳು ಹಾಗೂ ವಿರೋಧಾಭಾಸಗಳನ್ನು ಸೆರೆಹಿಡಿಯುವ ಶಕ್ತಿ ಕವಿಗಿದ್ದಾಗ ಅದು ಗಟ್ಟಿ ಕಾವ್ಯ ಎನಿಸಿಕೊಳ್ಳುತ್ತದೆ. ಸ್ವಪ್ರಜ್ಞೆ ಹಾಗೂ ಸಮಾಜ ಪ್ರಜ್ಞೆ ಎರಡೂ ಅತ್ಯಂತ ಜಾಗೃತ ಸ್ಥಿತಿಯಲ್ಲಿರುವ ಕವಿಗೆ ಬದಲಾವಣೆಯ ಅಂತಃಸ್ಪಂದನಗಳನ್ನು ಅನುಭವಿಸುವುದು ಸಾಧ್ಯವಾಗುತ್ತದೆ. ಭಾಷೆಯ ಮೂಲಕ ಭಾವಸೂಚನೆಗಳನ್ನು ಒಳಗೊಂಡಿರುವ ಕವಿತೆ ಹೆಚ್ಚು ತಾಳಿಕೆಯುಳ್ಳದ್ದಾಗಿರುತ್ತದೆ. ಭಾವದ ಪ್ರಾಮಾಣಿಕತೆ ಉತ್ತಮ ಕವಿತೆಯ ಲಕ್ಷಣವಾಗಿದೆ.

'**ಬಂದುದಂದು ಶರದಂ ಲೋಕಕ್ಕೆ ಕಣ್ ಬರ್ಪಿನಂ**' ಎಂದು ಪಂಪ ಶರತ್ಕಾಲವನ್ನು ಬಣ್ಣಿಸಿದ್ದುಂಟು. ಇಂದಿನ ಲೋಕಕ್ಕೆ ಹೊಸದೃಷ್ಟಿ ಬರುವ ಆಶಯವನ್ನು ಅನುಭವವನ್ನೂ ಈ ಶರನ್ನವರಾತ್ರಿಯ ಕವಿಗೋಷ್ಠಿ ತಮಗೆಲ್ಲ ನೀಡುವಂತಾಗಲಿ ಎಂದು ಹಾರೈಸುತ್ತೇನೆ.

(ಸದ್ಭಾವ : ೨೦೦೮)

## ೧

## ಮಾಸ್ತಿ : ನಾನು ಕಂಡಂತೆ

ನಾನು ಹಾಯ್‌ಸ್ಕೂಲಿನಲ್ಲಿ ಓದುತ್ತಿದ್ದಾಗಲೇ ಶ್ರೀನಿವಾಸರ 'ಕೆಲವು ಸಣ್ಣ ಕಥೆಗಳು' ಪುಸ್ತಕ ನನ್ನ ಕೈಗೆ ಹೇಗೋ ಬಂದಿತ್ತು. ಆ ಕತೆಗಳನ್ನು ಮರಮರಳಿ ಓದಿದ್ದೇ ಓದಿದ್ದು. ನಾನಿದ್ದ ವಿದ್ಯಾರ್ಥಿ ನಿಲಯದಲ್ಲಿ ಕಾಲೇಜಿನ ವಿದ್ಯಾರ್ಥಿಗಳೂ ಇದ್ದರು. 'ಸುಬ್ಬಣ್ಣ' ಅವರಲ್ಲಿ ಕೆಲವರಿಗೆ ಪಠ್ಯವಾಗಿತ್ತೆಂದು ತೋರುತ್ತದೆ. ನಾನು ಅವರಿಂದ ಅದನ್ನು ಪಡೆದುಕೊಂಡು ಕೂತ ಮೆಟ್ಟಿನಲ್ಲಿಯೇ ಓದಿ ಮುಗಿಸಿದ್ದೆ. ಕತೆಗಳನ್ನು ಓದಿದಾಗ ನನ್ನಲ್ಲಿ ಉಂಟಾಗಿದ್ದ ಉತ್ಸಾಹ, ಸಂತೋಷದ ಬದಲು ಸುಬ್ಬಣ್ಣ ಓದಿದಾಗ ಒಂದು ಬಗೆಯ ವಿಲಕ್ಷಣ ದುಃಖ ನನ್ನ ಮನಸ್ಸನ್ನಾವರಿಸಿತ್ತು. ಸಾಹಿತ್ಯದಲ್ಲಿ ನನಗೆ ವಿಶೇಷ ಅಭಿರುಚಿಯನ್ನು ಹುಟ್ಟಿಸಿದ ಗ್ರಂಥಗಳಲ್ಲಿ ಇವುಗಳಿಗೆ ಮಹತ್ವದ ಸ್ಥಾನವಿದೆ.

೧೯೪೪ರಲ್ಲಿ (ನಾನಾಗ ಹಾಯ್‌ಸ್ಕೂಲಿನ ಆರನೆಯ ವರ್ಗದಲ್ಲಿ ಓದುತ್ತಿದ್ದೆ) ರಬಕವಿಯಲ್ಲಿ ಸಾಹಿತ್ಯ ಸಮ್ಮೇಳನ ನಡೆಯುವದಿತ್ತು. ಧಾರವಾಡದವರೇ ಆದ ಪ್ರೊ. ಬಸವನಾಳರು ಅದಕ್ಕೆ ಅಧ್ಯಕ್ಷರಾಗಿ ಆಯ್ಕೆಯಾಗಿದ್ದರು. ತುಂಬು ಗಾಂಭೀರ್ಯದ ಆ ವ್ಯಕ್ತಿಯನ್ನು ನಾನು ದೂರದಿಂದಲೇ ನೋಡಿದ್ದೆನಲ್ಲದೆ ಅವರ ಒಂದೆರಡು ಭಾಷಣಗಳನ್ನೂ ಕೇಳಿದ್ದೆ. ಆಗ ಪ್ರಗತಿಶೀಲ ಸಾಹಿತ್ಯದ ಬಗ್ಗೆ ಪತ್ರಿಕೆಗಳಲ್ಲಿ, ವಿಶೇಷವಾಗಿ 'ಉಷಾ'ದಲ್ಲಿ ನಡೆಯುತ್ತಿದ್ದ ವಾದ ವಿವಾದಗಳೂ ನನ್ನಲ್ಲಿ ಕುತೂಹಲವನ್ನು ಕೆರಳಿಸಿದ್ದವು. ಆ ಸಮ್ಮೇಳನದಲ್ಲಿ ಗೋಕಾಕರ ಅಧ್ಯಕ್ಷತೆಯಲ್ಲಿ ನಡೆಯಲಿರುವ ಪ್ರಗತಿಶೀಲ ಸಾಹಿತ್ಯ ಗೋಷ್ಠಿಯಲ್ಲಿ ಅ.ನ.ಕೃ., ತರಾಸು, ಕುಳುಕುಂದ ಶಿವರಾಯ, ನಾಡಿಗೇರ ಕೃಷ್ಣರಾಯ, ಅರ್ಚಕ ವೆಂಕಟೇಶ, ಮಾ.ನಾ. ಚೌಡಪ್ಪ ಭಾಗವಹಿಸಲಿರುವರೆಂದು ತಿಳಿದಾಗಲಂತೂ ನನ್ನ ಹಾಗೂ ನನ್ನ ಒಂದಿಬ್ಬರು ಗೆಳೆಯರ ಉತ್ಸಾಹಕ್ಕೆ ರೆಕ್ಕೆ ಮೂಡಿದವು. ಅವರಲ್ಲಿ ಒಬ್ಬರ ಊರು ಮುಧೋಳ. ಸಮ್ಮೇಳನದ ಜೊತೆಗೆ ತಮ್ಮ ಊರಿಗೂ ನಮ್ಮನ್ನು ಕರೆದುಕೊಂಡು ಹೋಗುವುದಾಗಿ ಹೇಳಿ ಹೊರಡಿಸಿಯೇ ಬಿಟ್ಟರು.

ರಬಕವಿಯ ಪಟ್ಟಣ ಹಾಯ್‌ಸ್ಕೂಲಿನ ಆವರಣದಲ್ಲಿ ಸಜ್ಜುಗೊಳಿಸಿದ ಭವ್ಯವಾದ ಮಂಟಪದಲ್ಲಿ ಸಮ್ಮೇಳನ ಪ್ರಾರಂಭವಾಯಿತು. ಕಿಕ್ಕಿರಿದು ತುಂಬಿದ್ದ ಆ ಸಭೆಯಲ್ಲಿ ದೂರ ಹಿಂಬದಿಯಲ್ಲಿ ನಾನು ಗೆಳೆಯರೊಡನೆ ಹೇಗೋ ಸ್ಥಳ ಮಾಡಿಕೊಂಡು ಕೂತಿದ್ದೆ. ಜೋಳದರಾಶಿ ದೊಡ್ಡನಗೌಡರ ಕಂಚಿನ ಕಂಠದಿಂದ ನಡೆದ ಪ್ರಾರ್ಥನೆ ಸುತ್ತಲಿನ ಕಟ್ಟಡಗಳಿಂದ

ಪ್ರತಿಧ್ವನಿಗೊಂಡಿತು. ಸ್ವಾಗತಾಧ್ಯಕ್ಷರ ಭಾಷಣ ಇತ್ಯಾದಿಗಳಾದ ಮೇಲೆ, ಒಬ್ಬರು ಮೆಲ್ಲಗೆ ಮೇಲೆದ್ದು ಮುಗುಳುನಗುತ್ತಲೇ ಪ್ರೀತಿ ತುಂಬಿದ ಮಾತಿನಲ್ಲಿ ಸಭಿಕರನ್ನು 'ಅಣ್ಣಂದಿರೆ, ತಾಯಂದಿರೆ' ಎಂದು ಸಂಬೋಧಿಸುತ್ತ, ಕನ್ನಡದ ಬಗ್ಗೆ ಕಳಕಳಿಯಿಂದ ಅತ್ಯಂತ ಮೋಹಕವಾಗಿ ಮಾತನಾಡಿದ್ದನ್ನು ನಾನು ಮಂತ್ರಮುಗ್ಧನಾಗಿ ಕೇಳಿದೆ. 'ಇವರೇ ಮಾಸ್ತಿಯವರು' ಎಂದು ನನ್ನ ಬಳಿಯಲ್ಲಿದ್ದವರು ಮಾತನಾಡಿಕೊಂಡರು. ಇಷ್ಟು ಸೊಗಸಾಗಿ ಅಂತಃಕರಣ ಕರಗುವಂತೆ ಮಾತನಾಡಿದ ಈ ವ್ಯಕ್ತಿಗೆ 'ಮಾಸ್ತಿ' ಎನ್ನುವ ಹೆಸರು ನನಗೇಕೊ ಚಂದವೆನಿಸಲಿಲ್ಲ. 'ಸಣ್ಣ ಕತೆಗಳ ಶ್ರೀನಿವಾಸರೆಂದರೆ ಇವರೇ' ಎಂದು ಹತ್ತಿರದಲ್ಲಿದ್ದ ಇನ್ನೊಬ್ಬರು ಹೇಳಿದರು. ಆಗ ನಿಜಕ್ಕೂ ರೋಮಾಂಚನವಾಯಿತು. 'ಮಾಸ್ತಿ' ಎನ್ನುವ ಹೆಸರು ಅನಿಸಿದಂತೆ ಅಸಡ್ಡಾಳವಾಗಿ ಕಾಣದೆ ಈಗ ಹೆಚ್ಚು ಸುಂದರವಾಗಿ ತೋರಿತು.

ಮರುದಿನ ಸಾಯಂಕಾಲ ಸಭೆ ಸೇರಿದಾಗ ಈಶ್ವರ ಸಣಕಲ್ಲರು (ಅವರೂ ರಬಕವಿಯವರೇ) ಸಭಿಕರಾಗಿ ಎಲ್ಲೋ ಕುಳಿತುಕೊಂಡಿದ್ದರೆಂದು ತೋರುತ್ತದೆ. ಮಾಸ್ತಿಯವರು, ಈಶ್ವರ ಇಲ್ಲಿ ಮೇಲೆ ಬನ್ನಿ ಎಂದು ವೇದಿಕೆಯ ಮೇಲೆ ಅವರನ್ನು ಜುಲುಮೆಯಿಂದ ಕರೆದು ಕುಳ್ಳರಿಸಿಕೊಂಡ ಚಿತ್ರ ನಾಲ್ವತ್ತು ವರ್ಷಗಳಾದ ಮೇಲೂ ನನ್ನ ಕಣ್ಣ ಮುಂದೆ ಕಟ್ಟಿದಂತಿದೆ. ಅಂದು ರಾತ್ರಿ ಮನರಂಜನ ಕಾರ್ಯಕ್ರಮಗಳಲ್ಲಿ ನಾಟಕವೊಂದಿತ್ತು. ಮಂಟಪದಲ್ಲಿ ಕಾಲಿಡಲೂ ಜಾಗವಿಲ್ಲದಷ್ಟು ಜನರಿಂದ ತುಂಬಿಕೊಂಡಿತ್ತು. ಆಗ ಮಲ್ಲಿಕಾರ್ಜುನ ಮನಸೂರ ಅವರ ಸಂಗೀತ ಪ್ರಾರಂಭವಾಯಿತು. ಸುತ್ತುಮುತ್ತಲಿನ ಹಳ್ಳಿಗಳಿಂದ ಬಂದ ಜನ ನಾಟಕ ನೋಡುವ ಆತುರದಿಂದ ಸ್ವಲ್ಪ ಗಲಾಟೆ ಮಾಡತೊಡಗಿದರು. ಆಗ ಸ್ವತಃ ಮಾಸ್ತಿಯವರು ವೇದಿಕೆಯ ಮೇಲೆ ಬಂದು ಸಭಿಕರಿಗೆ ಶಾಂತರಾಗಿ ಆಲಿಸಲು ಕೈಮುಗಿದು ಬಿನ್ನವಿಸಿಕೊಂಡರು.

ನಾನು ನೋಡಿದ ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ, ನನಗೆ ಮಾಸ್ತಿಯವರ ಪ್ರಥಮ ದರ್ಶನವಾದದ್ದು ಹೀಗೆ, ಈ ಮಾಸ್ತಿಯವರೇ ಶ್ರೀನಿವಾಸರು ಎಂದು. ಆ ಸಂದರ್ಭದಲ್ಲಿ 'ಕನ್ನಡ ಬಾವುಟ'ದಲ್ಲಿ ನಾನು ಓದಿದ ಅವರ ಕವಿತೆಗಳು ನೆನಪಾದವು.

"ಹರಿದು ತುಂಡಾಗಿಹುದು ಇಂದು ಕನ್ನಡನಾಡು
ಅಣ್ಣ ತಮ್ಮದಿರು ತಾವಣ್ಣತಮ್ಮದಿರೆಂದು
ತಿಳಿಯಲಾರರು ನಡೆಯಲಾರರು..."

* * * *

"ಕೋಗಿಲೆ ಕೋಗಿಲೆ
ಎಂಥ ಹೆಸರು ಊರಿಗೆ"

ಕುವೆಂಪು, ಬೇಂದ್ರೆ, ವಿ.ಸೀ. ಮೊದಲಾದವರ ಕವಿತೆಗಳಂತೆ ಇವು ಆವೇಶ ಪೂರ್ಣವಾಗಿರಲಿಲ್ಲ. ಆದರೂ ಒಂದು ಬಗೆಯ ಸಲಿಗೆಯ ಮಾತಿನ ರೀತಿಯಿಂದ ಅವು ನನ್ನ

ಮನಸ್ಸನ್ನು ಆಕರ್ಷಿಸಿದ್ದುವು. ದೂರದಿಂದಲೇ ಮಾಸ್ತಿಯವರನ್ನು ಕಂಡು ಅವರ ಮಾತುಗಳನ್ನಾಲಿಸಿದ ಆ ಸಮ್ಮೇಳನದ ಮಂಟಪದಲ್ಲಿ ಕುಳಿತಾಗಲೇ ಅವರ ತೆಂಗಾಳಿಯ ಮೊದಲ ನುಡಿಯನ್ನು ಮನಸ್ಸಿನಲ್ಲಿಯೇ ಮೆಲುಕು ಹಾಕಿದೆ.

"ಬಾರ ಮುಂಬೇಸಗೆಯ ಮೆಲುನಡೆಯ ಮಾರುತ
ಬಾರಯ್ಯ ಮಧುಮಾಸದೈತರವ ಸಾರುತ
ಬಾರ ಲೋಕಕೆ ಹರಿಸದ್ಯೆಸಿರಿಯ ಬೀರುತ
ಬಾರ ಸೊಗಸಿನ ತೆರನ ಜನಕೆಲ್ಲ ತೋರುತ"

ಈ ಕವಿತೆಯ ಭಾವ ನಾನು ಅಂದು ಕಂಡ ಮಾಸ್ತಿಯವರ ರೂಪದಲ್ಲಿ ಸಹಜವಾಗಿಯೇ ನೆಲೆಯೂರಿ ನಿಂತುಬಿಟ್ಟಿತು.

೧೯೪೫ರಲ್ಲಿ ನಾನು ಮ್ಯಾಟ್ರಿಕ್ (ಈಗಿನ ಎಸ್.ಎಸ್.ಎಲ್.ಸಿ.) ವಿದ್ಯಾರ್ಥಿಯಾಗಿದ್ದಾಗ ಧಾರವಾಡದಲ್ಲಿ ಬೇಂದ್ರೆಯವರ ಐವತ್ತನೆಯ ಹುಟ್ಟಿದಹಬ್ಬದ ಸಮಾರಂಭ. ಮಾಸ್ತಿಯವರು ಅದಕ್ಕೆ ಅಧ್ಯಕ್ಷರಾಗುವರೆಂದು ಕೇಳಿ ರಜೆಗೆ ಊರಿಗೆ ಹೋಗಿದ್ದವನು ಮರಳಿ ಧಾರವಾಡಕ್ಕೆ ಬಂದೆ. ಆಗ ಮಾಸ್ತಿಯವರನ್ನು ಇನ್ನಿಷ್ಟು ಹತ್ತಿರದಿಂದ ನೋಡುವ, ಕೇಳುವ ಸುಸಂಧಿ ಒದಗಿತು. ಅಂದಿನ ಭಾಷಣಗಳಲ್ಲಿ ಮಾಸ್ತಿಯವರು ಬೇಂದ್ರೆಯವರನ್ನು ತಮ್ಮನೆಂದೂ, ಬೇಂದ್ರೆಯವರು ಮಾಸ್ತಿಯವರನ್ನು ಅಣ್ಣನೆಂದೂ ಸಂಬೋಧಿಸಿದ್ದನ್ನು ಕೇಳಿ ಇವರು ನಿಜವಾಗಿಯೂ ಅಣ್ಣ-ತಮ್ಮಂದಿರೇ ಇರಬಹುದೇನೋ ಎಂದು ನನಗೆ ಅನಿಸದೆ ಇರಲಿಲ್ಲ. ಆದರೆ ನೋಡಲು ಅವರಿಬ್ಬರ ಮುಖ, ವೇಷಭೂಷಣ, ಮಾತಿನ ರೀತಿ ತೀರ ಭಿನ್ನವಾಗಿದ್ದವು.

ಮಾಸ್ತಿಯವರನ್ನು ಹೀಗೆ ಎರಡನೆಯ ಸಲ ಧಾರವಾಡದ ಸಭೆಯಲ್ಲಿ ಬೇಂದ್ರೆಯವರ ಜೊತೆಗೆ ಕಂಡೆ.

೧೯೪೭ರಲ್ಲಿ ನಾನು ಕರ್ನಾಟಕ ಕಾಲೇಜಿನಲ್ಲಿ ಇಂಟರಮೀಡಿಯೇಟ್ ಕ್ಲಾಸಿನಲ್ಲಿದ್ದಾಗ ಕರ್ನಾಟಕ ಸಂಘ 'ಶ್ರೀನಿವಾಸರ ಸಣ್ಣಕತೆಗಳು' ಬಗ್ಗೆ ಪ್ರಬಂಧ ಸ್ಪರ್ಧೆಯನ್ನೇರ್ಪಡಿಸಿದ್ದಿತು. ಆ ನಿಮಿತ್ತವಾಗಿ ಅದುವರೆಗೆ ಪ್ರಕಟವಾದ ಮಾಸ್ತಿಯವರ ಸಣ್ಣ ಕತೆಗಳನ್ನೆಲ್ಲ ಓದುವ ಭಾಗ್ಯ ನನ್ನದಾಯಿತು. ಸ್ಪರ್ಧೆಯಲ್ಲಿ ಐವತ್ತು ರೂ. ಗಳ ಬಹುಮಾನವೂ ದೊರೆಯಿತು. ಆ ಕಾಲಕ್ಕೆ ಅದೇನೂ ಸಣ್ಣ ಮೊತ್ತವಾಗಿರಲಿಲ್ಲ. ಆ ಹೊತ್ತಿಗೆ ನಾನು ಆಗಲೆ ಕವಿತೆ ಬರೆಯಲು ಪ್ರಾರಂಭಿಸಿದ್ದೆ. ಒಂದೆರಡು ಕವಿತೆಗಳು ಬಸವನಾಳರ 'ಜಯಕರ್ನಾಟಕ'ದಲ್ಲಿಯೂ, ಬೆಟಗೇರಿಯವರ 'ಜಯಂತಿ'ಯಲ್ಲಿಯೂ ಪ್ರಕಟವಾಗಿದ್ದವು. ನೋಡೋಣವೆಂದು ಒಂದು ಕವಿತೆಯನ್ನು ಮಾಸ್ತಿಯವರ ಜೀವನಕ್ಕೂ ಕಳಿಸಿಕೊಟ್ಟೆ. ಅದು ಪ್ರಕಟವಾಗುತ್ತದೆಂಬ ಭರವಸೆಯೇ ನನಗಿರಲಿಲ್ಲವಾದ್ದರಿಂದ ಆ ಬಗ್ಗೆ ನಾನು ಯಾರಿಗೂ ಹೇಳಿರಲಿಲ್ಲ. ಮುಂದಿನ ತಿಂಗಳು ನನ್ನ ಗೆಳೆಯರೊಬ್ಬರು 'ಜೀವನ'ದಲ್ಲಿ ನನ್ನ ಕವಿತೆಯನ್ನು ನೋಡಿದ್ದಾಗಿ ಬಂದು ಹೇಳಿದರು. ನನಗೆ ನಂಬಲು ಸಾಧ್ಯವಾಗಲಿಲ್ಲ, ವಾಚನಾಲಯಕ್ಕೆ ಧಾವಿಸಿದೆ. ಹೌದು, ನನ್ನ 'ಕಾಡಮಲ್ಲಿಗೆ' ಕವಿತೆ

'ಜೀವನ'ದಲ್ಲಿ ಪ್ರಕಟವಾಗಿತ್ತು. ಆಗ ಕಾಗದದ ಮುಗ್ಗಟ್ಟಿನಿಂದಾಗಿ 'ಜೀವನ' ಖಾಕಿಯ ಬಣ್ಣದ ಕಾಗದದಲ್ಲಿ ಅಚ್ಚಾಗುತ್ತಿತ್ತು. ಆದರೂ ನನ್ನ ಕವಿತೆ ಪ್ರಕಟವಾದ ಆ ಸಂಚಿಕೆ ನನಗೆ ಅತ್ಯಂತ ಸುಂದರವಾಗಿಯೇ ಕಂಡಿತು. ಮುಂದೆ ಸುಮಾರು ಹತ್ತು ವರ್ಷಗಳವರೆಗೂ ನನ್ನ ಕವಿತೆಗಳು 'ಜೀವನ'ದಲ್ಲಿ ಆಗೀಗ ಪ್ರಕಟವಾಗುತ್ತಲೇ ಬಂದವು. ಜನಪದ ಕಾವ್ಯದ ಸಂಗ್ರಹದಲ್ಲಿ ತೊಡಗಿದ್ದ ನನ್ನ ಆತ್ಮೀಯ ಗೆಳೆಯ ಶಿವೇಶ್ವರ ದೊಡ್ಡಮನಿಯವರ 'ಜನಪದ ಸಾಹಿತ್ಯದಲ್ಲಿ ಜೀವನ ಸೌಂದರ್ಯ' ಎಂಬ ಲೇಖನ ಮಾಲೆಗೂ 'ಜೀವನ' ಸಾಕಷ್ಟು ಇಂಬುಗೊಟ್ಟಿತು. ಹೀಗೆ ನಮ್ಮಿಬ್ಬರಿಗೂ 'ಜೀವನ'ದಿಂದ ದೊರೆತ ಪ್ರೋತ್ಸಾಹ ಮರೆಯಲಾರದಂತಹದು.

೧೯೪೯ರಲ್ಲಿ ನಾನು ಜ್ಯೂ.ಬಿ.ಎ. ದಲ್ಲಿದ್ದಾಗ ಹಿರೇಮಲ್ಲೂರು ಈಶ್ವರನ್ ಅವರು ಹುಬ್ಬಳ್ಳಿಯ ಕಾಮರ್ಸ್ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿ ಒಂದೆರಡು ವರ್ಷಗಳಾಗಿದ್ದವು. ಧಾರವಾಡದಲ್ಲಿ ಅವರು ಪ್ರಾರಂಭಿಸಿದ 'ಕಲ್ಪನಾ ಗ್ರಂಥಮಾಲೆ'ಯ ಆಫೀಸಿನ ಕೋಣೆಯನ್ನೇ ನನ್ನ ವಾಸಕ್ಕಾಗಿ ಕೊಡಮಾಡಿದ್ದರು. ಅವರ ಸ್ನೇಹ ನನಗೆ ಆಗ ಒದಗಿಬಂದದ್ದು ಒಂದು ಯೋಗಾಯೋಗ. ಅದೇ ವರ್ಷ ಅವರು ತಮ್ಮ ಕಾಲೇಜಿನ ಕರ್ನಾಟಕ ಸಂಘದ ಉದ್ಘಾಟನೆಗೆ ಮಾಸ್ತಿಯವರನ್ನು ಅತಿಥಿಗಳಾಗಿ ಬರಮಾಡಿಕೊಂಡರು. ಕಾಲೇಜಿನ ಹಾಸ್ಟೆಲ್ಲಿನಲ್ಲಿಯ ಒಂದು ವಿಶಾಲವಾದ ಕೋಣೆಯಲ್ಲಿಯೇ ಈಶ್ವರನ್ ವಾಸವಾಗಿದ್ದರು. ಅವರು ಮೊದಲಿನಿಂದಲೂ ಒಳ್ಳೇ ಶಿಸ್ತುಗಾರರು. ಮಾಸ್ತಿಯವರನ್ನು ಅದೇ ಕೋಣೆಯಲ್ಲಿ ಇಳಿಸಿಕೊಂಡಿದ್ದರೆಂದು ನೆನಪು. ಅಲ್ಲಿ ಮಾಸ್ತಿಯವರಿಗೆ ಈಶ್ವರನ್, 'He is our budding Poet' ಎಂದು ನನ್ನನ್ನು ಪರಿಚಯ ಮಾಡಿಕೊಟ್ಟರು. 'ಈಶ್ವರನ್ already bloomed' ಎಂದುಬಿಟ್ಟರು ಮಾಸ್ತಿ. ನಾನು ಅವಾಕ್ಕಾದೆ. ನನ್ನ ಕೆಲವು ಕವಿತೆಗಳನ್ನು 'ಜೀವನ'ದಲ್ಲಿ ಪ್ರಕಟಿಸಿದ್ದ ಅವರು ಅವುಗಳನ್ನು ಇಷ್ಟು ಮೆಚ್ಚಿಕೊಂಡಿದ್ದಾರೆಂದು ನಾನು ನಿಜಕ್ಕೂ ಭಾವಿಸಿರಲಿಲ್ಲ. ಅಷ್ಟೇ ಅಲ್ಲ, ಅವರು ನನ್ನನ್ನು ಹತ್ತಿರದ ಕುರ್ಚಿಯಲ್ಲಿ ಕುಳ್ಳಿರಿಸಿಕೊಂಡು 'ಚನ್ನವೀರಪ್ಪ ತುಂಬಾ ಚೆನ್ನಾಗಿ ಬರೀತಾನೆ' ಎಂದು ಮೈದಡವುತ್ತ 'ತರುಣರು ಮುಂದೆ ಬರಬೇಕು. ಕನ್ನಡದ ಕೆಲಸ ಹತ್ತುಪಟ್ಟು ನೂರುಪಟ್ಟು ಬೆಳೆಯಬೇಕು' ಎಂದು ಮುಖ ಹಿಗ್ಗಲಿಸಿ ಹೇಳುತ್ತ ಸೌಮ್ಯವಾಗಿ ನಗೆಯರಳಿಸಿದರು. ಅಂಥ ನಿರ್ಮಲವಾದ ನಗೆಯನ್ನು ನಾನು ಅದುವರೆಗೆ ಎಲ್ಲೂ ಕಂಡಿರಲಿಲ್ಲವೇನೊ ಎನಿಸಿತು. ಮೃದುವಾದ ಸ್ಪರ್ಶದಿಂದ ಅವರು ನನ್ನನ್ನು ತಮ್ಮ ಹೃದಯದಲ್ಲಿಯೇ ಹುದುಗಿಸಿಕೊಳ್ಳುತ್ತಾರೇನೋ ಎಂಬ ಭಾವನೆಯನ್ನು ತಂದುಕೊಟ್ಟರು. ಕೃತಜ್ಞತಾ ಭಾವದಿಂದ ನಮ್ರನಾಗಿ ಹೋಗಿದ್ದ ನನಗೆ ಆಗ ಏನು ಮಾತನಾಡಬೇಕೊ ಹೊಳೆಯಲೇ ಇಲ್ಲ. ಅದು ನನ್ನ ಜೀವನದಲ್ಲಿಯ ಒಂದು ಚಿರಸ್ಮರಣೀಯವಾದ ಅನುಭವ. ಈಶ್ವರನ್ ಅವರ ಅಂದಿನ ಸಭೆ ಹುಬ್ಬಳ್ಳಿಯ ನಗರ ಸಭಾಭವನದಲ್ಲಿ ಪ್ರೊ. ಮಾಳವಾಡರ ಅಧ್ಯಕ್ಷತೆಯಲ್ಲಿ ನಡೆಯಿತು. ಮಾಸ್ತಿಯವರ ಮಾತಿನ ಮೋಡಿಯಲ್ಲಿ ಸಭಿಕರು ತಮ್ಮನ್ನೇ ತಾವು ಮರೆತುಬಿಟ್ಟಿದ್ದರು. ಆ ಸಂದರ್ಭದಲ್ಲಿ ಧಾರವಾಡದಲ್ಲಿಯೂ ಒಂದೆರಡು ಕಡೆ ಅವರ ಭಾಷಣಗಳಾದವು. ಕನ್ನಡದ ಬಗ್ಗೆ ಕಳಕಳಿಯಂತೂ ಸರಿಯೆ, ನಮ್ಮ ಸಾಹಿತ್ಯದ ಪರಂಪರೆಯನ್ನು ಅರ್ಥಮಾಡಿಕೊಳ್ಳಬೇಕಾದ ರೀತಿ, ನಮ್ಮ

ಜನದ, ನಾಡಿನ ಸಂಸ್ಕೃತಿಯ ತಿರುಳನ್ನು ಎತ್ತಿತೋರಿಸುವ ಬಗೆ, ಜೀವನದಲ್ಲಿ ಅನುಭವ, ಅನುಕಂಪಗಳಿಗೆ ಅವರಿಗಿದ್ದ ವಿಶೇಷ ಒಲವು-ಇವೆಲ್ಲವೂ ನಯವಿನಯದ ಅವರ ತಿಳಿಯಾದ ಮಾತಿನಲ್ಲಿ ತಳತಳಿಸುತ್ತಿದ್ದವು. 'ನಾಲಗೆ ಚಿಗುರುತ್ತಿರೆ ಸವಿದುದೊಂದು ಗಿಳಿ ತನಿವಣ್ಣಂ' ಎಂದು ಹರಿಹರ ಕವಿಯ ಬಣ್ಣನೆಯನ್ನು ಓದಿದ್ದೆ. ಆದರೆ ಮಾಸ್ತಿಯವರ ಮಾತುಗಳನ್ನು ಕೇಳುತ್ತಿದ್ದಂತೆ ನಮ್ಮ ಕಿವಿಗಳೂ ಚಿಗುರತೊಡಗುವುದಲ್ಲದೆ ಮನಸ್ಸು ಮಲ್ಲಿಗೆಯಂತೆ ಅರಳಿ ಮಾತಿಗೆ ಮೀರಿದ ಸುಖವನ್ನನುಭವಿಸಿದಂತಾಗುತ್ತದೆ. 'ಪರಮಾತ್ಮನುಂಟು ಸುಖದೊಳು' ಎಂದು 'ತೆಂಗಾಳಿ'ಯಲ್ಲಿ ಅವರೇ ಹಾಡಿದ್ದಾರೆ.

ಇಲ್ಲಿ ಕಾರ್ಯಕ್ರಮಗಳನ್ನೆಲ್ಲ ಮುಗಿಸಿ ಇನ್ನೇನು ಬೆಂಗಳೂರಿಗೆ ಹಿಂದಿರುಗಬೇಕೆನ್ನುವಷ್ಟರಲ್ಲಿ ಅವರಿಗೆ ಜ್ವರ ಕಾಣಿಸಿಕೊಂಡಿತು. ಕಾಲಿಗೆ ಮುಳ್ಳು ಚುಚ್ಚಿದ್ದೊ, ಚಪ್ಪಲಿ ಒತ್ತಿದ್ದೊ ನೆಪವಾಗಿ ಕಾಲಿನ ಬೆರಳು ಬಾತುಕೊಂಡಿತ್ತು. ಅನಿವಾರ್ಯವಾಗಿ ಅವರು ತಮ್ಮ ಪ್ರವಾಸವನ್ನು ರದ್ದುಪಡಿಸಿ ಕೆಲದಿನ ಇಲ್ಲಿಯೇ ಉಳಿಯಬೇಕಾಯಿತು. ಕರ್ನಾಟಕ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿದ್ದ ಎಸ್.ಆರ್. ಮಳಗಿಯವರ ಮನೆಯಲ್ಲಿಯೇ ಡಾ. ಕಮಲಾಪೂರ ಅವರಿಂದ ಅವರಿಗೆ ಶುಶ್ರೂಷೆ ಸುರುವಾಯಿತು. ಪ್ರೊ. ಮಾಳವಾಡರು, ಎನ್ಕೆ ದೀಕ್ಷಿತ ವಕೀಲರು ಹಾಗೂ ಊರೊಳಗಿನ ಸಾಹಿತಿಗಳು ದಿನವೂ ಬಂದು ಅವರ ಆರೋಗ್ಯದ ಬಗ್ಗೆ ವಿಚಾರಿಸಿಕೊಂಡು ಹೋಗುತ್ತಿದ್ದರು. 'ಅತಿಥಿಗಳಾಗಿ ಧಾರವಾಡಕ್ಕೆ ಬಂದಾಗ ಹೀಗೆ ಅಸ್ವಸ್ಥರಾಗಿ ಮಲಗಬೇಕಾಯಿತಲ್ಲ' ಎಂದು ಎಲ್ಲರ ಮನಸ್ಸಿನಲ್ಲಿಯೂ ಕೊರೆಯತೊಡಗಿತು. ಆಗ ದಿನಕ್ಕೆ ಮೂರು ಹೊತ್ತು ಅವರಿಗೆ ಔಷಧಿ ಕುಡಿಸುವ ಕೆಲಸ ನನ್ನ ಪಾಲಿಗೆ ಬಂದಿತ್ತು. ಇದರಿಂದ ನಾನು ಅವರಿಗೆ ಇನ್ನಷ್ಟು ಸಮೀಪದವನಾಗಿಬಿಟ್ಟೆ. ಇಷ್ಟುದಿನ ಗೆಲುವಿನಿಂದ ಕೂಡಿದ ಅವರ ಮುಖದಿಂದ ಸರಸವಾದ ವೀಣಾವಾಣಿಯನ್ನು ಕೇಳಿದ ನಾನು ಈಗ ಅವರು ಆಗಾಗ 'ಅಪ್ಪಾ ಶ್ರೀನಿವಾಸ' ಎಂದು ಮೆಲ್ಲಗೆ ನರಳುವದನ್ನು ಕೇಳಿದಾಗೆಲ್ಲ ನನ್ನ ಜೀವವೇ ಹಿಡಿದಂತಾಗುತ್ತಿತ್ತು. ಮುಂದೆ ಒಂದು ವಾರದಲ್ಲಿ ಬೆಂಗಳೂರಿನಿಂದ ಶ್ರೀಮತಿ ಪಂಕಜಮ್ಮನವರು ಬಂದರು. ಮಾಸ್ತಿಯವರ ಶುಶ್ರೂಷೆಯನ್ನು ಈಗ ಪೂರ್ತಿ ಅವರೇ ವಹಿಸಿಕೊಂಡರು. 'ನನ್ನಿಂದ ಇವರಿಗೆಲ್ಲ ಎಷ್ಟು ತೊಂದರೆಯಾಯಿತಲ್ಲ' ಎಂದು ಒಳಗೊಳಗೇ ಮಿಡುಕುತ್ತಿದ್ದ ಮಾಸ್ತಿಯವರಿಗೂ ಒಂದಿಷ್ಟು ನೆಮ್ಮದಿಯೆನಿಸಿತು. ಅವರು ಪಂಕಜಮ್ಮನವರಿಗೆ ಹೇಳಿದರು. 'ಚನ್ನವೀರಪ್ಪ ನನಗೆ ದಿನವೂ ಅಮೃತ ಕುಡಿಸುತ್ತಿದ್ದ'. ನಾಲ್ಕುದಿನ ಔಷಧಿ ಕುಡಿಸಿದ ನನ್ನ ಕಿಂಚಿತ್ ಸೇವೆಯನ್ನು ಮಾಸ್ತಿಯವರು ಎಷ್ಟು ದೊಡ್ಡದಾಗಿ ಭಾವಿಸಿಬಿಟ್ಟರಲ್ಲ ಎಂದು ನನಗೆ ಆಶ್ಚರ್ಯವಾಯಿತು. ಅವರ ಹೃದಯವೈಶಾಲ್ಯಕ್ಕೆ, ಅಂತಃಕರಣದ ಅಮೌಲ್ಯ ನಿಧಿಗೆ ನಾನು ಮಾರುವೋದೆ.

ಮಾಸ್ತಿಯವರು ಗುಣಮುಖರಾಗಿ ಬೆಂಗಳೂರಿಗೆ ಮರಳಿದ ಮೇಲೆ ಅಷ್ಟು ದಿನ ಉಳಿದಿದ್ದ 'ಜೀವನ' ಪತ್ರಿಕೆಯ ಕೆಲಸದಲ್ಲಿ ಮತ್ತೆ ಯಥಾ ಪ್ರಕಾರ ಮುಳುಗಿದರು. ನನ್ನ ಕವಿತೆಗಳ ಬಗ್ಗೆ ಅವರು ವ್ಯಕ್ತಪಡಿಸಿದ್ದ ಮೆಚ್ಚುಗೆಯಿಂದ ಉತ್ತೇಜಿತನಾಗಿ ನನ್ನ ಕವನಗಳನ್ನು ಸಂಗ್ರಹರೂಪದಲ್ಲಿ

ಪ್ರಕಟಿಸಲು ಯೋಚಿಸಿದಾಗ ಹಿರೇಮಲ್ಲೂರು ಈಶ್ವರನ್ ಅವರು ತಮ್ಮ ಕಲ್ಪನಾ ಗ್ರಂಥಮಾಲೆಯಲ್ಲಿ ಅದನ್ನು ಪ್ರಕಟಿಸಲು ಮುಂದಾದರು. ಆಗ ನಾನು ಮಾಸ್ತಿಯವರಿಗೆ ಈ ವಿಷಯವನ್ನು ತಿಳಿಸಿ ಮತ್ತು ಅವರ ಆರೋಗ್ಯವನ್ನು ವಿಚಾರಿಸಿ ಕಾಗದ ಬರೆದೆ. ಅವರು ತಮ್ಮ ಕೆಲಸದಲ್ಲಿ ಬಿಡುವು ಮಾಡಿಕೊಂಡು ದಿ. ೨೦-೫-೧೯೪೯ರಂದು ಅದಕ್ಕೆ ಉತ್ತರ ಬರೆದರು; ದ್ರಾಕ್ಷಿಯ ಬಳ್ಳಿಯಂತಿರುವ ಅವರ ಹಸ್ತಾಕ್ಷರಗಳನ್ನು ಮೊಟ್ಟಮೊದಲು ನೋಡಿದೆ.

ಪ್ರಿಯ ಮಿತ್ರರೆ,

ಕಳೆದ ತಿಂಗಳ ನಿಮ್ಮ ಕಾಗದಕ್ಕೆ ಈಗ ಉತ್ತರ ಬರೆಯುತ್ತಿದ್ದೇನೆ. ಸಾವಕಾಶ ಮಾಡಿರುವುದನ್ನು ದಯವಿಟ್ಟು ಕ್ಷಮಿಸಿರಿ.

ಈಗ ನಾನು ಎಂದಿನಂತೆ ಆರೋಗ್ಯವಾಗಿದ್ದೇನೆ. ಅಲ್ಲಿಂದ ಬಂದವನು ಅಲ್ಲಿ ನನ್ನನ್ನು ನೋಡಿಕೊಂಡ ಎಲ್ಲ ಗೆಳೆಯರಿಗೂ ಕಾಗದ ಬರೆಯಲಾಗಲಿಲ್ಲ, ನಾಲ್ಕು ಕಾಗದ ಬರೆದು ಆ ಮಿತ್ರರನ್ನು ಎಲ್ಲರಿಗೂ ತಿಳಿಸಲು ಬೇಡಿದೆ.

ನಿಮ್ಮ ಕವನ ಸಂಗ್ರಹ ಅಚ್ಚಾಗುತ್ತಿದೆಯನ್ನುವುದು ಸಂತೋಷ. ನೀವು ಸಹಜವಾಗಿ ಬರೆಯುವುದರಿಂದ ಬರಹ ಚೆನ್ನಾಗುತ್ತದೆ. ಕಾವ್ಯ ಚೆನ್ನವಾಗುವುದಕ್ಕೆ ಇದು ಮೂಲ ಕಾರಣ. ಈ ಗುಣವನ್ನು ಕಾದುಕೊಂಡರೆ ಉಳಿದೆಲ್ಲ ಗುಣ ಜೊತೆಗೂಡಿ ಬರುತ್ತವೆ.

ನೀವು ಜೀವನ ಪತ್ರಿಕೆಗೆ ಕೆಲವು ಚಂದಾದಾರರನ್ನು ಸೇರಿಸಿಕೊಡಿರಿ. ಲೇಖಕರಿಗೆ ಕಾಸು ಕೊಡಬೇಕೆಂದು ಮೊದಲು ಮಾಡಿದ ಪತ್ರಿಕೆ ಅದೊಂದು ಗುರಿಯನ್ನು ತೀರಾ ಸಾಧಿಸದೆ ಸೋತಿದೆ. ನಿಮ್ಮಂಥ ಮಿತ್ರರು ಜನರನ್ನು ಬೇಡಿ, ಕಾಡಿ ಅದರ ಪ್ರಸಾರವನ್ನು ಸಾಧಿಸಬೇಕು. ಹಾಗಿಲ್ಲದ ನಾನು ಅದರ ಗುರಿಯನ್ನು ಮುಟ್ಟಲಾರೆ.

ಪತ್ರಿಕೆಯನ್ನು ನೋಡುತ್ತಿದ್ದೀರಾ? ಅದು ನಿಮಗೆ ಒಪ್ಪಿಗೆಯೆಂದು ತಿಳಿಯುತ್ತೇನೆ. ಶ್ರೀ ಶಿವೇಶ್ವರರು ಮುಂತಾಗಿ ಎಲ್ಲ ಗೆಳೆಯರಿಗೆ ನನ್ನ ನಮಸ್ಕಾರ ತಿಳಿಸಿರಿ.

ಇಂತು ನಿಮ್ಮ
ಮಾಸ್ತಿ ವೆಂಕಟೇಶ ಅಯ್ಯಂಗಾರ

ಲೇಖಕರಿಗೆ ಗೌರವಧನ ಕೊಡಲು ಸಾಧ್ಯವಾಗದೆ ಇದ್ದುದಕ್ಕೆ ಅವರ ಮನಸ್ಸು ತುಂಬ ಚಡಪಡಿಸುತ್ತಿತ್ತು. ಗೆ. ಶಿವೇಶ್ವರ ದೊಡ್ಡಮನಿ ವಿಷಮ ಜ್ವರದಿಂದ ಹಾಸಿಗೆ ಹಿಡಿದಾಗ 'ಜೀವನ'ದಲ್ಲಿ ಅವರು ಬರೆಯುತ್ತಿದ್ದ ಲೇಖನಮಾಲೆ ನಿಂತುಹೋಗಿತ್ತು. ಅವರ ಅನಾರೋಗ್ಯದ ಬಗ್ಗೆ ತಿಳಿದ ಮೇಲೆ ಮಾಸ್ತಿಯವರು ಸ್ವಲ್ಪ ಹಣವನ್ನು ಕಳಿಸಿಕೊಟ್ಟರು. ಅಷ್ಟರಲ್ಲಿ ಶಿವೇಶ್ವರ ತೀರಿಕೊಂಡಿದ್ದರಿಂದ ಆ ಹಣ ವಾಪಸ್ಸಾಯಿತು. "ಎಷ್ಟು ಒಳ್ಳೆಯ ಜೀವ, ಎಷ್ಟು ಎಳೆತನದಲ್ಲಿ ಹೋಗಿಬಿಟ್ಟರು" ಎಂದು ಮಾಸ್ತಿಯವರು ಮರುಗಿದರು.

* * * *

೧೯೫೨ರಲ್ಲಿ ನನ್ನ ಮದುವೆಯಾಗಿ, ಕರ್ನಾಟಕ ವಿಶ್ವವಿದ್ಯಾಲಯದ ಪ್ರಸಾರಾಂಗದಲ್ಲಿ (ಆಗ ವ್ಯಾಸಂಗ ವಿಸ್ತರಣ ಮತ್ತು ಪ್ರಕಟನ ವಿಭಾಗ) ಕೆಲಸಕ್ಕೆ ಸೇರಿದ್ದು ಮಾಸ್ತಿಯವರಿಗೆ ಸಂತೋಷವನ್ನುಂಟು ಮಾಡಿತ್ತು. ನಾನು ಬೆಂಗಳೂರಿಗೆ ಹೋದಾಗ ಎಷ್ಟೋ ಸಲ ಅವರ ಮನೆಗೆ ಹೋಗಿ ಅವರನ್ನು ಭೇಟಿಯಾಗಿ ಬರುತ್ತಿದ್ದೆ. ಪ್ರತಿಸಲವೂ ಅದೇ ಪ್ರೀತಿಯಿಂದ ಎಡಗೈಯನ್ನು ನನ್ನ ಬೆನ್ನ ಮೇಲೆ ಇರಿಸುತ್ತ, ನಸುಬಾಗಿ ಮನೆಯವರೂ ಮಕ್ಕಳೂ ಕ್ಷೇಮವೇ, ಮಾವನವರು ಸೌಖ್ಯವೇ ಎಂದು ವಿಚಾರಿಸಿದೆ ಇರುವುದಿಲ್ಲ. ನನ್ನ ಮಾವಂದಿರಾದ ಸಿದ್ಧಬಸಪ್ಪ ಗಿಡ್ನವರ (ಕಂದಾಯಇಲಾಖೆಯಲ್ಲಿ ಅಧಿಕಾರಿಗಳಾಗಿದ್ದರು) ಪ್ರಾರಂಭದ ಸಂಚಿಕೆಯಿಂದ ಮಾಸ್ತಿಯವರು ಬೇರೆಯುವರಿಗೆ ಅದನ್ನು ವಹಿಸಿಕೊಡುವವರೆಗೂ 'ಜೀವನ'ಕ್ಕೆ ಚಂದಾದಾರರಾಗಿದ್ದರು. ಆದ್ದರಿಂದ ಅವರ ಬಗ್ಗೆ ಮಾಸ್ತಿಯವರಿಗೆ ಬಹಳ ಅಭಿಮಾನ.

ಮನೆಗೆ ಹೋದಾಗ ಕಾಫಿಯ ಆತಿಥ್ಯವಂತೂ ಸರಿಯೆ. ಬರಿಗೈಯಿಂದ ಅವರು ಹಾಗೆಯೇ ಕಳಿಸಿದವರಲ್ಲ. ಈಚೆಗೆ ಪ್ರಕಟವಾದ ತಮ್ಮ ಯಾವುದಾದರೊಂದು ಪುಸ್ತಕದ ಪ್ರತಿಯನ್ನಾದರೂ ಕೊಡುತ್ತಾರೆ. ಈ ವಯಸ್ಸಿನಲ್ಲಿಯೂ ಕನ್ನಡಕದ ಅಗತ್ಯವಿಲ್ಲದೆ ಆ ಪುಸ್ತಕದಲ್ಲಿ, 'ಪ್ರಿಯ ಮಿತ್ರರು ಶ್ರೀ ಚನ್ನವೀರ ಕಣವಿ ಇವರಿಗೆ ಪ್ರೀತಿಯಿಂದ, ಶ್ರೀನಿವಾಸ' ಎಂದು ಬರೆಯುವದಕ್ಕೆ ಮರೆಯುವುದಿಲ್ಲ. ಈಚೆಗೆ ೧೯೭೭ರಲ್ಲಿ ಪ್ರಕಟವಾದ 'ಕಾಳಿದಾಸ' ನಾಟಕದ ಪ್ರತಿಯನ್ನು ನೀಡಿದರು. ೧೯೮೦ರಲ್ಲಿ ಹೋದಾಗ 'ಸಣ್ಣಕಥೆಗಳು ೧೪' ಬಂದಿತ್ತು. ಈ ಕಥಾಸಂಕಲನವನ್ನು ಕೊಡುವಾಗ ಶ್ರೀಮತಿ ಕಣವಿ ಕತೆಗಾರ್ತಿಯೆಂಬುದನ್ನು ಜ್ಞಾಪಿಸಿಕೊಂಡು ಅವರ ಹೆಸರನ್ನೂ ಅದರಲ್ಲಿ ಸೇರಿಸಿ ಬರೆದುಕೊಟ್ಟರು.

ಕರ್ನಾಟಕ ವಿಶ್ವವಿದ್ಯಾಲಯದ ಕುಲಪತಿ ಡಾ. ಡಿ.ಸಿ. ಪಾವಟೆಯವರು ೧೯೫೬ರಲ್ಲಿ ವಿಶ್ವವಿದ್ಯಾಲಯದ ಘಟಿಕೋತ್ಸವಕ್ಕೆ ಮಾಸ್ತಿಯವರನ್ನೂ ಹಳಕಟ್ಟಿಯವರನ್ನೂ ಬರಮಾಡಿಕೊಂಡು ಅವರಿಗೆ ಗೌರವ ಡಾಕ್ಟರೇಟ್ ಪದವಿ ನೀಡಿ ಗೌರವಿಸಿದಾಗ ನಮಗೆಲ್ಲ ಹಿಡಿಸಲಾರದಷ್ಟು ಹಿಗ್ಗು. ಆ ವರ್ಷ ಕರ್ನಾಟಕ ರಾಜ್ಯೋದಯದ ಹರ್ಷ. "This is a historic occasion. The dreams of the people of this part of the country to have all Kannada speaking people under one administration have been realised by the Grace of God" ಎಂದೇ ಡಾ. ಪಾವಟೆಯವರು ತಮ್ಮ ಸ್ವಾಗತ ಭಾಷಣವನ್ನು ಪ್ರಾರಂಭಿಸಿದ್ದರು. ವಿಶ್ವವಿದ್ಯಾಲಯ ಸ್ಥಾಪನೆಗೊಂಡು ಏಳು ವರ್ಷಗಳಲ್ಲಿ ಗೌರವ ಡಾಕ್ಟರೇಟ್ ಪದವಿ ಪ್ರದಾನ ಪ್ರಾರಂಭವಾದದ್ದೂ ಅದೇ ವರುಷ. ಆ ಪರ್ವಕಾಲದಲ್ಲಿ ಘಟಿಕೋತ್ಸವ ಭಾಷಣ ಮಾಡುವ ಗೌರವ ಮಾಸ್ತಿಯವರಿಗೆ ದೊರೆತಿತ್ತು. ಮಾಸ್ತಿಯವರು ಅದನ್ನು ಕನ್ನಡದಲ್ಲಿಯೇ ನೆರವೇರಿಸಿದಾಗಲಂತೂ ನಮ್ಮ ಸಂತೋಷಕ್ಕೆ ಪೂರವೇ ಬಂದಿತ್ತು. "ಇದುವರೆಗೆ ಬರಿಯ ಶ್ರೀಮಾನ್ ಎಂದು ಕರೆದುಕೊಂಡು ಇನ್ನು ಮುಂದೆ ಡಾಕ್ಟರ್ ಶ್ರೀಮಾನ್ ಕರೆದುಕೊಳ್ಳಬಹುದಾಯಿತು ಎಂಬ ಭಾವನೆಯಿಂದ ನನಗೇನು ಬಹಳ ಸಂತೋಷವಾಗಿದೆಯೆಂದು ಹೇಳಲಾರೆ. ಆದರೆ ನನ್ನ ತಾಯಿನಾಡು ನನ್ನ ಭಾಷಾಸೇವೆಯನ್ನು ಎಷ್ಟುಮಟ್ಟಿಗಾದರೂ ಮೆಚ್ಚಿಕೊಂಡಿತು ಎಂಬ

ಭಾವನೆಯಿಂದ ನನ್ನ ಸಂತೋಷ ತುಂಬಿದೆ. ನಮ್ಮ ವಿಶ್ವವಿದ್ಯಾಲಯಗಳು ಇಂಥ ಮೆಚ್ಚಿಕೆ ತೋರಿಸುವಲ್ಲಿ ನಮ್ಮ ಜನತೆಯ ಅಧಿಕೃತ ಪ್ರತಿನಿಧಿಗಳಾಗುತ್ತವೆ" ಎಂದು ಸಂತೋಷಕ್ಕೆ ಕಾರಣವನ್ನು ನಿವೇದಿಸಿದ ಮಾಸ್ತಿಯವರು "ಕನ್ನಡದ ಜನತೆಯ ಜೀವನದಲ್ಲಿ ಕನ್ನಡದ ಸ್ಥಾನ ಯಾವುದಾಗಿರಬೇಕು ? ಕೇಳಬೇಕೆ? ಇಂಗ್ಲಿಷ್ ಜನರ ಜೀವನದಲ್ಲಿ ಇಂಗ್ಲಿಷ್ ಭಾಷೆಗೆ ಯಾವುದೊ, ಫ್ರೆಂಚ್ ಜನರ ಜೀವನದಲ್ಲಿ ಫ್ರೆಂಚ್ ಭಾಷೆಯ ಸ್ಥಾನ ಯಾವುದೊ ಆ ಸ್ಥಾನ ಕನ್ನಡ ಜನರ ಜೀವನದಲ್ಲಿ ಕನ್ನಡ ಭಾಷೆಗೆ ಇರಬೇಕು. ಈಗ ನಾವು ಈ ಸ್ಥಾನದ ಎಷ್ಟು ಹತ್ತಿರಕ್ಕೆ ಸಾರಿದ್ದೇವೆ?" ಎಂದು ಪ್ರಶ್ನಿಸಿ ಅದನ್ನು ವಿಶ್ಲೇಷಿಸಿದರು. ಇಪ್ಪತ್ತೆರಡು ಪುಟಗಳ ಅವರ ಭಾಷಣ ಯಾರಿಗೂ ಬೇಸರವುಂಟುಮಾಡಲಿಲ್ಲ. ಮಾತನಾಡಿದ ಹಾಗೆಯೆ ಅವರು ಅದನ್ನು ಓದಿದರು. ನಮ್ಮ ರಾಜ್ಯದ ವಿಶ್ವವಿದ್ಯಾಲಯಗಳಲ್ಲಿ ಘಟಿಕೋತ್ಸವ ಭಾಷಣ ಕನ್ನಡದಲ್ಲಿ ನಡೆದದ್ದು ಅದೇ ಮೊದಲು ಎಂದು ತೋರುತ್ತದೆ.

ಮುಂದೆ ಹತ್ತು ವರುಷಗಳ ನಂತರ ೧೯೬೬ರಲ್ಲಿ ಕುವೆಂಪು ಅವರಿಗೆ ಗೌರವ ಡಾಕ್ಟರೇಟ್ ಪದವಿ ನೀಡಿದ ಸಂದರ್ಭದಲ್ಲಿ ಪದವೀದಾನ ಸಮಾರಂಭದ ಪ್ರತಿಯೊಂದು ಕಾರ್ಯಕ್ರಮವೂ ಕನ್ನಡದಲ್ಲಿಯೇ ನಡೆಯಿತು. (ಹಾಗೆ ನಡೆಯಬೇಕೆಂದು ಕುವೆಂಪು ಕರಾರು ಹಾಕಿದ್ದರು.) ಇಂದಿಗೂ ಅದೇ ಸತ್‌ಸಂಪ್ರದಾಯ ಮುಂದುವರಿದಿದೆ. ಈ ದಿಸೆಯಲ್ಲಿಯೂ ಕರ್ನಾಟಕ ವಿಶ್ವವಿದ್ಯಾಲಯವೇ ಪ್ರಥಮವೆನಿಸಿದ್ದು ವೈಯಕ್ತಿಕವಾಗಿ ನನಗೆ ಹೆಮ್ಮೆಯ ಸಂಗತಿ. ೧೯೫೬ರಲ್ಲಿ ಮಾಸ್ತಿಯವರು ಕನ್ನಡದಲ್ಲಿ ಘಟಿಕೋತ್ಸವ ಭಾಷಣ ಮಾಡಿದ್ದೇ ಇದಕ್ಕೆ ನಾಂದಿಯಾಯಿತೆಂದರೆ ತಪ್ಪಾಗದು.

ಮಾಸ್ತಿಯವರು ಮತ್ತೆ ಧಾರವಾಡಕ್ಕೆ ಬಂದದ್ದು ಹದಿಮೂರು ವರ್ಷಗಳ ತರುವಾಯ ೧೯೭೦ರಲ್ಲಿ ಕುಟುಂಬ ಯೋಜನೆಯ ಕವಿಸಮ್ಮೇಳನಕ್ಕೆ ಅಧ್ಯಕ್ಷರಾಗಿ. ನಾಡಿನ ಮಹತ್ವದ ಕವಿಗಳೆಲ್ಲರೂ ಇದರಲ್ಲಿ ಭಾಗವಹಿಸಿದ್ದರು. ಮಾಸ್ತಿಯವರ ಸಾನ್ನಿಧ್ಯ ಮಹಿಮೆಯಿಂದ ಅದು ಸರಕಾರದ ಪ್ರಚಾರ ಸಭೆಯೆಂಬ ಭಾವನೆ ಎಳ್ಳಷ್ಟೂ ಬರಲಿಲ್ಲ. ಅಲ್ಲದೆ ಅಂದು ಸಭೆಯಲ್ಲಿ ಓದಿದ ಕವಿತೆಗಳು ಕಾವ್ಯಗುಣದಲ್ಲೂ ಮಿಗಿಲಾಗಿದ್ದವು. ಆ ಕಾರ್ಯಕ್ರಮವನ್ನು ತುಂಬ ಗಾಂಭೀರ್ಯದಿಂದ, ಅಷ್ಟೇ ಅಲ್ಲದೆ, ಮಾಸ್ತಿಯವರಿಗೇ ಮೀಸಲಾದ ಸರಸ ವಿನೋದದಿಂದ ಅವರು ನಡೆಸಿಕೊಟ್ಟರಲ್ಲದೆ ಪ್ರಸ್ತುತ ವಿಷಯಕ್ಕೆ ಸಂಬಂಧಪಟ್ಟಂತೆ ತಾವೂ ಒಂದು ಒಳ್ಳೆಯ ಪದ್ಯವನ್ನು ಓದಿದರು. ಕವಿತೆ ಓದುವ ನನ್ನ ಸರದಿ ಬಂದಾಗ ಮಾಸ್ತಿಯವರು ನನ್ನನ್ನು ಸಭೆಗೆ ಪರಿಚಯಿಸುತ್ತ ನಾನು ಹಿಂದೆ ಮಗುವಿನ ಬಗ್ಗೆ ಬರೆದ ವಾತ್ಸಲ್ಯ ಗೀತವೊಂದರ ಕೆಲವು ಸಾಲುಗಳನ್ನು ಉದಾಹರಿಸಿ ಸಭಿಕರನ್ನು ನಗೆಗಡಲಿನಲ್ಲಿ ತೇಲಿಸಿದರು. ಎಷ್ಟೋ ವರ್ಷಗಳ ಹಿಂದೆ ಜೀವನದಲ್ಲಿ ಪ್ರಕಟವಾಗಿದ್ದ ಆ ಪದ್ಯದ ಸಾಲುಗಳನ್ನು ಅವರು ನೆನಪಿಟ್ಟಿದ್ದು ನನಗೆ ತುಂಬ ಆಶ್ಚರ್ಯವನ್ನುಂಟುಮಾಡಿತು.

ಮಾಸ್ತಿಯವರಿಗೆ ಜ್ಞಾನಪೀಠ ಪ್ರಶಸ್ತಿ ಸಂದಾಗ ಇಡಿಯ ಕನ್ನಡ ನಾಡೇ ಸಂತೋಷಪಟ್ಟಿತು. ಈ ಪ್ರಶಸ್ತಿ ಅವರಿಗೆ ಎಂದೋ ಸಲ್ಲಬೇಕಾಗಿತ್ತು ಎಂಬ ಭಾವನೆ ಸಾಮಾನ್ಯವಾಗಿ ಎಲ್ಲರಲ್ಲಿಯೂ

ಒಡಮೂಡಿದ್ದು ಮಾಸ್ತಿಯವರ ಹಿರಿಮೆಯನ್ನೇ ಎತ್ತಿತೋರಿಸುತ್ತದೆ. ಈ ಸಂದರ್ಭದಲ್ಲಿ ಅ.ಕ. ಕೇಂದ್ರ ಕನ್ನಡ ಕ್ರಿಯಾ ಸಮಿತಿಯು ಧಾರವಾಡದಲ್ಲಿ ಸಭೆಗೂಡಿ ನಾಡಿನ ಪರವಾಗಿ ಅಭಿನಂದನೆಗಳನ್ನು ಸಲ್ಲಿಸಿತ್ತು. ಈಗ ಕ್ರಿಯಾ ಸಮಿತಿ ತನ್ನ ನಿರ್ಣಯ ತಿಳಿಸಿ ಅವರಿಗೆ ಬರೆದ ಪತ್ರಕ್ಕೆ ೯೪ರ ಆ ವಯಸ್ಸಿನಲ್ಲಿಯೂ ಸ್ವಹಸ್ತಾಕ್ಷರಗಳಲ್ಲಿಯೇ ತಮ್ಮ ಕೃತಜ್ಞತೆಯ ಪತ್ರವನ್ನು ಬರೆದರು.

ಪ್ರಿಯ ಮಿತ್ರರೆ, ನಮಸ್ಕಾರ,

೨೭-೬-೮೪ರ ತಮ್ಮ ಪತ್ರ ಸಕಾಲದಲ್ಲಿ ಮುಟ್ಟಿತು.

ತಮ್ಮ ಮತ್ತು ಕ್ರಿಯಾ ಸಮಿತಿಯ ಅಭಿನಂದನೆಗಾಗಿ ನನ್ನ ಹೃತ್ಪೂರ್ವಕ ವಂದನೆ. ತಾವೂ ತಮ್ಮ ನಗರದ ಹಿರಿಯರೂ ಸದಾಕಾಲ ನನ್ನನ್ನು ಅಕ್ಕರೆಯಿಂದ ನಡೆಸಿಕೊಂಡಿದ್ದೀರಿ. ಹೀಗಿರುವಲ್ಲಿ ಈ ಸಂದರ್ಭದಲ್ಲಿ ನಿಮ್ಮ ನಿರ್ಣಯದ ಅಕ್ಕರೆಯ ಮಾತನ್ನಾಡಿಸುವುದು ಸಹಜವಾಗಿದೆ.

ನಮ್ಮ ಜನರ ಅಕ್ಕರೆ, ದೇವರು ನನಗೆ ಅನುಗ್ರಹಿಸಿರುವ ಭಾಗ್ಯದ ಮುಖ್ಯ ಭಾಗ. ನನ್ನ ವಂದನೆಯ ಮಾತನ್ನು ಮಿತ್ರರಿಗೆಲ್ಲ ತಿಳಿಸೋಣವಾಗಲಿ. ದೇವರು ತಮಗೆಲ್ಲ ಸದಾಕಾಲ ಶುಭವನ್ನು ನೀಡಲಿ.

ನಮಸ್ಕಾರ

ಮಾಸ್ತಿ

ಮರಳಿ:

ಮುತ್ತಿನಂತಹ ಮಾತುಗಳನ್ನು ಬರೆದಿರುವ ತಮ್ಮ ಬರಹದ ಅಕ್ಷರಗಳೂ ಮುತ್ತಿನಂತಿವೆ.

ಮಾಸ್ತಿ

ಪ್ರಗತಿಶೀಲ ಸಾಹಿತ್ಯದ ಆಂದೋಲನದ ಕಾಲಕ್ಕೆ ಹಾಗೂ ಸಾಹಿತ್ಯ ಪರಿಷತ್ತಿಗೆ ಸಂಬಂಧಪಟ್ಟಂತೆ ಕೆಲವು ಲೇಖಕರು ಮಾಸ್ತಿಯವರನ್ನು ದುಡುಕಿನಿಂದ ಟೀಕಿಸಿದ್ದುಂಟು. ಆ ಸಂದರ್ಭದಲ್ಲಿ ಮಾಸ್ತಿಯವರು ಸ್ವಭಾವ ಸಹಜವಾದ ಸಂಯಮವನ್ನು ಕಾಪಾಡಿಕೊಂಡು ಗಂಭೀರವಾಗಿಯೇ ವರ್ತಿಸಿದರು. ಉತ್ತರ ಕೊಡುವ ಪ್ರಸಂಗ ಬಂದಾಗ ನಯವಾಗಿಯೇ ತಮ್ಮ ವಿಚಾರಗಳನ್ನು ಪ್ರಕಟಿಸಿದರು. ಹಾಗೆ ಟೀಕಿಸಿದ ಆ ಲೇಖಕರಿಗೆ ಕೆಲಕಾಲದ ನಂತರ ತಮ್ಮ ತಪ್ಪಿನ ಅರಿವಾದದ್ದು ಒಂದು ಒಳ್ಳೆಯ ಸಂಗತಿ.

"ನಾನೂ ಮಾಸ್ತಿಯವರೂ ಕೆಲವು ಸಲ ವಾದಿ ಪ್ರತಿವಾದಿಗಳಾಗಿ ಹೋರಾಡಿದ್ದೇವೆ. ವಾದದ ಮಾತು ಹೃದಯವನ್ನು ಕಲುಷಿತ ಮಾಡಿಲ್ಲ. ಹೇಳದೆ ಧರ್ಮವ ಕಲಿಸುವ ಗುರುವಾಗಿ ಪ್ರೇಯಸ್ಸಿನ ಮಾರ್ಗದಲ್ಲಿ ಶ್ರೇಯಸ್ಸಿಗೆ ಒಯ್ದಿದ್ದಾರೆ ಮಾಸ್ತಿಯವರು ಹಲವು ಮಿತ್ರರ ಬಾಳನ್ನು" ಎಂದು ಅ.ನ.ಕೃ ಬರೆದರು. "ಪ್ರಗತಿಶೀಲತೆಯ ಬಿರುಗಾಳಿ ಬೀಸಿದಾಗ ಉಳ್ಳವರ ಸುಖ ಸಂತೋಷಗಳನ್ನಷ್ಟೆ ಶ್ರೀನಿವಾಸರು ಚಿತ್ರಿಸುತ್ತಾರೆ ಎಂಬ ಟೀಕೆ ಕೇಳಿಬಂತು. ಇದೆಷ್ಟು ಹಾಸ್ಯಾಸ್ಪದ

ಎಂಬುದಕ್ಕೆ ಶ್ರೀನಿವಾಸರು ಚಿತ್ರಿಸಿದ ಪಾತ್ರಗಳ ಕುಲಗೋತ್ರಗಳ ಪಟ್ಟಿಯೊಂದೇ ಸಾಕು" ಎಂದು ನಿರಂಜನರು ಮಾಸ್ತಿಯವರ ಮಾನವೀಯತೆಯನ್ನು ಸಮರ್ಥಿಸಿದರು. "ಅವರ ಕೃತಿಗಳಲ್ಲಿ ಬಡವರ ಜೀವನದ ಚಿತ್ರಣವೇ ಇಲ್ಲ, ಅವರು ಪ್ರತಿಗಾಮಿಗಳು, ಸಂಪ್ರದಾಯಶೀಲರು- ಎಂದೆಲ್ಲ ಟೀಕೆ ಬರುತ್ತಿತ್ತು. ಅದು ಸಾಧುವಾದ ಟೀಕೆಯಲ್ಲವೆನ್ನುವದು ನನಗೆ ಕೆಲದಿನಗಳಲ್ಲಿಯೇ ಮನವರಿಕೆಯಾಯಿತು" ಎಂದಿರುವ ಬಸವರಾಜ ಕಟ್ಟೀಮನಿಯವರು ಅವರ ವಿರುದ್ಧವಾಗಿ ನಡೆದ ಚಳುವಳಿಯಿಂದ ತಾವು ದೂರ ಸರಿದದ್ದನ್ನು ದಾಖಲಿಸಿದ್ದಾರೆ. "೧೯೪೪-೪೫ರಲ್ಲಿ ಪ್ರಗತಿಶೀಲ ಸಾಹಿತ್ಯದ (ಬಿರು)ಗಾಳಿ ಎದ್ದಾಗ ಒಗರು ತುಂಬಿದ ಯುವಕರಾಗಿದ್ದ ನಾವು ಶ್ರೀ ಮಾಸ್ತಿಯವರ ಬರವಣಿಗೆಯನ್ನು ಕಟುವಾಗಿ ಟೀಕಿಸಿದ್ದುಂಟು. ನಮ್ಮದು ಅನುದಾರವಾದ ಖಂಡನೆ ಎಂದು ಈಗ ನನಗೆ ಅನಿಸುತ್ತಿದೆ" ಎಂದು ಕೋ. ಚನ್ನಬಸಪ್ಪ ತಮ್ಮ ಪ್ರಾಮಾಣಿಕತೆಯನ್ನು ವ್ಯಕ್ತಪಡಿಸಿದ್ದುಂಟು.

* * * *

ಎರಡು ಸಂದರ್ಭಗಳಲ್ಲಿ ಮಾತ್ರ ಮಾಸ್ತಿಯವರ ಮನಸ್ಸು ಕ್ಷೋಭೆಗೊಂಡದ್ದು ಹಾಗೂ ಸಹನೆಯನ್ನು ಕಳೆದುಕೊಂಡದ್ದು ಒಡೆದು ಕಾಣುತ್ತದೆ. ಹಿಂದೆ ೧೯೫೦ರಲ್ಲಿ ಅವರ 'ಚನ್ನಬಸವ ನಾಯಕ' ಕಾದಂಬರಿಯನ್ನು ಕೇಂದ್ರ ಸಾಹಿತ್ಯ ಅಕಾಡೆಮಿ ಇನ್ನುಳಿದ ಭಾರತೀಯ ಭಾಷೆಗಳಿಗೆ ಅನುವಾದಿಸಿ ಪ್ರಕಟಿಸಬೇಕೆಂದಾಗ ಅದಕ್ಕೆ ಪ್ರತಿಭಟನೆ ವ್ಯಕ್ತಗೊಂಡು ಅದರ ಭಾಷಾಂತರ ಕಾರ್ಯವನ್ನು ಅಕಾಡೆಮಿ ಹಿಂತೆಗೆದುಕೊಂಡಿತು. ಎರಡನೆಯದಾಗಿ ಮಾಸ್ತಿಯವರಿಗೆ ಜ್ಞಾನಪೀಠ ಪ್ರಶಸ್ತಿ ಕೊಡುವಾಗ ಆಯ್ಕೆ ಸಮಿತಿಯವರು 'ಚಿಕ್ಕವೀರ ರಾಜೇಂದ್ರ' ಕಾದಂಬರಿಯನ್ನು ಆಯ್ಕೆ ಮಾಡಿದ್ದು ವಾಗ್ವಾದಕ್ಕೆ ಗುರಿಯಾದದ್ದು. "ಇವು ಕನ್ನಡದ ಅತ್ಯುತ್ತಮ ಕಾದಂಬರಿಗಳೇ?" ಎಂಬ ಪ್ರಶ್ನೆ ಎದ್ದಿತು. ಒಂದು ಕೃತಿ ಸಾಹಿತ್ಯಿಕ ಮಟ್ಟದ ಚರ್ಚೆಗಳಿಗೆ ಆಸ್ಪದವೀಯುವುದರಲ್ಲಿ ತಪ್ಪೇನಿಲ್ಲ, ಆದರೆ ಆಡಾಡುತ್ತ ಅದು ಅಡ್ಡ ಹಾದಿ ಹಿಡಿಯುವಂತಾಗಬಾರದೆಂಬುದು ಮುಖ್ಯ. ನಿಜವಾದ ವಿಮರ್ಶೆಯಿಂದ ಕೃತಿಯ ಗುಣಗಳು ಇನ್ನಿಷ್ಟು ಬೆಳಕಿಗೆ ಬರುತ್ತವೆಯೇ ವಿನಃ ಕೃತಿಗೆ ಯಾವ ಅಪಚಾರವೂ ಆಗಲಾರದು. ನಮ್ಮ ಸಂಸ್ಕೃತಿಯಲ್ಲಿಯ ಒಳ್ಳೆಯದನ್ನೇ ಯಾವಾಗಲೂ ಎತ್ತಿಹಿಡಿಯುತ್ತ ಸಾಹಿತ್ಯದಲ್ಲಿ ಅದಕ್ಕೆ ಕೃತಿಯ ರೂಪು ಕೊಡುತ್ತ ಬಂದಿರುವ ಹಾಗೂ ನಾಡಿನ ಸಂಸ್ಕೃತಿಯ ಒಂದು ಅವಿಭಾಜ್ಯ ಭಾಗವಾಗಿ ಸಾಹಿತ್ಯವನ್ನು ನೋಡುತ್ತಿರುವ ಮಾಸ್ತಿಯವರು, ದುಷ್ಟತನವೇ ಪ್ರಧಾನವಾಗಿರುವ ವಸ್ತುವನ್ನು ತಮ್ಮ ಈ ಕಾದಂಬರಿಗಳಿಗೆ ಆರಿಸಿಕೊಂಡಿರುವುದು ಕೆಲವರಿಗೆ ಆಶ್ಚರ್ಯದ ಸಂಗತಿಯಾಗಿ ಪರಿಣಮಿಸಿತು. ಹಾಗೆ ನೋಡಿದರೆ ಅವರ ಇನ್ನುಳಿದ ಯಾವ ಕೃತಿಯಲ್ಲಿಯೂ ದುರಂತ ದೃಷ್ಟಿ ಕಂಡು ಬರುವದಿಲ್ಲ. ಆದರೆ ಈ ಎರಡು ಐತಿಹಾಸಿಕ ವಸ್ತುವಿಗಾಗಿ ಅವರು ಸಾಕಷ್ಟು ಪರಿಶ್ರಮಪಟ್ಟಿರುವುದೇನೂ ಸುಳ್ಳಲ್ಲ. ಅಲ್ಲದೆ ಈ ಕತೆಯನ್ನು ಬರೆಯುವ ಯೋಜನೆ ಎಷ್ಟೋ ವರ್ಷಗಳ ಹಿಂದಿನಿಂದಲೇ ಅವರ ಮನಸ್ಸಿನಲ್ಲಿ ಹೊಳಹುಗೊಂಡು ಬಂದದ್ದು. ಇದೆಲ್ಲವೂ ನಿಜ. ಆದರೂ ಇವು ಪ್ರಶಸ್ತಿಗೆ ಯೋಗ್ಯವಾದ

ಕೃತಿಗಳಲ್ಲ ಎಂಬುದು ಕೆಲವರ ಅಭಿಪ್ರಾಯ. ಇಂಥ ಪ್ರಶಸ್ತಿಗಳು ದೊರೆಯುವ ಸಂದರ್ಭದಲ್ಲಿ ಯಾವುದೊ ಒದು ಕೃತಿಯನ್ನು ಹೆಸರಿಸಿದರೂ ಆ ಸಾಹಿತಿಯ ಒಟ್ಟು ಕೊಡುಗೆಯನ್ನು ಪರಿಗಣಿಸಲೇಬೇಕಾಗುತ್ತದೆ. ಆ ದೃಷ್ಟಿಯಿಂದ ಮಾಸ್ತಿಯವರದು ಪ್ರಥಮ ಪಂಕ್ತಿಯೆಂಬುದನ್ನು ಯಾರೂ ಅಲ್ಲಗಳೆಯಲಾರರು. ಅವರದು ಎಷ್ಟೋ ಬಗೆಯ ನೋವುಗಳ ಸಂಸ್ಕಾರದಿಂದ ಹದಗೊಂಡ ದೊಡ್ಡ ಜೀವ. ಅಂಥವರು ಈ ಸಂದರ್ಭದಲ್ಲಿ ಆಕ್ರೋಶಕ್ಕೆ ಒಳಗಾದರು ಎಂದು ಹೇಳಿದರೆ ನಂಬುವುದು ಕಷ್ಟ. 'ಚೆನ್ನಬಸವ ನಾಯಕ' ಕಾದಂಬರಿಯಲ್ಲಿ ನಗರದ ನೇಮಯ್ಯನ ಪಾತ್ರಕ್ಕೆ ಸಂಬಂಧಪಟ್ಟಂತೆ ಈ ಮಾತು ಬರುತ್ತದೆ "ಶ್ರುತಿಯಾಗಿರುವ ವಾದ್ಯವನ್ನು ಚೇಷ್ಟೆಗೆಂದು ಮುಟ್ಟಿದರೂ ಸ್ವರ ಶ್ರುತಿಯಲ್ಲಿಯೇ ಹೊರಡುವಂತೆ ಸ್ವಭಾವ ಪರಿಶುದ್ಧವಾದ ಮೇಲೆ ಮನುಷ್ಯನ ಮಾತು ಎಂಥ ಹೊತ್ತಿನಲ್ಲಿಯೂ ಶುದ್ಧವಾಗಿಯೇ ಇರುವುದು."

ಸಂಪ್ರದಾಯ ಮನೋಭಾವಕ್ಕೂ ಹೊಸಮೌಲ್ಯಗಳಿಗೂ ಘರ್ಷಣೆ ನಡೆದರೆ ಮಾಸ್ತಿಯವರು ಬಹುಶಃ ಸಂಪ್ರದಾಯಕ್ಕೆ ಒಲಿದಾರು. 'ಭಾವ'ದ ಮುನ್ನುಡಿಯ ಕೊನೆಯಲ್ಲಿ ಅವರು ಹೀಗೆ ನುಡಿದಿದ್ದಾರೆ. "ನನ್ನ ಬಾಳಿನಲ್ಲಿ ತಪ್ಪೇನಾಗಿದೆ ಇದಕ್ಕೆಲ್ಲ ನನ್ನ ಸ್ವಭಾವ ಕಾರಣ; ಒಳಿತೇನಾಗಿದೆ ಅದೆಲ್ಲದರ ಕಾರಣ ದೈವ ಕೃಪೆ."

(ಸಮತೋಲನ ೧೯೮೯)
ಸಾಹಿತ್ಯ ಸಮಾಹಿತ ೨೦೦೭

೨

## ವರಕವಿಯೊಂದಿಗೆ ಒಡನಾಟ : ಕೆಲವು ನೆನಪುಗಳು

ನಾನು ಹಾಯ್‌ಸ್ಕೂಲ್ ವಿದ್ಯಾರ್ಥಿಯಾಗಿ ಧಾರವಾಡಕ್ಕೆ ಕಾಲಿಟ್ಟಿದ್ದು ೧೯೪೫ರಲ್ಲಿ. ಆಗ ತಾನೆ ಸಾಹಿತ್ಯದಲ್ಲಿ ಒಲವು ಚಿಗುರುತ್ತಿದ್ದ ನನಗೆ ನಾನು ವಾಸಿಸುತ್ತಿದ್ದ ಮುರುಘಾಮಠ ವಚನ ಸಾಹಿತ್ಯದಲ್ಲಿ ಅಭಿರುಚಿ ಹುಟ್ಟಿಸಿದರೆ, ಕರ್ನಾಟಕ ವಿದ್ಯಾವರ್ಧಕ ಸಂಘ, ಆಧುನಿಕ ಕನ್ನಡ ಸಾಹಿತ್ಯ ಹಾಗೂ ಕನ್ನಡ ನಾಡು, ನುಡಿ, ಸಂಸ್ಕೃತಿಯ ಬಗ್ಗೆ ನನ್ನ ಅರಿವನ್ನು ಹೆಚ್ಚಿಸಿತು. ಧಾರವಾಡದ ಅನೇಕ ಹಿರಿಯ ಸಾಹಿತ್ಯಜ್ಞರು ಇಂದಿಗೂ ನನಗೆ ಸ್ಮರಣೀಯರಾಗಿದ್ದರೂ ಕಾವ್ಯರಚನೆಯಲ್ಲಿ ಆಸ್ಥೆತಳೆದಿದ್ದ ನನಗೆ ಬೇಂದ್ರೆಯವರ ವ್ಯಕ್ತಿತ್ವ ವಿಶೇಷವಾಗಿ ಆಕರ್ಷಿಸಿತಲ್ಲದೆ ಕೊನೆಯವರೆಗೂ ವರ್ಧಿಸುತ್ತಲೇ ಬಂದಿತು. ಹಳ್ಳಿಯಲ್ಲಿ ಹುಟ್ಟಿ ಬೆಳೆದು, ಅಲ್ಲಿಯ ಜಾನಪದ ಸಂಸ್ಕಾರದೊಂದಿಗೆ ಬಂದ ನನಗೆ ಬೇಂದ್ರೆ ಪರಕೀಯರೆಂದೆನಿಸಲೇ ಇಲ್ಲ. ಸಭೆಗಳಲ್ಲಿ, ಭಾಷಣನಂತರ ತಮ್ಮದೇ ಆದ ಧಾಟಿಯಲ್ಲಿ ಹಾವಭಾವದೊಂದಿಗೆ, ಬಲಗೈಯನ್ನು ಮೇಲೆತ್ತಿ ಆಡಿಸುತ್ತ ಕಾವ್ಯವಾಚನ ಮಾಡುತ್ತಿದ್ದ ಅವರ ರೀತಿಯೇ ಅಪೂರ್ವವಾಗಿತ್ತು. 'ಪಾತರಗಿತ್ತಿ ಪಕ್ಕ', 'ಶ್ರಾವಣ ಬಂತು', 'ಬೆಳುದಿಂಗಳ ನೋಡ', 'ತುಂಬಿ ಬಂದಿತ್ತ', 'ಭೃಂಗದ ಬೆನ್ನೇರಿ ಬಂತು', ಇವೇ ಮೊದಲಾದ, ಇನ್ನೂ ಹಲವಾರು ಕವಿತೆಗಳು ಅವುಗಳನ್ನು ಪುಸ್ತಕಗಳಲ್ಲಿ ಓದುವ ಮೊದಲೇ ನಮ್ಮ ಮನಸ್ಸನ್ನು ಆವರಿಸಿಕೊಂಡು ಬಿಟ್ಟವು. ಅಲ್ಲದೆ, ಅವರ ಕವಿತೆಗಳನ್ನು ಹೇಗೆ ಓದಿಕೊಳ್ಳಬೇಕು ಎಂಬುದನ್ನು ಅದು ಪರ್ಯಾಯವಾಗಿ ಸೂಚಿಸುವಂತಿತ್ತು. ಆಗ ಕಾವ್ಯಗಾಯನಕ್ಕೆ ಮೊದಲು ಮಾಡಿದ ಪಿ.ಆರ್. ಭಾಗವತರು ಬೇಂದ್ರೆಯವರ ಕವಿತೆಗಳ ಹಾಡುಗಾರಿಕೆಯಿಂದಲೇ ಜನಪ್ರಿಯರಾದರು. ಮುಂದೆ ನಾಲ್ಕೈದು ವರ್ಷಗಳಲ್ಲಿ 'ಗರಿ', 'ಸಖೀಗೀತ', 'ಉಯ್ಯಾಲೆ', 'ನಾದಲೀಲೆ', 'ಮೇಘದೂತ' ಮೊದಲಾದ ಸಂಗ್ರಹಗಳನ್ನು ಓದುತ್ತ ಹೋದಂತೆ ಬೇಂದ್ರೆ ನನ್ನ ಅತ್ಯಂತ ಮೆಚ್ಚಿನ ಕವಿಯಾಗಿಬಿಟ್ಟರು. ಅದೇ ಕಾಲಕ್ಕೆ ದೂರದಲ್ಲಿದ್ದ ಕುವೆಂಪು ಅವರ ಕಾವ್ಯವನ್ನು ನಾನು ಅಷ್ಟೇ ಶ್ರದ್ಧೆಯಿಂದ ಓದಿದೆ. ಮಧುರಚೆನ್ನರ 'ನನ್ನನಲ್ಲ' ಆಗಲೇ ನನ್ನ ಮನಸ್ಸನ್ನು ಸೂರೆಗೊಂಡಿತ್ತು. ನವೋದಯದ ಈ ಹಿರಿಯರನ್ನೆಲ್ಲ ನಾನು ಸಮಾನ ಗೌರವದಿಂದ ಕಾಣುತ್ತಿದ್ದೆನಾದ್ದರಿಂದ ಆ ಬಗ್ಗೆ ಯಾವ ದ್ವಂದ್ವವನ್ನೂ ನಾನು ಅನುಭವಿಸಲಿಲ್ಲ.

* * * *

೧೯೪೬ರಲ್ಲಿ ನಾನು ಕರ್ನಾಟಕ ಆರ್ಟ್ಸ್ ಕಾಲೇಜಿನ ಪ್ರಥಮ ವರ್ಷದ ವಿದ್ಯಾರ್ಥಿಯಾಗಿದ್ದೆ. ಅದೇ ವರ್ಷ ಬೇಂದ್ರೆಯವರ ೫೦ನೆಯ ಹುಟ್ಟುಹಬ್ಬದ ಸಮಾರಂಭ ಧಾರವಾಡ ನಗರಸಭೆಯ ಅಟ್ಟದ ಮೇಲೆ ನೆರವೇರಿತು. ಕಿಕ್ಕಿರಿದ ಆ ಸಭೆಯಲ್ಲಿ ಕೂಡ್ರಲು ಸ್ಥಳವಿಲ್ಲದೆ ನಾನು ಕೊನೆಯವರೆಗೂ ನಿಂತುಕೊಂಡೇ ಕಾರ್ಯಕ್ರಮವನ್ನು ವೀಕ್ಷಿಸಿದೆ. ಮುದವೀಡು ಕೃಷ್ಣರಾಯರು 'ಕುಣಿಯೋಣುಬಾರ' ಕವಿತೆಯನ್ನೋದಿ ತಮ್ಮ ಮನೆಯ ಅಟ್ಟದಲ್ಲಿ ಬೇಂದ್ರೆಯವರನ್ನು ಅಪ್ಪಿಕೊಂಡು ಕುಣಿದಾಡಿದ್ದನ್ನು ನೆನಪಿಸಿಕೊಂಡರು. ಅಧ್ಯಕ್ಷತೆ ವಹಿಸಿದ್ದ ಮಾಸ್ತಿಯವರನ್ನು ಬೇಂದ್ರೆಯವರು ಅಣ್ಣನೆಂದು ಸಂಬೋಧಿಸಿ ಮಾತನಾಡುತ್ತ ಸಾಹಿತ್ಯ ಸಂಬಂಧದೊಂದಿಗೆ ಆರ್ಥಿಕವಾಗಿಯೂ ಅವರು ತಮಗೆ ನೆರವಾಗಿದ್ದನ್ನು ಸ್ಮರಿಸಿಕೊಳ್ಳುತ್ತ ಆಡಿದ ಒಂದು ಮಾತು ಇನ್ನೂ ನನ್ನ ನೆನಪಿನಲ್ಲಿದೆ. 'ಮನೆಯಲ್ಲಿ ಎಷ್ಟೇ ಬಡತನವಿದ್ದರೂ ನನ್ನ ಕೈಯೊಳಗಿನ ಬಕ್ಕರಿಯಲ್ಲಿ ಬೆಣ್ಣೆಯ ಮುದ್ದೆ ಎಂದೂ ತಪ್ಪಿರಲಿಲ್ಲ' ಎಂದು ತಾವು ಅನುಭವಿಸಿದ ಮಾತೃವಾತ್ಸಲ್ಯವನ್ನು ನೆನೆದುಕೊಂಡರು. ಕೊನೆಯಲ್ಲಿ 'ನಾವು ಬರತೇವಿನ್ನ ನಂ ನಮಸ್ಕಾರ ನಿಮಗ' ಎಂಬ 'ಧಾರವಾಡದ ತಾಯಿ' ಕವಿತೆಯನ್ನೋದಿದಾಗ ಸಭೆ ಅದನ್ನು ಉತ್ಕಂಠೆಯಿಂದ ಆಲಿಸಿತು. (ಎರಡು ವರ್ಷದ ಹಿಂದೆಯೇ ಅವರು ಸೊಲ್ಲಾಪುರದ ಡಿ.ಎ.ವ್ಹಿ. ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ಕೆಲಸಕ್ಕೆ ಸೇರಿದ್ದರು)

* * * *

ನಾನು ಜ್ಯೂ. ಬಿ.ಎ.ದಲ್ಲಿದ್ದಾಗ (೧೯೪೯) ನನ್ನ ಪ್ರಥಮ ಕವನಸಂಗ್ರಹ 'ಕಾವ್ಯಾಕ್ಷಿ' ಪ್ರಕಟವಾಯಿತು. ಅದುವರೆಗೂ ಬೇಂದ್ರೆಯವರ ಪ್ರತ್ಯಕ್ಷಪರಿಚಯ ನನಗಿರಲಿಲ್ಲ. ಮುನ್ನುಡಿ ಬರೆಯಲು ಕೋರಿ ನಾನೂ, ಪ್ರಕಾಶಕರಾದ ಹಿರೇಮಲ್ಲೂರು ಈಶ್ವರನ್ ಅವರೂ ಬೇಂದ್ರೆಯವರಿಗೆ ಸೊಲ್ಲಾಪುರಕ್ಕೆ ಪತ್ರ ಬರೆದೆವು. ಮುಂದೆ ಒಂದು ವಾರದಲ್ಲಿ ಮುನ್ನುಡಿ ನಮ್ಮ ಕೈಸೇರಿದಾಗ ನಮ್ಮ ಸಂತೋಷಕ್ಕೆ ಪಾರವೇ ಇರಲಿಲ್ಲ. 'ಕವಿಗಳಾದ ಚೆನ್ನವೀರ ಕಣವಿಯವರನ್ನು ಧಾರವಾಡದಲ್ಲಿ ನಾನು ನೋಡಿದ್ದರೂ ನೋಡಿರಬಹುದು. ಆದರೆ ಅವರ ನನ್ನ ಪರಿಚಯವಿಲ್ಲ. ಅವರ ಕವನಗಳನ್ನು ಮಾತ್ರ ಅಲ್ಲಲ್ಲಿ ಮಾಸಪತ್ರಿಕೆಗಳಲ್ಲಿ ಕಂಡಿದ್ದೆ. ಉದಿತವಾದ ಕನ್ನಡದ ಹೊಸ ಹುಮ್ಮಸ್ಸಿನ ದಂಡೆಗೆ ಸೇರಿದ ವೀರರು ಇವರೊಬ್ಬರು ಎಂದು ಗುರುತಿಸಿದ್ದೆ... ಅವರ ಕವನಗಳಲ್ಲಿ ಜೀವಂತಗತಿಯಿದೆ, ಮಾತಿಗೆ ಅಚ್ಚುಕಟ್ಟು ಇದೆ, ಅಲ್ಪ ಸಂತುಷ್ಟಿಯಿಲ್ಲ, ಮಹತ್ತಿನ ಕಡೆಗೆ ಎಳೆತವಿದೆ' ಇತ್ಯಾದಿ ಪ್ರೋತ್ಸಾಹದ ನುಡಿಗಳನ್ನು ಆಡಿದ್ದರು. ಕನ್ನಡದಲ್ಲಿ ಏನು ನಡೆಯುತ್ತಿದೆ, ಯಾರ್‍ಯಾರು ಬರೆಯುತ್ತಿದ್ದಾರೆ, ಯಾವ ಬಗೆಯ ಸಾಹಿತ್ಯ ರಚನೆಯಾಗುತ್ತಿದೆ ಎಂಬ ಬಗ್ಗೆ ಅವರಿಗಿರುವ ಕಾಳಜಿ ಅಪರೂಪದ್ದಾಗಿತ್ತು. ನವೋದಯದ ಹಿರಿಯ ಸಾಹಿತಿಗಳಲ್ಲಿ ಅಂಥ ಸಹೃದಯತೆ ಅನೇಕರಿಗಿದ್ದಿತು. ಅವರಲ್ಲಿ ಬೇಂದ್ರೆ ಅಗ್ರಮಾನ್ಯರಾಗಿ ನನಗೆ ಕಂಡುಬಂದರು.

ಅದೇ ವರ್ಷ (೧೯೪೯) ಬೇಂದ್ರೆ ಮತ್ತು ಗೋಕಾಕರು ಧಾರವಾಡಕ್ಕೆ ಬರಲಿರುವುದು ತಿಳಿಯಿತು. ಆ ಹೊತ್ತಿಗೆ ಸಾಹಿತ್ಯಾಸಕ್ತರಾದ ನಾವು ಕೆಲವು ಗೆಳೆಯರು ಕೀರ್ತಿನಾಥ

ಕುರ್ತುಕೋಟಿ, ಶಂಕರ ಮೊಖಾಶಿ, ವಸಂತ ಕವಲಿ, ಶಿವೇಶ್ವರ ದೊಡ್ಡಮನಿ, ಜಿ.ಎಚ್. ಕಣೇಕಲ್ ಮೊದಲಾದವರು ಕೂಡಿಕೊಂಡು ನಮ್ಮ ಕೋಣೆಯಲ್ಲಿ (ಮಾಳಮಡ್ಡಿಯ ಜೋಗ ವಕೀಲರ ಮನೆಯಲ್ಲಿಯ ಬಾಡಿಗೆಕೋಣೆ) ವಾರಕ್ಕೊಮ್ಮೆ ಸಾಹಿತ್ಯಿಕ ಚರ್ಚೆ, ಕಾವ್ಯವಾಚನ, ವಿಮರ್ಶೆ ಮುಂತಾದ ಚಟುವಟಿಕೆ ಪ್ರಾರಂಭಿಸಿದ್ದೆವು. ನಮ್ಮ ಈ 'ಕಾವ್ಯಾನುಭವ ಮಂಟಪ'ಕ್ಕೆ ಅವರಿಬ್ಬರನ್ನೂ ಆಮಂತ್ರಿಸಲು ಅವರು ಇಳಿದುಕೊಂಡಿದ್ದ ಎಸ್.ಕೆ. ದೀಕ್ಷಿತ್ ವಕೀಲರ ಮನೆಗೆ ಹೋದೆವು. ನಮ್ಮ ಚಟುವಟಿಕೆಗಳನ್ನು ಕೇಳಿ, ಒಂದೆರಡು ತಾಸು ನಮ್ಮೊಡನೆ ಕಳೆಯಲು ಇಬ್ಬರೂ ಸಂತೋಷದಿಂದ ಒಪ್ಪಿಕೊಂಡರು. ಅದೇ ಪ್ರಥಮ ಬಾರಿಗೆ ನನಗೆ ಬೇಂದ್ರೆಯವರ ಪ್ರತ್ಯಕ್ಷ ಪರಿಚಯವಾದದ್ದು. ಅಂದು ಬೇಂದ್ರೆಯವರೂ, ಗೋಕಾಕರೂ ನಮ್ಮೊಡನೆ ಕಾವ್ಯವಾಚನದಲ್ಲಿ ಭಾಗಿಗಳಾಗಿ, ಭಾಷಣಮಾಡಿ ಮೂರು ಗಂಟೆ ಕಳೆದದ್ದು ಇಂದಿಗೂ ಅವಿಸ್ಮರಣೀಯ.

ಬೇಂದ್ರೆಯವರು ನಿವೃತ್ತರಾಗಿ ಧಾರವಾಡಕ್ಕೆ ಮರಳಿ ಬಂದ ಮೇಲೆ ಸಾಧನಕೇರಿ ಹಸಿರು ಮುರಿಯತೊಡಗಿತು. ಹಾಗೆಯೇ ಅವರೊಡನೆ ನನ್ನ ಒಡನಾಟವೂ ಹೆಚ್ಚುತ್ತ ಬಂದಿತು. ಅವರ ೬೦ನೆಯ ಹುಟ್ಟುಹಬ್ಬವನ್ನು ಧಾರವಾಡದ ವಿಜಯ ಟಾಕೀಸಿನಲ್ಲಿ ಡಾ. ಡಿ.ಸಿ. ಪಾವಟೆಯವರ ಅಧ್ಯಕ್ಷತೆಯಲ್ಲಿ ಆಚರಿಸಿದಾಗ ನಾನು ಆ ಸಮಾರಂಭದ ಕಾರ್ಯದರ್ಶಿಯಾಗಿದ್ದೆ. ಹುಕ್ಕೇರಿಕರ ರಾಮರಾಯರು ಸ್ವಾಗತಾಧ್ಯಕ್ಷರಾಗಿದ್ದರು. (ಆ ಸಂದರ್ಭದಲ್ಲಿ ಪ್ರಕಟವಾದ ನನ್ನ 'ದೀಪಧಾರಿ' ಕವನ ಸಂಗ್ರಹವನ್ನು ಬೇಂದ್ರೆಯವರಿಗೆ ಗೌರವಪೂರ್ವಕ ಅರ್ಪಿಸಿದ್ದೆ). ಡಿ.ಸಿ. ಪಾವಟೆಯವರು ಡಿ.ಪಿ.ಆಯ್ ಇದ್ದಾಗ ಬೇಂದ್ರೆಯವರು ಪುಣೆಯಲ್ಲಿ ಒಮ್ಮೆ ಅವರ ಆಫೀಸಿಗೆ ಹೋಗಿದ್ದರಂತೆ. ಬೇಂದ್ರೆಯವರು ತಮ್ಮ ಚೀಟಿಯನ್ನು ಕಳಿಸಿದಾಗ ತಕ್ಷಣ ಪಾವಟೆಯವರೇ ಎದ್ದು ಬಂದು ಬೇಂದ್ರೆಯವರನ್ನು ಒಳಗೆ ಬರಮಾಡಿಕೊಂಡು, 'ನೀವು ಕವಿಗಳು ಅಮರರು, ನನ್ನ ಆಫೀಸಿಗೆ ನೀವು ಬರುವದೇ ಒಂದು ಭಾಗ್ಯ' ಎಂದರಂತೆ. ಬೇಂದ್ರೆಯವರು ಸಭೆಯಲ್ಲಿ ಈ ಮಾತನ್ನು ಹೇಳಿದಾಗ ಸಭೆಗೆ ಸಭೆಯೇ ಹರ್ಷದಿಂದ ಕರತಾಡನ ಮಾಡಿತು. ಕುಲಪತಿಗಳಾದ ಪಾವಟೆಯವರು ಹಾಗೂ ಕವಿವರ ಬೇಂದ್ರೆಯವರು ಅಂದಿನ ಸಮಾರಂಭದಲ್ಲಿ ಪರಸ್ಪರ ಗೌರವಿಸಿದ ರೀತಿ ಧಾರವಾಡದ ಸಂಸ್ಕೃತಿಯ ಪ್ರತೀಕದಂತಿತ್ತು.

* * * *

೧೯೫೭ರಲ್ಲಿ ಪ್ರಕಟವಾದ 'ಅರಳು-ಮರಳು' ಪಂಚಕಾವ್ಯಗುಚ್ಛದ ಬಿಡುಗಡೆ ಸಮಾರಂಭ ಕರ್ನಾಟಕ ವಿದ್ಯಾವರ್ಧಕ ಸಂಘದಲ್ಲಿ ನೆರವೇರಿದಾಗ ಮುರುಘಾಮಠಾಧ್ಯಕ್ಷರಾದ ಮೃತ್ಯುಂಜಯ ಸ್ವಾಮಿಗಳು ಸಭೆಯ ಸಾನ್ನಿಧ್ಯವಹಿಸಿದ್ದು ಒಂದು ವಿಶೇಷ. ಮಠದ ಹೊರಗೆ ಇಂಥ ಸಮಾರಂಭದಲ್ಲಿ ಸ್ವಾಮೀಜಿಯವರು ಭಾಗವಹಿಸಿದ್ದು ಬಹುಶಃ ಅದೇ ಮೊದಲ ಸಲವೆಂದು ನನ್ನ ತಿಳಿವಳಿಕೆ. 'ನಿಮ್ಮರುಳಿನಿಂದ ಮರಮರಳಿ ಅರಳಿ, ಸ್ಫುಟವಾಗಿ ಭಾವಶುದ್ಧ' ಎಂಬ ನುಡಿ 'ಅರಳು-ಮರಳು' ಶಬ್ದದ ಸಾಮಾನ್ಯಾರ್ಥವನ್ನು ಮೀರಿ ಆಧ್ಯಾತ್ಮಿಕ ಸ್ತರದಲ್ಲಿ ವಿಶೇಷಾರ್ಥವನ್ನು ಹೊಮ್ಮಿಸುವ ಬಗೆಯನ್ನು ನಾನು ಅಂದಿನ ನನ್ನ ಭಾಷಣದಲ್ಲಿ ಹೇಳಿದ್ದನ್ನು ಬೇಂದ್ರೆಯವರು

ಮೆಚ್ಚಿಕೊಂಡರು. ಕಾವ್ಯಸೇವೆಯನ್ನು ಅಖಂಡ ನಡೆಸಲು ಅರವತ್ತರ ಸಂದಿನಲ್ಲಿ ಅನುವುಮಾಡಿಕೊಟ್ಟ ಅಖಿಲಭಾರತ ಆಕಾಶವಾಣಿಗೆ ತಾವು ಋಣಿಯಾಗಿರುವ ವಿಷಯವನ್ನು ಕಾವ್ಯ ಕೃತಿಯಲ್ಲಿ ಸೂಚಿಸಿದ್ದಾರೆ. ಒಂದು ಸಂದರ್ಭದಲ್ಲಿ ನಾನವರನ್ನು ಕೇಳಿದ್ದೆ; 'ಆಕಾಶವಾಣಿ ಸಾಹಿತ್ಯ ಸಲಹಾಕಾರ ಹುದ್ದೆಯಲ್ಲಿರುವ ನೀವು ಮನೆಯಲ್ಲಿ ಬಹಳ ವೇಳೆ ರೇಡಿಯೊ ಕೇಳಬೇಕಾಗಿ ಬಂತಲ್ಲ' ಎಂದು. 'ಯಾವಾಗಾದರೂ ಸ್ವಲ್ಪ ಹೊತ್ತು ಕೇಳ್ತೀನಿ. ಹಗಲೆಲ್ಲ ಕೇಳಿದರ ನನ್ನ ಕಲ್ಪನಾಶಕ್ತಿಯನ್ನೇ ಕಳಕೊಳ್ಳಬೇಕಾದೀತು' ಎಂದು ನಕ್ಕರು.

* * * *

ವಿನೋಬಾ ಭಾವೆಯವರು ಭೂದಾನ ಚಳುವಳಿಯ ನಿಮಿತ್ತ ಈ ಭಾಗಕ್ಕೆ ಬಂದಾಗ ತಿಳವಳ್ಳಿಯಲ್ಲಿ ಕ್ಯಾಂಪ ಮಾಡಿದ್ದರು. ಗೋಕಾಕರು ಆಗ ಕರ್ನಾಟಕ ಕಾಲೇಜಿನ ಪ್ರಿನ್ಸಿಪಾಲರಾಗಿದ್ದರು. ಅವರೊಂದಿಗೆ ಬೇಂದ್ರೆಯವರು, ಮಾಳವಾಡರು, ವ್ಹಿ.ಜಿ. ಭಟ್ಟ ಹಾಗೂ ನಾನು ಕೂಡಿಕೊಂಡು ತಿಳವಳ್ಳಿಗೆ ಹೋಗಿ ವಿನೋಬಾ ಅವರನ್ನು ಕಂಡೆವು. ಕನ್ನಡವನ್ನು ಸ್ವಲ್ಪ ತಿಳಿದುಕೊಂಡಿದ್ದ ಅವರು ನಮ್ಮಿಂದ ಕವಿತೆಗಳನ್ನೋದಿಸಿ ಕೇಳಿ ಸಂತೋಷಗೊಂಡರು. ಭೂಮಿ, ಭೂದಾನ ಇತ್ಯಾದಿಗಳ ಬಗ್ಗೆ ತಾತ್ವಿಕವಾಗಿ ಚರ್ಚಿಸಿದ ಬೇಂದ್ರೆಯವರ ವಿಚಾರಗಳನ್ನು ವಿನೋಬಾ ಅತ್ಯಂತ ಆಸ್ಥೆ ವಹಿಸಿ ಕೇಳಿದರು.

* * * *

೧೯೬೪ರಲ್ಲಿ ನನ್ನ ಏಳನೆಯ ಕವನ ಸಂಕಲನ 'ನೆಲಮುಗಿಲು'ಗೆ ಬೇಂದ್ರೆಯವರಿಂದಲೇ ಮುನ್ನುಡಿ ಬರೆಸಬೇಕೆಂಬ ಅಪೇಕ್ಷೆಯುಂಟಾಯಿತು. ಅದಕ್ಕೆ ಅವರು 'ಆಯಿತು' ಎಂದು ಸ್ವಲ್ಪ ವಿಸ್ತಾರವಾಗಿಯೇ ಬರೆದರಲ್ಲದೆ ಪುಸ್ತಕದ ಬಿಡುಗಡೆಯ ಕಾರ್ಯಕ್ರಮದಲ್ಲಿಯೂ ಭಾಗವಹಿಸಿದ್ದರು. ನನ್ನ ಮಾವಂದಿರಾದ ಎಸ್.ವಿ. ಗಿಡ್ನವರ ತಮ್ಮ ವಿಶ್ರಾಂತ ಜೀವನವನ್ನು ಧಾರವಾಡದಲ್ಲಿ ಕಳೆಯಬೇಕೆಂದು ಇಚ್ಛಿಸಿ ಇಲ್ಲಿಯೇ ಮನೆಮಾಡಿದ್ದರು. 'ಗೆಳೆಯರ ಗುಂಪಿ'ನ ಕಾಲದಿಂದಲೂ ಅವರು ಬೇಂದ್ರೆಯವರ ಸ್ನೇಹಿತರಾಗಿದ್ದರು. ಅವರಿಗೆ ಸಾಹಿತ್ಯ ಮತ್ತು ತತ್ವಜ್ಞಾನದಲ್ಲಿ ವಿಶೇಷ ಒಲವಿದ್ದಿತಲ್ಲದೆ ಮನೆಯಲ್ಲಿ ದೊಡ್ಡ ಗ್ರಂಥಭಂಡಾರವನ್ನು ನಿರ್ಮಿಸಿಕೊಂಡಿದ್ದರು. ಗುಂಪಿನ ಗೆಳೆಯರೆಲ್ಲರೂ ಅವರ ನಿಕಟವರ್ತಿಗಳಾಗಿದ್ದರು. ಅದರಲ್ಲೂ ಬೇಂದ್ರೆ ಹಾಗೂ ಮಧುರಚೆನ್ನರು ಮನೆಯವರಿಗಿಂತಲೂ ಹೆಚ್ಚು ಆತ್ಮೀಯರೆನಿಸಿದ್ದರು. ಬೇಂದ್ರೆಯವರಿಗೆ ಚಪಾತಿ, ಬೆಲ್ಲ, ತುಪ್ಪ ಇಷ್ಟವಾದರೆ ಮಧುರಚೆನ್ನರು ಸಪ್ಪೆಯೂಟ ಮಾಡುತ್ತಿದ್ದರೆಂದು ಶ್ರೀಮತಿ ಭಾಗೀರಥೀ ಗಿಡ್ನವರ (ನನ್ನ ಅತ್ತೆಯವರು) ನಮ್ಮೆದುರು ಹೇಳುತ್ತಿದ್ದರು. ಗಿಡ್ನವರ ಮಗಳು ಶಾಂತಾದೇವಿಯೊಡನೆ ನನ್ನ ಮದುವೆ ನಡೆದದ್ದು ಬೇಂದ್ರೆ ಅವರಿಗೆ ಹೆಚ್ಚಿನ ಸಂತೋಷಕ್ಕೆ ಕಾರಣವಾಗಿತ್ತು.

* * * *

'ನೆಲ-ಮುಗಿಲಿ'ನ ಮುನ್ನುಡಿಯಲ್ಲಿ ತಾವು ಹಿಂದೆ 'ಕಾವ್ಯಾಕ್ಷಿ'ಗೆ ಬರೆದ ಮುನ್ನುಡಿಯ ಮಾತನ್ನು ನೆನಪಿಸಿಕೊಳ್ಳುತ್ತ 'ವಿನಯ ಹಳಸುವ ಬದುಕಲ್ಲ, ವಿಶಿಷ್ಟಕ್ಕೆ ತೊಡಕಲ್ಲ, ಇದು

ಧಾರವಾಡ ತತ್ವ' ಎಂದು ಹೇಳುತ್ತ ಬೇಂದ್ರೆನ 'ಅಂಬಿಕಾತನಯ' ನಂತೆ ಕಣವಿಯ ಚೆನ್ನವೀರನಿಗೂ ಇವೇ, ಇಂಥವೇ ಮಹಾಪ್ರೇರಣೆಗಳು ಎಂಬ ದೊಡ್ಡ ಮಾತನ್ನು ಬರೆದರು. ಮಾಸ್ತಿಯವರು ಬೇಂದ್ರೆಯವರ 'ನಾದಲೀಲೆ'ಗೆ ಬರೆದ ಮುನ್ನುಡಿಯಷ್ಟೇ ಬೇಂದ್ರೆಯವರು 'ನೆಲಮುಗಿಲು'ಗೆ ಬರೆದ ಮುನ್ನುಡಿಯೂ ಮಹತ್ವದ್ದಾಗಿದೆಯೆಂಬ ಮಾತನ್ನು ಕೀರ್ತಿನಾಥ ಕುರ್ತಕೋಟಿಯವರು ಒಂದೆಡೆ ಬರೆದದ್ದುಂಟು.

ಬೇಂದ್ರೆಯವರಿಗೆ ಮಾತು ಸಿಕ್ಕರೆ ಮಾರುಹೋಲ ಸಿಕ್ಕಂತೆ ಎಂಬುದು ಗಾದೆಯ ಮಾತೇ ಆಗಿತ್ತು. ಅವರ ೭೦ನೆಯ ಹುಟ್ಟುಹಬ್ಬದ ಸಮಾರಂಭವನ್ನು ಅವರ ಪೂರ್ವಿಕರ ಊರಾದ ಶಿರಹಟ್ಟಿಯಲ್ಲಿ ೧೯೬೬ರಲ್ಲಿ ಏರ್ಪಡಿಸಲಾಗಿತ್ತು. ಧಾರವಾಡದಿಂದ ಇದಕ್ಕಾಗಿ ಪ್ರತ್ಯೇಕ ಬಸ್ಸನ್ನೇ ಮಾಡಿಕೊಂಡು ಹೊರಡಲಾಗಿತ್ತು. ವೆಂಕಟೇಶ ಮಾಗಡಿ, ಗೌರೀಶಕಾಯ್ಕಿಣಿ, ಎನ್ಕೆ, ನರೇಗಲ್ ಪ್ರಹ್ಲಾದರಾಯರು, ದೇಸಾಯಿ ದತ್ತಮೂರ್ತಿಯವರಲ್ಲದೆ ನಮ್ಮ ಜೊತೆಗೆ ಧಾರವಾಡ ಹುಬ್ಬಳ್ಳಿಯ ಇನ್ನೂ ಅನೇಕ ಸ್ನೇಹಿತರಿದ್ದರು. ಪ್ರೊ. ಗೋಕಾಕ ಮತ್ತು ಪ್ರೊ. ಮಾಳವಾಡರು ಮರುದಿನ ಬೆಳಿಗ್ಗೆ ಶಿರಹಟ್ಟಿಗೆ ಬಂದರು. ಬಸ್ಸಿನಲ್ಲಿ ಧಾರವಾಡದಿಂದ ಶಿರಹಟ್ಟಿಗೆ ಹೋಗುವವರೆಗೂ ಮಾತಾಡಿದವರೆಂದರೆ ಬೇಂದ್ರೆಯವರು. ನಾವೆಲ್ಲ ಆಗೀಗ ನಮ್ಮ ಮಾತುಗಳನ್ನು ಅದಕ್ಕೆ ಜೋಡಿಸುತ್ತಿದ್ದೆವು ಅಷ್ಟೆ. ಆಗಾಗ ಹಾಸ್ಯಕ್ಕೂ ಕೊರತೆಯಿರಲಿಲ್ಲ. ಬಹುಶಃ ಬ್ರಹ್ಮಾಂಡದ ಎಲ್ಲ ವಿಷಯಗಳೂ ಬಂದು ಹೋದವು ಬೇಂದ್ರೆಯವರ ಮಾತುಗಳಲ್ಲಿ. ಅದೊಂದು ಅದ್ಭುತ ಅನುಭವ. ಬೇಂದ್ರೆಯವರಿಗೆ ಯಾವತ್ತೂ ಜನ ಬೇಕು. ಅವರು ನೂರಕ್ಕೆ ನೂರರಷ್ಟು ಸಂಘಜೀವಿಗಳು. 'ಏಕಾಂತತೆ ಗದ್ದಲದಲ್ಲಿಯೂ ಸಾಧ್ಯ' ಎನ್ನುತ್ತಾರೆ ಅವರು. ಜಿ.ಐ.ಪಿ. ಗಾಡಿಯ ಸಪ್ಪಳ, ಸಾಮಿಲ್ಲಿನ ಕರಕರ, ಫ್ಯಾನಿನ ಗುಂಯ್‌ನಾದ ಇಂಥವು ಕೂಡ ನನ್ನನ್ನು ಏಕಾಂತದಲ್ಲಿ ನೂಕಲು ಸಮರ್ಥವಾಗುತ್ತವೆ ಎಂದು 'ನನ್ನ ನಾ ಕಂಡಂತೆ'ಯಲ್ಲಿ ಬರೆದಿರುವುದನ್ನು ನೋಡಿದರೆ ಅವರ ಕಾವ್ಯದ ನಾದ ಗುಣದ ನೆಲೆ ನಮಗೆ ಗೋಚರಿಸಬಹುದು.

* * * *

ಮೈಸೂರು ವಿಶ್ವವಿದ್ಯಾಲಯ ತನ್ನ ಸುವರ್ಣಮಹೋತ್ಸವದ ಸಂದರ್ಭದಲ್ಲಿ ಆಧುನಿಕ ಕನ್ನಡ ಕಾವ್ಯದ 'ಸುವರ್ಣ ಸಂಪುಟ' ಪ್ರಕಟಿಸುವ ಯೋಜನೆ ಹಾಕಿಕೊಂಡಿತ್ತು. ಬೇಂದ್ರೆಯವರ ಕವಿತೆಗಳನ್ನು ಸೇರಿಸಿಕೊಳ್ಳಲು ಅವರ ಅನುಮತಿ ಕೋರಲಾಗಿತ್ತು. ಎಷ್ಟು ದಿನಗಳಾದರೂ ಅವರಿಂದ ಉತ್ತರ ಬಂದಿರಲಿಲ್ಲ. ದೇಜಗೌ ಹಾಗೂ ಹಾ.ಮಾ. ನಾಯಕರು ಆ ಜವಾಬುದಾರಿಯನ್ನು ಸಂಪಾದಕ ಸಮಿತಿಯ ಸದಸ್ಯನಾದ ನನಗೇ ವಹಿಸಿದರು. ನಾನು ಅವರ ಹನ್ನೆರಡು ಪ್ರಾತಿನಿಧಿಕ ಕವಿತೆಗಳನ್ನು ಆಯ್ಕೆಮಾಡಿ ಬೇಂದ್ರೆಯವರ ಅನುಮತಿ ಪಡೆಯಲು ಸ್ವಲ್ಪ ಅಳುಕಿನಿಂದಲೇ ಅವರ ಮನೆಗೆ ಹೋದೆ. 'ನೀನೂ ಆ ಸಮಿತಿಯಲ್ಲಿ ಅದಿಯೇನು? ನಿನ್ನ ಆಯ್ಕೆ ಸರಿಯಾಗಿದೆ ಆಗಬಹುದು' ಎಂದು ಹಿಂದುಮುಂದೆ ನೋಡದೆ ಒಪ್ಪಿಗೆ ನೀಡಿದರು. ನನಗೆ ತಲೆಯ ಮೇಲಿನ ದೊಡ್ಡಭಾರ ಇಳಿದಂತಾಯಿತು. ಇಂಥ ಸಂದರ್ಭಗಳಲ್ಲಿ ಅನೇಕರು

ಅವರನ್ನು ತಪ್ಪು ತಿಳಿದುಕೊಂಡಂತಿತ್ತು. ಆದರೆ ಸರಿಯಾದ ದಾರಿಯಲ್ಲಿ ಅನುಸರಿಸಿದಾಗಲೆಲ್ಲ ಅವರು ಉದಾರವಾಗಿಯೇ ನಡೆದುಕೊಂಡದ್ದನ್ನು ನಾನು ಕಂಡಿದ್ದೇನೆ. ಆದರೆ ಮನಸ್ಸಿನಲ್ಲಿ ಒಳಗೊಂದು, ಹೊರಗೊಂದು ಇಟ್ಟುಕೊಂಡು ಬಂದವರನ್ನು ಮಾತ್ರ ಚೆನ್ನಾಗಿ ತಿರುವಿ ಬಿಡುತ್ತಿದ್ದರು. ತಮ್ಮ ಕಾವ್ಯದ ಬಗ್ಗೆ ಬಂದಿರುವ ವಿಮರ್ಶೆಗಳನ್ನೆಲ್ಲ ಅವರು ಗಮನಿಸಿರುತ್ತಿದ್ದರು. ಆ ಬಗ್ಗೆ 'ದಿವ್ಯ ನಿರ್ಲಕ್ಷತೆ'ಯೇನೂ ಅವರಿಗಿರಲಿಲ್ಲ. ವಿಮರ್ಶಕರೆಂಬವರ ಟೀಕೆಗಿಂತ ರಸಿಕರ ವಿಮರ್ಶೆ ತಮಗೆ ಪ್ರೇರಣೆ ಉದ್ದೀಪನಗಳನ್ನು ಕೊಟ್ಟಿವೆಯೆಂದು ಅವರೇ ಒಂದೆಡೆ ಹೇಳಿದ್ದುಂಟು.

* * * *

'ನಾಕು ತಂತಿ' ಕವನ ಸಂಗ್ರಹಕ್ಕೆ ಜ್ಞಾನಪೀಠ ಪ್ರಶಸ್ತಿ ಬಂದ ಸಂದರ್ಭದಲ್ಲಿ ಒಮ್ಮೆ ಮಾಸ್ತಿಯವರು ಧಾರವಾಡಕ್ಕೆ ಬಂದಿದ್ದರು. ಬೇಂದ್ರೆಯವರ ಮನೆ 'ಶ್ರೀಮಾತಾ' ದಲ್ಲಿಯೇ ಮಾಸ್ತಿಯವರ ಹಿರಿತನದಲ್ಲಿ ಸಹೃದಯರ ಸಂತೋಷಕೂಟವೊಂದನ್ನು ವಾಮನ ಏರ್ಪಡಿಸಿದ್ದರು. ಅಂದು ಅಲ್ಲಿ ಸೇರಿದವರೆಲ್ಲರೂ ತಮತಮಗೆ ಇಷ್ಟವಾದ ಯಾವುದಾದರೂ ಒಂದು ಪದ್ಯದ ನುಡಿ ಹೇಳಬೇಕೆಂಬ ಸೂಚನೆ ಬಂದಿತು. ನನ್ನ ಸರದಿ ಬಂದಾಗ ನಾನು ಮುಪ್ಪಿನ ಷಡಕ್ಷರಿಯ 'ಅವರವರ ದರುಶನಕೆ' ಪದ್ಯದ ಕೊನೆಯ ನುಡಿ 'ಹೋರಾಟವಿಕ್ಕಿಸಲು ಬೇರಾದೆಯಲ್ಲದೆ ಬೇರುಂಟೆ ಜಗದೊಳಗೆ ಎಲೆದೇವನೆ' ಎಂಬುದನ್ನು ಹೇಳಿದೆ. ಅದರ ವಿಚಾರವನ್ನೆತ್ತಿಕೊಂಡು ಮಾಸ್ತಿಯವರು ಒಂದೆರಡು ಮಾತು ಹೇಳಿದರು. 'ಬೇರಾದ' ಪದಕ್ಕೆ ಬೇರೆ ಬೇರೆ ಹೆಸರಿನಿಂದ ದೇವರನ್ನು ಕರೆಯಲಾಯಿತು ಎಂಬ ಸಾಮಾನ್ಯವಾದ ಅರ್ಥವೇ ನಮ್ಮೆಲ್ಲರ ಮನಸ್ಸಿನಲ್ಲಿತ್ತು. ಬೇಂದ್ರೆಯವರು ಮಾತ್ರ ಯಥಾಪ್ರಕಾರ ಶ್ಲೇಷಾರ್ಥವನ್ನು ಉಪಯೋಗಿಸಿ 'ಬೇರಾದೆ' ಎಂಬ ಪದವನ್ನು ಬೇರು ಆದೆ, ಹೋರಾಟಕ್ಕೆ ಮೂಲ ಕಾರಣವಾದೆ ಎಂದು ಅರ್ಥೈಸಿದಾಗ ಮಾಸ್ತಿಯವರೂ ಗೋಣುಹಾಕಿದರು. ಶ್ಲೇಷೆ ಒಂದು ಸಹಜವಾದ ಶಕ್ತಿಯಾಗಿ ಬೇಂದ್ರೆಯವರಿಗೊಲಿದಿರುವುದನ್ನು ಅವರ ಕಾವ್ಯದುದ್ದಕ್ಕೂ ಕಾಣಬಹುದು.

ನಾನು ಹಿಂದೊಮ್ಮೆ ಅವರ ಮನೆಗೆ ಹೋದಾಗ ಅವರ ಮೇಜಿನ ಮೇಲೆ ಕುವೆಂಪು ಅವರ 'ಬೆರಳ್‌ಗೆ ಕೊರಳ್' ನಾಟಕವಿತ್ತು. ಅದನ್ನವರು ಮೆಚ್ಚಿಕೊಂಡದ್ದು ಅವರ ಮಾತಿನ ಮೇಲಿಂದ ನನಗೆ ತಿಳಿದು ಬಂತು. ಕುವೆಂಪು ಆ ನಾಟಕವನ್ನು 'ಶ್ರೀ' ಅವರಿಗೆ ಅರ್ಪಿಸಿ ಕೆಳಗೆ ಒಂದು ಕವಿತೆಯನ್ನೇ ಬರೆದಿದ್ದಾರೆ. 'ಬೆರಳ್‌ಗೆ ಕೊರಳ್' ಏಕಲವ್ಯ-ದ್ರೋಣರ ಪ್ರಸಂಗವನ್ನು ಧ್ವನಿಪೂರ್ಣವಾಗಿ ಸೂಚಿಸುತ್ತದೇನೊ ನಿಜ. ಆದರೆ 'ಶ್ರೀ' ಮತ್ತು ಕುವೆಂಪುವಿಗೆ ಸಂಬಂಧಪಟ್ಟಂತೆ ಅದನ್ನು 'ಬೆರಳು ಹಿಡಿದು ನಡೆಸಿದ ಗುರುವಿಗೆ ತನ್ನ ಕೊರಳು ಅಂದರೆ ಕಂಠ, ಧ್ವನಿ (ಕಾವ್ಯ)ಯ ಅರ್ಪಣೆ' ಎಂದು ಬೇಂದ್ರೆಯವರು ಅರ್ಥೈಸಿ ನನಗೆ ಹೇಳಿದರು. ಹೀಗೆ ಯಾರಿಗೂ ಹೊಳೆಯದ್ದು ಬೇಂದ್ರೆಯವರಿಗೆ ಹೊಳೆಯುತ್ತಿದ್ದುದು ಅವರ ಪ್ರತಿಭೆಯ ವಿಶೇಷ ಲಕ್ಷಣ.

೧೯೮೧ರಲ್ಲಿ ಒಂದು ದಿನ ನಾನು ಆಫೀಸಿಗೆ ಹೊರಡುತ್ತಿರುವಾಗ ಬೇಂದ್ರೆಯವರು ವಾಮನನ ಜೊತೆಗೆ ಸ್ಕೂಟರಿನಲ್ಲಿ ನಮ್ಮ ಮನೆಗೆ ಬಂದು, ತಮ್ಮ ಕೈಚೀಲದಿಂದ ಒಂದು ನೋಟಬುಕ್ಕನ್ನು ತೆಗೆದು ತಾವು ಈಚೆಗೆ ಬರೆದ ನಾಲ್ಕೈದು ಕವಿತೆಗಳನ್ನು ಓದಲು ಹೇಳಿ,

'ನಿನಗೇನು ತಿಳೀತದೆ ಅದನ್ನು ಹೇಳು' ಎಂದರು. ಕೊನೆಗಾಲದಲ್ಲಿ ಅವರು ಸಂಖ್ಯಾಶಾಸ್ತ್ರಕ್ಕೆ ಮಾರುವೋದದನ್ನು ಎಲ್ಲರೂ ಬಲ್ಲರು. ನಾನು ಕವಿತೆಗಳನ್ನೋದಿ ನನ್ನ ಅಲ್ಪಮತಿಗೆ ಹೊಳೆದದ್ದನ್ನು ಹೇಳಿದೆ. 'ಹೌದಲ್ಲ ; ಅದನ್ನೇ ಈ ನೋಟುಬುಕ್ಕಿನಲ್ಲಿ ಬರೆದು ಸಹಿಮಾಡಿಕೊಡು' ಎಂದರು. ಡಾ. ಕೆ.ಕೃಷ್ಣಮೂರ್ತಿಯವರು ಇಂಥದೇ ಪ್ರಸಂಗವನ್ನು ತಾವೂ ಎದುರಿಸಿದ್ದನ್ನು ನನ್ನ ಮುಂದೆ ಈ ಮೊದಲು ಹೇಳಿದ್ದರು. ಬಹುಶಃ ಅಪ್ರತಿಮವಾದ ಈ ಕವಿಚೇತನಕ್ಕೆ ಓದುಗರ ಈ 'ತಿಳಿಯೂದಿಲ್ಲ' ಎಂಬ ಮಾತನ್ನು ಸಹಿಸಲಾಗುತ್ತಿರಲಿಲ್ಲವೆಂದು ತೋರುತ್ತದೆ. ಸಹೃದಯರಾದ ಓದುಗರ ಬಗ್ಗೆ ಕವಿಗಿರುವ ಕಳಕಳಿ ಅವರ ಸಾತ್ವಿಕ ಸಿಟ್ಟಿಗೆ ಕಾರಣವಾಗಿರಬಹುದು. ಸಹೃದಯರನ್ನು ಬೇಂದ್ರೆ ಯಾವಾಗಲೂ ಗೌರವದಿಂದಲೇ ಕಂಡಿದ್ದರು. ಯಾಕೆಂದರೆ ಕಾವ್ಯ ಕೇಳುವ ಹೃದಯ ಕಲ್ಲಲ್ಲ, ಅದು ಕಲ್ಲುಸಕ್ಕರೆ. 'ಕಲ್ಲು ಸಕ್ಕರೆಯಂಥ ನಿನ್ನೆದೆಯು ಕರಗಿದರೆ ಆ ಸವಿಯ ಹಣಿಸು ನನಗೆ' ಎಂಬುದೇ ಅವರ ಕಾವ್ಯ ಜೀವನದ ಹಂಬಲವಾಗಿತ್ತು.

* * * *

ಬೇಂದ್ರೆಯವರ ಜೊತೆಗಿನ ನನ್ನ ಒಡನಾಟದ ಕೆಲವು ಸಂಗತಿಗಳನ್ನು ಮಾತ್ರ ಇಲ್ಲಿ ಮೆಲುಕು ಹಾಕಿದ್ದೇನೆ. ಕೊನೆಯದಾಗಿ ಒಂದು ಪ್ರಸಂಗವನ್ನು ಇಲ್ಲಿ ಉಲ್ಲೇಖಿಸುವದು ಅಗತ್ಯವೆಂದು ನಾನು ಭಾವಿಸಿದ್ದೇನೆ. ಯಾಕೆಂದರೆ ಅದು ಅವರ ಕೊನೆಯ ಸಾರ್ವಜನಿಕ ಭಾಷಣಕ್ಕೆ ಸಂಬಂಧಪಟ್ಟದ್ದು. ೧೯೮೧ ಮೇ ತಿಂಗಳು ಧಾರವಾಡದ ಮಲ್ಲಿಕಾರ್ಜುನ ಮನಸೂರ ಕಲಾಭವನದಲ್ಲಿ, ನನಗೊಂದು ಸನ್ಮಾನ ಸಮಾರಂಭವೇರ್ಪಟ್ಟು 'ಚೆಂಬೆಳಕು' ಅಭಿನಂದನ ಗ್ರಂಥದ ಬಿಡುಗಡೆಯ ಕಾರ್ಯಕ್ರಮವಿತ್ತು. ಪು.ತಿ.ನ. ಅವರು ಮುಖ್ಯ ಅತಿಥಿಯಾಗಿದ್ದು ಸದಾಶಿವ ಒಡೆಯರ, ಪಾಟೀಲ ಪುಟ್ಟಪ್ಪ, ಬಸವರಾಜ ಕಟ್ಟೀಮನಿ, ಶಾಂತರಸರು ಅಭಿನಂದನ ಭಾಷಣ ಮಾಡಿದರು. ಅಂದು ಬೇಂದ್ರೆಯವರು ಜ್ವರದಿಂದ ಅಸ್ವಸ್ಥರಾಗಿದ್ದರೂ ಸಭೆಗೆ ಬಂದು ವೇದಿಕೆಯ ಎದುರಿಗೆ ಕುಳಿತರು. ಪ್ರೀತಿಯ ಒತ್ತಾಯದಿಂದ ಅವರನ್ನು ವೇದಿಕೆಯ ಮೇಲೆ ಕುಳ್ಳಿರಿಸಲಾಯಿತು. ಮೊದಲು ತಾವು ಮಾತಾಡುವುದಿಲ್ಲವೆಂದು ಹೇಳಿದ್ದರೂ ಕೊನೆಯಲ್ಲಿ ಆಶೀರ್ವಾದದ ಎರಡು ಮಾತು ಹೇಳಬಹುದೇ ಎಂದು ಸಂಘಟಕರಾದ ಡಾ. ಗುರುಲಿಂಗ ಕಾಪಸೆಯವರು ಕೇಳಿಕೊಂಡಾಗ ಒಪ್ಪಿ ಮಾತಾಡಲು ಎದ್ದರು. ತಾವು ಜ್ವರ ಪೀಡಿತರಾಗಿರುವುದನ್ನು ಮರೆತು ಎಂದಿನ ಧ್ವನಿ - ಧಾಟಿಯಲ್ಲಿಯೇ ಸಭಿಕರನ್ನು ನಗಿಸಿ, ಸಂತೋಷಪಡಿಸುತ್ತ ಆತ್ಮೀಯತೆಯಿಂದ ಅರ್ಧಗಂಟೆಯವರೆಗೂ ಮಾತನಾಡಿದರು. ಅವರ ಅಂದಿನ ಭಾಷಣದ ಸ್ವಲ್ಪ ಭಾಗವನ್ನು ಧ್ವನಿಸುರುಳಿಯಿಂದ ಪ್ರತಿಮಾಡಿ ಇಲ್ಲಿ ಕೊಟ್ಟರೆ ಅನುಚಿತವಾಗದೆಂದು ಭಾವಿಸಿದ್ದೇನೆ.

"ನನ್ನ ಜತೆಯಲ್ಲಿ ಕೂತವರಿಗಿಂತ ಮೊದಲ ನನ್ನೆದುರಿಗೆ ಕೂತವರಿಗೆ ನಮಸ್ಕಾರ ಮಾಡ್ತೀನಿ. ಯಾಕೆಂದರೆ ನಿಮ್ಮಿಂದ ನಮಗ ಕಿಮ್ಮತ್ತದ. ನಿಮಗ ಕಿಮ್ಮತ್ತಿಲ್ಲದಿದ್ದರ ನಮಗೆಲ್ಲಿಂದ ಬರಬೇಕು ? ಬಂಗಾರ ಮಾರಿದಮ್ಯಾಲೆ ಅದಕ ಬೆಲೆ ಬರತದ ಅಂತಲ್ಲ, ಅದರ ಬೆಲೆ ಅದಕ ಇದ್ದ ಇರತದ. ಒಬ್ಬರೊಬ್ಬರೊಳಗ ಒಡನಾಟ ಇರಬೇಕು. ದೇಶದೊಳಗ ಒಳ್ಳೇ ಕವಿ ಹುಟ್ಟಿದರಷ್ಟೇ ಸಾಲದು. ಅವ ಒಳ್ಳೇವ ಅನಲಿಕ್ಕೆ ಒಬ್ಬ ಒಳ್ಳೆ ವಿಮರ್ಶಕ ಹುಟ್ಟಬೇಕು. ಕವಿ- ಸಹೃದಯರ ಒಡನಾಟ

ಸರಸ್ವತೀ ತತ್ವ. ಇವತ್ತಿನ ದಿವಸ ಐವತ್ತರ ಕಣವಿಗೆ ಆಶೀರ್ವಾದ ಮಾಡಲಿಕ್ಕೆ ನಾ ಬಂದೀನಿ. ಅವರಿಗೆ ಅರವತ್ತರ ಹಬ್ಬ ಆದಾಗ ಅವತ್ತೂ ಇವರಿಗೆ ಆಶೀರ್ವಾದ ಮಾಡಲಿಕ್ಕೆ ಬರತೀನಿ. ನಾ ಹಿಂದ ಕೊಟ್ಟ ಆಶೀರ್ವಾದ ಫಲಿಸಿತೋ ಇಲ್ಲ ಅಂತ ನೋಡಲಿಕ್ಕೆ ನಾ ಇರಬೇಕು. ಕಣವಿ ನನ್ನ ಗೆಳೆಯರಾದ ಗಿಡ್ನವರ ಅಳಿಯಂದಿರು. ಆದ್ದರಿಂದ ನನಗೂ ಅಳಿಯಂದಿರು. ಪ್ರಕೃತಿಕಾಯ್ಕೊಳ್ಳದಾಂವ ಪುರುಷನ ಅಲ್ಲ. ಪ್ರಕೃತಿಯನ್ನು ಧಿಕ್ಕರಿಸುವವ ಎಂಥಾ ಪುರುಷ ?'

"೧೯೪೯ರೊಳಗ ನಾನು ಗೋಕಾಕರೂ ಅವರಿದ್ದ ರೂಮಿಗೆ ಹೋಗಿದ್ವಿ. ನಾವಿದ್ದಲ್ಲೆ ಅವರ್‍ನ ಕರೆಸಿಕೊಳ್ಳಲಿಲ್ಲ. ಒಳ್ಳೆ ವಿಚಾರನೂ ಮಾಡಬೇಕು. ಕೆಟ್ಟ ವಿಚಾರನೂ ಮಾಡಬೇಕು. ಅಂದರ ಒಳ್ಳೇದು ಯಾವುದು ಅಂತ ಗೊತ್ತಾಗ್ತದ. ಕಣವಿ ತಮಗಿಂತ ಬೇರೆ ಕವಿಗಳಿಲ್ಲ ಅಂತ ತಿಳಕೊಂಡಿಲ್ಲ. ತಾನೂ ಬದುಕಬೇಕು, ಇನ್ನೊಬ್ಬರೂ ಬದುಕಬೇಕು. ವೀರ ಅಂದರ ಯಾರಕೂಡ? ಇವರ ವೀರಾವೇಶವನ್ನ ನೋಡಿ ಉಳಿದವರು ಆನಂದ ಪಡಬೇಕು. ಕಾಪಸೆ ಎರಡು ಒಳ್ಳೇ ಕೆಲಸ ಮಾಡ್ಯಾರ. ಮೊದಲಿಗೆ ಚೆನ್ನಮಲ್ಲನ (ಮಧುರ ಚೆನ್ನ) ಬಗ್ಗೆ ಮಾಡಿದ್ದನ್ನು ಈಗ ಚೆನ್ನವೀರನ ಬಗ್ಗೆ ಮಾಡ್ಯಾರ. ಅವರಿಗೂ ಒಳ್ಳೇದಾಗಲಿ. ಸಭಾಕ ನಾನು ಬರೂದಿಲ್ಲ ಅಂತ ಹೇಳಿದ್ದೆ. ಈಗ ಬಂದೀನಿ. ಬಂದ ಮ್ಯಾಲೆ ಸಭಾದ ಮರ್ಯಾದಿ ಕಾಯಬೇಕು.

"ಇಲ್ಲೆ ನಮ್ಮ ಪು.ತಿ.ನ. ಇದ್ದಾರಲ್ಲ, ಅವರು ಎಷ್ಟು ಸಭ್ಯರಂಗ ಕಾಣಸ್ತಾರ ಅಷ್ಟಿಲ್ಲ ಅವರು. ಯಾರಿಗೆ ಕವಿ ಅನಬೇಕು? ಬೇಂದ್ರೆ, ಪುಟ್ಟಪ್ಪನವರ ದಾರಿಬಿಟ್ಟು ಯಾರು ಹೋಗ್ತಾರ ಅವರೇ ಕವಿಗಳು ಅಂತ ಪು.ತಿ.ನ. ಹಿಂದ ಹೇಳ್ಯಾರ. ಹೊಸಬರಿಗೆ ಅವರು ಉತ್ಸಾಹ ತುಂಬ್ಯಾರ. ನೀವು ದೊಡ್ಡ ಮಂದಿಯವರ್‍ಹಾಂಗ ಆಗಾಕ ಹೋಗಿ ಬಹಳ ಸಣ್ಣವರಾಗಿ ಬಿಡ್ತೀರಿ. ಸಣ್ಣವರಿದ್ದರೂ ನಿಮ್ಹಂಗ ನೀವಿದ್ದರ ದೊಡ್ಡವರಾಗ್ತೀರಿ. ಸೂರ್ಯ ಬಹಳ ದೊಡ್ಡವ. ಆದರ ಅವನ್ನ ನೋಡಲಿಕ್ಕೆ ಕಣ್ಣು ಸಣ್ಣವಿರಬೇಕು.

"ರವಿ ಕಾಣದ್ದನ್ನು ಕವಿ ಕಾಣ್ತಾನ ; ಕವಿ ಕಾಣದ್ದನ್ನ ಸಹೃದಯ ಕಾಣ್ತಾನ, ಪಂಪ, ಕುಮಾರವ್ಯಾಸರ ನಾಡಿನಲ್ಲಿ ಬಂದಿದ್ದೇವೆ. ಒಬ್ಬರಿಗಿಂತ ಒಬ್ಬರು ಹೆಚ್ಚಿನವರಾಗಿ ಬೆಳಿಬೇಕು. ಇಲ್ಲಿಯವರೆಗೂ ನಾ ಒಳ್ಳೇ ಮಾತನ್ನು ಆಡೀನಿ. ನನಗೆ ಕೆಟ್ಟ ಮಾತು ಆಡಲಿಕ್ಕೆ ಬರುದಿಲ್ಲ ಅಂತಲ್ಲ. ಆದರ ಅದನ್ನ ಎಲ್ಲಿ ಆಡಬೇಕು ಅಲ್ಲೆ ಆಡಬೇಕು. ಇಲ್ಲಿ ಅಲ್ಲ."

"ಕವಿ-ಸಹೃದಯರ ಕೂಡ ಮೂರನೇ ಮಂದೀನೂ ಇರತಾರ. ಅವರು ಯಾರು ಅಂದರ ಇವರಿಬ್ಬರೂ ಹ್ಯಾಂಗ ಜಗಳಾಡತಾರ ಅಂತ ನೋಡಲಿಕ್ಕೆ ಬಂದವರು. ಅಂಥ ಪ್ರೇಕ್ಷಕರು ಇಲ್ಲೂ ಇರಬಹುದು. ಈ ಮೂರೂ ಜನರಿಂದ ಸಾಹಿತ್ಯ ಮೂರಾಬಟ್ಟೆಯಾಗದೆ ನಾಲ್ಕನೇ ದಾರಿ ತೆರಿಬೇಕು. ಪರಸ್ಪರ ಅನಸೂಯಾ ಭಾವದಿಂದ ಧಾರವಾಡ ಬೆಳೀಲಿ"

(ಸಂಯುಕ್ತ ಕರ್ನಾಟಕ
೩೦-೧-೨೦೦೫)

ಸಾಹಿತ್ಯ ಸಮೂಹಿತ : ೨೦೦೭

೩

## ಶಂಬಾ ಸ್ಮೃತಿ

ಧಾರವಾಡದ ನನ್ನ ಹಾಯಸ್ಕೂಲು ಹಾಗೂ ಕಾಲೇಜು ಅಭ್ಯಾಸದ ಅವಧಿಯಲ್ಲಿ (೧೯೪೦-೫೦) ನನ್ನ ಮನಸ್ಸನ್ನು ವಿಶೇಷವಾಗಿ ಆಕರ್ಷಿಸಿದ ಸಾಹಿತಿಗಳಲ್ಲಿ ಶಂ.ಬಾ. ಜೋಶಿಯವರೂ ಒಬ್ಬರಾಗಿದ್ದರು. ಗೌರವರ್ಣದ ಎತ್ತರದ ನಿಲುವಿನ ಇವರನ್ನು ಪ್ರತಿದಿನ ಸಂಜೆ ಸುಭಾಸ್ ರಸ್ತೆಯಲ್ಲಿ ಕಾಣುವದು ಸಾಮಾನ್ಯವಾಗಿತ್ತು. ಇವರು ಧರಿಸುತ್ತಿದ್ದ ಕರಿ ಟೊಪ್ಪಿಗೆಯಿಂದಾಗಿ ಇನ್ನಷ್ಟು ಎದ್ದು ಕಾಣುತ್ತಿದ್ದರು. ದ.ಬಾ. ಕುಲಕರ್ಣಿಯವರ 'ಮನೋಹರ ಗ್ರಂಥ ಭಂಡಾರ'ದಲ್ಲಿ ಸ್ವಲ್ಪ ಹೊತ್ತು ನಿಂತು ಮಾತಾಡಿ ಆಮೇಲೆ ಪೇಟೆಯಲ್ಲಿ ಹಾಯ್ದು ಕೈ ಚೀಲದಲ್ಲಿ ಕಾಯಿಪಲ್ಲೆ ಇತ್ಯಾದಿ ತೆಗೆದುಕೊಂಡು ಸಾಧನಕೇರಿಗೆ ಹಿಂತಿರುಗುತ್ತಿದ್ದರು. ವಿಕ್ಟೋರಿಯಾ ಹಾಯಸ್ಕೂಲಿನ (ಈಗಿನ ವಿದ್ಯಾರಣ್ಯ ಹಾಯ್‌ಸ್ಕೂಲು) ಶಿಕ್ಷಕ ವೃತ್ತಿಯಿಂದ ನಿವೃತ್ತರಾದ ಮೇಲೂ ಅವರ ಈ ದಿನಚರಿಯಲ್ಲಿ ಯಾವ ಬದಲಾವಣೆಯೂ ಆಗಿರಲಿಲ್ಲ.

* * * *

ಶಂಬಾ ಅವರ ಶಿಷ್ಯರಾಗಿದ್ದ ಕವಿ ಚಿದಂಬರ ದೀಕ್ಷಿತ ಕಾಲೇಜಿನಲ್ಲಿ ನನ್ನ ಸಹಪಾಠಿಯಾಗಿದ್ದರು. ಶಂಬಾ ಅವರ ಸಂಶೋಧನ ಪ್ರವೃತ್ತಿ ಹಾಗೂ ವೈಚಾರಿಕತೆಯ ಬಗ್ಗೆ ದೀಕ್ಷಿತ್ ತುಂಬ ಗೌರವದಿಂದ ನನ್ನೆದುರು ಹೇಳುತ್ತಿದ್ದರು. ಅವರ ಮೂಲಕವೇ ಒಂದು ಸಂದರ್ಭದಲ್ಲಿ ನನಗೆ ಶಂಬಾ ಅವರ ಪರಿಚಯವಾಯಿತು. ಯುವಕರೊಂದಿಗೆ ಹೆಚ್ಚಿನ ಆಸಕ್ತಿ ಹಾಗೂ ಸಲಿಗೆಯಿಂದ ಮಾತಾಡುತ್ತಿದ್ದ ಶಂಬಾ ಅವರ ಬಗ್ಗೆ ನನಗೂ ಆದರವುಂಟಾಯಿತು. ಪತ್ರಿಕೆಗಳಲ್ಲಿ ಈಗೀಗ ಪ್ರಕಟವಾಗುತ್ತಿದ್ದ ನನ್ನ ಕವಿತೆಗಳ ಬಗೆಗೂ ಅವರು ಮೆಚ್ಚುಗೆ ವ್ಯಕ್ತಪಡಿಸುತ್ತಿದ್ದರು. ಆದರೆ ಕೇವಲ ಭಾವುಕತನವನ್ನು ಅವರು ಇಷ್ಟಪಡುತ್ತಿರಲಿಲ್ಲವೆಂಬುದು ಅವರ ಮಾತಿನಲ್ಲಿಯೇ ವ್ಯಕ್ತವಾಗುತ್ತಿತ್ತು.

* * * *

ಕರ್ನಾಟಕ ಏಕೀಕರಣದ ಆಂದೋಲನಕ್ಕೆ ಧಾರವಾಡವೇ ಸ್ಫೂರ್ತಿ ಕೇಂದ್ರವಾಗಿದ್ದುದರಿಂದ ವಿದ್ಯಾರ್ಥಿಗಳಾದ ನಮ್ಮ ಮೇಲೂ ಅದು ಪರಿಣಾಮ ಬೀರದೆ ಇರಲಿಲ್ಲ. 'ಎದ್ದೇಳು ಕನ್ನಡಿಗಾ ಅಥವಾ ಅಸಂತೋಷವೇ ಏಳ್ಗೆಯ ಮೂಲ', 'ಕಣ್ಮರೆಯಾದ ಕನ್ನಡ', 'ಕಂನಡದ ನೆಲೆ', 'ಕಂನುಡಿಯ ಹುಟ್ಟು' - ಇವೇ ಮೊದಲಾದ ಗ್ರಂಥಗಳು ನಾಡು-ನುಡಿಯ ಬಗ್ಗೆ ಅಭಿಮಾನವನ್ನು

ಹುಟ್ಟಿಸುವುದರ ಜೊತೆಗೆ ನಾಡು ನುಡಿಯ ನಂಟನ್ನ ಸೂಚಿಸುವ ವಿಶಿಷ್ಟ ತಿಳಿವಳಿಕೆಯನ್ನು ಓದುಗರಲ್ಲಿ ಹರಡಿದ್ದವು. ಕನ್ನಡ ನುಡಿಯ ಜೀವಾಳವನ್ನು ಶಂಬಾ ಅವರು ತಮ್ಮದೇ ಆದ ರೀತಿಯಲ್ಲಿ ಕಂಡುಕೊಂಡಿದ್ದರು. ಕರ್ಣಾಟಕ ಸಂಸ್ಕೃತಿಯನ್ನು ಕುರಿತ ಅವರ ಮುಂದಿನ ವಿಸ್ತಾರವಾದ ಬರವಣಿಗೆಯಲ್ಲಿಯೂ ಭಾಷೆಯ ಬಗೆಗಿನ ಅವರ ಮೂಲ ಚಿಂತನೆ ಗಟ್ಟಿಗೊಳ್ಳುತ್ತಲೇ ಬಂದುದನ್ನು ಕಾಣಬಹುದು. ಯಾವುದಾದರೂ ಕೆಲವು ಶಬ್ದಗಳು, ಸಂಕೇತಗಳು, ಪ್ರತಿಮೆಗಳು ನಮ್ಮ ಚರ್ಚೆಗೆ ಒಳಗಾಗಿದ್ದರೆ ಅವರು ತಮ್ಮ ದೈಹಿಕ ಅಸ್ವಸ್ಥತೆಯನ್ನೂ ಮರೆತು ಎದ್ದು ಕೂಡುತ್ತಿದ್ದರು. ಹೊಸ ಅರ್ಥ, ಹೊಸ ವಿಚಾರವೇನಾದರೂ ಹೊಳೆದು ಬಿಟ್ಟರೆ ಅವರ ಹಿಗ್ಗಿಗೆ ಮೇರೆಯೇ ಇರುತ್ತಿರಲಿಲ್ಲ.

* * * *

ಉದಯೋನ್ಮುಖ ಬರೆಹಗಾರರನ್ನು , ಯುವ ಕಾರ್ಯಕರ್ತರನ್ನು ಶಂಬಾ ತುಂಬಾ ಪ್ರೀತಿಯಿಂದ ಕಾಣುತ್ತಿದ್ದರು. ಅಂಥವರ ಲೇಖನದಲ್ಲಿಯೋ ಮಾತಿನಲ್ಲಿಯೊ ಏನಾದರೂ ಒಂದು ಗುಣವನ್ನು ಕಂಡಿದ್ದರೆ ಅದನ್ನು ತಕ್ಷಣವೇ ಪತ್ರದ ಮೂಲಕ ತಿಳಿಸಿ ಬಿಡುತ್ತಿದ್ದರು. ೧೯೫೫ರಲ್ಲಿ ಧಾರವಾಡ ಆಕಾಶವಾಣಿಯಲ್ಲಿ ನಾನೊಂದು ಭಾಷಣ ಮಾಡಿದ್ದೆ. ಅದನ್ನು ಕೇಳಿ ತಮಗಾದ ಸಂತೋಷವನ್ನು ಮರುದಿನವೇ ಕಾರ್ಡಿನಲ್ಲಿ ಬರೆದು ತಿಳಿಸಿದರು. ಅದರ ಮೊದಲ ವಾಕ್ಯದಲ್ಲಿಯೇ 'ನಮೋಯುವಭ್ಯೋ' ಎಂಬ ವೇದದ ನುಡಿ ಕಂಗೊಳಿಸಿತ್ತು.

* * * *

'ಕರ್ಣಾಟಕ ಸಂಸ್ಕೃತಿಯ ಪೂರ್ವಪೀಠಿಕೆ' ಗ್ರಂಥ ಪ್ರಕಟಗೊಂಡಾಗ ೧೯೬೭ರಲ್ಲಿ ಅದನ್ನು ಕುರಿತ ವಿಚಾರ ಸಂಕಿರಣವೊಂದನ್ನು ವಿದ್ಯಾರಣ್ಯ ಹಾಯಸ್ಕೂಲಿನ ಸಭಾಗೃಹದಲ್ಲಿ ಕುಲಪತಿ ಡಾ. ಡಿ.ಸಿ. ಪಾವಟೆಯವರ ಅಧ್ಯಕ್ಷತೆಯಲ್ಲಿ ಏರ್ಪಡಿಸಲಾಗಿದ್ದಿತು. ಅದರಲ್ಲಿ ಭಾಗವಹಿಸಿದವರಲ್ಲಿ ನಾನೂ ಒಬ್ಬನಾಗಿದ್ದೆ.

ಅಂದಿನ ಪರಿಸಂವಾದದೊಳಗಿನ ಅನೇಕ ವಿಚಾರಗಳ ಪರಿಣಾಮದಿಂದ ತುಂಬ ಹರ್ಷಿತರಾಗಿ ಡಾ. ಪಾವಟೆಯವರು ಶಂಬಾ ಅವರಿಗೆ ಮಾತನಾಡಲೇಬೇಕೆಂದು ಆತ್ಮೀಯ ಭಾವದಿಂದ ಹೇಳಿದ್ದು ಅವರನ್ನು ರೋಮಾಂಚಿತಗೊಳಿಸಿತು. ಶಂಬಾ ಅವರು ಮಾತನಾಡುತ್ತ, ಮಹಾರಾಷ್ಟ್ರದಲ್ಲಿ ತಮ್ಮ ಲೇಖನ ಕೃತಿಗಳ ವಿಚಾರಗಳಿಂದ ಮತ ಪರಿವರ್ತನವಾದರೂ ಕಂನಾಡಿನಲ್ಲಿ ಒಂದು ಗುಂಪಿನ ಒಳಸಂಚಿನ ಮೂಲಕ ಇವರ ಪ್ರಭಾವಲಯದಲ್ಲಿ ಬರುವ ಕಂನಾಡಿನ ಸಾಹಿತ್ಯಕರೂ ತಮ್ಮ ಬಗೆಗೆ ಖಾಸಗೀ ಆತ್ಮೀಯತೆ ತೋರಿದರೂ ಬಹಿರಂಗವಾಗಿ ತಮ್ಮೊಡನೆ ಸಹಕರಿಸಲು ತಮ್ಮ ಪುಸ್ತಕಗಳ ಬಗ್ಗೆ ಬರೆಯಲು ಹಿಂಜರಿಯುತ್ತಿದ್ದುದನ್ನು ಸಭೆಗೆ ತೋಡಿಕೊಂಡರು. ಯಾರ ಹೆಸರನ್ನು ಎತ್ತದೆ ತಮಗಾದ ಅನ್ಯಾಯದ ಪುರಾವೆ ಹೇಳುವಾಗ ಸಭೆಯಲ್ಲಿ ಎದುರಿಗೇ ಕುಳಿತಿದ್ದ ಬೇಂದ್ರೆಯವರು ಎದ್ದು ನಿಂತು ಶಂಬಾ ಅವರು ಆಡಿದ ಮಾತುಗಳು ತಮ್ಮನ್ನು ಉದ್ದೇಶಿಸಿಯೇ ಹೇಳಿದವುಗಳು ಎಂದು ಅದಕ್ಕೆ ವಿವರಣೆ

ನೀಡುತ್ತಿರುವಂತೆಯೇ ಅವರಿಬ್ಬರ ನಡುವೆ ಮಾತಿನ ಚಕಮಕಿ ನಡೆದು ಸಭೆ ದಿಗ್ಭ್ರಮೆಗೊಂಡಿತು. ಡಾ. ಪಾವಟೆಯವರು ಇಬ್ಬರನ್ನು ಹೇಗೊ ಸಮಾಧಾನಗೊಳಿಸಿ ಸಮಾರೋಪ ಭಾಷಣ ಮಾಡಿ ಸಭೆಯನ್ನು ಮುಕ್ತಾಯಗೊಳಿಸಿದರು.

ಈ ಪ್ರಸಂಗಕ್ಕೆ ಹಿನ್ನೆಲೆಯಾಗಿದ್ದ ಒಂದು ವಿಷಯವನ್ನು ಇಲ್ಲಿ ಹೇಳಬಹುದು. 'ಕಂನಾಡು' ವಿಚಾರದ ಶಂಬಾ ಅವರ ಗಂಭೀರ ಲೇಖನವೊಂದು 'ಜಯಂತಿ' ಪತ್ರಿಕೆಯಲ್ಲಿ ಪ್ರಕಟವಾಗಿತ್ತು. ಆಗ 'ಕಂ-ನಾಡು' ಪದವು ಜನಪ್ರಿಯವಾಗಿ ಹಲವು ಲೇಖಕರು ಅದನ್ನು ಬಳಸತೊಡಗಿದ್ದರು. (ನಾನು ನನ್ನ ಕವಿತೆಯೊಂದರಲ್ಲಿ ಅದನ್ನು ಬಳಸಿದ್ದೆ. ಐದು ಮಾತ್ರೆಯ ಒಂದು ಗಣವಾಗಿಯೂ ಅದು ಉಪಯುಕ್ತವೆನಿಸಿತ್ತು). ಮುಂದೆ ಅದೇ 'ಜಯಂತಿ'ಯಲ್ಲಿ ಬೇಂದ್ರೆಯವರ 'ಕಿಂ' 'ಕಂ' ಎಂಬ ಲೇಖನ ಪ್ರಕಟವಾಯಿತು. ಗಂಭೀರ ಚರ್ಚೆಗೆ ಬೇಂದ್ರೆಯವರ ವಿಡಂಬನೆಯಿಂದ ಕೂಡಿದ ಉತ್ತರ ಸಭ್ಯತನವಲ್ಲವೆಂದು ಭಾವಿಸಿದ ಶಂಬಾ ಅವರು ಸಂಪಾದಕರಾದ ಬೆಟಗೇರಿ ಕೃಷ್ಣಶರ್ಮಾರಿಗೆ ಈ ಬಗ್ಗೆ ತಮ್ಮ ಅಸಮ್ಮತಿ ಸೂಚಿಸಿದರು. ಯಾವ ಭಾಷಿಕರ ಮೂಲಿಗರು ಯಾರು ಅವರ ನಾಡು-ನುಡಿ, ಸಂಸ್ಕೃತಿ ಬೆಳೆದುದು ಹೇಗೆ ಎಂಬುದನ್ನು ಅರಿಯಲು ಮಾಡಿದ ಪ್ರಯತ್ನದ ವಿಡಂಬನವು ನಡೆದುದನ್ನು ನೋಡಿಯೂ ಸಮಕಾಲೀನ ಸುಸಂಸ್ಕೃತ ವಿದ್ಯಾವಂತರೆಂಬ ವಿದ್ವಾಂಸರು ಇಂಥದನ್ನು ವಿರೋಧಿಸದಿರುವುದಕ್ಕೆ ಶಂಬಾ ಬೇಸರು ಪಟ್ಟುಕೊಂಡಿದ್ದರು.

ಅಂದಿನ ವಿಚಾರ ಸಂಕಿರಣದ ಸಂದರ್ಭದಲ್ಲಿ ಶಂಬಾ ಅವರು ಆಡಿದ ಮಾತುಗಳ ಧಾಟಿಗೆ ಇದೂ ಒಂದು ಕಾರಣವಾಗಿತ್ತೆಂದು ತೋರುತ್ತದೆ. ಆದರೂ ಅಂದಿನ ಸಂದರ್ಭಕ್ಕೆ ಅದು ಅನವಶ್ಯವಾಗಿತ್ತು ಎಂಬ ಅಭಿಪ್ರಾಯವನ್ನು ನಾನೂ ಡಾ. ಕೆ. ಕೃಷ್ಣಮೂರ್ತಿಯವರೂ ಶಂಬಾ ಅವರಿಗೆ ಸಭೆಯ ನಂತರ ಹೇಳಿದೆವು. ಒಂದೆರಡು ದಿನಗಳ ತರುವಾಯ ಶಂಬಾ ಅವರು ನನಗೊಂದು ದೀರ್ಘ ಪತ್ರ ಬರೆದು (೨೮-೭-೧೯೬೭) ಕೆಲ ವಿಷಯಗಳನ್ನು ಮುಕ್ತ ಮನಸ್ಸಿನಿಂದ ನಿರೂಪಿಸಿದ್ದರು. ಅವರ ನೋವನ್ನು ಅರ್ಥಮಾಡಿಕೊಳ್ಳುವ ದೃಷ್ಟಿಯಿಂದ ಅದರ ಕೆಲ ಅಂಶಗಳನ್ನು ಮಾತ್ರ ಇಲ್ಲಿ ಉಲ್ಲೇಖಿಸಬಹುದು.

" 'ಸದೋಷಮತಿ ನತ್ಯಜೇತ್' ಸ್ವರೂಪದ ಕರ್ತವ್ಯವು ನನ್ನನ್ನು ಎದುರಿಸುವಾಗ ಯಾರ ರಾಗದ್ವೇಷಕ್ಕೆ ಅಥವಾ ಟೀಕೆಗೆ ಅಳುಕದೆ, ಆ ಉರಿಯಲ್ಲಿ ನುಗ್ಗಿ ತನ್ನನ್ನು ಹುರುಪಳಿಸಿಕೊಳ್ಳಲಿಕ್ಕೆ ಹಿಂದೆಗೆಯಲಾಗದು ಎಂಬ ನಿಶ್ಚಿತ ಅಭಿಪ್ರಾಯದವನಾಗಿದ್ದೇನೆ. ........... ಸಜ್ಜನ ಹೃದಯಗಳಿಗೆ ಮೊರೆಯಿಡುವ ಹೊರತು ನನ್ನಲ್ಲಿ - ಈ ಅದೀಕ್ಷಿತ ವಿಶ್ವವಿದ್ಯಾಲಯಗಳ ಸೌಭಾಗ್ಯತಿಲಕವಿಲ್ಲದ ಅಸಂಸ್ಕೃತ ವ್ಯಕ್ತಿಗೆ ಬೇರೇನು ದಾರಿ? ಉಪಕುಲಪತಿಗಳೇ ಸಾಕ್ಷಿಯಾಗಿ ನನ್ನ ಈ ವರೆಗಿನ ವ್ಯಾಸಂಗದ ಕಥೆ, ಫಲಿತ ಸಮೀಕ್ಷಿಸಲಿ. ಬೇರೆ ಯಾವ ಸ್ಥಾನ ಮಾನಕ್ಕೂ ನಾನು ಬೆಲೆಗೊಡದೆ ಉಪಕುಲಪತಿ ಡಾ. ಗಾಡಗೀಳರ ಮಿತ್ರ ಡಾ. ಪಾವಟೆ ಅವರೇ ಅಧ್ಯಕ್ಷರಾಗತಕ್ಕದ್ದು, ಇಲ್ಲವಾದರೆ ಈ ಸಮಾರಂಭವೇ ಬೇಡ ಎಂದು ನಿರ್ಧರಿಸಿದೆ. ಈ ನಿರ್ಧಾರದ ಅರ್ಥ ಯಾರು ಏನು ಗ್ರಹಿಸಿರುವರೊ ನಾನರಿಯೆ. ಆದರೆ ನೀವು ಮಾನ್ಯರಿಗೆ ಆಮಂತ್ರಿಸುವಾಗ 'ಸಾಕ್ಷಿ'ಯಾಗಿ

ಇದ್ದುದು ನನ್ನ ಸುದೈವ.... ಅವರ ಸ್ಥಾನಮಾನದ ಆದ್ಯತೆಯ ಲವಲೇಶವೂ ಇಲ್ಲದೆ, ಗೌರವಪೂರ್ವಕವಾಗಿ ಈ ಬಡಪಾಯಿ ಅ-ಶಿಕ್ಷಿತ ಪ್ರಯತ್ನವಾದಿಯನ್ನು ನಡೆಸಿಕೊಂಡ ಆ ೨-೨॥ ತಾಸಿನ ಅನುಭವ ನನಗೆ ನವಚೈತನ್ಯ ದಾಯಿಯೆನಿಸಿತು.

“ಮಹಾರಾಷ್ಟ್ರದಲ್ಲಿ ನನ್ನ ಪುಸ್ತಕ ನಿಷೇಧಿಸಿ ಸುಡುವ ಯೋಜನೆಗಳು ಆದವು. ಅಲ್ಲಿಯ ವಿಚಾರವಂತ ಪತ್ರಿಕಾಕಾರರು, ವಿಮರ್ಶಕ ವಿದ್ವಾಂಸರು ಈ ಕೃತ್ಯವನ್ನು ನಿಷೇಧಿಸಿದ್ದರಿಂದ ನನ್ನ ಹಾಗೂ ಭಾಗವತರ ನಿಷೇಧಕ ಸಭೆಗಳು ಪ್ರತ್ಯಕ್ಷದಲ್ಲಿ ಬಹಿರಂಗವಾಗಿ ನಡೆಯಲಿಲ್ಲ. ಇದು ೧೯೫೨-೫೩ರಲ್ಲಿ. ೧೯೬೭ರ ಮಧ್ಯಕಾಲದಲ್ಲಿ ಪ್ರೊ. ಬೇಡೇಕರ, ಡಾ. ಗ್ರಾಮೋಪಾಧ್ಯೆ, ಡಾ. ಅ.ನಾ. ದೇಶಪಾಂಡೆ ಪ್ರಭೃತಿ ವಿದ್ವಾಂಸರು ದಿನದಿನಕ್ಕೂ ನನ್ನ ವಿಚಾರಗಳಿಗೆ ಹೆಚ್ಚಿನ ಆಧಾರ ದೊರೆತಹಾಗೆ (ಮರಾಠಿ ಸಂಸ್ಕೃತಿ)ಯ ಪಕ್ಷಪಾತಿಗಳಾಗುತ್ತಾರೆ ಎಂಬುದ್ದು ವಾಯಿಯ ಪ್ರೊ. ಜೋಶಿಯವರ ಲೇಖನದಿಂದಲೇ ನನಗೆ ಮೊತ್ತ ಮೊದಲು ಗೊತ್ತಾದುದು. ಸಭೆಯಲ್ಲಿ ಡಾ. ಪಾವಟೆ ಅವರ ಬೆಂಬಲ ದೊರೆತಾಗ, ನಮ್ಮಲ್ಲೂ ಇನ್ನು ನನ್ನ ಖಗ್ರಾಸಗ್ರಹಣ ನಿರಾಸವಾಗತೊಡಗಿತೆಂದು ತೋರಿತು..... ಆದರಿಂದ ನನಗೆ ‘ಕಂ’ ‘ಕಿಂ’ ಎತ್ತಬೇಕಾಯಿತು. ನಮ್ಮ ನಾಡಿನ ಪಟ್ಟಭದ್ರ ಲೇಖಕರು ಒಬ್ಬರೂ ನನ್ನ ಗ್ರಂಥವನ್ನು ವಿಚಾರ ಚರ್ಚೆಗೆ ಎತ್ತಿಲ್ಲ. ನನ್ನ ಗ್ರಂಥದ ಒರತೆಯಿಂದ ನೀರು ಕುಡಿದರೂ ನನ್ನ ಬಾವಿಯಲ್ಲ ಅದು ತಮ್ಮ ಒರತೆ ಎಂದು ಬಗೆಯುತ್ತ ಬಂದಿದ್ದಾರೆ. ಈ ಅನಾಸ್ಥೆ ಅನುಲ್ಲೇಖದಿಂದ ನಡೆದ ‘ಖೂನಿ’ನ ರೀತಿ ಸಾರ್ವಜನಿಕವಾಗಿ ಎಲ್ಲರಿಗೂ ತಿಳಿಯುವದು ಅವಶ್ಯವೆಂದೇ ನನಗೆ ಕರ್ನಾಟ-ಮಹಾರಾಷ್ಟ್ರದ ವಿದ್ವಾಂಸರೊಳಗಿನ ಪ್ರತಿಕ್ರಿಯೆಗಳೊಳಗಿನ ವ್ಯತ್ಯಾಸ ಕಂಡಾಗ ತೋರಿತು.......

“ಸಾಹಿತ್ಯ ಕ್ಷೇತ್ರದಲ್ಲಿ ನಡೆದ ಈ ಬಗೆಯ ಅನ್ಯಾಯ, ಕೊಲೆಪಾತಗಳನ್ನು ಕಂಡೂ ಕಂಡೂ ಅವುಗಳ ನಿಷೇಧವು ಸಕಾಲದಲ್ಲಿ ಆಗದೆ ಇದ್ದರೆ ಜೀವನದಲ್ಲಿ ನೈತಿಕ ಮೌಲ್ಯಗಳ ಸಂರಕ್ಷಣೆಯಾಗುವ ಬಗೆಯಾವುದು ?.... ‘ಉಭಯ ಪಕ್ಷದವರ ತಪ್ಪು ಇರದೆ ಜಗಳವಾಗಲು ಶಕ್ಯವಿಲ್ಲ’ ಎಂಬ ಗ್ರಹಿಕೆ ತೀರ ಸುಳ್ಳಲ್ಲ. ಆದರೆ ಆ ಜಗಳದ ತಳಪಾಯದಲ್ಲಿ ಇರುವ ಕಾರಣಗಳನ್ನು ಕೇಳಲು ದೊರೆತುಬಳಿಕಾದರೂ ಅವುಗಳ ಬಗೆಗೆ ನಿರ್ಣಯಕ್ಕೆ ಬರುವ ಪ್ರಯತ್ನವಾಗುವದು ಅವಶ್ಯವಿಲ್ಲವೆ? ........”

ಆದರೆ ಬರಬರುತ್ತ ಶಂಬಾ ಅವರು ಈ ‘ಖಗ್ರಾಸಗ್ರಹಣ’ದಿಂದ ಮುಕ್ತರಾದರು. ಅವರು ತಮ್ಮ ವಿದ್ವತ್‌ಪೂರ್ಣ ಚಿಂತನೆಗಳಿಂದ ಕರ್ನಾಟಕದ ಸಾಂಸ್ಕೃತಿಕ ಹಾಗೂ ಬೌದ್ಧಿಕ ಕ್ಷೇತ್ರಕ್ಕೆ ಹೊಸ ಆಯಾಮ ನೀಡಿದವರು ಎಂಬುದನ್ನು ವಿದ್ವಾಂಸರು ಕಂಡುಕೊಂಡರು. ಪ್ರತಿಷ್ಠಿತ ವಿಶ್ವವಿದ್ಯಾಲಯ ಗೌರವ ಡಾಕ್ಟರೇಟ್ ಪದವಿ ನೀಡಿ ಅವರನ್ನು ಗೌರವಿಸಿತು. ಉತ್ಕೃಷ್ಟವಾದ ಅಭಿನಂದನ ಗ್ರಂಥವನ್ನು ಸಮರ್ಪಿಸಿ, ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪದವಿ ನೀಡಿ ನಾಡಿನ ಜನತೆ ಅವರನ್ನು ಯೋಗ್ಯ ರೀತಿಯಲ್ಲಿ ಸನ್ಮಾನಿಸುವದರೊಂದಿಗೆ ತನ್ನ ಮಾನವನ್ನೂ ಕಾಪಾಡಿಕೊಂಡಿತು. ಕೊನೆಗಾಲದಲ್ಲಿ ಶಂಬಾ ಅವರು ತೃಪ್ತಿಯಿಂದ, ಸಂತೋಷದಿಂದ ಕಾಲ ಕಳೆದರಾದರೂ ಕನ್ನಡಿಗರ ಸೋಮಾರಿತನ ಹಾಗೂ ಅಭಿಮಾನ ಶೂನ್ಯತೆಯ ಬಗ್ಗೆ

ಅತೃಪ್ತರಾಗಿಯೇ ಇದ್ದರು. ತಮ್ಮ 'ಅನ್ವೇಷಣೆ'ಯ ಹಾದಿಯಲ್ಲಿ ಮಾತ್ರ ಅವರು ಯಥಾ ಪ್ರಕಾರ ಮುಂದುವರಿದಿದ್ದರು.

* * * *

ಬೆಂಗಳೂರು ದೂರದರ್ಶನದ ಡಾ. ಶ್ರೀನಿವಾಸ ಕುಲಕರ್ಣಿಯವರು ಧಾರವಾಡಕ್ಕೆ ಬಂದಾಗ (೧೯೮೯) ಒಪ್ಪೊತ್ತು ನನ್ನೊಡನಿದ್ದರು. ಮರುದಿನ ಮುಂಜಾನೆ ಕೆಲಗೇರಿ ಕೆರೆ ಹಾಗೂ ಬಳಿಯ ಮಾವಿನತೋಪುಗಳಲ್ಲಿ ಸುತ್ತಾಡಿಕೊಂಡು ಬರುವಾಗ ಶಂಬಾ ಅವರ ಆರೋಗ್ಯವನ್ನು ವಿಚಾರಿಸಿಕೊಂಡು ಬರಲು ಅವರ ಮನೆಗೆ ಹೋದೆವು. ಆರೋಗ್ಯ ಅಷ್ಟು ಚೆನ್ನಾಗಿರಲಿಲ್ಲ. ಬಳಲಿದಂತೆ ಕಂಡುಬಂದರು. ಅಂಥದರಲ್ಲೂ ಅವರ ಮನೆಯವರು ನಮಗೆ ಆತಿಥ್ಯ ನೀಡಿದರು. ಮರುದಿನವೇ ಒಂದು ಸಣ್ಣ ಶಸ್ತ್ರ ಚಿಕಿತ್ಸಗಾಗಿ ಶಂಬಾ ಅವರು ಆಸ್ಪತ್ರೆಗೆ ಹೋಗಲಿರುವುದು ತಿಳಿಯಿತು. ದೂರದರ್ಶನಕ್ಕಾಗಿ ಅವರ ಸಂದರ್ಶನ ತೆಗೆದುಕೊಳ್ಳುವ ಕಾರ್ಯಕ್ರಮವೇನೂ ಪೂರ್ವನಿರ್ಧಾರಿತವಾಗಿರಲಿಲ್ಲ. ಆದರೂ ಶ್ರೀನಿವಾಸ ಕುಲಕರ್ಣಿಯವರಿಗೆ ಏನೆನಿಸಿತೊ ಏನೊ ಆ ಕೆಲಸವನ್ನು ಈಗಲೇ ಪೂರೈಸಿಬಿಡಬೇಕೆಂದು ಮನಸ್ಸಾಯಿತು. ಆದರೆ ಸದ್ಯದ ಸ್ಥಿತಿಯಲ್ಲಿ ಅದು ಹೇಗೆ ಸಾಧ್ಯ ? ನಾನು ಬಹಳ ಅನುನಯದಿಂದ ಈ ವಿಷಯವನ್ನು ಶಂಬಾ ಅವರಲ್ಲಿ ಪ್ರಸ್ತಾಪಿಸಿ ಅವರ ಮೂಡನ್ನು ತಿಳಿದುಕೊಳ್ಳಲು ಪ್ರಯತ್ನಿಸಿದೆ. 'ನೀವು ಸಂದರ್ಶನ ತೆಗೆದುಕೊಳ್ಳುವುದಾದರೆ ಆಗಬಹುದು' ಎಂದರು. ಮನೆಯ ಅಂಗಳದ ಕೈತೋಟದಲ್ಲಿ ಕುರ್ಚಿಯ ಮೇಲೆ ಕೂಡ್ರಿಸಿ ಅವರ ಸಂಶೋಧನೆಗೆ ಸಂಬಂಧಪಟ್ಟಂತೆ ಸುಮ್ಮನೆ ನಾಲ್ಕೈದು ಪ್ರಶ್ನೆಗಳನ್ನು ಕೇಳಿದೆ. ತಮ್ಮ ನೆನಪುಗಳೊಂದಿಗೆ ಆಲೋಚನಾಪರವಾಗಿ ಅವರು ಮಾತಾಡುವದು ನಮಗೆ ಮುಖ್ಯವಾಗಿತ್ತು. ಎಲ್ಲಿಯೂ ಕೊಂಡಿ ತಪ್ಪದಂತೆ ಸಹಜವಾಗಿ ನಿಧಾನವಾಗಿ ಅವರು ಅದನ್ನು ಪೂರೈಸಿದರು. ಮಡದಿ ಪಾರ್ವತಿಬಾಯಿಯವರು ಬಾಗಿಕೊಂಡೇ ಬಂದು ಮತ್ತೆ ಎಲ್ಲರಿಗೂ ಚಹಕೊಟ್ಟರು. ದಿಲ್ಲಿ ದೂರದರ್ಶನದ ಪ್ರಾದೇಶಿಕ ಕಾರ್ಯಕ್ರಮದಲ್ಲಿ ಈ ಸಂದರ್ಶನ ಮೊದಲು ಪ್ರಸಾರಗೊಂಡಿತು. ಅದನ್ನು ನೋಡಿ ತಮಗಾದ ಸಂತಸವನ್ನು ನನಗೆ ದೂರವಾಣಿಯ ಮೂಲಕ ತಿಳಿಸಿದರು.

೨೮-೯-೯೧ರಂದು ಶಂಬಾ ಅವನ ನಿಧನವಾರ್ತೆಯನ್ನು ಕೇಳಿದಾಗ - ಎರಡು ವರ್ಷಗಳ ಹಿಂದೆ ಮನೆಗೆ ಹೋದಾಗ ಅವರು ಅಂದ ಮಾತು ನೆನಪಾಯಿತು: 'ಇನ್ನೇನೂ ಬಹಳ ದಿನಗಳಿಲ್ಲ'. ಅವರೆಷ್ಟೇ ಹಣ್ಣಾಗಿದ್ದರೂ ಇನ್ನೂ ಚಟುವಟಿಕೆ ತೋರಿಸುತ್ತಿದ್ದ ಅವರ ಮನೆಯವರನ್ನು ನೆನೆಸಿಕೊಂಡೆ.

ಅಂತ್ಯದರ್ಶನಕ್ಕೆ ಹೋದಾಗ ಆಶ್ಚರ್ಯ! ಶಂಬಾ ಅವರ ಮಗ್ಗುಲದಲ್ಲಿಯೇ ಅವರ ಸಹಧರ್ಮಿಣಿಯೂ ನಿಶ್ಚಿಂತರಾಗಿ ಮಲಗಿದ್ದರು.

(ಶಂ.ಬಾ. ಸ್ಮೃತಿಗಂಧ
೧೯೯೬)

೪

## ವಿ.ಸೀ.: ಮಾಸದ ನೆನಪು

ವಿದ್ಯಾರ್ಥಿ ದೆಸೆಯಲ್ಲಿ ನನಗೆ ಹಾಗೂ ನನ್ನಂಥವರಿಗೆ ಹೊಸಗನ್ನಡ ಕಾವ್ಯದಲ್ಲಿ ಅಭಿರುಚಿ ಹುಟ್ಟಲು ಕಾರಣವಾದದ್ದು ಶ್ರೀಯವರು ಸಂಪಾದಿಸಿದ 'ಕನ್ನಡ ಬಾವುಟ'. ಆಗಿನ ಪ್ರಮುಖ ಕವಿಗಳ ಆಯ್ದ ರಚನೆಗಳು ಒಂದೆಡೆ ಓದಲು ಅದರಲ್ಲಿ ದೊರೆತವು. ಅವುಗಳಲ್ಲಿ ವಿ.ಸೀ. ಅವರ ಮೂರು ಕವನಗಳಿವೆ. ಸರಳ ಹಾಗೂ ಲಲಿತ ಶೈಲಿಯಲ್ಲಿ 'ಲಾಲ್‌ಬಾಗ್' ಬಣ್ಣಬಣ್ಣವಾಗಿ ಕಣ್ಣಮುಂದೆ ಕಟ್ಟಿದರೆ, 'ಕಸ್ಮೈದೇವಾಯ' 'ಅಭೀಃ' ಕವಿತೆಗಳನ್ನು ನಮ್ಮಷ್ಟಕ್ಕೆ ಗಟ್ಟಿಯಾಗಿ ಓದಿಕೊಳ್ಳುತ್ತ, ಅವುಗಳ ಭಾವ-ಅರ್ಥ ಆ ವಯಸ್ಸಿಗೆ ಎಟುಕದಿದ್ದರೂ ಆ ಪದ್ಯಗಳ ಧೀರವಾದ ನಡೆ ಪ್ರಭಾವಶಾಲಿಯಾಗಿ ಮನಸ್ಸನ್ನು ಸೆಳೆದಿದ್ದವು. ಉಳಿದ ಕವಿಗಳ ಜೊತೆಗೆ ವಿ.ಸೀ. ಹೆಸರು ನಮ್ಮ ಮನಸ್ಸಿನಲ್ಲಿ ನಾಟಿದ್ದು ಹೀಗೆ. ಕಾವ್ಯ ಗಾಯನ ಕಾರ್ಯಕ್ರಮದಲ್ಲಿ 'ಎಮ್ಮ ಮನೆಯಂಗಳದಿ' ಹಾಗೂ 'ಕಾದಿರುವಳು ಶಬರಿ' ಕವಿತೆಗಳೂ ಆಗಾಗ ಕಿವಿಗೆ ಬಿದ್ದು ಭಾವತರಂಗಗಳನ್ನು ಎಬ್ಬಿಸುತ್ತಿದ್ದವು. ಆಗ ಬಂದ ಗದ್ಯಕೃತಿಗಳನ್ನಂತೂ ಒಂದು ಸಲ ಓದಿದರೆ ಸಾಲದು, ಮತ್ತೆ ಮತ್ತೆ ಓದಬೇಕೆನಿಸುತ್ತಿತ್ತು. 'ಪಂಪಾಯಾತ್ರೆ' ಹತ್ತಾರು ಸಲ ಓದಿಸಿಕೊಂಡು ಸಂತೋಷ ನೀಡಿದ್ದನ್ನು ಇಂದಿಗೂ ಮರೆತಿಲ್ಲ.

* * * *

ಧಾರವಾಡಕ್ಕೆ ಹೊರಗಿನಿಂದ ಯಾರಾದರೂ ಸಾಹಿತಿಗಳು ಬಂದಾಗ ಅವರ ಭಾಷಣಗಳನ್ನು ನಾನು ತಪ್ಪಿಸಿಕೊಳ್ಳುತ್ತಿರಲಿಲ್ಲ. ಮೇಲಿಂದ ಮೇಲೆ ಧಾರವಾಡಕ್ಕೆ ಬರುತ್ತಿದ್ದವರೆಂದರೆ ಅ.ನ.ಕೃ. ಅವರ ಭಾಷಣಕ್ಕೆ ವಿದ್ಯಾರ್ಥಿಗಳು ಮುಗಿಬೀಳುತ್ತಿದ್ದರು. ಬಿ.ಎಂ.ಶ್ರೀ ಯವರು ಕೆಲದಿನ ಧಾರವಾಡದಲ್ಲಿಯೇ ನೆಲಸಿದ್ದರಿಂದ ೨-೩ ಸಲ ಸಾರ್ವಜನಿಕ ಸಭೆಯಲ್ಲಿ ಅವರ ಮಾತುಗಾರಿಕೆಯನ್ನು ಕೇಳುವ ಭಾಗ್ಯ ಒದಗಿತ್ತು. ಬಹಳ ದಿವಸಗಳಿಂದ ನಾನು ನೋಡಬಯಸಿದ ಹಾಗೂ ಕೇಳಬಯಸಿದ ಸಾಹಿತಿಗಳಲ್ಲಿ ವಿ.ಸೀ. ಅವರೂ ಒಬ್ಬರಾಗಿದ್ದರು. ನಾನು ಬಿ.ಎ. ದಲ್ಲಿದ್ದಾಗ ಆ ಸುಯೋಗವೂ ಒದಗಿ ಬಂದಿತು.

೧೯೪೯-೧೯೫೦ ಮಹಾಕವಿ ರನ್ನನ ಸಹಸ್ರ ಸಾಂವತ್ಸರಿಕೋತ್ಸವದ ನಿಮಿತ್ತ ಕರ್ನಾಟಕ ವಿಶ್ವವಿದ್ಯಾಲಯ ಸಮಾರಂಭವೊಂದನ್ನು ಏರ್ಪಡಿಸಿತ್ತು. ವಿಶ್ವವಿದ್ಯಾಲಯ ಸ್ಥಾಪನೆಗೊಂಡು ಅದೇ ತಾನೇ ಒಂದು ವರ್ಷವಾಗಿದ್ದಿತು. ಪ್ರೊ. ಮಾಳವಾಡರು ವಿಶೇಷ ಅಸ್ಥೆ ವಹಿಸಿದ್ದರಿಂದ

ಕರ್ನಾಟಕ ಕಾಲೇಜಿನ ಬಾಟನಿಹಾಲ್ ಅಂದು ವಿದ್ಯಾರ್ಥಿಗಳಿಂದಲೂ ಸಾಹಿತ್ಯಾಸಕ್ತರಿಂದಲೂ ತುಂಬಿ ತುಳುಕುತ್ತಿತ್ತು. ಅಂದೇ ನನಗೆ ವಿ.ಸೀ. ಯವರ ಪ್ರಥಮ ದರ್ಶನವಾದದ್ದು. ಅಚ್ಚುಕಟ್ಟಾದ ಬಿಳಿರುಮಾಲು, ಅಚ್ಚಬಿಳಿ ಪಂಚೆ, ಮುಚ್ಚುಕೋಟು ಇವು ಅವರ ಮೊದಲ ಆಕರ್ಷಣೆಯಾಗಿದ್ದವು. ಆದರೆ ಉಳಿದೆಲ್ಲವನ್ನೂ ಮರೆಯುವಂತೆ ಮಾಡಿದ್ದು ರನ್ನನ ಕಾವ್ಯವನ್ನು ಕುರಿತು ಅವರು ಅಂದು ಮಾಡಿದ ಉದ್ಬೋಧಕವಾದ ಭಾಷಣ. ಸ್ವಚ್ಛವಾದ, ಸ್ಫುಟವಾದ ಕನ್ನಡದಲ್ಲಿ ಓತಪ್ರೋತವಾಗಿ ಸಾಗುತ್ತಿದ್ದಂತೆಯೇ ತಟ್ಟನೆ ಇಂಗ್ಲಿಷಿಗೆ ಹೊರಳಿ ತಮ್ಮ ಮಾತಿಗೆ ಇನ್ನಷ್ಟು ಪುಷ್ಟಿಯನ್ನು ಒದಗಿಸಿ ವಿಶದಗೊಳಿಸುವ ಅವರ ಭಾಷಣದ ರೀತಿ ಧಾರವಾಡದ ಶ್ರೋತೃಗಳಿಗೆ ಹೊಸ ಅನುಭವವನ್ನು ನೀಡಿತು. ಆಗ ಕರ್ನಾಟಕ ಕಾಲೇಜಿನಲ್ಲಿ ಹೆಚ್ಚಿನ ಸಂಖ್ಯೆಯಲ್ಲಿರುತ್ತಿದ್ದ ಕನ್ನಡೇತರ ಅಧ್ಯಾಪಕರು ಅಂದಿನ ಭಾಷಣದಿಂದ ಪ್ರಭಾವಿತರಾದದ್ದನ್ನು ಕಂಡು ನಮಗೆ ಒಳಗೊಳಗೇ ಹೆಮ್ಮೆಯೆನಿಸಿತು. ಅತ್ತಿಮಬ್ಬೆಯನ್ನು ಕುರಿತ 'ಬಿಳಿಯರಳೆಯಂತೆ, ಗಂಗಾಜಳದಂತೆ...' ಎಂಬ ರನ್ನನ ಪದ್ಯವನ್ನು ಅಂದು ವಿ.ಸೀ. ಅವರು ಓದಿದ ಧಾಟಿ, ಕಾವ್ಯಾತ್ಮಕವಾಗಿ ವಿಶ್ಲೇಷಿಸಿದ ರೀತಿ, ಆ ಸಂದರ್ಭದ ಅವರ ಭಾವಭಂಗಿ ನನ್ನ ಮನಸ್ಸಿನಲ್ಲಿ ಇನ್ನೂ ಅಚ್ಚೊತ್ತಿ ನಿಂತಿದೆ.

* * * *

ನನಗೆ ವಿ.ಸೀ. ಅವರ ಪ್ರತ್ಯಕ್ಷ ಪರಿಚಯವಾದದ್ದು ೧೯೫೪ರಲ್ಲಿ. ಅಷ್ಟೊತ್ತಿಗೆ ನಾನು ಎಂ.ಎ. ಮುಗಿಸಿ ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣ ವಿಭಾಗದಲ್ಲಿ ಕೆಲಸಕ್ಕೆ ಸೇರಿದ್ದೆ. ಆಗ ಗೋಕಾಕರು ಕರ್ನಾಟಕ ಕಾಲೇಜಿನ ಪ್ರಿನ್ಸಿಪಾಲರಾಗಿದ್ದರು. ಸಾನೆ ಗುರೂಜಿಯವರಿಂದ ಪುಣೆಯಲ್ಲಿ ಸ್ಥಾಪಿಸಲ್ಪಟ್ಟ 'ಅಂತರ ಭಾರತಿ' ಸಂಸ್ಥೆ ಮುಂಬಯಿ ರಾಜ್ಯದ ಭಾಷಾ ಸಮ್ಮೇಳನವೊಂದನ್ನು ಗದಗಿನಲ್ಲಿ ಏರ್ಪಡಿಸಲು ಯೋಜಿಸಿತ್ತು. ಭಾಗವತ ಎಂಬ ಹಿರಿಯರು ಆ ಸಂಸ್ಥೆಯ ಮುಖ್ಯಸ್ಥರಾಗಿದ್ದರು. ಎರಡು ದಿನಗಳ ಕಾರ್ಯಕ್ರಮವನ್ನು ರೂಪಿಸಲು ಅವರು ಗೋಕಾಕರನ್ನು ಕೇಳಿಕೊಂಡಿದ್ದರು. ಪ್ರೊ. ಮಾಳವಾಡರೂ, ನಾನೂ ಗೋಕಾಕರ ಜೊತೆಗೂಡಿ ಕಾರ್ಯಕ್ರಮದ ವಿವರಗಳನ್ನು ತಯಾರಿಸಿ ವಿ.ಸೀ. ಅವರನ್ನು ಅಧ್ಯಕ್ಷತೆ ವಹಿಸಲು ಕೇಳಿಕೊಳ್ಳಲಾಯಿತು. ಅದೇ ಹೊತ್ತಿಗೆ ಅವರು ಕೇಂದ್ರ ಸಾಹಿತ್ಯ ಅಕಾಡೆಮಿಯ ಸದಸ್ಯ (ಕನ್ನಡ)ರೂ ಆಗಿದ್ದರು. ಕನ್ನಡ, ಮರಾಠಿ, ಗುಜರಾತಿ, ಉರ್ದು ಭಾಷೆಯ ಪ್ರತಿನಿಧಿಗಳಾಗಿ ಬಂದಿದ್ದ ಲೇಖಕರೂ ಕವಿಗಳೂ ವಿಮರ್ಶಕರೂ ಸಾಹಿತ್ಯಕ ಚರ್ಚೆ ಕವಿಗೋಷ್ಠಿಗಳಲ್ಲಿ ಎರಡೂ ದಿನ ಲವಲವಿಕೆಯಿಂದ ಭಾಗವಹಿಸಿದ್ದರು. ವಿ.ಸೀ. ಯವರು ಅಧ್ಯಕ್ಷರಾಗಿ ಆ ಎಲ್ಲ ಕಾರ್ಯಕ್ರಮಗಳನ್ನು ನಡೆಸಿಕೊಟ್ಟ ರೀತಿ ಚೇತೋಹಾರಿಯಾಗಿತ್ತು. ಸ್ವತಃ ಮಾಸ್ತಿಯವರು ಸಮಾರೋಪ ಭಾಷಣದಲ್ಲಿ ಆ ಬಗ್ಗೆ ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿದರು.

* * * *

೧೯೫೬ರಿಂದ ೫೮ರ ವರೆಗೆ ವಿ.ಸೀ. ಅವರು ಬೆಂಗಳೂರು ಆಕಾಶವಾಣಿ ಕೇಂದ್ರದಲ್ಲಿ Producer, Spoken word ಆಗಿದ್ದರಷ್ಟೆ. ಆ ಸಂದರ್ಭದಲ್ಲಿ ಸಾಹಿತ್ಯವನ್ನು ಕುರಿತು ಒಂದು ಚರ್ಚೆಯನ್ನು ಆಕಾಶವಾಣಿಯ ಮೂಲಕ ನಡೆಸಲಾಯಿತು. ಅದರಲ್ಲಿ ಮಾಸ್ತಿ, ಡಿವಿಜಿ, ಕುವೆಂಪು, ಕಾರಂತ, ಅ.ನ.ಕೃ., ಜಿ.ಪಿ. ರಾಜರತ್ನಂ ಭಾಗವಹಿಸಿದ್ದರು. ಜೊತೆಯಲ್ಲಿ ನಿರ್ವಾಹಕರಾಗಿ ವಿ.ಸೀ. ಇದ್ದರು. ಆಗ ಬೆಂಗಳೂರು ಕೇಂದ್ರದಿಂದ ಪ್ರಕಟವಾಗುತ್ತಿದ್ದ ಆಕಾಶವಾಣಿ ಸಂಚಿಕೆಯೊಂದರಲ್ಲಿ ಇವರೆಲ್ಲರ ಭಾವಚಿತ್ರ ಪ್ರಕಟವಾಗಿತ್ತು. ಕನ್ನಡ ಸಾಹಿತ್ಯದ ದಿಗ್ಗಜರೆಲ್ಲ ಒಂದೆಡೆ ಸೇರಿದ ಆ ಅಪರೂಪದ ಭಾವಚಿತ್ರವನ್ನು ನಾನು ಹೇಗೊ ಪ್ರಯತ್ನಪಟ್ಟು ಬೆಂಗಳೂರು ಆಕಾಶವಾಣಿಯವರಿಂದ ತರಿಸಿಕೊಂಡು ಕಟ್ಟು ಹಾಕಿಸಿ ಇಟ್ಟುಕೊಂಡೆ. ಆಗ ಧಾರವಾಡ ಆಕಾಶವಾಣಿಯಲ್ಲಿ ಕಾರ್ಯಕ್ರಮ ನಿರ್ವಾಹಕರಾಗಿದ್ದ ಡಾ. ಎಚ್.ಕೆ. ರಂಗನಾಥರು ಭಾವಚಿತ್ರವನ್ನು ದೊರಕಿಸುವಲ್ಲಿ ನನಗೆ ನೆರವಾಗಿದ್ದರು.

* * * *

೧೯೫೭ ಇರಬಹುದು, ಬೆಂಗಳೂರು ಆಕಾಶವಾಣಿ ಕೇಂದ್ರ ಕರ್ನಾಟಕದ ಬೇರೆ ಬೇರೆ ಭಾಗಗಳ ಕವಿಗಳಿಂದೊಡಗೂಡಿದ ಕವಿಗೋಷ್ಠಿಯೊಂದನ್ನು ಆಮಂತ್ರಿತ ಶ್ರೋತೃಗಳೆದುರು ಸಾಹಿತ್ಯ ಪರಿಷತ್ತಿನ ಸಭಾಂಗಣದಲ್ಲಿ ಏರ್ಪಡಿಸಿದ್ದಿತು. ಕವಿಗಳಿಗೆ ಒಂದು ವಿಷಯವನ್ನು ಸೂಚಿಸಲಾಗಿತ್ತು - 'ಬುವಿ ನೀಡಿದ ಸ್ಫೂರ್ತಿ' ಎಂಬುದಾಗಿ. ಇದು ವಿ.ಸೀ. ಯವರ ಯೋಜನೆಯೇ ಆಗಿತ್ತು. ಅವರ ಅಧ್ಯಕ್ಷತೆಯಲ್ಲಿಯೇ ಗೋಷ್ಠಿ ನಡೆಯಿತು. 'ಮಣ್ಣಿನ ಮೆರವಣಿಗೆ' ಎಂಬ ನನ್ನ ಕವಿತೆ ಆ ಸಂದರ್ಭದಲ್ಲಿ ರಚಿತವಾದದ್ದು. ಜೊತೆಗೆ ಶಿವರುದ್ರಪ್ಪ, ರಾಮಚಂದ್ರಶರ್ಮ, ಎಕ್ಕುಂಡಿ ಮೊದಲಾದವರು ಗೋಷ್ಠಿಯಲ್ಲಿ ಭಾಗವಹಿಸಿ ತಮ್ಮ ಕವಿತೆಗಳ ವಾಚನ ಮಾಡಿದರು. ಕನ್ನಡದಲ್ಲಿ ನವ್ಯಕಾವ್ಯ ರಭಸದಿಂದ ಪ್ರಾರಂಭಗೊಂಡ ಕಾಲ ಅದು. ವಿ.ಸೀ. ತಮ್ಮ ಅಧ್ಯಕ್ಷ ಭಾಷಣದಲ್ಲಿ ಎಲಿಯಟ್, ಆಡೆನ್, ಸ್ಪೆಂಡರ್, ಲುಯಿ ಮಾಕ್‌ನಿಸ್ ಮೊದಲಾದ ಇಂಗ್ಲಿಷ್ ನವ್ಯ ಕವಿಗಳ ರಚನೆಗಳನ್ನು ಉದಾಹರಿಸುತ್ತ ಕನ್ನಡದಲ್ಲಿ ಬರುತ್ತಿರುವ ನವ್ಯ ಕವಿತೆಗಳ ಜಟಿಲತೆ ಕ್ಲಿಷ್ಟತೆಯ ಬಗೆಗೂ ವಿವರಿಸಿದರು. ಇಲ್ಲಿಯ ತಳಮಳ ಮೈ ಮೇಲೆ ಬರಿಸಿಕೊಂಡದ್ದೆ ? - ಎಂಬ ಸಂದೇಹ ವ್ಯಕ್ತಪಡಿಸಿದರು. ಆದರೆ ಅದರಲ್ಲಿ ಸಂಕುಚಿತ ಭಾವನೆಯಾಗಲೀ ಕೊಂಕು ನುಡಿಯಾಗಲಿ ಇರಲಿಲ್ಲ. ಬೇರೆ ಬೇರೆ ದೇಶಗಳಲ್ಲಿಯ ಸಾಹಿತ್ಯದ ಆಗುಹೋಗುಗಳ ಬಗೆಗಿನ ಅವರ ಅಭ್ಯಾಸ, ತಿಳಿವಳಿಕೆ, ಕಾಣಿಸುವ ಹೊಸ ನೋಟ ನನ್ನನ್ನು ನಿಜಕ್ಕೂ ಅಚ್ಚರಿಗೊಳಿಸಿತು.

ವಿ.ಸೀ. ಅವರನ್ನು ಅವರ ಮನೆಯಲ್ಲಿಯೇ ಕಾಣಬೇಕೆಂಬ ಹಂಬಲ ಮರುದಿನವೇ ಈಡೇರಿತು. ಜೊತೆಯಲ್ಲಿ ಶಿವರುದ್ರಪ್ಪನವರಿದ್ದರು. ನಮ್ಮ ನಮ್ಮ ಹೊಸ ಬರವಣಿಗೆಯ ಬಗ್ಗೆ ಪ್ರೀತಿಯಿಂದ ವಿಚಾರಿಸಿದರು. ಚಾಪೆಯ ಮೇಲೆ ದಿಂಬಿಗೊರಗಿ ಸುತ್ತ ಪುಸ್ತಕಗಳ ಸಾಲುಗಳ ನಡುವೆ ಕುಳಿತು ಅವರು ಮಾತಾಡುವುದರಲ್ಲಿಯೇ ಒಂದು ಬಗೆಯ ಆತ್ಮೀಯತೆ, ಸೊಗಸು, ಸುಖ ನನಗೆ ಕಂಡು ಬಂದವು. ಜೊತೆಗೆ ತಿಂಡಿ, ಕಾಫಿ; ಎಲ್ಲದರಲ್ಲೂ ಒಂದು ಹದ, ರುಚಿ.

'ಸೌಂದರ್ಯ ಸಮೀಕ್ಷೆ'ಯ ಬಗ್ಗೆ ಶಿವರುದ್ರಪ್ಪನವರು ಥೀಸಿಸ್ ಬರೆಯುತ್ತಿರುವುದನ್ನು ತಿಳಿದು ಮಾತು ಆ ಕಡೆಗೆ ಹೊರಳಿತು. ಈ ವಿಷಯಕ್ಕೆ ನೆರವಾಗಬಲ್ಲ ಹಲವಾರು ಇಂಗ್ಲಿಷ್ ಗ್ರಂಥಗಳ ಹೆಸರು ಹೇಳಿದ್ದಲ್ಲದೆ ತಮ್ಮದೇ ಆದ ಕೆಲವು ವಿಚಾರಗಳನ್ನು ತಿಳಿಯಪಡಿಸಲು ಅವರು ಮರೆಯಲಿಲ್ಲ. ಅವರ ಮಾತಿನಲ್ಲಿಯ ಆ ಹಾಸು-ಬೀಸನ್ನು ನಾನು ಉಳಿದೆಡೆಗಳಲ್ಲಿ ಅಷ್ಟರ ಮಟ್ಟಿಗೆ ಕಂಡುದಿಲ್ಲ.

* * * *

೧೯೬೫ರಲ್ಲಿ ಎರ್ನಾಕುಲಂದಲ್ಲಿ ನಡೆದ ಅಖಿಲ ಭಾರತ ಲೇಖಕರ ಸಮ್ಮೇಳನವನ್ನು ಮುಗಿಸಿಕೊಂಡು ಬರುವಾಗ ವಿ.ಸೀ. ಅವರಲ್ಲಿ ಒಂದು ವಿಜ್ಞಾಪನೆ ಮಾಡಿಕೊಂಡಿದ್ದೆ. ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ವಿಶೇಷೋಪನ್ಯಾಸಗಳನ್ನು ನೀಡಬೇಕೆಂದು. ಅವರು ಈಡೇರಿಸಿಕೊಟ್ಟರು. ಆ ಹೊತ್ತಿಗೆ ಅವರು ಹೊನ್ನಾವರ ಕಾಲೇಜಿನ ಪ್ರಿನ್ಸಿಪಾಲರಾಗಿದ್ದರು. ಅದರಿಂದ ಇಡೀ ಉತ್ತರ ಕನ್ನಡ ಜಿಲ್ಲೆಗೇ ಹೊಸ ಚೈತನ್ಯ ಬಂದಂತಾಗಿತ್ತು. ಶೈಕ್ಷಣಿಕವಾಗಿ ಹಾಗೂ ಸಾಹಿತ್ಯಿಕವಾಗಿ ಕುಲಪತಿ ಡಾ. ಡಿ.ಸಿ. ಪಾವಟೆಯವರು ಉದ್ಘಾಟಿಸಿದ ಈ ಉಪನ್ಯಾಸ ಮಾಲೆ ನಾಲ್ಕು ದಿನ ಕೇಳುಗರಿಗೆ ಒಂದು ಹಬ್ಬವಾಗಿ ಪರಿಣಮಿಸಿತು. ವಿದ್ಯಾರ್ಥಿಗಳು, ವಿದ್ವಾಂಸರು ಹಾಗೂ ಸಾಹಿತ್ಯಾಸಕ್ತರಿಂದ ಕಿಕ್ಕಿರಿದಿರುತ್ತಿದ್ದ ಈ ಸಭೆಗೆ ಪ್ರತಿದಿನವೂ ಕವಿ ಬೇಂದ್ರೆಯವರೂ ಡಾ. ಕೆ. ಕೃಷ್ಣಮೂರ್ತಿಯವರಂಥ ವಿದ್ವಾಂಸರೂ ಉಪಸ್ಥಿತರಿದ್ದುದು ವಿ.ಸೀ. ಅವರ ಸಂತೋಷವನ್ನು ಹೆಚ್ಚಿಸಿತು. 'ಸಾಹಿತ್ಯ : ಸಂಪ್ರದಾಯ ಮತ್ತು ಹೊಸ ಮಾರ್ಗ' ಎಂಬ ಪುಸ್ತಕರೂಪದಲ್ಲಿ ಈ ಭಾಷಣಗಳು ಅಚ್ಚಾಗಿ ೧೯೬೭ರಲ್ಲಿ ಪ್ರಕಟಗೊಂಡಿತು. ವಿ.ಸೀ. ಅವರ ವಿಮರ್ಶಾ ಕೃತಿಗಳಲ್ಲಿ ಇದನ್ನು ಮಹತ್ವದ ಗ್ರಂಥವಾಗಿ ಇಂದಿಗೂ ಪರಿಗಣಿಸಲಾಗುತ್ತಿದೆ. ಇದರಲ್ಲಿರುವ ಅಡಿಟಿಪ್ಪಣಿಗಳನ್ನು ಗಮನಿಸಿದರೆ, ವಿ.ಸೀ. ಒಂದು ವಿಷಯವನ್ನು ಕುರಿತು ಪ್ರತಿಪಾದಿಸುವಾಗ ಆನುಷಂಗಿಕವಾಗಿ ಬೇರೆ ಎಷ್ಟೊಂದು ಸಂಗತಿಗಳ ಕಡೆಗೆ ಅವರ ವಿಚಾರಗಳು ಹಬ್ಬಿ ಹರಡಿ ಅದರ ವ್ಯಾಪ್ತಿಯನ್ನು ಹೆಚ್ಚಿಸುತ್ತವೆಂಬುದು ವಿದಿತವಾಗುತ್ತದೆ. "ನನ್ನಲ್ಲಿ ಪ್ರಶ್ನೆಗಳು ಜಾಸ್ತಿ ; ಇಲ್ಲದ ಪ್ರಶ್ನೆ ಎತ್ತಿ ಮನಸ್ಸನ್ನು ಅಸ್ವಸ್ಥ ಮಾಡಿಕೊಂಡಿದ್ದಾರೆಂದು ನನ್ನ ಬರವಣಿಗೆ ಆಕ್ಷೇಪಣೆಗೆ ಗುರಿಯಾಗಿದೆ. ನನ್ನ ದುರದೃಷ್ಟ" - ಇದು ವಿ.ಸೀ. ಅವರ ಆತ್ಮ ವಿಮರ್ಶೆಯ ವಿಶಿಷ್ಟ ಬಗೆ. ಈ ಮಾತು ಕೂಡ ಅಡಿಟಿಪ್ಪಣಿಯಲ್ಲಿ ಬಂದದ್ದೆ.

* * * *

ಈ ಲೇಖನದ ಪ್ರಾರಂಭದಲ್ಲಿ ವಿ.ಸೀ. ಕರ್ನಾಟಕ ವಿಶ್ವವಿದ್ಯಾಲಯ ಏರ್ಪಡಿಸಿದ ರನ್ನ ಕವಿಯ ಸಾವಿರ ವರುಷದ ಹುಟ್ಟುಹಬ್ಬದಲ್ಲಿ ಭಾಗವಹಿಸಿ ಭಾಷಣ ಮಾಡಿದ್ದರ ಬಗ್ಗೆ ಹೇಳಿರುವೆನಷ್ಟೆ. ಆಗ ಒಂದು ಸಂಗತಿ ಜರುಗಿತು. ಆಗ ಸಹಾಯಕ ಕುಲಸಚಿವರಾಗಿದ್ದ ಶ್ರೀ ಸದಾಶಿವ ಒಡೆಯರ ಅವರು ನನಗೆ ಇದನ್ನು ಆಮೇಲೆ ಹೇಳಿದರು. ಆ ವಿಷಯ ಇಷ್ಟು : ವಿ.ಸೀ.ಯವರ ಪ್ರಯಾಣ ಭತ್ಯದ ಕಾಗದವನ್ನು ತಯಾರಿಸಿ ವಿತ್ತಾಧಿಕಾರಿಗಳು ಅವರಿಂದ

ಸಹಿ ಪಡೆದುಕೊಂಡರು. ಆಗಿನ ನಿಯಮದಂತೆ ಅದೇ ಬಿಲ್ಲಿನಲ್ಲಿ 'I generally travel in first class' ಎಂದು ಮುಂತಾಗಿ ಒಂದು statementಗೂ ಅವರ ಸಹಿ ಬೇಕೆಂದು ವಿತ್ತಾಧಿಕಾರಿಗಳು ಕೇಳಿಕೊಂಡಾಗ ವಿ.ಸೀ. ಅದನ್ನು ವಿರೋಧಿಸಿದರು. ಅವರು ಆಗ ಪ್ರಯಾಣಿಸಿದ್ದು ಪ್ರಥಮ ತರಗತಿಯಲ್ಲಿಯೇ ಎಂಬುದು ನಿಜವೇ. ಆದರೆ ಈ ಬಗೆಯ ಸರ್ವಸಾಧಾರಣ ಹೇಳಿಕೆಗೆ ತಾವು ಬದ್ಧರಾಗುವದು ಸಾಧ್ಯವಿಲ್ಲವೆಂದು ಅವರು ಸ್ಪಷ್ಟಪಡಿಸಿದರು. ವಿತ್ತಾಧಿಕಾರಿಗಳು ಈ ನಿಯಮದ ಇಕ್ಕಟ್ಟಿನಲ್ಲಿ ಸಿಕ್ಕು ಒದ್ದಾಡುತ್ತಿರುವಾಗ ಕುಲಪತಿಗಳಾದ ಪಾವಟೆಯವರು ತಮ್ಮ ವಿಶೇಷಾಧಿಕಾರವನ್ನು ಚಲಾಯಿಸಿ ಅವರನ್ನು ಪಾರುಗೊಳಿಸಿದರಂತೆ.

* * * *

ಮಾನವನೆತ್ತರ ಆಗಸದೇರಿಗೆ
ಏರುವವರೆಗೂ ಏರೇವು,
ಮಾನವ ಹೃದಯಕೆ ವಿಶ್ವವಿಶಾಲತೆ
ಹಾಯುವವರೆಗೂ ಹಾದೇವು

ವಿ.ಸೀ. ಅವರ ಕವಿತೆಯ ಈ ಸಾಲುಗಳು ಅವರ ವ್ಯಕ್ತಿತ್ವದ ವೈಶಿಷ್ಟ್ಯವನ್ನು, ವೈಶಾಲ್ಯವನ್ನು ಚೆನ್ನಾಗಿ ಪ್ರತಿಬಿಂಬಿಸುತ್ತವೆಂದು ನನ್ನ ಅನಿಸಿಕೆ.

('ವಿ.ಸೀ. ನೂರರ ನೆನಪು' ೧೯೯೯
ಸಾಹಿತ್ಯ ಸಮಾಹಿತ : ೨೦೦೭)

೫

# ಪ್ರೊ. ಶಿ.ಶಿ. ಬಸವನಾಳರು

"ದೈವವನ್ನು ಹಳಿದು ಮೂಲೆಗೊರಗುವ ಮೂಳನಿಗಲ್ಲ ಇಂದಿನ ಜಗತ್ತು. ಸಾಹಸದಿಂದ ಮುನ್ನುಗ್ಗಿ ಕಾರ್ಯ ಮಾಡುವ ಕರ್ಮಶೀಲನಿಗೆ ಮೀಸಲು ಅದು. ಕಾರಣ ನೀವು ಕೈಕೊಳ್ಳಬಹುದಾದ ಜೀವನದ ಪ್ರತಿಯೊಂದು ಹೋರೆಯಲ್ಲಿ ಅಖಿಲ ಕನ್ನಡದ ದೃಷ್ಟಿಯಿರಲಿ; ವಿಚಾರದ ವಿಮರ್ಶೆ ಇರಲಿ ; ಸ್ವಾತಂತ್ರ್ಯದ ಉಸಿರಿರಲಿ; ವಿಶ್ವಮಾನವ ಹೃದಯವಿರಲಿ."

ಹೀಗೆಂದು ೧೯೪೪ರಲ್ಲಿ ಮೈಸೂರಿನ ಶ್ರೀಸುತ್ತೂರು ಮಠದ ಪ್ರಸಾದ ನಿಲಯದಲ್ಲಿ ನೂತನ ಪದವೀಧರರಾದ ವೀರಶೈವ ತರುಣರಿಗೆ ಉಪದೇಶದ ಭಾಷಣ ಮಾಡುವ ಸಂದರ್ಭದಲ್ಲಿ ಪ್ರೊ. ಶಿವಲಿಂಗಪ್ಪ ಶಿವಯೋಗಪ್ಪ ಬಸವನಾಳ ಅವರು ಹೇಳಿದ ಮಾತಿದು. ಕನ್ನಡನಾಡು, ಕನ್ನಡ ಜನ ಈ ಹಿಂದೆ ಬಾಳಿದಂತೆ ಇನ್ನು ಮುಂದೆಯೂ ಬಾಳಿ, ಬದುಕಿ ಬೆಳಗಬೇಕಾದರೆ ಅವರು ಮಾಡಬೇಕಾಗಿರುವ ಕಾರ್ಯದ ಅರಿವಾಗಬೇಕು. ಈ ಅರಿವು ಪ್ರತಿಯೊಬ್ಬರಲ್ಲಿ ಕರಿಗೊಂಡಷ್ಟು ಕಾರ್ಯರಂಗಕ್ಕಿಳಿದಷ್ಟು ಜನತೆಯ ಕಲ್ಯಾಣ, ದೇಶದ ಮುನ್ನಡೆ ಎಂದು ನಂಬಿ ನಡೆದವರು ಬಸವನಾಳರು. ಶಿಕ್ಷಣ ಸಂಸ್ಥೆಗಳ ಸ್ಥಾಪಕರಾಗಿ, ಪತ್ರಿಕಾಕರ್ತರಾಗಿ, ಸಾಮಾಜಿಕ-ಧಾರ್ಮಿಕ ಚಿಂತಕರಾಗಿ ಅವರು ಗೈದ ನಾಡು-ನುಡಿಯ ಸೇವೆಯ ಹಿಂದಿರುವ ಈ ಕ್ರಿಯಾಶೀಲ ಮನೋಧರ್ಮವನ್ನು ಅರ್ಥಮಾಡಿಕೊಂಡಾಗ ಅವರ ಸಾಧನೆ ವೈಶಿಷ್ಟ್ಯ ಎದ್ದುಕಾಣುತ್ತದೆ.

೧೮೯೩ನೆಯ ನವೆಂಬರ್ ೭ರಂದು ಹಾವೇರಿಯಲ್ಲಿ ಜನಿಸಿದ ಶಿವಲಿಂಗಪ್ಪನವರ ತಾಯಿ ಹೆರೂರು ಮನೆತನದ ಸಿದ್ಧಮ್ಮ. ತಂದೆ ಶಿವಯೋಗಪ್ಪ ಬಳ್ಳಾರಿ ಜಿಲ್ಲೆಯ ಕೊಟ್ಟೂರು, ತೋರಣಗಲ್ಲು, ದರೋಜಿ ಮುಂತಾದೆಡೆ ಸ್ಟೇಶನ್‌ಮಾಸ್ತರರಾಗಿ ಕೆಲಸಮಾಡುತ್ತಿದ್ದರು. ಪ್ರಾಥಮಿಕ ಶಿಕ್ಷಣ ಮುಗಿಸಿದ್ದು ತೆಲಗು ಮಾಧ್ಯಮದಲ್ಲಿ. ಸುಶಿಕ್ಷಿತರಾದ ತಂದೆಯವರ ಮನೆಯಲ್ಲಿಯೇ ಕನ್ನಡ, ಸಂಸ್ಕೃತ ಕಲಿಸಿದರು. ಬಳ್ಳಾರಿಯ ವಾರ್ಡ್ಲಾ ಹೈಸ್ಕೂಲಿನಿಂದ ಗದಗಿಗೆ ಬಂದು ಮುಂದೆ ಧಾರವಾಡದ ಸರಕಾರಿ ಹೈಸ್ಕೂಲು ಸೇರಿ ಶಿವಲಿಂಗಪ್ಪ ೧೯೧೦ರಲ್ಲಿ ಪುಣೆಯ ಡೆಕ್ಕನ್ ಕಾಲೇಜ ಸೇರಿದರು. ಇವರು ಪ್ರಿನ್ಸಿಪಾಲ್ ಎಫ್.ಡಬ್ಲು. ಬೇನ್ ಅವರ ಅಚ್ಚುಮೆಚ್ಚಿನ ಶಿಷ್ಯರಾಗಿ ಅವರು ಬೋಧಿಸುತ್ತಿದ್ದ ಇತಿಹಾಸ, ಅರ್ಥಶಾಸ್ತ್ರ ವಿಷಯಗಳನ್ನು ತೆಗೆದುಕೊಂಡು ಬಿ.ಎ. ಆನರ್ಸ್ ಆದರು. ಆ ಸಂತೋಷವನ್ನು ಹಂಚಿಕೊಳ್ಳಲು ಆ ಹೊತ್ತಿಗೆ ತಂದೆತಾಯಿಗಳಿರಲಿಲ್ಲ.

ಮನೆತನದ ಪರಿಸ್ಥಿತಿ ಚೆನ್ನಾಗಿರದಿದ್ದರೂ ಬಸವನಾಳರು ಧೃತಿಗೆಡದೆ ಮುಂಬಯಿಯಲ್ಲಿ ಎಂ.ಎ. ಅಭ್ಯಾಸ ಮುಂದುವರಿಸಿ ಇತಿಹಾಸ, ಅರ್ಥಶಾಸ್ತ್ರ, ರಾಜ್ಯಶಾಸ್ತ್ರ ವಿಷಯಗಳನ್ನು ಆಯ್ದುಕೊಂಡು ೧೯೧೯ರಲ್ಲಿ ಪ್ರಥಮ ಶ್ರೇಣಿಯಲ್ಲಿ ಎಂ.ಎ. ಪಾಸಾದರು. ಅದೇ ವರ್ಷ ಎಂ.ಆರ್. ಸಾಖರೆಯವರೂ ಸಂಸ್ಕೃತ, ಧರ್ಮಶಾಸ್ತ್ರ ವಿಷಯಗಳಲ್ಲಿ ಪ್ರಥಮ ಶ್ರೇಣಿಯಲ್ಲಿ ಎಂ.ಎ ಮುಗಿಸಿದರು. ಇವರಿಬ್ಬರೂ ಉತ್ತರ ಕರ್ನಾಟಕದಲ್ಲಿ ಮೊಟ್ಟಮೊದಲ ವೀರಶೈವ ಸ್ನಾತಕೋತ್ತರ ಪದವೀಧರರು. ಲಿಂಗಾಯತ ಸಮಾಜದಲ್ಲಿ ಮೊಟ್ಟಮೊದಲು ಎಂ.ಎ. ಪರೀಕ್ಷೆಯಲ್ಲಿ ತೇರ್ಗಡೆಯಾಗುವವರಿಗೆ ಧಾರವಾಡದ ಲಿಂಗಾಯತ ಫಂಡಿನ ಸಂಘ ೧೨೦೦ ರೂಗಳ ಪಾರಿತೋಷಕವಿಟ್ಟಿದ್ದಿತು. ಬಸವನಾಳರು ತ್ಯಾಗಬುದ್ಧಿಯಿಂದ ಆ ನಿಧಿಯನ್ನು ಸಾಖರೆಯವರೊಂದಿಗೆ ಸಮನಾಗಿ ಹಂಚಿಕೊಡುವಂತೆ ನೋಡಿಕೊಂಡರು. ಇಷ್ಟೇ ಅಲ್ಲ, ಹಣದ ಬದಲು ಅಷ್ಟೇ ಬೆಲೆಯ ಗ್ರಂಥಗಳನ್ನು ಸಮಿತಿಯಿಂದ ಕೋರಿ ಪಡೆದು ತಮ್ಮ ಪುಸ್ತಕ ಪ್ರೀತಿಯನ್ನು ಮೆರೆದರು. ಈ ಎರಡೂ ಸಂಗತಿಗಳು ಅವರ ಬಾಳಿನ ದಿಕ್ಸೂಚಿಗಳೆನ್ನಬಹುದು.

ಎಂ.ಎ. ಪಾಸಾದವರಿಗೆ ಸರಕಾರ ಉನ್ನತೋನ್ನತ ಹುದ್ದೆ ನೀಡುತ್ತಿದ್ದ ಆ ಕಾಲದಲ್ಲಿ ಬಸವನಾಳರು ಅಧಿಕಾರದ ಅವಕಾಶವನ್ನು ತೊರೆದು ತಮ್ಮ ಪ್ರದೇಶದ ಜನಕ್ಕಿದ್ದ ಉಚ್ಚ ಶಿಕ್ಷಣದ ಸೌಲಭ್ಯದ ಕೊರತೆಯನ್ನು ನೀಗಿಸುವ ಮಹತ್ವಾಕಾಂಕ್ಷೆಯಿಂದ ತಮ್ಮಂತೆಯೇ ಆದರ್ಶವಾದಿಗಳಾಗಿದ್ದ ಆರು ಜನ ಸ್ನೇಹಿತರೊಂದಿಗೆ (ಪಂಡಿತ ಚಿಕ್ಕೋಡಿ, ಎಂ.ಆರ್. ಸಾಖರೆ, ಬಿ.ಬಿ. ಮಮದಾಪುರ, ಬಿ.ಎನ್. ಹಂಚಿನಾಳ, ಎಚ್.ಎಫ್. ಕಟ್ಟೀಮನಿ ಸರದಾರ ವೀರನಗೌಡ ಪಾಟೀಲ) ಸತ್ಯ, ಪ್ರೇಮ, ತ್ಯಾಗದ ಧ್ಯೇಯವಿಟ್ಟುಕೊಂಡು ೧೯೧೬ ಅಕ್ಟೋಬರ್ ೧೧ರಂದು ಕರ್ನಾಟಕ ಲಿಂಗಾಯತ ಎಜ್ಯುಕೇಶನ್ ಸೊಸಾಯಿಟಿಯ ಕೇಂದ್ರ ಕಚೇರಿಯನ್ನು ಮರಾಠಿಯ ಪ್ರಭಾವಕ್ಕೆ ಒಳಗಾಗಿದ್ದ ಬೆಳಗಾವಿಯಲ್ಲಿ ಸ್ಥಾಪಿಸಿದ್ದು ಅವರ ದೂರದೃಷ್ಟಿಗೆ ಸಾಕ್ಷಿಯಾಗಿದೆ. ಪುಣೆಯ ಎಜ್ಯುಕೇಷನ್ ಸೊಸಾಯಿಟಿಯ ಮಾದರಿಯಲ್ಲಿಯೇ ಆ ಸಂಸ್ಥೆಯ ಘಟನೆ ರಚನೆಗೊಂಡಿತು. ತಮ್ಮ ತ್ಯಾಗ, ಪರಿಶ್ರಮದ ಬಂಡವಾಳನ್ನೇ ತೊಡಗಿಸಿ ಈ 'ಸಪ್ತರ್ಷಿಗಳು' ಬೆಳಗಾವಿಯಲ್ಲಿ ಗಿಲಗಂಚಿ ಅರಟಾಳ ಹೈಸ್ಕೂಲನ್ನು ಪ್ರಾರಂಭಿಸಿ, ಅಲ್ಲಿ ತೀರ ಕಡಿಮೆ ವೇತನ ತೆಗೆದುಕೊಂಡು ಶಿಕ್ಷಕರಾಗಿ ದುಡಿದರು. ದಾವಣಗೆರೆಯ ಸುಪ್ರಸಿದ್ಧ ವರ್ತಕರಾದ ಸಾವಳಗಿ ನಾಗಪ್ಪನವರ ಮಗಳು ಶಾಂತಾದೇವಿಯೊಡನೆ ೧೯೨೦ರಲ್ಲಿ ಇವರ ಮದುವೆ ನೆರವೇರಿತು.

ಬಸವನಾಳರು ಸ್ವಾಧ್ಯಾಯದಿಂದಲೇ ಕನ್ನಡ ಮತ್ತು ಇಂಗ್ಲಿಷಿನಲ್ಲಿ ಪರಿಣತಿ ಹೊಂದಿದ್ದರು. ಒಮ್ಮೆ ಹೆನ್ಕೆಲ್ ಎಂಬ ಯುರೋಪಿಯನ್ ಶಾಲಾ ಇನ್‌ಸ್ಪೆಕ್ಟರ್ ಇವರ ಹೈಸ್ಕೂಲಿಗೆ ಬಂದಾಗ ಬಸವನಾಳರು ಮ್ಯಾಟ್ರಿಕ್ ವರ್ಗದಲ್ಲಿ ಕಲಿಸುತ್ತಿದ್ದ ಇಂಗ್ಲಿಷ್ ಪಾಠವನ್ನು ಅವಲೋಕಿಸಿ ಒಂದು ಶಬ್ದದ ಉಚ್ಚಾರ ಸರಿಯಿಲ್ಲ, ತಿದ್ದಿಕೊಳ್ಳಬೇಕೆಂದು ಸಲಹೆಯಿತ್ತರು. ಬಸವನಾಳರು ತಮ್ಮದೇ ಸರಿಯೆಂದು ಪಟ್ಟು ಹಿಡಿದು, ಕೊನೆಗೆ ಆಕ್ಸ್‌ಫರ್ಡ್ ನಿಘಂಟು ತೋರಿಸಿ ಅವರಿಗೆ ಮನವರಿಕೆ ಮಾಡಿಕೊಟ್ಟಾಗ ಅವರೂ ಅಚ್ಚರಿಪಟ್ಟು ಒಪ್ಪಿ ಮೆಚ್ಚಿಕೊಂಡರು. ೧೯೨೨ರಲ್ಲಿ

ಧಾರವಾಡದಲ್ಲಿ ರಾಜಾಲಖಮಗೌಡ ಸರ್‌ದೇಸಾಯಿ ಹೈಸ್ಕೂಲು ಸ್ಥಾಪನೆಗೊಳ್ಳಲು ಬಸವನಾಳರು ಅದರ ಸ್ಥಾಪಕ ಮುಖ್ಯೋಪಾಧ್ಯಾಯರಾಗಿ ೧೯೩೩ರ ವರೆಗೆ ಕೆಲಸ ಮಾಡಿ ಅದಕ್ಕೆ ಭದ್ರ ನೆಲೆಗಟ್ಟು ಒದಗಿಸಿದರು. ಮುಂದೆ ೧೯೩೩ರಲ್ಲಿ ಈಗ ಮುಂಬಯಿ ರಾಜ್ಯದ ವಿದ್ಯಾಮಂತ್ರಿಗಳಾಗಿದ್ದ ಸರ್‌ಸಿದ್ದಪ್ಪ ಕಂಬಳಿಯವರ ಸಹಾಯದಿಂದ ಬೆಳಗಾವಿಯಲ್ಲಿ ಲಿಂಗರಾಜ ಕಾಲೇಜು ಅಸ್ತಿತ್ವಕ್ಕೆ ಬಂದಿತು. (೧೯೧೭ರಲ್ಲಿ ಪ್ರಾರಂಭವಾಗಿದ್ದ ಧಾರವಾಡದ ಕರ್ನಾಟಕ ಕಾಲೇಜನ್ನು ಬಿಟ್ಟರೆ ಉತ್ತರ ಕರ್ನಾಟಕದಲ್ಲಿ ಆಗ ಇನ್ನೊಂದು ಕಾಲೇಜಿರಲಿಲ್ಲ). ಅದೇ ತಾನೆ ಇಂಗ್ಲೆಂಡಿನಿಂದ ಡಾಕ್ಟರೇಟ್ ಪಡೆದು ಮರಳಿದ್ದ ಡಾ. ಎಸ್.ಸಿ. ನಂದೀಮಠರನ್ನು ಪ್ರಿನ್ಸಿಪಾಲರನ್ನಾಗಿ ಮಾಡಿ ಬಸವನಾಳರು ತಮ್ಮ ಶಿಷ್ಯನ ಕೆಳಗೆ ಉಪ ಪ್ರಿನ್ಸಿಪಾಲರಾಗಿ ದುಡಿಯಲು ಹಿಂದೆ ಮುಂದೆ ನೋಡಲಿಲ್ಲ. ಬಸವನಾಳರು ಪ್ರಮುಖರಾಗಿದ್ದ ಈ 'ಸಪ್ತರ್ಷಿ'ಗಳ ತ್ಯಾಗದ ಫಲದಿಂದ ಕೆ.ಎಲ್.ಇ. ಸೊಸಾಯಿಟಿ ಇಂದು ವೈದ್ಯಕೀಯ ಮತ್ತು ಎಂಜಿನಿಯರಿಂಗ್ ಕಾಲೇಜುಗಳನ್ನೊಳಗೊಂಡು ಅರವತ್ತೈದಕ್ಕೂ ಮಿಕ್ಕಿ ವಿದ್ಯಾಸಂಸ್ಥೆಗಳನ್ನು ವ್ಯವಸ್ಥಿತವಾಗಿ ನಡೆಸುವ ಹಿರಿಮೆಯನ್ನು ಪಡೆದು ಕರ್ನಾಟಕದ ಕೀರ್ತಿಯನ್ನು ಬೆಳಗುತ್ತಿದೆ.

ಕರ್ನಾಟಕ ವಿಶ್ವವಿದ್ಯಾಲಯದ ಸ್ಥಾಪನೆಯಲ್ಲಿ ಬಸವನಾಳರು ವಹಿಸಿದ ಪಾತ್ರ ಬಹಳ ಮುಖ್ಯವಾದದ್ದು. ಪ್ರಾದೇಶಿಕ ವಿಶ್ವವಿದ್ಯಾಲಯಗಳ ಸ್ಥಾಪನೆಗೆ ಮುಂಬಯಿ ವಿಶ್ವವಿದ್ಯಾಲಯ ಸೆನೆಟ್ ಒಪ್ಪಿಕೊಂಡಿದ್ದರೂ ಅದಕ್ಕೆ ಯೋಗ್ಯ ಚಾಲನೆ ದೊರತಿರಲಿಲ್ಲ. ಬಸವನಾಳರೂ ಮಾಳವಾಡರೂ ಜೊತೆಗೂಡಿ A case for Karnataka University ಎಂಬ ಚಿಕ್ಕ ಹೊತ್ತಗೆಯನ್ನು ಹೊರತಂದರು. ೧೯೫೪ರಲ್ಲಿ ವಿಶ್ವವಿದ್ಯಾಲಯ ಸಮಿತಿಯ ವ್ಯವಸ್ಥಾಪಕ ಮಂಡಲಿ ಪುನರ್ನಿಯೋಜಿತಗೊಂಡು ಬಸವನಾಳರು ಅದರ ಕಾರ್ಯಾಧ್ಯಕ್ಷರಾದ ಮೇಲೆ ಅವರ ಅವಿರತ ಪ್ರಯತ್ನದಿಂದ ೧೯೪೯ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಕನಸು ನನಸಾಯಿತು. ೧೯೫೦ರಲ್ಲಿ ವಿಶ್ವವಿದ್ಯಾಲಯದ ಸೆನೆಟ್, ಸಿಂಡಿಕೇಟ್, ಅಕಾಡೆಮಿಕ್ ಕೌನ್ಸಿಲ್‌ಗಳಿಗೆ ಸದಸ್ಯರಾಗಿ ಆಯ್ಕೆಗೊಂಡರು. ಆದರೆ ಕುಲಪತಿ ಹುದ್ದೆಗೆ ಶ್ರೀ ಸಿ.ಸಿ. ಹುಲಕೋಟಿ ಅವರೊಂದಿಗೆ ಸ್ಪರ್ಧಿಸಿ ಸೋಲನ್ನು ಅನುಭವಿಸಿದಾಗ ಮನಸ್ಸಿಗೆ ಆಘಾತವೆನಿಸಿದರೂ ಅದು ತಾತ್ಕಾಲಿಕ ಮಾತ್ರ. ಆದರಿಂದ ವಿಚಲಿತರಾಗದೆ ಅಂದಿನ ಅದೇ ಸೆನೆಟ್ ಸಭೆಯಲ್ಲಿ ವಿಶ್ವವಿದ್ಯಾಲಯದ ಆಯ-ವ್ಯಯ ಪತ್ರಿಕೆಯನ್ನು ಸಮಾಧಾನ ಚಿತ್ತದಿಂದ ಮಂಡಿಸಿ ತಮ್ಮ ಸಮಚಿತ್ತದ ಮೇಲ್ಮೆಯನ್ನು ಮೆರೆದರು. ಕೊನೆಯವರೆಗೂ ವಿಶ್ವವಿದ್ಯಾಲಯದ ಬೆಳವಣಿಗೆಗಾಗಿ ದಣಿವರಿಯದೆ ದುಡಿದರು. ಅದೇ ರೀತಿ ಕರ್ನಾಟಕ ಏಕೀಕರಣ ಚಳುವಳಿಯ ಎಲ್ಲ ಹಂತಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡು ಆರ್ಥಿಕ ದೃಷ್ಟಿಯಿಂದ ಏಕೀಕೃತ ಕರ್ನಾಟಕವು ಎಂದಿಗೂ ಕೊರತೆಯ ಪ್ರಾಂತವಾಗಲಾರದೆಂದು ಅಂಕಿಸಂಖ್ಯೆಗಳಿಂದ ಸಪ್ರಮಾಣವಾಗಿ ವಿರೋಧಿಗಳಿಗೆ ಮನಗಾಣಿಸಿಕೊಟ್ಟರು.

ಬಸವನಾಳರು ಹಚ್ಚಿಕೊಂಡಿದ್ದ ಮತ್ತೊಂದು ಮಹತ್ವದ ಸಂಸ್ಥೆಯೆಂದರೆ ನಾಡಿನ ಸಂಘ ಸಂಸ್ಥೆಗಳಿಗೆ ಸಾಂಸ್ಕೃತಿಕವಾಗಿ ಮಾತೃಸ್ವರೂಪದಲ್ಲಿದ್ದ ಕರ್ನಾಟಕ ವಿದ್ಯಾವರ್ಧಕ ಸಂಘ. ಈ

ಸಂಘದ ಕಾರ್ಯಾಧ್ಯಕ್ಷರಾಗಿ ಇವರು ೧೯೨೭-೧೯೩೨, ೧೯೩೯-೪೪ ಹೀಗೆ ಹತ್ತು ವರ್ಷಗಳ ಕಾಲ ಅದಕ್ಕೆ ಅಪೂರ್ವ ಸೇವೆ ಸಲ್ಲಿಸಿದರು. ಸಂಘದ ಕಾರ್ಯಕಲಾಪಗಳಲ್ಲಿ ಅವರ ಜೊತೆಗಿದ್ದ ಸಾಹಿತಿ ಶ್ರೀರಂಗರು ಬಸವನಾಳರನ್ನು 'ವಿಶಾಲಹೃದಯದ ವೀರಕನ್ನಡಿಗ' ಎಂದು ಕರೆದು ಅವರ ಬಗ್ಗೆ ಹೀಗೆ ನುಡಿದಿದ್ದಾರೆ : "ಕೆಲಸಕ್ಕೆ ಮುಂದಾಗುವವರಾದರೂ ಅದರ ಪ್ರತಿಫಲದ ವಿಷಯದಲ್ಲಿ ಹಿಂದೆ ಮರೆಯಾಗುವರು; ಅನುಭವ, ಜ್ಞಾನಗಳಿಂದ ಹಿರಿಯರಾದರೂ ಎಲ್ಲರೊಡನೆ ಬೆರೆತುಕೊಳ್ಳುವರು; ಸ್ವಭಾವದಿಂದ ಶಾಂತರಾದರೂ ಸತ್ಯದ ಹಟವಾದಿಗಳಾದವರು; ಜೊತೆಗೆ ಹಾಸ್ಯರಸದ ಸವಿಗಾರರಾದವರು.... ಬಸವನಾಳರು ಹುಟ್ಟಿನಿಂದಲೇ ಪಕ್ಷಾತೀತ ಪ್ರವೃತ್ತಿಯವರು ಎಂದು ನನ್ನ ದೃಢವಾದ ನಂಬಿಕೆ." ಬಸವನಾಳರ ಸಾಂಸ್ಕೃತಿಕ ವ್ಯಕ್ತಿತ್ವದ ಮಹತಿಯನ್ನು ಶ್ರೀರಂಗರ ಈ ನುಡಿಗಳು ಯಥಾವತ್ತಾಗಿ ಎತ್ತಿ ತೋರಿಸುತ್ತವೆ.

ಕರ್ನಾಟಕದ ಆರ್ಥಿಕ ಪರಿಸ್ಥಿತಿಯು ಸುಧಾರಿಸಬೇಕಾದರೆ ಸಹಕಾರಿ ಸಂಸ್ಥೆಗಳು ಬೆಳೆಯಬೇಕೆಂದು ಬಸವನಾಳರು ಸಹಕಾರಚಳುವಳಿಯಲ್ಲಿಯೂ ಮನಸ್ಸು ಹಾಕಿದರು. ಶ್ರೀ ಎಸ್.ವಿ. ಮೆಣಸಿನಕಾಯಿ ಹಾಗೂ ರಾ.ಬ. ಆರ್.ಸಿ. ಅರಟಾಳ ಅವರ ಪ್ರಯತ್ನದಿಂದ ೧೯೧೯ರಲ್ಲಿಯೇ ಧಾರವಾಡದಲ್ಲಿ ಕರ್ನಾಟಕ ಸೆಂಟ್ರಲ್ ಕೋ-ಆಪರೇಟಿವ್ ಬ್ಯಾಂಕ್ ಅಸ್ತಿತ್ವಕ್ಕೆ ಬಂದು ಮುನ್ನಡೆಯುತ್ತಿರುವ ಸಂದರ್ಭದಲ್ಲಿ ಬಸವನಾಳರು ೧೯೨೨ ರಿಂದ ೧೯೨೫ರ ವರೆಗೆ ಅದರ ಪ್ರಥಮ ಮ್ಯಾನೇಜಿಂಗ್ ಡಾಯರೆಕ್ಟರ್ ಆಗಿ ದಕ್ಷತೆಯಿಂದ ಕಾರ್ಯಗೈದು ಸಹಕಾರ ರಂಗದಲ್ಲಿಯೂ ಹೆಸರು ಗಳಿಸಿದರು. ಕೆಲವು ಕಾಲ ಕರ್ನಾಟಕ ಡಿವಿಜನಲ್ ಕೋ ಆಪರೇಟಿವ್ ಇನ್‌ಸ್ಟಿಟ್ಯೂಟಿನ ಗೌರವ ಕಾರ್ಯದರ್ಶಿಗಳಾಗಿ, ಈ ಸಂಸ್ಥೆಯು ನಡೆಸುತ್ತಿದ್ದ ಸಹಕಾರಿ ತರಬೇತಿ ಕೇಂದ್ರದ ಪ್ರಿನ್ಸಿಪಾಲರಾಗಿಯೂ ಸ್ಮರಣೀಯ ಸೇವೆಗೈದರು. ಮುಂಬಯಿ ಸರಕಾರ ಇವರನ್ನು ಇಂಡಸ್ಟ್ರಿಯಲ್ ಡಿಸ್ಪ್ಯೂಟ್ ಆ್ಯಕ್ಟ್ ೧೯೩೮ರ ಪ್ರಕಾರ ನೌಕರರ ಹಿತಾಸಕ್ತಿಯನ್ನು ಪ್ರತಿನಿಧಿಸುವ ಸದಸ್ಯರಾಗಿ ನಾಮಕರಣ ಮಾಡಿದ್ದನ್ನು ಇಲ್ಲಿ ನೆನೆಯಬಹುದು.

ವೀರಶೈವ ಮಹಿಳೆಯರು ಸಂಘಟಿತರಾಗಿ ಸಾಮಾಜಿಕ ಜೀವನದಲ್ಲಿ ಮುಂದುವರಿಯಬೇಕೆಂಬ ಉದ್ದೇಶ ಹಾಗೂ ಧರ್ಮತತ್ತ್ವಗಳನ್ನು ತಿಳಿದಿರಬೇಕೆಂಬ ಮಹದಾಸೆ ಬಸವನಾಳರದಾಗಿದ್ದಿತು. ೧೯೩೮ರಲ್ಲಿ 'ಅಕ್ಕನ ಬಳಗ' ಧಾರವಾಡದಲ್ಲಿ ಪ್ರಾರಂಭವಾಗಲೂ ಇವರೇ ಕಾರಣರಾದರು. ಪ್ರಾರಂಭದ ದಿಸೆಯಲ್ಲಿ ಅವರ ಮನೆಯಲ್ಲಿಯೇ ಬಳಗದ ಕಾರ್ಯಚಟುವಟಿಕೆಗಳ ಬೀಜಾಂಕುರವಾಯಿತು. ಆರುಜನ ಹೆಣ್ಣುಮಕ್ಕಳು, ನಾಲ್ವರು ಗಂಡುಮಕ್ಕಳನ್ನು ಪಡೆದ ಅವರ ಪರಿವಾರ ದೊಡ್ಡದು. ಕುಟುಂಬ ವತ್ಸಲರಾದ ಅವರಲ್ಲಿ ಪಿತೃವಾತ್ಸಲ್ಯ, ಮಾತೃವಾತ್ಸಲ್ಯ, ಬಂಧುಪ್ರೇಮ, ಮಿತ್ರ ಸ್ನೇಹ ಇವೆಲ್ಲವೂ ಕೇಂದ್ರೀಕೃತವಾಗಿದ್ದುದನ್ನು ಅವರ ಜೊತೆಗೇ ಬಾಳಿದ ಅವರ ತಮ್ಮ ವಿರೂಪಾಕ್ಷಪ್ಪ ಅಂತಃಕರಣಪೂರ್ವಕ ನೆನೆದಿದ್ದಾರೆ.

ಸಾಹಿತ್ಯ-ಸಂಶೋಧನೆ-ಸಂಪಾದನೆಯ ಕ್ಷೇತ್ರದಲ್ಲಿ ಬಸವನಾಳರು ಸಲ್ಲಿಸಿದ ಸೇವೆ ಅತ್ಯಂತ ಪ್ರಮುಖವಾದದ್ದು ಹಾಗೂ ಚಿರಸ್ಥಾಯಿಯಾದದ್ದು. ಅವರ ಸ್ವತಂತ್ರ ಕೃತಿಗಳು ಹಾಗೂ ಕಾವ್ಯ ಶಾಸ್ತ್ರ ಕೃತಿಗಳ ಪರಿಷ್ಕರಣ ಎಂದು ಎರಡು ಭಾಗಗಳಾಗಿ ಇದನ್ನು ಪರಿಶೀಲಿಸಬಹುದು.

ಶಿಕ್ಷಣ ವ್ಯವಸ್ಥೆಯಲ್ಲಿ ಕನ್ನಡ ದೀನ ಸ್ಥಿತಿಯಲ್ಲಿದ್ದಾಗ ಅದಕ್ಕೆ ಅಗತ್ಯವಾಗಿದ್ದ ಕೆಲವು ಪಠ್ಯಪುಸ್ತಕಗಳ ರಚನೆಗೆ ಬಸವನಾಳರು ಕೈಹಾಕಿದರು. ಕನ್ನಡದ ಅಭಿಮಾನ ಮತ್ತು ಮಾತೃಭಾಷಾ ಮಾಧ್ಯಮದ ಔಚಿತ್ಯ-ಇವುಗಳನ್ನು ಇವರು ದೃಷ್ಟಿಯಲ್ಲಿಟ್ಟುಕೊಂಡುದು ಸ್ಪಷ್ಟವಾಗುತ್ತದೆ. ಹಲಲಿ ಹಂಪಯ್ಯನವರೊಂದಿಗೆ ಕೂಡಿ ಬರೆದ 'ಇಂಗ್ಲೆಂಡಿನ ಅರ್ವಾಚೀನ ಇತಿಹಾಸ' ಹಾಗೂ 'ಹಿಂದೂಸ್ಥಾನದ ಇತಿಹಾಸ' ಇವು ಅಂದಿನ ಮಹತ್ವದ ಪ್ರಕಟನೆಗಳು. ಪಂಡಿತ ಚೆ.ಎ. ಕವಲಿಯವರ ಸಹಕಾರದೊಂದಿಗೆ ರಚಿಸಿದ 'ಕನ್ನಡ ಚೆನ್ನುಡಿ'ಯ ನಾಲ್ಕು ಭಾಗಗಳು ಕನ್ನಡ ಭಾಷೆಯ ವ್ಯಾಕರಣವನ್ನು ಬೇರೆ ಬೇರೆ ವರ್ಗಗಳಿಗೆ ಬೋಧಿಸುವಂಥವು. ಇವುಗಳಿಗೆ ಬರೆದ ಮೊದಲ ಮಾತಿನಲ್ಲಿ ಪ್ರಸ್ತಾಪಿಸಿದ ವಿಚಾರಗಳು ಇಂದಿಗೂ ಮನನೀಯವಾಗಿವೆ.

ಬಸವನಾಳರ ಮಹತ್ವದ ಸ್ವತಂತ್ರ ಕೃತಿಯೆಂದರೆ 'ವೀರಶೈವದ ಹುಟ್ಟು-ಬೆಳವಣಿಗೆ', (ಕನ್ನಡ ಸಂಶೋಧನ ಸಂಸ್ಥೆಯಲ್ಲಿ ಮಾಡಿದ ಮೂರು ಉಪನ್ಯಾಸಗಳ ಸಂಗ್ರಹ) ವೀರಶೈವ ಧರ್ಮದ ಮೂಲ, ಬೆಳವಣಿಗೆ, ಅದರ ಆಧ್ಯಾತ್ಮಿಕ ಸ್ವರೂಪ ಹಾಗೂ ಸಮಾಜ ಚಿಂತನೆಯ ವಿಷಯಗಳನ್ನು ಇದರಲ್ಲಿ ಸಮರ್ಥವಾಗಿ ನಿರೂಪಿಸಲಾಗಿದೆ. ಮೊದಲ ಭಾಗದಲ್ಲಿ 'ವೀರಶೈವ' ಮತ್ತು 'ಲಿಂಗಾಯತ' ಪದಗಳ ವ್ಯುತ್ಪತ್ತಿ ಮತ್ತು ಅರ್ಥಗಳನ್ನು ಕುರಿತು ದೀರ್ಘವಾಗಿ ವಿವರಣೆ ನೀಡಲಾಗಿದೆ. ತುಲನಾತ್ಮಕ ಚರ್ಚೆ, ತಲಸ್ಪರ್ಶಿಯಾದ ವಿಶ್ಲೇಷಣೆಯನ್ನು ಇಲ್ಲಿ ಕಾಣಬಹುದು. 'ತಾತ್ವಿಕವಾಗಿ ವಿವೇಚಿಸುವುದಾದರೆ ಜನಸಾಮಾನ್ಯರಲ್ಲಿ ಬಳಕೆಯಲ್ಲಿರುವ 'ಲಿಂಗಾಯತ' ಎಂಬ ಪದವೇ ಒಟ್ಟು ಅರ್ಥಗರ್ಭಿತವೂ ಪ್ರಶಸ್ತವೂ ಆಗಿದೆ ಎಂದು ಕಂಡುಬರುತ್ತದೆ. ಆದರೆ ಇದನ್ನು ಕಡೆಗಾಣಿಸಿದ ವಿದ್ವಾಂಸರೇ ಬಹಳ' ಎಂದು ಹೇಳುವಲ್ಲಿ ಅವರ ಸ್ಪಷ್ಟವಾದ ಮನೋಭಾವ ವ್ಯಕ್ತವಾಗಿದೆ. "ಲಿಂಗಮಧ್ಯೇ ಜಗತ್ಸರ್ವಂ" ಎಂಬ ತತ್ತ್ವವನ್ನು ನಂಬಿ ಲಿಂಗದಲ್ಲಿಯೇ ಸಂಪೂರ್ಣ ಮಾರ್ಪಾಟು ಕಂಡಿತೆಂತಲೂ ಅದರಿಂದಾಗಿ ಅದು ಹೊಸ ಸ್ವರೂಪವನ್ನು ಧಾರಣ ಮಾಡಿತೆಂತಲೂ ಅಂತೆಯೇ ಅದನ್ನು ಹೊಸದಾಗಿ ಬಸವಣ್ಣನವರು ಸ್ಥಾಪಿಸಿದರೆಂಬ ಅಭಿಪ್ರಾಯ ವೀರಶೈವ ಸಾಹಿತ್ಯ ಮತ್ತು ಧರ್ಮ ಗ್ರಂಥಗಳಲ್ಲಿ ಕಂಡುಬರಲು ಅವಕಾಶವಾಯಿತು ಎಂಬ ಅವರ ಅಭಿಪ್ರಾಯ ಅತ್ಯಂತ ಸೂಕ್ತವಾಗಿದೆ.

ಬಸವಣ್ಣನವರ ಜೊತೆಗೆ ಸಾಮಾಜಿಕ-ಧಾರ್ಮಿಕ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡ ಚೆನ್ನಬಸವಣ್ಣ, ಅಲ್ಲಮಪ್ರಭು ಮುಂತಾದ ಶರಣರ ಕ್ರಿಯಾ ಸ್ವರೂಪವನ್ನು, ವೀರಶೈವ ಧರ್ಮಕ್ಕೆ ಅವರು ನೀಡಿದ ಕೊಡುಗೆಯನ್ನು ಮೂರನೆಯ ಭಾಗದಲ್ಲಿ ಚರ್ಚಿಸಲಾಗಿದೆ. ಮುಂದೆ, ಪಂಚಾಚಾರ್ಯರು ವೀರಶೈವ ಸಮಾಜದ ಸಂರಕ್ಷಣೆ ಹಾಗೂ ಸಂವರ್ಧನೆಗಳಿಗೆ ಕಟಿಬದ್ಧರಾದುದನ್ನು ಐತಿಹಾಸಿಕವಾಗಿ ವಿವರಿಸಿದ ನಂತರ ವಿಜಯನಗರ ಅರಸರ ಕಾಲದಲ್ಲಿ 'ಶೂನ್ಯಸಿಂಹಾಸನ'ವೆಂಬ ವಿರಕ್ತಪೀಠ ಮುಂದುವರೆದು ಕಾರ್ಯಗೈದುದರ ವಿವರಣೆ ಬಂದಿದೆ. ವಿರಕ್ತ ತೋಂಟದಾರ್ಯರು, ಕೆಳದಿಯರಸರು ಈ ಧರ್ಮದ ವಿಕಾಸಕ್ಕೆ ನೀಡಿದ ಕೊಡುಗೆಯ ಬಗೆಗೂ ನಿರೂಪಿಸಿದ್ದಾರೆ.

ವೀರಶೈವದ ಹುಟ್ಟು ಬೆಳವಣಿಗೆಯನ್ನು ಹೀಗೆ ಸಾರವತ್ತಾಗಿ ಐತಿಹಾಸಿಕವಾಗಿ ವಿವೇಚಿಸಿ ಕೊನೆಯಲ್ಲಿ ಈಚಿನ ಕಾಲದ ಅದರ ಸ್ಥಿತಿಯ ಬಗ್ಗೆ ಹೇಳಿದ ಮಾತು ಗಮನಿಸುವಂತಿದೆ : "ಬಸವಣ್ಣನವರ ಕಾಲದಿಂದ ಅಷ್ಟಾವರಣ ಸಂಪನ್ನರಾಗಿ, ಪಂಚಾಚಾರ ಪಾರಾಯಣರಾಗಿ, ಷಟ್‌ಸ್ಥಳ ಮಾರ್ಗಾವಲಂಬಿಗಳಾಗಿ, ತ್ಯಾಗ, ಭೋಗ, ಕರ್ಮ, ಜ್ಞಾನ ಎಲ್ಲಾ ಯೋಗಗಳ ಹಾಗೂ ಕಾಶ್ಮೀರ ಶೈವ ಸಿದ್ಧಾಂತ ಹಾಗೂ ಶಾಕ್ತ ಸಿದ್ಧಾಂತ, ದ್ವೈತಾದ್ವೈತ ಮುಂತಾದ ತಾತ್ವಿಕ ಸಮನ್ವಯದ ಸಿದ್ಧಾಂತದಿಂದ ವೀರಶೈವ ಸಮಾಜವು ಭಕ್ತಿ ಮುಖ್ಯವಾಗಿ, ಅನುಭಾವ ಧರ್ಮವಾಗಿ ಕನ್ನಡ ನಾಡಿನಲ್ಲಿ ಕೃಷಿ, ವಾಣಿಜ್ಯ, ಕಾಯಕದ ಸ್ವಾವಲಂಬಿ ತತ್ವದಿಂದ ಬಾಳುತ್ತಿದೆ. ಈಗಿರುವ ಸ್ಥಿತಿ ಹೇಗಿದೆಯೆಂಬುದನ್ನು ಹೇಳಬೇಕಾಗಿಲ್ಲ". ಈಗಲೂ ಪ್ರಸ್ತುತವಾಗಿರುವ ಈ ಕೃತಿಯಲ್ಲಿಯ ಎಷ್ಟೋ ವಿಚಾರಗಳಿಗೆ ಬೇರೆ ಬೇರೆ ಮೂಲಗಳಿಂದ ಸಮರ್ಥನೆ ದೊರಕಿರುವುದು ಗಮನಾರ್ಹವಾಗಿದೆ.

ಇನ್ನುಳಿದ ಸುಮಾರು ನಾಲ್ವತ್ತು ಲೇಖನ-ಪ್ರಬಂಧಗಳು ಬಸವನಾಳರ ಆಳವಾದ ವೈಚಾರಿಕ ಪ್ರಜ್ಞೆ, ಸಂಶೋಧನ ಮನೋವೃತ್ತಿ, ವಿಮರ್ಶಾದೃಷ್ಟಿ, ಶಾಸ್ತ್ರೀಯ ನಿಖರತೆ ಹಾಗೂ ಲೋಕಾನುಭವಗಳ ದರ್ಶನ ನೀಡುತ್ತಿವೆ.

ಇಪ್ಪತ್ತನೆಯ ಶತಮಾನದ ಪ್ರಾರಂಭದಲ್ಲಿ ನಾಡಿನ ಬಹುಜನರಲ್ಲಿ, ಸಮಾಜದಲ್ಲಿ, ೧೨ನೆಯ ಶತಮಾನದ ಕ್ರಾಂತಿಯ ಬಗೆಗಿನ ಅಜ್ಞಾನ, ಅವಜ್ಞೆ, ಅನಾಸ್ಥೆಗಳನ್ನು ಕಂಡು ಅವುಗಳ ನಿವಾರಣೆಗೆ ಪ್ರಯತ್ನಿಸಿ, ಆ ಕ್ರಾಂತಿಯ ಸ್ವರೂಪ, ಅದರ ಫಲವಾದ ಸಾಹಿತ್ಯ ಇವುಗಳ ನೈಜಚಿತ್ರವನ್ನು ನಮ್ಮ ಮನಸ್ಸಿನಲ್ಲಿ ಮೂಡಿಸುವ ಕಳಕಳಿ ಈ ಲೇಖನಗಳ ಹಿಂದಿನ ತುಡಿತವಾಗಿದೆ. 'ವೀರಶೈವರು ಹಿಂದುಗಳೆ?' 'ವೀರಶೈವರೂ ಲಿಂಗಪೂಜೆಯೂ' 'ವೀರಶೈವರ ಇಂದು-ಮುಂದು' 'ಅಖಿಲಭಾರತ ವೀರಶೈವ ತರುಣ ಸಮ್ಮೇಳನ', 'ವೀರಶೈವ ತತ್ತ್ವಪ್ರಕಾಶ', 'ವೀರಶೈವ ಸಾಹಿತ್ಯ ಗೋಷ್ಠಿಯ ಅವಶ್ಯಕತೆ' ಮುಂತಾದ ಲೇಖನಗಳು ಅವುಗಳ ಹೆಸರೇ ಸೂಚಿಸುವಂತೆ ವೀರಶೈವ ಧರ್ಮವನ್ನು ಕುರಿತು, ಶಾಸ್ತ್ರೀಯ ಅಧ್ಯಯನದ ವಿವರಗಳು ಹಾಗೂ ಅದರ ಪ್ರಸ್ತುತತೆಯನ್ನು ಮನಗಾಣಿಸಿ ಕೊಡುತ್ತವೆ. ಹಾಗೆಯೇ ಅದು ಇಂದು ಎದುರಿಸುತ್ತಿರುವ ಆತಂಕಗಳ ಕಡೆಗೆ ನಮ್ಮ ಲಕ್ಷ್ಯವನ್ನು ಸೆಳೆಯುತ್ತದೆ. ಜಗತ್ತಿನಲ್ಲಿ ಸಾರ್ವತ್ರಿಕವಾಗಿ ಮಾನ್ಯವಾಗಿರುವ 'ಲಿಂಗಪೂಜೆ'ಗೂ, ವೀರಶೈವರ 'ಲಿಂಗಪೂಜೆ'ಗೂ ಅಜಗಜಾಂತರ ವ್ಯತ್ಯಾಸವಿರುವುದನ್ನು ಸಾಧಾರವಾಗಿ ಸ್ಪಷ್ಟಪಡಿಸಲಾಗಿದೆ. ವೀರಶೈವರು ಹಿಂದುಗಳೊ ಎಂದು ಪ್ರಶ್ನಿಸಿಕೊಂಡು, ಪ್ರಾಚೀನ ಕಾಲದಿಂದ ಶಿವೋಪಾಸನೆ ಭಾರತದಲ್ಲಿ ಬೆಳೆದು ಬಂದ ಪರಿಯನ್ನು ವಿವೇಚಿಸಿ ವೇದ, ಉಪನಿಷತ್ತು, ಆಗಮ ಹಾಗೂ ತಂತ್ರ ಕೃತಿಗಳಲ್ಲಿ ಅದು ಮೂಡಿ ಬಂದ ಚಿತ್ರ ನೀಡಿ ಈ ಆಧ್ಯಾತ್ಮಿಕ ಚೌಕಟ್ಟಿನ ಪರಂಪರೆಯ ಹಿನ್ನೆಲೆಯಲ್ಲಿ ವೀರಶೈವರೂ ಹಿಂದೂಗಳೇ ಎಂದೇ ವಾದಿಸುತ್ತಾರೆ.

'ವೀರಶೈವರ ಇಂದು-ಮುಂದು' ಎಂಬ ಮಹತ್ವದ ಲೇಖನದಲ್ಲಿ (೧೯೩೮ರಲ್ಲಿ ಹುಬ್ಬಳ್ಳಿಯಲ್ಲಿ ಜರುಗಿದ ವೀರಶೈವ ಮಹಾಸಭೆಯ ಅಧ್ಯಕ್ಷ ಭಾಷಣ) ಪ್ರಾಚೀನ ಕಾಲದಿಂದಲೂ ಸಮಾಜ,

ಸಂಸ್ಕೃತಿಗಳು ಜೀವಂತವಾಗಿ ಉಳಿದು ಬಂದ 'ವೀರಶೈವ'ವನ್ನು ಪ್ರಸ್ತಾಪಿಸುತ್ತ ಇಂದು ಈ ಜನ ಶಿಕ್ಷಣ, ಉದ್ಯೋಗ, ವ್ಯವಹಾರ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಹೇಗೆ ಹೆಜ್ಜೆ ಇಟ್ಟಿದೆ, ಮುಂದಿನ ದಾರಿ ಎಷ್ಟು ಬೀಸಾಗಬೇಕು ಎಂಬುದನ್ನು ವಿವರಿಸಿ, ಇಂಥ ಸಂದರ್ಭದಲ್ಲಿ ವೀರಶೈವ ಮಹಾಸಭೆ ಇಡೀ ಸಮಾಜದ ಕೇಂದ್ರ ಬಿಂದುವಾಗಿ, ಅದರ ಆಶೋತ್ತರಗಳ ಪ್ರತಿನಿಧಿಯಾಗಿ ಹೇಗೆ ಕೆಲಸ ಮಾಡಬೇಕೆಂಬುದನ್ನು ಸೂಚಿಸುತ್ತಾರೆ. ಸಮಾಜದ ಬಗೆಗಿನ ಕಳಕಳಿ ಹಾಗೂ ಹೊಸಕಾಲದ ಮುಂಧೋರಣೆಗಳು ಈ ಲೇಖನದಲ್ಲಿ ಸ್ಫುಟವಾಗಿ ವ್ಯಕ್ತಗೊಂಡಿವೆ. ಸಮಾಜಮುಖಿಯಾಗಿ ಬೆಳೆದು ಬಂದಿರುವ ಆಚಾರ, ಸಂಸ್ಕೃತಿಯ ವಿವರಗಳೂ ಇಲ್ಲಿ ಮೂಡಿಬಂದಿವೆ.

ಬಸವನಾಳರ ಪ್ರಥಮ ಪ್ರಾಶಸ್ತ್ಯದ ಕ್ಷೇತ್ರಗಳಲ್ಲಿ 'ಗ್ರಂಥಪರಿಷ್ಕರಣ' ಕಾರ್ಯಕ್ಕೆ ಹೆಚ್ಚಿನ ಮಹತ್ವವಿದೆ. ಪ್ರಾಚೀನ ಕನ್ನಡ ಸಾಹಿತ್ಯ ಕೃತಿಗಳನ್ನು ಆಧುನಿಕ ಗ್ರಂಥ ಸಂಪಾದನೆಯ ತತ್ತ್ವವಿಧಾನಗಳಿಗನುಗುಣವಾಗಿ ಪರಿಷ್ಕರಿಸಿ ಪ್ರಕಟಿಸಿ, ಶಾಸ್ತ್ರೀಯವಾದ ಗ್ರಂಥ ಸಂಪಾದನೆಯ ಚರಿತ್ರೆಯಲ್ಲಿ ಪ್ರಮುಖಸ್ಥಾನವನ್ನು ಅವರು ಪಡೆದವರಾಗಿದ್ದಾರೆ. ಹಳಗನ್ನಡ ಸುಪ್ರಸಿದ್ಧ ವ್ಯಾಕರಣಗಳಾದ ನಾಗವರ್ಮನ ಶಬ್ದ ಸ್ಮೃತಿಪ್ರಕರಣ, ಭಟ್ಟಾಕಳಂಕನ 'ಶಬ್ದಾನುಶಾಸನ'ಗಳನ್ನೂ ಪಂಡಿತರಿಗೆ ಪ್ರಮಾಣಗ್ರಂಥಗಳಾಗುವಂತೆ ಪರಿಷ್ಕರಿಸಿ ಸಂಪಾದಿಸಿಕೊಟ್ಟು 'ಶಬ್ದಾಗಮಪಂಡಿತ'ರೆಂಬ ಪ್ರಶಂಸೆಗೆ ಪಾತ್ರರಾಗಿದ್ದಾರೆ. ಶಂಕರ ನಾರಾಯಣರೊಂದಿಗೆ ಪರಿಷ್ಕರಿಸಿದ 'ಕಾವ್ಯಾವಲೋಕನಂ' ಗ್ರಂಥವು ಪ್ರಾಚೀನ ಕನ್ನಡ ಸಾಹಿತ್ಯ ವ್ಯಾಸಂಗದ ವಿಸ್ತಾರಕ್ಕೆ, ಪಾಂಡಿತ್ಯ-ಪರಿಶ್ರಮದ ಪರಿಣತಿಗಳಿಗೆ ದ್ಯೋತಕವೆನಿಸಿದೆ. ಪ್ರಸ್ತಾವನೆಯಲ್ಲಿ ೨ನೆಯ ನಾಗವರ್ಮನ ಕಾಲ, ಕೃತಿಗಳ ಪರಿಚಯ, ಕನ್ನಡ ಅಲಂಕಾರ ಗ್ರಂಥಗಳ ಸಮೀಕ್ಷೆ, ಕಾವ್ಯಾವಲೋಕನದ ವೈಶಿಷ್ಟ್ಯ, ಕವಿರಾಜಮಾರ್ಗ-ಕಾವ್ಯಾವಲೋಕನದ ಸಾಮ್ಯ, ಕನ್ನಡ ಸಾಹಿತ್ಯದಲ್ಲಿ ನಾಗವರ್ಮನ ಸ್ಥಾನ, ಇತರ ಶಾಸ್ತ್ರಕಾರರ ಮೇಲೆ ಇವರ ಪ್ರಭಾವ, ಇವೇ ಮೊದಲಾದ ವಿಷಯಗಳನ್ನು ಕುರಿತು ಸಾಧಾರವಾಗಿ ವಿವೇಚಿಸಿದ್ದಾರೆ. ವಿದ್ಯಾರ್ಥಿಗಳಿಗೆ ಪ್ರಯೋಜನವಾಗಲೆಂಬ ಉದ್ದೇಶದಿಂದ ೧೩೪ ಪುಟಗಳ ವಿಸ್ತಾರವಾದ ಟಿಪ್ಪಣಿಯನ್ನು ಸೇರಿಸಿರುವುದು ಈ ಕೃತಿಯ ವೈಶಿಷ್ಟ್ಯವಾಗಿದೆ.

ಭಟ್ಟಾಕಳಂಕನ 'ಕರ್ಣಾಟಕ ಶಬ್ದಾನುಶಾಸನ'ಕ್ಕಿರುವ ಮಹತ್ವವನ್ನು ಮನಗಂಡ ಬಸವನಾಳರು ಅಪೂರ್ಣ ಟೀಕೆಯಿಂದ ಈ ಕೃತಿಯ ಅರ್ಧಭಾಗ ಮುದ್ರಣಗೊಳ್ಳದೆ ಉಳಿದಿರುವುದನ್ನು ಗಮನಿಸಿ, ಮ.ಪ್ರ. ಪೂಜಾರ ಅವರ ನೆರವಿನೊಂದಿಗೆ ಏಳುನೂರು ಪುಟಗಳ ಗಾತ್ರದ ಈ ಕೃತಿಯನ್ನು ಪರಿಷ್ಕರಿಸಿ ಪ್ರಕಟಿಸಿರುವುದು ಅವರ ಅಗಾಧ ವಿದ್ವತ್ತಿನ ಅಪೂರ್ವ ಸಾಧನೆಯೆನ್ನಬಹುದು. ಗ್ರಂಥ ಪರಿಷ್ಕರಣವನ್ನು ಸಾಮೂಹಿಕ ಪ್ರಯತ್ನದಿಂದ, ಸಂಯುಕ್ತ ಪ್ರಕ್ರಿಯೆಯಾಗಿ ಮಾಡಿರುವುದು ಈ ದಿಸೆಯಲ್ಲಿ ಉಳಿದವರಿಗೂ ಮಾದರಿಯಾಗಿದೆ.

ಕನ್ನಡದ ಮಹತ್ವದ ಹಾಗೂ ಜನಪ್ರಿಯ ಕಾವ್ಯಗಳಾದ 'ಚೆನ್ನಬಸವಪುರಾಣ', 'ಪ್ರಭುಲಿಂಗಲೀಲೆ', 'ಶಬರ ಶಂಕರವಿಳಾಸ' ಹಾಗೂ 'ಹರಿಹರನ ಮೂರು ರಗಳೆಗಳು',

‘ರಕ್ಷಾಶತಕ ಮತ್ತು ಪಂಪಾಶತಕ’ ಮೊದಲಾದ ಕೃತಿಗಳನ್ನು ಸಂಪಾದಿಸಿ ಬೆಲೆಯುಳ್ಳ ಪ್ರಸ್ತಾವನೆಗಳನ್ನು ಬರೆದು ಸಾಹಿತ್ಯಾಭ್ಯಾಸಿಗಳ ಮನ್ನಣೆಗೆ ಪಾತ್ರರಾಗಿದ್ದಾರೆ. ಪ್ರಕಟವಾದ ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ಪರಿಷ್ಕರಣ ದೃಷ್ಟಿಯಿಂದ ‘ಚೆನ್ನಬಸವ ಪುರಾಣ’ಕ್ಕೆ ಅಗ್ರಸ್ಥಾನ ಸಂದಿದೆ. ಬಾಲಲೀಲಾ ಮಹಂತ ಶಿವಯೋಗಿಗಳ ‘ಕೈವಲ್ಯದರ್ಪಣ’, ಸರ್ಪಭೂಷಣ ಶಿವಯೋಗಿಗಳ ‘ಕೈವಲ್ಯಕಲ್ಪವಲ್ಲರಿ’ ‘ಮೈಲಾರ ಬಸವಲಿಂಗ ಶರಣರ ಕೃತಿಗಳು’ ಬಸವನಾಳರ ವಿದ್ವತ್ಪೂರ್ಣ ಪ್ರಸ್ತಾವನೆಗಳೊಂದಿಗೆ ಅವರ ಸಂಗೀತಜ್ಞಾನವನ್ನೂ ವಿಶದಗೊಳಿಸುತ್ತವೆ. ಸಾಹಿತ್ಯ ಸಂಗೀತಗಳಿಗಿರುವ ಅನ್ಯೋನ್ಯ ಸಂಬಂಧ, ಕನ್ನಡದಲ್ಲಿ ಹಾಡುಗಬ್ಬದ ಪರಂಪರೆ-ಇತಿಹಾಸವನ್ನು ಸಂಶೋಧನಾತ್ಮಕವಾಗಿ ನಿರೂಪಿಸುತ್ತ ಹಾಡುಗಬ್ಬದ ಪರಂಪರೆ ವೀರಶೈವ ಕವಿಗಳಿಂದಲೇ ಆರಂಭವಾಯಿತೆಂಬುದನ್ನು ಆಧಾರಪೂರ್ವಕ ತೋರಿಸಲಾಗಿದೆ. ಕೈವಲ್ಯಪರಂಪರೆಯ ಅನುಭಾವಿ ಕವಿಗಳ ಬಗೆಗೆ ಅದರಲ್ಲೂ ಶುದ್ಧ ವೀರಶೈವ ದರ್ಶನ ಮತ್ತು ಆಚರಣೆಗಳನ್ನು ತಮ್ಮ ಕೃತಿಗಳಲ್ಲಿ ಪ್ರತಿಪಾದಿಸಿರುವ ಮೈಲಾರ ಬಸವಲಿಂಗ ಶರಣರಲ್ಲಿ ಬಸವನಾಳರು ವಿಶೇಷ ಆಸಕ್ತಿ ಹಾಗೂ ಭಕ್ತಿಯನ್ನು ಹೊಂದಿದ್ದರು. ಇತರ ಅನೇಕ ವೀರಶೈವ ಕವಿಗಳು ತಮ್ಮ ಧೋರಣೆಯಲ್ಲಿ ಮಿಶ್ರವೀರಶೈವವನ್ನೇ ಪ್ರತಿಪಾದಿಸಿದ್ದರೆಂಬುದು ಅವರ ಸ್ಪಷ್ಟ ನಿಲುವಾಗಿದ್ದಿತು.

ಇದಕ್ಕೂ ಮೊದಲೇ ಬಸವನಾಳರು ಸಂಪಾದಿಸಿದ ಮಹತ್ವದ ಕೃತಿಯೊಂದನ್ನು ಈ ಸಂದರ್ಭದಲ್ಲಿ ಉಲ್ಲೇಖಿಸಬೇಕು. ವೀರಶೈವ ಧರ್ಮದ ಸ್ವರೂಪವನ್ನು ಸಮಗ್ರವಾಗಿ ನಿರೂಪಿಸುವ ಪ್ರಮಾಣಭೂತವಾದ ಗ್ರಂಥವೊಂದರ ಕೊರತೆಯನ್ನು ಕಂಡುಕೊಂಡು ‘ವೀರಶೈವ ತತ್ತ್ವಪ್ರಕಾಶಿಕೆ’ಯ ಮೂಲಕ ಅದನ್ನು ಪೂರೈಸಿಕೊಟ್ಟರು. ತಮ್ಮ ಸಮಕಾಲೀನ ಅನೇಕ ವೀರಶೈವ ಹಾಗೂ ವೀರಶೈವೇತರ ವಿದ್ವಾಸರಿಂದ ವಿದ್ವತ್ಪೂರ್ಣ ಲೇಖನಗಳು ಮತ್ತು ತಮ್ಮ ಸುದೀರ್ಘವಾದ ಪ್ರಸ್ತಾವನೆಯೊಂದಿಗೆ ಪ್ರಕಟವಾದ ಈ ಕೃತಿಯಲ್ಲಿ ಶೈವ ಮತ್ತು ವೀರಶೈವದ ಪ್ರಾಚೀನತೆ, ಸೈದ್ಧಾಂತಿಕ ಮತ್ತು ಆಚರಣಾತ್ಮಕ ಅಂಶಗಳಲ್ಲಿಯ ಸಾಮ್ಯವೈಷಮ್ಯಗಳು, ವೀರಶೈವಕ್ಕೆ ವಿಶಿಷ್ಟವೆನಿಸಿರುವ ತತ್ತ್ವಗಳ ಖಚಿತವಾದ ವಿವರಣೆಗಳನ್ನೊಳಗೊಂಡ ಲೇಖನಗಳಿವೆ. ಇದು ಸಾಂಪ್ರದಾಯಕ ಗ್ರಂಥವಾಗಿರದೆ ವೀರಶೈವ ಧರ್ಮದ ಸ್ವರೂಪವನ್ನು ಸಮಗ್ರವಾಗಿ ಚಾರಿತ್ರಿಕ ವಿವರಗಳ ಹಿನ್ನೆಲೆಯಲ್ಲಿ ಮತ್ತು ತೌಲನಿಕ ದೃಷ್ಟಿಕೋನದಿಂದ ನಿರೂಪಿಸುವ ಪ್ರೌಢ ಆಕರ ಗ್ರಂಥವಾಗಿದೆ.

ಬಸವನಾಳರ ಹೆಸರು ಗ್ರಂಥಸಂಪಾದನೆಯ ಕ್ಷೇತ್ರವನ್ನೊಳಗೊಂಡಂತೆ ಒಟ್ಟಾರೆ ಚಿರಸ್ಥಾಯಿಯಾಗಿ ಉಳಿಯುವಂತೆ ಮಾಡಿದ ಮೇರು ಕೃತಿ ‘ಬಸವಣ್ಣನವರ ಷಟ್‌ಸ್ಥಳದ ವಚನಗಳು’. ಇದು ಅವರ ಹತ್ತು ವರ್ಷದ ಪರಿಶ್ರಮದ ಫಲ. ಹಿಂದಿನ ಕೈಬರೆಹದ ಪ್ರತಿಗಳಲ್ಲಿ ಅಕ್ಷರ ಸ್ಖಾಲಿತ್ಯ, ಶಬ್ದಪಾತ, ಪುನರುಕ್ತಿ ಮೊದಲಾದ ದೋಷಗಳು ವಿಪುಲವಾಗಿದ್ದವು. ಇವನ್ನೆಲ್ಲ ನಿವಾರಿಸಿ, ಸಮರ್ಪಕ ಪರಿಷ್ಕರಣ ಕೈಗೊಳ್ಳಲು, ಲಭ್ಯವಿರುವ ಎಲ್ಲ ಕೈಬರಹದ ಪ್ರತಿಗಳು, ಐದು ಟೀಕಿನ ವಚನಗಳ ಕಟ್ಟುಗಳು, ಎರಡು ಕೋರಿ ಕಾಗದದ ಪ್ರತಿಗಳು, ಹದಿನೈದು ತಾಡೋಲೆಯ ಪ್ರತಿಗಳು - ಇವನ್ನು ಮುಂದಿಟ್ಟುಕೊಂಡು ಬಸವಣ್ಣನವರ ವಚನಗಳ ಶುದ್ಧ

ಹಾಗೂ ಅಧಿಕೃತ ಆವೃತ್ತಿಯನ್ನು ಹೊರತಂದರು. ಹಿಂದೆ ಕಣ್ತಪ್ಪಿನಿಂದಾದ, ಅಜ್ಞಾನ, ಅವಜ್ಞಾನದಿಂದಾದ ಪಾಠ ದೋಷಗಳನ್ನು ನಿವಾರಿಸಿ ಶುದ್ಧರೂಪ ಕಾಯ್ದುಕೊಳ್ಳಲು ಪ್ರಾಮಾಣಿಕವಾಗಿ ಪ್ರಯತ್ನಿಸಿ ಬಹುಮಟ್ಟಿಗೆ ಯಶಸ್ವಿಯಾದರು. ವಚನಗಳನ್ನು ಲಯಾನ್ವಿತವಾಗಿ ವಿಂಗಡಿಸಿ, ಪಾದ ವಿನ್ಯಾಸದೊಂದಿಗೆ ಮುದ್ರಿಸಿ, ಅವುಗಳಿಂದ ಹೊರಡುವ ಹೊಸ ಅರ್ಥ ಪ್ರಕಾಶವನ್ನು ಎತ್ತಿ ತೋರಿಸಿ, ವಿಸ್ತಾರವಾದ ಪ್ರಸ್ತಾವನೆಯಲ್ಲಿ ವಚನಸಾಹಿತ್ಯದ ಲಕ್ಷಣ, ಹಿರಿಮೆ-ಗರಿಮೆ, ವೈಶಿಷ್ಟ್ಯಗಳನ್ನು ಎತ್ತಿ ತೋರಿಸಿ, ಅನುಬಂಧದಲ್ಲಿ ವಚನಗಳ ಅಕಾರಾದಿ, ಕಠಿಣಶಬ್ದಗಳ ಅರ್ಥ, ಅವಶ್ಯವಿರುವ ಬೇರೆ ಬೇರೆ ಟಿಪ್ಪಣಿಗಳನ್ನು ಕೊಟ್ಟಿದ್ದಾರೆ. ಈ ಎಲ್ಲ ವಿಶೇಷತೆಗಳಿಂದ 'ಬಸವಣ್ಣನವರ ಷಟ್‌ಸ್ಥಲ ವಚನಗಳು' ಕೃತಿ ವಿನೂತನವೆನಿಸಿ ಮುಂದಿನವರಿಗೆ ಮಾರ್ಗದರ್ಶಕವಾಯಿತು. ಇದರ ತರುವಾಯ ಅನೇಕರು ಈ ಕೃತಿಯನ್ನು ಸಂಪಾದಿಸಿದ್ದರೂ ಬಸವನಾಳರ ಈ ಆವೃತ್ತಿಗೆ ಚ್ಯುತಿ ಬರದಿರುವುದು ಅದರ ಶಾಸ್ತ್ರಶುದ್ಧಿಗೆ ಸಾಕ್ಷಿಯಾಗಿದೆ. ಅದರ ಸಾಂಸ್ಕೃತಿಕ ಮಹತ್ವವನ್ನೂ, ಆಧುನಿಕ ಸೃಜನಶೀಲ ಪರಂಪರೆಗೆ ಅದು ನೀಡಿರುವ ಪ್ರೇರಣೆಯನ್ನೂ ವಿದ್ವಾಂಸರು ನೆನೆದುಕೊಳ್ಳುತ್ತಾರೆ. 'ಶೂನ್ಯಸಂಪಾದನೆ' ಮತ್ತಿತರ ಗ್ರಂಥಗಳನ್ನೂ ಹೀಗೆಯೇ ಪರಿಷ್ಕರಿಸಿ ಪ್ರಕಟಿಸಬೇಕೆಂಬ ಬಯಕೆ ಅವರದಾಗಿತ್ತು. ವಚನ ಸಂಪಾದನೆಯ ಅವರ ಉದ್ದೇಶ ಕೇವಲ ಧಾರ್ಮಿಕ, ಸಾಹಿತ್ಯಿಕ ಅಥವಾ ಭಾಷಿಕವಾಗಿರದೆ ಧರ್ಮ-ತತ್ತ್ವ ಸಮಾಜ-ಸಂಸ್ಕೃತಿ-ಭಾಷೆ ಎಲ್ಲವನ್ನೂ ಸಮರಸಗೊಳಿಸಿಕೊಂಡದ್ದಾಗಿದ್ದಿತು.

ಸುಪ್ರಸಿದ್ಧ ಇಂಗ್ಲಿಷ್ ಲೇಖಕ ಹಾಗೂ ವಿಮರ್ಶಕರಾದ ಪ್ರೊ. ಕೆ.ಆರ್. ಶ್ರೀನಿವಾಸ ಅಯ್ಯಂಗಾರ್ ಅವರ ಸಹಯೋಗದೊಂದಿಗೆ ಬಸವನಾಳರು ಅನುವಾದಿಸಿ ಪ್ರಕಟಿಸಿದ 'Musings of Basava' ಕೃತಿಯಲ್ಲಿ ಬಸವಣ್ಣನವರ ಆಯ್ದ ೧೨೦ ವಚನಗಳನ್ನು ಅಳವಡಿಸಲಾಗಿದೆ. ಪ್ರಸ್ತಾವನೆಯಲ್ಲಿ ವಚನ ಸಾಹಿತ್ಯದ ಮೇಲೆ, ಬಸವಣ್ಣನವರ ವ್ಯಕ್ತಿತ್ವ ವಿವೇಚನಗಳ ವಿಶ್ವಮಾನ್ಯ ಮೌಲ್ಯಗಳನ್ನು ಎತ್ತಿ ಹೇಳಲಾಗಿದೆ. ವೀರಶೈವ ತತ್ತ್ವ, ವಚನಗಳ ತಾತ್ವಿಕ ಹಾಗೂ ಸಾಹಿತ್ಯಿಕ ನೆಲೆ-ಬೆಲೆ ಹಾಗೂ ಕನ್ನಡ-ಇಂಗ್ಲಿಷ್ ಭಾಷೆಗಳಲ್ಲಿ ಬಸವನಾಳರು ಪಡೆದಿದ್ದ ಪ್ರಭುತ್ವವೇ ಇದರ ಯಶಸ್ಸಿಗೆ ಕಾರಣವೆನ್ನಬಹುದು. ಈ ಕೃತಿ ಪಾಶ್ಚಾತ್ಯ ವಿದ್ವಾಂಸರನ್ನು ಆಕರ್ಷಿಸಿದ್ದಲ್ಲದೆ, 'Wisdom of the East' ಮಾಲೆಯಲ್ಲಿ ಅದರ ಸಂಪಾದಕರಾದ Mr. Cranmer-Byng ಈ ಕೃತಿಯನ್ನು ಅಲ್ಪಸ್ವಲ್ಪ ಬದಲಾವಣೆಯೊಂದಿಗೆ "Mystic Poets of South India" ಹೆಸರಿನಲ್ಲಿ ಪ್ರಕಟಿಸುವ ಸಿದ್ಧತೆ ನಡೆಸಿರುವುದು ಪ್ರೊ. ಕೆ.ಆರ್. ಶ್ರೀನಿವಾಸ ಅಯ್ಯಂಗಾರ್ ಬಸವನಾಳರಿಗೆ ತಿಳಿಸಿ ಆ ಬಗ್ಗೆ ಪತ್ರವ್ಯವಹಾರವೂ ನಡೆದಿದ್ದಿತು. ಆದರೆ ಬಸವನಾಳರ ಅಕಾಲ ಮರಣದಿಂದ ಆ ಕೆಲಸ ಮುಂದುವರಿಯಲಿಲ್ಲ.

ಬಸವನಾಳರು ಡೆಕ್ಕನ್ ಕಾಲೇಜಿನ ವಿದ್ಯಾರ್ಥಿಯಾಗಿದ್ದಾಗ ಕಾಲೇಜಿನ ತ್ರೈಮಾಸಿಕದ ಕನ್ನಡ ವಿಭಾಗದ ಸಂಪಾದನೆಯ ಹೊಣೆ ನಿರ್ವಹಿಸಿದರು. ವೀರಶೈವ ತರುಣ ಸಂಘದ ಸಮ್ಮೇಳನದಲ್ಲಿ ಹಾಕಿದ ಯೋಜನೆಯಂತೆ 'ಪ್ರಬೋಧ' ಮಾಸ ಪತ್ರಿಕೆ ೧೯೨೨ರಲ್ಲಿ ಬಸವನಾಳರ ಸಂಪಾದಕತ್ವದಲ್ಲಿ ಹೊರಬಂದಿತು. ಅವರ ಲೇಖನ ವ್ಯವಸಾಯ ಅಲ್ಲಿಂದಲೇ ಪ್ರಾರಂಭವಾಗಿ

ವರ್ಧಿಸುತ್ತ 'ಜಯ ಕರ್ನಾಟಕ'ದ ವರೆಗೆ ಕ್ರಮಿಸಿದ ದಾರಿಯನ್ನು ಅವಲೋಕಿಸಿದಾಗ ಪತ್ರಿಕಾ ವ್ಯವಸಾಯವೂ ಅವರ ಸಾಮಾಜಿಕ ವ್ಯಕ್ತಿತ್ವದ ಒಂದು ಪ್ರಮುಖ ಅಂಗವಾಗಿ ಗೋಚರಿಸದಿರದು. ಕರ್ನಾಟಕ ವಿದ್ಯಾವರ್ಧಕ ಸಂಘದ ಮುಖಪತ್ರಿಕೆ 'ವಾಗ್ಭೂಷಣ'ದ ಸಂಪಾದಕರಾಗಿ ಕನ್ನಡ ನಾಡು-ನುಡಿ-ಸಂಸ್ಕೃತಿ ಮೊದಲಾದ ವಿಷಯಗಳಿಗೆ ಸಂಬಂಧಪಟ್ಟಂತೆ ಅದನ್ನು ಪ್ರಥಮದರ್ಜೆಯ ಪತ್ರಿಕೆಯನ್ನಾಗಿ ರೂಪಿಸುವಲ್ಲಿ ಬಸವನಾಳರು ಸಾಕಷ್ಟು ಪರಿಶ್ರಮಪಟ್ಟದ್ದುಂಟು. ಕರ್ನಾಟಕ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ 'ಸಾಹಿತ್ಯ ಸಮಿತಿ'ಯ ತ್ರೈಮಾಸಿಕ ಪತ್ರಿಕೆ ಅವರ ಸಂಪಾದಕತ್ವದಲ್ಲಿ ವಿದ್ವಾಂಸರ ಗಮನವನ್ನು ಬಹುವಾಗಿ ಸೆಳೆದುಕೊಂಡಿತು. ವೀರಶೈವ ಮತ-ತತ್ತ್ವ ಸಾಹಿತ್ಯ-ಸಂಸ್ಕೃತಿಗಳ ಸೂಕ್ತ ಪರಿಚಯವನ್ನು ಕನ್ನಡೇತರರಿಗೂ ತಿಳಿಸುವ ಅವಶ್ಯಕತೆಯನ್ನು ಮನಗಂಡು ಕನ್ನಡ ಮತ್ತು ಇಂಗ್ಲಿಷ್ ಎರಡೂ ಭಾಷೆಗಳಲ್ಲೂ ಲೇಖನಗಳನ್ನೊಳಗೊಂಡು ಪ್ರಕಟಗೊಂಡ (೧೯೪೧) ಈ ಪತ್ರಿಕೆಯ ಸಂಪಾದಕ ಮಂಡಳಿಯಲ್ಲಿ ಬಸವನಾಳರೇ ಪ್ರಮುಖರು. ಸಂಪಾದಕೀಯದ ಜೊತೆಗೆ ಕನ್ನಡ ಲೇಖನಗಳ ಸಾರವನ್ನು ಇಂಗ್ಲಿಷಿನಲ್ಲಿ ಹಾಗೂ ಇಂಗ್ಲಿಷ್ ಲೇಖನಗಳ ಸಾರವನ್ನು ಕನ್ನಡದಲ್ಲಿ ಕೊಡುವ ಕಾರ್ಯವನ್ನೂ ಇವರೇ ವಹಿಸಿಕೊಂಡಿದ್ದರು. ನಾಡಿನ ಪ್ರಸಿದ್ಧ ವಿದ್ವಾಂಸರು ಇದರ ಲೇಖಕರ ಬಳಗದಲ್ಲಿದ್ದರು. ಪುಸ್ತಕ ವಿಮರ್ಶೆಗಾಗಿ ಕೆಲವು ಪುಟಗಳು ಮೀಸಲಾಗಿದ್ದವು. 'ಶೂನ್ಯಸಂಪಾದನೆ'ಯ ಇಂಗ್ಲಿಷ್ ಅನುವಾದ ಕೂಡ ಧಾರವಾಹಿಯಾಗಿ ಇದರಲ್ಲಿ ಪ್ರಕಟಗೊಂಡು ಪತ್ರಿಕೆಯ ಮಹತ್ವವನ್ನು ಹೆಚ್ಚಿಸಿತು.

ಬೆಳಗಾವಿಯಿಂದ ನಿವೃತ್ತಿಹೊಂದಿ ಧಾರವಾಡಕ್ಕೆ ಬರುತ್ತಲೇ ೧೯೪೩ರಲ್ಲಿ 'ಜಯ ಕರ್ನಾಟಕ' ಮಾಸಿಕವನ್ನು ಬೆಳಗಾವಿ ರಾಮಚಂದ್ರ ರಾಯರಿಂದ ಕೊಂಡುಕೊಂಡು ಅದನ್ನು ಉತ್ತಮ ಸಾಹಿತ್ಯಿಕ ಪತ್ರಿಕೆಯಾಗಿಸುವ ಪ್ರಯತ್ನದಲ್ಲಿ ತೊಡಗಿದರು. ೧೯೪೩ರಿಂದ ಅದು ಸಾಪ್ತಾಹಿಕವಾಗಿಯೂ ಬರತೊಡಗಿತು. ಇದರಲ್ಲಿ ಆರ್ಥಿಕ ವಿಷಯಕ್ಕೆ, ಕೃಷಿಗೆ, ಬ್ಯಾಂಕಿಂಗ್ ಹಾಗೂ ಉದ್ದಿಮೆಗಳಿಗೆ ಸಂಬಂಧಪಟ್ಟ ಜನೋಪಯೋಗಿ ಲೇಖನಗಳಿಗೆ ಹೆಚ್ಚಿನ ಪುರಸ್ಕಾರ ದೊರೆಯಿತು. "ಜಯ ಕರ್ನಾಟಕ ಪ್ರತಿಷ್ಠಿತ ಬರೆಹಗಾರರಂತೆಯೇ ಅನೇಕ ಉದಯೋನ್ಮುಖ ಲೇಖಕರಿಗೂ ಅವಕಾಶವಿತ್ತು, ಅದು ಅವರನ್ನು ಬೆಳಕಿಗೆ ತರುವಲ್ಲಿ ಯಶಸ್ವಿಯಾಯಿತು."

ಆಲ್ ಇಂಡಿಯಾ ರೇಡಿಯೊ ಕೇಂದ್ರದ ಮೂಲಕ ವಚನಗಳನ್ನು ಹಾಡಬೇಕೊ? ಬೇಡವೊ ? ಎಂಬ ವಾದ ವಿವಾದ ಎದ್ದಾಗ ಆ ಬಗ್ಗೆ 'ಜಯಕರ್ನಾಟಕ'ದ ಮೂಲಕ ಸಾರ್ವಜನಿಕ ಅಭಿಪ್ರಾಯವನ್ನು ರೂಪಿಸಿ, ಸಮರ್ಥರಾದ ಸಂಗೀತಜ್ಞರು ವಚನಗಳನ್ನು ಹಾಡಬಹುದೆಂಬ ಸಂಪಾದಕೀಯ ಬರೆಹದಿಂದ ಸಂಗೀತಕಲಾವಿದರಿಗೂ ತನ್ಮೂಲಕ ವಚನ ಸಾಹಿತ್ಯಕ್ಕೂ ಮಹದುಪಕಾರ ಮಾಡಿದರೆಂಬುದನ್ನು ಸಂಗೀತರತ್ನ ಪಂಡಿತ ಮಲ್ಲಿಕಾರ್ಜುನ ಮನಸೂರ ಕೃತಜ್ಞತೆಯಿಂದ ನೆನೆದಿದ್ದಾರೆ. ವಚನಗಳ ಹಾಡುಗಾರಿಕೆಯಲ್ಲಿ ಅದ್ವಿತೀಯರೆನಿಸಿದ ಮನಸೂರರು ತಾವು ಬಸವನಾಳರಿಗೆ ಈ ವಿಷಯದಲ್ಲಿ ಎಷ್ಟೊಂದು ಋಣಿಯಾಗಿದ್ದೇವೆಂಬುದನ್ನು ಹೀಗೆ ಹೇಳಿದ್ದಾರೆ : "ವಚನಗಳನ್ನು ಸಂಗೀತ ಕಲೆಗನುಸರಿಸಿ ಹಾಡಲು ಪ್ರಚೋದಿಸಿದವರು ಗೆಳೆಯ

ಅ.ನ. ಕೃಷ್ಣರಾಯರು. ಆದರೆ ವಚನಗಳ ಘನತೆಯನ್ನು, ಅರ್ಥಸ್ವಾರಸ್ಯವನ್ನು ನಾನು ಕಂಡುಕೊಂಡುದು ಪ್ರೊ. ಬಸವನಾಳರಿಂದ. ಬಸವನಾಳರು ವಚನಗಳನ್ನೂ, ಕೆಲವು ಹಳಗನ್ನಡ ಕಾವ್ಯಗಳನ್ನೂ ಅದರಲ್ಲಿಯೂ ಮಹಾಕವಿ ಹರಿಹರೇಶ್ವರನ ರಗಳೆಗಳನ್ನು ವಿವರಿಸಿ, ಗಣ ಮಾತ್ರೆಗಳಾಗಿ ವಿಭಜಿಸಿ ಛಂದಸ್ಸನ್ನು ತಿಳಿಸಿ ಅವುಗಳನ್ನು ರಾಗತಾಳಗಳಿಗೆ ಹೊಂದಿಸಿ ಸಂಗೀತದಲ್ಲಿ ಮೇಳೈಸುವ ಮಾರ್ಗದರ್ಶನ ಮಾಡಿದರು."

ವೀರಶೈವ ಸಮಾಜದಲ್ಲಿ ಶಿಕ್ಷಣ, ಧರ್ಮ, ಸಾಹಿತ್ಯ, ಸಂಸ್ಕೃತಿಗಳ ಪ್ರಸಾರ ಕಾರ್ಯದಲ್ಲಿ ಧಾರವಾಡದ ಶ್ರೀ ಮುರುಘಾಮಠ ಹಾಗೂ ಪೂಜ್ಯ ಮೃತ್ಯುಂಜಯ ಮಹಾಸ್ವಾಮಿಗಳ ಪಾತ್ರ ಮತ್ತು ಸೇವೆ ಅಮೋಘವಾದದದ್ದು. ಅಂದಿನ ದಿನಗಳಲ್ಲಿ ಶ್ರೀಮಠದಲ್ಲಿ ಜರುಗುತ್ತಿದ್ದ ಶಿವಾನುಭವಗೋಷ್ಠಿ, ಶಿವಾನುಭವ ತರಬೇತಿ ಮತ್ತು ಬಾಲಲೀಲಾ ಮಹಾಂತ ಶಿವಯೋಗೀಶ್ವರ ಗ್ರಂಥಮಾಲೆಯ ಎಲ್ಲ ಚಟುವಟಿಕೆಗಳಿಗೆ ಬಸವನಾಳರು ಆಧಾರಸ್ತಂಭವೆನಿಸಿದ್ದರು. ಮೃತ್ಯುಂಜಯ ಸ್ವಾಮಿಗಳು ಅವರನ್ನು ಬಸವನ ಆಳು ಎಂದೇ ಭಾವಿಸಿದ್ದರು. ಸಮಾಜದ ಸರ್ವತೋಮುಖ ಪ್ರಗತಿಗಾಗಿ ಸತತ ಚಿಂತನೆ ಹಾಗೂ ರಚನಾತ್ಮಕ ಕಾರ್ಯವೈಖರಿಗಳಿಂದಾಗಿ ನಾಡಿನಾದ್ಯಂತ ಗಣ್ಯವ್ಯಕ್ತಿಗಳ, ಖ್ಯಾತ ಸಾಹಿತಿಗಳ, ವಿದ್ವಾಂಸರ, ಮಠಾಧಿಪತಿಗಳ ಮತ್ತು ಮತಾತೀತವಾದ ಅನೇಕ ಸಂಘ ಸಂಸ್ಥೆಗಳ ಒಡನಾಟ ಬಸವನಾಳರಿಗೆ ಬೆಳೆದು ಬಂದಿತ್ತು. ೧೯೪೫ರಲ್ಲಿ ನವಿಲಗುಂದದಲ್ಲಿ ಜರುಗಿದ ಸರ್ವಧರ್ಮ ಪರಿಷತ್ತಿನ ಅಧ್ಯಕ್ಷ ಭಾಷಣದಲ್ಲಿ ಹಲವಾರು ಧರ್ಮಗಳನ್ನು ಅಭ್ಯಸಿಸಿದ ಬಸವನಾಳರು - ಎಲ್ಲ ಧರ್ಮಗಳ ಸಾರವು, ಶಾಂತಿ, ಸಹಜೀವನ, ತ್ಯಾಗ, ಪ್ರೇಮ, ಇತರರನ್ನು ಗೌರವಿಸುವದೇ ಆಗಿದ್ದು, ಧರ್ಮದ ಈ ಮಾನವೀಯ ಮೌಲ್ಯಗಳ ಅನುಷ್ಠಾನದಿಂದ ಪ್ರಾದೇಶಿಕ, ರಾಷ್ಟ್ರಮಟ್ಟ ಮತ್ತು ಅಂತಾರಾಷ್ಟ್ರೀಯ ಮಟ್ಟದಲ್ಲಿ ಶಾಂತಿಸ್ಥಾಪನೆ ಸಾಧ್ಯವೆಂಬ ವಿಚಾರವನ್ನು ಪ್ರತಿಪಾದಿಸಿದರು. ಈ ವಿಶಾಲ ಮನೋಧರ್ಮದಿಂದಾಗಿಯೇ ಬಸವನಾಳರು ನಾನಾ ಕ್ಷೇತ್ರಗಳ, ನಾನಾ ಮತಧರ್ಮಗಳ ಗಣ್ಯರ ಗೌರವಕ್ಕೆ ಪಾತ್ರರಾಗಿದ್ದರು.

ಬಸವನಾಳರು ಕೊನೆಯುವರೆಗೆ ಸತ್ಯಶುದ್ಧ ಕಾಯಕ ಗೈಯುತ್ತಲೆ ಮರಣವನ್ನಪ್ಪಿದರು. ಡಿಶಂಬರ ೨೨, ೧೯೫೧ರಂದು ಕರ್ನಾಟಕ ವಿಶ್ವವಿದ್ಯಾಲಯದ ಸಿಂಡಿಕೇಟ್ ಸಭೆಯಲ್ಲಿ ಹಲವಾರು ವಿಷಯಗಳ ಗಂಭೀರ ಚರ್ಚೆಯಲ್ಲಿ ಪಾಲ್ಗೊಂಡ ಬಸವನಾಳರು ಮಧ್ಯದಲ್ಲಿಯೇ ಯಾರಿಗೂ ತೊಂದರೆಯಾಗದಂತೆ ಎದ್ದು ಹೊರಬಂದರು. ಎದೆಯಲ್ಲಿ ನೋವು ಕಾಣಿಸಿಕೊಂಡಿತ್ತು. ನೇರವಾಗಿ ಡಾಕ್ಟರರಲ್ಲಿ ಹೋಗಿ ಇಂಜೆಕ್ಷನ್ ತೆಗೆದುಕೊಂಡು ಮನೆಗೆ ಬಂದು ಹೆಂಡತಿ ಶಾಂತಮ್ಮನವರ ಬಳಿ ಕ್ಷಣ ಕುಳಿತು, ಅವರ ಎದೆ ನೋವನ್ನು ತಾವೇ ತೆಗೆದುಕೊಂಡಿದ್ದಾಗಿ ನಗುಮುಖದಿಂದಲೇ ಹೇಳಿ, ಹಾಸಿಗೆಯ ಮೇಲೆ ಒರಗಿಕೊಂಡಂತೆಯೇ ಕಣ್ಣು ಮುಚ್ಚಿದವರು ಮತ್ತೆ ತೆರೆಯಲಿಲ್ಲ. ಸಹಸ್ರಾರು ಜನ ಶೋಕತಪ್ತರಾಗಿ ಭಾಗವಹಿಸಿದ್ದ ಅವರ ಅಂತ್ಯ ಯಾತ್ರೆ, ಜನತೆ ಬಸವನಾಳರ ಬಗೆಗೆ ಇರಿಸಿದ್ದ ಗೌರವಾದರಗಳಿಗೆ ಭವ್ಯ ಸಂಕೇತವಾಗಿತ್ತು.

ಅಕಾಲ ಮರಣದಿಂದಾಗಿ ಬಸವನಾಳರು ಹಾಕಿಕೊಂಡಿದ್ದ ಕೆಲವೊಂದು ಯೋಜನೆಗಳು ಹಾಗೂ ಕೃತಿರಚನೆ ಅಷ್ಟಕ್ಕೆ ಉಳಿದುಬಿಟ್ಟವು. ಬಸವಣ್ಣನವರನ್ನು ಕುರಿತು ನಾಟಕ ಬರೆದು ಅದನ್ನು ಚಲನಚಿತ್ರಕ್ಕೆ ಅನುಗೊಳಿಸಲು ಅವರನ್ನು ಮಲ್ಲಿಕಾರ್ಜುನ ಮನಸೂರರು ಕೇಳಿಕೊಂಡ ಪ್ರಕಾರ ಅದರ ರೂಪ ರೇಷೆಗಳನ್ನು ಹಾಕಿ ಕೆಲವು ಭಾಗ ಬರೆದರು. ಕನ್ನಡ-ಕನ್ನಡ ನಿಘಂಟು ರಚನೆ ಅವರ ಮಹತ್ವಾಕಾಂಕ್ಷೆಗಳಲ್ಲಿ ಒಂದಾಗಿತ್ತು. "ಅದಕ್ಕಾಗಿ ಅವಕಾಶ ದೊರೆತಾಗಲೆಲ್ಲ ಕಾರ್ಯತತ್ಪರರಾಗುತ್ತಿದ್ದರು. ರೆ. ಕಿಟಲ್ ಸಾಹೇಬರು ಆ ಕಾರ್ಯಮಾಡಿದ ಮೇಲೆ ಬಸವನಾಳರದೇ ಬಹು ದೊಡ್ಡ ಕಾರ್ಯವೆಂದು ಭಾವಿಸಿದ್ದೆನು. ಇದುವರೆಗೆ ಪ್ರಕಟವಾದ ಕನ್ನಡ ಗ್ರಂಥಗಳಲ್ಲಿ ದೊರೆಯುವ ಕಠಿಣ ಶಬ್ದಗಳು, ಗಂಗಾಧರ ಮಡಿವಾಳೇಶ್ವರ ತರುಮರಿಯವರ ಕರ್ನಾಟಕ ಶಬ್ದಕಲ್ಪದ್ರುಮದ ನಂತರ ದೊರೆಯಬಹುದಾದ ಹಾಗೂ ಆಗಬಹುದಾದ ಅರ್ಥ, ಸ್ವಾರಸ್ಯದ ನಿರ್ಣಯಗಳನ್ನು ಶ್ರೀ ಬಸವನಾಳರು ತಮ್ಮ ಆಳವಾದ ಅನುಭವದಿಂದ ಮಾಡುತ್ತಿದ್ದರು. ಅದಕ್ಕಾಗಿ ಅನೇಕ ಪಂಡಿತರನ್ನು, ವಿದ್ವಾಂಸರನ್ನು ಕೂಡಿಕೊಂಡು ಕೆಲಸ ಮಾಡುತ್ತಿದ್ದರು. ಆ ಕಾರ್ಯದಲ್ಲಿ ನಾನೂ ಸಹಭಾಗಿಯಾಗಿ ಅರ್ಥೈಸುವ ಅವಕಾಶ ದೊರೆತಿತ್ತು. ಅದು ಪೂರ್ಣಗೊಳ್ಳುವುದಕ್ಕೆ ಸ್ವಲ್ಪ ಭಾಗ ಉಳಿದಿತ್ತು. ಅದು ಅವರ ನಂತರ ಹಾಗೆಯೇ ಉಳಿದು ಹೋಯಿತು" ಎಂದು ಉತ್ತಂಗಿ ಚೆನ್ನಪ್ಪನವರು ಹಳಹಳಿಸಿದ್ದಾರೆ. ಸುಮಾರು ೧೨ ವರ್ಷಗಳ ಕಾಲ ಅವರ ಒಡನಾಟದಿಂದ ತಮ್ಮ ಅನುಭವ ಸಂಪತ್ತು ಬೆಳೆದದ್ದನ್ನು ಉತ್ತಂಗಿಯವರು ನೆನೆದುಕೊಂಡಿದ್ದಾರೆ.

ಬಸವನಾಳರನ್ನು ಗುರುಸ್ಥಾನದಲ್ಲಿಟ್ಟುಕೊಂಡಿದ್ದ ಡಾ. ಎಸ್.ಸಿ. ನಂದೀಮಠರು ಅವರ ಸ್ವಭಾವದ ಬಗ್ಗೆ ಹೀಗೆ ಹೇಳುತ್ತಾರೆ : "ಶ್ರೀ ಬಸವನಾಳರಂತಹ ಸರಳ ಸ್ವಭಾವದ ಪ್ರೇಮಮಯ ಮೂರ್ತಿಯು ದೊರೆಯುವದು ಅತಿ ದುರ್ಲಭ. ಅವರ ಹೃದಯ ಅತಿ ಕೋಮಲವಾದುದು. ಅವರು ತಮ್ಮ ಆಯುಷ್ಯದಲ್ಲಿ ಯಾರಿಗೂ ಬಿರುಸು ಮಾತಾಡಿದುದನ್ನು ನಾನು ಕಂಡಿಲ್ಲ, ಕೇಳಿಲ್ಲ... ವಿರೋಧಿಗಳ ಸಂಗಡವೂ ಪ್ರೀತಿಯಿಂದ ಮತ್ತು ಸ್ವಾಭಾವಿಕ ಸರಳತೆಯಿಂದ ನಡೆದುಕೊಳ್ಳುತ್ತಿದ್ದ ಇವರು ಪರರನ್ನು ದ್ವೇಷಿಸುವುದನ್ನು ನಾನು ಕಂಡರಿಯೆ. ದ್ವೇಷ, ಈರ್ಷೆ ಅಸೂಯಾದಿಗಳನ್ನು ಗೆದ್ದ ಯೌಗಿಕ ಪುರುಷನಂತೆ ಇವರ ನಿಜವಾದ ಆಚರಣೆಯಾಗಿದ್ದಿತು. ಸಮುದ್ರದಂತೆ ಅತಿ ಗಂಭೀರ ಸ್ವಭಾವದವರು. ತಮ್ಮ ಕೌಟಂಬಿಕ ಕಷ್ಟನಷ್ಟಗಳನ್ನು ಸ್ವಲ್ಪಕೂಡ ವ್ಯಕ್ತಪಡಿಸಿದುದನ್ನು ನಾನರಿಯೆ. ಇವರ ಮನೋಧಾರ್ಡ್ಯ ಕಂಡು ನನಗೇ ಅನೇಕ ಸಲ ಅಚ್ಚರಿಯಾಗುತ್ತಿತ್ತು."

ಬಿ.ಎಂ. ಶ್ರೀಕಂಠಯ್ಯನವರಂತೆ ಬಸವನಾಳರೂ ಕನ್ನಡದ ಗೌರವ ಪ್ರೊಫೆಸರರಾಗಿ ಕಾರ್ಯ ಮಾಡಿದರು ಎನ್ನುವ ಪ್ರೊ. ಮಾಳವಾಡರು, ಸ್ವಮತದ ಬಗೆಗೆ ಆಸ್ಥೆ, ಕರ್ನಾಟಕದ ಬಗೆಗೆ ವ್ಯಾಪಕವಾದ ಕಲ್ಪನೆ ಇಟ್ಟುಕೊಂಡ ಬಗೆಯಲ್ಲಿ ಆಲೂರು ವೆಂಕಟರಾಯರಿಗೂ, ಸ್ವಭಾವದ ಸವಿಯಲ್ಲಿ ಟಿ.ಎಸ್. ವೆಂಕಣ್ಣಯ್ಯನವರಿಗೂ ಬಸವನಾಳರನ್ನು ಹೋಲಿಸಿ ನುಡಿದಿದ್ದಾರೆ.

ಬಸವನಾಳರ ಗ್ರಂಥ ಪ್ರೀತಿಯ ಕುರಿತು ಅವರ ಸಹೋದ್ಯೋಗಿ ಮಿತ್ರರಾದ ಎಚ್.ಎಫ್. ಕಟ್ಟೀಮನಿಯವರು ಹೀಗೆ ಬಣ್ಣಿಸಿದ್ದಾರೆ : "ಅವರ ವಾಚನಾಭಿರುಚಿ ಅನುಪಮವಾದದ್ದು. ಪ್ರೊ. ಬಸವನಾಳರಿಗೆ ಗ್ರಂಥಗಳ ಮೇಲೆ ಇನ್ನಿಲ್ಲದ, ಅನಿರ್ವಚನೀಯ ಪ್ರೇಮ. ಅವರು ಗ್ರಂಥಗಳನ್ನು ಕೊಳ್ಳುವುದರಲ್ಲಿ ತಮ್ಮ ಶಕ್ತಿಮೀರಿ ಹಣವನ್ನು ವೆಚ್ಚಮಾಡುತ್ತಿದ್ದರು. ಅವರಲ್ಲಿ ವಿವಿಧ ಭಾಷೆಗಳ ಅಮೂಲ್ಯ ಪುಸ್ತಕಗಳನ್ನೊಳಗೊಂಡ ಉತ್ತಮವಾದ ಗ್ರಂಥಭಂಡಾರವಿದೆ. ಅವರ ಗ್ರಹಣ ಶಕ್ತಿ ಹಾಗೂ ಸ್ಮರಣಶಕ್ತಿ ಎರಡೂ ಅಗಾಧವಾಗಿದ್ದವು."

ನಾಡಿನ ಸಾಂಸ್ಕೃತಿಕ ಜೀವನ ರೂಪುಗೊಳಿಸಿದ ಶಿಲ್ಪಿಯೆಂದೂ, ಸರ್ವತೋಮುಖ ಅಭಿರುಚಿಯುಳ್ಳ ಕನ್ನಡ ಕುಲರಸಿಕರಲ್ಲಿ ಶಿ.ಶಿ. ಬಸವನಾಳರೊಬ್ಬರು ಎಂದೂ ಅ.ನ. ಕೃಷ್ಣರಾಯರು ಆದರಿಸಿದರೆ, ಅವರು ವಿವಿಧ ಕ್ಷೇತ್ರಗಳಲ್ಲಿ ಸಲ್ಲಿಸಿದ ಸೇವೆಯ ಬಹುಮುಖ ವ್ಯಕ್ತಿತ್ವದ ಚಿತ್ರವನ್ನು ಬೆಳಗಿಸಿದುದು ಆ ಮಹನೀಯರಲ್ಲಿದ್ದ ಸತ್ಯಶುದ್ಧವಾದ ವೀರಶೈವಾನುಭವವೇ ಎಂಬುದು ಸರ್ವದರ್ಶನ ತೀರ್ಥ ಶ್ರೀ ನಾಗೇಶಾಸ್ತ್ರಿಗಳ ದೃಢವಾದ ನಂಬಿಕೆ. ಬೆಳಗಾವಿ ಲಿಂಗರಾಜ ಕಾಲೇಜಿನಲ್ಲಿ ಇಂಗ್ಲಿಷ್ ಪ್ರಾಧ್ಯಾಪಕರಾಗಿ ಬಸವನಾಳರ ಆಪ್ತ ಸ್ನೇಹಿತರಾಗಿದ್ದ, ಮುಂದೆ ಆಂಧ್ರ ವಿಶ್ವವಿದ್ಯಾಲಯದ ಕುಲಪತಿಗಳಾದ ಪ್ರಸಿದ್ಧ ಇಂಗ್ಲಿಷ್ ಲೇಖಕ ಹಾಗೂ ವಿಮರ್ಶಕ ಪ್ರೊ. ಕೆ.ಆರ್. ಶ್ರೀನಿವಾಸ ಅಯ್ಯಂಗಾರ್ ಬಸವನಾಳರ ನಿಧನದ ಸುದ್ದಿಯನ್ನು ಕೇಳಿ ಬರೆದ ಪತ್ರದಲ್ಲಿ ತಮ್ಮ ಹೃದಯವನ್ನೇ ತೆರೆದಿಟ್ಟಿದ್ದಾರೆ. *"Although I was many years his junior, although I must have often caused annoyance to him, still he treated me as an younger brother all along with indulgence and affection... His vast learning in different fields of knowledge, his unfailing sense of humour, his acute observation of men and things, the noble serenity of his bearing, his strong refusal to take a mean advantage over others, these made me more and more his admirer. Right from beginning I was his friend and neighbour. To gain his approbation and appreciation was perhaps the chief incentive I had in those days for literary works... Without seeking money or power he served Karnataka for a life-time, and generations will reap what he has sown."*

ಶಿಕ್ಷಣ, ಸಾಹಿತ್ಯ, ಸಂಶೋಧನ, ಪತ್ರಿಕಾವ್ಯವಸಾಯ ಮೊದಲಾದ ಅನೇಕ ಸಾಂಸ್ಕೃತಿಕ ಕ್ಷೇತ್ರಗಳಿಗೆ ಕರ್ನಾಟಕ ಇಂದು ಹಿರಿಮೆಯ ಸ್ಥಾನದಲ್ಲಿರುವದನ್ನು ಕಂಡಾಗ ಬಹುಮುಖ ವ್ಯಕ್ತಿತ್ವದ ಪ್ರೊ. ಶಿ.ಶಿ. ಬಸವನಾಳರಂಥವರು ಅರ್ಧಶತಮಾನದ ಹಿಂದೆ ಗೈದ ಸೇವೆ, ಮಾಡಿದ ತ್ಯಾಗದ ಫಲವನ್ನೆ ನಾವೀಗ ಅನುಭವಿಸುತ್ತಿರುವುದು ಎಂಬುದನ್ನು ಕನ್ನಡಿಗರು ಮರೆಯಲಾರರು.

('ಸ್ಮರಣೀಯರು' ೨೦೦೪')
ಸಾಹಿತ್ಯ ಸಮಾಹಿತ : ೨೦೦೭

೬

## ತೀ.ನಂ.ಶ್ರೀ. : ನೆನಪಿನಂಗಳದಲ್ಲಿ

ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಪ್ರಥಮ ಕನ್ನಡ ಪ್ರಾಧ್ಯಾಪಕರಾಗಿ ತೀ.ನಂ.ಶ್ರೀಕಂಠಯ್ಯನವರು ಬಂದಾಗ ನಾನು ಎಂ.ಎ ಕೊನೆಯ ವರ್ಷದಲ್ಲಿದ್ದೆ. ಕನ್ನಡ ಸ್ನಾತಕೋತ್ತರ ವಿಭಾಗ ಇನ್ನೂ ಸ್ವಯಂಪೂರ್ಣವಾಗಿ ಬೆಳೆದಿರಲಿಲ್ಲ. ಸ್ಥಳೀಯ ಕಾಲೇಜುಗಳ ಕನ್ನಡ ಪ್ರಾಧ್ಯಾಪಕರೂ ನಮ್ಮ ಪಾಠಪ್ರವಚನಗಳಲ್ಲಿ ಪಾಲ್ಗೊಳ್ಳುತ್ತಿದ್ದರು. ಹೀಗಾಗಿ ಕೇವಲ ಮೂರು ನಾಲ್ಕು ತಿಂಗಳು ಮಾತ್ರ ತೀ.ನಂ. ಶ್ರೀಯವರ ಸಾನ್ನಿಧ್ಯ ನಮಗೆ ದೊರೆಯಿತು. ಆ ಸಂದರ್ಭದಲ್ಲಿ ಅವರು ನೀಡಿದ ಕೆಲವು ಉಪನ್ಯಾಸಗಳು ನೇರವಾಗಿ ಪಠ್ಯಕ್ಕೆ ಸಂಬಂಧಪಟ್ಟವುಗಳಾಗಿರಲಿಲ್ಲ. ಹೇಳುವ ವಿಷಯವನ್ನು ತಲಸ್ಪರ್ಶಿಯಾಗಿ ತಿಳಿಸಿಕೊಡುವುದು, ಆದಷ್ಟು ಶುಷ್ಕವೆನಿಸದಂತೆ ರಸವತ್ತಾಗಿ ನಿರೂಪಿಸುವುದು ಅವರ ಬೋಧನಕ್ರಮವಾಗಿತ್ತೆಂದು ನನಗೆ ತೋರಿತು.

೧೯೫೨ರಲ್ಲಿ ನಾನು ಎಂ.ಎ ಪದವಿ ಪಡೆದು, ಅದೇ ವರ್ಷ ಸಪ್ಟೆಂಬರ್‌ನಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣ ಮತ್ತು ಪ್ರಕಟಣ ವಿಭಾಗದಲ್ಲಿ (ಈಗಿನ ಪ್ರಸಾರಾಂಗ) ಅದರ ಪ್ರಥಮ ಕಾರ್ಯದರ್ಶಿಯಾಗಿ ನೇಮಕಗೊಂಡೆ. ಆ ವಿಭಾಗದ ಸಲಹಾಸಮಿತಿಯ ಸದಸ್ಯರಾಗಿ ತೀ.ನಂ.ಶ್ರೀಯವರು ನನಗೆ ನೀಡಿದ ಮಾರ್ಗದರ್ಶನವನ್ನು ನಾನೂ ಎಂದಿಗೂ ಮರೆಯಲಾರೆ. ಮೈಸೂರು ವಿಶ್ವವಿದ್ಯಾಲಯದ ಪ್ರಚಾರೋಪನ್ಯಾಸ ಹಾಗೂ ಪ್ರಕಟನೆಗಳ ತಮ್ಮ ಅನುಭವದಿಂದ ಇಲ್ಲಿಯ ಅವಶ್ಯಕತೆಗಳಿಗನುಸಾರವಾಗಿ ಅದನ್ನು ರೂಪುಗೊಳಿಸುವಲ್ಲಿ ಅವರು ಹೃತ್ಪೂರ್ವಕವಾಗಿ ನೆರವಾದರು.

ವಿಶ್ವವಿದ್ಯಾಲಯವನ್ನು ಸಾಮಾನ್ಯ ಜನತೆಯ ಬಳಿಗೆ ಕೊಂಡೊಯ್ಯುವ ನಮ್ಮ ಮೊಟ್ಟ ಮೊದಲನೆಯ ಉಪನ್ಯಾಸ ಶಿಬಿರ ೧೯೫೨ರ ಡಿಸೆಂಬರಿನಲ್ಲಿ ಗದಗಿನಲ್ಲಿ ನೆರವೇರಿತು. ಅಲ್ಲಿಯ ಮುನಿಸಿಪಲ್ ಹಾಯಸ್ಕೂಲಿನ ವಿಶಾಲವಾದ ಬಯಲಿನಲ್ಲಿ ಸಾವಿರಾರು ಜನರ ಮಧ್ಯೆ ನಡೆದ ಅಂದಿನ ಸಮಾರಂಭ ಒಂದು ಅಪೂರ್ವ ಅನುಭವ. ಆಗಿನ ಉಪಕುಲಪತಿ ಶ್ರೀ ಸಿ.ಸಿ. ಹುಲಕೋಟೆಯವರಿಂದ ಉದ್ಘಾಟನೆಯಾದ ನಂತರ ಶಿಬಿರದ ಮೊಟ್ಟಮೊದಲನೆಯ ಉಪನ್ಯಾಸವೇ ತೀ.ನಂ. ಶ್ರೀಯವರದು. ಕುಮಾರವ್ಯಾಸ ಕವಿಯನ್ನು ಕುರಿತು ಅವರ ಒಂದೂವರೆ ಗಂಟೆಯ ಉಪನ್ಯಾಸ ಕುತೂಹಲದಿಂದ ಕೂಡಿದ ಜನಸ್ತೋಮವನ್ನು ತಣಿಸಿತು. ಉತ್ತರ ಕುಮಾರನ ಪಾತ್ರವನ್ನು ಕುರಿತು ಅವರು ವಿವರಿಸುತ್ತಿರುವಾಗ ಸಭೆಯಲ್ಲೆಲ್ಲ ಹಾಸ್ಯದ ಹೊನಲು ಹರಿಯುತ್ತಿದ್ದಂತೆ ಕುಲಪತಿ ಶ್ರೀ ಹುಲಕೋಟೆಯವರೂ ಹೊಟ್ಟೆ ಹುಣ್ಣಾಗುವಂತೆ ನಕ್ಕು

ಸಂತೋಷಪಟ್ಟದ್ದು ಇನ್ನೂ ನನ್ನ ಕಣ್ಣು ಮುಂದೆ ಕಟ್ಟಿದಂತಿದೆ. ಎರಡುದಿನ ನಡೆದ ಆ ಉಪನ್ಯಾಸ ಮಾಲೆಯಲ್ಲಿ ಆಗ ಕರ್ನಾಟಕ ಕಾಲೇಜಿನ ಪ್ರಾಚಾರ್ಯರಾಗಿದ್ದ ವಿ.ಕೃ. ಗೋಕಾಕರು, ಪ್ರೊ. ಎಚ್.ವಿ. ಕಾಶ್ಯಪ ಅವರು ಹಾಗೂ ಒಕ್ಕಲುತನ ಕಾಲೇಜಿನ ಡಾ. ಎನ್.ಪಿ. ಪಾಟೀಲ ಅವರೂ ಅನುಕ್ರಮವಾಗಿ 'ಸರ್ವಜ್ಞಕವಿ', 'ಡಾರ್ವಿನ್‌ನ ವಿಕಾಸವಾದ' 'ಹತ್ತಿಯ ಬೆಳೆ' ವಿಷಯಗಳ ಬಗ್ಗೆ ಉಪನ್ಯಾಸವಿತ್ತರು. ವಿಶ್ವವಿದ್ಯಾಲಯದ ಈ ವಿನೂತನ ಕಾರ್ಯಕ್ರಮ ಪ್ರಾರಂಭದಲ್ಲಿಯೇ ಅಷ್ಟೊಂದು ಯಶಸ್ಸು ಪಡೆದದ್ದು ನನಗೆ ಹೆಚ್ಚಿನ ಧೈರ್ಯವನ್ನು ತಂದುಕೊಟ್ಟಿತು.

ಉಪನ್ಯಾಸಕ್ಕಾಗಿ ವಿಷಯಗಳ ಆಯ್ಕೆ, ಶಿಬಿರಕ್ಕೆ ಅತಿಥಿಗಳನ್ನು ಕರೆದೊಯ್ಯುವುದು, ಅಲ್ಲಿ ಅವರಿಗೆ ಇಳಿದುಕೊಳ್ಳುವ ವ್ಯವಸ್ಥೆ, ಕಾರ್ಯಕ್ರಮದ ನಿರ್ವಹಣೆ, ಸ್ಥಳೀಯ ಸಂಘ ಸಂಸ್ಥೆಗಳ ಸಂಪರ್ಕ, ಮರುಪ್ರಯಾಣ-ಹೀಗೆ ಪ್ರತಿಯೊಂದು ವಿಷಯವನ್ನೂ ನಾನು ಲಕ್ಷ್ಯಗೊಟ್ಟು ನೋಡಿಕೊಳ್ಳುವಂತೆ ಅವರು ಮಾಡಿದರು. ಸಣ್ಣ ಸಣ್ಣ ವಿಷಯದಲ್ಲೂ ಅವರು ವಹಿಸುತ್ತಿದ್ದ ಜಾಗರೂಕತೆ, ಅವರ ಬಗ್ಗೆ ನನ್ನ ಗೌರವವನ್ನು ಹೆಚ್ಚಿಸಿದಂತೆಯೇ ಒಳಗೊಳಗೆ ಅಂಜಿಕೆಯನ್ನು ಹುಟ್ಟಿಸುತ್ತಿತ್ತು. ಈ ಉಪನ್ಯಾಸ ಮಾಲೆಗೆ ತೀ.ನಂ. ಶ್ರೀಯಂಥವರು ಶ್ರೀಕಾರ ಹಾಕಿದ್ದರಿಂದಲೊ ಏನೋ ಈ ಕಾರ್ಯಕ್ರಮ ಅಂದಿನಿಂದ ಇಂದಿನವರೆಗೂ ಎಡೆಬಿಡದೆ ಯಶಸ್ವಿಯಾಗಿ ನಡೆದುಕೊಂಡು ಬರುತ್ತಿದೆ.

ಈ ಉಪನ್ಯಾಸಗಳನ್ನು ಕಿರುಹೊತ್ತಿಗೆಯಾಗಿ ಉಪನ್ಯಾಸ ಗ್ರಂಥಮಾಲೆಯಲ್ಲಿ ಪ್ರಕಟಿಸಲು ಪ್ರಾರಂಭಿಸಿದಾಗಲೂ ತೀ.ನಂ.ಶ್ರೀಯವರಿಂದ ಪಡೆದ ಪ್ರಯೋಜನ ಅಷ್ಟಿಷ್ಟಲ್ಲ. ಈ ಮಾಲೆಯಲ್ಲಿ ಪ್ರಕಟಗೊಂಡ ಮೊದಲನೆಯ ಪುಸ್ತಕ ಡಾ. ಕೆ. ಕೃಷ್ಣಮೂರ್ತಿಯವರ 'ಭವಭೂತಿ'. ಆಗ ಕುಮಟೆಯ ಕ್ಯಾನರಾ ಕಾಲೇಜಿನಲ್ಲಿದ್ದ ಡಾ. ಕೃಷ್ಣಮೂರ್ತಿಯವರು ಧಾರವಾಡಕ್ಕೆ ಬಂದ ಸಂದರ್ಭದಲ್ಲಿ ಅವರ ಹಸ್ತಪ್ರತಿಯನ್ನು ಪರಿಶೀಲಿಸಿ, ಅವರೊಡನೆ ಚರ್ಚಿಸಿ, ಹಸ್ತಪ್ರತಿಯಲ್ಲಿ ಮಾಡಬೇಕಾಗಿದ್ದ ಸಣ್ಣಪುಟ್ಟ ಬದಲಾವಣೆಗಳನ್ನು ಅವರಿಂದ ಮಾಡಿಸಿದ್ದಲ್ಲದೆ, ಕರಡು ತಿದ್ದುವವರೆಗೂ ತೀ.ನಂ.ಶ್ರೀ ಅದರಲ್ಲಿ ಆಸ್ಥೆ ವಹಿಸಿ ಅಚ್ಚುಕಟ್ಟಿಗೆ ಮಾದರಿಯನ್ನೂ ಒದಗಿಸಿ ಕೊಟ್ಟರು. ಹೀಗೆ ತಾವು ವಹಿಸಿಕೊಂಡ ಎಂಥ ಕಾರ್ಯದಲ್ಲಿಯೂ ಯಾವ ದೋಷವೂ ಉಂಟಾಗದಂತೆ ಅವರು ವಹಿಸುತ್ತಿದ್ದ ಕಾಳಜಿ ಆಶ್ಚರ್ಯಕರವಾಗಿತ್ತು. ಚಿಕ್ಕ ಸಮಾರಂಭವೊಂದರಲ್ಲಿ ಆ ಪುಸ್ತಿಕೆಯನ್ನು ಅವರು ಬಿಡುಗಡೆಗೊಳಿಸುತ್ತ 'ಈ ಪುಸ್ತಕ ಹೊರಬರುವುದರಲ್ಲಿ ನಾನು ಮಾಡಿದ ಕೆಲಸವೇನಿದ್ದರೂ ಅದು ಸೂಲಗಿತ್ತಿಯ ಕೆಲಸವಿದ್ದಂತೆ, ಅಷ್ಟೆ' ಎಂದು ಹೇಳಿದ ಮಾತು ಇನ್ನೂ ನನ್ನ ನೆನಪಿನಲ್ಲಿದೆ. ಈ ಮಾಲೆಯ ಪ್ರಕಟನೆ ಇಂದಿಗೂ ಅವಿಚ್ಛಿನ್ನವಾಗಿ ನಡೆದುಕೊಂಡು ಬಂದಿದೆ.

ತೀ.ನಂ.ಶ್ರೀ. ಬರಹದಲ್ಲಿ ತೋರುತ್ತಿದ್ದ ನಿಖರತೆ, ನಿಷ್ಪಕ್ಷತೆ ಅನುಪಮವಾದದ್ದು. ಒಂದು ಸಂಗತಿ ನೆನಪಾಗುತ್ತದೆ. ೨೬-೧೦-೧೯೫೩ರಂದು ವಿಶ್ವವಿದ್ಯಾಲಯದ ನೂತನ ಆಡಳಿತ ಕಚೇರಿ ಕಟ್ಟಡದ ಉದ್ಘಾಟನೆ ಉಪರಾಷ್ಟ್ರಪತಿ ಡಾ. ರಾಧಾಕೃಷ್ಣನ್ ಅವರಿಂದ ನೆರವೇರಲಿತ್ತು. ಕಟ್ಟಡದ ಮುಂಭಾಗದಲ್ಲಿ ಹಾಲುಗಲ್ಲಿನ ಮೇಲೆ ಅದನ್ನು ಕೆತ್ತಿಸಬೇಕಾದ ಸಂದರ್ಭದಲ್ಲಿ 'ಸರ್ವಪಲ್ಲಿ

ರಾಧಾಕೃಷ್ಣನ್ ಅವರಿಂದ' ಎಂಬ ಮಾತಿತ್ತು, ಆಗ ತೀ.ನಂ.ಶ್ರೀ ಅದನ್ನು ತಡೆಹಿಡಿದು ತಮ್ಮ ಸಂಶಯವನ್ನು ನಿವಾರಿಸಿಕೊಂಡು ಮರುದಿನ ಅದು 'ಸರ್ವಪಲ್ಲಿ' ಅಲ್ಲ, 'ಸರ್ವೇಪಲ್ಲಿ' ಎಂದು ತಿದ್ದಿಸಿದರು.

"ಕನ್ನಡ ಸಾಹಿತ್ಯದ ಇತಿಹಾಸ" ರಚನೆಯ ಒಂದು ಹೊಸ ಯೋಜನೆಯನ್ನು ತೀ.ನಂ.ಶ್ರೀಯವರು ಕಷ್ಟಪಟ್ಟು ತಯಾರಿಸಿ ವಿಶ್ವವಿದ್ಯಾಲಯದ ಸಿಂಡಿಕೇಟಿನ ಅನುಮತಿಯನ್ನು ಪಡೆದು ೧೯೫೫ರಲ್ಲಿ ಕಾರ್ಯಾರಂಭ ಮಾಡಿದ್ದರು. ಅದರ ಸಾಮಾನ್ಯ ರೂಪರೇಖೆಯನ್ನು ಆಯ್ಕೆ ಮಾಡಿದ ಲೇಖಕರಿಗೆಲ್ಲ ಕಳಿಸಿಕೊಡಲಾಗಿತ್ತು. 'ಕನ್ನಡ ಸಾಹಿತ್ಯದ ಇತಿಹಾಸ'ವನ್ನು ಸವಿಸ್ತಾರವಾಗಿ ಸಪ್ರಮಾಣವಾಗಿ ಬರೆಸಬೇಕೆಂದೂ, ಈ ಇತಿಹಾಸದಲ್ಲಿ ಕನ್ನಡ ಸಾಹಿತ್ಯದ ಹಲವು ಶಾಖೆಗಳ ಬೆಳವಣಿಗೆಯನ್ನು ಮಾತ್ರವಲ್ಲದೆ ಆಯಾ ಕಾಲಾವಧಿಯ ಭಾಷಾ ಸ್ವರೂಪ, ರಾಜಕೀಯ ಚರಿತ್ರೆ, ಮತಧರ್ಮ ಪರಿಸ್ಥಿತಿ, ಜನಜೀವನ ರೀತಿ ಮೊದಲಾದವುಗಳ ಹಿನ್ನೆಲೆಯೂ ನಿರೂಪಿತವಾಗಬೇಕೆಂದೂ ಇದರ ರಚನೆಯಲ್ಲಿ ಕನ್ನಡನಾಡಿನ ಎಲ್ಲ ಭಾಗಗಳ ವಿದ್ವಾಂಸರ ಸಹಾಯ ಸಹಕಾರಗಳನ್ನು ಪಡೆಯಬೇಕೆಂದೂ ಅವರು ಇಚ್ಛಿಸಿದ್ದರು. ಮುಂದೆ ಎರಡು ವರ್ಷಗಳಲ್ಲಿ ಅವರು ಮಹಾರಾಜಾ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ನೇಮಕಗೊಂಡು. ಮೈಸೂರಿಗೆ ಹಿಂತಿರುಗಿದ್ದರಿಂದ ಆ ಕೆಲಸ ಇಲ್ಲಿ ಮುಂದುವರಿಯದೆ ಹೋದದ್ದು ವಿಷಾದದ ಸಂಗತಿ. ಆ ಕಾರ್ಯ ಪೂರ್ತಿಗೊಂಡಿದ್ದರೆ ಒಂದು ಹೊಸ ಕನ್ನಡ ಸಾಹಿತ್ಯದ ಇತಿಹಾಸವನ್ನು ಪ್ರಕಟಿಸಿದ ಶ್ರೇಯಸ್ಸು ಕರ್ನಾಟಕ ವಿಶ್ವವಿದ್ಯಾಲಯದ್ದಾಗುತ್ತಿತ್ತು. ಈಚೆಗೆ ಬೆಂಗಳೂರು ವಿಶ್ವವಿದ್ಯಾಲಯ ರೂಪಿಸಿ ಪ್ರಕಟಿಸುತ್ತಿರುವ ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ ತೀ.ನಂ.ಶ್ರೀಯವರ ಈ ಯೋಜನೆಯ ಪ್ರಯೋಜನವನ್ನು ಕೆಲಮಟ್ಟಿಗೆ ಪಡೆದಿರುವಂತೆ ತೋರುತ್ತದೆ.

ಮೈಸೂರು, ಬೆಂಗಳೂರು ಕಡೆಗಳಿಂದ ಹಲವಾರು ವಿದ್ಯಾರ್ಥಿಗಳು ಎಂ.ಎ. ಅಭ್ಯಾಸಕ್ಕಾಗಿ ಆಗ ಧಾರವಾಡಕ್ಕೆ ಬಂದದ್ದುಂಟು,ಅವರಲ್ಲಿ ಕ.ವೆಂ. ರಾಜಗೋಪಾಲ, ಸಿಂಧುವಳ್ಳಿ ಅನಂತಮೂರ್ತಿ ಮೊದಲಾದವರು ನನಗೆ ಇಂದಿಗೂ ಆಪ್ತಸ್ನೇಹಿತರಾಗಿದ್ದು ಅಂದಿನ ದಿನಗಳನ್ನು ನೆನಪಿಗೆ ತರುತ್ತಾರೆ. ಧಾರವಾಡದಲ್ಲಿದ್ದ ನಾಲ್ಕೈದು ವರುಷಗಳ ಅವಧಿಯಲ್ಲಿ ತೀ.ನಂ.ಶ್ರೀ. ಅವರು ಈ ಭಾಗದ ಅನೇಕ ಕಡೆಯ ಸಭೆ ಸಮಾರಂಭಗಳಿಗೆ, ವಿದ್ಯಾಸಂಸ್ಥೆಗಳಿಗೆ ಅತಿಥಿಗಳಾಗಿ ಆಮಂತ್ರಿತರಾಗಿ ತಮ್ಮ ವಿದ್ವತ್ ಪೂರ್ಣವಾದ ಭಾಷಣಗಳಿಂದ ಜನರ ಮನಸ್ಸನ್ನು ಸಂತೋಷಗೊಳಿಸಿದರು. ಅಬ್ಬರವಿಲ್ಲದೆ ಕನ್ನಡದ ಪ್ರೇಮವನ್ನು ಉಕ್ಕಿಸಿದರು. ಉತ್ತರ ಕರ್ನಾಟಕದಲ್ಲಿಯ ಪ್ರಾಚೀನ ಕವಿಗಳ ಸ್ಥಳಗಳನ್ನೆಲ್ಲ ಅವರು ಇದೇ ಸಂದರ್ಭದಲ್ಲಿ ಸಂದರ್ಶಿಸಿದರು. ಪಾಂಡಿತ್ಯ ಹಾಗೂ ವಿನಯ ಸಮನ್ವಯಗೊಂಡ ತಮ್ಮ ಸುಸಂಸ್ಕೃತ ವ್ಯಕ್ತಿತ್ವದ ಸಾತ್ವಿಕ ಪ್ರಭಾವವನ್ನು ಅವರು ಹೋದಲ್ಲೆಲ್ಲ ಬೀರಿದರು.

ಅವರ ಉಪನ್ಯಾಸಗಳದೇ ಒಂದು ಸೊಗಸು. ಹೇಳುವ ವಿಷಯ ಮೊದಲೇ ಕರತಲಾಮಲಕವಾಗಿರುತ್ತಿತ್ತು. ತಾವು ಮೆಚ್ಚಿದ ಕವಿ ಕಾವ್ಯದ ವಿಷಯವಾಗಿದ್ದರಂತೂ ತೀರಿಯೇ ಹೋಯಿತು, ಅದರ ಸ್ವಾರಸ್ಯವೆಲ್ಲ ತಕ್ಕ ಹಾವಭಾವಗಳಿಂದ ಧ್ವನಿಯ ಸಾಂದರ್ಭಿಕ ಏರಿಳಿತಗಳಿಂದ

ತುಂಬಿ ಹೊರಸೂಸುವಂತೆ ಮಾಡುತ್ತಿದ್ದರು. ವಿಮರ್ಶೆಯ ಗಾಂಭೀರ್ಯದೊಂದಿಗೆ ರಸಿಕತೆಯ ಮೆರುಗನ್ನು ಅದು ಪಡೆದಿರುತ್ತಿತ್ತು. ಉಪನ್ಯಾಸದ ಆರಂಭ, ಮಧ್ಯ ಹಾಗೂ ಕೊನೆ ಮೂರೂ ಕಲಾತ್ಮಕವಾಗಿ ಅಲ್ಲಿ ಸಂಯೋಜನೆಗೊಂಡಿರುತ್ತಿದ್ದವು. ಔಚಿತ್ಯ ತಾನೇತಾನಾಗಿರುತ್ತಿತ್ತು.

* * * *

ಹತ್ತು ವರುಷಗಳ ಹಿಂದೆಯೇ ಅಚ್ಚಿಗೆ ಹೋಗಿದ್ದ ಅವರ 'ಭಾರತೀಯ ಕಾವ್ಯ ಮೀಮಾಂಸೆ' ಪ್ರಕಟವಾದದ್ದು ೧೯೫೩ರಲ್ಲಿ, ಅವರು ಧಾರವಾಡದಲ್ಲಿದ್ದಾಗ. ಅದರ ಹಿಂದಿನ ವರ್ಷ ನಾನು ಎಂ.ಎ ದಲ್ಲಿದ್ದಾಗ ಅದರ ಅಚ್ಚಾದ ಫಾರ್ಮುಗಳನ್ನು ಅವರಿಂದ ಪಡೆದು, ಓದಿ ಹಿಂದಿರುಗಿಸಿದ್ದೆ. ಈಗ ಆ ಗ್ರಂಥದ ಪ್ರತಿಯನ್ನು ಅವರ ಮೂಲಕವೇ ತರಿಸಿಕೊಂಡೆ. ೧೯೩೦ರಲ್ಲಿ ಪ್ರಕಟವಾಗಿದ್ದ ಅವರ 'ಒಲುಮೆ' ಕವನ ಸಂಗ್ರಹ ಎರಡನೆಯ ಮುದ್ರಣ 'ಭಾರತೀಯ ಕಾವ್ಯ ಮೀಮಾಂಸೆ' ಪ್ರಕಟವಾದ ವರುಷವೇ ಹೊರಬಂದದ್ದು ನನಗೆ ಔಚಿತ್ಯಪೂರ್ಣವಾಗಿ ತೋರುತ್ತದೆ. ಆಗ ಅವರು 'ವಿಶ್ವಾಸದೊಡನೆ' ಕೊಟ್ಟ 'ಒಲುಮೆ'ಯ ಕ್ಯಾಲಿಕೊ ಪ್ರತಿಯನ್ನು ನಾನು ಜೋಪಾನವಾಗಿ ಕಾಯ್ದಿರಿಸಿದ್ದೇನೆ.

ಅವರು ಧಾರವಾಡದಲ್ಲಿದ್ದಾಗ ಬರೆದದ್ದು ಎರಡೇ ಕವಿತೆಗಳೆಂದು ತೋರುತ್ತದೆ. ಒಂದು ಆಕಾಶವಾಣಿಯ ಕವಿಸಮ್ಮೇಳನಕ್ಕಾಗಿ ಬರೆದ 'ಯುಗಾದಿ', ಇನ್ನೊಂದು ಅವರು ಅಮೇರಿಕಾಕ್ಕೆ ಹೋಗುವ ಮುಂಚೆ ಬರೆದ 'ನೀಡು ಪಾಥೇಯವನು' ಎರಡೂ 'ಜಯ ಕರ್ನಾಟಕ'ದಲ್ಲಿ ಅಚ್ಚಾದವು. "ನನ್ನ ಕವಿತನದ ವಿಷಯದಲ್ಲಿ ನನಗೆ ಯಾವ ಭ್ರಮೆಯೂ ಉಳಿದಿಲ್ಲ" ಎಂದು ಅವರು ಪು.ತಿ.ನ. ಅವರಿಗೆ ಬರೆದ ಪತ್ರದಲ್ಲಿ (೪-೪-೧೯೫೩) ಕಾಣಿಸಿದ್ದುಂಟು. ಆದರೂ ಅವೆರಡೂ ಒಳ್ಳೆಯ ಕವನಗಳೇ. 'ಒಲುಮೆ' ಕನ್ನಡದ ಪ್ರೇಮಗೀತೆಗಳ ಮೊದಲನೆಯ ಸಂಗ್ರಹವಷ್ಟೇ ಅಲ್ಲ. ಅಲ್ಪ ಪ್ರಮಾಣದಲ್ಲಾದರೂ ಕನ್ನಡದ ಅತ್ಯಂತ ಚೆಲುವಾದ ಪ್ರೇಮಗೀತೆಗಳ ಸಾಲಿನಲ್ಲಿ ನಿಲ್ಲಬಲ್ಲ ಕವನಗಳನ್ನು ಒಳಗೊಂಡು ಸಂಗ್ರಹ.

* * * *

ಧಾರವಾಡದಲ್ಲಿದ್ದಾಗ ತೀ.ನಂ.ಶ್ರೀಯವರು ಎರಡು ಸಲ ಮನೆ ಬದಲಿಸಬೇಕಾಯಿತು. ನಾನೂ ಬೇರೆ ಕಾರಣಗಳಿಂದ ಎರಡು ಸಲ ಮನೆ ಬದಲಿಸಿದೆ. ಆಶ್ಚರ್ಯದ ಹಾಗೂ ಸಂತೋಷದ ಸಂಗತಿಯೆಂದರೆ, ಎರಡು ಸಲವೂ ನನಗೆ ಅವರ ಮನೆಯ ಎದುರಿನ ಸಾಲಿನ ಮನೆಯಲ್ಲಿಯೇ ವಾಸಿಸುವ ಪ್ರಸಂಗ ಒದಗಿತ್ತು. ಮೊದಲು ಮಾಳಮರಡಿಯಲ್ಲಿ, ಆ ಮೇಲೆ ಸಾರಸ್ವತಪುರದಲ್ಲಿ. ಹೀಗಾಗಿ ಅವರ ಕುಟುಂಬದ ಸದಸ್ಯರೊಡನೆ ನಮಗೆ ಹೆಚ್ಚಿನ ಬಾಂಧವ್ಯ ಬೆಳೆಯಿತು. ಇನ್ನೂ ಚಿಕ್ಕವನಾಗಿದ್ದ ನಾಗಭೂಷಣ ಹೈಸ್ಕೂಲಿಗೆ ಹೋಗುತ್ತಿದ್ದ. ನಾಗರತ್ನ ಕಾಲೇಜಿಗೆ ಹೋಗುತ್ತಿದಳು. ಶ್ರೀಮತಿ ಜಯಲಕ್ಷ್ಮಮ್ಮ ಅವರು ಬೇಸರವೆನಿಸಿದಾಗಲೆಲ್ಲ, ನಮ್ಮ ಮನೆಗೆ ಬರುತ್ತಿದ್ದರು. ನಮ್ಮ ಮನೆಯವರು ಬಿಸಿಬಿಸಿ ಜೋಳದ ರೊಟ್ಟಿ, ಪಲ್ಯ, ಚಟ್ನಿಗಳ ತಾಟನ್ನು ಆಗೀಗ ಊಟದ ಹೊತ್ತಿಗೆ ಅವರ ಮನೆಗೆ ಕಳಿಸಿಕೊಡುತಿದ್ದರು. ಮರುದಿನವೇ ತೀ.ನಂ. ಶ್ರೀಯವರು ಬಿಳಿಜೋಳದ ರೊಟ್ಟಿಯ ರುಚಿಯ ಬಗ್ಗೆ ತಮ್ಮ ಮೆಚ್ಚುಗೆ ವ್ಯಕ್ತಪಡಿಸುತ್ತಿದ್ದು, ಇಷ್ಟು ತೆಳ್ಳಗೆ

ರೊಟ್ಟಿ ಹೇಗೆ ಮಾಡುತ್ತೀರಿ ಎಂದು ಜಯಲಕ್ಷ್ಮಮ್ಮ ಅವರು ಕುತೂಹಲಗೊಳ್ಳುತ್ತಿದ್ದರು.

ಸ್ನೇಹಿತರನ್ನು ತಮ್ಮ ಮನೆಗೆ ಮೇಲಿಂದ ಮೇಲೆ ಬರಮಾಡಿಕೊಂಡು ಆತಿಥ್ಯ ನೀಡುವುದರಲ್ಲಿ ಅವರಿಬ್ಬರಿಗೂ ಎಲ್ಲಿಲ್ಲದ ಸಂತೋಷ. ಮೈಸೂರು ಬೆಂಗಳೂರು ಕಡೆಗಳಿಂದ ಅವರ ಮಿತ್ರರು, ಬಂಧುಗಳು ಯಾರು ಬಂದರೂ ಅವರಿಗೆ ತೀ.ನಂ.ಶ್ರೀಯವರ ಮನೆಯಲ್ಲಿಯೇ ಆತಿಥ್ಯ ಒದಗುತ್ತಿತ್ತು. ಅಂಥ ಸಂದರ್ಭಗಳಲ್ಲಿ ನಮಗೂ ಆಮಂತ್ರಣ ಇದ್ದೇ ಇರುತ್ತಿತ್ತು. ಊಟವಾಗಲಿ, ಉಪಹಾರವಾಗಲಿ ಯಾವುದರಲ್ಲೂ ಅವರು ತುಂಬ ಧಾರಾಳ, ಅಷ್ಟೇ ಶುಚಿ-ರುಚಿ, ಶಿಸ್ತು. ಇಂಥ ಸಂದರ್ಭದಲ್ಲಿ ಹೆಚ್ಚು ಜನರಿದ್ದಷ್ಟೂ ಅವರಿಗೆ ಹೆಚ್ಚಿನ ಸಂತೋಷ. ಅಂಥ ಸಂತೋಷಕ್ಕೆ ಅವರು ಯಾವಾಗಲೂ ಕಾದುಕೊಂಡಿರುವಂತೆ ತೋರುತ್ತಿತ್ತು.

ಪು.ತಿ.ನ., ಎ.ಎನ್. ಮೂರ್ತಿರಾಯರು, ಎಲ್. ಗುಂಡಪ್ಪ ಹಾಗೂ ಅವರ ಮಕ್ಕಳು ಸುಮಿತ್ರ, ವಿಮಲ ಮೊದಲಾದವರ ನಿಕಟ ಪರಿಚಯ ನಮಗಾದದ್ದು ಅವರ ಮನೆಯಲ್ಲಿಯೇ. ಆ ಸಂದರ್ಭದಲ್ಲಿ ಕಾವ್ಯಶಾಸ್ತ್ರ ವಿನೋದಕ್ಕೆ ಪೂರ ಬಂದಂತಿರುತ್ತಿತ್ತು. ಆ ಸೊಗಸಿನ ಸಂಜೆಗಳನ್ನು ಈಗ ಮೆಲುಕುಹಾಕುವುದೇ ಒಂದು ಸಂತೋಷ. ದಂಪತಿಗಳಿಗೆ ಅದರಲ್ಲಿ ವಿಶೇಷವಾದ ಆದರಾತಿಥ್ಯವಿರುತ್ತಿತ್ತು. ನೂತನ ದಂಪತಿಗಳಿಗೆ ಅದರ ಪ್ರಮಾಣ ಇನ್ನೂ ಹೆಚ್ಚುತ್ತಿತ್ತು. ಅಮೆರಿಕಾ, ಇಂಗ್ಲೆಂಡ್ ಪ್ರವಾಸದಿಂದ ಅವರು ಧಾರವಾಡಕ್ಕೆ ಮರಳಿದ ಮೇಲೆ ಒಂದು ದಿನ ಎಂಟು-ಹತ್ತು ಜೋಡಿ ದಂಪತಿಗಳನ್ನು ತಮ್ಮ ಮನೆಗೆ ಊಟಕ್ಕೆ ಕರೆದದ್ದು ನನಗೆ ನೆನಪಿದೆ.

* * * *

ತೀ.ನಂ.ಶ್ರೀಯವರ ಸಹೃದಯತೆಗೆ ನಾನು ನಿಜಕ್ಕೂ ಮಾರು ಹೋಗಿದ್ದೆ. ಆಕಾಶವಾಣಿಯಲ್ಲಿ ನಾನು ಕಾವ್ಯಾವಾಚನ ಮಾಡಿದಾಗ ಅವರು ಮರೆಯದೆ ಕೇಳಿರುತ್ತಿದ್ದರು. ‘ನೋಡಿ, ನಿನ್ನೆ ಓದಿದ ಆ ಮೂರು ಪದ್ಯಗಳು ತುಂಬ ಚೆನ್ನಾಗಿದ್ದವು’ ಎಂದು ಹೇಳುತ್ತಿದ್ದರಲ್ಲದೆ ಕೆಲವು ಸಾಲುಗಳನ್ನು ಕೂಡ ನೆನಪಿನಲ್ಲಿಟ್ಟುಕೊಂಡಿರುತ್ತಿದ್ದರು. ‘ಜೀವನ’ದಲ್ಲಿ ನನ್ನ ‘ಮಗುವಿಗೆ’ ಎಂಬ ಕವಿತೆ ಪ್ರಕಟವಾದಾಗ ಅದರಲ್ಲಿ ಬರುವ ನೂತನ ಉಪಮೆ ರೂಪಕಗಳನ್ನು ಅವರು ಎತ್ತಿ ತೋರಿಸಿ ತಮ್ಮ ಸಂತೋಷವನ್ನು ಸೂಚಿಸಿದ್ದರು. ಅವರದು ತುಂಬ ಪರಿಶುದ್ಧವಾದ ಕಾವ್ಯಾಭಿರುಚಿ.

೧೯೫೩ರಲ್ಲಿ ಅವರು ಕುಮಟಾ ಸಾಹಿತ್ಯ ಸಮ್ಮೇಳನಕ್ಕೆ ಹೋಗಿ ಬಂದರು. ಮೊಟ್ಟ ಮೊದಲಿಗೆ ಅಲ್ಲಿ ನವ್ಯ ಕಾವ್ಯದ ಬಗ್ಗೆ ನಡೆದ ಗೋಷ್ಠಿ ಸ್ವಲ್ಪ ತುರುಸಿನದಾಗಿತ್ತೆಂದು ತೋರುತ್ತದೆ. ಆ ಗೋಷ್ಠಿಯಲ್ಲಿ ಭಾಗವಹಿಸಿದ ಕೆಲವು ಮಿತ್ರರು ಸಮ್ಮೇಳನ ಮುಗಿಸಿಕೊಂಡು ಹೋಗುವಾಗ ಧಾರವಾಡಕ್ಕೂ ಬಂದರು. ಆಗ ತೀನಂಶ್ರೀಯವರ ಮನೆಯಲ್ಲಿ ಮತ್ತೊಂದು ಗೋಷ್ಠಿ ನಡೆಯಿತು. ಅಲ್ಲಿ ನಡೆದ ಚರ್ಚೆ ಇಲ್ಲಿ ಇನ್ನಿಷ್ಟು ಬಿಸಿಯಾಗಿ, ಆದರೆ ಆತ್ಮೀಯವಾಗಿ ಮುಂದುವರಿದಂತಿತ್ತು. ನವ್ಯಕಾವ್ಯದ ಕೆಲವು ಅಂಶಗಳನ್ನು ತೀನಂಶ್ರೀ ಮೆಚ್ಚಿಕೊಂಡಿದ್ದರಾದರೂ ಅದರ ಬಗ್ಗೆ ಹೆಚ್ಚಿನ ಒಲವನ್ನು ಅವರು ಮುಂದೆಯೂ ತೋರಿದಂತೆ ಕಂಡು ಬರಲಿಲ್ಲ.

* * * *

ತೀನಂಶ್ರೀ ಮೈಸೂರಿಗೆ ಹಿಂತಿರುಗುವ ಮುನ್ನ ಒಂದು ದಿನ ನನ್ನನ್ನು ತಮ್ಮ ಮನೆಗೆ ಕರೆಕಳುಹಿಸಿದರು. ನಾನು ಉಪನ್ಯಾಸ ಶಿಬಿರಕ್ಕಾಗಿ ಯಾವುದೋ ಊರಿಗೆ ಹೋದವನು ಅದೇ ಬಂದಿದ್ದೆ. ಅವರ ಮನೆಗೆ ಹೋದಾಗ ಹೇಳಿದರು : "ನೀವಿಲ್ಲದಾಗ ನಿಮಗೆ ತಿಳಿಸದೆ ನಾನೊಂದು ತೀರ್ಮಾನ ತೆಗೆದುಕೊಂಡಿದ್ದೇನೆ" ಎಂದರು. ನಾನು, "ನಿಮ್ಮಲ್ಲಿ ನನಗೆ ತುಂಬ ವಿಶ್ವಾಸ ಎಂಬುದು ನಿಮಗೆ ಗೊತ್ತೆ ಇದೆ, ಹೇಳಿ" ಎಂದೆ ಕುತೂಹಲದಿಂದ. ಅವರು ಹೇಳಿದರು: "ನಾನು ಇಷ್ಟರಲ್ಲಿಯೇ ಮೈಸೂರಿಗೆ ಹಿಂತಿರುಗಲಿರುವುದರಿಂದ ಇಲ್ಲಿಯ ಕನ್ನಡ ವಿಭಾಗದ ಮುಂದಿನ ವ್ಯವಸ್ಥೆಯ ಬಗ್ಗೆ ನನ್ನ ಸೂಚನೆಗಳನ್ನು ಡಾ. ಪಾವಟೆಯವರು ಕೇಳಿದರು. ನಾನು ನಿಮ್ಮನ್ನು ಲೆಕ್ಚರರ್ ಎಂದು ತೆಗೆದುಕೊಳ್ಳುವುದು ತುಂಬ ಸೂಕ್ತ ಎಂಬ ಶಿಫಾರಸು ಬರೆದುಕೊಟ್ಟಿದ್ದೇನೆ. ಅವರೂ ಅದಕ್ಕೆ ತಮ್ಮ ಸಮ್ಮತಿಯನ್ನು ವ್ಯಕ್ತಪಡಿಸಿದರು". ಈ ಅನಿರೀಕ್ಷಿತ ಘಟನೆ ನನ್ನನ್ನು ಅಚ್ಚರಿಗೊಳಿಸಿತು. ನಾನು ಅವರಿಗೆ ಕೃತಜ್ಞತೆ ಸೂಚಿಸಿ ಮನೆಗೆ ಬಂದೆ.

ಸ್ವಲ್ಪ ದಿನಗಳಲ್ಲಿ ಅವರು ಧಾರವಾಡವನ್ನು ಬಿಟ್ಟು ಮೈಸೂರಿಗೆ ತೆರಳಿದರು. ಮುಂದೆ ಇಲ್ಲಿ ಏನೇನೊ ಕಾರಣಗಳಿಂದಾಗಿ ಅವರು ನನ್ನ ಬಗ್ಗೆ ಮಾಡಿದ ಶಿಫಾರಸು ಕಾಗದದಲ್ಲಿಯೇ ಉಳಿಯಿತು. ತೀನಂಶ್ರೀ ಇದರಿಂದ ತುಂಬಾ ಬೇಸರಪಟ್ಟುಕೊಂಡರು. ಆದರೆ ಆ ಬಗ್ಗೆ ನಾನು ಹೆಚ್ಚು ಹಚ್ಚಿಕೊಂಡಿರಲಿಲ್ಲ. "ವ್ಯಾಸಂಗ ವಿಸ್ತರಣ, ಪ್ರಕಟನ ವಿಭಾಗಕ್ಕೆ ನನ್ನನ್ನು ಸಂಪೂರ್ಣ ಅರ್ಪಿಸಿಕೊಂಡು ಬಿಟ್ಟಿದ್ದೇನೆ. ನನಗೇನೂ ಚಿಂತೆಯಿಲ್ಲ" ಎಂದು ನಾನೇ ಅವರಿಗೆ ಸಮಾಧಾನ ಹೇಳಬೇಕಾಯಿತು.

ಮುಂದೆ ಇಪ್ಪತ್ತೈದು ವರ್ಷಗಳ ನಂತರ, ನಾನು ಪ್ರಸಾರಾಂಗದ ನಿರ್ದೇಶಕತ್ವದಿಂದ ನಿವೃತ್ತನಾಗುವ ಮುನ್ನ ಕನ್ನಡ ಅಧ್ಯಯನ ಪೀಠದಲ್ಲಿ ಎರಡು ವರ್ಷ ಗೌರವ ಸಂದರ್ಶಕ ಪ್ರಾಧ್ಯಾಪಕನಾಗಿ ವಿದ್ಯಾರ್ಥಿಗಳಿಗೆ ಪಾಠ ಹೇಳುವ ಅವಕಾಶ ಅಯಾಚಿತವಾಗಿ ಒದಗಿತ್ತು. ಆ ಸಂದರ್ಭದಲ್ಲಿ ನನಗೆ ತೀನಂಶ್ರೀಯವರ ನೆನಪಾಗದೆ ಹೋಗಲಿಲ್ಲ.

* * * *

೧೯೫೭ರ ದಸರಾ ಕವಿಸಮ್ಮೇಳನದಲ್ಲಿ ಭಾಗವಹಿಸಲು ಮೈಸೂರಿಗೆ ಹೋದಾಗ ತೀನಂಶ್ರೀಯವರ ಮನೆಗೆ ನಾನು ಮನೆಯವರ ಜೊತೆಗೆ ಹೋಗಿದ್ದೆ. ಆಗ ಅವರ ಮನೆಮಂದಿಯೆಲ್ಲ ಧಾರವಾಡದ ಬಗ್ಗೆ ಕೇಳಿದ್ದೇ ಕೇಳಿದ್ದು. ನಾಲ್ಕೈದು ವರ್ಷಗಳಲ್ಲಿಯೇ ಅವರು ಇಲ್ಲಿ ಪಡೆದಿದ್ದ ಸ್ನೇಹಿತರ ಬಳಗ ಅಷ್ಟು ದೊಡ್ಡದಾಗಿತ್ತು. ಅಂದು ನಮ್ಮಿಬ್ಬರ ಅತಿಥಿ ಸತ್ಕಾರದಲ್ಲಿ ಅವರು ಧಾರವಾಡದ ಮೇಲಿನ ಪ್ರೀತಿಯನ್ನೆಲ್ಲ ತೀರಿಸಿಕೊಳ್ಳುತ್ತಿರುವಂತೆ ತೋರಿತು. ತಮ್ಮ ಮನೆಯ ಅಂಗಳದಲ್ಲಿ ನನ್ನನ್ನೂ ನನ್ನ ಶ್ರೀಮತಿಯನ್ನೂ ಜೊತೆಯಾಗಿ ನಿಲ್ಲಿಸಿ, ಸ್ವತಃ ತೀನಂಶ್ರೀಯವರೇ ಫೋಟೋ ತೆಗೆದುಕೊಂಡಿದ್ದನ್ನು ಹೇಗೆ ಮರೆಯುವುದು ?

* * * *

೧೯೬೧ರಲ್ಲಿ ಗದಗಿನಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಭಾಷಾ ಬಾಂಧವ್ಯ ಗೋಷ್ಠಿಯ ಅಧ್ಯಕ್ಷರಾಗಿ ತೀ.ನಂ.ಶ್ರೀ. ಬಂದಾಗ ಕೆಲವೇ ಕ್ಷಣಗಳನ್ನು ಅವರ ಜೊತೆಗೆ

ಕಳೆಯಬೇಕಾಯಿತು. ಯಾಕೆಂದರೆ ಅಂದೇ ಅವರು ಯಾವುದೋ ತುರ್ತು ಕೆಲಸ ನಿಮಿತ್ತ ಮೈಸೂರಿಗೆ ತೆರಳಬೇಕಾಗಿತ್ತು. ನಾನು ಕವಿಗೋಷ್ಠಿಯ ಅಧ್ಯಕ್ಷನಾದದ್ದಕ್ಕೆ ನನ್ನನ್ನು ಅಭಿನಂದಿಸಿ ನನ್ನ ಭಾಷಣದ ಎರಡು ಪ್ರತಿಗಳನ್ನು ಪಡೆದುಕೊಂಡುದರ ಉದ್ದೇಶ ಮುಂದೆ ಪು.ತಿ.ನ. ಅವರು ೩೦-೧೨-೬೧ರಲ್ಲಿ ನನಗೆ ಬರೆದ ಪತ್ರದಿಂದ ಗೊತ್ತಾಯಿತು. ಪು.ತಿ.ನ. ಅವರ ಪತ್ರದಲ್ಲಿಯ ಮಾತುಗಳನ್ನು ಇಲ್ಲಿ ಉದ್ಧರಿಸುತ್ತಿದ್ದೇನೆ.

"ತಾವು ಈ ಸಲದ ಕವಿಗೋಷ್ಠಿ ಅಧ್ಯಕ್ಷರಾದದ್ದು ತುಂಬ ಹರುಷದ ಸಂಗತಿ. ನನ್ನ ಅಭಿನಂದನೆಗಳು. ತಮ್ಮ ಭಾಷಣದ ಪ್ರತಿಯೊಂದನ್ನು ತೀನಂಶ್ರೀಯವರು ನನ್ನಲ್ಲಿ ಬಿಟ್ಟುಹೋದರು. ತುಂಬ ಕುತೂಹಲದಿಂದ ಓದಿದೆ. ನಿಜ, ತಾವು ನನ್ನ ಪುಸ್ತಕದ ವಿಚಾರವಾಗಿ ಹೇಳಿರುವ ಮಾತು. ಈಗೀಗ ಮನಸ್ಸು ಹಿಮ್ಮೊಗವಾಗಿ ತಿರುಗಹತ್ತಿದೆ. ಅಂತ್ಯಪ್ರಾಸವನ್ನು ಬಿಟ್ಟು ಆದಿಪ್ರಾಸಕ್ಕೂ ಕಂದವೃತ್ತಗಳಿಗೂ ಒಲಿಯುತ್ತಿದೆ. ನನ್ನ ಸೆಳವು ಮೊದಲಿನಿಂದಲೂ ಸಂಸ್ಕೃತದತ್ತ- ಈಗೀಗ ಇದು ತುಂಬ ಹೆಚ್ಚು. ಅವರವರ ಮಾಳ್ಕೆಯಂತೆ ಅವರವರ ಲೋಕ... ಬಹು ಪ್ರಚೋದಕವಾಗಿದೆ ನಿಮ್ಮ ಭಾಷಣ, ಅಭಿನಂದನೆಗಳು."

* * * *

ತೀ.ನಂ.ಶ್ರೀಯವರನ್ನು ನೆನೆದಾಗ ಹೊಳಪುಗಣ್ಣಿನ, ಮಂದಸ್ಮಿತದ, ಸ್ನಿಗ್ಧ ನೋಟದ, ಅವರ ಪ್ರಶಾಂತ ಮುಖ ಕಣ್ಣೆದುರು ನಿಲ್ಲುತ್ತದೆ. ಯಾವುದರ ಬಗೆಗಾದರೂ ಅಸಮಾಧಾನವೆನಿಸಿದಾಗ ಸ್ವಲ್ಪ ಹುಬ್ಬುಗಂಟಿಕ್ಕಿ ಪುನಃ ಮೊದಲಿನ ಕಳೆಯನ್ನು ಅದು ಪಡೆಯುತ್ತಿತ್ತು. ಸಂಸಾರದ ಸೌಖ್ಯ, ಮಿತ್ರರ ಒಲವು, ಸಾಹಿತ್ಯದ ಸವಿ ಅವರ ವೈಯಕ್ತಿಕ ನೋವುಗಳನ್ನು ಮರೆಸಿ ಗೆಲುವನ್ನು ಸಾಧಿಸಿದ್ದವು.

ಧಾರವಾಡದಲ್ಲಿ ಆಗ ಸಿಟಿ ಬಸ್ಸುಗಳಿರಲಿಲ್ಲ. ಸಾರಸ್ವತಪುರದ ತಮ್ಮ ಮನೆಯಿಂದ ಟ್ರೈನಿಂಗ್ ಕಾಲೇಜಿನವರೆಗೆ (ವಿಶ್ವವಿದ್ಯಾಲಯದ ಕನ್ನಡ ವಿಭಾಗ ಆಗ ಅಲ್ಲಿಯೇ ಇತ್ತು.) ಬಿಸಿಲಿನಲ್ಲಿ ಅವರು ನಡೆದುಕೊಂಡೇ ಹೋಗುತ್ತಿದ್ದರು. ತೆಳ್ಳಗಿನ ಬೆಳ್ಳಗಿನ ನೀಟಾದ ಪಂಚೆಯುಟ್ಟು ಕ್ಲೋಸ್‌ಕಾಲರ್ ಕೋಟು ತೊಟ್ಟು, ಇರುವಷ್ಟು ತಲೆಗೂದಲನ್ನು ಒಪ್ಪಾಗಿ ಬಾಚಿ, ಎಡಗೈಯಲ್ಲಿ ಪುಸ್ತಕಗಳನ್ನು, ಬಲಗೈಯಲ್ಲಿ ಕೊಡೆಯನ್ನು ಹಿಡಿದುಕೊಂಡು, ಮೈಯನ್ನು ಸ್ವಲ್ಪ ಓಲಾಡಿಸುತ್ತ, ಎತ್ತರದ ನಿಲುವಿನ ಸಹಜ ಸೌಮ್ಯ ರೀವಿಯೊಂದಿಗೆ ಅವರು ನಡೆದು ಹೋಗುತ್ತಿದ್ದ ದೃಶ್ಯ ಇನ್ನೂ ನನ್ನ ಕಣ್ಣ ಮುಂದೆ ಕಟ್ಟಿದಂತಿದೆ.

ಈಗ್ಗೆ ಕೆಲವರ್ಷಗಳ ಹಿಂದೆ ನಾಗಭೂಷಣ ತನ್ನ ಪತ್ನಿಯೊಂದಿಗೆ ಧಾರವಾಡದ ನಮ್ಮ ಮನೆಗೆ ಬಂದಾಗ ಅವನ ತುಂಬು ಮೊಗದಲ್ಲಿ ನಾನು ತೀ.ನಂ.ಶ್ರೀಯವರನ್ನೇ ಕಂಡಂತಾಯಿತು.

'ಸಮತೋಲನ' ೧೯೮೯

೭

# ಗೋಕಾಕ - ಕಾರಂತರೊಂದಿಗೆ ಸಂದರ್ಶನ

(ಡಾ. ವಿ.ಕೃ. ಗೋಕಾಕರು ಕೊನೆಯುಸಿರೆಳೆಯುವ ಕೆಲವೇ ದಿನಗಳ ಮುನ್ನ ಧಾರವಾಡದಲ್ಲಿ ಕರ್ನಾಟಕ ವಿಶ್ವವಿದ್ಯಾಲಯ ಡಾ. ಶಿವರಾಮ ಕಾರಂತರ ಅಧ್ಯಕ್ಷತೆಯಲ್ಲಿ ಏರ್ಪಡಿಸಿದ ಸನ್ಮಾನ ಸಮಾರಂಭದಲ್ಲಿ ಪಾಲ್ಗೊಳ್ಳಲು ಬಂದಾಗ, ಈ ಇಬ್ಬರು ಗಣ್ಯ ಸಾಹಿತಿಗಳನ್ನು ಧಾರವಾಡದ ಆಕಾಶವಾಣಿ ಕೇಂದ್ರಕ್ಕಾಗಿ ಸಂದರ್ಶಿಸುವ ಅವಕಾಶ ಒದಗಿದ್ದಿತು. ಆಗ ನಡೆದ ಮಾತುಕತೆ)

**ಕಣವಿ:** ಜ್ಞಾನಪೀಠ ಪ್ರಶಸ್ತಿ ವಿಜೇತರಾದ ಕನ್ನಡದ ಇಬ್ಬರು ಶ್ರೇಷ್ಠ ಸಾಹಿತಿಗಳು, ಶಿಕ್ಷಣ ತಜ್ಞರು, ಹಿರಿಯ ಅನುಭವಿಗಳೂ ಆದ ಡಾ. ಶಿವರಾಮ ಕಾರಂತ ಮತ್ತು ಡಾ. ವಿ.ಕೃ. ಗೋಕಾಕ - ಇವರಿಬ್ಬರೂ ಇವತ್ತು ನಮ್ಮ ಜೊತೆಗೆ ಸ್ವಲ್ಪಹೊತ್ತು ತಮ್ಮ ವಿಚಾರಗಳನ್ನು ಹಂಚಿಕೊಳ್ಳಲಿಕ್ಕೆ ಒಪ್ಪಿರುವುದು ನಮ್ಮ ಭಾಗ್ಯ ಎಂದುಕೊಂಡಿದ್ದೇನೆ. ಜೀವನದ ಆಳವಾದ ಅನುಭವಗಳಿಂದ, ಶ್ರೇಷ್ಠ ಸಾಹಿತ್ಯ ಕೃತಿಗಳ ನಿರ್ಮಾಣದಿಂದ, ನಾಡು ನುಡಿಗಳ ಅಖಂಡ ಸೇವೆಯಿಂದ ಮಾಗಿದುಂತಹ ಈ ಎರಡೂ ಮಹಾ ಚೇತನಗಳಿಗೆ ನಮ್ಮ ಕೃತಜ್ಞತೆಗಳು ಸಲ್ಲುತ್ತವೆ. ಸಾಹಿತ್ಯದ ಎಲ್ಲ ಕ್ಷೇತ್ರಗಳಲ್ಲಿ - ಪ್ರಕಾರಗಳಲ್ಲಿ ಕೃಷಿಗೈದು ಒಂದು ಸಿದ್ಧಿಯ ಶಿಖರವನ್ನು ಈ ಇಬ್ಬರೂ ಧೀಮಂತರು ತಲುಪಿದ್ದರೂ, ಗೋಕಾಕರಿಗೆ ಕಾವ್ಯ, ಕಾರಂತರಿಗೆ ಕಾದಂಬರಿ ಇವು ಪ್ರಮುಖ ಅಭಿವ್ಯಕ್ತಿಯ ಮಾಧ್ಯಮಗಳಾಗಿವೆ. ಸಾಹಿತ್ಯದಷ್ಟೇ ಅಧ್ಯಾತ್ಮದಲ್ಲಿಯೂ ತೀವ್ರವಾದ ಆಸಕ್ತಿಯನ್ನು ಹೊಂದಿರುವಂತಹ ಗೋಕಾಕರು 'ಬಾಳದೇಗುಲ'ವೆಂಬ ಪ್ರತಿಮೆಯನ್ನು ಕಂಡರಿಸಿದರೆ, ತಮ್ಮ ದೃಷ್ಟಿ ಪಾರಮಾರ್ಥಿಕವಾದದ್ದಲ್ಲ ಎನ್ನುವ ಕಾರಂತರು 'ಬಾಳ್ವೆಯೇ ಬೆಳಕು' ಎನ್ನುವಲ್ಲಿ ಅವರ ಮನೋಧರ್ಮವನ್ನು ಸ್ಪಷ್ಟಪಡಿಸುವಂತೆ ಕಂಡುಬರುತ್ತದೆ. ಜೀವನದ ಬಗ್ಗೆ ಪ್ರೀತಿಯನ್ನು, ಶ್ರದ್ಧೆಯನ್ನು, ಲವಲವಿಕೆಯನ್ನು ಇಟ್ಟುಕೊಂಡ ಈ ಇಬ್ಬರು ಹಿರಿಯರ ಜೊತೆಗೆ ಸ್ವಲ್ಪ ಮಾತಾಡೋಣ. ಕಾರಂತ ಮತ್ತು ಗೋಕಾಕರಿಗೆ ಇಬ್ಬರಿಗೂ ನಮಸ್ಕಾರ.

**ಗೋಕಾಕ** : ನಮಸ್ಕಾರ .....

**ಕಣವಿ** : ಈಗ ನಿಮಗೆ ಇಬ್ಬರಿಗೂ ಕೂಡಿಯೇ ಒಂದು ಪ್ರಶ್ನೆ. ನಿಮ್ಮ ಈ ಇಳಿ ವಯಸ್ಸಿನಲ್ಲಿಯ ನೆನಪಿನ ಶಕ್ತಿಯನ್ನು ಪರೀಕ್ಷಿಸುವುದಕ್ಕೆಂದು ಈ ಪ್ರಶ್ನೆ ಅಲ್ಲ. ನನ್ನ ಕುತೂಹಲ ತಣಿಸಿಕೊಳ್ಳುವುದಕ್ಕಾಗಿ....ನೀವಿಬ್ಬರೂ ಭೆಟ್ಟಿಯಾಗಿ ಪರಸ್ಪರ ಮಾತಾಡಿದ, ಚರ್ಚಿಸಿದ ಪ್ರಸಂಗಗಳು ನಿಮ್ಮ ನೆನಪಿನಲ್ಲಿವೆಯೆ? .... ಕಾರಂತರೇ ನಿಮ್ಮ ನೆನಪಿನಲ್ಲಿ....?

**ಕಾರಂತ:** ಯಾವ ಯಾವಾಗ ಏನು ಏನು ಯಾರ ಜೊತೆಗೇ ಮಾತಾಡಲಿ, ನಾನು ಅದನ್ನ ಆವಾಗಲೇ ಮರೆಯುವಂತಹ ಜಾಯಮಾನದವನು. ಯಾವುದಾದರೂ ಮಹತ್ವದ ವಿಷಯದ ಬಗ್ಗೆ ಚರ್ಚೆ ಮಾಡಿದ್ದೇವೆ ಅಂದರೆ ನೆನಪು ಇರುತ್ತದೆ. ಆದರೆ ನಾನು ಮತ್ತು ಗೋಕಾಕರು ಇಂಥಾ ಒಂದು ವಿಷಯದ ಬಗ್ಗೆ ಮಾತಾಡಿದ್ದೇವೆ-ಚರ್ಚೆ ಮಾಡಿದ್ದೇವೆ ಅಂದರೆ ನೆನಪು ಇರುತ್ತದೆ. ಆದರೆ ನಾನು ಮತ್ತು ಗೋಕಾಕರು ಇಂಥಾ ಒಂದು ವಿಷಯದ ಬಗ್ಗೆ ಮಾತಾಡಿದ್ದೇವೆ ಅಂತ ಇಲ್ಲ. ನಾವಿಬ್ಬರೂ ಒಂದು ಕಡೆ ಕೂಡಿ ಯೋಚಿಸಬೇಕಾದಂತಹ ಯಾವುದೇ ಸಂದರ್ಭ ನಮ್ಮ ಜೀವನದಲ್ಲಿ ಒದಗಿ ಬರಲಿಲ್ಲ... ನಾನು ಮೊದಲು ರಾಮಕೃಷ್ಣ ಪರಮಹಂಸರ ಭಕ್ತಿಭಾವದಲ್ಲಿ ಇದ್ದವನು. ಅದನ್ನು ನಾನು ಬಿಟ್ಟುಕೊಟ್ಟು ಬಾಳ್ವೆಯೇ ಬೆಳಕು ಅಂತ ಹೊರಟೆ. ಆದರೆ ಗೋಕಾಕರು ಅಂಥ ಭಕ್ತಿ ಭಾವದಲ್ಲಿ ಇದ್ದುಕೊಂಡು ಅದನ್ನೇ ಹಿಡಕೊಂಡು ಹೊರಟಿದ್ದಾರೆ. ಹೀಗಾಗಿ ನಾವು - ಪ್ರಾಯಶಃ ನಮ್ಮ ಮನಸುಗಳು ಬೇರೆ ಬೇರೆ ದಿಕ್ಕುಗಳಿಗೆ ತುಡಿಯುವಂತಹವುಗಳು .... ನಾವು ಪರಸ್ಪರ ವಿರುದ್ಧ ದಿಕ್ಕಿನಲ್ಲಿ ಹೋಗುವವರಾಗಿದ್ದೇವೆ...

**ಕಣವಿ:** ಗೋಕಾಕರಿಗೆ?... ನಿಮಗೆ ಏನಾದರೂ ನೆನಪಿದೆಯೆ?

**ಗೋಕಾಕ:** ನನಗೂ ಕಾರಂತರಿಗೂ ಪತ್ರವ್ಯವಹಾರ ನಡಿತಾ ಇತ್ತು.. ಇದಲ್ಲದೆ ಕಾರಂತರು ಆಗಾಗ ಧಾರವಾಡಕ್ಕೆ ಬರ್ತಾ ಇದ್ದರು. ಆ ಕಾಲಕ್ಕೆ ಆಗ ನಾನು ಇನ್ನೂ ಕಾಲೇಜಿನಲ್ಲಿ ವಿದ್ಯಾರ್ಥಿಯಾಗಿದ್ದೆ. ಸಾಹಿತಿಗಳೆಂದರೆ... ಬೇಂದ್ರೆ-ಕಾರಂತ ಇವರ ಬಗೆಗೆ ನನಗೆ ವಿಶೇಷ ಗೌರವ. ಇಂದಿಗೂ ಆ ಗೌರವ ಇದೆ. ನಮ್ಮ ಪತ್ರವ್ಯವಹಾರದಲ್ಲಿ ಇಂಥ ನಿರ್ದಿಷ್ಟ ವಿಷಯದ ಬಗ್ಗೆ ಪತ್ರವ್ಯವಹಾರ ಮಾಡಿದ್ದೇವೆ ಅಂತ ನನಗೆ ನೆನಪಿಲ್ಲ.. ಆಗ ಕಾರಂತರು ಮಾಸಿಕ ಒಂದನ್ನು ನಡಸ್ತಾ ಇದ್ದರು.ಅದು....

**ಕಣವಿ:** ವಸಂತ....

**ಗೋಕಾಕ:** ಹಾಂ.. ವಸಂತ... ಅದರಲ್ಲಿ ಬಂದ ಲೇಖನಗಳ ಬಗ್ಗೆ ನಾನು ಅವರಿಗೆ ಬರೀತಿದ್ದೆ. ಕಾರಂತರು ನನಗೆ ಉತ್ತರಿಸುತ್ತಿದ್ದರು...ಕಾರಂತರು ಅಷ್ಟೊತ್ತಿಗಾಗಲೇ ಲೇಖಕರೆಂದು ಹೆಸರು ಗಳಿಸಿದ್ದರು. ಅವರು ಧಾರವಾಡಕ್ಕೆ ಬಂದಾಗ-ಅವರನ್ನು ಏನಾದರೂ ಕೇಳಬೇಕೆಂದು ಅನ್ನಿಸಿದರೆ ಕೇಳುತ್ತಿದ್ದೆ. ಇದೂ ಅಲ್ಲದೆ, ಆಮೇಲೆ ಮುಂದೆ ಕಾರಂತರು ಒಮ್ಮೆ ನನ್ನನ್ನು ಪುತ್ತೂರಿಗೆ ಆಹ್ವಾನಿಸಿದ್ದರು. ಆಗ ನಾಡಹಬ್ಬದ ಉತ್ಸವದ ಆಚರಣೆ ಜೋರಾಗಿ ನಡೆಯುತ್ತಿತ್ತು. ಆಗ ಒಮ್ಮೆ ಬೇಂದ್ರೆ ಮತ್ತು ವಿ.ಸೀಯವರ ಜೊತೆಗೆ ನನ್ನನ್ನೂ ಕರೆದಿದ್ದರು. ಆಗ ಒಂದೆರಡು ದಿವಸ ಕಾರಂತರೊಂದಿಗೆ ಇದ್ದ ನೆನಪು ನನಗೆ ಅದ... ಆಮ್ಯಾಲ ಆಗ... ಉತ್ಸವ ಮುಗಿದಮ್ಯಾಲ ಕಾರಂತರು ಬಸ್ಸುಗಳ ಫ್ರೀಪಾಸ್ ದೊರಕಿಸಿಕೊಂಡು ನಮಗ ಸೌತ್‌ಕೆನರಾದಲ್ಲಿ ಏನೇನ ನೋಡೂವವ ಅಲ್ಲೆಲ್ಲಾ ಒಂದು ಪ್ರವಾಸದ ವ್ಯವಸ್ಥಾ ಮಾಡಿದ್ದರು. ಒಂದು ಡಿಸ್ಟ್ರಿಕ್ಟ್ ಟೂರು.

**ಕಾರಂತ :** ಭಟ್ಕಳಕ್ಕೂ ಹೋಗಿದ್ದೀವಿ....

**ಗೋಕಾಕ :** ಹಾಂ.... ಕಾರುತರೇ ಎಲ್ಲಾ ಅಡ್ಡಾಡಿ ತೋರಿಸಿದರು. ಭಾಳ ಇಂಟರೆಸ್ಟಿಂಗ್ ಆಗಿತ್ತು.

**ಕಣವಿ** : ಆಗ ಕಾರಂತರೂ.... ಉತ್ತರ ಕರ್ನಾಟಕದಲ್ಲಿ ಸಾಕಷ್ಟು ಸಂಚಾರ ಮಾಡಿದಿರಿ. ಹಲಸಂಗಿ ಅಲ್ಲೇ ಇಲ್ಲೇ ನಾಡಹಬ್ಬದ ಪ್ರಯುಕ್ತವಾಗಿ ಆಗ ನಿಮ್ಮೊಂದಿಗೆ ಸಾಹಿತಿಗಳು ಬೆರೆಯುತ್ತಿದ್ದರು.

**ಕಾರಂತ** : ಹೌದು.... ಹಲಸಂಗೀಲಿ ಹಾಗೆ ಒಮ್ಮೆ ಸಂಭವಿಸಿತ್ತು. ಚನ್ನಮಲ್ಲ ಕರೆದಿದ್ದಾ. ಆಗ ಬೇಂದ್ರೆಯವರೂ ಬಂದಿದ್ದರು. ಅಲ್ಲಿಯ ಜಾನಪದ ಅದೂ ಇದೂ ನೋಡಿದೆ. ಅಲ್ಲಿ ಮಿತ್ರರೊಂದಿಗೆ ಸಂಭಾಷಣೆ ಮಾಡುವುದಲ್ಲದೇ ನಾವು, ನಾನು ಮತ್ತು ಬೇಂದ್ರೆಯವರು ಎರಡು ಕಹಿ ಬೇವಿನ ಮರಗಳನ್ನು ನೆಟ್ಟು ಬಂದಿದ್ದೆವು...

**ಕಣವಿ** : ಕಹಿ ಬೇವಿನಮರಾ? ಅದರಲ್ಲೇನಾದರೂ ಹಾಲು ಸುರಿಯುತ್ತದೆ ಏನು ಈಗ....?

**ಕಾರಂತ**: ಇಲ್ಲ... ಕಹಿ ಬೇವಿನಮರ ನಾವು ನೆಟ್ಟದ್ದು. ಅದನ್ನು ಅನುಭವಿಸಬೇಕಾದದ್ದು ಅಲ್ಲಿನವರ ವಿಚಾರ. ಅದು ನಮ್ಮದಲ್ಲ. ನಮ್ಮ ಕೆಲಸಾ ನಾವು ಮಾಡಿದ್ದೇವೆ. ಹಾಗೆ ಮಧ್ಯದಲ್ಲಿ ತಮಾಷೆ ಮಾಡೋದಾದರೆ... ಈಗ ನೆನಪಿಗೆ ಬರ್ತದೆ. ಫರ್ಗುಸನ್ ಕಾಲೇಜಿನಲ್ಲಿ ಅವರಿದ್ದಾಗ (ಗೋಕಾಕರು) ಕನ್ನಡದ ಮೂರು ನಾಲ್ಕು ಜನ ಘಟಾನುಘಟಿಗಳನ್ನು ನೋಡಿಕೊಂಡು ಕೈಲಾಸಂ, ನಾನು, ಗೋಕಾಕರು ಮತ್ತು ಇನ್ನಾರೋ..... ಬರುತ್ತಾ ಇರುವಾಗ ಬೇಂದ್ರೆಯವರ ಪದ್ಯ ತಗೊಂಡು ಇದು ಪದ್ಯವೇ ಅಂತ ಕೇಳಿದೆ, ಇವರು ಯಾಕೆ ಅಲ್ಲ ಅಂದರು.. ನಾ ಅಂದೆ ಮನಸ್ಸನ್ನು ಒಂದು ಎತ್ತರಕ್ಕೆ ತಕ್ಕೊಂಡು ಹೋಗೋದಕ್ಕೆ ಒಂದು ಮಿತಿ ಇರ್ತದೆ. ಒಂದು ಲಿಮಿಟ್ ಇರ್ತದೆ. ಹೀಗೆ ಈ ಬೇಂದ್ರೆ ಹಾಗೆ ಇಷ್ಟೊಂದು ಎತ್ತರಕ್ಕೆ ತಗೊಂಡು ಹೋಗೋದಾದರೆ ಆ ಮನಸ್ಸು ಬಚಾವಾಗೋದಿಲ್ಲ... ಅಂತ... ಒಪ್ಪಿಕೊಂಡರು... ಹೀಗೆ ಇಂಥಾ ತಮಾಷೆ ಚರ್ಚೆ ಮಾಡಿದ್ದು.

**ಕಣವಿ**: ಅಲ್ಲ... ನೀವೂ ಕೂಡ ಮೊದಲು ಬರೆದದ್ದು ಕಾವ್ಯವೇ ಅಲ್ಲವೇ? ನಿಮ್ಮ ಮೊದಲ ಕೃತಿ ಕವನಗಳ ಸಂಕಲನ...

**ಕಾರಂತ**: ದೇಶಭಕ್ತಿಯಿಂದ ಪ್ರೇರಿತನಾಗಿ... ಹಳೆ ರಾಗದಲ್ಲಿ... 'ಶರಧಿ ಶಯನ ಪರಮ ಪಾವನ...' ಎಂಬ ಹಾಡಿನ ಧಾಟಿಯಲ್ಲಿ 'ಸುದರ್ಶನವಿದು ರಾಟಿ' ಎಂದು ಗಾಂಧಿಯವರಿಗೆ ಅರ್ಪಿಸಿದ ಗೀತೆಗಳು...

**ಕಣವಿ**: ಆದಾಯಿತಲ್ಲ. ಈಗಲೂ ನೀವು ಪದ್ಯಗಳ ಸಂಕಲನ 'ಸೀಳುಗವನ'... ಅಂತ ಒಂದು ಸಂಕಲನ...

**ಕಾರಂತ**: ಈಗ ದಿಗ್ಭ್ರಮೆಗೊಳಿಸಲಿಕ್ಕೆ ಅಂತ ಮಾಡಿದ್ದು... ಈ ಕವನಗಳನ್ನೆಲ್ಲಾ ಯಾವದೋ ನಿರ್ದಿಷ್ಟ ಉದ್ದೇಶದಿಂದ ಬರೆದದ್ದು. ಆಗ ನಾಟಕ ಕಂಪನಿಗೋಸ್ಕರ ಅವನ್ನ ಬರೆದದ್ದು. ಈಗ ಬರಿತಾ ಇದ್ದದ್ದು.... ಅವುಗಳ ಸ್ವಭಾವವೇ ಬೇರೆ. ಇವುಗಳಲ್ಲಿ ನನ್ನ ಜಿಗುಪ್ಸೆಯನ್ನ ತೋಡಿಕೋತಾ ಇದ್ದೀನಿ. ಯಾಕೆ ಗದ್ಯದಲ್ಲಿ ಅದನ್ನ ಮಾಡಬಹುದಲ್ಲಾ... ಗದ್ಯದಲ್ಲಿ ಇದನ್ನು ಮಾಡಿದರೆ ಅರ್ಥ

ಆಗೋದಿಲ್ಲವಾ... ಅಂತಲ್ಲ. ಗದ್ಯರೂಪದೊಳಗೆ ಸಾಕಷ್ಟು ಬಯ್ದರೂ ನಮ್ಮ ಜನಕ್ಕೆ ತಾಗೋದಿಲ್ಲ. ಪದ್ಯದಲ್ಲಿ ಹೇಳಿದರೆ ಕೆಲವು ದಿವಸಗಳ ಕಾಲ ನೆನಪಿನಲ್ಲಿ ಉಳೀತದೆ... ನಾನು ಈ ಜನಾ ನೆನಪಿನಲ್ಲಿ ಇಟ್ಟುಕೊಳ್ಳಲಿ ಅಂತ ಬರೆದದ್ದು. ಹೀಗೆ ಬಿಟ್ಟು ನಾನು ಬೇರೆ ಉದ್ದೇಶಕ್ಕೆ ಬರೆದದ್ದು ಏನಾದರೂ ಪದ್ಯ ಇದ್ದರೆ... ಹಾಂ... ಅಪೆರ ಗೀತೆಗಳನ್ನು ಬರೆದದ್ದು... ಮತ್ತೆ ಗೀತನಾಟಕಗಳಲ್ಲಿ ಇದನ್ನು ಬಳಸಿದ್ದೇನೆ.

**ಕಣವಿ:** ಗೋಕಾಕ ಅವರಿಗೆ ಪ್ರಶ್ನೆ... ನೀವು ಕಾವ್ಯಕ್ಷೇತ್ರದಲ್ಲಿ ನಿರಂತರ ಪ್ರಯೋಗಶೀಲರಾಗಿ ಅನೇಕ ಕೃತಿಗಳನ್ನು ನೀಡಿದ್ದೀರಿ... ಸಮುದ್ರಗೀತೆಗಳಿಂದ ಹಿಡಿದು ಭಾರತ ಸಿಂಧು ರಶ್ಮಿಯವರೆಗೆ. ಭಾರತ ಸಿಂಧು ರಶ್ಮಿ ಕೂಡ ಇತರ ಮಹಾಕಾವ್ಯಗಳಿಗಿಂತ ಭಿನ್ನವಾಗಿರುವಂತಹದು... ರಾಮಾಯಣ ಮಹಾಭಾರತ ಈ ವಸ್ತುಗಳನ್ನು ಬಿಟ್ಟುಕೊಟ್ಟು ನೀವು ಇತಿಹಾಸಪೂರ್ವದ ಜೀವನವನ್ನು ಕಲ್ಪಿಸಿ ಕೊಡುವಂತಹ ಒಂದು ಪ್ರಯತ್ನವನ್ನು ಮಾಡಿ ಅದರಲ್ಲಿ ವಿಶ್ವಾಮಿತ್ರನನ್ನು ಕೇಂದ್ರ ಪಾತ್ರವನ್ನಾಗಿ ಸ್ವೀಕರಿಸಿ... ದೊಡ್ಡದಾಗಿ ಬರೆದಿದ್ದೀರಿ. ನೀವು ನಿಮ್ಮ ಕಾವ್ಯದಲ್ಲಿ ಭಾರತೀಯ ಪರಂಪರಾ ಪ್ರಜ್ಞೆಯನ್ನು ವಿಕಸನಶೀಲ ದೃಷ್ಟಿಯಿಂದ ಗ್ರಹಿಸಿ ಅದನ್ನು ನವ್ಯವಾಗಿಸುವ ರೀತಿಯ ಪ್ರಯತ್ನ ಮಾಡುತ್ತೀರಿ ಎನ್ನುವ ಒಂದು ಮಾತಿದೆ. ಭಾರತ ಸಿಂಧು ರಶ್ಮಿಯಲ್ಲಿಯೂ ಅಂತಹದೇ ಪ್ರಯತ್ನವಿದೆಯೇ? ಅದು ಹೇಗೆನ್ನುವುದರ ಬಗ್ಗೆ ಸ್ವಲ್ಪ ವಿವರಣೆ ಕೊಡ್ತಿರಾ...

**ಗೋಕಾಕ:** ಪರಂಪರಾ ದೃಷ್ಟಿಯಿಂದ ಒಂದು ಧರ್ಮಾ ಅಂತೀರೋ... ಏನು ಅಂದಿರಿ...?

**ಕಣವಿ:** ಅಲ್ಲ... ಭಾರತೀಯ ಪರಂಪರಾ ಪ್ರಜ್ಞೆ...

**ಗೋಕಾಕ:** ಭಾರತೀಯ ಪರಂಪರಾ ಪ್ರಜ್ಞೆ... ಅಂದರ ಅದರಾಗ ಸಾಕಷ್ಟು ಸ್ಕೂಲ್ಸ್ ಅವ ದಾರಿತಪ್ಪಿ ತಿರಿಗ್ಯಾಡ್ಲಿಕ್ಕೆ... ಮುಂದ ನವ್ಯ ಅಂತ ಏನೋ ಅಂದಿರಿ... ನನಗ ನೀವು ಏನ ಹೇಳತೀರಿ ಅನ್ನವದು ಸ್ಪಷ್ಟ ಆಗವಲ್ಲದು... ಈ ಪರಂಪರಾ ಪ್ರಜ್ಞೆ ಅಂದರ ಹಿಂದೆ ಏನು ಇತಿಹಾಸ ಅದ... ಅದರೊಳಗಿನ ಮುಖ್ಯವಾದ ಸಿಗ್ನಿಫಿಕಂಟ್ ಆದ ಸಿಚುಯೇಶನ್‌ಗಳು ಏನ ಇದ್ದು ಅವು ಪರಂಪರೆಯನ್ನ ಮಾಡತಾವ... ಅವುಗಳ ನೆನಪುಗೋಳು ಅಥವಾ ಅವು ರೂಢೀಯೊಳಗ ಏನರ ಸೇರಿಕೊಂಡಿದ್ದರ ಅವು ಪರಂಪರೆ ಆಗತಾವ. ಇಂಥಾ ಭಾರತೀಯ ಪರಂಪರೆ ಅನ್ನವುದರೊಳಗ ನನಗೆ ಅಂಥಾ ಇಂಟರಸ್ಟೇನೂ ಇಲ್ಲ... ಪರಂಪರೆ ಅನ್ನೂದನ್ನ ನಾನು ಬದಲಾವಣೆಯ ಹಿನ್ನಲೆಯೊಳಗ ನೋಡಿದ್ದು.. ನಮ್ಮ ದೇಶದ ಇತಿಹಾಸದಾಗ ಬ್ಯಾರೇ ಬ್ಯಾರೇ ಕಾಲಾವಧಿಗೋಳು ಏನ ಆಗಿ ಹೋಗ್ಯಾವ, ಆಗೀನ ಕಾಲಾವಧಿಯೊಳಗ ಆಯಾ ಕಾಲದ ಪರಂಪರೆ ಅನ್ನೂದು ಬದಲಾವಣೆಯ ಜೋಡೀ ಪರಂಪರೆ ಅನ್ನೂದೂ ಬದಲಾಕ್ಕೋತ ಹೋಗತಾವ... ಹೊಸಾದು ಸುರೂ ಆಗತದ... ಹೀಂಗೆ ಒಬ್ಬ ಇತಿಹಾಸದ ವಿದ್ಯಾರ್ಥಿಯ ದೃಷ್ಟಿಯಿಂದ ನಾನು ಪರಂಪರೆಯನ್ನ ನೋಡತಾ ಇದ್ದದ್ದು. ಇನ್ನ ನವ್ಯ-ನವೀನವಾದದ್ದು ಬರಬೇಕೂ ಅಂತನ್ನೂದು ಏನದ, ಅದು ಹಿಂಗ ಆಗಬೇಕು ಅಂತನ್ನುವದನ್ನ ಒಪ್ಪಿಕೊಂಡವ ನಾನು... ಅದರ ಪೌರಾಣಿಕ ಪ್ರಜ್ಞೆಯಿಂದ ಹಿಂದಕ ಯಾರು ಏನು ಬರದಿರತಾರ... ಅವರು ಕೆಲವು

ಸನ್ನಿವೇಶಗಳನ್ನು ವ್ಯಕ್ತಿಗಳನ್ನು ಚಿತ್ರಿಸಿರತಾರ. ಆ ವ್ಯಕ್ತಿಗಳು, ಸನ್ನಿವೇಶಗಳು ಸಾಮಾನ್ಯವಾದವುಗಳು ಆಗಿರಬಹುದು ಇಲ್ಲಾ ಅಸಾಮಾನ್ಯವಾದವುಗಳು ಆಗಿರಬಹುದು. ನಾನು ಮುಖ್ಯವಾಗಿ ಅವರ ಚಿತ್ರಣವನ್ನ ಒಪ್ಪಿಕೋತೀನಿ. ಆದರ ನನಗ ಅವರಿಗಿಂತ ಬ್ಯಾರೇ ಏನೋ ಗೋಚರ ಆದರ ಅವರು ಚಿತ್ರಿಸಿದ್ದರೊಳಗ್, ಬ್ಯಾರೇ ಏನರೇ ನನಗ ತೋರಿದರ ನಾನು ಆ ವಿಷಯಕ್ಕ ಅವರಿಗಿಂತ ಭಿನ್ನವಾದ form ಏನರೇ ಕೊಡಬಹುದು. ಆದರ ಹಂಗ ಮಾಡಿದ್ದು ನನಗ ಯಾವುದೂ ನೆನಪಿಲ್ಲ. ಆದರೆ ಇದ್ದದ್ದನ್ನು ತಗೊಂಡು ಅದನ್ನ ಇನ್ನಷ್ಟು ಪುಷ್ಟೀಕರಿಸಿ ಅದನ್ನ ಇನ್ನಷ್ಟು ವಿಸ್ತರಿಸಿ ನಾನು ಬರದೀನಿ. ಈಗ ಉದಾಹರಣೆಗಂದರ-ಋಗ್ವೇದದೊಳಗ ಯಮಯಮಿಯರ ಸಂದರ್ಭ ಏನದ ಅದು ಬರೇ ಒಂದ ಇಪ್ಪತ್ತು ಇಪ್ಪತ್ತೈದು ಸಾಲುಗಳಲ್ಲಿ ಮುಗದು ಹೋಗತದ. ನಾನು ಅದಕ್ಕೆ ಕೊಟ್ಟ space ಅವಕಾಶ ಏನದ ಅದು ಸುಮಾರು ನೂರಾ ಇಪ್ಪತ್ತು ಸಾಲುಗಳಷ್ಟದ. ಮೂಲ ಸಂದರ್ಭ ಒಂದೇ ಇದ್ದರೂ ಅದರ ಹಿನ್ನೆಲೆಗೆ ಇರುವ psychology ಏನಿದೆ? ಅಲ್ಲಿ ಏನಿದೆ ಅಂತ ನನಗ ಖಾತ್ರೀ ಅನಿಸಿದರ ನಾನು ಅದನ್ನ ಅಲ್ಲಿ substitute ಮಾಡಬಹುದು- develop ಮಾಡಬಹುದು... ಈಗ ಯಮ ಯಮಿಯರ ವಿಷಯನ್, ತಗೊಂಡರ, ನಾನು ಓದಿದ ಪ್ರಕಾರ ಹೀಂಗ ಹಿಂದಕ ಒಂದ ಸಮಾಜ ಇತ್ತು ಮತ್ತ ಆ ಸಮಾಜದೊಳಗೆ ಈ ಸಿಸ್ಟರ್ಸ್-ಬ್ರದರ್ಸ್ ಸಂಬಂಧ ಇಂದಿನ ಹಂಗ ಇರಲಿಲ್ಲ. ಆಗ ಬ್ರದರ್ಸ್-ಸಿಸ್ಟರ್ಸ್‌ಗಳ ನಡವ ಮದಿವಿಗಳು ನಡೀತಿದ್ದವು. ಇಂಥಾ situation ಬದಲ ಮಾಡಲಿಕ್ಕೆ ಈ ಯಮ ಕಾರಣ ಆದ. ಅಂವ ಇಂತಾ ಮದಿವಿಗಳನ್ನು abolish ಮಾಡಿ ಬಿಡತಾನ. ಆದರ ಯಮಿ ಇಂಥ ಮದಿವಿಯನ್ನು ಆಚರಿಸಲಿಕ್ಕೆ ಹೇಳತಿದ್ದಳು ಮತ್ತೆ ತನ್ನ ಮದಿವಿ ಮಾಡಿಕೋ ಬೇಕಂತ ಯಮನ್ನ ಕೇಳುತ್ತಾ ಇದ್ದಳು. ಯಮನಿಗೆ ಇದು ಒಪ್ಪಿಗಿ ಇರಲಿಲ್ಲ. ಇದು ಹಿಂದಿನ ಕಾಲದ ಆಚರಣೆ ಅಂತ ಹೇಳತಾನ. ತಾನು ಇಂಥಾ ಆಚರಣೆಯನ್ನ ಯಾಕ ನಿಲ್ಲಿಸಬೇಕಂತೀನಿ ಯಾಕ suspend ಮಾಡಬೇಕಂತೀನಿ ಅಂತ ಯಮ ಕಾರಣಾ ಕೊಡತಾನ. ಈ ಕಾರಣದ ಸಲುವಾಗಿ ತಾನು ಇಂಥಾ ಆಚರಣೆನ್ನ ಒಪ್ಪೂದುಲ್ಲ ಅಂತ ಅವ ಹೇಳತಾನ. ಮುಂದ ಅವ ಯಮಿಯ ಜೊತೆಗೆ ವಾಸಿಸುವದನ್ನ ಬಿಟ್ಟು ಆ ಮನೆ ಬಿಟ್ಟು ಹೋಗತಾನ...

**ಕಣವಿ:** ಕಾರಂತರೇ, ನಿಮ್ಮ ಕಾದಂಬರಿಯ ವಿಷಯಕ್ಕೆ ಸಂಬಂಧಪಟ್ಟಂತೆ, ನಿಮ್ಮ ಕಾದಂಬರಿಯ ಪಾತ್ರಗಳು ಈ ಪರಂಪರೆಯ ಮೌಲ್ಯಗಳ ಬಗ್ಗೆ ಸ್ಪಂದಿಸುವ ರೀತಿ...

**ಕಾರಂತ:** ಇದಕ್ಕೆ ಒಂದು ಚೂರು ಹೇಳ್ತೀನಿ...

**ಕಣವಿ:** ಅಂತಂದರೆ, ನೀವು ಅಲ್ಲಿ ಆದರ್ಶಗಳ ಪರವಾಗಿ ನಿಂತು ಮಾತಾಡುವುದಿಲ್ಲ. ಆದರೂ ನಿಮ್ಮ ಕಾದಂಬರಿಗಳ ಪಾತ್ರಗಳು ಮೆಚ್ಚುವ ಮೌಲ್ಯಗಳು ಏನಿವೆ, ನಂಬಿಕೆಗಳೇನಿವೆ ಅವು ಈ ಪರಂಪರೆಯವೇ ಎಂದೆನಿಸುತ್ತವೆ. ಅವು ಸಹಜವಾಗಿ ಅವರ ನಡೆಯಲ್ಲಿ ಮೂಡಿಬಂದ ಹಾಗೆ ತೋರುತ್ತವೆ. ನನ್ನ ಪ್ರಶ್ನೆ ಅಂದರೆ ಇಂಥ ಪರಂಪರೆಯ ಮೌಲ್ಯಗಳನ್ನು ಬದುಕುವ ಅವರಲ್ಲಿ ನೀವು ಬದುಕಿನ ಅಂಥ ಯಾವ ಸೌಂದರ್ಯವನ್ನು ಕಂಡಿರಿ?... ಅಥವಾ ನಿಮ್ಮ

ದೃಷ್ಟಿಯಲ್ಲಿ ಭಾರತೀಯ ಪರಂಪರೆ ನೀಡಿರುವ ಅಂಥ ಉತ್ಕೃಷ್ಟ ಮೌಲ್ಯಗಳು ಯಾವುವು ಎಂದು ನೀವು ಭಾವಿಸುತ್ತೀರಿ?

**ಕಾರಂತ:** ಈ ಭಾರತೀಯ ಪರಂಪರೆ-ಭಾರತೀಯ ಪರಂಪರೆ ಅಂತನ್ನುವ ಶಬ್ದವೇ ದೊಡ್ಡದು. ಈ ಪರಂಪರೆ ಅನ್ನುವದನ್ನ ಮತಸಂಬಂಧಿಯಾಗಿ ಹುಟ್ಟಿದ್ದು ಅಂತ ನೀವು ಭಾವಿಸುವುದಾದರೆ ಇಲ್ಲಿ ಹುಟ್ಟಿ ಬೆಳೆದ ಫಿಲಾಸಫಿಗಳು ಹದಿನಾರು-ಹದಿನೆಂಟು ಆಗಿದಾವೆ. ಬುದ್ಧ ಧರ್ಮ ಆಗಿದೆ ಮತ್ತೊಂದು ಆಗಿದೆ ಮಗುದೊಂದು ಆಗಿದೆ. ಇವುಗಳಿಂದ ಬಂದದ್ದೇ ನಮ್ಮ ಪರಂಪರೆ ಅಂದರೆ ನಮ್ಮಲ್ಲಿ ಯಾವ ಉತ್ತರ ಇಲ್ಲ. ಹಿಂಗೆ ಏನೂ ಗೊತ್ತಿಲ್ಲದ ವಿಷಯಕ್ಕೆ ದೊಡ್ಡ ಪರಂಪರೆ ಅಂತ ಹೇಳಿಬಿಡ್ತೀವಿ. ಪರಂಪರೆ ಅಂತ ನಾವು ಹೇಳಬೇಕಾದರೆ ಹೆಸರಿಸಬೇಕಾದರೆ, ಅನೂಚಾನವಾಗಿ ನಮಗೆ ಗೊತ್ತಿರುವ ನೆನಪಿನವರೆಗೆ ನಮಗೆ ಹೇಳಲಿಕ್ಕೆ ಗೊತ್ತಿರಬೇಕು. ಇದು ಇಂಥಾ ತಲೆಮಾರಿನಿಂದ ಬಂತು ಇದು ಇಂಥಾ ತಲೆಮಾರಿನಿಂದ ಬಂತು.... ಅಂತ. ಗೋಕಾಕರು ಈಗ ಹೇಳಿದರಲ್ಲ ಯಮ ಯಮಿಯರ ವಿಷಯ. ಈಗ ನಮ್ಮಲ್ಲಿ ಕೂಡ - ದಕ್ಷಿಣ ಕನ್ನಡದಲ್ಲಿ - ಭೂತದ ಪಾಡುಗವನಗಳಿವೆ. ಈ ಪಂಜುರ್ಲಿ ಭೂತ ಘಟ್ಟದಿಂದ ಇಳೀತದೆ. ಪಂಜುರ್ಲಿ ಅಂದರೆ ಹಂದಿ... ಹೆಣ್ಣು ಹಂದಿ ಗಂಡು ಹಂದಿ ಘಟ್ಟದಿಂದ ಇಳೀತಾವೆ. ಇಷ್ಟರವರೆಗೆ ನಾವು ಅಣ್ಣ ತಂಗಿಯರಾಗಿದ್ದೆವು ಇನ್ನು ಮುಂದೆ ನಾವು ಗಂಡ ಹೆಂಡಿರಾಗೋಣ ಅಂತನ್ನುವ ಮಾತು ಬರ್ತದೆ. ಆಯ್ತು ಮುಂದೆ ಆ ಥರ ಇರ್ತಾವೆ. ಹೀಗೆ ಹುಟ್ಟಿದ ವಿಕೃತ ಸಂತಾನ ದುಷ್ಟ ಸಂತಾನವಾಗ್ತದೆ. ಶಿವ ಅದನ್ನ ದಂಡಿಸ್ತಾನೆ-ಪಾರ್ವತಿ ಅದನ್ನು ರಕ್ಷಿಸ್ತಾಳೆ... ಹೀಗೆ ಇನ್ನೇನೋ ಬರ್ತದೆ... ಹೀಗೆ ಅತಿ ಅನಾದಿ ಕಾಲದ ಜಾನಪದ ಪುರಾಣಗಳಲ್ಲಿ ಮೂರು ನಾಲ್ಕು ಭೂತದ ಕಥೆಗಳಲ್ಲಿ ಇಂಥದೆ ಮಾತು ಬರ್ತದೆ. ಅಣ್ಣ ತಂಗಿಯರ ಮದುವೆಯ ಸಮಸ್ಯೆ ಬರ್ತದೆ. ಆವಾಗ ಇದು ಫೆರೋ ಇರುವ ಈಜಿಪ್ತಿನಲ್ಲಿ ಮಾತ್ರ ಅಲ್ಲ ಇಡೀ ಮಾನವ ಕುಲ ಎಲ್ಲೆಲ್ಲಿ ಇದ್ದಿತ್ತೋ ಅಲ್ಲೆಲ್ಲ, ಮಾನವ ಕುಲದೊಂದಿಗೇ ಹುಟ್ಟಿ ಬಂದಿರುವ ಸಮಸ್ಯೆ. ಇತರ ಪ್ರಾಣಿ ಜೀವನದಲ್ಲಿ ಅಣ್ಣ-ತಂಗಿ ಸಂತಾನ ಹುಟ್ಟಿದ ಹಾಗೆ ಮನುಷ್ಯನಲ್ಲಿಯೂ ಇದ್ದದ್ದು ಮುಂದೆ ಯಾವದೋ ಕಾಲಕ್ಕೆ ಇದು ಅಪಾಯ ಅಂತ ಕಂಡದ್ದರಿಂದ ಮೇಲಿಂದ ಮೇಲೆ ಇದು ಒಂದು ಮೂಲ ಪ್ರಶ್ನೆಯ ರೂಪದಲ್ಲಿ ನಮ್ಮಲ್ಲಿ ಕಾಣಿಸಿಕೊಂಡದ್ದು ಕಾಣಿಸ್ತದೆ.

**ಕಣವಿ:** ಅದೇ ಈ ಪರಂಪರೆಗಳ ಬದಲಾವಣೆ... ಮನುಷ್ಯನ ನಾಗರೀಕತೆಯ ಇತಿಹಾಸದಲ್ಲಿ ಯಾತ್ರೆ ಮಾಡುವಂತಹ ರೀತಿ ನಿಮ್ಮ 'ಮೂಕಜ್ಜಿಯ ಕನಸುಗಳು' ಕಾದಂಬರಿಯಲ್ಲಿ ಇದೆ. ಒಬ್ಬ ಮುದುಕಿಯ ಕನಸುಗಳ ಮೂಲಕ ಮನುಷ್ಯ ಸ್ವಭಾವದ ಪಲ್ಲಟಗಳನ್ನು, ಹಿರಿಮೆಗಳನ್ನು ತೋರಿಸುವ ರೀತಿಯನ್ನು ಅಲ್ಲಿ....

**ಕಾರಂತ:** ನನಗೆ ಅದು ಮುಖ್ಯ ಅಲ್ಲ. ಅಲ್ಲಿ ನಾನು ಮುಖ್ಯವಾಗಿ ಎತ್ತಿಕೊಂಡ ಸಮಸ್ಯೆ ಗಂಡು ಹೆಣ್ಣಿನದು. ಅದನ್ನು ಹೇಳುವಾಗ ಈ ಪುರಾಣದ್ದೆಲ್ಲ ಬರ್ತದೆ. ಅವತಾರಗಳದ್ದು ಬರತ್ತೆ, ನಾನು ಇಂತಹ ಸಮಯದಲ್ಲಿ ಇಂತಹ ರಾಕ್ಷಸನನ್ನ ಕೊಲ್ತೇನೆ ಇಂತಹವರ ಹೊಟ್ಟೆಯಲ್ಲಿ

ಹುಟ್ಟೀ ಅಂತ ಅಂ!.... ಹೀಗೆ ಹುಟ್ಟಿದವ ದೊಡ್ಡವನಾಗೋ ತನಕ ಬದುಕಬೇಕಲ್ಲಾ. ಮೊದಲೇ ಯಾಕ ಕೇಳಿಕೊಳ್ಳಬೇಕು ಅಂತ ಲೇವಡಿ ಮಾಡಬಹುದು. ಇರ್ಲಿ. ಗಂಡು ಹೆಣ್ಣಿನ ಸಮಸ್ಯೆ ಮನುಷ್ಯ ಕುಲದೊಂದಿಗೇ ಸುರುವಾದದ್ದು. ಇದು ಅನಾದಿ ಕಾಲದಿಂದ ಇರುವ ಸಮಸ್ಯೆ. ಆ ಮುದುಕಿಯ ಬಾಯಿಂದ ಅದನ್ನ ತರಲಿಕ್ಕೆ ಆಗೋದಿಲ್ಲ. ಆಗ ಅಂತ್ರಪೋಲಾಜಿಯೋ ಇನ್ನೊಂದೋ ಕೊಟ್ಟಿರುವಂತಹ ವೈಜ್ಞಾನಿಕವಾದ ಚಾರಿತ್ರಿಕ ವಿವರಣೆಗಳನ್ನ ಕನಸಿದಂತೆ ಕೊಡಲಿಕ್ಕೆ ಸಾಧ್ಯ. ಅಂಥ ರೀತಿಯೇ ಹೆಚ್ಚು ಸೂಕ್ತ ಅಂತ ಕಂಡದ್ದು. ಚಿತ್ರಗಳಲ್ಲಿ ಬರಬಹುದು, ಇನ್ನೊಂದರಂತೆ ಬರಬಹುದು. ಅವುಗಳನ್ನು ನಾನು ತಕ್ಕೊಳ್ತೇನೆ. ಆಗ, ವೈಜ್ಞಾನಿಕವಾಗಿಯೆ ನಮಗೆ ಅರ್ಥವಾಗದೇ ಉಳಿದಿರುವ ಎಷ್ಟೊಂದು ಈ ಹಳೆಯ ಪ್ರಶ್ನೆಗಳು ಬಂದದ್ದು ಹ್ಯಾಗೆ ಅಂತನ್ನುವ ವಿವರ ಇಲ್ಲಿ ಬರ್ತದೆ ಅಷ್ಟೇ.

**ಕಣವಿ:** ಗೋಕಾಕರಿಗೆ ಒಂದು ಪ್ರಶ್ನೆ : ನಿಮಗೆ ಅಧ್ಯಾತ್ಮದಲ್ಲಿ ವಿಶೇಷವಾದ ಒಲವು ಇದ್ದರೂ ಬಾಳಿನಲ್ಲಿ ಮನುಷ್ಯನ ಪೌರುಷವನ್ನು ತಿರಸ್ಕರಿಸುವಂತಹದು ನಿಮ್ಮಲ್ಲಿ ಎಂದೂ ಕಂಡುಬರುವುದಿಲ್ಲ. ಜೀವನವನ್ನು ನೆಲದಿಂದ ಆಕಾಶದ ಎತ್ತರಕ್ಕೆ ಕಟ್ಟಿಕೊಳ್ಳಬೇಕು ಅನ್ನುವಂತಹ ಒಂದು ಹಂಬಲವನ್ನ ನಿಮ್ಮಲ್ಲಿ ಕಾಣುತ್ತೇವೆ. ಇದರ ಜೊತೆಗೆ, ನೀವು ಸಾಂಖ್ಯ ದರ್ಶನದ ಉಪಾಸಕ ಎನ್ನುವ ಮಾತನ್ನು ಹೇಳಿರುವಿರಿ. 'ತೆಕ್ಕೆ ತುಂಬಿದ ಆಗಸಕ್ಕೆ, ಎಲ್ಲ ದರ್ಶನಗಳಿಗೆ ನೆಲವೆ ಒರೆಗಲ್ಲೆಂಬ ಶ್ರದ್ಧೆ ಬರಲಿ' ಎನ್ನುವ ಮಾತನ್ನು ಹೇಳುತ್ತೀರಿ. ಈ ರೀತಿಯಾಗಿ ಹೇಗೆ ಕಟ್ಟಿಕೊಳ್ಳಬೇಕೆನ್ನುವುದನ್ನು...

**ಗೋಕಾಕ:** ನನ್ನ ಮೂಲ ಇಂಟರೆಸ್ಟ್ ಏನದ.. ಅದು ನಮ್ಮಲ್ಲಿನ ಈ ಮಿತ್ಸ್‌ಗಳಲ್ಲಿ ಅದ. ಈ ಮಿತ್ಸ್‌ಗಳ ನಮಗ ಒದಗಿಸುವ ದೃಷ್ಟಿಕೋನ ಏನದ ಇದು ಇಂಥಾ ಹಂಬಲಕ್ಕ ಪೂರಕ ಆದೀತು. ಈ ಮಿತ್ಸ್‌ಗಳನ್ನು ನಾವು ಒಪ್ಪಲಿ ಅಥವಾ ಒಪ್ಪದೇ ಇರಲಿ ಅವುಗಳ ಬೌದ್ಧಿಕ ವಿಶ್ಲೇಷಣೆ ಆಗಬೇಕು. ಇವುಗಳ ಪೌರಾಣಿಕ ಮೂಲಗಳ ಏನ ಇರ್ತಾವ ಅವು ಬಹಳ ಅರ್ಥಗರ್ಭಿತವಾದದ್ದು ಸೂಕ್ಷ್ಮವಾದದ್ದು ಆಗಿರತಾವ. ಇವುಗಳಿಂದ ಬದುಕನ್ನ ನೋಡುವ ನಮ್ಮ ದೃಷ್ಟಿಕೋನ ಬೆಳೆಯಲಿಕ್ಕೆ ಸಾಧ್ಯವಾಗುತ್ತದೆ. ಇವು ನೀಡುವ ಅನುಭವ ಏನು ಇರ್ತದ ಅದು ನಮಗ ನೆಲದ ಮ್ಯಾಲ ಇದ್ದಕೊಂಡ ಆಕಾಶವನ್ನ ಸಾಧಿಸಲಿಕ್ಕೆ ನೆರವು ನೀಡ್ತದ... ನಮ್ಮನ್ನ ಬೆಳಸ್ತದ... ಈಗ ಉದಾಹರಣೆಗೆ... ಈ ಅಷ್ಟಸೂರಿಯರ ಮಿತ್ ತಗೋರಿ. ಅದಿತಿಯ ಮಕ್ಕಳಿವರು ಎಂಟು ಮಂದಿ. ಈ ಎಂಟೂ ಮಂದಿ ಅದಿತಿಯಿಂದ ತತ್ತಿಗಳ ರೂಪದಲ್ಲಿ ಜನ್ಮ ತಾಳಿದರು. ದೇವತೆಯಾದ ಅದಿತಿಗೆ ತತ್ತಿಗಳ ರೂಪದಲ್ಲಿ ಮಕ್ಕಳು ಹುಟ್ಟಿದ್ದೊಂದು ಮಿತ್ ಏ ಆಗಿದೆ. ಆಮ್ಯಾಲೆ ಅದಿತಿ ಈ ತತ್ತಿಗಳನ್ನು ನಾಶ ಮಾಡಬೇಕೆಂದು ಆ ದಿಕ್ಕಿಗೆ - ಈ ದಿಕ್ಕಿಗೆ ಬೇರೆ ಬೇರೆ ದಿಕ್ಕಿಗೆ ಒಗೆದಳು. ಅದರಲ್ಲಿನ ಎಂಟನೇ ತತ್ತಿ ಏನ ಇತ್ತು ಅದು ಮನು ಕುಲದ ಜೀವವಾಗಿತ್ತಂತೆ. ಅದನ್ನು ಋಷಿಗಳು, ದೇವತೆಗಳು ರಕ್ಷಿಸಿ ಗವಿಯೊಂದರಲ್ಲಿ ಇಟ್ಟು ಬೆಳೆಸಿದರಂತೆ... ಹೀಗೆ.

**ಕಣವಿ:** ಮನುಷ್ಯನ ವಿಕಾಸದ ಕಾಲದಲ್ಲಿ ಅವನಿಗೆ ಒದಗಿದ ಅನುಭವಗಳು, ಅವನು ಎದುರಿಸಿದ ಸಮಸ್ಯೆಗಳು ಹೇಗೆ ಮಿತ್‌ಗಳ ರೂಪ ತಾಳಿವೆ ಎನ್ನುವದು ನಿಮ್ಮಿಬ್ಬರ ಮಾತುಗಳಿಂದ ವ್ಯಕ್ತವಾಗುತ್ತದೆ... ನಿಮ್ಮಲ್ಲಿ (ಗೋಕಾಕರಲ್ಲಿ) ಈ ಮಿತ್‌ಗಳು ಒದಗಿಸುವ ಜೀವನದೃಷ್ಟಿ ಬದುಕಿಗೆ ಮಾರ್ಗದರ್ಶಕವಾಗಿಯೂ ಆಗಬಲ್ಲದೆನ್ನುವ ಮಾತು ನಮಗೆ ಗೋಚರವಾಗುತ್ತದೆ. ಈಗ ಕಾರಂತರಿಗೆ ಒಂದು ಹೊಸ ಪ್ರಶ್ನೆ... ನೀವು ಅನೇಕ ಆಸಕ್ತಿಗಳನ್ನು ಇಟ್ಟುಕೊಂಡವರು. ಸಾಹಿತ್ಯ, ರಂಗಭೂಮಿ, ವಿಜ್ಞಾನ, ಭಾಷೆ, ಶಿಲ್ಪಕಲೆ, ಸಂಸ್ಕೃತಿ ಹೀಗೆ ನಿಮ್ಮ ಆಸಕ್ತಿಯ ವ್ಯಾಪ್ತಿ ವಿಶಾಲವಾದದ್ದು. ಈ ನಾನಾ ಆಸಕ್ತಿಗಳಲ್ಲಿ ನಿಮ್ಮ ಆದ್ಯತೆಯ ಆಸಕ್ತಿ ಯಾವುದು...

**ಕಾರಂತ:** ಚೆನ್ನಾಗಿದೆ... ನೀವು ಕೇಳತಾ ಇರೋದು - ಉಸಿರಾಡೋದಕ್ಕೋ - ಊಟಾ ಮಾಡೋದಕ್ಕೋ - ವ್ಯಾಯಾಮಕ್ಕೋ ಇಲ್ಲವೇ ನಿದ್ದೆ ಮಾಡೋದಕ್ಕೋ ? ಹೀಗೆ ಯಾವುದಕ್ಕೆ ನಿಮ್ಮ ಆದ್ಯತೆ ಅಂತ!... ಬದುಕಿಗೆ ಸಾವಿರ ವಿಷಯಬೇಕು. ಆದ್ಯತೆಯ ಕ್ರಮದಂತೆ ನಾವು ಬದುಕು ಮಾಡುವುದಿಲ್ಲ. ಆಯಾಯ ಸಂದರ್ಭದಲ್ಲಿ ಆಯಾಯ ಕೆಲಸ ಮುಖ್ಯ. ಅದು ಕಳೆದ ಮೇಲೆ ಅದಲ್ಲ. ಆದ್ಯತೆ ಅಮುಖ್ಯ ಅನ್ನುವುದಕ್ಕೆ ಬದುಕಿನಲ್ಲಿ ಅಂಥ ದೊಡ್ಡ ಅರ್ಥ ಇಲ್ಲ.

**ಕಣವಿ:** ಹಾಗಲ್ಲ, ನಿಮ್ಮ ಉಳಿದೆಲ್ಲ ಆಸಕ್ತಿಗಳು ಸಾಹಿತ್ಯ ಸೃಷ್ಟಿಗೆ ಪೂರಕವಾಗಿ ಏನಾದರೂ ಬಂದಿವೆಯೇ ಎಂದು...

**ಕಾರಂತ:** ಅಂ!... ಅದು ಪ್ರತ್ಯೇಕ ಶಕ್ತಿ ಅನ್ನುವಂತದ್ದು ಇದೆ. ಅದನ್ನು ತೆಗೆದು ಬಾಟ್ಲಿಯಲ್ಲಿ ಸಂಗ್ರಹಿಸಿ ಇಡಲಿಕ್ಕೆ ಬರ್‍ತದೆ ಅನ್ನುವಂತಹ ನಂಬಿಕೆ ನನಗಿಲ್ಲ. ನಮ್ಮ ಹಿಂದಿನ ಅನುಭವ, ವರ್ತಮಾನದ ಊಹಾಪೋಹಗಳು ಇವಲ್ಲದೇ ಬರೆಯಬೇಕೆನ್ನುವ ಮನಸ್ಸು ಇವು ನಾನು ಬರೆದ್ದರ ಹಿಂದಿವೆ. ಕಾಲ ಕಳೆದಂತೆ ಅವ ಮನುಷ್ಯ ಅಂತ ಆದರೆ ಅವನು ಬೆಳೀತಾನೆ... ಅವನಲ್ಲಿ ಏನೇನೋ ಸೇರ್‍ತವೆ... ಏನೇನೋ ಬದಲಾವಣೆ ತಿದ್ದುಪಡಿಗಳು ಅಂತ ಆಗ್ತವೆ... ನಾನು ಒಟ್ಟು ಇಂಥವುಗಳ ಪಾಕದಿಂದ ನನ್ನ ಅನುಭವದಿಂದ ಬಂದದ್ದನ್ನು ಹೇಳಬೇಕು ಅಂತ ಅನಿಸಿದಾಗ ಹೇಳಿಕೊಳ್ಳತಾ ಹೋಗತೀನಿ ಅಷ್ಟೇ ! ಇದು ಮುಖ್ಯ ಅದು ಅಮುಖ್ಯ ಅಂತನ್ನುವ ಪ್ರಶ್ನೆ ಇಲ್ಲ. ಉಸಿರಾಟ ಹೇಗೆ ಮುಖ್ಯವೋ ಹಾಗೆ ಜೀವನದ ಇತರ ಚಟುವಟಿಕೆಗಳೂ ಮುಖ್ಯವೇ... ನನಗೆ appeal - ಆಗಿ ನನ್ನ ಕಿವಿ ನೆಟ್ಟಗೇ ಮಾಡುವ ವಿಷಯ ಯಾವುದು ಅಂತ ಹೇಳಬಹುದು.

**ಕಣವಿ:** ನೀವು ವಿಜ್ಞಾನಿಯ ಕುತೂಹಲವನ್ನು ಮತ್ತು ಸೌಂದರ್ಯೋಪಾಸನೆಯನ್ನು ಏಕಕಾಲಕ್ಕೆ ತೋರಿಸುವಲ್ಲಿ...

**ಕಾರಂತ:** ನನಗೆ ವಿಜ್ಞಾನ ತೋರಿದ ಸತ್ಯ ಬೇರೆ ಉಳಿದುವುಗಳಲ್ಲಿ ಕಾಣೆಸಿಲ್ಲ. ಈ ಜಗತ್ತು ಎನ್ನುವದು ಅಜ್ಞೇಯವಾದದ್ದು - ಹೇಳಲಾರದ್ದು. ಇದು ತಿಳಿಯಲಿಕ್ಕೆ ಸಾಧ್ಯವಾಗದಿರುವದು. ಇಂಥ ಇದು ನನಗೆ ತಪಸ್ಸು ಮಾಡಿದಕೂಡಲೇ ತಿಳಿಯಿತು ಅಂತನ್ನುವದು ದೊಡ್ಡ ಮಿಥ್ಯೆ ನನ್ನ ಪಾಲಿಗೆ. ಇನ್ನು ಕವಿಗಳಂಥವರು ಮಾತನಾಡುವಾಗ ಇಂತಿಷ್ಟು ಕಾಲ-ಇಂತಿಷ್ಟು ಇದು ಎಂದು

limit ಮಾಡಿಕೊಂಡು-ಜಗತ್ತನ್ನ ಚಿಕ್ಕದಾಗಿಸಿಕೊಂಡು, ಈ ಜಗತ್ತು ಇವನಿಗೋಸ್ಕರ ಇವನ ಲೀಲೆಗೋಸ್ಕರ ಹುಟ್ಟಿತೆಂದು ಹೇಳುವದೂ ನನಗೆ ಸುಳ್ಳು. ಇವುಗಳನ್ನು ನಾನು ನಂಬೋದಿಲ್ಲ. ನನಗೂ ಈ ಜಗತ್ತಿಗೂ ಇರುವ ಸಂಬಂಧವನ್ನು ವಿಜ್ಞಾನ ನನಗೆ ಹೆಚ್ಚು ಸ್ಪಷ್ಟವಾಗಿ ತೋರಿಸಿಕೊಟ್ಟಿದೆ. ಅದನ್ನ ಬಿಟ್ಟು ನಡೀದೇ ಬಾಯಲ್ಲಿ ಆಡುವ ಮಾತು ನನಗೆ ಈ ಜಗತ್ತನ್ನು ತೋರಿಸಿಕೊಟ್ಟಿಲ್ಲ.

**ಕಣವಿ:** ಇದು ಅವರವರ ಅನುಭವ ಪ್ರಮಾಣ ಅನ್ನುವಂತೆ...

**ಕಾರಂತ:** ಅನುಭವ ಅಲ್ಲ. ಅನುಭವ ಅನ್ನುವುದು ನನಗಾದ ಪೆಟ್ಟನ್ನು ಹೇಳಲಿಕ್ಕೆ ಬರ್ತದೆ. ಅದು ಯಾಕಾಯಿತು ಅಂತ ತಿಳಿಯುವಾಗ ಬುದ್ಧಿಶಕ್ತಿಯನ್ನು ಉಪಯೋಗಿಸಬೇಕಾಗುತ್ತದೆ. ಆಗ ಅಲ್ಲಿ ವಿಜ್ಞಾನದ್ದು ಬೇಕಾದಷ್ಟು ಕೆಲಸವಿದೆ.

**ಕಣವಿ:** ಹಾಗೆ ಹೇಳುವಾಗ ಅನುಭಾವದ ಅಂಶಕೂಡ ಇರಬಹುದಲ್ಲ. ಅನುಭಾವ ಅಥವಾ mystic ಎನ್ನುವಂಥಾದ್ದು...

**ಕಾರಂತ:** ಸ್ವಭಾವ ಅನ್ನುವುದನ್ನು ನೀವು ಮತ್ತು ನಾನು ಯಾವ ರೀತಿಯಾಗಿ ಬಳಸುತ್ತಿದ್ದೇವೆ ಅಂತ?... ನನ್ನ ಭಾವ-ಸ್ವಭಾವ. ಆದರೆ ಈ ಸ್ವಭಾವ ಅನ್ನುವುದನ್ನ instinct ಅನ್ನುವುದಕ್ಕೂ ಬಳಸುತ್ತೇವೆ. ಬರೀ ಸ್ವ-ಭಾವ ಅಂತಾದರೆ ನಿಮ್ಮ ಸ್ವಭಾವ ನನಗೆ ಅರ್ಥವಾಗದೇ ಹೋಗಬಹುದು. ನಾನು ಅನುಭಾವ ಅಂತ ಹೇಳಿಬಿಡಬಹುದು. ಅದು ಬೇರೆ...

**ಕಣವಿ:** ಪರಿಸರ ನೈರ್ಮಲ್ಯ ಕಾಪಾಡಲಿಕ್ಕೆ-ಮುಂದಿನ ಪೀಳಿಗೆಗೆ ಪರಿಸರ ಸಂಪತ್ತನ್ನ ಉಳಿಸಲಿಕ್ಕೆ ಅಂತ ನೀವು ನ್ಯಾಯಾಲಯದವರೆಗೆ ಹೋಗಿದ್ರಿ. ಅದರ ಪರಿಣಾಮ ಏನಾಯಿತು? ಒಳ್ಳೆಯದಾಯಿತೋ?

**ಕಾರಂತ:** ನಾನೇ ಲೋಕನಾಯಕ ಅಂತಾಗಿದ್ದರೆ ಏನಾಯಿತು ಅಂತ ಕೇಳಬಹುದಾಗಿತ್ತು. ಸಾವಿರ ಸಾವಿರಗಟ್ಟಲೆ ಜನ ಇರುವಲ್ಲಿ ಸಾವಿರಾರು ಆಸಕ್ತಿಗಳಿರುವ ಕಾಲದಲ್ಲಿ ಯಾರಿಗೆ ಲಾಭ ಅಂತ ಆಗ್ತದೆಯೋ ಅವರು ಒಳ್ಳೆಯದಾಯಿತು ಇದು ಇರಲಿ ಅಂತಾರೆ. ಯಾರಿಗೆ ಹಾನಿ ಆಗ್ತದೆಯೋ ಅವರು ಇದು ಕೆಡಕು-ಬೇಡ ಅಂತಾರೆ... ಉರುವಲನ್ನ ಕಡಿದು, ಕಾಡನ್ನ ಕಡಿದು ಬೇಸಾಯ ಮಾಡಬಹುದು. ಅದು ಅನಿವಾರ್ಯ ಕೂಡಾ. ಯಾಕೆಂದರೆ ಮನುಷ್ಯ ಬದುಕಲಿಕ್ಕೆ ಆಹಾರ ಬೇಕು. ಆದರೆ ಎಷ್ಟು ಗಿಡ ಕಡಿದರೆ ಏನು ಆಗ್ತದೆ. ಈ ಬೆಳೆಗೆ ಏನಾಗ್ತದೆ-ಹವಾಮಾನಕ್ಕೆ ಏನಾಗ್ತದೆ-ಮಣ್ಣಿಗೆ ಏನಾಗ್ತದೆ ಅಂತನ್ನುವ ಪ್ರಶ್ನೆಗಳು ಬರ್ತಾವೆ. ಈ ನಿಸರ್ಗ ಸಂಪತ್ತು ಅನ್ನುವಂಥಾದ್ದು ಏನಿದೆ ಯಾವುದನ್ನ ನಾವು ಕೆಡಿಸಿ ಪುನಃ ನಾವು ಬೆಳೆಯಲಾರೆವೋ ಅಂಥಾ ನಮ್ಮ ಸಂಪತ್ತು... ಅದನ್ನ ನಾವು ಜಾಗ್ರತೆಯಿಂದ ಕಾಪಾಡಬೇಕು ಅಂತನ್ನುವ ಪರಿಜ್ಞಾನ ಬುದ್ಧಿವಂತನೆನ್ನಿಸಿಕೊಳ್ಳುವ ಮನುಷ್ಯನಿಗೆ ಇರಬೇಕು. ಈ ಭೂಮಿ ಅನ್ನುವದು ಹುಟ್ಟಿ ಕೆಲ ಮಿಲಿಯ ಕೋಟಿಗಳಷ್ಟು ವರ್ಷ ಆಗಿದೆ. ಮನುಷ್ಯ ಆಮೇಲೆ ಬಂದದ್ದು. ಆಮೇಲೆ ಬಂದ ಮನುಷ್ಯ ಈ ಭೂಮಿ ಬರೀ ಮನುಷ್ಯನದಲ್ಲ ಅದು ಎಲ್ಲರಿಗೂ ಸೇರಿದ್ದು.

ಎಲ್ಲ ಪ್ರಾಣಿ ಸಸ್ಯಗಳಿಗೂ ಸೇರಿದ್ದು... ಅದು ಮುಂದಿನ ತಲೆಮಾರುಗಳ ನಮ್ಮ ಸಂತತಿಯವರಿಗೂ ಸೇರಿದ್ದು ಅಂತನ್ನುವ ವಿವೇಕ ನಮ್ಮ ನಡವಳಿಕೆಯಲ್ಲಿ ಇರಬೇಕಾಗ್ತದೆ.

**ಕಣವಿ:** ಇಂತಹ ಸಂದರ್ಭದಲ್ಲಿ ನಮ್ಮ ಯುವಕರಿಗೆ ಹೊಸ ಪೀಳಿಗೆಯವರಿಗೆ ನಿಮ್ಮ ಮಾರ್ಗದರ್ಶನ-ಸಂದೇಶ....

**ಕಾರಂತ:** ಸಂದೇಶಾನ್ನ.... ಈ ದೇಶದಲ್ಲಿ ಎಷ್ಟು ಸಮಸ್ಯೆಗಳಿದಾವೆ. ಎಷ್ಟೊಂದು ಜನಾ ಇದಾರೆ. ಅವರಲ್ಲಿ ನಿಮ್ಮ ಮಾತು ಕೇಳುವವರು ಎಷ್ಟು ಜನ ಇದ್ದಾರೇ ಅಂತ ನಾನು ಉಪದೇಶ ಮಾಡಬೇಕು?... ಬಹಳ ಎಲ್ಲಾ ಉಪದೇಶ ನನಗೆ ಗೊತ್ತು...

**ಕಣವಿ:** ಹಾಗಲ್ಲ...

**ಕಾರಂತ:** ಪ್ರಯೋಗ ಮಾಡಿ ಹೇಳಬೇಕು. ಆದರೂ ಕೂಡ...

**ಕಣವಿ:** ಅಲ್ಲ... ಕೇಳುವವರು ಬೆಲೆ ಕೊಡುವವರು ಇದ್ದೇ ಇರುತ್ತಾರೆ...

**ಕಾರಂತ:** ಕೇಳುವವರು ತಮಾಷೆಗಂತ ಕೇಳಿಕೊಂಡು ಇದ್ದಾರೆ. ಇಂಥದು ಎಷ್ಟೆಷ್ಟೆಲ್ಲ ಬರ್ತದೆ. ಮರುಕ್ಷಣ ಇನ್ನೊಂದು ಬರ್ತದೆ. ಜನ ಇದನ್ನ ಬಿಟ್ಟು ಅದನ್ನು ಕೇಳ್ತಾರೆ. ಯಾವದನ್ನ ಹೇಳಿದರೂ ಕೇಳತಾರೆ. ಆಮೇಲೆ ಅದರಂತೆ ನಡೀತಕ್ಕದ್ದು...? ಅದರ ತಲೆ-ಬುಡಾ ತಿಳಿಕೊಳ್ಳೋಕೆ ಹೋಗದೇ ಅಲ್ಲೇ ಬಿಟ್ಟುಬಿಡುತ್ತಾರೆ.

**ಕಣವಿ:** ನೀವು ಈ ದೇಶದ ಭವಿಷ್ಯದ ಬಗ್ಗೆ ಏನು ಹೇಳುತ್ತೀರಿ... ? ಈಗಿನ ನಮ್ಮ ಯುವಕರ ಬಗ್ಗೆ...

**ಕಾರಂತ:** ನೀವು ಸಾಹಿತಿಗಳ ಸಂಗತೀನೇ ಹೀಗೆ... ಕವಿಗಳು ಹೇಳಿ ಬಿಡಬಹುದು. ನಮಗೆ ಅದು ಬಗಿಹರಿಯೋದಿಲ್ಲ (ನಗು)... ನಮ್ಮ ತಲೆಗೆ ಮೀರಿದ್ದು. ಹಾಂ ದೇಶದ ಬಗ್ಗೆ ಅಲ್ಲ ದ್ವೇಷದ ಬಗ್ಗೆ ಹೇಳಬಹುದು. ಮನೆಗಳನ್ನ ಸುಡುವದು, ಬಸ್ಸುಗಳನ್ನ ಸುಡುವದು ಇಂಥದ್ದರ ಬಗ್ಗೆ ಸಾಕಷ್ಟು ಹೇಳಬಹುದು.

**ಕಣವಿ:** (ನಗು) ಗೋಕಾಕರೇ ನೀವು ಏನು ಹೇಳುತ್ತೀರಿ?

**ಗೋಕಾಕ:** ಯಾವುದರ ಬಗ್ಗೆ ?

**ಕಣವಿ:** ಅದೇ ದೇಶದ ಭವಿಷ್ಯ ನಮ್ಮ ಈಗಿನ ಯುವಕರು...

**ಗೋಕಾಕ:** ಮೊದಲು ಕಾರಂತರ ಮಾತಿನ ಬಗ್ಗೆ ಹೇಳ್ತೀನಿ ಯಾವದೇ ಒಂದು ಮಾತು ಹೇಳಿದರೂ ಅದನ್ನ ಅಲ್ಲಗಳೀಲಿಕ್ಕೆ ಬರ್ತದ ಮತ್ತು ಒಪ್ಪಲಿಕ್ಕೂ ಸಾಧ್ಯ ಆಗತದ. ಈ ಥರದ ಪ್ರತಿಕ್ರಿಯಾ ಏನ ಅದ ಅವು ನಮ್ಮ ನಮ್ಮ ಮನಸಿನ ರೀತಿಯ ಮ್ಯಾಲ ಅವಲಂಬಿಸಿರತಾವ. ಒಂದು ವಿಷಯದ ಮ್ಯಾಲ ನಾವು ನಾಕೆಂಟು ಮಂದಿ ಮಾತಾಡಿದಾಗ ನಾಕೆಂಟು ದಿಕ್ಕಿನಲ್ಲಿ ಈ ಮಾತು ಹರಡತಾವ. ಹೀಗಾಗಿ ವಿಷಯ ಒಂದೇ ಆಗಿದ್ದರೂ ಅದರಲ್ಲಿ ಆರೆಂಟು ಸಸಿ

ಹುಟ್ಟುತಾವ. ಅವೆಲ್ಲಾ ಬೇರೆ ಬೇರೆ ದಿಕ್ಕಿನಲ್ಲಿ ಮುಖ ಮಾಡಿರತಾವ. ಒಂದು ಹಿಂಗೆ ಬೆಳೆದರೆ ಮತ್ತೊಂದು ಹಿಂಗೆ ಬೆಳೀತದ. ಇದು ಒಟ್ಟು ಮಾನವ ಸಂಬಂಧದ ರೀತಿಯೇ ಆಗಿದೆ. ಕೆಲವು ಒಂದುಗೂಡು ಎಂದು ಹೇಳಬಹುದು. ಇನ್ನೊಬ್ಬರು-ಇಲ್ಲ, ಇದು ಸಾಧ್ಯವಾಗಲಾರದು ಅಂತ ಹೇಳಬಹುದು. ನೀವು ಈಗ ಸಂದೇಶ ಕೊಡಿರಿ ಎಂದು ಹೇಳಿದಿರಲ್ಲ...

**ಕಣವಿ:** ಒಂದು ಆಶಾವಾದಿತ್ವದ ಹಿನ್ನೆಲೆ ಅಷ್ಟೇ...

**ಗೋಕಾಕ:** ಹಾಂ... ಹಿಂಗ ಕೇಳಿದಾಗ ಒಬ್ಬರು ಆಗಲೀ ಅಂತ ತಮ್ಮ ಅಭಿಪ್ರಾಯ ಹೇಳಬಹುದು. ಇನ್ನೊಬ್ಬರು ಏನ ಇಂಥ ಸಂದೇಶಗಳು ಬಂದ್ರ ಬರತಾವ ಹೋಗೇ ಹೋಗತಾವ... ಈ ಸಂದೇಶಗಳಿಂದ ಏನು ಪ್ರಯೋಜನ ಅಂತ ಅಭಿಪ್ರಾಯ ಪಡಬಹುದು. ಈ ಬಗ್ಗೆ ನನಗೆ ಏನು ಹೇಳೋದಿದೆ ಅಂದರ್ರ... ಇದು... ನಾವು ಮಾತಾಡುವ 'ಛಂದ'ದ ಮ್ಯಾಲ ಅವಲಂಬಿಸಿರ್ತದ... ಅಪ್ಪಾ... ನಾವು ಮಾತನಾಡುವಾಗ constructive ಆಗಿ ಏನರೇ ಮಾತಾಡಬೇಕು - ಇಂತಾದ್ದು ಏನಾದರೂ ಬೆಳೆಸಿಕೊಂಡು ಹೋಗಲಿಕ್ಕೆ ಪ್ರಯತ್ನ ಮಾಡಬೇಕು. ಇಂಥಾ ಪ್ರಯತ್ನಗಳಿಗೆ ಪ್ರಯೋಜನ ಸಿಗಲಿಕ್ಕಿಲ್ಲ- ಇವು ಅಯಶಸ್ವಿ ಆಗಬಹುದು. ಇಲ್ಲವೆಂತಲ್ಲ. ಹಿಂಗೂ ಆಗಬಹುದು. ಆದರೆ ಮನುಷ್ಯ ಪ್ರಯತ್ನ ಅನ್ನುವಂಥಾದ್ದನ್ನ ನಾವು ಮಾಡಬೇಕಲ್ಲ. ಪ್ರಯತ್ನವನ್ನೇ ಮಾಡದಿದ್ದರೆ ಅವ ಕುಳಿತಲ್ಲಿಯೇ ಕುಳಿತಿರತಾನ. ಈ ದಿಕ್ಕಿನಿಂದಲೂ ನಾವು ವಿಚಾರ ಮಾಡಬೇಕಾಗ್ತದ.. example, ಕಾರಂತರು ಒಂದು ಮಾತು ಹೇಳಿದರು- ಏನಂತುಂದರೆ ಮನುಷ್ಯ ಅಂತನ್ನುವವನು ಇಲ್ಲೀವರೆಗೆ ಬೆಳೀಬಹುದು, ಇಲ್ಲೀವರೆಗೆ ಬೆಳೀಬಹುದು. ಆದರೆ ಆಕಾಶದವರೆಗೆ ಬೆಳೀತೀನೆಂದರೆ ಅದು ಸಾಧ್ಯ ಇಲ್ಲ ಅವ ಬಚಾವಾಗೋದಿಲ್ಲ ಅಂತುಂದರು. ಆದರೆ ಇನ್ನೊಂದು ದೃಷ್ಟಿಯಿಂದಲನೂ ಈ ಪ್ರಶ್ನೆಯನ್ನು ನೋಡಲಿಕ್ಕೆ ಸಾಧ್ಯವಿದೆ. ಈಗ ನಾವು ಅನ್ನವನ್ನು ಸೇವಿಸಿ ನಾವು ಬದುಕ್ತೀವಿ. ನಾವು ಇಂಥಾ ಬದುಕಿನ ಲೆವೆಲ್ಲಿಗೆ ಉಳಿದವರು. ಇನ್ನು ಕೆಲವರು ಇದನ್ನ ಮೀರಿ ಪ್ರಾಣದ ಲೆವಲ್ಲಿಗೆ ಹೋಗುತಾರೆ. ಬರೀ ಉಸಿರಾಡಿಸಿ ಉಳಿಯುವವರು ಇವರು. ಇದಕ್ಕೂ ಮೀರಿದ ಮಟ್ಟವೆಂದರೆ ಆಕಾಶದ ವ್ಯಾಪ್ತಿ. ಇನ್ನೊಬ್ಬ ಇರಬಹುದು. ಅವನಿಗೆ ಈ ಮೂರನ್ನೂ ಮೀರಿದ ನಾಲ್ಕನೆಯ ಸ್ಥಿತಿಯ ಅರಿವು ಇರಬಹುದು. ಇದು ನಮಗ ಸಾಧ್ಯ ಇಲ್ಲ ಅಂತ ಇದು ಇಲ್ಲವೇ ಇಲ್ಲ ಎಂದು ಹೇಳಲಿಕ್ಕೆ ಆಗದು. ಇಂಥ ಸಾಧ್ಯತೆ ನಮಗೆ ಇವತ್ತಿಗೆ ದಕ್ಕದಿರಬಹುದು. ಆದರೆ ಇದು ನಾಳೆಗಾದರೂ ಸಾಧ್ಯವಾದೀತು ಎನ್ನುವದು ನಮ್ಮ ಚಿಂತನೆಯ 'ಛಂದ'ವಾಗಬೇಕು. ಅಂಥ 'ಛಂದ' constructive ಆದದ್ದು ಅಂತ ನನ್ನ ಭಾವನೆ.

**ಕಣವಿ:** ನೀವು ಇಬ್ಬರು ಹಿರಿಯರಿಂದಲೂ ನಿಮ್ಮ ಅನುಭವಗಳಿಂದ ಪಾಕಗೊಂಡ ವಿಚಾರಗಳನ್ನ ನಿಮ್ಮ ಮಾತುಗಳನ್ನ ಕೇಳುವುದರ ಮೂಲಕ ನಾವು ತಿಳಿದುಕೊಂಡಿದ್ದೇವೆ. ಇದಕ್ಕಾಗಿ ನಾನು ನಿಮಗೆ ಅನಂತ ಕೃತಜ್ಞತೆಗಳನ್ನ ಸಲ್ಲಿಸುತ್ತೇನೆ. ದಯವಿಟ್ಟು ಇಷ್ಟು ಹೊತ್ತು ನಾನು ನಿಮಗೆ ಕೊಟ್ಟಿರುವ ತೊಂದರೆಗಾಗಿ ಕ್ಷಮಿಸಿರಿ.

**ಕಾರಂತ:** ತೊಂದರೆ ಅಂತ ಅಲ್ಲ... ಈ ಸಂದರ್ಶನದ ಬಗ್ಗೆ ಸಾಕಷ್ಟು ಗೊಂದಲ ಆಯಿತು.

**ಕಣವಿ:** ಹಾಂ... ಗೊಂದಲ ಆತು. ಆದರ ಬದುಕಂದರೆ ಹಿಂಗ್ಸ ಗೊಂದಲ ಇದ್ದೇ ಇರುವದಲ್ಲ. ಇಂತದರಲ್ಲಿಯೇ ಎಲ್ಲ ನಡೆಯುವದು. ಇದನ್ನ ಸಹಿಸಿಕೊಂಡು ನನ್ನ ಪ್ರಶ್ನೆಗಳಿಗೆ ಉತ್ತರಿಸಿದ ನಿಮಗೆ ಧನ್ಯವಾದಗಳು.

('ಸಂವಾದ' ಪತ್ರಿಕೆ ೧೯೯೨)

ಸಾಹಿತ್ಯ ಸಮಾಹಿತ : ೨೦೦೭

೮

## ಪ್ರೊ. ಮಾಳವಾಡರೊಡನೆ ಸಾಹಿತ್ಯ ಸಂವಾದ

(ಅನುಕೂಲತೆಗಿಂತ ಆತ್ಮಗೌರವ ಹೆಚ್ಚಿನದು. ಲಾಭಕ್ಕಿಂತ ತತ್ವನಿಷ್ಠೆ ಮಿಗಿಲಾದದ್ದು ಎನ್ನುವ ವಿಶಿಷ್ಟ ತತ್ವಗಳಿಗೆ ತಮ್ಮನ್ನು ಅರ್ಪಿಸಿಕೊಂಡು ಶಿಕ್ಷಣ ಹಾಗೂ ಸಾಹಿತ್ಯ ಕ್ಷೇತ್ರದಲ್ಲಿ ನಿರಂತರ ಸೇವೆ ಸಲ್ಲಿಸಿದ ಕನ್ನಡದ ಕಟ್ಟಾಳು ಪ್ರೊ. ಸ.ಸ.ಮಾಳವಾಡ ಅವರೊಡನೆ ಧಾರವಾಡ ಆಕಾಶವಾಣಿಗಾಗಿ ನಡೆಸಿದ ಸಾಹಿತ್ಯ ಸಂವಾದ.)

**ಕಣವಿ:** ಪ್ರೊ. ಮಾಳವಾಡರಿಗೆ ನಮಸ್ಕಾರ. ಇಂದು ಸಂಜೆ ನಿಮ್ಮ ಜೊತೆಗೆ ಕನ್ನಡ ಸಾಹಿತ್ಯ, ಸಂಸ್ಕೃತಿ, ಕನ್ನಡದ ಕಾವ್ಯಗಳು ಇತ್ಯಾದಿಗಳ ಬಗ್ಗೆ ಒಂದಿಷ್ಟು ಮಾತಾಡೋಣ ಎನಿಸಿತು. ನಿಮ್ಮಂಥ ಅನುಭವಿಕರ ಜೊತೆಗಿನ ಸಂಭಾಷಣೆಯಿಂದ ಎಷ್ಟೋ ವಿಷಯಗಳ ಬಗ್ಗೆ ಇಂದಿನ ಜನಾಂಗಕ್ಕೆ ತಿಳುವಳಿಕೆ, ಮಾರ್ಗದರ್ಶನ ದೊರೆಯುತ್ತದೆಂದು ನನ್ನ ಭಾವನೆ.

ಅನೇಕ ವರ್ಷ ಕನ್ನಡ ಪ್ರಾಧ್ಯಾಪಕರಾಗಿ, ಕರ್ನಾಟಕ ಕಾಲೇಜಿನ ಪ್ರಾಚಾರ್ಯರಾಗಿ ಮುಂಬಯಿ, ಬೆಂಗಳೂರು, ಕರ್ನಾಟಕ ವಿಶ್ವವಿದ್ಯಾಲಯಗಳ ಅಭ್ಯಾಸ ಮಂಡಳ ಹಾಗೂ ವಿವಿಧ ಸಮಿತಿಗಳ ಸದಸ್ಯರಾಗಿ ಶೈಕ್ಷಣಿಕ ಕ್ಷೇತ್ರಕ್ಕೆ ಎಷ್ಟೋ ಸೇವೆ ನಿಮ್ಮಿಂದ ಸಂದಿದೆ. ಸಾಹಿತ್ಯ ಕ್ಷೇತ್ರದಲ್ಲಂತೂ ವಿದ್ಯಾರ್ಥಿದೆಸೆಯಿಂದಲೇ ಆಸ್ಥೆವಹಿಸಿ, ಮುಂದೆ ಹಲವಾರು ಮಹತ್ವದ ಕೃತಿಗಳನ್ನು ಕನ್ನಡಕ್ಕೆ ನೀಡಿದ್ದೀರಿ. ವಿಮರ್ಶೆ, ವಿಚಾರಸಾಹಿತ್ಯ, ಪ್ರವಾಸಕಥನ, ಚರಿತ್ರೆ, ಅಧ್ಯಾತ್ಮ, ಗ್ರಂಥಸಂಪಾದನೆ ಹೀಗೆ ಅದರ ವ್ಯಾಪ್ತಿಯೂ ದೊಡ್ಡದಿದೆ. ಇದಲ್ಲದೆ ಅನೇಕ ಸಾಮಾಜಿಕ ಹಾಗೂ ಸಾಂಸ್ಕೃತಿಕ ಸಂಘ ಸಂಸ್ಥೆಗಳಲ್ಲಿ ನಾಡು-ನುಡಿಯ ಏಳ್ಗೆಯ ದೃಷ್ಟಿಯಿಂದ ದುಡಿದ ಅನುಭವ ನಿಮಗಿದೆ. ಈಚಿನ ಕೆಲವರ್ಷಗಳಿಂದ ಅವುಗಳಿಂದ ದೂರಿದ್ದರೂ ನಿಮ್ಮ ವಿಸ್ತಾರವಾದ ಓದು, ಬರವಣಿಗೆ ಸಾಗಿಯೇ ಇದೆ. ಹಾಗೆ ನೋಡಿದರೆ ವ್ಯಾಸಂಗ ನಿಮ್ಮ ವ್ಯಕ್ತಿತ್ವದ ಅವಿಭಾಜ್ಯ ಅಂಗವಾಗಿದೆ.

**ಮಾಳವಾಡ:** ನೋಡಿರಿ ಕಣವಿ, ಈ ಸಂವಾದದಿಂದ ನನ್ನ ಪಾಲಿನ ಲಾಭ ಹೆಚ್ಚು ಅಂತ ನಾ ತಿಳಿಕೊಂಡೀನಿ. ಈ ಬಗೆಯ ಅವಕಾಶದಿಂದ ನಾನು ಬಹಳ ದೂರ ಉಳಿಯಲಿಕ್ಕೆ ಹತ್ತೀನಿ, ನನ್ನ ಬಾಳಿಗೆ, ಸಂತೋಷಕ್ಕೆ ಸಾಹಿತ್ಯ ಪ್ರಮುಖ ಸಾಧನೆ ಆದದ್ದು ನಿಜ. ಆದರೆ ಈಗ ಸಾಹಿತ್ಯ ನನ್ನ ಪ್ರಥಮ ಆಯ್ಕೆಯಾಗಿ ಉಳಿದಿಲ್ಲ. ಮನುಷ್ಯನನ್ನು ಒಳ್ಳೆಯವನನ್ನಾಗಿ ಮಾಡಲಿಕ್ಕೆ ಸಾಹಿತ್ಯ ಪರಿಣಾಮಕಾರಿ ಆಗಲಿಕ್ಕಿಲ್ಲ ಅಂತನೂ ನನಗೆ ಅನಿಸಲಿಕ್ಕೆ ಹತ್ತೇದ. "ನೀನಿಂದು ಬದುಕಿದ್ದರೊಂದು ವೇಳೆ, ಗರತಿಯಾಗಬಹುದಿತ್ತೇನೋ ರಾಜಕಾರಣದ ಸೂಳೆ" ಅಂತ ನೀವು

'ಗಾಂಧಿ' ಕವಿತೆಯೊಳಗೇನೊ ಬರೆದಿರಿ. ಆದರೆ ಈ ಬಗ್ಗೆ ಗಾಂಧೀಜಿಯವರೇ ನಿರಾಶೆ ತಾಳಿದ್ದರು. 'ದಿಲ್ಲಿಡೈರಿ' ಪುಸ್ತಕದೊಳಗೆ ಅದು ಸಾಬೀತಾಗೇದ. ನಿಮ್ಮ ಸುಸ್ವಭಾವದ ಪ್ರಕಾರ ನನ್ನ ಬಗ್ಗೆ ಒಳ್ಳೇ ಮಾತುಗಳನ್ನು ಪ್ರಸ್ತಾಪಿಸಿದಿರಿ. ಅದು ಹೆಚ್ಚಾಗಿ ನನ್ನ ಗತಜೀವನಕ್ಕೆ ಸಂಬಂಧಿಸಿದ್ದೆಂದು ನನ್ನ ಭಾವನೆ. ೧೯೫೦ರ ನಂತರ ಸಾರ್ವಜನಿಕ ಚಟುವಟಿಕೆಯಲ್ಲಿ ಭಾಗವಹಿಸುವುದನ್ನು ಬಹುಮಟ್ಟಿಗೆ ನಿಲ್ಲಿಸಿ ಬಿಟ್ಟೇನಿ. ಓದು ಬರಹ ನಿವೃತ್ತ ಜೀವನದಲ್ಲಿ ನನ್ನ ಕರ್ತವ್ಯ ಹವ್ಯಾಸ ಎರಡೂ ಆದದ್ದು ನಿಜ. ಆದರೆ ಪ್ರಸ್ತುತ 'ಸಾಹಿತ್ಯ' ವಲಯದಲ್ಲಿ, ಅಂದರೆ ಸಾರ್ವಜನಿಕ ಸಾಹಿತ್ಯವಲಯದ ಸಂಪರ್ಕ ನನಗೆ ಬಹಳ ಕಡಿಮೆ. ನೀವಾದರೂ ಇಂದಿನ ಎಲ್ಲ ಸಾಹಿತ್ಯ ಸಂಸ್ಥೆಗಳೊಡನೆ ಲೇಖಕರೊಂದಿಗೆ ಸಂಬಂಧವಿಟ್ಟುಕೊಂಡವರು. ಅಲ್ಲದೆ ಸಾಹಿತ್ಯದಲ್ಲಿ ಮಹತ್ವದ ಸ್ಥಾನವೂ ನಿಮಗಿದೆ. ನೀವು ನನ್ನ ವಿದ್ಯಾರ್ಥಿಯಾಗಿದ್ದಿರಿ. ಆದ್ದರಿಂದ ಇದು ನನಗೆ ಬಹಳ ಹೆಮ್ಮೆಯ ವಿಷಯ, ನಿಮ್ಮ ಜೊತೆಗಿನ ಸಂವಾದದಿಂದ ನನಗೆ ಸಂತೋಷ ಹಾಗೂ ಪ್ರಯೋಜನ ಆಗ್ತದ ಅಂತ ನಾ ತಿಳಕೊಂಡೀನಿ.

**ಕಣವಿ:** ಅಂದರೆ ನನ್ನ ಅನಿಸಿಕೆಗಳನ್ನೂ ಸಂದರ್ಭಾನುಸಾರ ನಾನು ಹೇಳಬೇಕು, ನಮ್ಮ ಮಾತುಕತೆ ಪರಸ್ಪರ ಪೂರಕವಾಗಿರಬೇಕು ಅಂತ ನಿಮ್ಮ ಬಯಕೆ. ಬಹಳ ಸಂತೋಷ. ಒಂದು ಮಾತು ಹೇಳಿದಿರಿ. ಸಾಹಿತ್ಯದಿಂದ ಸಮಾಜ ಸುಧಾರಣೆ, ಅಥವಾ ಮನುಷ್ಯ ಒಳ್ಳೆಯವನಾಗಲಿಕ್ಕೆ ಹೆಚ್ಚಿನ ಸಹಾಯ ಆಗೋದಿಲ್ಲ ಅಂತ... ನನಗೆ ಅಷ್ಟು ಒಪ್ಪಿಗೆ ಆಗಲಿಲ್ಲ.

ಸಾಹಿತ್ಯದ ಪ್ರಭಾವದಿಂದ ತಮ್ಮ ಜೀವನವನ್ನು ರೂಪಿಸಿಕೊಂಡವರು ಇಲ್ಲದೆ ಇಲ್ಲ. ಆದರೆ ಅದು ಹೆಚ್ಚಾಗಿ ಅಂತರಂಗದ ಸಂಸ್ಕಾರಕ್ಕೆ ಸಂಬಂಧಪಟ್ಟ ವಿಷಯವಾದ್ದರಿಂದ ಅದರ ಪರಿಣಾಮ ಉಳಿದ ವಿಷಯದ ಹಾಗೆ ಒಡೆದು ಕಾಣುವಂಥದಲ್ಲವೇನೊ ಇರಲಿ. ನಾನು ಕರ್ನಾಟಕ ಕಾಲೇಜಿನ ವಿದ್ಯಾರ್ಥಿಯಾಗಿದ್ದಾಗ ಅಧ್ಯಯನ ಹಾಗೂ ಇತರ ಚಟುವಟಿಕೆಗಳಲ್ಲಿ ಕನ್ನಡಕ್ಕೆ ಸಾಕಷ್ಟು ಪ್ರಾಧಾನ್ಯವಿತ್ತು. ಯಾಕೆಂದರೆ ನಿಮ್ಮಿಂದ ನಮಗೆ ದೊರೆತ ಪ್ರೋತ್ಸಾಹ ನೆನಪಿಡುವಂಥದು. ನೀವು ಅಲ್ಲಿ ವಿದ್ಯಾರ್ಥಿಯಾಗಿದ್ದಾಗ ಕನ್ನಡದ ಸ್ಥಿತಿ ಹೇಗಿತ್ತು?

**ಮಾಳವಾಡ:** ನಾನು ವಿದ್ಯಾರ್ಥಿಯಾಗಿದ್ದಾಗ ಕನ್ನಡಕ್ಕೆ ಯಾವುದೇ ಬಗೆಯ ಪ್ರೋತ್ಸಾಹ ಇದ್ದಿಲ್ಲ, ಕನ್ನಡ ಪ್ರಾಧ್ಯಾಪಕ ಸ್ಥಾನಕ್ಕೆ ಮಹತ್ವವಿರಲಿಲ್ಲ. ಕನ್ನಡ ಭಾಷಿಕ ಪ್ರಾಧ್ಯಾಪಕರ ಸಂಖ್ಯೆ ತೀರ ಕಡಿಮೆ ಇತ್ತು. ಅನ್ಯ ಭಾಷಿಕರ ಪ್ರಭಾವವೇ ವಿಶೇಷವಾಗಿತ್ತು. ವಿದ್ಯಾರ್ಥಿಗಳು ತಮ್ಮ ಅಭಿಮಾನ, ತಮ್ಮ ಸಾಹಸ, ಕರ್ತೃತ್ವಶಕ್ತಿ ಅದರ ಬಂಡವಾಳದ ಮೇಲೆ ಕರ್ನಾಟಕ ಸಂಘದ ಚಟುವಟಿಕೆ ನಡೆಸಬೇಕಿತ್ತು.

**ಕಣವಿ:** ಅಂದಹಾಗೆ, ನೀವು ವಿದ್ಯಾರ್ಥಿಯಾಗಿದ್ದಾಗಲೇ 'ಮಂಗಮಠ' ಎಂಬ ಸಂಘ ಪ್ರಾರಂಭಿಸಿ ನೀವು ಅದರ ಕಾರ್ಯದರ್ಶಿ ಆಗಿದ್ದಿರಿ. ಸಂಘದ ಹೆಸರೂ ಸ್ವಲ್ಪ ವಿಚಿತ್ರವಾಗೇ ಇದೆ, ಆವಾಗ ಏನು ಚಟುವಟಿಕೆ ನಡೀತಿದ್ದವು? ಆ ಮೊದಲೇ 'ಗೆಳೆಯರ ಗುಂಪು' ರೂಪುಗೊಂಡಿತ್ತಲ್ಲ, ನೀವು ಅದರಲ್ಲಿ ಭಾಗವಹಿಸುತ್ತಿರಲಿಲ್ಲೇನು?

**ಮಾಳವಾಡ:** 'ಗೆಳೆಯರ ಗುಂಪಿ'ನವರೊಳಗೆ ಭಾವುಕತೆ ಬಹಳ ಇರುತ್ತಿತ್ತು. ಆಗ ಧಾರವಾಡಕ್ಕೆ ಬಂದ ಕೈಲಾಸಂ, ಗೆಳೆಯರ ಗುಂಪಿನವರು ಬಳಸುತ್ತಿದ್ದ 'ಓಂ ನಲ್' ಎಂಬುದನ್ನು 'ಓಂ ಕಲ್' ಅಂತ ಹಾಸ್ಯ ಮಾಡಿದರು. ವೈಚಾರಿಕತೆ, ವಿಮರ್ಶಕ ದೃಷ್ಟಿಗಳಿಂದ ಬೇರೊಂದು ಸಂಘಟನೆ ಬೇಕೆನಿಸಿತು. ಆಗ ಮಂಗಮಠ ಅಸ್ತಿತ್ವದಲ್ಲಿ ಬಂದು ವೈಚಾರಿಕ, ವಿಮರ್ಶಕ ನಿಲುವಿನ ಕಾರ್ಯಮಾಡಿತು. ಕರ್ನಾಟಕ ಕುಲಪುರೋಹಿತ ಆಲೂರ ವೆಂಕಟರಾಯರ ಬೆಂಬಲ ನಮಗೆ ಇತ್ತು. ಗೆಳೆಯರ ಗುಂಪಿನವರಿಗಿಂತ ಗೆಳೆಯರ ಗುಂಪಿನಲ್ಲಿಯ ಬೇಂದ್ರೆ, ಗೋಕಾಕ, ಮುಗಳಿ, ಮಧುರ ಚೆನ್ನ, ಬಿ.ಡಿ. ಅಕ್ಕಿ, ಶೇ.ಗೋ. ಕುಲಕರ್ಣಿ ಅವರ ಸಂಪರ್ಕ ಆಗ ನನಗೆ ಒದಗಿ ಬಂತು.

**ಕಣವಿ:** ಅಂತೂ ಈ ವಿಷಯ ಸ್ವಾರಸ್ಯವಾಗಿದೆ. ೧೯೫೫ರೊಳಗೆ ಮದ್ರಾಸದಲ್ಲಿ ನಡೆದ ಸಾಹಿತ್ಯ ಸಮ್ಮೇಳನದ ಸಾಹಿತ್ಯಗೋಷ್ಠಿಯ ಅಧ್ಯಕ್ಷರಾಗಿದ್ದಿರಿ. ಕೈಲಾಸಂ ಆಗ ಪರಿಷತ್ತಿನ ಕೈಗೆ ಸಿಕ್ಕಿದ್ದೇ ದೊಡ್ಡದು. ಅಲ್ಲವೆ? ಅಂದ ಮೇಲೆ ಆ ಸಮ್ಮೇಳನದಲ್ಲಿ ಕೆಲವಾದರೂ ಸ್ವಾರಸ್ಯಕರ ಸಂಗತಿಗಳು ಜರುಗಿರಬಹುದಲ್ಲ? ಒಂದೆರಡು ಹೇಳ್ತೀರಾ?

**ಮಾಳವಾಡ:** ಬೇಕಾದಷ್ಟು ನಡೆದವು. ಅನಿರೀಕ್ಷಿತವಾಗಿ ಆ ಸಮ್ಮೇಳನದ ಸಾಹಿತ್ಯಗೋಷ್ಠಿ ಅಧ್ಯಕ್ಷ ಸ್ಥಾನಕ್ಕೆ ನನ್ನ ಆಯ್ಕೆಮಾಡಿದ್ದರು. ಸ್ನೇಹಿತ ಪ್ರೊ. ಮರಿಯಪ್ಪಭಟ್ಟರು ಒತ್ತಾಯದ ಆಮಂತ್ರಣ ಕಳಿಸಿದ್ದರು. ಆಗ ಮದ್ರಾಸದಲ್ಲೇ ನೆಲೆಸಿದ್ದ ನೃತ್ಯವಿಶಾರದ ಶ್ರೀನಿವಾಸ ಕುಲಕರ್ಣಿ ಖಾಸಗಿಯಾಗಿ ಆಮಂತ್ರಿಸಿದ್ದರು. ಇಷ್ಟೇ ಅಲ್ಲದೆ ಕೈಲಾಸಂ ಅಧ್ಯಕ್ಷತೆಯ ಆಕರ್ಷಣೆಯಂತೂ ಇದ್ದೇ ಇತ್ತು. ನಾವು ಹೋದೆವು. ಕೈಲಾಸಂ ಅಧ್ಯಕ್ಷ ಭಾಷಣ ಕೇವಲ ಎಂಟು ಪುಟದಷ್ಟು ಚಿಕ್ಕದಾಗಿತ್ತು. ಅವರ ಹಾಸ್ಯದ ಚಟಾಕಿ, ಅಭಿನಯ ಚಟಾಕಿ, ಪ್ರತಿಭೆಯ ಪ್ರಭಾವ ಇವುಗಳಲ್ಲಿ ನಾವು ಕೊಚ್ಚಿಕೊಂಡು ಹೋದೆವು. ಆ ಸಮ್ಮೇಳನಕ್ಕೆ ಒಂದು ಕಳೆ ಬಂತು. ಅಂಥ ಕಳೆ ಮತ್ತೆ ಸಮ್ಮೇಳನಕ್ಕೆ ಆ ರೀತಿ ಬಂದಂತೆ ಕಾಣಸೋದಿಲ್ಲ. ಹಿರಿಯರಾದ ರಾಜಗೋಪಾಲಾಚಾರಿ, ಮಾಸ್ತಿ ಅವರೂ ಕೈಲಾಸಂ ಜೊತೆಗೆ ಸೇರಿದ್ದರು. ಅವರ ಮಧ್ಯದಲ್ಲಿ ನಾವೆಲ್ಲ ಬಹಳ ಆನಂದಪಟ್ಟೆವು. ಕಾಂಗ್ರೆಸ್ ಕಮಿಟಿ ಸಭೆಗೆಂದು ಬಂದಿದ್ದ ನಿಜಲಿಂಗಪ್ಪನವರು ಆ ಸಭೆಗೆ ಹೋಗೋದನ್ನೇ ಮರೆತು ಕುಳಿತುಬಿಟ್ಟಿದ್ದರು.

**ಕಣವಿ:** ಆದೊಂದು ವೈಶಿಷ್ಟ್ಯಪೂರ್ಣ ಸಮ್ಮೇಳನ ಅಂದಂತಾಯ್ತು... ನೀವು ಸಂಪಾದಿಸಿದ್ದ 'ಕನ್ನಡ ಗದ್ಯ ಮಾಲೆ' (೧೯೩೮) ಆಗ ನಮಗೆ ತುಂಬ ಉಪಯುಕ್ತವೆನಿಸಿತ್ತು. ಯಾಕೆಂದರೆ ತುರಮರಿ, ತಾರಾನಾಥ, ಆಲೂರು, ಬಿ.ಎಂ.ಶ್ರೀ, ಮಾಸ್ತಿ, ಕಡೆಂಗೋಡ್ಲು, ಬೇಂದ್ರೆ, ಮಧುರಚೆನ್ನ ಮೊದಲಾದವರ ವಿವಿಧ ಶೈಲಿಯ ಬರಹಗಳನ್ನೋದಿ, ಅವರವರ ಗ್ರಂಥಗಳನ್ನು ಓದಬೇಕೆಂಬ ಹಂಬಲ ಹುಟ್ಟಿತು. ಆಮೇಲೆ ಈ ೫೦ ವರ್ಷಗಳ ಅವಧಿಯಲ್ಲಿ ಕನ್ನಡ ಗದ್ಯ ಸಾಕಷ್ಟು ಬೆಳವಣಿಗೆ ಪಡೆದಿದೆ. ಈಗಿನ ಗದ್ಯ ಶೈಲಿಯ ಬಗ್ಗೆ ನಿಮ್ಮ ಅಭಿಪ್ರಾಯವೇನು?

**ಮಾಳವಾಡ:** ಜ್ಞಾನ ಸರಸ್ವತಿಗೆ ವಾಹನ ಆಗುವ ಸಾಮರ್ಥ್ಯ ಕನ್ನಡ ಭಾಷೆಗೆ ಇಲ್ಲ ಎನ್ನುವ ಭಾವನೆ ಇದ್ದ ಕಾಲದಲ್ಲಿ ನಾನು ಈ 'ಗದ್ಯಮಾಲೆ'ಯ ಯೋಜನೆ ಮಾಡಿದೆ. ನಿಮ್ಮ ಹಾಗೇ ಕರ್ನಾಟಕದ ವಿವಿಧ ಭಾಗಗಳ ಜನರೂ ಮೆಚ್ಚುಗೆ ವ್ಯಕ್ತಪಡಿಸಿದ್ದರು. ಆ ಮೇಲಿನ ಅವಧಿಯಲ್ಲಿ ಕನ್ನಡ ಭಾಷೆಗೆ ಶಕ್ತಿ ಒದಗಿಸುವ ಪ್ರಯತ್ನ ಸಮಾಧಾನಕರವಾಗಿ ನಡೆದಿದೆ. ಈಗಿನ ನಮ್ಮ ವಿದ್ವಾಂಸರು ಗಹನ ವಿಷಯಗಳನ್ನು ಕುರಿತು ಸರಳವಾಗಿ ಸಮರ್ಥವಾಗಿ ಬರಿತಾರ, ಭಾಷಣ ಮಾಡತಾರ; ಗದ್ಯ ವಿವಿಧ ಮುಖವಾಗಿ ಬೆಳೆದಿದೆ. ಆದರೆ ಇಂಗ್ಲಿಷ್ ಭಾಷಾ ಶೈಲಿಯ ಅನುಕರಣೆಯಿಂದಾಗಿ ಕೆಲವು ಸಲ ಕನ್ನಡ ಭಾಷೆಯ ಸೊಗಸು, ಸ್ವಾಭಾವಿಕತೆಗೆ ಸ್ವಲ್ಪ ಕುಂದು ಬರತದ ಅಂತ ನನಗೆ ಅನಿಸ್ತದ; ವಾಕ್ಯ ರಚನೆಯೊಳಗ ಅನವಶ್ಯಕ ಜಟಿಲತೆ ತಲೆದೋರ್ತದ.

**ಕಣವಿ:** ಇಂಗ್ಲಿಷ್ ಭಾಷೆಯ ಪ್ರಭಾವವನ್ನು ಸರಿಯಾಗಿ ಅರಗಿಸಿಕೊಂಡು, ಕನ್ನಡದ ಜಾಯಮಾನಕ್ಕೆ ಒಗ್ಗಿಸುವಂತಾಗಬೇಕು ಅಂತ ನಿಮ್ಮ ಅಭಿಪ್ರಾಯವಿರಬೇಕು, ಅಲ್ಲವೇ? ಅರವಿಂದರ ತತ್ವಜ್ಞಾನ, ಆಧ್ಯಾತ್ಮಿಕ ವಿಚಾರಗಳನ್ನು ಅರಗಿಸಿಕೊಂಡು ಸುಲಭ ಶೈಲಿಯಲ್ಲಿ ನೀವು 'ಅರವಿಂದ ಸಂಗಮ' 'ಶ್ರೀಮಾತೆಯವರ ವಿಚಾರಧಾರೆ', 'ಅರವಿಂದ ಮಾತಾಪಥ' ಮೊದಲಾದ ಗ್ರಂಥಗಳಲ್ಲಿ ಹಾಗೆ ಮಾಡಿದ್ದೀರಿ. ಅಂದಹಾಗೆ ಅರವಿಂದರ ಬಗ್ಗೆ ಮೊದಲು ನಿಮಗೆ ಆಸಕ್ತಿ ಹುಟ್ಟಿದ್ದು ಯಾವಾಗ?

**ಮಾಳವಾಡ:** ಮಧುರಚೆನ್ನರು ಪ್ರತಿವರ್ಷ ೨-೩ ಸಲ ಪಾಂಡಿಚೇರಿ ಅರವಿಂದಾಶ್ರಮಕ್ಕೆ ಹೋಗುತ್ತಿದ್ದರು. ಅಲ್ಲಿಂದ ತಿರುಗಿ ಬರುವಾಗ ನಮ್ಮ ಮನೆಗೆ ಬಂದು ಹೋಗುವ ರೂಢಿಯಿತ್ತು. ಅರವಿಂದರ ತತ್ವದ ಬಗ್ಗೆ ಹೇಳುತ್ತಿದ್ದರು. ಸಾಹಿತ್ಯ ಒದಗಿಸುತ್ತಿದ್ದರು. ನಾವೂ ಆಶ್ರಮಕ್ಕೆ ಬರಬೇಕೆಂದು ಒತ್ತಾಯಿಸುತ್ತಿದ್ದರು. ಮದ್ರಾಸ ಸಾಹಿತ್ಯ ಸಮ್ಮೇಳನಕ್ಕೆ ಹೋದಾಗ ಅದು ಸಾಧ್ಯವಾಯಿತು. ನಮಗಾಗಿ ಆಶ್ರಮದ ಪರವಾನಿಗೆಯನ್ನು ಮೊದಲೆ ದೊರಕಿಸಿಕೊಟ್ಟರು. ಪ್ರಥಮ ಸಂದರ್ಶನದಿಂದಲೇ ನಾವು ಆಶ್ರಮದಿಂದ ಬಹಳ ಆಕರ್ಷಿತರಾದೆವು. ಅಲ್ಲಿದ್ದ ಮಾಧವ ಪಂಡಿತ ಶಿರಸಿಯವರು ಹಿಂದೆ ಕರ್ನಾಟಕ ಕಾಲೇಜಿನ ವಿದ್ಯಾರ್ಥಿಯಾಗಿದ್ದರು. ಅರವಿಂದರ ಸಂದೇಶ ಕನ್ನಡದಲ್ಲಿ ಹೆಚ್ಚಾಗಿ ಬರಬೇಕು ಅಂತ ಅವರಿಗೆ ಆಶೆ. ನನ್ನ ಬರಹಗಳ ಬಗ್ಗೆ ಮೆಚ್ಚುಗೆ ಸೂಚಿಸಿ, ಇಂಗ್ಲಿಷಿನಲ್ಲಿರುವ ಅರವಿಂದರ ಆಲೋಚನೆಗಳ ಭಾಷಾಂತರ ಉಳಿದವರಿಗಿಂತ ನನ್ನ ಅನುವಾದದಲ್ಲಿ ಹೆಚ್ಚು ಸ್ವಾಭಾವಿಕ ಅದ ಅಂತಿದ್ದರು. ಆದರಿಂದ ಇನ್ನಷ್ಟು ಆ ಬಗ್ಗೆ ಬರೆಯಲಿಕ್ಕೆ ಹತ್ತಿದೆ. ಆಶ್ರಮದ ಸಂಪರ್ಕ ನನಗೂ, ಜೊತೆಗೆ ಮನೆಯವರಿಗೂ ಹೆಚ್ಚಾದ ಹಾಗೆ ನನ್ನ ಬರವಣಿಗೆಯೂ ಬೆಳೆಯಿತು. ಇನ್ನೊಂದು ಮಾತು ಹೇಳಬೇಕು: ಶರಣ ಸಾಹಿತ್ಯಬೋಧೆಗೂ ಅರವಿಂದರ ತತ್ವಜ್ಞಾನಕ್ಕೂ ಇರುವ ಹೋಲಿಕೆಯೂ ನನ್ನ ಕುತೂಹಲಕ್ಕೆ ಕಾರಣವಾಯಿತು.

**ಕಣವಿ:** ಹೌದು, ಆ ವಿಷಯದ ಬಗ್ಗೆ ಬರೆದ ನಿಮ್ಮ ಲೇಖನಗಳನ್ನು ಅರ್ಥಮಾಡಿಕೊಳ್ಳಲು ನಾನೂ ಪ್ರಯತ್ನ ಪಟ್ಟಿದ್ದೇನೆ. ನಮ್ಮ ಮಹಾಕವಿಗಳಲ್ಲಿ ಹರಿಹರ ನಿಮಗೆ ಬಹಳ ಮೆಚ್ಚುಗೆಯವನು.

ವಸ್ತು, ಭಾಷೆ, ರೀತಿ ಮೂರು ದೃಷ್ಟಿಯಲ್ಲಿ ಅವನು ಕ್ರಾಂತಿಕಾರಿ ಕವಿ ಎಂಬುದನ್ನು 'ಹರಿಹರನ ಮೂರು ರಗಳೆಗಳು' ಪ್ರಸ್ತಾವನೆಯಲ್ಲಿ ಸರಿಯಾಗಿ ಗುರುತಿಸಿದ್ದೀರಿ.... ಮನುಜರ ಮೇಲೆ, ಸಾವವರ ಮೇಲೆ, ಕುಷ್ಠರ ಮೇಲೆ ತಾನು ಕೃತಿ ರಚನೆ ಮಾಡುವುದಿಲ್ಲ ಎಂದು ಅವನು ಘೋಷಿಸಿದವನಲ್ಲವೆ? ಮತ್ತೆ ಅವನ ರಗಳೆಗಳ ಕಥಾನಾಯಕರು ಹೆಚ್ಚಾಗಿ ಮಾನವರೆ ಆಗಿದ್ದಾರಲ್ಲ?

**ಮಾಳವಾಡ:** ಆಗಿದ್ದರೂ ಅವರು ಶಿವನ ಶರಣರ ವಲಯಕ್ಕೆ ಸೇರುತ್ತಾರಲ್ಲ ? 'ಶಿವನಂ ತದೀಯ ಶರಣ ವಜ್ರಮಂ ನುತಿಪೆ' ಅಂತ ಹೇಳ್ಯಾನ.

**ಕಣವಿ:** 'ಮನುಜರು' ಅಂದರೆ ನನಗನಸ್ತದ ಮೊದಲಿನ ಕವಿಗಳಿಂದ ಇಂದ್ರ, ಚಂದ್ರ ಅಂತ ಹೊಗಳಿಸಿಕೊಳ್ಳುತ್ತಿದ್ದ ರಾಜರು ಅವನ ಮನಸ್ಸಿನಲ್ಲಿರಬಹುದು. ಆದರೆ ಅವನ ರಾಜವಿರೋಧಿ ಧೋರಣೆ ಉಳಿದೆಡೆಗೂ ವ್ಯಕ್ತವಾಗಿದೆ. ಅಲ್ಲದೆ ಈ ಕಥಾನಾಯಕರು ಹೆಚ್ಚಾಗಿ ಸಮಾಜದ ಕೆಳವರ್ಗದಿಂದ ಬಂದವರು; ಮಾದಾರ ಚೆನ್ನಯ್ಯ, ಬೇಡರ ಕಣ್ಣಪ್ಪ, ಸಾಮವೇದಿ ಮೊದಲಾದವರು... ಅವರು ಸಾಮಾನ್ಯರಾಗಿದ್ದರೂ ಭಕ್ತಿಸಾಧನೆಯಲ್ಲಿ ಅಸಮಾನ್ಯರೇ.

**ಮಾಳವಾಡ:** ಹೌದು, ನೀವು ಹೇಳುವುದು ಸರಿಯಾಗಿದೆ. ನಿಜವಾದ ಭಕ್ತನಾಗುವುದೇ ಎಲ್ಲಕ್ಕಿಂತ ಶ್ರೇಷ್ಠ ಅನ್ನೋದೇ ಅವರ ನಿಲುವು.

**ಕಣವಿ:** ಹರಿಹರನ ಸೋದರಳಿಯ ಮತ್ತು ಶಿಷ್ಯನಾದ ರಾಘವಾಂಕ ಕವಿ ತಾನು ಒಂದೂ ರಗಳೆಯನ್ನು ಬರೆಯದಿರುವುದು ಆಶ್ಚರ್ಯವಲ್ಲವೇ ?

**ಮಾಳವಾಡ:** ಹರಿಹರ ಕವಿ ಏನು ಮಾಡಿದ ಅಂದರೆ, ಹಂಪಿಯೊಳಗೆ ಒಂದು ಆಶ್ರಮ ಸ್ಥಾಪಿಸಿ ಅಲ್ಲಿ ದಿನವೂ ಜನಸಾಮಾನ್ಯರಿಗೂ ಪ್ರವಚನ, ಕಾವ್ಯವಾಚನ ಮಾಡುತ್ತಿದ್ದ. ಅವನ ರಗಳೆಗಳ ಶೈಲಿಯನ್ನು ನೋಡಿದರೆ ಇದು ಗೊತ್ತಾಗುತ್ತದೆ. ರಾಘವಾಂಕನಿಗೆ ಬಹುಶಃ ಅಂಥ ಅಗತ್ಯ ಕಂಡುಬರಲಿಲ್ಲ.

**ಕಣವಿ:** ರಾಘವಾಂಕನೂ ಸ್ವತಂತ್ರ ಮನೋಧರ್ಮದ ಪ್ರತಿಭಾವಂತ ಕವಿಯಾದ್ದರಿಂದ ಅವನ ಶಿಷ್ಯನೇ ಆಗಿದ್ದರೂ ಅವನ ಅನುಕರಣೆಗಿಳಿಯಲಿಲ್ಲವೆಂದೂ ಹೇಳಬಹುದಲ್ರೀ?

**ಮಾಳವಾಡ:** ಹೌದ್ಹೌದು; ನಾ ಮಾಡಿದಾಂಗ ನೀವು ಮಾಡಲಿಲ್ಲ ನನ್ನ ವಿದ್ಯಾರ್ಥಿಯಾಗಿದ್ದರೂ... ಹಾಗೇ,

**ಕಣವಿ:** ಸಾಹಿತ್ಯ ವಿಮರ್ಶೆಯಲ್ಲಿ ನೀವು ಸಾಕಷ್ಟು ಕೆಲಸ ಮಾಡೀರಿ. 'ಸಾಹಿತ್ಯ ಸಮಾಲೋಚನೆ' 'ಸಾಹಿತ್ಯಸಂಗಮ' ಮೊದಲಾದ ಕೃತಿಗಳಲ್ಲಿ ನಿಮ್ಮ ವಸ್ತುನಿಷ್ಠ ದೃಷ್ಟಿ ಕಂಡುಬರುತ್ತದೆ. ಈ ಸಂದರ್ಭದೊಳಗೆ ನನಗೊಂದು ವಿಚಾರ. ಒಂದು ಕೃತಿಯ ಬಗ್ಗೆ ಅಥವಾ ಒಂದು ಸಾಹಿತ್ಯಿಕ ವಿಚಾರದಲ್ಲಿ ವಿಮರ್ಶಕ ಒಂದು ನಿಲುವನ್ನು ತಾಳಿರ್ತಾನೆ, ಕಾಲಗತಿಸಿದ ಮೇಲೆ ಅವಶ್ಯವೆನಿಸಿದರೆ ಅವನ ನಿಲುವು ಬದಲಾಗ ಬಹುದಲ್ಲವೆ? ಅಂಥ ಸಂದರ್ಭ ನಿಮಗೇನಾದರೂ ಬಂದವೇನು?

**ಮಾಳವಾಡ:** ಬದಲಾಗಬಹುದು. ಪ್ರಗತಿಶೀಲ ಸಾಹಿತ್ಯಪಂಥ ಪ್ರಾರಂಭವಾದಾಗಿನ ಅನುಭವ ನನಗೆ ಗೊತ್ತಿದೆ. ಅದಕ್ಕೊಂದು ಸಾಹಿತ್ಯೇತರ ಕಾರಣವೂ ಇತ್ತು. ಅದು ಈಗ ಬೇಡ. ಆದರೆ ಒಬ್ಬಿಬ್ಬ ಸಮರ್ಥರಾದ ಜನಪ್ರಿಯ ಲೇಖಕರ ಆತ್ಮೀಯ ಸಂಪರ್ಕಾನೂ ನನಗೆ ಇತ್ತು. ಆ ಮೊದಲಿನ ಕೃತಿಗಳನ್ನು ನಾನು ಬಹಳ ಮೆಚ್ಚಿಕೊಂಡಿದ್ದೆ. ಆ ಮೇಲಿನ ಅವರ ಬರವಣಿಗೆಯ ರೀತಿ ನನ್ನ ಅಭಿರುಚಿಗೆ ಒಗ್ಗಲಿಲ್ಲ. ಅದರಿಂದ ನನ್ನ ನಿಲುವು ಬೇರೆಯಾಯಿತು. ಆಮೇಲೆ ಇನ್ನೊಂದು ಉದಾಹರಣೆ : ರೋಷ ತಳೆದು ಖಾರವಾಗಿ ಬರೆಯುತ್ತಿದ್ದ ಮೇಧಾವಿ ಲೇಖಕ ಕಾರಂತ 'ಅಳಿದ ಮೇಲೆ' ಕಾದಂಬರಿ ಬರೆದಾಗ ಅದರಲ್ಲಿ ಅವರ ಹೊಸ ನಿಲುವು ಕಂಡುಬಂದಂಗಾಯ್ತು. ಅಲ್ಲಿಯ ಯಶವಂತನ ಪಾತ್ರವನ್ನು ಮೆಚ್ಚಿಕೊಂಡು ವಿಮರ್ಶೆ ಬರೆದೆ. ತೀವ್ರವ್ಯಥೆ, ತಳಮಳಗಳಿಗೆ ಒಳಗಾದ ಕಾರಂತರ ಸ್ವಂತ ಬಾಳಿನ ಹಿನ್ನೆಲೆಯಲ್ಲಿ ಯಶವಂತನ ಪಾತ್ರ ನಿರ್ಮಾಣದೊಳಗೆ ಕಾರಂತ ಮಾರ್ದವತೆ ತೋರಿಸಿದ್ದಾರೆ, ಅಂತ ಅಭಿಪ್ರಾಯಪಟ್ಟೆ. ಈಚಿಗೆ ಬೇರೊಬ್ಬ ವಿಮರ್ಶಕರ ಒಂದು ವಿಶ್ಲೇಷಣೆ ನನ್ನ ಗಮನಕ್ಕೆ ಬಂತು. ಅದು ಹೀಗಿದೆ: ಬಾಳಿನುದ್ದಕ್ಕೂ ಮಮಕಾರ, ದುರಭಿಮಾನ, ಸ್ವಾನುಕಂಪ ಬೆಳೆಸಿಕೊಂಡ ಯಶವಂತ, ಸಮುದಾಯದಿಂದ ಹಣ ಸಂಗ್ರಹಿಸಿ, ಆ ಹಣದ ಬಲದಿಂದ ಪರೋಪಕಾರ ಪ್ರದರ್ಶನ ಮಾಡತಾನ. ಈ ಬಗೆಯ ಪಾತ್ರದ ಬಗ್ಗೆ ಕಾರಂತರೇನು ಸಹಾನುಭೂತಿ ತೋರಿಸ್ತಾರ, ಅದನ್ನು ಈ ವಿಮರ್ಶಕ ಮೆಚ್ಚಿಕೊಂಡಿಲ್ಲ. ಈ ಅಭಿಪ್ರಾಯ ನನಗೂ ಸರಿ ಅನಿಸಿ, ನನ್ನ ನಿಲುಮೆಯನ್ನು ಬದಲಾಯಿಸಿಕೋಬೇಕಾಯಿತು.

ಮೊದಲಿಗೆ ಸೂಚಿಸಿದ್ದೇನಲ್ಲ? ನೋಡಿರಿ ಕಣವಿ. ಈಗ ನಾನು ಕೂಡಾ ನಿಮ್ಮ ಕಡೆಯಿಂದ ಕೆಲವು ವಿಷಯ ಕೇಳಬೇಕು ಅಂತ. ಅದೇನು ಅಂದರೆ, ನವೋದಯ, ಪ್ರಗತಿಶೀಲ, ಸಾಹಿತಿಗಳೊಡನೆ ನಾನು ನಿಕಟ ಸಂಪರ್ಕ ಇಟ್ಟುಕೊಂಡಿದ್ದೆ. ಆಮೇಲಿನ ನವ್ಯ, ಬಂಡಾಯ, ದಲಿತ ಹೆಸರಿನ ಸಾಹಿತ್ಯ ಬಂದವಲ್ಲ ಅದರ ಬಗ್ಗೆ ನನ್ನ ಅನಿಸಿಕೆ ಆಮೇಲೆ ಹೇಳ್ತೀನಿ. ಇದಕ್ಕೆಲ್ಲ ಹೆಚ್ಚು ಸಮೀಪವಿರುವ ನಿಮ್ಮ ಅನಿಸಿಕೆಗಳೇನು? ಅನ್ನೋದನ್ನ ತಿಳಿಕೋಬೇಕಾಗೇದ ನನಗ.

**ಕಣವಿ:** ಸಾಹಿತ್ಯ ಒಂದು ಸಾಮಾಜಿಕ ಸಂದರ್ಭದಲ್ಲಿ, ಪರಿಸರದಲ್ಲಿ ಸಂಭವಿಸುವುದಾದ್ದರಿಂದ, ಕಾಲ, ಪರಿಸ್ಥಿತಿ ಬದಲಾದ ಹಾಗೆ ಅದರಲ್ಲೂ ಹೊಸ ದೃಷ್ಟಿ, ಧೋರಣೆ ಕಂಡಬರೋದು ಸಹಜ. ನವೋದಯ ಕಾವ್ಯ ಉನ್ನತ ಸ್ಥಿತಿಗೇರಿ, ಒಂದು ಸಿದ್ಧಿಯನ್ನು ಪಡೆದ ಮೇಲೆ, ಬೇರೆ ಸಾಧ್ಯತೆಗಳ ಬಗ್ಗೆ ಮುಂದಿನ ಕವಿಗಳು ವಿಚಾರಮಾಡಬೇಕಾಯ್ತು. ಇಲ್ಲದಿದ್ದರೆ ಹಿರಿಯ ಕವಿಗಳ ಅನುಕರಣೆಯಲ್ಲಿಯೇ ಸತ್ವವಿಲ್ಲದ ಕಾವ್ಯ ನಿರ್ಜೀವವಾಗಿ ಬಿಡುತ್ತಿತ್ತು. ಅಲ್ಲದೆ ಪ್ರತಿಯೊಂದು ಕಾವ್ಯ ಮಾರ್ಗಕ್ಕೂ ಅದರ ಇತಿಮಿತಿಗಳು ಇದ್ದೇ ಇರುತ್ತವೆ. ನವೋದಯ ಕಾವ್ಯದ ಭಾವಾತಿರೇಕತೆ, ಅತಿಯಾದ ಆದರ್ಶಪರತೆ, ಆಗಲೇ ಸಿದ್ಧಗೊಂಡಶೈಲಿ ಇವುಗಳನ್ನು ಹೋಗಲಾಡಿಸಲಿಕ್ಕೆ ಹೊಸ ಬಗೆಯ ಅಭಿವ್ಯಕ್ತಿ, ಹೊಸಶೈಲಿ ಅವಶ್ಯವೆನಿಸಿತು. ಹೀಗೆ ನವ್ಯಕಾವ್ಯ ಪ್ರಾರಂಭವಾಗಿ ಅದರಲ್ಲೂ ಕೆಲ ಉತ್ತಮದರ್ಜೆಯ ಸ್ವತಂತ್ರ ಕಾವ್ಯ ರಚನೆ ಸುಮಾರು ಎರಡು ದಶಕದ ಕಾಲ ರಭಸದಿಂದಲೇ

ನಡೀತು. ಅದಕ್ಕೆ ಅವಶ್ಯಕತೆಗಿಂತಲೂ ಹೆಚ್ಚಿನ ಸಮರ್ಥನೆ, ಪ್ರಚಾರವೂ ಲಭಿಸಿತು. ಮುಂದೆ ಈಗಿನ ಹೊಸ ಪೀಳಿಗೆಯವರಿಗೆ ಅದರಲ್ಲೂ ಕೆಲವು ಕೊರತೆಗಳು ಕಂಡುಬಂದವು. ಆ ಕಾವ್ಯ ಹೆಚ್ಚು ವೈಯಕ್ತಿಕವಾಗಿ, ಸಾಮಾಜಿಕ ಸಮಸ್ಯೆಗಳಿಗೆ ವಿಮುಖವಾಗಿ ಕೆಲವರಿಗೇ ಅರ್ಥವಾಗಬಹುದಾದ ತಂತ್ರ ಪ್ರಧಾನವಾಯಿತೆಂದು ಇವರ ಅನಿಸಿಕೆ. ಕಾವ್ಯ ಆಡುಮಾತಿಗೆ ಸಮೀಪವಾದದ್ದು ನಿಜವಾದರೂ ಓದುಗರಿಂದ ದೂರ ಹೋಯಿತು. ಆದುದರಿಂದ ಅದನ್ನು ಮತ್ತೆ ಜನಮುಖವಾಗಿ ಹರಿಸಬೇಕು, ಸಾಮಾಜಿಕ, ರಾಜಕೀಯ ವಿಷಮತೆಯ ಬಗ್ಗೆ ಎಚ್ಚರವಹಿಸಿ, ಸಂಪ್ರದಾಯ ಜಡತೆ ಮತ್ತು ಸಾಂಸ್ಕೃತಿಕ ಪರಿಸರದಲ್ಲಿಯ ಪ್ರತಿಗಾಮಿತ್ವದ ವಿರೋಧಿ ಮನೋಧರ್ಮವುಳ್ಳ ಲೇಖಕರ ಸಾಹಿತ್ಯ ಬಂಡಾಯ ಸಾಹಿತ್ಯ ಅಂತ ಹೆಸರು ಪಡೆಯಿತು. ಬದುಕಿನ ಎಲ್ಲ ಶೋಷಣೆಯ ಮೂಲಗಳಿಗೆ ಒಟ್ಟು ಪ್ರತಿಭಟನೆ ಇವರ ಧೋರಣೆಯಾಯಿತು. 'ಜಾತಿ ರಹಿತವಾದ, ವರ್ಗರಹಿತವಾದ ಮಾನವೀಯತೆ ಮಿಡಿಯುವ ಹೊಸ ಸಮಾಜದ ರಚನೆ ತಮ್ಮ ಗುರಿ' ಅಂತ ಅವರು ಹೇಳ್ತಾರೆ... ನಾನು ಬಹಳ ಮಾತಾಡಿ ಬಿಟ್ಟೆ ಅಂತ ಕಾಣಸ್ತದ; ಇನ್ನೊಂದು ಮಾತು ಹೇಳಬೇಕು. ಕೆಳವರ್ಗದ ಜಾತಿಗಳವರಲ್ಲಿ ಆರ್ಥಿಕವಾಗಿ, ಸಾಮಾಜಿಕವಾಗಿ ಹೆಚ್ಚು ಶೋಷಣೆಗೆ, ಹಿಂಸೆಗೆ ಒಳಗಾದವರು ಅಸ್ಪೃಶ್ಯರು. ಅವರ ಬದುಕಿಗೆ ಸಂಬಂಧಪಟ್ಟಂಥ ಅವರ ಜೀವನದ ನೋವು ಸಂಕಟಗಳನ್ನು ನಿರೂಪಿಸುವ ಸಾಹಿತ್ಯ ದಲಿತ ಸಾಹಿತ್ಯ. ಹೀಗೆ ಬಂಡಾಯ ಹಾಗೂ ದಲಿತ ಸಾಹಿತ್ಯ ಇವೆರಡರ ನೆಲೆಗಳು ಸ್ವಲ್ಪ ಬೇರೆ ಎನ್ನುವುದನ್ನೂ ನಾವು ಗಮನಿಸಬೇಕು.

**ಮಾಳವಾಡ:** ಸರಿ, ನಿಮ್ಮ ವಿವರಣೆ ಸಮರ್ಪಕವಾಗಿರಬಹುದು ಒಪ್ಪುತ್ತೀನಿ. ನಾನು ಈ ಸಂದರ್ಭದಲ್ಲಿ ಹೇಳುವ ಮಾತೆಂದರೆ ಈ ಹೊಸ ಬಗೆಯ ಸೂತ್ರ ಹಾಗೂ ಘೋಷಣೆಗಳಿಂದ ಸೃಜನಶೀಲ ಸಾಹಿತ್ಯ, ಸಂವೇದನೆಗಳ ಸಹಜ ಅಭಿವ್ಯಕ್ತಿಗೆ ಅವಕಾಶ ನಿರಾಕರಿಸುವಂಥ ಒಂದು ಪರಿಸ್ಥಿತಿ ಉಂಟಾದಂತೆ ತೋರ್ತದ. ಇಂಥ ಒಂದು ಸೂಕ್ಷ್ಮ ವ್ಯಥೆಯನ್ನು ಯಶವಂತ ಚಿತ್ತಾಲ ತಮ್ಮ 'ಕಥೆಯಾದಳು ಹುಡುಗಿ' ಎಂಬ ಸಣ್ಣ ಕಥೆಯಲ್ಲಿ ವ್ಯಕ್ತಪಡಿಸಿದ್ದಾರಂತ ಅನಿಸ್ತದ, ಮುದ್ದುಮಗಳ ಅಕಾಲಿಕ ಮರಣದ ಬಗೆಗೆ ತನ್ನ ಸಂವೇದನೆಯನ್ನು ಸಣ್ಣಕಥೆಯ ರೂಪದಲ್ಲಿ ಹೇಳಬೇಕು ಅಂತ ತಂದೆಗೆ ಅನಿಸ್ತದ. ಆದರೆ 'ವ್ಯಕ್ತಿಗತ ಸಹಜ ಭಾವನೆಗಳಿಗೆ ಮಹತ್ವವಿಲ್ಲ, ಅದಕ್ಕೆ ಸಾರ್ವಜನಿಕ ಮಹತ್ವ ಇರಬೇಕು. ಅದಕ್ಕೆ ಪ್ರಖರವೆನಿಸುವ ಹಿನ್ನೆಲೆ ಇರಬೇಕು' ಹೊಸಪಂಥದ ಈ ಸೂತ್ರಗಳನ್ನು ಗಮನಿಸಬೇಕಲ್ಲ ಅದಕ ಸತ್ತುಹೋದ ತನ್ನ ಮಗಳ ತಂದೆ ಏನು ಮಾಡಿದ? ತನ್ನ ಮಗಳಿಗೆ ಪ್ರತಿಯಾಗಿ ಕೊಳಚೆ ಪ್ರದೇಶದ ಬಾಲಿಕೆಯನ್ನು ಆರಿಸಿಕೊಂಡು ಆಕೆ ಅತ್ಯಾಚಾರಕ್ಕೆ ಒಳಗಾದಳು ಅಂತ ಹೇಳಿದ. ಆಗ ಪ್ರಮುಖ ಪತ್ರಿಕಾವಾರ್ತೆಯಾಗಿದ್ದ ಛಸನಾಲಾ ಗಣಿ ದುರಂತ ಮರಣದ ಹಿನ್ನೆಲೆ ಬೇಕು ಅಂತ ಮಾಡಿದ. ಈ ಒತ್ತಡಕ್ಕೊಳಗಾಗಿ ಕಥೆ ಬರೆದ. ಹೊಸ ಪಂಥದ ಸ್ನೇಹಿತರು ಈ ಕಥೆ ಬರೆದದ್ದಕ್ಕೆ ಅವನಿಗೆ ಅಭಿನಂದನೆ ಕೊಟ್ಟರು. ಆದರೆ ಮುದ್ದು ಮಗಳ ಸಾವಿಗಾಗಿ ಅವನಿಗೆ ಸಾಂತ್ವನದ ಮಾತು ಹೇಳಲಿಲ್ಲ ಅನ್ನೋ ಕಥೆ ಅದು... ಇನ್ನೊಂದು ಅಂಶ ಪ್ರಸ್ತಾಪಿಸಬೇಕು ಗೋಕಾಕರು ನವ್ಯಸಾಹಿತ್ಯದ ಘೋಷಣೆ ಮಾಡಿದ

ಸಮ್ಮೇಳನದಲ್ಲಿ ನಾನೂ ಭಾಗಿಯಾಗಿದ್ದೆ. ಅವರು ಆಗ ಹೇಳಿದ್ದೇನು? ನವೋದಯ ತನ್ನ ಸಿದ್ಧಿಮುಟ್ಟಿದೆ. ಅದರ ವ್ಯಾಪ್ತಿ, scope ಬೆಳೆಯಬೇಕು; ಭಾಷಾ ಮಾಧ್ಯಮದ ನವೀಕರಣ ಆಗಬೇಕು. ಅಂತಲ್ಲವೆ ? ಆದರೆ ಆದದ್ದು ಬೇರೆ. ನವ್ಯದ ಬಾವುಟ ಎತ್ತಿಹಿಡಿದು ಸಾಗಿದವರಲ್ಲಿ ಕೆಲವರು ನವೋದಯದ ಸತ್ವ ಮುಗಿದುಹೋಯ್ತು, ಅದು ಸತ್ತು ಹೋಯ್ತು ಅಂತ ಹೇಳಿದರು. ಅನಂತರ ಈ ಬಂಡಾಯದವರು ಕೆಲವರು ನವ್ಯದ ಗುಂಪಿನಲ್ಲೂ ಇದ್ದವರು ನವ್ಯಕಾವ್ಯದಲ್ಲಿ ಹಿಪ್ಪಿಗಳ ಸ್ವೇಚ್ಛಾಚಾರವಿದೆ. ನವ್ಯರು ನಪುಂಸಕರಾಗಿದ್ದಾರೆ. ಹೀಗೆಲ್ಲಾ ಹೇಳಲಿಕ್ಕೆ ಹತ್ತಿದ್ದಾರೆ. ಆ ಮೇಲೆ ಹೊಡಿ, ಬಡಿ, ಒದಿ, ಇಕ್ಕು ಇಂಥ ಪದ, ಅವಾಚ್ಯ ಬೈಗುಳ ಇವು ಬಂದಾಗ ನಾನು ಅದನ್ನು ಓದುವುದನ್ನೇ ಬಿಟ್ಟೆ, ಆದ ಕಾರಣ ಅವುಗಳ ಸಂಪರ್ಕ ನನಗೆ ಕಡಿಮೆಯಾಗಿದೆ.

**ಕಣವಿ:** ಅರ್ಥವಾಯ್ತು. ಕಾವ್ಯಮಾರ್ಗ ಬದಲಾಗುತ್ತಿರುವ ಸಂಧಿ ಕಾಲದಲ್ಲಿ ಇದೆಲ್ಲ ಸ್ವಾಭಾವಿಕ.... ಉನ್ನತ ಮಟ್ಟದ ಕವಿಗಳು ಎಲ್ಲ ಪಂಥಗಳ ಕಾವ್ಯಮಾರ್ಗದಲ್ಲೂ ಇದ್ದಾರೆನ್ನುವುದನ್ನು ಮರೆಯುವಂತಿಲ್ಲ. ಅಲ್ಲದೆ ಶತಮಾನಗಳಿಂದ ತುಳಿತಕ್ಕೊಳಗಾಗಿ ಮೂಕವಾಗಿಹೋದ ಜನಾಂಗಕ್ಕೆ ಬಾಯಿ ಬಂದಾಗ, ರೋಷ, ಆಕ್ರೋಶ ವ್ಯಕ್ತವಾಗೋದು ಸಹಜ....

**ಮಾಳವಾಡ:** ಅವರು ವ್ಯಕ್ತಮಾಡಲಿ; ಆದರ ನನಗವು ಹಿಡಿಸೋದಿಲ್ಲ. ಅಂತ ಹೇಳಿದೆ... ಅಲ್ಲದೆ, ಹೊರಗಿನ ಸೂತ್ರ ಒತ್ತಡಗಳಿಗೆ ಒಳಗಾದರೆ ಸಹಜತೆ ಬರೋದಿಲ್ಲ.

**ಕಣವಿ:** ಲೇಖಕ ಯಾವುದೇ ಸೂತ್ರಕ್ಕೆ ಬದ್ಧನಾಗಿದ್ದರೂ ಎಷ್ಟೋ ಅನಿರೀಕ್ಷಿತ ಅಂಶಗಳು ಅವನ ಸೃಜನಾತ್ಮಕ ಬರವಣಿಗೆಯಲ್ಲಿ ಸೇರಿಕೊಂಡು ಅವನು ಇಚ್ಛಿಸಿದ್ದಕ್ಕಿಂತ ಅದು ಬೇರೆಯಾಗಿ ಬಿಡುವ ಸಂಭವವೂ ಇಲ್ಲದಿಲ್ಲ....

ನಿಮ್ಮ ಆತ್ಮಚರಿತ್ರೆಯ ಮೊದಲ ಭಾಗ 'ಹಳ್ಳಿಯ ಹುಡುಗ' ಪ್ರಕಟವಾಗಿ ಆಗಲೇ ಆರು ವರ್ಷಗಳಾದವು. ಮುಂದಿನ ಭಾಗಗಳನ್ನು ಯಾವಾಗ ನಿರೀಕ್ಷಿಸಬಹುದು? ಯಾಕೆಂದರೆ ಸಾಹಿತ್ಯಕವಾಗಿ ಸಾಮಾಜಿಕವಾಗಿ ಕೆಲವು ಮಹತ್ವದ ಸಂಗತಿಗಳು, ಘಟನೆಗಳು ಅದರಲ್ಲಿ ದಾಖಲೆಗೊಳ್ಳುವ ಸಂಭವವಿರುವುದರಿಂದ ನನ್ನಂಥವರಿಗೆ ಅದರ ಬಗ್ಗೆ ಹೆಚ್ಚಿನ ಕುತೂಹಲ.

**ಮಾಳವಾಡ:** ಹೇಳ್ತೀನಿ. ನನ್ನ ಆತ್ಮಚರಿತ್ರೆಯ ಮೊದಲನೆಯ ಭಾಗದೊಳಗಿನ ನನ್ನ ಹದಿನಾರು ವಯಸ್ಸಿನ ಅವಧಿಯ ನಿರೂಪಣೆ ಮಾತ್ರ ಬಂದಿದೆ, ಎರಡನೆಯ ಭಾಗದಲ್ಲಿ ಪ್ರೊಫೆಸರ ಆಗಿ ನೇಮಕವಾಗುವವರೆಗಿನದು. ಇದು ಧಾರವಾಹಿಯಾಗಿ ಪತ್ರಿಕೆಯಲ್ಲಿ ('ಪರಂಜ್ಯೋತಿ') ಬಂತು. ಮೂರನೆಯ ಭಾಗದಲ್ಲಿ ಕರ್ನಾಟಕ ಕಾಲೇಜಿನ ಹಿರಿಯ ಪ್ರಾಧ್ಯಾಪಕನಾಗಿ ಅಲ್ಲಿಯ ವಿವಿಧ ಸಂಘಟನೆಗಳ ಮುಖ್ಯಸ್ಥನಾಗಿ ಮಾಡಿದ ಚಟುವಟಿಕೆ, ಸಾರ್ವಜನಿಕ ಕೆಲಸ ಕಾರ್ಯಗಳ ನಿರೂಪಣೆಯಿದೆ. ಈ ಭಾಗ ಇಷ್ಟರೊಳಗೆ ಪೂರ್ತಿಗೊಳ್ಳಬೇಕಾಗಿತ್ತು. ಪತ್ರಿಕೆಯವರು ನಿಧಾನ ಮಾಡುತ್ತಿದ್ದಾರೆ. ನಾಲ್ಕನೇ ಭಾಗದೊಳಗೆ ನಾನು ಪ್ರಿನ್ಸಿಪಾಲ್‌ನಾಗಿ ನಿವೃತ್ತಿ ಪಡೆದವರೆಗಿನದು ಬರೆದೀನಿ. ಇದಿಷ್ಟು, ಮುಂದಿನ ಇಪ್ಪತ್ತು ವರ್ಷಗಳದ್ದು ಈಗ ಬರೀತಾ ಇದ್ದೀನಿ. ಆದರೆ ಪುಸ್ತಕರೂಪದ ಪ್ರಕಟಣೆಯ ವಿಷಯ ದೈವೇಚ್ಛೆಗೆ ಸಂಬಂಧಿಸಿದ್ದಾಗಿದೆ.

**ಕಣವಿ:** ಯಾವುದೇ ಸಂದರ್ಭದಲ್ಲೂ ನೀವು ನಿಮ್ಮದೇ ಆದ ದೃಷ್ಟಿಕೋನವನ್ನು ಕಾಪಾಡಿಕೊಂಡು ಬಂದವರು. ಸಮಯ ಸಾಧಕತನದ ಈ ಕಾಲದಲ್ಲಂತೂ ಅಂಥ ದೃಷ್ಟಿ ತೀರ ವಿರಳವೆಂದೇ ಹೇಳಬೇಕು ಇಂದಿನ ಸಾಮಾಜಿಕ ಹಾಗೂ ಸಾಹಿತ್ಯಿಕ ಸಂಘ ಸಂಸ್ಥೆಗಳ ಕಾರುಬಾರು, ರೀತಿ ನಿಯಮಗಳ ಬಗ್ಗೆ ನಿಮಗೇನನ್ನಿಸುತ್ತದೆ ?

**ಮಾಳವಾಡ:** ಯಾವುದೇ ಸಂಘ ಸಂಸ್ಥೆಗಳ ಸಂಬಂಧ ಬೇಡ ಅಂತ ನಾನು ನಿರ್ಣಯ ಕೈಗೊಂಡೀನಿ. ಅದರಿಂದ ನನ್ನ ಅನಿಸಿಕೆ ಏನು ಅನ್ನೋದನ್ನ ನೀವೇ ಅರ್ಥ ಮಾಡಿಕೊಳ್ಳಬೇಕು.

**ಕಣವಿ:** ಬಹಳ ಸೂಚ್ಯವಾಗಿ ಹೇಳಿದಿರಿ ನೀವದನ್ನ. ನಮ್ಮ ಮಾತುಕತೆಯ ಪ್ರಾರಂಭದಲ್ಲಿ ನೀವೊಂದು ವಿಷಯ ಹೇಳಿದಿರಿ. ೧೯೫೮ರಿಂದ ಈಚೆಗೆ ಸಾರ್ವಜನಿಕ ಸಾಹಿತ್ಯ ಚಟುವಟಿಕೆಗಳಲ್ಲಿ ಭಾಗವಹಿಸೋದನ್ನ ಕಡಿಮೆ ಮಾಡೀನಿ ಅಂತ. ಇದಕ್ಕೆ ಪ್ರಬಲವಾದ ಕಾರಣವೇನಾದರೂ ಇರಬೇಕಲ್ಲ? ಅದರ ಬಗ್ಗೆ ಸ್ವಲ್ಪ ಹೇಳತಿರೇನು?

**ಮಾಳವಾಡ:** ಹೌದು, ಪ್ರಬಲವಾದ ಕಾರಣ ಇತ್ತು. ಇಲ್ಲಿ ಅದನ್ನು ವಿಸ್ತಾರವಾಗಿ ಹೇಳಲಿಕ್ಕಾಗೋದಿಲ್ಲ. ೧೯೫೮ರ ಸುಮಾರಿಗೆ ಕೆಲವು ಖಾಸಗಿ ಘಟನೆಗಳಂತೆ, ನಮ್ಮ ಸಾಹಿತ್ಯವಲಯದ ಒಂದು ಸನ್ನಿವೇಶ ನನಗೆ ಮಾನಸಿಕ ಆಘಾತ ಒದಗಿಸಿತು. ಆಗೊಂದು ಕಹಿಯಾದ ವಾದ-ವಿವಾದ ಬೆಳೀತು. ಅದನ್ನು ತಪ್ಪಿಸುವುದು ಹಿರಿಯ ಸಾಹಿತಿಗಳಿಗೆ ಸಾಧ್ಯವಿತ್ತು. ಆದರೆ ಪ್ರತಿಷ್ಠೆ, ಛಲಗಳ ಪ್ರಶ್ನೆ ಮೇಲ್ಗೈ ಪಡೆದು ಹಾಗಾಗಲಿಲ್ಲ. ಸೌಹಾರ್ದ ದೃಷ್ಟಿಯ ಒಂದು ಪ್ರಾಯೋಗಿಕ ಪ್ರಯತ್ನವನ್ನು, ಪ್ರಾತಿನಿಧಿಕ ಸ್ವರೂಪದ ನಾವು ಎಂಟು ಜನ ಲೇಖಕರು-ಕೆಲವರು ಹಿರಿಯರೂ ಅದರಲ್ಲಿದ್ದರು - ಕೈಕೊಂಡಿದ್ದೆವು. ಆದರೆ ಇತ್ತಂಡದವರೂ ನಮಗೆ ದೋಷಾರೋಪಣೆ ಮಾಡಿದರು. ಸಾಹಿತ್ಯ ಜನಮನವನ್ನು ಒಂದುಗೂಡಿಸುವ ಸಾಧನೆ ಅನ್ನುವ ನನ್ನ ನಂಬಿಗೆ ಕುಸಿಯಿತು. ಆದ್ದರಿಂದ ಸಾರ್ವಜನಿಕ ಸಾಹಿತ್ಯವಲಯದಿಂದ ದೂರ ಉಳಿಯಲು ನಿರ್ಧರಿಸಿದೆ. ಆಧ್ಯಾತ್ಮಿಕ ವಲಯ ಈ ಮೊದಲೇ ನನ್ನನ್ನು ಆಕರ್ಷಿಸಿತ್ತು, ಇದು ಕಾರಣವಾಯ್ತು.

**ಕಣವಿ:** ನಾನು ಊಹಿಸಿರುವಂತೆ ಈ ಪ್ರಕರಣ ಮಾಸ್ತಿಯವರ 'ಚೆನ್ನಬಸವ ನಾಯಕ' ಕಾದಂಬರಿಯ ಬಗ್ಗೆ ಎದ್ದ ವಾದವಿವಾದಕ್ಕೆ ಸಂಬಂಧಪಟ್ಟದ್ದು ಅಂತ ಅನಸ್ತದ.

**ಮಾಳವಾಡ:** ಹೌದು, ನಿಮ್ಮ ಊಹೆ ಸರಿಯಾಗಿದೆ. ಅದರ ಬಗ್ಗೆ ೨೫ ಪುಟಗಳಷ್ಟು ಈಗ ಬರೆದಿಟ್ಟೇನಿ. ನನ್ನ ಆತ್ಮಚರಿತ್ರೆಯ ನಾಲ್ಕನೆಯ ಭಾಗದಲ್ಲಿ ಅದೆಲ್ಲ ಬರ್ತದ.

**ಕಣವಿ:** ಒಳ್ಳೇದು... ನೋಡಿ, ಕನ್ನಡ ನಾಡು ಒಂದಾಗಿ ಮೂವತ್ತು ವರ್ಷಗಳಾದವು. ಏಕೀಕರಣಕ್ಕಾಗಿ ದುಡಿದವರಲ್ಲಿ ನೀವೂ ಒಬ್ಬರು. ಕನ್ನಡಕ್ಕೆ ಕನ್ನಡಿಗರಿಗೆ ಸರಿಯಾದ ಸ್ಥಾನಮಾನ ಈಗಲಾದರೂ ದೊರೆತಿವೆಯೆಂದು ನಿಮಗೆ ತೋರುತ್ತಿದೆಯೇ ?.... ಕನ್ನಡದ ಅಭಿವೃದ್ಧಿಯ ಬಗ್ಗೆ ನಿಮ್ಮ ಸೂಚನೆ, ಸಂದೇಶ?

**ಮಾಳವಾಡ:** ಬಹಳ ಸಂಕ್ಷಿಪ್ತವಾಗಿ ಹೇಳ್ತೀನಿ. ಕನ್ನಡ, ಕರ್ನಾಟಕ ಇದರ ಅಭಿಮಾನ ಕುರಿತು ಈಗ ಕಂಡು ಬರುವ ರಾಜಕೀಯ ವ್ಯಾಪಾರಿ ಮನೋಭಾವ ಹಿಂದಾಗಿ ನಿಜವಾದ

ಕಳಕಳಿಯ ಸೇವಾಭಾವ ಮುಂದೆ ಬಂದರೆ ಕರ್ನಾಟಕದ ಅಭಿವೃದ್ಧಿ ಖಚಿತ ಅಂತ ನಾ ತಿಳಿಕೊಂಡೀನಿ.

**ಕಣವಿ:** ಬಹಳ ಸಂತೋಷ. ಇಷ್ಟೊತ್ತಿನವರೆಗೆ ನಾನು ಕೇಳಿದ ಪ್ರಶ್ನೆಗಳಿಗೆ ಸ್ಪಷ್ಟವಾಗಿ, ಸಮಾಧಾನ ಚಿತ್ತದಿಂದ ಉತ್ತರಿಸಿದಿರಿ. ಇದು ಬರಿ ಪ್ರಶ್ನೋತ್ತರ ಕಾರ್ಯಕ್ರಮವಾಗದೆ, ಅದಕ್ಕೆ ಸಂವಾದದ ಸ್ವರೂಪ ಬರುವಂತೆ ಮಾಡಿದಿರಿ. ಅದಕ್ಕಾಗಿ ಕೃತಜ್ಞತೆಗಳು, ನಮಸ್ಕಾರ.

(ಧಾರವಾಡ ಆಕಾಶವಾಣಿ, ೧೯೮೬)

(ಸಾಹಿತ್ಯ ಸಮಾಹಿತ : ೨೦೦೭)

೯

# ದೇ.ಜ.ಗೌ. : ಸ್ವಲ್ಪ ದೂರದಿಂದ

೧೯೫೭ರ ಮೇ ತಿಂಗಳಲ್ಲಿ ೩೯ನೆಯ ಕನ್ನಡ ಸಾಹಿತ್ಯ ಸಮ್ಮೇಳನ ಕರ್ನಾಟಕ ವಿಶ್ವವಿದ್ಯಾಲಯದ ಆಶ್ರಯದಲ್ಲಿ ನೆರವೇರಿತು. ಕನ್ನಡ ರಾಜ್ಯೋದಯದ ಮರುವರ್ಷವೇ ನಡೆದ ಈ ಸಮ್ಮೇಳನಕ್ಕೆ ಕುವೆಂಪು ಅವರು ಅಧ್ಯಕ್ಷರಾಗಲು ಒಪ್ಪಿಕೊಂಡದ್ದು ಧಾರವಾಡದ ದೊಡ್ಡ ಭಾಗ್ಯವೆನಿಸಿತು. ಕರ್ನಾಟಕದ ಮೂಲೆ ಮೂಲೆಗಳಿಂದ ಪ್ರತಿನಿಧಿಗಳು ಆಗಮಿಸಿ 'ಶ್ರೀ ಬಸವನಾಳ ಮಂಟಪ' ಉತ್ಸಾಹ, ಸಂತೋಷ, ಕುತೂಹಲಗಳಿಂದ ತುಂಬಿ ತುಳುಕುತ್ತಿತ್ತು. ಸಮ್ಮೇಳನದ ಕಾರ್ಯದರ್ಶಿಯ ಹೊಣೆಯನ್ನು ಹೊತ್ತಿದ್ದ ನಾನು ಅತ್ತಿತ್ತ ಓಡಾಟದ ಗಡಿಬಿಡಿಯಲ್ಲಿದ್ದಾಗಲೂ, ಸಭೆಯ ಮುಂಭಾಗದಲ್ಲಿ ಕುಳಿತಿದ್ದ, ಸರಳವಾದ ಅಚ್ಚ ಬಿಳಿಯುಡುಗೆಯ ವ್ಯಕ್ತಿಯೊಬ್ಬರ ಕಡೆಗೆ ನನ್ನ ಗಮನ ಹರಿಯಿತು. ಅಂದಿನ ಸಮಾರಂಭದ ಸಂತೋಷವನ್ನೆಲ್ಲ ತಮ್ಮದನ್ನಾಗಿ ಮಾಡಿಕೊಂಡು, ಹಿರಿಹಿರಿ ಹಿಗ್ಗಿದಂತಿದ್ದ ಅವರ ಪರಿಚಯವನ್ನು ಪಕ್ಕದಲ್ಲಿ ಕುಳಿತಿದ್ದ ನನ್ನ ಸ್ನೇಹಿತರೊಬ್ಬರು ನನಗೆ ಮಾಡಿಕೊಟ್ಟರು. 'ಪುಸ್ತಕ ಪ್ರಪಂಚ'ದಲ್ಲಿಯ ತಮ್ಮ ಲೇಖನಗಳಿಂದ ಈ ಮೊದಲೇ ನನ್ನ ಗಮನವನ್ನು ಸೆಳೆದಿದ್ದ ಡಾ. ದೇ. ಜವರೇಗೌಡರೇ ಅವರಾಗಿದ್ದರು. ಆಮೇಲೆ ಅವರ ನಿಕಟವಾದ ಸಂಪರ್ಕ ಒದಗದಿದ್ದರೂ ಆಗೀಗ ಮೈಸೂರು ವಿಶ್ವವಿದ್ಯಾನಿಲಯುದ ಪ್ರಸಾರಾಂಗದ ಸಭೆಗಳಲ್ಲಿ ಹಾಗೂ ಆ ವಿಶ್ವವಿದ್ಯಾಲಯು ಅಭೂತಪೂರ್ವವಾಗಿ ನಡೆಸಿದ ವಿಚಾರ ಸಂಕಿರಣಗಳ ಸಂದರ್ಭದಲ್ಲಿ ಆ ಪರಿಚಯ ಸ್ನೇಹವಾಗಿ ಬೆಳೆದು, ಪರಸ್ಪರ ಪ್ರೀತಿ ವಿಶ್ವಾಸಗಳನ್ನು ಹೆಚ್ಚಿಸುತ್ತ ಬಂದುದು ಒಂದು ಭಾಗ್ಯವೆಂದೇ ನಾನು ಭಾವಿಸಿದ್ದೇನೆ.

ಕನ್ನಡ ಪ್ರಾಧ್ಯಾಪಕ ಹಾಗೂ ಇಲಾಖೆಯ ಮುಖ್ಯಸ್ಥರು, ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರು, ಕುಲಪತಿಗಳು - ಹೀಗೆ ಯಶಸ್ಸಿನ ಹಂತಗಳಲ್ಲಿ ಜವರೇಗೌಡರನ್ನು ನಾನು ತೀರ ಹತ್ತಿರವೂ ಅಲ್ಲದ, ತೀರ ದೂರವೂ ಅಲ್ಲದ ಒಂದು ಅಂತರದಲ್ಲಿ ನಿಂತು ನಿರೀಕ್ಷಿಸಿದ್ದೇನೆ. ಕಣ್ಣು ಕುಕ್ಕುವ ಈ ಉತ್ಕರ್ಷಕ್ಕೆ ಸಹೋದ್ಯೋಗಿಗಳ ಬಗ್ಗೆ ಅವರು ತೋರುತ್ತಿದ್ದ ಗೌರವ, ಕಾರ್ಯದಕ್ಷತೆ, ದಣಿವರಿಯದ ದುಡಿಮೆ, ಎಡೆಬಿಡದ ಬರವಣಿಗೆ, ಪ್ರತಿಭೆಗೆ ತೋರುತ್ತಿದ್ದ ಪುರಸ್ಕಾರ, ಕನ್ನಡದ ಕಟ್ಟಾಳುತನ - ಇವೇ ಮೊದಲಾದವು ಸೋಪಾನಗಳಾಗಿದ್ದವೆಂಬುದನ್ನು ನಾನು ಅರಿತಿದ್ದೇನೆ. ರಾಜಕೀಯ ಮಾಡಬೇಕಾದ ಪ್ರಸಂಗ ಬಂದಾಗಲೂ ಅದು ಮುಸುಕಿನ

ಗುದ್ದಾಟವಾಗದಂತೆ ಮರೆ ಮೋಸವಾಗದಂತೆ ಅದರಿಂದ ತಮ್ಮ ಕರ್ತವ್ಯಕ್ಕೆ ಚ್ಯುತಿಯಾಗದಂತೆ ತಾವು ನೋಡಿಕೊಂಡಿರುವುದಾಗಿಯೂ ಅವರೇ ಹೇಳಿದ್ದಾರೆ. ಅಧಿಕಾರದಲ್ಲಿದ್ದೂ ಇಲ್ಲದವರಂತೆ ಸರಳ ನಡೆ ನುಡಿಯ, ಸ್ನೇಹಪೂರಿತ ಮೆಲುನಗೆಯ, ಆತ್ಮೀಯ ಆದರ ಭಾವದ ದೇಜಗೌ ಬಗ್ಗೆ ನನಗೆ ಗೌರವ ಹೆಚ್ಚುತ್ತ ಬಂದದ್ದು ಹೀಗೆ.

ಡಾ. ಹಾ. ಮಾ. ನಾಯಕರ ಪ್ರೀತಿಯ ಒತ್ತಾಯಕ್ಕೆ ಕಟ್ಟುಬಿದ್ದು, ೧೯೭೪ರ ರಾಜ್ಯೋತ್ಸವ ಸಂದರ್ಭದಲ್ಲಿ ಮಾನಸಗಂಗೋತ್ರಿಯ ಕನ್ನಡ ಸಂಘದಿಂದ ನಾನು ಸನ್ಮಾನವನ್ನು ಪಡೆದದ್ದುಂಟು. ಅಂದಿನ ಸಭೆಯ ಅಧ್ಯಕ್ಷತೆ ವಹಿಸಿದ್ದ ಕುಲಪತಿ ಜವರೇಗೌಡರು ನನ್ನ ಕಾವ್ಯದ ಬಗ್ಗೆ ತಮಗಿರುವ ಪ್ರೀತಿಗೌರವಗಳನ್ನು ಮುಕ್ತಮನಸ್ಸಿನಿಂದ ವ್ಯಕ್ತಪಡಿಸಿದ್ದುಂಟು. ಕಾವ್ಯದ ನಿಮಿತ್ತವಾಗಿ ನಾನು ಪಡೆದ ಮೊದಲ ಸತ್ಕಾರದ ಆ ಸಂದರ್ಭದಲ್ಲಿ ನಾನು ಓದಿದ 'ಅಭಿನಂದನೆ' ಕವಿತೆಯ ಪ್ರಾರಂಭ ಹೀಗಿದ್ದಿತು :

ನೀವೆಲ್ಲಿಯವರು? ನಾವಲ್ಲಿಯವರೆ, ನಮ್ಮೂರು ದೂರವಿಲ್ಲ.
ಕನ್ನಡದ ತವರು ಕರೆದಾಗ ನಮಗೆ ಮೈನವಿರು, ಮಾತ್ರವಲ್ಲ-
ಗಂಗೋತ್ರಿಯಲ್ಲಿ ಮೂಡಿರುವ ಕನಸು ಮಾನಸದ ಹಂಸದಂತೆ.
ಹಾಲು-ನೀರು ಬೇರ್ಪಡಿಸಿ ಮೇಲೆ ದಿಗ್ವಲಯಕೇರಿದಂತೆ.

ದೂರ-ಸನಿಹ ಆಧಾರ ಹಿಡಿದು ಹೊರಟಿಲ್ಲ ನಮ್ಮ ದಾರಿ
ಸುತ್ತು ಬಳಸಿದರು ಹತ್ತು ಗಡಿಯ ಬತ್ತಿಗಳ ಕುಡಿಯ ಚಾಚಿ
ನೆಳಲು-ಬೆಳಕು ನಸುನಕ್ಕು ಮಿಕ್ಕ ಅಕ್ಕರತೆ ಬೆಂಬಲಾಗಿ
ತುಂಬು ನಂಬಿಗೆಯ ಬುತ್ತಿ ಬಿಚ್ಚುವೆವು ಸ್ವಸ್ಥಚಿತ್ತರಾಗಿ

'ಗುಡಿಸಿಲಿಂದ ಗಂಗೋತ್ರಿಯವರೆಗಿ'ನ ಜವರೇಗೌಡರ 'ಹೋರಾಟದ ಬದುಕು' ಅನೇಕ ಕುಗ್ಗಿದ ಜೀವಗಳಿಗೆ ಚೇತನವನ್ನೂ, ಬೆಳೆಯುವ ಮನಸ್ಸುಗಳಿಗೆ ಭರವಸೆಯನ್ನೂ, ಹೋರಾಟದ ಕೆಚ್ಚನ್ನೂ ತುಂಬುವಂಥದು. "ದುಡಿಮೆಯೇ ಸುಖ, ಅದೇ ಬಾಳು, ಅದೇ ಕಾವ್ಯ, ಅದೇ ಮುಕ್ತಿ" ಎನ್ನುವ ಅವರ ಹೃದಯಗೀತ ಅವರು ಕೈಹಿಡಿದು ಕಡೆಗಾಣಿಸಿದ ಯಾವ ಕೆಲಸದಿಂದಲೂ ಹೊರಹೊಮ್ಮುವಂಥದು. ತಮ್ಮ ಸ್ವಭಾವದ ದೌರ್ಬಲ್ಯಗಳನ್ನೂ ಕೆಲವು ಸಲ ಸಾಮರ್ಥ್ಯವಾಗಿ ಪರಿವರ್ತಿಸಿ, ಹಲಬಗೆಯ ವಿರೋಧಗಳನ್ನು ಎದುರಿಸಿಯೂ ಕನ್ನಡದ ಮೇಲ್ಮೆಗಾಗಿ ಹಗಲಿರುಳು ಅವರು ಪರಿಶ್ರಮಿಸಿದ್ದಾರೆ. "ವಿರೋಧ ಶಕ್ತಿಗಳಿಲ್ಲದಿದ್ದರೆ, ಬಾಳಿನಲ್ಲಿ ಹೋರಾಟವೂ ಇಲ್ಲ, ರುಚಿಶುಚಿಗಳೂ ಇಲ್ಲ" ಎಂಬುದು ಅವರ ಅನುಭವದ ಆಣಿಮುತ್ತು.

ಸಾಹಿತ್ಯ ಸೃಷ್ಟಿಗಿಂತ ಕನ್ನಡ ಪ್ರಚಾರ ಜರೂರಿನ ಕಾರ್ಯವೆಂದು ಅವರು ಭಾವಿಸಿದ್ದರೂ ಕನ್ನಡ ಗದ್ಯ ಸಾಹಿತ್ಯಕ್ಕೆ ಅವರು ನೀಡಿರುವ ಕಾಣಿಕೆ ಅತ್ಯಂತ ಗಮನಾರ್ಹವಾದದ್ದು. 'ಹದವಾದ, ಬಿಗಿಯಾದ, ಬನಿಯಾದ ಗದ್ಯ'ವನ್ನು ಜವರೇಗೌಡರು ಸಾಧಿಸಬೇಕಾದರೆ ಭಾಷಾಶಾಸ್ತ್ರದಲ್ಲಿ ಅವರಿಗಿರುವ ಆಸಕ್ತಿಯ ಜೊತೆಗೆ, ಹಳ್ಳಿಯ ಬದುಕಿನಲ್ಲಿ ಸಹಜವಾಗಿ ಬಳಕೆಗೊಳ್ಳುವ ಅನೇಕ

ಕಸುವುಳ್ಳ ಪದಗಳನ್ನು ಹದವರಿತು ಬಳಸುವ ಜಾಣ್ಮೆಯೂ ಕಾರಣವಾಗಿದೆ. ಈಗ್ಗೆ ಸುಮಾರು ಇಪ್ಪತ್ತು ವರ್ಷಗಳ ಹಿಂದೆ ಧಾರವಾಡದ ಪುಸ್ತಕದಂಗಡಿಯೊಂದರಲ್ಲಿ ಹೊಸ ಪುಸ್ತಕಗಳನ್ನು ಅವಲೋಕಿಸುತ್ತಿರುವಾಗ, ಮಿತ್ರರಾದ ಶ್ರೀ ಎಂ. ಶಂಕರ ಅವರು (ಅವರು ಆಗ ಧಾರವಾಡ ಆಕಾಶವಾಣಿಯಲ್ಲಿ ಕಾರ್ಯಕ್ರಮ ನಿರ್ವಾಹಕರಾಗಿದ್ದರು) ಜವರೇಗೌಡರ ಪುಸ್ತಕವೊಂದನ್ನು ತೆರೆದು, ಅಲ್ಲಿ ಬಳಸಿದ 'ಗೆಬರು' ಪದದ ಕಡೆಗೆ ನನ್ನ ಲಕ್ಷ್ಯವನ್ನು ಸೆಳೆದು ಅವರ ಗದ್ಯಶೈಲಿಯ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿದ್ದು ನನಗಿನ್ನೂ ನೆನಪಿದೆ. ಭಾಷಾಂತರ ಕಲೆಯಲ್ಲಿ ಅವರು ಪಡೆದಿರುವ ಸಿದ್ಧಿ ಹಾಗೂ ತೋರಿಸಿರುವ ದಾರಿ ಅನುಕರಣೀಯವಾದದ್ದು. ವ್ಯಕ್ತಿಯ ಸಮಗ್ರ ಜೀವನದ ಸ್ವರೂಪವನ್ನು ಸ್ವಾರಸ್ಯಪೂರ್ಣವಾಗಿ ಮೂರ್ತಿಗೊಳಿಸುವ ಜೀವನ ಚರಿತ್ರೆಯ ಬರವಣಿಗೆ ಅವರಿಗೆ ತಾನಾಗಿ ಒಲಿದು ಬಂದ ಸಾಹಿತ್ಯ ಪ್ರಕಾರವಾಗಿದೆ. ಪ್ರವಾಸ ಸಾಹಿತ್ಯಕ್ಕೂ ಈಚೆಗೆ ಅವರು ತಮ್ಮದೇ ಆದ ಕಾಣಿಕೆಯನ್ನು ಸಲ್ಲಿಸಿದ್ದಾರೆ.

ಜಾನಪದ ಅದೆಷ್ಟು ವಿಶಾಲ, ವ್ಯಾಪಕ, ಸರ್ವಾತ್ಮಕ ಎಂಬುದನ್ನು ತಮ್ಮ 'ಜಾನಪದ ಅಧ್ಯಯನ'ದಿಂದ ಸಮರ್ಥವಾಗಿ ತೋರಿಸಿಕೊಟ್ಟಿದ್ದಾರೆ. ಶಿಷ್ಟ ಸಾಹಿತ್ಯದಲ್ಲಿ ಕಾಣೆಯಾದ ಸಾಹಿತ್ಯದ ಕೆಲವು ಮುಖಗಳನ್ನು ಜಾನಪದದಲ್ಲಿ ಕಾಣಬಹುದಾಗಿದ್ದು ಅವೆರಡೂ ಪರಸ್ಪರ ಪೂರಕವೆಂಬ ಅವರ ಅಭಿಪ್ರಾಯ ವಿಚಾರಯೋಗ್ಯವಾದದ್ದು. ಪ್ರಾಚೀನ ಕಾವ್ಯಗಳನ್ನು ಕುರಿತ ಸಾಂಸ್ಕೃತಿಕ ಅಧ್ಯಯನಕ್ಕೆ 'ಗದುಗಿನ ಭಾರತ : ಒಂದು ಸಾಂಸ್ಕೃತಿಕ ಅಧ್ಯಯನ' ಕನ್ನಡದಲ್ಲಿ ಪ್ರಥಮ ಪ್ರಯತ್ನವಷ್ಟೇ ಅಲ್ಲ, ಈ ದಿಸೆಯಲ್ಲಿ ಕಾರ್ಯ ಮಾಡಬೇಕೆನ್ನುವವರು ಅವಶ್ಯವಾಗಿ ಗಮನಿಸಬಹುದಾದ ಗ್ರಂಥವಾಗಿದೆ. ಕನ್ನಡ ಗದ್ಯಶೈಲಿಯ ಸ್ವರೂಪ ಲಕ್ಷಣವನ್ನು ಐತಿಹಾಸಿಕ ಹಿನ್ನೆಲೆಯಲ್ಲಿ ಚರ್ಚಿಸಿರುವ 'ಗದ್ಯಶೈಲಿ' 'ಗದ್ಯಶಿಲ್ಪಿ'ಯೆನಿಸಿದ ಅವರ ಅರ್ಹತೆಯನ್ನು ಎತ್ತಿ ತೋರಿಸುತ್ತದೆ. ಈಚಿನ ಈ ಮೂರು ಮಹತ್ವದ ಕೃತಿಗಳು ಅವರ ಅಧ್ಯಯನ ಶ್ರದ್ಧೆಗೆ, ಸಮಗ್ರ ವಿವೇಚನೆಗೆ ಸಾಕ್ಷಿಯಾಗಿವೆ. ಅನೇಕ ಕಾರ್ಯಗಳ ಒತ್ತಡದಲ್ಲಿಯೂ ತಮ್ಮ ಬರವಣಿಗೆಗೆ ಎಲ್ಲಿಯೂ ಧಕ್ಕೆಯಾಗದಂತೆ, ವ್ಯತ್ಯಯ ಬಾರದಂತೆ ಅವರು ನಡೆಸಿಕೊಂಡು ಬಂದುದು ನನ್ನಂಥವನಿಗೆ ಆಶ್ಚರ್ಯದ ಸಂಗತಿಯೇ. ಒಂದು ಬಗೆಯ ಕಟ್ಟುನಿಟ್ಟಿನಿಂದ, ಶಿಸ್ತಿನಿಂದ ಹಾಗೂ ಆತ್ಮವಿಶ್ವಾಸದಿಂದ ಅವರು ಈ ಕಾರ್ಯದಲ್ಲಿ ತೊಡಗಿರುವುದೇ ಅದಕ್ಕೆ ಮುಖ್ಯ ಕಾರಣವೆನ್ನಬಹುದು. ಈ ಅರುವತ್ತರ ಹೊತ್ತಿನಲ್ಲಿ ತಮ್ಮ ಪಾಡಿಗೆ ತಾವಿರುವಾಗ, ಅವರ ಮಾಗಿದ ಅನುಭವ ಇನ್ನೂ ಹಲವಾರು ಕೃತಿಗಳ ರೂಪದಲ್ಲಿ ಕಾಣಿಸಿಕೊಳ್ಳುವುದರಲ್ಲಿ ನನಗೆ ಸಂದೇಹವಿಲ್ಲ.

'ಕನ್ನಡ, ಉತ್ಸಾಹ, ಕ್ರಿಯಾಶೀಲತೆ' ಇವು ಮೂರು ಜವರೇಗೌಡರ ಯಶಸ್ಸಿನ ಗುಟ್ಟುಗಳೆಂದು ಅವರ ವಯಸ್ಸಿನ ಐವತ್ತರ ಸಂದರ್ಭದಲ್ಲಿ ಗುರುತಿಸಿದ ಡಾ. ಹಾ.ಮಾ. ನಾಯಕರು, ಅವರು 'ಕನ್ನಡ ಕಾಯಕದ ಸಂಕೇತ'ವಾಗಿರುವುದನ್ನೂ ಎತ್ತಿ ತೋರಿಸಿದ್ದರು. ಹತ್ತು ವರುಷಗಳನಂತರ ಮತ್ತೆ ಹೊರಳಿ ನೋಡಿದಾಗ, ಅವರು ಮಾಡಿದ ಇನ್ನೂ ಎಷ್ಟೋ ಕಾರ್ಯಗಳ ಮಹತ್ವ ಇಂದು ಒಡೆದು ಕಾಣಬಹುದು. 'ನನ್ನೆಲ್ಲ ತಪಶ್ಶಕ್ತಿಯನ್ನು ಅಥವಾ ಪ್ರಾರ್ಥನಾಶಕ್ತಿಯನ್ನು ಕನ್ನಡದ ಸೇವೆಗಾಗಿ ಮೀಸಲಿಡುತ್ತೇನೆ' ಎಂದಿರುವ ಕವಿವರ್ಯ ಕುವೆಂಪು ಅವರಂಥ ಗುರು ಜವರೇಗೌಡರಿಗೆ

ದೊರಕಿದ್ದಾರೆ. ಆದುದರಿಂದ ಅವರ ಜೀವನದ ಗುರಿಯೂ ನಿಚ್ಚಳವಾಗಿದೆ. ಅಕ್ಕಮಹಾದೇವಿಯು ಚೆನ್ನಮಲ್ಲಿಕಾರ್ಜುನನಲ್ಲಿಯ ತನ್ನ ಅಚಲ ನಿಷ್ಠೆಯನ್ನು ಒಂದು ವಚನದಲ್ಲಿ ಹೀಗೆ ವ್ಯಕ್ತಪಡಿಸಿದ್ದಾಳೆ.

ನಚ್ಚುಗೆ ಮನ ನಿಮ್ಮಲ್ಲಿ , ಮಚ್ಚುಗೆ ಮನ ನಿಮ್ಮಲ್ಲಿ !
ಸಲ್ಲುಗೆ ಮನ ನಿಮ್ಮಲ್ಲಿ!, ಸೋಲುಗೆ ಮನ ನಿಮ್ಮಲ್ಲಿ!
ಅಳಲುಗೆ ಮನ ನಿಮ್ಮಲ್ಲಿ, ಬಳಲುಗೆ ಮನ ನಿಮ್ಮಲ್ಲಿ!
ಕರಗುವ ಮನ ನಿಮ್ಮಲ್ಲಿ, ಕೊರಗುವ ಮನ ನಿಮ್ಮಲ್ಲಿ!
ಎನ್ನ ಪಂಚೇಂದ್ರಿಯಂಗಳೂ ಕಬ್ಬುನ ಉಂಡ ನೀರಿನಂತೆ
ನಿಮ್ಮಲ್ಲಿ ಬೆರಸುಗೆ ಚೆನ್ನಮಲ್ಲಿಕಾರ್ಜುನಯ್ಯ.

ಕುವೆಂಪು ಬಗೆಗೆ, ಕನ್ನಡದ ಬಗೆಗೆ ಜವರೇಗೌಡರಿಗೂ ಅದೇ ನಿಷ್ಠೆ. ಯಾಕೆಂದರೆ, ಕನ್ನಡದ ಗೆಲುವಿಗಾಗಿ ಎಂಥ ಅವಮಾನವನ್ನಾದರೂ ಸಹಿಸಬಲ್ಲ ಅವರು ತಮಗಾಗಿ ಸಾಧಿಸಿಕೊಳ್ಳಬೇಕಾದದ್ದು ಬೇರಾವುದೂ ಇಲ್ಲ

('ರಸಪಕ್ಷಿ' ೧೯೮೦)

(ಸಾಹಿತ್ಯ ಸಮಾಹಿತ : ೨೦೦೭)

## ೧೦

## ಹಲವು ಹೋರಾಟಗಳ ಕಲಿ : ಅ.ನ.ಕೃ.

ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಅ.ನ.ಕೃ. ಒಂದು ಅದ್ಭುತ ಚೇತನ. ಅವರನ್ನು ಅವರ ಸಾಹಿತ್ಯವನ್ನು ಮೆಚ್ಚಿಕೊಂಡು ಸ್ಫೂರ್ತಿ ಪಡೆದ ತರುಣರ ಸಂಖ್ಯೆ ಅಪಾರ. ಅವರ ಚಾಕಚಕ್ಯತೆಯನ್ನು, ಮಾತಿನ ಚತುರತೆಯನ್ನು, ಸೃಜನಾತ್ಮಕ ಪ್ರತಿಭೆಯನ್ನು, ಉದಾರ ಮಾನೋಧರ್ಮವನ್ನು ಬಲ್ಲ ಹಿರಿಯರೂ ನಾಡಿನಲ್ಲಿ ಅಲ್ಲಲ್ಲಿ ಇದ್ದಾರೆ. "ಹಿರಿಯರ ಪೈಕಿ ಬಿ.ಎಂ.ಶ್ರೀ ಮತ್ತಿತರರು ದುಡಿದ ರೀತಿಯಲ್ಲಿ ಅ.ನ.ಕೃ. ದುಡಿದರು" ಎಂದು ಅವರ ಸಾಹಿತ್ಯ ಸೇವೆಯನ್ನು ಸ್ಮರಿಸುತ್ತ ನುಡಿದ ಕುವೆಂಪು ನಿಜಕ್ಕೂ ದೊಡ್ಡ ಗೌರವವನ್ನು ಅವರಿಗೆ ಸಲ್ಲಿಸಿದ್ದಾರೆ. ಸದಾ ತಾರುಣ್ಯದ ಪ್ರತೀಕವಾಗಿದ್ದ ಅ.ನ.ಕೃ. ತಮ್ಮ ದೃಢವಾದ ನಿಲುಮೆ, ನಿರಂತರ ಹೋರಾಟದ ಮನೋಭಾವದಿಂದ ಕನ್ನಡದ ದೀಪವನ್ನು ಉಜ್ವಲವಾಗಿ ಬೆಳಗಿಸುವ ಧ್ಯೇಯವಾದಿತ್ವದಲ್ಲಿ ಎಣ್ಣೆ, ಬತ್ತಿ ಎರಡೂ ಆದರು. ಸರಸವಾದ ಸುಭಗವಾದ ತಮ್ಮ ಬರವಣಿಗೆಯಿಂದ ಸಹಸ್ರ ಸಹಸ್ರ ಕನ್ನಡಿಗರಲ್ಲಿ ಓದುವ ಅಭಿರುಚಿಯನ್ನು ಹುಟ್ಟಿಸಿದರು. ಈ ಹುಟ್ಟು ಕಥೆಗಾರ ನಾಡಿನ ಹಿತರಕ್ಷಣೆಯ ಸಂದರ್ಭದಲ್ಲಿ ಯಾರ ಅಡೆತಡೆಯನ್ನೂ ಲೆಕ್ಕಿಸದೆ, ಯಾರ ಮಾತಿಗೂ ಸೊಪ್ಪು ಹಾಕದೆ, ಯಾವ ಸಂಘ ಸಂಸ್ಥೆ ಸಂಪ್ರದಾಯಗಳಿಗೂ ಶರಣಾಗದೆ ಎದೆಗಾರಿಕೆಯಿಂದ ಮುನ್ನುಗ್ಗಿ ಹೋರಾಡಿದರು. ಆ ಧೈರ್ಯ ಆ ಕನ್ನಡತನದ ಕೆಚ್ಚು ಅ.ನ.ಕೃ ಅವರಿಗೇ ಮೀಸಲು. ಅನೇಕ ಪ್ರಸಂಗಗಳಲ್ಲಿ ಎದುರು ಪಕ್ಷದವರ ಧ್ಯೇಯಧೋರಣೆಗಳನ್ನು, ಅಭಿಪ್ರಾಯ, ಅನುಮಾನಗಳನ್ನು ಅವರು ಟೀಕಿಸುತ್ತಿದ್ದರೇ ವಿನಃ ವ್ಯಕ್ತಿ ದ್ವೇಷವಾಗಲಿ, ಪೂರ್ವಗ್ರಹಗಳಾಗಲಿ ಅವರನ್ನು ಮುಟ್ಟುತ್ತಿದ್ದಿಲ್ಲ. ಎಂಥ ವೈರಿಯೂ ಮೆಚ್ಚಬಹುದಾದ ಸ್ನೇಹ ಔದಾರ್ಯಗಳ ಬಂಗಾರದ ಖನಿಯಾಗಿದ್ದರು. "ಮಾನವ ರೂಪದ ಮಾನವೀಯ ಗುಣಗಳ ಡೈನಮೊ ಅ.ನ.ಕೃ." ಎಂದು ಅವರನ್ನು ಮಿತ್ರರೊಬ್ಬರು (ಎಲ್.ಎಸ್. ಶೇಷಗಿರಿರಾವ್) ಕರೆದಿರುವಲ್ಲಿ ಯಾವ ಅತಿಶಯೋಕ್ತಿಯೂ ಇಲ್ಲ. ಇಂಥ ವ್ಯಕ್ತಿಯ ಕಣ್ಮರೆಯಿಂದ ಕನ್ನಡ ನಾಡು-ನುಡಿಗಳಿಗಾದ ನಷ್ಟ ಅಪಾರ ಎಂದರೆ ಎಳ್ಳಷ್ಟೂ ಔಪಚಾರಿಕವೆನಿಸದು. ಕನ್ನಡತನದ ಜನ್ನಗುದುರೆಯಾಗಿ ಕೈಕೊಂಡ ಕಾರ್ಯದಲ್ಲೆಲ್ಲ ಸಾಹಸವನ್ನು ಮೆರೆದು, ನಿಸ್ಸಂಕೋಚವಾದ ಬಾಳನ್ನು ಬಾಳಿ, ಜನಾನುರಾಗದ ಶಿಖರವನ್ನು ತಲುಪಿ, ಬಹುಮುಖವಾದ ವರ್ಣಮಯ ವ್ಯಕ್ತಿತ್ವವನ್ನು ಪಡೆದಿದ್ದ ಅ.ನ.ಕೃ.ರಂಥ ವ್ಯಕ್ತಿ ಇನ್ನೂ ಬಹಳ ಕಾಲ ನಮ್ಮ ಮಧ್ಯದಲ್ಲಿರಬೇಕಾಗಿತ್ತು ಎಂದು ಯಾರು ಬಯಸರು?

ಈ ಸಂದರ್ಭದಲ್ಲಿ ಅ.ನ.ಕೃ. ಅವರೊಂದಿಗೆ ಸಂಪರ್ಕ ಒದಗಿದ ಹಲವಾರು ಸನ್ನಿವೇಶಗಳು ನನ್ನ ಮನಸ್ಸಿನೆದುರು ಮೂಡಿನಿಲ್ಲುತ್ತಿವೆ. ಅ.ನ.ಕೃ. ಧಾರವಾಡಕ್ಕೆ ಬಂದಾಗ ಹೆಚ್ಚಾಗಿ ಟಿ.ಡಿ. ಶಿವಲಿಂಗಯ್ಯನವರಲ್ಲಿಯೇ ವಾಸ ಮಾಡುತ್ತಿದ್ದರು. ಸಂಜೆಯ ಹೊತ್ತು ಅವರ ಪುಸ್ತಕದಂಗಡಿ 'ಸಾಹಿತ್ಯಮಂದಿರ'ದಲ್ಲಿ ಗೆಳೆಯರೊಡನೆ ಹರಟೆ ಹೊಡೆಯುತ್ತ ಅ.ನ.ಕೃ. ಕುಳಿತುಕೊಳ್ಳುವ ರೂಢಿ. ಒಮ್ಮೆ ಯಾವುದೋ ಪುಸ್ತಕವನ್ನು ಕೊಳ್ಳಲು 'ಸಾಹಿತ್ಯ ಮಂದಿರ'ಕ್ಕೆ ನಾನು ಹೋದಾಗ ಅವರ ಪರಿಚಯವಾಯಿತು. (ನಾನು ಹಾಯಸ್ಕೂಲ ವಿದ್ಯಾರ್ಥಿಯಿದ್ದಾಗಲೇ ಅವರನ್ನು ನೋಡಿದ್ದೇನಾದರೂ ಅವರೊಡನೆ ಮಾತನಾಡಿ ಪರಿಚಯವಿರಲಿಲ್ಲ). ನಾನಾಗ ಬಿ.ಎ. ದಲ್ಲಿ ಓದುತ್ತಿದ್ದೆ (೧೯೫೦). ಆ ಹೊತ್ತಿಗೆ ಪ್ರಕಟವಾಗಿದ್ದ ನನ್ನ ಕವಿತೆಗಳಲ್ಲಿ ಕೆಲವನ್ನವರು ಓದಿದ್ದರು. ಅದೇ ವಾರ 'ಜನಪ್ರಗತಿ'ಯಲ್ಲಿ ಪ್ರಕಟವಾಗಿದ್ದ ನನ್ನ 'ಶ್ವೇತಪುತ್ರಿ' ಕವಿತೆಯ ಬಗ್ಗೆ ಮೆಚ್ಚುಗೆ ಸೂಚಿಸಿದರು. ಅದು ಸಿಗರೇಟನ್ನು ಕುರಿತದ್ದಾಗಿತ್ತು. ಮರುದಿನ ಅವರು ಮಾಳಮಡ್ಡಿಯಲ್ಲಿದ್ದ ನಮ್ಮ ಅಭ್ಯಾಸದ ಕೋಣೆಗೆ ಬಂದು ಮೂರು-ನಾಲ್ಕು ತಾಸು ಹರಟೆಹೊಡೆದರು. ನಾನು ಸ್ಟೋವಿನ ಮೇಲೆ ಚಹಾ ಮಾಡಿಕೊಟ್ಟೆ. ಅಂದಿನ ಮಾತುಕತೆಯಲ್ಲಿ ಹಳಗನ್ನಡ ಕಾವ್ಯ, ಬಸವಣ್ಣ, ಪ್ರಗತಿಶೀಲ ಸಾಹಿತ್ಯ, ಕಥೆ-ಕಾದಂಬರಿ, ನಾಡಹಬ್ಬದಲ್ಲಿ ಕನ್ನಡ ನಾಡಿನ ಸುತ್ತಾಟ, ರಬಕವಿ ಸಾಹಿತ್ಯ ಸಮ್ಮೇಳನ, ಮಲ್ಲಿಕಾರ್ಜುನ ಮನ್ಸೂರರ ಸಂಗೀತ ಕಲೆ - ಇತ್ಯಾದಿ ಹಲವಾರು ವಿಷಯಗಳು ಹಾಯ್ದುಹೋದವು. ಕಿರಿಯರೊಡನೆ ಕಿರಿಯರಾಗಿ ಸ್ನೇಹದಿಂದ, ಅಸ್ವಾಭಾವಿಕತೆಗೆ ಎಡೆಯಿರದಂತೆ ವರ್ತಿಸಿದ ಅವರ ಬಗ್ಗೆ ನಿಜವಾಗಿಯೂ ನನ್ನಲ್ಲಿ ಪ್ರೀತಿ ಗೌರವಗಳುಂಟಾದವು. ಅವರು ತಿರುಗಿ ಬೆಂಗಳೂರಿಗೆ ಹೋದ ಮೂರು ನಾಲ್ಕು ದಿನಗಳಲ್ಲಿ ಕೃತಜ್ಞತೆ ಸೂಚಿಸಿ ಕಾಗದ ಬರೆದಿದ್ದರು. ಇದು ಅ.ನ.ಕೃ. ಅವರ ಹಿರಿಯ ಗುಣ.

೧೯೬೦ರಲ್ಲಿ ಮಣಿಪಾಲದಲ್ಲಿ ನೆರವೇರಲಿದ್ದ ಕನ್ನಡ ಸಾಹಿತ್ಯ ಸಮ್ಮೇಳನದ ೪೯ನೆಯ ಅಧಿವೇಶನದ ಅಧ್ಯಕ್ಷಪದದ ಆಯ್ಕೆಗೆ ಸಂಬಂಧಿಸಿ ಪತ್ರಿಕೆಗಳಲ್ಲಿ ತುಂಬ ವಾದ, ಚರ್ಚೆ ನಡೆಯಿತು. ಈ ಹಿಂದೆ ಯಾವ ಸಮ್ಮೇಳನದ ಕಾಲಕ್ಕೂ ಜನತೆ ಈ ಬಗೆಯ ವಿಶಿಷ್ಟ ಪ್ರತಿಕ್ರಿಯೆ ವ್ಯಕ್ತಪಡಿಸಿರಲಿಲ್ಲ. ಅಂತೂ ಅ.ನ. ಕೃಷ್ಣರಾಯರು ಸರ್ವಾನುಮತದ ನಿರ್ಣಯದಿಂದ ಸಮ್ಮೇಳನಾಧ್ಯಕ್ಷರಾಗಿ ಆಯ್ಕೆಯಾದುದು ಅವರ ಅಭಿಮಾನಿಗಳಿಗಷ್ಟೇ ಅಲ್ಲದೆ ಸರ್ವ ಕನ್ನಡಿಗರಿಗೂ ಸಂತೋಷದ ಸಂಗತಿಯೆನಿಸಿತು. ಅದುವರೆಗೆ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪೀಠಕ್ಕೇರಿದವರಲ್ಲಿ ಡಿ.ವಿ.ಜಿ. ಅವರ ಅನಂತರ ಅ.ನ.ಕೃ. ಅವರೇ ವಯಸ್ಸಿನಿಂದ ಕಿರಿಯರು. ಸಮ್ಮೇಳನಾಧ್ಯಕ್ಷರಾದವರಿಗೆ ಪೌರಸನ್ಮಾನ ದೊರಕುತ್ತಿರುವುದೂ ಅದೇ ಮೊದಲ ಬಾರಿ. ಅ.ನ.ಕೃ. ಪಡೆದಿದ್ದ ಜನಪ್ರಿಯತೆಗೆ ಇದಕ್ಕಿಂತ ಬೇರೆ ನಿದರ್ಶನ ಬೇಕಿಲ್ಲ. ಆ ಸಂದರ್ಭದಲ್ಲಿ ಹುಬ್ಬಳ್ಳಿ-ಧಾರವಾಡಗಳಲ್ಲಿ ಏರ್ಪಟ್ಟ ಸತ್ಕಾರ ಸಮಾರಂಭಗಳಲ್ಲಿ ಮಾತನಾಡುತ್ತ ಅ.ನ.ಕೃ. ಒಂದು ಮಾತನ್ನು ಹೇಳಿದರು. "ನಮ್ಮ ಜನಜೀವನದಲ್ಲಿ ಒಂದು ಅಧ್ಯಕ್ಷ ಪದವಿ ಬಂದರೆ, ಒಂದು ಪಾರಿತೋಷಕ ಬಂದರೆ ಕಥೆ ಮುಗಿದು ಹೋಯಿತು. ಆದರೆ ನಾನು ಅಧ್ಯಕ್ಷನಾಗಿ ಸಾಯುವುದಕ್ಕಿಂತ ಲೇಖಕನಾಗಿ ಬದುಕಬೇಕೆಂದಿದ್ದೇನೆ" ಕ್ರಿಯಾಶೀಲ ಲೇಖಕನಿಗೆ ಒಪ್ಪತಕ್ಕ ಮಾತುಗಳೇ. ಅ.ನ.ಕೃ. ಸಾಹಿತ್ಯ

ಕ್ಷೇತ್ರದಲ್ಲಿ ಕಾಲಿಟ್ಟಂದಿನಿಂದಲೂ ಒಂದಲ್ಲ ಒಂದು ರೀತಿಯಿಂದ ತಮ್ಮ ಕಲಿತನವನ್ನು ತೋರಿಸುತ್ತಲೇ ಬಂದಿದ್ದಾರೆ. 'ನನ್ನನ್ನು ನಾನೇ ಕಂಡೆ' ಎಂಬ ಹೊತ್ತಿಗೆಯಲ್ಲಿ ಅವರು ತಮ್ಮನ್ನು 'ಹಲವು ಹೋರಾಟಗಳ ಕಲಿ' ಎಂದು ಕರೆದುಕೊಂಡಿರುವುದು ಯಥಾರ್ಥವಾಗಿದೆ.

ಅ.ನ.ಕೃ. ತಮ್ಮ ಮೊಟ್ಟಮೊದಲನೆಯ ಕೃತಿ 'ಮದುವೆಯೋ ಮನೆ ಹಾಳೋ' ಎಂಬ ನಾಟಕದಿಂದ ೧೯೨೪ರಲ್ಲಿ ಸಾಹಿತ್ಯ ಕ್ಷೇತ್ರದಲ್ಲಿ ಕಾಲಿಟ್ಟರು. ಆಗ ಅವರದು ೧೬ನೆಯ ವಯಸ್ಸು. ಅಂದಿನಿಂದ ತಮ್ಮ ಕೊನೆಗಾಲದವರೆಗೂ ನಾಡುನುಡಿಗಳ ಸೇವೆಯನ್ನು ಅವರು ಅಖಂಡವಾಗಿ ಸಾಗಿಸಿಕೊಂಡು ಬಂದರು. ಬಾಲ್ಯದಿಂದಲೇ ಕನ್ನಡ ರಂಗಭೂಮಿಯ ಸಾಮ್ರಾಟ ವರದಾಚಾರ್ ಹಾಗೂ ಬಹುಮುಖ ಪ್ರತಿಭೆಯ ಪಂಡಿತ ತಾರಾನಾಥರಿಂದ ಅ.ನ.ಕೃ. ಪ್ರಭಾವಿತರಾಗಿದ್ದರು. "ಹಾಯಸ್ಕೂಲ್ ಮುಗಿಸುವ ವೇಳೆಗೆ ಇಂಗ್ಲಿಷ್, ಫ್ರೆಂಚ್, ಗ್ರೀಕ್, ಪರ್ಶಿಯನ್, ಕನ್ನಡ ಸಾಹಿತ್ಯಗಳ ಸಾಕಷ್ಟು ಪರಿಚಯ ನನಗಾಗಿತ್ತು" ಎಂದು ಒಂದೆಡೆ ಅವರು ಹೇಳಿದ್ದಾರೆ. ಜೊತೆಯಲ್ಲಿ "ಇಂಗ್ಲಿಷ್ ಸಾಹಿತ್ಯವನ್ನನುಕರಿಸದೆ ಅದರ ಸತ್ವದಂಥ ಸತ್ವವನ್ನು ಕನ್ನಡ ಸಾಹಿತ್ಯಕ್ಕೆ ತಂದುಕೊಡಬೇಕು. ಗಗನದಲ್ಲಿ ವಿಹರಿಸುತ್ತಿರುವ ಸಾಹಿತ್ಯ ಭದ್ರವಾದ ಬುನಾದಿಯ ಮೇಲೆ ಇಹಲೋಕದಲ್ಲಿಯೂ ನಿಲ್ಲಬೇಕು" ಎಂಬ ಪಣ ಅವರದಾಗಿತ್ತು. ಅವರ ಆಸ್ಥೆ ಸಾಹಿತ್ಯವೊಂದಕ್ಕೇ ಮೀಸಲಾಗಿರಲಿಲ್ಲ. ಇಂಗ್ಲಿಷಿನಲ್ಲಿ ಹಾಗೂ ಇತರ ಭಾರತೀಯ ಭಾಷೆಗಳಲ್ಲಿಯ ಸಾಹಿತ್ಯೇತರ ವಿಷಯಗಳ ಅನೇಕ ಗ್ರಂಥಗಳನ್ನು ಅವರು ತಿರುವಿ ಹಾಕಿದರು. ಸ್ವಾಮಿ ವಿವೇಕಾನಂದರ ವೀರವಾಣಿಯಿಂದ ಸ್ಫೂರ್ತಿ ಪಡೆದ ಅ.ನ.ಕೃ. ತಮ್ಮ ಅವ್ಯಾಹತವಾದ ಲೇಖನಿಯಿಂದಲೂ ವಾಗ್ವೈಖರಿಯಿಂದಲೂ ಜನತೆಯನ್ನು ಬಡಿದೆಬ್ಬಿಸಿ ಗುರಿಯ ಕಡೆಗೆ ಮುನ್ನಡೆಸಲು ಅಣಿಯಾದರು. ಕನ್ನಡದಲ್ಲಿ ಬರೆಯುವುದು ಒಂದು ರೀತಿ ಅಗೌರವ ಎಂಬ ಭಾವನೆ ಹರಡಿದ್ದ ಕಾಲ ಹಾಗೂ ಕನ್ನಡಿಗರಲ್ಲಿ ಓದುವ ಹವ್ಯಾಸ ಬೆಳೆದಿರದಿದ್ದ ಕಾಲದಲ್ಲಿ ಅವರು ತಮ್ಮ ಬರವಣಿಗೆಯನ್ನು ಪ್ರಾರಂಭಿಸಿದರು. ತಮ್ಮ ವಿಚಾರಗಳಲ್ಲಿಯೇ ಆಸಕ್ತರಾದ ಸಂಪ್ರದಾಯವಾದಿಗಳ ರೂಢಿಬದ್ಧ ಶೃಂಖಲೆಯಿಂದ ಆಧುನಿಕ ಕನ್ನಡ ಸಾಹಿತ್ಯವನ್ನು ಮುಕ್ತಗೊಳಿಸಿ ಮುನ್ನಡೆಸಿದ ಶ್ರೇಯಸ್ಸು ಅ.ನ.ಕೃ. ಅವರಿಗೆ ಸಲ್ಲುತ್ತದೆ. ಕನ್ನಡ ಸಾಹಿತ್ಯ ಶೈಲಿಯನ್ನು ನಿರ್ಮಲವಾಗಿ ಸುಭಗವಾಗಿ ರೂಪುಗೊಳಿಸಿದ ಕೆಲವೇ ಗಣ್ಯ ಲೇಖಕರಲ್ಲಿ ಅವರೊಬ್ಬರು. ಹಿಂದಿನ ಕವಿಗಳ ಮೇಲೆಯೇ ಕೈಯೂರಿ ಹೆಮ್ಮೆಪಟ್ಟುಕೊಳ್ಳುತ್ತ ಅರೆನಿದ್ದೆಯಲ್ಲಿದ್ದ ಕನ್ನಡ ಸಾಹಿತ್ಯಾಭಿಮಾನಿಗಳಿಗೆ ತಮ್ಮದೇ ಆದ ಹೊಸ ಗಳಿಕೆಯನ್ನು ಅವರು ಕನ್ನಡಕ್ಕೆ ನೀಡಿದರು.

ಕಾದಂಬರಿ ಸಾರ್ವಭೌಮರೆಂದು ಹೆಸರಾಗಿದ್ದರೂ ಸಣ್ಣಕತೆ, ಪ್ರಬಂಧ, ವಿಮರ್ಶೆ, ಜೀವನ ಚರಿತ್ರೆ, ಕಲಾವಿವೇಚನೆ ಇತ್ಯಾದಿ ಸಕಲ ಪ್ರಕಾರಗಳಲ್ಲಿಯೂ ಕೃಷಿಗೈದು ಸುಮಾರು ಇನ್ನೂರು ಗ್ರಂಥಗಳನ್ನು ಅವರು ಕನ್ನಡಕ್ಕೆ ನೀಡಿದ್ದಾರೆ. ಇವುಗಳಲ್ಲಿ ಅರ್ಧಕ್ಕೂ ಮಿಕ್ಕಿ ಕಾದಂಬರಿಗಳೇ ಆಗಿರುವುದು ಅವರ ಕಲೆಯ ಹಾಗೂ ಜೀವನಾನುಭವದ ಸರ್ವತೋಮುಖ ಅಭಿವ್ಯಕ್ತಿಗೆ ಕಾದಂಬರಿಯೇ ಪ್ರಮುಖ ಸಾಧನವಾಗಿದ್ದನ್ನು ಎತ್ತಿ ತೋರಿಸುತ್ತದೆ. ಅ.ನ.ಕೃ. ವ್ಯಕ್ತಿಯೋ ಅಥವಾ ಕಾದಂಬರಿಗಳ ಒಂದು ಕಾರಖಾನೆಯೋ ಎಂದು ಹಲವರು ದಂಗುಬಡಿದದ್ದುಂಟು.

ಯಂತ್ರ ಒಂದೇ ಕಾಲಕ್ಕೆ ನಿಯತಗೊಂಡು ಒಂದೇ ಕೆಲಸ ಮಾಡಬಲ್ಲದು. ಆದರೆ ಅ.ನ.ಕೃ. ಏಕಕಾಲಕ್ಕೆ ಸಾಮಾಜಿಕ, ಐತಿಹಾಸಿಕ ವಸ್ತುಗಳನ್ನೊಳಗೊಂಡ ಮೂರು ಕಾದಂಬರಿಗಳನ್ನು ಬರೆದು ಅಚ್ಚಿಗೆ ಕಳಿಸುತ್ತಿದ್ದುದನ್ನು ಅವರ ಮಿತ್ರರನೇಕರು ಬಲ್ಲರು. ಈ ದಿಶೆಯಲ್ಲಿ ಅ.ನ.ಕೃ. ಕನ್ನಡ ಸಾಹಿತ್ಯದಲ್ಲಿಯೇ ಅದ್ವಿತೀಯರು.

ಹಾಯಸ್ಕೂಲಿನಲ್ಲಿ ಓದುತ್ತಿದ್ದಾಗ ನನ್ನ ಮನಸ್ಸನ್ನು ವಿಶೇಷವಾಗಿ ಸೆಳೆದ ಕನ್ನಡ ಕಾದಂಬರಿಗಳಲ್ಲಿ 'ಸಂಧ್ಯಾರಾಗ' ಮತ್ತು 'ಮಂಗಳಸೂತ್ರ' ಪ್ರಮುಖವಾಗಿದ್ದವು. ಆಗ (ಈಗಲೂ) ವಿದ್ಯಾರ್ಥಿಗಳಿಗೆ ಅ.ನ.ಕೃ. ಕೃತಿಗಳೆಂದರೆ ಹುಚ್ಚು. ಅವರ ಯಾವುದೇ ಬರವಣಿಗೆಯಲ್ಲೂ ಮೋಹಕವಾದ ಶೈಲಿ, ಪ್ರಗತಿಪರ ಮನೋಭಾವ, ಖಾರವಾದ ವಾಸ್ತವಿಕ ವಿಮರ್ಶೆ, ಅದಮ್ಯವಾದ ಉತ್ಸಾಹ-ಯುವಕರ ಮನಸ್ಸನ್ನು ಆಕರ್ಷಿಸಲು ಇನ್ನೇನು ಬೇಕು? ೧೯೪೪ರಲ್ಲಿ ಮೊಟ್ಟಮೊದಲು ನಾನು ಅವರ ಭಾಷಣವನ್ನು ಧಾರವಾಡದಲ್ಲಿ ಕೇಳಿದ್ದು. ವಿದ್ಯಾರ್ಥಿಗಳಿಂದ ಕಿಕ್ಕಿರಿದ ಸಭೆಯಲ್ಲಿ ನಿಲ್ಲಲು ಹೇಗೊ ಜಾಗ ಮಾಡಿಕೊಂಡು ಆ ವ್ಯಕ್ತಿಯನ್ನು ಕಂಡದ್ದು. ಬಿಳಿಯ ಖಾದಿಬಟ್ಟೆ, ಷೇರವಾನಿ, ಪಾಯಿಜಾಮ, ತಲೆಯ ಮೇಲೆ ಟೊಪ್ಪಿಗೆಯೂ ಇತ್ತೆಂದು ತೋರುತ್ತದೆ. ಕನ್ನಡ ಸಾಹಿತ್ಯ-ಕಲೆ-ಸಂಸ್ಕೃತಿಯ ಬಗ್ಗೆ ನಿರರ್ಗಳವಾಗಿ (ನಡುನಡುವೆ ನೀರೂ ವೆಗ್ಗಳವಾಗಿ) ಮೂರು ಗಂಟೆಗಳ ಕಾಲ ಅಂದು ಅವರು ಮಾತನಾಡಿದುದು, ದೇಶ ವಿದೇಶಗಳ ನೂರಾರು ಸಾಹಿತಿ, ಕಲಾವಿದರ ಹೆಸರುಗಳನ್ನೂ ಅರಳು ಹುರಿದಂತೆ ಉಚ್ಚರಿಸುತ್ತಿದ್ದುದು ಇಂದಿಗೂ ನನ್ನ ಕಣ್ಣ ಮುಂದೆ ಕಟ್ಟಿದಂತಿದೆ. ಭಾಷಣ ಮಾಡುತ್ತಿದ್ದಾಗಿನ ಹೊರತು ಉಳಿದೆಲ್ಲ ಹೊತ್ತಿನಲ್ಲಿ ಸಿಗರೇಟು ಅವರ ಕೈಯಲ್ಲಿ ಜೀವಂತವಾಗಿರುತ್ತಿತ್ತು. ಅದೇ ಆಗ ಪ್ರಕಟವಾದ ಅವರ 'ನನ್ನನ್ನು ನಾನೇ ಕಂಡೆ' ಎಂಬ ಸ್ವಯಂಸಂದರ್ಶನವನ್ನೊಳಗೊಂಡ ಪುಸ್ತಕದಲ್ಲಿ ಸಾಹಿತ್ಯಸೇವೆ, ಹಿಂದೀ ಸಮಸ್ಯೆ, ಪಾಕಿಸ್ತಾನ, ಕೋಮುವಾರು ಭೂತ, ಪ್ರಗತಿಶೀಲ ಸಾಹಿತ್ಯ, ವಿದ್ಯಾರ್ಥಿಗಳು, ಕನ್ನಡ ಮಾಧ್ಯಮ, 'ಸಾಹಿತ್ಯರತ್ನ' ಮುಂತಾದವುಗಳ ಬಗ್ಗೆ ಹರಿಯಿಸಿದ ವಿಚಾರಧಾರೆಯ ಸೆಳವಿನಲ್ಲಿ ಸಿಕ್ಕಿ ವಿದ್ಯಾರ್ಥಿಗಳಿಗೆ ಅ.ನ.ಕೃ. 'ಹೀರೊ' ಆಗಿ ಪರಿಣಮಿಸಿದ್ದಲ್ಲಿ ಆಶ್ಚರ್ಯವೇನು? ಅವರ ಭಾಷಣವೆಂದರೆ ಆಣೆಕಲ್ಲಿನ ಸುರಿಮಳೆ, ನೀರು ಕೂಡಲೇ ರಭಸದಿಂದ ಹರಿದು ಹೋಗುತ್ತದೆ. ನೆಲ ಸಾಕಷ್ಟು ಹಸಿ ಹಿಡಿಯದೆ ಹೋಗಬಹುದು. ಆದರೂ ಏನಂತೆ? ಕೊಳೆ-ಕಸವಾದರೂ ಕೊಚ್ಚಿಕೊಂಡು ಹೋಗುತ್ತದಲ್ಲ.

೧೯೫೫ರಲ್ಲಿ ಕಾರಂತರ ಅಧ್ಯಕ್ಷತೆಯಲ್ಲಿ ನಡೆದ ಮೈಸೂರು ಸಾಹಿತ್ಯ ಸಮ್ಮೇಳನಕ್ಕೆ ಹೋದಾಗ ಅಲ್ಲಿ ಅ.ನ. ಕೃ. ಅವರನ್ನು ನಾವು ಕಾಣಲಿಲ್ಲ. ಅಲ್ಲಿಂದ ತಿರುಗಿ ಬರುವಾಗ ನಾನೂ ಗೆಳೆಯ ಬಸವರಾಜ ಕಟ್ಟೀಮನಿಯವರೂ ಬೆಂಗಳೂರಿಗೆ ಹೋಗಿ 'ಅನ್ನಪೂರ್ಣ'ದಲ್ಲಿ ಅ.ನ.ಕೃ. ಅವರನ್ನು ಕಂಡೆವು. ಆಗ ಅವರ ಆರೋಗ್ಯ ಅಷ್ಟೊಂದು ಚೆನ್ನಾಗಿರದಿದ್ದರೂ ಸಾಕಷ್ಟು ಉತ್ಸಾಹದಿಂದಲೇ ನಮ್ಮೊಡನೆ ಮಾತನಾಡಿದರು. ನಾವು ಅಲ್ಲಿಂದ ಹೊರಡುತ್ತಿರುವಂತೆಯೇ ಕಟ್ಟೀಮನಿ ಅ.ನ.ಕೃ. ಅವರನ್ನು 'ಸಾಹಿತ್ಯ ಸಮ್ಮೇಳನಕ್ಕೆ ನೀವು ಅಧ್ಯಕ್ಷರಾಗುವುದು ಯಾವಾಗ?' ಎಂದು ಕೊಂಚ ಭಾವನಾವಶರಾಗಿಯೆ ಕೇಳಿದರು. ಆಗ ಅ.ನ.ಕೃ. ತಮಗೆ ಸಹಜವಾದ ಮುಗುಳ್ನಗೆ ಬೀರಿ,

ಆತ್ಮೀಯಯತೆಯಿಂದ ಅವರ ಹೆಗಲ ಮೇಲೆ ಕೈಹಾಕಿ, 'ನೀನು ಅಧ್ಯಕ್ಷನಾಗುವುದನ್ನು ನಾನು ಕಾಣಬೇಕು' ಎಂದು ನುಡಿದರು. ಹಿಂದೆ ಅ.ನ.ಕೃ. ಅವರ ಪ್ರಗತಿಶೀಲ ಸಾಹಿತ್ಯದ ಆಂದೋಲನಕ್ಕೆ ಕಟ್ಟೀಮನಿ ಸಂಪಾದಕರಾಗಿದ್ದ 'ಉಷಾ' ಮುಖಪತ್ರಿಕೆಯಾದಂತಿತ್ತು ಕೆಲವು ಕಾಲ. ಆದರೆ ಮುಂದೆ ಕೆಲವು ಕಾರಣಗಳಿಂದ ಅವರವರಲ್ಲಿ ಭಿನ್ನಾಭಿಪ್ರಾಯವುಂಟಾಗಿ ತೀಕ್ಷ್ಣವಾದ ಲೆಕ್ಕಣಿಕೆಯ ಕಾಳಗ ನಡೆದದ್ದೂ ಉಂಟು. ಆದರೂ ಅದು ವೈಯಕ್ತಿಕ ದ್ವೇಷಕ್ಕೆ ಎಡೆಗೊಟ್ಟಿರಲಿಲ್ಲವೆಂಬುದು ಅ.ನ.ಕೃ ಅವರ ಔದಾರ್ಯಕ್ಕೆ ಹಿರಿಯ ಸಾಕ್ಷಿ. ಅವರದು ನಿಜವಾಗಿಯೂ ದೊಡ್ಡ ಮನಸ್ಸು, ಅನೇಕ ಹಿರಿಯ ಸಾಹಿತಿಗಳೆಂಬವರಲ್ಲಿ ಕಂಡುಬರುವ ಸಣ್ಣತನ, ಸಂಕುಚಿತ ಮನೋಭಾವನೆಗಳು ಅ.ನ.ಕೃ. ಅವರ ಸಮೀಪ ಕೂಡ ಸುಳಿಯಲಿಲ್ಲ. ತರುಣ ಲೇಖಕರ ಬೆನ್ನು ತಟ್ಟಿ ಪ್ರೋತ್ಸಾಹ ನೀಡುವುದರಲ್ಲಿ ಅವರು ಮೇಲ್ಪಂಕ್ತಿಯಾಗಿದ್ದರು.

ಅ.ನ.ಕೃ. ಅವರನ್ನು ಒಂದೆರಡು ವರ್ಷಗಳ ನಂತರ ಮತ್ತೆ ಧಾರವಾಡದಲ್ಲಿ ಕಂಡೆ. ಅದೇ ನಿಲುವು ಅದೇ ವೇಷಭೂಷಣ, ಅದೇ ಆತ್ಮೀಯವಾದ ಸಂಭಾಷಣೆ, ಅವರಿಗೆ ಆಗ ೫೨ ವರ್ಷ ಎಂದರೆ ನಂಬುವಂತಿರಲಿಲ್ಲ. ಅವರು ಜನಿಸಿದ್ದು ೧೯೦೮ರಲ್ಲಿ, ವೈಶಾಖಶುದ್ಧ ನವಮಿಯ ದಿನ. ಅವರ ಮುಂಬರುವ ಗ್ರಂಥಗಳ ಪಟ್ಟಿಯಲ್ಲಿ 'ವೈಶಾಖಶುದ್ಧ ನವಮಿ' ಎಂಬ ಹೆಸರನ್ನಿಟ್ಟುಕೊಂಡ ಆತ್ಮಚರಿತ್ರೆಯೂ ಒಂದಾಗಿತ್ತು. ಉತ್ತರ ಕನ್ನಡ ಜಿಲ್ಲೆಯನ್ನು ಸುತ್ತಿಬಂದ ಪ್ರವಾಸದ ಆಯಾಸದಿಂದ ಅ.ನ.ಕೃ. ಅಂದು ತುಂಬ ದಣಿದಿದ್ದರು. ಆದರೂ ಸತ್ಕಾರಕ್ಕೆ ಜುಲುಮೆಯಿಂದ ಒಪ್ಪಿಕೊಂಡು ವಿದ್ಯಾವರ್ಧಕ ಸಂಘದಲ್ಲಿ - ಧ್ವನಿ ಒಡೆದು ಹೋಗಿದ್ದರೂ ಸ್ವಲ್ಪ ಹೊತ್ತು ಮಾತನಾಡಿದರು. ಮಾತಿನಲ್ಲಿ ಅದೇ ಮೊದಲಿನ ತೀಕ್ಷ್ಣತೆ, ಅದೇ ಖಂಡಿತವಾದಿತ್ವ: "ಇಂದು ಎಲ್ಲೆಲ್ಲೂ ರಾಜಕಾರಣಿಗಳ ಹಾವಳಿಯೆ ಆಗಿದೆ. ಸಾಹಿತ್ಯ ಪರಿಷತ್ತಿನಂಥ ಸಂಸ್ಥೆಯಲ್ಲೂ ಅವರು ದಾಳಿ ಮಾಡಿದರೆ ಅವರನ್ನು ಮೊದಲು ಒದ್ದು ಹೊರಗೆ ಹಾಕಬೇಕು". ಕನ್ನಡದ ಬಗ್ಗೆ ಅದೇ ಅಭಿಮಾನ : "ಅಮೇರಿಕೆಯಲ್ಲೊ ಅಥವಾ ಬೇರೆಲ್ಲಿಯೊ ನನಗೆ ಮರಣವೊದಗಿದರೂ ಕನ್ನಡ ನೆಲದಲ್ಲಿಯೇ ಬಂದು ಜೀವ ಬಿಟ್ಟೇನು". ಭಾಷಣ ಮೊದಲಿನಂತೆಯೇ ಖಾರವಾಗಿಯೇ ಇದ್ದರೂ ಅವರ ಮನಸ್ಸು ಹಣ್ಣಾಗಿರುವುದನ್ನು ನಾನು ಗುರುತಿಸಿದೆ.

ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಅ.ನ.ಕೃ ಅವರದು ಸಮೃದ್ಧವಾದ ಬೆಳೆ. ದಿನಕ್ಕೆ ಹನ್ನೆರಡು ತಾಸಿಗಿಂತಲೂ ಹೆಚ್ಚು ಕಾಲವನ್ನು ಅವರು ಬರವಣಿಗೆಯಲ್ಲಿ ಕಳೆಯುತ್ತಿದ್ದರಂತೆ. ಅವರ ಬರವಣಿಗೆಯ ಗತಿಯೂ ಶೀಘ್ರವಾಗಿದ್ದು ಅವರ ಎಷ್ಟೋ ಕಾದಂಬರಿಗಳು ಹದಿನೈದು ದಿನಗಳೊಳಗೇ ಬರೆದು ಮುಗಿಸಿದವುಗಳಾಗಿವೆ. ಚತುರ ಸಂಭಾಷಣಾ ಶೈಲಿ ಅವುಗಳ ಮೊದಲ ಆಕರ್ಷಣೆ. ಆ ಕಲೆ ಅವರಿಗೆ ನೀರು ಕುಡಿದ ಹಾಗೆ. ಎರಡನೆಯದಾಗಿ, ನಿತ್ಯ ಜೀವನದ ಘಟನೆಗಳನ್ನೇ ಘರ್ಷಣೆಯನ್ನೇ ಕಥಾವಸ್ತುವಿಗೆ ಅರ್ಥವತ್ತಾಗಿ ಬಳಸಿದ ರೀತಿ, ಮೂರನೆಯದಾಗಿ ಕತೆಯ ಶೀಘ್ರಗತಿ. 'ಸಂಧ್ಯಾರಾಗ'ದಿಂದ 'ಸಂಜೆಗತ್ತಲು'ವರೆಗೆ 'ಮಂಗಳಸೂತ್ರ'ದಿಂದ 'ಕಣ್ಣೀರಿ'ನವರಿಗೆ ಈ ಮೂರು ಅಂಶಗಳು ಏಕಪ್ರಕಾರವಾಗಿ ಮೂಡಿವೆ. ಅದರ ಜೊತೆಗೆ ಕಾದಂಬರಿ ಸತ್ವವೂ ಪೋಷಕವಾಗಿ, ಕೆಲವೆಡೆ ಭಾಷೆ, ಸನ್ನಿವೇಶಗಳಲ್ಲಿಯ ನಾಟಕೀಯತೆ

ಕಡಿಮೆಯಾಗಿ, ಮನಸ್ಸಿನ ಪದರುಗಳನ್ನೆಲ್ಲ ಅದು ಮುಟ್ಟಿಬರುವಂತಾಗಿದ್ದರೆ ಬಹುಶಃ ಈ ದಿಶೆಯಲ್ಲಿ ಅವರ ಕೈಹಿಡಿವವರೇ ಇರುತ್ತಿರಲಿಲ್ಲವೇನೋ. ಪ್ರಾರಂಭದಲ್ಲಿಯೇ 'ಸಂಧ್ಯಾರಾಗ ಪ್ರಶಸ್ತಿ' ಪಡೆದ ಅ.ನ.ಕೃ. ಅವರ ಮುಂದಿನ ಎಲ್ಲ ಕಾದಂಬರಿಗಳೂ ಒಂದೇ ಉನ್ನತಮಟ್ಟದವಾಗಿರಲಿಲ್ಲ. ಸಾಹಿತ್ಯವನ್ನೇ ವ್ಯವಸಾಯವನ್ನಾಗಿ ಮಾಡಿಕೊಂಡಾಗ ಹಾಗಾಗುವುದೂ ಸಹಜ. ಆದರೆ ಅಂಥ ಕಡಿಮೆ ತರಗತಿಯ ಕಾದಂಬರಿಯಲ್ಲೂ ಅವರು ಮಾನವ ಹಿತನಿಷ್ಠೆಯನ್ನೂ, ಮಾನವೀಯ ಮೌಲ್ಯಗಳನ್ನೂ ಎತ್ತಿಹಿಡಿದಿರುವುದನ್ನು ನಾವು ಕಾಣಬಹುದು. ಅವರ ಇತ್ತೀಚಿನ ಸಾಮಾಜಿಕ ಕಾದಂಬರಿಗಳಲ್ಲಿಯ ವಸ್ತು-ಪಾತ್ರ-ಚಿತ್ರಣಗಳು 'ತಿರುಗಾಮುರಗ ಹರಗೋಣ' ಎಂಬಂತಿದ್ದರೂ ಐತಿಹಾಸಿಕ ವಸ್ತುವನ್ನು ಅಳವಡಿಸಿಕೊಂಡು ಅರಳಿರುವ ಕೃತಿಗಳಲ್ಲಿ ಅವರ ಲೇಖನಿಗೆ ಕೆಲಮಟ್ಟಿಗೆ ಗರಿಮೂಡಿದೆಯೆಂದೇ ಹೇಳಬಹುದು. ಅವರು ಬರಬರೆದಂತೆ ಅವರ ಕೃತಿಗಳ ಬಗ್ಗೆ ವಾದವಿವಾದಗಳೂ ನಡೆಯುತ್ತಿದ್ದವು. ಆದರೂ ಅವರು ಬರೆಯುತ್ತಲೇ ಇದ್ದರು. ಅಂಥ ಜಿಗುಟುತನ ಅವರ ಸ್ವಭಾವದಲ್ಲಿಯೇ ಮೈಗೂಡಿತ್ತು. ಹೀಗೆ ಕನ್ನಡದಲ್ಲಿ ಕಾದಂಬರಿ ಸಾರ್ವಭೌಮ ಪದವಿಯನ್ನು ಪಡೆಯಲು ಕಾರಣರಾದ ನಾಲ್ಕೈದು ಜನ ಕಾದಂಬರಿಕಾರರಲ್ಲಿ ಅ.ನ.ಕೃ. ಸ್ಥಾನ ಹಿರಿಯದು. "ವಿಸ್ತಾರದಲ್ಲಿ, ವೈವಿಧ್ಯದಲ್ಲಿ, ಜನಪ್ರಿಯತೆಯಲ್ಲಿ ಈ ಸಾಹಿತ್ಯ ಪ್ರಕಾರ ಕಳೆದ ಮೂರು ದಶಕಗಳಲ್ಲಿ ಸಾಧಿಸಿದ ಪ್ರಗತಿ ಆಶ್ಚರ್ಯಕರವಾದದ್ದು, ಇಂಥ ಆಶ್ಚರ್ಯಕಾರಕವಾದ ಪ್ರಗತಿಯನ್ನು ಸಾಧ್ಯವಾಗಿಸಿದವರಲ್ಲಿ ಮೊದಲ ಸ್ಥಾನ ಕೃಷ್ಣರಾಯರದು" ಎಂದಿರುವ ಶ್ರೀ ವಿ.ಎಂ. ಇನಾಮದಾರರ ಮಾತು ಸತ್ಯವಾದದ್ದು.

ಕನ್ನಡ 'ಸಣ್ಣಕತೆ'ಗೆ ನೀರೆರೆದು ಅದಕ್ಕೆ ದೊಡ್ಡ ಬೆಲೆಯನ್ನು ತಂದುಕೊಟ್ಟ ಮೊದಲಿಗರಲ್ಲಿ ಅ.ನ.ಕೃ. ಒಬ್ಬರು. 'ಕಥಾಂಜಲಿ' 'ವಿಶ್ವವಾಣಿ'ಗಳ ಸಂಪಾದಕರಾಗಿಯೂ ಅವರು 'ಸಣ್ಣಕತೆ'ಯನ್ನು ಪೋಷಿಸಿದರು. ಅಂದು ಅವರು ಸಂಪಾದಿಸಿಕೊಟ್ಟ 'ಕಾಮನಬಿಲ್ಲು' (ಭಾಗ ೧-೨) ಕನ್ನಡ ಕಥಾ ಸಂಕಲನಗಳಲ್ಲಿ ಇಂದಿಗೂ ತನ್ನ ಬಣ್ಣವನ್ನು ಮೋಹಕವಾಗಿ ಉಳಿಸಿಕೊಂಡಿದೆ. ಕಾದುಂಬರಿ ಪ್ರವಾಹದ ಸೆಳವಿನಲ್ಲಿಯೇ ಅವರು ಇರುತ್ತಿದ್ದರೂ ಆಗಾಗ ಸಣ್ಣಕತೆಯ ಸುಂದರ ನಡುಗಡ್ಡೆಯಲ್ಲಿ ಅವರು ದಣಿವಾರಿಸಿಕೊಳ್ಳುತ್ತಿದ್ದರು. ಸಣ್ಣಕತೆಯ ವಸ್ತುವಿನ ವಿಸ್ತಾರ-ವೈವಿಧ್ಯಗಳನ್ನು ಹೆಚ್ಚಿಸುವುದರಲ್ಲಿ ಅವರ ಹಿರಿಮೆ ಹೇಳಿಕೊಳ್ಳುವಂಥದು. ನಮ್ಮ ನಾಡಿನ 'ಕುಲರಸಿಕರು' 'ಕರ್ನಾಟಕ ಕಲಾವಿದರು' ವ್ಯಕ್ತಿಚಿತ್ರಗಳನ್ನೂ, ಅಲ್ಲಮಪ್ರಭು, ಕೈಲಾಸಂ, ಕಬೀರ, ವಿವೇಕಾನಂದ ಮೊದಲಾದ ಮಹಾನುಭಾವರ ಜೀವನ ಚರಿತ್ರೆಗಳನ್ನೂ ಅವರು ಅಭಿಮಾನದಿಂದಲೂ ಆದರದಿಂದಲೂ ಚಿತ್ರಿಸಿದ್ದಾರೆ. ನಾಟಕಗಳಲ್ಲಿ ಮೊದಲಿನಿಂದಲೂ ಆಧುನಿಕ ದೃಷ್ಟಿಯನ್ನು ಮೆರೆದಿದ್ದಾರೆ.

ಈಗ್ಗೆ ಮೂರು ದಶಕಗಳ ಹಿಂದೆ ಕನ್ನಡದಲ್ಲಿ ಬೀಸಿದ ಪ್ರಗತಿಶೀಲ ಸಾಹಿತ್ಯದ ಆಂದೋಲನಕ್ಕೆ ಅ.ನ.ಕೃ. ಅಧ್ವರ್ಯುಗಳಾಗಿ ನಿಂತರು. ಆಂದೋಲನ ಅಲ್ಪಾಯುಷಿಯಾಗಿ ಪರಿಣಮಿಸಿದರೂ ಅಂದಿನ ತರುಣ ಲೇಖಕರಲ್ಲಿ ಅದು ಹೊಸ ದೃಷ್ಟಿಕೋನವನ್ನು ಮೂಡಿಸಿತೆಂದು ಧಾರಾಳವಾಗಿ ಹೇಳಬಹುದು. ಪ್ರಗತಿಶೀಲತೆ ಪ್ರಯೋಗಶೀಲತೆಗೂ ಕೆಲಮಟ್ಟಿಗೆ ಎಡೆಮಾಡಿಕೊಟ್ಟಿತು.

‘ಪ್ರಗತಿಶೀಲ ಸಾಹಿತ್ಯ’ ‘ಮ್ಯಾಕ್ಸಿಂಗಾರ್ಕಿ’ ‘ಭಾರತೀಯ ಕಥಾ ಸಾಹಿತ್ಯ’ ಇವು ಅ.ನ.ಕೃ ಸಂಪಾದಿಸಿ ನೀಡಿದ ಆ ಕಾಲದ ಮಹತ್ವದ ಕೊಡುಗೆಗಳು. ಕನ್ನಡ ಸಾಹಿತ್ಯದ ವಿಕಾಸಕ್ಕೆ ಪ್ರಗತಿಶೀಲ ಸಾಹಿತ್ಯದ ಆಂದೋಲನದಿಂದ ಸಾಕಷ್ಟು ಸಹಾಯವಾಯಿತೆಂದೇ ಅ.ನ.ಕೃ. ಕೊನೆಯವರೆಗೂ ನಂಬಿದ್ದರು. ಅವರ ಕೃತಿಗಳಲ್ಲಿ ಮುಖ್ಯವಾಗಿ ಕಾದಂಬರಿಗಳ ಬಗ್ಗೆ ವಿಮರ್ಶಕರಿಂದ ಅಶ್ಲೀಲತೆಯ ಆರೋಪವನ್ನು ಅವರು ಆಗಾಗ ಎದುರಿಸಬೇಕಾಯಿತು.’ ‘ಸಾಹಿತ್ಯ ಮತ್ತು ಕಾಮಪ್ರಚೋದನೆ’ ಗ್ರಂಥದಲ್ಲಿ ಅದಕ್ಕೆ ಉತ್ತರ ನೀಡಲು ತಮ್ಮ ವಾದವನ್ನು ಎತ್ತಿಹಿಡಿಯಲು ಅವರು ಪ್ರಯತ್ನಿಸಿದ್ದಾರೆ. ಎಷ್ಟೋ ಪಿಎಚ್.ಡಿ. ಪ್ರಬಂಧಗಳಿಗಾಗುವಷ್ಟು ವಿಷಯ ಸಂಗ್ರಹವನ್ನು ಅದರಲ್ಲಿ ಕೊಟ್ಟಿರುವುದಾಗಿಯೂ ಹೇಳಿಕೊಂಡಿದ್ದಾರೆ. ಈ ಬಗ್ಗೆ ತಮ್ಮ ಪ್ರತಿವಾದವನ್ನು ಮಂಡಿಸುತ್ತ ಶ್ರೀ ಕೆ.ಡಿ. ಕುರ್ತಕೋಟಿಯವರು ‘ಪ್ರಣಯದ ಬಗ್ಗೆ ಮುಚ್ಚುಮರೆಯಿಂದ ಮಾತಾಡುವುದು ಸಭ್ಯ, ಬಿಚ್ಚಾಗಿ ಹೇಳುವುದು ಅಶ್ಲೀಲ ಎಂಬ ವಾದವನ್ನು ತಳಹದಿಯಾಗಿಟ್ಟುಕೊಂಡು ಅವರು ಅದಕ್ಕೆ ಉತ್ತರ ಕೊಡುತ್ತಾರೆ. ಆದರೆ ಯಾವುದೇ ರೀತಿಯ ಭಾವಸಂಕರ ಅಶ್ಲೀಲವಾಗಿದೆಯೆಂಬುದನ್ನು ಮರೆಯಲಾಗದು. ಭಾವನೆಗಳ ಅಗ್ಗದ ಬಳಕೆ ಅಶ್ಲೀಲವಲ್ಲದೆ ಮತ್ತೇನು?” ಎಂದು ಕೇಳಿದ್ದಾರೆ. ಇತ್ತೀಚೆಗೆ ಪ್ರಕಟವಾದ ‘ಭಾರತೀಯ ಕಲಾದರ್ಶನ’ ಹಾಗೂ ‘ಭಾರತೀಯ ಸಂಸ್ಕೃತಿ ದರ್ಶನ’ ಎಂಬೆರಡು ಮಹತ್ವದ ಹೆಬ್ಹೊತ್ತಿಗೆಗಳು ಅ.ನ.ಕೃ ಅವರ ಗ್ರಂಥಸಂಪಾದನಾ ಕಾರ್ಯದ ಉತ್ತಮಿಕೆಯನ್ನು ಎತ್ತಿ ತೋರಿಸುತ್ತಿವೆ.

ಬಾಲ್ಯದಲ್ಲಿ ಸ್ವಾಮಿ ವಿವೇಕಾನಂದರ ಜೀವನದಿಂದ ಸ್ಫೂರ್ತಿ ಪಡೆದ ಅ.ನ.ಕೃ. ಅವರಿಗೆ ವೀರಶೈವ ಸಾಹಿತ್ಯ ಸಂಸ್ಕೃತಿಗಳಲ್ಲಿ ಆಸ್ಥೆ ಹುಟ್ಟಿದುದು ಅಚ್ಚರಿಯ ಮಾತಲ್ಲ. ಆ ಸಾಹಿತ್ಯದಲ್ಲಿ ಕಂಡುಬರುವ ‘ಕನ್ನಡತನ’ವನ್ನೂ ಪ್ರಗತಿಪರ ಧೋರಣೆಯನ್ನೂ, ಅವರು ತಮ್ಮದನ್ನಾಗಿ ಮಾಡಿಕೊಂಡರು. ‘ಬಸವಣ್ಣನವರ ಅಮೃತವಾಣಿ’ ‘ವೀರಶೈವ ಸಾಹಿತ್ಯ ಸಂಸ್ಕೃತಿ’ ಗ್ರಂಥಗಳು ಅವರ ಶ್ರದ್ಧೆಯ ಫಲಗಳು. ಸಮಕಾಲೀನ ಸಾಹಿತ್ಯ ವಿಮರ್ಶೆಯನ್ನು ಇವರು ತಮ್ಮ ‘ಸಾಹಿತ್ಯ ಮತ್ತು ಜೀವನ’ ‘ಸಾಹಿತ್ಯ ಮತ್ತು ಯುಗಧರ್ಮ’ ‘ಸಾಹಿತ್ಯ ಸಮಾರಾಧನೆ’ ‘ನಾಟಕ ಕಲೆ’ ಇತ್ಯಾದಿ ಗ್ರಂಥಗಳಲ್ಲಿ ಕೊಡುತ್ತ ಬಂದಿದ್ದಾರೆ. ಇಲ್ಲಿಯೂ ಚರ್ಚೆಗೆ ಅವಕಾಶವಿಲ್ಲದಿಲ್ಲ. ‘ಕಾವ್ಯ ಬರೆಯುವುದು ಸುಲಭ.... ಗದ್ಯಕೆಟ್ಟರೆ ಪದ್ಯವಾಗುತ್ತದೆ....” ಇತ್ಯಾದಿ ಮಾತುಗಳು ಇದಕ್ಕೆ ಉದಾಹರಣೆಯಾಗಿದ್ದರೂ ಅವರು ಕವಿ-ಕಾವ್ಯ ದ್ವೇಷಿಗಳಲ್ಲ. ಉಮರನ ರುಬಾಯಿಯಾತನ್ನು ತಾವೂ ಪದ್ಯದಲ್ಲಿ ಅನುವಾದಿಸಲು ಹೆಣಗಿರುವುದನ್ನು ನಾವು ಕಂಡಿದ್ದೇವೆ. ಕನ್ನಡದಲ್ಲಿ ‘ಪ್ರಣಯ ಗೀತೆ’ಗಳ ಪ್ರಥಮ ಸಂಕಲನವನ್ನು ಸಂಪಾದಿಸಿಕೊಟ್ಟವರು ಅವರು ಎಂಬುದು ನಮ್ಮಲ್ಲಿ ಎಷ್ಟು ಜನರಿಗೆ ಗೊತ್ತಿದೆ? ಅವರೇ ಸಂಪಾದಿಸಿರುವ ‘ರಸಋಷಿ’ ಪ್ರಗತಿಶೀಲ ಕವನಗಳ ಒಂದು ಒಳ್ಳೆಯ ಕವನ ಸಂಕಲನ. ಶ್ರೀ ಗೋಕಾಕರು ಅದನ್ನು ಕುರಿತು ಹೀಗೆ ಬರೆದಿದ್ದಾರೆ.

“The ‘progressive’movement of the thirties gathered strength about this time and left a strong impress on the literature of this period. It also became a pivotal point for the rise of the younger literary generation.

'Rasarishi' was a collection of lyrics which testified to their new awareness."[*'Contemporary Indian Literature', page : 101.*]

ಕನ್ನಡ ನಾಡು, ನುಡಿ, ಸಂಸ್ಕೃತಿಗೆ ಧಕ್ಕೆಯೊದಗುವ ಪ್ರಸಂಗಗಳು ಬಂದಾಗಲೆಲ್ಲ ಅ.ನ.ಕೃ. ಧೀರತನದಿಂದ ಮೂಂಚೂಣಿಯಲ್ಲಿ ನಿಂತು ತಮ್ಮ ಕತ್ತಿಯನ್ನು ಝಳಪಿಸಿದ್ದಾರೆ. ಕನ್ನಡಕ್ಕೆ ಅಪಚಾರ, ಅವಮಾನ ಯಾರಿಂದಲೇ ಆದರೂ ಅದನ್ನವರು ಸಹಿಸರು. ಹಿಂದೆ ಅವರು 'ಕನ್ನಡನುಡಿ' 'ಸಾಹಿತ್ಯ ಪರಿಷತ್ಪತ್ರಿಕೆ'ಗಳ ಸಂಪಾದಕರಾಗಿದ್ದಾಗ ಹಿಂದೀ ಭಾಷೆಯ ದಾಳಿಯನ್ನು ಪ್ರತಿಭಟಿಸಿ ನಿಂತ ಪ್ರಸಂಗವನ್ನು ನಾವಿಲ್ಲಿ ನೆನೆದುಕೊಳ್ಳಬಹುದು. ನಾಡಿನ ಏಕೀಕರಣಕ್ಕಾಗಿ ಅವರು ಗೆಳೆಯರೊಡನೆ ಅಖಂಡ ಕರ್ನಾಟಕವನ್ನೆಲ್ಲ ಸುತ್ತಾಡಿ ಜನತೆಯಲ್ಲಿ ಜಾಗೃತಿಯನ್ನುಂಟುಮಾಡಿದರು. 'ಅಖಂಡ ಕರ್ನಾಟಕ' 'ಕನ್ನಡದ ದಾರಿ' 'ಕನ್ನಡದ ಹಿತಚಿಂತನೆ' ಮುಂತಾದ ಗ್ರಂಥಗಳು ಅವರ ಕನ್ನಡದ ಹೋರಾಟವನ್ನು ಚಿತ್ರಿಸುತ್ತವೆ. "ಕನ್ನಡ ನಾಡು ಒಂದಾದ ಮೇಲೂ ಕನ್ನಡ ಜನರ ಮನಸ್ಸನ್ನು ಒಡೆಯುವ ಪ್ರಯತ್ನ ಪುನಃ ನಡೆದರೆ ಆಶ್ಚರ್ಯವೇನಿಲ್ಲ. ಮೈಸೂರು ಬೇರೆ, ಉತ್ತರ ಕರ್ನಾಟಕ ಬೇರೆ ಎನ್ನುವಂಥ ಚಳುವಳಿ ಮತ್ತೆ ನಡೆದರೆ ಸೋಜಿಗವೇನಲ್ಲ" ಎಂದು ಅವರು ಇತ್ತೀಚೆಗೆ ತಮ್ಮ ಭಾಷಣಗಳಲ್ಲಿ ಎಚ್ಚರಿಕೆ ಕೊಡುತ್ತಲೇ ಇದ್ದರು. ಅ.ನ.ಕೃ ಅವರ ಮಾತಿನಲ್ಲಿ, ಬರೆಹದಲ್ಲಿ, ಸಾಹಿತ್ಯ ಸೃಷ್ಟಿಯಲ್ಲಿ ಒಮ್ಮೊಮ್ಮೆ ಪರಸ್ಪರ ವಿರೋಧಾಭಾಸವನ್ನು ನಾವು ಕಂಡಿರಬಹುದು. ಆದರೆ ಕನ್ನಡದ ಬಗೆಗಿರುವ ಅವರ ಅಭಿಮಾನ, ಕೆಚ್ಚು ಯಾವಾಗಲೂ ಒಂದೇ ಬಗೆಯಾಗಿದ್ದಿತು. ಈ ಹುಟ್ಟು ಸೇನಾನಿಯ ಬಗ್ಗೆ ಶ್ರೀ ಜಿ.ಪಿ. ರಾಜರತ್ನಂ ಅವರು ಒಂದೆಡೆ ಬರೆಯುತ್ತ "ಈ ನಲವತ್ತು ವರ್ಷಗಳ ಕಾಲದಲ್ಲಿ ಅವರು ಎದುರಿಸಬೇಕಾಗಿ ಬಂದಿರುವ ವಿರೋಧಗಳಿಗೆ ಬೇರಾರಾದರೂ ಸಿಕ್ಕಿದ್ದರೆ ಪುಡಿ ಪುಡಿಯಾಗಿ ಹೋಗುತ್ತಿದ್ದರು. ಹಾಗಾಗಿ ಕೃಷ್ಣರಾಯರ ಕೆಲವು ಮುಖಗಳನ್ನು ಸಹಿಸದೆ ಆಡಿಕೊಳ್ಳುವವರು ಕೂಡ ಈ ಧೀರ ಮುಖವನ್ನು ನಿಸ್ಸಂಕೋಚವಾಗಿ ಮೆಚ್ಚಿಕೊಳ್ಳುತ್ತಾರೆ" ಎಂದು ಮುಕ್ತ ಮನಸ್ಸಿನ ಪ್ರಶಂಸೆ ನೀಡಿದ್ದಾರೆ.

'ಅನ್ನಪೂರ್ಣ'ದ ಈ ಅಖಂಡ ಚೈತನ್ಯನಿಧಿ ಇಂದಿಲ್ಲವೆನಿಸಿದರೂ ಅವರು ಪ್ರೀತಿಸಿದ ಈ ನಾಡಿನಲ್ಲಿ, ಜನತೆಯ ಹೃದಯದಲ್ಲಿ ಅ.ನ.ಕೃ. ಹೆಸರು ಚಿರಂತನವಾಗಿ ಪ್ರತಿಧ್ವನಿಗೊಳ್ಳುತ್ತದೆ.

('ಕರ್ನಾಟಕ ಭಾರತಿ' ೧೯೭೨)
ಸಾಹಿತ್ಯ ಸಮಾಹಿತ : ೨೦೦೭

## ೧೧

## ‘ಕ್ರಾಂತಿಕಾರಿ ಕಾದಂಬರಿಕಾರ’ ಬಸವರಾಜ ಕಟ್ಟೀಮನಿ

೧೯೪೬ - ಅಂದರೆ ಇಪ್ಪತ್ತೆರಡು ವರ್ಷಗಳ ಹಿಂದಿನ ಮಾತು. ‘ಉಷಾ’ ಮಾಸಪತ್ರಿಕೆಯ ದೀಪಾವಳಿ ವಿಶೇಷ ಸಂಚಿಕೆಗಾಗಿ ಕಾಯುತ್ತಿದ್ದೆವು. ಆದೇ ಮ್ಯಾಟ್ರಿಕ್ ಮುಗಿಸಿ ಕಾಲೇಜಿಗೆ ಸೇರಿದ ನನಗೂ ನನ್ನ ಗೆಳೆಯರಿಗೂ ಆ ಪತ್ರಿಕೆಯ ಬಗ್ಗೆ ವಿಶೇಷ ಅಭಿಮಾನವುಂಟಾಗಿತ್ತು. ಅದರಲ್ಲಿ ಪ್ರಕಟವಾಗುತ್ತಿದ್ದ ಪ್ರಗತಿಶೀಲ ಕಥೆ-ಲೇಖನಗಳೂ, ನಿರ್ದಾಕ್ಷಿಣ್ಯವಾದ ಟೀಕೆ-ಟಿಪ್ಪಣಿಗಳೂ, ಕೆಚ್ಚಿನ ಸಂಪಾದಕೀಯ ಬರೆವಣಿಗೆಯೂ ನಮ್ಮನ್ನು ಆಕರ್ಷಿಸಿದ್ದವು. ಹಾಗೆಯೇ ಸಂಪಾದಕರ ಬಗ್ಗೆ ಕುತೂಹಲವನ್ನೂ ಕೆರಳಿಸಿದ್ದವು. ಧಾರವಾಡಕ್ಕೆ ಆ ಪತ್ರಿಕೆ ಬಂದ ಒಂದೆರಡು ದಿನಗಳಲ್ಲಿಯೇ ಪ್ರತಿಗಳು ಮಾರಾಟವಾಗಿ ಹೋಗುತ್ತಿದ್ದವು. ದೀಪಾವಳಿ ಸಂಚಿಕೆ ತಡವಾದದ್ದಕ್ಕೆ ತಡೆಯಲಾರದೆ ಒಂದು ದಿನ ಏಜಂಟರಲ್ಲಿ ಹೋಗಿ ಕೇಳಿದಾಗ, ‘ಅದರ ಸಂಪಾದಕರೇ ಬಂದಿದ್ದಾರೆ. ಇದೀಗ ಚಹಾ ಕುಡಿಯಲು ಹೋಗಿದ್ದಾರೆ. ಸ್ವಲ್ಪ ತಡೆಯಿರಿ’ ಎಂದರು. ನನಗೆ ಹಿಡಿಸಲಾರದಷ್ಟು ಸಂತೋಷ. ಕುತೂಹಲ ತಡೆಯದೆ ಎದುರಿಗಿದ್ದ ರೆಸ್ಟಾರೆಂಟಿಗೆ ಹೋಗಿ ಗೆಳೆಯನೊಂದಿಗೆ ಅತ್ತಿತ್ತ ಹುಡುಕು ನೋಟ ಬೀರಿದೆ. ಖಾದಿ ಪಾಯಜಾಮ ಹಾಗೂ ಜುಬ್ಬಾ ಧರಿಸಿದ್ದ ವ್ಯಕ್ತಿಯೊಂದು ಮೂಲೆಯ ಕುರ್ಚಿಯೊಂದರಲ್ಲಿ ಸಿಗರೇಟು ಸೇದುತ್ತ ಜನದ ಗದ್ದಲದಲ್ಲಿಯೂ ಯೋಚನಾಮಗ್ನವಾಗಿ ಕುಳಿತಿದ್ದನ್ನು ಕಂಡೆವು. ಚೂಪಾದ ಮೂಗು, ಹೊಳೆಯುವ ಕಣ್ಣುಗಳು, ತೆಳ್ಳಗಿನ ತೆಳುಗೆಂಪು ದೇಹದ ಹುಡುಗನಂತೆ ಕಂಡ ಅವರೇ ಬಸವರಾಜ ಕಟ್ಟೀಮನಿ ಇರಬಹುದೆ? ಎನಿಸಿತು. ಏನೇ ಆಗಲಿ ಎಂದು ಹೋಗಿ ಮಾತನಾಡಿಸಿಯೇ ಬಿಟ್ಟೆವು. ಹೌದು, ಅವರೇ ಕಟ್ಟೀಮನಿ ! ಪರಸ್ಪರ ಪರಿಚಯವಾದ ಮೇಲೆ ನಮಗೂ ಬಾಸುಂದಿ. ಉಪ್ಪಿಟ್ಟು, ಚಹಾ ಬಂದಿತು. ‘ಉಷಾ’ ಪತ್ರಿಕೆಯನ್ನು ಬಿಟ್ಟು ಬಂದೆ ಎಂದು ಅವರು ಹೇಳಿದಾಗ ನಮ್ಮ ಉತ್ಸಾಹವೆಲ್ಲ ಇಳಿದು ಹೋಯಿತು. ಅವರು ಮುಷ್ಟಿಯನ್ನು ಸ್ವಲ್ಪ ಮೇಲಕ್ಕೆತ್ತಿ ‘ಇಂದಿಲ್ಲ ನಾಳೆ ಸ್ವತಂತ್ರವಾಗಿ ಒಂದು ಪತ್ರಿಕೆ ಮಾಡೋಣ’ ಎಂದಾಗ ನಮಗೆ ಮತ್ತೆ ಹುರುಪು ಬಂದಿತು. ವಿದ್ಯಾರ್ಥಿಗಳ ಬಗ್ಗೆ, ತರುಣ ಲೇಖಕರ ಬಗ್ಗೆ ತೋರಿಸಿದ ಪ್ರೀತಿಯಿಂದ ಅವರ ಬಗ್ಗೆ ಆತ್ಮೀಯತೆಯುಂಟಾಯಿತು. ಅವರ ಅದಮ್ಯವಾದ ಆಶಾವಾದವನ್ನೂ, ಉಕ್ಕುತ್ತಿರುವ ದೇಶ ಪ್ರೇಮವನ್ನೂ, ಹೋರಾಟದ ಛಲವನ್ನೂ ಕಂಡು ಅವರ ಬಗ್ಗೆ ವಿಶೇಷ ಮೆಚ್ಚಿಕೆಯುಂಟಾಯಿತು. ಅಂದಿನಿಂದಲೂ ನಮ್ಮ ನಡುವೆ ಸ್ನೇಹ ಬೆಳೆಯುತ್ತ ಬಂದಿತು. ಬಸವರಾಜರು ಸ್ನೇಹದಲ್ಲಿ ಎಂದೂ ಎರಡು ಬಗೆದವರಲ್ಲ.

ವಯಸ್ಸು ಐವತ್ತರ ಅಂಚಿಗೆ ಬಂದು ನಿಂತಾಗಲೂ ಕಟ್ಟೀಮನಿಯವರಲ್ಲಿ ಅಂದು ಕಂಡ ಗುಣಗಳೇ ಇಂದಿಗೂ ಅಚ್ಚಳಿಯದೆ ಉಳಿದಿವೆ. ಬಾಳಿನ ಹೋರಾಟದಲ್ಲಿ ತಲೆಗೂದಲು ಬೆಳ್ಳಗಾಗಿದ್ದರೂ ಸೆಟೆದು ನಿಲ್ಲುವುದನ್ನು ಮರೆತಿಲ್ಲ. ಶ್ರುತಿ ಮಾಂದ್ಯವಿದ್ದರೂ ಸೂಕ್ಷ್ಮವೂ ತೀಕ್ಷ್ಣವೂ ಆದ ನಿರೀಕ್ಷಣಾ ಶಕ್ತಿ ಬಲಗೊಳ್ಳುತ್ತಲೇ ಇದೆ. ಇತ್ತೀಚೆಗೆ ಓದುವಾಗ ಕನ್ನಡಕಬೇಕೆನಿಸಿದರೂ ದೃಷ್ಟಿ ಮೊದಲಿನಷ್ಟೆ ಹರಿತವಾಗಿದೆ. ಅಂದಿನ ರೊಚ್ಚು, ರಭಸ, ದುಡುಕು ಕಡಿಮೆಯಾಗಿದ್ದರೂ ತನ್ನತನದ ಕೆಚ್ಚು, ಸೋಲರಿಯದ ಶಕ್ತಿ ಎಂದಿನಂತೆಯೇ ಇವೆ. ಸಮಸ್ಯೆಯ ಪೂರ್ವಾಪರಗಳನ್ನೆಲ್ಲ ಕೂಲಂಕಷವಾಗಿ ವಿವೇಚಿಸಿ ನೋಡುವ ತಾಳ್ಮೆ ಹೆಚ್ಚಿದೆ. ಸುತ್ತುಮುತ್ತಿನ ಜಗತ್ತಿನಲ್ಲಿ, ನಿತ್ಯದ ಸಮಾಜ ಜೀವನದಲ್ಲಿ ಎಷ್ಟೇ ಕೊಳೆಯನ್ನೂ, ಕೆಡುಕನ್ನೂ ಕಂಡರೂ ಮೊದಲಿನಂತೆ ಉದ್ವೇಗಗೊಳ್ಳದೆ ಜಗತ್ತಿನ ರೀತಿಯ ಬಗ್ಗೆ, ಜನದ ದೌರ್ಬಲ್ಯದ ಬಗ್ಗೆ ಅವರಲ್ಲಿ ಅನುಕಂಪ, ಸಹಾನುಭೂತಿ ಬೆಳೆಯುತ್ತಿದೆ. ಅವರನ್ನು ಕಂಡಾಗಲೆಲ್ಲ ನನಗೆ ವಿ.ಸೀ. ಅವರ 'ಅಭೀಃ' ಕವಿತೆಯ ನಾಲ್ಕು ಸಾಲುಗಳು ನೆನಪಾಗುತ್ತವೆ:

"ಮಣಿಯದಿಹ ಮನವೊಂದು ಸಾಧಿಸುವ ಹಟವೊಂದು
ನಿಜದ ನೇರಕೆ ನಡೆವ ನಿಶ್ಚಲತೆಯೊಂದು
ಅನ್ಯಾಯಕೆಂದೆಂದು ಬಾಗದೆಚ್ಚರವೊಂದು
ಮರುಕಕ್ಕೆ ಪ್ರೇಮಕ್ಕೆ ಚಿರ ತೆರೆದ ಎದೆಯೊಂದು"

ಈ ಒಂದೊಂದೂ ಕಟ್ಟೀಮನಿಯವರ ವ್ಯಕ್ತಿತ್ವದಲ್ಲಿ ಕಂಡರಿಸಿದಂತಿವೆ.

ಹಳ್ಳಿಗಳ ಹಾಗೂ ನಗರಗಳ ನಾನಾ ಬಗೆಯ ಅಂತಸ್ತಿನ ಜನರ ಜೀವನದ ಗಾಢವಾದ ಅನುಭವ, ಸಮಾಜದ ಸೂಕ್ಷ್ಮ ನಿರೀಕ್ಷಣೆ, ಸ್ವಂತ ಬದುಕಿನ ಸಂಕಷ್ಟಗಳು ಹಾಗೂ ಸಂಚಾರೀ ಜೀವನ ಅವರ ಸಾಹಿತ್ಯ ನಿರ್ಮಿತಿಗೆ ವಿಪುಲವಾದ ವಸ್ತುವನ್ನೊದಗಿಸಿವೆ. ಇದುವರೆಗೆ ಪ್ರಕಟವಾಗಿರುವ ಒಂಬತ್ತು ಕಥಾ ಸಂಗ್ರಹಗಳು, ಮೂವತ್ತೆರಡು ಕಾದಂಬರಿಗಳು, ಕ್ರಾಂತಿಕಾರಿ ಮನೋಧರ್ಮದಿಂದ, ವಸ್ತು-ಪಾತ್ರ ವೈವಿಧ್ಯದಿಂದ, ಜೀವನದ ವಾಸ್ತವ ಚಿತ್ರಣದಿಂದ ಹಾಗೂ ಅನುಭವದ ಪ್ರಾಮಾಣಿಕ ನಿರೂಪಣೆಯಿಂದ ನಮ್ಮ ನಾಡಿನ ನಾಲ್ಕೈದು ಜನ ಗಣ್ಯ ಕಾದಂಬರಿಕಾರರಲ್ಲಿ ಅವರ ವೈಶಿಷ್ಟ್ಯವನ್ನು ಎತ್ತಿ ಸಾರುತ್ತವೆ. ಲೇಖನ ವ್ಯವಸಾಯದಿಂದಲೇ ಜೀವನವನ್ನು ನಿರ್ವಹಿಸುತ್ತಿರುವ ಅವರ ಕೃತಿಗಳಲ್ಲಿ ಹಲವು ಅವಸರದಿಂದ ನಿರ್ಮಿತವಾಗಿರಬಹುದು. ಅದು ಅನಿವಾರ್ಯವೇ. ಆದರೆ ಸ್ವಕೀಯತೆ ಹಾಗೂ ನೈಜತೆಗೆ ವೀಳ್ಯವೆತ್ತಿರುವ ಹತ್ತಾರು ಕಾದಂಬರಿಗಳು, ಹಲವಾರು ಸಣ್ಣ ಕತೆಗಳು ಕನ್ನಡ ಸಾಹಿತ್ಯಕ್ಕೆ ಅವರ ವಿಶಿಷ್ಟ ಕೊಡುಗೆಯಾಗಿ ನಿಲ್ಲಬಲ್ಲವು. ಅಲ್ಲದೆ, ಅವರ ವ್ಯಕ್ತಿತ್ವದ ಅರ್ಧ ಭಾಗದಂತಿರುವ ಪತ್ರಿಕೋದ್ಯಮಕ್ಕೆ ಅವರು ಸಲ್ಲಿಸಿದ ಸೇವೆ ಸಣ್ಣದೇನೂ ಅಲ್ಲ. ಏನಿದ್ದರೂ ಇಂದು ಕಟ್ಟೀಮನಿಯವರ ಹೆಸರು ಮನೆಮಾತಾಗಿರುವುದು ಅವರ ಕಾದಂಬರಿಗಳ ಮೂಲಕ. ಈಗ ಎರಡು ವರ್ಷಗಳ ಹಿಂದೆ ಧಾರವಾಡದ ಸಾಧನಕೇರಿಯಲ್ಲಿ ಅವರೊಂದು ಪುಟ್ಟ ಮನೆಯನ್ನು ಕಟ್ಟಿಕೊಂಡಿದ್ದಾರೆ. ಆ ಮನೆಯ ಹೆಸರು 'ಕಾದಂಬರಿ'.

ಕಟ್ಟೀಮನಿಯವರ ಕಾದಂಬರೀ ಭಕ್ತರು ಅವರನ್ನು ಕಾಣಲು ಹಾತೊರೆಯುತ್ತಿರುವುದನ್ನು ನಾನು ಅನೇಕ ಸಲ ಕಂಡಿದ್ದೇನೆ. ಆದರೆ ಅವರು ಬೇಗ ಗದ್ದಲದಿಂದ ಪಾರಾಗಿಬಿಟ್ಟಿರುತ್ತಾರೆ. ಸಾರ್ವಜನಿಕ ಸಭೆ ಸಮಾರಂಭಗಳಲ್ಲಿ ವೇದಿಕೆಯ ಮೇಲೆ ವಿಶೇಷವಾಗಿ ಕಾಣಿಸಿಕೊಳ್ಳುವ ವ್ಯಕ್ತಿಯಲ್ಲ ಅವರು. ಬಂದರೆ ಯಾವುದೋ ಮೂಲೆಯಲ್ಲಿ ಸಭಿಕರ ಮನೋಭಾವಗಳನ್ನು ಅಭ್ಯಾಸ ಮಾಡುವವರಂತೆ ಕುಳಿತುಕೊಳ್ಳುತ್ತಾರೆ. ಯಾವಾಗಲೋ ಎದ್ದುಹೋಗಿರುತ್ತಾರೆ. ಒಂದು ಹಿಡಿತಕ್ಕೆ, ಕಟ್ಟಿಗೆ ಒಳಪಡುವ ಚೇತನ ಅಲ್ಲ ಅವರದು. ಅಪರಿಚಿತರೊಡನೆ ಎಷ್ಟು ಗಂಭೀರವೊ ಗೆಳೆಯರೊಡನೆ ಅಷ್ಟೇ ಸಲಿಗೆಯಿಂದ ಅವರು ಹರಟೆ ಹೊಡೆಯಬಲ್ಲರು, ಹಾಸ್ಯವನ್ನು ಮನಸಾ ಸವಿಯುತ್ತ ಕಣ್ಣಲ್ಲಿ ನೀರು ಬರುವವರೆಗೂ ನಗಬಲ್ಲರು.

ಕಟ್ಟೀಮನಿ ಜನಿಸಿದ್ದು ಬೆಳಗಾಂವಿ ಜಿಲ್ಲೆಯ ಗೋಕಾಕದಲ್ಲಿ (೧೯೧೯). ಗೋಕಾಕ ಗಟ್ಟಿ ಬಣ್ಣಕ್ಕೂ, ಜಿಗಟುತನಕ್ಕೂ ಹೆಸರಾಗಿದ್ದಿತು. (ಇಂದಿಗೂ ಅಲ್ಲಿಯ ಕರದಂಟು ಪ್ರಸಿದ್ಧವಾಗಿದೆ.) ಕಟ್ಟೀಮನಿಯವರ ಸ್ವಭಾವದಲ್ಲಿ ಬಹುಶಃ ಇವೆರಡೂ ಗುಣಗಳು ಸೇರಿರಬೇಕು. (ಡಾ. ಪಾವಟೆ, ಡಾ. ನಂದೀಮಠ, ಬೆಟಗೇರಿ ಕೃಷ್ಣಶರ್ಮ ಅವರೂ ಇದೇ ತಾಲೂಕಿನವರು) ಬೆಳೆದದ್ದು ಮಾತ್ರ ತಾಯಿಯ ಊರಾದ ಅದೇ ತಾಲೂಕಿನ ಮಲಾಮರಡಿಯಲ್ಲಿ. ಇಪ್ಪತ್ತೈದು-ಮೂವತ್ತು ಮನೆಗಳ ಆ ಚಿಕ್ಕ ಹಳ್ಳಿಯಲ್ಲಿ ಮೂರಂಕಣದ ಮನೆ ಇವರದು. ಒಂದು ಭಾಗದಿಂದ ಊರನ್ನು ಸುತ್ತುವರಿದು ಹರಿಯುವ ಬಳ್ಳಾರಿ ಹಳ್ಳ, ಸುತ್ತಲೂ ಹೊಲ-ತೋಟಗಳು, ದೂರದಲ್ಲಿ ಕೋಟೆಯಂತೆ ಕಾಣುವ ಗುಡ್ಡದ ಸಾಲು. ಕಣ್ದಿಟ್ಟಿ ಹರಿಯುವವರೆಗೂ ಬೆಳುವಲ ನಾಡಿನ ಭಾಗ್ಯದ ತೆನೆಗಳು. ಬೆಳಗಾಂವಿಯಿಂದ ಪುಣೆಗೆ ಹೋಗುವ ರೈಲು ಮಾರ್ಗದಲ್ಲಿ ಮೂರನೆಯ ನಿಲ್ದಾಣವಾದ ಸುಲಧಾಳದಲ್ಲಿ ರೈಲು ಸಿಳ್ಳು ಹಾಕಿದರೆ ಮಲಾಮರಡಿಗೆ ಕೇಳಿಸುತ್ತದೆ.

ರೈತ ಮನೆತನವಾದರೂ ಸ್ವಂತದ ಭೂಮಿಯಿಲ್ಲದ್ದರಿಂದ ತಂದೆ ಪೊಲೀಸ್ ಖಾತೆಗೆ ಸೇರಿದ್ದರು. ಹಳ್ಳಿಯ ಬಡತನದ ಜೀವನ. ಆದರೆ ತನ್ನ ಮಕ್ಕಳು ತನ್ನಂತೆ ಅಶಿಕ್ಷಿತರಾಗದೆ ಕಲಿತು ಜಾಣರಾಗಬೇಕೆಂದು ತಾಯಿಯ ಹಂಬಲ. ಇವರಿಗೆ ಒಬ್ಬ ಅಣ್ಣ, ಇಬ್ಬರು ತಮ್ಮಂದಿರು. ಆಕೆಯೇ ಕಷ್ಟಪಟ್ಟು ದುಡಿದು ಇವರೆಲ್ಲರನ್ನೂ ಓದಿಸಿದಳು. ಚಿಕ್ಕವನಿದ್ದಾಗಿನಿಂದಲೂ ಕಥೆ ಕಾದಂಬರಿಗಳನ್ನು ಓದುವ ಗೀಳು ಬಸವರಾಜನಿಗೆ. ತಂದೆ ಲಹರಿ ವ್ಯಕ್ತಿ. 'ಸಾಲೀ ಪುಸ್ತಕ ಓದೋದು ಬಿಟ್ಟು ಕಥೀ ಕಾದಂಬರಿ ಓದಿ ಹುಡುಗ ಉಡಾಳ ಆಗತಾನ' ಎಂದು ಅವರು ಬೈದರೆ, 'ಉಡಾಳ ಯಾಕಾದಾನು? ಕಥೆ ಕಾದಂಬರಿ ಬರದು ನಾಳೆ ಅವನೂ ದೊಡ್ಡ ಲೇಖಕ ಆಗತಾನ' ಎಂದು ತಾಯಿ ವಾದಿಸುತ್ತಿದ್ದಳು. 'ಕಥೆ-ಕಾದಂಬರಿ ಬರದರ ಹೊಟ್ಟೆ ತುಂಬತದೇನು?' ಎನ್ನುವರು ತಂದೆ. "ತಾಯಿಯ ಮಾತೇ ಸತ್ಯವಾಗಿ ಪರಿಣಮಿಸಿತು. ನಾನು 'ದೊಡ್ಡ' ಲೇಖಕನಾದೆನೊ ಇಲ್ಲವೊ ಗೊತ್ತಿಲ್ಲ. ಲೇಖಕನಾದದ್ದು ಮಾತ್ರ ನಿಜ. ಕಥೆ-ಕಾದಂಬರಿಗಳ ರಚನೆಯಿಂದಲೇ ಜೀವನ ನಿರ್ವಾಹ ಮಾಡುತ್ತಿರುವುದೂ ನಿಜ" ಎಂದು ತಾಯಿಯ ಪ್ರೋತ್ಸಾಹವನ್ನು ಕಟ್ಟೀಮನಿ ಕೃತಜ್ಞತೆಯಿಂದ ನೆನೆಯುತ್ತಾರೆ.

ರಜಾ ಕಾಲದಲ್ಲಿ ಅಣ್ಣ ತಮ್ಮಂದಿರೆಲ್ಲ ಹಳ್ಳಿಗೆ ಬಂದಾಗ ರಾತ್ರಿ ಅಂಗಳದಲ್ಲಿ ಚಾಪೆಯ ಮೇಲೆ ಸುತ್ತಲೂ ಮಕ್ಕಳನ್ನು ಕೂಡಿಸಿಕೊಂಡು ತಾಯಿ ನಿದ್ರೆ ಬರುವವರಗೂ ಕಥೆ ಹೇಳುತ್ತಿದ್ದಳು. ಆಕೆಗೆ ಗೊತ್ತಿದ್ದ ಜಾನಪದ ಕಥೆ ಕವಿತೆಗಳ ಸಂಗ್ರಹ ದೊಡ್ಡದು. "ಬೇಸಗೆಯ ನಿರಭ್ರ ನಿರ್ಮಲ ಆಗಸದಲ್ಲಿ ತಾರೆಗಳು ಥಳಥಳಿಸುತ್ತಿದ್ದುತೆ, ಬೀಸುಗಾಳಿಗೆ ಮೈಯೊಡ್ಡಿ ಕುಳಿತು ತಾಯಿ ಬಣ್ಣಿಸುತ್ತಿದ್ದ ಸೀತಾ-ರಾಮರ, ಸುಭದ್ರಾ-ಅರ್ಜುನರ, ರುಕ್ಮಿಣೀ-ಕೃಷ್ಣರ, ಕಿತ್ತೂರು ಚೆನ್ನಮ್ಮ, ಸಂಗೊಳ್ಳಿ ರಾಯಣ್ಣ, ಸಿಂಧೂರ ಲಕ್ಷ್ಮಣರ ರಮಣೀಯ ಕಥೆಗಳನ್ನಾಲಿಸುತ್ತ ನಾವು ಕಲ್ಪನಾಲೋಕದಲ್ಲಿ ವಿಹರಿಸುತ್ತಿದ್ದೆವು" ಎಂದು ಬಸವರಾಜ ತಮ್ಮ ಬಾಲ್ಯವನ್ನು ನೆನೆದು ಹೇಳುತ್ತಾರೆ. ಶಾಲೆಯ ಗ್ರಂಥಾಲಯದಲ್ಲಿದ್ದ ಕಥೆ ಕಾದಂಬರಿಗಳನ್ನು ಮನೆಗೆ ತೆಗೆದುಕೊಂಡು ಬಂದು ಎರಡು ಮೂರು ತಾಸು ತಾಯಿಯೆದುರು ಕುಳಿತು ಅವುಗಳನ್ನೋದಿ ಹೇಳಬೇಕಾಗುತ್ತಿತ್ತು. ಗಳಗನಾಥರ, ವೆಂಕಟಾಚಾರ್ಯರ, 'ಇಂದಿರಾ'ದಿಂದ ಪ್ರಭಾವಿತರಾಗಿ 'ಚಂದಿರಾ' ಎಂಬ ಇನ್ನೂರು ಪುಟಗಳ ಕಾದಂಬರಿಯೊಂದನ್ನು ಬರೆದು ಯಾರಿಗೂ ತೋರಿಸದೆ ಪೆಟ್ಟಿಗೆಯಲ್ಲಿ ಮುಚ್ಚಿ ಇಟ್ಟಿದ್ದರಂತೆ. ಆಗ ಇವರ ವಯಸ್ಸು ಹದಿಮೂರು!

ಇವರ ಪ್ರಾಥಮಿಕ ಶಾಲೆಯ ಅಭ್ಯಾಸವೆಲ್ಲ ಅಲೆದಾಟದಲ್ಲಿಯೇ ನಡೆಯಿತು. ತಂದೆಗೆ ವರ್ಗವಾದಲ್ಲೆಲ್ಲ ಇವರೂ ಗುಳೇ ಹೊರಡಬೇಕು. ಗೋಕಾಕ, ಮುನವಳ್ಳಿ, ಬೆಳಗಾಂವಿ, ಚಿಕ್ಕೋಡಿ, ನಿಪ್ಪಾಣಿ, ತಿರುಗಿ ಬೆಳಗಾಂವಿ ಹೀಗೆ. ಆಗ ನಿಪ್ಪಾಣಿಯಲ್ಲಿ ಕನ್ನಡ ಶಾಲೆ ಇರದ್ದರಿಂದ, ಒಂದು ವರ್ಷ ಹಾಗೇ ಹೋಯಿತು. ಬೆಳಗಾಂವಿಯ ಎರಡನೇ ನಂಬರ ಶಾಲೆಯಿಂದ ಇವರು ಮುಲ್ಕೀ ಪರೀಕ್ಷೆ ಪಾಸಾದರು. ಆಗ ಪ್ರ.ಗೋ. ಕುಲಕರಣಿಯವರಿಂದ ವಾಚನ-ಲೇಖನಕ್ಕೆ ಪ್ರೋತ್ಸಾಹ ದೊರೆಯಿತು. ತಂದೆ ಪುಣೆ ರೈಲ್ವೇ ಸ್ಟೇಷನ್ನಿನಲ್ಲಿ ಕೆಲಸ ಹಿಡಿದಾಗ ಎರಡು ವರ್ಷ ಪುಣೆಯ ಧನರಾಜಗಿರಿ ಹೈಸ್ಕೂಲ್ ಸೇರಿ ಮರಾಠಿಯನ್ನೂ ಕಲಿತದ್ದಾಯಿತು. ಪ್ರಸಿದ್ಧ ಲೇಖಕ ಪಿ.ಕೆ. ಆತ್ರೆ ಆಗ ಆ ಹೈಸ್ಕೂಲಿನ ಪ್ರಿನ್ಸಿಪಾಲ್ ಆಗಿದ್ದರು. ತಂದೆ ಅಲ್ಲಿಯ ನೌಕರಿ ಬಿಟ್ಟು ತಿರುಗಿ ಊರಿಗೆ ಬಂದು ಜಡ್ಡಿನಿಂದ ತಮ್ಮ ೫೫ನೆಯ ವಯಸ್ಸಿನಲ್ಲಿ ತೀರಿಕೊಂಡರು. ತಾಯಿಯೇ ಮನೆತನದ ಆರಭಾರವನ್ನೆಲ್ಲ ಹಿಡಿಯಬೇಕಾಯಿತು. ಬೆಳಗಾಂವಿಯ ಸೆಟ್ಟಿಗಲ್ಲಿಯಲ್ಲಿ ಮನೆಮಾಡಿ ಗಿಲಗಂಚಿ ಅರ್ಟಾಳ ಹೈಸ್ಕೂಲಿನಲ್ಲಿ ಅಭ್ಯಾಸ ಮುಂದುವರಿಯಿತು. ಆಗ ಶಾಲೆಯ ಕೈಬರೆಹದ ಪತ್ರಿಕೆಗೆ ಕಥೆ, ಲೇಖನ ಬರೆದು 'ಭಲೆ' ಎನಿಸಿಕೊಂಡಾಯಿತು. ಅನಂತಶಯನ ಗಲ್ಲಿಯ 'ನಾಡನರಿಗಳ ಸಂಘ'ದಲ್ಲಿ ಸೇರಿ ಕನ್ನಡದ ಚಟುವಟಿಕೆಗಳಲ್ಲಿ ಭಾಗವಹಿಸಿದರು. ಆ ಸಂದರ್ಭದಲ್ಲಿಯೇ ಬ್ರಾಹ್ಮಣ-ಬ್ರಾಹ್ಮಣೇತರ ದ್ವೇಷ ಭಾವನೆಯ ಪ್ರತ್ಯಕ್ಷ ಅನುಭವ ಇವರಿಗಾಯಿತು. ಅದೇ ಕಾಲಕ್ಕೆ ಮನೆತನದ ಕಠಿಣ ಪರಿಸ್ಥಿತಿಯಿಂದಾಗಿ ಬಡತನದ ಬವಣೆಯನ್ನೂ ಸಾಕಷ್ಟು ಅನುಭವಿಸಿಯಾಯಿತು. ಒಪ್ಪೊತ್ತು ಊಟ, ಹರಿದ ಅಂಗಿ, ಚೊಣ್ಣಕ್ಕೆ ಹತ್ತು ಕಡೆ ತೇಪೆ ಹಚ್ಚಿದ ಹೊಲಿಗೆ (ಅವರ ಕಥೆ ಕಾದಂಬರಿಗಳಲ್ಲಿ ಬಡತನದ ಯಥಾರ್ಥ ಚಿತ್ರಣ ಯಶಸ್ವಿಯಾಗಿರುವುದಕ್ಕೆ ಈ ಅನುಭವ ಸಾಮಗ್ರಿಯೂ ಕಾರಣ) ಒಂದೆಡೆ ಬಡತನ, ಇನ್ನೊಂದೆಡೆ ಲೇಖನ ಕಲೆಯಲ್ಲಿ ಆಸ್ಥೆ. ಬಸವರಾಜರು ಹದಿನಾರನೆಯ ವರ್ಷದಲ್ಲಿಯೇ ಮ್ಯಾಟ್ರಿಕ್ ಪರೀಕ್ಷೆಗೆ

ಕುಳಿತುಕೊಳ್ಳದೆ ಆಲ್ಜಿಬ್ರಾ ಜಾಮೆಟ್ರಿಗಳಿಗೆ ಶರಣು ಹೊಡೆದು ಸಾಹಿತ್ಯ ಕ್ಷೇತ್ರದಲ್ಲಿ ಪ್ರವೇಶಿಸಿದರು. ಅವರೊಡನೆ ವಿಶೇಷ ಸಂಭಾಷಣೆ ನಡೆಸಿದಾಗ ಮುಂದೆ ಕಾಣಿಸಿದಂತೆ ಇನ್ನೂ ಹಲವು ವಿಷಯಗಳು ತಿಳಿದು ಬಂದವು.

"ಬಸವರಾಜರೆ, ನೀವು ಪತ್ರಿಕೋದ್ಯಮಕ್ಕೆ ಹೇಗೆ ಹೊರಳಿದಿರಿ"?

"೧೯೩೬-೩೭ರ ಕಾಲ. ಆಗ ಕನ್ನಡದಲ್ಲಿ ಕಥೆ ಬರೆಯುತ್ತಿದ್ದವರೂ ಕಡಿಮೆ. ಕಾದಂಬರಿಕಾರರ ಸಂಖ್ಯೆಯಂತೂ ಬೆರಳಿನಿಂದೆಣಿಸುವಷ್ಟಿದ್ದಿತು. ಇಂದಿನಂತೆ ಅಂದು ಲೇಖಕರಿಗೆ ಸಂಭಾವನೆಯೂ ಸಿಕ್ಕುತ್ತಿರಲಿಲ್ಲ. ಎಂತಲೇ ಆರಂಭದಲ್ಲಿ ನಾನು ಪತ್ರಿಕೋದ್ಯಮದಲ್ಲಿ ದುಡಿಯುವುದು ಅನಿವಾರ್ಯವಾಯಿತು."

ಅಂದಿನಿಂದ ಬಸವರಾಜರ ಬಾಳಿನ ಮತ್ತೊಂದು ಅಧ್ಯಾಯ ಪ್ರಾರಂಭವಾಯಿತು. ಆಗ 'ಸಂಯುಕ್ತ ಕರ್ನಾಟಕ' ಬೆಳಗಾಂವಿಯಿಂದ ಪ್ರಕಟವಾಗುತ್ತಿತ್ತು. ಶ್ರೀಗಳಾದ ಮೊಹರೆ, ಪುರೋಹಿತರ ಪರಿಚಯ ಮೊದಲಿನಿಂದಲೂ ಇತ್ತು. ದಿವಾಕರರು ಆಗತಾನೆ ಜೇಲಿನಿಂದ ಬಿಡುಗಡೆ ಹೊಂದಿ ಬೆಳಗಾಂವಿಗೆ ಬಂದಿದ್ದರು. ಮೊಹರೆಯವರ ಮುಖಾಂತರ ಅವರ ಪರಿಚಯವಾಯಿತು. ಹದಿನಾರು ವರ್ಷದ ಈ ಲಂಡ ಜೊಣ್ಣದ ಹುಡುಗನನ್ನು ಸರಿಯಾಗಿ ಪರೀಕ್ಷೆ ಮಾಡಿಯೇ 'ಸಂಯುಕ್ತ ಕರ್ನಾಟಕ'ದಲ್ಲಿ ಉದ್ಯೋಗಕ್ಕೆ ಸೇರಿಸಿಕೊಳ್ಳಲಾಯಿತು. ಹಗಲೆಲ್ಲ ಕರಡು ತಿದ್ದುವ ಕೆಲಸ, ಖಾನಾವಳಿಯಲ್ಲಿ ಊಟದ ಏರ್ಪಾಡು. ರಾತ್ರಿ ಆಫೀಸಿನಲ್ಲಿಯೇ ಮಲಗುವುದು. ವಾರದ ಸಂಚಿಕೆಗೆ 'ಏನಾದರೂ ಕಥೆ ಬರಿಪಾ' ಎನ್ನುತ್ತಿದ್ದರು ಪುರೋಹಿತರು. ದಿವಾಕರರ ಪರಿಚಯದಿಂದಾಗಿ ಕಾಂಗ್ರೆಸ್ ಸಂಸ್ಥೆಯಲ್ಲಿ ವಿಶ್ವಾಸ ಬೆಳೆಯಿತು. ರಾಷ್ಟ್ರಭಕ್ತಿ ಮೈಗೊಂಡಿತು. ಆ ಕಾಲದ ಪೊಲೀಸ್ ಖಾತೆಯಲ್ಲಿ ದುಡಿಯುತ್ತಿದ್ದವರ ಮಗ ನಿಷ್ಠಾವಂತ ಕಾಂಗ್ರೆಸಿಗನಾದ. ಅಂದು ತೊಡತೊಡಗಿದ ಶುಭ್ರ ಖಾದಿ ಬಟ್ಟೆ ಇಂದಿಗೂ ಕಟ್ಟೀಮನಿಯವರ ಆಪ್ತತ್ವವನ್ನು ಪಡೆದಿದೆ. ಸಣ್ಣವರೆನ್ನದೆ ದೊಡ್ಡವರೆನ್ನದೆ ಎಲ್ಲರೊಡನೆ ಒಂದಾಗಿ ನಡೆದುಕೊಳ್ಳುತ್ತಿದ್ದ, ಅಂದಿನ ಕರ್ನಾಟಕದ ನಾಯಕರಾದ ದಿವಾಕರರ ಬಗ್ಗೆ ಇವರಿಗೆ ಆತ್ಮೀಯತೆ, ಅಭಿಮಾನ ಉಂಟಾಯಿತು.

ಅಲ್ಲಿ ಆರು ತಿಂಗಳು ಕೆಲಸಮಾಡಿ ಕಟ್ಟೀಮನಿಯವರ ಕಾರವಾನ್ ಮುಂದೆ ಸಾಗಿತು. ('ಕಾರವಾನ್' ಎಂಬ ಕಥಾಸಂಗ್ರಹ ಮುಂದೆ ೧೯೪೫ರಲ್ಲಿ ಪ್ರಕಟವಾಯಿತು.) ಹುಬ್ಬಳ್ಳಿಯ 'ತರುಣ ಕರ್ನಾಟಕ'ದಲ್ಲಿ ಉಪಸಂಪಾದಕರಾಗಿ ಒಂದು ವರ್ಷ ಕೆಲಸ ಮಾಡಿ, ಸಂಪಾದಕರ ನಡವಳಿಕೆ ಮನಸ್ಸಿಗೆ ಬರದೆ ರಾತ್ರಿ ಹೇಳದೆ ಕೇಳದೆ ಬ್ಯಾಗು, ಹಾಸಿಗೆ ಸುರುಳಿ ಹೊತ್ತುಕೊಂಡು ಧಾರವಾಡಕ್ಕೆ ಪ್ರಯಾಣ. 'ಸಮಾಜ' ಮಾಸಪತ್ರಿಕೆಯಲ್ಲಿ ಕೆಲಸ. ಘಾಣೇಕರರು 'ಪ್ರಜಾಮತ' ಸೇರಿಕೊಂಡ ಮೇಲೆ ಇವರೂ ಬೆಂಗಳೂರಿಗೆ ಹೋದರು. ಆಗಲೇ ಅ.ನ.ಕೃ. ಪರಿಚಯ. ಅಲ್ಲಿಂದ ತಿರುಗಿ ಹಳ್ಳಿಗೆ-ಮತ್ತೆ ಹುಬ್ಬಳ್ಳಿಯ 'ಲೋಕಮತ' ದಿನಪತ್ರಿಕೆಯಲ್ಲಿ ಎರಡು ತಿಂಗಳು ಸಂಬಳವಿಲ್ಲದೆ ದುಡಿತ-ಮುಂದೆ ಮೂರು ವರ್ಷ ಗದುಗಿನ 'ಕರ್ನಾಟಕ ಬಂಧು' ವಾರಪತ್ರಿಕೆಯ

ಸಂಪಾದಕ ವರ್ಗದಲ್ಲಿ ಸೇರಿ ಅದನ್ನು ಯಶಸ್ವಿಯಾಗಿ ನಡೆಸಿ ಮೂವತ್ತು ಸಾವಿರದವರೆಗೂ ಪ್ರತಿಗಳನ್ನು ಹೆಚ್ಚಿಸಿದ್ದು - ರಾತ್ರಿ ಎರಡು ಗಂಟೆಯವರೆಗೂ ಬಿಡುವಿಲ್ಲದ ದುಡಿತ. ಬರವಣಿಗೆ ಕುದುರಿ ಲೇಖನಿ ಹರಿತಗೊಂಡದ್ದು ಇಲ್ಲಿಯೇ. ಜೊತೆಗಿದ್ದ 'ಪ.ವಿ.'ಯವರನ್ನು ನಿಷ್ಕಾರಣವಾಗಿ ಹೊರಗೆ ಹಾಕಿದ್ದರಿಂದ ಅವರೊಡನೆ ಇವರೂ ಹೊರಬಿದ್ದರು.

ಬೆಂಗಳೂರಿನಲ್ಲಿ ಬಿ. ಶಿವಮೂರ್ತಿ ಶಾಸ್ತ್ರಿಗಳ 'ಸ್ವತಂತ್ರ ಕರ್ನಾಟಕ' ವಾರಪತ್ರಿಕೆಯಲ್ಲಿ ಸೇರಿದಾಗ (೧೯೪೧) ಸಂಸ್ಥಾನದಲ್ಲಿಯೂ ಕಾಂಗ್ರೆಸ್ ಚಳವಳಿ ಜೋರಾಗಿತ್ತು. ಪತ್ರಿಕೆಯಲ್ಲಿನ ಲೇಖನವೊಂದರ ಬಗೆಗೆ ಭಿನ್ನಾಭಿಪ್ರಾಯದ ಕಾರಣ ಸಂಪಾದಕರು ಇವರಿಗೆ ನಮಸ್ಕಾರ ಹೇಳಿದರು. ಸರಿ; ಮುಂದೆ ಆರು ತಿಂಗಳು ಮತ್ತೆ ತಿರುಗಿ 'ಕರ್ನಾಟಕ ಬಂಧು'. ಆಗ ವೀರಭದ್ರಪ್ಪ ಬಳ್ಳಾರಿ ಅವರ ಪರಿಚಯ. ಅವರೊಡನೆ ಬೆಂಗಳೂರಿಗೆ ಹೋಗಿ 'ವಾಣಿ' ಮಾಸಪತ್ರಿಕೆ ಪ್ರಾರಂಭಿಸಿ ಮೊದಲ ಸಂಚಿಕೆ ಬರುವುದರಲ್ಲಿಯೇ ಇವರಿಗೆ ಅಲ್ಲಿಂದ ಬಿಡುಗಡೆ. ಆಗಲೇ ಸಿದ್ಧವನಹಳ್ಳಿ ಕೃಷ್ಣಶರ್ಮರ ಪರಿಚಯ. ೧೯೪೨ರಲ್ಲಿ ಧಾರವಾಡದ 'ವಿಶಾಲ ಕರ್ನಾಟಕ' ದಿನಪತ್ರಿಕೆಯಲ್ಲಿ ಕೆಲಸ ಮಾಡುವಾಗ ಸ್ವಾತಂತ್ರ್ಯ ಚಳವಳಿಯಲ್ಲಿ ಸೇರಿ ಒಂಬತ್ತು ತಿಂಗಳು ಜೈಲುವಾಸ. ಬೆಂಗಳೂರಿಗೆ ಹೋಗಿ ಎಸ್. ನಂಜಪ್ಪನವರೊಂದಿಗೆ ಹೊಸದಾಗಿ 'ಉಷಾ' ಮಾಸಪತ್ರಿಕೆಯ ಪ್ರಾರಂಭ; ಅದೇ ಹೊತ್ತಿಗೆ ಅವರ ಮದುವೆಯೂ ಆಯಿತು. (೧೯೪೪) ಅದು ಪ್ರಗತಿಶೀಲ ಸಾಹಿತ್ಯದ ಆಂದೋಲನ ನಡೆದ ಕಾಲ. 'ಉಷಾ' ಪ್ರಗತಿಶೀಲ ಲೇಖಕರ ಪರೇಡನ್ನೇ ನಡೆಸಿತು. ಆ ಸಂದರ್ಭದಲ್ಲಿ ಅನೇಕ ತರುಣ ಲೇಖಕರನ್ನು, ಕವಿಗಳನ್ನು ಬೆಳಕಿಗೆ ತಂದ ಶ್ರೇಯಸ್ಸು ಕಟ್ಟೀಮನಿಯವರಿಗಿದೆ. ಕಟ್ಟೀಮನಿ ಆ ಪತ್ರಿಕೆಯ ಸಂಪಾದಕತ್ವ ವಹಿಸಿದ್ದು ಎರಡೇ ಎರಡು ವರ್ಷ. ಆದರೆ ಆ ಸ್ವಲ್ಪ ಕಾಲದಲ್ಲಿಯೇ ಅದು ನಾಡಿನ ಸಾಹಿತ್ಯ ಕ್ಷೇತ್ರದಲ್ಲಿ ಮಾಡಿದ ಕ್ರಾಂತಿ ಅಗಾಧವಾದುದು.

ಅಲ್ಲಿಂದ ಮತ್ತೆ 'ಕರ್ನಾಟಕ ಬಂಧು' - ನಂತರ ಬೆಂಗಳೂರಿಗೆ, ಆರ್. ಬಸವರಾಜ ಮತ್ತು ಜಿ. ಬಸವರಾಜ ಅವರೊಂದಿಗೆ 'ಸ್ವತಂತ್ರ' ಮಾಸ ಪತ್ರಿಕೆ. ಅದರಿಂದ ಖರ್ಚು ಮೈಮೇಲೆ ಬಂದದ್ದರಿಂದ ದಾವಣಗೆರೆಗೆ ಬಂದು ಲಿಮಿಟೆಡ್ ಕಂಪನಿ ಮಾಡಿ ಅದೇ ಪತ್ರಿಕೆಯನ್ನು ಇಲ್ಲಿ ಹೊರಡಿಸಲಾಯಿತು. ಆ ಸಮಯದಲ್ಲಿ ಬಂಡವಾಳಗಾರ-ಕೂಲಿಗಾರರ ಸಮಸ್ಯೆಯ ಹಲವಾರು ಅನುಭವಗಳ ಅರಿವಾಯಿತು. ಬಂಡವಾಳಗಾರರ ಕೈವಾಡದಿಂದಾಗಿ ಪತ್ರಿಕೆ ನಿಂತಿತು (೧೯೪೮). ('ಜ್ವಾಲಾಮುಖಿಯ ಮೇಲೆ'- ಕಾದಂಬರಿಗೆ ಇಲ್ಲಿಯ ಅನುಭವವೇ ವಸ್ತುವಾಗಿದೆ) ಧಾರವಾಡಕ್ಕೆ ಬಂದು 'ಸಮಾಜ' ಮಾಸ ಪತ್ರಿಕೆಯ ಪುನರುಜ್ಜೀವನ - 'ಪ್ರಗತಿಶೀಲ ಸಾಹಿತ್ಯ ಮಾಲೆ'ಯನ್ನು ಪ್ರಾರಂಭಿಸಿ ನಾಲ್ಕಾರು ಪುಸ್ತಕಗಳನ್ನು ಪ್ರಕಟಿಸಿದ್ದು ಮರಳಿ ಮಲಾಮರಡಿಗೆ ಪ್ರಯಾಣ.

ಹತ್ತು-ಹನ್ನೆರಡು ವರ್ಷ ಇಷ್ಟೆಲ್ಲ ಸುತ್ತಾಡಿ ಪತ್ರಿಕೆಯ ಮಾಲಿಕರ-ಕೆಲಸಗಾರರ, ಬಂಡವಾಳಗಾರರ-ಕೂಲಿಗಾರರ, ನಾನಾ ಸ್ವಭಾವದ ಕವಿಗಳ-ಲೇಖಕರ, ಸಮಾಜ-ಸರಕಾರದ

ಕಟು-ಮಧುರ ಅನುಭವಗಳನ್ನು ಹೊತ್ತು, ಬಂದುದನ್ನು ಬಂದಂತೆಯೇ ಸ್ವೀಕರಿಸುತ್ತ, ಆಗಿಹೋದ ಸಂಗತಿಗಳಿಗೆ ಅನುತಾಪಗೊಳ್ಳದೆ ಕಟ್ಟೀಮನಿಯವರ ಕಾರವಾನ್ ಮರಳಿ ಮನೆಗೆ ಬಂದಿತು.

"ಅಲ್ರೀ ಕಟ್ಟೀಮನಿ, ಪತ್ರಿಕಾ ವ್ಯವಸಾಯದಿಂದ ಇಷ್ಟೆಲ್ಲ ಕಟು ಅನುಭವ ಪಡೆದಿದ್ದರೂ ನಿಮಗೆ ಈಗಲೂ ಆ ವ್ಯವಸಾಯದಲ್ಲಿ ಆಸ್ಥೆ ಉಳಿದಿದೆಯೇ?" ಎಂಬ ನನ್ನ ಪ್ರಶ್ನೆಗೆ ಅವರು ಉತ್ತರಿಸಿದರು.

"ಹೌದು, ನನಗೆ ಈಗಲೂ ಅದರ ಬಗ್ಗೆ ಪ್ರೇಮವಿದೆ. ಪತ್ರಿಕಾ ವ್ಯವಸಾಯದಲ್ಲಿ ಜೀವಂತಿಕೆಯಿದೆ, ಶಕ್ತಿಯಿದೆ. ಸಂಪಾದಕನಿಗೂ ತುಂಬ ಪ್ರಭಾವವಿರುತ್ತದೆ. ಶಕ್ತಿಪೂರ್ಣ ಶೈಲಿಯ ಲೇಖಕ ಖಂಡಿತವಾಗಿಯೂ ಜನಮನದ ಮೇಲೆ ಪರಿಣಾಮವುಂಟು ಮಾಡಬಲ್ಲ. ಸರಿಯಾದ ಅವಕಾಶ ಸಿಕ್ಕರೆ ಈಗಲೂ ಪತ್ರಿಕೆ ಹೊರಡಿಸುವ ವಿಚಾರವಿದೆ. ಈಚೆಗೆ ಅನೇಕ ಪತ್ರಿಕೆಗಳು ಬಂಡವಾಳಗಾರರ ಕೈಯಲ್ಲಿ ಸಿಕ್ಕಿಕೊಂಡು ಶ್ರೀಸಾಮಾನ್ಯನ ಪ್ರಗತಿಗಾಗಿ ಅವುಗಳಿಂದ ಪರಿಣಾಮಕಾರಿಯಾದ ಕಾರ್ಯ ನಡೆಯದಂತಾಗಿದೆ."

ಈ ಜಂಜಾಟದಲ್ಲಿಯೂ ಅವರ ಕಥೆ ಬರೆಯುವುದನ್ನು ನಿಲ್ಲಿಸಿರಲಿಲ್ಲ. 'ಕಾರವಾನ್' 'ಗುಲಾಬಿ ಹೂ' 'ಆಗಸ್ಟ್ ಒಂಬತ್ತು' ಈ ಕಥಾ ಸಂಗ್ರಹಗಳೂ ಪ್ರಕಟವಾಗಿದ್ದವು. ಬಡತನ, ಪತ್ರಿಕಾ ವ್ಯವಸಾಯ, ಸ್ವಾತಂತ್ರ್ಯ ಚಳವಳಿಗಳ ಅನುಭವವೇ ಇಲ್ಲಿಯ ಹಲವಾರು ಕಥೆಗಳಿಗೆ ವಸ್ತುವಾಗಿದೆ. ಸಾಹಿತ್ಯ ರಾಜಕೀಯ ಪ್ರಚಾರವಾಗುವ ಅಪಾಯ ಇರುವೆಡೆಯಲ್ಲೆಲ್ಲ ಕಲೆ ಅದರಿಂದ ಪಾರುಗೊಳಿಸಿತು. 'ಸೆರೆಯಿಂದ ಹೊರಗೆ' ಸಂಗ್ರಹ ಪ್ರಕಟವಾಗುವ ವೇಳೆಗೆ ಕಟ್ಟೀಮನಿ ಸಣ್ಣಕತೆಯ ಕಲಾತ್ಮಕ ಸಿದ್ಧಿಯನ್ನು ಕೈವಶ ಮಾಡಿಕೊಂಡಿದ್ದರು. ಅವರ ಮೊದಲ ಕಾದಂಬರಿ 'ಸ್ವಾತಂತ್ರ್ಯದೆಡೆಗೆ' ೧೯೪೭ರಲ್ಲಿ ಹೊರಬಂದಿತು. ಹಿಂಡಲಗಿ ಸೆರೆಮನೆಯಲ್ಲಿದ್ದಾಗಲೇ ಆ ಕಾದಂಬರಿಯ ಯೋಜನೆ ಸಿದ್ಧವಾಗಿತ್ತು. ಪತ್ರಿಕೆಗಳ ಸಹವಾಸ ತ್ಯಜಿಸಿ ಧಾರವಾಡಕ್ಕೆ ಬಂದು ಕುಳಿತಾಗಲೇ ಅದರ ಎರಡನೆಯ ಭಾಗ 'ಮಾಡಿ ಮಡಿದವರು' ರಚಿಸಲು ಇವರಿಗೆ ಶಕ್ಯವಾಯಿತು.

ಧಾರವಾಡದಿಂದ ಮಲಾಮರಡಿಗೆ ಮರಳಿದ ಮೇಲೆ ಕಾದಂಬರಿ ರಚನೆಗೆ ಬಿರುಸಾಗಿ ತೊಡಗಿದರು. 'ಮಾಡಿ ಮಡಿದವರು' ಕಾದಂಬರಿಗೆ ಲಭಿಸಿದ ಸ್ವಾಗತವೇ ಅವರನ್ನು ಪೂರ್ಣ ಸಮಯದ ಕಾದಂಬರಿಕಾರರನ್ನಾಗಿಸಿತು. ಅವರ ಬಾಳಿನ ಮೂರನೆಯ ಅಧ್ಯಾಯಕ್ಕೆ ಅದೇ ನಾಂದಿಯಾಯಿತು. ಸ್ವಾತಂತ್ರ್ಯ ಚಳುವಳಿಯನ್ನು ಸರಿಯಾಗಿ ಅರ್ಥ ಮಾಡಿಕೊಂಡು ಸಾಮಾನ್ಯ ಜನತೆಯ ಜೀವನದ ಹಿನ್ನೆಲೆಯಲ್ಲಿ ಕಲಾತ್ಮಕವಾಗಿ ಮೂಡಿದ ಕಾದಂಬರಿ 'ಮಾಡಿ ಮಡಿದವರು'. ಪಠ್ಯಪುಸ್ತಕವಾಗಿ ಎಂಟು ಮುದ್ರಣಗಳನ್ನು ಕಂಡ ಆ ಕಾದಂಬರಿಯನ್ನು ಅಸಂಖ್ಯ ವಿದ್ಯಾರ್ಥಿಗಳು ಈಗಲು ಪ್ರೀತಿಯಿಂದ ಓದುತ್ತಾರೆ.

ಮಲಾಮರಡಿಯ ಬಿದಿರು ತಟ್ಟಿಯ ಆ ಚಿಕ್ಕ ಕೋಣೆಯನ್ನು ಕಂಡವರಿಗೆ ಕಟ್ಟೀಮನಿ ಇಲ್ಲಿ ಕುಳಿತೇ 'ಜ್ವಾಲಾಮುಖಿಯ ಮೇಲೆ', 'ಮೋಹದ ಬಲೆಯಲ್ಲಿ', 'ಖಾನಾವಳಿಯ ನೀಲಾ', 'ಮಣ್ಣು ಮತ್ತು ಹೆಣ್ಣು' ಮೊದಲಾದ ಉತ್ಕೃಷ್ಟ ಕೃತಿಗಳನ್ನು ರಚಿಸಿದರೇ ಎಂದು ಆಶ್ಚರ್ಯವಾಗುತ್ತದೆ.

ಅದುವರೆಗೆ ಹದಗೊಂಡ ಜೀವನದ ಅನುಭವಗಳನ್ನೆಲ್ಲ ಪಾಕಗೊಳಿಸಿ, ವಸ್ತುವಿಗೆ ಉಚಿತವಾದ ವಿಧಾನವಾದ ಕಾದಂಬರಿಯ ಚೌಕಟ್ಟಿನಲ್ಲಿ ಜೀವಂತ ಪಾತ್ರಗಳ ಮೂಲಕ ನೀಡಿದ ಆ ಕಾಲ ಕಟ್ಟೀಮನಿಯವರ ಕಾದಂಬರಿ ಸೃಷ್ಟಿಯ ಪರ್ವಕಾಲ. ಆನಂದಕಂದರ ತರುವಾಯ ಉತ್ತರ ಕರ್ನಾಟಕದ ಹಳ್ಳಿಯ ಜೀವನವನ್ನು ಹುಲುಸಾಗಿ ಚಿತ್ರಿಸಿದವರು ಕಟ್ಟೀಮನಿಯವರೇ ಎಂದು ಹೇಳಿದರೆ ತಪ್ಪಾಗದು. 'ಮಣ್ಣು ಮತ್ತು ಹೆಣ್ಣು', 'ಹೆಂಡತಿ' ಮೊದಲಾದ ಕಥಾ ಸಂಗ್ರಹಗಳಲ್ಲಿ ಹಳ್ಳಿಯ ಜೀವನವನ್ನು ಹಸುರಾಗಿ, ಅದರ ಒಳಿತು-ಕೆಡುಕು, ಮೋಜು-ಮುಗ್ಧತೆ, ಸುಖ-ದುಃಖ, ಪ್ರೇಮ-ದ್ವೇಷ ಹೀಗೆ ಹಲವಾರು ಮುಖಗಳೊಂದಿಗೆ ಯಶಸ್ವಿಯಾಗಿ ಕೊಟ್ಟಿದ್ದಾರೆ. ನೋವಿನ ಬುತ್ತಿಯುಂಡು ಬದುಕುತ್ತಿರುವ ಕಷ್ಟಜೀವಿಗಳ ಕತೆಯನ್ನು, ಅವರ ಆಸೆ ಆಕಾಂಕ್ಷೆಗಳನ್ನು ಅತ್ಯಂತ ಆತ್ಮೀಯತೆಯಿಂದ ಇವರು ತಮ್ಮ ಕೃತಿಗಳಲ್ಲಿ ಮೂಡಿಸಿದ್ದಾರೆ.

ಸುಸಂಸ್ಕೃತವೆಂದು ಹೇಳಿಕೊಳ್ಳುವ ಸಮಾಜದಲ್ಲಿ ತಾಂಡವವಾಡುತ್ತಿರುವ ನೈತಿಕ ಅಧಃಪತನವನ್ನು, ಡಾಂಭಿಕತನವನ್ನು, ವೇಷಗಾರಿಕೆಯನ್ನು, ಜಾತೀಯತೆಯ ಅನಾಹುತವನ್ನು, ಧ್ಯೇಯ ಶೂನ್ಯ, ಪ್ರವಾಹ ಪತಿತ, ದ್ವಿಮುಖ ಬಾಳನ್ನು 'ಮೋಹದ ಬಲೆಯಲ್ಲಿ', 'ಜರತಾರಿ ಜಗದ್ಗುರು', 'ಬೀದಿಯಲ್ಲಿ ಬಿದ್ದವಳು', 'ನೀ ನನ್ನ ಮುಟ್ಟಬೇಡ', 'ಜನಿವಾರ ಮತ್ತು ಶಿವದಾರ', 'ಪಾತರಗಿತ್ತಿ' ಮೊದಲಾದ ಕಾದಂಬರಿಗಳಲ್ಲಿ ನೈಜವಾಗಿ ಚಿತ್ರಿಸಿ, ಕಲೆಯ ಮುಖಾಂತರ ಸತ್ಯದ ದರ್ಶನ ಮಾಡಿಸಿದ್ದಾರೆ. ವರ್ಗಸಮರದ ಕತೆಯನ್ನು 'ಜ್ವಾಲಾಮುಖಿಯ ಮೇಲೆ' ಮೂಲಕ ಕನ್ನಡದಲ್ಲಿ ಮೊಟ್ಟಮೊದಲು ಮನದಟ್ಟಾಗುವಂತೆ ನೀಡಿದ ಶ್ರೇಯಸ್ಸು ಕಟ್ಟೀಮನಿಯವರದು. ನಮ್ಮ ಸಮಾಜ ಜೀವನದ ಎಲ್ಲ ಅಂಗಗಳಲ್ಲಿಯೂ ರಾಜಕೀಯ ಹಾಸುಹೊಕ್ಕಾಗಿ ಬೆರೆತುಕೊಂಡಿರುವಾಗ ಇದು ರಾಜಕೀಯ ಕಾದಂಬರಿ, ಇದು ಸಾಮಾಜಿಕ ಕಾದಂಬರಿ ಎಂದು ಬೇರ್ಪಡಿಸುವವರನ್ನು ಅವರು ಒಪ್ಪಲಾರರು.

ಪೂರ್ವ ಯೌವನದ ನಾನಾ ಬಗೆಯ ಅನುಭವಗಳ ಭಾವಜೀವನದ ಚಿತ್ರಣ 'ಜಲತರಂಗ'ದಲ್ಲಿ ಸುಂದರವಾಗಿ ಅಭಿವ್ಯಕ್ತಗೊಂಡಿದೆ. 'ಗಿರಿಯ ನವಿಲು' ಅಕ್ಕಮಹಾದೇವಿಯ ಜೀವನವನ್ನು ವಿಶುದ್ಧವಾದ ವೈಚಾರಿಕ ದೃಷ್ಟಿಯಿಂದ ನೋಡಿದ್ದರೂ ಆದರ್ಶವನ್ನೂ ಶ್ರದ್ಧೆಯನ್ನೂ ಕಳೆದುಕೊಳ್ಳದ ಚಾರಿತ್ರಿಕ ಕೃತಿ. ಸಾಹಿತ್ಯ ಕೃತಿಗೆಂದು ಜೀವನವನ್ನು ಆಯ್ದುಕೊಳ್ಳುವ ರೀತಿ, ಅದನ್ನು ನಿರೂಪಿಸುವ ವಿಧಾನ, ಬಳಸುವ ತಂತ್ರ ಮೊದಲಾದ ಕಲೆಗೆ ಸೇರಿದ ಅಂಶಗಳನ್ನು ಗಮನಿಸಿಯೂ ಕಲಾಕೃತಿಯಲ್ಲಿ ಕಾಣಿಸಿಕೊಳ್ಳುವ ಜೀವನಕ್ಕೇ ಅವರು ತಮ್ಮ ಕೃತಿಗಳಲ್ಲಿ ಪ್ರಾಶಸ್ತ್ಯ ಕೊಟ್ಟಿರುವುದನ್ನು ಕಾಣುತ್ತೇವೆ. ವಾಸ್ತವವಾಗಿ ಸಾಹಿತ್ಯ ನಿರ್ಮಾಣದ ಕ್ರಾಂತಿಕಾರಿ ಮನೋಧರ್ಮದೊಂದಿಗೆ ಅಲ್ಲಲ್ಲಿ ಆದರ್ಶ ಪ್ರಿಯತೆಯನ್ನೂ ಅವರು ತೋರಿಸದೆ ಇಲ್ಲ. ("ನಿನ್ನ ದೇಹವನ್ನಲ್ಲ ನಾನು ಪ್ರೀತಿಸುವುದು ರತ್ನಾ, ನಿನ್ನ ಆ ಅದ್ಭುತ ವ್ಯಕ್ತಿತ್ವವನ್ನು. ಅನ್ಯಾಯಗಳಿಗೆಲ್ಲ ಧೈರ್ಯದಿಂದ ಎದುರಾಗಿ ನಿಂತಿರುವ ನಿನ್ನ ಸ್ಫೂರ್ತಿಯನ್ನು" - 'ಜ್ವಾಲಾಮುಖಿ' ಕಾದಂಬರಿಯ ನಾಯಕ ಚಂದ್ರಣ್ಣ ಹೇಳುವ ಮಾತಿದು.)

ಕಟ್ಟೀಮನಿಯವರ ಶಕ್ತಿಪೂರ್ಣವಾದ ಶೈಲಿ ವಸ್ತುವಿಗೆ ತಕ್ಕಂತೆ ಬಾಗಿ ಬೀಗಿ ಸಾಗುತ್ತದೆ. ಜೀವನದ ಉತ್ಸಾಹ, ಮಾರ್ದವ, ಕಾವು ನೋವುಗಳನ್ನೂ ಅಷ್ಟೇ ಸಮರ್ಥವಾಗಿ ಅದು ನಿರೂಪಿಸಬಲ್ಲುದು. ನಿಸರ್ಗದ ಚೆಲುವನ್ನು ಮನಸ್ಸಿನ ಆನಂದ ಉಲ್ಲಾಸಗಳನ್ನೂ ಬಣ್ಣಿಸುವಾಗ ಅದು ಕಾವ್ಯಮಯವಾಗುತ್ತದೆ -ಇವರೂ ಮೊದಲು ಕವಿತೆಗಳನ್ನು ಬರೆದಿರಬಾರದೇಕೆ?

"ಅಂದ ಹಾಗೆ, ಕಟ್ಟೀಮನಿಯವರೆ ನೀವು ಕವಿತೆಗಳನ್ನೂ ಬರೆದಿರಬೇಕು ಎನ್ನಿಸುತ್ತದೆ. ಅವು ಎಲ್ಲಿಯಾದರೂ ಪ್ರಕಟವಾಗಿವೆಯೆ?"

"ಪೂರ್ವ ಯೌವನದ ದಿನಗಳಲ್ಲಿ ನಾನೂ ಕವಿತೆ ಬರೆಯುತ್ತಿದ್ದೆ. ಮೊದಲು ಹಲವು ವರ್ಷ (೧೯೩೪-೩೮) ಕವಿತೆಯ ಹುಚ್ಚೇ ಹಿಡಿದಿತ್ತು. ಆದರೆ ಅದೇಕೋ ಅವು ನನಗೆ ತೃಪ್ತಿ ನೀಡಲಿಲ್ಲ. ಎಂತಲೇ ಅದುವರೆಗೆ ಬರೆದಿದ್ದ ನೂರಾರು ಕವಿತೆಗಳನ್ನು ಒಂದು ದಿನ ಹರಿದುಹಾಕಿಬಿಟ್ಟೆ. ಬೆಳಗಾಂವಿಯ ಕಿರಿಯರ ಬಳಗದ 'ತುಂಬಿ' ಸಂಗ್ರಹದಲ್ಲಿ 'ಕೂಲಿಯವನ ಕುದಿತ' ಎಂಬ ಕವಿತೆ ಪ್ರಕಟವಾಯಿತು"

ಆದರೆ ಕಟ್ಟೀಮನಿ ಕಾವ್ಯಪ್ರೇಮಿ. ಯಾರೇ ಬರೆದಿರಲಿ. ಎಲ್ಲಿಯಾದರೂ ಒಳ್ಳೆಯ ಕವಿತೆ ಕಣ್ಣಿಗೆ ಬಿದ್ದರೆ ಅದನ್ನು ಮೆಚ್ಚಿಕೊಳ್ಳುತ್ತಾರೆ. ಇತರರಿಗೂ ಓದಿ ಹೇಳುತ್ತಾರೆ. ಕುವೆಂಪು ಅವರ ಹಿಂದಿನ ಕವಿತೆಗಳ ಸಾಲುಗಳನ್ನೂ ಲಹರಿ ಬಂದಾಗ ಹೇಳುತ್ತಿರುವುದುಂಟು. ಬಳ್ಳಾರಿ ಸಾಹಿತ್ಯ ಸಮ್ಮೇಳನದ (೧೯೫೯) ಕವಿ ಮೇಳದಲ್ಲಿ ಭಾಗವಹಿಸಿ ತಮ್ಮ ಒಂದು ಹೊಸ ಕವಿತೆ ಓದಿ ಎಲ್ಲರನ್ನೂ ಅಚ್ಚರಿಗೊಳಿಸಿದರು.

"ಸಣ್ಣ ಕಥೆಯ ರಚನಾಕ್ರಮದಲ್ಲಿ ನೀವು ಕೈಕೊಂಡಿರುವ ವಿಧಾನ ಯಾವುದು?"

"ಸಣ್ಣಕಥೆಯನ್ನು ರಚಿಸಲು ಒಂದು ಶಿಸ್ತು, ಒಂದು ಸಂಯಮ, ಒಂದು ಯೋಜನೆ, ಒಂದು ರೂಪು ಅತ್ಯಗತ್ಯ. ಆದಿ, ಬೆಳವಣಿಗೆ, ಅಂತಿಮ ರಸಾವೇಶ, ಅಂತ್ಯ - ಎಲ್ಲವೂ ಸಮರ್ಪಕವಾಗಿರಬೇಕು. ಅಗತ್ಯವಿದ್ದಷ್ಟೇ ಪಾತ್ರಗಳು, ಅವುಗಳ ಪರಸ್ಪರ ಸಂಬಂಧ-ಸಂಭಾಷಣೆ - ಸ್ನೇಹ-ವೈರ ಎಲ್ಲವೂ ಅತ್ಯಂತ ಕೌಶಲದಿಂದ ರೂಪುಗೊಳ್ಳಬೇಕಾಗುತ್ತದೆ. ಒಮ್ಮೊಮ್ಮೆ ಹತ್ತಿಪ್ಪತ್ತು ವರ್ಷಗಳವರೆಗೆ ತಲೆಯಲ್ಲೇ ಸುತ್ತುತ್ತಿದ್ದ ಕಥೆ ಥಟ್ಟನೆ ಯಾವುದೋ ಒಂದು ಸ್ಫೂರ್ತಿಯಲ್ಲಿ ಕಾಗದಕ್ಕಿಳಿಯುತ್ತದೆ. ಪಾತ್ರ-ಸನ್ನಿವೇಶ, ಆದಿ-ಅಂತ್ಯ ಎಲ್ಲವೂ ತಲೆಯಲ್ಲಿಯೇ ಹಲವು ವರ್ಷ ತಿರುಗಿದ್ದುದರಿಂದ ಇಂಥ ಕಥೆ ಖಂಡಿತವಾಗಿಯೂ ಯಶಸ್ವಿಯಾಗುತ್ತದೆ. 'ಗಂಡುಬೀರಿ', 'ಕುಂಭಕರ್ಣ', 'ಪೈಲವಾನನ ಪ್ರೇಯಸಿ' - ಇತ್ಯಾದಿ ನನ್ನ ಕಥೆಗಳು ಹಾಗೆ ಮೂಡಿದವು"

"ಕಾದಂಬರಿ ರಚನೆ ಸಣ್ಣಕಥೆಗಿಂತ ಸುಲಭವೆಂದು ಕೆಲವರ ಭಾವನೆ...."

"ಅದು ಸರಿಯಲ್ಲ. ಕಾದಂಬರಿಗೂ ಆದಿ-ಬೆಳವಣಿಗೆ ಅಂತ್ಯ ಎಲ್ಲ ಇರಬೇಕು. ಪಾತ್ರಗಳು ಜೀವಂತವಾಗಿ ಬರಬೇಕು. ಕಥೆಯಲ್ಲಿ ಓಟವಿರಬೇಕು, ವಾಸ್ತವತೆಯಿರಬೇಕು. ತಿಂಗಳಿಗೊಂದು ಕಾದಂಬರಿ ಬರೆದರೆ ಇದೆಲ್ಲ ಆಗುವಂತಿಲ್ಲ. ಒಮ್ಮೊಮ್ಮೆ ಒಂದೇ ಕಾದಂಬರಿಯ ಮೇಲೆ

ನಾಲ್ಕೈದು ವರ್ಷ ಕೆಲಸ ಮಾಡಬೇಕಾಗುತ್ತದೆ. 'ಮಣ್ಣು ಮತ್ತು ಹೆಣ್ಣು' ಅದನ್ನು ನಾನು ಐದು ಸಲ ಪುನಃ ಪುನಃ ಹರಿದು, ತಿದ್ದಿ ಬರೆದದ್ದುಂಟು"

ಅಂತೆಯೇ ಅವರ ಕಾದಂಬರಿಗಳಲ್ಲಿಯೇ ಅದು ಅತ್ಯಂತ ಕಲಾಸಂಯಮದಿಂದ ಕೂಡಿದೆ. ಅವರಿಗೆ ನಿಜವಾಗಿಯೂ ತೃಪ್ತಿಯನ್ನು ನೀಡಿದ ಕೃತಿ ಅದು.

"ನೀವು ಜೀವಂತ ವ್ಯಕ್ತಿಗಳನ್ನು ಇದ್ದಕ್ಕಿದ್ದಂತೆ ಕಥೆ ಕಾದಂಬರಿಗಳಲ್ಲಿ ತರುತ್ತೀರೆಂದು ಕೆಲವರ ಟೀಕೆ"

"ಅದು ಸಾಧುವಾದ ಟೀಕೆಯಲ್ಲ. "ಜರತಾರಿ ಜಗದ್ಗುರು"ವಿನಂತಹ ನೂರಾರು ಸ್ವಾಮಿಗಳು ಇಂದು ಕರ್ನಾಟಕದಲ್ಲಿದ್ದಾರೆ. ಗಂಗಾಧರ ಶಾಸ್ತ್ರಿಯಂಥ ಶಾಸ್ತ್ರಿಗಳು ನೂರಾರು ಮಂದಿ ಇದ್ದಾರೆ. ಆ ಅನೇಕರ ಪ್ರತಿನಿಧಿಯಂತಿರುವ ಪಾತ್ರಗಳನ್ನು ನಾನು ಸೃಷ್ಟಿಸಿದ್ದೇನೆ ಅಷ್ಟೆ. ಸಾಮರಸೆಟ್ ಮಾಮ್, ಅಪ್ಟನ್ ಸಿಂಕ್ಲೇರ್, ಫಾಕ್ನರ್ ಇತ್ಯಾದಿ ಕಾದಂಬರಿಕಾರರು ಪಾತ್ರ ಸೃಷ್ಟಿಸಿದ್ದು ಹೀಗೆಯೇ. ವಾಸ್ತವ ಸೃಷ್ಟಿಯಲ್ಲಿರುವ ಸಾವಿರ ವ್ಯಕ್ತಿಗಳನ್ನು ನಿರೀಕ್ಷಿಸಿಯೇ ನಾವು ನಮ್ಮ ಪಾತ್ರ ತಯಾರಿಸಬೇಕು ತಾನೆ. 'ಮಣ್ಣು ಮತ್ತು ಹೆಣ್ಣು', 'ಪ್ರಪಾತ' ಇತ್ಯಾದಿ ಕೃತಿಗಳಲ್ಲಿಯ ಪಾತ್ರಗಳು ರೂಪುಗೊಂಡದ್ದು ಹೀಗೆಯೇ".

"ನವ್ಯ ಕಥೆ, ನವ್ಯ ಕಾದಂಬರಿಗಳು ಈಚೆಗೆ ಸೃಷ್ಟಿಗೊಳ್ಳುತ್ತಿವೆಯಲ್ಲ. ಅವುಗಳ ಬಗ್ಗೆ ನಿಮ್ಮ ಪ್ರತಿಕ್ರಿಯೆಯೇನು ?"

"ಸಾಹಿತ್ಯದಲ್ಲಿ ಹೊಸ ಪ್ರಯೋಗಗಳು ನಡೆದಿವೆ; ನಡೆಯಲೇಬೇಕು. ಆದರೆ ಈ ಬರೆಹಗಾರರಿಗೆ ವಿಷಯ ವೈವಿಧ್ಯವಿಲ್ಲ. ಬರೀ 'ಸೆಕ್ಸ್'ನ ಸುತ್ತಮುತ್ತು ತಿರುಗುತ್ತಿದ್ದಾರೆ. 'ನವ್ಯ'ದ ಗುಂಪುಗಳನ್ನು ಕಟ್ಟಿಕೊಂಡು, ತಮ್ಮದು ಮಾತ್ರವೇ ಶ್ರೇಷ್ಠ ಸಾಹಿತ್ಯ ಅಂತ ಪ್ರಚಾರ ಮಾಡುತ್ತ ಹೊರಟಿದ್ದಾರೆ. ಇದೊಂದು ಇಂಗ್ಲಿಷ್ ಪ್ರೊಫೆಸರುಗಳ ಕ್ಲಿಕ್ಕು. ಆದರೆ ಈ 'ಸ್ವಪ್ರಚಾರ' ಬಹಳ ದಿನ ನಡೆಯುವುದಿಲ್ಲ. ಯಾವ ಲೇಖಕನ ಯೋಗ್ಯತೆ ಎಷ್ಟು ಎಂಬುದು ವಾಚಕರಿಗೂ ಗೊತ್ತಿದೆ"

"ಈ ಟೀಕೆ ಕಟುವಾಯಿತೋ ಏನೊ......"

"ಇರಬಹುದು. ಆದರೆ ಇದು ನನ್ನ ಖಂಡಿತವಾದ ಅಭಿಪ್ರಾಯ".

"ಅದಿರಲಿ, ಪ್ರಗತಿಶೀಲ ಸಾಹಿತ್ಯದ ಆಂದೋಲನದಲ್ಲಿ ನೀವೂ ಭಾಗವಹಿಸಿದ್ದಿರಷ್ಟೆ. 'ಉಷಾ' ಸಂಪಾದಕರಾಗಿದ್ದಾಗ. ಕನ್ನಡ ಸಾಹಿತ್ಯಕ್ಕೆ ಅದರಿಂದ ಏನಾದರೂ ಪ್ರಯೋಜನವಾಯಿತೆ?"

"ಆ ಆಂದೋಲನದಿಂದ ನಮ್ಮ ಸಾಹಿತ್ಯ ಕ್ಷೇತ್ರದಲ್ಲಿ ಹೊಸ ಚೈತನ್ಯದ ಸಂಚಾರವಾಯಿತು. ಅದುವರೆಗೆ ಕೇವಲ ಮಧ್ಯಮವರ್ಗದ ಜೀವನ ಚಿತ್ರಣಕ್ಕೇ ಮೀಸಲಾಗಿದ್ದ ಕ್ಷೇತ್ರದಲ್ಲಿ ಕೆಳತರಗತಿಯ ಜನರ ಜೀವನ ಕಾಣಿಸಿಕೊಂಡಿತು. ಆದರೆ ಅದಕ್ಕೆ ಮುಖ್ಯ ಕಾರಣ - ಆ ಜೀವನವನ್ನು ಚೆನ್ನಾಗಿ ಬಲ್ಲವರು (ನನ್ನಂಥವರು) - ಕಥೆ, ಕಾದಂಬರಿ ರಚಿಸಿದ್ದು. ಆ ಚಳವಳಿ ಎಬ್ಬಿಸಿ ಹಿರಿಯ ಸಾಹಿತಿಗಳನ್ನು ಟೀಕಿಸಿದ್ದು ಮಾತ್ರ ಸರಿಯಲ್ಲವೆಂಬುದು ನನಗೆ ಆಗಲೇ ಗೊತ್ತಾಯಿತು. ನಾನು ಆ ವಾದಕ್ಕೆ ಹೋಗದೆ ಸುಮ್ಮನೆ ಕೃತಿರಚನೆ ಮಾಡುತ್ತ ಬಂದೆ. ಪ್ರಗತಿಶೀಲ

ಸಾಹಿತ್ಯ ಎಂದರೇನು? ಎನ್ನುವುದಕ್ಕೆ 'ಜ್ವಾಲಾಮುಖಿಯ ಮೇಲೆ' 'ಕಾರವಾನ್' ಇವೇ ಉತ್ತರ ಎಂದು ವಿಮರ್ಶಕರೇ ಹೇಳಿದರು".

"ವಿಮರ್ಶೆಯಿಂದ ಲೇಖಕರಿಗೆ ಮಾರ್ಗದರ್ಶನವಾಗುತ್ತದೆಂದು ಹೇಳುವುದರಲ್ಲಿ ನಿಮಗೆ ನಂಬಿಕೆ ಇದೆಯೆ?"

"ನಿಜವಾದ ವಿಮರ್ಶೆಯಿಂದ ಲೇಖಕನಿಗೆ ಖಂಡಿತ ಮಾರ್ಗದರ್ಶನ ಲಭಿಸುತ್ತದೆ. ನನ್ನ ಮಟ್ಟಿಗೆ ಹೇಳುವುದಾದರೆ ಎಲ್.ಎಸ್. ಶೇಷಗಿರಿರಾಯರ ವಿಮರ್ಶೆಗಳಿಂದ ನಾನು ಬಹಳ ಉಪಕೃತನಾಗಿದ್ದೇನೆ."

"ಜೀವನದ ಯಾವ ಒಳ್ಳೆಯ ಅಂಶವನ್ನೂ ನಿಮ್ಮ ಬರವಣಿಗೆ ಸಂಶಯದಿಂದ ನೋಡುತ್ತದೆಯೆಂದು ವಿಮರ್ಶಕರೊಬ್ಬರ ಅಭಿಪ್ರಾಯ. ಈ ಬಗ್ಗೆ ನೀವೇನಾದರೂ ಹೇಳುವುದಿದೆಯೆ?"

"ಒಳ್ಳೆಯದನ್ನು ಮೆಚ್ಚದಿರುವವನು ಲೇಖಕನಾಗುವುದೇ ಶಕ್ಯವಿಲ್ಲ. ಆದರೆ ಒಳ್ಳೆಯದೆಂದು ಹೊರಗೆ ಕಾಣಿಸಿ ಒಳಗೆ ಕುಟಿಲವಾಗಿರುವ ಅಂಶವನ್ನು ಎಕ್ಸರೇ ಹಾಯಿಸಿ ಕಂಡುಹಿಡಿಯಬೇಕಾದುದು ಲೇಖಕನ ಕರ್ತವ್ಯ. ಬಸವಣ್ಣ-ಅಲ್ಲಮರು ಮಾಡಿದ್ದು ಇದೇ ಅಲ್ಲವೇ? ಮಂತ್ರಿಮಾನ್ಯರಿಂದ ಬಡ ಕೂಲಿಗಾರರವರೆಗೆ ಜೀವನದ ಎಲ್ಲ ಅಂತಸ್ತುಗಳಲ್ಲಿರುವ ವ್ಯಕ್ತಿಗಳನ್ನು ನಾನು ಸಮೀಪದಿಂದ ಸೂಕ್ಷ್ಮವಾಗಿ ನೋಡಿದ್ದುಂಟು. ಬಹಳ ಒಳ್ಳೆಯವರೆಂದು ನಾವು ತಿಳಿದುಕೊಂಡಿರುವವರಲ್ಲೂ ಬಹಳ ಕೆಟ್ಟ ಅಭ್ಯಾಸಗಳಿರುವುದುಂಟು. ಅವುಗಳನ್ನು ಮರೆಯಿಸಲು ಅವರು ಅಧ್ಯಾತ್ಮ, ಧರ್ಮ, ವೇದಾಂತಗಳ ಬುರುಡೆ ಹೊಡೆಯುತ್ತಾರೆ. ಈ ಕಪಟ ನಾಟಕದಿಂದ ಸಾಮಾನ್ಯ ಜನರು ಮರುಳಾದಾರು. ನಮ್ಮಂಥ ಲೇಖಕರು ಹೇಗ ತಾನೆ ಮರುಳಾಗುವುದು ಸಾಧ್ಯ? ನನ್ನ ಅನುಭವದಲ್ಲಿ - ಮಾನವಜೀವಿಯಲ್ಲಿ ಒಳ್ಳೆಯ ಮತ್ತು ಕೆಟ್ಟ ಅಂಶಗಳೆರಡೂ ಇರುವುದುಂಟು. ಒಳ್ಳೆಯದನ್ನು ಮಾತ್ರ ನೋಡಿ ಮೋಸ ಹೋಗಬಾರದು. ಕೆಟ್ಟದ್ದನ್ನು ಕಂಡು ತಿರಸ್ಕರಿಸಬಾರದು. A writer should be like God. ವ್ಯಕ್ತಿಗಳ ಬಗ್ಗೆ ನಿರ್ಲಿಪ್ತನಾಗಿದ್ದುಕೊಂಡು ಕೃತಿರಚನೆ ಮಾಡಬೇಕು".

"ಹಾಗಾದರೆ ಸಾಹಿತಿಯ ಹೊಣೆಗಾರಿಕೆಯೇನು?"

"ಸಾಹಿತಿಗಳೂ ಸಮಾಜಜೀವಿಗಳಾದ್ದರಿಂದ ಅವರ ಮೇಲೆ ದೊಡ್ಡ ಹೊಣೆಗಾರಿಕೆ ಇದೆ. ಜೀವನವನ್ನು ಒಂದೇ ದೃಷ್ಟಿಯಿಂದ ನೋಡುತ್ತ ಸಿನಿಕತನ ನಿರ್ಮಿಸುವಂಥ ಸಾಹಿತ್ಯವನ್ನು ನಾವು ಖಂಡಿತ ರಚಿಸಬಾರದೆಂದೇ ನನ್ನ ಅಭಿಪ್ರಾಯ".

"ನಿಮ್ಮ ಕಾದಂಬರಿಗಳಲ್ಲಿ ಕೆಲವನ್ನು, ಚಲನಚಿತ್ರಕ್ಕೆ ಉಪಯೋಗಿಸಿದರೆ ತುಂಬ ಯಶಸ್ವಿಯಾಗಬಹುದೆಂದು ನನಗನಿಸುತ್ತದೆ."

"ಹೌದು; ಆದರೆ ಇಂದಿನ ಕನ್ನಡ ಚಿತ್ರ ಪ್ರಪಂಚದಲ್ಲೂ ಹಲವು ಕ್ಲಿಕ್ ಉಂಟಾಗಿದ್ದು ಅವರು ನನ್ನ ಕಾದಂಬರಿಗಳತ್ತ ಕಣ್ಣೆತ್ತಿ ನೋಡುತ್ತಲಿಲ್ಲ. 'ಮಾಡಿ ಮಡಿದವರು' ಚಿತ್ರಿಸಲು ಸಾಗರದ ಉತ್ಸಾಹಿ ನಿರ್ಮಾಪಕರೊಬ್ಬರು ಮುಂದೆ ಬಂದಿದ್ದಾರೆ".

ಕಟ್ಟೀಮನಿ ಈಗ ಧಾರವಾಡದ ನಿವಾಸಿಗಳಾಗಿದ್ದರೂ ಹಳ್ಳಿಯ ಮೇಲೆ ಅವರಿಗೆ ಪ್ರೇಮ ಕಡಿಮೆಯಾಗಿಲ್ಲ. ಮಲಾಮರಡಿಯಲ್ಲಿ ನೆಲಸಿದಾಗ ಜನತೆಯ ಹಾಗೂ ಸರಕಾರದ ಸಹಾಯದಿಂದ ಕುಡಿಯುವ ನೀರಿನ ಬಾವಿ, ಬೀದಿಗಳಿಗೂ ಕಲ್ಲಿನ ಪರಸಿ, ಮಕ್ಕಳಿಗಾಗಿ ಶಾಲೆ ಮಾಡಿಸಿದರು. ಲೇಖಕನು ಸಾಮಾಜಿಕ ಚಟುವಟಿಕೆಗಳಲ್ಲಿ ಭಾಗವಹಿಸಿದಷ್ಟೂ ಅವನ ಅನುಭವ ವಿಶಾಲವಾಗುತ್ತದೆ, ಜೀವಂತವಾಗುತ್ತದೆ. ನಮ್ಮ ಲೇಖಕರಲ್ಲಿ ಅನುಭವದ ವಿಸ್ತಾರ ಕಡಿಮೆ ಎನ್ನುವುದು ಎಲ್ಲರ ಬಗೆಗೂ ಸರಿಯಲ್ಲ. ನೂರು ಊರು ತಿರುಗಿ ಹತ್ತಿಪ್ಪತ್ತು ಊರುಗಳಲ್ಲಿ ನೆಲಸಿ, ಹಲವಾರು ಸಾಮಾಜಿಕ-ರಾಜಕೀಯ ಚಟುವಟಿಕೆಗಳಲ್ಲಿ ಆತ್ಮೀಯತೆಯಿಂದ ಭಾಗವಹಿಸುವ ಲೇಖಕನಿಗೆ ಅವನು ಸಾಯುವವರೆಗೆ ಬರೆದರೂ ಮುಗಿಯದಷ್ಟು ಅನುಭವ ಸಂಪತ್ತು ಲಭಿಸುತ್ತದೆ. ಕಟ್ಟೀಮನಿಯವರ ಮಟ್ಟಿಗಂತೂ ಈ ಮಾತು ನಿಜ.

"ಲೇಖನ ವೃತ್ತಿಯಿಂದಲೇ ಜೀವನ ನಡೆಸಿದವರು ಕನ್ನಡದಲ್ಲಿ ತೀರ ಸ್ವಲ್ಪ ಜನ, ಈ ಬಗ್ಗೆ ನಿಮ್ಮ ಅನುಭವವೇನು?"

"ಲೇಖನ ವೃತ್ತಿಯಿಂದಲೇ ಜೀವನ ನಡೆಸುವುದು ಸಾಧ್ಯವಿದೆಯೆಂಬುದಕ್ಕೆ ನಾನು ಇಂದು ತುಸುವಾದರೂ ನೆಮ್ಮದಿಯಿಂದ ಜೀವಿಸುತ್ತಿರುವುದೇ ಸಾಕ್ಷಿ. ಆದರೆ, ಮೊದಮೊದಲು ಬಹಳ ಕಷ್ಟವಾಗುತ್ತದೆ. ಒಮ್ಮೆ ಕೀರ್ತಿ, ಜನಪ್ರಿಯತೆ ಬಂದರ ಆಮೇಲೆ ಸುಲಭ".

ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಮತ್ತೆ ಧಾರವಾಡದಲ್ಲಿ ಮನೆ ಮಾಡಿರುವ (ಕಟ್ಟಿರುವ) ಕಟ್ಟೀಮನಿಯವರಿಗೆ ಇಬ್ಬರು ಗಂಡು ಹಾಗೂ ಮೂವರು ಹೆಣ್ಣು ಮಕ್ಕಳು. ತಾಯಿ ೮೦ ವರ್ಷದ ತುಂಬು ಬಾಳನ್ನು ನಡೆಸಿ ಕಳೆದ ವರ್ಷ ಡಿಸೆಂಬರ್‌ನಲ್ಲಿ ಸಂತೋಷದಿಂದ ಕಣ್ಣು ಮುಚ್ಚಿದಳು. ಉಪ-ಉದ್ಯೋಗವೊಂದನ್ನು ಇದೀಗ ಅವರು ಪ್ರಾರಂಭಿಸಿದ್ದಾರೆ. ಅದೇ ಚಿಕ್ಕ ಪ್ರಮಾಣದ 'ಸಂಗಮ ಮುದ್ರಣಾಲಯ' ಅವರ ಬಾಳಿನ ನಾಲ್ಕನೆಯ ಅಧ್ಯಾಯಕ್ಕೆ ಪ್ರಾರಂಭ. ಕಾದಂಬರಿಗಳನ್ನು ಬರೆಯುತ್ತ ಅವರು ವ್ಯವಹಾರದೊಡನೆ ಹೇಗೆ ಸಂಗಮವನ್ನು ಸಾಧಿಸುತ್ತಾರೋ ನೋಡಬೇಕು. ವರ್ಷ ಒಪ್ಪೊತ್ತಿನಲ್ಲಿ ಅವರು ಒಂದು ಹೊಸ ಪತ್ರಿಕೆಯನ್ನು ಹೊರಡಿಸಿದರೂ ಆಶ್ಚರ್ಯವಿಲ್ಲ. (ಧಾರವಾಡದ ಸಾಂಸ್ಕೃತಿಕ ಜೀವನಕ್ಕೆ ತಕ್ಕ ಪತ್ರಿಕೆಯೊಂದರ ಕೊರತೆ ಇದ್ದೇ ಇದೆ)

"ಕಟ್ಟೀಮನಿಯವರೆ, ನೀವು ಬರೆಯುವುದು ಹೆಚ್ಚಾಗಿ ಯಾವ ವೇಳೆಯಲ್ಲಿ?"

"ಹೆಚ್ಚಾಗಿ ಬರೆಯುವುದು ಬೆಳಿಗ್ಗೆ ಸ್ನಾನಮಾಡಿ, ಕಾಫಿ ಕುಡಿದು ಸಿಗರೇಟು ಹೊತ್ತಿಸಿ ಎಂಟರಿಂದ ಹನ್ನೊಂದರವರೆಗೆ, ಸಂಜೆ ಬರೀ ವಾಚನ ಇಲ್ಲವೆ ಅಲೆದಾಟ"

"ಅಂದ ಹಾಗೆ ನೀವು ಸಿಗರೇಟು ಬಹಳ ಸೇದುತ್ತೀರಿ. ಅದರಿಂದ ಸ್ಫೂರ್ತಿ ಗೀರ್ತಿ ಏನಾದರೂ....."

"ಸಿಗರೇಟಿನಿಂದ ಸ್ಫೂರ್ತಿ? ಛೆ, ಅದೊಂದು ಮಾಯಾಜಾಲ; ದುರಭ್ಯಾಸ. ನಡುವೆ ಎರಡು ವರ್ಷ ಅದರಿಂದ ತಪ್ಪಿಸಿಕೊಂಡಿದ್ದೆ. ಆದರೆ ದಿವಂಗತ ಆನಂದರು ಗೇಲಿಮಾಡಿ, ಮತ್ತೆ ಸಿಗರೇಟು ದೀಕ್ಷೆ ಕೊಟ್ಟರು".

"ನಮ್ಮ ಸರಕಾರ ಲೇಖಕರಿಗೆ ಯಾವ ಅನುಕೂಲತೆಗಳನ್ನು ಒದಗಿಸಿ ಕೊಡಬೇಕೆನ್ನುತ್ತೀರಿ?"

"ವರ್ಷಕ್ಕೆ ನಾಲ್ಕು ಲೇಖಕರಿಗೆ ಐದ್ಯೆದುನೂರು ರೂಪಾಯಿ ಹಾಗೂ ಶಾಲುಕೊಟ್ಟು 'ಗೌರವಿಸುವ' ಹುಚ್ಚುಚ್ಚಾರವನ್ನು ಸರಕಾರ ಬಿಡಬೇಕು. ಕುವೆಂಪು, ಬೇಂದ್ರೆ, ಗೊರೂರರಿಗೆ ಕೊಟ್ಟಂತೆ ಇನ್ನೂ ಹತ್ತು ಮಂದಿ ಪ್ರತಿಭಾವಂತ ಲೇಖಕರಿಗೆ ತಿಂಗಳಿಗೆ ನಾಲ್ಕೈದು ನೂರರಂತೆ ಮಾಸಾಶನ ಕೊಟ್ಟರೆ ಅವರು ನೆಮ್ಮದಿಯಿಂದ ಕುಳಿತು ಕೃತಿರಚನೆ ಮಾಡಬಹುದು".

ಬಹು ದಿನಗಳಿಂದಲೂ ಕಟ್ಟೀಮನಿಯವರ ತಲೆಯಲ್ಲಿ ಸುಳಿಯುತ್ತಿದ್ದುದು ಕಿತ್ತೂರಿನ ಇತಿಹಾಸ. ಅದರ ಬಗ್ಗೆ ಸಾಕಷ್ಟು ಅಭ್ಯಾಸವನ್ನು ಮಾಡಿ ಸಂಗತಿಗಳನ್ನು ಕಲೆಹಾಕಿದ್ದಾರೆ. 'ಕಿತ್ತೂರ ಚೆನ್ನಮ್ಮ'ನನ್ನು ಕುರಿತ ಬೃಹತ್ ಕಾದಂಬರಿ ರಚನೆಯಲ್ಲಿ ಅವರೀಗ ತೊಡಗಿದ್ದಾರೆ. 'ಪೌರುಷ ಪರೀಕ್ಷೆ', 'ದ್ರೋಹಿ', 'ಸಮರಭೂಮಿ', 'ರಾಯನಾಯಕ' ಮೊದಲಾದ ಐತಿಹಾಸಿಕ ಕಾದಂಬರಿಗಳನ್ನು ಬರೆದು ಈ ದಿಸೆಯಲ್ಲಿ ಅವರ ಕೈ ಆಗಲೇ ಪಳಗಿದೆ. ಒಂದು ಸಾಮಾಜಿಕ ಮಹಾ ಕಾದಂಬರಿ ಅವರ ತಲೆಯಲ್ಲಿದೆ. ತಮ್ಮ ಆತ್ಮಕಥೆಯನ್ನು ಬರೆಯಬೇಕೆಂದಿದ್ದಾರೆ. ಅದೆಲ್ಲ ನಿಧಾನವಾಗಿ ಆಗಬೇಕಾದ ಕೆಲಸ. ಅವು ಕೃತಿ ರೂಪದಲ್ಲಿ ಬಂದಾಗ ಕನ್ನಡ ಸಾಹಿತ್ಯದ ಶ್ರೀಮತಿಂಕೆ ಹೆಚ್ಚುವುದರಲ್ಲಿ ಸಂದೇಹವಿಲ್ಲ.

('ಮಯೂರ' ೧೯೬೮)

ಸಾಹಿತ್ಯ ಸಮಾಹಿತ : ೨೦೦೭

# ೧೨

## ಪ್ರೊ. ವಿ.ಎಂ. ಇನಾಂದಾರ

ಪ್ರೊ. ವಿ.ಎಂ. ಇನಾಂದಾರ ಅವರು ನನಗೆ ಆತ್ಮೀಯರಾದ ಹಾಗೂ ಗೌರವಾಸ್ಪದರಾದ ಹಿರಿಯ ಸಾಹಿತಿಗಳಲ್ಲಿ ಒಬ್ಬರು. ಅವರ ಬಗೆಗಿನ ನನ್ನ ಅವ್ಯಕ್ತ ಸ್ನೇಹ ಸೂತ್ರದೊಡನೆ ಬರುವ ನೆನಪುಗಳನ್ನು ಚಿತ್ರಿಸಿಕೊಳ್ಳುತ್ತ, ಈ ಆಡಂಬರವಿಲ್ಲದ ಆತ್ಮೀಯತೆ ಹಾಗೂ ಅದಕ್ಕೆ ಕಾರಣಗಳನ್ನು ಹುಡುಕುತ್ತ ದೊರೆಯುವ ನವನೀತವನ್ನು ಅಂಗೈಯಲ್ಲಿಟ್ಟು ಸವಿಯಲು ಪ್ರಯತ್ನಿಸುತ್ತಿದ್ದೇನೆ.

ನಾನು ಧಾರವಾಡದಲ್ಲಿ ಹೈಸ್ಕೂಲಿನ ವಿದ್ಯಾರ್ಥಿಯಾಗಿದ್ದಾಗಲೇ (೧೯೪೨-೪೫) ಪ್ರೊ. ಇನಾಂದರ ಅವರ ಹೆಸರನ್ನು ಕೇಳಿದ್ದೆ. 'ಎರಡು ಧ್ರುವ' ಕಾದಂಬರಿಯನ್ನು ಓದಿದ್ದೆ. ಅವರನ್ನು ಮೊಟ್ಟಮೊದಲು ನೋಡಿದ್ದು ಇದೇ ಅವಧಿಯಲ್ಲಿ, ಬಹುಶಃ ನಾಡಹಬ್ಬದ ಸಂದರ್ಭದಲ್ಲಿ. ಕರ್ನಾಟಕ ವಿದ್ಯಾವರ್ಧಕ ಸಂಘದಲ್ಲಿ ಕಾರಂತರ 'ಮರಳಿ ಮಣ್ಣಿಗೆ' ಕಾದಂಬರಿಯನ್ನು ಕುರಿತು ಮಾತನಾಡಿದಾಗ ಎಂದು ತೋರುತ್ತದೆ. ವಿಮರ್ಶಕರಾಗಿ, ವಾಗ್ಮಿಯಾಗಿ ಅಂದೇ ಅವರು ನನ್ನ ಮನಸ್ಸನ್ನು ಸೆಳೆದುಕೊಂಡಿದ್ದರು. (ಈಚೆಗೆ ಅವರು ಧಾರವಾಡಕ್ಕೆ ಬಂದಾಗ 'ಶಿವರಾಮ ಕಾರಂತ : ಬದುಕು-ಬರಹ' ಎಂಬ ಮುದ್ದಾದ ಪುಸ್ತಕವನ್ನು 'ಸ್ನೇಹಪೂರ್ವಕವಾಗಿ' ನನ್ನ ಕೈಗಿತ್ತಾಗ ಅಂದಿನ ಅವರ ಭಾಷಣದ ನೆನಪಾಗಿ ಒಂದು ಬಗೆಯ ವಿಚಿತ್ರ ಸಂತೋಷಕ್ಕೆ ಒಳಗಾದೆ).

ಆಗ 'ಜಯಂತಿ' ಪತ್ರಿಕೆಯಲ್ಲಿ 'ವಿಹಾರಿ' ಎಂಬ ಹೆಸರಿನಿಂದ ವಿಮರ್ಶಾ ಲೇಖನಗಳನ್ನು ಬರೆಯುತ್ತಿದ್ದವರು ಇವರೇ ಎಂಬುದನ್ನು ಹಿಂದಿನಿಂದ ತಿಳಿದುಕೊಂಡೆ. ಪ್ರಗತಿಶೀಲ ಸಾಹಿತ್ಯದ ಆಂದೋಲನದ ಕಾಲಕ್ಕೆ 'ಉಷಾ' ಪತ್ರಿಕೆಯಿಂದ ನಡೆಯುತ್ತಿದ್ದ ವಾಗ್ಯುದ್ಧದಲ್ಲಿ ಇನಾಂದಾರರೂ ಒಬ್ಬ ಸೈನಿಕರಾಗಿದ್ದರು. ಆದರೂ ಅವರ ಲೇಖನಗಳ ಗಾಂಭೀರ್ಯಕ್ಕೆ ಚ್ಯುತಿ ಬಂದಿರಲಿಲ್ಲ. ಪ್ರಗತಿಶೀಲ ಲೇಖಕರ ಪರೇಡಿಗೆ ಇಂಬುಗೊಟ್ಟಿದ್ದ 'ಉಷಾ' ಸಂಪಾದಕರಾಗಿದ್ದ ಶ್ರೀ ಬಸವರಾಜ ಕಟ್ಟೀಮನಿಯವರು ಮುಂದೆ ೧೯೪೯ರಲ್ಲಿ 'ಸೆರೆಯಿಂದ ಹೊರಗೆ' ಎಂಬ ತಮ್ಮ ನಾಲ್ಕನೆಯ ಕಥಾ ಸಂಕಲನಕ್ಕೆ ಶ್ರೀ ಇನಾಂದಾರ ಅವರಿಂದಲೇ ಮುನ್ನುಡಿ ಬರೆಸಿದ್ದುಂಟು. ಅದರಲ್ಲಿ, ಹಿಂದೆ ನಡೆದ ಚಕಮಕಿಯನ್ನು ಜ್ಞಾಪಿಸಿಕೊಂಡು, 'ಇಂದು ಆ ಕಾಳಗದ ಸದ್ದು ಅಡಗಿದೆ. ಕೃತಿಗಿಂತ ಮಾತು ಹೆಚ್ಚಾಯಿತು ಎಂಬ ಅರಿವೂ ಆಗಿನ ಪ್ರಗತಿಶೀಲರಿಗೆ ಈಗ ಬಂದಂತಿದೆ' ಎಂದು ಹೇಳಿ, 'ಒಂದು ವಿಷಯವನ್ನು ಪ್ರತಿಯಾಗಿ ಮಾತನಾಡುವವನ ದೃಷ್ಟಿಯಿಂದ

ನೋಡಬಹುದು, ನೋಡುವುದು ತೀರ ಅಗತ್ಯ' ಎಂದು ಒಪ್ಪುವುದರಲ್ಲಿಯ ಕಟ್ಟೀಮನಿಯವರ ವಿಮರ್ಶಾ ವಿವೇಕವನ್ನು ಇನಾಂದಾರರು ಮೆಚ್ಚಿಕೊಂಡಿದ್ದಾರೆ. ಹಾಗೆಯೇ 'ನರಸಿಂಹ' ಮಾಸಿಕದಲ್ಲಿ ಧಾರವಾಡದ ಎರಡು ಗುಂಪಿನ ಲೇಖಕರ ನಡುವೆ ಪರಸ್ಪರ ಟೀಕೆ-ಪ್ರತಿಟೀಕೆಗಳು ಒಮ್ಮೊಮ್ಮೆ ಕೆಳಮಟ್ಟದಲ್ಲಿ ನಡೆಯುತ್ತಿದ್ದಾಗಲೂ ಇನಾಂದಾರರು ವಿಚಲಿತರಾದಂತೆ ಕಂಡುಬರುತ್ತಿರಲಿಲ್ಲ.

೧೯೪೭-೪೮ರಲ್ಲಿ ಇನಾಂದಾರರು ಮುಂಬಯಿ ಸಿಡನ್‌ಹ್ಯಾಮ್ ಕಾಲೇಜಿನಿಂದ ಧಾರವಾಡದ ಕರ್ನಾಟಕ ಕಾಲೇಜಿಗೆ ವರ್ಗವಾಗಿ ಬಂದರು. ತವರು ಮನೆ ಉತ್ಸಾಹ ಆಗ ಅವರಲ್ಲಿತ್ತು. ಹೊರ ರಾಜ್ಯದ ಬೇರೆ ಭಾಷೆಯ ಅಧ್ಯಾಪಕರೇ ಹೆಚ್ಚಿನ ಸಂಖ್ಯೆಯಲ್ಲಿರುತ್ತಿದ್ದ ಆ ಕಾಲದಲ್ಲಿ ಕನ್ನಡಿಗರೇ ಆದವರೊಬ್ಬರು ಅದರಲ್ಲೂ 'ಮೂರಾಬಟ್ಟೆ', 'ಕನಸಿನ ಮನೆ'ಯಂಥ ಕಾದಂಬರಿಗಳಿಂದ ಜನಪ್ರಿಯರಾದ ಲೇಖಕರು ಇಂಗ್ಲಿಷ್ ಅಧ್ಯಾಪಕರಾಗಿ ಬಂದದ್ದು ನನಗೆ ಹೆಚ್ಚಿನ ಸಂತೋಷಕ್ಕೆ ಕಾರಣವಾಗಿತ್ತು. ಬಿ.ಎ.ಗೆ ಕನ್ನಡ ಪ್ರಧಾನ ವಿಷಯದ ಜೊತೆಗೆ ಇಂಗ್ಲಿಷ್ ಕಡ್ಡಾಯವಾಗಿಯೂ ಎರಡು ಪೇಪರುಗಳಿರುತ್ತಿದ್ದವು. ಕಡ್ಡಾಯದ ತರಗತಿಯಲ್ಲಿ ಹಾರ್ಡಿಯ 'ವುಡ್ ಲ್ಯಾಂಡರ್ಸ್' ಕಾದಂಬರಿಯನ್ನೂ ಐಚ್ಛಿಕ ಇಂಗ್ಲಿಷ್ ತರಗತಿಯಲ್ಲಿ ಲಿಟನ್ ಸ್ಟ್ರಾಚಿಯ 'ಕ್ವೀನ್ ವಿಕ್ಟೋರಿಯಾ' ಕೃತಿಯನ್ನೂ ಕಲಿಸುತ್ತಿದ್ದರು. ಕಡ್ಡಾಯದ ತರಗತಿಯಲ್ಲಿ ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಾಗಿರುತ್ತಿದ್ದು ಅಲ್ಪಸ್ವಲ್ಪ ಗಲಾಟೆ ಸಾಮಾನ್ಯವಾಗಿರುತ್ತಿತ್ತು. ಇನಾಂದಾರರು ಎಂದಿನಂತೆ ತಮ್ಮ ಅಚ್ಚುಕಟ್ಟಾದ ಸೂಟಿನಲ್ಲಿ ಗಂಭೀರವಾಗಿಯೇ ತರಗತಿಯನ್ನು ಪ್ರವೇಶಿಸಿ, ನೇರವಾಗಿ ವಿಷಯಕ್ಕೆ ತೊಡಗುತ್ತಿದ್ದರು. ವಿದ್ಯಾರ್ಥಿಗಳೇನಾದರೂ ತಮಾಷೆ ಮಾಡಿದರೆ ಆ ಕಡೆಗೆ ಸ್ವಲ್ಪ ನೋಡಿ, ತುಟಿ ಬಿಗಿಹಿಡಿದುಕೊಂಡೇ ನಗೆಯನ್ನು ಮೂಡಿಸಿ, ಮುಂದುವರಿಯುತ್ತಿದ್ದರು (ಅವರ ಶ್ರೀಮತಿಯವರು ಅದೇ ತರಗತಿಯಲ್ಲಿ ವಿದ್ಯಾರ್ಥಿನಿಯಾಗಿದ್ದುದು ಇದಕ್ಕೆ ಕೆಲಮಟ್ಟಿಗೆ ಕಾರಣವಾಗಿತ್ತು.)

ಐಚ್ಛಿಕ ಇಂಗ್ಲಿಷಿನ ತರಗತಿ ಚಿಕ್ಕದಾಗಿರುತ್ತಿದ್ದುದರಿಂದ ಆಗ ಇನಾಂದಾರರ ಪಾಠಪ್ರವಚನ ನಿಸ್ಸಂಕೋಚವಾಗಿ ನಿರರ್ಗಳವಾಗಿ ಸಾಗುತ್ತಿತ್ತು. ಸೃಜನಶೀಲ ಲೇಖಕ, ವಿಮರ್ಶಕ ಹಾಗೂ ಅಧ್ಯಾಪಕ - ಈ ಮೂರರ ಮೆರುಗು ಅಲ್ಲಿ ಒಡೆದು ಕಾಣುತ್ತಿತ್ತು. ಸ್ವಭಾವತಃ ಅವರು ಜನರೊಡನೆ ಸುಲಭವಾಗಿ ಕೂಡಿಕೊಳ್ಳುತ್ತಿರಲಿಲ್ಲ. ಮೊದಲೇ ಸಂಕೋಚ ಸ್ವಭಾವದ ನಾನು ಅವರ ಪರಿಚಯಕ್ಕೆ ಹಾತೊರೆಯಲಿಲ್ಲ. ಆದರೂ ಸಾಹಿತ್ಯದಲ್ಲಿ ತುಂಬು ಆಸಕ್ತಿಯುಳ್ಳ ವಿದ್ಯಾರ್ಥಿಯೆಂದು ಅವರು ತಮ್ಮ ಮನಸ್ಸಿನಲ್ಲಿಯೇ ನನ್ನನ್ನು ಗುರುತಿಸಿಕೊಂಡಿದ್ದರು. ಅದು ಅವರ ಪ್ರೀತಿಯ ನೋಟದಲ್ಲಿಯೇ ಒಡೆದು ಕಾಣುತ್ತಿತ್ತು. ತರಗತಿಯಲ್ಲಿ ಗಂಭೀರವಾಗಿರುತ್ತಿದ್ದ ಅವರು ಸ್ಟಾಫ್‌ರೂಮಿನಲ್ಲಿ ಮಿತ್ರರೊಂದಿಗೆ ಹರಟೆ ಹೊಡೆಯುವಾಗ ಸ್ವೇಚ್ಛೆಯಾಗಿ ಉಲ್ಲಾಸದಿಂದಿರುತ್ತಿದ್ದರೆಂಬುದನ್ನು ನಾನು ಕಂಡುಕೊಂಡಿದ್ದೆ. ಆದುದರಿಂದ ಅವರ 'ಗಾಂಭೀರ್ಯ'ದ ಬಗೆಗೆ ತಪ್ಪು ತಿಳಿದುಕೊಳ್ಳುವ ಪ್ರಮೇಯವೇ ಇರಲಿಲ್ಲ.

ಕಾಲೇಜಿನ ಕರ್ನಾಟಕ ಸಂಘ, ಸಾರ್ವಜನಿಕ ಸಭೆಗಳು ಹಾಗೂ ಆಕಾಶವಾಣಿಯಲ್ಲಿ ಅವರ ಭಾಷಣಗಳನ್ನು ಕೇಳುವ ಸುಯೋಗ ಅನೇಕ ಸಲ ಒದಗುತ್ತಿತ್ತು. ಆಗ ಪ್ರಕಟವಾಗಿದ್ದ ನನ್ನ ಪ್ರಥಮ ಕವನ ಸಂಕಲನ 'ಕಾವ್ಯಾಕ್ಷಿ'ಯನ್ನು ಆಕಾಶವಾಣಿಯಲ್ಲಿ ವಿಮರ್ಶೆ ಮಾಡಿ ಉತ್ತೇಜನಕಾರಿಯಾದ ಒಳ್ಳೆಯ ಮಾತುಗಳನ್ನು ಹೇಳಿದ್ದರು.. ಶ್ರೀರಂಗರ ನಾಟಕವೊಂದರಲ್ಲಿ ಇನಾಂದಾರರು ತಮ್ಮ ಶ್ರೀಮತಿಯೊಂದಿಗೆ ಪಾತ್ರವಹಿಸಿ ಚೆನ್ನಾಗಿ ಅಭಿನಯಿಸಿದ್ದು ಇನ್ನೂ ನನ್ನ ಕಣ್ಣೆದುರು ಕಟ್ಟಿದಂತಿದೆ. ಆಕಾಶವಾಣಿಯ ಕೆಲವು ನಾಟಕಗಳಲ್ಲಿಯೂ ಅವರು ಭಾಗವಹಿಸುತ್ತಿದ್ದುದುಂಟು. ಮೈಕಿಗೆ ಅವರ ಧ್ವನಿ ಹೇಳಿಮಾಡಿಸಿದಂತಿರುತ್ತಿತ್ತು, ಈಗಲೂ ಇದೆ.

೧೯೫೨ರಲ್ಲಿ ನಾನು ಎಂ.ಎ. ಮುಗಿಸಿದ ವರ್ಷವೇ ಕರ್ನಾಟಕ ವಿಶ್ವವಿದ್ಯಾಲಯದ ಪ್ರಸಾರಾಂಗದ ಪ್ರಥಮ ಅಧಿಕಾರಿಯಾಗಿ ನೇಮಕಗೊಂಡೆ. ಪ್ರಸಾರಾಂಗದಿಂದ ಬೇರೆ ಬೇರೆ ಊರುಗಳಲ್ಲಿ ನಡೆಯುತ್ತಿದ್ದ ಉಪನ್ಯಾಸ ಶಿಬಿರಗಳಲ್ಲಿ ಪ್ರೊ. ಇನಾಂದಾರರು ಭಾಗವಹಿಸಿ ನನ್ನೊಡನೆ ಪ್ರೀತಿಯಿಂದ ಸಹಕರಿಸಿದರು. ಉತ್ತರ ಕನ್ನಡ ಜಿಲ್ಲೆಯ ಊರುಗಳನ್ನೇ ಅವರು ಹೆಚ್ಚಾಗಿ ಇಚ್ಛಿಸುತ್ತಿದ್ದುದರಿಂದ ಕಾರವಾರ, ಹೊನ್ನಾವರ, ಭಟ್ಕಳಗಳಿಗೆ ಅವರು ನನ್ನೊಡನೆ ಬಂದಿದ್ದರು. ಅವರ ಉಪನ್ಯಾಸಗಳ ಸಾರಾಂಶವನ್ನು ಮೊದಲೇ ಅವರಿಂದ ನಾನು ಬರೆಯಿಸಿಕೊಳ್ಳುತ್ತಿದ್ದೆ. ಆಗ ಅವರು 'ನಿಮ್ಮ ಕೈಯಾಗ ಪೇಪರು ಬರೆದು ಪಾರಾಗೋದು ಕಷ್ಟರೆಪಾ' ಎಂದು ವಿನೋದ ಮಾಡುತ್ತಿದ್ದರು. ತಮ್ಮ ಕನ್ನಡದ ಶಬ್ದ ಸಂಗ್ರಹ ಮಿತಿಯುಳ್ಳದ್ದು ಎಂದು ಅವರು ನನ್ನೊಡನೆ ಹೇಳುತ್ತಿದ್ದುದುಂಟು. ಅವರ ಕಾದಂಬರಿಗಳ ಶೈಲಿಯ ಆಕರ್ಷಣೆಗೆ ಒಳಗಾದ ನಾನು ಅವರ ಈ ಮಾತಿನಿಂದ ಅಚ್ಚರಿಗೊಳ್ಳುತ್ತಿದ್ದೆ. ಕನ್ನಡದ ಪ್ರಾಚೀನ ಕಾವ್ಯಗಳನ್ನು ಅವರು ಶ್ರದ್ಧೆಯಿಂದ ಅಭ್ಯಾಸ ಮಾಡಿದ್ದರು. ಸಂಸ್ಕೃತದಲ್ಲೂ ಅವರಿಗೆ ಸಾಕಷ್ಟು ಪರಿಶ್ರಮವಿತ್ತು. ಇದರಿಂದ ಸಾಹಿತ್ಯ ವಿಮರ್ಶೆಗೆ ತಕ್ಕ ಭಾಷೆಯನ್ನು ಅವರು ಹದಗೊಳಿಸಿಕೊಂಡಿದ್ದಾರೆ.

೧೯೫೮ರಲ್ಲಿ ಕರ್ನಾಟಕ ಕಾಲೇಜನ್ನು ವಿಶ್ವವಿದ್ಯಾಲಯದ ಸಂಲಗ್ನ ಕಾಲೇಜಾಗಿ ಮಾರ್ಪಡಿಸಿದಾಗ ಪ್ರೊ. ಇನಾಂದಾರರು ಸರಕಾರಿ ನೌಕರರಾಗಿಯೇ ಇರಬಯಸಿದ್ದರಿಂದ ಧಾರವಾಡವನ್ನು ಬಿಡಬೇಕಾಗಿ ಬಂದಿತು. ಧಾರವಾಡದ ಸುಮಾರು ಹತ್ತು ವರುಷಗಳ ವಾಸದ ಅವಧಿಯಲ್ಲಿ ಅವರ ಬರವಣಿಗೆ ಹುಲುಸಾಗಿಯೇ ಕೆಲಸ ಮಾಡಿತು. ('ಶಾಪ' 'ಸ್ವರ್ಗದ ಬಾಗಿಲು', 'ಈ ಪರಿಯ ಸೊಬಗು' 'ಕಟ್ಟಿದ ಮನೆ' ಮೊದಲಾದ ಸೊಗಸಾದ ಕಾದಂಬರಿಗಳು, ರಂಗದ ಮೇಲೂ ಪ್ರಯೋಗಗೊಂಡ 'ಬಿಡುಗಡೆ' ನಾಟಕ. 'ಕಾಲಿದಾಸನ ಕಥಾನಕಗಳು' 'Uttararama-Charitam : A Preface' ಮೊದಲಾದ ಗ್ರಂಥಗಳು ಈ ಸಮಯದಲ್ಲಿಯೇ ಪ್ರಕಟಗೊಂಡವು)

ಮುಂದೆ ಆರು ವರ್ಷಗಳ ತರುವಾಯ ಅವರನ್ನು ಕಾಣುವ ಸುಯೋಗ ನನಗೆ ಒದಗಿಬಂದಿತು. ೧೯೬೪ರ ಡಿಸೆಂಬರದಲ್ಲಿ ಪ್ರೊ. ಕು.ಶಿ. ಹರಿದಾಸ ಭಟ್ಟರಿಂದ ಮುದ್ದಣ್ಣ ಜಯಂತಿಗೆ

ಆಮಂತ್ರಿತನಾಗಿ ಉಡುಪಿಗೆ ಹೋದಾಗ ಪ್ರೊ. ಇನಾಂದಾರರು ಅಲ್ಲಿಯ ಪೂರ್ಣಪ್ರಜ್ಞ ಕಾಲೇಜಿನ ಪ್ರಾಂಶುಪಾಲರಾಗಿ ಅದಕ್ಕೊಂದು ಭದ್ರವಾದ ನೆಲೆಯನ್ನು ನಿರ್ಮಿಸಿದ್ದರು. ಎಂ.ಜಿ.ಎಂ. ಕಾಲೇಜಿನಲ್ಲಿ ನನ್ನ ಕಾವ್ಯವಾಚನ ಕಾರ್ಯಕ್ರಮವಿದ್ದಾಗ ಅವರೇ ಅಧ್ಯಕ್ಷತೆ ವಹಿಸಿದ್ದರು. ತಮ್ಮ ವಿದ್ಯಾರ್ಥಿಯ ಬಗ್ಗೆ ತುಂಬು ಅಭಿಮಾನದಿಂದಲೇ ಮಾತನಾಡಿದರು. ಕಾರ್ಯಕ್ರಮ ಮುಗಿದ ಮೇಲೆ 'ಮತ್ತೇನಂತದ ಧಾರವಾಡ?' ಎಂದು ತಮ್ಮ ತವರುಮನೆಯ ಸುದ್ದಿಗಳನ್ನು ಆಸ್ಥೆಯಿಂದ ವಿಚಾರಿಸಿದರು.

೧೯೭೩ರಲ್ಲಿ ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆ ಕನ್ನಡ ಲೇಖಕರ ಸಮ್ಮೇಳನ ನಡೆಸಿದ ಸಂದರ್ಭದಲ್ಲಿ ಅವರನ್ನು ಕಂಡಾಗ ತಾವು ನಿವೃತ್ತರಾಗಿರುವುದನ್ನು ತಿಳಿಸಿದರು. 'ಹಾಗಾದರೆ ಧಾರವಾಡಕ್ಕೆ ಬರಬೇಕಲ್ಲ' ಎಂದು ನಾನೆಂದಾಗ, 'ನೀವು ಕರೆದರೆ ಬಂದೇ ಬರುತ್ತೇನೆ' ಎಂದರು. ಆ ಮೇಲೆ ಎರಡು ಸಲ ವಿಶ್ವವಿದ್ಯಾಲಯಕ್ಕೆ ವಿಶೇಷ ಉಪನ್ಯಾಸಗಳಿಗಾಗಿ ಅವರನ್ನು ಬರಮಾಡಿಕೊಳ್ಳಲಾಗಿತ್ತು. ಅನಂತರ ಕರ್ನಾಟಕ ವಿದ್ಯಾವರ್ಧಕ ಸಂಘದ ದಿ. ಸಾಸನೂರ ವ್ಯಾಖ್ಯಾನ ಮಾಲೆಯಲ್ಲಿಯೂ ಉಪನ್ಯಾಸಗಳನ್ನು ನೀಡಿದರು. 'ಪಾಶ್ಚಾತ್ಯ ವಿಮರ್ಶೆಯ ಮಧ್ಯಯುಗ' 'ಪಾಶ್ಚಾತ್ಯ ವಿಮರ್ಶೆಯ ಆಧುನಿಕ ಯುಗ' ಹಾಗೂ 'ಕುವೆಂಪು ಕಾದಂಬರಿಗಳು' ಇವು ಮೇಲಿನ ಉಪನ್ಯಾಸಗಳ ಫಲವಾಗಿ ಕನ್ನಡಿಗರ ಕೈ ಸೇರುವಂತಾಯಿತು.

ಸುಲಭ ಸ್ಫೂರ್ತಿ ಹಾಗೂ ನಿರಂಕುಶ ಲೇಖನಕ್ಕೆ ಅವರು ಒಳಗಾಗುವವರಲ್ಲ ಎಂಬುದನ್ನು ಅವರ ಕಾದಂಬರಿಗಳ ಸಂಖ್ಯೆಯೇ ಸೂಚಿಸುತ್ತದೆ. 'ಚಿತ್ರಲೇಖಾ' 'ಮಂಜು ಮುಸುಕಿದ ದಾರಿ' 'ನವಿಲು ನೌಕೆ'ಯಂತಹ ಉತ್ಕೃಷ್ಟ ಕೃತಿಗಳು, ಕಾದಂಬರಿ ಕಷ್ಟಸಾಧ್ಯವಾದ ಒಂದು ಕಲಾಸಿದ್ಧಿ ಎಂಬ ಅವರ ನಂಬಿಕೆಯನ್ನು ದೃಢಗೊಳಿಸುತ್ತದೆ. ದಿ.ವಿ.ಸ. ಖಾಂಡೇಕರ ಅವರ 'ಎರಡು ಧ್ರುವ' ಕಾದಂಬರಿಯ ಅನುವಾದದಿಂದ (೧೯೩೭) ಪ್ರಾರಂಭವಾದ ಇನಾಂದಾರರ ಬರವಣಿಗೆ ಆ ಮಹಾಲೇಖಕರ ಶ್ರೇಷ್ಠ ಕೃತಿ 'ಯಯಾತಿ'ಯನ್ನು ಅನುವಾದಕ್ಕೆ ಆದರ್ಶವೆನ್ನುವಂತೆ ಕೊಟ್ಟುದು ಕನ್ನಡದ ಭಾಗ್ಯ. 'ನನ್ನಲ್ಲಿದ್ದ ಬರಹಗಾರ ರೂಪುಗೊಳ್ಳುತ್ತಿದ್ದ ಆ ಕಾಲದಲ್ಲಿ ನನ್ನ ಮನಸ್ಸಿನ ಮೇಲೆ ತುಂಬಾ ಪ್ರಭಾವ ಬೀರಿದ ಲೇಖಕರಲ್ಲಿ ಅವರೊಬ್ಬರು' ಎಂದು ಅವರನ್ನು ಕೃತಜ್ಞತೆಯಿಂದ ನೆನೆದುಕೊಂಡಿದ್ದಾರೆ. ಈ ನಡುವೆ 'ಡಾ. ಅಂಬೇಡ್ಕರ'ರಲ್ಲಿ ಇನಾಂದಾರರು ಅಪರೂಪವಾದ ಜೀವನ ಚಿತ್ರಣದ ಕೌಶಲ್ಯ ಮೆರೆದಿದ್ದಾರೆ.

ಕಳೆದ ಒಂದು ದಶಕದಲ್ಲಿ ಉನ್ನತಮಟ್ಟದ ವಿಮರ್ಶಾ ಕೃತಿಗಳು ಕನ್ನಡಕ್ಕೆ ಸಂದಿರುವುದು ಹೆಮ್ಮೆ ಪಡತಕ್ಕ ಸಂಗತಿ. ಈ ದಿಸೆಯಲ್ಲಿ ಇನಾಂದಾರರದು ಸಿಂಹಪಾಲು. ಹಿರಿಯ ಸಾಹಿತಿಗಳಾದ ಕಾರಂತ, ಕುವೆಂಪು ಹಾಗೂ ಶ್ರೀನಿವಾಸರ ಕೃತಿಗಳ ವಿಶ್ಲೇಷಣೆಯಲ್ಲಿ ತಮ್ಮ ಸಂವೇದನಾಶೀಲ ವಿಮರ್ಶೆಯ ಸ್ವಂತಿಕೆಯನ್ನು ಗಂಭೀರವಾಗಿ ಗಮನಿಸಿದ್ದಾರೆ. ಪಾಶ್ಚಾತ್ಯ ವಿಮರ್ಶೆ ಹಾಗೂ ಕಾವ್ಯಮೀಮಾಂಸೆಯನ್ನು ಸಮಗ್ರವಾಗಿ, ಸಮರ್ಥವಾಗಿ ನಿರೂಪಿಸಿ ಕನ್ನಡದ ಶ್ರೀಮಂತಿಕೆಯನ್ನು ಹೆಚ್ಚಿಸಿದ್ದಾರೆ.

ತಮ್ಮ ವಾಸಕ್ಕಾಗಿ ಬೆಂಗಳೂರನ್ನು ತ್ಯಜಿಸಿ ಮೈಸೂರನ್ನು ಆಯ್ಕೆ ಮಾಡಿಕೊಂಡಿರುವ ಇನಾಂದಾರರು ಒಂದು ದೃಷ್ಟಿಯಿಂದ ಧಾರವಾಡವನ್ನೇ ಸ್ಮರಿಸಿಕೊಂಡಂತಿದೆ.

('ನವನೀತ' ಪ್ರೊ. ವಿ.ಎಂ. ಇನಾಂದಾರ ಅಭಿನಂದನ, ೧೯೮೪)

ಸಾಹಿತ್ಯ ಸಮಾಹಿತ : ೨೦೦೭

# ೧೩

## ನಿರಂಜನ ಸಂಚಯ

'ಸರೋಜ ಸಂಚಯ', 'ಸಂಗಾತಿಯ ಸಂಚಯ', 'ಸಾಧನ ಸಂಚಯ' - ನಿರಂಜನರಿಗೆ ಇವು ಬಹು ಪ್ರಿಯವಾದ, ಹಾಗೆಯೇ ಬಹು ಜನಪ್ರಿಯವಾದ ಅಂಕಣಗಳು. ಆದರಲ್ಲೂ ಕೊನೆಯದು ಎರಡು ಜೀವಿಗಳ ಎದೆಯ ತುಡಿತವನ್ನು ಒಳಗೊಂಡು, ಸಾಹಿತ್ಯಿಕವಾಗಿ, 'ರಚನಾತ್ಮಕ'ವಾಗಿ ಪ್ರೇಮವನ್ನು ಗಟ್ಟಿಗೊಳಿಸುವಲ್ಲಿ ಮುಖ್ಯ ಪಾತ್ರವಹಿಸಿತೆನ್ನಬೇಕು, ಅದಿರಲಿ. ಇದೀಗ ನಾನು ನನ್ನ ಸ್ಮೃತಿ ಸಂಚಯವನ್ನು ಬಿಚ್ಚಬೇಕಾಗಿದೆ. ನಿರಂಜನರನ್ನು ನಾನು ಮೊದಲು ಕಂಡದ್ದೆಂದು ?

ನಾನಾಗ ಹೈಸ್ಕೂಲಿನ ವಿದ್ಯಾರ್ಥಿ. 'ಪ್ರಗತಿಶೀಲ ಕನ್ನಡ ಮಾಸಪತ್ರಿಕೆ'ಯಾಗಿ (ಸಂಪಾದಕರು : ಬಸವರಾಜ ಕಟ್ಟೀಮನಿ) 'ಉಷಾ' ಓದುಗರ ಮನಸ್ಸನ್ನು ವಿಶೇಷವಾಗಿ ಆಕರ್ಷಿಸಿದ ಕಾಲ. ೧೯೪೪ರ ಆದರ ದೀಪಾವಳಿ ಸಂಚಿಕೆಯಲ್ಲಿ 'ಸಂಧಿಕಾಲ' ಎಂಬ ಸಣ್ಣಕತೆ ಲೇಖಕರ ಸುಂದರವಾದ ಮುಖಚಿತ್ರದೊಂದಿಗೆ ಪ್ರಕಟವಾಗಿತ್ತು. ಚಿತ್ರದ ಕೆಳಗೆ 'ಶ್ರೀ ಶಿ. ರಾ. ಕುಳುಕುಂದ, ಮಂಗಳೂರು' ಎಂದಿತ್ತು. ಅದರ ವಸ್ತು ಹೀಗಿತ್ತೆಂದು ನೆನಪು: ಜನದ್ರೋಹಿ ತಂದೆ; ರಾಜಭಕ್ತ ಹಿರಿಮಗ; ಗಾಂಧಿ ಭಕ್ತ ನಡುಮಗ; ಕಮ್ಯೂನಿಸ್ಟ್ ಕಿರಿಯ ಮಗ. ಈ ಕುಟುಂಬದಲ್ಲಿ ನಡೆದ ಸಂಘರ್ಷಣೆ ಇಡಿಯ ನಾಡಿನ ಸಂಘರ್ಷಣೆಯ ಸಂಧಿಕಾಲವನ್ನು ಸೂಚಿಸಿತ್ತು. ನಾಡಿನ ರಾಜಕೀಯ ರಂಗವನ್ನು ನಾನು ಮೊದಲು ಸಾಹಿತ್ಯದ ಮೂಲಕ ಪರಿಚಯ ಮಾಡಿಕೊಂಡದ್ದು ಬಹುಶಃ ಈ ಕಥೆಯ ಮೂಲಕ ಎಂದು ತೋರುತ್ತದೆ. ("ಪುಟ್ಟದೊಂದು ಪ್ರದೇಶಕ್ಕೆ ಸೀಮಿತವಾಗಿದ್ದ ನನ್ನ ಬರೆವಣಿಗೆ 'ಉಷಾ' ಮಾಸಿಕದ ಮೂಲಕ ನಾಡಿನ ನಾಲ್ಕು ಮೂಲೆಗಳನ್ನು ಮುಟ್ಟಿತು" ಎಂದು ಮುಂದೆ (೧೯೫೯) ನಿರಂಜನರೇ ಒಂದೆಡೆ ಹೇಳಿದ್ದಾರೆ.)

ಮುಂದೆ ಕೆಲ ದಿನಗಳಲ್ಲಿಯೇ ರಬಕವಿಯಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನ. ಪ್ರಗತಿಶೀಲ ಸಾಹಿತ್ಯ ಗೋಷ್ಠಿಯಲ್ಲಿ ಅ.ನ.ಕೃ, ತ.ರಾ.ಸು. ಮೊದಲಾದವರೊಂದಿಗೆ ಕುಳಕುಂದ ಶಿವರಾಯರ ಭಾಷಣ. ಹಿಂದೆ 'ಉಷಾ'ದಲ್ಲಿ ಕಂಡ ಭಾವಚಿತ್ರಕ್ಕೂ ಈಗ ಪ್ರತ್ಯಕ್ಷ ನೋಡಿದ ವ್ಯಕ್ತಿಗೂ ಯಾವ ಅಂತರವೂ ಇರಲಿಲ್ಲ. ಮಾತುಗಾರಿಕೆಯೂ ಹಾಗೇ. ಸುಮಾರು ಇಪ್ಪತ್ತರ ಹರೆಯದಲ್ಲಿಯೇ ಪತ್ರಿಕಾರಂಗ ಹಾಗೂ ಸಾಹಿತ್ಯ ಕ್ಷೇತ್ರಗಳಲ್ಲಿ ತಕ್ಕಷ್ಟು ಅನುಭವ ಪಡೆದಿದ್ದ ಈ ವ್ಯಕ್ತಿ ನನ್ನ ಕುತೂಹಲವನ್ನು ಕೆರಳಿಸಿದ್ದರು.

‘ಪ್ರಜಾಮತ’ದಲ್ಲಿ ‘ಸರೂ ಕೇಳಿದೆಯಾ?’ ಅಂಕಣವನ್ನು ನಾನು ಆಗೀಗ ಓದುತ್ತಿದ್ದೆ. ಬರವಣಿಗೆಯಲ್ಲಿ ತಮ್ಮದೇ ಆದ ಶೈಲಿಯನ್ನು ಅವರು ಆಗಲೇ ಸಾಧಿಸಿಕೊಂಡಿದ್ದರು. ಆ ಹೊತ್ತಿಗೆ ಪ್ರಕಟವಾಗಿದ್ದ ಎರಡು ಕಥಾ ಸಂಗ್ರಹಗಳಲ್ಲಿಯೂ ಅದು ಒಡೆದು ಕಾಣುತ್ತಿತ್ತು.

೧೯೪೬ರಲ್ಲಿ ನಾನು ಕಾಲೇಜು ಪ್ರವೇಶಿಸಿದಾಗ, ಜನಪದ ಸಾಹಿತ್ಯ ಸಂಗ್ರಹದಲ್ಲಿ ತಲ್ಲೀನರಾಗಿದ್ದ ಶಿವೇಶ್ವರ ದೊಡ್ಡಮನಿಯವರ ಪರಿಚಯವಾಯಿತು. ಅವರು ಸಂಗ್ರಹಿಸಿದ್ದ ಕೆಲವು ಸುಂದರ ಜನಪದ ಗೀತಗಳು ‘ಉಷಾ’ ಪತ್ರಿಕೆಯಲ್ಲಿ ಪ್ರಕಟವಾಗಿದ್ದನ್ನು ನೋಡಿದ್ದೆ. ಹಳ್ಳಿಯ ಸರಳತೆ, ಮುಗ್ಧತೆಗಳ ಪ್ರತೀಕವಾಗಿದ್ದ ಶಿವೇಶ್ವರ ಅಲ್ಪಕಾಲದಲ್ಲಿಯೇ ನನ್ನ ಆಪ್ತಮಿತ್ರರಾಗಿಬಿಟ್ಟರು. ಕುಳಕುಂದರಿಂದ ತಮಗೆ ಬಂದ ಪತ್ರಗಳನ್ನು ಅವರು ನನಗೆ ತೋರಿಸುತ್ತಿದ್ದರು. ತರುಣ ಬರೆಹಗಾರರೊಡನೆ ಮೈತ್ರಿಯನ್ನು ಬೆಳೆಸುವದರಲ್ಲಿ ಹಾಗೂ ಅವರನ್ನು ಒಂದಿಲ್ಲ ಒಂದು ರೀತಿಯಲ್ಲಿ ತಮ್ಮ ಅಂಕಣದ ಬರೆಹದ ಮೂಲಕ ಓದುಗರಿಗೆ ಪರಿಚಯ ಮಾಡಿಕೊಡುವಲ್ಲಿ ಕುಳಕುಂದರು ತಮ್ಮ ಚಾಣಾಕ್ಷತೆಯನ್ನು ವ್ಯಕ್ತಪಡಿಸುತ್ತಿದ್ದರು. ಎಡೆಬಿಡದ ಸಂಚಾರ, ಸಭೆ ಸಮ್ಮೇಳನಗಳ ಒಡನಾಟ ಅವರಿಗೆ ಇದಕ್ಕೆ ಹೆಚ್ಚು ಸಹಾಯಕವಾಗಿರಬೇಕು.

೧೯೪೭ರ ಪ್ರಾರಂಭದಲ್ಲಿ ಅವರೊಮ್ಮೆ ಧಾರವಾಡದ ಮಾಳಮಡ್ಡಿಯಲ್ಲಿದ್ದ ನನ್ನ ಕೋಣೆಗೆ ಬಂದರು. ಸ್ಟೋವ್ ಹೊತ್ತಿಸಿ ನಾನು ಚಹ ಮಾಡಿದೆ. ಗೆಳೆಯ ಶಿವೇಶ್ವರರ ಮೂಲಕ ಪರಸ್ಪರ ಪರಿಚಯವಾಯಿತು. ತಮ್ಮ ಬರವಣಿಗೆಯ ಮೂಲಕ ಅವರು ಆಗಲೇ ಪರಿಚಯವಾಗಿಬಿಟ್ಟಿದ್ದರಿಂದ ಈಗ ನಾವು ಹೆಚ್ಚು ಸಲಿಗೆಯವರಾದೆವು. (ಬಿಳಿ ಬಟ್ಟೆಗಳ ಆ ಶುಭ್ರತೆ, ಅಚ್ಚುಕಟ್ಟುತನ ಇಂದಿಗೂ ಅಚ್ಚಳಿಯದೆ ಅವರಲ್ಲಿ ಉಳಿದುಕೊಂಡು ಬಂದಿದೆ.) ಸಿಗರೇಟು ಸೇವನೆಯಿಂದ ಅವರ ಮನಸ್ಸಿಗೆ ಏನೋ ನೆಮ್ಮದಿ ದೊರೆಯುತ್ತಿತ್ತೆಂದು ತೋರುತ್ತದೆ. ಈ ವಿಷಯದಲ್ಲಿ ಶಿವೇಶ್ವರ ಅವರಿಗೆ ಜೊತೆಗೂಡುತ್ತಿದ್ದರು. ಕಮ್ಯೂನಿಸ್ಟ್ ಪಕ್ಷದ ಸಾಪ್ತಾಹಿಕ ‘ಜನಶಕ್ತಿ’ಯನ್ನು ಹುಬ್ಬಳ್ಳಿಯಿಂದ ಹೊರಡಿಸುವ ತಯಾರಿಯಲ್ಲಿದ್ದ ಅವರು ಲೇಖಕ ಮಿತ್ರರನ್ನು ಕಾಣಲು ಮೇಲಿಂದ ಮೇಲೆ ಧಾರವಾಡಕ್ಕೆ ಬಂದು ಹೋಗುತ್ತಿದ್ದರು.

ಕುಳಕುಂದರ ಸಂಪಾದಕತ್ವದಲ್ಲಿ ೧೯೪೭ ಮೇ ೧ರಂದು ‘ಜನಶಕ್ತಿ’ ಪ್ರಾರಂಭವಾಯಿತು. ಈ ಮೊದಲೇ ಅವರಿಂದ ಆಕರ್ಷಿತರಾಗಿದ್ದ ಶಿವೇಶ್ವರ ಪತ್ರಿಕೆಯ ಪ್ರಕಾಶಕರಾದರು; ಉಪಸಂಪಾದಕರೂ ಆದರು. ನಾನು ಆಗೊಮ್ಮೆ ಈಗೊಮ್ಮೆ ‘ಜನಶಕ್ತಿ’ಯ ಕಾರ್ಯಾಲಯಕ್ಕೆ ಹೋಗುತ್ತಿದ್ದೆ. ನನ್ನನ್ನು ನೋಡಿ ನಸುನಕ್ಕು, ಒಂದೆರಡು ಮಾತಾಡಿ ಮರುಕ್ಷಣದಲ್ಲಿಯೇ ಕುಳಕುಂದ ತಮ್ಮ ಕೆಲಸದಲ್ಲಿ ಮಗ್ನರಾಗಿಬಿಡುತ್ತಿದ್ದರು. ಜೊತೆಗೆ ಶಿವೇಶ್ವರ, ಕೆ. ಸದಾಶಿವ, ಕೆ. ಶ್ರೀಧರ್, ಎಲ್ಲರೂ ಮೇಜಿಗೆ ತಲೆಬಗ್ಗಿಸಿ ಪತ್ರಿಕೆಯ ಬರವಣಿಗೆಯಲ್ಲಿ ತೊಡಗಿದವರು ಕೆಲಸ ಪೂರೈಸಿದ ಮೇಲೆಯೇ ಮೇಲೇಳುತ್ತಿದ್ದರು. ಆಮೇಲೆ ಸಮೀಪದ ಹೋಟಲಿನಲ್ಲಿ ದೋಸೆ, ಚಹ ಇತ್ಯಾದಿ. ಅವರ ಕೆಲಸದಲ್ಲಿಯ ಶಿಸ್ತು ಮಾತ್ರ ನನ್ನನ್ನು ದಂಗುಬಡಿಸುತ್ತಿತ್ತು. ಪತ್ರಿಕೆ ಹೊರಬಂದ ದಿನ ಒಂದೆರಡು ಸಂಚಿಕೆಗಳನ್ನು ಹಿಡಿದು ಶಿವೇಶ್ವರ ನನ್ನ ಕೋಣೆಗೆ ಬರುತ್ತಿದ್ದರು. ರಾತ್ರಿಯೆಲ್ಲ

ಏನೇನೊ ಮಾತುಕತೆ, ಕಾವ್ಯಾಲಾಪ. ಯಾವುದೊ ಉತ್ಸಾಹ, ಸಂತೋಷದಲ್ಲಿ ತಮ್ಮ ಕಣ್ಣು ನೋವು, ಅಸ್ವಸ್ಥತೆಯನ್ನೆಲ್ಲ ಅವರು ಮರೆಯುತ್ತಿದ್ದರು. ಒಂದು ಪಕ್ಷದ ಪತ್ರಿಕೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರೂ ನನ್ನ ಸಹವಾಸದಿಂದಲೊ ಏನೋ ಅವರು ತಮ್ಮ ಪರಿಶುದ್ಧ ಹೃದಯದ ಕಾವ್ಯರಚನೆಯನ್ನು ಕೊನೆಯವರೆಗೂ ಉಳಿಸಿಕೊಂಡಿದ್ದರು. (ಈಗ 'ಪ್ರಜಾಮತ'ದ ಸಂಪಾದಕರಾಗಿರುವ ಹ.ವೆಂ. ನಾಗರಾಜರಾಯರು ಒಂದೆರಡು ತಿಂಗಳು 'ಜನಶಕ್ತಿ'ಯ ಉಪಸಂಪಾದಕರಾಗಿದ್ದರು. ಕೋಮಲ ಶರೀರದ ಅವರ ಕಂಠವೂ ಇಂಪಾಗಿತ್ತು. ಕೆಲವು ಕವಿತೆಗಳನ್ನು ತುಂಬ ಭಾವಪೂರ್ಣವಾಗಿ ಹಾಡುತ್ತಿದ್ದರು. ಅಡಿಗರ 'ಎಂದು ಕೊನೆ ಓ ಒಂದು ಕೊನೆ?' ಎಂಬ ಕವಿತೆಯನ್ನು ಅವರು ಹಾವಭಾವದಿಂದ ಹಾಡುತ್ತಿದ್ದುದು ಇನ್ನೂ ನನ್ನ ಕಿವಿಯಲ್ಲಿ ತುಂಬಿಕೊಂಡಂತಿದೆ.)

'ಜನಶಕ್ತಿ' ಶ್ರಮಜೀವಿ ವರ್ಗದ ರಾಜಕೀಯ ಸಾಪ್ತಾಹಿಕವೆನಿಸಿದ್ದರೂ ಸಾಹಿತ್ಯಿಕ ವಾದ-ವಿವಾದಗಳು, ಏಕೀಕರಣ ಚಳುವಳಿಗೆ ಸಂಬಂಧಪಟ್ಟ ಲೇಖನಗಳು ಅದರಲ್ಲಿ ಬರುತ್ತಿದ್ದವಲ್ಲದೆ ಸಣ್ಣಕತೆ ಕವಿತೆಗಳೂ ಕಾಣಿಸಿಕೊಳ್ಳುತ್ತಿದ್ದವು. ಪಕ್ಷದ ವಿಚಾರವೇನೇ ಇರಲಿ, ಕುಳುಕುಂದರ ಜಾದೂಗಾರಿಕೆಯಿಂದ ಪತ್ರಿಕೆ ಸಾಹಿತಿಗಳಿಗೆ ಅಪ್ರಿಯವೆನಿಸಿರಲಿಲ್ಲ. ಆಗ ನನ್ನಿಂದಲೂ ಒಂದು ಕಥೆ ಬರೆಯಿಸಿದ ಶ್ರೇಯಸ್ಸು ಕುಳಕುಂದರಿಗೆ ಸಲ್ಲುತ್ತದೆ. ಹಳ್ಳಿಯ ಜೀವನದ ನನ್ನ ಅನುಭವದಿಂದ ರೈತನೊಬ್ಬನ ಸಂಸಾರದ ಕಷ್ಟವನ್ನು ಚಿತ್ರಿಸಿದ ಆ ಕಥೆಯ ಹೆಸರು : 'ಮಣ್ಣಿನ ಮಕ್ಕಳು'. ೧೯೪೭ ಜುಲೈ ೧೩ರ 'ಜನಶಕ್ತಿ'ಯಲ್ಲಿ ಪ್ರಕಟವಾಯಿತು.

ಮುಂದೆ ಮೂರು ನಾಲ್ಕು ವರ್ಷ ಕುಳುಕುಂದರನ್ನು ಕಾಣುವ ಅವಕಾಶವಿರಲಿಲ್ಲ. ಕಾರಣ: ಅವರ 'ಭೂಗತ' ಜೀವನ. ಹುಬ್ಬಳ್ಳಿ-ಧಾರವಾಡಗಳಲ್ಲಿ ತಲೆಮರೆಸಿಕೊಂಡು ಓಡಾಡುವಾಗ ಶಿವೇಶ್ವರ, ಅವರ ತಾಯಿ ಚೆನ್ನವೀರಮ್ಮ ನವಿಲೂರಿನಲ್ಲಿ ಅವರಿಗೆ, ಅವರ ಸಂಗಾತಿಗಳಿಗೂ ಒದಗಿಸಿದ ರಕ್ಷಣೆ ಅವಿಸ್ಮರಣೀಯ. 'ಜನಶಕ್ತಿ'ಗೆ ತಮ್ಮ ಶಕ್ತಿಯನ್ನೆಲ್ಲ ಧಾರೆಯೆರೆದ ಶಿವೇಶ್ವರ ತಾವು ಮಾತ್ರ ತಮ್ಮ ಆರೋಗ್ಯದ ಕಡೆಗೆ ಲಕ್ಷ್ಯವಹಿಸಲಿಲ್ಲ. ೧೯೫೦ರ ಮಾರ್ಚ್ ೨೬ರಂದು ಅವರು ವಿಷಮಜ್ವರದಿಂದ ತೀರಿಕೊಂಡರು. ಆಪ್ತಮಿತ್ರನ ಅಗಲಿಕೆಯ ಅನುತಾಪದಲ್ಲಿಯೇ ನಾನು ಬಿ.ಎ. ಪರೀಕ್ಷೆಗೆ ಕುಳಿತುಕೊಳ್ಳಬೇಕಾಯಿತು.

೧೯೫೧ರಲ್ಲಿ ಭೂಗತ ಪ್ರಪಂಚದಿಂದ ಹೊರಬಂದ ಕುಳುಕುಂದರು ಕಮ್ಯೂನಿಸ್ಟ್ ಪಕ್ಷದಿಂದಲೂ ಬಿಡುಗಡೆ ಪಡೆದು 'ನಿರಂಜನ'ರಾಗಿ ಹೊಸ ಹುಟ್ಟು ಪಡೆದರು. ಶಿವೇಶ್ವರರ ಅಕಾಲ ಮರಣದಿಂದ ಅವರಿಗೂ ಆಘಾತವಾಗಿತ್ತು. ಬೆಂಗಳೂರಿನಲ್ಲಿ 'ಪುರೋಗಾಮಿ ಪ್ರಕಾಶನ'ವನ್ನು ಆರಂಭಿಸಿ ನನಗೊಂದು ಪತ್ರ ಬರೆದರು. ಆ ಪ್ರಕಾಶನದ ದ್ವಿತೀಯ ಪ್ರಕಟನೆಯಾಗಿ 'ನಮ್ಮ ನಡುವಿನ ಗೋಡೆ' ಕಥಾಸಂಗ್ರಹವನ್ನು ಪ್ರಕಟಿಸಿ 'ಸಂಗಾತಿ ಶಿವೇಶ್ವರನ ಚಿರಸ್ಮರಣೆಗೆ' ಅದನ್ನು ಅರ್ಪಿಸಿದರು. ಶಿವೇಶ್ವರನ ಹಾಗೂ ನನ್ನ ಒಂದೊಂದು ಕಥೆ, ನಿರಂಜನರ ನಾಲ್ಕು ಕಥೆಗಳು ಅದರಲ್ಲಿ ಸೇರಿವೆ. ಶಿವೇಶ್ವರನ ಬಗೆಗಿನ ತಮ್ಮ ಆತ್ಮೀಯತೆ, ತಳಮಳ, ಸಂವೇದನೆಗಳನ್ನು

'ಸೋದರ ಶಿವೇಶ್ವರನ ನೆನಪಿಗೆ' ಎಂಬ ಅಲ್ಲಿಯ ಲೇಖನದಲ್ಲಿ ಸ್ಮಾರಕವಾಗಿ ಕೆತ್ತಿದ್ದಾರೆ ನಿರಂಜನ. (ಶಿವೇಶ್ವರನ ಕೆಲವು ಕವಿತೆಗಳನ್ನೂ ಅವರು ಸಂಗ್ರಹಿಸಿದ ಜಾನಪದ ಗೀತೆಗಳನ್ನೂ ಬಸವರಾಜ ಕಟ್ಟೀಮನಿಯವರೂ ನಾನು ಕೂಡಿ ಸಂಪಾದಿಸಿ ೧೯೫೩ರಲ್ಲಿ 'ನವಿಲೂರ ಮನೆಯಿಂದ' ಎಂಬ ಹೆಸರಿನಲ್ಲಿ ಪುಸ್ತಕ ರೂಪದಲ್ಲಿ ಪ್ರಕಟಿಸಿದೆವು. ಇದೇ ಹೆಸರಿನ ತಲೆಬರೆಹದಡಿಯಲ್ಲಿ ಹಲವಾರು ಲೇಖನಗಳನ್ನು ಶಿವೇಶ್ವರ ಹಿಂದೆ ಪತ್ರಿಕೆಗಳಲ್ಲಿ ಬರೆದಿದ್ದರು.)

೧೯೫೭ ಮೇ ತಿಂಗಳು ಧಾರವಾಡದಲ್ಲಿ, ಕರ್ನಾಟಕ ಏಕೀಕರಣವಾದ ಮೇಲೆ ಪ್ರಥಮ ಸಾಹಿತ್ಯ ಸಮ್ಮೇಳನ - ಅದೂ ಕುವೆಂಪು ಅಧ್ಯಕ್ಷತೆಯಲ್ಲಿ. ಆ ಸಮ್ಮೇಳನದ ಕಾರ್ಯದರ್ಶಿಯಾಗಿ ಕೆಲಸ ಮಾಡುವ ಅವಕಾಶ ನನಗೆ ಒದಗಿದ್ದಿತು. ಕಾರ್ಯಕ್ರಮಗಳ ಸಂಯೋಜನೆಯಲ್ಲಿ ಪ್ರಥಮ ಬಾರಿಗೆ ಹೊಸ ಹಾದಿ ಹಾಕಿಕೊಟ್ಟ ಸಮ್ಮೇಳನ ಅದಾಗಿದ್ದಿತು. ಗೋಕಾಕರು ಅಧ್ಯಕ್ಷರಾಗಿದ್ದ ಒಂದು ವಿಚಾರ ಸಂಕಿರಣದಲ್ಲಿ ಭಾಗವಹಿಸಲು ನಿರಂಜನರನ್ನು ಆಮಂತ್ರಿಸಲಾಗಿತ್ತು. 'ಸಾಹಿತಿಯು ತನ್ನ ತತ್ವ ಹಾಗೂ ನಂಬುಗೆಗಳನ್ನು ಕಲೆಗೆ ವ್ಯತಿರಿಕ್ತವಾಗದ ಹಾಗೆ ಅಭಿವ್ಯಕ್ತಿಗೊಳಿಸಲು ಸಾಧ್ಯವೆ?' ಎಂಬುದು ಅದರ ವಿಷಯ. "ಯಾವುದೇ ತತ್ವದ ಪ್ರಚಾರ ಇಲ್ಲವೆ ಆರಾಧಕ ಆ ತತ್ವದ ಪ್ರತಿಪಾದನೆಗೆಂದೇ ಸಿದ್ಧಗೊಳಿಸುವ ಬರೆವಣಿಗೆ ಎಂದಿಗೂ ಸಾಹಿತ್ಯವೆನಿಸದು. ಬರೆಯುವವನು ಮುಖ್ಯತಃ ಮೂಲತಃ ಪ್ರಾಮಾಣಿಕ ಕಲಾವಿದನಾಗಿದ್ದರೆ ಆತನ ತತ್ವನಿಷ್ಠೆಯಿಂದ, ನಂಬುಗೆಗಳಿಂದ ಕಲೆಗೆ ಹಾನಿಯೊದಗದು, ಅಷ್ಟೇ ಅಲ್ಲ, ಆ ಸಾಹಿತಿ ತನ್ನ ತತ್ವ ನಂಬುಗೆಗಳನ್ನು ಕಲೆಗೆ ವ್ಯತಿರಿಕ್ತವಾಗದ ಹಾಗೆ ಅಭಿವ್ಯಕ್ತಿಗೊಳಿಸುವುದು ದುಸ್ಸಾಧ್ಯವಾಗದು" ಎಂದು ನಿರಂಜನ ಪ್ರತಿಪಾದಿಸಿದರು. ಅವರು ಕಮ್ಯೂನಿಸ್ಟ್ ಪಕ್ಷದಿಂದ ಬಿಡುಗಡೆ ಪಡೆದು ಆಗಲೇ ಆರು ವರುಷವಾಗಿತ್ತು.

೧೯೫೮ರಲ್ಲಿಯೇ ಡಾ. ಅನುಪಮಾ ಅವರೊಂದಿಗೆ ನಿರಂಜನರ ಮದುವೆಯಾಗಿತ್ತು. (ಅದನ್ನು ನಾನು ನಾಲ್ಕೈದು ವರ್ಷ ಮೊದಲೇ ಊಹಿಸಿದ್ದೆ.) ಸಮ್ಮೇಳನಕ್ಕೆ ಅನುಪಮಾ ಜೊತೆಗೆ ತ್ರಿವೇಣಿಯವರೂ ಬಂದಿದ್ದರು. ಶ್ರೀಮತಿ ಕಾವಿಯವರಿಗೆ ಅವರಿಬ್ಬರ ಪರಿಚಯದಿಂದ ಹೆಚ್ಚಿನ ಸಂತೋಷವಾಯಿತು.

೧೯೫೭, ಬೇಂದ್ರೆಯವರ ಅಧ್ಯಕ್ಷತೆಯಲ್ಲಿ ಜರುಗಿದ ದಸರಾ ಕವಿಸಮ್ಮೇಳನದಲ್ಲಿ ಭಾಗವಹಿಸಲು ಮನೆಯವರೊಡನೆ ನಾನು ಮೈಸೂರಿಗೆ ಹೋದಾಗ ನಿರಂಜನ ಗೋಕುಲ ವಿಸ್ತರಣದಲ್ಲಿ ಮನೆ ಮಾಡಿದ್ದರು. ನಮ್ಮಿಬ್ಬರನ್ನೂ ಊಟಕ್ಕೆ ಆಮಂತ್ರಿಸಿ ಧಾರವಾಡದ ಹಿಂದಿನ ನೆನಪುಗಳನ್ನು ಮೆಲುಕು ಹಾಕಿದರು. ಡಾ. ಅನುಪಮಾ ಧಾರವಾಡದಲ್ಲಿ ತಮ್ಮ ವೈದ್ಯಕೀಯ ವೃತ್ತಿಯನ್ನು ಆರಂಭಿಸಿದರೆ ಹೇಗೆ ಎಂಬುದರ ಬಗೆಗೂ ಸಮಾಲೋಚಿಸಿದರು. ನಾವಿಬ್ಬರೂ ಆ ವಿಚಾರವನ್ನು ಬೆಂಬಲಿಸಿ ಸ್ವಾಗತಿಸಿದೆವು. ಆ ಸಂದರ್ಭದಲ್ಲಿಯೇ ನಿರಂಜನ ತಮ್ಮ ತಾಯಿಯವರ ಪರಿಚಯ ಮಾಡಿಕೊಟ್ಟರು. ಚೆಲುವಿನಲ್ಲಿ, ಮುಖದ ಮಾಟದಲ್ಲಿ ನಿರಂಜನ ತಾಯಿಯ ಪಡಿಯಚ್ಚಿನಂತೆ ತೋರಿದರು. (ದೈವಭಕ್ತಳಾದ ಆ ತಾಯಿಯ ಭಾವನೆಗಳಿಗೆ

ನೋವಾಗದ ರೀತಿಯಲ್ಲಿ ಅವರನ್ನು ಕೊನೆಯವರೆಗೂ ಜೋಪಾನ ಮಾಡಿದ ನಿರಂಜನರ ಬಗ್ಗೆ ನನ್ನಲ್ಲಿ ಹೆಚ್ಚಿನ ಆದರವುಂಟಾಯಿತು.) ದಸರೆಯ ಉತ್ಸವವನ್ನು ಮೊದಲ ಬಾರಿಗೆ ನೋಡುತ್ತಿದ್ದ ನಮಗೆ ಅನುಕೂಲವಾಗುವಂತೆ ನಿರಂಜನ ನಮ್ಮ ಜೊತೆಗೆ ಓಡಾಡಿದರು. ತಿರುಗಿ ಊರಿಗೆ ಬರುವಾಗಲೂ ಸ್ಟೇಶನ್ನಿಗೆ ಬಂದು ಆ ಜನಸಮುದ್ರದಲ್ಲಿ ಹೇಗೋ ತಾವೇ ಮುಂದಾಗಿ ಒಂದು ಬೋಗಿಯಲ್ಲಿ ನಮಗೆ ಸ್ಥಳ ಒದಗಿಸಿ ಬೀಳ್ಕೊಟ್ಟರು.

ಧಾರವಾಡದ ಸಾರಸ್ವತಪುರದಲ್ಲಿ ನಮ್ಮ ಮನೆಯ ಸಮೀಪದಲ್ಲಿಯೇ ಅವರಿಗಾಗಿ ಒಂದು ಮನೆಯನ್ನು ನೋಡಿಟ್ಟಿದ್ದೆವು. ಮರುವರ್ಷವೇ ನಿರಂಜನ ದಂಪತಿಗಳು ತಾಯಿಯೊಡನೆ ಬಂದು ಅಲ್ಲಿ ನೆಲೆಸಿದರು. ನಾವು ಇನ್ನೂ ಹೆಚ್ಚು ಆತ್ಮೀಯರಾದೆವು. ಒಳ್ಳೆಯ ಕವಯಿತ್ರಿಯೆನಿಸಿ ಈಗ ಅಮೇರಿಕೆಯಲ್ಲಿ ಡಾಕ್ಟರೇಟ್ ಮಾಡುತ್ತಿರುವ ತೇಜಸ್ವಿನಿಗೆ ಧಾರವಾಡ ಜನ್ಮಸ್ಥಳವಾಯಿತು. (ತಮ್ಮ ಆತ್ಮಕಥನ 'ನೆನಪು : ಸಿಹಿ-ಕಹಿ'ಯಲ್ಲಿ ಡಾ. ಅನುಪಮಾ ಧಾರವಾಡದ ನಾಲ್ಕು ವರ್ಷಗಳ ವಾಸದ ಅನುಭವಗಳನ್ನು ವೈದ್ಯೆಯಾಗಿ, ಲೇಖಕಿಯಾಗಿ ಸೊಗಸಾಗಿ ನಿರೂಪಿಸಿದ್ದಾರೆ) ಜನಶಕ್ತಿಯ ಹೋರಾಟಗಾರರಾಗಿ ಹಿಂದೆ ಧಾರವಾಡಕ್ಕೆ ಬಂದಿದ್ದ ಕುಳುಕುಂದರಿಗೂ ಪೊರೆ ಕಳಚಿದ ಈಗಿನ ನಿರಂಜನರಿಗೂ ತೀವ್ರ ವ್ಯತ್ಯಾಸ ಕಂಡುಬಂದರೂ ಮೊದಲಿನಂತೆಯೇ ಸ್ನೇಹಶೀಲ, ಕಾರ್ಯತತ್ಪರ, ಸತತಾಭ್ಯಾಸಿ; ಯೋಚನೆಗಳನ್ನು ತೀವ್ರ ಕೃತಿಗಿಳಿಸುವ ಅವರ ಸ್ವಭಾವದಲ್ಲಿ ಯಾವ ಬದಲಾವಣೆಯೂ ಆಗಿರಲಿಲ್ಲ. ಬರೆಯುವುದಕ್ಕೆ ಪ್ರಶಾಂತ ವಾತಾವರಣವಿದ್ದರೂ ಪ್ರಕಾಶಕರ ಅಭಾವವಿರುವ ಧಾರವಾಡಕ್ಕಿಂತ ಬೆಂಗಳೂರೇ ಕ್ರಿಯಾಶೀಲರಾದ ನಿರಂಜನರನ್ನು ಮತ್ತೆ ತನ್ನೆಡೆಗೆ ಸೆಳೆಯಿತು. ಆದರೆ ಡಾ. ಅನುಪಮಾ ಅವರ ವೈದ್ಯಕೀಯ ವೃತ್ತಿಯ ವಿವಿಧಾನುಭವಕ್ಕೆ ಧಾರವಾಡ ತಳಹದಿಯಾದದ್ದನ್ನು ಅವರು ನೆನೆಯದೆ ಇಲ್ಲ.

೧೯೬೫ರಲ್ಲಿ ಕಾರವಾರದಲ್ಲಿ ಕಡೆಂಗೋಡ್ಲು ಶಂಕರಭಟ್ಟರ ಅಧ್ಯಕ್ಷತೆಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಕಾಲಕ್ಕೆ ನಿರಂಜನ ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿಯಾಗಿದ್ದರು. ಹಿಂದಿನ ಹತ್ತು ವರ್ಷಗಳ ಸಾಹಿತ್ಯ ಸಮೀಕ್ಷೆ ಕೈಗೊಂಡ ಹೊಸ ಬಗೆಯ ಗೋಷ್ಠಿಗಳನ್ನು ಅಲ್ಲಿ ಏರ್ಪಡಿಸಿದ್ದು, ಏನಾದರೂ ಹೊಸದನ್ನು ಮಾಡಬೇಕೆಂಬ ಅವರ ಹಂಬಲಕ್ಕೆ ಸಾಕ್ಷಿಯಾಗಿತ್ತು. ಕವಿಸಮ್ಮೇಳನದಲ್ಲಿ ಓದಿದ 'ಕಾಲ ನಿಲ್ಲುವುದಿಲ್ಲ' ಎಂಬ ನನ್ನ ಕವಿತೆಯನ್ನು ನಿರಂಜನ ತುಂಬ ಮೆಚ್ಚಿಕೊಂಡರು. ನವ್ಯದ ಅಂದಿನ ಅನವಶ್ಯ 'ಅಬ್ಬರ'ಕ್ಕೆ ಅವರು ಬೇಸರಗೊಂಡಂತಿತ್ತು.

ಒಂದು ದಿನ ಸಂಜೆ ಕಾರವಾರದ ಸಮುದ್ರ ತೀರಕ್ಕೆ ಹೋದಾಗ ಜೊತೆಗೆ ಅನುಪಮಾ ಅವರು ಬಂದರು. ನಿರಂಜನ ಸಮ್ಮೇಳನದ ಮಂಟಪದಲ್ಲಿಯೇ ಇರಬೇಕಾಯಿತು. ಸೂರ್ಯಾಸ್ತದ ಸೊಬಗನ್ನು ನೋಡುತ್ತ, ಅದು ಇದು ಮಾತಾಡುತ್ತ ಕುಳಿತಾಗ ಧಾರವಾಡದ ಸುದ್ದಿಗಳನ್ನೆಲ್ಲ ಕೇಳಿದರು. ಅವರ ದವಾಖಾನೆಯಲ್ಲಿ ಹುಟ್ಟಿದ ನನ್ನ ಮಗ ಪ್ರಿಯದರ್ಶಿಯ ಆರೋಗ್ಯವನ್ನು ವಿಚಾರಿಸಿದರು. ಅವರ ಮಕ್ಕಳು ತೇಜಸ್ವಿನಿ, ಸೀಮಂತಿನಿ ಮಳಲ ದಂಡೆಯಲ್ಲಿ ಸ್ವಚ್ಛಂದ ರೀತಿಯಲ್ಲಿ ತೊಡಗಿದ್ದ ಚಿತ್ರ ಇನ್ನೂ ಕಣ್ಣುಮುಂದಿದೆ. ಸಮ್ಮೇಳನ ಮುಗಿದೊಡನೆ ನಿರಂಜನ ಪರಿಷತ್ತಿನ ಕಾರ್ಯದರ್ಶಿತ್ವದಿಂದ ನಿವೃತ್ತಿಯನ್ನು ಪಡೆದುಕೊಂಡರು.

ಬರೆವಣಿಗೆಯ ಜೊತೆಗೆ ಯಾವುದಾದರೂ ಒಂದು ವಿಶೇಷ ಯೋಜನೆಯಲ್ಲಿ ತೊಡಗಿಕೊಳ್ಳದಿದ್ದರೆ ನಿರಂಜನರಿಗೆ ಸಮಾಧಾನವೆನಿಸದು. 'ಜ್ಞಾನಗಂಗೋತ್ರಿ'ಯ ಬೃಹತ್ ಯೋಜನೆಯ ಸಂಪಾದಕತ್ವ ವಹಿಸಿಕೊಂಡ ನಿರಂಜನ ದಣಿವರಿಯದ ದುಡಿಮೆಗೆ ಮತ್ತೊಂದು ಹೆಸರೆನ್ನುವಂತೆ ಕಾರ್ಯಮಗ್ನರಾದರು. ಮೊದಲನೆಯ ಸಂಪುಟ ಪ್ರಕಟವಾಗಿ ಎರಡನೆಯ ಸಂಪುಟದ ಸಿದ್ಧತೆ ನಡೆದಿರುವಾಗಲೇ ಅವರು ಪಾರ್ಶ್ವವಾಯು ಪೀಡೆಗೆ ಪಕ್ಕಾದ ಸುದ್ದಿ ಅನೇಕರಿಗೆ ಆಘಾತವನ್ನುಂಟುಮಾಡಿತು. ಇನ್ನೇನು ಆ ಯೋಜನೆ ಇಲ್ಲಿಗೇ ಮುಗಿದಹಾಗೆ ಎಂದು ಕೆಲವರು ಭಾವಿಸಿದ್ದರೇನೋ. ಆದರೆ ನಿರಂಜನರದು ಪ್ರಬಲವಾದ ಇಚ್ಛಾಶಕ್ತಿ; ಅದಮ್ಯ ಚೇತನ.ಕೆಲ ತಿಂಗಳಲ್ಲಿ ಚೇತರಿಸಿಕೊಂಡು, ಮಲಗಿದ್ದಲ್ಲಿಯೇ ಆ ಕೆಲಸವನ್ನು ಮುಂದುವರಿಸಿದರು. ಮುಂದೆ ಕೋಲೂರಿಕೊಂಡು ಆಫೀಸಿಗೂ ಹೋಗಹತ್ತಿದರು. ಆ ಸಂದರ್ಭದಲ್ಲಿ ನಾನೊಮ್ಮೆ ಅವರನ್ನು ಕಂಡು ಮಾತಾಡಿಸಲು ಜ್ಞಾನಗಂಗೋತ್ರಿ ಆಫೀಸಿಗೆ ಹೋದೆ. ದೇಹ ತತ್ತರಿಸಿದ್ದರೂ ಮುಖದ ಕಳೆ ಮಾಸಿರಲಿಲ್ಲ. ಆ ಸ್ಥಿತಿಯಲ್ಲಿಯೂ ಕಾರ್ಯೋತ್ಸಾಹ ಅವರ ಅಂತರಂಗದ ಯಾವ ಮೂಲೆಯಿಂದ ಪುಟಿಯುತ್ತಿತ್ತೊ! ಅವರಿಂದ ಬೀಳ್ಕೊಂಡು ಬರುವಾಗ ಅವರು, "ಎರಡೂ ಕೈ ಕೂಡಿಸಿ ನಮಸ್ಕಾರ ಹೇಳಲು ಆಗುತ್ತಿಲ್ಲ, ಕ್ಷಮಿಸಿ" ಎಂದರು. ನನಗೆ ಮಾತು ಹೊರಬರಲಿಲ್ಲ. ಅವರ ಮುಖವನ್ನು ಸುಮ್ಮನೆ ನೋಡಿದೆ. ಇಬ್ಬರ ಕಣ್ಣಿನಲ್ಲೂ ನೀರಾಡಿತು.

ಎರಡನೆಯ ಸಂಪುಟದ ಬಿಡುಗಡೆಯ ಸಮಾರಂಭದಲ್ಲಿ ಮಾತನಾಡುತ್ತ ಡಾ. ಶಿವರಾಂ ಅಂದರಂತೆ: "ನಿರಂಜನ ಉಳಿದುಕೊಂಡದ್ದು ಜ್ಞಾನಗಂಗೋತ್ರಿಯಿಂದ"! ಎಷ್ಟು ಸತ್ಯ ! ಐದಾರು ವರ್ಷಗಳಲ್ಲಿ ಕಿರಿಯರ ವಿಶ್ವಕೋಶದ ಯೋಜನೆಯ ಯಶಸ್ವೀ ಮುಕ್ತಾಯ. 'ಛಲದೊಳ್ ನಿರಂಜನಂ' ಎಂದು ರನ್ನನ ಜೊತೆಗೆ ದನಿಗೂಡಿಸೋಣವೇ ಎನಿಸುತ್ತದೆ.

ಈ ಸ್ಥಿತಿಯಲ್ಲಿ ಇನ್ನೊಬ್ಬರಾಗಿದ್ದರೆ ವಿಶ್ರಾಂತಿ ಪಡೆಯುತ್ತ ಏನೊ ಒಂದಿಷ್ಟು ಓದು ಬರೆಹ ಮಾಡಿ ಸಮಾಧಾನಪಟ್ಟುಕೊಳ್ಳುತ್ತಿದ್ದರೇನೊ. ಆದರೆ ನಿರಂಜನ 'ಆರಾಮ' ಎನ್ನುವುದನ್ನೇ ಅರಿಯರು. ಬರೆವಣಿಗೆ ಬಿಡುವಿಲ್ಲದೇ ನಡೆಯುತ್ತಿದ್ದರೂ ಏನಾದರೂ ವಿಶೇಷವಾದದ್ದನ್ನು ಕೈಕೊಳ್ಳಬೇಕು. ಎಡಗೈ ಹತೋಟಿ ತಪ್ಪಿದರೇನಾಯಿತು ? ಬಲಗೈಯಿದೆಯಲ್ಲ ! ದೇವರು ಈ ಬರೆಹಗಾರನ ಬಲಗೈಗೆ ಧಕ್ಕೆ ತರದಿದ್ದುದು ಕನ್ನಡದ ಪುಣ್ಯ. ('ದೇವರು' 'ಪುಣ್ಯ' ಅಂದರೇ ್ನು? ಎಂದು ಅವರು ಕೇಳಿಯಾರು.) 'ಗವಿವಾಸಿ' ಎಂದು ತಮ್ಮನ್ನು ಈಗ ಕರೆದುಕೊಂಡ ನಿರಂಜನ ೨೫ ಸಂಪುಟಗಳ ವಿಶ್ವಕಥಾಕೋಶ ಯೋಜನೆಯನ್ನು ರೂಪಿಸಿ ಪ್ರಧಾನ ಸಂಪಾದಕನ ಹೊಣೆ ಹೊತ್ತರು. ಅದನ್ನು ಪೂರೈಸುವ ಹೊತ್ತಿಗೆ ಮತ್ತೆ ಪಾರ್ಶ್ವ ಪೀಡೆ. 'ಎರಡನೆಯ ಪರಿಷ್ಕೃತ ಆವೃತ್ತಿ' ಎಂದು ಅದನ್ನು ನಿರಂಜನ ಕರೆದಿದ್ದಾರೆ. ನೋವುಗಳನ್ನು ಮೆಟ್ಟಿ ದಾಟುವಲ್ಲಿ ಎಂಥ ಎದೆಗಾರಿಕೆ !

೧೯೮೫ ಏಪ್ರಿಲ್‌ನಲ್ಲಿ ಅವರ ಮನೆ 'ಕಥೆ'ಗೆ ಹೋದಾಗ ಕೈತೋಟದಲ್ಲಿ ಹಲವು ಬಣ್ಣದ ಗುಲಾಬಿಗಳು ಅರಳಿದ್ದವು. ಹೂವ ಕಣ್ಣಿಗೆ ಬಿದ್ದಾಗ ದೇಟಿನ ಮುಳ್ಳುಗಳನ್ನು ಯಾರು ಲಕ್ಷಿಸುತ್ತಾರೆ? ಆದರೆ ನನಗೆ ಆ ಮುಳ್ಳುಗಳ ತೀಕ್ಷ್ಣತೆಯ ಅರಿವಿತ್ತು.

‘ಹ್ಯಾಗಿದ್ದೀರಿ’ ಎಂದೆ. ಗಾಲಿಯ ಕುರ್ಚಿಯನ್ನು ಮುಂದೂಡುತ್ತ ಬಂದು, “ಇನ್ನೂ ಬದುಕಿದ್ದೀನಿ” ಎಂದು ತಮ್ಮದೇ ಆದ ವಿಶಿಷ್ಟ ನಸುನಗೆ ಸೂಸಿದರು. ಆ ನಗೆಯೂ ಹಣ್ಣಾದಂತೆ ಕಂಡಿತು. ಎರಡು ತಾಸು ಏನೇನೊ ಮಾತಾಯಿತು. ಪರಿಷತ್ತು ಅಕಾಡೆಮಿಗಳೂ ಬಂದು ಹೋದವು. (ಈಗ ಎಲ್ಲಿ ಹೋದರೂ ಅವುಗಳನ್ನು ಮರೆಯುವಂತಿಲ್ಲವಲ್ಲ!) ತಮ್ಮ ಕನಸಿನ ಕಾದಂಬರಿ ‘ಹೆಜ್ಜೆ’ಯ ಹಂದರವನ್ನು ವಿವರಿಸಿದರು. (ನಮ್ಮ ‘ಗಣ್ಯ’ ವಿಮರ್ಶಕರ ಕಣ್ಣಿಗೆ ‘ಮೃತ್ಯುಂಜಯ’ದಂಥ ಕಾದಂಬರಿ ಹೇಗೆ ಬೀಳಲಿಲ್ಲವೊ, ಆಶ್ಚರ್ಯ.) ಆ ಹೊತ್ತಿಗೆ ವಿ.ಜಿ. ಭಟ್ಟರೂ ಅಲ್ಲಿಗೆ ಬಂದರು. ಎಷ್ಟೋ ವರ್ಷಗಳ ಮೇಲೆ ಅವರನ್ನು ಕಂಡು ಸಂತೋಷವಾಯಿತು. ನಡುವೆ ಬಹು ಕಾಲ ಸ್ಥಗಿತಗೊಂಡಿದ್ದ ಅವರ ಕಾವ್ಯರಚನೆ ಈಗ ಒಮ್ಮೆಲೆ ಬೃಂದಾವನದ ಕಾರಂಜಿಯಂತೆ ಪುಟಿಯತೊಡಗಿತ್ತು. ಆಗಲೇ ಅಚ್ಚಾಗಿದ್ದ, ಅಚ್ಚಿಗೆ ಸಿದ್ಧಗೊಂಡಿದ್ದ ಕೆಲವು ಕವಿತೆಗಳನ್ನು ಭಟ್ಟರು ಓದಿದರು. ಫಾಟೆ ತಿನ್ನುತ್ತ, ಚಹ ಕುಡಿಯುತ್ತ ಅವುಗಳನ್ನು ಸವಿದದ್ದಾಯಿತು. ಮಲ್ಲೇಶ್ವರದಲ್ಲಿದ್ದ ಭಟ್ಟರಿಗೆ ಪ್ರೆಸ್ಸಿಗೆ ಬರಲು ಅನನುಕೂಲವೆಂದು ಅವುಗಳ ಕರಡು ತಿದ್ದುವ ಕೆಲಸವನ್ನು ನಿರಂಜನ ವಹಿಸಿಕೊಂಡಿದ್ದರು. ಅವರಿಬ್ಬರ ಸ್ನೇಹದ ಬಗ್ಗೆ ಮೊದಲಿನಿಂದಲೂ ನನಗೆ ಗೊತ್ತು. ಆದರೆ ಹೀಗೆ ಕೊನೆಯವರೆಗೂ ಬಾಳಬಲ್ಲ ಸ್ನೇಹಗಳನ್ನು ಹೆಸರಿಟ್ಟು ಹೇಳಬೇಕು, ಅಷ್ಟೆ.

ನಮ್ಮ ಮಾತುಕತೆ ಮುಗಿದರೂ ಡಾ. ಅನುಪಮಾ ಅವರೊಡನೆ ಶ್ರೀಮತಿ ಕಣವಿಯವರ ಮಾತುಗಳು ಇನ್ನೂ ಮುಗಿದಿರಲಿಲ್ಲ. ಅಷ್ಟು ಹೊತ್ತು ಪರಸ್ಪರರು ಏನೇನು ಸುಖ-ದುಃಖ ತೋಡಿಕೊಂಡಿದ್ದರೋ ! ಅವರ ಪಾಡಿಗೆ ಅವರನ್ನು ಬಿಟ್ಟಿದ್ದರಿಂದ ಅವರಿಬ್ಬರ ಮನಸ್ಸುಗಳು ಹಗುರಗೊಂಡು ಉಲ್ಲಸಿತವಾದದ್ದು ಕಂಡುಬಂದಿತು. ನಿರಂಜನರದು ಒಂದು ಬಗೆಯಾದರೆ ಅನುಪಮಾ ಅವರ ದೈಹಿಕ ಯಾತನೆ ಮತ್ತೊಂದು ಬಗೆ. ಎರಡೂ ಅಷ್ಟೇ ಘೋರವಾದವುಗಳು. ಅವುಗಳನ್ನು ಎದುರಿಸುವಲ್ಲಿ ಇಬ್ಬರೂ ಅಷ್ಟೇ ಗಟ್ಟಿಗರು. ಈ ದೃಷ್ಟಿಯಿಂದಲೂ ಅವರದು ಅನುರೂಪದ ದಾಂಪತ್ಯ. ಬರೆಯುವುದೇ ಅವರ ಬದುಕು: ಅದೇ ಸಾವಿಗೆಸೆದ ಸವಾಲು.

ನಿರಂಜನರ ಸಾವಿರಾರು ಪುಟಗಳ ಬಿಡಿ ಬರೆಹಗಳನ್ನು ಸಂಪುಟಗಳಲ್ಲಿ ಪ್ರಕಟಿಸುವ ಹೊಣೆ ಹೊತ್ತು ‘ಸ್ಪಂದನ ಪ್ರಕಾಶನ’ ಆರಂಭಿಸಿರುವ ಮಗಳು ಸೀಮಂತಿನಿ, ನಿರಂಜನರ ಸಂದರ್ಶನಗಳ ಸಂಕಲನ ‘ಮುಖತಃ’ ಕೈಗಿತ್ತಳು.

* * * *

ರಾಜ್ಯ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ ಪಡೆದಿರುವ ನಿರಂಜನರಿಗೆ ಈಚೆಗೆ ಕನ್ನಡ ಸಾಹಿತ್ಯ ಪರಿಷತ್ತಿನ ‘ಗೌರವ ಸದಸ್ಯತ್ವ’ (ಹಣದ ಯಾವ ಸೋಂಕೂ ಇರದೆ, ಅದರ ಉಳಿದೆಲ್ಲ ರೀತಿಯ ಮರ್ಯಾದೆಯಿಂದ ಕೂಡಿದ ವಿಶಿಷ್ಟ ಪುರಸ್ಕಾರ ವಿಧಾನವಂತೆ ಇದು) ನೀಡಲಾಗಿದೆ. ಆದರೆ ಅವರ ಕೃತಿಗಳನ್ನು ಓದಿ ಮನವಾರೆ ಮೆಚ್ಚಿಕೊಂಡ ವಾಚಕ ಲೋಕದ ಪ್ರಶಸ್ತಿ ಎಲ್ಲಕ್ಕೂ ಹೆಚ್ಚಿನದು. ಅವರ ಅನೇಕ ಕಥೆ ಕಾದಂಬರಿಗಳು ಹಲವಾರು ಮುದ್ರಣಗಳನ್ನು ಕಂಡಿರುವುದಲ್ಲದೆ,

ತೆಲುಗು, ತಮಿಳು, ತುಳು, ಮಲಯಾಳಂ, ಮರಾಠಿ, ಬಂಗಾಳಿ, ಇಂಗ್ಲಿಷ್, ಪೋಲಿಷ್, ರಶಿಯನ್ ಭಾಷೆಗಳಲ್ಲಿಯೂ ಭಾಷಾಂತರಗೊಂಡು ಮತ್ತೆ ಮತ್ತೆ ಹೊಸ ಮುದ್ರಣಗಳನ್ನು ಕಾಣುತ್ತಿವೆ. ಕನ್ನಡದ ಎಷ್ಟು ಜನ ಲೇಖಕರಿಗೆ ಈ ಭಾಗ್ಯವಿದೆ?

ಉಳಿದ ಎಷ್ಟೋ ವಿಷಯಗಳಲ್ಲಿ ವ್ಯತ್ಯಾಸವಿದ್ದರೂ ನಿರಂತರ ಬರವಣಿಗೆ, ದಣಿವರಿಯದ ದುಡಿಮೆ ಮುಂತಾದ ಸಂಗತಿಗಳಲ್ಲಿ ಕಾರಂತರ ತರುವಾಯ ನನ್ನ ಕಣ್ಣೆದುರು ನಿಲ್ಲುವ ಚಿತ್ರ ನಿರಂಜನರದು. (ಇಬ್ಬರೂ ದಕ್ಷಿಣ ಕನ್ನಡ ಜಿಲ್ಲೆಯವರೆ) ಆದರೆ ಇಬ್ಬರಿಗೂ ಇಪ್ಪತ್ತು ವರ್ಷಗಳ ಅಂತರ. ಅಲ್ಲದೆ ನಿರಂಜನ ಈಗ 'ಗವಿವಾಸಿ'.

"ಸಾವಿರ ಏಳೆಗಳಿಂದ ಬರಹಗಾರ ಬದುಕಿಗೆ ಬಂಧಿತ; ಕಾಡಿನ ಸ್ಥಿತಿಯಿಂದ ನಾಡಿನವನಾಗಲು ಮನುಷ್ಯ ಬಹಳ ಕಷ್ಟಪಟ್ಟಿದ್ದಾನೆ. ಅದು ಇನ್ನೂ ನಡೆಯುತ್ತಲೇ ಇರುವ ಹೋರಾಟ. ಸಾಹಿತಿಗಳೂ ಮನುಕುಲಕ್ಕೆ ಸೇರಿದವರು, ಸಮಾಜದ ಸದಸ್ಯರು. ಆ ಕಾರಣದಿಂದಲೇ ಸಮೃದ್ಧ ಬದುಕಿಗಾಗಿ ಮಾನವ ನಡೆಸುವ ಸಮರದಲ್ಲಿ ಅವರು ಭಾಗಿಗಳು. ಜನರ ನೋವು, ನಲಿವು, ದುಃಖ, ಸುಖ ಯಾವುದರಿಂದಲೂ ಅವರು ಹೊರತಲ್ಲ". ಹತ್ತು ವರ್ಷಗಳ ಹಿಂದೆ 'ಉತ್ತಮ ಬದುಕಿನ ಎತ್ತರಕ್ಕೆ ಸಾಹಿತ್ಯದ ಏಣಿ' ಎಂಬ ಲೇಖನದಲ್ಲಿ ನಿರಂಜನ ವ್ಯಕ್ತಪಡಿಸಿದ ಅಭಿಪ್ರಾಯವಿದು.

ಅವರು ಈಗ ಬರೆಯುತ್ತಿರುವ ಬೃಹತ್ ಕಾದಂಬರಿ ಈ ದಿಸೆಯಲ್ಲಿ ಒಂದು ದೊಡ್ಡ 'ಹೆಜ್ಜೆ'ಯಾಗಬಹುದೆ ?

('ನಿರಂಜನ ಅಭಿನಂದನ' ೧೯೮೬)
ಸಾಹಿತ್ಯ ಸಮಾಹಿತ : ೨೦೦೭

## ೧೪

## ಜೊತೆಗಾರ ಜಿಎಸ್‌ಎಸ್

ಗೆಳೆಯ ಜಿ.ಎಸ್. ಶಿವರುದ್ರಪ್ಪನವರೂ ನಾನೂ ಸ್ನೇಹಭಾವದಲ್ಲಿ ಎಷ್ಟೊಂದು ಸಮರಸರಾಗಿದ್ದೇವೆಂದರೆ ನಮ್ಮಿಬ್ಬರ ಮೊದಲ ಪರಿಚಯ ಎಂದು ಮತ್ತು ಹೇಗೆ ಆಯಿತೆಂಬುದನ್ನು ಕೂಡ ಅದು ಮರೆಸಿಬಿಟ್ಟಿದೆ. ಆದರೆ ಇಷ್ಟು ಮಾತ್ರ ನಿಜ; ನಾವಿಬ್ಬರೂ ಇದ್ದ ಮೈಸೂರು, ಧಾರವಾಡಗಳ ಅಂತರವನ್ನು ಕಡಿಮೆ ಮಾಡಿ ಸ್ನೇಹ ಸೇತುವೆಯನ್ನು ನಿರ್ಮಿಸಿದ್ದು ಮಾತ್ರ ಕಾವ್ಯವೇ. ಇನ್ನೂ ವಿದ್ಯಾರ್ಥಿಗಳಾಗಿದ್ದಾಗ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿದ್ದ ಕವಿತೆಗಳನ್ನು ಮೆಚ್ಚಿಕೊಂಡು ನಾವು ಪರಸ್ಪರ ಪತ್ರ ಬರೆಯಲು ಪ್ರಾರಂಭಿಸಿದೆವೆಂದು ತೋರುತ್ತದೆ. 'ಜಯಂತಿ'ಯಲ್ಲಿ ಪ್ರಕಟವಾದ ನನ್ನ 'ಮೇಘೋಪಾಸನೆ' ಕವಿತೆಯ ಬಗ್ಗೆ ಅವರು ಅಂಥ ಒಂದು ಪತ್ರ ಬರೆದದ್ದು (೧೯೪೮) ನನಗೆ ನೆನಪಿದೆ. ಆಮೇಲೆ ಅವರೊಮ್ಮೆ ಧಾರವಾಡಕ್ಕೆ ಬಂದು ಒಂದೆರಡು ದಿನ ನನ್ನ ಕೋಣೆಯಲ್ಲಿಯೇ ಇದ್ದರು. ನಾನು ಊಟ ಮಾಡುತ್ತಿದ್ದ ಖಾನಾವಳಿಯ ಜೋಳದ ರೊಟ್ಟಿ ಅವರಿಗೆ ರುಚಿಕೊಟ್ಟಿತು. ಈಗಲೂ ಧಾರವಾಡಕ್ಕೆ ಬಂದಾಗ ರೊಟ್ಟಿಯ ಊಟವನ್ನೇ ಅವರು ಹೆಚ್ಚು ಪ್ರೀತಿಸುತ್ತಾರೆ.

ಬಿ.ಎ. (ಪ್ರಥಮ ದರ್ಜೆಯಲ್ಲಿ) ಪಾಸಾಗಿ ದಾವಣಗೆರೆಯ ಇಂಟರ್‌ಮೀಡಿಯೇಟ್ ಕಾಲೇಜಿನಲ್ಲಿ ಕನ್ನಡ ಉಪನ್ಯಾಸಕರಾಗಿ ಶಿವರುದ್ರಪ್ಪನವರು ಕೆಲಸ ಮಾಡುತ್ತಿರುವಾಗ (೧೯೪೯-೫೧) ಕಾಲೇಜಿನ ಸುಪರಿಂಟೆಂಡೆಂಟರಾಗಿದ್ದ ದಿವಂಗತ ನಾ. ಕಸ್ತೂರಿಯವರೊಂದಿಗೆ ಅವರೊಮ್ಮೆ ಧಾರವಾಡಕ್ಕೆ ಬಂದರು. ಜೊತೆಗೆ ನಾಲ್ಕೈದು ಜನ ಅವರ ಸಹೋದ್ಯೋಗಿಗಳೂ ಇದ್ದರು. (ಅವರಲ್ಲಿ ಜಿ. ಬ್ರಹ್ಮಪ್ಪನವರೂ ಒಬ್ಬರು) ಕರ್ನಾಟಕ ಕಾಲೇಜಿನ ಹಾಸ್ಟೆಲೊಂದರಲ್ಲಿ ಪ್ರೊ. ಮಾಳವಾಡರು ಅವರಿಗೆಲ್ಲ ಏರ್ಪಾಡು ಮಾಡಿದ್ದರು. ಕರ್ನಾಟಕ ವಿಶ್ವವಿದ್ಯಾಲಯದ ಆಡಳಿತ ವಿಭಾಗದ ಕಟ್ಟಡಕ್ಕೆ ಅಡಿಗಲ್ಲನ್ನಿಡುವ ಸಮಾರಂಭ ಅದೇ ಸಂದರ್ಭದಲ್ಲಿ ಡಾ. ರಾಜೇಂದ್ರ ಪ್ರಸಾದರಿಂದ ನೆರವೇರಿತು (೧೯೫೦). ಆ ಸಂದರ್ಭಕ್ಕಾಗಿಯೇ ನಾ. ಕಸ್ತೂರಿಯವರು ತಮ್ಮ ಈ ಪ್ರವಾಸವನ್ನು ಯೋಜಿಸಿಕೊಂಡಿದ್ದರೆಂದು ತೋರುತ್ತದೆ. ಆಗ ಶಿವರುದ್ರಪ್ಪನವರು ತಮ್ಮ ಮಿತ್ರರೊಂದಿಗೆ ನನ್ನ ಕೋಣೆಗೂ ಬಂದರು. ನಾನು ಸ್ಟೋವ್‌ಹೊತ್ತಿಸಿ ಚಹ ಮಾಡಿಕೊಟ್ಟೆ. ಆ ಸಂದರ್ಭದಲ್ಲಿ ಜಿ. ಬ್ರಹ್ಮಪ್ಪನವರನ್ನು ನಿಮಿತ್ತ ಮಾಡಿಕೊಂಡು ಪರಸ್ಪರರು ಹಾಸ್ಯದ ಚಟಾಕಿಗಳನ್ನು ಹಾರಿಸುತ್ತ ವಿನೋದವಾಡಿದ್ದು ನನಗೆ ಚೆನ್ನಾಗಿ ನೆನಪಿದೆ. ಹೋಗುವಾಗ ನನಗೂ ದಾವಣಗೆರೆಗೆ ಬರಲು ಶಿವರುದ್ರಪ್ಪನವರು ಆಮಂತ್ರಣ ನೀಡಲು ಮರೆಯಲಿಲ್ಲ.

ಮೈಸೂರು ವಿಶ್ವವಿದ್ಯಾಲಯದಲ್ಲಿ ಬಿ.ಎ. ಮಾಡಿದ ಎಚ್.ಎಸ್. ಯೋಗೀಶ ಕನ್ನಡ ಎಂ.ಎ. ಮಾಡಲು ಧಾರವಾಡಕ್ಕೆ ಬಂದು ನನ್ನ ಜೊತೆಗಿದ್ದರು. ಅವರೂ ದಾವಣಗೆರೆಯವರಾಗಿದ್ದು ಶಿವರುದ್ರಪ್ಪನವರ ಪರಿಚಯ ಮೊದಲೇ ಆಗಿತ್ತು. ಹೀಗಾಗಿ ನಾವು ದಾವಣಗರೆಯ ಪ್ರವಾಸ ಕೈಕೊಳ್ಳಲು (೧೯೫೧) ಅನುಕೂಲವಾಯಿತು. ಶಿವರುದ್ರಪ್ಪನವರೂ ಅದೇ ತಾನೆ ಅಲ್ಲಿ ಮನೆ ಮಾಡಿ ಸಂಸಾರ ಹೂಡಿದ್ದರು. ಒಂದು ದಿನ ಅವರ ಆ ಚಿಕ್ಕ, ಚೊಕ್ಕ ಮನೆಯಲ್ಲಿ ನಮಗೆಲ್ಲ ಸೊಗಸಾದ ಊಟವಾಯಿತು. ಅವರ ಕಾಲೇಜಿಗೆ ಕರೆದುಕೊಂಡು ಹೋದದ್ದಲ್ಲದೆ ತಮ್ಮ ವಿದ್ಯಾರ್ಥಿಗಳೆದುರು ನನ್ನಿಂದ ಒಂದು ಚಿಕ್ಕ ಭಾಷಣವನ್ನೂ ಮಾಡಿಸಿಬಿಟ್ಟರು. ಅಲ್ಲಿದ್ದ ಎರಡು ಮೂರು ದಿನ ತುಂಬ ಸಂತೋಷವಾಗಿ ಕಳೆದವು. ಊರಾಚೆಯ ಬಯಲಲ್ಲಿ ಸಂಜೆ ತಿರುಗಾಡಲು ನಾವು ಮೂವರೂ ಹೋಗಿ ಒಂದು ದಿಬ್ಬದ ಮೇಲೆ ಕುಳಿತಾಗ, ತಾವೂ ಪ್ರಭುಪ್ರಸಾದರೂ ದಿನವೂ ಇದೇ ದಿಬ್ಬದ ಮೇಲೆ ಬಂದುಕೂಡುವುದಾಗಿ ಶಿವರುದ್ರಪ್ಪನವರು ಹೇಳಿದರು. (ಅವರು ಬರೆದ ಹಾಸ್ಯ ಕವನಗಳಿಗಾಗಿ 'ದಿಬ್ಬಯ್ಯ' ಎಂಬ ಕಾವ್ಯನಾಮವನ್ನು ಕಸ್ತೂರಿಯವರು ಸೂಚಿಸಲು ಈ ದಿಬ್ಬವೇ ಕಾರಣವಂತೆ.)

ದಾವಣಗೆರೆಯಲ್ಲಿ ಶಿವರುದ್ರಪ್ಪನವರ ಆತ್ಮೀಯ ಗೆಳೆಯರಲ್ಲಿ ಜಯದೇವ ಸ್ಟುಡಿಯೋದ ಜಯದೇವ ಒಬ್ಬರಾಗಿದ್ದರು. ನಾವು ಅವರಲ್ಲಿ ಒಂದು ಫೋಟೋ ತೆಗೆಸಿದ ಹಾಗೆ ನೆನಪು. ಆದರೆ ಆ ಸ್ಟುಡಿಯೋದ ಅಟ್ಟದ ನೆನಪು ನನಗುಳಿದಿರುವುದು ಬೇರೆ ಕಾರಣದಿಂದ. ತಾವು ಬರೆದ ಕೆಲವು ಕವಿತೆಗಳನ್ನು ಶಿವರುದ್ರಪ್ಪನವರು ಆ ಅಟ್ಟದ ಮೇಲೆ ಕುಳಿತಾಗ ಹಾಡಿ ತೋರಿಸಿದರು.

ಅಂಧಕಾರ ಮುತ್ತುತಿದೆ
ಚಂದದ ಬೆಳಕಾರುತಿದೆ

* * * *

ಜೀವ ಜಾತ್ರೆಯಲಿ
ಪ್ರಾಣ ಪಾತ್ರೆಯಲಿ ತುಂಬಿ ಬಾ
ರಸದುಂಬಿ ಬಾ, ಮೈದುಂಬಿ ಬಾ
ಎಲ್ಲಿ ಹೋಗುವಿರಿ ನಿಲ್ಲಿ ಮೋಡಗಳೆ
ನಾಲ್ಕು ಹನಿಯ ಚೆಲ್ಲಿ

* * * *

ಇದಾವ ರಾಗ ?
ಮತ್ತೆ-ಇದಾವ ರಾಗ?
ಎದೆಯಾಳದಿಂದೆದ್ದು ನಭನೀಲಿಗೇರುತಿದೆ.

* * * *

ತಮ್ಮದೇ ಆದ ರಾಗ-ಧಾಟಿಯಲ್ಲಿ ಅಂದು ಅವರು ಹಾಡಿ ತೋರಿಸಿದ ಪದ್ಯಗಳ ನೋವಿನ ಸಾಲುಗಳು ಇನ್ನೂ ನನ್ನ ಕಿವಿಯಲ್ಲಿ ಗುಣುಗುಣಿಸುತ್ತಿವೆ. (ಈ ಕವಿತೆಗಳು ಅವರ 'ಸಾಮಗಾನ' ಸಂಕಲನದಲ್ಲಿ ಆಮೇಲೆ ಪ್ರಕಟವಾದವು.) ಗೆಳೆಯ ಯೋಗೀಶ ಭಾವಗೀತಗಳನ್ನು ಹಾಡುವುದರಲ್ಲಿ ಸ್ವಲ್ಪ ಉತ್ಸಾಹಿ. ಧಾರವಾಡಕ್ಕೆ ಬಂದ ಮೇಲೂ ಅವರು ಈ ಕವಿತೆಗಳನ್ನು ಆಗಾಗ ಹಾಡಿಕೊಳ್ಳುತ್ತಿದ್ದರು. ಜಯದೇವ ಸ್ಟುಡಿಯೋದ ಅಟ್ಟದ ಮೇಲೆ ಶಿವರುದ್ರಪ್ಪನವರು ಆಗಾಗ ಹೋಗಿ ಕುಳಿತುಕೊಳ್ಳುತ್ತಿದ್ದಾಗ ಸಮೀಪದ ಹೋಟೆಲಿನಿಂದ ಕೇಳಿ ಬರುತ್ತಿದ್ದ ಕೆಲವು ಒಳ್ಳೇ ಹಿಂದೀ ಸಿನಿಮಾ ಹಾಡುಗಳಿಗೆ ಕಿವಿಗೊಡುತ್ತಿದ್ದರಂತೆ. ಮುಂದೆ ತಾವು ಬರೆದ ಕವಿತೆಗಳಲ್ಲಿ ಆ ಧಾಟಿಯನ್ನೇ ಹಿಡಿದಿಡುತ್ತಿದ್ದರಂತೆ - ಹೀಗೆಂದು ಸ್ಟುಡಿಯೋದ ಜಯದೇವ ಹಾಸ್ಯ ಮಾಡಿ ಹೇಳುತ್ತಿದ್ದರು.

೧೯೫೧ರ ವೇಳೆಗೆ ದಾವಣಗೆರೆಯಿಂದ ಮೈಸೂರಿನ ಯುವರಾಜಾ ಕಾಲೇಜಿಗೆ ವರ್ಗವಾಗಿ ಅವರು ಹೋದಮೇಲೆ ನಮ್ಮ ನಡುವೆ ಏಳೆಂಟು ವರುಷ ಪತ್ರವ್ಯವಹಾರ ನಿರಂತರವಾಗಿ ನಡೆಯಿತು. ಪತ್ರಗಳು ಆದಷ್ಟು ದೀರ್ಘವಾಗಿಯೇ ಇರುತ್ತಿದ್ದವು. ಹೊಸದಾಗಿ ಬರೆದ ಕವಿತೆಗಳನ್ನು ಪರಸ್ಪರರು ಕಳಿಸಿ ಅಭಿಪ್ರಾಯ ಪಡೆಯುತ್ತಿದ್ದೆವು. ಅವರ ಕೆಲವು ಕವಿತೆಗಳು ಧಾರವಾಡದ 'ಜಯಂತಿ', 'ಜಯಕರ್ನಾಟಕ'ದಲ್ಲಿ ಪ್ರಕಟಗೊಳ್ಳಲು ನಾನು ನೆರವಾಗಿದ್ದರೆ ನನ್ನ ಒಂದೆರಡು ಕವನಗಳು 'ಪ್ರಬುದ್ಧ ಕರ್ಣಾಟಕ'ದಲ್ಲಿ ಅದೂ ಮುಖಪುಟದಲ್ಲಿ ಪ್ರಕಟಗೊಳ್ಳಲು ಅವರು ಕಾರಣರಾಗಿದ್ದರು.

೧೯೬೩ರಲ್ಲಿ ಶಿವರುದ್ರಪ್ಪನವರು ಉಸ್ಮಾನಿಯಾ ವಿಶ್ವವಿದ್ಯಾಲಯಕ್ಕೆ ಹೋದಮೇಲೆ ನಮ್ಮ ಪತ್ರಗಳ ನಡಿಗೆ ನಿಧಾನವಾಯಿತು. ಮೊನ್ನೆ ಹಿಂದಿನ ಫೈಲೊಂದನ್ನು ತಿರುವಿ ಹಾಕುತ್ತಿರುವಾಗ ೧೯೫೧ ರಿಂದ ೧೯೫೬ರವರೆಗಿನ ಅವರ ಏಳೆಂಟು ಪತ್ರಗಳು ಸಿಕ್ಕಾಗ ಹಿಡಿಸಲಾರದಷ್ಟು ಸಂತೋಷವಾಯಿತು. ಮೂರು ದಶಕಗಳಿಗೂ ಹಿಂದಿನ ನೆನಪುಗಳು ಮತ್ತೆ ಮರುಕಳಿಸಿದವು. ಪತ್ರಗಳಲ್ಲಿಯೂ ತಮ್ಮ ವ್ಯಕ್ತಿತ್ವವನ್ನು ಪಡಿಮೂಡಿಸುವ ಬರವಣಿಗೆ ಅವರದು. ತಮ್ಮ ಅಂತರಂಗದ ಅನಿಸಿಕೆಗಳನ್ನು ಸಂಕೋಚವಿಲ್ಲದೆ ಪತ್ರಗಳಲ್ಲಿ ಅವರು ವ್ಯಕ್ತಪಡಿಸುವುದುಂಟು. ನಿಸರ್ಗಪ್ರೇಮ, ಸೌಂದರ್ಯಾನುಭೂತಿ, ಕಾವ್ಯವಿಮರ್ಶೆ, ತತ್ತ್ವನಿಷ್ಠೆ, ಎರಡಿಲ್ಲದ ಸ್ನೇಹ, ಅಲ್ಲಲ್ಲಿ ವಿನೋದ - ಹೀಗೆ ಹಲವಾರು ಅಂಶಗಳು ಅವುಗಳಲ್ಲಿ ವ್ಯಕ್ತಗೊಂಡಿರುವುದನ್ನು ನೋಡಿದಾಗ ಇಂದಿಗೂ ಅದೇ ವ್ಯಕ್ತಿತ್ವ ಇನ್ನಷ್ಟು ದೃಢವಾಗಿ ಮೈದುಂಬಿಕೊಂಡು ಬೆಳೆದು ನಿಂತಿರುವುದು ಕಂಡುಬರುತ್ತದೆ.

ಪ್ರೇಕ್ಷಣೀಯ ಸ್ಥಳಗಳಿಗೆ ಪ್ರವಾಸ ಕೈಕೊಳ್ಳುವುದು ಅವರ ಪ್ರಿಯವಾದ ಹವ್ಯಾಸಗಳಲ್ಲಿ ಒಂದು. ('ಮಾಸ್ಕೋದಲ್ಲಿ ಇಪ್ಪತ್ತೆರಡು ದಿನ', 'ಗಂಗೆಯ ಶಿಖರಗಳಲ್ಲಿ', 'ಅಮೆರಿಕದಲ್ಲಿ ಕನ್ನಡಿಗ' - ಈ ಪ್ರವಾಸ ಕಥನಗಳಲ್ಲಿ ಅವರ ಬರವಣಿಗೆಯ ಸೊಗಸನ್ನು ಸವಿಯಬಹುದು.) ಒಂದು ದಸರಾ ರಜೆಯಲ್ಲಿ ಕೊಡಗಿನ ರಸವಿಹಾರವನ್ನು ಮುಗಿಸಿಕೊಂಡು ಬಂದುದನ್ನು ಒಂದು ಪತ್ರದಲ್ಲಿ (೧೬-೧೦-೧೯೫೧) ಬಣ್ಣಿಸುತ್ತ ಮಡಿಕೇರಿಯ ಬಗ್ಗೆ ಬರೆದಿದ್ದರು.

"ಹೊಸದಾಗಿ ಕಂಡವರಿಗೆ ಅದು ಅಲಕಾವತಿಯೇ. ಏಕೆಂದರೆ ನಮ್ಮ ಕಾಲು ನೆಲದಲ್ಲಿದ್ದರೆ ನಮ್ಮ ತಲೆ ಆಕಾಶದಲ್ಲಿರುತ್ತದೆ - ಅಷ್ಟು ಹತ್ತಿರ ಅಲ್ಲಿ ಆಕಾಶ- ಅದು ಮೋಡವಾದಾಗ, ಮೋಡ ಚದುರಿ ಬಾನು ತಿಳಿಯಾದಾಗ ಬಲು ದೂರ". ತಮ್ಮ ಮುಂದಿನ ಪತ್ರದ ಜೊತೆಗೆ ಆಗ ಬರೆದ 'ಮಡಿಕೇರಿಯ ರಾಜಾಸೀಟ್' ಮೇಲಿನಿಂದ ಕವಿತೆಯನ್ನು ಕಳಿಸಿಕೊಟ್ಟರು. ಇದು ಅವರ ಯಾವ ಕವನಸಂಗ್ರಹದಲ್ಲಿಯೂ ಬಂದಂತಿಲ್ಲ.

ಮಾನವ ಸಂಬಂಧಗಳಲ್ಲಿಯೂ ಗುಣಗೌರವದ ಆಯ್ಕೆ ಇದ್ದೇ ಇರುತ್ತದೆ. ಪು.ತಿ.ನ. ಅವರೊಡನೆ ತಮ್ಮ ಪ್ರಥಮ ದರ್ಶನದ ಬಗ್ಗೆ ಅದೇ ಪತ್ರದಲ್ಲಿ (೧೬-೧೦-೫೧) ಹೀಗೆ ಬರೆದಿದ್ದಾರೆ. "ಮಡಿಕೇರಿಯಿಂದ ಬಂದವನೇ ಬೆಂಗಳೂರಿಗೆ ಹೋದೆ ನನ್ನ ಗೆಳೆಯರೊಡನೆ. ಅಲ್ಲಿ ಕವಿ ಶ್ರೀ ಪು.ತಿ. ನರಸಿಂಹಾಚಾರ್ಯರ ದರ್ಶನವಾಯಿತು. ಅವರ ಮನೆಯಲ್ಲೇ ರಸದೂಟವೂ ಆಯಿತು ಒಂದು ದಿನ. ಎಂತೆಂತಹ ಹಿರಿಯ ವ್ಯಕ್ತಿಗಳು ಇದ್ದಾರೆ ಅಲ್ಲಲ್ಲಿ ಎನಿಸಿತು. ಅವರು ಒಳಗೂ ಮೃದು; ಹೊರಗೂ ಮೃದು. ತರುಣ ಲೇಖಕರ ಮೇಲೆ ಅಮಿತ ವಾತ್ಸಲ್ಯ. ಅವರಿಗೆ ನಮ್ಮನ್ನು ಕಂಡು ಏನೊ ಒಂದು ಭರವಸೆ, ನಿಮ್ಮ ಹೆಸರನ್ನು ಹೇಳಿದರು. ನಿಮ್ಮನ್ನು ಆಗಲೇ ಹಿಂದೊಮ್ಮೆ ನೋಡಿದ್ದರಂತೆ. ನನಗೆ ನನ್ನ ಕವನಗಳನ್ನು (ಇತ್ತೀಚಿನ) ಓದಿ ಅಮೂಲ್ಯವಾದ ಸಲಹೆಗಳನ್ನು ಕೊಟ್ಟರು." ಹೌದು, ಪು.ತಿ.ನ. ಅವರನ್ನು ಮೊದಲ ಸಲ ಕಂಡಾಗ ಧಾರವಾಡದಲ್ಲಿ (೧೯೫೦) ನನಗೂ ಇದೇ ಅನುಭವವಾಯಿತು.

ನಮ್ಮ ಕವನಸಂಗ್ರಹಗಳು ಪ್ರಕಟವಾದೊಡನೆಯೇ ಪರಸ್ಪರ ವಿನಿಮಯಗೊಳ್ಳುತ್ತಿದ್ದವು. ನಮ್ಮ ನಮ್ಮ ಅನಿಸಿಕೆ, ಅಭಿಪ್ರಾಯಗಳನ್ನು ಮುಕ್ತ ಮನಸ್ಸಿನಿಂದ ಪತ್ರಗಳಲ್ಲಿ ಬರೆಯುತ್ತಿದ್ದೆವು. ನನ್ನ 'ಆಕಾಶ ಬುಟ್ಟಿ', 'ಮಧುಚಂದ್ರ' ಹಾಗೂ 'ದೀಪಧಾರಿ' ಸಂಗ್ರಹಗಳನ್ನು ಕುರಿತು ಅವರು ತಮ್ಮ ದಿ. ೨೫-೫-೫೨, ೨೨-೧೧-೫೪ ಹಾಗೂ ೨೪-೭-೫೬ರ ಪತ್ರಗಳಲ್ಲಿ ಬರೆದ ವಿಮರ್ಶಾತ್ಮಕ ನುಡಿಗಳಿಂದ ನಾನು ಪ್ರಯೋಜನ ಪಡೆದದ್ದುಂಟು. ಅವರ 'ಸಾಮಗಾನ'ದ ಬಗ್ಗೆ ಬರೆಯುತ್ತ ಕುವೆಂಪು ಪ್ರಭಾವದಿಂದ ಬೇಗ ಪಾರಾಗಬೇಕೆಂಬ ನನ್ನ ವಿಚಾರವನ್ನು ಸೂಚಿಸಿದ್ದೆನೆಂದು ತೋರುತ್ತದೆ. ಅವರು ತಮ್ಮ ಉತ್ತರದಲ್ಲಿ (೨೦-೧-೨೯೫೨) ಹೀಗೆ ಬರೆದರು: "ಓದಿದೆ, ಸ್ನೇಹಪೂರ್ವಕವಾದ ನಿಮ್ಮ ನಿರ್ದೇಶವಾಣಿಗೆ ಮಣಿದೆ; ಒಪ್ಪಿದೆ. ನಿಜ, ನೀವು ಹೇಳುವುದೆಲ್ಲವೂ ನಿಜ. 'ಸಾಮಗಾನ' ಪ್ರಥಮಕೃತಿ ಎಂಬುದು ನಿಮಗೂ ಗೊತ್ತು. ಮುಂದೆ ಎಚ್ಚರಿಕೆಯಿಂದ ಅನ್ಯಪ್ರಭಾವದ 'ರಾಹು'ವಿನಿಂದ ವಿಮುಕ್ತನಾಗಲು ಪ್ರಯತ್ನಿಸುತ್ತೇನೆ. ಮನಸ್ಸಿಗೂ ಒಂದು ಬೆಳವಣಿಗೆ ಉಂಟು. ಮಿತ್ರರ ಎಚ್ಚರಿಕೆಯಿಂದ, ಹಿರಿಯರ ಹರಕೆಯಿಂದ, ಸೂಕ್ಷ್ಮವಾದ ಆತ್ಮ ನಿರೀಕ್ಷೆಯಿಂದ 'ತನ್ನ ವ್ಯಕ್ತತೆಯಲ್ಲಿ ತನ್ನ ಮುಕ್ತಿಯ ಕಂಡು ಈ ಜೀವ ಸಫಲತೆಯ ಪಡೆಯಬಹುದು' ಎಂಬ ಆಶೆಯುಂಟು. ನಮ್ಮ ಪ್ರಯತ್ನಗಳ ಹಿಂದೆ ನಮ್ಮ ಏಳು ಬೀಳುಗಳ ಸೂತ್ರವನ್ನು ಹಿಡಿದ ಶಕ್ತಿಯೊಂದು ಉಂಟಲ್ಲ! ಯಾರು ಶಕ್ತಿಯೋ ಅದೇ ದಾರಿಯೂ ಆಗಿ ಬೆಳಕೂ ಆದೀತು". ಆಗಲೇ ಎಂಥ ಆಳವಾದ ವಿವೇಚನೆ! ಮುಂದುವರಿದು ಅದೇ ಪತ್ರದಲ್ಲಿ, "ಜೀವನದ ಕಹಿ ನನ್ನ ಅನುಭವಕ್ಕೆ ಧಾರಾಳವಾಗಿ ದಯಮಾಡಿಸಿದೆ.

ಮೊದಲಿನಿಂದ ಇದುವರೆಗೂ ಸಿಹಿಗಿಂತ ಕಹಿಯನ್ನೇ ಹೆಚ್ಚಾಗಿ ಸವಿದರೂ ನನ್ನ ಕವನಗಳಲ್ಲಿ ಆ ತುಮುಲ ಅಷ್ಟು ಸ್ಪಷ್ಟವಾಗಿ ಮೂಡಿ ಬಂದಂತೆ ತೋರದಿರುವುದು ನನಗೇ ಆಶ್ಚರ್ಯ. ಬಹುಶಃ ಅದೆಲ್ಲವೂ 'ಮುಂದೆ ಕಟ್ಟಿಪುದು ಬುತ್ತಿ ಸರ್ವಜ್ಞ' ಎಂಬ ರೀತಿಯದೋ?" ಅಂದ ಹಾಗೆ ಅವರ ಮುಂದಿನ ಕವನಸಂಗ್ರಹಗಳಲ್ಲಿ ಆ 'ಕಟ್ಟಿದ ಬುತ್ತಿ'ಯನ್ನು ಅವರು ಧಾರಾಳವಾಗಿ, ಆದರೆ ಕಾವ್ಯದ ದೃಷ್ಟಿಯಿಂದ ರುಚಿಕರವಾಗಿ ಹಾಗೂ ಆರೋಗ್ಯಕರವಾಗಿ ಹಂಚಿಕೊಂಡಿದ್ದಾರೆಂಬುದನ್ನು ಕಾವ್ಯಪ್ರೇಮಿಗಳೆಲ್ಲರೂ ಬಲ್ಲರು.

ಕನ್ನಡ ಕಾವ್ಯದಲ್ಲಿ ನವ್ಯತೆ ಕಾಲಿಟ್ಟ ಕಾಲ ಅದು. ಪತ್ರಗಳಲ್ಲಿ ಆ ಬಗ್ಗೆ ನಮ್ಮ ವಿಚಾರಗಳನ್ನು ವಿನಿಮಯ ಮಾಡಿಕೊಂಡದ್ದುಂಟು. ನನ್ನ ಕಾವ್ಯದಲ್ಲಿಯ ನವ್ಯತೆಯನ್ನು ಅವರು ಗುರುತಿಸಿದ್ದು ಹೀಗೆ : (೨೫-೫-೫೩) "ಪ್ರಕೃತಿಲೋಕ ಹೇಗೆ ನಿತ್ಯ ನವ್ಯವೋ ಅಂತೆಯೇ ನಿಮ್ಮ ಕವಿತೆ ಪ್ರಕೃತಿಯನ್ನು ಕುರಿತು ಬರೆದ ಇಂದಿನ ಹಲವು ಹಿರಿಯ ಕವಿಗಳ ಉಕ್ತಿಯಿಂದ ಅನ್ಯವಾಗಿ ವಿಶಿಷ್ಟತೆಯನ್ನು ಪಡೆದಿವೆ. ಆದುದರಿಂದ ವಿಶಿಷ್ಟತೆಯೇ ನವ್ಯತೆ ಎನಿಸಿದೆ ನನಗೆ" ನವ್ಯತೆಯ ಬಗ್ಗೆ ಅವರ ಧೋರಣೆ ಅಂದಿನಿಂದಲೂ ತನ್ನತನವನ್ನು ಕಾಪಾಡಿಕೊಂಡು ಗಟ್ಟಿಮುಟ್ಟಾಗಿ ನಿಂತದ್ದು ಮಹತ್ವದ ಸಂಗತಿಯಾಗಿದೆ. ಅದು ಅತ್ಯಂತ ಆರೋಗ್ಯಕರವಾದ ನಿಲುವು. ೨೪-೮-೧೯೫೩ರ ಪತ್ರದಲ್ಲಿ ಈ ಮಾತುಗಳಿವೆ: "ನವ್ಯತೆಯ ಬಗ್ಗೆ ನನಗೆ ರೋಮಾಂಚಕತೆ ಇಲ್ಲ. ಏಕೆಂದರೆ, ನಿಜವಾದ ನವ್ಯತೆ, ಒಂದು ರಚನೆ ಅಲ್ಲ, ವಿಕಾಸ ಎಂಬುದನ್ನು ಕಂಡುಕೊಂಡವರಲ್ಲಿ ನಾನೊಬ್ಬ. ನನ್ನ ಒಳಗಿನ 'ನವ್ಯಕವಿ' ತಾನೊಬ್ಬ ಭಾರತೀಯನೆಂಬುದನ್ನು ಎಂತಹ ಹೊತ್ತಿನಲ್ಲೂ ಮರೆಯುವುದಿಲ್ಲ. ಎಂತಹ ಕಷ್ಟ ಕಾರ್ಪಣ್ಯಗಳಲ್ಲೂ ಏನೊ ಒಂದು ಅದಕ್ಕೆ ಮೀರಿದ ಆನಂದ, ಆದರ್ಶಗಳನ್ನು ಕಾಣಬಲ್ಲನು."

ಕುವೆಂಪು ಬರಿಯ ಕವಿಯಾಗಿ ಅಲ್ಲ, ಮಹಾಲೇಖಕರಾಗಿಯೇ ಮೊದಲಿನಿಂದಲೂ ನನ್ನ ಮನಸ್ಸನ್ನು ತುಂಬಿಕೊಂಡಿದ್ದರು. ಅವರನ್ನು ಆಗ ನಾನು ಕಂಡಿರಲಿಲ್ಲವಾದರೂ ಶಿವರುದ್ರಪ್ಪನವರ ಪತ್ರಗಳ ಮೂಲಕ ಆಗಾಗ ಕೆಲವು ವಿಷಯಗಳನ್ನು ತಿಳಿದು ನನ್ನ ಜ್ಞಾನವನ್ನು ಹೆಚ್ಚಿಸಿಕೊಳ್ಳುತ್ತಿದ್ದೆ. 'ರಾಮಾಯಣ ದರ್ಶನ'ದ ಎರಡನೇ ಭಾಗ ನನ್ನ ಕೈಗಿನ್ನೂ ದೊರೆತಿರಲಿಲ್ಲ. ಆದರೆ ಅವರ ಪತ್ರದಿಂದ (೫-೧೧-೫೧) ಆ ಬಗ್ಗೆ ಒಂದಿಷ್ಟು ವಿವರಗಳು ದೊರೆತು ಹರ್ಷಿತನಾದದ್ದುಂಟು. ಅದೊಂದು ಮಹತ್ತರ ದಾಖಲೆ ಎನಿಸಿದ್ದರಿಂದ ಪತ್ರದ ಆ ಭಾಗವನ್ನು ಇಲ್ಲಿ ಪೂರ್ತಿಯಾಗಿ ಕೊಡುತ್ತಿದ್ದೇನೆ. ಶಿವರುದ್ರಪ್ಪನವರ ವಿಮರ್ಶಕ ಶಕ್ತಿ ಆಗಲೇ ಎಷ್ಟೊಂದು ಸೂಕ್ಷ್ಮತೆ ಪಡೆದಿತ್ತೆಂಬುದಕ್ಕೂ ಇದು ನಿದರ್ಶನವಾಗಬಲ್ಲದು.

"ಮೊನ್ನೆ ಭಾನುವಾರ ಕುವೆಂಪು ಅವರ ಮನೆಗೆ ನಾವು ನಾಲ್ಕಾರು ವಿದ್ಯಾರ್ಥಿಗಳು ಹೋಗಿದ್ದೆವು. ಮೂರು ಗಂಟೆಗಳ ಕಾಲ 'ರಾಮಾಯಣ ದರ್ಶನ'ದ "ಅತ್ತಲಾದೈತ್ಯ ಸಭೆಯೋಳ್" ಎಂಬ ಅಧ್ಯಾಯವನ್ನು ಓದಿ ವಿವರಿಸಿದರು. ಆ ಭಾಗ ಅತ್ಯುತ್ತಮ ಭಾಗಗಳಲ್ಲಿ ಒಂದು. ಆ ಮಹಾಸಭೆಯಲ್ಲಿ ರಾಕ್ಷಸವೀರರ ಪರಿಚಯವಾಗುತ್ತದೆ. 'ಪ್ರಹಸ್ತ', 'ಮಹಾಪಾರ್ಶ್ವ', 'ಹಿರಣ್ಯಕೇಶಿ', 'ಇಂದ್ರಜಿತು', 'ವಿಭೀಷಣ' ಇವರ ಪಾತ್ರದ ಪರಿಚಯವಾಗುತ್ತದೆ. ಒಂದೊಂದು

ಪಾತ್ರವೂ ವಿಶಿಷ್ಟ ಭವ್ಯವಾಗಿದೆ. ಈ ಸನ್ನಿವೇಶವನ್ನು ಅವರು ಬರೆದುದು ಎರಡನೆ ಮಹಾಯುದ್ಧ ನಡೆಯುವ ವೇಳೆಯಲ್ಲಿ. ಆಗ ಚರ್ಚಿಲ್ ಇತ್ಯಾದಿ ರಾಜಕಾರಣ ಪಟುಗಳು ತಮ್ಮ ದೇಶದ ಯುದ್ಧವೀರರ ಸ್ಫೂರ್ತಿಗಾಗಿ ಭಾಷಣ ಮಾಡುತ್ತಿದ್ದ ಕಾಲ. ಹೇಗೆ ರಾಜಕೀಯ ಪಟುಗಳು ಧರ್ಮವನ್ನು ನಿರ್ಲಕ್ಷಿಸಿ-ದೇಶಸೇವೆ ದೇಶಪ್ರೇಮ ಇತ್ಯಾದಿ ಮಾತುಗಳಿಂದ ಜನರೆದುರು ತಮ್ಮ ವಾಗ್ಝರಿಯನ್ನು ಹರಿಯಿಸುತ್ತಾರೆ ಎಂಬುದು ಆ ದೈತ್ಯಸಭೆಯಲ್ಲಿ ಮಾತನಾಡುವ ವೀರರಲ್ಲಿ ಪ್ರತಿಮಿತವಾಗಿದೆ.

"ರಾವಣನ ಪಾತ್ರ ರಾಮನ ಪಾತ್ರಕ್ಕಿಂತಲೂ ಹೆಚ್ಚು ಭವ್ಯವಾಗಿದೆ ಎನ್ನುತ್ತಾರೆ. ರಾವಣ ಸೀತೆಯನ್ನು ತಂದುದು ಅವನ ಸಿದ್ಧಿಗಾಗಿಯೇ ಎಂಬುದು ಈಗ ತಿಳಿಯುತ್ತದೆ. ಬೆಂಕಿಯನ್ನಪ್ಪಿದ ವಸ್ತು ಬೆಂಕಿಯಿಂದಲೇ ಪರಿಶುದ್ಧವಾಗುವಂತೆ ರಾವಣ ಸೀತೆಯ ತಪಸ್ಸಿಗಿಂತ ಮಂಡೋದರಿಯ ತಪಸ್ಸಿನಿಂದ ಪರಿಶುದ್ಧನಾಗುತ್ತಾನೆ"

"ದಶಾನನ ಸ್ವಪ್ನಸಿದ್ಧಿ" - ಶ್ರೀ ಕುವೆಂಪು ಅವರು ಕನಸಿನಲ್ಲಿ ಕಂಡುದಂತೆ. ಅವರು ಹೇಳಿದರು. "ಆ ಕನಸು ಏಕೆ ಬಿತ್ತೋ". ಆ ಭವ್ಯದೃಶ್ಯವೆಲ್ಲವೂ ಸ್ಪಷ್ಟವಾಗಿ ಕಂಡಿತಂತೆ. ಆ ಕಾರೊಡಲಿನ ಕುದುರೆ, ಖಡ್ಗ, ಹಸ್ತವೊಂದು ಇಳಿದು ಕತ್ತರಿಸಿದ ದೃಶ್ಯ ; ರಾವಣ ಹೊಳೆಯಲ್ಲಿ ಮುಳುಗಿದುದು. ಕಡೆಗೆ ರಾವಣ ಕುಂಭಕರ್ಣರಿಬ್ಬರೂ ಶಿಶುಗಳಾಗಿ ವೈದೇಹಿಯ ತೊಡೆಯ ಮೇಲೆ ನಲಿದುದು (ಮುಂದೆ ಲವಕುಶ ವೃತ್ತಾಂತಕ್ಕೆ ಕನ್ನಡಿ ಹಿಡಿದಿದೆ) ಎಲ್ಲವನ್ನು ಅವರು ಇರುಳ ಕನಸಿನಲ್ಲಿ ಕಂಡರಂತೆ. "ಈ ರಾಮಾಯಣವನ್ನು ನಾನು ಬರೆಯಲಿಲ್ಲ, ನಾನು ಎಲ್ಲೆಲ್ಲಿ ನನ್ನ ಅಹಂಕಾರದಿಂದ ರಚಿಸಲು ತೊಡಗಿದೆನೋ ಅಂತಹ ಭಾಗಗಳನ್ನೂ, ನೂರಾರು ಪಂಕ್ತಿಗಳನ್ನೂ ಹರಿದು ಬಿಸುಟಿದ್ದೇನೆ. ಇಡೀ ವಿಶ್ವಶಕ್ತಿಯೇ ಈ ಕೃತಿ ಸೃಷ್ಟಿಯಲ್ಲಿ ಭಾಗವಹಿಸಿದೆ. ಈ ಮಹಾಕಾವ್ಯದಲ್ಲಿ ಯಾವ ಒಂದು ಪಂಕ್ತಿಯೂ ರಸದೀಪ್ತವಾಗದಿಲ್ಲ. ಕಾವ್ಯ ಎಂಬುದು ಕವಿಯ ಜ್ಯೋತಿರ್ಮಯವಾದ ವ್ಯಕ್ತಿತ್ವದಿಂದ ದೀಪ್ತವಾದ ತೀರ್ಥ" ಎನ್ನುತ್ತಾರೆ. ಹಲವು ವರ್ಣನೆಗಳು, ಹಲವು ದೃಶ್ಯಗಳು ಅವು ಸೃಜನೆಯಾಗುವ ವೇಳೆಗೆ ಜಗತ್ತು ತೆರೆದು ಅಂತಹ ಅನುಭವವನ್ನೇ ಆಯಾ ಕಾಲಕ್ಕೆ ಒದಗಿಸಿದೆಯಂತೆ. ಅದು ನಿಜವಾಗಿಯೂ "ಕಾವ್ಯಗೋಮಟ". "ಜಗತ್ತಿನ ಯಾವ ಮಹಾಕಾವ್ಯವೂ ಇದರ ಮಟ್ಟಕ್ಕೆ ಏರಲಾರದು 'ದರ್ಶನ'ದ ದೃಷ್ಟಿಯಿಂದ! ಇದು ಅರ್ಥವಾಗಬೇಕಾದರೆ ಸುಮಾರು ಒಂದೆರಡು ಶತಮಾನ ಕಾಯಬೇಕಾದೀತು."

ಕುವೆಂಪು ಕುರಿತು ಇನ್ನೊಂದು ಮಹತ್ವದ ಸಂಗತಿಯನ್ನು ದಿ. ೩-೪-೫೨ರ ಪತ್ರದಲ್ಲಿ ಅವರು ಉಲ್ಲೇಖಿಸಿದ್ದಾರೆ. "ಈಗ ಕುವೆಂಪು ಅವರ ಮನಸ್ಸಿನಲ್ಲಿ 'ಆದಿಕವಿ ಸಂಭೂತಿ' ಎಂಬ ದೃಶ್ಯ ಚಂಪೂ ಕೃತಿರೂಪುಗೊಳ್ಳುತ್ತಿದೆಯಂತೆ, ದಿನದಿನವೂ ಬೆಳೆಯುತ್ತಿದೆಯಂತೆ. ಅದು ಇನ್ನೂ 'ಕೃತಿ'ಯಾಗಿ ಪ್ರಕಾಶಗೊಂಡಿಲ್ಲವಂತೆ. ಯಾವಾಗ ಬರೆಯುತ್ತೀರಿ? ಎಂದು ಕೇಳಿದ್ದಕ್ಕೆ 'ಬಹುಶಃ ಅದು ಈ ಜನ್ಮದಲ್ಲಿ ಆಗುವುದೊ ಇಲ್ಲವೊ, ಮುಂದಿನ ಜನ್ಮಕ್ಕೆ ಮೀಸಲಾಗಿದೆಯೊ' ಎಂದು ನಿಡುಸುಯ್ದರು. ಇದರಿಂದ ಒಂದು ವಿಚಾರ ಸ್ಪಷ್ಟ. ಅವರು 'ರಾಮಾಯಣ ದರ್ಶನ' ಬರೆದರೂ, ಇನ್ನೂ ಪಡೆಯಬೇಕಾದ ಯಾವುದೊ ಒಂದನ್ನು ಪಡೆದಿಲ್ಲ ಎಂದು ತೋರುತ್ತದೆ.

'ಆ' ಸಿದ್ಧಿ ಆದಿಕವಿ ಸಂಭೂತಿಯಲ್ಲಿ ಪರ್ಯವಸಾನವಾದೀತು. "ನಾನು ನನ್ನ ಈ ದೇಹ ಬಿಟ್ಟಮೇಲೆ ನನ್ನ ರಾಮಾಯಣದ ನಿತ್ಯ ಶರೀರವನ್ನು ಪ್ರವೇಶಿಸುತ್ತೇನೆ" ಎಂದರು. ಕವಿ ಕೃತಿಯಾಗಿ ಪರಿಣಮಿಸುವುದರಿಂದಲೇ ಕಾವ್ಯ ಎಷ್ಟು ಶತಮಾನಗಳಾದರೂ ನಿತ್ಯ ನೂತನವಾಗಿರುವುದು."

ಕುವೆಂಪು ಅವರ ಅಂತರಂಗದ ಶಿಷ್ಯರಲ್ಲೊಬ್ಬರೂ, ಗಣ್ಯ ವಿಮರ್ಶಕರೂ ಆದ ಶಿವರುದ್ರಪ್ಪನವರ ಈ ಉಲ್ಲೇಖಗಳು ನಾಲ್ಕೈದು ದಶಕದಷ್ಟು ಹಿಂದಿನವಾದರೂ ಅವು ಇಂದಿಗೂ ಮಹತ್ವದ ದಾಖಲೆ ಎನಿಸುವುದರಲ್ಲಿ ಸಂದೇಹವಿಲ್ಲ.

"ಭಾಷೆ ಮತ್ತು ಭಾವಗಳ ಮೇಲೆ ಅವರಿಗೆ ಹತೋಟಿ ಇದೆ. ಚೆನ್ನಾಗಿ ಬರೆಯುತ್ತಾರೆ. ನವ್ಯತೆಯನ್ನು ಕೂಡಲೆ ತರಬೇಕೆಂಬ ಹಠವೇನೂ ಕಾಣುವುದಿಲ್ಲವಾದುದರಿಂದ ಅವರು ಮುಂದುವರಿದಂತೆ ಸಹಜವಾಗಿ ನವ್ಯತೆ ತಾನೇ ಬರುತ್ತದೆ" ಹೀಗೆ ನನ್ನ ಕಾವ್ಯದ ಬಗ್ಗೆ ಕುವೆಂಪು ಹೇಳಿದರೆಂದು ಶಿವರುದ್ರಪ್ಪನವರು ತಮ್ಮ ೮-೫-೫೭ರ ಪತ್ರದಲ್ಲಿ ಕಾಣಿಸಿದ್ದರು. ಅಂದಿನ ಸಂದರ್ಭದಲ್ಲಿ ಈ ಮಾತುಗಳು ನನ್ನ ಕಾವ್ಯರಚನೆಯ ದೃಷ್ಟಿಯಿಂದ ನನಗೆ ತುಂಬ ಪ್ರೋತ್ಸಾಹದಾಯಕವಾಗಿ ಪರಿಣಮಿಸಿದವೆಂದು ಬೇರೆ ಹೇಳಬೇಕಿಲ್ಲ.

'ತೀರ್ಥವಾಣಿ'ಯಲ್ಲಿ ಸಂಗ್ರಹಗೊಂಡ ಪದ್ಯಗಳ ಅನುವಾದವನ್ನು ಶಿವರುದ್ರಪ್ಪನವರು ಎಷ್ಟೊಂದು ಶ್ರದ್ಧೆಯಿಂದ ನಿರ್ವಹಿಸಿದರು ಎಂಬುದಕ್ಕೆ ೧೮-೧೨-೫೭ರ ಪತ್ರದಲ್ಲಿಯ ಈ ವಾಕ್ಯಗಳು ಸಾಕ್ಷಿಯಂತಿವೆ : "ಈ ವರ್ಷವೆಲ್ಲ ನಾನು ದೈವೀಕಾರ್ಯದಲ್ಲಿ ತೊಡಗಿದ್ದೇನೆ. ಅಥವಾ ಆ ದೈವೀ ಕೃಪೆ ನನ್ನನ್ನು ಅನುಗ್ರಹಿಸಿದೆ. ರಾಮಕೃಷ್ಣಾಶ್ರಮದವರು The Gospel of Ramakrishna ವನ್ನು ಕನ್ನಡಿಸುತ್ತಿದ್ದಾರೆ. ಅದರಲ್ಲಿ ಬರುವ ಕವನಗಳನ್ನು ಕನ್ನಡಕ್ಕೆ ಪರಿವರ್ತಿಸುವ ಕಾರ್ಯ ನನ್ನದಾಗಿದೆ. ಆಂಗ್ಲ ಭಾಷಾಂತರ ಮತ್ತು ಬಂಗಾಳಿ ಮೂಲ ಇಟ್ಟುಕೊಂಡು ಈ ಭಕ್ತಿಗೀತೆಗಳನ್ನು ಕನ್ನಡಕ್ಕೆ ಮಾಡುತ್ತಿದ್ದೇನೆ. ಸುಮಾರಾಗಿ ಕಾರ್ಯ ಮುಗಿಯುತ್ತ ಬಂದಿದೆ- ಮೂರು ತಿಂಗಳಿಂದಲೂ. ಹೀಗಾದರೂ ಆತ್ಮ ಉತ್ತಮ ಸಂಸ್ಕಾರ ಪಡೆಯಲೆಂಬುದು ಗುರುದೇವರ ಇಚ್ಛೆ. ನನ್ನ ಭಾಷಾಂತರಗಳನ್ನು ವಾರವಾರವೂ ಶ್ರೀ ಕುವೆಂಪು ನೋಡಿ ಸಲಹೆ ನೀಡುತ್ತಿದ್ದಾರೆ. ಕಾರ್ಯ ಸಾಗುತ್ತಿದೆ. ಇದರ ನಡುವೆ ನನ್ನ ಕವನಗಳನ್ನು-ಅಪರೂಪವಾಗಿ ಬರೆಯುತ್ತಿದ್ದೇನೆ."

ಶಿವರುದ್ರಪ್ಪನವರು ಗಂಭೀರ ಪ್ರವೃತ್ತಿಯವರಂತೆ ತೋರಿದರೂ ಹಾಸ್ಯಕ್ಕೆ, ವಿನೋದಕ್ಕೆ ಅವರ ಮನಸ್ಸು ಅಷ್ಟೇ ತೆರೆದುಕೊಂಡಿರುತ್ತದೆ. ಈ ವಿಷಯದಲ್ಲಿಯೂ ನಮ್ಮದು ಸಮಾನ ಮನೋಧರ್ಮ. ಅವರ ಜೊತೆಗೆ ಆತ್ಮೀಯವಾಗಿ ಸಂಭಾಷಣೆಗೆ ತೊಡಗಿದವರಿಗೆಲ್ಲ ಅದರ ಅನುಭವವಾಗದಿಲ್ಲ. ಅವರ ಪತ್ರಗಳಲ್ಲಿಯೂ ಅದು ಅಲ್ಲಲ್ಲಿ ಮಿನುಗಿರುವುದನ್ನು ಕಂಡು ನಾನು ಖುಷಿಪಟ್ಟಿದ್ದೇನೆ. ಕೆಲವನ್ನು ಇಲ್ಲಿ ಉದಾಹರಿಸಬಹುದು :

""ಕೊರವಂಜಿ"ಯಲ್ಲಿ 'ಮಂಜು', ಕವಿತೆ ಓದಿದಿರಾ? ಆ "ದಿಬ್ಬಯ್ಯ" ನಾನೇ. ಅದು ಹೇಗೆ ತಿಳಿಯಿತು ಸ್ವಾಮಿ ನಿಮಗೆ?" (೫-೧೧-೫೧)

"ನಮ್ಮ 'ಮಗು' ಚೆನ್ನಾಗಿದೆ. ಆಗಲೇ ಮತ್ಸ್ಯಾವತಾರದಿಂದ ಕೂರ್ಮಾವತಾರಕ್ಕೆ ಕಾಲಿಟ್ಟಿದೆ" (೨೦-೧-೫೨)

"ಹೌದು, ನನ್ನ ಕಾಗದ ನಿಮ್ಮ ಕಡೆ ಹೊರಟು ಬಹಳ ದಿನವಾಯಿತು. ಪರೀಕ್ಷೆಯ ಗಡಿಬಿಡಿ; ನನ್ನ ಎಂ.ಎ.ಯದು ಅಲ್ಲ. ಆ ಬೀಸುವ ದೊಣ್ಣೆ ಮುಂದಿನ ವರುಷ, ೧೯೫೩ನೇ ಜೂನ್ ತಿಂಗಳಿಗೆ - ಇನ್ನೂ ದೂರವಿದೆ. ನಮ್ಮ ಕಾಲೇಜಿನ ಪರೀಕ್ಷೆಯಲ್ಲಿ ಹುಡುಗರನ್ನು ಕಾಯುವ ಕೆಲಸ. ಆ ನಿಶ್ಶಬ್ದವಾದ ಪರೀಕ್ಷಾ ಕೊಠಡಿಯಲ್ಲಿ, ಲೇಖನಿಗಳ ಕರಕರ ಕೊರೆತವೊಂದು, ಪೇಪರುಗಳ ಸರಸರ ಶಬ್ದವೊಂದು, ನಿರ್ಭಯವಾಗಿ, ಆ ಹುಡುಗರ ಬೇಳ್ವೇರಿದ 'ಹಗಲೊಗೆದ ಚಂದ್ರಕಳೆಯಂತಿರುವ' ಮುಖಗಳನ್ನು ವೀಕ್ಷಿಸುತ್ತಾ ಓಡಾಡುವ ನಮ್ಮ ಕಾಲ ಸಪ್ಪಳವೊಂದು ಆ ಮೌನವನ್ನು ಭೇದಿಸುತ್ತವೆ" (೩-೪-೫೨).

"ಗೆ. ಪ್ರಸಾದರು ಶಿವಮೊಗ್ಗೆಯಲ್ಲಿ ಸ್ವಸ್ಥವಾಗಿ 'ಗೃಹಸ್ಥ'ರಾಗಿದ್ದಾರೆ. ಪ್ರಭುಶಂಕರರು ಬೆಂಗಳೂರಿನ ರಾಮಕೃಷ್ಣಾಶ್ರಮದಲ್ಲಿ ಸಾಧನೆ ಮಾಡುತ್ತಿದ್ದಾರೆ. ನಾನು ಇಲ್ಲಿ ಏನನ್ನೂ ಮಾಡದೆ ಉಂಡಾಡಿಯಾಗಿದ್ದೇನೆ" (೩-೪-೫೨).

"ಮೊನ್ನೆ ಶನಿವಾರ ಮಧ್ಯಾಹ್ನ -ಮಟಮಟ ಮಧ್ಯಾಹ್ನ- ಮೇಲೆ ಬಿರುಬಿಸಿಲು ಧಾಳಿ ಇಟ್ಟಾಗ, ನಾನು 'ಆನಂದವರ್ಧನನ ಕಾವ್ಯ ಮೀಮಾಂಸೆ'ಯ ರಸಚಕ್ರವ್ಯೂಹದಲ್ಲಿ ತೊಳಲುತ್ತಿದ್ದೆ. ಅದೋ ನೋಡಿ ಜುಲೈ ತಿಂಗಳ ಮೊದಲ ವಾರ ಬರುತ್ತಿದೆ- ಎಂ.ಎ. ಪರೀಕ್ಷೆ ಮಾಡೀ ಮಾಡೀ ಪರೀಕ್ಷೆಯನ್ನು 'ಸಾಕ್ಷಿಪ್ರಜ್ಞೆ'ಯಲ್ಲಿ ನಿಂತು ರಸಾನುಭವ ಮಾಡುತ್ತಿದ್ದ ನನಗೇ ಈ ಪರೀಕ್ಷೆಗೆ ಕೂಡುವ ಪ್ರಸಂಗ ಬಂದು 'ಭಾವಾನುಭವ' ಆರಂಭವಾಗಿದೆ" (೨೫-೫-೫೩).

"ಶ್ರೀ ರಾಜಗೋಪಾಲ್ ಸಿಗುತ್ತಾರೆ ತಾನೆ? ಕೊಂಚ ತಾಳ್ಮೆಯಿಂದ ಆಲಿಸುವುದಾದರೆ ಅವರು ತುಂಬ ಒಳ್ಳೆಯವರೆ. ಅವರು ತಮ್ಮ ನವ್ಯ ಕವಿತೆಗಳನ್ನೇ ಇಲ್ಲಿ ನನ್ನ ಕಿವಿಗೆ ತುಂಬೀ ತುಂಬೀ ಸುಸ್ತಾದರು. ಕವಿತೆಗಿಂತ ಕಥೆ ಬಹಳ ಸೊಗಸಾಗಿ ಸಿದ್ಧಿಸಿದೆ ಅವರಿಗೆ" (೨೮-೮-೫೩).

"ಜಯಕುಮಾರ ಈಗ ಸ್ಕೂಲಿಗೆ ಹೋಗಿ ಬರುವ ಅಭಿನಯದಲ್ಲಿದ್ದಾನೆ. 'ಅಣ್ಣಾ ನಾನು ದೊಡ್ಡವನಾಗಿದೀನಿ, ಅಲ್ವೇನಣ್ಣ' ಎಂದು ಘೋಷಿಸುತ್ತಾನೆ. ಆದರೂ 'ಗಿಡ್ಡಲ್ಲಿ ಯಾಕೆ ಬಿಸ್ಕತ್ತು ಬಿಡಲ್ಲ?' ಎಂದು ಪ್ರಶ್ನಿಸಿ ದಿಗ್ಭ್ರಮೆಗೊಳಿಸುತ್ತಾನೆ" (೨೨-೧೧-೫೪).

"ನನ್ನ ಥೀಸಿಸ್ - ಬಹುದೊಡ್ಡ ತಲೆನೋವು. ವಿಷಯ, ಸೌಂದರ್ಯವನ್ನು ಕುರಿತದ್ದಾದರೂ, ಇಷ್ಟೊಂದು ಭಯಂಕರವಾಗಿರುತ್ತದೆಂದು ನಾನು ಭಾವಿಸಿರಲಿಲ್ಲ. ಈಗಂತೂ ಮುಗಿಲುದ್ದ ನಿಂತಿದೆ. ಚುಡಿ ಚಾಮುಂಡಿಯನ್ನು ಒಲಿಸಿ, ಸೌಂದರ್ಯ ಲಕ್ಷ್ಮಿಯ ಸಂದರ್ಶನ ಮಾಡಬೇಕಾಗಿದೆ" (೨೪-೭-೫೬).

ಈ ಪತ್ರ-ಚಿತ್ರಗಳನ್ನು ಬಿಡಿಸುತ್ತಾ ನನ್ನ ಕೆಲವು ನೆನಪುಗಳನ್ನು ಇಲ್ಲಿ ಮೆಲುಕು ಹಾಕಿದ್ದೇನೆ. ಅವರ ಅನುಮತಿಯನ್ನು ಕೇಳದೆ ಧಾರಾಳವಾಗಿ ಪತ್ರಗಳನ್ನು ಈ ಲೇಖನದಲ್ಲಿ ಬಳಸಿಕೊಂಡಿದ್ದಕ್ಕೆ ಶಿವರುದ್ರಪ್ಪನವರು ಕ್ಷಮಿಸುತ್ತಾರೆಂಬ ಭರವಸೆಯೂ ನನಗಿದೆ.

('ಹಣತೆ' ೨೦೦೧)

ಸಾಹಿತ್ಯ ಸಮಾಹಿತ : ೨೦೦೭

೧೫

## ಜಿ.ಬಿ. ಜೋಶಿ: ಕನಸು-ನನಸು

ಕಳೆದ ವರ್ಷ ಜುಲೈ ೨೯ರಂದು ಜಿ.ಬಿ. ಜೋಶಿಯವರ ಜನ್ಮಶತಮಾನೋತ್ಸವದ ಉದ್ಘಾಟನೆಯಾದ ನಂತರ ಡಿಸೆಂಬರ್ ತಿಂಗಳಲ್ಲಿ ಒಂದು ವಾರ ಅವರ ಐದಾರು ಪ್ರಸಿದ್ಧ ನಾಟಕಗಳು ಬೇರೆಬೇರೆ ನುರಿತ ತಂಡಗಳಿಂದ ಪ್ರದರ್ಶಿತಗೊಂಡದ್ದು ತುಂಬ ಔಚಿತ್ಯಪೂರ್ಣವಾಗಿತ್ತು. ಜಿ.ಬಿ. ಯವರೆಂದೊಡನೆ ಕಣ್ಣೆದುರು ಖಚಿತವಾಗಿ ನಿಲ್ಲುವುದು ಮನೋಹರ ಗ್ರಂಥಮಾಲೆ. ಒಬ್ಬ ವ್ಯಕ್ತಿ ತನ್ನ ಸೃಜನಶಕ್ತಿಯನ್ನು ಹೀಗೆ ಎರಡು ಕ್ಷೇತ್ರಗಳಲ್ಲಿ, ಎರಡು ಪಾತ್ರಗಳಲ್ಲಿ ಸಮರ್ಥವಾಗಿ ದುಡಿಸಿಕೊಂಡದ್ದು ಕನ್ನಡದಲ್ಲಿ ಅಪರೂಪವಲ್ಲದಿದ್ದರೂ ಜೋಶಿಯವರಂತೆ ಯಶಸ್ವಿಯಾದವರು ವಿರಳವೆಂದೇ ಹೇಳಬಹುದು. ಬೇಂದ್ರೆ, ಶಂ.ಬಾ. ಜೋಶಿ, ಸೇಡಿಯಾಪು, ಕಾರಂತ, ಮಧುರಚೆನ್ನ ಮೊದಲಾದ ಹಿರಿಯ ಚೇತನಗಳ ಜನ್ಮಶತಮಾನೋತ್ಸವವನ್ನು ಅರ್ಥಪೂರ್ಣವಾಗಿ ಆಚರಿಸಿದ ನಂತರ, ಈ ಸಂದರ್ಭದಲ್ಲಿ ಶ್ರೀರಂಗ, ಕುವೆಂಪು, ಗೊರೂರು, ಪು.ತಿ.ನ., ಸಿಂಪಿ ಲಿಂಗಣ್ಣನವರ ಸಾಧನೆಯ ನೂರರ ನೆನಪುಗಳು ನಮ್ಮ ಸಾಹಿತ್ಯಿಕ ಚಟುವಟಿಕೆಗಳಿಗೆ ವಿವಿಧ ಆಯಾಮಗಳನ್ನು ಒದಗಿಸಿರುವುದು ಗಮನಾರ್ಹ. ಇದನ್ನೆಲ್ಲ ಮನಸ್ಸಿಗೆ ತಂದುಕೊಂಡಾಗ ಹೊಸಗನ್ನಡ ಸಾಹಿತ್ಯ ಚರಿತ್ರೆಯಲ್ಲಿ ಇಪ್ಪತ್ತನೆಯ ಶತಮಾನ ಎಂಥ ಉಜ್ವಲವಾದ ಕಾಲಮಾನ ಎನ್ನುವುದರ ಕಲ್ಪನೆ ನಮಗುಂಟಾಗದೆ ಇರದು.

ನಾನು ಧಾರವಾಡಕ್ಕೆ ವಿದ್ಯಾರ್ಥಿಯಾಗಿ ಬಂದಾಗಿನಿಂದಲೂ (೧೯೪೦) ಜಿ.ಬಿ. ಜೋಶಿಯವರನ್ನು ಆಗಾಗ ನೋಡುತ್ತಿದ್ದೆ. ಧೋತರ, ಹಾಫ್‌ಶರ್ಟ, ಕರಿ ಟೊಪ್ಪಿಗೆ ಅವರ ಖಾಯಂ ವೇಷವಾಗಿತ್ತು. ಆಗ ನಾನು ಬಹಳ ಆಸ್ಥೆಯಿಂದ ಓದಿದ ಕೆಲವು ಪುಸ್ತಕಗಳ ಪ್ರಕಾಶಕರು ಇವರೇ ಎಂಬುದೂ ಆಮೇಲೆ ತಿಳಿಯಿತು. ಆಗ ಧಾರವಾಡದಲ್ಲಿ ವೇದಿಕೆಯ ಮೇಲೆ ನಾನು ಅನೇಕ ಸಾಹಿತಿಗಳನ್ನು ನೋಡಿ ಅವರ ಭಾಷಣ ಕೇಳುತ್ತಿದ್ದೆ. ಆದರೆ ಜಿ.ಬಿ. ಯವರನ್ನು ವೇದಿಕೆಯ ಮೇಲೆ ಕಂಡದ್ದು ತೀರ ವಿರಳ. ಒಂದು ಸಂದರ್ಭ ನೆನಪಾಗುತ್ತದೆ : ೧೯೪೮-೪೯ ಇರಬೇಕು. ಮಿರ್ಜಿ ಅಣ್ಣಾರಾಯರ 'ರಾಷ್ಟ್ರಪುರುಷ' ಕಾದಂಬರಿಯ ಬಿಡುಗಡೆ ಸಮಾರಂಭ ಕರ್ನಾಟಕ ವಿದ್ಯಾವರ್ಧಕ ಸಂಘದ ಅಟ್ಟದ ಮೇಲೆ ಬೇಂದ್ರೆಯವರಿಂದ ನೆರವೇರಿತು. ಆಗ ಪ್ರಕಾಶಕರಾಗಿ ಜೋಶಿಯವರು ಆಡಿದ್ದು ಒಂದೊ ಎರಡೊ ಮಾತು, ಅಷ್ಟೆ, ಮತ್ತೊಮ್ಮೆ, ಅಂದರೆ 'ನಡೆದು ಬಂದ ದಾರಿ' ಸಂಪುಟಗಳ ಬಿಡುಗಡೆಯ ಸಮಾರಂಭ ಅದೇ ಸ್ಥಳದಲ್ಲಿ

ನಡೆದಾಗ ಜೋಶಿಯವರು ಮೂರು-ನಾಲ್ಕು ಪುಟಗಳ, ಬರೆದ ಭಾಷಣವನ್ನು ಓದಿದರು. ಅಷ್ಟು ಮಾಡಬೇಕಾದರೂ ಅವರಿಗೆ ಸಾಕುಬೇಕಾಗಿ ಹೋಗಿತ್ತು ಎನ್ನುವುದು ಎದ್ದು ಕಾಣುತ್ತಿತ್ತು. ಜೋಶಿಯವರು ನಿಜವಾದ ಕೆಲಸಗಾರರು. ಹಿಂದೆ, 'ಜಯ ಕರ್ನಾಟಕ'ದಲ್ಲಿ ಕೆಲಸಕ್ಕೆ ಸೇರುವ ಮೊದಲು, 'ಪ್ಯೂನನ ಕೆಲಸದಿಂದ ಹಿಡಿದು 'ಜಯ ಕರ್ನಾಟಕ' ಕಚೇರಿಯ ಎಲ್ಲ ಕೆಲಸಕ್ಕೂ ನಾನು ಸಿದ್ಧ' ಎಂದು ಸಂಪಾದಕರಿಗೆ ಪತ್ರ ಬರೆದಿದ್ದರಂತೆ. ಅದು ಅವರ ನಿಜವಾದ ಮನೋಧರ್ಮ ಕೂಡ. ತಮ್ಮ ಕನಸುಗಳ ಪ್ರಭಾವದಿಂದ ಆದರ್ಶಜೀವನ ತಮಗೆ ಹೊರಗಿನದಲ್ಲ ಎಂದು ಅವರು ಭಾವಿಸಿದ್ದರು. ಜಿ.ಬಿ.ಯವರಿಗೆ ಆಗ ಸರಿಯಾದ ಅವಕಾಶ ದೊರೆತಿದ್ದರೆ ಗೆಳೆಯರ ಗುಂಪು ಕೂಡ ಒಂದು ದೊಡ್ಡ ಸಂಸ್ಥೆಯಾಗಬಹುದಿತ್ತು ಎಂಬ ಅಭಿಪ್ರಾಯವನ್ನು ನಾನು ಕೇಳಿದ್ದುಂಟು. ಆದರೆ ಗುಂಪಿನ ಬೆಸುಗೆಗಳು ಎಲ್ಲರೂ ತಿಳಿದುಕೊಂಡಷ್ಟು ಭದ್ರವಾಗಿರಲಿಲ್ಲ. ಅದು ಬೇರೆ ವಿಷಯ.

ನಾನು ಹುಟ್ಟಿದ ಊರು ಹೊಂಬಳ, ಜೋಶಿಯವರದೂ ಕೂಡ ಎಂದು ತಿಳಿದು ಬಂದಾಗ ನಾನು ಹೆಮ್ಮೆಪಟ್ಟದ್ದೂ ಉಂಟು. ಅಲ್ಲಿಯ ಶಂಕರಲಿಂಗನ ಗುಡಿಯ ಆವರಣದಲ್ಲಿ ಸುರಕ್ಷಿತವಾಗಿರುವ ಶಾಸನಗಳು ಈ ಸ್ಥಳ ಎಂಟುನೂರು ವರ್ಷಗಳ ಹಿಂದೆ ಕಾಳಾಮುಖ ಪಂಥದವರ ಪ್ರಮುಖ ಕಾರ್ಯಕೇಂದ್ರವಾಗಿತ್ತೆನ್ನುವುದನ್ನು ಉಲ್ಲೇಖಿಸುತ್ತವೆ. ಅಲ್ಲದೆ, ಅಧ್ಯಯನ, ಅಧ್ಯಾಪನ ಮತ್ತು ಧಾರ್ಮಿಕ ಕಾರ್ಯಗಳಿಗೆ ಹಲವಾರು ವಿದ್ವಾಂಸರಿಗೆ ದತ್ತಿಯಾಗಿ ಕೊಡಲ್ಪಟ್ಟ ಅಗ್ರಹಾರವೂ ಇದಾಗಿತ್ತು. ಕ್ರಿ.ಶ. ೧೦೪೯ರ ಶಾಸನದಲ್ಲಿ ಈ ಊರಿನ ಹೆಸರನ್ನು 'ಪೊಂಬೊಳಲ್' ಎಂದು ಕರೆಯಲಾಗಿದೆ. ಅದೀಗ 'ಹೊಂಬಳ'ವಾಗಿದೆ. ಅಂಥ ಬಂಗಾರದ ಊರನ್ನು (ಪೊನ್ + ಪೊಳಲ್) ಬಿಟ್ಟು ಬಂದ ಜೋಶಿಯವರು ಧಾರವಾಡದ ನೆಲದಲ್ಲಿ 'ಮನೋಹರ ಗ್ರಂಥಮಾಲೆ'ಯ ಮೂಲಕ ಸಾಹಿತ್ಯದ ಬಂಗಾರದ ಖನಿಯನ್ನು ತೋಡುವ ಪರಿಶ್ರಮದ ಕಾರ್ಯದಲ್ಲಿ ತೊಡಗಿಸಿಕೊಂಡುದರಲ್ಲಿ ಒಂದು ಅಜ್ಞಾತ ಸೂತ್ರವಿರಬಹುದು. ಕಾಲುಶತಮಾನದ ಹೊತ್ತಿಗೆ 'ನಡೆದು ಬಂದ ದಾರಿ'ಯ ಮೈಲುಗಲ್ಲುಗಳನ್ನು ನಿಲ್ಲಿಸಿ, ಅರ್ಧಶತಮಾನ ಮುಗಿಯುವುದರೊಳಗೆ 'ಪುಟ ಬಂಗಾರ'ದ ಸಂಪುಟಗಳಿಗೆ ಕೈ ಹಾಕಿದ್ದು ಸಣ್ಣ ಮಾತಲ್ಲ. ಕೀರ್ತಿನಾಥ ಕುರ್ತಕೋಟಿಯವರ ವಿಮರ್ಶಾಪ್ರಜ್ಞೆ ಜಿ.ಬಿ. ಜೋಶಿಯವರ ಕಾಯಕ ಪ್ರಜ್ಞೆಯಲ್ಲಿ ಪ್ರಕಾಶಗೊಂಡು ಬೇಂದ್ರೆಯವರ 'ಸಮರಸವೇ ಜೀವನ'ಕ್ಕೆ ಸಾಕ್ಷಿಯಾಗಿ ನಿಂತಿತು. ಜೋಶಿಯವರ ಜನ್ಮಶತಮಾನೋತ್ಸವಕ್ಕಾಗಿ ಕಾದುಕೊಂಡಂತಿದ್ದ ಕೀರ್ತಿ, ಅದು ಪ್ರಾರಂಭವಾದೊಡನೆ ಕೀರ್ತಿಶೇಷರಾದದ್ದು ಹೊಸಗನ್ನಡ ಸಾಹಿತ್ಯ ಚರಿತ್ರೆಯ ಒಂದು ಮಹತ್ವದ ಅಧ್ಯಾಯಕ್ಕೆ ಬರೆದ ಚರಮಗೀತೆಯಂತಿತ್ತು.

ಗೆಳೆಯರ ಗುಂಪಿನ ನಿಜವಾದ ಕನಸುಗಾರರೆಂದರೆ ಜಿ.ಬಿ. ಜೋಶಿಯವರು ಎಂದು ಕುರ್ತಕೋಟಿ ಬರೆದಿದ್ದಾರೆ. (ಅವರ 'ಜಡಭರತನ ಕನಸುಗಳು' ಪ್ರಕಾಶ ಗುರುಡರ ಸಮರ್ಥ ನಿರ್ದೇಶನದಲ್ಲಿ ಈಚೆಗೆ ದೃಶ್ಯರೂಪದಲ್ಲಿ ಕಂಗೊಳಿಸಿದೆ.) ಗುಂಪು ಚದುರಿದ ಮೇಲೆ ಜಿ.ಬಿ.

ಯವರು ಮನೋಹರ ಗ್ರಂಥಮಾಲೆಯನ್ನು ಅರುವತ್ತು ವರ್ಷ ಅನುಮಾನವಿಲ್ಲದೆ ನಡೆಸಿಕೊಂಡು ಬಂದರು. ಆಧುನಿಕ ಕನ್ನಡ ಸಾಹಿತ್ಯದ ಪ್ರಕಾರಗಳ ಬೆಳವಣಿಗೆಯಲ್ಲಿ ಇದರಿಂದ ಒದಗಿದ ಒತ್ತಾಸೆ ಅಷ್ಟಿಷ್ಟಲ್ಲ. ಯಾಕೆಂದರೆ ಆಗ ಆಧುನಿಕ ಕನ್ನಡ ಸಾಹಿತ್ಯದ ಮಹತ್ವದ ಕೃತಿಗಳಲ್ಲಿ ನೂರಕ್ಕೆ ಐವತ್ತರಷ್ಟು ಮನೋಹರ ಗ್ರಂಥಮಾಲೆಯ ಪ್ರಕಟನೆಗಳೇ ಆಗಿದ್ದವೆಂಬುದನ್ನು ಅಲ್ಲಗಳೆಯುವಂತಿಲ್ಲ.

ಸಾಹಿತ್ಯವನ್ನು ಜನತೆಗೆ ಮುಟ್ಟಿಸುವ ಕಾರ್ಯದಲ್ಲಿ ಪ್ರಕಾಶಕನ ಪಾತ್ರ ಬಹಳ ಮುಖ್ಯವಾದದ್ದು. ಲೇಖಕ, ಪ್ರಕಾಶಕ, ಸ್ವಲ್ಪ ಮಟ್ಟಿಗೆ ಪುಸ್ತಕ ವ್ಯಾಪಾರಿ - ಮೂರೂ ಆಗಿದ್ದ ಜೋಶಿಯವರು ಮೂವರ ಸಮಸ್ಯೆಗಳನ್ನು ಚೆನ್ನಾಗಿ ಬಲ್ಲವರಾಗಿದ್ದರು. ಪ್ರಕಾಶನ ಕಾರ್ಯವನ್ನು ಅತ್ಯಂತ ಜವಾಬ್ದಾರಿಯಿಂದ ನಿರ್ವಹಿಸಿದ್ದಲ್ಲದೆ ಆ ಮೂಲಕ ಒಳ್ಳೊಳ್ಳೆ ಲೇಖಕರನ್ನು, ಜೊತೆಗೆ ಹೊಸ ಪ್ರತಿಭೆಗಳನ್ನು ಬೆಳಕಿಗೆ ತಂದು ಬೆಳೆಯುವಂತೆ ಮಾಡಿದರು. ಜೋಶಿಯವರು ಮಾಲೆಗೆ ಚಂದಾದಾರರನ್ನು ಮಾಡುವ ಬಗ್ಗೆ ಹೆಚ್ಚು ಕಾಳಜಿ ವಹಿಸುತ್ತಿದ್ದುದು ವೈಯಕ್ತಿಕವಾಗಿ ಜನರಲ್ಲಿ ಓದುವ ಅಭಿರುಚಿಯನ್ನು ಬೆಳೆಸುವುದಕ್ಕೂ ಪುಟಗೊಟ್ಟಿತು. ಅವರು ಸ್ವತಃ ತಾವೇ ಹೋಗಿ ಚಂದಾದಾರರಿಗೆ ಪುಸ್ತಕಗಳನ್ನು ಮುಟ್ಟಿಸುತ್ತಿದ್ದರು. ಇದರಿಂದ ರೂಪುಗೊಳ್ಳುತ್ತಿದ್ದ ಮಾನವೀಯ ಸಂಬಂಧ ಪುಸ್ತಕದ ಬೆಲೆಗಿಂತ ಸಾಂಸ್ಕೃತಿಕವಾಗಿ ಇನ್ನೂ ಹೆಚ್ಚು ಬೆಲೆಯುಳ್ಳದ್ದಾಗಿ ಪರಿಣಮಿಸಿತು.

ಪ್ರಕಾಶಕರು ವಿದ್ಯಾವಂತರಾಗಿದ್ದು ಸಾಹಿತ್ಯದಲ್ಲಿ ಅಭಿರುಚಿಯುಳ್ಳವರೂ ಆಗಿದ್ದರೆ ಒಳ್ಳೆಯ ಕೃತಿಗಳು ಹೊರಬರಲು ಸಾಕಷ್ಟು ಅವಕಾಶವಿರುತ್ತದೆ. ಇಲ್ಲವಾದರೆ ಕೆಳಮಟ್ಟದ ಸಾಹಿತ್ಯ ಸೃಷ್ಟಿಯಾಗುವುದಲ್ಲದೆ ಅಶ್ಲೀಲ ಸಾಹಿತ್ಯವೂ ತಲೆದೋರಬಹುದು. ಹೀಗಾಗಿ ಕೊಳ್ಳುವ ಸೌಲಭ್ಯವಿರುವ ಎಷ್ಟೋ ಗ್ರಂಥಾಲಯಗಳಲ್ಲಿ ಅಗ್ಗದ ಪುಸ್ತಕಗಳೇ ಹೆಚ್ಚಾಗಿರುವುದನ್ನು ಕಾಣುತ್ತೇವೆ. ಇಂಥ ಪರಿಸ್ಥಿತಿಯಲ್ಲಿಯೂ ನಿರಾಶರಾಗದೆ ಜೋಶಿಯವರು ಉತ್ತಮ ಗ್ರಂಥಕ್ಕೆ ಯಾವಾಗಲೂ ಬೆಲೆ ಇದ್ದೇ ಇರುತ್ತದೆಂಬುದನ್ನು ಸಾಬೀತುಗೊಳಿಸಿದರು. ಸುಸ್ಥಿತಿಯಲ್ಲಿದ್ದ ಕೆಲವು ಗಣ್ಯ ಲೇಖಕರಂತೂ ಅವರ ಬೆಂಬಲಕ್ಕೆ ಇದ್ದೇ ಇದ್ದರು. ಜಿ.ಬಿ.ಯವರ ಜನ್ಮಶತಮಾನೋತ್ಸವದ ಉದ್ಘಾಟನೆಯ ಸಂದರ್ಭದಲ್ಲಿ ಕೀರ್ತಿನಾಥ ಕುರ್ತಕೋಟಿಯವರು ಮಾತನಾಡುತ್ತ 'ಜಿ.ಬಿ. ಜೋಶಿಯವರ ಕೃತಿಗಳಲ್ಲಿ ಮಾಸ್ಟರಪೀಸ್ ಎಂದರೆ ಮನೋಹರ ಗ್ರಂಥಮಾಲೆಯೇ' ಎಂದುದು ನಿಜಕ್ಕೂ ಅರ್ಥಪೂರ್ಣವಾಗಿತ್ತು.

ಗ್ರಂಥಮಾಲೆಯ ಮೂಲಕ ಜೋಶಿಯವರು ಗೈದ ವಿಶಿಷ್ಟ ಹಾಗೂ ಅದ್ಭುತ ಕೆಲಸಕ್ಕೆ ತಕ್ಕ ಮನ್ನಣೆ ಕೊನೆಗಾಲಕ್ಕಾದರೂ ದೊರೆತದ್ದು ಸಂತೋಷಪಡತಕ್ಕ ಸಂಗತಿಯಾಗಿದೆ. ಇದೆಲ್ಲದರ ಮಧ್ಯದಲ್ಲಿಯೂ ಜಿ.ಬಿ. ಯವರು 'ಮೂಕಬಲಿ', 'ಕದಡಿದ ನೀರು', 'ಸತ್ತವರ ನೆರಳು'ದಂತಹ ಶ್ರೇಷ್ಠ ರಂಗಕೃತಿಗಳನ್ನು ನೀಡುವುದರ ಮೂಲಕ ಅವರು ಕನ್ನಡಿಗರ ಇಮ್ಮಡಿ ಗೌರವಕ್ಕೆ ಪಾತ್ರರಾಗಿದ್ದಾರೆ.

('ಜಿ.ಬಿ. ಶತನಮನ' ೨೦೦೫)

ಸಾಹಿತ್ಯ ಸಮಾಹಿತ : ೨೦೦೭

## ೧೬

## ಕರ್ಕಿ: ಕಾವ್ಯ ಗೌರವ

ಈ ಬೆಳುನಗೆಯಲಿ, ಚೆಲುವಿನ ಮೊಗದಲಿ
ತುಳುಕುವ ಆನಂದ
ಅದಾವ ಪೂರ್ವದ ಉದಾರ ಹೃದಯವು
ಚೆಲ್ಲಿದ ಪ್ರತಿಬಿಂಬ ?

('ಮಲ್ಲಿಗೆಗೆ' - ನಕ್ಷತ್ರಗಾನ)

ಸದಾ ನಗೆಮೊಗದ, ಸಮಾಧಾನ, ಸಾತ್ವಿಕ ಕಳೆಯನ್ನುಕ್ಕಿಸುವ, ಸರಸ, ಸಜ್ಜನಿಕೆಯ, ನಿರ್ಮಲ ಸ್ನೇಹಾಂತಃಕರಣದ ಕವಿ ಕರ್ಕಿಯವರನ್ನು ಕಂಡಾಗಲೆಲ್ಲ ಅವರ ಈ ಪದ್ಯವೇ ಕಣ್ಣ ಮುಂದೆ ಕಟ್ಟಿದಂತಾಗುತ್ತದೆ. ಅವರು ನವೋದಯದ ಕಿರಿಯ ಕವಿಗಳಲ್ಲಿ ಒಬ್ಬರಾಗಿದ್ದರು ನಿಜ; ಆದರೂ ತಮ್ಮ ಭಾವಾಭಿವ್ಯಕ್ತಿಗೆ ತಮಗೆ ಹಿರಿಯರಾದ ಮಾಸ್ತಿ, ಮಧುರಚೆನ್ನ, ಬೇಂದ್ರೆ, ಪುಟ್ಟಪ್ಪ, ವಿ.ಸೀ. ಒಂದು ದೀಕ್ಷೆಯನ್ನು ಕೊಟ್ಟಿರಬಹುದೆಂಬ ಭಾವನೆ ಅವರಿಗೆ ನಮ್ರತೆಯನ್ನೊದಗಿಸಿದ್ದಿತು. ಅಹಮಿಕೆಯ ಲವಲೇಶವೂ ಇಲ್ಲದೆ, ಚಿಕ್ಕವರು, ದೊಡ್ಡವರು ಎನ್ನದೆ ಸುಂದರವಾದ ಒಂದು ನುಡಿ ಯಾರಿಂದ ಬಂದರೂ ಕೂಡಲೇ 'ಗುಡ್ ಗುಡ್' ಎಂದು ಮೆಚ್ಚುಗೆ ಸೂಸುತ್ತ ಎಲ್ಲರೊಡನೆಯೂ ಪ್ರೀತಿಯಿಂದ ಬೆರೆದು, ನಲಿದು ಸಂತೋಷಗೊಳ್ಳುವ ಸಹಜ ಸ್ವಭಾವ ಅವರದಾಗಿದ್ದಿತು. ವಿನಾಕಾರಣ ಕೋಪ, ಗಡಿಬಿಡಿ, ಬಿರುಸು ಮಾತು, ಕೊಂಕುನುಡಿ, ಅಸಮಾಧಾನ, ಪ್ರಸಿದ್ಧಿಯ ಹಂಬಲ ಅವರ ಬಳಿ ಸುಳಿದದ್ದನ್ನು ಯಾರೂ ಕಾಣರು. ಸ್ನೇಹಿತರೊಡನೆ ಅವರು ವಯಸ್ಸಿನಲ್ಲಿ ಹಿರಿಯರಿರಲಿ, ಕಿರಿಯರಿರಲಿ ಕಾವ್ಯಶಾಸ್ತ್ರ ವಿನೋದದಲ್ಲಿ ತೊಡಗುವುದೆಂದರೆ ಅವರಿಗೆ ಎಲ್ಲಿಲ್ಲದ ಉತ್ಸಾಹ. 'ರಸಿಕತನದ ಸುಳಿ-ಸುಖ'ದಲ್ಲಿ ಅವರು ಕಾಲವನ್ನು ಪರಿಗಣಿಸುತ್ತಿರಲಿಲ್ಲ. ಪ್ರಕೃತಿಯಲ್ಲಿ, ಜೀವನದಲ್ಲಿ ಸಾತ್ವಿಕ ಸೌಂದರ್ಯವನ್ನು ಆಸ್ವಾದಿಸಿ ಆರಾಧಿಸುವ, ಅದರ ನಾದ-ಲಯಕ್ಕೆ ಮಗುವಿನ ಮುಗ್ಧತೆ, ಕುತೂಹಲಗಳಿಂದ ಕಿವಿಗೊಟ್ಟು ತನ್ಮಯವಾಗುವ, ಒಳಿತನ್ನು, ಉದಾತ್ತವಾದುದನ್ನು ಗುರುತಿಸಿ ಗೌರವಿಸುವ, ಈ ಎಲ್ಲದರ ಹಿಂದೆ ಅಡಗಿರುವ ದೈವೀಕರುಣೆಗೆ ಮಾರುಹೋಗುವ ಮನೋಧರ್ಮ ಕರ್ಕಿಯವರದು. ಹೆಚ್ಚು-ಕಡಿಮೆ ಈ ಎಲ್ಲ ಗುಣಗಳ ಪ್ರತಿಬಿಂಬ, ಪ್ರಕಾಶನ ಅವರ ಕಾರ್ಯ ಎಂದರೆ ತಪ್ಪಾಗದು. ಕವಿತೆ ಸೌಂದರ್ಯದ ಲಯಾತ್ಮಕ ಸೃಷ್ಟಿ - ಎಂಬ ಮಾತು ಕರ್ಕಿಯವರ ಕಾವ್ಯಕ್ಕೆ ಹೆಚ್ಚು ಅನ್ವಯವಾಗುವಂಥದು.

‘ನಕ್ಷತ್ರಗಾನ’, ‘ಭಾವತೀರ್ಥ’, ‘ಗೀತಗೌರವ’, ‘ಕರಿಕೆ-ಕಣಗಿಲ’, ‘ನಮನ’ - ಇವು ಅವರು ಕನ್ನಡ ಕಾವ್ಯಲೋಕಕ್ಕೆ ಸಲ್ಲಿಸಿದ ಕಾಣಿಕೆಗಳು. ಈ ಸಂಗ್ರಹಗಳ ಹೆಸರುಗಳೇ ಅವುಗಳ ಅಂತರಂಗವನ್ನು ಸೂಚಿಸುತ್ತವೆ. ಕರೆವನೇ ಅವ, ಮೋಡಗಳ ಹಾಡು, ಮೇಘೋಪಾಸನೆ, ಗರ್ಭಸ್ಥ ಶಿಶು, ಜೀವಜಗ, ವೀಣೆ - ಇವೇ ಮೊದಲಾದ ಕವನಗಳು ನಾದಮಾಧುರ್ಯ, ಭಾವೋತ್ಕಟತೆ, ವಿಚಾರ ವಿಲಾಸ, ಸುಕುಮಾರ ಶೈಲಿಗಳಿಂದ ಅತ್ಯಂತ ಹೃದಯಸ್ಪರ್ಶಿಯಾಗಿವೆ. ‘ದಿವ್ಯ ಜ್ಯೋತಿ’ ಗಾಂಧೀಜಿಯವರು ಕಾಲವಾದ ಸಂದರ್ಭದಲ್ಲಿ ಬಂದ ಕನ್ನಡದ ಅತ್ಯುತ್ತಮ ಕವನಗಳಲ್ಲಿ ಒಂದಾಗಿದೆ. ‘ಹಚ್ಚೇವು ಕನ್ನಡದ ದೀಪ’ ಗಡಿನಾಡಿನಲ್ಲಿ ಕರ್ಕಿಯವರು ನಿಲ್ಲಿಸಿದ ‘ಕನ್ನಡ ಬಾವುಟ’ವೆನ್ನುವಂತಿದೆ. ಇನ್ನುಳಿದ ಕವನ ಸಂಗ್ರಹಗಳಲ್ಲಿ ನಾಡಿನ ಪುಣ್ಯಕ್ಷೇತ್ರಗಳ ಹಾಗೂ ಉದಾರ, ಉದಾತ್ತ ವ್ಯಕ್ತಿಗಳ ಭಾವತೀರ್ಥ, ಗೀತಗೌರವವಾಗಿ ಹೊರಹೊಮ್ಮಿದೆ. ಅವರ ಕಥನ-ಕಲೆಯ ಮಂಜುಳ ಗಾನವನ್ನು ಮನಸಾರೆ ಇಲ್ಲಿ ಆಲಿಸಬಹುದು. ‘ಬಣ್ಣದ ಚೆಂಡು’, ‘ತನನ ತೋಂ’ ಎಂಬ ಮಕ್ಕಳ ಕವಿತೆಗಳ ಸಂಗ್ರಹಗಳನ್ನು ಇಲ್ಲಿ ಅವಶ್ಯವಾಗಿ ನೆನೆಯಬೇಕು. ‘ಬಣ್ಣದ ಚೆಂಡು’, ‘ಬುರು-ಬುರು ಬಸವಣ್ಣ’, ‘ಪುಂಗಿನಾಗ’ ಮೊದಲಾದವು ಮಕ್ಕಳ ಮನೋಭಾವದೊಂದಿಗೆ ಸಮರಸವಾಗಿ ತನ್ಮಯತೆಯಿಂದ ಮೂಡಿ ಹಾಡಿದಂಥವು.

ಕವಿಯಾಗಿಯೇ ಹೆಸರಾದ ಕರ್ಕಿಯವರು ಗದ್ಯದಲ್ಲಿಯೂ ಹೃದ್ಯತೆಯನ್ನೇ ಮೆರೆದಿದ್ದಾರೆ. ‘ನಾಲ್ದೆಸೆಯ ನೋಟ’ ಮತ್ತು ‘ಸಾಹಿತ್ಯ-ಸಂಸ್ಕೃತಿ-ಶ್ರುತಿ’ ನಾಡು-ನುಡಿ-ಸಂಸ್ಕೃತಿಯ ಬಗೆಗಿನ ಅವರ ಚಿಂತನೆಯ, ಅಧ್ಯಯನದ ಹರಳು-ಹುರುಳನ್ನು ಒಳಗೊಂಡ ಪ್ರಬಂಧ ಸಂಕಲನಗಳಾಗಿವೆ. ‘ಮಕ್ಕಳ ಶಿಕ್ಷಣ’ದ ಬಗೆಗಿನ ಕಾಳಜಿಯನ್ನೂ, ‘ಅಂಗಡಿ-ದಂಪತಿಗಳ’ ವ್ಯಕ್ತಿಚಿತ್ರವನ್ನೂ ಅದೇ ಹೆಸರಿನ ಈ ಪುಟ್ಟ ಹೊತ್ತಿಗೆಗಳು ಸರಳವಾಗಿ ನಿರೂಪಿಸುತ್ತವೆ. ಶರೀಫರ ‘ಜನಪ್ರಿಯ ಪದಗಳ’ ಸಂಪಾದನೆ ಆ ಪದಗಳು ಅನುಭಾವದೊಡನೆ ಸಾಮಾಜಿಕ ಪ್ರಜ್ಞೆಯ ಅರ್ಥವಿಸ್ತಾರ ಪಡೆದಿರುವುದನ್ನು ಸಾಮಾನ್ಯ ಓದುಗರ ಗಮನಕ್ಕೆ ತಂದುಕೊಡುತ್ತದೆ.

ಕಾವ್ಯದ ಜೊತೆಗೆ ಪಂಡಿತವಲಯದಲ್ಲಿ ಕರ್ಕಿಯವರ ಹೆಸರು ನೆಲೆನಿಂತದ್ದು ಅವರ ‘ಕನ್ನಡ ಛಂದೋವಿಕಾಸ’ದ (ಪಿಎಚ್.ಡಿ. ಪ್ರಬಂಧ) ಮೂಲಕ. ಕನ್ನಡ ಛಂದಸ್ಸಿನ ಉಗಮ ಹಾಗೂ ವಿಕಾಸವನ್ನು ಅದು ಸಂಶೋಧನಾತ್ಮಕವಾಗಿ, ಸೋದಾಹರಣವಾಗಿ ವಿವೇಚಿಸುವ ಆಧಾರ ಗ್ರಂಥವಾಗಿದ್ದು, ಅನೇಕ ಆವೃತ್ತಿಗಳನ್ನು ಕಂಡಿರುವುದು ಅದರ ಮಹತ್ವವನ್ನು ಸಾರಿ ಹೇಳುತ್ತದೆ.

ಬೆಳಗಾಂವಿ ಜಿಲ್ಲೆಯ ಭಾಗೋಜಿಕೊಪ್ಪದಲ್ಲಿ ದಿ. ೧೫.೧೧.೧೯೦೭ರಂದು ಜನಿಸಿದ ದುಂಡಪ್ಪ ಸಿದ್ದಪ್ಪ ಕರ್ಕಿಯವರು ಧಾರವಾಡ ಕರ್ನಾಟಕ ಕಾಲೇಜಿನ ಬಿ.ಎ. ಹಾಗೂ ಮುಂಬಯಿ ವಿಶ್ವವಿದ್ಯಾಲಯದ ಎಂ.ಎ., ಬಿ.ಟಿ. ಪದವಿಗಳನ್ನು ಪಡೆದು, ಶಿಕ್ಷಕರಾಗಿ ಕೆಲಸ ಪ್ರಾರಂಭಿಸಿದ್ದು ಕಡಲತಡಿಯ ಕಾರವಾರದ ಸರಕಾರಿ ಹೈಸ್ಕೂಲಿನಲ್ಲಿ. ‘ಕವನಸೃಷ್ಟಿಯತ್ತ ನನ್ನ ದೃಷ್ಟಿ ಹರಿದುದು, ಸೃಷ್ಟಿಸೌಂದರ್ಯವನ್ನು ಎತ್ತಿತೋರಿ ಸಂತೋಷ ಸಾಗರದಲ್ಲಿ ಮನವನ್ನು ಮೀಯಿಸಿದ

ಕಾರವಾರದಲ್ಲಿ ೧೯೩೫ರಲ್ಲಿ' ಎಂದು ಅವರೇ ಒಂದೆಡೆ ನೆನೆದಿದ್ದಾರೆ. ಬೆಳಗಾಂವಿ ಲಿಂಗರಾಜ ಕಾಲೇಜಿನಲ್ಲಿ ಅಧ್ಯಾಪಕರಾಗಿ, ಹುಬ್ಬಳ್ಳಿ ಕಾಡಸಿದ್ಧೇಶ್ವರ ಕಾಲೇಜಿನಲ್ಲಿ ಪ್ರಾಚಾರ್ಯರಾಗಿ ನಿವೃತ್ತರಾದ ನಂತರ, ಅವರ ಸೇವೆಯ ಲಾಭವನ್ನು ನರೇಗಲ್ಲಿನ ಅನ್ನದಾನೇಶ್ವರ ಕಾಲೇಜು ಹಾಗೂ ಹುಬ್ಬಳ್ಳಿಯ ಮಹಿಳಾ ಕಾಲೇಜುಗಳು ಪಡೆದುಕೊಂಡವು. ಕೊನೆಯಲ್ಲಿ ಅವರು ಕರ್ನಾಟಕ ವಿಶ್ವವಿದ್ಯಾಲಯ ಕನ್ನಡ ವಿಭಾಗದಲ್ಲಿ ಯು.ಜಿ.ಸಿ. ಪ್ರಾಧ್ಯಾಪಕರಾಗಿದ್ದರು. ಹೀಗೆ ಶಿಕ್ಷಣ ಕ್ಷೇತ್ರದಲ್ಲಿ ಅವರು ಆಡಳಿತ ದಕ್ಷತೆ ಹಾಗೂ ಬೋಧನಕೌಶಲ ಎರಡನ್ನೂ ಸಾಧಿಸಿ ತೋರಿಸಿದರು.

ಕೇಂದ್ರ ಸಾಹಿತ್ಯ ಅಕಾಡೆಮಿಯ ಜನರಲ್ ಕೌನ್ಸಿಲ್ ಮತ್ತು ಕನ್ನಡ ಸಲಹಾ ಮಂಡಳಿಯ ಸದಸ್ಯರಾಗಿ ಕಾರ್ಯಮಾಡುವ ಗೌರವವನ್ನು ಪಡೆದ ಹಿರಿಯರಲ್ಲಿ ಅವರೊಬ್ಬರು. ಡಾ. ಹುಮಾಯೂನ ಕಬೀರರ ಕಾಲದಲ್ಲಿ ಕೇಂದ್ರಶಿಕ್ಷಣ ಇಲಾಖೆಯು ಯೋಜಿಸಿ ಪ್ರಾರಂಭಿಸಿದ ಅಖಿಲಭಾರತ ಲೇಖಕರ ಪ್ರಥಮ ಶಿಬಿರದ ಅಧ್ಯಕ್ಷರಾಗಿ, ಅದನ್ನು ಸಮರ್ಥವಾಗಿ, ಸುಗಮವಾಗಿ ನಿರ್ವಹಿಸಿದ್ದನ್ನು ಕಾಣುವ ಸದವಕಾಶ, ಅವರ ಜೊತೆಗೆ ಕನ್ನಡದ ಪ್ರತಿನಿಧಿಯಾಗಿದ್ದ ಈ ಲೇಖಕನಿಗೂ ಒದಗಿದ್ದಿತು. ಭಾರತ ಸರಕಾರದ 'ಸಂಸ್ಕೃತಿ ವಿನಿಮಯ ಯೋಜನೆ'ಯನ್ವಯ ೧೯೭೦ರಲ್ಲಿ ಫ್ರಾನ್ಸ್ ಮತ್ತು ರಶಿಯಾ ದೇಶಗಳಿಗೆ ಕಳುಹಿಸಿದ ಸಾಂಸ್ಕೃತಿಕ ನಿಯೋಗದ ಒಬ್ಬ ಸದಸ್ಯರಾಗಿ ಕರ್ಕಿಯವರು ಕರ್ನಾಟಕಕ್ಕೆ ಗೌರವವನ್ನು ತಂದುಕೊಟ್ಟರು. ಅವರು ಶಿಕ್ಷಣ ಹಾಗೂ ಸಾಹಿತ್ಯ ಕ್ಷೇತ್ರಕ್ಕೆ ಸಲ್ಲಿಸಿದ ಸೇವೆಯನ್ನು ಮನದಂದು, ಕರ್ನಾಟಕ ಸರಕಾರ ೧೯೭೮ರಲ್ಲಿ ಅವರಿಗೆ ಗೌರವ ಮಾಸಿಕ ವೇತನವನ್ನು ಕೊಡಮಾಡಿ ತನ್ನ ಪಾಲಿನ ಕರ್ತವ್ಯವನ್ನು ನೆರವೇರಿಸಿತು.

'ದುಃಖ ಮೂಸದ ಸುಖದ ಸಂವೇದನೆ'ಯನ್ನು ಪಡೆದುಕೊಂಡಿದ್ದ ಅವರ ಕಾವ್ಯಜೀವನ, ಕೊನೆಗಾಲದಲ್ಲಿ ದುಃಖ ಪರಂಪರೆಯನ್ನೇ ಎದುರಿಸಬೇಕಾಗಿ ಬಂದದ್ದು ಒಂದು ವಿಧಿಯ ವಿಪರ್ಯಾಸವೆನ್ನಬಹುದು. ಮಧುರವಾದ ದಾಂಪತ್ಯ ಜೀವನ ನಡೆಸಿ, ಕುಟುಂಬವತ್ಸಲರಾಗಿದ್ದ ಅವರಿಗೆ ಇಬ್ಬರು ಪುತ್ರರ ಅಕಾಲಮರಣವನ್ನು ಕಾಣುವ ದುರ್ಧರ ಪ್ರಸಂಗ ಒದಗಿತು. ಅದು ಅವರನ್ನು ಒಳಗೊಳಗೇ ಹಣ್ಣು ಮಾಡಿದ್ದರೂ, ಬಹಿರಂಗವಾಗಿ ತಮ್ಮ ಕಷ್ಟವನ್ನು ಅವರು ಎಂದೂ ತೋಡಿಕೊಂಡವರಲ್ಲ. ದಿ. ೧೬-೧-೧೯೮೪ರಂದು ತಮ್ಮ ೭೭ನೆಯ ವಯಸ್ಸಿನಲ್ಲಿ ಅವರು ತಮ್ಮ ಇಹಜೀವನವನ್ನು ಮುಗಿಸಿದಾಗ, ಕನ್ನಡ ಸರಸ್ವತಿಯ ಕಂಠಾಭರಣದ ಜಾತಿಮುತ್ತೊಂದು ಕಳಚಿದಂತಾಯಿತು.

('ಕಾವ್ಯ ಗೌರವ' ೧೯೯೧)

ಸಾಹಿತ್ಯ ಸಮಾಹಿತ : ೨೦೦೭

## ೧೭

## ಪಾಪು: ಕನ್ನಡದ ಕಾಪು

ಪಾಪು ಅವರನ್ನು ಕುರಿತು ಈ ಲೇಖನ ಪ್ರಾರಂಭಿಸುತ್ತಿದ್ದಂತೆಯೇ 'ಕಾಪು' ಎನ್ನುವ ಪದ ತಕ್ಷಣ ನನ್ನ ಮನಸ್ಸಿಗೆ ಹೊಳೆಯಿತು. ('ಕಾಪು' ಎಂದರೆ ಕಾವಲು; ಬೇಲಿ; ಪ್ರಾಕಾರದ ಗೋಡೆ ಇತ್ಯಾದಿ) ಹೀಗೆ ಒಮ್ಮೊಮ್ಮೆ ಪ್ರಾಸ ಅರ್ಥಪೂರ್ಣವಾಗುವುದುಂಟು. ಈ ಸಂದರ್ಭದಲ್ಲಂತೂ ಅದು ಇನ್ನೂ ಹೆಚ್ಚು ಔಚಿತ್ಯಪೂರ್ಣವಾಗಿದೆ.

ಕರ್ನಾಟಕ ಏಕೀಕರಣ ಚಳವಳಿ ಪ್ರಾರಂಭವಾದಾಗಿನಿಂದ ಹಿಡಿದು ಇಂದಿನವರೆಗೂ ಕನ್ನಡದ ಹಿತರಕ್ಷಣೆ ಹಾಗೂ ಅದರ ಸರ್ವತೋಮುಖ ಏಳಿಗೆಯ ಬಗ್ಗೆ ಚಿಂತನ-ಮಂಥನ ನಡೆಸುತ್ತ, ಅಭ್ಯಾಸಪೂರ್ಣವಾಗಿ ಬರೆಯುತ್ತ; ದನಿ ಎತ್ತಿ ಮಾತನಾಡುತ್ತ, ಚಳವಳಿಗಳಲ್ಲಿ ಉತ್ಸಾಹದಿಂದ ಭಾಗವಹಿಸುತ್ತ, ವಿರೋಧಿಗಳನ್ನು ಲೆಕ್ಕಿಸದೆ ನಿಷ್ಠುರವಾಗಿ ನಡೆದುಕೊಂಡು ಬಂದವರಲ್ಲಿ ಪಾಟೀಲ ಪುಟ್ಟಪ್ಪನವರು ಅಗ್ರಗಣ್ಯರೆಂದೇ ಹೇಳಬಹುದು.

ನಾನು ಮೊಟ್ಟಮೊದಲು ಅವರ ಲೇಖನಗಳನ್ನು ಓದಿದ್ದು ಬಸವರಾಜ ಕಟ್ಟೀಮನಿಯವರು ಸಂಪಾದಿಸುತ್ತಿದ್ದ 'ಉಷಾ' ಮಾಸಪತ್ರಿಕೆಯಲ್ಲಿ (೧೯೪೩-೪೫). ಅಂದಿನ ಪ್ರಗತಿಶೀಲ ಲೇಖಕರಲ್ಲಿ ಅವರೂ ಒಬ್ಬರಾಗಿದ್ದರು. ಆಗ, 'ಮಾಸ್ತಿಯವರಿಗೆ ಒಂದು ಬಹಿರಂಗ ಪತ್ರ' ಬರೆದ ಧೈರ್ಯ ಅವರದಾಗಿತ್ತು. ಅಮೇರಿಕೆಯಲ್ಲಿ ಪತ್ರಿಕೋದ್ಯಮದ ಅಭ್ಯಾಸ ಮುಗಿಸಿಕೊಂಡು ಬಂದು, ತಲೆತುಂಬ ವಿಚಾರಗಳನ್ನಿಟ್ಟುಕೊಂಡು, ಹುಬ್ಬಳ್ಳಿ-ಧಾರವಾಡಗಳ ನಡುವೆ ಅವರು ಓಡಾಡುತ್ತಿದ್ದಾಗ ನನಗೆ ಅವರ ಮೊದಲ ಪರಿಚಯವಾಯಿತು. ನಾನಾಗ ಕಾಲೇಜು ವಿದ್ಯಾರ್ಥಿ. ಮಾಳಮಡ್ಡಿಯಲ್ಲಿದ್ದ ನನ್ನ ಕೋಣೆಗೂ ಅವರು ಆಗಾಗ ಬರುತ್ತಿದ್ದರು. ತಮ್ಮ ಅಪಾರವಾದ ಕಾವ್ಯಪ್ರೇಮದಿಂದ ಬಹುಬೇಗ ಅವರು ನನ್ನ ಮನಸ್ಸನ್ನು ಗೆದ್ದುಕೊಂಡರು. ಉತ್ತಮ ಪತ್ರಿಕಾಕರ್ತರಾಗಲಿರುವ ಅವರ ಹೆಬ್ಬಯಕೆಯ ಕುದಿಯನ್ನು ನಾನವರಲ್ಲಿ ಪ್ರತ್ಯಕ್ಷ ಕಂಡಿದ್ದೆ. 'ವಿಶಾಲ ಕರ್ನಾಟಕ'ವನ್ನು ತಬ್ಬಿಕೊಂಡು, 'ನವಯುಗ' ನಿರ್ಮಾಣದಲ್ಲಿ ಹಾಯ್ದು 'ಪ್ರಪಂಚ'ವನ್ನು ಪ್ರಾರಂಭಿಸಿ ಸ್ವತಂತ್ರವಾಗಿ ಅವರು ನೆಲೆಗೊಂಡ ಮೇಲೆ ಉತ್ತರ ಕರ್ನಾಟಕದ ಪತ್ರಿಕೋದ್ಯಮದಲ್ಲಿ ಹೊಸ ಅಲೆಯೊಂದು ಪ್ರಾರಂಭವಾಯಿತೆನ್ನಬಹುದು. ಇಡಿಯ ಕನ್ನಡ ನಾಡಿನ ಹಿತವನ್ನು ಮುಖ್ಯವಾಗಿ ಲಕ್ಷ್ಯದಲ್ಲಿಟ್ಟುಕೊಂಡು ದೇಶದ ಹಾಗೂ ಜಾಗತಿಕ ರಾಜಕೀಯ ಪರಿಜ್ಞಾನದೊಂದಿಗೆ ವಿಚಾರ ಪ್ರಚೋದನೆಗೆ ಅದು ಇಂಬುಗೊಟ್ಟ ರೀತಿ ಅನನ್ಯವಾಗಿದ್ದಿತು. (ಆದರೆ 'ಪ್ರಪಂಚ' ಒಂದು ಸಂಸ್ಥೆಯಾಗಿ ಬೆಳೆಯಲಿಲ್ಲವಲ್ಲ ಎಂಬ ಕೊರಗು ನನ್ನಂಥವರಿಗೆ ಇದ್ದೇ ಇದೆ).

ಸಾಹಿತ್ಯಿಕ ಪ್ರವೃತ್ತಿಯುಳ್ಳ ಪತ್ರಿಕೋದ್ಯಮಿ ಉತ್ತಮ ಲೇಖಕನೂ ಆಗಿರುವಾಗ ಅವನಿಂದ ನಾಡು-ನುಡಿಗೆ ಎಂಥ ಬೆಲೆಯುಳ್ಳ ಸೇವೆ ಸಲ್ಲುತ್ತದೆಂಬುದಕ್ಕೆ ಪಾಪು ಹಾಗೂ ಪಾ. ವೆಂ. ಆಚಾರ್ಯರಂಥವರು ಸಾಕ್ಷಿಯಾಗುತ್ತಾರೆ. ಪಾಪು ಅವರ ಮೊದಲ ಕಥಾ ಸಂಗ್ರಹ 'ಸಾವಿನ ಮೇಜವಾನಿ' ಪ್ರಕಟವಾದದ್ದು ೧೯೪೪ರಷ್ಟು ಹಿಂದೆ. 'ದಿನಕ್ಕೊಂದು ಕಥೆ ನಾನು ಬರೆಯಬಲ್ಲೆ' ಎನ್ನುವ ಅವರ ಸಾಮರ್ಥ್ಯ ದೇಶದ ರಾಜಕೀಯ-ಕಥೆ-ವ್ಯಥೆಯ ನಿರೂಪಣೆಯನ್ನು ತನ್ನ ಸಾರ್ಥಕ್ಯವನ್ನು ಪಡೆದುಕೊಳ್ಳುತ್ತಿರಬಹುದು. 'ನಮ್ಮ ದೇಶ, ನಮ್ಮ ಜನ' 'ಈಗ ಹೊಸದನ್ನು ಕಟ್ಟೋಣ ನಾವು' ಎಂಬ ಲೇಖನ ಸಂಗ್ರಹಗಳ ಶೀರ್ಷಿಕೆಗಳೇ ಅವರ ವಿಚಾರಧಾರೆಯ ದಿಕ್ಕನ್ನು ಸೂಚಿಸುತ್ತವೆ. ಕನ್ನಡ ನಾಡಿನ ಎಲ್ಲ ಜಿಲ್ಲೆಗಳ ಬಗ್ಗೆ ಹಾಗೂ ನಮ್ಮ ದೇಶದ ಎಲ್ಲ ರಾಜ್ಯಗಳ ಬಗ್ಗೆ ಬರೆದ 'ನನ್ನದು ಈ ಕನ್ನಡ ನಾಡು' 'ನಮ್ಮದೀ ಭರತಭೂಮಿ' ಎಂಬ ಪುಸ್ತಕಗಳಿಗೆ ಹೆಸರಿಡುವುದರಲ್ಲಿ ಹಾಗೂ ಅವುಗಳನ್ನು ಪ್ರಕಟಿಸುವಲ್ಲಿ ನಾನೂ ಪಾಲುಗಾರನಾಗಿರುವುದು ನನಗೆ ಸಂತೋಷದ ಸಂಗತಿ. (ಇವೆರಡೂ ಕ.ವಿ.ವಿ. ಪ್ರಸಾರಾಂಗದ ಪ್ರಕಟನೆಗಳು) ವ್ಯಕ್ತಿಚಿತ್ರಗಳನ್ನು ರೇಖಿಸುವಲ್ಲಿಯೂ ಅವರ ಸೂಕ್ಷ್ಮ ನಿರೀಕ್ಷಣೆ ಹಾಗೂ ದೇಶಿ ನುಡಿಯ ಸೊಗಸು ಎದ್ದು ಕಾಣುವಂಥದು.

ಹತ್ತು ವರ್ಷಗಳ ಹಿಂದೆ ನಡೆದ 'ಗೋಕಾಕ ಚಳುವಳಿ'ಯನ್ನು ಕನ್ನಡಿಗರಾರೂ ಮರೆತಿರಲಾರರು. (ಕೆಲವರು ಮರೆತಿದ್ದರೂ ಮರೆತಿರಬಹುದು. ಬೇಂದ್ರೆಯವರು ಕನ್ನಡಿಗರನ್ನು ಕುರಿತು ಬರೆದ ಒಂದು ಪದ್ಯದಲ್ಲಿ ವ್ಯಂಗ್ಯವಾಗಿ ನುಡಿದಿದ್ದಾರೆ : 'ಕೃತಿಯು ಘನ, ವಿಸ್ಮೃತಿಯೂ ಘನ, ದೊಡ್ಡವರು') ಧಾರವಾಡದ ಅ.ಕ. ಕನ್ನಡ ಕ್ರಿಯಾ ಸಮಿತಿ ಪ್ರಾರಂಭಿಸಿದ ಆ ಆಂದೋಲನ ಕರ್ನಾಟಕಾದ್ಯಂತ ಹಬ್ಬಿ ಕನ್ನಡಿಗರನ್ನೆಲ್ಲ ಬಡಿದೆಬ್ಬಿಸಿದ್ದು ಒಂದು ಅಭೂತಪೂರ್ವವಾದ ಸಂಗತಿ, ಪ್ರೌಢಶಾಲೆಗಳ ಭಾಷಾಬೋಧನೆಯಲ್ಲಿ ಕನ್ನಡಕ್ಕೆ ಅಗ್ರಮಾನ್ಯ ಸ್ಥಾನವಿರಬೇಕೆಂಬ ಗೋಕಾಕ ವರದಿಯ ಆಶಯವನ್ನು ಈಡೇರಿಸಲು ಅಹಿಂಸಾತ್ಮಕವಾಗಿ, ಅತ್ಯಂತ ಶಿಸ್ತಿನಿಂದ ನಡೆಸಿದ ಹೋರಾಟ ಅದಾಗಿತ್ತು. ಕ್ರಿಯಾಸಮಿತಿಯ ಅಧ್ಯಕ್ಷರಾಗಿದ್ದು ಅನಾರೋಗ್ಯದಲ್ಲಿಯೂ ನಿರಶನ ಸತ್ಯಾಗ್ರಹದ ಪ್ರಾರಂಭದಲ್ಲಿ ಪಾಲ್ಗೊಂಡಿದ್ದ ಡಾ. ಶಂ.ಬಾ. ಜೋಶಿಯವರನ್ನೂ, ಕ್ರಿಯಾಸಮಿತಿಯ ಕಾರ್ಯಾಧ್ಯಕ್ಷರಲ್ಲಿ ಒಬ್ಬರಾಗಿದ್ದು, ಪಾಪು ಅವರನ್ನು ಕಾರ್ಯನಿರ್ವಾಹಕ ಅಧ್ಯಕ್ಷರಾಗಲು ಪ್ರೇರೇಪಿಸಿದ ಬಸವರಾಜ ಕಟ್ಟೀಮನಿಯವರನ್ನೂ ಈ ಸಂದರ್ಭದಲ್ಲಿ ನೆನೆಯಬೇಕು.

ಸ್ವಾತಂತ್ರ್ಯ ಹೋರಾಟ ಹಾಗೂ ಏಕೀಕರಣ ಚಳವಳಿಗಳಲ್ಲಿ ಭಾಗವಹಿಸಿ ಅನುಭವ ಪಡೆದ ಹಿನ್ನೆಲೆಯಲ್ಲಿ ಪಾಪು ಅವರು ಕ್ರಿಯಾಸಮಿತಿಯ ಸ್ನೇಹಿತರೊಡನೆ ಚಳವಳಿ ಅತ್ಯಂತ ರಭಸದಿಂದ ಮುಂದುವರಿಯುವಂತೆ ನೋಡಿಕೊಂಡರು. ತಮ್ಮಲ್ಲಿ ಸ್ವಾಭಾವಿಕವಾಗಿದ್ದ ಮಂದಾಳ್ತನದ ಗುಣದೊಂದಿಗೆ ಪತ್ರಕರ್ತರ ಚಾಣಾಕ್ಷತೆಯನ್ನೂ ಉಪಯೋಗಿಸಿ ನಟ ಸಾರ್ವಭೌಮ ಡಾ. ರಾಜಕುಮಾರ ಅವರನ್ನು ಆ ಆಂದೋಲನದಲ್ಲಿ ಧುಮುಕುವಂತೆ ಮಾಡಿದ ಶ್ರೇಯಸ್ಸಿನ ಬಹುಪಾಲು ಪಾಪು ಅವರಿಗೆ ಸಲ್ಲುತ್ತದೆ. ಅವರ ಕಾರ್ಯವಿಧಾನದ ಬಗ್ಗೆ ಹಾಗೂ

ಕೆಲವು ಸಲ ಅವರು ತೆಗೆದುಕೊಳ್ಳುತ್ತಿದ್ದ ಏಕಪಕ್ಷೀಯವೆನ್ನಬಹುದಾದ ನಿರ್ಧಾರಗಳ ಬಗ್ಗೆ ಕಾರ್ಯಕಾರಿ ಸಮಿತಿಯ ಕೆಲವು ಸದಸ್ಯರು ಒಳಗೊಳಗೆ ಅಸಮಾಧಾನಪಟ್ಟುಕೊಳ್ಳುತ್ತಿದ್ದರಾದರೂ ಚಳವಳಿಯ ಕಾವಿನಲ್ಲಿ ಅದನ್ನು ಹೇಳಿಕೊಳ್ಳುವಂಥ ದೋಷವಾಗಿ ಯಾರೂ ಪರಿಗಣಿಸಿರಲಿಲ್ಲ. ಹೋರಾಟದ ಯಶಸ್ಸಿನ ಸಂತೋಷದಲ್ಲಿ ಎಲ್ಲರೂ ಸಮಭಾಗಿಗಳಾಗಿದ್ದರು.

ಹೊಸತಾಗಿ ಅಧಿಕಾರಕ್ಕೆ ಬಂದ ಜನತಾ ಸರಕಾರ ಗೋಕಾಕ ಭಾಷಾಸೂತ್ರ ಅನುಷ್ಠಾನದ ಬಗ್ಗೆ ಹಾಗೂ ಕನ್ನಡದ ಇತರ ಸಮಸ್ಯೆಗಳ ಬಗ್ಗೆ ಅಲಕ್ಷ್ಯದಿಂದ ವರ್ತಿಸತೊಡಗಿದಾಗ ಕೇಂದ್ರ ಕ್ರಿಯಾಸಮಿತಿ ಎರಡನೆ ಹಂತದ ಚಳವಳಿಯನ್ನು ಪ್ರಾರಂಭಿಸುವ ಸಿದ್ಧತೆಯಲ್ಲಿದ್ದಾಗ ಪಾಪು ಅವರು ಸಮಿತಿಯೊಂದಿಗೆ ಮೊದಲಿನಂತೆಯೇ ಸಹಕರಿಸಿದ್ದರೆ ಅವರ ವ್ಯಕ್ತಿತ್ವಕ್ಕೆ ಇನ್ನೂ ಹೆಚ್ಚಿನ ಮಹತ್ವ ಒದಗುತ್ತಿತ್ತೆಂಬುದು ನನ್ನ ವೈಯಕ್ತಿಕ ಅಭಿಪ್ರಾಯ.

ಅದೇನೇ ಇರಲಿ, ಮುಂದೆ ಅವರ ಕಾರ್ಯವೈಖರಿಗೆ ತಕ್ಕಂಥ ಕನ್ನಡ ಕಾವಲು ಸಮಿತಿಯ ಅಧ್ಯಕ್ಷ ಸ್ಥಾನ ಅವರಿಗೆ ದೊರಕಿದ್ದು ಕನ್ನಡಿಗರ ಭಾಗ್ಯವೆಂದೇ ಹೇಳಬೇಕು. ಈಗ ಮುಖ್ಯಮಂತ್ರಿ ಹೆಗಡೆಯವರು ಅವರ ಬೆಂಬಲಕ್ಕಿದ್ದುದರಿಂದ ಆಡಳಿತದಲ್ಲಿ ಕನ್ನಡವನ್ನು ಜಾರಿಗೆ ತರುವಲ್ಲಿ ಅದ್ಭುತವಾಗಿ ಕೆಲಸ ಮಾಡಿ ತೋರಿಸಲು ಅವರಿಗೆ ಸಾಧ್ಯವಾಯಿತು. ಅವರ ಈ ಕಾರ್ಯವನ್ನು ಪ್ರಶಂಸಿಸಿ-ಅಲ್ಲಲ್ಲಿ ಅಸಹನೆ, ಉತ್ಪ್ರೇಕ್ಷೆಗಳಿದ್ದರೂ ಮರಾಠಿ 'ಲೋಕಸತ್ತಾ'ಪತ್ರಿಕೆ ಸಂಪಾದಕೀಯ ಬರೆಯುತ್ತ (೬-೮-೮೯) "ಮರಾಠಿ ಮಾತೆಯೂ ಸಹ ಇಂದು ಇಂತಹ 'ಮರಾಠಿ ಪುಟ್ಟಪ್ಪ'ನ ಅವತಾರದ ಮಾರ್ಗ ನಿರೀಕ್ಷಿಸುತ್ತಿದ್ದಾಳೆ" ಎಂದಿರುವುದನ್ನು ನೋಡಿದರೆ ಪಾಪು ಅವರ ಕನ್ನಡದ ಕೆಲಸ ಎಷ್ಟು ಪರಿಣಾಮಕಾರಿಯಾಗಿತ್ತೆಂಬುದರ ಕಲ್ಪನೆ ಬರಬಹುದಾಗಿದೆ. ಹಾ.ಮಾ. ನಾಯಕರು ಹೇಳಿರುವಂತೆ, "ಪುಟ್ಟಪ್ಪನವರ ವಿಷಯದಲ್ಲಿ ನೂರು ಜನರು ನೂರು ಮಾತು ಆಡಬಹುದು. ಆದರೆ ಅವರ ಕನ್ನಡ ಪ್ರೀತಿಯನ್ನು ಆ ಕುರಿತ ಕಾರ್ಯಕ್ಷಮತೆಯನ್ನು ಯಾರೂ ಪ್ರಶ್ನಿಸಲಾರರು. ಅವರು ತಮ್ಮ ಕೆಲಸವನ್ನು ಯಾವ ಮುಲಾಜೂ ಇಲ್ಲದೆ ನಿರ್ವಹಿಸಿದರು". ಅಂತೆಯೇ ನಮ್ಮ ನಡುವೆ - ಈ ಹಿಂದೆ - ಒಂದೆರಡು ಭಿನ್ನಾಭಿಪ್ರಾಯ ತಲೆದೋರಿದಾಗಲೂ ಪರಸ್ಪರ ಗೌರವಕ್ಕೆ ಹಾಗೂ ಆತ್ಮೀಯತೆಗೆ ಯಾವ ಕುಂದೂ ಉಂಟಾಗಿಲ್ಲದಿರುವುದನ್ನು ನಾನು ಅತ್ಯಂತ ಸಂತೋಷದಿಂದ ನೆನೆದುಕೊಳ್ಳುತ್ತೇನೆ.

ಕನ್ನಡಪರ ಸಂಘಟನೆಗಳು ಮತ್ತೆ ಒಂದುಗೂಡಿ, ತಮ್ಮ ಶಕ್ತಿಯನ್ನು ಕ್ರೋಡೀಕರಿಸಿ, ಬೆಳೆಯುತ್ತಿರುವ ಕನ್ನಡ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ಮುಂದಾಗಬೇಕೆಂಬ ಕಳಕಳಿಯನ್ನು ಅವರು ಇತ್ತೀಚೆಗೆ ಅನೇಕ ವೇದಿಕೆಗಳಲ್ಲಿ ವ್ಯಕ್ತಪಡಿಸುತ್ತಿರುವುದುಂಟು. 'ಕರ್ನಾಟಕ ವಿಕಾಸ ವೇದಿಕೆ' ಅಂಥ ಒಂದು ಪ್ರಯತ್ನವನ್ನು ಕೈಕೊಂಡಿರುವ ಈ ಸಂದರ್ಭದಲ್ಲಿ ಅದರ ಸಲಹೆಗಾರರಲ್ಲಿ ಒಬ್ಬರಾಗಿರುವ ಪಾಪು ಅವರಿಂದ ಇನ್ನೂ ಹೆಚ್ಚಿನ ಮುತ್ಸದ್ದಿತನವನ್ನು ನಿರೀಕ್ಷಿಸಿದರೆ ತಪ್ಪಾಗದು.

('ಪ್ರಪಂಚದ ಪಾಪು' ೧೯೯೩)

ಸಾಹಿತ್ಯ ಸಮಾಹಿತ : ೨೦೦೬

## ೧೮

## ಹಿರೇಮಲ್ಲೂರು ಈಶ್ವರನ್ : ಒಂದು ಅದ್ಭುತ ಚೇತನ

ತಾಯಿ, ತಾಯ್ನುಡಿ, ತಾಯ್ನಾಡು ಎಂದರೆ ಪಂಚಪ್ರಾಣವಾಗಿದ್ದ ಡಾ. ಹಿರೇಮಲ್ಲೂರು ಈಶ್ವರನ್ ಧಾರವಾಡದಲ್ಲಿಯೇ ತಮ್ಮ ಆಪ್ತಮಿತ್ರರ ಮಧ್ಯದಲ್ಲಿಯೇ ಕೊನೆಯುಸಿರೆಳೆದದ್ದು ಕಾಕತಾಳೀಯವೇನೂ ಅಲ್ಲ. ಅದು ಅವರ ಪ್ರಬಲವಾದ ಇಚ್ಛಾಶಕ್ತಿಯ ದ್ಯೋತಕವೇ ಆಗಿತ್ತು.

೨೨-೬-೧೯೯೮ ರಂದು ನಮ್ಮನ್ನಗಲಿದ ಈಶ್ವರನ್, ಪ್ರತಿಭೆ, ಅದಕ್ಕೂ ಹೆಚ್ಚಿನ ಪರಿಶ್ರಮ, ಸಾಹಸ, ಛಲ, ಬಂಡುಗಾರಿಕೆ ಇವೆಲ್ಲದರ ಪ್ರತೀಕವೆನಿಸಿದ್ದರು. ಹೋರಾಟವನ್ನೇ ಜೀವನದುಸಿರನ್ನಾಗಿ ಮಾಡಿಕೊಂಡ ಅವರು ತಮ್ಮ ಸಾಧನೆಯ ಮಾರ್ಗದಲ್ಲಿ ಎದುರಾಗುವ ಯಾವುದೇ ಸವಾಲನ್ನು ಎದುರಿಸಿ ಜಯಶಾಲಿಯಾಗುವ ಅಖಂಡ ಧೈರ್ಯವನ್ನು ಮೊದಲಿನಿಂದಲೂ ಮೈಗೂಡಿಸಿಕೊಂಡಿದ್ದರು.

ಅಂತಾರಾಷ್ಟ್ರೀಯ ಖ್ಯಾತಿಯ ಈ ಸಾಮಾಜಿಕ ಮಾನವಶಾಸ್ತ್ರಜ್ಞ ಮೂಲತಃ ಕನ್ನಡ ಎಂ.ಎ ಹಾಗೂ ಕನ್ನಡದಲ್ಲಿ ಪಿಎಚ್.ಡಿ (ಹರಿಹರನ ರಗಳೆಗಳ ಸಂಖ್ಯಾ ನಿರ್ಣಯ) ಪಡೆದವರೆಂಬುದನ್ನು ಕೆಲವರು ಅಷ್ಟಾಗಿ ಗಮನಿಸಿದಂತೆ ತೋರುವುದಿಲ್ಲ. ಅವರ ಜೀವನದ ವೀರಗಾಥೆಯಂತಿರುವ 'ವಲಸೆ ಹೋದ ಕನ್ನಡಿಗನ ಕಥೆ' ನಮ್ಮ ಇಂದಿನ ಯುವಕರು, ಅವಶ್ಯವಾಗಿ ಓದಬೇಕಾದ ಗ್ರಂಥಗಳಲ್ಲಿ ಒಂದು ಎಂದರೆ ತಪ್ಪಾಗದು.

ಟೊರಂಟೋದ ಯಾರ್ಕ್ ವಿಶ್ವವಿದ್ಯಾಲಯದಲ್ಲಿ ಸಮಾಜಶಾಸ್ತ್ರದ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸುತ್ತ ಅಂತಾರಾಷ್ಟ್ರೀಯ ಮಟ್ಟದಲ್ಲಿ ಮೂರು ಮಹತ್ವದ ಜರ್ನಲ್‌ಗಳನ್ನು ನಡೆಸುತ್ತ, ಅಂತಾರಾಷ್ಟ್ರೀಯ ಗ್ರಂಥ ವಿಭಾಗದಲ್ಲಿ ಹತ್ತಾರು ಕೃತಿಗಳನ್ನು ಬರೆದು ಸಂಪಾದಿಸಿದ ಶ್ರೇಯಸ್ಸು ಅವರದಾಗಿದೆ. ಜಗತ್ತಿನ ಉನ್ನತಮಟ್ಟದ ಜರ್ನಲ್‌ಗಳಲ್ಲಿ ಅವರ ಐವತ್ತಕ್ಕೂ ಹೆಚ್ಚು ಪ್ರಬಂಧಗಳು ಪ್ರಕಟಗೊಂಡಿವೆ. ನಿತ್ಯಜೀವನದಲ್ಲಿ ಶಿಸ್ತು ಹಾಗೂ ಅಚ್ಚುಕಟ್ಟುತನಕ್ಕೆ, ಸತತೋದ್ಯೋಗಕ್ಕೆ ಎಷ್ಟು ಮಹತ್ವವನ್ನು ಅವರು ಕೊಟ್ಟಿದ್ದರೋ ತಮ್ಮ ಬರವಣಿಗೆ ಹಾಗೂ ಪಾಂಡಿತ್ಯಕ್ಕೂ ಅದನ್ನು ಸಂಪೂರ್ಣ ಅಳವಡಿಸಿಕೊಂಡಿದ್ದರು.

ಕೆನಡಾದಲ್ಲಿಯೇ ಕುಟುಂಬದೊಡನೆ ವಾಸವಾಗಿದ್ದರೂ ವರ್ಷ ಎರಡು ವರ್ಷಕ್ಕೆ ಬೇಸಿಗೆಗಾಲದಲ್ಲಿ ಕರ್ನಾಟಕಕ್ಕೆ ಬಂದು ನಾಲ್ಕೈದು ತಿಂಗಳು ಇದ್ದು ಹೋಗುವುದನ್ನು ಅವರು ತಪ್ಪಿಸಲಿಲ್ಲ. ತಾಯ್ನಾಡಿನ ಕರೆ ಅವರಿಗೆ ಅಷ್ಟೊಂದು ತೀವ್ರವಾಗಿತ್ತು. ಬಂಧು ಬಳಗದ,

ಸ್ನೇಹಿತರ ಹಾಗೂ ಹಿತೈಷಿಗಳ ಭೆಟ್ಟಿಯಲ್ಲಿ ಅವರ ಹೃದಯ ಪುಲಕಗೊಳ್ಳುತ್ತಿತ್ತು. ಧಾರವಾಡದ ಮನೆ 'ಕಲ್ಪನಾ' ಆಗ ಔತಣಕೂಟಗಳಿಗೆ ಸಂಭ್ರಮದಿಂದ ಅಣಿಗೊಳ್ಳುತ್ತಿತ್ತು. ಬಂದ ಸಲಕ್ಕೊಮ್ಮೆ ಸಂಶೋಧನೆಯ ಕ್ಷೇತ್ರಕಾರ್ಯ ಹಾಗೂ ಬರವಣಿಗೆಯ ಯೋಜನೆಗಳನ್ನು ಹಾಕಿಕೊಂಡೇ ಬರುತ್ತಿದ್ದರಲ್ಲದೆ ಅವುಗಳನ್ನು ನಿಯಮಿತವಾಗಿ ಪೂರೈಸಿಕೊಂಡೇ ಹಿಂದಿರುಗುತ್ತಿದ್ದರು. ಅವರ ಈ ದುಡಿಮೆ ಯಾರನ್ನಾದರೂ ಬೆರಗುಗೊಳಿಸುವಂತಿತ್ತು.

. ಆದರೆ, ೧೯೯೬ರಲ್ಲಿ ಅವರು ಧಾರವಾಡಕ್ಕೆ ಬಂದಾಗ ಅವರು ಎಂದಿನ ಈಶ್ವರನ್ ಆಗಿರಲಿಲ್ಲ. ನುಗಿಸಿದರೆ ಎಲ್ಲಿಬಿದ್ದು ಬಿಡುತ್ತಾರೊ ಎನ್ನುವಷ್ಟು ಅವರ ದೇಹ ದುರ್ಬಲಗೊಂಡಿತ್ತು. ಕಿಬ್ಬೊಟ್ಟೆಯ ಶಸ್ತ್ರಕ್ರಿಯೆಯಿಂದ ಕ್ಷೀಣಗೊಂಡು ಕಂದಿ, ಕುಂದಿ ಹೋಗಿದ್ದರು. ಈ ನಾಡಿಗೆ ಇದೇ ಕೊನೆಯ ಭೆಟ್ಟಿ ಎಂಬ ತೆರದಲ್ಲಿ ಕಂಡವರೊಡನೆ ಅವರು ಕಂಬನಿಗರೆಯುತ್ತಿದ್ದರು. ಆದರೆ ಇಲ್ಲಿಯ ಹೋಮಿಯೊಪತಿ ಚಿಕಿತ್ಸೆಯಿಂದ ಅವರು ಆಶ್ಚರ್ಯಕರ ರೀತಿಯಲ್ಲಿ ಚೇತರಿಸಿಕೊಂಡು ಇದ್ದುದರಲ್ಲಿ ಗುಣಮುಖರಾದರು.

ಆ ಜೀವ ಸುಮ್ಮನೆ ಕೂಡಲಿಲ್ಲ. ಯೋಜಿಸಿಕೊಂಡು ಬಂದ ಕೆಲಸವನ್ನು ಮತ್ತೆ ಕೈಗೆತ್ತಿಕೊಂಡರು. ಡೈನಿಂಗ್ ಟೇಬಲ್ಲನ್ನೇ ಅವರು ತಮ್ಮ ಬರೆವಣಿಗೆಗೂ ಉಪಯೋಗಿಸುತ್ತಿದ್ದರು. ಪುಸ್ತಕಗಳನ್ನು, ಸಂದರ್ಭ ಗ್ರಂಥಗಳನ್ನೂ ಹರವಿಕೊಂಡು ಕೂಡಲು ಅದು ಪ್ರಶಸ್ತವೆನಿಸುತ್ತಿತ್ತು. ಕರ್ನಾಟಕದ ಧರ್ಮಗಳ ಬಗೆಗಿನ ಅಧ್ಯಯನ ಹಾಗೂ ಬರವಣಿಗೆ ಮುಂದುವರಿಯಿತು.

ಜೊತೆಗೆ ತಮ್ಮನ್ನು ಅತೀವ ಸಂಕಟಕ್ಕೊಳಪಡಿಸಿದ ಮಗಳ ದುರಂತ ಕಥೆಯನ್ನು 'ನನ್ನ ಮಗಳು ಅರುಂಧತಿ'ಯಲ್ಲಿ ಕಾದಂಬರಿ ರೂಪಕ್ಕಿಳಿಸಿ ಮನಸ್ಸನ್ನು ಹಗುರಗೊಳಿಸಿಕೊಂಡರು. ಮತ್ತೊಂದು ಕಾದಂಬರಿಗೆ ಹೂಳಹು ಹಾಕಿದರು. ಹೀಗೆ ಈಶ್ವರನ್ ಮರುಜನ್ಮ ಪಡೆದು ಕೆನಡಾಕ್ಕೆ ಹಿಂದಿರುಗಿದರು.

ಮರುವರ್ಷ ೧೯೯೭ರಲ್ಲಿ ಎಂದಿನಂತೆ ಧಾರವಾಡಕ್ಕೆ ಬಂದದ್ದು ನನಗೆ ಗೊತ್ತಾದದ್ದು ಫೋನಿನಲ್ಲಿ, ಅವರು ನನ್ನೊಡನೆ ಮಾತನಾಡಿದಾಗ. ಮಾತು ಅಸ್ಪಷ್ಟವಾಗಿ ತೊದಲಿದಂತೆ ಕೇಳಿದಾಗಲೇ ನನ್ನ ಮನಸ್ಸಿನಲ್ಲಿ ಮೂಡಿದ ಸಂಶಯ ಅವರನ್ನು ಹೋಗಿ ಕಂಡಾಗ ದೃಢಪಟ್ಟಿತು. ಸೌಮ್ಯರೀತಿಯ ಪಾರ್ಶ್ವವಾಯು ಅವರಿಗೆ ಆತಂಕ ಒಡ್ಡಿತ್ತು. ಆದರೂ ಅವರು ಧೈರ್ಯ ಗುಂದಿರಲಿಲ್ಲ. ಸ್ಥಳೀಯ ಚಿಕಿತ್ಸೆ ಆಶಾದಾಯಕವಾಗಿ ಕಂಡು ಬಂದಿತು.

ಯಥಾಪ್ರಕಾರ ಪಟ್ಟು ಹಿಡಿದು ಕುಳಿತು ಹಿಂದೆ ಪ್ರಾರಂಭಿಸಿದ್ದ ಬರೆವಣಗೆಯನ್ನು ಪೂರ್ತಿಗೊಳಿಸಿದರು. "ಲಿಂಗಾಯತ, ಜೈನ್ ಮತ್ತು ಬ್ರಾಹ್ಮಣ ಧರ್ಮಗಳು: ಮತಗಳ ಒಂದು ತೌಲನಿಕ ಅಧ್ಯಯನ" ಗ್ರಂಥ ಮುದ್ರಣಗೊಂಡು ಬೆಂಗಳೂರಿನಲ್ಲಿ ಬಿಡುಗಡೆಯಾಯಿತು. ಅಸ್ವಸ್ಥತೆಯಲ್ಲಿಯೂ ಅವರ ಮುಖ ಗೆಲುವಿನಿಂದ ತೃಪ್ತಿಯಿಂದ ಮಿನುಗಿತು.

೧೯೯೮ ಕೆನಡಾದಿಂದ ಮತ್ತೆ ಕನ್ನಡ ನಾಡಿಗೆ 'ಕಲ್ಪನಾ' ಮನೆಯ ಕುರ್ಚಿಯಲ್ಲಿ ಕುಳಿತ ಈಶ್ವರನ್ ಈ ಸಲ ಇನ್ನಿಷ್ಟು ಇಳಿದು ಹೋಗಿದ್ದರು. ಒಂದೊಂದೇ ಶಬ್ದ ಮಾತಾಡುತ್ತಿದ್ದರು.

ಬರೆಯಲು ಯೋಚಿಸಿದ್ದ ಇನ್ನೂ ಮೂರು ಗ್ರಂಥಗಳನ್ನು ಬರೆಯಲು ಸಾಧ್ಯವಾಗದ್ದಕ್ಕೆ ಕಣ್ಣು ಮತ್ತೆ ಹನಿ ಗೂಡುತ್ತಿದ್ದವು, ಗಂಟಲು ಕಟ್ಟಿ ಬರುತ್ತಿತ್ತು. ಮಿತ್ರ ಮುಳಗುಂದ ಅವರ ಜೊತೆಯಲ್ಲಿ ಸಂಜೆಯ ವಿಹಾರವನ್ನು ಹೇಗೋ ಮುಗಿಸಿ ಬರುತ್ತಿದ್ದರು. ಮೇಜಿನ ಮೇಲೆ ಎಂದಿನಂತೆ ಪುಸ್ತಕಗಳ ರಾಶಿ. 'ಐದು ಧರ್ಮ, ಐದು ದಾರಿ' - ಸೋತ ಕೈಯಿಂದ ಸಾಲುಗಳು ಮೂಡತೊಡಗಿದ್ದವು. ಆದರೆ ಮುಂದುವರಿಸುವುದು ಕಷ್ಟವಾಯಿತು. ದಿ. ೨೨-೬-೧೯೯೮ರಂದು ಆಸ್ಪತ್ರೆ ಸೇರಿದ ಈಶ್ವರನ್ ರಾತ್ರಿ ಎರಡು ಗಂಟೆಗೆ ಕೊನೆಯುಸಿರೆಳೆದರು. 'ಹೋರು ಬೀಳ್ವನ್ನೆಗಂ ಒಬ್ಬೊಂಟಿಯಾದೊಡಂ' ಎಂಬ ನುಡಿ ಈ ದೈತ್ಯ ಶಕ್ತಿಯ - ವ್ಯಕ್ತಿಯ ವಿಷಯದಲ್ಲಿ ನಿಜವಾಗಿ ಹೋಯಿತು.

* * * *

ಬೆಳಗಾವಿ ಲಿಂಗರಾಜ ಕಾಲೇಜಿನ ವಿದ್ಯಾರ್ಥಿಯಾಗಿದ್ದಾಗಲೇ ಈಶ್ವರನ್ ಲೇಖಕರಾಗಿ ರೂಪುಗೊಂಡಿದ್ದರು. ಅವರ ಸಣ್ಣಕತೆ ಹಾಗೂ ಲೇಖನಗಳು ಕನ್ನಡದ ಪ್ರಸಿದ್ಧ ಪತ್ರಿಕೆಗಳಲ್ಲಿ ಪ್ರಕಟವಾಗ ತೊಡಗಿದ್ದವು. ಪ್ರಬುದ್ಧ ಕರ್ನಾಟಕದಲ್ಲಿ 'ಈಶ್ವರನ್ ವಚನ'ಗಳನ್ನು ಓದಿದ ನೆನಪು ನನಗಿದೆ. ಪಾಟೀಲ ಪುಟ್ಟಪ್ಪ, ಡಿ.ಎಸ್. ಕರ್ಕಿ, ಎಸ್.ಡಿ. ಇಂಚಲ, ಈಶ್ವರನ್, ಸಣಕಲ್, ಬಿ.ಗಂ. ತುರುಮರಿ, ಕೋ. ಚೆನ್ನಬಸಪ್ಪ ಮೊದಲಾದವರು ಕಟ್ಟಿಕೊಂಡ 'ತುಂಬಿಗಳ ಬಳಗ' ಬೆಳಗಾವಿಯ ಕನ್ನಡ ಚಟುವಟಿಕೆಗಳ 'ಹುಟ್ಟು' ಕಟ್ಟತೊಡಗಿತ್ತು.

ಎಂ.ಎ. ಮುಗಿಸಿಕೊಂಡು ಈಶ್ವರನ್ ಧಾರವಾಡಕ್ಕೆ ಬಂದಾಗ ನಾನು ಅವರನ್ನು ಮೊದಲ ಸಲ ಕಂಡದ್ದು. ಆಗ ನಾನು ಕರ್ನಾಟಕ ಕಾಲೇಜಿನಲ್ಲಿ ಇಂಟರ್ ಆರ್ಟ್ಸ್‌ನಲ್ಲಿ ಓದುತ್ತಿದ್ದೆ. ಮಾಳಮಡ್ಡಿಯ ಜೋಗ ವಕೀಲರ ಬಂಗ್ಲೆಯ ಒಂದು ಕೋಣೆಯನ್ನು ಹಿಡಿದು ಅವರು ತಮ್ಮ ಕಲ್ಪನಾ ಗ್ರಂಥಮಾಲೆ ಹಾಗೂ ಒಂದು ಪುಸ್ತಕದಂಗಡಿಯ ಯೋಜನೆಯ ರೂಪುರೇಷೆಗಳನ್ನು ಹಾಕತೊಡಗಿದ್ದರು.

ವಿದ್ಯಾರ್ಥಿದೆಸೆಯಲ್ಲಿಯೇ 'ವಿಷ ನಿಮಿಷಗಳು' 'ಹಾಲಾಹಲ' ಕಥಾಸಂಗ್ರಹಗಳ ಮೂಲಕ ಸಾಹಿತ್ಯಾಸಕ್ತರ ಗಮನ ಸೆಳೆದಿದ್ದ ಈಶ್ವರನ್ ಗ್ರಂಥಮಾಲೆಯನ್ನು ಪ್ರಾರಂಭಿಸಿಯೇ ಬಿಟ್ಟರು. ಪ್ರಸಂಗ ಬಂದರೆ ಇದಕ್ಕಾಗಿ ಊರಲ್ಲಿಯ ತಮ್ಮ ಹೊಲವನ್ನು ಕೂಡ ಮಾರಲು ಅವರು ಸಿದ್ಧರಾಗಿದ್ದಂತೆ ಕಂಡು ಬಂದಿತು. ಅದೇ ಹೊತ್ತಿಗೆ ಹುಬ್ಬಳ್ಳಿಯಲ್ಲಿ ಪ್ರಾರಂಭಗೊಂಡ ಜೆ.ಜಿ. ಕಾಮರ್ಸ್ ಕಾಲೇಜಿನಲ್ಲಿ ಕನ್ನಡ ಉಪನ್ಯಾಸಕರಾಗಿ ನೇಮಕಗೊಂಡಿದ್ದರಿಂದ ಅವರು ಧಾರವಾಡವನ್ನು ಬಿಡಬೇಕಾಯಿತು.

ತಮ್ಮ ಕೋಣೆಯನ್ನು ನನ್ನ ವಾಸಕ್ಕೆ ಬಿಟ್ಟುಕೊಟ್ಟಿದ್ದಲ್ಲದೆ ಎರಡು ವರ್ಷ ಅದರ ಬಾಡಿಗೆಯನ್ನೂ ಅವರೇ ಕೊಟ್ಟರು. ಕನ್ನಡದ ಹಿರಿಯ ಕವಿಗಳ ಕವನ ಸಂಗ್ರಹಗಳೆಲ್ಲವೂ ಅವರ ಪುಸ್ತಕ ಭಂಡಾರದಲ್ಲಿದ್ದುದು ನನಗೊಂದು ನಿಧಿ ದೊರಕಿದಷ್ಟು ಸಂತೋಷವಾಯಿತು. (ಎಂ.ಎ ಮುಗಿಯುವವರೆಗೂ ನಾನು ಅದೇ ಕೋಣೆಯಲ್ಲಿದ್ದೆ) ಶ್ರೀಧರ ತೇಲ್ಕರ್, ಮಿರ್ಜಿ ಅಣ್ಣಾರಾಯ, ಸಿಂಪಿ ಲಿಂಗಣ್ಣ, ವರದರಾಜ ಹುಯಿಲಗೋಳ ಮೊದಲಾದವರು ಕಲ್ಪನಾ

ಗ್ರಂಥ ಮಾಲೆಯ ಲೇಖಕ ಬಳಗದಲ್ಲಿದ್ದರು. ನನ್ನ ಪ್ರಥಮ ಕವನ ಸಂಗ್ರಹ 'ಕಾವ್ಯಾಕ್ಷಿ' ಈ ಮಾಲೆಯಲ್ಲಿಯೇ ಬೆಳಕು ಕಂಡಿತು. ಆಗ ಪ್ರಕಟಗೊಂಡ ಗ್ರಂಥಗಳಲ್ಲಿ ಈಶ್ವರನ್ ಅವರ 'ರಾಜಾರಾಣಿ ದೇಖೊ' (ಕಥಾ ಸಂಗ್ರಹ) 'ಶಿವನಬುಟ್ಟಿ' (ಪ್ರಬಂಧ ಸಂಗ್ರಹ) 'ಕನ್ನಡ ತಾಯ್ ನೋಟ' (ವ್ಯಕ್ತಿಚಿತ್ರ) 'ಕವಿಕಂಡ ನಾಡು' (ಪ್ರವಾಸ ಕಥನ) ಮೊದಲಾದವು ಅವರ ಲೇಖನ ಸಾಮರ್ಥ್ಯವನ್ನು ಎತ್ತಿತೋರಿಸಿದವು. ಚಿಕ್ಕ ಚಿಕ್ಕ ವಾಕ್ಯಗಳಲ್ಲಿ ಓದುಗರೊಡನೆ ಸಂಭಾಷಣೆ ನಡೆಸಿದಂತೆ ತಮ್ಮದೇ ಆದ ಭಾವನಾತ್ಮಕ ಶೈಲಿಯನ್ನು ಅವರು ಆಗಲೇ ನಿರ್ಮಿಸಿಕೊಂಡಿದ್ದರು. 'ಜಯ ಕರ್ನಾಟಕ'ದಲ್ಲಿ ಪ್ರತಿ ತಿಂಗಳೂ ಬರೆಯುತ್ತಿದ್ದ 'ಕಲ್ಪನೆಗೆ ಕಾಗದಗಳು' ಓದುಗರನ್ನು ವಿಶೇಷ ಆಕರ್ಷಿಸಿದ್ದವು.

ಕಾಮರ್ಸ್ ಕಾಲೇಜಿನ ಕರ್ನಾಟಕ ಸಂಘದ ಮೂಲಕ ಹುಬ್ಬಳ್ಳಿಯಲ್ಲಿ ಸಾಹಿತ್ಯಿಕ ಚಟುವಟಿಕೆಗಳಿಗೆ ಈಶ್ವರನ್ ಹೊಸ ಮೆರಗು ತಂದುಕೊಟ್ಟರು. ಜಿ.ಪಿ. ರಾಜರತ್ನಂ, ಮಾಸ್ತಿ ಮೊದಲಾದವರ ಭಾಷಣಗಳನ್ನು ಕೇಳುವ ಭಾಗ್ಯ ಆಗ ಹುಬ್ಬಳ್ಳಿ ನಾಗರಿಕರಿಗೆ ಒದಗಿ ಬಂದಿತು.

ನಾಲ್ಕೈದು ವರ್ಷಗಳ ನಂತರ ಅವರು ಸೊಲ್ಲಾಪುರದ ಸಂಗಮೇಶ್ವರ ಕಾಲೇಜಿಗೆ ವರ್ಗವಾಗಿ ಹೋದರು. ನಂತರ ತಮ್ಮ ಕ್ಷೇತ್ರವನ್ನು ಬದಲಿಸಿಕೊಂಡು ಸಮಾಜಶಾಸ್ತ್ರದ ವಿದ್ಯಾರ್ಥಿಯಾಗಿ ಅವರು ಆಕ್ಸ್‌ಫರ್ಡಿಗೆ ಹೋದರು. ಅಲ್ಲಿ ಬಿ.ಲಿಟ್. ಪದವಿ ಪಡೆದು ಅಂತಾರಾಷ್ಟ್ರೀಯ ಖ್ಯಾತಿಯ ಲೈಡನ್ ವಿಶ್ವವಿದ್ಯಾಲಯದ ಡಿ.ಲಿಟ್. ಪದವಿಗಾಗಿ ಡಚ್ ಕುಟುಂಬ ಪದ್ಧತಿಯನ್ನು ಕುರಿತು ಬರೆದ ಥೀಸಿಸ್ ವಿದ್ವಾಂಸರ ಗಮನವನ್ನು ಸೆಳೆಯಿತು. ಆಕಸ್ಮಿಕವೊ ಎಂಬಂತೆ ಅವರು ಪ್ರತಿಷ್ಠಿತ ದೊಡ್ಡ ಮನೆತನದ ಡಚ್ ಮಹಿಳೆಯನ್ನು ಕೈಹಿಡಿದರು. ಮದುವೆ ನಡೆದುದು ಕರ್ನಾಟಕದ ಸಿರಿಗೆರೆಯ ಸ್ವಾಮಿಗಳ ಸನ್ನಿಧಿಯಲ್ಲಿ. ಪಾವು ದಂಪತಿಗಳು ತಂದೆ ತಾಯಿಗಳಾಗಿ ಮದುವೆ ಮಾಡಿಕೊಟ್ಟರು.

ವಿದೇಶದಲ್ಲಿ ಅವರ ವಿದ್ಯಾಭ್ಯಾಸ ಮುಗಿಯುವ ಹೊತ್ತಿಗೆ, ಪ್ರತಿಭಾವಂತರನ್ನು ಎಲ್ಲಿದ್ದರೂ ಹುಡುಕಿ ತೆಗೆದು ಕರ್ನಾಟಕ ವಿಶ್ವವಿದ್ಯಾಲಯವನ್ನು ಭದ್ರ ಬುನಾದಿಯ ಮೇಲೆ ಕಟ್ಟತೊಡಗಿದ್ದ ಕುಲಪತಿ ಡಾ. ಡಿ.ಸಿ. ಪಾವಟೆಯವರು ಅವರನ್ನು ವಿಶ್ವವಿದ್ಯಾಲಯದ ಮಾನವಶಾಸ್ತ್ರ ವಿಭಾಗದ ಮುಖ್ಯಸ್ಥರನ್ನಾಗಿ ಬರಮಾಡಿಕೊಂಡರು.

ಕೆಲವೇ ವರ್ಷಗಳಲ್ಲಿ ವಿಭಾಗ ಮೈದುಂಬಿಕೊಂಡು ಬೆಳೆಯುತ್ತಿದ್ದಂತೆಯೇ ಆಡಳಿತದಲ್ಲಿಯ ಭಿನ್ನಾಭಿಪ್ರಾಯದಿಂದಾಗಿ, ಅಲ್ಲದೆ ಅವರ ಸ್ವಭಾವವೂ ಕೆಲಮಟ್ಟಿಗೆ ಕಾರಣವಾಗಿ, ಈಶ್ವರನ್ ೧೯೬೪ರಲ್ಲಿ ಟೊರಂಟೊದ ಯಾರ್ಕ್ ವಿಶ್ವವಿದ್ಯಾಲಯಕ್ಕೆ ವಲಸೆ ಹೋದರು.

ಅಲ್ಲಿಯ ಅನುಕೂಲಕರವಾದ ಶೈಕ್ಷಣಿಕ ವಾತಾವರಣದಿಂದ ಉತ್ಸಾಹಿತರಾಗಿ ಉನ್ನತಮಟ್ಟದ ಸಂಶೋಧನ ಕೃತಿಗಳನ್ನು ಹೊರತಂದರು. ಅಂತಾರಾಷ್ಟ್ರೀಯ ಖ್ಯಾತಿಯ ಜರ್ನಲ್‌ಗಳ ಸಂಪಾದಕರಾಗಿ ದುಡಿದರು.

ಜಾತಿ, ಧರ್ಮ ಜನಾಂಗಕ್ಕೆ ಸಂಬಂಧಪಟ್ಟಂತೆ ತಮ್ಮದೇ ಆದ ವಿಚಾರಗಳನ್ನೂ ಸಿದ್ಧಾಂತಗಳನ್ನೂ ಪ್ರತಿಪಾದಿಸುತ್ತ ತಮ್ಮ ವೈಶಿಷ್ಟ್ಯವನ್ನು ಮೆರೆದರು. ಇನ್ನೂ ಮೂರು ಹೊಸ ಜರ್ನಲ್‌ಗಳನ್ನು ಪ್ರಾರಂಭಿಸುವ ಸನ್ನಾಹದಲ್ಲಿದ್ದರು.

ಇಷ್ಟಾಗಿಯೂ ಈಶ್ವರನ್ ಕರ್ನಾಟಕ ಹಾಗೂ ಕನ್ನಡ ಸಾಹಿತ್ಯ ಸಂಸ್ಕೃತಿಯ ಕರುಳಿನ ಸಂಬಂಧವನ್ನು ಉಳಿಸಿಕೊಂಡು ಬೆಳಸಿಕೊಂಡು ಬಂದದ್ದನ್ನು ಯಾರೂ ಮರೆಯುವಂತಿಲ್ಲ. ಕರ್ನಾಟಕ ಸಾಹಿತ್ಯ ಅಕಾಡೆಮಿ ಬಹಳ ಹಿಂದೆಯೇ ಗೌರವ ಪ್ರಶಸ್ತಿಯನ್ನು ನೀಡಿ ಅವರನ್ನು ಸತ್ಕರಿಸಿತು. ಇತ್ತೀಚೆಗೆ ಚಿತ್ರದುರ್ಗದ ಬೃಹನ್ಮಠ ಅವರ ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಕೊಡುಗೆಯನ್ನು ಗಮನಿಸಿ ಒಂದು ಲಕ್ಷ ಮೊತ್ತದ 'ಬಸವಶ್ರೀ' ಪ್ರಶಸ್ತಿಯನ್ನು ಕೊಡಮಾಡಿತು. ಇದು ಅವರಿಗೆ ಸಮಾಧಾನವನ್ನುಂಟು ಮಾಡಿದ್ದರಲ್ಲಿ ಸಂದೇಹವಿಲ್ಲ. ಆದರೆ ಅದನ್ನು ಪ್ರತ್ಯಕ್ಷವಾಗಿ ಸ್ವೀಕರಿಸುವ ಮೊದಲೇ ಅವರು ನಮ್ಮನ್ನಗಲಿದರು. ಒಳ್ಳೆಯ ಗೃಹಿಣಿಯಾಗಿ ಅವರ ಸುಖ ದಾಂಪತ್ಯ ಜೀವನಕ್ಕೆ ಕಾರಣರಾದ ಅವರ ಪತ್ನಿ ವೋಬಿನ್ (ಶೈಲಜಾ) ಅದನ್ನು ಸ್ವೀಕರಿಸಿದ್ದು ಔಚಿತ್ಯಪೂರ್ಣವೆನಿಸಿತು.

ಈಶ್ವರನ್ ಲಿಂಗಾಯತ ಧರ್ಮವನ್ನು ಕುರಿತು ತಮ್ಮ ಕೊನೆಯ ಗ್ರಂಥದಲ್ಲಿ ಹೇಳಿದ ಕೆಳಗಿನ ಮಾತುಗಳು ಗಮನಾರ್ಹವಾಗಿವೆ. "ಇದು ಬೋಧಿಸುವುದು ಶಕ್ತಿ ವಿಶಿಷ್ಟಾದ್ವೈತವನ್ನಲ್ಲ. ತೋಂಟದ ಸಿದ್ಧಲಿಂಗಯತಿಯು ಹೇಳುವಂತೆ ಶಿವಾದ್ವೈತವನ್ನು ಪ್ರತಿಪಾದಿಸುತ್ತದೆ. ಇದು ಭಕ್ತಿ ಧರ್ಮವನ್ನಲ್ಲ, ಸೇವಾ ಧರ್ಮವನ್ನು ಕಲಿಸುತ್ತಿದೆ. ಇದರ ಗುರಿ ಶಿವನನ್ನು ಸಮಾಜದಲ್ಲಿ ಕಾಣಿಸುವುದು. ಇದು ಯಾವ ಧರ್ಮದ ಆಶ್ರಯದಲ್ಲೂ ಬೆಳೆಯದ ಸ್ವತಂತ್ರ ಧರ್ಮ.... ಲಿಂಗಾಯತ ಧರ್ಮದ ಇನ್ನೊಂದು ಹೆಸರು 'ಪ್ರಜಾಧರ್ಮ'. ಪ್ರಜಾಧರ್ಮದ ಹೆಸರಿನಲ್ಲಿ ನನ್ನ ಮೂರನೇ ಪುಸ್ತಕದ ಹೊಳಹನ್ನು ಹಾಕಿದ್ದೇನೆ"

ಆದರೆ, ಈ ಕನಸು ನನಸಾಗದೆ ಹೋದದ್ದು ಕನ್ನಡಿಗರ ದುರ್ದೈವ. ವಿದ್ವಾಂಸರು ಈ ವಿಚಾರದ ಬಗ್ಗೆ ಚರ್ಚೆಯನ್ನು ಮುಂದುವರಿಸಿದರೆ ಅದೇ ಅವರಿಗೆ ಯೋಗ್ಯ ಸ್ಮಾರಕವೆನಿಸಬಹುದು.

ಎಲ್ಲರಂತೆ ಈಶ್ವರನ್ ಅವರ ಸ್ವಭಾವದಲ್ಲಿಯೂ ಕೆಲವು ದೋಷಗಳಿದ್ದವು. ಅವರೆಷ್ಟು ಸ್ನೇಹಪರರೊ ಅಷ್ಟೇ ನಿಷ್ಠುರಿಯಾಗಿದ್ದರು. ಜನರನ್ನು ಹಚ್ಚಿಕೊಂಡರೆ ತೀರ ಹಚ್ಚಿಕೊಂಡು ಬಿಡುವುದು. ಯಾವುದೋ ಸಂದರ್ಭದಲ್ಲಿ ತಮ್ಮ ಮನಸ್ಸಿಗೆ ಹಿಡಿಸದ ಸಣ್ಣ ಘಟನೆ ನಡೆದರೂ ಆ ವ್ಯಕ್ತಿಗಳೊಡನೆ ಕೂಡಲೇ ತಮ್ಮ ಸಂಬಂಧವನ್ನು ಕಡಿದುಕೊಂಡು ಬಿಡುತ್ತಿದ್ದರು. ಅತ್ಯಂತ ನಿಕಟವರ್ತಿಗಳೆನಿಸಿದ ಸ್ನೇಹಿತರ ಜೊತೆಯಲ್ಲಿಯೂ ಕೆಲವು ಸಲ ತಪ್ಪು ತಿಳವಳಿಕೆಯಿಂದ ಮಾತು ಬಿಟ್ಟು ಮತ್ತೆ ಮೊದಲಿನಂತೆ ಗೆಳೆತನದ ಸವಿಯನ್ನುಣಿಸುತ್ತಿದ್ದರು.

೬೩ ವರ್ಷಗಳಷ್ಟು ದೀರ್ಘಕಾಲ ಅವರ ಒಡನಾಡಿಯಾಗಿದ್ದ ಶ್ರೀ ಪಾಟೀಲ ಪುಟ್ಟಪ್ಪನವರಿಗೂ ಇದರ ಅನುಭವ ಆಗದೆ ಹೋಗಿಲ್ಲ. ಅವರ ಸ್ವಭಾವವನ್ನು ಚೆನ್ನಾಗಿ ಬಲ್ಲವರಿಗೆ ಅವರ ಬಗೆಗಿನ ಗೌರವಕ್ಕೆ ಯಾವ ತೊಡಕೂ ಉಂಟಾಗುತ್ತಿರಲಿಲ್ಲ. ಅಂಥ

ಎದೆಗಾರಿಕೆ ಹಾಗೂ ಛಲಗಾರಿಕೆಯ ವ್ಯಕ್ತಿಗಳು ನಮ್ಮ ಸಾಹಿತ್ಯ ಪ್ರಪಂಚದಲ್ಲಿ ತೀರ ವಿರಳವೆಂದೇ ಹೇಳಬಹುದು.

ತಮ್ಮ ಆತ್ಮಕಥೆಯಲ್ಲಿ ಒಂದೆಡೆ ಹೀಗೆ ಹೇಳಿಕೊಂಡಿದ್ದಾರೆ. "ನಾನು ಇನ್ನೊಮ್ಮೆ ಹುಟ್ಟಿಬರುವುದಕ್ಕೆ ಅವಕಾಶವಿದ್ದರೆ ಹೀರೇಮಲ್ಲೂರಲ್ಲಿ, ಅದೇ ಬಡಕುಟುಂಬವೊಂದರಲ್ಲಿ, ಅದೇ ತಂದೆ ತಾಯಿಯ ಹೆಮ್ಮಗನಾಗಿ ಹುಟ್ಟಿಬರುವ ಆಸೆ ನನಗಿದೆ. ಆದರೆ ದೇವರಲ್ಲೊಂದು ಕರಾರು: ಎಳವೆಯಲ್ಲಿ ಮಕ್ಕಳನ್ನು ಒಯ್ಯಬೇಡಪ್ಪ" ಅವರು ಸಾಧಿಸಿದ ಅದ್ಭುತವಾದ ಕಾರ್ಯಗಳ ಹಾಗೂ ಎಲ್ಲ ಬಗೆಯ ಬರವಣಿಗೆಯ ಮೂಲ ಸೆಲೆ ಇಲ್ಲಿದೆ ಎಂದು ನನಗನಿಸುತ್ತದೆ.

('ಪ್ರಪಂಚ' ಪತ್ರಿಕೆ ಜುಲೈ ೨೬, ೧೯೯೮)

ಸಾಹಿತ್ಯ ಸಮಾಹಿತ : ೨೦೦೭,

೧೯

## ಡಾ. ಸದಾನಂದ ನಾಯಕ

“ಹೃತ್ಸರೋಜದ ಸೌಮ್ಯ ಮುಕುಲವು
ಉಷೆಯ ಮೆಲುನಗೆಗರಳಿತು,
ಉದಿಸುತಿಹ ಅರವಿಂದ ಮಿತ್ರನ
ಚೇತನದೊಳಿದೆ ತೆರೆಯಿತು”

ಡಾ. ಸದಾನಂದ ನಾಯಕ ಅವರ ನೆನಪಿನೊಂದಿಗೆ ಅವರ ಸ್ನಿಗ್ಧಸ್ನೇಹದ ಸಾತ್ವಿಕ ಮುಖ ಕಣ್ಣೆದುರು ನಿಂತಾಗ ಅವರದೇ ಆದ ಮೇಲಿನ ಪದ್ಯ (ಉದಯ) ನೆನಪಾಗುತ್ತದೆ. ಸಾಧಾರಣ ಎತ್ತರ, ಹೊಳೆಯುವ ಕಣ್ಣು, ಮೆಲುನಗೆ, ಸೌಮ್ಯದನಿ-ನಾಯಕರನ್ನು ಮೊದಲ ಸಲ ಕಂಡಾಗಲೇ ಅವರ ಸಜ್ಜನಿಕೆ ನನ್ನನ್ನು ಆಕರ್ಷಿಸಿತು. ಪ್ರೊ. ಸ.ಸ. ಮಾಳವಾಡರ ಮನೆಯಲ್ಲಿ ಅವರ ಪ್ರಥಮ ಪರಿಚಯವಾದಾಗ ನಾನಿನ್ನೂ ಕಾಲೇಜು ವಿದ್ಯಾರ್ಥಿ. ಅವರು ಕೊಲ್ಲಾಪುರದಲ್ಲಿ ಪ್ರೊ. ಕೆ.ಜಿ. ಕುಂದಣಗಾರ ಅವರ ವಿದ್ಯಾರ್ಥಿಯಾಗಿ ಬಿ.ಎ. ಆದ ಮೇಲೆ ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಪ್ರೊ. ಮಾಳವಾಡರ ಶಿಷ್ಯರಾಗಿ ಎಂ.ಎ. ಪಾಸಾಗಿದ್ದರು. ಸೊಲ್ಲಾಪುರದ ಡಿ.ಎ.ವಿ. ಕಾಲೇಜಿನಲ್ಲಿ ಪ್ರೊ. ದ.ರಾ. ಬೇಂದ್ರೆಯವರ ಜೊತೆಗೆ ಕನ್ನಡ ಅಧ್ಯಾಪಕರಾಗಿ ನಾಲ್ಕು ವರ್ಷ ಕೆಲಸ ಮಾಡಿದ್ದರು. ಸ್ವತಃ ಅಧ್ಯಯನಶೀಲರಾಗಿದ್ದ ನಾಯಕರು ಮೇಲಿನ ಮೂವರು ಹಿರಿಯ ವ್ಯಕ್ತಿಗಳ ಸಾನ್ನಿಧ್ಯ ಹಾಗೂ ಆತ್ಮೀಯ ಸಂಪರ್ಕದ ಫಲವಾಗಿ ಸಂಶೋಧನೆ, ವಿಮರ್ಶೆ, ಕಾವ್ಯ ಹಾಗೂ ಶಿಕ್ಷಣ ಕ್ಷೇತ್ರಗಳಲ್ಲಿ ಸದ್ದಿಲ್ಲದೆ ಕೃಷಿಗೈಯುತ್ತ ಬಂದರು. ಬೇಂದ್ರೆಯವರ ಜೊತೆ ಮಧುರಚೆನ್ನರ ಭೆಟ್ಟಿ (೧೯೪೪) ಹಾಗೂ ಪಾಂಡಿಚೇರಿಯಲ್ಲಿ ಶ್ರೀ ಅರವಿಂದರ ದರ್ಶನ (೧೯೪೮) ಪಡೆದಂದಿನಿಂದ ಆಧ್ಯಾತ್ಮಿಕ ಚಿಂತನೆಯೂ ಅವರ ಮನಸ್ಸನ್ನು ಆವರಿಸಿಕೊಂಡಿತು.

ಸರಕಾರಿ ಶಿಕ್ಷಣ ಸಂಸ್ಥೆಗಳಲ್ಲಿ ಅಧ್ಯಾಪಕರಾಗಿ ವಿವಿಧ ಹಂತಗಳ ಬೋಧನೆಯ ಅನುಭವ ಪಡೆದಿದ್ದ ನಾಯಕರು ಈ.ಓ.ಡಿ. ಹಾಗೂ ಡಿ.ಡಿ.ಪಿ.ಆಯ್. ಹುದ್ದೆಗಳಲ್ಲಿ ಆಡಳಿತಗಾರರಾಗಿಯೂ ಹೆಸರು ಪಡೆದರು. ಕಾರವಾರ ಆರ್ಟ್ಸ್ ಕಾಲೇಜಿನ ಪ್ರಿನ್ಸಿಪಾಲರಾಗಿ ನಿವೃತ್ತರಾದ ಮೇಲೆ ಕಿತ್ತೂರು ರಾಣಿಚೆನ್ನಮ್ಮ ವಸತಿಶಾಲೆಯ ಸ್ಥಾಪಕ ಮುಖ್ಯಾಧ್ಯಾಪಕರಾಗಿ ಅದಕ್ಕೆ ಒಳ್ಳೆಯ ಬುನಾದಿಯನ್ನು ಹಾಕಿಕೊಟ್ಟರು. ವೃತ್ತಿ ಜೀವನದಲ್ಲಿ ಅವರು ಅನಿವಾರ್ಯ ಕಾರಣಗಳಿಂದ

ಹಲವು ಹತ್ತು ಕಡೆ ಓಡಾಡಬೇಕಾಗಿ ಬಂದರೂ ತಮ್ಮ ಸಾಹಿತ್ಯ-ಲೇಖನ ಪ್ರವೃತ್ತಿಗೆ ಅಡೆತಡೆಯುಂಟಾಗದಂತೆ ನೋಡಿಕೊಂಡರು. ಬೆಳಗಾಂವಿ ಎಸ್.ಟಿ. ಕಾಲೇಜಿನಲ್ಲಿದ್ದಾಗಲೇ (೧೯೬೧) "Reading Interests and abilities of Adolescents and Adults" ಎಂಬ ವಿಷಯವನ್ನು ಕುರಿತು ಸಿದ್ಧಪಡಿಸಿದ ಸಂಪ್ರಬಂಧ ಅವರಿಗೆ ಪಿಎಚ್.ಡಿ. ಪದವಿಯನ್ನು ತಂದುಕೊಟ್ಟಿತು. ಅನೇಕ ಶಿಕ್ಷಣತಜ್ಞರ ಪ್ರಶಂಸೆಗೆ ಪಾತ್ರವಾಗಿದ್ದ ಈ ಕೃತಿಗೆ ಪ್ರಕಟಣೆಯ ಯೋಗ ದೊರೆತದ್ದು ೧೯೭೬ರಲ್ಲಿ, ಕರ್ನಾಟಕ ವಿಶ್ವವಿದ್ಯಾಲಯದ ಪ್ರಸಾರಾಂಗದ ಸಂಶೋಧನ ಪ್ರಕಟನ ಮಾಲೆಯಲ್ಲಿ, ವಿಶ್ವವಿದ್ಯಾಲಯದ ಬೆಳ್ಳಿಹಬ್ಬದ ಸಂದರ್ಭದಲ್ಲಿ ಪ್ರಕಟಗೊಂಡ ಮಹತ್ವದ ಕೃತಿಗಳಲ್ಲಿ ಇದೂ ಒಂದೆನಿಸಿತು. "ಸುಶಿಕ್ಷಿತರೆಲ್ಲರೂ ಅದರಲ್ಲಿಯೂ ಎಲ್ಲ ಶಾಲೆ, ಕಾಲೇಜು ಹಾಗೂ ವಿಶ್ವವಿದ್ಯಾಲಯದ ಶಿಕ್ಷಕರು ಓದಲೇಬೇಕಾದ ಗ್ರಂಥ" ಎಂದು ಇದರ ಮುನ್ನುಡಿಯಲ್ಲಿ ಪ್ರೊ. ಆರ್ಮಾಂಡೊ ಮೆನೆಜಿಸ್ ಅವರು ಹೇಳಿದ ಮಾತಿನಲ್ಲಿ ಯಾವ ಅತಿಶಯೋಕ್ತಿಯೂ ಇಲ್ಲವೆನ್ನಬಹುದು.

ಈ ಮೊದಲೇ ೧೯೬೪ರಷ್ಟು ಹಿಂದೆ ನಾಯಕರು ಬೆಳಗಾಂವಿ ಎಸ್.ಟಿ. ಕಾಲೇಜಿನಲ್ಲಿ ಅಧ್ಯಾಪಕ ವೃತ್ತಿಯಲ್ಲಿದ್ದಾಗ ಶಮನೇವಾಡಿಯಲ್ಲಿ ಏರ್ಪಡಿಸಿದ ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣೋಪನ್ಯಾಸ ಶಿಬಿರದಲ್ಲಿ ಭಾಗವಹಿಸಲು ಅವರನ್ನು ಆಮಂತ್ರಿಸಲಾಗಿತ್ತು. 'ಜೈನಪುರಾಣ'ಗಳನ್ನು ಕುರಿತು ಅವರು ಅಂದು ಮಾಡಿದ ಉಪನ್ಯಾಸ ಪಂಡಿತ ಪಾಮರರಿಬ್ಬರನ್ನೂ ತಣಿಸಿತು. ಅವರ ಜೊತೆಗೆ ಎರಡು ದಿನ ಕಾವ್ಯಶಾಸ್ತ್ರ ವಿನೋದದಲ್ಲಿ ಕಳೆದ ನೆನಪು ಇಂದಿಗೂ ನನ್ನ ಮನಸ್ಸಿನಲ್ಲಿ ಹಸಿರಾಗಿದೆ.

ಈ ಉಪನ್ಯಾಸವನ್ನು ಪ್ರಸಾರಾಂಗ ಪುಸ್ತಕ ರೂಪದಲ್ಲಿ ಪ್ರಕಟಿಸಿದಾಗ ಬೆಳಗಾವಿಯ ಜೈನ ಮಹಾವೀರ ಸಂಘದವರು ಅಧಿಕ ಸಂಖ್ಯೆಯ ಪ್ರತಿಗಳನ್ನು ಕೊಂಡು 'ಗ್ರಂಥದಾನ'ಕ್ಕೆ ಉಪಯೋಗಿಸಿದ್ದನ್ನು ಇಲ್ಲಿ ಉಲ್ಲೇಖಿಸಬಹುದು. ಕನ್ನಡ ಸಾಹಿತ್ಯದ ನಿಷ್ಠಾವಂತ ವಿದ್ಯಾರ್ಥಿಯಾಗಿದ್ದ ನಾಯಕರು ಆಮೇಲೆ ಇದೇ ಮಾದರಿಯಲ್ಲಿ 'ವೈದಿಕ ಪುರಾಣಗಳು' ಹಾಗೂ 'ಜೈನ ಪುರಾಣಗಳು' ಪುಸ್ತಕಗಳನ್ನು ಬರೆದು ಆಯಾ ವಿಷಯಗಳಲ್ಲಿ ಒಳ್ಳೆಯ ಕೈಪಿಡಿಗಳನ್ನು ಅಭ್ಯಾಸಿಗಳಿಗೆ ಒದಗಿಸಿದರು.

ಡಾ. ಸದಾನಂದ ನಾಯಕ ಅವರ ಸಂಶೋಧನ ಸಾಮರ್ಥ್ಯಕ್ಕೆ ಅವರ 'ಸಾಹಿತ್ಯ ಸಂಶೋಧನೆ ಮತ್ತು ಸಮಾಲೋಚನೆ' (೧೯೫೯) ಗ್ರಂಥ ಒಂದು ಪ್ರಬಲ ಸಾಕ್ಷಿಯಂತಿದೆ. ಕನ್ನಡ ಸಂಸ್ಕೃತಿ ಇಲಾಖೆಯ ಬಹುಮಾನವನ್ನು ಪಡೆದ ಈ ಕೃತಿಯಲ್ಲಿಯ ಪ್ರಬಂಧಗಳಿಗೆ ಪ್ರೊ. ಬೇಂದ್ರೆಯವರ ಸಾಹಚರ್ಯವೇ ಪ್ರೇರಕವಾಗಿರುವುದನ್ನು ಲೇಖಕರು ಗುರುಭಕ್ತಿಯಿಂದ ನೆನೆದುಕೊಂಡಿದ್ದಾರೆ. 'ಬಹುವಿಧವಾಗಿ ವಿಮರ್ಶಾಬುದ್ಧಿಯನ್ನು ಮಸೆದು ಹರಿತ ಮಾಡುವುದಕ್ಕಾಗಿ ಹೆಣಗಿದ ಶ್ರೀ ಸದಾನಂದರನ್ನು' ಬೇಂದ್ರೆಯವರು 'ಜೊತೆ-ನುಡಿ'ಯಲ್ಲಿ ಅಭಿನಂದಿಸಿದ್ದಾರೆ. ಈ ಗ್ರಂಥದ ಎರಡನೆಯ ಭಾಗ ಆವಾಗಲೇ ಪ್ರಕಟಣೆಗೆ ಸಿದ್ಧವಾಗಿ ಪ್ರಕಾಶಕರ ಕೈಸೇರಿದ್ದರೂ ಕೊನೆಗೂ

ಅದು ಬೆಳಕಿಗೆ ಬಾರದೆ ಹೋದದ್ದು ದುರ್ದೈವದ ಸಂಗತಿಯಾಗಿದೆ. ಅದಕ್ಕಾಗಿ ನಾಯಕರು ಒಳಗೊಳಗೇ ಪರಿತಪಿಸಿದ್ದುಂಟು. ಸಂಶೋಧನೆ ಮತ್ತು ವಿಮರ್ಶೆಯ ಪರಸ್ಪರ ಸಂಬಂಧ ಹಾಗೂ ಪೋಷಕತೆಯ ಬಗ್ಗೆ ಇಂದಿನ ಸಾಹಿತ್ಯ ಸಂದರ್ಭದಲ್ಲಿ ಹೆಚ್ಚಿನ ಒತ್ತು ಕೊಟ್ಟಂತಿದ್ದರೂ ನಾಲ್ಕು ದಶಕಗಳ ಹಿಂದೆಯೇ ನಾಯಕರ ಈ ಲೇಖನಗಳು ಆ ಗುಣವನ್ನು ಅಳವಡಿಸಿಕೊಂಡಿರುವುದು ಅತ್ಯಂತ ಗಮನಾರ್ಹವಾಗಿದೆ. ಸಂಶೋಧನೆ ಸಮಾಲೋಚನೆಗೆ ಹಾಗೂ ಸಮಾಲೋಚನೆ ಸಂಶೋಧನೆಗೆ ಹಾದಿ ಮಾಡಿಕೊಡುವುದನ್ನು ಈ ಗ್ರಂಥದ ಶೀರ್ಷಿಕೆಯಿಂದಲೇ ತಿಳಿಯಬಹುದು.

ಬೇಂದ್ರೆಯವರು ಮೂಲ ಮರಾಠಿಯಲ್ಲಿ ಪ್ರಕಟಿಸಿದ ಮೂರು ಮೌಲಿಕ ಭಾಷಣ ಲೇಖನಗಳ ಕನ್ನಡ ಅನುವಾದವನ್ನೊಳಗೊಂಡ ನಾಯಕರ 'ಪ್ರಬಂಧ ಪರಿಮಳ' ಸಂಕಲನ ಕರ್ನಾಟಕದ ಅಂತರಂಗದೊಂದಿಗೆ ಚಿರಂತನವಾಗಿ ತನ್ಮಯವಾಗುವಂತೆ, ಸಾಹಿತ್ಯ, ಶಿಕ್ಷಣ, ಸಮಾಜ, ಸಂಸ್ಕೃತಿ ಇವೇ ಮೊದಲಾದ ಮಹತ್ವದ ಕ್ಷೇತ್ರಗಳ ಪ್ರಬಂಧಗಳನ್ನು ಒಳಗೊಂಡಿದೆ. ನಿಸ್ಸೀಮವಾದ ರಾಷ್ಟ್ರೀಯ ಭಾವನೆಯಿಂದ ಸೇವೆ ಸಲ್ಲಿಸಿದ ಶ್ರೀ ಮಾಂಜರೇಕರ ಹನುಮಂತರಾಯರನ್ನು ಕುರಿತ ಲೇಖನ ಓದುಗರ ಸ್ಮೃತಿಪಟಲದಲ್ಲಿ ಅಚ್ಚೊತ್ತುವಂತಿದೆ. ಸರೋಜಿನಿ ನಾಯಡು ಅವರ ಜೀವನ ಹಾಗೂ ಕಾವ್ಯವನ್ನು ರಸವತ್ತಾಗಿ ವಿವೇಚಿಸುವ 'ಸರೋಜಿನಿ ದೇವಿಯ ಕಾವ್ಯಸ್ಫೂರ್ತಿ' ಪ್ರಬಂಧ ಉನ್ನತಮಟ್ಟದ್ದಾಗಿದ್ದು ನಾಯಕರ ಆಳವಾದ ವ್ಯಾಸಂಗದ ಫಲವನ್ನು ಕಾವ್ಯಾಸಕ್ತರಿಗೆ ಒದಗಿಸಿದೆ. 'ಸಾಹಿತ್ಯ ಮತ್ತು ಜೀವನ' ಎಂಬ ಪ್ರಬಂಧದಲ್ಲಿ (೧೯೪೨ರಲ್ಲಿ ಬರೆದದ್ದು) "ಧರ್ಮದ ಡಾಂಭಿಕತನವೂ ವಿಜ್ಞಾನದ ಸಂಹಾರವೂ ರಾಜತಂತ್ರದ ಹಿಂಸೆಯೂ ವಿಷಮತೆಯೂ ಹೆಚ್ಚಾದಂತೆ, ಇವೆಲ್ಲವುಗಳಿಗೆ ಕಾರಣೀಭೂತವಾದ ಪಾಶವೀ ಮನೋವೃತ್ತಿಯನ್ನು ನಿರ್ಮೂಲ ಮಾಡಿ, ಜೀವನದ ವಿಶ್ವವ್ಯಾಪೀ ತತ್ವಗಳನ್ನೊಳಗೊಂಡ ಉಜ್ವಲವಾದ ಭವಿಷ್ಯತ್ತನ್ನು ಮಾನವನಿಗಾಗಿ ಪ್ರಸ್ತಾಪಿಸುವ ಅಪೂರ್ವ ಸಾಹಸವನ್ನು ಇಂದು ಸಾಹಿತ್ಯವು ಮಾಡಬೇಕಾಗಿದೆ" ಎಂದಿರುವುದು ಇಂದಿಗೂ ಪ್ರಸ್ತುತವೆನಿಸುತ್ತದೆ. ಪ್ರಸ್ತುತ ಸಂಕಲನ ೧೯೬೩ರ ಹೊತ್ತಿಗೇ ಮೂರು ಮುದ್ರಣಗಳನ್ನು ಕಂಡಿದ್ದು ಅದರ ಮಹತ್ವವನ್ನು ಎತ್ತಿ ತೋರಿಸುತ್ತದೆ. 'ಹದಿಬದೆಯ ಧರ್ಮ'ವೂ ಇಂಥದೇ ಇನ್ನೊಂದು ಪ್ರಬಂಧ ಸಂಕಲನವಾಗಿದ್ದು ಈ ವಿಷಯದ ಸಮಗ್ರ ಕಲ್ಪನೆಯನ್ನು ಓದುಗರಿಗೆ ಒದಗಿಸುತ್ತದೆ. ಇನ್ನೊಂದು ವಿಶೇಷವೆಂದರೆ ಶ್ರೀಮತಿ ಸರೋಜಿನಿ ನಾಯಕ ಅವರ ಒಂದು ಲೇಖನವನ್ನು ಈ ಸಂಗ್ರಹ ಒಳಗೊಂಡಿದೆ.

ಡಾ. ಸದಾನಂದ ನಾಯಕರು ೧೯೩೧ರಷ್ಟು ಹಿಂದಿನಿಂದಲೇ ಕಾವ್ಯರಚನೆಗೆ ಪ್ರಾರಂಭಿಸಿದ್ದರೆಂಬುದು ಅವರ 'ದೇವ ನಿಮಿಷ' (೧೯೬೮) ಕವನ ಸಂಗ್ರಹದಿಂದ ತಿಳಿದು ಬರುತ್ತದೆ. ನಿಸರ್ಗ ಸೌಂದರ್ಯ, ನಾಡಿನ ಸಂಸ್ಕೃತಿ, ಆಧ್ಯಾತ್ಮಿಕತೆ ಇಲ್ಲಿಯ ಕವನಗಳ ವಸ್ತುವಾಗಿವೆ. 'ಸಹ್ಯಸೊಬಗು' 'ಭಾವಭಾಮೆ' 'ಮುಗಿಲ ಮಲ್ಲಿಗೆ' 'ದುರ್ದಿನ' 'ವಿದ್ಯುಲ್ಲತೆ' 'ದೀಪ ಸಂಭ್ರಮ' ಮೊದಲಾದ ಕವನಗಳು ಇದಕ್ಕೆ ಒಳ್ಳೆಯ ಉದಾಹರಣೆಯಾಗಿವೆ. 'ಪದ್ಮಪಾಣಿ' ಕವನ ಸಂಗ್ರಹ ಗುಣಗೌರವದಿಂದ ಕೂಡಿದ ವ್ಯಕ್ತಿಚಿತ್ರ ಗೀತಗಳ ಗುಚ್ಛವಾಗಿದೆ. ಮುಂದೆ

ಸಾಹಿತ್ಯ ಸಂಶೋಧನೆಯ ವಿಶೇಷ ಆಸಕ್ತಿಯಿಂದಾಗಿ ಕಾವ್ಯರಚನೆ ಹಿಂದೆ ಬಿತ್ತೆಂದು ತೋರುತ್ತದೆ.

ಶ್ರೀಮತಿ ಸರೋಜಿನಿ ನಾಯಕರು ಧಾರವಾಡದ ಸರಕಾರಿ ಹೆಣ್ಣುಮಕ್ಕಳ ಟ್ರೇನಿಂಗ್ ಕಾಲೇಜಿನ ಪ್ರಿನ್ಸಿಪಾಲರಾಗಿ ಕೆಲಸಮಾಡಿ ನಿವೃತ್ತರಾದ ಮೇಲೆ (೧೯೭೮) ಸಾಧನಕೇರಿಯಲ್ಲಿ ಮನೆ ಮಾಡಿದರು. ಇದಕ್ಕೆ ಮುಖ್ಯ ಕಾರಣ, ಬೇಂದ್ರೆಯವರ ಸಾನ್ನಿಧ್ಯ ಹಾಗೂ ಸತ್ಸಂಗ. ಕವಿವರ್ಯರನ್ನು ನಾಯಕರು ತಮ್ಮ ಗುರುವರ್ಯರೆಂದೇ ಭಾವಿಸಿ ಎಡೆಬಿಡದೆ ಹಾಗೆಯೇ ನಡೆದುಕೊಂಡರು. "ನಮ್ಮ ಜೀವನದುದ್ದಕ್ಕೂ ಬೇಂದ್ರೆಯವರು ಹಾಸುಹೊಕ್ಕಾಗಿದ್ದರು" ಎಂದು ಶ್ರೀಮತಿ ಸರೋಜಿನಿ ನಾಯಕರು ಕೃತಜ್ಞತೆಯಿಂದ ನೆನೆದುಕೊಳ್ಳುತ್ತಾರೆ.

ಸದಾನಂದ ನಾಯಕರು ಧಾರವಾಡ, ಸೊಲ್ಲಾಪುರ, ಬೆಳಗಾವಿ, ಕಾರವಾರ ಮೊದಲಾದ ಹಲವು ಕಡೆಗಳಲ್ಲಿ ಕೆಲಸ ಮಾಡಿ ಅಲ್ಲಲ್ಲಿ ಸ್ನೇಹಿತರ ಬಳಗವನ್ನು ಹೊಂದಿದ್ದರೂ ಧಾರವಾಡವನ್ನು ಅವರು ಹೆಚ್ಚು ಪ್ರೀತಿಸಿದರು. ಕಳೆದ ಹತ್ತು ವರ್ಷಗಳಿಂದ ಅಸ್ವಸ್ಥತೆಯ ಮೂಲಕ ಅವರು ಹೊರಗೆಲ್ಲಿಯೂ ಹೋಗದೆ ಮನೆಯಲ್ಲಿಯೇ ಇದ್ದರೂ ಸ್ವಾಧ್ಯಾಯನಿರತರಾಗಿ, ಸ್ವಸಂತೋಷಕ್ಕಾಗಿ ಬರವಣಿಗೆಯನ್ನು ಮುಂದುವರಿಸಿದ್ದರು. ಆದರೆ ಪ್ರಕಟಣೆಯಲ್ಲಿ ಆಸ್ಥೆ ವಹಿಸಲಿಲ್ಲ.

ತಮ್ಮ ಕರ್ತವ್ಯ ನಿಷ್ಠೆ, ವಿನಯ, ವಿಶಾಲ ಮನೋಧರ್ಮ ಹಾಗೂ ಸುಸಂಸ್ಕೃತ ವ್ಯಕ್ತಿತ್ವದಿಂದ ನಾಯಕರು ಅನೇಕ ಸಂಘ, ಸಂಸ್ಥೆ ಹಾಗೂ ಹಿರಿಯ ವ್ಯಕ್ತಿಗಳ ಗೌರವಾದರಕ್ಕೆ ಪಾತ್ರರಾಗಿ ಅವರಿಂದ ಮನ್ನಣೆ ಪಡೆದಿದ್ದರು. ರಾಜ್ಯ ಸಾಹಿತ್ಯ ಅಕಾಡೆಮಿಯ ಸದಸ್ಯರಾಗಿಯೂ ಸೇವೆ ಸಲ್ಲಿಸಿದ್ದರು. ರಾಜ್ಯ ಸರಕಾರ ರಾಜ್ಯೋತ್ಸವ ಪ್ರಶಸ್ತಿಯನ್ನು ನೀಡಿ (೧೯೯೨) ಅವರನ್ನು ಗೌರವಿಸಿತು. ೮೫ ವರ್ಷಗಳ ತುಂಬು ಜೀವನವನ್ನು ಬಾಳಿ ಕಳೆದ ವರ್ಷ ಅವರು ನಮ್ಮನ್ನಗಲಿದರು.

ಕೇವಲ ಪ್ರಚಾರ ಹಾಗೂ ಪ್ರಸಿದ್ಧಿಗಳ ಬೆನ್ನು ಹತ್ತಿ ಜೀವನದ ನಿಜವಾದ ಮೌಲ್ಯಗಳನ್ನು ಕಡೆಗಣಿಸುತ್ತಿರುವ ಇಂದಿನ ದಿನಗಳಲ್ಲಿ ಡಾ. ಸದಾನಂದ ನಾಯಕರಂಥ ವ್ಯಕ್ತಿಗಳು ತೀರ ವಿರಳ.

('ಕರ್ಪೂರ' ೧೯೯೯)

ಸಾಹಿತ್ಯ ಸಮಾಹಿತ : ೨೦೦೭

೨೦

## 'ಸ್ನೇಹಸಿಂಧು'ವಳ್ಳಿ

ಕರ್ನಾಟಕ ವಿಶ್ವವಿದ್ಯಾಲಯ ಅಸ್ತಿತ್ವದಲ್ಲಿ ಬಂದ ಎರಡು ವರ್ಷಗಳಲ್ಲಿ ಕನ್ನಡ ಸ್ನಾತಕೋತ್ತರ ವಿಭಾಗವೂ ಪ್ರಾರಂಭವಾಯಿತು. ಆಗ ಮೈಸೂರು ಕಡೆಯಿಂದ ಬಂದು ಇಲ್ಲಿ ಪ್ರವೇಶ ಪಡೆದ ವಿದ್ಯಾರ್ಥಿಗಳಲ್ಲಿ ಕ.ವೆಂ. ರಾಜಗೋಪಾಲ, ಅನಂತರ ಸಿಂಧುವಳ್ಳಿ ಅನಂತಮೂರ್ತಿ ನನಗೆ ಹೆಚ್ಚು ಬೇಕಾದವರಾಗಿದ್ದರು. ಒಬ್ಬರಿಗೆ ಕತೆ, ಕವಿತೆ ಬರೆಯುವಲ್ಲಿ ಆಸ್ಥೆ ಇದ್ದರೆ, ಇನ್ನೊಬ್ಬರು ನಾಟಕ ಹಾಗೂ ಪಠ್ಯೇತರ ಚಟುವಟಿಕೆಗಳಲ್ಲಿ ಹೆಚ್ಚು ಉತ್ಸಾಹ ತೋರಿಸುತ್ತಿದ್ದರು. ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣ-ಪ್ರಕಟನ ವಿಭಾಗದಲ್ಲಿ (ಈಗಿನ ಪ್ರಸಾರಾಂಗ) ನಾನು ನೇಮಕಗೊಂಡು ಅದೇ ಎರಡು-ಮೂರು ವರ್ಷಗಳಾಗಿದ್ದವು. ಇವರಿಬ್ಬರ ಪರಿಚಯ ಸ್ನೇಹವಾಗಿ ಪರಿಣಮಿಸುವುದಕ್ಕೆ ಹೆಚ್ಚು ದಿನ ಹಿಡಿಯಲಿಲ್ಲ.

ಬಿ.ಎ.ದಲ್ಲಿ ಕನ್ನಡವನ್ನು ಪ್ರಧಾನ ವಿಷಯವಾಗಿ ತೆಗೆದುಕೊಳ್ಳದಿದ್ದವರಿಗೂ ಆಗ ಕನ್ನಡ ಎಂ.ಎ. ಮಾಡಲು ಇಲ್ಲಿ ಅವಕಾಶವಿರುತ್ತಿತ್ತು. ಜೊತೆಗೆ ತೀ.ನಂ. ಶ್ರೀಕಂಠಯ್ಯನವರು ವಿಭಾಗದ ಪ್ರಥಮ ಕನ್ನಡ ಪ್ರಾಧ್ಯಾಪಕರಾಗಿ ಇಲ್ಲಿಗೆ ಆಗಮಿಸಿದ್ದರು. ಇವು ಎರಡರ ಆಕರ್ಷಣೆಯಿಂದಾಗಿ ಆ ಕಡೆಯ ವಿದ್ಯಾರ್ಥಿಗಳು ಧಾರವಾಡಕ್ಕೆ ಹೆಚ್ಚು ಸಂಖ್ಯೆಯಲ್ಲಿ ಬಂದು ಹೋದದ್ದುಂಟು.

ವಿಶ್ವವಿದ್ಯಾಲಯದ ಪ್ರಕಟನ ಹಾಗೂ ಪ್ರಚಾರೋಪನ್ಯಾಸ ಸಲಹಾ ಸಮಿತಿಗೆ ತೀ.ನಂ.ಶ್ರೀ. ಮುಖ್ಯಸ್ಥರಾಗಿದ್ದುದರಿಂದ ಪ್ರಸಾರಾಂಗಕ್ಕೆ ಕನ್ನಡ ವಿಭಾಗದ ನಂಟು ಅಂದಿನಿಂದಲೇ ಮೊದಲಾಯಿತು. ಅಲ್ಲದೆ, ನಮ್ಮ ಮನೆಯ ಎದುರಿನ ಮನೆಯಲ್ಲಿಯೇ ತೀ.ನಂ.ಶ್ರೀಯವರೂ ಇರುತ್ತಿದ್ದುದರಿಂದ ಸಿಂಧುವಳ್ಳಿ ನನ್ನ ಕಣ್ಣಿನಿಂದ ತಪ್ಪಿಸಿಕೊಳ್ಳುವುದು ಸಾಧ್ಯವಿರುತ್ತಿರಲಿಲ್ಲ. ವಾರಕ್ಕೊಮ್ಮೆಯಾದರೂ ಅವರು ನಮ್ಮ ಮನೆಗೆ ಬಂದು ಹರಟೆಯಲ್ಲಿ ಭಾಗಿಯಾಗುತ್ತಿದ್ದರು. ತಮ್ಮ ನಕಲಿ, ವಿನೋದಗಳಿಂದ ಎಲ್ಲರನ್ನೂ ರಂಜಿಸುತ್ತಿದ್ದರು. ಹಾಗೆಯೇ ವಿದ್ಯಾರ್ಥಿವೃಂದದಲ್ಲಿಯೂ ಅವರು ಅನೇಕ ಗೆಳೆಯರ ಮನಸನ್ನು ಗೆದ್ದುಕೊಂಡಿದ್ದರು. ಧಾರವಾಡದ 'ಚಾ'ದೊಂದಿಗೆ ಇಲ್ಲಿಯ ಭಾಷೆಯನ್ನೂ ಬಹುಬೇಗ ಒಗ್ಗಿಸಿಕೊಂಡು ಅದನ್ನು ಪ್ರಸಂಗಾನುಸಾರ ತಮಾಷೆಯಾಗಿ ಬಳಸುತ್ತಿದ್ದರು. ಕನ್ನಡ ಸಂಘದ ಚಟುವಟಿಕೆಗಳಲ್ಲಿ ಅವರ ಸಂಘಟನಾಚಾತುರ್ಯ ಒಡೆದು ಕಾಣುತ್ತಿತ್ತು. ನಾಟಕ ಆಡುವುದರಲ್ಲಿ ಮತ್ತು ಆಡಿಸುವುದರಲ್ಲಿ ಅವರಿಗಿದ್ದ ಒಲವು ಆಗಲೇ ಪ್ರಕಟವಾಗಿ ಕಂಡುಬಂದಿತ್ತು.

ಸಿಂಧುವಳ್ಳಿ ನನ್ನನ್ನು ಭೆಟ್ಟಿಯಾಗಲು ಬಂದರೆ ಏನಾದರೊಂದು ಕಾರ್ಯಕ್ರಮದ ಯೋಜನೆ ಹಾಕಿಕೊಂಡೇ ಬರುತ್ತಿದ್ದರು. ಒಂದು ದಿನ, ತಾವು ಪುಸ್ತಕ ಪ್ರಕಾಶನವನ್ನು ಒಂದು ಉದ್ಯೋಗವಾಗಿ ಕೈಕೊಳ್ಳಬೇಕೆಂದಿರುವ ವಿಚಾರವನ್ನು ಪ್ರಸ್ತಾಪಿಸಿ ನನ್ನನ್ನು ಆಶ್ಚರ್ಯಗೊಳಿಸಿದರು. 'ಮೊದಲು ಎಂ.ಎ. ಮುಗಿಸಿ. ಆಮೇಲೆ ನಿಮ್ಮ ಸಾಹಸಕ್ಕೆ ಮೊದಲಾಗಲಿ' ಎಂದು ನಾನು ಹೇಳಿದೆ. ಆದರೆ ಅವರು ಮೊದಲೇ ನಿರ್ಧರಿಸಿಬಿಟ್ಟಿದ್ದರೆಂದು ತೋರುತ್ತದೆ. ಅವರಿಗೆ ಕೂಡಲೆ ಮುದ್ರಣದ ವ್ಯವಸ್ಥೆ ಮಾಡಬೇಕಾಗಿತ್ತು. ಲಿಂಗರಾಜ ಆರ್ಟ್ ಪ್ರೆಸ್ಸಿನ ಒಡೆಯರಾದ ಬೀಳಗಿ ರಾಮಣ್ಣನವರ ಪರಿಚಯ ಮಾಡಿಸಿದೆ. ಪ್ರಕಾಶನಕ್ಕೆ 'ಸುರುಚಿ' ಎಂಬ ಹೆಸರನ್ನು ಸೂಚಿಸಿದವರು ತೀ.ನಂ.ಶ್ರೀಯವರು. ಅದರ ಮೊದಲ ಪ್ರಕಟನೆ ಯು.ಆರ್. ಅನಂತಮೂರ್ತಿಯವರ ಪ್ರಥಮ ಕಥಾಸಂಗ್ರಹ 'ಎಂದೆಂದೂ ಮುಗಿಯದ ಕಥೆ'. ಅದರ ಬೆಲೆ ಒಂದು ರೂಪಾಯಿ. ಮೂವತ್ತಾರು ವರ್ಷಗಳ ಹಿಂದಿನ ಮಾತಲ್ಲವೆ? ಆಗ ಕರ್ನಾಟಕ ಕಾಲೇಜಿನ ಪ್ರಿನ್ಸಿಪಾಲರಾಗಿದ್ದ ವಿ.ಕೃ. ಗೋಕಾಕರ 'ನವ್ಯತೆ ಮತ್ತು ಕಾವ್ಯಜೀವನ' ಎರಡನೆಯ ಕೃತಿಯಾಗಿ ಹೊರಬಂದಿತು. ಆ ಮುದ್ರಣಕ್ಕೆ ಯಾವ ಪ್ರತಿಫಲವನ್ನು ನಿರೀಕ್ಷಿಸದೆ ಗೋಕಾಕರು ನೀಡಿದ ಪ್ರೋತ್ಸಾಹ ಮುಂದೆ ಹತ್ತು ವರ್ಷಗಳ ನಂತರ ಅವರು ಬೆಂಗಳೂರು ವಿಶ್ವವಿದ್ಯಾಲಯದ ಕುಲಪತಿಯಾಗಿ ಹೋದಮೇಲೂ ಮುಂದುವರಿಯಿತು. ನವ್ಯಕಥೆಗಳಲ್ಲಿ ಇಂದಿಗೂ ತನ್ನ ವಿಶಿಷ್ಟ ಸ್ಥಾನವನ್ನು ಉಳಿಸಿಕೊಂಡಿರುವ ರಾಜಲಕ್ಷ್ಮಿ ಎನ್. ರಾವ್ ಅವರ ಕಥಾಸಂಗ್ರಹ 'ಸಂಗಮ' ಕೂಡ ಧಾರವಾಡದಲ್ಲೇ (೧೯೫೬) ಅಚ್ಚಾಯಿತು. ಅದೇ ವರ್ಷ ನನ್ನ ಐದನೆಯ ಕವನಸಂಗ್ರಹ (ದೀಪಧಾರಿ) ಹಾಗೂ ಪ್ರೊ. ಮಾಳವಾಡರ 'ಸಾಹಿತ್ಯ ಸಮಾಲೋಚನೆ' ಪುಸ್ತಕಗಳೂ 'ಸುರುಚಿ'ಯಿಂದ ಪ್ರಕಾಶನಗೊಂಡವು. ಆದರೆ ಅವು ಅಚ್ಚಾದದ್ದು ಮಾತ್ರ ಮೈಸೂರಲ್ಲಿ.

೧೯೫೭ರಲ್ಲಿ ಅನಂತಮೂರ್ತಿ ಮೈಸೂರಿಗೆ ಹೋದಮೇಲೂ ನಮ್ಮ ಸ್ನೇಹಕ್ಕೆ ಯಾವ ವ್ಯತ್ಯಯವೂ ಉಂಟಾಗಲಿಲ್ಲ. ಅಲ್ಲಿಗೆ ಆಗಾಗ ಹೋದಾಗ ಅವರ ಮನೆಯ ಅತಿಥಿಯಾಗಿರುತ್ತಿದ್ದೆ. ಧಾರವಾಡದ ಸಮಾಚಾರವನ್ನೆಲ್ಲ ಅವರು ನನ್ನಿಂದ ತಿಳಿದುಕೊಳ್ಳುತ್ತ ತಮ್ಮ ಕುತೂಹಲವನ್ನು ತಣಿಸಿಕೊಳ್ಳುತ್ತಿದ್ದರು. ತಮ್ಮ ಮೊದಲ ಎರಡು ಕಥಾಸಂಗ್ರಹಗಳನ್ನು ('ಸಂಜೆಮಲ್ಲಿಗೆ' ೧೯೬೭, 'ಬಯಲು-ಆಲಯ' ೧೯೭೩) ಬೆಳಕಿಗೆ ತಂದ ಸುರುಚಿ ಪ್ರಕಾಶನವನ್ನು ಶ್ರೀಮತಿ ಕಣವಿಯವರು ಈಗಲೂ ಕೃತಜ್ಞತೆಯಿಂದ ನೆನೆದುಕೊಳ್ಳುತ್ತಾರೆ.

ಲೇಖಕರ ಬಗ್ಗೆ ಗೌರವ, ಹಣಕಾಸಿನ ವಿಷಯಲ್ಲಿ ಪ್ರಾಮಾಣಿಕತೆ, ಪುಸ್ತಕಗಳ ವಿತರಣೆ, ಮಾರಾಟದ ಬಗ್ಗೆ ಕಾಳಜಿ ಮತ್ತು ವ್ಯವಹಾರ ಕೌಶಲ - ಅನಂತಮೂರ್ತಿಯವರ ಈ ಗುಣಗಳಿಂದ ಸುರುಚಿ ಪ್ರಕಾಶನ ನಾಡಿನಲ್ಲಿ ಬಹುಬೇಗ ಹೆಸರು ಪಡೆಯಿತು. ಸಾಹಿತ್ಯದ ಎಲ್ಲ ಪ್ರಕಾರದ ಗ್ರಂಥಗಳಿಗೂ ಅಲ್ಲಿ ಅವಕಾಶವಿತ್ತಲ್ಲದೆ ಅನೇಕ ಹೊಸ ಬರೆಹಗಾರರಿಗೂ ಅದು ಆಶಾಕಿರಣದಂತಿತ್ತು. ಆದರೆ ಇಂಥ ಒಂದು ಪ್ರಕಾಶನ ಸಂಸ್ಥೆ ನಿಂತು ಹೋಗುವ ಪ್ರಸಂಗ ಬಂದುದು ಕನ್ನಡದಲ್ಲಿ ಪುಸ್ತಕೋದ್ಯಮ ಎಂಥ ಪಡಿಪಾಟಲು ಎಂಬುದನ್ನು ಸೂಚಿಸುವಂತಿದೆ.

ಸಿಂಧುವಳ್ಳಿ ಸ್ವತಃ ಹೆಚ್ಚು ಬರೆಯಲಿಲ್ಲ. ಒಂದೆರಡು ನಾಟಕ, ಒಂದು ಪ್ರಬಂಧ, ಒಂದೆರಡು ಒಳ್ಳೆಯ ಸಂಪಾದಿತ ಗ್ರಂಥಗಳು. ಆದರೆ ಅವರ ಪಿಎಚ್.ಡಿ. ಪ್ರಬಂಧ 'ಗುಬ್ಬಿ ಕಂಪನಿ'ಯಂಥ ಸಮಗ್ರವೂ ಸ್ವಯಂಪೂರ್ಣವೂ ಆದ ಗ್ರಂಥ ಕನ್ನಡದಲ್ಲಿ ಅದೇ ಮೊದಲನೆಯದೆಂದರೆ ತಪ್ಪಾಗದು. ಅಲ್ಲದೆ ನಟರಾಗಿ, ನಿರ್ದೇಶಕರಾಗಿ, ಪ್ರಯೋಗಶೀಲರಾಗಿ ಸಿಂಧುವಳ್ಳಿ ಅನಂತಮೂರ್ತಿ ಕನ್ನಡ ರಂಗಭೂಮಿಗೆ ಸಲ್ಲಿಸಿದ ಹಾಗೂ ಸಲ್ಲಿಸುತ್ತಿರುವ ಸೇವೆ ಅತ್ಯಂತ ಮಹತ್ವಪೂರ್ಣವಾದದ್ದೆಂದು ನಾನು ಭಾವಿಸಿದ್ದೇನೆ. ಈ ದಿಸೆಯಲ್ಲಿ ಅವರಿಗೆ ಇನ್ನೂ ಹೆಚ್ಚಿನ ಶ್ರೇಯಸ್ಸುಂಟಾಗಲಿ ಎಂದು ಹೃತ್ಪೂರ್ವಕ ಹಾರೈಸುತ್ತೇನೆ.

('ಕಲಾ ಸುರುಚಿ' ೧೯೯೧)

ಸಾಹಿತ್ಯ ಸಮಾಹಿತ : ೨೦೦೭

## ೨೧

# ಸಾಂಸ್ಕೃತಿಕ ಲೋಕದ ಮಾಧುರ್ಯ ಹೆಚ್ಚಿಸಿದ ಕವಿ

ನಿನ್ನನ್ನು ಕಣ್ಣಾರೆ ಕಾಣದವರೂ ಕೂಡ
ನಿನ್ನ ಗಂಧವ್ರತವ ಮೆಚ್ಚುವರು - ಮನಸೋತು
ಇದ್ದಾಗ ಇಷ್ಟು ; ಉಳಿದದ್ದು ನಾಳೆಯ ಮಾತು.

ಕೆಲವರಿರುತ್ತಾರೆ, ಹೊಸದಾಗಿ ಪರಿಚಯವಾದಾಗಲೂ ಎಷ್ಟೋ ದಿನಗಳಿಂದ ನಾವು ಸ್ನೇಹಿತರಾಗಿದ್ದೇವೆಂಬ ಭಾವನೆ ಬಂದು ಬಿಡುತ್ತದೆ. ಸಾಹಿತ್ಯ ಮತ್ತು ಸಾಂಸ್ಕೃತಿಕ ಸಂದರ್ಭಗಳಿಗೆ ಸ್ಪಂದಿಸುತ್ತ ಬಂದ ಸಮಾನ ಮನಸ್ಕರಿಗೆ ಎಲ್ಲೋ ಒಂದು ಕಡೆ ಈ ಬಗೆಯ ಹತ್ತುಗಡೆ ಏರ್ಪಟ್ಟಿರುತ್ತದೆ. ಪ್ರತ್ಯಕ್ಷದಲ್ಲಿಯೂ ಅದು ಪರಸ್ಪರ ಬೆಸೆದುಕೊಂಡು ವಿಶ್ವಾಸದಿಂದ ಬೆಳೆದು ಬಂದರೆ ಅದೊಂದು ಭಾಗ್ಯವೆಂದೇ ಭಾವಿಸಬೇಕು. ಡಾ. ಎಚ್.ಎಸ್. ವೆಂಕಟೇಶಮೂರ್ತಿಯವರೊಂದಿಗೆ ಎರಡು ದಶಕಕ್ಕೂ ಮಿಕ್ಕಿ ಬೆಳೆದು ಬಂದ ಈ ಬಗೆಯ ಸ್ನೇಹಬಾಂಧವ್ಯವನ್ನು ನಾನು ಈ ಸಂದರ್ಭದಲ್ಲಿ ಸಂತೋಷದಿಂದ ನೆನೆದುಕೊಳ್ಳುತ್ತೇನೆ. ದಿ. ೧೭.೨.೧೯೭೮ರಂದು ವೆಂಕಟೇಶಮೂರ್ತಿ ತಮ್ಮ 'ಸಿಂದಾಬಾದನ ಆತ್ಮಕಥೆ' ಸಂಗ್ರಹವನ್ನು ನನಗೆ ಪ್ರೀತಿಯ ಕಾಣಿಕೆಯಾಗಿ ನೀಡಿದರು. ಅವರ ಹಿಂದಿನ ಮೂರು ಸಂಕಲನಗಳಲ್ಲಿಯ ಲಯದ ಹಿಡಿತ, ಭಾಷೆಯ ಜೀವಂತಿಕೆ, ಸಹಜ ಶಬ್ದಚಿತ್ರಗಳ ಆಕರ್ಷಣೆಯನ್ನು ಕೆಲಮಟ್ಟಿಗೆ ಗುರುತಿಸಿದ್ದೆನಾದರೂ 'ಸಿಂದಾಬಾದನ ಆತ್ಮಕಥೆ'ಯಲ್ಲಿ ನನಗೆ ಕಂಡುಬಂದ ಸಂಯೋಜಿತವಾದ ಕಾವ್ಯಸೃಷ್ಟಿ ಕವಿಯ ಕಾವ್ಯಜೀವನದಲ್ಲಿ ಮಹತ್ವದ್ದೆನಿಸಿತು.

ಕಾವ್ಯಕ್ಷೇತ್ರದಲ್ಲಿ ಕಾಣಿಸಿಕೊಳ್ಳುವ ಹೊಸ ಪ್ರತಿಭೆಗಳ ಬಗ್ಗೆ ಆತ್ಮೀಯ ಸ್ನೇಹಿತರಾದ ಡಾ. ಜಿ.ಎಸ್. ಶಿವರುದ್ರಪ್ಪನವರೊಡನೆ ನಾನು ಆಗಾಗ ಸಮಾಲೋಚಿಸುವುದುಂಟು. ಅಂಥ ಹಲವಾರು ಪ್ರತಿಭೆಗಳನ್ನು ಗುರುತಿಸಿ ಅವರು ಬರೆದ ಮುನ್ನುಡಿಗಳು ನಮ್ಮ ಕಾವ್ಯದ ಇತಿಹಾಸಕ್ಕೆ ಹಾಗೂ ಅಭ್ಯಾಸಕ್ಕೆ ಆಕರವಾಗಿ ಉಳಿಯಬಲ್ಲವು. 'ಸಿಂದಾಬಾದನ ಆತ್ಮಕಥೆ'ಯ ಮುನ್ನುಡಿ ಈ ದಿಸೆಯಲ್ಲಿ ಮುಖ್ಯವಾಗಿದ್ದು ವೆಂಕಟೇಶ ಮೂರ್ತಿಯವರ ಕಾವ್ಯಜೀವನದ ಬೆಳವಣಿಗೆಯ ಚರ್ಚೆಗೆ ಒಂದು ನೆಲೆಗಟ್ಟನ್ನು ಒದಗಿಸಿದ್ದಲ್ಲದೆ ಕನ್ನಡ ವಿಮರ್ಶಾಪ್ರಜ್ಞೆ ಅವರ ಕಾವ್ಯದ ಸಹವರ್ತಿಯಾಗಿರುವಂತೆ ಪ್ರೇರೇಪಿಸಿದ್ದನ್ನು ಇಲ್ಲಿ ನೆನೆಯಬಹುದು. ನವ್ಯಕಾವ್ಯದ ಏರಾಟದ ಸಂದರ್ಭದಲ್ಲಿ ತಮ್ಮ ಸಮಚಿತ್ತವನ್ನು ಕಾಯ್ದುಕೊಂಡ ಶಿವರುದ್ರಪ್ಪನವರು, ನವ್ಯಕಾವ್ಯದ ಗುಣಾಂಶವನ್ನು ಸ್ವೀಕರಿಸಿಯೂ ಎಚ್.ಎಸ್.ವಿ. ಅನುಸರಿಸಿದ ಭಿನ್ನವಾದ ಕಾವ್ಯಮಾರ್ಗದ

ಬಗೆಗೆ ಸೂಕ್ಷ್ಮವಾದ ಒಳನೋಟಗಳನ್ನು (ವಸ್ತು ಸಂವಿಧಾನದ ಹೊಸತನವನ್ನೊಳಗೊಂಡು) ಎತ್ತಿತೋರಿಸಿದ್ದು ಕವಿಗೆ ತುಂಬ ಉತ್ತೇಜನಕಾರಿಯಾಗಿ ಪರಿಣಮಿಸಿರಲು ಸಾಕು.

ಇದಕ್ಕೂ ಹತ್ತು ವರ್ಷಗಳ ಮೊದಲೇ ೧೯೬೪ರಲ್ಲಿ ಪ್ರಕಟವಾದ ಎನ್.ಎಸ್. ಲಕ್ಷ್ಮೀನಾರಾಯಣಭಟ್ಟರ ಪ್ರಥಮ ಕವನಸಂಕಲನ 'ವೃತ್ತ'ಕ್ಕೆ ಮುನ್ನುಡಿ ಬರೆಯುವಾಗಲೂ ಸಾಹಿತ್ಯ ಕ್ಷೇತ್ರದಲ್ಲಿ ಮನೆ ಮಾಡಿಕೊಂಡ 'ಗುಂಪುಗಾರಿಕೆ'ಯನ್ನು ಎತ್ತಿತೋರಿಸಿ, ಹೊಸದಾಗಿ ಬರೆಯುವ ಕವಿ ಅಂಥ ಪರಿಸರದಲ್ಲಿ ನಾವೀನ್ಯ ಪ್ರದರ್ಶನದ ಹಂಬಲದಿಂದ ತನ್ನ ಸಹಜ ಸ್ವಭಾವಕ್ಕೆ ವಿರುದ್ಧವಾದ ಮಾರ್ಗಗಳನ್ನು ಅನುಸರಿಸುವ ಅಪಾಯಗಳ ಸೂಚನೆಯನ್ನು ಶಿವರುದ್ರಪ್ಪನವರು ನೀಡಿದ್ದುಂಟು. ಕಾವ್ಯ ನಿರ್ಮಿತಿ ಒಂದು ನಿಲುಗಡೆಗೆ ಬಂದಿತೇನೊ ಎಂಬ ಶಂಕೆ ಆವರಿಸಿದ ಆ ಸಂದರ್ಭದಲ್ಲಿ 'ಕವಿತೆ ಒಂದು ಬಗೆಯ ನಿರಾತಂಕ ಮನೋಧರ್ಮದಿಂದ ಆವಿರ್ಭವಿಸುವ ಜೀವಂತ ಕ್ರಿಯೆ' ಎಂಬುದನ್ನು ತರುಣ ಕವಿಗಳ ಗಮನಕ್ಕೆ ತಂದುಕೊಟ್ಟಿದ್ದಲ್ಲದೆ ಬೆಳೆಯುವ ಕವಿಗೆ ಮುಖ್ಯವಾಗಿ ಬೇಕಾದ ಈ ನಿರಾತಂಕ ಮನೋಧರ್ಮ ಭಟ್ಟರ ಯಶಸ್ವಿ ಕವಿತೆಗಳಲ್ಲಿ ಹೆಚ್ಚಿನ ಮಟ್ಟದಲ್ಲಿರುವುದನ್ನು ಸೂಚಿಸಿದರು. (ಭಟ್ಟರ ಹಾಗೂ ಮೂರ್ತಿಯವರ ಎರಡೂ ಪ್ರಥಮ ಸಂಕಲನಗಳು ಪ್ರಕಟಗೊಂಡದ್ದು ೧೯೬೪ರಲ್ಲಿ. ಒಂದು 'ವೃತ್ತ'ವಾದರೆ ಇನ್ನೊಂದು 'ಪರಿವೃತ್ತ'!)

'ಸಿಂದಾಬಾದನ ಆತ್ಮಕಥೆ'ಗೆ ಮುನ್ನುಡಿ ಬರೆಯುವ ಸಂದರ್ಭದಲ್ಲಿಯೇ (೧೯೭೭) ಹಿಂದಿನ ಕೆಲವು ವರ್ಷಗಳಲ್ಲಿ ಸಾಮಾಜಿಕ ಕಳಕಳಿಯನ್ನು ಕೇಂದ್ರವಾಗಿರಿಸಿಕೊಂಡ ಒಂದು ಅಭಿವ್ಯಕ್ತಿಯ ಚಳುವಳಿ ಹುಟ್ಟಿಕೊಂಡ ವಿಶೇಷ ಸಂಗತಿಯನ್ನೂ ಶಿವರುದ್ರಪ್ಪನವರು ನೆನಪಿಗೆ ತಂದುಕೊಡುವುದಲ್ಲದೆ ಈ ಸಾಮಾಜಿಕ ಎಚ್ಚರ ಹಾಗೂ ಪ್ರಜ್ಞೆ ಹೇಗೆ ಸಾಹಿತ್ಯದ ದಿಕ್ಕನ್ನೆ ಬದಲಾಯಿಸುವುದರಲ್ಲಿ ಪ್ರಮುಖ ಪಾತ್ರ ವಹಿಸುತ್ತದೆನ್ನುವುದನ್ನು ಸೂಚಿಸಲು ಮರೆಯುವುದಿಲ್ಲ. ಇಂತಹ ಸಂಧಿ ಕಾಲದಲ್ಲಿ ನಿರ್ಲಕ್ಷಿತವಾದ ಹಾಗೂ ಕಾವ್ಯಕ್ಕೆ ಅಗತ್ಯವಾದ ಎಷ್ಟೋ ಒಳ್ಳೆಯ ಅಂಶಗಳನ್ನು ಅಳವಡಿಸಿಕೊಳ್ಳಬೇಕಾದ ಜವಾಬ್ದಾರಿ ಪಂಥಬದ್ಧರಲ್ಲದ, ಮುಕ್ತಪ್ರಜ್ಞೆಯ ಕವಿಗಳ ಪಾಲಿಗೆ ಕಾದಿತ್ತು. ಈ ಮಾತುಗಳ ನೆಲೆಯಿಂದಲೇ ಒಂದು ನಿಟ್ಟಿನಲ್ಲಿ ವೆಂಕಟೇಶಮೂರ್ತಿ ಪ್ರಯೋಗಶೀಲರಾಗಿ ಬೆಳೆಯುತ್ತ ಆ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸುತ್ತ ಬಂದಿದ್ದಾರೆನ್ನಬಹುದು.

ಇದರ ಮುಂದಿನ ಹೆಜ್ಜೆಯಾಗಿ 'ಕ್ರಿಯಾಪರ್ವ'ದ ಮುನ್ನುಡಿಯಲ್ಲಿ ಯು.ಆರ್. ಅನಂತಮೂರ್ತಿಯವರು ಎಚ್.ಎಸ್.ವಿ. ಕಾವ್ಯದ ಸಂವಹನಸುಭಗತೆ, ಶಿಸ್ತಿನ ಧಾಟಿ, ಭಾಷಾ ಪ್ರಯೋಗ, ಛಂದೋವೈವಿಧ್ಯ, ಪರಂಪರೆಯ ದಟ್ಟವಾದ ಪ್ರಜ್ಞೆ, ಸಮಕಾಲೀನ ವಿಮರ್ಶಾ ಧೋರಣೆಗೆ ತಕ್ಕಂತೆ ತನ್ನ ಕಾವ್ಯವನ್ನು ಬದಲಿಸಿಕೊಳ್ಳದಿರುವ ಅಂಶವನ್ನು ಮೆಚ್ಚಿಕೊಂಡಿದ್ದಾರೆ. (ಇವುಗಳಲ್ಲಿ ಕೊನೆಯ ಅಂಶವನ್ನು ಶಿವರುದ್ರಪ್ಪನವರು ಬೇರೆ ರೀತಿಯಿಂದ ಈ ಮೊದಲೇ ವ್ಯಕ್ತಪಡಿಸಿದ್ದರು.) ಸಮಕಾಲೀನ ಕಾವ್ಯದ ಏಕತಾನತೆಗೆ ಬದಲಿಯಾಗಿ

ವೆಂಕಟೇಶಮೂರ್ತಿಯವರ ಕಾವ್ಯವನ್ನು ಸ್ವಾಗತಿಸುತ್ತಲೇ ಇವರ ಕಾವ್ಯದಲ್ಲಿ ಒಟ್ಟು ಕಾವ್ಯಶೋಧನೆಗೆ ಪ್ರೇರಕವಾದ ಮೂಲವಸ್ತು ಯಾವುದೆಂಬುದನ್ನು ಕಂಡುಕೊಳ್ಳುವುದು ಇವರಿಗೆ ಕಷ್ಟವೆನಿಸಿದೆ. ಈ ಪ್ರಶ್ನೆಗೆ ಉತ್ತರವನ್ನು ಕೀರ್ತಿನಾಥ ಕುರ್ತಕೋಟಿಯವರು 'ಒಣಮರದ ಗಿಳಿಗಳು' ಸಂಕಲನಕ್ಕೆ ತಾವು ಬರೆದ ಮುನ್ನುಡಿಯಲ್ಲಿ ಕಂಡುಕೊಂಡಿದ್ದಾರೆ. ಅಜ್ಞಾತವನ್ನು ಕಂಡುಕೊಂಡು ಅದರೊಡನೆ ಸೇರಿಯೂ ಕೂಡ, ತನ್ನತನವನ್ನು ಉಳಿಸಿಕೊಳ್ಳುವುದು ಸಾಧ್ಯವೆ? ಎಂಬ ಪ್ರಶ್ನೆಗೆ ಉತ್ತರ ಹುಡುಕುವುದೇ ಎಚ್.ಎಸ್.ವಿ.ಯವರ ಮೂಲ ಸಮಸ್ಯೆ ಎಂಬುದು ಕುರ್ತಕೋಟಿಯವರ ಅಭಿಪ್ರಾಯ. ಡಾ.ಜಿ.ಎಸ್. ಆಮೂರ ಈ ಪ್ರಶ್ನೆಗೆ ತಮ್ಮದೇ ಆದ ಒಳನೋಟದಿಂದ ಹೀಗೆ ಸಮಜಾಯಿಸುತ್ತಾರೆ. "ಬರವಣಿಗೆ ಅನುಭವಗಳನ್ನು ಚದುರದಂತೆ ಕಟ್ಟಿಡುವ ಒಂದು ಕ್ರಮ ಎಂದು ನಂಬಿರುವ ವೆಂಕಟೇಶಮೂರ್ತಿಯವರಿಗೆ ಒಂದು ಕೇಂದ್ರವಸ್ತುವಿನ ಅಥವಾ ಕೇಂದ್ರದರ್ಶನದ ಅವಶ್ಯಕತೆ ಕಂಡುಬಂದಿಲ್ಲ. ಸೃಷ್ಟಿಯ ಪ್ರೀತಿಯೊಂದೇ ಕವಿಗೆ ಮುಖ್ಯ. ಜಗತ್ತನ್ನು ಸಹ್ಯಗೊಳಿಸುವುದು ಕವಿಯ ಕಾರ್ಯ ಎಂಬ ನಂಬುಗೆ ಅವರಲ್ಲಿ ಕಾವ್ಯಶ್ರದ್ಧೆಯನ್ನು ಕಾಯ್ದುಕೊಂಡು ಬಂದಿದೆ."

ಕವಿಯ ಆಧ್ಯಾತ್ಮಿಕ ಭಾವಕೋಶವನ್ನು ಅನಾವರಣ ಮಾಡುವ ಕವನಗಳನ್ನು ಲಕ್ಷಿಸುತ್ತ ಡಾ. ಎಚ್.ಎಸ್. ರಾಘವೇಂದ್ರರಾವ್ ಅವರು "ಬದುಕಿನ ವಿವರಗಳನ್ನು ಮತ್ತು ಅದನ್ನು ಕುರಿತ ಮನುಷ್ಯನ ಧೋರಣೆಗಳಲ್ಲಿ ಕಾವ್ಯವನ್ನು ಕಾಣಬಲ್ಲ ಮತ್ತು ಅದಕ್ಕೆ ಆಕರ್ಷಕವಾದ ಪ್ರತಿಭೆಗೆ ಮಾತ್ರ ಸಾಧ್ಯವಾದ ಭಾಷಿಕ ರೂಪವನ್ನು ಕೊಡಬಲ್ಲ ಅಗಾಧವಾದ ಕಲ್ಪನಾಶಕ್ತಿಯನ್ನು ವೆಂಕಟೇಶಮೂರ್ತಿಯವರ ಸಮಗ್ರ ಕಾವ್ಯದ ಸಾಮಾನ್ಯಗುಣ"ವೆಂಬುದನ್ನು ಸಮರ್ಪಕವಾಗಿ ಗುರುತಿಸಿದ್ದಾರೆ. ಅಲ್ಲದೆ ಪು.ತಿ.ನ. ಮತ್ತು ಕೆ.ಎಸ್.ನ. ರವರ ಕಾವ್ಯ ಮನೋಧರ್ಮಗಳ ಅತಿ ವಿಶಿಷ್ಟವಾದ ಸಂಯೋಗವನ್ನು ಇವರಲ್ಲಿ ಕಂಡಿದ್ದಾರೆ. ಎಚ್.ಎಸ್.ವಿ. ಯವರದು ಸಾಮಾಜಿಕ ವಿಷಮತೆಯ ಪರಿಣಾಮಗಳನ್ನು ವ್ಯಕ್ತಿಯ ದುರಂತದ ಮೂಲಕವೇ ಕಂಡರಿಸುವ ದಾರಿಯೆಂದೂ ಅವರ ಮೂಲ ಆಸಕ್ತಿಗಳು ಮನುಷ್ಯನ ಸಾಮಾಜಿಕ ಆರ್ಥಿಕ ಆಸಕ್ತಿಗಳಿಂದ ನಸು ಭಿನ್ನವಾದ ಸಾರ್ವಕಾಲಿಕ ಆಸಕ್ತಿಯ ನೆಲೆಗೆ ಸೇರಿದವೆಂಬ ಅಂಶವನ್ನು ರಾಘವೇಂದ್ರರಾವ್ ಅವರ ವಿಮರ್ಶೆ ಕಂಡುಕೊಂಡಿರುವುದು ಗಮನಾರ್ಹವಾಗಿದೆ. ವೆಂಕಟೇಶಮೂರ್ತಿಯವರ ಕಾವ್ಯದ ತಲಸ್ಪರ್ಶಿಯಾದ ವಿಮರ್ಶೆ ನೀಡಿದ ರಾಘವೇಂದ್ರರಾವ್ ಅವರು ಈ ಕವಿ, ಮುಖ್ಯವಾದ ಕಾವ್ಯವನ್ನು ರಚಿಸಿಯೂ ಕಾವ್ಯ ಸಂಪ್ರದಾಯದಲ್ಲಿ ಅಮುಖ್ಯರಾಗಿ ಉಳಿಯುತ್ತಾರೊ ಅಥವಾ ಕನ್ನಡ ಕಾವ್ಯದ ಮೈಲುಗಲ್ಲುಗಳಲ್ಲಿ ಒಂದಾಗುತ್ತಾರೊ ಎಂಬ ಕುತೂಹಲ ವ್ಯಕ್ತಪಡಿಸಿದ್ದುಂಟು. ನಂತರದ ಎರಡು ದಶಕಗಳಲ್ಲಿ ಪ್ರಕಟಗೊಂಡ ಅವರ ಏಳು ಕವನ ಸಂಗ್ರಹಗಳಲ್ಲಿ ಎರಡನೆಯ ಘಟ್ಟದಲ್ಲಿ, ಮಾಗಿದ ಕಾವ್ಯ ವ್ಯಕ್ತಿತ್ವ ನೀಡುವ ಕೆಲವು ಪರಿಪಕ್ವ ಫಲಗಳಿವೆಯೆಂದು ನನಗನಿಸುತ್ತದೆ. ತಮ್ಮ ಎಂದಿನ ಪ್ರಯೋಗಶೀಲತೆಯನ್ನು ಸಾನೆಟ್ ಪ್ರಕಾರದಲ್ಲಿಯೂ ಮೆರೆದು ಅದರ ಸಾಧ್ಯತೆಗಳನ್ನು ವಿಸ್ತರಿಸುವ ಪ್ರಯತ್ನ ಕೂಡ ಮೆಚ್ಚುವಂತಿದೆ.

ಸಾಹಿತ್ಯವನ್ನು ಕೆಲವು ನಿರೀಕ್ಷೆಗಳನ್ನಿಟ್ಟುಕೊಂಡು ಪ್ರವೇಶಿಸುವ ನಮ್ಮ ಗ್ರಹಿಕೆ ಸೀಮಿತವಾಗಿ ಬಿಡುವುದರ ಕಡೆಗೆ ನಮ್ಮ ಲಕ್ಷ್ಯವನ್ನು ಸೆಳೆಯುತ್ತ ನಮಗೆ ಹಠಾತ್ತನೆ ಎದುರಾಗುವ ಅನಿರೀಕ್ಷಿತ ಅನುಭವ ಲೋಕಗಳಿಗೆ ನಾವು ಮುಖಾಮುಖಿಯಾಗದಿರುವುದು ಇಂದು ನಾವು ಎದುರಿಸುತ್ತಿರುವ ಬಹುಮುಖ್ಯ ಸಾಂಸ್ಕೃತಿಕ ಬಿಕ್ಕಟ್ಟು ಎನ್ನುತ್ತಾರೆ ಡಾ. ನರಹಳ್ಳಿ ಬಾಲಸುಬ್ರಹ್ಮಣ್ಯ ಅವರು. 'ಭೂಮಿಯೂ ಒಂದು ಆಕಾಶ' ಎಂಬ ಇತ್ತೀಚಿನ ಕವನ ಸಂಗ್ರಹದಲ್ಲಿ ಕವಿ ಈ ಬಿಕ್ಕಟ್ಟನ್ನು ಸೃಜನಶೀಲ ನೆಲೆಯಲ್ಲಿ ಎದುರಿಸುವ ಗಂಭೀರ ಪ್ರಯತ್ನ ನಡೆಸಿರುವುದನ್ನು ಎತ್ತಿ ಹಿಡಿದಿರುವ ಬಾಲಸುಬ್ರಹ್ಮಣ್ಯ ವೆಂಕಟೇಶಮೂರ್ತಿಯವರ ಕಾವ್ಯದ ಮತ್ತೊಂದು ಮುಖ್ಯಾಂಶವನ್ನು ಪರ್ಯಾಯವಾಗಿ ಸೂಚಿಸಿದಂತಿದೆ. 'ಪ್ರತಿಯೊಂದು ಕವನ ಸಂಕಲನದಲ್ಲಿಯೂ ಹೊಸದಾರಿಯನ್ನು, ಹೊಸ ಅನುಭವಗಳ ಅಭಿವ್ಯಕ್ತಿಯನ್ನು ಶೋಧಿಸುತ್ತಾ ಆ ಕಾರಣದಿಂದಾಗಿಯೆ ಯಾವಾಗಲೂ ತಮ್ಮ ಕಾವ್ಯ ಕ್ರಿಯೆಯಲ್ಲಿ ಜೀವಂತಿಕೆಯನ್ನು ಉಳಿಸಿಕೊಂಡಿರುವ ಕವಿ ಎಚ್.ಎಸ್.ವಿ' ಎಂಬ ಸಿ.ಎನ್. ರಾಮಚಂದ್ರನ್ ಅವರ ಅಭಿಪ್ರಾಯವನ್ನು ನಿರ್ವಿವಾದವಾಗಿ ಒಪ್ಪಿಕೊಳ್ಳಬಹುದು. ಇಂಥ ಹುಲುಸಾದ ಹಾಗೂ ಚೈತನ್ಯದಾಯಕವಾದ ಕಾವ್ಯಸೃಷ್ಟಿಯೊಂದಿಗೆ ಮಕ್ಕಳ ಮಾನಸಿಕ ಬೆಳವಣಿಗೆಯಲ್ಲಿ ಆಸಕ್ತಿಯುಳ್ಳ ಹೊಸ ಲೇಖಕರಿಗೆ ಹೊಸ ಮಾದರಿಯನ್ನೊದಗಿಸುವ ಮಕ್ಕಳ ಸಾಹಿತ್ಯವನ್ನು ರಚಿಸಿ ವೆಂಕಟೇಶಮೂರ್ತಿ ದೊಡ್ಡ ಅರಕೆಯನ್ನು ತುಂಬಿಕೊಟ್ಟ ಶ್ರೇಯಸ್ಸಿಗೂ ಪಾತ್ರರಾಗಿದ್ದಾರೆ. ಇದೂ ಅಲ್ಲದೆ ಕಾವ್ಯಗುಣದಿಂದ ಕಳಕಳಿಸುವ ನಾಟಕ ರಚನೆ ಮಾಡಿದ್ದಾರೆ. 'ಉರಿಯ ಉಯ್ಯಾಲೆ' ಒಂದು ಅದ್ಭುತವಾದ ಏಕವ್ಯಕ್ತಿ ರಂಗಪ್ರಯೋಗದ ನಾಟಕವಾಗಿದೆ. ತಮ್ಮ ಸಮೃದ್ಧವಾದ ಭಾವಗೀತೆಗಳಿಂದ ಸುಗಮ ಸಂಗೀತಕ್ಕೆ ವಿಶೇಷ ಚಾಲನೆ ನೀಡಿ ಕಾವ್ಯವನ್ನು ಓದುಗರ ಮತ್ತು ಕೇಳುಗರ ಪ್ರೀತಿಯ ಸಂಗಾತಿಯನ್ನಾಗಿಸಿದ ಮುಖ್ಯರಲ್ಲಿ ಅವರೂ ಒಬ್ಬರು. ಸಾಹಿತ್ಯವನ್ನು ಓದುವ ಒಂದು ಸಂಗೀತ ಶೈಲಿಯಾಗಿ, ಸಂಗೀತದ ಮೂಲಕ ಸಾಹಿತ್ಯದ ಅರ್ಥೈಕೆಯಾಗಿ ಅವರು ಸುಗಮ ಸಂಗೀತವನ್ನು ಪರಿಗಣಿಸಿರುವುದು ಗಾಯಕರಿಗೆ ಮಾರ್ಗದರ್ಶನದಂತಿದೆ. ಸುಗಮ ಸಂಗೀತದ ಗಾಯಕರು, ಸಂಯೋಜಕರು, ನಿರ್ದೇಶಕರು ವೆಂಕಟೇಶಮೂರ್ತಿಯವರಂಥ ಮುಕ್ತಪ್ರಜ್ಞೆಯ ಕವಿಗಳಿಂದ ಪಡೆದಿರುವ ಪ್ರಯೋಜನ ಅಷ್ಟಿಷ್ಟಲ್ಲ. ಹೀಗೆ ಅನೇಕ ವಿಧದಲ್ಲಿ ನಮ್ಮ ಸಾಂಸ್ಕೃತಿಕ ಲೋಕದ ಮಾಧುರ್ಯವನ್ನು ಹೆಚ್ಚಿಸಿದ ಕವಿ ಎಚ್.ಎಸ್.ವಿ.

ಸರಳತೆ, ಸಜ್ಜನಿಕೆ, ಸ್ನೇಹಪರತೆಗೆ ಮತ್ತೊಂದು ಹೆಸರಿನಂತಿರುವ ನಮ್ಮೆಲ್ಲರ ಪ್ರೀತಿಯ ಕವಿ ಡಾ. ಎಚ್.ಎಸ್. ವೆಂಕಟೇಶಮೂರ್ತಿಯವರಿಗೆ ಅರವತ್ತು ತುಂಬಲಿರುವ ಈ ಸಂದರ್ಭದಲ್ಲಿ ಅವರಿಗೆ ಎಲ್ಲ ಬಗೆಯ ಶುಭವನ್ನು ಕೋರುತ್ತೇನೆ. ಕಾವ್ಯಸಾಧನೆಯ ಮಾರ್ಗದಲ್ಲಿ ಇನ್ನೂ ಏರಬೇಕಾದ ಎತ್ತರಗಳಿವೆ ಎಂಬುದನ್ನು ಅವರು ಬಲ್ಲರು. ಅವರೇ ತಮ್ಮ ಒಂದು ಕವಿತೆಯಲ್ಲಿ ಅಭಿವ್ಯಕ್ತಿಗೊಳಿಸಿದಂತೆ -

ಹಗಲು ಇರುಳು ಒಂದೆ ಸಮನೆ ಕಾಡುತಿರುವ
ಹೂವದು
ಮೇರುಗಿರಿಯ ಏರಿನಲ್ಲಿ ನನ್ನ ಕಾಯು-
ತಿರುವುದು

ಎಂಬ ಭೀಮನ ಕಾತರ ಕವಿಯದೂ ಆಗಿದೆಯೆಂಬ ಸೂಚನೆ ಕಂಡುಬರುತ್ತದೆ. ಅವರ ಈ ಹಂಬಲ ಇನ್ನೂ ಹಲವು ಉತ್ತಮ ಕೃತಿಗಳ ರಚನೆಯ ಮೂಲಕ ಈಡೇರಲೆಂದು ಹೃತ್ಪೂರ್ವಕವಾಗಿ ಹಾರೈಸುತ್ತೇನೆ.

('ಗಂಧವ್ರತ' ೨೦೦೫)

ಸಾಹಿತ್ಯ ಸಮಾಹಿತ : ೨೦೦೭

## ೨೨
## ಲಂಕೇಶ್ : ಕೆಲವು ಅನಿಸಿಕೆಗಳು

೧೯೫೭ ಎಂದು ತೋರುತ್ತದೆ, ಬೆಂಗಳೂರು ಆಕಾಶವಾಣಿಯವರು ವಿ.ಸೀ.ಯವರ ಅಧ್ಯಕ್ಷತೆಯಲ್ಲಿ ಸಾಹಿತ್ಯ ಪರಿಷತ್ತಿನಲ್ಲಿ ಸಭಾಂಗಣದಲ್ಲಿ ಕವಿ ಸಮ್ಮೇಳನವೊಂದನ್ನು ಏರ್ಪಡಿಸಿದ್ದರು. ನಾನೂ ಗೆ. ಶಿವರುದ್ರಪ್ಪನವರೂ ಅದರಲ್ಲಿ ಭಾಗವಹಿಸಿದ್ದೆವು. ಲಂಕೇಶ ಬಹುಶಃ ಆ ಸಭೆಗೆ ಬಂದಿರಬೇಕು. ಆಮೇಲೆ ಶಿವರುದ್ರಪ್ಪನವರು ಅವರು ವಾಸಿಸುತ್ತಿದ್ದ ಕೋಣೆಗೆ ನನ್ನನ್ನು ಕರೆದುಕೊಂಡು ಹೋದರು. ಸುಮತೀಂದ್ರ ನಾಡಿಗರೂ ಲಂಕೇಶರ ಜೊತೆಗಿದ್ದು ಕಾಲೇಜಿನಲ್ಲಿ ಅಭ್ಯಾಸ ಮಾಡುತ್ತಿದ್ದರು. ಲಂಕೇಶ ಈ ಮೊದಲು ಶಿವಮೊಗ್ಗೆಯಲ್ಲಿ ಶಿವರುದ್ರಪ್ಪನವರ ವಿದ್ಯಾರ್ಥಿಯಾಗಿದ್ದುದರಿಂದ ತುಂಬ ಸಲಿಗೆಯಿಂದ, ತಮಾಷೆಯಾಗಿ ಅವರೊಡನೆ ಮಾತುಕತೆಯಾಡಿದ ನೆನಪು. ಸಮೀಪದ ಹೋಟಲಿನಿಂದ ಚಹ ತರಿಸಿ ಅವರ ಕರ್ನಾಟಕ ಸಂಘ ಪ್ರಕಟಿಸಿದ ಒಂದು ಚಿಕ್ಕ ಪುಸ್ತಕವನ್ನು ನನಗೆ ಕೊಟ್ಟರು. ಅದರ ಹೆಸರು ಮರೆತಿದೆ. ಅದರಲ್ಲಿ ಲಂಕೇಶ ಹಾಗೂ ನಾಡಿಗರ ಕವಿತೆಗಳೂ ಇದ್ದವು. ಅಂದಿನ ಮಾತುಕತೆಯಲ್ಲಿ ಅವರಿಬ್ಬರಲ್ಲಿ ಯಾರು ಹೆಚ್ಚು ತುಂಟತನವನ್ನು ವ್ಯಕ್ತಪಡಿಸಿದರೆಂಬುದು ನೆನಪಿಲ್ಲ. ಆ ಅಲ್ಪ ಸಮಯದಲ್ಲಿಯೇ ಹಳ್ಳಿಯ ಹುಡುಗನ ವಿಶಿಷ್ಟ ಲಕ್ಷಣಗಳೆಲ್ಲ ಲಂಕೇಶರಲ್ಲಿ ನನಗೆ ಕಂಡುಬಂದವು. ಹಳ್ಳಿಯಿಂದಲೇ ಬಂದಿರುವ ನನಗೆ ಅವರ ಬಗ್ಗೆ ಪ್ರೀತಿಯುಂಟಾಗಲು ಇದೂ ಒಂದು ಕಾರಣವಾಗಿರಬೇಕು.

ಮುಂದೆ ಕೆಲವು ವರ್ಷ ಲಂಕೇಶರನ್ನು ಕಾಣುವ ಸಂದರ್ಭ ಬಂದಿರದಿದ್ದರೂ ಅವರ ಕವಿತೆ, ಕಥೆ, ಕಾದಂಬರಿ, ನಾಟಕಗಳು ಒಂದರ ಹಿಂದೊಂದು ಪ್ರಕಟವಾಗಿ ಅವರ ಸಾಹಿತ್ಯಿಕ ಬೆಳವಣಿಗೆ ನನ್ನಲ್ಲಿ ಸಹಜವಾಗಿಯೇ ಕುತೂಹಲವನ್ನು ಹುಟ್ಟಿಸಿತು. ಆ ಕಾಲದ ನವ್ಯ ಲೇಖಕರಲ್ಲಿಯೇ ಅತ್ಯಂತ ಪ್ರತಿಭಾವಂತರಾಗಿ, ಸ್ವಂತಿಕೆಯುಳ್ಳ ಲೇಖಕರಾಗಿ ರೂಪುಗೊಂಡ ಅವರ ಬಗ್ಗೆ ಅಭಿಮಾನವುಂಟಾಯಿತು. ಅವರು ಬಳಸುತ್ತಿದ್ದ ಶಿವಮೊಗ್ಗ ಜಿಲ್ಲೆಯ ಹಳ್ಳಿಯ ಭಾಷೆಗೂ ನಮ್ಮ ಧಾರವಾಡ ಜಿಲ್ಲೆಯ ಹಳ್ಳಿಯ ಭಾಷೆಗೂ ಇರುವ ಸಾಮ್ಯ ನನಗೆ ಅಚ್ಚರಿಯುಂಟುಮಾಡಿತು.

* * * *

೧೯೬೫ರಲ್ಲಿ ಕೇರಳದ ಎರ್ನಾಕುಲಂನಲ್ಲಿ ನಡೆದ ಅಖಿಲ ಭಾರತ ಲೇಖಕರ ಸಮ್ಮೇಳನದಲ್ಲಿ ಕನ್ನಡದ ಬಹುತೇಕ ನವ್ಯಲೇಖಕರು ಭಾಗವಹಿಸಿದ್ದರು. ಕರ್ನಾಟಕ ವಿಶ್ವವಿದ್ಯಾಲಯದ

ಪ್ರತಿನಿಧಿಯಾಗಿ ನಾನೂ ಈ ಸಮ್ಮೇಳನಕ್ಕೆ ಹೋಗಿದ್ದೆ. ಆ ಸಂದರ್ಭದಲ್ಲಿ ಲಂಕೇಶ್ ಜೊತೆ ಹೆಚ್ಚು ಒಡನಾಟಕ್ಕೆ ಅವಕಾಶ ಒದಗಿತು. ಸಭೆಯಲ್ಲಿ ಚರ್ಚೆ ನಡೆಯುವಾಗ, ಹೊರಗೆ ತಿರುಗಾಡುವಾಗ ಹಾಸ್ಯ, ಟೀಕೆ, ವಿನೋದಗಳಲ್ಲಿ ಎಷ್ಟೋ ವಿಷಯಗಳು ಬಂದು ಹೋದದ್ದುಂಟು. ಅವರ 'ದೇಶಭಕ್ತ ಸೂಳೆಮಗನ ಗದ್ಯಗೀತೆ'ಗಿಂತ 'ಅವ್ವ' ಕವಿತೆ ಹೆಚ್ಚು ಮೌಲಿಕವಾದದ್ದೆಂಬ ನನ್ನ ಅನಿಸಿಕೆಯನ್ನು ಆಗ ವ್ಯಕ್ತಪಡಿಸಿದೆ.

ನೇರವಾದ ಮಾತು, ನಿಸ್ಸಂಕೋಚವಾದ ನಡೆ, ಅದೇ ಹೊತ್ತಿಗೆ ಅಕೃತ್ರಿಮವಾದ ಪ್ರೀತಿ, ಸ್ನೇಹ ಅವರ ಸ್ವಭಾವದ ವೈಶಿಷ್ಟ್ಯವೆನಿಸಿತು. ಅವರ ಈ ನೇರ ನಡೆ ಕೆಲವರನ್ನು ತಬ್ಬಿಬ್ಬುಗೊಳಿಸುತ್ತಿದ್ದಂತೆ ತೋರಿತು. ಒಂದು ಮುಂಜಾನೆ ಸಮ್ಮೇಳನದ ಸ್ಥಳಕ್ಕೆ ಬಸ್ಸಿನಲ್ಲಿ ಹೊರಟಾಗ ಲಂಕೇಶರ ಮಗ್ಗುಲಿನಲ್ಲಿ ಜಿ.ಬಿ. ಜೋಶಿ ಕುಳಿತಿದ್ದರು. ನಾನು ಅವರ ಹಿಂದಿನ ಸಾಲಿನಲ್ಲಿ ಕುಳಿತಿದ್ದೆ. 'ನಾನು ಹೊಸ ನಾಟಕವೊಂದನ್ನು ಬರೆದಿದ್ದೇನೆ, ನಿಮ್ಮ ಗ್ರಂಥಮಾಲೆಯಲ್ಲಿ ಪ್ರಕಟಿಸುತ್ತೀರಾ?' ಎಂದು ಲಂಕೇಶ ಜೋಶಿಯವರನ್ನು ಕೇಳಿದರು. ಅವರಿಗೆ ಒಮ್ಮೆಲೆ ಏನು ಹೇಳಬೇಕೆಂದು ತೋಚಲಿಲ್ಲವೆಂದು ತೋರುತ್ತದೆ. ಒಂದು ಕ್ಷಣ ತಡೆದು ಸದ್ಯಕ್ಕೆ ಆಗುವುದಿಲ್ಲವೆಂದೋ ಏನೋ ಹೇಳಿದರು. (ಇಪ್ಪತ್ತು ವರ್ಷಗಳ ನಂತರ ನಾನಿದನ್ನು ನೆನೆದುಕೊಂಡಾಗ ಐವತ್ತು ವರ್ಷ ತುಂಬಿದ ಮ.ಗ್ರ. ಮಾಲೆಯ ಬಗ್ಗೆ ಹೆಮ್ಮೆ ಹಾಗೂ ವಿಷಾದ ಎರಡೂ ಉಂಟಾಗುತ್ತದೆ)

ಸಮ್ಮೇಳನದ ವ್ಯವಸ್ಥಾಪಕರು ಪ್ರೇಕ್ಷಣೀಯ ಸ್ಥಳಗಳಿಗೂ ನಮ್ಮನ್ನು ಕರೆದೊಯ್ಯುವ ವ್ಯವಸ್ಥೆ ಮಾಡಿದ್ದರು. ಒಂದು ದಿನ ಸುಂದರವಾದ ಕೋವಲಂ ಬೀಚಿನಲ್ಲಿ ನಾವು ಕೆಲವರು ಕುಳಿತುಕೊಂಡಿದ್ದೆವು. ದಂಡೆಯಲ್ಲಿ ಸಣ್ಣ ಸಣ್ಣ ದೋಣಿಗಳಿದ್ದವು. 'ದೋಣಿಯಲ್ಲಿ ಕುಳಿತು ಹೋಗಿ ಬರೋಣವೆ?' ಎಂದು ಲಂಕೇಶ್ ನನ್ನನ್ನು ಕೇಳಿದರು. ನನಗೆ ಹೆದರಿಕೆಯೇನೂ ಇಲ್ಲ, ಈಜಲು ಬರುತ್ತದೆ. ಆದರೆ ಈಗ 'ಬೇಡ' ಎಂದೆ. 'ನಿಮಗೆ ರಿಸ್ಕ್ ತೆಗೆದುಕೊಳ್ಳುವುದು ಬೇಡ, ಅಲ್ಲವಾ?' ಎಂದರು. ನಾನು ಮುಗುಳ್ನಕ್ಕು ಸುಮ್ಮನಾದೆ.

* * * *

೧೯೭೦ರ ನಂತರ ಲಂಕೇಶ ಅನೇಕ ಸಲ ಧಾರವಾಡಕ್ಕೆ ಬಂದು ಹೋಗಿದ್ದಾರೆ. ಶಾಂತಿನಾಥ ದೇಸಾಯಿಯವರ ಜೊತೆಗೆ ಅವರಿಗೆ ಒಳ್ಳೆಯ ಸ್ನೇಹ. ವಿಶ್ವವಿದ್ಯಾಲಯದ ಕ್ಯಾಂಪಸ್ಸಿನಲ್ಲಿದ್ದಾಗ ನಾನೂ ದೇಸಾಯಿಯವರೂ ನೆರೆಹೊರೆಯವರಾಗಿದ್ದೆವು. "ಹಿಂದೆ, 'ನಡೆದು ಬಂದ ದಾರಿ'ಯಲ್ಲಿ ನಿಮ್ಮಿಬ್ಬರ ಫೋಟೋ ನೋಡಿದಾಗ ನೀವಿಬ್ಬರೂ ಅಣ್ಣತಮ್ಮಂದಿರಂತೆ ಕಂಡುಬಂದಿರಿ" ಎಂದು ಲಂಕೇಶ ನಮಗೆ ಹೇಳುತ್ತಿದ್ದರು.

ಲಂಕೇಶ ಮೊದಲ ಸಲ ನಮ್ಮ ಮನೆಗೆ ಬಂದಾಗಿನ ಪ್ರಸಂಗವೊಂದನ್ನು ನಮ್ಮ ಮನೆಯವರು ಇನ್ನೂ ನೆನಪಿಟ್ಟಿದ್ದಾರೆ. ಜೊತೆಗೆ ಶಾಂತಿನಾಥ ದೇಸಾಯಿ, ರಾಮಚಂದ್ರ ಶರ್ಮ ಮೊದಲಾದವರೂ ಇದ್ದರು. ಎಲ್ಲರೂ ಚಹ ಕುಡಿಯುತ್ತ ಹರಟುತ್ತ ಕುಳಿತಿರುವಾಗ ನಮ್ಮಮನೆಯವರು ಲಂಕೇಶರಿಗೆ ಅವರ ಮನೆಯವರ ಹೆಸರೇನೆಂದು ಕೇಳಿದರು. ಲಂಕೇಶ್

ಸ್ವಲ್ಪ ತಡೆದು, ಆಮೇಲೆ ಹೆಸರು ಹೇಳಿದರು. 'ಹೆಸರು ಹೇಳಲಿಕ್ಕೆ ಎಷ್ಟು ನಾಚುತ್ತೀಯಲ್ಲಪ್ಪಾ' ಎಂದು ಶರ್ಮ ಚೇಷ್ಟೆ ಮಾಡಿದರು. 'ನನ್ನನ್ನು ಹೀಗೆ ಹೆಸರು ಹೇಳಲು ಕೇಳಿದವರಲ್ಲಿ ಇವರೇ ಮೊದಲಿಗರು' ಎಂದು ನಕ್ಕರು ಲಂಕೇಶ. ಹಳ್ಳಿಯ ಬಾಳಿನ ಮುಗ್ಧತೆಯ ಅಂಶಗಳು ಅವರಲ್ಲಿ ಹೀಗೆ ಇನ್ನೂ ಉಳಿದುಕೊಂಡಿವೆ. ಅಲ್ಲಿಯ ಹುಂಬತನ ಇವರಲ್ಲಿ ಧೈರ್ಯ, ದಿಟ್ಟತನ, ಅಪಾಯಕ್ಕೆ ಎದೆಯೊಡ್ಡುವಿಕೆಯಲ್ಲಿ ನೆಲೆಗೊಂಡಿದೆ ಎನಿಸುತ್ತದೆ.

* * * *

ಹಲವಾರು ಸಭೆ, ಸೆಮಿನಾರುಗಳಲ್ಲಿ ನಾವು ಒಟ್ಟಾಗಿಯೇ ಭಾಗವಹಿಸಿರುವುದುಂಟು. ಉದ್ವೇಗಕ್ಕೆಡೆಗೊಡದ ಅವರ ವಿಷಯ ಪ್ರತಿಪಾದನೆಯನ್ನು ನಾನು ಮೆಚ್ಚಿಕೊಂಡಿದ್ದೇನೆ. ಕೆಲವು ಸಲ ಅವರಿಗೇ ಅಸ್ಪಷ್ಟವಾಗಿರುವ ಅನಿಸಿಕೆಗಳನ್ನು ಮಾತಿನ ಮೂಲಕ ಸ್ಪಷ್ಟಗೊಳಿಸಿಕೊಳ್ಳುತ್ತ, ತಮ್ಮ ಯಾವುದೋ ನೋವು, ನಿರಾಶೆಯನ್ನು ತೋಡಿಕೊಳ್ಳುತ್ತಿದ್ದಾರೆ ಎನಿಸುತ್ತದೆ. ೧೯೭೧ರಲ್ಲಿ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರ ನಡೆಸಿದ ವಿಚಾರಸಂಕಿರಣದಲ್ಲಿ "ನವ್ಯ ಕಾವ್ಯದಲ್ಲಿ ಸಾಮಾಜಿಕ ಪ್ರಜ್ಞೆ" ಎಂಬ ವಿಷಯ ಕುರಿತು ಲಂಕೇಶ ಲೇಖನ ಮಂಡಿಸಿದರು. ಅಡಿಗ ಹಾಗೂ ಬೇಂದ್ರೆಯವರ ಕಾವ್ಯದ ಬಗ್ಗೆ ವಿಶ್ಲೇಷಿಸುತ್ತ ಆನುಷಂಗಿಕವಾಗಿ 'ಅಡಿಗರು ಈ ವಾತಾವರಣದಲ್ಲಿ ಸಂಭಾವಿಸುವುದಕ್ಕೂ, ಬೇಂದ್ರೆಯವರು ತಮ್ಮ ವಾತಾವರಣದಲ್ಲಿ ಪರಿಭಾವಿಸುವುದಕ್ಕೂ ಇರುವ ವ್ಯತ್ಯಾಸ ನೋಡಿದರೆ ಇಬ್ಬರಿಗೂ ಇರುವ ವಿಶಿಷ್ಟ ದೌರ್ಬಲ್ಯ ತಿಳಿಯುತ್ತದೆ' ಎಂದರು. ಜೊತೆಗೆ ಅಭಿವ್ಯಕ್ತಿಗೆ ಸಂಬಂಧಿಸಿದಂತೆ ವಾಕ್‌ಸ್ವಾತಂತ್ರ್ಯದ ಬಗೆಗೂ ಕೆಲವು ಮಾತುಗಳಿದ್ದವು. ಅವರ ಮಾತು ಮುಗಿದ ಮೇಲೆ ಬೇಂದ್ರೆಯವರು ವೇದಿಕೆಗೆ ಬಂದು ತಮ್ಮ ತೀವ್ರ ಪ್ರತಿಕ್ರಿಯೆಯನ್ನು ತೋರಿಸುತ್ತ 'ಸಾಹಿತ್ಯ ಸೃಷ್ಟಿಸೋನಿಗೆ ವಾಕ್‌ಸ್ವಾತಂತ್ರ್ಯ ಇಲ್ಲ' ಇತ್ಯಾದಿ ಸ್ವಲ್ಪ ಉದ್ವೇಗಗೊಂಡಂತೆ ಮಾತನಾಡಿದರು. ಪರಸ್ಪರ ಮಾತಿನ ಚಕಮಕಿ ನಡೆಯಿತು. ಯಥಾಪ್ರಕಾರ ಬೇಂದ್ರೆಯವರು ತಮ್ಮ ಮಾತನ್ನೇ ನಡೆಸಿದರೂ 'ಅಭಿಪ್ರಾಯ ಭೇದದ ನಾಟಕ ಇದು' ಎಂದು ತಾವೇ ಹೇಳಿ ಕಾವನ್ನು ತಗ್ಗಿಸಲು ಪ್ರಯತ್ನಿಸಿದರು. ಆ ಸಂದರ್ಭದಲ್ಲಿ ಲಂಕೇಶ್ ಹೀಗೆಂದಿದ್ದರು : "ಅವರ ಅನ್ನಿಸಿಕೆಗಳನ್ನು ಅನುಸರಿಸದೆ ನೋಡಿದರೆ-ಬೇಂದ್ರೆ ವೇದಿಕೆಯ ಮೇಲೆ ಚೀರಾಡುತ್ತಿರುವ ಹಳ್ಳಿಗನ ಹಾಗೆ ಕಾಣಿಸುತ್ತಾರೆ.... ಬೇಂದ್ರೆಯವರಂಥ ಹಳ್ಳಿಗ, ಗತ್ತಿನ ಗಟ್ಟಿಗ, ಭಾವಗೀತಾತ್ಮಕ ವ್ಯಕ್ತಿ ನಮ್ಮಲ್ಲಿ ಇನ್ನು ಬರುವ ಸಂಭವ ಕಡಿಮೆ."

ಲಂಕೇಶರ ಬಗ್ಗೆ ಕೆಲವರು ವಿಚಿತ್ರ ಭಾವನೆ ಇಟ್ಟುಕೊಂಡಿರುವುದನ್ನು ನಾನು ಕಂಡಿದ್ದೇನೆ. ಅವರ ಭಾಷಣದಲ್ಲಿ ಎಂಥದೂ ವೀರಾವೇಶದ ತತ್‌ಕ್ಷಣ ಪ್ರಚೋದನೆಯನ್ನು ನಿರೀಕ್ಷಿಸಿ ಕೆಲವರು ನಿರಾಶೆಗೊಂಡಿದ್ದನ್ನು ನೋಡಿದ್ದೇನೆ. ಕೆಲವರ್ಷಗಳ ಹಿಂದೆ ರಾಜ್ಯ ಸಾಹಿತ್ಯ ಅಕಾಡೆಮಿ ಧಾರವಾಡದಲ್ಲಿ 'ನಾಳಿನ ಸಾಹಿತ್ಯ ಸ್ವರೂಪ'ದ ಬಗ್ಗೆ ವಿಚಾರಗೋಷ್ಠಿಯನ್ನು ಏರ್ಪಡಿಸಿದಾಗ 'ಸಾಹಿತ್ಯ ವಿಮರ್ಶೆಯ ಬಗ್ಗೆ ಲಂಕೇಶರ ಭಾಷಣ ಕೇಳಿದ ಹಿರಿಯ ಸಾಹಿತಿಯೊಬ್ಬರು 'ಈ ಹುಡುಗ ವಿಮರ್ಶೆಯ ನೆಪದಲ್ಲಿ ಅವರಿವರನ್ನು ಬೈದು ಮಾತಾಡಬಹುದೆಂದು ತಿಳಿದುಕೊಂಡಿದ್ದೆ. ಆದರೆ ಸಾಹಿತ್ಯದ ಬಗ್ಗೆ ಎಷ್ಟೊಂದು ಕಾಳಜಿಯಿಂದ, ವೈಚಾರಿಕ ನೆಲೆಯಲ್ಲಿ ವಿಷಯವನ್ನು

ಪ್ರತಿಪಾದಿಸಿದರು' ಎಂದು ನನ್ನೆದುರು ತಮ್ಮ ಸೋಜಿಗವನ್ನು ವ್ಯಕ್ತಪಡಿಸಿದರು. ಹೀಗೆಯೇ ಇನ್ನೊಂದು ಪ್ರಸಂಗ : ಗೋಕಾಕ ಚಳವಳಿಯ ಸಂದರ್ಭದಲ್ಲಿ ಧಾರವಾಡದ ಸಭೆಯೊಂದರಲ್ಲಿ ಭಾಗವಹಿಸಲು ಲಂಕೇಶರನ್ನು ಕೇಳಿಕೊಳ್ಳಲಾಗಿತ್ತು. ಅವರು ಒಪ್ಪಿಕೊಂಡು ಬಂದು ಭಾಷಣವನ್ನು ಮಾಡಿದರು. ಆ ಕಾವೇರಿದ ಆಂದೋಲನದ ಸಂದರ್ಭದಲ್ಲಿಯೂ ಅವರು ಅತ್ಯಂತ ಸಮಾಧಾನಚಿತ್ತದಿಂದ ಭಾಷೆ, ರಾಜಕಾರಣ ಇತ್ಯಾದಿಗಳನ್ನು ವಿಶ್ಲೇಷಿಸುತ್ತ, ನಡುನಡುವೆ ಗುಂಡೂರಾಯರ ಬಗ್ಗೆ ಲಘುವಾದ ಹಾಸ್ಯದಿಂದ ಟೀಕೆಮಾಡುತ್ತ ಕೇಳುಗರು ಚಿಂತನಪರರಾಗುವಂತೆ ಮಾತನಾಡಿದರು. ಆದರೆ ಅಂದು ನಮ್ಮ ಗುಂಪಿನಲ್ಲಿದ್ದ, ಭಾಷಣ ಕಲೆಯಲ್ಲಿ ತಾವು ಪಾರಂಗತರೆಂದು ತಿಳಿದಿದ್ದ ನಿವೃತ್ತ ಕನ್ನಡ ಪ್ರಾಧ್ಯಾಪಕರೊಬ್ಬರಿಗೆ ಅದು ಹಿಡಿಸಲಿಲ್ಲ. ಅವರು 'ಏನು, ನಿಮ್ಮಲಂಕೇಶನ ಭಾಷಣ ಬಹಳ ಸಪ್ಪೆಯಾಯಿತ್ರೆಪಾ' ಎಂದರು.

* * * *

'ನಮ್ಮ ವಂಶದಲ್ಲಿ ಯಾರೊಬ್ಬರೂ ಬರಹಗಾರ ಇದ್ದಂತಿಲ್ಲ' ಎಂದು ಲಂಕೇಶ ನೆನೆಸಿಕೊಂಡರೂ ಆ ಭಾಗದ ನೆಲ-ಜಲದ ಶಕ್ತಿಯೆಲ್ಲ ಇವರ ಮೂಲಕ ಹೊರಹೊಮ್ಮಿದಂತಿದೆ. ಹದಿಹರಯದ ಬಹುಪಾಲು ಜೀವನ ಹಳ್ಳಿಯಲ್ಲೇ ಕಳೆದದ್ದು ಅವರ ಮುಂದಿನ ಸಾಹಿತ್ಯಿಕ ವ್ಯಕ್ತಿತ್ವಕ್ಕೆ ಒಂದು ವರವಾಗಿಯೇ ಪರಿಣಮಿಸಿರಬೇಕು. ಅವರ ಕೆಲವು ಉತ್ತಮ ಸಣ್ಣಕಥೆಗಳಲ್ಲಿ ಹಾಗೂ 'ಮುಸ್ಸಂಜೆಯ ಕಥಾಪ್ರಸಂಗ'ದಂತಹ ಕಾದಂಬರಿಯಲ್ಲಿ ಜೀವಂತ ಅನುಭವಗಳ ಘರ್ಷಣೆಯಿಂದ ಸೃಷ್ಟಿಸುವುದೆಂದರೆ ಜೀವನವನ್ನು ಧಾರೆಯೆರೆಯುವ ಕೆಲಸ ಎಂಬುದು ಸ್ಪಷ್ಟವಾಗುತ್ತದೆ. ಕವಿತೆಗಳಲ್ಲಿ ಲಂಕೇಶ ತಮ್ಮದೇ ಆದ ಲಯವನ್ನು ಕೇಳಿಸುತ್ತಾರೆ. ಅವರ ಗದ್ಯ, ಕಾವ್ಯದ ಸಂಗ್ರಹ ಗುಣವನ್ನು, ಚಿತ್ರಕ ಶಕ್ತಿಯನ್ನು ಪಡೆದು ಸಫಲವಾಗಿದೆ. ನಾಟಕಗಳಲ್ಲಿ ಸಾಮಾಜಿಕವಾಗಿ ಇನ್ನೂ ಹೆಚ್ಚು ಪ್ರಸ್ತುತರೆನಿಸುತ್ತಾರೆ. ಕವಿಯ ಮುಖ್ಯ ಆಸಕ್ತಿಗಳನ್ನು, ವೈಶಿಷ್ಟ್ಯಗಳನ್ನು ಒಳಗೊಳ್ಳುವಂತೆ ಅವರು ಸಂಪಾದಿಸಿಕೊಟ್ಟ 'ಅಕ್ಷರ ಹೊಸ ಕಾವ್ಯ'ಕ್ಕೆ ತನ್ನದೇ ಆದ ವೈಶಿಷ್ಟ್ಯವಿದೆ. 'ಕಂಡದ್ದನ್ನು ಕಂಡಂತೆ' ಹೇಳಿದರೂ ಅವರ ವಿಮರ್ಶೆ ಸ್ವೋಪಜ್ಞತೆಯಿಂದ ಚಿಂತನೆಗೆ ತೊಡಗಿಸುವಂಥದು.

"ಅನುಭವ ನಾನು ಪ್ರಯತ್ನಿಸದೇ ಬರಬಹುದು; ಬರೆಯುವುದು ಅಷ್ಟು ಸಲೀಸಲ್ಲ".

"ನಮ್ಮ ಭಾವನೆಯನ್ನೆಲ್ಲ ಇಟ್ಟುಕೊಂಡು ವಿದ್ಯಾಭ್ಯಾಸದಿಂದ ಲಾಭ ಪಡೆಯೋದಕ್ಕೆ ವಿಚಿತ್ರ ರೀತಿಯ ಆತ್ಮನಿರೀಕ್ಷೆ, ಎಚ್ಚರಬೇಕಾಗುತ್ತದೆ - ಎರಡೂ ಸೇರಿದಾಗಲೇ ದೊಡ್ಡ ವ್ಯಕ್ತಿತ್ವ ಕಾವ್ಯ ಬರುತ್ತೆ"

"ಹಲ್ಲು ಕಚ್ಚಿ, ಉಡ ನೆಲ ಹಿಡಿದಂತೆ ಹಿಡಿದು ಕೂತು ಬರೆಯುವ ಛಲ ಹೋದಂತೆ ಲೇಖನ ಸಡಿಲವಾಗುತ್ತೆ".

"ನನ್ನೆಲ್ಲ ಥ್ರಿಲ್‌ಗಳನ್ನು, ನೋವುಗಳನ್ನು, ಭ್ರಮೆಗಳನ್ನು ಬಿಟ್ಟ ಬರವಣಿಗೆ ಹೇಡಿತನದ್ದಾಗುತ್ತದೆ".

"ಭಾಷೆಯೊಂದು ಮೌಲ್ಯವಾಗುವುದು ಅದು ಸತ್ಯಕ್ಕೆ ಹತ್ತಿರ ಹತ್ತಿರ ಹೋದಾಗ; ಸತ್ಯದಿಂದ ದೂರ ಹೋಗಿ ತೀರಾ ಸುಂದರವೂ ಪರಿಷ್ಕೃತವೂ ಆದಾಗ ಅಲ್ಲ".

ಕೈಗೆ ಬಂದಂತೆ ಆರಿಸಿದ ಈ ಕೆಲವು ಮಾತುಗಳಿಂದ ಲಂಕೇಶರ ಸಾಹಿತ್ಯ ಮತ್ತು ಜೀವನ ದೃಷ್ಟಿಯನ್ನು, ಸ್ವತಂತ್ರ ವಿಚಾರ ಸರಣಿಯ ಮೌಲಿಕತೆಯನ್ನು ಅರಿಯಬಹುದು.

ಪತ್ರಿಕಾಕರ್ತರಾಗಿ ಬರಹಗಾರನ ಅಖಂಡವಾದ ಆತ್ಮವಿಶ್ವಾಸದಿಂದ ಲಂಕೇಶ ತಮ್ಮ ಪ್ರತಿಭೆಯ ಹೊಸ ಸಾಧ್ಯತೆಯನ್ನು ಪ್ರಭಾವಶಾಲಿಯಾಗಿ ತೋರಿಸುತ್ತಿದ್ದಾರೆ. ಸಿನಿಮಾ ನಿರ್ದೇಶನದ ಗೀಳನ್ನು ಯಶಸ್ವಿಯಾಗಿ ನಿರ್ವಹಿಸಿದ ಮೇಲೆ ಅವರು ಪತ್ರಿಕಾರಂಗಕ್ಕೆ ಹೊರಳಿದ್ದು ಈ ಸಂದರ್ಭದಲ್ಲಿ ಒಂದು ಸುಯೋಗ. ಕನ್ನಡನಾಡಿನ ಸಾಮಾಜಿಕ, ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಹೋರಾಟಕ್ಕೆ ರಾಜಕೀಯ ಆಯಾಮದಿಂದ ಸಮಗ್ರತೆ ತಂದುಕೊಡುವಲ್ಲಿ, ಪತ್ರಿಕೋದ್ಯಮದ ಭಾಷೆಗೆ ಜನತೆಯ ಭಾವನೆಯ ಜೀವಂತ ಸ್ಪಂದನವನ್ನು ತಾಗಿಸುವಲ್ಲಿ ಅವರದು ಒಂದು ವಿಶಿಷ್ಟ ಪ್ರಯೋಗವೆಂದೇ ಹೇಳಬಹುದು. ಪ್ರಾಮಾಣಿಕ ಮಾತು ಹಾಗೂ ಖಚಿತ ವರದಿಗಳಿಂದ ವಿಚಾರಶೀಲ ವ್ಯಕ್ತಿತ್ವವೊಂದು ನಿರ್ಮಾಣಗೊಳ್ಳುತ್ತಿರುವುದು ನಿಜಕ್ಕೂ ಹೆಮ್ಮೆಯ ಸಂಗತಿ.

ಪತ್ರಿಕೋದ್ಯಮ ಎಷ್ಟು ಸೂಕ್ಷ್ಮವಾದದ್ದೋ ಅಷ್ಟೇ ಭಂಡತನದ್ದು ಕೂಡ. ಲೇಖಕರಿಗೆ ಎಷ್ಟೇ ಸ್ವಾತಂತ್ರ್ಯ ಕೊಟ್ಟರೂ ಭಿನ್ನಾಭಿಪ್ರಾಯಗಳ ಮೂಲಕ ತಿಕ್ಕಾಟವುಂಟಾಗುವುದು ಸ್ವಾಭಾವಿಕವೇ. ಅಂಥ ಸಂದರ್ಭದಲ್ಲಿ ಸಂಪಾದಕ ಬಹಳ ಜಾಗರೂಕತೆಯಿಂದ ವರ್ತಿಸಬೇಕಾಗುತ್ತದೆ. ಒಂದು ಗುರಿಯೆಡೆಗೆ ಬೇರೆ ಬೇರೆ ದಾರಿಗಳಿಂದ ಹೊರಟು ಹೊಂದಿಸಿಕೊಳ್ಳುತ್ತಿರುವ ಮನಸ್ಸುಗಳು ಮುರಿಯದಂತೆ, ಏಕಮುಖವಾದ ಶಕ್ತಿಗಳು ದೂರದೂರ ಸಿಡಿದು ಹೋಗದಂತೆ ಅತ್ಯಂತ ಸಹನೆಯಿಂದ ಒಂದು ತಿಳಿವಳಿಕೆಗೆ ಬರಬೇಕಾಗುತ್ತದೆ. ಈ ಕಷ್ಟವನ್ನು ಲಂಕೇಶ ಈಗಾಗಲೇ ಅನುಭವಿಸಿರಬಹುದು. ಆದ್ದರಿಂದ ಪಾಠ ಕಲಿತಿರಬಹುದೆಂದು ಭಾವಿಸಿದ್ದೇನೆ.

ಈ ಪತ್ರಿಕೆಯ ಮೂಲಕವೇ ಅವರ ಖ್ಯಾತಿ ಹೆಚ್ಚಿದೆ ಎಂದುಕೊಂಡರೆ ಅದು ಮೂರ್ಖತನದ ಮಾತಾಗಿದೆ. ಹಾಗೆ ನೋಡಿದರೆ, ಪತ್ರಿಕೆ ಹೆಚ್ಚಿನ ಸಂಖ್ಯೆಯಲ್ಲಿ ಜನರನ್ನು ಕೂಡಲೆ ಮುಟ್ಟುವ ಹಾಗೂ ತಟ್ಟುವ ಮಾಧ್ಯಮವಾಗಿರುವುದರಿಂದ ಅವರ ಲೇಖನಿಯ ಹೊಣೆ ಇನ್ನೂ ಹೆಚ್ಚಿದೆ. ಅಲ್ಲದೆ ಕನ್ನಡದ ಒಬ್ಬ ಸಮಕಾಲೀನ ಶ್ರೇಷ್ಠ ಲೇಖಕರಾಗಿ ಅವರು ಈ ಮೊದಲೇ ಅದನ್ನು ಸಾಧಿಸಿದ್ದಾರೆ.

ಲಂಕೇಶ ಈಗ ಏನೇ ಆಗಿದ್ದರೂ ಅವರು ಮೂಲತಃ ಕವಿಯೆಂಬುದನ್ನು ಮರೆಯುವಂತಿಲ್ಲ. (ನೀಲೂ ಪದ್ಯಗಳು ಅವರ ಕಾವ್ಯ ಶಕ್ತಿಯನ್ನು ಇನ್ನೂ ಜೀವಂತವಾಗಿಟ್ಟಿವೆ). ಕವಿ ತಿಳಿದಿರಬೇಕಾದ ಒಂದು ಅಂಶವನ್ನು ಕುರಿತು ಅವರೇ ಬೇರೆಡೆ ಹೇಳಿರುವ ಒಂದು ಮಾತು ಈ ಸಂದರ್ಭದಲ್ಲಿ ನೆನಪಾಗುತ್ತದೆ: "(ಕವಿ) ಎಲ್ಲಕ್ಕಿಂತ ಮುಖ್ಯವಾಗಿ ಖ್ಯಾತಿಯ ತಂಗಾಳಿಯಲ್ಲಿ ಕೂಡ ಆಂತರ್ಯದ ಸೂಕ್ಷ್ಮ ಕುಡಿಯನ್ನು ಕಾಪಾಡಿಕೊಳ್ಳುತ್ತಾನೆ."

('ತಲೆಮಾರಿನ ತಳಮಳ' ೧೯೯೭)

ಸಾಹಿತ್ಯ ಸಮಾಹಿತ : ೨೦೦೭

## ೨೩

## 'ಕೀರ್ತಿ'ಯೊಡನೆ ಕಾವ್ಯ ಸಲ್ಲಾಪ

ಗೆಳೆಯ ಕೀರ್ತಿನಾಥ ಕುರ್ತಕೋಟಿ ಮತ್ತು ನಾನು ಹತ್ತಿರದ ಊರಿನವರೇ-ಗದಗ ತಾಲೂಕಿನ ಕುರ್ತಕೋಟಿ ಮತ್ತು ಹೊಂಬಳದವರು. ಆದರೆ ನಮ್ಮ ಪರಿಚಯವಾಗಿ ಗೆಳೆತನ ಬೆಳೆದದ್ದು ಧಾರವಾಡದಲ್ಲಿಯೇ. ಗದಗಿನಲ್ಲಿ ಹಾಯ್‌ಸ್ಕೂಲ್ ಅಭ್ಯಾಸ ಮುಗಿಸಿ ಕಾಲೇಜು ಶಿಕ್ಷಣಕ್ಕೆ ಅವರು ಧಾರವಾಡಕ್ಕೆ ಬಂದವರು. ನಾನು ಹಳ್ಳಿಯ ಪ್ರಾಥಮಿಕ ಶಾಲೆಯಿಂದ ಧಾರವಾಡಕ್ಕೆ ಬಂದು ಹಾಯ್‌ಸ್ಕೂಲ್ ಸೇರಿದವನು. ರಜೆಯಲ್ಲಿ ನಾನು ಊರಿಗೆ ಹೋದಾಗ ಸಮೀಪದಲ್ಲಿರುವ ಗದಗಿಗೆ ಆಗೀಗ ಹೋಗಿಬರುತ್ತಿದ್ದೆ. ಗದಗಿನ ರೇಲ್ವೆ ಸ್ಟೇಶನ್‌ನಿಂದ ಊರೊಳಗೆ ಹೋಗುವ ದಾರಿಯಲ್ಲಿದ್ದ 'ಜೀವನ ಪುಸ್ತಕಾಲಯ' ನನ್ನ ಗಮನವನ್ನು ಸೆಳೆದಿತ್ತು. ನಾನು ಸ್ವಲ್ಪ ಹೊತ್ತು ಅಲ್ಲಿ ನಿಂತು ಕಾಜಿನ ಕಪಾಟಿನಲ್ಲಿದ್ದ ಪುಸ್ತಕಗಳ ಮೇಲೆ ಕಣ್ಣಾಡಿಸುತ್ತಿದ್ದೆ. ನಾನು ಅವರ ಗಿರಾಕಿಯಲ್ಲವೆಂಬುದು ಅಂಗಡಿಯಲ್ಲಿ ಕುಳಿತಿದ್ದವರಿಗೆ ಬಹುಶಃ ಗೊತ್ತಿರುತ್ತಿತ್ತು. ಅದೇ ಅಂಗಡಿಯಲ್ಲಿ ನನ್ನ ಓರಗೆಯ ಹುಡುಗನೊಬ್ಬ ಕೈಯಲ್ಲಿ ಪುಸ್ತಕ ಹಿಡಿದು ಓದಿನಲ್ಲಿ ಮಗ್ನನಾಗಿರುತ್ತಿದ್ದುದನ್ನು ನಾನು ಅನೇಕ ಸಲ ಕಂಡಿದ್ದೆ. ಅದೇ ವ್ಯಕ್ತಿ ಮುಂದೆ ಧಾರವಾಡದಲ್ಲಿ ನನ್ನ ಗೆಳೆಯರ ಬಳಗದಲ್ಲಿ ಒಬ್ಬರಾದದ್ದು ಒಂದು ಸುಯೋಗ.

ಕರ್ನಾಟಕ ಕಾಲೇಜಿನಲ್ಲಿ ನಾನು ಪ್ರವೇಶ ಪಡೆದಾಗ (೧೯೪೫) ಕುರ್ತಕೋಟಿ ಬಿ.ಎಂ.ಶ್ರೀಯವರಿಂದ ಆಕರ್ಷಿತರಾಗಿ ಹೊಸದಾಗಿ ಪ್ರಾರಂಭವಾಗಿದ್ದ ಕೆ.ಇ. ಬೋರ್ಡ ಕಾಲೇಜ್ ಸೇರಿದ್ದರು. ಧಾರವಾಡದ ಸಾಹಿತ್ಯಿಕ ಸಭೆ ಸಮಾರಂಭಗಳಲ್ಲಿ ಸಾಮಾನ್ಯವಾಗಿ ನಾವು ಶ್ರೋತೃಗಳಾಗಿ ಇದ್ದೇ ಇರುತ್ತಿದ್ದೆವು. ಅಂಥ ಒಂದು ಸಂದರ್ಭದಲ್ಲಿಯೇ ಕುರ್ತಕೋಟಿಯವರ ಪರಿಚಯವಾಯಿತು. ಒಡನಾಟವೂ ಬೆಳೆಯಿತು. ಅಷ್ಟೊತ್ತಿಗೆ ನಮ್ಮಿಬ್ಬರ ಒಂದು ಕವಿತೆ 'ಜೀವನ' ಪತ್ರಿಕೆಯಲ್ಲಿ ಪ್ರಕಟವಾಗಿದ್ದವು. ಇಂಟರ್ ಮೀಡಿಯೇಟ್ ಕ್ಲಾಸಿನಲ್ಲಿದ್ದಾಗ (೧೯೪೭) ನಾನು ಮಾಳಮಡ್ಡಿಯಲ್ಲಿ ಜೋಗ ವಕೀಲರ ಬಂಗ್ಲೆಯಲ್ಲಿಯ ಒಂದು ಕೋಣೆಯನ್ನು ಬಾಡಿಗೆ ಹಿಡಿದಿದ್ದೆ. ಇದ್ದುದರಲ್ಲಿ ಅದು ಸ್ವಲ್ಪ ದೊಡ್ಡದಾಗಿತ್ತು. ಕವಿತೆ, ಲೇಖನ-ನಾಟಕ ಬರೆಯವುದರಲ್ಲಿ ಆಸಕ್ತಿ ವಹಿಸಿದ್ದ ನಾವು ಕೆಲವು ಗೆಳೆಯರು ವಾರಕ್ಕೊಮ್ಮೆ ಅಂದರೆ ರವಿವಾರ ನನ್ನ ಕೋಣೆಯಲ್ಲಿ ಕೂಡಿ ಕಾವ್ಯವಾಚನ, ಹರಟೆ ಇತ್ಯಾದಿಗಳಲ್ಲಿ ತೊಡಗಿದೆವು. 'ಕಾವ್ಯಾನುಭವ ಮಂಟಪ' ಎಂದು ಅದಕ್ಕೆ ನಾಮಕರಣವೂ ಆಯಿತು. ಕುರ್ತುಕೋಟಿ, ಶಂಕರ ಮೊಕಾಶಿ, ಗೋವಿಂದ ಕಣೇಕಲ್, ವಸಂತ ಕವಲಿ, ಎಂ.ಪಿ. ಜೋಶಿ, ಪಾಟೀಲ ಕುಲಕರ್ಣಿ, ಶಿವೇಶ್ವರ ದೊಡ್ಡಮನಿ ಮೊದಲಾದವರು ಇದರ ಸದಸ್ಯರು. ನಾವೇನೂ ಸದಸ್ಯತ್ವದ ವಂತಿಗೆಯನ್ನು ಕೊಡುತ್ತಿರಲಿಲ್ಲ.

ಅದರ ಬದಲು ಒಂದೊಂದು ವಾರದ ಚಹಾ ಫಳಾರದ ಖರ್ಚನ್ನು ಒಂದೊಂದು ಸಲ ಒಬ್ಬೊಬ್ಬರು ವಹಿಸಿಕೊಳ್ಳುತ್ತಿದ್ದೆವು. ಆಗ ಶ್ರೀಗಳಾದ ಬೇಂದ್ರೆಯವರು ಸೊಲ್ಲಾಪುರದಲ್ಲಿಯೂ ಗೋಕಾಕರು ಕೊಲ್ಲಾಪುರದ ಕಾಲೇಜಿನಲ್ಲೂ ಪ್ರಿನ್ಸಿಪಾಲರಾಗಿ ಇದ್ದರು. ಅವರಿಬ್ಬರೂ ಧಾರವಾಡಕ್ಕೆ ಬಂದ ಸಂದರ್ಭದಲ್ಲಿ (೧೯೪೯) ನಮ್ಮ ಕೋರಿಕೆಯನ್ನು ಮನ್ನಿಸಿ 'ಕಾವ್ಯಾನುಭವ ಮಂಟಪ'ಕ್ಕೆ ಬಂದು ಕವಿಗೋಷ್ಠಿಯಲ್ಲಿ ಭಾಗವಹಿಸಿ ಭಾಷಣ ಮಾಡಿದರು. ಅದೊಂದು ನಮಗೆ ಹೆಮ್ಮೆಯ ವಿಷಯವಾಗಿ ಪರಿಣಮಿಸಿತು. ಯಾವುದೇ ಪತ್ರಿಕೆಗೆ ಕವಿತೆ, ಲೇಖನಗಳನ್ನು ಕಳಿಸಿದರೆ ನಮ್ಮ ಹೆಸರಿನ ಮುಂದೆ 'ಕಾವ್ಯಾನುಭವ ಮಂಟಪ ಧಾರವಾಡ' ಎಂದು ತಪ್ಪದೆ ಬರೆಯಬೇಕೆಂಬ ನಿಯಮ ಮಾಡಿಕೊಂಡಿದ್ದೆವು. ಬೆಟಗೇರಿಯವರ 'ಜಯಂತಿ', ಬಸವನಾಳರ 'ಜಯ ಕರ್ನಾಟಕ' ಹಾಗೂ ಮಾಸ್ತಿಯವರ 'ಜೀವನ' ಮಾಸಿಕಗಳಲ್ಲಿ ಆಗೀಗ ನಮ್ಮ ಕವಿತೆಗಳು ಪ್ರಕಟಗೊಳ್ಳುತ್ತಿದ್ದವು. ಹಾಗೆ ಪ್ರಕಟಗೊಂಡಾಗ ಅವುಗಳನ್ನು ನಮಗಿಂತಲೂ ಮೊದಲು ಓದುವ ಯೋಗ ಕುರ್ತಕೋಟಿಯವರಿಗೆ ಒದಗುತ್ತಿತ್ತು. ಯಾಕೆಂದರೆ ಜಿ.ಬಿ. ಜೋಶಿಯವರ ಮನೋಹರ ಗ್ರಂಥ ಭಂಡಾರಕ್ಕೆ ಅವರು ಹೆಚ್ಚು ಸಮೀಪವರ್ತಿಯಾಗಿದ್ದರು. ನಮ್ಮ ವಾರದ ಕೂಟಗಳಲ್ಲಿ ಪರಸ್ಪರರ ಬರವಣಿಗೆಗಳು ಟೀಕೆಗೆ, ವಿಮರ್ಶೆಗೆ ಒಳಗಾಗುತ್ತಿದ್ದರೂ ಸಾಮಾನ್ಯವಾಗಿ ನಗುನಗುತ್ತಲೇ ಅದನ್ನು ಸ್ವೀಕರಿಸುತ್ತಿದ್ದೆವು. ಯಾರೂ ಮನಸ್ಸಿಗೆ ಹಚ್ಚಿಕೊಂಡು ಜಗಳಕ್ಕೆ ಬರುತ್ತಿರಲಿಲ್ಲ. ಅದು ಹೇಗೆ ಸಾಧ್ಯವಾಯಿತೊ ಈಗಲೂ ನೆನೆಸಿಕೊಂಡರೆ ನನಗೆ ಆಶ್ಚರ್ಯವೆನಿಸುತ್ತದೆ.

ನವೋದಯದ ಹಲವಾರು ಹಿರಿಯ ಕವಿಗಳ ಕವಿತೆಗಳನ್ನು ಕುರ್ತಕೋಟಿ ಬಾಯಿಪಾಠ ಹೇಳಿ ಬಿಡುತ್ತಿದ್ದರು. 'ಇಂಗ್ಲೀಷ್ ಗೀತೆಗಳು' ಹಾಗೂ 'ಕನ್ನಡ ಬಾವುಟ' ನಮ್ಮ ಮೆಚ್ಚಿನ ಸಂಗ್ರಹಗಳಾಗಿದ್ದವು. "ಕನ್ನಡ ಬಾವುಟ' ನಮಗೆ ಭಗವದ್ಗೀತೆಯಷ್ಟು ಪವಿತ್ರವಾಗಿತ್ತು' ಎಂದು ಕುರ್ತಕೋಟಿ ಇತ್ತೀಚೆಗೆ ಒಂದೆಡೆ ಬರೆದದ್ದು ನೆನಪಾಗುತ್ತದೆ. ತಮ್ಮ ಅಗಾಧವಾದ ಜ್ಞಾಪಕಶಕ್ತಿಯಿಂದ ಆ ಕವಿತೆಗಳನ್ನು ಅವರು ಹೇಳುತ್ತಿರುವಾಗ ಕೊರಳುಬ್ಬಿಸಿ ಒಂದು ರೀತಿ ದೇವರು (ಅಥವಾ ದೇವತೆ) ಮೈಯಲ್ಲಿ ಹೊಕ್ಕವರಂತೆ ವರ್ತಿಸುತ್ತಿದ್ದರು. ಆಗ ಎಲೆಯಡಿಕೆ ತಂಬಾಕದ ಚಟ ಅವರಿಗಿನ್ನೂ ಅಂಟಿರಲಿಲ್ಲ.

ಕೆಲವು ಸಲ ನಮ್ಮ ಗೋಷ್ಠಿಗಳು ಗಾಂಧೀ ಚೌಕದ ಹತ್ತಿರವಿದ್ದ ಜಿ.ಎಚ್. ಕಣೇಕಲ್ಲರ ಕೋಣೆಯಲ್ಲಿ ನಡೆಯುತ್ತಿದ್ದವು. ಕುರ್ತಕೋಟಿಯವರೂ ಆಗ ಅವರ ಜೊತೆಯಲ್ಲಿಯೇ ವಾಸಿಸುತ್ತಿದ್ದರೆಂದು ತೋರುತ್ತದೆ. ಕಣೇಕಲ್ ಸ್ವತಃ ಒಳ್ಳೆಯ ಕವಿಯಾಗಿದ್ದರಲ್ಲದೇ ಭಾವಗೀತೆಗಳನ್ನು ಸೊಗಸಾಗಿ ಹಾಡುತ್ತಿದ್ದರು. ಅವರು ಬರೆಯುತ್ತಿದ್ದದ್ದು ಹೆಚ್ಚಾಗಿ ಪ್ರೇಮಗೀತೆಗಳು. ಕೆ.ಇ. ಬೋರ್ಡ ಕಾಲೇಜಿನ 'ನಾಕವಿ ಸಂಘ'ದಿಂದ ಪ್ರಕಟಗೊಂಡು (೧೯೪೭) ಶ್ರೀಯವರಿಗೆ ಅರ್ಪಿತವಾಗಿದ್ದ 'ಗಾನಕೇಳಿ' ಎಂಬ ಕವನ ಸಂಗ್ರಹದಲ್ಲಿ ಕೀರ್ತಿ, ಕಣೇಕಲ್ಲ ಹಾಗೂ ಮೊಕಾಶಿ ('ಕನಸಿಗ' ಅವರ ಕಾವ್ಯನಾಮವಾಗಿತ್ತು)ಯವರ ಕವನಗಳು ಸಂಕಲಿತವಾಗಿದ್ದವು. ಆಗೆಲ್ಲ ಕುರ್ತಕೋಟಿ ಕವಿಯಾಗಿಯೇ ಹೆಚ್ಚು ಉತ್ಸಾಹ ತೋರಿಸುತ್ತಿದ್ದರೇ ಹೊರತು ತಮ್ಮಲ್ಲಿ ಹುದುಗಿದ್ದ ವಿಮರ್ಶಕನನ್ನು ಹೆಚ್ಚಾಗಿ ಪ್ರಕಟಪಡಿಸುತ್ತಿರಲಿಲ್ಲ.

ಗಾಂಧಿ ಚೌಕದ ಹತ್ತಿರವಿದ್ದ ಒಂದು ಉಡುಪಿ ಹೊಟೆಲ್ಲಿಗೆ ಕುರ್ತಕೋಟಿ ಕಾಯಂ ಗಿರಾಕಿಯಾಗಿದ್ದರು. ನಮ್ಮಲ್ಲಿ ಹಲವರು ಅವರನ್ನು ಗೌಡರೆಂದೇ ಕರೆಯುತ್ತಿದ್ದೆವು. (ಅವರದು ಗೌಡರ ಮನೆತನವೂ ಹೌದು) ನಮ್ಮ ಗೋಷ್ಠಿಗಳು ಮುಗಿದೊಡನೆ ಆ ಹೊಟೆಲ್‌ಗೆ ಹೋಗಿ ದೋಸೆಗಳನ್ನು ಚಪ್ಪರಿಸಿ ಗೌಡರ ಖಾತೆಗೆ ಹಚ್ಚಿಕೊಳ್ಳಲು ಹೇಳಿ ಬಿಡುತ್ತಿದ್ದ ಪ್ರಸಂಗಗಳೂ ಅನೇಕ. ಈ ವಿಷಯದಲ್ಲಿ ನಾವು ಗೌಡರಿಗೆ ದೊಡ್ಡಸ್ತನವನ್ನು ದಯಪಾಲಿಸಿ ಬಿಡುತ್ತಿದ್ದೆವು. ಆದರೆ ಇಂದಿಗೂ ನಾವು ಪರಸ್ಪರರು ಮಾತನಾಡುವಾಗ ಏಕವಚನದ ಸಲಿಗೆಯನ್ನೇ ಉಳಿಸಿಕೊಂಡಿದ್ದೇವೆ.

ಬಿ.ಎ.ಗೆ ಕುರ್ತಕೋಟಿ ಕರ್ನಾಟಕ ಕಾಲೇಜಿಗೇ ಬಂದರು. (ಅವರ ಕಾಲೇಜಿನಲ್ಲಿ ಇಂಗ್ಲೀಷ್ ಮೇಜರ್ ಇರಲಿಲ್ಲ) ಇದು ನಮ್ಮಿಬ್ಬರನ್ನು ಇನ್ನಷ್ಟು ಹತ್ತಿರಕ್ಕೆ ತಂದಿತು. ಜನರಲ್ಲಿ ಇಂಗ್ಲಿಷ್ ಪಿರಿಯಡ್ ಇದ್ದಾಗ ಒಂದೇ ದೊಡ್ಡ ಕ್ಲಾಸಿನಲ್ಲಿ ನಾವೆಲ್ಲರೂ ಕೂಡಬೇಕಾಗುತ್ತಿತ್ತು. ಒಮ್ಮೆ ಆ ಕ್ಲಾಸಿನಲ್ಲಿ ಕುಳಿತಾಗ ಕುರ್ತಕೋಟಿ ನನ್ನ ವಿಳಾಸವಿದ್ದ ದೊಡ್ಡ ಲಕೋಟೆಯೊಂದನ್ನು ತಮ್ಮ ಕೈಯಲ್ಲಿ ಹಿಡಿದು ತೋರಿಸಿದರು. ಚಹಾ ಕುಡಿಸಿದರೆ ಮಾತ್ರ ಅದನ್ನು ನನಗೆ ಕೊಡುವುದಾಗಿ ಹೇಳಿದರು. ಸರಿ, ಕಾಲೇಜಿನ ಕ್ಯಾಂಟೀನಿಗೆ ಹೋಗಿ ಗದ್ದಲವಿಲ್ಲದ ಒಂದು ಮೂಲೆಯಲ್ಲಿ ಕುಳಿತೆವು. ನನ್ನ 'ಭಾವಜೀವಿ' ಕಾವ್ಯಕ್ಕೆ ಗೋಕಾಕರು ಬರೆದು ಕಳಿಸಿದ ಮುನ್ನುಡಿ ಆ ಲಕೋಟೆಯಲ್ಲಿತ್ತು. ಕುರ್ತಕೋಟಿ ಅದನ್ನು ತಾವೇ ಒಡೆದು ಓದಿ ತೋರಿಸಿದರಲ್ಲದೆ ಅದು ತಮ್ಮ ಕೃತಿಗೇ ಬರೆದ ಮುನ್ನುಡಿಯೋ ಎಂಬಂತೆ ಅಭಿಮಾನದಿಂದ ಸಂತೋಷಗೊಂಡರು.

ಬಿ.ಎ. ಆದನಂತರ (೧೯೫೦) ಕುರ್ತಕೋಟಿ ಗದಗಿನ ಹಾಯ್‌ಸ್ಕೂಲಿನಲ್ಲಿ ಐದು ವರ್ಷ ಮಾಸ್ತರಕಿ ಮಾಡಿದರು. ೧೯೫೬ರಲ್ಲಿ ಮತ್ತೆ ಧಾರವಾಡಕ್ಕೆ ಬಂದು ಎಂ.ಎ. ಮಾಡಿ, ಪುಣೆಯಲ್ಲಿ ಕೆಲದಿನ ಅಧ್ಯಾಪಕರಾಗಿ ಗುಜರಾತದ ಆನಂದದಲ್ಲಿ ನಿವೃತ್ತಿಯವರೆಗೂ ಅಲ್ಲಿಯೇ ನೆಲೆಸಿದರು. ರಜೆಯಲ್ಲಿ ಧಾರವಾಡಕ್ಕೆ ಬಂದಾಗೆಲ್ಲಾ ಆಗೊಮ್ಮೆ ಈಗೊಮ್ಮೆ ಭೆಟ್ಟಿಯಾಗುತ್ತಿತ್ತು. ಆನಂದ ಅವರ ಆನಂದಕ್ಕೆ ಯಾವ ಕೊರತೆಯನ್ನೂ ಉಂಟು ಮಾಡಿದಂತೆ ತೋರುತ್ತಿರಲಿಲ್ಲ.

ನಿವೃತ್ತರಾಗಿ ಇದೀಗ ಧಾರವಾಡದ ಸ್ವಂತ ಹೊಸ ಮನೆಯಲ್ಲಿ ನಿಂತಿರುವ ಕುರ್ತಕೋಟಿ ಇನ್ನೆಲ್ಲಿಯೂ ಹೋಗುವುದಿಲ್ಲವೆಂದು ಮೊನ್ನೆ ಅವರ ಮನೆಯಲ್ಲಿ ಮಾತನಾಡುತ್ತ ಕುಳಿತಾಗ ಹೇಳಿದರು. ವಿಮರ್ಶಾ ಕ್ಷೇತ್ರದಲ್ಲಿ ಅದ್ಭುತವಾದ ಕೆಲಸ ಮಾಡಿ 'ಕೀರ್ತಿ'ವಂತರಾದ ಅವರು 'ನಡೆದು ಬಂದ ದಾರಿ' ಹಾಗೂ ಇತರ ಕೃತಿಗಳಲ್ಲಿ ಮೈಲುಗಲ್ಲುಗಳನ್ನು ನಿಲ್ಲಿಸಿದರು. ಇನ್ನು ಆ ದಾರಿಯಲ್ಲಿ ನಡೆಯುವ ಇಚ್ಛೆ ಅವರಿಗಿದ್ದಂತಿಲ್ಲ. ದೊಡ್ಡ ಕಾದಂಬರಿಯೊಂದನ್ನು ಬರೆಯುವ ಹಂಬಲ ಅವರಿಗಿದೆ. ಅವರ ಮನೆಯ ಹಿಂಬದಿಗೆ ಅತ್ಯಂತ ಸಮೀಪದಲ್ಲಿಯೇ ರೈಲು ದಾರಿ; ಅಲ್ಲದೆ ಎದುರಿನ ಮತ್ತು ಬಲ ಬದಿಯ ರಸ್ತೆಗಳಲ್ಲಿ ನೂರಾರು ವಾಹನಗಳ ಬಿಡುವಿಲ್ಲದ ಓಡಾಟ. ಆದರೆ ಯಾವ ಗದ್ದಲಕ್ಕೂ ಮಣಿಯದ ಮನಸ್ಸಿನ ಏಕಾಗ್ರತೆಯನ್ನು ಅವರು ಕಾಪಾಡಿಕೊಂಡು ಬಂದಿದ್ದಾರೆ. ಅದು ಅವರ ಬರವಣಿಗೆಯ ಒಂದು ದೊಡ್ಡ ಗುಣವೂ ಹೌದು.

('ಕನ್ನಡದ ಕೀರ್ತಿ' ೧೯೮೯)

ಸಾಹಿತ್ಯ ಸಮಾಹಿತ : ೨೦೦೭

## ೨೪

## ಲೀಲಾವತಿ : ವ್ಯಕ್ತಿ - ಅಭಿವ್ಯಕ್ತಿ

ಶ್ರೀಮತಿ ಲೀಲಾವತಿ ತೋರಣಗಟ್ಟಿಯವರನ್ನು ನಾನು ಮೊದಲು ಕಂಡುದು ಅವರು ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ವಿಭಾಗದಲ್ಲಿ ವಿದ್ಯಾರ್ಥಿನಿಯಾಗಿದ್ದಾಗ (೧೯೭೦-೭೧). ವಿದ್ಯಾರ್ಥಿಗಳು ನಡೆಸುತ್ತಿದ್ದ ಸಭೆಗಳಲ್ಲಿ ಕವಿತೆಯನ್ನೇ ಓದಲಿ, ಭಾಷಣವನ್ನೇ ಮಾಡಲಿ, ದಿಟ್ಟತನದ ಪ್ರತಿಮೂರ್ತಿಯಾಗಿ ಗೋಚರಿಸುತ್ತಿದ್ದರು. ಪರಿಚಯವಾದ ಮೇಲೆ ಅವರು ಆಗಾಗ ನಮ್ಮ ಮನೆಗೆ ಬರುತ್ತಿದ್ದರು. ಮದುವೆಗೆ ಮೊದಲು ಅವರು ಪಾಸಾದದ್ದು ಕನ್ನಡ ಮುಲ್ಕಿ ಪರೀಕ್ಷೆ ಮಾತ್ರ. ಆ ಮೇಲೆ ಅವರು ತಮ್ಮ ವಿದ್ಯಾಭ್ಯಾಸವನ್ನು ಮುಂದುವರಿಸಿಕೊಂಡು ಬಂದದ್ದೇ ಒಂದು ದೊಡ್ಡ ಸಾಹಸದ ಕಥೆ. (ಆ ಬಗ್ಗೆ ಬೇರೆಯವರು ಬರೆದ ಲೇಖನಗಳು ಇದೇ ಗ್ರಂಥದಲ್ಲಿವೆ.)

ಸರಳ ಸ್ವಭಾವ, ನಿರ್ಭಿಡೆಯ ಮಾತು. ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಸಮನಾದ ಆಸಕ್ತಿ, ಎಡರು-ತೊಡರುಗಳಿಗೆ ಹಿಂಜರಿಯದೆ ಮುಂದೆ ಸಾಗುವ ಸಾಹಸದ ಮನೋಧರ್ಮ-ಅವರಲ್ಲಿ ಒಡೆದು ಕಾಣುತ್ತಿದ್ದ ಗುಣಗಳು. ಎಲ್ಲಿ ಹೋದರೂ ಸುತ್ತಲೂ ವಾತ್ಸಲ್ಯದ ಬಳಗವೊಂದನ್ನು ಕಟ್ಟಿಕೊಂಡಾಗಲೇ ಅವರಿಗೆ ಸಮಾಧಾನ. ಜನರನ್ನು ಹಚ್ಚಿಕೊಳ್ಳುವುದರಲ್ಲಿ, ಸೋದರ ಲೇಖಕರನ್ನು ಆತ್ಮೀಯತೆಯಿಂದ ಕಾಣುವುದರಲ್ಲಿ, ಆದರಾತಿಥ್ಯದಲ್ಲಿ ಅವರ ಉತ್ಸಾಹ ಅನ್ಯಾದೃಶವಾದದ್ದು. ಕೇಂದ್ರ ಸರಕಾರದ ನೌಕರಿಯಲ್ಲಿದ್ದ ಅವರ ಪತಿ ಶ್ರೀ ಬಿ.ಎಸ್. ತೋರಣಗಟ್ಟಿ ಕರ್ನಾಟಕದ ಹೊರಗೇ ಹೆಚ್ಚು ಕೆಲಸ ಮಾಡಿದವರು. ಅವರು ಹೋದ ಸ್ಥಳಗಳಲ್ಲೆಲ್ಲ ಲೀಲಾವತಿಯವರು ಕನ್ನಡಿಗರನ್ನು ಹುಡುಕಿಕೊಂಡು ಪರಿಚಯ ಮಾಡಿಕೊಳ್ಳುತ್ತಿದ್ದರು. ೧೯೭೮ರಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿಯ ವಾರ್ಷಿಕ ಸಭೆ ಹಾಗೂ ಪ್ರಶಸ್ತಿ ವಿತರಣ ಸಮಾರಂಭ ಭುವನೇಶ್ವರದಲ್ಲಿ ಏರ್ಪಟ್ಟಿದ್ದಿತು. ನಾನು ಮನೆಯವರ ಜೊತೆಗೆ ಭುವನೇಶ್ವರಕ್ಕೆ ಬಂದಿರುವುದನ್ನು ಅರಿತು ತೋರಣಗಟ್ಟಿ ದಂಪತಿಗಳು ಕಟಕದಿಂದ ಬಂದು ನಮ್ಮ ಜೊತೆಗಿದ್ದು ಹರ್ಷಗೊಂಡರು. ಅಲ್ಲಿಯೂ ಅವರು ಸುಮ್ಮನೇ ಕೂತಿರಲಿಲ್ಲ. ಉತ್ಕಲ ವಿಶ್ವವಿದ್ಯಾಲಯದಿಂದ ಮುಂದೆ ಎರಡು ವರ್ಷಕ್ಕೆ ೧೯೮೦ರಲ್ಲಿ ಎಲ್.ಎಲ್.ಬಿ.ಪಾಸಾದರು. 'ಭೈರಪ್ಪನವರ ಕಾದಂಬರಿಗಳ'ನ್ನು ಕುರಿತ ಥೀಸಿಸ್ ೧೯೮೭ರಲ್ಲಿ ಅವರಿಗೆ ಪಿಎಚ್.ಡಿ. ಪದವಿ ತಂದುಕೊಟ್ಟಿತು.

ನಿಪ್ಪಾಣಿ ಮತ್ತು ಹುಬ್ಬಳ್ಳಿ ಕಾಲೇಜುಗಳಲ್ಲಿ ಕೆಲವರ್ಷ ಅಧ್ಯಾಪಕಿಯಾಗಿ ತಮ್ಮ ಒಂದು ಬಯಕೆಯನ್ನು ಈಡೇರಿಸಿಕೊಂಡರು. ೧೯೭೧ರ ನಂತರ ರಾಜಕೀಯದಲ್ಲಿಯೂ ತಮ್ಮನ್ನು ತೊಡಗಿಸಿಕೊಂಡರು. ಸಾಮಾಜಿಕ ಕಾರ್ಯಗಳಲ್ಲಿ ಓಡಾಡಿದರು. ವಕೀಲ ವೃತ್ತಿಗೂ ಅವರಿಗೆ ಅನುಮತಿ ಸಿಕ್ಕಿತ್ತು. ಯಾವುದಕ್ಕೂ ಸೈ. ಎಷ್ಟು ನಿರ್ಭಯವಾಗಿ, ಗಟ್ಟಿಯಾಗಿ ಮಾತನಾಡುತ್ತಿದ್ದರೊ ಅಷ್ಟೇ ಕೆಲಸವನ್ನು ಮಾಡಿ ತೋರಿಸುವ ಛಾತಿ ಅವರದಾಗಿತ್ತು. ಹೀಗೆ ಹಲವಾರು ದೃಷ್ಟಿಯಿಂದ, ಉತ್ತರ ಕರ್ನಾಟಕದ ಹೆಣ್ಣು ಮಕ್ಕಳಲ್ಲಿ ಅವರದೇ ಒಂದು ದಾಖಲೆ. ಬೆಳಗಾವಿ ನಾಡಿನ ಕೆಚ್ಚಿಗೆ ಶ್ರೇಷ್ಠ ನಿದರ್ಶನ.

ಇಂಥ ಜೀವನಕ್ಕೆ ಒಂದು ದೊಡ್ಡ ಆಘಾತ ಕಾದಿತ್ತು. ಇದ್ದ ಒಬ್ಬಳೇ ಮಗಳು ಡಾಕ್ಟರಳಾಗಿ ಕೀನಿಯಾದಲ್ಲಿ ಗಂಡನೊಡನಿದ್ದಾಗ ಆಕಸ್ಮಿಕ ಮರಣಕ್ಕೀಡಾದಳು. ಲೀಲಾವತಿಯವರ ಹೃದಯ ಜರ್ಝರಿತವಾಗಿ ಹೋಯಿತು. ದುಃಖವನ್ನು ಹೇಗೊ ನುಂಗಿಕೊಂಡು ಮತ್ತೆ ಮಂದಿಯಲ್ಲಿ ಕೂಡಿದರು. ದಿನಗಳು ಭಾರವಾಗಿ ಉರುಳಿದವು. ಎರಡು ವರ್ಷ ಹಾಗೂ ಹೀಗೂ ಕಳೆದವು. ರಕ್ತದ ಒತ್ತಡ ಅನಾರೋಗ್ಯವನ್ನು ಹೆಚ್ಚಿಸಿತು. ಒಂದು ದಿನ ಸೂರ್ಯೋದಯಕ್ಕೆ ಮೊದಲೇ ಕಣ್ಣು ಮುಚ್ಚಿದವರು ಮತ್ತೆ ತೆರೆಯಲಿಲ್ಲ. ಐವತ್ತು ವರ್ಷದ ಅವರ ಕ್ರಿಯಾಶೀಲ ಬದುಕನ್ನು ಕಂಡವರು ಅದು ಹೀಗೆ ಕೊನೆಗೊಳ್ಳುವುದೆಂದು ಎಣಿಸಿರಲಿಲ್ಲ.

ಸಾಹಿತ್ಯ ಕ್ಷೇತ್ರದಲ್ಲಿ ಕಾವ್ಯ ಅವರ ಮೊದಲ ಒಲವು. ಕೆಲವು ಕಥೆಗಳನ್ನೂ ಬರೆದರು. ಎರಡು ಕಾದಂಬರಿಗಳನ್ನು ರಚಿಸಿದರು. (ಅವೆರಡೂ ಪ್ರಕಟಗೊಂಡದ್ದನ್ನು ಕಾಣುವ ಯೋಗ ಅವರಿಗೆ ಒದಗಿಬರಲಿಲ್ಲ) ತಾವು ಸಂಗ್ರಹಿಸಿದ ಕೆಲವು 'ಜಾನಪದ ಗೀತೆಗಳೂ ಮತ್ತು ಕನ್ನಡದ ಒಡಪುಗಳು' ಗ್ರಂಥ ಮೊದಲೇ ಪ್ರಕಟಗೊಂಡಾಗ ಆ ಬಗ್ಗೆ ಅವರಿಗೆ ತೃಪ್ತಿ ಇತ್ತು. ಆದರೆ ಎಲ್ಲಕ್ಕೂ ಹೆಚ್ಚು ತೃಪ್ತಿಯನ್ನು ಅವರಿಗೆ ತಂದು ಕೊಟ್ಟಿದ್ದು 'ನಾಕ ಹೆಜ್ಜೆ' (೧೯೭೬) ಹಾಗೂ 'ತುಣುಕುಗಳು' ಎಂಬ ಎರಡು ಕವನ ಸಂಗ್ರಹಗಳು. ಬದುಕಿನಲ್ಲಿ ಹೇಗೋ ಬರವಣಿಗೆಯಲ್ಲಿಯೂ ಅದೇ ನಿಸ್ಸಂಕೋಚವಾದ ದಿಟ್ಟತನ, ಅಂತಸ್ಸತ್ವದಿಂದ ಕೂಡಿದ ಆದರ್ಶ, ಹರಿಗಡಿಯದ ಆಶಾವಾದ, ಮುಕ್ಕಾಗದ ಮೌಲ್ಯಪ್ರಜ್ಞೆ. ಈ ವ್ಯಕ್ತಿತ್ವಕ್ಕೆ ಕಾವ್ಯವೇ ತಕ್ಕ ಅಭಿವ್ಯಕ್ತಿಯಾಗಿತ್ತೆಂಬುದರಲ್ಲಿ ಸಂದೇಹವಿಲ್ಲ.

ಅವರ ಮೊದಲ ಸಂಗ್ರಹ 'ನಾಕ ಹೆಜ್ಜೆ'ಗೆ ಮುನ್ನುಡಿ ಬರೆಯುವಾಗಲೇ ಅವರ ಕಾವ್ಯ ಶಕ್ತಿಯನ್ನು ಗುರುತಿಸಿ ಕೆಲವು ಮಾತುಗಳನ್ನು ನಾನು ಹೇಳಿದ್ದೆ. ಸಮಾಜದ ರೀತಿ-ನೀತಿ-ನಡಾವಳಿಗಳನ್ನು, ಮನುಷ್ಯ ಸ್ವಭಾವದ ಲೋಪದೋಷಗಳನ್ನು ಕಾವ್ಯದ ವಸ್ತುವನ್ನಾಗಿ ಮಾಡಿಕೊಂಡಿದ್ದು ಭಾವುಕತೆಗೆ ವಿಶೇಷವಾಗಿ ಅಂಟಿಕೊಳ್ಳದೇ, ವೈಚಾರಿಕತೆಯ ಕಡೆಗೆ ಹೆಜ್ಜೆಯಿಟ್ಟಿರುವುದನ್ನು ಇಲ್ಲಿ ಕಾಣುತ್ತೇವೆ, ಒಮ್ಮೆ ಸ್ವಗತವೆಂಬಂತೆ, ಮತ್ತೊಮ್ಮೆ ಸಮೀಪವಾಗಿ ಸಂಭಾಷಿಸಿದಂತೆ ಇರುವ ಅಭಿವ್ಯಕ್ತಿ ಆಪ್ತತೆ ಹಾಗೂ ಸಹಜತೆಯಿಂದ ಕೂಡಿದೆ. ಸಾಮಾಜಿಕ ಆಸಕ್ತಿಯುಳ್ಳ ಈ ಕವಿತೆಗಳ ಧೋರಣೆ ಆರೋಗ್ಯಕರವಾದದ್ದು, ತನ್ನತನದ ವೈಶಿಷ್ಟ್ಯವನ್ನು

ಉಳಿಸಿಕೊಳ್ಳಲು ಹವಣಿಸುವಂಥದು. ನಿಸ್ಸಂಕೋಚವಾಗಿ ಮುನ್ನಡೆಯುವ ಭರವಸೆಯುಳ್ಳದು. ಎರಡು ಪದ್ಯಗಳನ್ನು ಇಲ್ಲಿ ಉದಾಹರಿಸಬಹುದು.

ಜೀವನದಲ್ಲಿ ಮಹತ್ತ್ವದ್ದೇನನ್ನೂ ಸಾಧಿಸದೆ, ಕೇವಲ ಮಾತಿನ ಆಡಂಬರದಲ್ಲಿ ಮೆರೆಯುವ ಸಾಹಿತಿಗೆ ಹಾಕುವ ಪ್ರಶ್ನೆಯಲ್ಲಿಯೇ ಅವರ ಬದುಕಿನ ನಿಲುವು ಸ್ಪಷ್ಟವಾಗಿದೆ.

ಯಾಕ ಸುಳ್ಳಕ ಸುಳ್ಳ
ಕಾಗದಾ ಮಸಿ ಕೆಡಸತೀರಿ
ನಾಕ ಹೆಜ್ಜೇ ಗುರುತಾ
ಬಿಟ್ಟ ಹೋಗ್ರಿ (ನಾಕ ಹೆಜ್ಜೆ)

ನಮ್ಮ ಮನೆಗಳಲ್ಲಿ ಗುಬ್ಬಿ ಗೂಡು ಕಟ್ಟುವುದೂ, ಜೇಡ ಬಲೆಹೆಣೆಯುವದೂ ಕುಡ್ಡಿಕುಕ್ಕಾರಿ ಕಟಗಿಯಲ್ಲಿ ಮನೆ ಕಟ್ಟುವದೂ ಸಾಮಾನ್ಯ ಸಂಗತಿಗಳೆ. ಮನೆಯನ್ನು ಹೊಲಸು ಮಾಡುತ್ತವೆಂದು ನಾವದನ್ನು ಗುಡಿಸಿ ಒಗೆಯುತ್ತೇವೆ. ಈ ಸಂದರ್ಭದಲ್ಲಿ

ದೇವರ ಕಟ್ಟಿದ ಮನೀನ
ನಾವೆಷ್ಟು ಹೊಲಸ ಮಾಡ್ತೇವೊ
ಅದ್ಹಂಗ ತಡಕೊತಾನೊ! ('ನಮ್ಮನಿ')

ಎಂಬ ಚಿಂತನೆ ತಟ್ಟನೆ ನಮ್ಮನ್ನು ಆತ್ಮವಿಮರ್ಶೆಗೆ ತೊಡಗಿಸುತ್ತದೆ. ಬದುಕಿನ ಬಗ್ಗೆ ತೀವ್ರ ಕಾಳಜಿಯಿಂದಾಗಿ ಮಹತ್ತ್ವದ್ದೆನಿಸುತ್ತದೆ.

ಎರಡನೆಯ ಸಂಗ್ರಹ 'ತುಣುಕುಗಳು' ನಾಲ್ಕು ವರುರ್ಷಗಳ ತರುವಾಯ ಪ್ರಕಟವಾದ ಎಪ್ಪತ್ತಾರು ಮುಕ್ತಕಗಳ ಸಂಗ್ರಹ. ಹಿಂದಿನ ಮನೋಧರ್ಮವೇ ಇಲ್ಲಿಯೂ. ಆದರೆ ಬೇರೊಂದು ಆಕಾರದಲ್ಲಿ. ಕವಿಯ ಅಂತಸ್ಸತ್ವವನ್ನು ಕಿರಿದರಲ್ಲಿ ಮಿರುಗಿಸುತ್ತದೆ. ಚಿಂತನೆ ಭಾವನೆಗಳು ಇಲ್ಲಿ ತಮ್ಮಷ್ಟಕ್ಕೇ ಹೊಳೆದು ಬದುಕಿನ ಅರ್ಥವನ್ನೂ ಬೆಲೆಯನ್ನೂ ತಿಳಿಯಲು ಹವಣಿಸುತ್ತವೆ. 'ನಾಕಹೆಜ್ಜೆ'ಯಲ್ಲಿಯ ಪ್ರಥಮ ಕವನದಂತೆಯೇ ಇಲ್ಲಿಯ ಪ್ರಥಮ 'ತಣುಕು' ಈ ಸಂಗ್ರಹದ ಸ್ವರೂಪವನ್ನು ಸೂಚಿಸಿ ಬಿಡುತ್ತದೆ.

ನೆನಪಿನ ತುಣುಕುಗಳನ್ನು
ಜೋಡಿಸಿ ದುಪ್ಪಟಿ ಹೊಲದು
ಕೊರೆಯುವ ಚಳಿಗೆ
ಮುಸುಕೆಳೆದಾಗ
ಒಂದೊಂದು ತುಣುಕಿನಲ್ಲಿಯೂ
ರುದ್ರ, ಮಧುರ ಕನಸುಗಳು

ಚುಟುಕುಗಳಲ್ಲಿ ಸಾಮಾನ್ಯವಾಗಿ ಕಂಡುಬರುವ ಶಬ್ದ ಚಮತ್ಕಾರ, ವ್ಯಂಗ್ಯ, ವಿಡಂಬನೆ ಇಲ್ಲಿ ತೀರ ವಿರಳ. ಆದರೆ ಕವಿ ಬದುಕಿಗೆ ಸ್ಪಂದಿಸುವ ಬಗೆ, ಅನುಭವಕ್ಕೆ ತೋರಿಸುವ ಪ್ರತಿಕ್ರಿಯೆ, ವೈಚಾರಿಕತೆಯ ಕಿಡಿ ಓದುಗರನ್ನು ಆಲೋಚನೆಗೆ ತೊಡಗಿಸುವಂಥದು. ದೇವರಿಗೇ 'ಬುದ್ಧಿ ಹೇಳುವ ಈ ಮಾತು'.

ದೂಪದೀಪದಿಂದ
ನಿನ್ನನ್ನು
ಕೊಳ್ಳ ಬಯಸುತ್ತಾರೆ.
ಇಂಥವರ ಕೈಗೆ
ಸಿಕ್ಕಿಯೇ ನೀ
ಕಾಸಿಗೆ ಪಂಚೇರು.

ಸೂಕ್ಷ್ಮ ಸಂಕೇತಗಳ 'ರಾಗ' ಅನುರಾಗವನ್ನು ಎಷ್ಟು ಧ್ವನಿಪೂರ್ಣವಾಗಿ ಅನುರಣಿಸುತ್ತದೆ, ನೋಡಿ:

ಬೆರಳಿಗೆ ಮೀಟುವಾಶೆ
ತಂತಿಗೆ ಮಿಡಿಯುವ
ಬಯಕೆ.
ಬೆರಳಿನ ರೌದ್ರತೆ
ತಂತಿಯ ಸುಕುಮಾರತೆ
ಗಳ ನಡುವೆ ಅದಕ್ಕೆ
ಪ್ರಚ್ಛನ್ನ ಶಾಂತಿ.

ಒಂದು ಸಣ್ಣ ಚಿತ್ರ, ಸಂಭಾಷಣೆ, ಅಷ್ಟೇ ಸಣ್ಣ ಪ್ರಶ್ನೆ ಇವುಗಳಿಂದ ಎಂಥ ಅದ್ಭುತವನ್ನು ಅಬ್ಬರವಿಲ್ಲದೇ ಕವನ ಸಾಧಿಸಬಲ್ಲದು ಎಂಬುದಕ್ಕೆ 'ದೇವರಲ್ಲಿ' ಉತ್ತಮ ನಿದರ್ಶನ.

ಎರಡು ಮುಳ್ಳುಗಳ
ನಡುವಿನ ಗುಲಾಬಿ
ಮಾಲಿಗೆ ಹೇಳಿತು:
"ನನ್ನನ್ನು ಕಿತ್ತು
ದೇವರ ಪಾದಕ್ಕೆ
ಅರ್ಪಿಸು."
ಮಾಲಿ ಕೇಳಿದ
"ದೇವರೆಲ್ಲಿ."

ಈ ಪದ್ಯಗಳನ್ನು ಅಲ್ಪ ಸಮಯದಲ್ಲಿಯೇ ಓದಿ ಬಿಡಬಹುದು. ಆದರೆ ಅವುಗಳ ಅರ್ಥ ಪರಂಪರೆ ಅನುಗಾಲದ ಚಿಂತನೆಗೆ ಆಹಾರವಾಗುವಂಥದು. ಶಬ್ದಗಳ ಆಟಾಟೋಪ, ಪ್ರಾಸವ್ಯಾಮೋಹ-ಒಂದನ್ನೂ ಕೇಳಬೇಡಿ. ಮಾತಾಡಿದಂತೆಯೇ ಅದು ಅನುಭವವನ್ನೆಲ್ಲ ಅರಗಿಸಿಕೊಂಡು ಒಡಮೂಡುತ್ತದೆ. ಆದುದರಿಂದ ಬಹಳ ನಿಧಾನವಾಗಿಯೇ ನಾವದನ್ನು ಓದಿಕೊಳ್ಳಬೇಕು :

ಯಾರೊ
ಕಬ್ಬು ತಿಂದು ಸಿಪ್ಪೆ ಚೆಲ್ಲಿ ಹೋಗಿದ್ದಾರೆ.
ಆಯಿತು.
ಅದನ್ನೇ ಕಾಗದ ಮಾಡಿ
ಕರುಣ ಕಥೆ ಬರೆದೆ.

ಅನಿಸಿಕೆ ಅನುಭವವಾಗಿ ಹರಳುಗೊಂಡಾಗ ಮಾತ್ರ ಇಂಥ ಹುರುಳುಳ್ಳ ಕವನ ರೂಪುಗೊಳ್ಳಬಲ್ಲದು.

ಕನ್ನಡ ಕಾವ್ಯಪಥದಲ್ಲಿ ಲೀಲಾವತಿಯವರು ಹೀಗೆ ಅಳಿಯಲಾರದ ಹೆಜ್ಜೆ ಗುರುತುಗಳನ್ನು ಬಿಟ್ಟು ಹೋಗಿದ್ದಾರೆ. ನಳನಳಿಸುವ ತೋರಣ ಕಟ್ಟಿದ್ದಾರೆ. ಇಂದಿನ ಕನ್ನಡ ಕಾವ್ಯಕ್ಕೆ ಹೊಸ ಆಯಾಮವನ್ನು ನೀಡುತ್ತಿರುವ ಕೆಲವು ಕವಯಿತ್ರಿಯರ ಸಾಧನೆಯ ಹಿಂದೆ ಲೀಲಾವತಿಯವರು ಇಟ್ಟ ಈ ದಿಟ್ಟ ಹೆಜ್ಜೆಗಳನ್ನು ಯಾರೂ ಮರೆಯುವಂತಿಲ್ಲ. ಪುರುಷದ್ವೇಷ ಎಲ್ಲಿಯೂ ಹಣೆಯಿಕ್ಕದುದು ಗಮನಾರ್ಹ ಸಂಗತಿಯಾಗಿದೆ.

('ನಂದಾದೀಪ' ೧೯೯೦)

ಸಾಹಿತ್ಯ ಸಮಾಹಿತ : ೨೦೦೭

೨೫

## ಸುಗಮ ಸಂಗೀತದ ಸೌಭಾಗ್ಯ

ಮಾನವನ ಬುದ್ಧಿ ಮತ್ತು ಮನಸ್ಸಿನ ವಿಕಾಸದೊಂದಿಗೆ ಕಲೆಯ ವಿಕಾಸವೂ ಹೊಸ ಹೊಸ ದಿಗಂತಗಳನ್ನು ಕಂಡುಕೊಳ್ಳುವುದು ತೀರ ಸಹಜ. ಹಾಗೆ ಕರ್ನಾಟಕದಲ್ಲಿ ಸುಗಮ ಸಂಗೀತ ಪ್ರಾಚೀನವಾದ ಗಮಕ ಕಲೆಯನ್ನು ನೆನಪಿನಲ್ಲಿಟ್ಟುಕೊಂಡು ವಿಭಿನ್ನ ರೀತಿಯಲ್ಲಿ ಬೆಳವಣಿಗೆ ಪಡೆದದ್ದನ್ನು ಇಂದು ಕಾಣುತ್ತಿದ್ದೇವೆ. ಹಾಗೆಯೇ ಅದಕ್ಕೊಂದು ಘನತೆಯನ್ನು ಗೌರವವನ್ನೂ ತಂದುಕೊಟ್ಟ ವಿನೂತನ ಶೈಲಿಯ ಗಾಯಕರು, ಸ್ವರ ಸಂಯೋಜಕರು ಹಾಗೂ ನಿರ್ದೇಶಕರಲ್ಲಿ ಶ್ರೀಮತಿ ಎಚ್.ಆರ್. ಲೀಲಾವತಿಯವರೂ ಒಬ್ಬರು. ಈ ದಿಸೆಯಲ್ಲಿ ಪ್ರತಿಷ್ಠಿತ ಸಂತ ಶಿಶುನಾಳ ಶರೀಫ್ ಪ್ರಶಸ್ತಿ ಪುರಸ್ಕೃತರಾಗಿಯೂ ಅವರು ಕನ್ನಡಿಗರ ಪ್ರೀತಿ, ಅಭಿಮಾನಗಳಿಗೆ ಪಾತ್ರರಾಗಿದ್ದಾರೆ.

ಪ್ರತಿಯೊಂದು ಕಾರ್ಯವನ್ನೂ ಲಾಭದ ದೃಷ್ಟಿಯಿಂದ, ವ್ಯಾಪಾರೀ ಮನೋಭಾವದಿಂದ ನೋಡುತ್ತಿರುವ ಇಂದಿನ ಸಂದರ್ಭದಲ್ಲಿ ಜನತೆಯಲ್ಲಿ ಸಂಸ್ಕೃತಿ ಪ್ರಸಾರದ ಪ್ರಬಲ ಮಾಧ್ಯಮವಾಗಿ ಸುಗಮ ಸಂಗೀತ ತನ್ನ ಹೆಚ್ಚಳವನ್ನು ಸಂಪಾದಿಸಿರುವುದು ಗಮನಾರ್ಹ ಸಂಗತಿಯಾಗಿದೆ. ಸಿನೆಮಾ ಸಂಗೀತಕ್ಕೆ ದೊರೆಯುತ್ತಿರುವ ಪ್ರಚಾರ ಪ್ರಭಾವಗಳನ್ನು ಮೀರಿ ಭಾವಗೀತ ಗಾಯನ ಇಂದು ಜನರ ಹೃದಯದಲ್ಲಿ ಪ್ರತ್ಯೇಕವಾದ ಸ್ಥಾನವನ್ನು ಪಡೆದುಕೊಳ್ಳುತ್ತಿರುವುದನ್ನು ಅಲ್ಲಗಳೆಯುವಂತಿಲ್ಲ. ಭಾವಗೀತೆಗಳ ಹಾಡುಗಾರರ ಹಾಗೂ ಕೇಳುಗರ ಸಂಖ್ಯೆಯೂ ಹೆಚ್ಚುತ್ತ ಪರಸ್ಪರ ಸಾಮರಸ್ಯ ಸಾಂಸ ತಿಕ ವಾತಾವರಣಕ್ಕೆ ಒಂದು ಬಗೆಯ ಕಳೆಯನ್ನು ತಂದುಕೊಟ್ಟಿದೆ.

ಭಾವಗೀತೆಗಳ ಹಾಡಗಾರಿಕೆಗೆ ಪ್ರಾರಂಭದಲ್ಲಿ (ಈಗಲೂ) ಆಕಾಶವಾಣಿಯಿಂದ ದೊರೆತ ಪ್ರೇರಣೆ-ಪ್ರೋತ್ಸಾಹ ಚಿರಸ್ಮರಣೀಯವಾದದ್ದು. ಈ ದಿಸೆಯಲ್ಲಿ ಎಚ್.ಆರ್. ಲೀಲಾವತಿಯವರ ಕೊಡುಗೆ ಅಪಾರವಾದದ್ದು. ಸ್ವತಃ ಗೀತ ರಚನಾಕಾರರೂ ಆಗಿರುವ ಅವರು ರಾಗ ಸಂಯೋಜನೆ, ಸಂಗೀತ ನಿರ್ದೇಶನ ಹಾಗೂ ಗಾಯನಗಳಲ್ಲಿ ತಮ್ಮದೇ ಆದ ಹಾದಿಯನ್ನು ನಿರ್ಮಿಸಿ, ಹಿರಿಯ ಕವಿಗಳ ಪುಸ್ತಕಗಳಲ್ಲಿ ಅಡಗಿದ್ದ ಕವಿತೆಗಳನ್ನು ತಮ್ಮ ಹಾಡುಗಾರಿಕೆಯಿಂದ ಜನಮನವನ್ನು ತಲಪುವಂತೆ ಮಾಡಿದರು. ಸಂಗೀತದಲ್ಲಿ ಸಾಹಿತ್ಯವನ್ನು ಬೆಣ್ಣೆಯಂತೆ ಮೇಲೆತ್ತಿ ತಂದರು. ಅರ್ಥವಿಲ್ಲದ ಕವನಗಳನ್ನು ಹಾಡಿ ವ್ಯರ್ಥ ಶ್ರಮಪಡುವುದನ್ನು ನಿರಾಕರಿಸಿದ ಅವರು ನಿಜವಾದ ಕವಿತೆಗಳನ್ನು ಕೇಳಿ ಸಂತೋಷಪಡುವ ಭಾಗ್ಯವನ್ನು ರಸಿಕರಿಗೆ ಒದಗಿಸಿದರು. ಅವರ

ಹಾಡುಗಾರಿಕೆಯನ್ನು ಆಲಿಸಿದಾಗ ತಮ್ಮ ಅಂತರಾಳದಿಂದ ಆ ಕವಿತೆಗೆ ಅವರು ಪ್ರತಿಕ್ರಿಯಿಸುತ್ತ ಅದರ ನಾಜೂಕಾದ ಸಂಗೀತ ಸ್ವರೂಪವನ್ನು ಕಂಡುಕೊಳ್ಳುತ್ತಿರುವಂತೆ ಭಾಸವಾಗುತ್ತದೆ. ಮಾತಿಗೆ ಧಾತು ಪೂರಕವಾಗಿ ಒಂದು ಸುಂದರ ಭಾವಗೀತಾ ಪರಕಲ್ಪನೆಯನ್ನು ಮುಂದಿಡುವುದು ಸುಗಮ ಸಂಗೀತದ ಮುಖ್ಯ ಉದ್ದೇಶವೆಂದು ಅವರು ಹೇಳಿರುವುದನ್ನು ಇಲ್ಲಿ ಅವಶ್ಯವಾಗಿ ಗಮನಿಸಬೇಕು.

ಸುಗಮ ಸಂಗೀತ ಕ್ಷೇತ್ರಕ್ಕೆ ಲೀಲಾವತಿಯವರು ಸಲ್ಲಿಸಿರುವ ಇನ್ನೊಂದು ಮಹತ್ವದ ಕೊಡುಗೆಯೆಂದರೆ ಸುಗಮ ಸಂಗೀತವನ್ನು ಕುರಿತು ಸಿಂಹಾವಲೋಕನ ಕ್ರಮದಲ್ಲಿ ಅದನ್ನು ಆಮೂಲಾಗ್ರವಾಗಿ ಚರ್ಚಿಸಿ ಸೋದಾಹರಣವಾಗಿ ನಿರೂಪಿಸಿರುವ ಗ್ರಂಥ. ೧೯೮೮ರಲ್ಲಿ ಸಿ. ಅಶ್ವತ್ಥ ಅವರು ಭಾವಗೀತೆ ಗಾಯನದ ಹೊಸ ಸಾಧ್ಯತೆಗಳನ್ನು ತಮ್ಮ 'ಸುಗಮ ಸಂಗೀತ' ಗ್ರಂಥದಲ್ಲಿ ತೋರಿಸಿಕೊಟ್ಟಿದ್ದರೆ ೧೯೯೦ರಲ್ಲಿ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯಿಂದ ಪ್ರಕಟವಾದ ಲೀಲಾವತಿಯವರ ಗ್ರಂಥ, ಈ ಕಲೆ ಸರ್ವಾಂಗ ಸುಂದರವಾಗಿ ಬೆಳೆಯಲು ಪಾಲಿಸಬೇಕಾದ ಕಟ್ಟುಪಾಡುಗಳ ಬಗ್ಗೆ ಗಾಯಕರ ಗಮನವನ್ನು ಸೆಳೆಯುವ ಒಂದು ಮಾರ್ಗದರ್ಶಕ ಕೃತಿಯಾಗಿದೆ. ದಾಸರ ಹಾಡುಗಳಿಗೆ ಸಂಗೀತ ವಾಹಕ ಮಾತ್ರವೇ ಹೊರತು ಅದೇ ಭಾರವಾಗಿ ಸಾಹಿತ್ಯ ಸೊರಗಬಾರದೆಂಬ ಕಿವಿ ಮಾತು ಅಲ್ಲಿ ಕೇಳಿಬರುತ್ತಿದೆ. ಸಾಹಿತ್ಯದತ್ತ ಹರಿಯಬೇಕಾದ ಮನಸ್ಸು ಸಂಗೀತದ ಕವಚದಲ್ಲಿ ಮರೆಯಾಗಬಾರದೆಂಬ ಧೋರಣೆ ಅವರದು. ಸಾಮಾನ್ಯ ಜನತೆಯಲ್ಲಿ ಚಿತ್ರಗೀತೆಗಳ ಗೀಳು ಹೆಚ್ಚಾಗಿದ್ದರೂ ತಿಳುವಳಿಕೆಯುಳ್ಳ ಜನ ಹಾಗೂ ಸಾಹಿತ್ಯಾಸಕ್ತರು ಭಾವಗೀತೆಗಳನ್ನೇ ಹೆಚ್ಚು ಮೆಚ್ಚುತ್ತಿರುವುದು ಅವರ ನಿಜವಾದ ಅನುಭವವಾಗಿದೆ. ಏಕೆಂದರೆ ತನ್ನತನದ ಅಭಿವ್ಯಕ್ತಿಗೆ ಇಲ್ಲಿ ಇರುವಂಥ ಬೆಲೆ ಮಕ್ಕೀಕಾಮಕ್ಕಿ ಅನುಸರಿಸುವ ಚಿತ್ರಗೀತೆಗಳಿಗಿಲ್ಲವೆಂಬುದು ಅವರ ಸ್ಪಷ್ಟವಾದ ಅಭಿಪ್ರಾಯವಾಗಿದೆ.

ಗಾಯಕರಿಗೆ ಕವಿ ಹೃದಯ ಅರ್ಥವಾದಾಗ ಮಾತ್ರ ಕವನ ಹಾಗೂ ಸಂಗೀತದ ಸಾರ್ಥಕತೆ. ಆದ್ದರಿಂದ ಸ್ಥೂಲವಾಗಿಯಾದರೂ ಕವನದ ಭಾವ ಅರ್ಥವಾಗದಿದ್ದರೆ ರಾಗ ಸಂಯೋಜನೆಯ ಗೊಡವೆಗೇ ಹೋಗಬಾರದೆನ್ನುವ ಲೀಲಾವತಿಯವರಿಗೆ ನವೋದಯ ಸಂಪ್ರದಾಯದ ಕವಿತೆಗಳೇ ಹೆಚ್ಚು ಅಚ್ಚುಮೆಚ್ಚಾಗಿರುವುದರಲ್ಲಿ ಆಶ್ಚರ್ಯವೇನೂ ಇಲ್ಲ. ವಚನ ಸಾಹಿತ್ಯ ಸಂಗೀತವನ್ನು ಊರ್ಜಿತಗೊಳಿಸಬೇಕೆಂಬ ಹೊಣೆಯನ್ನು ನಿರ್ವಹಿಸುವ ಸಂದರ್ಭದಲ್ಲಿ ಬಸವಣ್ಣನವರು ಹೇಳಿದಂತೆ "ಆನು ಒಲಿದಂತೆ ಹಾಡುವೆ" ಎನ್ನುವುದರ ಕಡೆಗೇ ಅವರು ಒಲಿದಿರುವುದು ಕಂಡುಬರುತ್ತದೆ.

ಶಾಸ್ತ್ರೀಯ ಸಂಗೀತವನ್ನು ಸ್ವರ ಲೋಕದ ಸಾಮ್ರಾಜ್ಯವೆಂದೂ ಸುಗಮ ಸಂಗೀತವನ್ನು ಸಾಹಿತ್ಯಲೋಕದ ಸಾಮ್ರಾಜ್ಯವೆಂದೂ ಅವರು ಸರಿಯಾಗಿಯೇ ಗುರುತಿಸಿದ್ದಾರೆ. ಸುಗಮ ಸಂಗೀತ ಹೊಸ ಹೊಸ ಶೈಲಿಯನ್ನು ಪಡೆಯುತ್ತಿರುವ ಇಂದಿನ ಸಂದರ್ಭದಲ್ಲಿ ಅವರು ಹೇಳುವ ಮಾತು ವಿಚಾರಪೂರ್ಣವಾಗಿದೆ:

ಯಾವುದೇ ಹೊಸ ಪ್ರಯೋಗವಾದರೂ ಶುದ್ಧತೆಯ ಸಾಕಾರವಾಗಿಯೂ ಅರ್ಥಪೂರ್ಣವಾಗಬೇಕು. ಬರಿಯ ಬದಲಾವಣೆ ಮಾತ್ರದಿಂದಲೇ ಅದು ಕಲಾತ್ಮಕವೆನಿಸಲಾರದು. ಸಮುದಾಯ ಗೀತೆಗಳಲ್ಲಿ ಗಾಯಕ ಗಾಯಕಿಯರದೇ ಮುಖ್ಯ ಪಾತ್ರವಾಗಿರುವುದರಿಂದ ವಾದ್ಯಗಳ ಹಿಮ್ಮೇಳನವಿಲ್ಲದೆಯೇ ಶೃತಿಗತಿಗಳ ಸಹಾಯದಿಂದ ಅವು ಯಶಸ್ಸು ಪಡೆಯಬಲ್ಲವೆಂಬುದೂ ಅಷ್ಟೇ ಸಮಂಸವೆನಿಸುತ್ತದೆ. ಜನಪದ ಸಂಗೀತ, ಸಂಪ್ರದಾಯದ ಹಾಡು ಹಾಗೂ ರಂಗಗೀತೆಗಳ ಬಗೆಗೂ ಅತ್ಯಂತ ಉಪಯುಕ್ತವಾದ ವಿಚಾರಗಳನ್ನು ಈ ಗ್ರಂಥ ಒಳಗೊಂಡಿದೆ. ಗಮಕ ಕಲೆಯ ಬಗೆಗಿನ ಇಣುಕು ನೋಟವಂತೂ ಅಧಿಕಾರ ವಾಣಿಯಿಂದ ಕೂಡಿದ್ದಾಗಿದೆ. "ಗಮಕ ಕಲೆ ಶ್ರವಣ ಪ್ರಧಾನವಾದ ಪದ್ಯ ಕಾವ್ಯಗಳನ್ನು ಭಾವ ಪ್ರಧಾನವಾಗಿ ಕಾವ್ಯದ ಧ್ವನಿ, ರಸ, ಅರ್ಥಗಳನ್ನು ಎತ್ತಿ ಹಿಡಿಯುವಂತೆ ರಾಗಗಳನ್ನು ಬಳಸಿ ಸಂಗೀತ ಮಾರ್ಗದಲ್ಲಿ ಹಾಡುವ ವಿನ್ಯಾಸ" ಎಂಬ ಮಾತು ಸಾರವತ್ತಾಗಿದೆ.

ಸುಗಮ ಸಂಗೀತ ಕ್ಷೇತ್ರದಲ್ಲಿ ಇತ್ತೀಚೆಗೆ ಕಂಡುಬರುತ್ತಿರುವ ವ್ಯಾಪಾರೀ ಮನೋಭಾವವನ್ನು ಲೀಲಾವತಿಯವರು ಕಟುವಾಗಿಯೇ ಖಂಡಿಸುತ್ತಾರೆ. ಕಂಠವಿರಲಿ, ಇಲ್ಲದಿರಲಿ, ಹಾಡಲು ಬರಲಿ, ಬಾರದಿರಲಿ ಹಣದ ಬಲದಿಂದ ಬಹಳಷ್ಟು ಮಂದಿ ಕ್ಯಾಸೆಟ್ ಪ್ರಪಂಚಕ್ಕೆ ಧುಮುಕುತ್ತಿರುವುದು ಕಲೆಯ ಬೆಳವಣಿಗೆಯ ದೃಷ್ಟಿಯಿಂದ ಆರೋಗ್ಯಕರವಾದ ಮುನ್ನಡೆಯಲ್ಲವೆಂಬ ಎಚ್ಚರಿಕೆಯನ್ನು ನೀಡಿದ್ದಾರೆ.

ಸಾಹಿತ್ಯ ಪ್ರಜ್ಞೆ, ಸಂಗೀತ ಸಂಯೋಜನಾ ಶಕ್ತಿ, ಕಲಾ ಕೌಶಲ್ಯ, ಭಾವಾಭಿಜ್ಞತೆ, ಅಭ್ಯಾಸ ಪ್ರವೃತ್ತಿ - ಇವೆಲ್ಲವುಗಳ ಸುಂದರ ಸಮನ್ವಯವನ್ನು ಸಾಧಿಸಿ ಸುಗಮ ಸಂಗೀತದ ಸೌಭಾಗ್ಯ ನಿಧಿಯಂತಿರುವ ಶ್ರೀಮತಿ ಎಚ್.ಆರ್. ಲೀಲಾವತಿಯವರಿಗೆ ನನ್ನ ಹಾರ್ದಿಕ ಅಭಿನಂದನೆಗಳು.

('ನಾದಲೀಲಾ'೨೦೦೦)

ಸಾಹಿತ್ಯ ಸಮಾಹಿತ : ೨೦೦೭

# ೨೬

# ಜಿ.ವಿ. ಅತ್ರಿ ಸ್ಮರಣೆ

ಜಿ.ವಿ. ಅತ್ರಿಯವರ ಪ್ರಥಮ ಪರಿಚಯ ನನಗಾದದ್ದು ಸ್ನೇಹಿತರಾದ ಡಾ.ಜಿ. ಎಸ್. ಶಿವರುದ್ರಪ್ಪನವರ ಮೂಲಕ. ಆಗ ಅತ್ರಿ ಸಿ.ಬಿ.ಎಸ್. ಕ್ಯಾಸೆಟ್ ಸಂಸ್ಥೆಯಲ್ಲಿ ಕಾರ್ಯಕ್ರಮ ನಿರ್ವಾಹಕರಾಗಿ ಕೆಲಸ ಮಾಡುತ್ತಿದ್ದರು. ನನ್ನ ಕವಿತೆಗಳನ್ನು ತಾನು ಮೆಚ್ಚಿಕೊಂಡಿದ್ದು ಧ್ವನಿಸುರುಳಿಯೊಂದನ್ನು ಹೊರತರಬೇಕೆಂಬ ಇಚ್ಛೆಯನ್ನು ಅವರು ವ್ಯಕ್ತಪಡಿಸಿದಾಗ ಕ್ಯಾಸೆಟ್ ಪ್ರಪಂಚಕ್ಕೆ ಅಪರಿಚಿತನಾಗಿದ್ದ ನನಗೆ ಅಚ್ಚರಿಯ ಜೊತೆಗೆ ಸಂತೋಷವೂ ಆಯಿತು. ಅವರ ಹಾಡುಗಾರಿಕೆಯನ್ನು ಈ ಮೊದಲೇ ಮೆಚ್ಚಿಕೊಂಡಿದ್ದ ಶಿವರುದ್ರಪ್ಪನವರೇ ಕವನಗಳ ಆಯ್ಕೆಯಲ್ಲಿಯೂ ನೆರವಾದರು. ಜಿ.ವಿ. ಅತ್ರಿ ಸಂಗೀತ ನೀಡಿ ಹೊರತಂದ ಮೊಟ್ಟಮೊದಲ ಭಾವಗೀತೆಯ ಧ್ವನಿಸುರುಳಿ 'ಮಲ್ಲಿಗೆ ದಂಡೆ'. ನನ್ನ ಹತ್ತು ಕವನಗಳನ್ನು ಈ ಕ್ಯಾಸೆಟ್‌ನಲ್ಲಿ ಅತ್ರಿ ಅಳವಡಿಸಿದ ರೀತಿ ತುಂಬ ಕೌಶಲ್ಯಪೂರ್ಣವಾಗಿದೆ. ಸಿ. ಅಶ್ವಥ್, ರತ್ನಮಾಲಾಪ್ರಕಾಶ, ಮಂಜುಳಾ ಗುರುರಾಜ್, ನರಸಿಂಹನಾಯಕ, ಯುವರಾಜ ಇವರ ಜೊತೆಗೆ ತಾವೂ ಹಾಡಿ ಆ ಕಾರ್ಯವನ್ನು ತುಂಬ ಆಸ್ಥೆ ವಹಿಸಿ ಅಚ್ಚುಕಟ್ಟಾಗಿ ನೆರವೇರಿಸಿದರು. ಅದರ ಜನಪ್ರಿಯತೆಯಿಂದ ಅತ್ರಿ ಸಂತೋಷಗೊಂಡು ಹೆಚ್ಚು ಉತ್ಸಾಹಿತರಾದಂತೆ ಕಂಡುಬಂದರು. ಇತ್ತೀಚೆಗೆ ನನ್ನ ಭಾವಗೀತೆಗಳ ಇನ್ನೊಂದು ಧ್ವನಿಸುರುಳಿಯ ಸಿದ್ಧತೆಯಲ್ಲಿ ಅವರಿದ್ದರು. 'ನನ್ನ ದೇಶ ನನ್ನ ಜನ' ಎಂಬ ಹೆಸರನ್ನೂ ಅದಕ್ಕೆ ಆಯ್ಕೆ ಮಾಡಿದ್ದರು. ಆದರೆ 'ಮಲ್ಲಿಗೆ ದಂಡೆ'ಯೇ ನನ್ನ ಕವನಗಳ ಏಕಮೇವ ಧ್ವನಿಸುರುಳಿಯಾಗಿ ಇಂದಿಗೂ ಅತ್ರಿಯವರ ಮೈತ್ರಿಯ ಕುರುಹಾಗಿ ತನ್ನ ಕಂಪನ್ನುಳಿಸಿಕೊಂಡಿದೆ.

ಜನರಂಜನೆಗಿಂತ ಜನಮನದ ಸಂಸ್ಕಾರದ ಕಡೆಗೆ ಅತ್ರಿ ಹೆಚ್ಚು ಲಕ್ಷ್ಯವೀಯುತ್ತಿದ್ದುದರಿಂದ ಗೀತೆಗಳ ಆಯ್ಕೆಯಲ್ಲಿ ಅವರ ತಾರತಮ್ಯ ಜ್ಞಾನ ಎದ್ದು ಕಾಣುತ್ತದೆ. ಅವುಗಳ ಭಾವಕ್ಕೆ ಎಲ್ಲಿಯೂ ಭಂಗಬಾರದಂತೆ ನಾದಗುಣವನ್ನು ಹೊಮ್ಮಿಸುವ ಪರಿಣತಿ ಅವರದಾಗಿತ್ತು. ಗಾಯಕ, ಲೇಖಕ, ಸ್ವರಸಂಯೋಜಕ ಹಾಗೂ ಅಧ್ಯಯನಗಳ ಸುಸಂಗತತೆಯಲ್ಲಿ ಅವರು ಇಟ್ಟುಕೊಂಡಿದ್ದ ಶ್ರದ್ಧೆಗನುಗುಣವಾಗಿಯೇ ಅವರ ಸಾಧನೆ ಮುಂದುವರಿದಿದ್ದರಿಂದ ಅಗ್ಗದ ಪ್ರಚಾರಕ್ಕೆ ಅದರಲ್ಲಿ ಎಳ್ಳಷ್ಟೂ ಸ್ಥಾನವಿರಲಿಲ್ಲ. ಪ್ರಾರಂಭದಲ್ಲಿ ಚಿತ್ರಗೀತೆಗಳಿಗೆ ಒಲಿದಿದ್ದ ಅವರ ಮನಸ್ಸು ಭಾವಗೀತೆಗಳ ಕಡೆಗೆ ಧಾವಿಸಿದ್ದು ಸುಗಮಸಂಗೀತ ಕ್ಷೇತ್ರದ ಸುದೈವವೆಂದೇ ಹೇಳಬೇಕು. ರಂಗಗೀತೆಗಳ ಗಾಯನವೂ ಅವರಿಗೆ ಅಷ್ಟೇ ಪ್ರಿಯವಾಗಿದ್ದಿತು. ಕರ್ನಾಟಕ ಅಥವಾ ಹಿಂದುಸ್ಥಾನಿ

ಈ ಯಾವುದಾದರೂ ಶಾಸ್ತ್ರೀಯ ಪ್ರಕಾರದ ಮೂಲಭೂತ ಜ್ಞಾನ ಸುಗಮಸಂಗೀತಗಾರನಿಗೆ ಅವಶ್ಯಕ ಎಂಬ ನಿಲುವು ಅವರದಾಗಿತ್ತು. "ಸುಗಮಸಂಗೀತ ಕ್ಷೇತ್ರದ ವ್ಯವಸಾಯಿಗಳು ಸದಾ ನೀರಿನ ನಿರ್ಮಲತೆಯ ಬಗ್ಗೆ ಎಚ್ಚರವಹಿಸಬೇಕು" ಎನ್ನುವಲ್ಲಿಯ ಅವರ ಕಳಕಳಿಯನ್ನು ಸಂಬಂಧಪಟ್ಟವರು ಸರಿಯಾಗಿ ಅರ್ಥಮಾಡಿಕೊಳ್ಳಬೇಕು.

೧೯೯೩ರಲ್ಲಿ ಪ್ರಾರಂಭಗೊಂಡ ಅತ್ರಿಯವರ 'ಸಂಗೀತ ಗಂಗಾ' ಸಂಸ್ಥೆ ಅನೇಕ ಹೊಸ ಪೀಳಿಗೆಯ ಗಾಯಕರನ್ನು ಪ್ರೋತ್ಸಾಹಿಸಿ ಬೆಳಕಿಗೆ ತಂದದ್ದಲ್ಲದೆ ಕರ್ನಾಟಕದ ಪ್ರತಿಯೊಂದು ಜಿಲ್ಲಾ ಸ್ಥಳದಲ್ಲಿಯೂ ಮೂರು ದಿನಗಳ ಕಾಲ ಕನ್ನಡ ಸಂಗೀತ ಸಮ್ಮೇಳನ ನಡಸುವ ಸಾಹಸಕ್ಕೂ ಅಣಿಯಾಯಿತು. ಬೆಂಗಳೂರು, ಧಾರವಾಡ, ಗುಲ್ಬರ್ಗ, ಚಿಕ್ಕಮಗಳೂರುಗಳಲ್ಲಿ ನಡೆಸಿದ ಸಮ್ಮೇಳನಗಳ ಯಶಸ್ಸು ಅವರ ಸಂಘಟನಾ ಶಕ್ತಿ ಹಾಗೂ ಕಲ್ಪನಾಶಕ್ತಿಗೆ ಸಾಕ್ಷಿಯಾಗಿದ್ದವು. ಪ್ರತಿಯೊಂದು ಸಮ್ಮೇಳನದಲ್ಲಿಯೂ ಏನಾದರೊಂದು ಹೊಸ ಯೋಜನೆಗಳನ್ನು ಹುಟ್ಟು ಹಾಕಿ, ಅದನ್ನು ಸಮರ್ಥರಾದವರ ಸಹಕಾರದೊಂದಿಗೆ ಪ್ರಯೋಗಿಸಿ ನೋಡುವ ಛಲಗಾರಿಕೆ ಅವರಲ್ಲಿತ್ತು. ಈ ಸಮ್ಮೇಳನಗಳ ಸಂದರ್ಭದಲ್ಲಿ ಸ್ಥಳೀಯ ಕಲಾವಿದರಿಗೆ ಹೆಚ್ಚಿನ ಅವಕಾಶ ಹಾಗೂ ಪ್ರೋತ್ಸಾಹ ದೊರೆಯುವಂತೆ ನೋಡಿಕೊಳ್ಳುವುದರಲ್ಲಿ ಅವರು ವಹಿಸುತ್ತಿದ್ದ ಕಾಳಜಿ ಗಮನಾರ್ಹವಾಗಿದ್ದಿತು. ಹೀಗೆ ಹೆಚ್ಚು ಕಡಿಮೆ ಬೆಂಗಳೂರು ಕೇಂದ್ರಿತವಾಗಿದ್ದ ಸುಗಮಸಂಗೀತ ಒಂದು ಸಂಸ್ಥೆಯ ಮೂಲಕ ಕರ್ನಾಟಕದ ಮೂಲೆ ಮೂಲೆಗಳನ್ನು ಮುಟ್ಟಿ ಮಾರ್ದನಿಗೊಂಡ ಶ್ರೇಯಸ್ಸಿನಲ್ಲಿ ಹೆಚ್ಚಿನ ಪಾಲು ಅತ್ರಿಯವರಿಗೆ ಸಲ್ಲುತ್ತದೆಂದರೆ ತಪ್ಪಾಗದು.

ನೂರಾರು ಧ್ವನಿಸುರುಳಿಗಳಿಗೆ ಸಂಗೀತ ನೀಡಿ, ಚಲನಚಿತ್ರಗಳಲ್ಲಿ ಹಾಡಿ, ನಾಟಕಗಳಲ್ಲಿ ಸಂಗೀತ ನಿರ್ದೇಶನ ಮಾಡಿ, ಕಿರುತೆರೆಯಲ್ಲಿಯೂ ಅಭಿನಯ ಕೌಶಲ್ಯವನ್ನು ವ್ಯಕ್ತಪಡಿಸಿ ವಿಜಯವನ್ನು ಸಾಧಿಸಿದ ಈ ವಿಜಯಕುಮಾರನ ಪ್ರತಿಭೆಯನ್ನು ಮನಸಾರೆ ಮೆಚ್ಚಿಕೊಂಡಿದ್ದ ಅಭಿಮಾನಿಗಳು, ರಸಿಕರು, ಅವರಿಗೆ ಹಲವಾರು ಬಿರುದುಗಳನ್ನು ನೀಡಿ ಗೌರವಿಸಿದ್ದರಲ್ಲಿ ಆಶ್ಚರ್ಯವೇನೂ ಇಲ್ಲ. ಹಾಗೆ ನೋಡಿದರೆ ಈ 'ಹಾಡಿನ ಕೋಗಿಲೆ'ಗೆ ಎಲ್ಲ ಕಾಲವೂ ವಸಂತ ಕಾಲವೇ ಆಗಿತ್ತು. ತನ್ನ ಗೌರವಕ್ಕಿಂತ ಉಳಿದವರನ್ನು ಗೌರವಿಸಿ ಸನ್ಮಾನ ಗೈಯುವುದರಲ್ಲಿ ಅತ್ರಿ ಹೆಚ್ಚು ಸಂತೋಷಪಡುತ್ತಿದ್ದರು. ಅನೇಕ ಹಿರಿಯ ಕವಿಗಳನ್ನು, ಗಾಯಕರನ್ನು, ಕಲಾವಿದರನ್ನು, ಸಂದರ್ಭೋಚಿತವಾಗಿ ಸತ್ಕರಿಸುವಾಗೆಲ್ಲ ಅವರು ಏರ್ಪಡಿಸುತ್ತಿದ್ದ ಸಮಾರಂಭಗಳ ಕಲಾತ್ಮಕತೆ, ಸೊಗಸು, ಅಚ್ಚುಕಟ್ಟುತನಗಳಲ್ಲಿ ಅತ್ರಿಯವರದೇ ಆದ ಶಿಸ್ತು ಕಾಣುತ್ತಿತ್ತು. ಕುಮಾರವ್ಯಾಸನ ಮಾತಿನಲ್ಲಿ ಹೇಳುವುದಾದರೆ ಅತ್ರಿ ಕವಿ-ಕಲಾವಿದರನ್ನು 'ನೋಡಿದಣಿಯನು, ನಿಚ್ಚಲುಚಿತವ ಮಾಡಿದಣಿಯನು, ಬಿರುದ ಹೊಗಳಿಸಿ ಹಾಡಿದಣಿಯನು'. ಕಳೆದ ವರ್ಷ ಜನವರಿ ೨೫ರಂದು ಕಲಾಕ್ಷೇತ್ರದಲ್ಲಿ 'ಸಂಗೀತಾ ಗಂಗಾ' (ಭಾರತಯಾತ್ರಾ ಕೇಂದ್ರ ಜೊತೆಗೆ) ನನಗೆ ಪಂಪ ಪ್ರಶಸ್ತಿ ದೊರೆತ ನಿಮಿತ್ತ ಏರ್ಪಡಿಸಿದ ಸಮಾರಂಭದಲ್ಲಿ ಸಂವಾದ, ಕವಿಗೋಷ್ಠಿ, ಅಭಿನಂದನೆ-ಎಲ್ಲದರ ಸೂತ್ರಧಾರನಾಗಿ ಅತ್ರಿ ಶಿಸ್ತುಗಾರ ಶಿವಪ್ಪನಾಯಕನಂತೆ ಕಂಗೊಳಿಸಿದ್ದು ಇನ್ನೂ ನನ್ನ ಕಣ್ಣು ಮುಂದೆ ಕಟ್ಟಿದಂತಿದೆ.

'ಸಂಗೀತ ಗಂಗಾ'ದ ಮೂಲಕ ನಾಡಿನ ಸಾಂಸ್ಕೃತಿಕ ಜೀವನದಲ್ಲಿ ಅಮೃತವಾಹಿನಿಯನ್ನು ಹರಿಸಿದ ಅತ್ರಿ ಏರುಜವ್ವನದಲ್ಲಿಯೇ ತನ್ನ ಜೀವನದ ಸಂಗೀತದ ಪರಿಶುದ್ಧ ಪ್ರವಾಹವನ್ನು ತುಂಗೆಯಲ್ಲಿ ಸಂಗಮಗೊಳಿಸಿದ್ದನ್ನು ವಿಧಿ (ಹಾಗೆಂದರೇನು?) ವಿಲಾಸವೆಂದು ಕರೆಯೋಣವೆ?

'ಸಂಗೀತ ಗಂಗಾ' ಸಂಸ್ಥೆ ಅತ್ರಿಯವರ ಹೊಂಗನಸಿನ ಸಂಕೇತವಾಗಿ ಸರ್ವತೋಮುಖವಾಗಿ ಬೆಳೆಯುವಂತೆ ನೋಡಿಕೊಳ್ಳುವುದು ಹಾಗೂ 'ಕನ್ನಡ ಸಂಗೀತ ಸಮ್ಮೇಳನ' ಎಂಬ ಅವರ ಪರಿಕಲ್ಪನೆಯನ್ನು ಬೆಂಗಳೂರಿನ ಇನ್ನುಳಿದ ಸುಗಮಸಂಗೀತ ಸಂಸ್ಥೆಗಳು ಸೇರಿ ಮುಂದುವರಿಸುವುದೂ ಅತ್ರಿಯವರ ಋಣಸಂದಾಯಕ್ಕೆ ಯೋಗ್ಯಮಾರ್ಗವಾಗಬಹುದೆಂದು ನನ್ನ ಭಾವನೆ.

('ವಿಜಯಗಾನ' ೨೦೦೧)

ಸಾಹಿತ್ಯ ಸಮಾಹಿತ : ೨೦೦೭

## ೨೭

# ಸೃಜನಶೀಲ ಗಾಯಕ

ಬಹಳ ಹಿಂದೆಯೇ ಆಕಾಶವಾಣಿಯಲ್ಲಿ ಶಿವಮೊಗ್ಗ ಸುಬ್ಬಣ್ಣನವರ ಕಾವ್ಯ ಗಾಯನವನ್ನು ಕೇಳಿ ನಾನು ಮೆಚ್ಚಿಕೊಂಡಿದ್ದೆ. ಒಂದು ದಿನ ಅಕಸ್ಮಾತ್ತಾಗಿ ಅವರು ನಮ್ಮ ಮನೆಗೆ ಬಂದು, "ಧಾರವಾಡ ಆಕಾಶವಾಣಿಯಲ್ಲಿ ನಿಮ್ಮ ಎರಡು ಭಾವಗೀತೆಗಳನ್ನು ರೆಕಾರ್ಡ್ ಮಾಡಿ ಬಂದೆ" ಎಂದು ಹೇಳಿ ನನ್ನನ್ನು ಅಚ್ಚರಿಗೊಳಿಸಿದರು. 'ಮಾತು' ಎಂಬ ನನ್ನ ಭಾವಗೀತೆಯನ್ನು ಹಾಡಿಯೂ ತೋರಿಸಿದರು. ಭಾವಾನುಸಾರಿಯಾದ ರಾಗಸಂಯೋಜನೆ ಹಾಗೂ ಹಾಡುವಾಗಿನ ಅವರ ತನ್ಮಯತೆ ನನ್ನನ್ನು ಮುಗ್ಧಗೊಳಿಸಿತು. ಅಂದಿನಿಂದಲೂ ಭಾವಗೀತೆಗಳ ಅವರ ಹಾಡುಗಾರಿಕೆಯನ್ನು ನಾನು ಅನೇಕ ಸಲ ಸಭೆ ಸಮಾರಂಭಗಳಲ್ಲಿ ಕೇಳುತ್ತ ಬಂದಿದ್ದೇನೆ. ಸುಬ್ಬಣ್ಣ ತಮ್ಮದೇ ಆದ ಶೈಲಿಯನ್ನು ರೂಪಿಸಿಗೊಂಡಿರುವುದನ್ನು ಗುರುತಿಸಿದ್ದೇನೆ. ಅವರಿಗೆ ಒಳ್ಳೆಯ ಶಾರೀರವಿದೆ, ಸಂಗೀತ ಜ್ಞಾನವಿದೆ. ಅದಕ್ಕೂ ಮಿಗಿಲಾಗಿ ತಮ್ಮದೇ ಆದ ವ್ಯಕ್ತಿತ್ವವಿದೆ. ನಿರಂತರ ಸಾಧನೆಯಿಂದ ಇಂದು ಅವರು ಸುಗಮಸಂಗೀತ ಕ್ಷೇತ್ರದಲ್ಲಿ ಎತ್ತರಕ್ಕೆ ಬೆಳೆದು ನಿಂತ ವ್ಯಕ್ತಿಯಾಗಿ ಕಾವ್ಯಪ್ರೇಮಿಗಳ ಕಣ್ಮಣಿಯಾಗಿದ್ದಾರೆ.

ಸಿ. ಅಶ್ವತ್ಥರನ್ನು ಮೊದಲುಗೊಂಡು ಅನೇಕ ಪ್ರತಿಭಾವಂತ ಗಾಯಕರ ಮೂಲಕ ಸುಗಮಸಂಗೀತ ಇಂದು ನಾಡಿನ ಸಾಂಸ್ಕೃತಿಕ ಜೀವನಕ್ಕೆ ಹೆಚ್ಚಿನ ಮೆರುಗನ್ನು ತಂದುಕೊಟ್ಟಿದೆ. ಸುಗಮಸಂಗೀತವನ್ನು ಉಳಿದ ಎಲ್ಲ ಸಂಗೀತ ಪ್ರಕಾರಗಳಿಂದ ಬೇರ್ಪಡಿಸುವ ವಿಶಿಷ್ಟ ಲಕ್ಷಣವೆಂದರೆ ಅದು ಸಾಹಿತ್ಯಕ್ಕೆ ನೀಡಿರುವ ಅಗ್ರಪಟ್ಟ. ಸಾಹಿತ್ಯ ಮೌಲ್ಯವನ್ನು ಪ್ರಧಾನವಾಗಿಸಿ, ಕವಿತೆಯಲ್ಲಿಯ ಗೇಯ ಗುಣವನ್ನು ದುಡಿಸಿಕೊಳ್ಳುತ್ತ ತಕ್ಕ ರಾಗ ಸಂಯೋಜನೆಯೊಂದಿಗೆ ಭಾವಾರ್ಥಗಳನ್ನು ಒಂದು ಅನುಭವವಾಗಿ ಕೇಳುಗರಿಗೆ ತಲುಪಿಸುವುದು ಸುಗಮಸಂಗೀತದ ವೈಶಿಷ್ಟ್ಯ. ಕಾವ್ಯರಚನೆಯಂತೆ ಕಾವ್ಯ ಗಾಯನವೂ ಒಂದು ಸೃಜನಶೀಲ ಕ್ರಿಯೆಯಾಗಿ ತೋರಿಸಿಕೊಟ್ಟವರಲ್ಲಿ ಸುಬ್ಬಣ್ಣನವರೂ ಒಬ್ಬರು ಹಾಗೂ ಮುಖ್ಯರು. ಅಗ್ಗದ ಜನಪ್ರಿಯತೆಗಾಗಿ ಕೀಳು ಮಟ್ಟದ ಸಾಹಿತ್ಯವನ್ನು ಅಳವಡಿಸಿಕೊಂಡು ಮನರಂಜನೆ ನೀಡುವ ಪ್ರವೃತ್ತಿ ಅಲ್ಲಲ್ಲಿ ಕಂಡು ಬರುತ್ತಿದ್ದರೂ ಉತ್ತಮ ಕಾವ್ಯವನ್ನು ಹೆಚ್ಚಿನ ಸಂಖ್ಯೆಯಲ್ಲಿ ಎತ್ತಿ ಹಿಡಿದು ಪ್ರಸಾರಗೊಳಿಸುವುದು ತಮ್ಮ ಕರ್ತವ್ಯವೆಂದು ಭಾವಿಸಿದವರಲ್ಲಿ ಸುಬ್ಬಣ್ಣನವರು ಮುಂಚೂಣಿಯಲ್ಲಿರುವುದು ನಿಜಕ್ಕೂ ಪ್ರಶಂಸನೀಯ.

ಸುಬ್ಬಣ್ಣನವರ ಹಾಡುಗಾರಿಕೆಯಲ್ಲಿ ಆತ್ಮವಿಶ್ವಾಸದಂತೆಯೇ ನಮ್ರತೆಯೂ ಇದೆ. ತನ್ಮಯತೆಯಿಂದ ಹಾಡುವಾಗ ಅವರ ಇಡೀ ವ್ಯಕ್ತಿತ್ವವನ್ನು ಅದರಲ್ಲಿ ತೊಡಗಿಸುತ್ತಾರೆ. 'ಕಾಡು ಕುದುರೆ ಓಡಿ ಬಂದಿತ್ತ...' ಹಾಡುವಾಗ ಅದರ ಭಾವದ ತೀವ್ರಗತಿಗೆ ಕೇಳುಗರ ಹೃದಯವೂ ತುಡಿಯತೊಡಗುತ್ತದೆ. 'ಕೋಡಗನ ಕೋಳಿ ನುಂಗಿತ್ತ' ಹಾಡಿನ ಬೆಡಗು; 'ಆನಂದಮಯ ಈ ಜಗಹೃದಯ' ಕವಿತೆಯ ಗಾಂಭೀರ್ಯ ಹಾಗೂ ಜೀವಕ್ಕೆ ನೀಡುವ ಧೈರ್ಯ ಸುಬ್ಬಣ್ಣನವರ ದನಿ-ಧಾಟಿಗಳಿಗೆ ಹೇಳಿ ಮಾಡಿಸಿದಂತೆ ತೋರಿದರೆ ಆಶ್ಚರ್ಯವಿಲ್ಲ. ತಮ್ಮ ಕಂಠಕ್ಕೆ ಹಾಗೂ ಮನೋಧರ್ಮಕ್ಕೆ ಒಗ್ಗುವ ಹಾಡುಗಳನ್ನು ತಾವೇ ಆಯ್ಕೆ ಮಾಡಿಕೊಂಡು ಅವುಗಳ ಭಾವಾರ್ಥಗಳನ್ನು ಊರ್ಜಿತಗೊಳ್ಳುವಂತೆ ಮಾಡುವ ಕಲೆಯನ್ನು ಸುಬ್ಬಣ್ಣ ಚೆನ್ನಾಗಿ ಸಾಧಿಸಿದ್ದಾರೆ. ಇತ್ತೀಚಿನ ಒಂದು ಕಾರ್ಯಕ್ರಮದಲ್ಲಿ ಅವರು 'ಮುಗಿಲ ಬಸಿರ ಬಯಲಿನಿಂದ' ಎಂಬ ನನ್ನ ಕವಿತೆಯನ್ನು ಹಾಡಿದರು. ಆ ಕವಿತೆಯನ್ನು ನಾನೇ ಮರೆತುಬಿಟ್ಟಿದ್ದೆ. ಈ ದೃಷ್ಟಿಯಲ್ಲಿ ಸುಬ್ಬಣ್ಣ ಸಂಪೂರ್ಣ ಗುಣಪಕ್ಷಪಾತಿ. ಶಾಸ್ತ್ರೀಯ ಸಂಗೀತದ ಮೂಲಭೂತ ಜ್ಞಾನದಿಂದ ಅವರ ಸುಗಮಸಂಗೀತಕ್ಕೆ ಒಂದು ಬಗೆಯ ಗಾಂಭೀರ್ಯ ಒದಗಿರುವಂತೆ ಕಂಡುಬರುತ್ತದೆ.

ಅರವತ್ತು ವರುಷ ತುಂಬಿರುವ ಈ ಸಂದರ್ಭದಲ್ಲಿ ನಮ್ಮೆಲ್ಲರ ಅಭಿಮಾನದ ಹಾಗೂ ಪ್ರೀತಿಯ ಗಾಯಕರಾದ ಸುಬ್ಬಣ್ಣನವರಿಗೆ ಎಲ್ಲ ಬಗೆಯ ಶುಭವನ್ನು ಕೋರುತ್ತೇನೆ. 'ಹಣ್ಣಾದ ಬಿಸಿಲ ಬಣ್ಣನs ಕಳತು ಬೆಳದಿಂಗಳಾತೊ ಏನೊ' ಎಂಬಂತೆ ಪಕ್ವತೆಯನ್ನೂ ಪರಿಣತಿಯನ್ನೂ ಏಕಕಾಲಕ್ಕೆ ಪಡೆದಿರುವ ಅವರ ಕಂಠಶ್ರೀ ಇನ್ನಷ್ಟು ಸಮೃದ್ಧವಾಗಿ ನಾಡಿನ ಮೂಲೆಮೂಲೆಗಳಲ್ಲಿ ಮಾರ್ಮೊಳಗುವಂತಾಗಲಿ ಎಂದು ಹಾರೈಸುತ್ತೇನೆ.

('ರಜತ ಕಮಲ' ೧೯೯೬)

ಸಾಹಿತ್ಯ ಸಮಾಹಿತ : ೨೦೦೭

## ೨೮

## ಶ್ರೀ ಬ.ಗಂ. ತುರಮರಿ

ನಾನು ಧಾರವಾಡದ ಕರ್ನಾಟಕ ಕಾಲೇಜಿನ ವಿದ್ಯಾರ್ಥಿಯಾಗಿದ್ದಾಗಲೇ (೧೯೪೬-೫೨) ಬೆಳಗಾವಿಯ ಲೇಖಕರ ಬಳಗದ ಪರಿಚಯ ಹಾಗೂ ಅಲ್ಲಿ ನಡೆಯುತ್ತಿದ್ದ ಕನ್ನಡ ಚಟುವಟಿಕೆಗಳ ಸಂಪರ್ಕ ನನಗೆ ಒದಗಿದ್ದಿತು. ಇದಕ್ಕೆ ಮುಖ್ಯ ಕಾರಣಕರ್ತರಾದವರು ನನ್ನ ಹಿರಿಯ ಸ್ನೇಹಿತರಾದ ಬಸವರಾಜ ಕಟ್ಟೀಮನಿಯವರು. ಅದೇ ಜಿಲ್ಲೆಯವರಾದ ಕಟ್ಟೀಮನಿಯವರು ಕಲಿತದ್ದು, ಪತ್ರಿಕೆಯಲ್ಲಿ ಕೆಲಸ ಮಾಡತೊಡಗಿದ್ದು, ಬರಬರುತ್ತ ಅಲ್ಲಿಯ ಸಾಹಿತ್ಯ ಹಾಗೂ ರಾಜಕೀಯ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡದ್ದು ಬೆಳಗಾವಿಯಲ್ಲಿಯೇ. ಹೀಗಾಗಿ ಬೆಳಗಾವಿ ಹಾಗೂ ಅವರು ಜನಿಸಿದ ಕುಂದರನಾಡಿನ ಬಗ್ಗೆ ಅವರಿಗೆ ವಿಶೇಷವಾದ ಆಸ್ಥೆ ಹಾಗೂ ಅಭಿಮಾನ. ಆ ಅಭಿಮಾನದಲ್ಲಿ ಸಹಭಾಗಿಗಳಾಗಿ, ಅವರಿಗೆ ಶಾಲಾದಿನಗಳಿಂದಲೂ ನಿಕಟವರ್ತಿಗಳಾಗಿದ್ದ ಕೆಲ ಸ್ನೇಹಿತರಲ್ಲಿ ಬ.ಗಂ. ತುರಮರಿಯವರು ಮುಖ್ಯರು. ಅವರಿಬ್ಬರ ಮೂಲಕ ನನಗೆ ಕವಿಗಳಾದ ಡಿ.ಎಸ್. ಕರ್ಕಿ ಹಾಗೂ ಎಸ್.ಡಿ. ಇಂಚಲ ಮೊದಲಾದವರ ಪರಿಚಯವಾಯಿತು. ಆ ಪರಿಚಯ ಸ್ನೇಹವಾಗಿ ಬೆಳೆಯಲು ಬಹಳ ಕಾಲ ಬೇಕಾಗಲಿಲ್ಲ. ಯಾಕೆಂದರೆ ಅವರೆಲ್ಲರೂ ಅತ್ಯಂತ ಸಹೃದಯರೂ, ಅಚ್ಚಳಿಯದ ಕಾವ್ಯಪ್ರೇಮಿಗಳೂ ಆಗಿದ್ದರು. ಕಾವ್ಯಶಾಸ್ತ್ರ ವಿನೋದದ ಜೊತೆಗೆ ಅಂದಿನ ಬೆಳಗಾವಿಯ ಪರಿಸ್ಥಿತಿಯಲ್ಲಿ ಕನ್ನಡದ ಕೆಲಸವನ್ನು ತಮ್ಮ ಒಂದು ಕಾಯಕವಾಗಿ ಸ್ವೀಕರಿಸಿದವರಾಗಿದ್ದರು. ಅವರ ಜೊತೆಗಿರುತ್ತಿದ್ದ ಇನ್ನೂ ಅನೇಕ ಹಿರಿಯರು, ವಿದ್ಯಾರ್ಥಿವೃಂದ ಸಹಜವಾಗಿಯೇ ಕನ್ನಡದ ದೀಕ್ಷೆಯನ್ನು ತೊಟ್ಟು ನಿಂತವರಂತೆ ನನಗೆ ಕಂಡರು. ಅವರಲ್ಲನೇಕರು ಇಂದು, ಸಾಹಿತ್ಯವನ್ನೊಳಗೊಂಡಂತೆ ಉಳಿದ ಕ್ಷೇತ್ರಗಳಲ್ಲಿಯೂ ಆ ನಿಷ್ಠೆಯನ್ನುಳಿಸಿಕೊಂಡು, ಬೆಳೆಸಿಕೊಂಡು ಬಂದಿದ್ದಾರೆ.

ಆ ಬಳಗದ ಸಾಹಿತ್ಯ ಕೂಟಗಳ ಸಂಘಟಕರಾಗಿ ಅಥವಾ ಸಂಚಾಲಕರಾಗಿ ಸದಾ ಒಂದಿಲ್ಲ ಒಂದು ಚಟುವಟಿಕೆಯಲ್ಲಿ ತೊಡಗಿರುತ್ತಿದ್ದವರೆಂದರೆ ಬ.ಗಂ. ತುರಮರಿಯವರು ಅಥವಾ ಎಲ್ಲರೂ ಪ್ರೀತಿಯಿಂದ ಕರೆಯುತ್ತಿದ್ದಂತೆ ತುರಮರಿ ಮಾಸ್ತರು. ಅವರ ವಿನೋದ ದೃಷ್ಟಿ ಹಾಗೂ ಆತ್ಮೀಯತೆ ನನ್ನನ್ನು ಅಂದೇ ಆಕರ್ಷಿಸಿದವು. ಅವರದು ಪಾದರಸದಂಥ ವ್ಯಕ್ತಿತ್ವ. ಉಳಿದವರನ್ನು ಮುಂದೆ ಮಾಡಿ ತಾವು ಹಿಂದೆ ನಿಂತು ಎಲ್ಲ ಕೆಲಸ ಮಾಡುವ ಸ್ವಭಾವ. ಅಂದು ನಾನು ನೋಡಿದ ತುರಮರಿಯವರು ಇಂದಿಗೂ ಹಾಗೆಯೇ ಇದ್ದಾರೆ. ಈ ವಯಸ್ಸಿನಲ್ಲಿಯೂ (೮೧) ಅದೇ ನಗೆಮಾತು. ಅದೇ ಸಾಹಿತ್ಯಾಸಕ್ತಿ, ಅದೇ ಕ್ರಿಯಾಶೀಲತೆ,

ಅದೇ ಸ್ನೇಹಪರತೆ, ಅದೇ ಅಭಿಮಾನ. ಇವೆಲ್ಲದರ ನಡುವೆ ನಾನು ಕಂಡ ಅವರ ಸ್ವಭಾವದ ಇನ್ನೊಂದು ಮಹತ್ವದ ಅಂಶವೆಂದರೆ ಅವರ ಚಿಕಿತ್ಸಕ ದೃಷ್ಟಿ. ವ್ಯಕ್ತಿ, ಸಂಸ್ಥೆ, ಸಾಹಿತ್ಯ ಕೃತಿ ಯಾವುದರ ಬಗೆಗೂ, ಅದು ಎಷ್ಟೇ ದೊಡ್ಡದೆನಿಸಿದ್ದರೂ ತುರಮರಿಯವರು ಯಾವ ಮುಲಾಜೂ ಇಲ್ಲದೆ ಚರ್ಚಿಸಬಲ್ಲರು, ತಮ್ಮದೇ ಆದ ಅಭಿಪ್ರಾಯವನ್ನು ಮಂಡಿಸಬಲ್ಲರು, ಪ್ರಶ್ನೆ ಎತ್ತಬಲ್ಲರು. ಆದರೆ ಅಲ್ಲಿ ವೈಯಕ್ತಿಕ ದ್ವೇಷಕ್ಕೆ ಎಡೆ ಇರುವುದಿಲ್ಲ. ಅವರ ಜೊತೆಗಿನ ಸಂಭಾಷಣೆ ಸರಸವಾಗಿರುವಂತೆಯೇ ಚಕಮಕಿ ಕಡೆದಂತೆ ಚುರುಕೂ ಆಗಿರುತ್ತದೆ. ಅವರ ಅತ್ಯಂತ ಆತ್ಮೀಯ ಸ್ನೇಹಿತರಾದ ಬಸವರಾಜ ಕಟ್ಟೀಮನಿಯವರ ಜೊತೆಗೆ ಅವರು ಸಂಭಾಷಣೆಗೆ ತೊಡಗಿದಾಗೆಲ್ಲ ಉಳಿದವರಿಗೆ ಅದೊಂದು ಮೋಜಿನ ಪ್ರಸಂಗವೆನಿಸುತ್ತಿತ್ತು. ಮಾತುಕತೆ ಅನಿವಾರ್ಯವಾಗಿ ಏರು ಧ್ವನಿಯಲ್ಲಿರುತ್ತಿತ್ತು. ಕಟ್ಟೀಮನಿಯವರ ಜೊತೆ ಅವರು ತಲೆ ಒಡೆದುಕೊಂಡಷ್ಟು ಬಹುಶಃ ಇನ್ನಾರ ಜೊತೆಗೂ ಇರಲಿಕ್ಕಿಲ್ಲ. ಯಾಕೆಂದರೆ ಅವರದೂ ಅಷ್ಟೇ ದಯಾದಾಕ್ಷಿಣ್ಯವಿಲ್ಲದ ನಿಷ್ಠುರ ಸ್ವಭಾವ. ಆದರೆ ಎಲ್ಲವೂ ಕೊನೆಗೊಳ್ಳುತ್ತಿದ್ದುದು ದೊಡ್ಡದಾದ ನಗೆಯಲ್ಲಿ. ಅವರ ಸ್ನೇಹದ ಬೆಸುಗೆ ಪರಸ್ಪರ ಅಷ್ಟೊಂದು ಗಾಢವಾಗಿತ್ತು. ತುರಮರಿಯವರನ್ನು ಚೇಷ್ಟೆಗಾಗಿ 'ತರಾತುರಿ' ಮಾಸ್ತರೆಂದು ಕಟ್ಟೀಮನಿ ಕರೆಯುತ್ತಿದ್ದುದೂ ಉಂಟು.

ತುರಮರಿಯವರು ಬಿ.ಎ. ಪರೀಕ್ಷೆಗೆ ಕನ್ನಡವನ್ನು ಮುಖ್ಯ ವಿಷಯವನ್ನಾಗಿ ತೆಗೆದುಕೊಂಡಿದ್ದು ಅವರ ಸಾಹಿತ್ಯದ ಒಲವಿಗೆ ಕಾರಣವಾಯಿತು. ಕಾಲೇಜಿನಲ್ಲಿದ್ದಾಗಲೇ ಅವರು ಕವಿ ಈಶ್ವರ ಸಣಕಲ್ಲರ ಪರಿಚಯ ಮಾಡಿಕೊಂಡಿದ್ದರು. ಕರ್ಕಿ ಹಾಗೂ ಇಂಚಲರ ಜತೆಯಲ್ಲಿ ಅವರ ಸಾಹಿತ್ಯಾಸಕ್ತಿ ಪುಷ್ಟಿಗೊಂಡಿತು. ಕನ್ನಡದ ಯಾವ ಮಹತ್ವದ ಕೃತಿಯೂ ಅವರ ದೃಷ್ಟಿಯಿಂದ ತಪ್ಪಿಸಿಕೊಂಡಂತೆ ಕಾಣುವುದಿಲ್ಲ. ಅವರ ಓದುವ ಹವ್ಯಾಸ ಇಂದಿಗೂ ಅದೇ ರೀತಿ ಮುಂದುವರಿದಿದೆ.

ಕಟ್ಟೀಮನಿಯವರ 'ಕಾದಂಬರಿಕಾರನ ಕಥೆ' (೧೯೮೧)ಯಲ್ಲಿ ಅನೇಕ ವ್ಯಕ್ತಿಚಿತ್ರಗಳು ಬಂದು ಹೋಗಿವೆ. ಅದರಲ್ಲಿ ಒಂದು ಕಡೆ ತುರಮರಿಯವರ ಬಗ್ಗೆ ಬರೆದಿರುವುದನ್ನು ಓದಿದಾಗ ಚಿತ್ರಕಲೆಯಲ್ಲಿ ಅವರಿಗೆ ಆಸಕ್ತಿಯಿದ್ದ ವಿಷಯ ಗೋಚರಿಸಿತು. "ಚಿತ್ರಕಲೆಯ ವಿಚಾರ ಬರುತ್ತಲೂ ತುರಮರಿಯವರ ನೆನಪು ಬರದಿರುವುದಿಲ್ಲ. ಆಗ ಅವರೂ ವಿದ್ಯಾರ್ಥಿಯಾಗಿದ್ದರು... ನಮ್ಮ ಮನೆಯ ಸಮೀಪದಲ್ಲಿಯೇ ಭಡಕಲ ಗಲ್ಲಿಯಲ್ಲಿ ಅವರು ವಾಸಿಸುತ್ತಿದ್ದರು. ವರ್ಣಚಿತ್ರಗಳನ್ನು ಬಹಳ ಚೆನ್ನಾಗಿ ರಚಿಸುತ್ತಿದ್ದರು. ನಮ್ಮ 'ವಿದ್ಯಾರ್ಥಿ' ಪತ್ರಿಕೆಯಲ್ಲಿ ಅವರ ಅನೇಕ ವರ್ಣಚಿತ್ರ, ರೇಖಾಚಿತ್ರಗಳು ಬೆಳಕು ಕಂಡಿದ್ದವು.... ತುರಮರಿಯವರು ಬೈಲಹೊಂಗಲದವರು. ಬಾಣಭಟ್ಟನ 'ಕಾದಂಬರಿ'ಯನ್ನು ಕನ್ನಡಕ್ಕೆ ತಂದ ಗಂಗಾಧರ ಮಡಿವಾಳೇಶ್ವರ ತುರಮರಿಯವರ ವಂಶಜರು. ಸುಮಾರು ನಲವತ್ತು ವರ್ಷಗಳಿಂದಲೂ ಅಕೃತ್ರಿಮ ಸ್ನೇಹ ಉಳಿಸಿಕೊಂಡು ಬಂದವರೆಂದರೆ ತುರಮರಿ ಒಬ್ಬರೇ". ಇದಕ್ಕೆ ತುರಮರಿಯವರ ಪ್ರತಿಕ್ರಿಯೆ ತುಂಬ ನಮ್ರತೆಯಿಂದ ಕೂಡಿದ್ದಾಗಿದೆ. ಅವರು ತಮ್ಮ ಪತ್ರವೊಂದರಲ್ಲಿ ಬರೆಯುತ್ತಾರೆ : "ನಾನು ಕಲಾವಿದನೂ ಆಗಲಿಲ್ಲ; ಕವಿ ಮೊದಲೇ ಇರಲಿಲ್ಲ. ಹಿರಿಯರಾಗಿ ಕರ್ಕಿ ಮತ್ತು ಇಂಚಲರ ಜತೆಯಲ್ಲಿ ಇದ್ದಾಗ ನನಗೂ

ತುಸು ಆವೇಶ ಹುಟ್ಟಿತು. ಅದು ೧೯೪೪ರ ಸುಮಾರಕ್ಕೆ". ಪ್ರಗತಿಶೀಲ ಸಾಹಿತ್ಯದ ಚಳುವಳಿಯ ಸಂದರ್ಭದಲ್ಲಿ ಕಟ್ಟೀಮನಿ ಸಂಪಾದಕರಾಗಿದ್ದ 'ಉಷಾ' ಮಾಸಪತ್ರಿಕೆ ಸಾಹಿತ್ಯಾಸಕ್ತರ ಗಮನವನ್ನು ವಿಶೇಷವಾಗಿ ಸೆಳೆದುಕೊಂಡಿತ್ತು. ಆಗ ಆ ಪತ್ರಿಕೆಯಲ್ಲಿ ತುರಮರಿಯವರ ಕೆಲವು ಕವಿತೆಗಳನ್ನು ಓದಿದ ನೆನಪು ನನಗಿದೆ.

ಬರವಣಿಗೆ ತಮ್ಮ ಪ್ರವೃತ್ತಿಯಲ್ಲವೆಂದು (ತಪ್ಪು) ಭಾವಿಸಿದ ತುರಮರಿಯವರು ತಮ್ಮ ಸಂಘಟನಾ ಚಾತುರ್ಯದ ಮೂಲಕ ಬೆಳಗಾವಿಯಲ್ಲಿ ಕನ್ನಡ ಸಾಹಿತ್ಯದ ಚಟುವಟಿಕೆಗಳನ್ನು ಹೆಚ್ಚಿಸುವುದರ ಕಡೆಗೆ ವಿಶೇಷ ಗಮನವೀಯತೊಡಗಿದರು. ಅವರು ಹುಟ್ಟುಹಾಕಿದ 'ಕಿರಿಯರ ಬಳಗ' ೧೯೪೪ರಲ್ಲಿ ಎರಡು ಪುಸ್ತಕಗಳನ್ನು ಹೊರತಂದಿತು. 'ತುಂಬಿ' ಕವನ ಸಂಗ್ರಹದಲ್ಲಿ ಮಧುರಚೆನ್ನರನ್ನು ಮೊದಲುಗೊಂಡು ತುರಮರಿಯವರ ವರೆಗೂ ಬೆಳಗಾವಿ ಪ್ರದೇಶದ ಅಂದಿನ ಹಲವಾರು ಹಿರಿ-ಕಿರಿಯ ಕವಿಗಳ ಕವನಗಳು ಸೇರ್ಪಡೆಯಾಗಿದ್ದವು. ಈಶ್ವರ ಸಣಕಲ್ಲರೊಬ್ಬರನ್ನು ಬಿಟ್ಟರೆ ಆಗ ಇದರಲ್ಲಿ ಪ್ರಮುಖವಾಗಿ ಕಾಣಿಸಿಕೊಂಡ ಕರ್ಕಿ, ಇಂಚಲ, ಸಿಂಪಿ ಲಿಂಗಣ್ಣ ಮೊದಲಾದವರು ತಮ್ಮ ಕವನ ಸಂಗ್ರಹಗಳನ್ನು ಪ್ರಕಟಿಸಿಯೇ ಇರಲಿಲ್ಲ. ಈ ದೃಷ್ಟಿಯಿಂದಲೂ ಹಾಗೂ ಕುವೆಂಪು ಅವರ ಕವಿತಾ ರೂಪದ ಹರಕೆಯಿಂದಲೂ 'ತುಂಬಿ' ಒಂದು ಚಾರಿತ್ರಿಕ ದಾಖಲೆಯಾಗಿ ಉಳಿಯಬಲ್ಲದು. ಅದೇ ವರುಷ ಪ್ರಕಟಗೊಂಡ ಕಿರಿಯರ ಬಳಗದ ಇನ್ನೊಂದು ಕೃತಿ 'ತಿರುಗಣಿ'. ಪಾಪು, ಈಶ್ವರನ್, ಕಟ್ಟೀಮನಿ, ಮಿರ್ಜಿ ಅಣ್ಣಾರಾಯ, ಕುಳಕುಂದ ಶಿವರಾಯ, ಪದ್ಮಾವತಿದೇವಿ ಅಂಗಡಿ, ಶಾಂತಾದೇವಿ ಮಾಳವಾಡ ಮೊದಲಾದವರ ಸಣ್ಣಕತೆಗಳನ್ನು ಒಳಗೊಂಡಿರುವ ಈ ಸಂಗ್ರಹಕ್ಕೆ ಅ.ನ.ಕೃ. ಮುನ್ನುಡಿ ಬರೆದಿದ್ದಾರೆ. ಇದು ಆ ಕಾಲಕ್ಕೆ ಬಳಗ ಕೈಕೊಂಡ ಒಂದು ಮಹತ್ವದ ಪ್ರಯತ್ನವೆಂದು ಹೇಳಿದರೆ ತಪ್ಪಾಗದು. ಪಠ್ಯಪುಸ್ತಕವಾಗಿದ್ದ 'ತೋರಣ' ಕೂಡ ಇವರದೇ ಪ್ರಕಟನೆಯಾಗಿದ್ದಿತು. ಕಿರಿಯರ ಬಳಗದ ಈ ಸಾಹಸಕ್ಕೆ ತುರಮರಿಯವರ ಕಾರ್ಯದರ್ಶಿತ್ವವೇ ಕಾರಣವೆಂದು ಬೇರೆ ಹೇಳಬೇಕಿಲ್ಲ. ಅವರ ಮುಂದಿನ ಸಾಹಿತ್ಯ ಚಟುವಟಿಕೆಗಳಿಗೆ ಇದು ಒಳ್ಳೆಯ ಆರಂಭವನ್ನು ಒದಗಿಸಿತು. ನಾಡಹಬ್ಬ, ಜಿಲ್ಲಾ ವಿದ್ಯಾರ್ಥಿಕೂಟ ಮೊದಲಾದವುಗಳ ಮೂಲಕ ಅವರ ಕಾರ್ಯವ್ಯಾಪ್ತಿ ವಿಸ್ತಾರಗೊಂಡಿತು. ಕಟ್ಟೀಮನಿಯವರು ೧೯೫೦ರಲ್ಲಿ ಧಾರವಾಡದಲ್ಲಿ ಪ್ರಾರಂಭಿಸಿದ 'ಪ್ರಗತಿಶೀಲ ಸಾಹಿತ್ಯಮಾಲೆ'ಯ ಸಂಪಾದಕ ಸಲಹೆಗಾರರಲ್ಲಿ ತುರಮರಿಯವರು ಇದ್ದರು. ಅದೇ ಹೊತ್ತಿಗೆ ನನ್ನ 'ಭಾವಜೀವಿ' ಖಂಡಕಾವ್ಯ ಈ ಮಾಲೆಯಲ್ಲಿ ಪ್ರಕಟಗೊಂಡದ್ದು ನನ್ನ ಕಾವ್ಯ ರಚನೆಗೆ ಹೆಚ್ಚಿನ ಪ್ರೋತ್ಸಾಹವನ್ನು ಒದಗಿಸಿತ್ತೆಂಬುದನ್ನು ಇಲ್ಲಿ ನೆನೆಯಬೇಕು. (ಆಗ ನಾನು ಬಿ.ಎ.ದಲ್ಲಿ ಓದುತ್ತಿದ್ದೆ.)

ಬೆಳಗಾವಿ, ಹುಬ್ಬಳ್ಳಿಯಲ್ಲಿ ಶಿಕ್ಷಕರ ತರಬೇತಿ ಸಂಸ್ಥೆಗಳ ಪ್ರಾಚಾರ್ಯರಾಗಿ ಶೈಕ್ಷಣಿಕ ಸೇವೆ ಸಲ್ಲಿಸಿದ ತುರಮರಿಯವರಿಗೆ ಅಥಣಿ ಕೊನೆಯ ತಂಗುದಾಣವಾಯಿತು. ಅಲ್ಲಿಯ ನ್ಯೂ ಹಾಯಸ್ಕೂಲಿನ (ಈಗಿನ ಸಿ.ಎಸ್.ಕೆ. ಹಾಯಸ್ಕೂಲ) ಸಂಸ್ಥಾಪಕ ಮುಖ್ಯಾಧ್ಯಾಪಕರಾಗಿ

೧೯೫೪ರ ರಿಂದ ೧೯೭೬ರವರೆಗೆ ತಮ್ಮ ದಕ್ಷ ಆಡಳಿತದಿಂದ ಅದನ್ನೊಂದು ಆದರ್ಶ ಸಂಸ್ಥೆಯಾಗಿ ರೂಪಿಸಿ ಅಲ್ಲಿಯ ಜನರ ಆದರಕ್ಕೆ ಪಾತ್ರರಾದರು. ತುರಮರಿಯವರು ಎಲ್ಲಿಯೇ ಹೋದರೂ ಅಲ್ಲೊಂದು ಸಾಹಿತ್ಯ ಸಂಘ ಇಲ್ಲವೆ ಸಾಹಿತ್ಯಪ್ರಕಾಶನ ತಲೆ ಎತ್ತಲೇಬೇಕು. ಸ್ಥಳೀಯ 'ಸಾಹಿತ್ಯ ಸಾಂಸ್ಕೃತಿಕ ಸಂಘ' ಹೆಚ್ಚು ಕ್ರಿಯಾಶೀಲವೂ ಪ್ರಾತಿನಿಧಿಕವೂ ಆಗುವಂತೆ ನೋಡಿಕೊಂಡರು. ಆ ಮೂಲಕ ಅನೇಕ ಶ್ರೇಷ್ಠ ಸಾಹಿತಿಗಳ ಉಪನ್ಯಾಸಗಳನ್ನು ಕೇಳುವ ಸುಯೋಗ ಅಲ್ಲಿಯ ಜನಕ್ಕೊದಗುವಂತೆ ಮಾಡಿದರು.

ನಿವೃತ್ತಿಯ ನಂತರ ಅವರು ಅಥಣಿಯಲ್ಲಿಯೇ ಉಳಿದು 'ಸಿರಿನುಡಿ ಪ್ರಕಾಶನ'ವನ್ನು ಹುಟ್ಟುಹಾಕಿ ಕಥೆ, ಕಾದಂಬರಿ, ನಾಟಕ, ವ್ಯಕ್ತಿಚಿತ್ರ ಇತ್ಯಾದಿ ಇಪ್ಪತ್ತಕ್ಕೂ ಹೆಚ್ಚು ಕೃತಿಗಳನ್ನು ಪ್ರಕಟಿಸಿ ಪ್ರಸಿದ್ಧರೊಂದಿಗೆ ಹಲವಾರು ಹೊಸ ಲೇಖಕರನ್ನು ಸಾಹಿತ್ಯಲೋಕಕ್ಕೆ ಪರಿಚಯಿಸಿದರು. (ಶ್ರೀಮತಿ ಶಾಂತಾದೇವಿ ಕಣವಿಯವರ ಐದನೆಯ ಕಥಾಸಂಗ್ರಹ 'ಕಳಚಿ ಬಿದ್ದ ಪೈಜಣ' ಇದೇ ಪ್ರಕಾಶನದಿಂದ ೧೯೮೭ರಲ್ಲಿ ಪ್ರಕಟವಾಯಿತು) ತುರಮರಿಯವರು ಈಚೆಗೆ ಬರೆದ ಒಂದು ಪುಸ್ತಕವನ್ನು ಇಲ್ಲಿ ಉಲ್ಲೇಖಿಸಬೇಕು. ಕೆ.ಎಲ್.ಇ. ಸೊಸಾಯಿಟಿಯ ಸಂಸ್ಥಾಪಕರಲ್ಲಿ ಒಬ್ಬರಾದ ದಿವಂಗತ ಬಿ.ಬಿ. ಮಮದಾಪುರ ಅವರನ್ನು ಕುರಿತ ಈ ಚಿಕ್ಕ ಹೊತ್ತಿಗೆ ಗದುಗಿನ ತೋಂಟದಾರ್ಯ ಮಠದ ವೀರಶೈವ ಪುಣ್ಯ ಪುರುಷ ಸಾಹಿತ್ಯ ರತ್ನಮಾಲೆಯಲ್ಲಿ ತಕ್ಕಸ್ಥಾನ ಪಡೆದುಕೊಂಡಿದೆ.

ಹಿರಿಯ ಸಾಹಿತಿಗಳನ್ನು ಗೌರವಿಸುವುದರೊಂದಿಗೆ ಉದಯೋನ್ಮುಖ ಲೇಖಕರನ್ನು ಗುರುತಿಸಿ ಪ್ರೋತ್ಸಾಹಿಸುವುದೆಂದರೆ ತುರಮರಿಯವರಿಗೆ ಎಲ್ಲಿಲ್ಲದ ಉತ್ಸಾಹ. ಅಂಥವರು ಬೆಳೆದು ಮುಂದೆ ಬಂದುದನ್ನು ಕಂಡಾಗೆಲ್ಲ ಅವರು ಹಿಗ್ಗಿ ಹೀರೆಕಾಯಿಯಾಗುತ್ತಾರೆ. ಪಿ.ಕೆ. ಭಾಗೋಜಿ, ಎಂ. ಅಕಬರ ಅಲಿ, ಬಿ.ಎ. ಸನದಿ, ಬಾಳೇಶ ಲಕ್ಷೆಟ್ಟಿ, ಶ್ರೀನಿವಾಸ ತೋಫಖಾನೆ, ಬುದ್ದಣ್ಣ ಹಿಂಗಮಿರೆ, ಟಿ.ಎಫ್. ಮೂರಶಿಳ್ಳಿನ, ವಿರೂಪಾಕ್ಷ ಬಡಿಗೇರ ಮೊದಲಾದವರನ್ನು ಇಲ್ಲಿ ಹೆಸರಿಸಬಹುದು. ಕಳೆದ ವರ್ಷ ಬೆಳಗಾವಿಯಲ್ಲಿ ನಡೆದ ಸನದಿಯವರ ಸನ್ಮಾನ ಸಮಾರಂಭದಲ್ಲಿ ತುರಮರಿಯವರು ಸಣ್ಣ ಹುಡುಗರಂತೆ ಓಡಾಡಿದ್ದನ್ನು ನೋಡಿದ ಯಾರಿಗೂ ಅವರ ವ್ಯಕ್ತಿತ್ವದ ಹಿರಿಮೆಯ ಅರಿವಾಗದಿರದು. ಬಸವರಾಜ ಕಟ್ಟೀಮನಿಯವರು ಬೆಳಗಾವಿಯಲ್ಲಿ ನಡೆದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದಾಗ (೧೯೮೦) ತುರಮರಿಯವರು ತಮ್ಮ ಜೀವನವೇ ಸಾರ್ಥಕವಾದ ರೀತಿಯಲ್ಲಿ ಸಂತಸಪಟ್ಟದ್ದನ್ನು ನಾನು ಕಂಡಿದ್ದೇನೆ. ಉಳಿದವರ ಉತ್ಕರ್ಷದಲ್ಲಿ ತಮ್ಮ ಉತ್ಕರ್ಷವನ್ನು ಕಂಡು ಹರ್ಷಗೊಳ್ಳುವ ಜನ, ದ್ವೇಷ, ಅಸೂಯೆಗಳಿಂದ ತುಂಬಿ ಹೋಗಿರುವ ಇಂದಿನ ಸಾರ್ವಜನಿಕ ಹಾಗೂ ಸಾಹಿತ್ಯಿಕ ವಾತಾವರಣದಲ್ಲಿ ಬೆರಳೆಣಿಕೆಯಷ್ಟಾದರೂ ಸಿಗಬಹುದೆ! ಎಂಬ ಸಂದೇಹ ಉಂಟಾದರೂ ಆಶ್ಚರ್ಯವಿಲ್ಲ.

ಬೆಳಗಾವಿ ಜಿಲ್ಲಾ ಸಾಹಿತ್ಯ ಪ್ರತಿಷ್ಠಾನ ಇತ್ತೀಚೆಗೆ ತುರಮರಿಯವರಿಗೆ 'ಸಿರಿಗನ್ನಡ ಗೌರವ' ನೀಡಿ ಸನ್ಮಾನಿಸಿ ತನ್ನ ಗೌರವ ಹೆಚ್ಚಿಸಿಕೊಂಡಿದೆ. ಯಾಕೆಂದರೆ, ಸ್ವತಃ ತುರಮರಿಯವರು

ಇಂಥದನ್ನು ಎಂದೂ ಬಯಸಿದವರಲ್ಲ. ಅಲಕ್ಷ್ಯಕ್ಕೆ ಒಳಗಾದ ಕನ್ನಡ ನಾಡಿನ ಗಡಿಗುಂಟ ಇಂದು ಎಷ್ಟು ದೀಪಗಳನ್ನು ಹಚ್ಚಿದರೂ ಸಾಲದು. ಹೀಗೆ ಹೊತ್ತಿಸಿದ ದೀಪಗಳು ಒಳಗೂ ಹೊರಗೂ ಕೂಡಿಯೆ ಬೆಳಕು ಚೆಲ್ಲುತ್ತವೆಂಬುದನ್ನು ಮರೆಯಬಾರದು. ಆದರೆ ಕಾಲಕಾಲಕ್ಕೆ ಮಕ್ಕು ಕಡಿದು ಎಣ್ಣೆ ಎರೆಯುವ ಕೆಲಸ ನಿರಂತರವೂ ನಡೆಯುತ್ತಿರಬೇಕು. ತುರಮರಿಯವರು ಆ ಕಾಯಕವನ್ನು ಕೈಕೊಂಡು ಸಫಲರಾಗಿದ್ದರೂ ಇಂದಿನ ಪೀಳಿಗೆಯಲ್ಲಿ ಅಂಥ ಕಾಳಜಿಯುಳ್ಳವರ ಸಂಖ್ಯೆ ಕಡಿಮೆಯಾಗುತ್ತಿರುವುದು ಅವರ ಕಳವಳಕ್ಕೆ ಕಾರಣವಾಗಿದೆ. ಯಾವುದಕ್ಕೂ ಸರಕಾರದ ಮುಖವನ್ನೇ ನೋಡುತ್ತ ಕುಳಿತುಕೊಳ್ಳುವುದನ್ನು ಅವರು ಎಂದೂ ಇಷ್ಟಪಡಲಾರರು.

"ನರನರವನೆಲ್ಲ ಹುರಿಗೊಳಿಸಿ ಹೊಸೆದು ಹಚ್ಚೇವು ಕನ್ನಡದ ದೀಪ" ಎಂದು ಸ್ವಯಂಪ್ರೇರಣೆಯಿಂದ ಯುವ ಕಾರ್ಯಕರ್ತರು ಮುಂದೆ ಬಂದಾಗ ತುರಮರಿಯವರು ಇದ್ದುದರಲ್ಲಿಯೇ ಸಮಾಧಾನಪಟ್ಟಾರು.

ಅಂಥವರಿಗೆ ಬ.ಗಂ. ತುರಮರಿಯವರ ಕಾರ್ಯ ಸಾಧನೆ ಒಂದು ಆದರ್ಶದ ಮಾದರಿಯಾಗಿ ನಿಲ್ಲಬಲ್ಲದು.

('ಶ್ರೀ ಬ.ಗಂ.ತು:೮೧' ೧೯೯೮)
ಸಾಹಿತ್ಯ ಸಮಾಹಿತ : ೨೦೦೭

೨೯

## ಪ್ರೊ. ಭಾಗೋಜಿಯವರ ಸ್ನೇಹ ಭಾಗ್ಯ

ಕೆಲವು ವ್ಯಕ್ತಿಗಳ ದೆಸೆಯಿಂದ ನನಗೆ ಕೆಲವು ಊರುಗಳು ಪ್ರಿಯವಾಗುವುದುಂಟು. ಆ ವ್ಯಕ್ತಿಯ ಸಾರ್ವಜನಿಕ ಕೆಲಸ ಕಾರ್ಯಗಳಿಂದ, ಅಲ್ಲಿಯ ಸಾಂಸ್ಕೃತಿಕ ವಾತಾವರಣ ನಿರ್ಮಾಣದಿಂದ, ನೈತಿಕ ನಡವಳಿಕೆಯಿಂದ, ಹಿತಕಾರಿಯಾದ ಸಾಂಘಿಕ ಚಟುವಟಿಕೆಗಳಿಂದ ಅವು ಪರಸ್ಪರ ಆಂತರಂಗಿಕವಾಗಿ ಬೆಸೆದುಕೊಂಡಿರುತ್ತವೆ. ನಾನು ಬೆಳಗಾವಿಯನ್ನು ಪ್ರೀತಿಸಲು ಕಾರಣರಾದ ಇಂಥ ಕೆಲವೇ ವ್ಯಕ್ತಿಗಳಲ್ಲಿ ಆತ್ಮೀಯ ಸ್ನೇಹಿತರಾದ ಪ್ರೊ. ಪ್ರಹ್ಲಾದಕುಮಾರ ಭಾಗೋಜಿಯವರೂ ಒಬ್ಬರು. ನಾನು ಬೆಳಗಾವಿಗೆ ಹೋದಾಗ ಬಂದಾಗ ಯಾವುದಾದರೂ ಕಾರ್ಯಕ್ರಮದ ಮೂಲಕ ನಾವು ಪರಸ್ಪರ ಕೂಡುವದುಂಟು. ಹಲವಾರು ಸಂಗತಿಗಳ ಬಗ್ಗೆ ಮಾತಾಡಿಕೊಳ್ಳುವುದುಂಟು. ಇಳಿ ವಯಸ್ಸಿನಲ್ಲಿ ಅವರು ಕೆಲವು ಸಂಕಷ್ಟಗಳಿಗೀಡಾಗಿರುವುದನ್ನು ನಾನು ಕಂಡಿದ್ದೇನೆ, ಕೇಳಿದ್ದೇನೆ. ಆದರೂ ಅವರು ನನ್ನೊಡನೆ ಮಾತನಾಡುವಾಗ ಸಮಾಧಾನಿಯಾಗಿಯೇ ಕಾಣಿಸಿಕೊಳ್ಳುತ್ತಾರೆ. ಆ ಸಂದರ್ಭದಲ್ಲಿ ನನಗೆ ಬೇಂದ್ರೆಯವರ 'ಶಿವಕರುಣೆ' ಎಂಬ ಪದ್ಯ ನೆನಪಾಗುವುದುಂಟು. ಅದನ್ನವರು ಕೌಟುಂಬಿಕ ದುರಂತದ ಅನಂತರದಲ್ಲಿ ಬರೆದದ್ದು. "ರುದ್ರವಿಲಾಸದ ಪರಿಯೇ ಬೇರೆ, ಶಿವಕರುಣೆಯು ಹಿರಿದು" ಎಂಬುದು ಅದರ ಮುಖ್ಯ ಆಶಯ. ಶ್ರೀ ಭಾಗೋಜಿಯವರು ಈ ಕಾರುಣ್ಯದ ಘನತೆಯನ್ನು ಅರಿತವರಾಗಿದ್ದಾರೆ.

ಕರ್ನಾಟಕ ವಿಶ್ವವಿದ್ಯಾಲಯದ ಬಿ.ಎ ಪರೀಕ್ಷೆಗೆ (೧೯೫೦) ನಮ್ಮದೇ ಮೊದಲ ತಂಡವಾಗಿತ್ತು. ಆ ಹೊತ್ತಿಗೆ ಭಾಗೋಜಿಯವರು ಲಿಂಗರಾಜ ಕಾಲೇಜಿನ ಪ್ರತಿಭಾವಂತ ವಿದ್ಯಾರ್ಥಿಗಳಲ್ಲಿ ಒಬ್ಬರಾಗಿ ಮುಂಬಯಿ ವಿಶ್ವವಿದ್ಯಾಲಯದ ಬಿ.ಎ ಹಾಗೂ ಎಂ.ಎ ಪದವಿಗಳನ್ನು ಉಚ್ಚವರ್ಗದಲ್ಲಿ ಪಡೆದು ಹೆಸರಾಗಿದ್ದರು. ನನಗೆ ನೆನಪಿರುವ ಮಟ್ಟಿಗೆ ನಾನವರನ್ನು ಮೊದಲ ಸಲ ಕಂಡದ್ದು ಧಾರವಾಡ ಬಾನುಲಿ ಕೇಂದ್ರದ (ಆಗ 'ಆಕಾಶವಾಣಿ' ಎಂಬ ಹೆಸರು ಪ್ರಚಲಿತವಾಗಿರಲಿಲ್ಲ) ನಾಟಕ ಸಪ್ತಾಹದ ಸಂದರ್ಭದಲ್ಲಿ. ಪ್ರೊ. ವ್ಹಿ.ಜಿ. ಕುಲಕರ್ಣಿಯವರ ಜೊತೆಗೆ 'ಗದಾಯುದ್ಧ' ನಾಟಕದಲ್ಲಿ ಭಾಗೋಜಿಯವರು ಪಾತ್ರವಹಿಸಿದ್ದರೆ ಪ್ರೊ. ಸ.ಸ. ಮಾಳವಾಡರು ಬಾನುಲಿಗೆ ಅಳವಡಿಸಿದ 'ಗಿರಿಜಾಕಲ್ಯಾಣ' (ಶಾಂತಕವಿಗಳ 'ಪಾರ್ವತೀ ಪರಿಣಯ?') ನಾಟಕದಲ್ಲಿ ನಾನು 'ನಿವೇದಕ'ನಾಗಿ ಭಾವಹಿಸಿದ್ದೆ. ಡಾ. ಎಚ್.ಕೆ. ರಂಗನಾಥ

ಆಗ ಬಹಳ ಕಾಲ ನಾಟಕ ವಿಭಾಗದ ಕಾರ್ಯನಿರ್ವಾಹಕರಾಗಿ ನಮಗೆಲ್ಲ ಮೆಚ್ಚಿನವರಾಗಿದ್ದರು. ಭಾಗೋಜಿಯವರ ಅಂದಿನ ಪರಿಚಯ ಬರಬರುತ್ತ ಸ್ನೇಹವಾಗಿ ಪರಿಣಮಿಸಲು ಬಹಳ ದಿನ ಹಿಡಿಯಲಿಲ್ಲ. ಯಾಕೆಂದರೆ ನಮ್ಮಿಬ್ಬರ ಹವ್ಯಾಸಗಳು ಹಾಗೂ ಮನೋಧರ್ಮ ಒಂದೇ ಬಗೆಯಾಗಿದ್ದವು. ವೇಷಭೂಷಣದಲ್ಲಿ ಮಾತ್ರ ನಮ್ಮ ಅಭಿರುಚಿಗೆ ನಾವು ಹೊಂದಿಕೊಂಡಿದ್ದೇವೆ.

ಅನೇಕ ಸಭೆ, ಸಮಾರಂಭಗಳಲ್ಲಿ ವಿಚಾರ ಸಂಕಿರಣ ಗೋಷ್ಠಿ ಇತ್ಯಾದಿಗಳಲ್ಲಿ ನಾವಿಬ್ಬರೂ ಆಕಸ್ಮಿಕವಾಗಿ ಕೂಡಿಯೇ ಭಾಗವಹಿಸಿದ್ದುಂಟು. ನಮ್ಮ ವಿಶ್ವವಿದ್ಯಾಲಯದ ಪ್ರಸಾರಾಂಗದ ಅನೇಕ ಉಪನ್ಯಾಸ ಶಿಬಿರಗಳಿಗೆ ಅವರನ್ನು ಆಮಂತ್ರಿಸಿದಾಗ ಅವರೆಂದೂ ನಿರಾಕರಿಸಿದ್ದಿಲ್ಲ. ಅಂಥ ಪ್ರಸಂಗಗಳನ್ನು ನಾವು ಕಾವ್ಯ-ಶಾಸ್ತ್ರ-ವಿನೋದಕ್ಕಾಗಿ ಬಳಸಿಕೊಂಡದ್ದುಂಟು. ಉತ್ತಮ ಅಧ್ಯಾಪಕರಾಗಿದ್ದ ಅವರು ತಮಗೆ ಕೊಟ್ಟ ವಿಷಯವನ್ನು ಆಳವಾಗಿ ಅಭ್ಯಾಸಮಾಡಿಕೊಂಡು ಕೇಳುಗರಿಗೆ ಮನದಟ್ಟಾಗುವಂತೆ ಸರಳವಾಗಿ, ಗಾಂಭೀರ್ಯಕ್ಕೆ ಚ್ಯುತಿ ಬರದಂತೆ ಪ್ರತಿಪಾದಿಸುವ ಕಲೆ ಅವರ ವಾಕ್ಪಟುತ್ವಕ್ಕೆ ಮೆರುಗು ನೀಡುವುದುಂಟು. ಹದಗೆಡದಂತೆ ಹಾಸ್ಯವನ್ನು ಅವರು ಹಿತಮಿತವಾಗಿ ಬಳಸಬಲ್ಲರು. ಹಳಗನ್ನಡ, ಹೊಸಗನ್ನಡ - ಯಾವ ಸಾಹಿತ್ಯವನ್ನಾದರೂ ಸಹೃದಯ ವಿಮರ್ಶೆಯಿಂದ ನೋಡುವ ಅಪೇಕ್ಷೆಯನ್ನು ಅವರು ಬಿಟ್ಟುಕೊಟ್ಟವರಲ್ಲ. ಓದು ಬರವಣಿಗೆಯ ವೈರಿ ಎಂಬ ಮಾತೊಂದುಂಟು. ಹಾಗೆಯೇ ಭಾಷಣಕ್ಕೂ ಅದನ್ನು ಅನ್ವಯಿಸಬಹುದು. ನಾವು ಹೇಳಬೇಕೆಂದ ವಿಚಾರಗಳಿಗೆ ಭಾಷಣದಲ್ಲಿ ಒಂದುಕಡೆ ಅಭಿವ್ಯಕ್ತಿ ದೊರೆತೊಡನೆಯೇ ಅದನ್ನು ಬರವಣಿಗೆಗೆ ಇಳಿಸುವ ಉತ್ಸಾಹ ಅನೇಕ ಸಲ ಉಳಿಯುವುದಿಲ್ಲ. ವಾಗ್ಮಿಗಳೆನಿಸಿದ ಭಾಗೋಜಿಯವರಿಗೂ ಇದರ ಅನುಭವವಾಗಿರಬಹುದು. ಅದಕ್ಕಾಗಿಯೇ ಇರಬಹುದು ಅವರು ಬರೆದದ್ದು ಬಹಳ ಕಡಿಮೆ. ಆದರೆ ಹಾಗೆ ಬರೆದಷ್ಟೂ ಬೆಲೆಯುಳ್ಳದ್ದೇ. 'ರಸಗವಳ' ಪುಸ್ತಕದ ಪ್ರಬಂಧಗಳಲ್ಲಿ ನಾವಿದನ್ನು ಕಾಣಬಹುದು. 'ನಮ್ಮ ಬೆಳಗಾವಿ'ಯಂತೂ ಅವರ ಮಹತ್ವದ ಕೊಡುಗೆಯಾಗಿ ಉಳಿಯಬಲ್ಲದು. ಅನೇಕ ಕ್ಷೇತ್ರಗಳಲ್ಲಿ, ಅನೇಕ ರೂಪಗಳಲ್ಲಿ ಬೆಳಗಾವಿ ಬೆಳೆದು ಬಂದ ಬಗೆಯನ್ನು, ಅದರ ಎಲ್ಲ ಘರ್ಷಣೆ, ಸುಖ-ಸಂತೋಷ, ಸರಸ-ವಿರಸಗಳೊಂದಿಗೆ ಭಾಗೋಜಿ ಅದನ್ನು ತಮ್ಮ ಪಾಲಿನ ಭಾಗ್ಯನಗರವನ್ನಾಗಿ ಕಟೆದು ನಿಲ್ಲಿಸಿದ್ದಾರೆ.

ಆರ್.ಪಿ.ಡಿ. ಕಾಲೇಜಿನಲ್ಲಿ ಕಾಲು ಶತಮಾನ ಕಾಲ ಕನ್ನಡ ಅಧ್ಯಾಪಕರಾಗಿ ನಗರದ ಭಾಷಾವೈಷಮ್ಯದ ಗಳಿಗೆಗಳಲ್ಲಿಯೂ ಮನಸ್ಸಿನ ಸಮತೂಕವನ್ನು ಕಳೆದುಕೊಳ್ಳದೆ, ಕೊನೆಗೆ ಪ್ರಾಚಾರ್ಯರಾಗಿ ನಿವೃತ್ತಿ ಪಡೆದದ್ದು ಆ ಸಂಸ್ಥೆಯ ಆಡಳಿತ ವರ್ಗ ಅವರ ಬಗ್ಗೆ ತಳೆದ ಗೌರವ ಭಾವನೆಯ ದ್ಯೋತಕವಾಗಿದೆ. ಕನ್ನಡ ಕಾವಲು ಸಮಿತಿಯ ಸದಸ್ಯರಾಗಿಯೂ ತಮ್ಮ ಅರ್ಹತೆಯನ್ನು ಅವರು ಸಾಬೀತುಗೊಳಿಸಿದ್ದಾರೆ. ಸಜ್ಜನಿಕೆಯ ಮೂರ್ತಿಯಾಗಿದ್ದರೂ ವಿಷಯಾನುಸಾರ ನಿಷ್ಠುರವಾಗಿ ಅವರು ವರ್ತಿಸಬಲ್ಲರು. ಕರ್ನಾಟಕ ವಿಶ್ವವಿದ್ಯಾಲಯದ ಸೆನೆಟ್ ಸದಸ್ಯರಾಗಿದ್ದಾಗ, ಕನ್ನಡ ಪಠ್ಯಕ್ರಮ ಹಾಗೂ ಪಠ್ಯಪುಸ್ತಕಗಳಿಗೆ ಸಂಬಂಧಪಟ್ಟಂತೆ

ಗುಣಮಟ್ಟದ ವಿಚಾರದಲ್ಲಿ ಅವರು ನಿಷ್ಠುರವಾಗಿ ನಡೆದುಕೊಂಡಿದ್ದನ್ನು ನಾನು ಬಲ್ಲೆ. ದೊಡ್ಡವರನ್ನು ಎದುರುಹಾಕಿಕೊಳ್ಳಬೇಕಾಗಿ ಬಂದ ಸಂದರ್ಭಗಳಲ್ಲಿಯೂ ಅವರು ತಮ್ಮ ನಿಲುವಿಗೆ ಅಂಟಿಕೊಂಡದ್ದುಂಟು.

ಭಾಗೋಜಿಯವರಂಥ ಅನುಭವಸ್ಥರು ಯಾವುದೇ ಸಂಘ ಸಂಸ್ಥೆಗಳಿಗೂ ಭೂಷಣ ಪ್ರಾಯರಾಗಬಲ್ಲರೆಂಬುದನ್ನು ಬೆಳಗಾವಿಯ ಕನ್ನಡಿಗರು ಬಲ್ಲರು. ಎಸ್.ಡಿ. ಇಂಚಲ ಸ್ಮಾರಕ ಸಂಸ್ಥೆಯ ಸಂಸ್ಥಾಪಕ ಸದಸ್ಯರಾಗಿ, ಸಮಿತಿಯ ಅಧ್ಯಕ್ಷರಾಗಿ ಒಂದು ದಶಕದವರೆಗೂ ಉಪಯುಕ್ತ ಸೇವೆಸಲ್ಲಿಸಿದರು. ಇವಕ್ಕೆಲ್ಲ ಕಿರೀಟಪ್ರಾಯವಾಗಿ ಸಾಹಿತ್ಯಾಸಕ್ತ ಸ್ನೇಹಿತರ ನೆರವಿನೊಂದಿಗೆ ಸ್ಥಾಪಿಸಿದ ಬೆಳಗಾವಿ ಜಿಲ್ಲಾ ಸಾಹಿತ್ಯ ಪ್ರತಿಷ್ಠಾನ, ಜಿಲ್ಲೆಯ ಲೇಖಕರ ಉತ್ತಮ ಗ್ರಂಥಗಳಿಗೆ ಬಹುಮಾನ ನೀಡುವ ಯೋಜನೆಯನ್ನು ಯಶಸ್ವಿಯಾಗಿ ನಡೆಸುತ್ತ ಬಂದಿರುವುದು ಅತ್ಯಂತ ಸ್ವಾಗತಾರ್ಹ. 'ಸಿರಿಗನ್ನಡ ಪ್ರಶಸ್ತಿ' ಇತ್ಯಾದಿ ಇನ್ನೂ ಕೆಲವು ಯೋಜನೆಗಳೊಂದಿಗೆ ಅದರ ಕಾರ್ಯವ್ಯಾಪ್ತಿ ವಿಸ್ತಾರಗೊಳ್ಳುತ್ತಿರುವುದು ನಿಜಕ್ಕೂ ಸಂತೋಷದಾಯಕವಾಗಿದೆ.

'ಬೆಳಗಾವಿಯ ಭಾಗ್ಯ'ವೆನಿಸಿದ್ದ ಸನ್ಮಿತ್ರ ಭಾಗೋಜಿಯವರಿಗೆ ಭಗವಂತನು ಆಯುರಾರೋಗ್ಯ ಭಾಗ್ಯವನ್ನು ಕರುಣಿಸಲಿ, ಇಂದಿನ ಯುವಪೀಳಿಗೆ ಅವರ ಸೂಕ್ತ ಮಾರ್ಗದರ್ಶನದಲ್ಲಿ ಮುಂದುವರಿಯಲಿ ಎಂದು ಹೃದಯತುಂಬಿ ಹಾರೈಸುತ್ತೇನೆ.

('ಅಣ್ಣಯ್ಯ' ೧೯೯೯)

ಸಾಹಿತ್ಯ ಸಮಾಹಿತ : ೨೦೦೭

## ೩೦

# ದಣಿವರಿಯದ ಅಕ್ಷರ ಸಂಗಾತಿ

.................................

'ಹೀಗುಂಟಯ್ಯ ನನ್ನ ಅಂಬಾರ ಕೊಡಲು
ನೂರು ಕತೆಗಳ ಒಡಲು
ನೂರು ವ್ಯಥೆಗಳ ಕಡಲು'

'ಅಂಬಾರಕೊಡಲು'; ಬಾಯ್ತುಂಬ ಬರುವ ಹೆಸರು; ಕಣ್ತುಂಬಿ ನಿಲ್ಲುವ ಪ್ರಕೃತಿ; ಮನಸ್ಸು ಮುದಗೊಳಿಸುವ ಸಂಸ್ಕೃತಿ. ಹೊರಗೆ ಹತ್ತು ಸಲ ಕಂಡಿರಬಹುದು, ಗೋಷ್ಠಿಗಳಲ್ಲಿ ಸಹಭಾಗಿಯಾಗಿರಬಹುದು. ಆದರೆ ವಿಷ್ಣುನಾಯ್ಕ ಅವರನ್ನು ಆ ಪರಿಸರದ 'ಪರಿಮಳ'ದಲ್ಲಿ ನೋಡಿದಾಗಲೇ, ಅದರ ಅಂಗಳದಲ್ಲಿ ಅವರೇ ನಿರ್ಮಿಸಿಕೊಂಡ 'ಸದಾನಂದ ವೇದಿಕೆ'ಯ ಕಾರ್ಯಕ್ರಮಗಳನ್ನು ಪ್ರತ್ಯಕ್ಷ ಕಂಡಾಗಲೇ ಅವರ ಚೇತೋಹಾರಿ ವ್ಯಕ್ತಿತ್ವದ ವಿವಿಧ ಮುಖಗಳು ನಮಗೆ ಗೋಚರಿಸುತ್ತವೆ. ಯಾಕೆಂದರೆ ಆ ಗ್ರಾಮ ಆ ಜಿಲ್ಲೆಯ ಜೀವನಾಡಿಯಾಗಿ ಹಲವು ಹೋರಾಟಗಳ ಕತೆಗಳಿಗೆ ಕಿವಿಗೊಟ್ಟಿದೆ. ತಾನೇ ಕತೆಯಾಗಿದೆ. ಪಡುಗಡಲಿನ ತೆರೆಗಳ ಮೊರೆತದಂತೆ ಅಲ್ಲಿಯ ಸಾಮಾನ್ಯ ಜನಜೀವನದ ನೂರು ವ್ಯಥೆಗಳನ್ನು ದೂರದಿಂದ, ಸನಿಹದಿಂದ ಕಂಡು ಕರುಳು ಮಿಡಿದಿದೆ. ಆದ್ದರಿಂದಲೇ 'ಹೀಗುಂಟಯ್ಯಾ' ಎಂದು ಹೇಳುವಾಗ ಕವಿ ವಿಷ್ಣುನಾಯ್ಕ ನಮಗೆ ಆಪ್ತರಾಗುತ್ತಾರೆ.

ಹುಟ್ಟಿದೂರನ್ನೇ ತನ್ನೆಲ್ಲ ಚಟುವಟಿಕೆಗಳ ಮಧ್ಯಬಿಂದುವನ್ನಾಗಿ ಮಾಡಿಕೊಂಡು ಎಷ್ಟು ದೂರ ಬೇಕೊ ಅಷ್ಟು ದೂರ ಅದರ ವರ್ತುಳವನ್ನು ಹಿಗ್ಗಿಸಬಲ್ಲ ಶಕ್ತಿ ಸಾಮರ್ಥ್ಯ ಈ ವ್ಯಕ್ತಿಗೆ ಎಲ್ಲಿಂದ ಬಂತು ಎಂದು ಅಚ್ಚರಿಯುಂಟಾಗುತ್ತದೆ. (ಹಿಂದಿನ ಹಲಸಂಗಿ, ಚಡಚಣ, ಇಂದಿನ ಕಾಂತಾವರ ಈ ಸಂದರ್ಭದಲ್ಲಿ ನೆನಪಾಗಬಹುದು) ಈ ವರ್ತುಲದ ಪರಿಧಿಯಲ್ಲಿ ಅಂಕೋಲಾ ಕರ್ನಾಟಕ ಸಂಘ, ದಿನಕರ ದೇಸಾಯಿ ಸ್ಮಾರಕ ಪ್ರತಿಷ್ಠಾನ, ಮಾಧ್ಯಮಿಕ ಶಾಲಾ ನೌಕರರ ಸಂಘ, ಉ.ಕ. ಜಿಲ್ಲಾ ಕನ್ನಡ ಜಾಗೃತ ಸಮಿತಿ, ಸಾರ್ವಜನಿಕ ಗ್ರಂಥಾಲಯ ಪ್ರಾಧಿಕಾರ, ಖಾಸಗಿ ಶಿಕ್ಷಣ ಸಂಸ್ಥೆಗಳ ಹೋರಾಟ ಸಮನ್ವಯ ಸಮಿತಿ, ದುರ್ವ್ಯಸನ ವಿರೋಧಿ ಜಿಲ್ಲಾ ಸಮಿತಿ, ರಂಗನಾಟಕ, ಬೀದಿ ನಾಟಕ - ಹೀಗೆ ಎಳೆದಷ್ಟೂ ಅನೇಕ ತ್ರಿಜ್ಯಗಳನ್ನು ಕಾಣಬಹುದು. ಇವೆಲ್ಲ ವಿಷ್ಣುನಾಯ್ಕ ಅವರ ಸಮಷ್ಟಿ ಜೀವನದ ಬಗೆಗಿನ ಕಾಳಜಿಗಳ ದ್ಯೋತಕ.

ಹಾಗೆ ಅಚ್ಚರಿ ಪಡುವ ಸಂದರ್ಭದಲ್ಲಿ ಸ್ವಲ್ಪ ಹಿಂದಿರುಗಿ ನೋಡಿದರೆ, ಕೆನ್ನೆಗೈಯಾಗಿ ಕುಳಿತು ದೂರದೃಷ್ಟಿ ಹರಿಸಿದ ಕವಿ-ಕರ್ಮಯೋಗಿ ದಿನಕರ ದೇಸಾಯಿಯವರ ಭಾವಚಿತ್ರ ಹೊಳೆಯುತ್ತದೆ. ಸಾಮಾನ್ಯ ಜನತೆಯ ಅಸಾಮಾನ್ಯ ಹೋರಾಟದ ಫಲವಾಗಿ ಅವರು ಕಟ್ಟಿ ಬೆಳೆಸಿದ ಕೆನರಾ ವೆಲ್‌ಫೇರ್ ಟ್ರಸ್ಟಿನ ಶಿಕ್ಷಣ ಸಂಸ್ಥೆಗಳಲ್ಲಿ ಅಧ್ಯಾಪಕನಾಗಿ, ಉಪನ್ಯಾಸಕನಾಗಿ, ಪ್ರಾಚಾರ್ಯನಾಗಿ, ಸಂಸ್ಥೆಯ ಧ್ಯೇಯೋದ್ದೇಶಗಳಲ್ಲಿ ಸಮರಸವಾಗಿ ನಾಲ್ಕು ದಶಕಗಳ ನಿರಂತರ ದುಡಿಮೆಯ ಅನುಭವ ಪಡೆದ, ರೈತ ಹೋರಾಟದ ಕುಟುಂಬದಿಂದಲೇ ಬಂದ ವಿಷ್ಣುನಾಯ್ಕ ಅವರ 'ಜನಸೇವಕ' ಸಂತತಿ ಸಾಮರ್ಥ್ಯದ ಸುಳುಹು ದೊರೆಯಬಹುದಾಗಿದೆ.

ಕಾವ್ಯವನ್ನೇ ತಮ್ಮ ಪ್ರಧಾನ ಅಭಿವ್ಯಕ್ತಿ ಮಾಧ್ಯಮವನ್ನಾಗಿ ಮಾಡಿಕೊಂಡ ವಿಷ್ಣುನಾಯ್ಕ ಅವರ ಕಾವ್ಯಕೃಷಿ ಸಾಕಷ್ಟು ಹುಲುಸಾಗಿಯೇ ಬಂದಿದೆ:

ಗುಡುಗು ಸಿಡಿಲ ನಡುವೆ
ಹೊಳೆವ
ಮಳೆಯ ಬಿಲ್ಲಿನಂತೆ
ಮುಳ್ಳ ಕಂಕುಳಿಂದ ಒಗೆವ
ಚೆಂಗುಲಾಬಿಯಂತೆ
ನೂರಸಹ್ಯ ನೂರುಸಹ್ಯ
ಮೀರಿ ಬಂತು ನನ್ನ ಕಾವ್ಯ

ಎಂದು ಕವಿ ತನ್ನ ಕಾವ್ಯದ ಬಗೆ ಎಂತಹದೆಂಬುದನ್ನು ಸೂಚಿಸಿದ್ದಾನೆ. 'ವೈಯಕ್ತಿಕವಾಗಿ ಯಾವುದೋ ಒಂದು ನೆಲೆಯಲ್ಲಿ ಸೂಕ್ಷ್ಮ ಮನಸ್ಸು ಕಂಡರಿಸಿದ್ದು ಸಮಷ್ಟಿಯ ಅನುಭವವೂ ಆಗಿ ನಮ್ಮ ಮಧ್ಯದ ವಾಸ್ತವಕ್ಕೆ ಕನ್ನಡಿಯಾಗಬೇಕು' ಎಂಬ ಅವರ ನಿಲುವಿಗೆ ತಕ್ಕಂತೆ ಹಲವು ಬಗೆಯ ವಿನ್ಯಾಸಗಳನ್ನು ಅದು ಪಡೆದುಕೊಂಡಿದೆ. ವಸ್ತುಗಳ ಆಯ್ಕೆಯಲ್ಲಿ ಪದ್ಯದ ಗತ್ತಿನಲ್ಲಿ ದಿನಕರ ದೇಸಾಯಿಯವರ ಕಾವ್ಯದಿಂದ ಪ್ರೇರಣೆ ಪಡೆದಿರುವಂತೆ ತೋರಿದರೂ ತನ್ನದೇ ಆದ ಅನುಭವದ ಹೂರಣದಿಂದ ಅದು ಸತ್ವಶಾಲಿಯಾಗಿರುವುದನ್ನು ಕವಿತೆಗಳ ಆಯ್ಕೆ ಮಾಡಿ ನೋಡಬಹುದು.

ಕವಿಯ ಸಾಮಾಜಿಕ ಹೋರಾಟದ ಪ್ರವೃತ್ತಿ ಅವರ ಮಹಾತ್ವಾಕಾಂಕ್ಷೆಯ ಮೊದಲ ಹಂತವಾಗಿ ಪುಸ್ತಕ ಪ್ರಕಾಶನ ಕ್ಷೇತ್ರಕ್ಕೆ ಪ್ರೇರೇಪಿಸಿದ್ದರೆ ಎರಡನೆಯ ಹಂತ ಪತ್ರಿಕಾ ವ್ಯವಸಾಯಕ್ಕೆ ಧುಮುಕುವಂತೆ ಮಾಡಿದೆ. ರಾಘವೇಂದ್ರ ಪ್ರಕಾಶನದ ಮೂಲಕ ಕಾವ್ಯ, ಕಥೆ, ಕಾದಂಬರಿ, ವಿಮರ್ಶೆ, ಪ್ರಬಂಧ, ನಾಟಕ ಹೀಗೆ ಎಲ್ಲ ಸಾಹಿತ್ಯ ಪ್ರಕಾರಗಳನ್ನೂ ಒಳಗೊಂಡಂತೆ ಮೂರು ದಶಕಗಳಲ್ಲಿ ೧೫೦ ಕೃತಿಗಳನ್ನು ಹೊರತಂದಿರುವುದು ಸಣ್ಣ ಸಾಹಸವೇನೂ ಅಲ್ಲ. ಅನೇಕ ಉದಯೋನ್ಮುಖ ಪ್ರತಿಭೆಗಳನ್ನು ಬೆಳಕಿಗೆ ತಂದಿರುವುದಲ್ಲದೆ ಧೀಮಂತ ಹಿರಿಯ ಸಾಹಿತಿ ಗೌರೀಶ ಕಾಯ್ಕಿಣಿಯವರ ಸಮಗ್ರ ಸಾಹಿತ್ಯದ ಹತ್ತು ಸಂಪುಟಗಳನ್ನು ತಾನೇ ಸಂಪಾದಿಸಿ ಪ್ರಕಟಿಸಿದ ಸಾಹಸ ಪವಾಡ

ಸದೃಶವಾದದ್ದೆಂದು ಹೇಳಿದರೆ ತಪ್ಪಾಗದು. ಕಾರಂತರ ಲೇಖನಗಳ ಸಮಗ್ರ ಸಂಪುಟಗಳನ್ನು ಪ್ರಕಟಿಸಿದ್ದು ಮಂಗಳೂರು ವಿಶ್ವವಿದ್ಯಾಲಯದಂಥ ಮಹಾಸಂಸ್ಥೆ ಎಂಬುದನ್ನು ಗಮನಿಸಿದಾಗ ರಾಘವೇಂದ್ರ ಪ್ರಕಾಶನದಂಥ ಖಾಸಗಿ ಸಂಸ್ಥೆಯ ಕಷ್ಟ-ಸುಖಗಳನ್ನು ಊಹಿಸಿಯೇ ತಿಳಿಯಬೇಕು. 'ಮುಗಿಯದ ಹಾಡು' (ಕಣವಿ ಕಾವ್ಯಾಭಿನಂದನ) ಗ್ರಂಥವನ್ನು ಸ್ವಯಂ ಪ್ರೇರಣೆಯಿಂದ ಪ್ರಕಟಿಸಿ (೧೯೯೮) ತಮ್ಮ ಸಂತೋಷವನ್ನು ನನ್ನೊಡನೆ ಹಂಚಿಕೊಂಡ ಈ ಕವಿಮಿತ್ರರ ಪ್ರೀತಿ-ವಿಶ್ವಾಸಗಳನ್ನು ನಾನು ಮರೆಯುವಂತಿಲ್ಲ.

ಕೇವಲ ಪುಸ್ತಕ ಪ್ರಕಾಶನವೊಂದೇ ಇದರ ಗುರಿಯಾಗಿರದೆ ಅದನ್ನು ಜನಪರ ಕಾಳಜಿಯ ಸಾಂಸ್ಕೃತಿಕ ವೇದಿಕೆಯಾಗಿ ರೂಪಿಸುವುದು ಒಂದು ವಿಶೇಷ. ಸಾಹಿತ್ಯ ಗೋಷ್ಠಿ, ಕಾವ್ಯ ಕಮ್ಮಟ, ಸಾಹಿತ್ಯ ಸ್ಪರ್ಧೆಗಳಂತಹ ಚಟುವಟಿಕೆಗಳ ಮೂಲಕ ಹೊಸಬರಿಗೆ ಉತ್ತೇಜನ ನೀಡುತ್ತ ಬಂದಿದೆ. ಪ್ರಕಾಶನದ ಬೆಳ್ಳಿಹಬ್ಬದ ಸಂಧರ್ಭದಲ್ಲಿ ತ್ರೈವಾರ್ಷಿಕ ಯೋಜನೆಯೊಂದನ್ನು ರೂಪಿಸಿ ಕಾರ್ಯಪ್ರವೃತ್ತರಾದದ್ದಲ್ಲದೆ ಶುದ್ಧ ಸಾಹಿತ್ಯಿಕ ವಾತಾವರಣದಲ್ಲಿ (ಅರ್ಥಾತ್ ರಾಜಕಾರಣಿಗಳ ಸಂಪರ್ಕವಿಟ್ಟುಕೊಳ್ಳದೇ) ರಾಜ್ಯಮಟ್ಟದ ಮೂರು ದಿನಗಳ ಕನ್ನಡ ಸಾಹಿತ್ಯ ಸಮ್ಮೇಳನವನ್ನು (೧೯೯೭) ಯಶಸ್ವಿಯಾಗಿ ನಡೆಸಿದ್ದನ್ನು ಪ್ರತ್ಯಕ್ಷವಾಗಿ ಕಂಡು ಅಚ್ಚರಿಪಟ್ಟಿದ್ದೇನೆ. ವಿಷ್ಣುನಾಯ್ಕ ಸಂಘಟಿಸುವ ಸಭೆ ಸಮಾರಂಭ ಯಾವುದೇ ಆಗಿದ್ದರೂ ಹತ್ತೂಕಡೆಗೆ ದೃಷ್ಟಿಯಿಟ್ಟು ಯಾವುದಕ್ಕೂ ಚ್ಯುತಿ ಒದಗದಂತೆ ಅಚ್ಚುಕಟ್ಟಾಗಿ ನಿರ್ವಹಿಸುವ ಕೌಶಲ ಅವರಿಗೇ ವಿಶಿಷ್ಟವಾದದ್ದು. ಎರಡು ವರ್ಷಗಳ ಹಿಂದೆ ವಿಷ್ಣುನಾಯ್ಕ ವಾರಪತ್ರಿಕೆ ಹೊರಡಿಸುವ ತಮ್ಮ ವಿಚಾರವನ್ನು ತಿಳಿಸಿದಾಗ ನಾನು ನಿಜಕ್ಕೂ ಅಪ್ರತಿಭನಾದೆ. ಯಾವ ರೀತಿಯ ಪ್ರೋತ್ಸಾಹದ ಮಾತುಗಳನ್ನೂ ನಾನು ಆಡಲಿಲ್ಲ. ಇಷ್ಟೇ ಅಲ್ಲ. ಈ ವಿಷಯದಲ್ಲಿ ದುಡುಕದಂತೆ ಸೌಮ್ಯವಾಗಿ ಸೂಚಿಸಿದೆ. ಗೆಳೆಯ ಡಾ. ಜಿ.ಎಂ. ಹೆಗಡೆಯವರೂ ಈ ವಿಷಯದಲ್ಲಿ ನನ್ನನ್ನೇ ಅನುಸರಿಸಿದರು. ಕೆಲಸಗಳ ಭಾರವನ್ನು ಹೊರಲಿಕ್ಕೂ ಒಂದು ಮಿತಿಯಿದೆಯೆಂಬುದು ನಮ್ಮ ಅಭಿಪ್ರಾಯವಾಗಿದ್ದಿತು.

ಆದರೆ ಮುಂದೆ ಕೆಲ ದಿನಗಳಲ್ಲಿಯೇ 'ಸಕಾಲಿಕ' ಸಾಪ್ತಾಹಿಕದ ಮೊದಲ ಸಂಚಿಕೆ ಕೈಗೆ ಬಂದೇ ಬಿಟ್ಟಿತು. - 'ಗ್ರಾಮಾಂತರ ಭಾಗದಲ್ಲಿ ಹುಟ್ಟಿ ನಾಡಿನುದ್ದಗಲ ಬೆಳಕನ್ನು ಹಂಚುತ್ತಿರುವ ಅಂಕೋಲೆಯ ಅಕ್ಷರ ಸಂಗಾತಿಯಾಗಿ' . ೧೬ ಪುಟಗಳಲ್ಲಿ ಬರಬರುತ್ತ ಎಷ್ಟೊಂದು ವಿಷಯ ವೈವಿಧ್ಯ! ಎಂಥ ಚಂದವಾದ ವಿನ್ಯಾಸ! ಯಾವ ಮೂಲೆಯಲ್ಲಿಯೂ ಜಾಹೀರಾತುಗಳ ಸುದ್ದಿಯಿಲ್ಲ! ಇದರ ಹಿಂದೆ ದಿನಕರ ದೇಸಾಯಿಯವರು ೧೮ ವರ್ಷಗಳ ಕಾಲ ನಡೆಸಿದ 'ಜನಸೇವಕ'ದ ಸ್ಫೂರ್ತಿ ಇದ್ದೇ ಇದೆ, ಎಂದು ನನ್ನ ನಂಬಿಕೆ.

ಅರವತ್ತು ಮಳೆಗಾಲಗಳನ್ನು ಕಂಡಿರುವ ವಿಷ್ಣುನಾಯ್ಕರ ತರುಣ ಮನಸ್ಸಿನಲ್ಲಿ ಇನ್ನೂ ಯಾವ ವರುಣನ ಎಷ್ಟು ಕನಸುಗಳಿವೆಯೊ ಯಾರು ಬಲ್ಲರು? 'ಮನುಷ್ಯ ಜನ್ಮದ ಸಂಪೂರ್ಣ ಸದ್ಬಳಕೆ' ಅವರ ನಂಬಿಕೆ-ನಿಲುವು. ಅದಕ್ಕೆ ಗೆಲುವನ್ನು ಹಾರೈಸೋಣ.

'ನಂಬಲಾಗದು ಮತ್ತೆ ಬೀಳು
ಗೋಡೆಗಳಾಂತ ಹುಳಮೆಂದ ಹಳಿಕಂಬ
ನೆಡಬೇಕು ಪಕ್ಕಾ ಹೊಸತಳಿಯ
ಕಂಬಗಳ- ಸುಭದ್ರ ನಾಳೆಗಳ ನೆಡುವಂತೆ ನಾವು'

ಎಂಬ ಅವರ 'ಸಂಕಲ್ಪ' ಕಾಲಕಾಲಕ್ಕೆ ಈಡೇರಲಿ.

('ಪರಿಮಳದಂಗಳ' ೨೦೦೫)

ಸಾಹಿತ್ಯ ಸಮಾಹಿತ : ೨೦೦೭

## ೩೧

## ಸೇವಾತತ್ಪರತೆಗೆ ಇನ್ನೊಂದು ಹೆಸರು

೧೯೯೭ರ ಡಿಸೆಂಬರ್ ತಿಂಗಳು. ಹಾಸನದ ಸಾಹಿತ್ಯ ಸಾಮ್ಮೇಳನ ಮುಗಿಸಿಕೊಂಡು ಬರುವಾಗ ಕಾರ್ಕಳದಲ್ಲಿ ಏರ್ಪಡಿಸಿದ್ದ ದ.ಕ. ಜಿಲ್ಲಾ ಸಾಹಿತ್ಯ ಸಮ್ಮೇಳನದ ಸಮಾರೋಪ ಸಮಾರಂಭದಲ್ಲಿ ಮುಖ್ಯ ಅತಿಥಿಯಾಗಿ ಭಾಗವಹಿಸುವ ಅವಕಾಶ ನನಗೆ ಒದಗಿದ್ದಿತು. ಜಿಲ್ಲಾ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದ ವ್ಯಾಸರಾಯ ಬಲ್ಲಾಳ, ಎಲ್.ಎಸ್. ಶೇಷಗಿರಿರಾವ್, ಕು.ಶಿ. ಹರಿದಾಸ ಭಟ್ಟ, ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟ, ಜಿ. ನಾರಾಯಣ, ಸಾ.ಶಿ. ಮರುಳಯ್ಯ, ಎಂ.ವಿ. ಕಾಮತ್, ಬಿ.ವಿ. ಕಾರಂತ ಮೊದಲಾದ ಇನ್ನೂ ಅನೇಕ ಸಾಹಿತಿಗಳೂ ಕಲಾವಿದರೂ ಭಾಗವಹಿಸಿದ ಸಮ್ಮೇಳನ ಅದಾಗಿದ್ದಿತು. ಪ್ರಾದೇಶಿಕ ವೈಶಿಷ್ಟ್ಯವನ್ನು ಸಾರುವ ವೇದಿಕೆಯ ಅಲಂಕಾರ, ಕಾರ್ಯದರ್ಶಿಗಳಾದ ಎಂ. ರಾಮಚಂದ್ರ ಅವರು ಕಾರ್ಯಕ್ರಮಗಳ ನಿರ್ವಹಣೆಯಲ್ಲಿ ಪಾಲಿಸಿದ ಸಮಯ ನಿಷ್ಠೆ, ಸಭೆಯ ಸುವ್ಯವಸ್ಥೆ, ಉಲ್ಲಾಸಕರವಾದ ಸಾಂಸ್ಕೃತಿಕ ವಾತಾವರಣ - ಒಂದೊಂದೂ ನನ್ನ ಮನಸ್ಸನ್ನು ತುಂಬಿನಿಂತವು. ಜಿಲ್ಲಾ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಇದೆಲ್ಲವನ್ನು ದಕ್ಷತೆಯಿಂದ ಸಂಘಟಿಸಿದ ಹರಿಕೃಷ್ಣ ಪುನರೂರು ಅವರನ್ನು ನಾನು ಕಂಡದ್ದು ಇದೇ ಮೊದಲು. ಅರ್ಧ ತೋಳಿನ ಧವಳ ಶುಭ್ರ ಅಂಗಿ ಮತ್ತು ಪಂಚೆ, ಕೃತಕತೆಯಿಲ್ಲದ ಮುಗುಳು ನಗೆಯ ಪುನರೂರು ಅವರ ಸರಳತೆಯನ್ನು ನೇರ ನಡೆಯನ್ನು ನಾನು ಅಂದು ಮನಸ್ಸಿನಲ್ಲಿಯೇ ಮೆಚ್ಚಿಕೊಂಡೆ.

ಮರುವರ್ಷ (೧೯೯೭) ಮಂಗಳೂರಿನಲ್ಲಿ ನಡೆದ ೬೬ ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ ವಹಿಸಿದ್ದ ಕಯ್ಯಾರ ಕಿಞ್ಞಣ್ಣ ರೈ ಅವರಿಗೆ ನನ್ನಿಂದ ಅಧಿಕಾರದ ಹಸ್ತಾಂತರ. ನಾನು ನೋಡಿದ ಸಾಹಿತ್ಯ ಸಮ್ಮೇಳನಗಳಲ್ಲಿಯೇ ಅದು ಅತ್ಯಂತ ಅಚ್ಚುಕಟ್ಟಾದದ್ದು. ಸಮ್ಮೇಳನದ ಕಾರ್ಯಾಧ್ಯಕ್ಷರಾಗಿ ಪ್ರಮುಖ ಪಾತ್ರವಹಿಸಿದ್ದ ಪುನರೂರು ವೇದಿಕೆಯ ಮೇಲೆ ಕುಳಿತದ್ದೇ ಕಡಿಮೆ. ಸ್ವಯಂಸೇವಕನಂತೆ ಅತ್ತಿತ್ತ ಓಡಾಡುತ್ತಿದ್ದುದೇ ಹೆಚ್ಚು. ೬೬ನೇ ಸಮ್ಮೇಳನದ ನೆನಪಿಗೆಂದು ೬೬ ಗ್ರಂಥಗಳ ಅನುದಾನ ಯೋಜನೆಯನ್ನು ಅವರು ಯಶಸ್ವಿಯಾಗಿ ನಿರ್ವಹಿಸಿದ್ದರು. ಸಮ್ಮೇಳನದ ಆವರಣದಲ್ಲಿ ಸುಮಾರು ನಾಲ್ಕುನೂರು ಪುಸ್ತಕ ಮಳಿಗೆಗಳಿದ್ದುದನ್ನು ಕಣ್ಣಾರೆ ಕಂಡು ನಂಬಲೇಬೇಕಾಯಿತು. ಯಾವ ಶುಲ್ಕವಿಲ್ಲದೆ ಪ್ರಕಾಶಕರಿಗೆ, ಪುಸ್ತಕ ಮಾರಾಟಗಾರರಿಗೆ ಉಚಿತವಾಗಿ ಮಳಿಗೆಗಳನ್ನು ಒದಗಿಸಲಾಗಿತ್ತು. ಪುನರೂರು ಸಾಹಿತಿಯಾಗಿರಲಿಕ್ಕಿಲ್ಲ. ಆದರೆ

ಸಾಹಿತ್ಯಾಭಿಮಾನಿಯಾಗಿ, ಪುಸ್ತಕ ಸಂಸ್ಕೃತಿಯ ಪೋಷಕರಾಗಿ ದುಡಿಯುವ ಅವಕಾಶವನ್ನು ಅವರು ನೂರಕ್ಕೆ ನೂರರಷ್ಟು ಸಫಲಗೊಳಿಸಿಕೊಂಡದ್ದು ನನಗೆ ಮನವರಿಕೆಯಾಯಿತು.

೧೯೯೦ ರಿಂದ ೨೦೦೧ರವರೆಗೆ ಹನ್ನೊಂದು ವರ್ಷ ನಿರಂತರವಾಗಿ ಜಿಲ್ಲಾ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಅವರು ಕೆಲಸ ಮಾಡಿದ್ದು ಪರಿಷತ್ತಿನ ಇತಿಹಾಸದಲ್ಲಿಯೇ ಒಂದು ದಾಖಲೆಯೆನ್ನಬಹುದು. ಅದಕ್ಕೆ ತಕ್ಕಂತೆ ಆ ಜಿಲ್ಲೆಯ ಸಾಹಿತ್ಯ ಕ್ಷೇತ್ರಕ್ಕೆ ಸಂಘಟಕರಾಗಿ ಅವರು ಸಲ್ಲಿಸಿದ ಸೇವೆ, ನಡೆಸಿದ ಚಟುವಟಿಕೆಗಳು ಒಂದು ಮಾದರಿಯಾಗಿ ನಿಲ್ಲಬಲ್ಲವು.

೨೦೦೧ರಲ್ಲಿ ಕಾಂತಾವರದ ಕನ್ನಡ ಸಂಘದ ಬೆಳ್ಳಿಯ ಹಬ್ಬ ಹಾಗೂ ೨೦೦೪ರಲ್ಲಿ ಮುದ್ದಣ ಕಾವ್ಯಪ್ರಶಸ್ತಿ ಯೋಜನೆಯ ಬೆಳ್ಳಿಹಬ್ಬ-ಎರಡಕ್ಕೂ ನನ್ನನ್ನು ಡಾ.ನಾ. ಮೊಗಸಾಲೆ ಬರಮಾಡಿಕೊಂಡಿದ್ದರು. ಆ ಸಂದರ್ಭಗಳಲ್ಲಿ ಮೂಲ್ಕಿಯಲ್ಲಿಯ ಪುನರೂರು ಟೂರಿಸ್ಟ್ ಹೊಟೇಲ್‌ನಲ್ಲಿಯೇ ನಮಗೆ ಊಟ, ವಸತಿಯ ಏರ್ಪಾಡು. ಕೆ.ಬಿ. ಜಿನರಾಜ ಹೆಗ್ಡೆ ಸ್ಮಾರಕ ಕನ್ನಡ ಭವನ ಕಾಂತಾವರದಲ್ಲಿ ಸೂರ್ಯಕಾಂತಿ ಪುಷ್ಪದಂತೆ ಅರಳಿ ನಿಂದಿದೆ. ೭-೧೧-೨೦೦೪ರಂದು ಮುದ್ದಣ ಕಾವ್ಯಪ್ರಶಸ್ತಿ ಪುರಸ್ಕೃತ ಕವಿಗಳಿಂದ ಕವಿಗೋಷ್ಠಿ, ವಿಚಾರಗೋಷ್ಠಿ. ಸಂಜೆ ಮುದ್ದಣ ಕಾವ್ಯಪ್ರಶಸ್ತಿ ಯೋಜನೆಯ ಪ್ರಾಯೋಜಕರಾದ ಧರ್ಮದರ್ಶಿ ಹರಿಕೃಷ್ಣ ಪುನರೂರು ಅವರಿಗೆ ಸನ್ಮಾನ. ಇಡೀ ದಿನ ಕಾಂತಾವರದ ನಿಸರ್ಗ ಸೌಂದರ್ಯದೊಡನೆ ಸಾಹಿತ್ಯಾಸಕ್ತರ ಹೃದಯದ ಔದಾರ್ಯವೂ ಬೆರೆತ ಸಂಭ್ರಮ. ಧರ್ಮಾಧಿಕಾರಿ ಡಾ. ವೀರೇಂದ್ರ ಹೆಗ್ಗಡೆಯವರ ಅನುಪಸ್ಥಿತಿಯಲ್ಲಿ ಸನ್ಮಾನದ ಕಾರ್ಯವನ್ನು ನಿರ್ವಹಿಸುವ ಗೌರವ ನನ್ನ ಪಾಲಿಗೆ ಬಂದಿತು. ನನ್ನ ಭಾಷಣದ ಕೊನೆಯಲ್ಲಿ, ಆಗಲೆ ಹೊಳೆದ ಒಂದು ವಿಚಾರವನ್ನು ನಾನು ಪ್ರಸ್ತಾಪಿಸಿದೆ : ಮುದ್ದಣ್ಣ ಕಾವ್ಯಪ್ರಶಸ್ತಿಯ ಬೆಳ್ಳಿಯ ಹಬ್ಬದ ಸವಿನೆನಪಿಗೆ ಪ್ರಶಸ್ತಿಯ ಮೊತ್ತವನ್ನು ರೂ. ಐದು ಸಾವಿರದಿಂದ ರೂ. ಹತ್ತು ಸಾವಿರಕ್ಕೆ ಹೆಚ್ಚಿಸಿದರೆ ಎಷ್ಟು ಒಳ್ಳೆಯದಾಗಬಹುದಲ್ಲವೆ? ಎಂಬುದೇ ಆ ಸಲಹೆ. ಪುನರೂರು ಅವರು ಸ್ವಲ್ಪವೂ ಹಿಂದೆ ಮುಂದೆ ನೋಡದೆ ಅದಕ್ಕೆ ಸಂತೋಷದಿಂದ ಸಮ್ಮತಿಸಿದರು. ಪುನರೂರು ತಮ್ಮ ಸೃಜನಾತ್ಮಕ ಕಾರ್ಯಗಳಿಂದ ಪಡೆದಿರುವ ಸ್ಥಾನ ದೊಡ್ಡದೆನ್ನುವುದರಲ್ಲಿ ಯಾವ ಸಂದೇಹವೂ ಇಲ್ಲ. ಸಮಾಜಕ್ಕಾಗಿ ದುಡಿದರೆ ಸಮಾಜ ಅಂಥವರನ್ನು ಗುರುತಿಸಿ ಆತ್ಮೀಯತೆಯಿಂದ ತಬ್ಬಿಕೊಳ್ಳದೆ ಇರಲಾರದು. ನಿರಪೇಕ್ಷತೆಯಿಂದ ಸೇವೆ ಮಾಡಿದವರಿಗೆ ಆ ಸೇವೆಯಿಂದ ಸಿಗುವ ಆತ್ಮತೃಪ್ತಿ ಅಮೃತ ಸಮಾನವೆಂದು ಹೇಳಲಾಗುತ್ತದೆ. ಅಂಥ ಒಂದು ತೃಪ್ತಿಯ ಮಂದಹಾಸ ಪುನರೂರವರ ಮುಖದಲ್ಲಿ ಮೂಡಿದ್ದನ್ನು ಅಂದು ಯಾರೂ ಕಾಣಬಹುದಿತ್ತು.

ಮರುದಿನ ಬೆಳಗ್ಗೆ ಪುನರೂರು ಜೊತೆಯಲ್ಲಿಯೇ ಹೊಟೇಲ್‌ನಲ್ಲಿ ಉಪಹಾರ ತೆಗೆದುಕೊಂಡೆವು. ಸಮೀಪದಲ್ಲಿಯೇ ಇರುವ ಪುನರೂರಿಗೆ ಹೋಗಿ ಅವರ ಮನೆಯಲ್ಲಿ ಸ್ವಲ್ಪ ಹೊತ್ತು ಕುಳಿತು ಶ್ರೀಮತಿ ಉಷಾರಾಣಿಯವರ ಆತಿಥ್ಯ ಸ್ವೀಕರಿಸಿ, ಬಳಿಯಲ್ಲಿಯೇ ರಾಶಿಯಾಗಿ ಜೋಡಿಸಿದ್ದ ಹಲವಾರು ದಿನಪತ್ರಿಕೆ, ವಾರಪತ್ರಿಕೆ, ಪಾಕ್ಷಿಕಗಳಲ್ಲಿ ಕಣ್ಣಾಡಿಸಿ 'ಶುಭವಾಗಲಿ'

(ಮನೆಯ ಹೆಸರು) ಎಂಬ ಭಾವನೆಯಿಂದ ಹೊರಬಂದೆವು. ಸನಿಹದಲ್ಲಿಯೇ ಒಂದು ಮಹಾದ್ವಾರ. ಒಳಗೆ ಪ್ರವೇಶಿಸಿದೊಡನೆ ಸ್ವಚ್ಛವಾದ, ಸುಂದರವಾದ ಬಯಲಿನಲ್ಲಿ ಒಂದೇ ಮಾದರಿಯ ಅಚ್ಚುಕಟ್ಟಾದ ವಸತಿಗೃಹಗಳ ಸಾಲು. ನಡುವೆ ಅಗಲವಾದ ರಸ್ತೆಗಳು. ಪುನರೂರು ಬಡಬಗ್ಗರಿಗಾಗಿ ಕಟ್ಟಿಸಿರುವ ನೂರು ಮನೆಗಳು ! ಒಂದೊಂದು ಸಂಸಾರಕ್ಕೆ ಅಗತ್ಯವಾದ ಎಲ್ಲಾ ಸೌಕರ್ಯಗಳನ್ನೂ ಒಳಗೊಂಡ ಮನೆಗಳು. ಎದುರಿಗೆ ಮಕ್ಕಳಿಗೆ ವಿಸ್ತಾರವಾದ ಕ್ರೀಡಾಂಗಣ, ಸಭಾಮಂಟಪ ಹಾಗೂ ಕಾರ್ಯಾಲಯ. ಪಕ್ಕದಲ್ಲಿಯೇ ಪ್ರಾಥಮಿಕ ಹಾಗೂ ಪ್ರೌಢಶಾಲೆ, ಒಬ್ಬ ವ್ಯಕ್ತಿಯ ನೆಲೆಯಲ್ಲಿ ಇಂಥ ವಿಶಿಷ್ಟ ಯೋಜನೆ ಪೂರೈಸಿರುವುದನ್ನು ನಾನು ಬೇರೆಡೆ ಕಂಡಿಲ್ಲ. ಪುನರೂರು ಅವರ ಸಾಮಾಜಿಕ ಕಳಕಳಿ ಅವರನ್ನು ಈ ರೀತಿ ಸಾಮಾಜಿಕ, ಶೈಕ್ಷಣಿಕ, ಸಾಹಿತ್ಯಿಕ, ಧಾರ್ಮಿಕ ಕ್ಷೇತ್ರದಲ್ಲಿ ಕ್ರಿಯಾಶೀಲಗೊಳಿಸಿರುವುದು ದೊಡ್ಡಮಾತು. ಎಲ್ಲ ವರ್ಗದ ಜನರೊಡನೆ ಬೆರೆತು, ಸಾಮಾಜಿಕ ಬದುಕಿಗೆ ಒಡ್ಡಿಕೊಂಡು ಹೀಗೆ ಸದ್ದು-ಗದ್ದಲವಿಲ್ಲದೆ ತಮ್ಮನ್ನು ಸೇವಾಕಾರ್ಯಗಳಲ್ಲಿ ತೊಡಗಿಸಿಕೊಳ್ಳುವವರು ವಿರಳ. ದೇವಾಲಯಗಳನ್ನು ಸಾಂಸ್ಕೃತಿಕ ಕೇಂದ್ರಗಳಾಗಿಸುವ ಪ್ರಯತ್ನ, ಮಡಿ-ಮೈಲಿಗೆಗಳನ್ನು ತೊರೆದು ಸಮಾನ ಸಾಮಾಜಿಕ ಕಾರ್ಯವನ್ನು ಒದಗಿಸಬಲ್ಲ ಸೇವಾ ಮಂದಿರಗಳೇ ನಮ್ಮ ದೇವಸ್ಥಾನಗಳಾಗಬೇಕೆಂಬ ಅವರ ಪ್ರಗತಿಪರ ಧೋರಣೆಯನ್ನು ಯಾರೂ ಮೆಚ್ಚಬೇಕಾದದ್ದೆ.

ರಾಜ್ಯ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಸ್ಥಾನಕ್ಕೆ ಸ್ಪರ್ಧಿಸಿ ಮೊದಲ ಸಲ ಸೋತು, ಆಮೇಲೆ ಗೆದ್ದ ಸಂದರ್ಭದಲ್ಲಿ ಪರಿಷತ್ತಿಗಾಗಿ ವಿಶಾಲ ದೃಷ್ಟಿಯಿಂದ ವ್ಯಾಪಕವಾಗಿ ಅವರು ಮಾಡಬೇಕಾದ ಅನೇಕ ಕಾರ್ಯಗಳು ಕಾದುಕೊಂಡಿರುವಾಗ ಅವರ ಅಭಿಮಾನಿಗಳಿಂದಲೇ ಒಂದು ಅನುಚಿತ ಘಟನೆ ಸಂಭವಿಸಿದ್ದು ಮಾತ್ರ ವಿಷಾದನೀಯ. ಮಂಗಳೂರು ಬ್ರಾಹ್ಮಣ ಮಹಾಸಭೆ ಅವರಿಗೆ ಅಭಿನಂದನ ಸಮಾರಂಭ ಏರ್ಪಡಿಸಿದಾಗ ಪುನರೂರರ ಗೆಲುವಿಗಾಗಿ ಶ್ರಮಿಸಿದ ವ್ಯಕ್ತಿಯೊಬ್ಬರು ಹೇಳಿದರು : "ಸಾಹಿತ್ಯ ಪರಿಷತ್ತನ್ನು ಕಟ್ಟಿದವರು ನಮ್ಮ ಬ್ರಾಹ್ಮಣರು. ಆದರೆ ಇತ್ತೀಚೆಗೆ ಅದು ಬ್ರಾಹ್ಮಣರ ಕೈತಪ್ಪಿ ಹೋಗಿತ್ತು. ಹರಿಕೃಷ್ಣರ ಮೂಲಕ ಈಗ ಪುನಃ ಬ್ರಾಹ್ಮಣರು ಪರಿಷತ್ತಿಗೆ ಪ್ರವೇಶ ಪಡೆದಂತಾಯಿತು. ಇನ್ನು ಮುಂದೆ ಇದನ್ನು ಉಳಿಸಿಕೊಳ್ಳುವ ಪ್ರಯತ್ನ ಮಾಡಬೇಕು". ಇದು ಪತ್ರಿಕೆಗಳಲ್ಲಿ ವರದಿಯಾದಾಗ ಇಂಥ ಜಾತೀಯ ಉನ್ಮಾದದ ಅವಿವೇಕವನ್ನು ಕೂಡಲೇ ಪ್ರತಿಭಟಿಸಿ ಹೇಳಿಕೆ ಕೊಟ್ಟವರಲ್ಲಿ ಪ್ರಸಿದ್ಧ ವಿದ್ವಾಂಸರೂ ಸಾಹಿತಿಗಳೂ ಆದ ಡಾ. ಕುಶಾಲಪ್ಪ ಗೌಡ, ರಾಮಚಂದ್ರದೇವ, ಸುಬ್ರಾಯ ಚೊಕ್ಕಾಡಿ, ಪ್ರಭಾಕರ ಶಿಶಿಲ ಮೊದಲಾದವರಿದ್ದರು. ಧಾರವಾಡ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಹೊಸ ವರ್ಗದ ಚಟುವಟಿಕೆಗಳ ಉದ್ಘಾಟನೆಯ ಸಂದರ್ಭದಲ್ಲಿ (ಎದುರುಬದುರಾಗಿ) ನಾನೂ ಈ ಅವಿವೇಕವನ್ನು ಖಂಡಿಸುತ್ತ ಹೇಳಿದ್ದೆ : "ಹಿಂದೆ ಪ್ರಗತಿಶೀಲ ಸಾಹಿತಿಗಳು ಪರಿಷತ್ತಿನ ಕರ್ಣಧಾರತ್ವವನ್ನು ವಹಿಸಿದ್ದ 'ರಾಜಸೇವಾಸಕ್ತ'ರನ್ನು ಟೀಕಿಸಿದ್ದುಂಟು. ಆದರೆ ಅದು ಇಂಥ ಕೀಳುಮಟ್ಟದ ಜಾತಿ ಕಾರಣಕ್ಕಾಗಿ ಎಂದೂ ಇರಲಿಲ್ಲ. ಅದರ ಜಡತ್ವವನ್ನು ನೀಗಿಸಿ, ಜನಪರಗೊಳಿಸುವ ಸಾಹಿತ್ಯಕ ಹಾಗೂ ಸಾಂಸ್ಕೃತಿಕ ಕಾರಣಗಳಿಗಾಗಿತ್ತು" ಎಂಬುದಾಗಿ. ಮಂಗಳೂರಿನ ಆ ಸಭೆಯಲ್ಲಿಯೇ

ಪುನರೂರು ಇಂಥ ಮಾತುಗಳಿಗೆ ತಮ್ಮ ಪ್ರತಿಕ್ರಿಯೆ ವ್ಯಕ್ತಪಡಿಸಿದ್ದರೆ ಅವರಿಗೇ ಒಳಿತಾಗುತ್ತಿತ್ತು. ಆಮೇಲೆ ಅವರು ನೀಡಿದ 'ಸಾಹಿತ್ಯ ಪರಿಷತ್ತು ಕನ್ನಡಿಗರದು. ಯಾವುದೇ ಒಂದೇ ಜಾತಿಗೆ ಮೀಸಲಾದುದಲ್ಲ. ಇಲ್ಲಿ ಕನ್ನಡಿಗರೆಲ್ಲರಿಗೂ ಪ್ರವೇಶವಿದೆ' ಎಂಬ ಹೇಳಿಕೆ ಕೊಂಚ ಸಮಾಧಾನವನ್ನುಂಟು ಮಾಡಿದರೂ ಅವರನ್ನು ಕೆಲವರು ಆಗೀಗ ಅನುಮಾನದಿಂದ ನೋಡುವುದು ತಪ್ಪಲಿಲ್ಲವೇನೊ!

ಮುಂದೆ ಪರಿಷತ್ತಿನಲ್ಲಿ ಜಾತಿಯ ಸಂಕುಚಿತ ಭಾವನೆಗೆ ಆಸ್ಪದ ಕೊಡದ ರೀತಿಯಲ್ಲಿ ಅವರು ತಮ್ಮ ಕಾರ್ಯಗಳನ್ನು ಕೈಗೊಂಡು ಸಾಧ್ಯವಾದಷ್ಟನ್ನು ನಿಷ್ಠೆಯಿಂದಲೇ ನಿರ್ವಹಿಸಿದರು. ಮೂರು ವರ್ಷಗಳ ಅವಧಿಯಲ್ಲಿ ಮೂರು ಸಾಹಿತ್ಯ ಸಮ್ಮೇಳನಗಳು ನಡೆಯುವಂತೆ ಪ್ರಯತ್ನಿಸಿದರು. ಸಾಕಷ್ಟು ದತ್ತಿನಿಧಿಗಳನ್ನು ಸಂಗ್ರಹಿಸಿ ಪರಿಷತ್ತಿನ ಆರ್ಥಿಕ ಬಲವನ್ನು ಹೆಚ್ಚಿಸಿದರು. "ನಾನು ಸಾಹಿತಿಯಾಗದೆ ಇರುವುದರಿಂದ ಎಲ್ಲರ ಸಾಹಿತ್ಯವನ್ನು ಗೌರವಿಸುತ್ತೇನೆ" ಎಂಬ ವಿನಯದಿಂದಲೇ ಕನ್ನಡ ಜನತೆಯ ಸಹಕಾರವನ್ನು ಕೋರಿ ಪಡೆದುಕೊಂಡರು. ಈ ದಿಸೆಯಲ್ಲಿ ಜಿ. ನಾರಾಯಣ ಅವರ ಆದರ್ಶವನ್ನು ಪುನರೂರು ಅನುಸರಿಸಿದರೆಂದು ತೋರುತ್ತದೆ. ಜಿ. ನಾರಾಯಣ ಅವರು ತಜ್ಞರಾದ ಹಿರಿಯ ಸಾಹಿತಿಗಳ (ರಂ.ಶ್ರೀ ಮುಗಳಿ, ಎಲ್.ಎಸ್. ಶೇಷಗಿರಿರಾವ್, ಜಿ.ಎಸ್. ಶಿವರುದ್ರಪ್ಪ, ಸಿದ್ಧಯ್ಯ ಪುರಾಣಿಕ, ಹಾ.ಮಾ. ನಾಯಕ, ದೇ. ಜವರೇಗೌಡ ಮುಂ) ಸಲಹೆಗಳನ್ನು ಪಡೆದುಕೊಂಡೇ ತಮ್ಮ ಮಹತ್ವದ ಸಾಹಿತ್ಯಿಕ ಹಾಗೂ ಸಾಹಿತ್ಯ ಪ್ರಸಾರದ ಯೋಜನೆಗಳನ್ನು ಸ್ವಂತ ವಿವೇಚನೆಯೊಂದಿಗೆ ಸಮಗ್ರ ಕರ್ನಾಟಕ ದೃಷ್ಟಿಯನ್ನಿಟ್ಟುಕೊಂಡು ನಿರ್ವಹಿಸುತ್ತಿದ್ದುದರಿಂದ ಅವುಗಳಿಗೆ ವಿಶೇಷ ಮೆರುಗು ಬರುತ್ತಿತ್ತು. ಪುನರೂರು ಅವರು ಈ ಅಂಶವನ್ನು ಗಮನಿಸಿದ್ದರೆ ಅವರಿಂದ ಇನ್ನೂ ಹೆಚ್ಚಿನ ಸಾಹಿತ್ಯಿಕ ಕೆಲಸಗಳಾಗಬಹುದಿತ್ತೆಂದು ತೋರುತ್ತದೆ. ಆದರೆ ಪರಿಷತ್ತನ್ನು ಆರ್ಥಿಕವಾಗಿ ಬಲಗೊಳಿಸುವಲ್ಲಿ, ಅವ್ಯವಹಾರಗಳಿಗೆ ಆಸ್ಪದ ಕೊಡದೆ ಆಡಳಿತವನ್ನು ಪಾರದರ್ಶಕವಾಗಿಸುವಲ್ಲಿ, ಪುಸ್ತಕ ಪ್ರಕಾಶನ ಹಾಗೂ ಸಾಹಿತ್ಯ ಪರಿಚಾರಿಕೆಯನ್ನು ತೀವ್ರಗೊಳಿಸುವಲ್ಲಿ, ಪರಿಷತ್ತಿನ ಆವರಣವನ್ನು ನವೀಕರಣಗೊಳಿಸುವಲ್ಲಿ ಅವರು ಕೈಗೊಂಡ ಪ್ರಾಮಾಣಿಕ ಪ್ರಯತ್ನಗಳನ್ನು ಯಾರೂ ಅಲ್ಲಗಳೆಯುವಂತಿಲ್ಲ. ಹಾಗೆಯೇ ಅವರ ಸಾಹಿತ್ಯ ಪ್ರೀತಿ, ಕನ್ನಡ ಭಾಷಾಭಿಮಾನ, ಸಾಹಿತಿಗಳ ಬಗೆಗಿನ ಗೌರವಗಳ ಬಗ್ಗೆ ಎರಡು ಮಾತಿಲ್ಲ.

೨೦೦೪ ಜನವರಿ ತಿಂಗಳು ನಡೆದ ನಾಡಗೀತೆಯ ಪ್ರಕರಣ ಹರಿಕೃಷ್ಣರನ್ನು ಸಾಕಷ್ಟು ವಿವಾದಕ್ಕೀಡುಮಾಡಿತು. ಇದರಿಂದ ಕೆಲವು ಸತ್ಯಸಂಗತಿಗಳು ಬೆಳಕಿಗೆ ಬಂದದ್ದು ನಿಜ. ಆದರೆ 'ಕುವೆಂಪುರವರ ಪದ್ಯವೇ ಯಾಕೆ ನಾಡಗೀತೆಯಾಗಬೇಕು ? ಕರ್ನಾಟಕದಲ್ಲಿ ಅವರೊಬ್ಬರೇ ಕವಿಗಳೇ...' ಎಂದು ಅವರು ಸಭೆಯೊಂದರಲ್ಲಿ ಆಡಿದ ಲಘುವಾದ ಮಾತು ಇನ್ನಷ್ಟು ಕೋಲಾಹಲಕ್ಕೆ ಕಾರಣವಾಯಿತು. ಸಾಹಿತ್ಯ ಪರಿಷತ್ತಿನಂಥ ಹಿರಿಯ ಪ್ರಾತಿನಿಧಿಕ ಸಂಸ್ಥೆಯ ಅಧ್ಯಕ್ಷರಾಗಿ ಅವರು ಈ ಸಂದರ್ಭದಲ್ಲಿ ಇನ್ನಷ್ಟು ಸಂಯಮವನ್ನೂ ವಿಚಾರವಂತಿಕೆಯನ್ನೂ ತೋರಿಸಬೇಕಾಗಿತ್ತೆಂದು ಸಾರ್ವಜನಿಕರು ಅಪೇಕ್ಷಿಪಟ್ಟಿದ್ದರೆ ತಪ್ಪಲ್ಲ. ಇದರ ಪರಿಣಾಮವಾಗಿ

ಮೈಸೂರಿನಲ್ಲಿ ನಡೆದ ಸಾಹಿತ್ಯ ಪ್ರಶಸ್ತಿ ಪ್ರದಾನ ಸಮಾರಂಭವೊಂದರಲ್ಲಿ ಉದ್ರಿಕ್ತರ ಗುಂಪೊಂದು ವೇದಿಕೆಗೆ ಧಾವಿಸಿ ಅವರ ಪಂಚೆಯನ್ನು ಎಳೆಯುವ ಮಟ್ಟಕ್ಕೂ ಹೋದದ್ದು ದುರ್ದೈವದ ಸಂಗತಿ. ಈ ಬಗೆಯ ಪ್ರತಿಭಟನೆ ಅನಾಗರಿಕ ವರ್ತನೆಯೆನ್ನದೆ ವಿಧಿಯಿಲ್ಲ. ಅಂಥ ಸಂದರ್ಭದಲ್ಲಿಯೂ ಪುನರೂರು ವಿಚಲಿತಗೊಳ್ಳದೆ ಇದ್ದುದು ಆಶ್ಚರ್ಯಕರ ಸಂಗತಿ. ಆ ಜನರ ವಿರುದ್ಧ ಪೋಲೀಸರಿಗೆ ದೂರು ಕೊಡುವಂತೆ ಕೆಲವರು ಸೂಚಿಸಿದಾಗ "ಅವರು ಕನ್ನಡಿಗರು. ನಮ್ಮವರೆ. ನಾನು ಅವರ ವಿರುದ್ಧ ದೂರು ನೀಡುವುದಿಲ್ಲ" ಎಂದು ಹೇಳಿ ಯಾವುದೇ ಭಯ ಹಾಗೂ ದ್ವೇಷಕ್ಕೆ ಎಡೆಗೊಡದಂತೆ ನೋಡಿಕೊಂಡದ್ದನ್ನು ಮಾತ್ರ ಮೆಚ್ಚಲೇಬೇಕು.

ಹರಿಕೃಷ್ಣ ಪುನರೂರು ಅವರ ಕಾರ್ಯಕ್ಷೇತ್ರ ಹಾಗೂ ಸೇವಾಕ್ಷೇತ್ರ ವಿಸ್ತಾರವಾಗಿರುವುದರಿಂದ, ಅದರಲ್ಲೂ ಅವರ ಸಮಾಜಮುಖಿ ವ್ಯಕ್ತಿತ್ವಕ್ಕೆ ಈಗಾಗಲೇ ಜನಮನ್ನಣೆ ದೊರಕಿರುವುದರಿಂದ ತಮ್ಮ ಮುಂದಿನ ದಾರಿ ಅವರಿಗೆ ನಿಚ್ಚಳವಾಗಿದೆ. ಆ ದಾರಿಯಲ್ಲಿ ಜನಹಿತಕಾರ್ಯದ ಮೈಲುಗಲ್ಲುಗಳು ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ಸ್ಥಾಪನೆಗೊಳ್ಳಲಿ, ಎಲ್ಲ ರೀತಿಯಿಂದಲೂ ಅವರಿಗೆ 'ಶುಭವಾಗಲಿ'.

('ಪುನರೂರು ಪುರಸ್ಕಾರ' ೨೦೦೫)

ಸಾಹಿತ್ಯ ಸಮಾಹಿತ : ೨೦೦೭

## ೩೨

# ಅದ್ಭುತ ಕಾರ್ಯಶಕ್ತಿಯ ಅಪರೂಪದ ವ್ಯಕ್ತಿ

ಪಂಡಿರತ್ನಂ ಬಿ. ಶಿವಮೂರ್ತಿಶಾಸ್ತ್ರಿಗಳು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದಾಗ ಆಜೀವ ಸದಸ್ಯರ ಸಂಖ್ಯೆಯನ್ನು ಹೆಚ್ಚಿಸಲು ಸಾಕಷ್ಟು ಪ್ರಯತ್ನ ಪಟ್ಟರು. ಆ ಸಂದರ್ಭದಲ್ಲಿ ಅಂದರೆ, ೧೯೫೭ರಲ್ಲಿ ನಾನು ಪರಿಷತ್ತಿನ ಆಜೀವ ಸದಸ್ಯನಾದೆ. ಧಾರವಾಡದಲ್ಲಿ ೩೯ನೇ ಕನ್ನಡ ಸಾಹಿತ್ಯ ಸಮ್ಮೇಳನ ೧೯೫೭ರಲ್ಲಿ ಶ್ರೀ ಕುವೆಂಪು ಅವರ ಅಧ್ಯಕ್ಷತೆಯಲ್ಲಿ ನೆರವೇರಿದಾಗ ಆ ಸಮ್ಮೇಳನದ ಪ್ರಧಾನ ಕಾರ್ಯದರ್ಶಿಯಾಗಿ ಕೆಲಸ ಮಾಡುವ ಅವಕಾಶ ನನಗೆ ಒದಗಿದ್ದಿತು. ಅಂದಿನಿಂದ ಸಾಹಿತ್ಯ ಪರಿಷತ್ತಿನ ಕಾರ್ಯಕಲಾಪಗಳ ಜೊತೆಗೆ ನನ್ನ ಸಂಬಂಧ ಬೆಳೆದು ಬಂದಿತು. ಅದಕ್ಕೂ ಮೊದಲು ಮೈಸೂರಿನಲ್ಲಿ ಶ್ರೀ ಕಾರಂತರ ಅಧ್ಯಕ್ಷತೆಯಲ್ಲಿ ನಡೆದ ಸಾಹಿತ್ಯ ಸಮ್ಮೇಳನದ ಸಾಹಿತ್ಯಗೋಷ್ಠಿ ಹಾಗೂ ಕವಿ ಸಮ್ಮೇಳನದಲ್ಲಿ ನಾನು ಭಾಗವಹಿಸಿದ್ದೆ.

ಶ್ರೀ ಜಿ. ನಾರಾಯಣರ ಪರಿಚಯ ನನಗಾದದ್ದು ೧೯೬೯ರಲ್ಲಿ. ಅವರು ಪರಿಷತ್ತಿನ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಲು ಪ್ರಾರಂಭಿಸಿದ ಮೇಲೆ. ಅವರನ್ನು ಮೊದಲ ಸಲ ಕಂಡು ಮಾತನಾಡಿದಾಗ, ಅವರ ಸಾದಾ ಖಾದಿ ವೇಷಭೂಷಣದಲ್ಲಿ, ಸೌಮ್ಯನಗೆಯ, ಒಲಿದು ಒಲಿಸಿಕೊಳ್ಳುವ ರೀತಿಯಲ್ಲಿ, ಗಾಂಧಿಮಾರ್ಗದ ನಿಷ್ಠಾವಂತ ಕಾರ್ಯಕರ್ತನೊಬ್ಬನ ನಿರಾಡಂಬರ ವ್ಯಕ್ತಿತ್ವ ಗೋಚರಿಸಿತು. ನೋಡಲು ವಾಮನಮೂರ್ತಿಯಂತಿದ್ದ ಅವರು ಬೆಂಗಳೂರು ನಗರದ ಮಾಜಿ ಮೇಯರರೆಂಬುದನ್ನು ನಂಬಲಿಕ್ಕೂ ಅಸಾಧ್ಯವೆನಿಸಿತು. ಪರಿಷತ್ತಿನ ಹಿಂದಿನ ಅಧ್ಯಕ್ಷರು ಹಾಗೂ ಅವರಲ್ಲಿ ಕೆಲವರಿಗಿದ್ದ ವಿಶಿಷ್ಟವಾದ ಸಾಹಿತ್ಯದ ವ್ಯಕ್ತಿತ್ವವನ್ನು ಕೆಲ ಮಟ್ಟಿಗೆ ಅರಿತಿದ್ದ ನನಗೆ ಜಿ. ನಾರಾಯಣರ ಬಗ್ಗೆ ಕುತೂಹಲವುಂಟಾಗದೆ ಇರಲಿಲ್ಲ. ಮುಂದೆ ಅಲ್ಪಾವಧಿಯಲ್ಲಿಯೇ ಹಲವಾರು ಹೊಸ ಹೊಸ ಯೋಜನೆಗಳನ್ನು ಹುಟ್ಟುಹಾಕಿ, ಅವನ್ನು ಫಲಪ್ರದವಾಗಿ ಕಾರ್ಯಗತಗೊಳಿಸುತ್ತ, ಪರಿಷತ್ತಿನ ಕಾರ್ಯವ್ಯಾಪ್ತಿಯನ್ನು ಯಶಸ್ವಿಯಾಗಿ ವಿಸ್ತಾರಗೊಳಿಸುತ್ತ ಸಾಗಿದ ಅವರ ಅದ್ಭುತ ಕಾರ್ಯಶಕ್ತಿಯನ್ನು ಕಂಡು ಅವರ ಬಗ್ಗೆ ನನ್ನಲ್ಲಿ ಸಹಜವಾಗಿ ಅಚ್ಚರಿ, ಆದರ, ಅಭಿಮಾನ ಉಂಟಾದವು.

ಜಿ. ನಾರಾಯಣ ಅವರು ಅಧ್ಯಕ್ಷರಾಗಿದ್ದ ಒಂದು ದಶಕದ ಅವಧಿಯಲ್ಲಿ ಪರಿಷತ್ತಿನ ಪ್ರಯೋಜನವನ್ನು ಸಮಗ್ರ ಕರ್ನಾಟಕಕ್ಕೆ ಒದಗುವಂತೆ ಮಾಡುವಲ್ಲಿ ಅವರು ತಮ್ಮ ಎಲ್ಲ ಕಾಲವನ್ನು, ಶಕ್ತಿಯನ್ನು ಅದಕ್ಕೆ ಧಾರೆಯೆರೆದದ್ದು ಪರಿಷತ್ತಿನ ಇತಿಹಾಸದಲ್ಲಿಯೇ ಒಂದು ಅಪೂರ್ವ

ಸಾಧನೆಯೆಂದರೆ ತಪ್ಪಾಗದು. ತ್ರೈವಾರ್ಷಿಕ ಯೋಜನೆಯ ಮೂಲಕ ಕರ್ನಾಟಕದ ಎಲ್ಲ ಜಿಲ್ಲೆಗಳಲ್ಲಿ ಪರಿಷತ್ತಿನ ಕೇಂದ್ರಗಳ ಸ್ಥಾಪನೆ, ಜಿಲ್ಲಾ ಸಾಹಿತ್ಯ ಸಮ್ಮೇಳನಗಳ ವ್ಯವಸ್ಥೆ, ಆಡಳಿತ ಭಾಷೆಯಾಗಿ ಕನ್ನಡದ ಬಲಪಡಿಸುವಿಕೆ, ಕನ್ನಡೇತರರಿಗೆ ಕನ್ನಡದ ಶಿಕ್ಷಣ, ಹೊರನಾಡಿನಲ್ಲಿ ಕನ್ನಡದ ಪ್ರಚಾರ-ಇವೆಲ್ಲವೂ ಅವರ ಕರ್ತೃತ್ವಶಕ್ತಿಯ ದ್ಯೋತಕವಾಗಿವೆ. ಹಾಗೆಯೇ ಮುಂದೆ ೧೯೭೩ರಿಂದ ಅವರ ಪಂಚವಾರ್ಷಿಕ ಯೋಜನೆಯ ಯಶಸ್ಸಿಗೂ ಇದೇ ದಾರಿ ಮಾಡಿಕೊಟ್ಟಿತು. ಕನ್ನಡ ನಾಡಿನ ಒಳಗೂ ಹೊರಗೂ ಎಡೆಬಿಡದೆ ಸಂಚರಿಸಿ ಜನತೆಯನ್ನು, ಬೇರೆ ಬೇರೆ ಸಂಘ ಸಂಸ್ಥೆಗಳನ್ನು ಪರಿಷತ್ತಿನ ಕಾರ್ಯಕ್ಕೆ ಅವರು ಅಣಿಗೊಳಿಸಿದರು.

ಪರಿಷತ್ತಿನ ಸುವರ್ಣ ಮಹೋತ್ಸವದ ಹಾಗೂ ವಜ್ರ ಮಹೋತ್ಸವದ ರಾಷ್ಟ್ರೀಯ ಸ್ವರೂಪದ ಕಾರ್ಯಕ್ರಮಗಳು, ಸುವರ್ಣ ಮಹೋತ್ಸವ ಕಟ್ಟಡ, ಜನಸಾಮಾನ್ಯರಿಗೂ ಎಟುಕಬಲ್ಲ ಬೃಹತ್ ಪ್ರಮಾಣದ ಹಾಗೂ ವೈವಿಧ್ಯಪೂರ್ಣವಾದ ಪುಸ್ತಕ ಪ್ರಕಟಣೆ, ಜನಪದ ಸಾಹಿತ್ಯ ಮತ್ತು ಕಲೆಗಳ ರಕ್ಷಣೆಗೆ ಅಗತ್ಯವಾದ ಉಪಾಯ ಮತ್ತು ಯೋಜನೆಗಳು - ಹೀಗೆ ಹಲವು ಬಗೆಯ ಕನ್ನಡದ ಕೆಲಸಗಳು ಜಿ. ನಾರಾಯಣರ ಕೈಯಲ್ಲಿ ಸಾರ್ಥಕತೆ ಪಡೆದವು. 'ಚಿನ್ನದ ಬೆಳಸು', 'ಕೌಸ್ತುಭ'ದಂಥ ಅಮೂಲ್ಯವಾದ ಸಂಸ್ಮರಣ ಸಂಪುಟಗಳು ಪ್ರಕಟಗೊಂಡವು. ಭಾರತ ಸ್ವಾತಂತ್ರ್ಯದ ಬೆಳ್ಳಿಹಬ್ಬವನ್ನು ಸಾಹಿತ್ಯಪ್ರಸಾರ ಯೋಜನೆಯಾಗಿ ಆಚರಿಸಿ, ಅದನ್ನು 'ಪುಸ್ತಕವರ್ಷ'ಕ್ಕೆ ಸಂಯೋಜಿಸಿ, 'ಪುಸ್ತಕ ಭಾಗ್ಯ'ವನ್ನು ಉಪಯುಕ್ತವಾದ ರೀತಿಯಲ್ಲಿ ಪ್ರಕಟಿಸಿ, ಜಿಲ್ಲೆ ಜಿಲ್ಲೆಗಳಲ್ಲಿ ಪುಸ್ತಕ ಪ್ರದರ್ಶನ ಹಾಗೂ ಮಾರಾಟವನ್ನು ಏರ್ಪಡಿಸಿ ಒಂದೊಂದನ್ನು ಪರಿಷತ್ತಿನ ದಾರಿಯಲ್ಲಿ ಮೈಲುಗಲ್ಲಾಗಿ ನಿಲ್ಲಿಸಿದರು. 'ಪರಿಷತ್ತಿಗೆ ಸಾಕ್ಷಾತ್ ನಾರಾಯಣ ಸ್ವರೂಪದಲ್ಲಿದ್ದಾರೆ, ಜಿ. ನಾರಾಯಣ' ಎಂಬ ಶ್ರೀ ಕುವೆಂಪು ಅವರ ಮೆಚ್ಚು ನುಡಿಯಲ್ಲಿ ಆ ತಲೆಮಾರಿನ ಹಿರಿಯರೆಲ್ಲರ ಅನಿಸಿಕೆ ಅಡಗಿದೆ. ತಾವು ಸಾಹಿತಿಗಳೆಂದೂ, ವಿದ್ವಾಂಸರೆಂದೂ ಎಲ್ಲೂ ಹೇಳಿಕೊಳ್ಳದೆ ಇಪ್ಪತ್ತೈದು ವರ್ಷಕ್ಕೂ ಮೇಲ್ಪಟ್ಟು 'ವಿನೋದ' ಪತ್ರಿಕೆಯನ್ನು ತಪ್ಪದೆ ನಡೆಸಿಕೊಂಡು ಬಂದಿರುವ ನಾರಾಯಣರು 'ಸಾಹಿತ್ಯದ ಕಾಳಜಿಯಿಲ್ಲದೆಯೇ ಪರಿಷತ್ತನ್ನು ಬೃಹದಾಕಾರವಾಗಿ ಬೆಳೆಸಿದ'ರೆಂಬ ಟೀಕೆಯನ್ನು ಹೇಗೆ ನಂಬುವದು?

ಇವರ ದಕ್ಷತೆ, ಛಲಗಾರಿಕೆ, ಸತತ ಪರಿಶ್ರಮ, ಸಾತ್ವಿಕತೆ ಮೊದಲಾದ ಗುಣಗಳನ್ನು ಮೆಚ್ಚಿಕೊಂಡವರಲ್ಲಿಯೂ ಕೆಲವರಿಗೆ ಇವರ ಈ ಎಲ್ಲ ಕೆಲಸಗಳು, ಸಾಹಿತ್ಯ ಮೇಳ, ಜಾತ್ರೆ, ರಥೋತ್ಸವವಾಗಿ ಕಂಡವು. ಬದಲಾದ ಪರಿಸರ, ಭಿನ್ನವಾದ ವಾತಾವರಣದಲ್ಲಿ ಪರಿಷತ್ತಿನ ಧ್ಯೇಯ ಧೋರಣೆಗಳಲ್ಲಿ ಬದಲಾವಣೆಯನ್ನು ಬಯಸಿದ ಕೆಲ ಸೃಜನಶೀಲ ಲೇಖಕರ ಆಕ್ರೋಶಕ್ಕೂ ಇವರು ತುತ್ತಾಗಬೇಕಾಯಿತು. ಆದರೆ 'ಇದು ಕೇವಲ ಸಾಹಿತಿಗಳ ಪರಿಷತ್ತಲ್ಲ. ಸಾಹಿತ್ಯದಲ್ಲಿ ಆಸಕ್ತಿ ಇರುವವರೆಲ್ಲರೂ ಇದರಲ್ಲಿ ಪಾಲ್ಗೊಳ್ಳಬೇಕು. ಪರಿಷತ್ತು ಜನತಾ ವಿಶ್ವವಿದ್ಯಾಲಯವಾಗಬೇಕು' ಎಂಬ ಬಿ.ಎಂ.ಶ್ರೀಯವರ ಕನಸನ್ನು ನನಸನ್ನಾಗಿ ಮಾಡುವಲ್ಲಿ ನಾರಾಯಣರು ಪ್ರಾಮಾಣಿಕವಾಗಿ ದುಡಿದದ್ದನ್ನು ಯಾರೂ ಅಲ್ಲಗಳೆಯುವಂತಿಲ್ಲ. ಸಾಕಷ್ಟು ಆಡಳಿತದ ಅನುಭವವನ್ನು ಪಡೆದಿದ್ದ

ಅವರು ಯಾವುದೇ ಯೋಜನೆಯನ್ನು ಕೈಗೆತ್ತಿಕೊಳ್ಳುವ ಪೂರ್ವದಲ್ಲಿ ಸಾಹಿತ್ಯಜ್ಞರ ಸಲಹೆಗಳನ್ನು ಪಡೆದುಕೊಂಡೇ ಮುಂದುವರಿಯುತ್ತಿದ್ದರಲ್ಲದೆ ಸರ್ವಾಧಿಕಾರಿಯಂತೆ ಅವರು ಎಂದೂ ನಡೆದುಕೊಳ್ಳಲಿಲ್ಲವೆಂದು ಕೇಳಿದ್ದೇನೆ. ಸರಕಾರದಿಂದ ಹಣ ಪಡೆದ ಮಾತ್ರಕ್ಕೆ ಪರಿಷತ್ತು ಸರಕಾರದ ಅಧೀನ ಕಚೇರಿಯಾಗಬೇಕಿಲ್ಲ ಎಂಬ ಪ್ರಜ್ಞೆಯೂ ಅವರಿಗಿದ್ದಿತು. ಇಂದು ಜೀವನದ ಎಲ್ಲ ಕ್ಷೇತ್ರಗಳಲ್ಲಿಯೂ ರಾಜಕೀಯ ಪ್ರವೇಶ ಮಾಡಿರುವಾಗ, ಪರಿಷತ್ತಿನ ಕೆಲಸಗಳನ್ನು ಪಟ್ಟು ಹಿಡಿದು ಮುಗಿಸಲು ಅವರು ರಾಜಕಾರಣಿಗಳನ್ನು ಅನುಸರಿಸಬೇಕಾಗಿ ಬಂದದ್ದು ಅನಿವಾರ್ಯವಿರಬಹುದು.

ಕನ್ನಡ ಸಾಹಿತ್ಯ ಪರಿಷತ್ತಿನ ಪುರೋಭಿವೃದ್ಧಿಯ ಮೂಲಕ ಜಿ. ನಾರಾಯಣರ ವ್ಯಕ್ತಿತ್ವದ ಹಲವು ಮುಖಗಳು ಇನ್ನಷ್ಟು ಪ್ರಕಾಶಗೊಂಡವು. ಅವರು ಆಡದೆ ಮಾಡುತ್ತಾರೆ; ಆಡಿಕೊಳ್ಳುವವರೂ ಅಚ್ಚರಿಗೊಳ್ಳುವಂತೆ ಮಾಡುತ್ತಾರೆ. ಪರಿಷತ್ತು ಹುಟ್ಟಿದ ಕಾಲದಿಂದಲೂ ಕನ್ನಡ ನುಡಿ, ಸಾಹಿತ್ಯಗಳಿಗಾಗಿ ದುಡಿಯಲು ಯತ್ನಿಸಿದ ದಿ|| ವಿ.ಸೀ. ಯವರು ಅಭಿಪ್ರಾಯಪಟ್ಟಂತೆ ನಾರಾಯಣರ ಅಧಿಕಾರಾವಧಿಯಲ್ಲಿ ಸಾಧಿಸಿರುವ ಕಾರ್ಯ ಮಹತ್ತರವಾದದ್ದು. ಪರಿಷತ್ತು ಒಟ್ಟು ನಾಡಿನ ಸಾಹಿತ್ಯಕ್ಕಲ್ಲದೆ ಸಂಸ್ಕೃತಿಯ ಸಾಧನೆ, ಪ್ರಚಾರಗಳಿಗೆ ನೆಲೆಯಾಯಿತು. ಒಂದು ದೌರ್ಭಾಗ್ಯದ ಕಾಲವನ್ನು ನಿವಾರಿಸಿ ಜನಸಾಮಾನ್ಯರ ಹೃದಯವನ್ನು ಗೆದ್ದುಕೊಂಡು ಪರಿಷತ್ತಿನ ಸೌಭಾಗ್ಯವನ್ನು ಒಂದು ಅರ್ಥದಲ್ಲಿ ಹೆಚ್ಚಿಸಿದವರು ಜಿ. ನಾರಾಯಣರು. ವಿಧಾಯಕವಾದ ರೀತಿಯಲ್ಲಿ, ವಿಚಾರಪೂರ್ಣವಾಗಿ ಸಾರ್ವಜನಿಕ ಸೇವೆಗೆ ತಮ್ಮನ್ನು ಸಮರ್ಪಿಸಿಕೊಂಡು, ಒಂದಲ್ಲ ಒಂದು ಕನ್ನಡದ ಕೆಲಸದಲ್ಲಿ ತಮ್ಮನ್ನು ತೊಡಗಿಸಿಕೊಂಡೇ ಇರುವ ಜಿ. ನಾರಾಯಣರಂಥ ಸ್ನೇಹಪೂರ್ಣ ನಿರಾಡಂಬರ ವ್ಯಕ್ತಿಗಳು ತೀರ ವಿರಳ. ದಿ. ಟಿ.ಟಿ. ಶರ್ಮಾ ಹಾಗೂ ಡಾ. ರಂ. ಶ್ರೀ ಮುಗಳಿಯವರೊಂದಿಗೆ ಶ್ರೀ ಜಿ. ನಾರಾಯಣರು ಪರಿಷತ್ತಿನ ಯಾವುದೋ ಒಂದು ಕೆಲಸಕ್ಕಾಗಿ ಧಾರವಾಡಕ್ಕೆ ಬಂದಾಗ ವಿಶ್ವವಿದ್ಯಾಲಯದ ಪ್ರಸಾರಾಂಗದ ಕೆಲವು ಪ್ರಕಟನೆಗಳ ಬಿಡುಗಡೆಯ ಕಾರ್ಯಕ್ರಮವನ್ನು ಏರ್ಪಡಿಸಲಾಗಿದ್ದಿತು. ಕರ್ನಾಟಕ ವಿಶ್ವವಿದ್ಯಾಲಯದ ತುಂಬು ಆವರಣವನ್ನು ಅದೇ ಮೊದಲು ಕಣ್ತುಂಬ ಕಂಡ ಜಿ. ನಾರಾಯಣರು ತಮ್ಮ ಭಾಷಣದಲ್ಲಿ 'ದಿ|| ಪಾವಟೆಯವರ ವ್ಯಕ್ತಿತ್ವದ ಹಿರಿಮೆಯನ್ನು ನಾನು ಈಗ ಪೂರ್ಣ ಅರಿಯುವಂತಾಯಿತು' ಎಂದರು. ಒಬ್ಬ ವ್ಯಕ್ತಿಯ ಯೋಗ್ಯತೆಯನ್ನು ಅರಿಯಬೇಕಾದರೂ ಆ ಯೋಗ್ಯತೆಯ ಕೆಲ ಅಂಶಗಳಾದರೂ ನಮ್ಮಲ್ಲಿದ್ದರೆ ಸಾಧ್ಯ ಎಂದು ಹೇಳಲಾಗುತ್ತದೆ. ಅರವತ್ತು ದಾಟಿರುವ ದಣಿವರಿಯದ ಈ ನಿಷ್ಕಳಂಕ ವ್ಯಕ್ತಿಯ ಅಭಿನಂದನದಲ್ಲಿ ಪಾಲುಗೊಳ್ಳುವ ಈ ಸಂದರ್ಭದಲ್ಲಿ ಮೇಲಿನ ಮಾತನ್ನು ನಾನು ಮತ್ತೆ ಮೆಲುಕು ಹಾಕುವಂತಾಯಿತು.

**'ಅಭಿನಂದನ ಸಂಚಿಕೆ' : ೧೯೮೪**

## ೩೩

# ಸುಸಂಸ್ಕೃತ ಸ್ನೇಹಜೀವಿ : ಚದುರಂಗ

ಚದುರಂಗರನ್ನು ನಾನು ಮೊದಲು ಕಂಡದ್ದು ೧೯೫೫ರಲ್ಲಿ. ಗೆಳೆಯ ಬಸವರಾಜ ಕಟ್ಟೀಮನಿಯವರೊಡನೆ ಮೈಸೂರು ಸಾಹಿತ್ಯ ಸಮ್ಮೇಳನಕ್ಕೆ ಹೋದಾಗ ಅವರ ಪರಿಚಯವಾಯಿತು. ಅವರ ಸೌಮ್ಯ ಸ್ನೇಹಪರತೆ ಮೊದಲ ನೋಟಕ್ಕೇ ವಯಸ್ಸಿನ ಅಂತರವನ್ನೂ ಹೋಗಲಾಡಿಸಿ ಮನಸ್ಸನ್ನು ತುಂಬುವಂತಹದು. ಆಮೇಲೆ ಹಲವಾರು ಸಲ ಕೂಡಿ, ಮಾತನಾಡಿ ಅವರೊಬ್ಬ ಸುಸಂಸ್ಕೃತ ಸ್ನೇಹಜೀವಿ ಎಂಬುದನ್ನು ಮನಗಂಡಿದ್ದೇನೆ. ಉತ್ತಮ ಲೇಖಕ ಎನ್ನುವದರೊಂದಿಗೆ ಒಬ್ಬ ಮನುಷ್ಯ ಎನ್ನುವ ದೃಷ್ಟಿಯಿಂದಲೂ ಗಣ್ಯರಾದ ವ್ಯಕ್ತಿಗಳಲ್ಲಿ ಚದುರಂಗರು ಸೇರುತ್ತಾರೆ. ಇದು ನನಗೆ ತುಂಬ ಆಪ್ಯಾಯಮಾನವಾದ ಸಂಗತಿ.

ಅವರನ್ನು ಪ್ರತ್ಯಕ್ಷ ಕಾಣುವ ಮೊದಲು ನನ್ನ ವಿದ್ಯಾರ್ಥಿ ದೆಸೆಯಲ್ಲಿ ಅವರ ಕೆಲವು ಕತೆಗಳನ್ನೂ 'ಸರ್ವಮಂಗಳಾ' ಕಾದಂಬರಿಯನ್ನೂ ಮೆಚ್ಚಿಕೊಂಡಿದ್ದೆ. ಗ್ರಾಮೀಣ ಪರಿಸರದಿಂದ ಬಂದ ನನಗೆ 'ಸರ್ವಮಂಗಳಾ' ಒಂದು ವಿಶೇಷವಾದ ಆತ್ಮೀಯ ಅನುಭವವನ್ನು ಒದಗಿಸಿತ್ತು. 'ನಿಸರ್ಗ', 'ಕಾನೂರು ಹೆಗ್ಗಡತಿ'ಗಳಿಗಿಂತ ಸ್ವಲ್ಪಮಟ್ಟಿಗೆ ಭಿನ್ನವಾದ ಅದರ ಪ್ರಾದೇಶಿಕತೆ ಮೂಗಿಗೆ ಹೊಡೆಯುವಷ್ಟು ಮಾದಕ ಸೊಗಡಿನಿಂದ ಕೂಡಿದ್ದಿತು. ಹಾಗೆಯೇ ಅಲ್ಲಿಯ ದುರಂತ ಚಿತ್ರ ಹೃದಯವನ್ನು ಹಿಂಡುವಂಥದು. ಮೈಸೂರು ಕಡೆಯ ಜಾನಪದದ ಭಾಷೆಯನ್ನು ಮೊಟ್ಟಮೊದಲಿಗೆ ನನಗೆ ಪರಿಚಯಿಸಿದ ಕೃತಿ ಅದು. ಹೀಗೆ ಚದುರಂಗರು ಅಂದಿನಿಂದಲೇ ನನ್ನ ಮನಸ್ಸಿನಲ್ಲಿ ಉಳಿದು ತಮ್ಮ ಕುತೂಹಲಕಾರಿ ಪ್ರಯೋಗಗಳಿಂದ ಬೆಳೆಯುತ್ತ ಬಂದ ಲೇಖಕರಾಗಿದ್ದಾರೆ.

ಅಂದಿನ ಪ್ರಗತಿಶೀಲ ಲೇಖಕರಲ್ಲಿ ಅವರ ಹೆಸರೂ ಆಗೀಗ ಉಲ್ಲೇಖಗೊಳ್ಳುತ್ತಿತ್ತು. ಪ್ರಗತಿಶೀಲ ಮಾರ್ಗದಲ್ಲಿ ಅವರು ಕೆಲವು ಉತ್ತಮ ಕಥೆಗಳನ್ನು ಬರೆದಿದ್ದು ನಿಜ. ಆದರೆ ಅವರು ಆ ಪಂಥದ ಬಗ್ಗೆ ಎಲ್ಲಿಯೂ ದೊಡ್ಡ ದನಿಯಲ್ಲಿ ಸದ್ದು ಮಾಡಿದಂತೆ ಕಾಣಲಿಲ್ಲ. ಆ ವಾದದ ಅಪೂರ್ಣತೆಯ ಅರಿವೂ ಅವರಿಗೆ ಬರುಬರುತ್ತ ಆಗಿರಬೇಕೆಂದು ತೋರುತ್ತದೆ. ವಾಸ್ತವ ಪಂಥದ ಲೇಖಕರಾಗಿ ಸಮಾಜದ ಸಮಸ್ಯೆಗಳನ್ನು ವಸ್ತುವಾಗಿ ಆಯ್ಕೆಮಾಡಿಕೊಂಡರೂ ಭಾವುಕತೆಗೆ ಹೆಚ್ಚು ಎಡೆಗೊಡದಂತೆ ಎಚ್ಚರವಹಿಸಿ ಕಲೆಯ ಸೂಕ್ಷ್ಮತೆಯನ್ನು ಕಡೆಗಣಿಸದಂತೆ ನೋಡಿಕೊಂಡದ್ದು ಅವರ ಬಗ್ಗೆ ಗಮನಿಸಬೇಕಾದ ಸಂಗತಿಯಾಗಿದೆ. ಅವರ ಪ್ರಗತಿಶೀಲ ದೃಷ್ಟಿಕೋನ ಅನುಭವದ ಮಹತ್ವವನ್ನು ಅರಿಯದೆ ಇರಲಿಲ್ಲ.

ಚದುರಂಗರ ಕೃತಿಗಳು ಸಂಖ್ಯೆಯಲ್ಲಿ ಹತ್ತೋ ಹನ್ನೆರಡೋ. ನಾಲ್ಕು ದಶಕಗಳ ಬರವಣಿಗೆಯ ಈ ಸಂಯಮ ಅಗಾಧವಾದದ್ದು. ನಾಲ್ಕೈದು ಕಥಾ ಸಂಗ್ರಹಗಳು, ರಂಗಪ್ರಯೋಗದಲ್ಲಿ ಯಶಸ್ವಿಯಾದ ಒಂದು ಅಸಂಗತ ನಾಟಕ, ಐದಾರು ಮಾದರಿಯೆನಿಸುವ ರೇಡಿಯೋ ನಾಟಕಗಳು, ಒಂದೆರಡು ಚರಿತ್ರೆ, ಮುಖ್ಯವಾಗಿ ಮೂರು ಮಹತ್ವದ ಕಾದಂಬರಿಗಳು. 'ಸರ್ವಮಂಗಳಾ' ಪ್ರಾದೇಶಿಕ ಕಾದಂಬರಿಗಳಲ್ಲಿ ತನ್ನ ಸ್ಥಾನವನ್ನು ಇಂದಿಗೂ ಉಳಿಸಿಕೊಂಡಿದೆ. ತಂತ್ರದ ನಿರ್ವಹಣೆಯಲ್ಲಿ ಸಾಂಕೇತಿಕತೆಯನ್ನು ಕೊನೆಯವರೆಗೂ ಉಳಿಸಿಕೊಂಡು, ಪ್ರೀತಿಯ ಮೌಲ್ಯವನ್ನು ಮೂರು ದಿಕ್ಕಿನಲ್ಲಿ ಅನ್ವೇಷಿಸುವ ತನ್ನ ಹೊಸ ಅನುಭವದೊಂದಿಗೆ 'ಉಯ್ಯಾಲೆ' ಗಮನಾರ್ಹ ಕೊಡುಗೆಯಾಗಿದೆ. ಪ್ರಾದೇಶಿಕತೆಯ ಸಮೃದ್ಧ ಹಿನ್ನೆಲೆಯಲ್ಲಿ ಅದ್ಭುತವಾದ ವಿವರಗಳೊಂದಿಗೆ ಸಾಮಾಜಿಕ ಆಯಾಮವನ್ನು ಪಡೆದ 'ವೈಶಾಖ' ಕನ್ನಡ ಕಾದಂಬರಿಗಳಲ್ಲಿಯೇ ಒಂದು ಮಹತ್ವದ ಕೃತಿಯೆನಿಸಿದೆ. ಪಾತ್ರ ಬಾಹುಳ್ಯದೊಂದಿಗೆ ಮನುಷ್ಯ ಸ್ವಭಾವದ ವೈವಿಧ್ಯ ಬೆರಗುಗೊಳಿಸುವಂಥದು. ಗ್ರಾಮೀಣ ಸಂಸ್ಕೃತಿಯನ್ನು ಆ ಭಾಷೆಯ ಬಳಕೆ ಅತ್ಯಂತ ಪರಿಣಾಮಕಾರಿಯಾಗಿ ಪ್ರತಿಬಿಂಬಿಸಿದೆ. ಆಧುನಿಕ ಕನ್ನಡ ಸಾಹಿತ್ಯದ ಎಲ್ಲ ಪಂಥಗಳ ಮಹತ್ವದ ಅಂಶಗಳನ್ನು ಅರಗಿಸಿಕೊಂಡ 'ವೈಶಾಖ' ಒಂದು ವಿಶಿಷ್ಟ ಪ್ರಯೋಗವಾಗಿ ಎರಡು ದಶಕಗಳ ಅವರ ಕಾಯುವಿಕೆಯನ್ನು ಸಾರ್ಥಕಗೊಳಿಸಿದೆ.

ಸಜ್ಜನರಾಗಿ ಬಾಳುತ್ತ, ಬರೆದಷ್ಟೂ ಬಂಗಾರವಾಗುವಂತೆ ನೋಡಿಕೊಂಡ ಚದುರಂಗರ ಸಾಹಿತ್ಯ ಸೇವೆಯನ್ನು ನೆನೆದು ಕನ್ನಡ ಜನ ಅವರಿಗೆ ಕೃತಜ್ಞತೆ ವ್ಯಕ್ತಪಡಿಸುವುದು ಅತ್ಯಂತ ಉಚಿತವಾದ ಕೆಲಸ. ಈ ಸಂದರ್ಭದಲ್ಲಿ ಅವರಿಗೆ ಶುಭಶಾಂತಿಗಳನ್ನು ಕೋರುತ್ತ ಸ್ನೇಹಪೂರ್ಣ ಗೌರವವನ್ನು ಸಲ್ಲಿಸುತ್ತೇನೆ.

**ಚದುರಂಗ : ವ್ಯಕ್ತಿ-ಅಭಿವ್ಯಕ್ತಿ**<br>
(ಅಭಿನಂದನ ಗ್ರಂಥ)<br>
೧೯೮೮

೩೪

# ಗೊರೂರು ನಮನ

ಕಳೆದ ಒಂದು ದಶಕಕ್ಕೂ ಮಿಕ್ಕಿದ ಅವಧಿಯಲ್ಲಿ ನವೋದಯ ಸಾಹಿತ್ಯದ ಹಿರಿಯರನೇಕರನ್ನು ಅವರ ಜನ್ಮಶತಮಾನೋತ್ಸವದ ನಿಮಿತ್ತ ಶ್ರದ್ಧೆಯಿಂದ ನೆನೆದುಕೊಳ್ಳುವ ಸಂದರ್ಭ ನಮಗೆ ಒದಗಿ ಬಂದಿರುವುದು ಕನ್ನಡದ ಭಾಗ್ಯ. ಅವರ ಕೃತಿಗಳ ಓದು, ಮರು ಓದಿನಿಂದ, ವ್ಯಕ್ತಿತ್ವ ದರ್ಶನದಿಂದ, ಒಡನಾಟದಿಂದ ನನ್ನಂಥವರು ಪಡೆದುಕೊಂಡದ್ದಕ್ಕೆ ಮಿತಿಯೆಂಬುದಿಲ್ಲ. ಅಂಥ ಚಿರಸ್ಮರಣೀಯ ಹಿರಿಯ ಚೇತನಗಳಲ್ಲಿ ಗೊರೂರು ರಾಮಸ್ವಾಮಿ ಅಯ್ಯಂಗಾರರೂ ಒಬ್ಬರು.

ವಿದ್ಯಾರ್ಥಿ ದೆಸೆಯಲ್ಲಿಯೇ ನನ್ನಲ್ಲಿ ಸಾಹಿತ್ಯದ ಅಭಿರುಚಿಯನ್ನು ಹುಟ್ಟಿಸಿದ ಸಾಹಿತ್ಯ ಕೃತಿಗಳಲ್ಲಿ ಗೊರೂರು ಅವರ 'ಹಳ್ಳಿಯ ಚಿತ್ರಗಳು' ಹಾಗೂ 'ನಮ್ಮ ಊರಿನ ರಸಿಕರು' ಸೇರಿವೆ. ನಾನೂ ಹಳ್ಳಿಯಿಂದಲೇ ಬಂದವನಾದುದರಿಂದ ಅವರ ಈ ಕೃತಿಗಳು ವಿಶೇಷ ಆಕರ್ಷಣೆಯನ್ನೊದಗಿಸಿದವು. ಇತರರಿಗೂ ಅವುಗಳನ್ನು ಓದಿ ತೋರಿಸಿ ನಾನು ಸಂತೋಷಪಟ್ಟದ್ದುಂಟು. ಅಂಥವರನ್ನು ಪ್ರತ್ಯಕ್ಷ ಕಂಡು ಪರಿಚಯಿಸಿಕೊಳ್ಳುವ ಅವಕಾಶ ದೊರೆತದ್ದು ೧೯೬೬ರಲ್ಲಿ. ಮೈಸೂರು ವಿಶ್ವವಿದ್ಯಾಲಯದ ಸುವರ್ಣ ಮಹೋತ್ಸವ ಸಮಾರಂಭದ ಸಂದರ್ಭದಲ್ಲಿ. ಅಪ್ಪಟ ಗಾಂಧೀವಾದಿಯಾಗಿದ್ದ ಅವರನ್ನು ಕಂಡಾಗ 'ಗರುಡಗಂಬದ ದಾಸಯ್ಯ' ಪ್ರಬಂಧದಲ್ಲಿ ಅವರು ತಮ್ಮ ವೇಷವನ್ನು ಬಣ್ಣಿಸಿಕೊಂಡದ್ದು ನೆನಪಾಗದೆ ಇರಲಿಲ್ಲ. ತಮ್ಮ ನಿರ್ಮಲವಾದ ಹಾಸ್ಯ ಗುಣದಿಂದ ಅಲ್ಪಕಾಲದಲ್ಲಿಯೇ ಅವರು ನನಗೆ ಆತ್ಮೀಯರಾಗಿಬಿಟ್ಟರು. ಮುಂದೆ ಧಾರವಾಡಕ್ಕೆ ಬಂದಾಗಲೆಲ್ಲ ಬಿಡುವು ಮಾಡಿಕೊಂಡು ಸ್ವಲ್ಪ ಹೊತ್ತಾದರೂ ನಮ್ಮ ಮನೆಗೆ ಬಂದು, ವಿನೋದದ ಮಾತಾಡಿ ನಮ್ಮನ್ನು ಸಂತೋಷಗೊಳಿಸಿ ಹೋಗುತ್ತಿದ್ದುದನ್ನು ನಾನು ಮರೆಯುವಂತಿಲ್ಲ.

ತರೀಕೆರೆಯಲ್ಲಿ ನಡೆದ ಪ್ರಥಮ ಕರ್ನಾಟಕ ಜಾನಪದ ಸಮ್ಮೇಳನದ ಕಾಲದಲ್ಲಿ ಒಂದೆರಡು ದಿನ ವಿರಾಮವಾಗಿ ಅವರೊಡನೆ ಕಳೆದಾಗ ತಮ್ಮ ನೆನಪಿನ ಬುತ್ತಿಯನ್ನು ಬಿಚ್ಚಿ ರುಚಿರುಚಿಯಾಗಿ ನಮಗೆ ಉಣಬಡಿಸಿದರು. ಅಂದಿನ ವಿಚಾರ ಸಂಕಿರಣದಲ್ಲಿ ನಾನು ಪ್ರಸ್ತುತಪಡಿಸಿದ ಪ್ರಬಂಧವನ್ನು (ಜನಪದ ಕಾವ್ಯದಲ್ಲಿ ಪ್ರತಿಮಾ ವಿಧಾನ) ಅವರು ಮೆಚ್ಚಿಕೊಂಡದ್ದಲ್ಲದೆ ಆ ಪದ್ಯಗಳಲ್ಲಿಯ ಪ್ರತಿಮೆಗಳ ಸೊಗಸನ್ನು ಅದೇ ಹೊಸದಾಗಿ ಹೊಳೆದವರಂತೆ ಸವಿದು ಸಂತೋಷಪಟ್ಟರು. ಈ ಬಗೆಯ ಸಹೃದಯತೆಯಿಂದ ಅವರು ನನ್ನ ದೃಷ್ಟಿಯಲ್ಲಿ ಇನ್ನೂ ದೊಡ್ಡವರಾಗಿ ಕಂಡರು.

೧೯೭೬ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯ ಏರ್ಪಡಿಸಿದ್ದ ಜಾನಪದ ಸಮ್ಮೇಳನದ ಅಧ್ಯಕ್ಷರಾಗಿ ಭಾಗವಹಿಸಿ ಅಧ್ಯಾಪಕರು, ವಿದ್ಯಾರ್ಥಿಗಳು, ಜನಸಾಮಾನ್ಯರು ಎಂಬ ಭೇದಭಾವವಿಲ್ಲದೆ ಎಲ್ಲರೊಡನೆ ಒಂದಾಗಿ ಅವರು ನಡೆದುಕೊಂಡ ರೀತಿ ಅನನ್ಯವಾಗಿದ್ದಿತು.

ಗೊರೂರವರ ಹಾಸ್ಯಕ್ಕೆ ಅವರದೇ ಆದ ಮೆರುಗಿದೆ. ನವಿರಾಗಿ ಯಾರ ಮನಸ್ಸನ್ನು ನೋಯಿಸದೆ, ಗುಣದೋಷಗಳನ್ನು ವ್ಯಂಗ್ಯ ಸರಣಿಯಲ್ಲಿ, ಕಟಕಿಯ ಮಾತಿನಲ್ಲಿ ಉಪಾಯವಾಗಿ ಎತ್ತಿ ತೋರಿಸಿದಾಗಲೂ ಅದು ಮನಸ್ಸಿನಲ್ಲಿ ಪ್ರಿಯವಾಗಿ ಉಳಿಯುವಂತೆ ಮಾಡುವುದು ಅವರ ಕಲಾವೈಶಿಷ್ಟ್ಯ. ರಸದ ನೆಲೆಯಲ್ಲಿ ನಿಲ್ಲುವ ಅವರ ತಿಳಿಹಾಸ್ಯದ ಹೇಮಾವತಿಯಲ್ಲಿ ಮಿಂದು ಮನಸ್ಸಿನ ಕೊಳೆಯನ್ನು ತೊಳೆದುಕೊಳ್ಳದ ಕನ್ನಡಿಗ ಹತಭಾಗ್ಯನೆಂದೇ ಹೇಳಬೇಕು. "ಹೇಮಾವತಿ ನಮ್ಮ ಉಸಿರು ನಮ್ಮ ನಾಡಿನ ರಕ್ತ.... ಅದರ ಮೇಲೆ ಬೀಸಿ ಬರುವ ಗಾಳಿ ಜೀವನದಿಂದ ತುಂಬಿರುತ್ತದೆ" ಎಂದು 'ಹೇಮಾವತಿಯ ತೀರದಲ್ಲಿ' ಅವರು ಹೇಳಿದ ಮಾತುಗಳು ಅವರ ಕೃತಿಗಳಿಗೂ ಸರಿಯಾಗಿ ಅನ್ವಯಿಸುತ್ತವೆ. ಪ್ರಬಂಧಗಳಲ್ಲದೆ ಕಥೆ, ಕಾದಂಬರಿ, ಇವುಗಳಲ್ಲಿ ವೈಚಾರಿಕತೆ ಹಾಗೂ ಚಿಂತನಶೀಲತೆಗೂ ಎಡೆಯಿರುವುದನ್ನು ನಾವು ಮರೆಯಬಾರದು. ಪ್ರವಾಸ ಕಥನ, ವಿಮರ್ಶೆ, ಜೀವನಚಿತ್ರ, ಭಾಷಾಂತರ ಪ್ರಕಾರಗಳಲ್ಲಿಯೂ ಅವರ ಸಾಹಿತ್ಯ ಸೃಷ್ಟಿ ಗಮನಾರ್ಹವೆನಿಸಿದೆ.

'ಪು.ತಿ.ನ. ನೂರರ ನೆನಪು' ಕೃತಿಯನ್ನು ಹೊರತಂದ ಶ್ರೀಮತಿ ಕಮಲಾ ನರಸಿಂಹ ಅವರು ಇದೀಗ 'ಹೇಮಾವತಿಯ ಚೇತನ' ಗ್ರಂಥವನ್ನು ಸಂಪಾದಿಸುತ್ತಿರುವದು ಔಚಿತ್ಯಪೂರ್ಣವಾಗಿದೆ. ಯಾಕೆಂದರೆ ಈ ಇಬ್ಬರು ಮಹನೀಯರ ಅಪರೂಪದ ಮೈತ್ರಿಗೂ ಇದು ದ್ಯೋತಕವಾಗಬಲ್ಲದು. 'ದೇವರ ಕರುಣೆ ಮಿತ್ರ ಮುಖೇನ ನಮಗೆ ಮುಟ್ಟುವಂತೆ ಮತ್ತೇತರಿಂದಲೂ ಅಲ್ಲ' ಎಂಬ ಮಾತನ್ನು ಗೊರೂರು ಅವರಿಗೆ ಸಂಬಂಧಪಟ್ಟಂತೆ ಪು.ತಿ.ನ. ಈ ಹಿಂದೆ ಬರೆದಿರುವುದನ್ನು ಇಲ್ಲಿ ನೆನಪಿಸಬಹುದು.

'ಹೇಮಾವತಿಯ ಚೇತನ'

(ಜನ್ಮಶತಮಾನದ ಸಂಭಾಷಣ ಕೃತಿ)

೨೦೦೫

೩೫

# ಎಲ್.ಎಸ್. ಶೇಷಗಿರಿ ರಾಯರು

ವಿಮರ್ಶಕರೆಂದೇ ಸಾಕಷ್ಟು ಪ್ರಸಿದ್ಧರಾಗಿರುವ ಎಲ್.ಎಸ್. ಶೇಷಗಿರಿ ರಾಯರನ್ನು ನಾನು ಮೊದಲು ಗುರುತಿಸಿದ್ದು ಒಬ್ಬ ಒಳ್ಳೆಯ ಸಣ್ಣ ಕಥೆಯ ಲೇಖಕರೆಂದು. ಬಹಳ ಹಿಂದೆ 'ಕಥೆಗಾರ'ದಲ್ಲಿ ಅವರ ಕೆಲವು ಕಥೆಗಳನ್ನು ಓದಿದ್ದರ ನೆನಪಿದೆ. ಈಗಲೂ ಆಗೊಂದು ಈಗೊಂದು ಕಥೆಯನ್ನು ಅವರು ಬರೆದಾಗಲೂ ನಾನು ಕುತೂಹಲದಿಂದ ಓದುವದುಂಟು. ಪರಿಸರವನ್ನು ಭೇದಿಸುತ್ತ ವ್ಯಕ್ತಿಯ ಸ್ವಭಾವವನ್ನು ಸೂಕ್ಷ್ಮವಾಗಿ ವಿಶ್ಲೇಷಿಸುವ ಅವರ ರೀತಿ ತುಂಬಾ ಆಕರ್ಷಕವಾದದ್ದು. ಇತ್ತೀಚಿನ ಅವರ 'ಸತ್ಯನಾರಾಯಣ' ಕಥೆಯ ಬಗ್ಗೆ ('ಉದಯವಾಣಿ' ದೀಪಾವಳಿ ಸಂಚಿಕೆ) ನನ್ನ ಮೆಚ್ಚುಗೆಯನ್ನು ಸೂಚಿಸಿದಾಗ ಶೇಷಗಿರಿರಾಯರು, 'ಸಂಪಾದಕರು ಕಥೆಯನ್ನೇ ಬರೆದುಕೊಡಬೇಕೆಂದು ಒತ್ತಾಯಿಸಿದ್ದರಿಂದ ಆ ಕಥೆ ಬರೆಯಬೇಕಾಯಿತು' ಎಂದರು. 'ಇಂಥ ಒತ್ತಾಯಗಳು ನಿಮಗೆ ಇನ್ನಿಷ್ಟು ಬರಲಿ' ಎಂದು ನಾನೆಂದಾಗ ಅವರು ಸುಮ್ಮನೆ ಮುಗುಳುನಕ್ಕರು.

ಶೇಷಗಿರಿ ರಾಯರನ್ನು ನಾನು ಮೊದಲು ನೋಡಿದ್ದು ೧೯೫೫ರ ಮೈಸೂರು ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ. ವಿಮರ್ಶಾಗೋಷ್ಠಿಯಲ್ಲಿ 'ಸ್ವಾತಂತ್ರ್ಯೋತ್ತರ ಕನ್ನಡ ಕಾದಂಬರಿಗಳ'ನ್ನು ಕುರಿತು ನಾನು ಪ್ರಬಂಧ ಓದಿದ್ದೆ. ಅವರು ಬಹುಶಃ 'ಸ್ವಾತಂತ್ರ್ಯಪೂರ್ವದ ಕನ್ನಡ ಕಾದಂಬರಿಗಳ'ನ್ನು ಕುರಿತು ಮಾತನಾಡಿದರೆಂದು ತೋರುತ್ತದೆ. ಅದು ನನ್ನ ಮುಖ್ಯ ಕ್ಷೇತ್ರವಲ್ಲವಾಗಿದ್ದುದರಿಂದ ನನ್ನ ಪ್ರಬಂಧದ ಬಗ್ಗೆ ನನಗೇ ಅಷ್ಟು ವಿಶ್ವಾಸ ಹುಟ್ಟಿರಲಿಲ್ಲ. ಆದರೂ ಶೇಷಗಿರಿ ರಾಯರು ಅದರಲ್ಲಿಯ ಒಳ್ಳೆಯ ಅಂಶಗಳನ್ನು ಎತ್ತಿ ಹೇಳಿ ನನ್ನ ಸಂಕೋಚವನ್ನು ತಡೆದರು.

ಆಮೇಲಿನ ಇಷ್ಟು ವರ್ಷದ ಅವಧಿಯಲ್ಲಿ ನಾವು ಅನೇಕ ಸಲ ಕೂಡಿದ್ದೇವೆ. ಹಲವಾರು ವಿಚಾರ ಸಂಕಿರಣಗಳಲ್ಲಿ ವಿದ್ವತ್ಪೂರ್ಣವಾದ ಆದರೆ ಯಾವ ಗೊಂದಲವೂ ಇಲ್ಲದ ಅವರ ಸ್ಪಷ್ಟ ವಿಚಾರಸರಣಿಯ ಮಾತುಗಳನ್ನು ಕೇಳಿ ತಲೆದೂಗಿದ್ದೇನೆ. ವಿಸ್ತಾರವಾದ ಓದು, ಆಳವಾದ ವಿಚಾರಪ್ರಜ್ಞೆ ಅವರ ಬರವಣಿಗೆಯಲ್ಲಿ ಸಮರಸಗೊಂಡಿರುವುದನ್ನು ಮೆಚ್ಚಿಕೊಂಡಿದ್ದೇನೆ. 'ಸೃಜನಶೀಲತೆ ಸಾರ್ಥಕ ಬದುಕಿನ ತಿರುಳು ಎಂದು ನನ್ನ ನಂಬಿಕೆ' ಎಂದು ಇತ್ತೀಚೆಗೆ ಅವರು ಒಂದೆಡೆ ಬರೆದದ್ದು, ಸೃಜನಶೀಲತೆ ಹಾಗೂ ವಿಮರ್ಶನ ಪ್ರಜ್ಞೆ - ಎರಡನ್ನೂ ಹದವಾಗಿ ಬೆರೆಸಿಕೊಂಡು ಮಾಗಿದ ಅವರ ವ್ಯಕ್ತಿತ್ವದ ದ್ಯೋತಕವಾಗಿದೆ. ಯಾವುದೇ ಕೆಲಸವನ್ನು ಅವರು

ವಹಿಸಿಕೊಂಡಾಗ ತಮ್ಮ ಹೊಣೆಗಾರಿಕೆಯನ್ನು ಎಷ್ಟೊಂದು ಶ್ರದ್ಧೆಯಿಂದ ಚೊಕ್ಕಟವಾಗಿ ನಿರ್ವಹಿಸುತ್ತಾರೆಂಬುದನ್ನು ಸಾಹಿತ್ಯ ಕಮ್ಮಟಗಳಂಥ ಅನೇಕ ಸಂದರ್ಭಗಳಲ್ಲಿ ನನ್ನ ಹಾಗೆ ಇತರರೂ ಕಂಡುಕೊಂಡಿರಬಹುದಾಗಿದೆ.

ಕನ್ನಡ ಸಾಹಿತ್ಯ ವಿಮರ್ಶೆಯ ಇಂದಿನ ಪ್ರೌಢಾವಸ್ಥೆಗೆ ಶೇಷಗಿರಿ ರಾಯರಂಥವರ ಕೊಡುಗೆಯೂ ಸಾಕಷ್ಟು ಕಾರಣವಾಗಿರುವುದನ್ನು ನಾವು ಮರೆಯುವಂತಿಲ್ಲ. ಹಾಗೆಯೇ ಸಾಹಿತ್ಯದಲ್ಲಿ, ಸಾಹಿತ್ಯ ವಿಮರ್ಶೆಯಲ್ಲಿ ಆಸಕ್ತಿ ಇರುವ ಸಾಮಾನ್ಯ ಓದುಗರಿಗಾಗಿ ಗಮನಹರಿಸಿದವರ ಸಂಖ್ಯೆ ನಮ್ಮಲ್ಲಿ ವಿರಳ. 'ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ' ಯೋಜನೆ ಬೆಂಗಳೂರು ವಿಶ್ವವಿದ್ಯಾಲಯದಿಂದ ರೂಪುಗೊಳ್ಳುವುದಕ್ಕೆ ಇಪ್ಪತ್ತು ವರ್ಷ ಮುಂಚೆಯೇ ಶೇಷಗಿರಿರಾಯರು 'ಕಾದಂಬರಿ-ಸಾಮಾನ್ಯ ಮನುಷ್ಯ' ದಂಥ ಗ್ರಂಥ ಬರೆದದ್ದನ್ನು ನೆನಪಿಡಬೇಕು. ತಮ್ಮ 'ಸಹಚಿಂತನೆ'ಯ ಮೂಲಕ ಕನ್ನಡ ಪ್ರಮುಖ ಅಂಕಣಕಾರರಲ್ಲಿ ಒಬ್ಬರಾಗಿ, ಇದೇ ಬಗೆಯ ಕಾರ್ಯವನ್ನು ಅವರು ಮತ್ತೊಂದು ರೀತಿಯಲ್ಲಿ ಪೂರೈಸಿಕೊಡುತ್ತಿದ್ದಾರೆನ್ನಬಹುದು. ಸಾಹಿತ್ಯ ಸಂಸ್ಕೃತಿಗಳಂತೆಯೇ ನಾಡು, ನುಡಿ ಹಾಗೂ ಸಾಮಾಜಿಕ ಜೀವನದ ಕಾಳಜಿಗಳಿಂದ ಅದು ತನ್ನ ವ್ಯಾಪ್ತಿಯನ್ನು ಹಿಗ್ಗಿಸಿಕೊಂಡಿದೆ.

ಬಸವರಾಜ ಕಟ್ಟೀಮನಿ ಹಾಗೂ ಅವರ ಕೃತಿಗಳನ್ನು ಕುರಿತು ೧೯೬೮ರಲ್ಲಿ ನಾನೊಂದು ಲೇಖನ ಬರೆಯುವ ಸಂದರ್ಭದಲ್ಲಿ, ಅವರಿಗೊಂದು ಪ್ರಶ್ನೆ ಕೇಳಿದ್ದೆ. "ವಿಮರ್ಶೆಯಿಂದ ಲೇಖಕನಿಗೆ ಮಾರ್ಗದರ್ಶನವಾಗುತ್ತದೆಂದು ಹೇಳುವುದರಲ್ಲಿ ನಿಮಗೆ ನಂಬಿಕೆಯಿದೆಯೇ?"

ಅದಕ್ಕೆ ಕಟ್ಟೀಮನಿ ಉತ್ತರಿಸಿದ್ದರು: "ನಿಜವಾದ ವಿಮರ್ಶೆಯಿಂದ ಲೇಖಕನಿಗೆ ಖಂಡಿತ ಮಾರ್ಗದರ್ಶನ ಲಭಿಸುತ್ತದೆ. ನನ್ನ ಮಟ್ಟಿಗೆ ಹೇಳುವುದಾದರೆ ಎಲ್.ಎಸ್. ಶೇಷಗಿರಿ ರಾಯರ ವಿಮರ್ಶೆಗಳಿಂದ ನಾನು ಬಹಳ ಉಪಕೃತನಾಗಿದ್ದೇನೆ.

'ಮಯೂರ'ದಲ್ಲಿಯ ಈ ಲೇಖನವನ್ನೋದಿ ಶೇಷಗಿರಿ ರಾಯರು ಕಟ್ಟೀಮನಿಯವರಿಗೆ ಬರೆದ ಪತ್ರದಲ್ಲಿ (೯-೪-೧೯೬೮) ಈ ಮಾತುಗಳಿವೆ :

"ಸಂದರ್ಶನದಲ್ಲಿ ನನ್ನ ಹೆಸರು ಹೇಳಿದ್ದೀರಿ, ನಿಜವಾಗಿ ನಿಮ್ಮ ಔದಾರ್ಯ ಕಂಡು ಬೆರಗಾದೆ. ಖ್ಯಾತನಾಮರಾದ ಕಾದಂಬರಿಕಾರರೊಬ್ಬರು ತಮಗೆ ಒಬ್ಬ ವಿಮರ್ಶಕರ ಮಾತುಗಳಿಂದ ನೆರವಾಯಿತೆಂದು ಬಾಯಿಬಿಟ್ಟು ಹೇಳಿ, ಅವರನ್ನು ಹೆಸರಿಸುವ ಔದಾರ್ಯ ನಮ್ಮಲ್ಲಿ ಬಹುಮಂದಿಗಿಲ್ಲ. ನೀವು ಹೆಸರು ಹೇಳುವ ಅಗತ್ಯವೂ ಇರಲಿಲ್ಲ."

ವಿಮರ್ಶೆಯನ್ನು ಸಹಿಸುವ ಸಂಸ್ಕೃತಿ ನಮ್ಮಲ್ಲಿ ಇನ್ನೂ ಬಂದಿಲ್ಲ ಎಂದು ಮೊನ್ನೆ ಮೊನ್ನೆಯೇ ವಿಮರ್ಶಕರೊಬ್ಬರು ಸಾರಿ ಹೇಳಿದ್ದುಂಟು. ಈ ಸಂದರ್ಭದಲ್ಲಿ ಮೇಲಿನ ಉದಾಹರಣೆ ಒಂದು ಅಪವಾದವೆಂದು ನನಗೆ ತೋರುವುದಿಲ್ಲ. ಯಾಕೆಂದರೆ ಸೃಷ್ಟಿ ಸಾಹಿತ್ಯ-ವಿಮರ್ಶಾ ಸಾಹಿತ್ಯಗಳ ಬಾಂಧವ್ಯದ ಪ್ರತೀಕವಾಗಿ ನಮಗೆ ಇನ್ನೂ ಕೆಲವು ಇಂಥ ನಿದರ್ಶನಗಳು ದೊರೆಯಬಹುದಾಗಿದೆ.

'ಸೌಜನ್ಯ' (ಅಭಿನಂದನ ಸಂಚಿಕೆ) ೧೯೯೧

೩೬

## ಕೆ.ಎಫ್. ಪಾಟೀಲರ ಆದರ್ಶ

೧೯೩೮-೪೦ರ ಸುಮಾರಿಗೆ ನಾನು ಧಾರವಾಡಕ್ಕೆ ಸಮೀಪದಲ್ಲಿರುವ ಗರಗದ ಪ್ರಾಥಮಿಕ ಶಾಲೆಯಲ್ಲಿ ಆರು ಮತ್ತು ಏಳನೇ ಇಯತ್ತೆ (ಮುಲ್ಕಿ ಪರೀಕ್ಷೆ)ಗಳ ಅಭ್ಯಾಸ ಮಾಡಿದೆ. ಗಾಂಧೀಜಿಯವರ ಮೂಲ ಶಿಕ್ಷಣ ಯೋಜನೆ ಅದೇ ಆಗ ಕೆಳಗಿನ ತರಗತಿಗಳಲ್ಲಿ ಪ್ರಾರಂಭವಾಗಿತ್ತು. ಗರಗದ ಶಾಲೆ ಈ ದಿಸೆಯಲ್ಲಿ ಮಾದರಿಯೆನಿಸಿ ಅನೇಕ ಶಿಕ್ಷಣ ತಜ್ಞರ ಗಮನವನ್ನು ಸೆಳೆದುಕೊಂಡಿದ್ದಿತು. ವಾರಕ್ಕೊಮ್ಮೆ ಪ್ರಭಾತಫೇರಿ, ಹರಿಜನ ಕೇರಿಯ ಸ್ವಚ್ಛತೆ ಮೊದಲಾದ ಕಾರ್ಯಗಳಲ್ಲಿ ಶಿಕ್ಷಕರು ವಿದ್ಯಾರ್ಥಿಗಳೊಂದಿಗೆ ಉತ್ಸಾಹದಿಂದ ಭಾಗವಹಿಸುತ್ತಿದ್ದರು. ದೇಶಭಕ್ತಿಯ ವಾತಾವರಣ ಎಲ್ಲೆಡೆಗೂ ತುಂಬಿ ತುಳುಕುತ್ತಿತ್ತು. ಖಾದಿ ಬಟ್ಟೆ ಸಾಮಾನ್ಯವಾಗಿ ಎಲ್ಲರ ಮೈ ಮೇಲೂ ಕಂಡುಬರುತ್ತಿತ್ತು. ಆಗ ಕಾಂಗ್ರೆಸ್ಸಿನ ಅನೇಕ ಮುಂದಾಳುಗಳು ಆ ಊರಿಗೆ ಬಂದು ಸಭೆಗಳನ್ನು ಏರ್ಪಡಿಸಿ ಭಾಷಣ ಮಾಡಿ ಹೋಗುತ್ತಿದ್ದರು. ಸ್ಥಳೀಯ ಕಾರ್ಯಕರ್ತರಿಗೆ ಅದರಿಂದ ಉತ್ಸಾಹ, ಮಾರ್ಗದರ್ಶನ ದೊರೆಯುತ್ತಿತ್ತು.

ಆ ಸಂದರ್ಭದಲ್ಲಿ ಮಾನ್ಯ ಕೆ.ಎಫ್. ಪಾಟೀಲರು ಒಮ್ಮೆ ಆ ಊರಿಗೆ ಬಂದು ಹೋದ ಹಾಗೆ ನನಗೆ ನೆನಪಿದೆ. ಅಲ್ಲಿ ನಡೆದ ಮೂಲ ಶಿಕ್ಷಣ ಯೋಜನೆಯ ಪ್ರಯೋಗದಲ್ಲಿ ಅವರೂ ಪಾತ್ರ ವಹಿಸಿದ್ದರೆಂದು ತೋರುತ್ತದೆ. ಅವರು ಬರೆದ 'ಶೂರ ಸುಭಾಸಚಂದ್ರ ಬೋಸ' ಎಂಬ ಪುಸ್ತಕವನ್ನು ಶಾಲೆಯ ವಾಚನಾಲಯದಲ್ಲಿ ನಾನು ಓದಿದ್ದೆ. ಸಾಮಾನ್ಯ ನಿಲುವಿನ ಶುಭ್ರ ಖಾದಿಧಾರಿಯಾದ, ಆವೇಶ ಆಡಂಬರಗಳಿಲ್ಲದ ಶ್ರೀ ಕೆ.ಎಫ್. ಪಾಟೀಲರ ಅಂದಿನ ಸೌಮ್ಯ ವ್ಯಕ್ತಿಚಿತ್ರ ಇನ್ನೂ ನನ್ನ ಕಣ್ಣ ಮುಂದೆ ಕಟ್ಟಿದಂತಿದೆ. ಆಮೇಲೆ ನಾನು ಕಾಲೇಜ ವಿದ್ಯಾರ್ಥಿಯಾಗಿದ್ದಾಗ ಕೆಲವು ಸಭೆಗಳಲ್ಲಿ ಕಂಡಿರಬಹುದು. ಹುಬ್ಬಳ್ಳಿಯಲ್ಲಿ ಅವರು 'ವಿಶಾಲ ಕರ್ನಾಟಕ' ವಾರಪತ್ರಿಕೆ ನಡೆಸುತ್ತಿದ್ದಾಗ ನನ್ನ ಒಂದೆರಡು ಕವಿತೆಗಳು ಅದರಲ್ಲಿ ಪ್ರಕಟವಾಗಿದ್ದರೂ ಅವರ ಸಂಪರ್ಕ ಬಂದಿರಲಿಲ್ಲ. ಮುಂದೆ ಹನುಮನಮಟ್ಟಿಯಲ್ಲಿ ಅವರು ಸ್ಥಾಪಿಸಿದ ಗ್ರಾಮೀಣ ಸಂಸ್ಥೆಯಲ್ಲಿ ವಿಶ್ವವಿದ್ಯಾಲಯದ ವಿಸ್ತರಣ ಉಪನ್ಯಾಸ ಶಿಬಿರವನ್ನು ಏರ್ಪಡಿಸಿದಾಗ ಅವರ ಸಮೀಪದ ಸಂಪರ್ಕ ಒದಗಿ ಮನಸ್ಸಿಗೆ ಸಂತೋಷವಾಯಿತು. ಗ್ರಾಮ ಸುಧಾರಣೆ, ಅಸ್ಪೃಶ್ಯತಾ ನಿವಾರಣೆಯ ಬಗೆಗಿನ ಅವರ ವಿಧಾಯಕ ಕಾರ್ಯಗಳು, ಒಕ್ಕಲುತನ, ತೋಟಗಾರಿಕೆ, ಅರಣ್ಯಾಭಿವೃದ್ಧಿಯಲ್ಲಿ ಅವರಿಗಿರುವ ನಿರಂತರ ಶ್ರದ್ಧೆ ಅದಕ್ಕೆ ಪೋಷಕವಾಗಿ ಅವರು ಬರೆದ ಲೇಖನ ಹಾಗೂ ಪುಸ್ತಕಗಳು ನನ್ನ ಮನಸ್ಸನ್ನು ವಿಶೇಷವಾಗಿ ಆಕರ್ಷಿಸಿದವು.

ಇತ್ತೀಚೆಗೆ ಪ್ರಕಟವಾದ ಅವರ 'ನೆನಪಿನ ಒರತೆ' ಗ್ರಂಥವನ್ನೋದಿ, ಪಾಟೀಲರ ವಿಶಿಷ್ಟ ವ್ಯಕ್ತಿತ್ವದ ಕಲ್ಪನೆಯಿಂದ ಅವರ ಬಗ್ಗೆ ಇನ್ನೂ ಹೆಚ್ಚಿನ ಗೌರವ ಉಂಟಾಯಿತು. ಇದು ಅವರ ಆತ್ಮಚರಿತ್ರೆಯ ಮೊದಲ ಸಂಪುಟವಾಗಿದ್ದು ಇನ್ನೂ ಮೂರು ಸಂಪುಟಗಳನ್ನು ಅವರು ಹೊರತರಲಿದ್ದಾರೆ. ಅವರ ಆದರ್ಶದ ಒಳನೋಟಕ್ಕೆ ಇದು ಬೆಳಕಿಂಡಿಯಾಗಿ ಬಾಳ್ವೆಯೇ ಬೆಳಕಾಗಿರುವ ವಾಸ್ತವತೆ ಸೋಜಿಗಗೊಳಿಸುತ್ತದೆ. ಹಳ್ಳಿಯನ್ನು ತಳಹದಿಯಾಗಿಟ್ಟುಕೊಂಡು ನಾಡಿನ ಸಾಮಾಜಿಕ, ರಾಜಕೀಯ ಹಾಗೂ ಆಡಳಿತ ಕ್ಷೇತ್ರಗಳಲ್ಲಿ ಸೇವಾ ಮನೋಧರ್ಮದಿಂದ ತಮ್ಮನ್ನು ಸಂಪೂರ್ಣ ತೊಡಗಿಸಿಕೊಂಡವರಾದುದರಿಂದ ಇದು ಕೇವಲ ಒಬ್ಬ ವ್ಯಕ್ತಿಯ ಆತ್ಮಕಥೆಯಾಗಿರದೆ, ನಾಡಿನ ಸ್ವಾತಂತ್ರ್ಯ ಹೋರಾಟದ, ಸಾಮಾಜಿಕ ಸ್ಥಿತ್ಯಂತರಗಳ, ಹಳ್ಳಿಗಳ ಸ್ಥಿತಿಗತಿಗಳ ಒಂದು ಸಮೀಚೀನವಾದ ಚಾರಿತ್ರಿಕ ದಾಖಲೆಯಾಗಿದೆ. ಅಲ್ಲದೆ ಅನೇಕ ಯೋಗ್ಯ, ಸಮೃದ್ಧ ಸಾಮಾನ್ಯ ವ್ಯಕ್ತಿಗಳಲ್ಲಿಯ ಅಸಾಮಾನ್ಯತೆಯನ್ನು ಗುರುತಿಸಿದ ವ್ಯಕ್ತಿಚಿತ್ರಗಳೂ ಇದರಲ್ಲಿ ಹಾಸುಹೊಕ್ಕಾಗಿ, ಕಲ್ಪನೆಗಿಂತಲೂ ಸ್ವಾರಸ್ಯವಾಗಿ ಹೃದಯಸ್ಪರ್ಶಿಯಾಗಿವೆ. "ಜೀವಿಗಳ ಸಹಜ ಸ್ವಭಾವದ ಸೆಳೆತಗಳ ವೈವಿಧ್ಯತೆಯಲ್ಲಿ ಉಚ್ಚ ಆದರ್ಶದಿಂದ ಕೂಡಿದ ಸೆಳೆತಗಳು ಹೆಚ್ಚಿನ ಕ್ರಿಯಾತ್ಮಕ ಶಕ್ತಿಯನ್ನು ಪಡೆದಿರುತ್ತವೆ" ಎಂಬ ಅವರ ನಿವೇದನೆಯಲ್ಲಿಯ ಮಾತಿಗೆ ಇಲ್ಲಿ ಅನೇಕ ಸಾಕ್ಷಿಗಳು ದೊರೆಯುತ್ತವೆ. ಆಧಾರವಿಲ್ಲದ ಯಾವುದನ್ನೂ ಹೇಳಿಲ್ಲವೆಂಬ ಆತ್ಮವಿಶ್ವಾಸದಿಂದ ಎಲ್ಲ ವಿಷಯಗಳ ಹೊಣೆಗಾರಿಕೆ ಹಾಗೂ ಅದೇ ಪ್ರಕಾರದ ಪ್ರಾಮಾಣಿಕತೆ ಈ ಬರೆಹದ ಉದ್ದಕ್ಕೂ ಕಂಡುಬರುತ್ತದೆ. ನಿರೂಪಿತವಾದ ಘಟನೆಗಳಲ್ಲ ಅವು. ನಡೆದ ಸನ್ನಿವೇಶ, ಸಂದರ್ಭ, ಪರಿಸ್ಥಿತಿಗಳ ಹಿನ್ನೆಲೆಯಲ್ಲಿ ಹೆಚ್ಚು ಅರ್ಥಪೂರ್ಣವಾಗಿವೆ. ಪಾಟೀಲರ ಆದರ್ಶಕ್ಕೆ ಸಾಮಾಜಿಕ ಪ್ರಜ್ಞೆಯ ನೆಲಗಟ್ಟಿರುವುದರಿಂದ ಅದು ಅವಾಸ್ತವವಾಗಿ ತೋರದೆ ಅನುಕರಣೀಯವೆನಿಸಿದೆ. ಅನವಶ್ಯಕವಾಗಿ ತಮ್ಮ ಹೆಚ್ಚುಗಾರಿಕೆಯನ್ನು ಎಲ್ಲಿಯೂ ಹೇಳಿಕೊಳ್ಳದೆ, ಅದರ ಬದಲು ತಮಗನಿಸಿದ ಸ್ವಂತ ಗುಣದೋಷಗಳನ್ನೂ, ದೌರ್ಬಲ್ಯಗಳನ್ನೂ ಮುಕ್ತಮನಸ್ಸಿನಿಂದ ನಿರೂಪಿಸಿರುವುದು ಹೆಚ್ಚು ಸಹಾನುಭೂತಿಯನ್ನೂ ಆತ್ಮೀಯತೆಯನ್ನೂ ಹುಟ್ಟಿಸುತ್ತದೆ, ಬರವಣಿಗೆ "ಸಾಹಿತ್ಯಿಕ ಪ್ರತಿಭೆಯ ಕೊರತೆಯಿಂದಾಗಿ ಅನರ್ಪಿತವಾಗಿರಬಹುದಾಗಿದೆ" ಎಂಬ ಲೇಖಕರ ಸಂದೇಹಕ್ಕೆ ಆಸ್ಪದವಿಲ್ಲದಂತೆ ಇಲ್ಲಿಯ ಸಮೃದ್ಧವಾದ ಅನುಭವ ತನಗೆ ತಕ್ಕ ರೀತಿಯಲ್ಲಿ ನಿರರ್ಗಳವಾಗಿ ಅಭಿವ್ಯಕ್ತಿಗೊಂಡು ಅಲ್ಲಲ್ಲಿ ಸಾಹಿತ್ಯಿಕ ಗುಣವನ್ನು ಪಡೆದುಕೊಂಡಿದೆ.

ಇವರೊಬ್ಬ ವನಗಾವಲು ಸಿಪಾಯಿ (ಫಾರೆಸ್ಟ್‌ಗಾರ್ಡ್) ಯಾಗಬೇಕೆಂದು ನಿರಕ್ಷರಿ ತಂದೆಯ ಆಶೆಯಾಗಿದ್ದರೆ ಮುಂಬೈ ರಾಜ್ಯದ ಅರಣ್ಯ ಉಪಸಚಿವ (೧೯೫೨), ಕರ್ನಾಟಕ ರಾಜ್ಯದ ಅರಣ್ಯ ಇಲಾಖೆಯ ಕ್ಯಾಬಿನೆಟ್ ಸಚಿವ (೧೯೫೮), ಫಾರೆಸ್ಟ್ ಪ್ಲಾಂಟೇಶನ್ ಕಾರ್ಪೋರೇಶನದ ಚೇರಮನ್ (೧೯೭೪)ರಾಗಿ ಪರಿಣಮಿಸಿದ್ದು ಶ್ರೀ ಕಲ್ಲನಗೌಡರಿಗೆ ನಿಷ್ಕಳಂಕ ಸಂಕಲ್ಪ ಶಕ್ತಿಯ ಬಲ ಅಪಾರವಾಗಿರುವುದರಲ್ಲಿ ನಂಬುಗೆ ತಾಳುವಂತಾದುದರಲ್ಲಿ ಆಶ್ಚರ್ಯವಿಲ್ಲ. ಮಹಾತ್ಮಾ ಗಾಂಧಿಯವರು ೧೯೩೪ರಲ್ಲಿ ಹರಿಜನ ಯಾತ್ರೆಗಾಗಿ ಕರ್ನಾಟಕಕ್ಕೆ ಬಂದಾಗ ಮೋಟೇಬೆನ್ನೂರಲ್ಲಿ ಸನ್ಮಾನ ಪತ್ರ ಬರೆದು ಓದಿ, ಅರ್ಪಿಸಿದ ಪಾಟೀಲರು ನಂತರ ಕೈಕೊಂಡ ಕಾರ್ಯಗಳಲ್ಲಿ

ತೋರಿದ ನಿಷ್ಠೆ ಅಸಾಧಾರಣವಾದದ್ದು. ಅಸ್ಪೃಶ್ಯತಾ ನಿವಾರಣೆ ಪವಿತ್ರವಾದ ಆತ್ಮೋನ್ನತಿಯ ಕಾರ್ಯವೆಂಬ ವಿಶ್ವಾಸದಿಂದ ಅವರು ಸಲ್ಲಿಸಿದ ಸೇವೆ ತುಂಬ ಮಹತ್ವದ್ದಾಗಿದೆ. ಈ ಬಗ್ಗೆ ಆಗಿನ ಸೇವಾಭಾವನೆ ಮತ್ತು ಈಗಿನ ಹಕ್ಕಿನ ಭಾವನೆಗಳಲ್ಲಿ ಅಜಗಜಾಂತರ ಭೇದವನ್ನು ಇವರು ಕಂಡಿದ್ದರೂ ಸಾಮಾಜಿಕ ನ್ಯಾಯದ ಹೋರಾಟವು ಈಗ ಸೂಕ್ತವಾಗಿದೆಯೆಂದೇ ಅವರ ಅಭಿಪ್ರಾಯವಾಗಿದೆ. ವಾರದ ಮನೆಗಳಲ್ಲಿ ಊಟ ಮಾಡಿ ವಿದ್ಯಾಭ್ಯಾಸ ಮಾಡಿದ ಇವರಿಗೆ ಮುಂದೆ ಅವರೆಲ್ಲರ ಋಣವನ್ನು ವೈಯಕ್ತಿಕವಾಗಿ ತೀರಿಸಲು ಸಾಧ್ಯವಿಲ್ಲದ್ದರಿಂದ ಅಲ್ಲಲ್ಲಿ ವಿದ್ಯಾರ್ಥಿ ನಿಲಯಗಳನ್ನೂ, ಪ್ರಸಾದ ನಿಲಯಗಳನ್ನೂ ತೆರೆದು ಸಾವಿರಾರು ಮಕ್ಕಳಿಗೆ ಪ್ರಸಾದಕ್ಕೆ ನೆರವೀಯುವ ಕಾರ್ಯವನ್ನು ತಮ್ಮ ಜೀವನದ ಒಂದು ಮುಖ್ಯ ಕರ್ತವ್ಯವೆಂದು ಭಾವಿಸಿ ಸೇವೆ ಸಲ್ಲಿಸಿದ್ದು ಇಂದಿಗೂ ಆದರ್ಶವೆನಿಸಿದೆ. ಅಳುಕು ಮನದ, ಹಿಂಜರಿಯುವ ಸ್ವಭಾವದ ತಮ್ಮ ದೋಷ ದೌರ್ಬಲ್ಯಗಳ ಅರಿವೂ ಅವರಿಗಿದೆ. "ಸ್ವಾತಂತ್ರ್ಯಕ್ಕಾಗಿ ಜೀವನ ಮುಡಿಪಿಟ್ಟವರಲ್ಲಿ ಅನೇಕರಿಗೆ ಒದಗಿದ ಸಾಮಾನ್ಯವಾದ ಸಂಕಷ್ಟಗಳಲ್ಲದೆ, ನನ್ನ ಸ್ವಭಾವ ದೋಷದಿಂದ ನಾನಾಗಿ ಆಮಂತ್ರಿಸಿಕೊಂಡಂತಿರುವ ಸಂಕಷ್ಟಗಳೂ ಬಹಳ. ಅವ್ಯವಹಾರಿಕವಾದ ಹುಚ್ಚು ಆದರ್ಶಗಳ ಬೆನ್ನಟ್ಟಿ ಮೈಮೇಲೆ ಮರ ಕೆಡವಿಕೊಂಡಂತೆ ತೊಂದರೆಗಳನ್ನು ನಾನಾಗಿಯೇ ಬರಮಾಡಿಕೊಂಡಿದ್ದೇನೆ." ಪಕ್ಷ ಪಂಗಡ ಕಟ್ಟುವಲ್ಲಿ, ಗುಂಪುಗಾರಿಕೆ, ಗತ್ತುಗಾರಿಕೆಯಲ್ಲಿ, ಅನಾಸಕ್ತರಾದ ಪಾಟೀಲರಂಥವರಿಗೆ ಇಂಥ ತೊಂದರೆಗಳು ಇನ್ನೂ ಹೆಚ್ಚೆಂದೇ ಹೇಳಬಹುದು. ಅವುಗಳನ್ನೆಲ್ಲ ಎದುರಿಸಿ, ಸಹಿಸಿಕೊಂಡು ತಮ್ಮ ದಾರಿಯಲ್ಲಿ ತಾಳ್ಮೆಯಿಂದ ಮುನ್ನಡೆದಿರುವುದು ಅವರ ಜೀವನದ ಮುಖ್ಯ ತಾತ್ವಿಕ ಧೋರಣೆಯಾಗಿದೆ. ರಾಷ್ಟ್ರದ ಕೆಲಸವನ್ನು ಪ್ರಾಮಾಣಿಕವಾಗಿ ತ್ಯಾಗ ಸೇವಾ ಭಾವನೆಗಳಿಂದ ಮಾಡಿದ್ದೇನೆಂಬ ಸಂತಸ ಅವರಿಗಿದ್ದೇ ಇದೆ.

ಎಲ್ಲೆಂದರಲ್ಲಿ ಕಂಡುಬರುತ್ತಿರುವ ಕನ್ನಡ ಪ್ರಾಥಮಿಕ ಶಾಲೆಗಳ, ಕಟ್ಟಡ ಸೌಲಭ್ಯಗಳ ಇಂದಿನ ದುರವಸ್ಥೆಯನ್ನು ಕಂಡಾಗ, ೧೯೩೯ರಷ್ಟು ಹಿಂದೆಯೇ ಶ್ರೀ ಪಾಟೀಲರು ಧಾರವಾಡ ಜಿಲ್ಲಾ ಸ್ಕೂಲಬೋರ್ಡ ಚೇರಮನ್ನರಾಗಿದ್ದಾಗ ಶಾಲಾ ಕಟ್ಟಡಗಳ ನಿರ್ಮಾಣ ಕಾರ್ಯ ಭರದಿಂದ ನಡೆದು, ಆ ಕಾಲಕ್ಕೆ ಧಾರವಾಡ ಜಿಲ್ಲಾ ಬೋರ್ಡು ಮುಂಬಯಿ ಪ್ರಾಂತದ ಶಿಕ್ಷಣ ಇಲಾಖೆಯಲ್ಲಿ ಶಾಲಾ ಕಟ್ಟಡಗಳ ವಿಷಯದಲ್ಲಿ ಪ್ರಥಮ ಸ್ಥಾನ ಪಡೆದದ್ದು ಗಮನಾರ್ಹ ಸಂಗತಿಯಾಗಿದೆ. ಪ್ರಾಥಮಿಕ ಶಾಲೆಗಳ ಸಂಖ್ಯಾ ಹೆಚ್ಚಳ, ಗಾವಠಿ ಶಾಲೆಗಳು ಬೋರ್ಡಿನ ಶಾಲೆಗಳಾಗಿ ಪರಿವರ್ತನಗೊಂಡುದು ಹಾಗೂ ಅತ್ಯಲ್ಪ ಅವಧಿಯಲ್ಲಿ ತಜ್ಞ ಶಿಕ್ಷಕರ ನೆರವಿನಿಂದ ಉತ್ತಮ ಪಠ್ಯಪುಸ್ತಕಗಳು ರಚನೆಗೊಳ್ಳುವಂತಾದುದು ಪಾಟೀಲರ ಅತ್ಯಂತ ಮಹತ್ವದ ರಾಷ್ಟ್ರೀಯ ಭಾವನೆ ಕುದುರಿಸುವ ಸಾಧನೆಯೆಂದು ಪರಿಗಣಿಸಬೇಕಾಗುತ್ತದೆ.

ರಾಜಕೀಯ ಮುಂದಾಳುಗಳು ತಮ್ಮ ತಮ್ಮ ಹಳ್ಳಿಗಳನ್ನು ಮರೆತು ಬೆಂಗಳೂರಿನಂಥ ನಗರಗಳಲ್ಲಿ ತಮ್ಮ ಭವಿಷ್ಯದ ಸೌಧವನ್ನು ಕಟ್ಟಿಕೊಂಡಿರುವುದು ಇಂದು ಸಾಮಾನ್ಯ ದೃಶ್ಯವಾಗಿರುವಾಗ, ಶ್ರೀ ಪಾಟೀಲರ ಆದರ್ಶವು ಆ ದಿಶೆಯಲ್ಲಿ ಮಾರ್ಗದರ್ಶಿಯಾಗಿದೆ. ೧೯೩೬ ರಿಂದ ಮುಂದೆ ಸ್ವತಂತ್ರವಾಗಿ ವಿಧಾಯಕ ಕಾರ್ಯ ಮಾಡಲು ಅವರು ತಮ್ಮ

ಕಾಕೋಳ ಗ್ರಾಮವನ್ನೇ ಆಯ್ಕೆ ಮಾಡಿಕೊಂಡರು. ಸಾಧನ ಮಾರ್ಗಗಳ ಪರಿಶುದ್ಧತೆ ಸರಳತೆಗಳಿಗೆ ಅನುಗುಣವಾದ ಪ್ರಮಾಣದಲ್ಲಿ ಫಲ ಸಿದ್ಧಿಸುವದೆಂಬ ಗಾಂಧೀಜಿಯವರ ದಾರಿಯೇ ಇವರನ್ನು ಮೊದಲಿನಿಂದಲೂ ಆಕರ್ಷಿಸಿದ್ದಿತು. ಅಧಿಕಾರ ಬಲದಿಂದ ಮಾಡಿದ ಕಾರ್ಯಗಳಿಗಿಂತ, ಅಧಿಕಾರವಿಲ್ಲದಾಗಿನ ನಿಷ್ಠಾವಂತ ಸೇವೆಯ ಬೆಲೆಯನ್ನು ಪಾಟೀಲರಂಥವರ ಉದಾಹರಣೆಯಿಂದ ಮನಗಾಣಬೇಕಾಗುತ್ತದೆ. ಈ ಹಳ್ಳಿಯಲ್ಲಿ ಅವರು ಕೈಕೊಂಡ ಹರಿಜನರ ಹಾಗೂ ಲಂಬಾಣಿಗರ ಸೇವೆ, ಶ್ರಮದಾನದಿಂದ ರೂಪುಗೊಂಡ ರಸ್ತೆ, ಬಾವಿ, ಪ್ರಾಥಮಿಕ ಶಾಲಾ ಕಟ್ಟಡ ಇವೇ ಮೊದಲಾದವು ಮಹತ್ವದ ಬುನಾದಿ ಕಾರ್ಯಗಳಾಗಿವೆ. ಜೊತೆಗೆ ಸಾರ್ವಜನಿಕ ಸೇವೆಯ ಮಹತ್ವದ ತತ್ವವೊಂದನ್ನು ಈ ಮೂಲಕ ತಮ್ಮಲ್ಲಿ ಅರಗಿಸಿಕೊಂಡುದು ಮುಖ್ಯವಾಗಿ ಅರಿಯಬೇಕಾದ ಸಂಗತಿಯಾಗಿದೆ. ಆಗಿನ ಆಳುಗಳ ಹಾಜರಿ ಪುಸ್ತಕ, ಪಗಾರ ವಿತರಣೆ ಮೊದಲಾದ ಲೆಕ್ಕಪತ್ರಗಳನ್ನು ಈಗಲೂ ಕಾದಿರಿಸಿರುವುದು ಅವರ ಕಾರ್ಯದಕ್ಷತೆ ಹಾಗೂ ಪ್ರಾಮಾಣಿಕತೆಗೆ ಸಾಕ್ಷಿಯಾಗಿದೆ. ಅಂದಿನಿಂದ ಇಂದಿನವರೆಗೂ ಆ ಊರಲ್ಲಿ ಅಸ್ಪೃಶ್ಯರೊಡನೆ ಸವರ್ಣಿಯರೂ ಸಂಕೋಚವಿಲ್ಲದೆ ಬಾವಿಯ ನೀರನ್ನು ಬಳಸುತ್ತಿರುವ ದೃಶ್ಯ ಯಾರಿಗೆ ಸಂತೋಷವುಂಟು ಮಾಡದು? ಅಂಥ ಒಂದು ಸಣ್ಣ ಹಳ್ಳಿಯಿಂದ ೩೫-೪೦ ಜನ ಹರಿಜನರು ೧೯೪೨ರ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸುವಂತಾದುದು ಸಣ್ಣ ವಿಷಯವಲ್ಲ. ಆಗಿನ ಮೈಸೂರು ರಾಜ್ಯಕ್ಕೆ ಸೇರಿದ ಜೋಗದ ಜಲಪಾತದಿಂದ ಮುಂಬೈ ರಾಜ್ಯ ಕ್ಷೇತ್ರಕ್ಕೆ (ಕಾಕೋಳಕ್ಕೆ) ಮೊಟ್ಟ ಮೊದಲಿಗೆ ವಿದ್ಯುಚ್ಛಕ್ತಿ ಬರುವಂತೆ ಮಾಡಿದ ಕಾರ್ಯವಂತೂ ಅವಿಸ್ಮರಣೀಯವೆನಿಸಿದೆ.

೧೯೪೫ರ ವರೆಗಿನ, ಅಂದರೆ ತಮ್ಮ ಜೀವನದ ಸುಮಾರು ೪೦ ವರ್ಷಗಳ 'ನೆನಪಿನ ಒರತೆ' ಅನೇಕ ದೃಷ್ಟಿಗಳಿಂದ ಒಂದು ಮಹತ್ವದ ದಾಖಲೆಯಾಗಿದೆ. ತಮ್ಮ ಜೀವನದ ವಿಶ್ಲೇಷಣೆಯಿಂದ ಅವರು ಕಂಡುಕೊಂಡ 'ಜೀವನ ಪ್ರೇರಕ ಶಕ್ತಿದಾಯಕ ಸೆಳೆತ'ಗಳನ್ನು ನಾಲ್ಕು ಭಾಗಗಳಾಗಿ ಅವರೇ ಹೀಗೆ ವಿಂಗಡಿಸಿದ್ದಾರೆ.

೧. ನಾಡಿನ ಸ್ವಾತಂತ್ರ್ಯಕ್ಕಾಗಿ ಯಾವ ತ್ಯಾಗಕ್ಕೂ ಸಿದ್ಧವಾಗುವುದು.

೨. ನಾಡ ಸಮೃದ್ಧಿಗಾಗಿ ಅತ್ಯವಶ್ಯಕವಿದ್ದ, ಕರ್ನಾಟಕ ಏಕೀಕರಣಕ್ಕಾಗಿ ದುಡಿಯುವುದು.

೩. ಸಾಮಾನ್ಯ ಜನ ಹಿತೋದ್ದೇಶ ಯೋಜನೆಯನ್ನು ರಚಿಸಿ ಸಾಮಾಜಿಕ ನ್ಯಾಯ ದೊರಕಿಸುವ ಕ್ರಮಗಳನ್ನು ಅನುಷ್ಠಾನಕ್ಕೆ ತರಲು ದುಡಿಯುವುದು.

೪. ನ್ಯಾಯ ನಿಷ್ಠುರವಾದ ದಕ್ಷ ಆಡಳಿತ ರೂಪಿಸುವಲ್ಲಿ ಕಾಯಕ ತತ್ವವನ್ನಾಚರಿಸುತ್ತ ಫಲಾಪೇಕ್ಷೆ ಇಲ್ಲದೆ ನಿರತನಾಗುವುದು.

"ನಾನು ಎಂಬ ಶಬ್ದ ಬಂದಲ್ಲೆಲ್ಲ ನೈಮಿತ್ಯವಾಗಿ ಆ ಪ್ರಸಂಗದಲ್ಲಿ ಬಂದ ಯಾವುದೋ ಒಂದು ವ್ಯಕ್ತಿ ಎಂದು ಪರಿಗಣಿಸಿಕೊಂಡು ಓದಿದರೆ ಸಾಕು" ಎಂಬ ಅವರ ಈ ಆತ್ಮಕಥೆಯ ನಿವೇದನೆಯಲ್ಲಿ ನಿರಹಂಕಾರ ಭಾವ ಎದ್ದು ಕಾಣುತ್ತದೆ. ಇದರ ಜೊತೆಗೆ ಮಾನವೀಯ ಅನುಕಂಪ, ಸೇವಾಭಾವನೆ ಹಾಗೂ ಆದರ್ಶಕ್ಕಾಗಿ ಅರ್ಪಣಾ ಮನೋಭಾವ ಈ ಗುಣ

ಪ್ರಕಾಶದಿಂದ ಈ ಆತ್ಮಚರಿತ್ರೆ ಇಂದಿನ ಪೀಳಿಗೆ ಮನನ ಮಾಡುವಂತಿದೆ. ಮುಂದೆ ಬರಲಿರುವ ಮೂರು ಸಂಪುಟಗಳನ್ನು ಆತುರದಿಂದ ನಿರೀಕ್ಷಿಸುವಂತೆ ಈ ಕೃತಿ ಪ್ರೇರೇಪಿಸುತ್ತದೆ. ಎಲ್ಲ ಸಂಪುಟಗಳೂ ಬೆಳಕಿಗೆ ಬಂದಾಗ ಹಲವಾರು ದೃಷ್ಟಿಗಳಿಂದ ಕನ್ನಡಕ್ಕೆ ಅದೊಂದು ಅಪೂರ್ವ ಕೊಡುಗೆಯಾಗುವುದರಲ್ಲಿ ಸಂದೇಹವಿಲ್ಲ. 'ನೆನಪಿನ ಒರತೆ'ಯ ಮೂಲಕ ಅವರು ಒಂದು ಬಂಗಾರದ ಖಣಿಯನ್ನೇ ತೋಡುತ್ತಿದ್ದಾರೆಂಬುದನ್ನು ಸ್ವತಃ ಪಾಟೀಲರೇ ಅರಿತಿರಲಾರರು.

'ಚಿರ ಚೇತನ'
(ಅಭಿನಂದನ ಗ್ರಂಥ)
೧೯೮೯

## ೩೭

# ಬಹುಮುಖ ಪ್ರತಿಭೆಯ ಸಿ.ಪಿ.ಕೆ.

ಸಿ.ಪಿ.ಕೆ.ಯವರನ್ನು ನಾನು ಮೊದಲು ಕಂಡದ್ದು ಯಾವಾಗ ಎಂಬುದು ಅಷ್ಟು ನೆನಪಿಲ್ಲ. ಆದರೆ ಇಷ್ಟು ವರ್ಷಗಳ ನಂತರವೂ ಅವರ ಸೌಮ್ಯವಾದ, ಸೌಜನ್ಯಪೂರ್ಣ ಮೆಲುನಗೆ ಮಾಸದಂತಿರುವುದನ್ನು ಕಂಡು ಸಂತೋಷಪಟ್ಟಿದ್ದೇನೆ. ನನ್ನ ಒಂದು ಕವನ ಸಂಗ್ರಹವನ್ನೂ (ನೆಲ-ಮುಗಿಲು) ಗದ್ಯಕೃತಿಯನ್ನೂ (ಸಾಹಿತ್ಯಚಿಂತನ) ಅವರು ಬಹಳ ಹಿಂದೆಯೇ ಪ್ರಬುದ್ಧ ಕರ್ಣಾಟಕದಲ್ಲಿ ವಿಮರ್ಶೆಮಾಡಿದ್ದರು. ಆ ಸಹೃದಯತೆ ಹಾಗೂ ವಿಮರ್ಶೆಯ ರೀತಿ ಹೆಚ್ಚಿನ ಮೆಚ್ಚುಗೆಗೆ ಕಾರಣವಾಯಿತು.

ನಮ್ಮನ್ನು ಸಮೀಪಕ್ಕೆ ತಂದದ್ದು, ಸ್ನೇಹ ಸಂವರ್ಧನೆಗೆ ಪ್ರೇರಕವಾದದ್ದು ಬಹುಶಃ ಕಾವ್ಯವೇ ಇರಬೇಕು. ಅಂತಃಕರಣವನ್ನು ಹಾಗೆ ಸೆಳೆಯುವ ಶಕ್ತಿ ಮತ್ತೆ ಇನ್ನಾವುದಕ್ಕಿದೆ?

ಯಾವುದೊ ನೀಲಿಮೆಯಾಚೆಯ ಲೋಕ?
ಅದರ ದಿವ್ಯ ಬೆಳಕು
ನಮ್ಮ ಮನೆಗೆ ಹಗಲಿರುಳು ಜಿನುಗುತಿರೆ
ನಡೆಯಲಿಹುದು ಬದುಕು

ತಮ್ಮ ಕಾವ್ಯರಚನೆಯ ಪ್ರಾರಂಭದಲ್ಲಿಯೇ ಈ ಬಗೆಯ ಅರಿವನ್ನು, ಅನುಭವವನ್ನು ಅವರು ಪಡೆದವರು.

ಬಿಗಿದ ಮುಖವನ್ನು ಸಡಿಲುಗೊಳಿಸಲು, ಗೆಳೆಯ
ನೋಡದಿರು ಬಿರುಗಣ್ಣಿನಿಂದ ಇಳೆಯ

ಎಂಬ ಒಳದನಿಯಿಂದ ಓದುಗರ ಮನವನ್ನು ಮಿಡಿದವರು

ತಲೆಬಾಗೋಣ ತೆಂಗಿನ ಮರಕ್ಕೆ
ಪಾರ್ಥೇನಿಯಂ ಗಿಡಕ್ಕಲ್ಲ

ಎಂಬ ಆರೋಗ್ಯಕರ ನಿಲುವನ್ನು ತಾಳಿದವರು. ಕಾವ್ಯಪಂಥ ಅಂತವಿಲ್ಲದ್ದು, ಅದರ ಗುರಿ ಅಗಮ್ಯ ಎಂದು ನಂಬಿದವರು. "ನಿಜ ಹೇಳಬೇಕೆಂದರೆ, ನನ್ನ ಕಾವ್ಯ ನನಗೆ ತೃಪ್ತಿಕೊಟ್ಟಿಲ್ಲ; ನನ್ನ ವಿಮರ್ಶೆ ಕೊಟ್ಟಿರುವಷ್ಟು ತೃಪ್ತಿಯನ್ನೂ ಕೂಡ" ಎಂದು ಈಚೆಗೆ ಪ್ರಕಟವಾದ ಕವನ

ಸಂಗ್ರಹದಲ್ಲಿ ಹೇಳಿಕೊಂಡಿದ್ದಾರೆ. ಈ ಬಗೆಯ ಆತ್ಮವಿಮರ್ಶೆ ಆರೋಗ್ಯಕರವಾಗಿರುವಂತೆಯೇ ನಿಜವಾದ ಕವಿ-ಕಲಾವಿದನ ಲಕ್ಷಣವೂ ಆಗಿದೆ.

ಅಂದಹಾಗೆ ಸಾಹಿತ್ಯ ವಿಮರ್ಶೆ ಅವರಿಗೆ ತೃಪ್ತಿ ಕೊಟ್ಟಿರುವುದರಲ್ಲಿ ಸಂದೇಹವಿಲ್ಲ. ಅಲ್ಲಿ ಅವರ ಸಾಮರ್ಥ್ಯ ಚೆನ್ನಾಗಿ ವ್ಯಕ್ತವಾಗಿದೆ. ಅಧ್ಯಯನ, ಆಲೋಚನ, ಪರಿಭಾವನೆ ಮೊದಲಾದವು ಅವರ ಹತ್ತಾರು ವಿಮರ್ಶಾ ಕೃತಿಗಳಲ್ಲಿ ತಮ್ಮ ತಮ್ಮ ಅರ್ಥಪೂರ್ಣತೆಯನ್ನು ಕಂಡುಕೊಂಡಿವೆ. ಪೌರ್ವಾತ್ಯ ಹಾಗೂ ಪಾಶ್ಚಾತ್ಯ ಕಾವ್ಯ ಮೀಮಾಂಸೆ ಹಾಗೂ ಸಾಹಿತ್ಯ ವಿಮರ್ಶೆಯ ತತ್ತ್ವಗಳನ್ನು ಅರಗಿಸಿಕೊಂಡ ಅವರ ಬರವಣಿಗೆ ಸಮತೂಕದ ನಿಲುವಿನಿಂದ ಕೃತಿನಿಷ್ಠವಾಗಿದೆ; ಸಮಗ್ರದೃಷ್ಟಿಯನ್ನೂ ಅಳವಡಿಸಿಕೊಂಡಿದೆ. ಡಾ|| ಜಿ.ಎಸ್.ಎಸ್. ನಂತರದ ಪೀಳಿಗೆಯ ಗಣ್ಯ ವಿಮರ್ಶಕರಲ್ಲಿ ಸಿ.ಪಿ.ಕೆ. ಒಬ್ಬರು ಎಂದರೆ ತಪ್ಪಾಗದು.

ಇಂಥ ವಿಮರ್ಶೆಗೆ ಕನ್ನಡದ ಕ್ಷೇತ್ರವನ್ನು ಇನ್ನಷ್ಟು ಹದಗೊಳಿಸಿ ಪೋಷಿಸಲು ಇಂಗ್ಲಿಷ್ ಹಾಗೂ ಸಂಸ್ಕೃತದಿಂದ ಅವರು ಅನುವಾದಿಸಿದ ಕೃತಿಗಳು ಅತ್ಯಂತ ಮೌಲಿಕವಾದವುಗಳು.

ಅವರು ಪ್ರಕಟಿಸಿರುವ ಕೃತಿಗಳ ಸಂಖ್ಯೆ ನೂರ ಇಪ್ಪತ್ತೈದಕ್ಕೂ ಮಿಕ್ಕಿದೆ. ಅವರ ನೂರೊಂದನೆಯ ಕೃತಿಯನ್ನು ಬಿಡುಗಡೆಗೊಳಿಸುವ ಸದವಕಾಶ ನನಗೆ ಕೆಲ ವರ್ಷಗಳ ಹಿಂದೆ ಒದಗಿದ್ದಿತು. ಸಂಖ್ಯೆ ಏರಿದಂತೆ ಗುಣವೂ ಏರುತ್ತ ಹೋಗಿರುವುದು ಈ ಕೃತಿಗಳ ವೈಶಿಷ್ಟ್ಯ. ಗಾತ್ರದಲ್ಲಿ ಕೆಲವು ಚಿಕ್ಕವೂ, ಕೆಲವು ದೊಡ್ಡವೂ ಇರಬಹುದು. 'ಮಹಾಕವಿಯೊಡನೆ ಮಾತುಕತೆ' ಎಂಬುದು ಚಿಕ್ಕದಾಗಿದ್ದರೂ ಪ್ರಾಮಾಣಿಕವೂ ಅಧಿಕೃತವೂ ಆದ ದಾಖಲೆಯಿಂದಾಗಿ ಅದೊಂದು ಹೊಸಬಗೆಯ ಪ್ರಯತ್ನ ಎಂಬುದನ್ನು ಅಲ್ಲಗಳೆಯುವಂತಿಲ್ಲ. ಹಾಗೆಯೇ 'ಆತ್ಮಚರಿತ್ರೆ'ಯ ಮೌಲ್ಯವನ್ನು ಪಡೆಯುವ ಸಾಧ್ಯತೆಯುಳ್ಳ 'ಅಂತರತಮ' ವಚನಗಳು. ಅದೇ ಪುಸ್ತಕದ (೧೯೭೬) ನಿವೇದನೆಯಲ್ಲಿ ಸಿ.ಪಿ.ಕೆ. ಹೇಳಿದ್ದಾರೆ : "ಇದುವರೆಗಿನ ಸಾಧನೆ ನನಗೆ ಅಮಲೇರಿಸಿಲ್ಲ. ತೃಪ್ತಿತಂದಿಲ್ಲ. ಆದ್ದರಿಂದ ವಾಙ್ಮಯ ವ್ಯವಸಾಯವನ್ನು ಇನ್ನೂ ಮಿಗಿಲಾಗಿ, ಬಹುಮುಖವಾಗಿ ಮುಂದುವರಿಸಬೇಕೆಂಬ ಹೇರಾಸೆ ನನ್ನದು". ಪನ್ನೆರಡು ವರ್ಷಗಳ ನಂತರವೂ ಅವರು ಅದೇ ಆಶೆಯನ್ನಿಟ್ಟುಕೊಂಡಿದ್ದಾರೆಂದು ನಾನು ಭಾವಿಸಿದ್ದೇನೆ. ಅವರ ಆಸೆ ಫಲಿಸಲೆಂಬುದು ಸಾಹಿತ್ಯಾಸಕ್ತರೆಲ್ಲರ ಹಾರೈಕೆ. ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿಗೆ ಪಾತ್ರರಾದ ಅವರಿಗೆ ಅಭಿನಂದನೆಗಳನ್ನು ಸಲ್ಲಿಸುತ್ತ ಇನ್ನೂ ಹೆಚ್ಚಿನ ಸನ್ಮಾನವನ್ನು ಅವರ ನೂತನ ಕೃತಿಗಳು ಅವರಿಗೆ ತಂದುಕೊಡಲಿ ಎಂದು ಹೃದಯತುಂಬಿ ಹಾರೈಸುತ್ತೇನೆ.

'ಸಾರ್ಥಕ'

(ಅಭಿನಂದನ ಗ್ರಂಥ)

೧೯೯೦

೩೮

## ಗೃಹಸ್ಥ ಸ್ವಾಮಿ

ಡಾ. ತಿಪ್ಪೇರುದ್ರಸ್ವಾಮಿಯವರನ್ನು ಮೊಟ್ಟಮೊದಲು ನಾನು ಕಂಡದ್ದು ಮೈಸೂರಿನ 'ಉದಯರವಿ'ಯಲ್ಲಿ ಎಂಬುದನ್ನು ಈಗ ನೆನೆಸಿಕೊಂಡರೆ ನನಗೇ ಆಶ್ಚರ್ಯವಾಗುತ್ತದೆ. ೧೯೫೫ ಮೈಸೂರಿನಲ್ಲಿ ನೆರವೇರಿದ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಹೋದಾಗ, ಬಸವರಾಜ ಕಟ್ಟೀಮನಿಯವರೊಂದಿಗೆ ಪ್ರಥಮ ಸಲ ನಾನು ಕುವೆಂಪು ಅವರನ್ನು ಕಾಣಲು ಅವರ ಮನೆಗೆ ಹೋಗಿದ್ದೆ. ಆ ಸಂದರ್ಭದಲ್ಲಿ ನನ್ನ ಸಮವಯಸ್ಕರೊಬ್ಬರು ಕುವೆಂಪು ಅವರಿಂದ ಶ್ರೀ ರಾಮಾಯಣ ದರ್ಶನಂ ಸಂಪುಟವನ್ನು ವಿನಯಪೂರ್ವಕವಾಗಿ, ಅವರ ರುಜುವಿನೊಂದಿಗೆ ಪಡೆದುಕೊಂಡು ಹೋದದ್ದನ್ನು ಕಂಡೆ. ಅವರು ಎಚ್. ತಿಪ್ಪೇರುದ್ರಸ್ವಾಮಿ, ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಅಧ್ಯಾಪಕರು ಎಂಬುದು ಆಮೇಲೆ ತಿಳಿಯಿತು. ಕುವೆಂಪು ಅವರ ಸಮಕ್ಷಮದಲ್ಲಿ ಮಾತಿಲ್ಲದೆ ಪರಸ್ಪರರನ್ನು ಕಂಡುಕೊಂಡ ಆ ಸಂದರ್ಭ ಈಗ ಹೆಚ್ಚು ಅರ್ಥಪೂರ್ಣವಾಗಿ ನನಗೆ ಗೋಚರಿಸುತ್ತಿದೆ.

ಆಮೇಲೆ ಬೇರೆ ಸಂದರ್ಭದಲ್ಲಿ ಸ್ವಾಮಿಯವರ ಪರಿಚಯವಾಯಿತು. ನನ್ನ ವಿದ್ಯಾಗುರುಗಳಾದ ಪ್ರೊ. ಮಾಳವಾಡರು ಅವರ ಮಹಾಪ್ರಬಂಧಕ್ಕೆ ('ಶರಣರ ಅನುಭಾವ ಸಾಹಿತ್ಯ') ಮಾರ್ಗದರ್ಶಕರಾದುದರಿಂದ ಸ್ವಾಮಿಯವರು ಧಾರವಾಡಕ್ಕೆ ಬಂದ ಸಲಕ್ಕೊಮ್ಮೆ ಸಾಮಾನ್ಯವಾಗಿ ನಾವು ಭೆಟ್ಟಿಯಾಗುತ್ತಿದ್ದೆವು. ನಮ್ಮ ಸ್ನೇಹ ಗಾಢವಾಗಲು ಹೆಚ್ಚು ಸಮಯವೇನೂ ಬೇಕಾಗಲಿಲ್ಲ. ಪ್ರೊ. ಮಾಳವಾಡರು ತಿಪ್ಪೇರುದ್ರಸ್ವಾಮಿಯವರಿಗೆ ಪತ್ರ ಬರೆಯುವಾಗ ಈಗಲೂ 'ತಿ.ರು. ಸ್ವಾಮಿ' ಎಂದೇ ಸಂಬೋಧಿಸುತ್ತಿದ್ದರು. ಹೀಗೆ ಸ್ವಾಮಿಯವರು ಗುರುವಿನಿಂದ ಶ್ರೀಕಾರ ಪಡೆದವರು.

ಪ್ರಥಮದಲ್ಲಿಯೇ ನನ್ನನ್ನು ಆಕರ್ಷಿಸಿದ್ದು ಸ್ವಾಮಿಯವರ ಸರಳ ಹಾಗೂ ನಿರಾಡಂಬರ ವ್ಯಕ್ತಿತ್ವ. ಇಂದಿನವರೆಗೂ ನಾನು ಅದರಲ್ಲಿ ಯಾವ ಹೆಚ್ಚು ಕಡಿಮೆಯನ್ನೂ ಕಂಡಿಲ್ಲ. ಅವರ ನಡೆ-ನುಡಿಯಲ್ಲಿ, ಉಡಿಗೆ-ತೊಡಿಗೆಯಲ್ಲಿ, ಮೃದುವಾದ ಮುಗುಳು ನಗೆಯಲ್ಲಿ ಅದು ತನ್ನ ಶುಭ್ರತೆಯನ್ನು ಕಾಯ್ದುಕೊಂಡು ಬಂದಿದೆ. ನಮ್ರತೆ ಅವರ ಪಾಂಡಿತ್ಯ-ಪ್ರತಿಭೆಗಳಿಗೆ ಹೆಚ್ಚಿನ ಮೆರುಗನ್ನು ನೀಡಿದೆ. ಅವರ ಬರವಣಿಗೆಯ ವೈಪುಲ್ಯ ಹಾಗೂ ವೈವಿಧ್ಯವನ್ನು ಕಂಡು ನಾನು ಅನೇಕ ಸಲ ಅಚ್ಚರಿಪಟ್ಟದ್ದುಂಟು. ಸೃಜನ, ಸಂಶೋಧನ, ವಿಮರ್ಶೆ ಈ ಮೂರೂ ಕ್ಷೇತ್ರಗಳಲ್ಲಿ, ಕಳೆದು ಮೂರು ದಶಕಗಳಲ್ಲಿ ಅವರು ಗೈದಿರುವ ಸಾಧನೆ ನಿಜಕ್ಕೂ ಬೆರಗುಗೊಳಿಸುವಂಥದು. ತನ್ನ ಅಂತಸ್ಸತ್ವದಿಂದ ಅದು ತುಷ್ಟಿಗೊಂಡು, ಪರಿಪಕ್ವತೆಯತ್ತ ಸಾಗಿರುವುದೂ ಅಷ್ಟೇ ಗಮನಾರ್ಹವಾದದ್ದು.

'ತಪೋರಂಗ' ಅವರ ಕವನ ಸಂಗ್ರಹದ ಹೆಸರಾಗಿದ್ದರೂ ಸಂಸ್ಕೃತಿ, ಇತಿಹಾಸ, ವಿಮರ್ಶೆ-ಪ್ರಬಂಧ ನಿರ್ಮಾಣವೇ ಅವರ ನಿಜವಾದ ತಪೋರಂಗವಾಗಿ ಪರಿಣಮಿಸಿತೆನ್ನಬಹುದು. ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಗೆ ಪಾತ್ರವಾದ 'ಕರ್ನಾಟಕ ಸಂಸ್ಕೃತಿ ಸಮೀಕ್ಷೆ' ಹಾಗೂ 'ತೌಲನಿಕ ಕಾವ್ಯಮೀಮಾಂಸೆ'ಗಳಂತಹ ಬೃಹತ್ಕೃತಿಗಳು ಅವರ ವ್ಯಾಪಕವಾದ ವಿವೇಚನೆಗೆ ನಿದರ್ಶನವಾಗಿದ್ದರೆ, 'ವಚನ ಸಾಹಿತ್ಯ : ವೈಚಾರಿಕ ಅಧ್ಯಯನ', 'ಶೂನ್ಯ ಸಂಪಾದನೆ', 'ವಚನಗಳಲ್ಲಿ ವೀರಶೈವ ಧರ್ಮ'ದಂತಹ ಚೊಕ್ಕ ಕೃತಿಗಳು ಶರಣರ ಸ್ವತಂತ್ರ ವಿಚಾರದರ್ಶನವನ್ನು ಒದಗಿಸುವಲ್ಲಿ ಹೆಚ್ಚು ಯಶಸ್ವಿಯಾಗಿವೆ. ವೀರಶೈವ ಸಾಹಿತ್ಯ, ಧರ್ಮ, ಸಿದ್ಧಾಂತಗಳ ಆಳವಾದ ಅಧ್ಯಯನ ಅವರನ್ನು ಆ ವಿಷಯಗಳ ಪ್ರಮುಖ ವಿದ್ವಾಂಸರಲ್ಲಿ ಒಬ್ಬರನ್ನಾಗಿಸಿದೆ. ಪ್ರಮುಖ ಶರಣರ ಜೀವನ ಸಾಧನೆಗಳನ್ನು, ಅವರ ಅನುಭಾವದ ನಿಲುವನ್ನು ಕಾದಂಬರಿಗಳ ಮೂಲಕ ಪುನಃ ಸೃಷ್ಟಿಸಿಕೊಡುವಲ್ಲಿ ಈ ಹಿನ್ನೆಲೆ ಸಾಕಷ್ಟು ಕೆಲಸ ಮಾಡಿರುವುದನ್ನು ಕಾಣುತ್ತೇವೆ. 'ಪರಿಪೂರ್ಣದೆಡೆಗೆ' (ಅಲ್ಲಮ), 'ಕದಳಿಯ ಕರ್ಪೂರ' (ಅಕ್ಕಮಹಾದೇವಿ), 'ಕರ್ತಾರನ ಕಮ್ಮಟ' (ಬಸವಣ್ಣ), 'ನೆರಳಾಚೆಯ ಬೆಳಗು' (ಸಿದ್ಧರಾಮ) 'ಜ್ಯೋತಿ ಬೆಳಗುತಿದೆ' (ನಿಜಗುಣ ಶಿವಯೋಗಿ) ಈ ಹೆಸರುಗಳೂ ಅಷ್ಟೇ ಅನ್ವರ್ಥಕವಾಗಿವೆ.

ತಮ್ಮ ಆಸಕ್ತಿಯ ವಿಷಯಗಳನ್ನು ಕುರಿತು ಅಧಿಕಾರವಾಣಿಯಿಂದ ಮಾತಾಡಬಲ್ಲ, ಪಂಡಿತಪಾಮರರಿಬ್ಬರೂ ಮೆಚ್ಚುವಂತೆ ಪ್ರತಿಪಾದಿಸಬಲ್ಲ ಕೆಲವೇ ಶಕ್ತರಾದ ವಾಗ್ಮಿಗಳಲ್ಲಿ ಸ್ವಾಮಿಗಳೂ ಒಬ್ಬರು. ಕರ್ನಾಟಕ ವಿಶ್ವವಿದ್ಯಾಲಯದಲ್ಲಿ 'ರಾಮಾಯಣ ದರ್ಶನಂ ಮಹಾಕಾವ್ಯ'ದ ಬಗ್ಗೆ ನೀಡಿದ ವಿಶೇಷೋಪನ್ಯಾಸಗಳು ಧಾರವಾಡದ ಸಭಿಕರನ್ನು ತನ್ಮಯಗೊಳ್ಳುವಂತೆ ಮಾಡಿದ್ದನ್ನು ನಾನು ಕಂಡಿದ್ದೇನೆ. ಅನೇಕ ವೀರಶೈವ ಮಠಗಳ ಸ್ವಾಮಿಗಳು ಈ ಗೃಹಸ್ಥ 'ಸ್ವಾಮಿ'ಗಳ ಬಗ್ಗೆ ಅತಿಶಯವಾದ ಪ್ರೀತಿ ವಿಶ್ವಾಸಗಳನ್ನು ತೋರಿಸಿದ್ದರೆ ಅದರಲ್ಲಿ ಆಶ್ಚರ್ಯವೇನೂ ಇಲ್ಲ. 'ಇತರರನ್ನು ಸನ್ಮಾರ್ಗದಲ್ಲಿ ಹಚ್ಚಿ, ತಾನೂ ಧರ್ಮ ಮಾರ್ಗದಿಂದ ವಿಮುಖನಾಗದೆ ಇರುವವನ ಕುಟುಂಬ ಜೀವನವು ತಪಸ್ವಿಗಳಿಗಿಂತ ಹೆಚ್ಚು ತಪೋಬಲವುಳ್ಳುದು' ಎಂಬ 'ತಿರುಕ್ಕುರಳ್'ನ ನುಡಿ ಈ ಸಂದರ್ಭದಲ್ಲಿ ನನಗೆ ನೆನಪಾಗುತ್ತದೆ. ಬದುಕಿನಲ್ಲಿ ಅವರಿಗೆ ಆಘಾತಗಳು ಒದಗಿಲ್ಲವೆಂತಲ್ಲ, ಆದರೆ ಅವನ್ನೆಲ್ಲ ಸಹಿಸಿಕೊಂಡು ಸಮಾಧಾನಿಯಾಗಿರುವ ಶಕ್ತಿಯನ್ನು ಶರಣಸಂಸ್ಕೃತಿಯಿಂದ ಅವರು ಪಡೆದುಕೊಂಡಿದ್ದಾರೆ.

ಇಂಥ ಸುಸಂಸ್ಕೃತ ಸಹೃದಯ ಸ್ನೇಹಿತರಿಗೆ ಬಾಳಬದುಕಿಗೆ ಸಂಬಂಧಪಟ್ಟ ಎಲ್ಲ ಶುಭಶಾಂತಿಗಳನ್ನು ಹೃತ್ಪೂರ್ವಕವಾಗಿ ಕೋರುತ್ತೇನೆ. ತಮ್ಮ ಕೃತಿಗಳಿಂದ ಕನ್ನಡ ಜನಮನವನ್ನು ಸದಾಕಾಲವೂ ಬೆಳಗುತ್ತಿರಲಿ ಎಂದು ಸರ್ವದಾ ಹಾರಯಿಸುತ್ತೇನೆ.

'ಶಿವ ಚಿಂತನ'
(ಅಭಿನಂದನ ಗ್ರಂಥ)
೧೯೮೮'

೩೯

# ಡಾ. ಆರ್.ಸಿ. ಹಿರೇಮಠ : ಒಂದು ಸ್ಮರಣೆ

೧೯೪೫ರಲ್ಲಿ ಪ್ರಥಮ ವರ್ಷದ ವಿದ್ಯಾರ್ಥಿಯಾಗಿ ನಾನು ಅದೇ ಕರ್ನಾಟಕ ಕಾಲೇಜನ್ನು ಪ್ರವೇಶಿಸಿದ್ದೆ. ಆರ್.ಸಿ. ಹಿರೇಮಠರು ಕನ್ನಡ ಎಂ.ಎ. ಪರೀಕ್ಷೆಯಲ್ಲಿ ಮುಂಬಯಿ ವಿಶ್ವವಿದ್ಯಾಲಯಕ್ಕೆ ಪ್ರಥಮ ರ್‍ಯಾಂಕ್ ಪಡೆದು ಪಾಸಾಗಿರುವ ಸುದ್ದಿ ಎಲ್ಲೆಡೆಗೂ ಹರ್ಷದ ವಾತಾವರಣವನ್ನುಂಟು ಮಾಡಿತ್ತು. ಆಗ ಕರ್ನಾಟಕ ವಿದ್ಯಾವರ್ಧಕ ಸಂಘದಲ್ಲಿ ಹಿರೇಮಠರ ಸನ್ಮಾನಾರ್ಥ ಒಂದು ಸಭೆಯ ಏರ್ಪಾಡಾಗಿದ್ದಿತು. ಸಂಘದಲ್ಲಿ ನಡೆಯುತ್ತಿದ್ದ ಸಾಹಿತ್ಯ ಸಮಾರಂಭಗಳಿಗೆ ನಾನು ಸಾಮಾನ್ಯವಾಗಿ ತಪ್ಪಿಸಿಕೊಳ್ಳುತ್ತಿರಲಿಲ್ಲ. ಅಂದಿನ ಸಭೆಯಂತೂ ಕನ್ನಡ ಪ್ರೇಮಿಗಳಿಗೆ ಹಬ್ಬದ ದಿನವಾಗಿತ್ತು. ಹಿರೇಮಠರ ಜೊತೆಯಲ್ಲಿಯೇ ದ್ವಿತೀಯ ರ್‍ಯಾಂಕ್ ಪಡೆದಿದ್ದ ಆರ್.ವಿ. ಕುಲಕರ್ಣಿಯವರೂ ಅಂದಿನ ಸಭೆಯ ಸನ್ಮಾನಿತ ಅತಿಥಿಯಾಗಿದ್ದರು. (ಇವರೇ ಮುಂದೆ ರಾಕು ಎಂದು ಪ್ರಸಿದ್ಧಿ ಪಡೆದ ಲಲಿತ ಪ್ರಬಂಧಕಾರರು.)

ಆರ್.ಸಿ. ಹಿರೇಮಠರನ್ನು ನಾನು ಕಂಡದ್ದು ಅದೇ ಮೊದಲ ಸಲ. ವಿನಯ, ಸಾದಾತನ ಅವರಲ್ಲಿ ಎದ್ದು ಕಾಣುತ್ತಿದ್ದವು. ಅಂದಿನ ಸಭೆಯ ಇನ್ನೊಂದು ದೊಡ್ಡ ಆಕರ್ಷಣೆಯೆಂದರೆ ಬಿ.ಎಂ.ಶ್ರೀಕಂಠಯ್ಯನವರು. ಧಾರವಾಡದಲ್ಲಿ ಅದೇ ಪ್ರಾರಂಭವಾಗಿದ್ದ ಕೆ.ಇ. ಬೋರ್ಡ್ಸ್ ಕಾಲೇಜಿಗೆ ಪ್ರಿನ್ಸಿಪಾಲರಾಗಿ ಬಂದಿದ್ದ ಅವರೇ ಅಂದಿನ ಸಭೆಯ ಅಧ್ಯಕ್ಷರು. ಶ್ರೀಯುತರಾದ ಶಂ.ಬಾ.ಜೋಶಿ, ದ.ರಾ.ಬೇಂದ್ರೆ, ಪ್ರೊ. ಸ.ಸ. ಮಾಳವಾಡ ಅಂದು ಮಾತನಾಡಿದವರಲ್ಲಿ ಮುಖ್ಯರು. ಹಿರೇಮಠರು ತಮ್ಮ ಸನ್ಮಾನಕ್ಕೆ ಸೂಕ್ತ ರೀತಿಯಲ್ಲಿ ಉತ್ತರಿಸಿದರು. ಬಿ.ಎಂ. ಶ್ರೀಯವರ ಕಂಠಶ್ರೀಯಿಂದ ಹೊರಹೊಮ್ಮಿದ ಅಂದಿನ ಭಾಷಣವನ್ನು ಕೇಳುವ ಸೌಭಾಗ್ಯ ನನ್ನದಾಗಿತ್ತು. ಕನ್ನಡತಾಯ ತೇರು ಸಿಂಗಾರಗೊಂಡು ನಿಂತಿದೆ. ತೇರಿನ ಮಿಣಿಗೆ ಕೈ ಹಚ್ಚಿ ಅದನ್ನು ವೈಭವದಿಂದ ಮುಂದೆ ಸಾಗಿಸುವ ಹೊಣೆಗಾರಿಕೆಯನ್ನು ಕುರಿತು ಅವರು ತುಂಬ ಕಳಕಳಿಯಿಂದ ಮಾತನಾಡಿದ್ದು ನನಗೆ ಇನ್ನೂ ನೆನಪಿದೆ. ಅವರು ಬಯಸಿದಂತೆ ಆರ್.ಸಿ. ಹಿರೇಮಠರು ಕನ್ನಡದ ಮುನ್ನಡೆಗೆ ಕೊನೆಯವರೆಗೂ ದಣಿವರಿಯದೆ ದುಡಿದು, ಕನ್ನಡ ತಾಯ ಋಣವನ್ನು ತೀರಿಸಿದರೆಂಬ ಭಾವನೆ ನನ್ನದಾಗಿದೆ.

ನಾನು ಆರ್.ಎಲ್.ಎಸ್. ಹೈಸ್ಕೂಲಿನಲ್ಲಿದ್ದಾಗ ಕೆಲವು ಗೆಳೆಯರು ಕೂಡಿಕೊಂಡು - ಕಾಲೇಜ ವಿದ್ಯಾರ್ಥಿಮಿತ್ರರೂ ಇದರಲ್ಲಿದ್ದರು - 'ಕಿರಿಯರ ಬಳಗ'ವನ್ನು ಕಟ್ಟಿದ್ದೆವು. ನಮ್ಮ

ಕಾರ್ಯಕ್ರಮಗಳು ಲಿಂಗಾಯತ ಟೌನ್‌ಹಾಲಿನಲ್ಲಿ ನಡೆಯುತ್ತಿದ್ದವು. ಪ್ರೊ. ಶಿ.ಶಿ. ಬಸವನಾಳರು ರಬಕವಿ ಸಾಹಿತ್ಯ ಸಮ್ಮೇಳನದ ನಿಯೋಜಿತ ಅಧ್ಯಕ್ಷರಾದಾಗ ಅವರನ್ನು ಸನ್ಮಾನಿಸಲು ಬಳಗ ಏರ್ಪಡಿಸಿದ ಅಚ್ಚುಕಟ್ಟಾದ ಕಾರ್ಯಕ್ರಮ ಹಿರಿಯರ ಮೆಚ್ಚುಗೆ ಗಳಿಸಿತ್ತು. ಮರುವರ್ಷವೇ ಮತ್ತೆ ಅಂಥ ಒಂದು ಸಮಾರಂಭ ಏರ್ಪಡಿಸುವ ಅವಕಾಶ ಕಿರಿಯರ ಬಳಗಕ್ಕೆ ಒದಗಿತು. ಹಿರೇಮಠರನ್ನು ಹಾಗೂ ಅದೇ ವರ್ಷ ಮುಂಬಯಿ ವಿಶ್ವವಿದ್ಯಾಲಯಕ್ಕೆ ಬಿ.ಇ. ಪರೀಕ್ಷೆಯಲ್ಲಿ ಪ್ರಥಮ ರ್‍ಯಾಂಕ್ ಪಡೆದ ಶ್ರೀ ಮಗದುಮ್ ಅವರನ್ನು ಒಂದೇ ವೇದಿಕೆಯ ಮೇಲೆ ಸನ್ಮಾನಿಸಲಾಯಿತು. ಆ ಹೊತ್ತಿಗಾಗಲೇ ಆರ್.ಸಿ.ಯವರು ಬಾಗಲಕೋಟೆಯ ಬಸವೇಶ್ವರ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿದ್ದರು. ನಮ್ಮ ಅಂದಿನ ಕಾರ್ಯಕ್ರಮದ ಮುಂದಾಳತ್ವವನ್ನು ವಹಿಸಿದವರು. ಬಿ.ಎಸ್‌ಸಿ.ಯಲ್ಲಿ ಓದುತ್ತಿದ್ದ ಎಸ್.ಎಸ್. ಹಿರೇಮಠ. ಅವರಿಗೆ ಈ ಮೊದಲೇ ಆರ್.ಸಿ.ಯವರ ಪರಿಚಯವಿದ್ದಿತಲ್ಲದೆ ಅವರ ಕಟ್ಟಾ ಅಭಿಮಾನಿಗಳಾಗಿದ್ದರು. (ಮುಂದೆ ಎಪ್ಪತ್ತೋ ವರ್ಷಗಳ ನಂತರ ಎಸ್.ಎಸ್. ಹಿರೇಮಠ ಅವರು ಆರ್.ಸಿ.ಯವರ ಬೀಗರಾದದ್ದು ಒಂದು ಯೋಗಾಯೋಗವೆಂದೇ ಹೇಳಬಹುದು). ಅತ್ಯಂತ ಸಜ್ಜನರೂ ಸಾಹಿತ್ಯ ಪ್ರೇಮಿಗಳೂ ಆದ ಶ್ರೀ ಎಸ್.ಎಸ್. ಹಿರೇಮಠ ಅವರು ಇಂದಿಗೂ ನನ್ನ ಬಗ್ಗೆ ಅದೇ ಆತ್ಮೀಯತೆ ಇಟ್ಟುಕೊಂಡಿರುವುದನ್ನು ನಾನು ಕೃತಜ್ಞತೆಯಿಂದ ನೆನೆಯುತ್ತೇನೆ. ಅಂದಿನ ಸಭೆಯಲ್ಲಿ ಕಿರಿಯರ ಬಳಗ ಸಿದ್ಧಪಡಿಸಿದ ಕೈಬರೆಹದ ಪತ್ರಿಕೆಯನ್ನು ಆರ್.ಸಿ.ಯವರು ಬಿಡುಗಡೆ ಮಾಡಿದರು. ಸಭೆಯನಂತರ ಅವರು ನನ್ನನ್ನು ಹತ್ತಿರ ಕರೆದು ಮಾತನಾಡಿಸಿ ಆ ಪತ್ರಿಕೆಯಲ್ಲಿದ್ದ ನನ್ನ ಕವಿತೆಯನ್ನು ಹಾಗೂ ನನ್ನ ಕೈಬರೆಹವನ್ನು ತಾವು ಬಹಳ ಮೆಚ್ಚಿಕೊಂಡಿರುವುದಾಗಿ ಹೇಳಿ ನನ್ನ ಸಂಕೋಚವನ್ನು ದೂರ ಮಾಡಿದರು. ('ಚೆಂಬೆಳಕು' ಅಭಿನಂದನ ಗ್ರಂಥಕ್ಕೆ ಬರೆದ ತಮ್ಮ ಲೇಖನದಲ್ಲಿ ಆರ್.ಸಿ.ಯವರು ಈ ಪ್ರಸಂಗವನ್ನು ಉಲ್ಲೇಖಿಸಿದ್ದಾರೆ.)

ನಾನು ಎಂ.ಎ.ದಲ್ಲಿದ್ದಾಗ ೧೯೫೧ರಲ್ಲಿ ಡಾ. ಆರ್.ಸಿ. ಹಿರೇಮಠರು ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ವಿಭಾಗದ ರೀಡರ್ ಆಗಿ ಬಂದರು. ನಮಗೆ ಬೋಧಿಸುತ್ತಿದ್ದ ಐದಾರು ಜನ ಸ್ಥಳೀಯ ಪ್ರಾಧ್ಯಾಪಕರಲ್ಲಿ ಅವರೂ ಒಬ್ಬರಾದರು. ಟ್ರೇನಿಂಗ್ ಕಾಲೇಜ್ ಹಾಸ್ಟೆಲ್ಲಿನ ತಮ್ಮ ಕೋಣೆಯಿಂದ ಅವರು ನಮ್ಮ ವರ್ಗಕ್ಕೆ ಬಂದು ಪಾಠ ಮಾಡುತ್ತಿದ್ದರು. ಅವರ ಅಧ್ಯಾಪನದಲ್ಲಿ ನನಗೆ ವಿಶೇಷವಾಗಿ ಕಂಡದ್ದು ಅವರ ಜ್ಞಾಪಕ ಶಕ್ತಿ. ಈ ಮೊದಲೇ ಪ್ರಕಟವಾಗಿದ್ದ ಅವರ 'ಸಮಾಂಜಲಿ' (ಕವನ ಸಂಗ್ರಹ) ಹಾಗೂ 'ಮಹಾಕವಿ ರಾಘವಾಂಕ' ಕೃತಿಗಳನ್ನು ಓದಿದ್ದ ನಾನು ಅವರು ಕವಿಹೃದಯದ ಪಂಡಿತರೆಂಬುದನ್ನು ಗುರುತಿಸಿದ್ದೆ. ೧೯೫೨ ಜನವರಿಯಲ್ಲಿ ಪ್ರೊ. ತೀ. ನಂ. ಶ್ರೀಕಂಠಯ್ಯನವರು ಕನ್ನಡ ವಿಭಾಗದ ಪ್ರಾಧ್ಯಾಪಕರಾಗಿ ಆಗಮಿಸಿದರು. ಆ ವರ್ಷ ನಮ್ಮ ಬ್ಯಾಚಿನಲ್ಲಿ ಸಾಕಷ್ಟು ಜನ ವಿದ್ಯಾರ್ಥಿಗಳಿದ್ದರು. ಆದರೆ ಮರುವರ್ಷ ವಿಭಾಗದಲ್ಲಿ ಒಬ್ಬನೇ ಒಬ್ಬ ವಿದ್ಯಾರ್ಥಿ. ಹಿರೇಮಠರು ವಿಭಾಗದ ಭವಿಷ್ಯದಲ್ಲಿ ಭರವಸೆಯಿಟ್ಟು ತಮ್ಮ ಅಧ್ಯಯನದಲ್ಲಿ ತೊಡಗಿರುತ್ತಿದ್ದರು. ಮನೆಯವರ ಹಾಗೂ ಮಕ್ಕಳ ಅನಾರೋಗ್ಯ ಇತ್ಯಾದಿ ಕೌಟುಂಬಿಕ ಸಮಸ್ಯೆಗಳು ಆಗಾಗ ಉದ್ಭವಿಸುತ್ತಿದ್ದರೂ ಕಷ್ಟ ಸಹಿಷ್ಣುತೆ

ಬಾಲ್ಯದಿಂದಲೇ ಮೈಗೂಡಿಕೊಂಡು ಬಂದುದರಿಂದ ಒದಗಿದ ತೊಂದರೆಗಳಿಂದ ವಿಚಲಿತರಾಗದೆ ಕರ್ತವ್ಯನಿರತರಾಗಿರುತ್ತಿದ್ದರು.

ಹಿರೇಮಠರು ಧಾರವಾಡಕ್ಕೆ ಬಂದೊಡನೆಯೆ ಅವರಿಗೆ ವಿದ್ವತ್ತಿನ ಆಶ್ರಯ ದೊರೆತದ್ದು ಪ್ರೊ. ಶಿ.ಶಿ. ಬಸವನಾಳರದು. ಈ ಮೊದಲೇ ಬೆಳಗಾವಿ ಲಿಂಗರಾಜು ಕಾಲೇಜ್‌ದಲ್ಲಿದ್ದಾಗ ಅವರ ಶಿಷ್ಯತ್ವ ಪಡೆದಿದ್ದ ಅವರು ಸಂಶೋಧನ ಸಂಪಾದನ ಕ್ಷೇತ್ರದಲ್ಲಿ ಆಗಬೇಕಾದ ಕಾರ್ಯದ ಯೋಜನೆಗಳ ಬಗ್ಗೆ ಬಸವನಾಳರೊಂದಿಗೆ ಚರ್ಚಿಸುತ್ತಿದ್ದರು. ೧೯೫೨ ಜನವರಿಯಲ್ಲಿ ಬಸವನಾಳರ ಆಕಸ್ಮಿಕ ನಿಧನ ಹಿರೇಮಠರನ್ನು ಕಂಗೆಡಿಸಿದರೂ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ಚಟುವಟಿಕೆಗಳಲ್ಲಿ ಪಾಲ್ಗೊಂಡು ಬಸವಪುರಾಣದ ಸಂಪಾದನ ಹಾಗೂ ಪ್ರಕಟನ ಕಾರ್ಯವನ್ನು ಪೂರೈಸಿದರು. ಹಿರೇಮಠರ ಮುಂದಿನ ಸಾಹಿತ್ಯಕ ಕಾರ್ಯಗಳ ಶುಭೋದಯಕ್ಕೆ ಇದು ನಾಂದಿಯಾಯಿತೆನ್ನಬಹುದು.

೧೯೫೨ ಆಗಸ್ಟ ತಿಂಗಳಲ್ಲಿ ವಿಶ್ವವಿದ್ಯಾಲಯ ಹೊಸದಾಗಿ ಪ್ರಾರಂಭಿಸಿದ ವ್ಯಾಸಂಗ ವಿಸ್ತರಣ ಮತ್ತು ಪ್ರಕಟನ ವಿಭಾಗದ ಕಾರ್ಯದರ್ಶಿಯಾಗಿ ನಾನು ಕೆಲಸಕ್ಕೆ ಸೇರಿದೆ. ಸಹಾಯಕ ಕುಲಸಚಿವರಾಗಿದ್ದ ಎಸ್.ಎಸ್.ಒಡೆಯರ್ ಅವರು ನನ್ನನ್ನು ಸಂತೋಷದಿಂದ ಬರಮಾಡಿಕೊಂಡು ಮಾರ್ಗದರ್ಶನ ಮಾಡಿದರು. ಶ್ರೀ ಸಿ.ಸಿ. ಹುಲಕೋಟಿಯವರು ಚೋಟಾ ಮಹಾಬಲೇಶ್ವರದಲ್ಲಿ (ಈಗಿನ ಕ್ಯಾಂಪಸ್) ವಿಶ್ವವಿದ್ಯಾಲಯ ಕಟ್ಟಡಗಳ ನಿರ್ಮಾಣಕ್ಕೆ ಹೆಚ್ಚು ಗಮನ ಕೊಟ್ಟಿದ್ದರು. ಟ್ರೇನಿಂಗ್ ಕಾಲೇಜ್ ಹಾಸ್ಟೆಲಿನಲ್ಲಿ ೩೦ ಕೋಣೆಗಳನ್ನು ವಿಶ್ವವಿದ್ಯಾಲಯದ ವಸತಿ ಗೃಹವಾಗಿ ಏರ್ಪಡಿಸಿದಾಗ ಹಿರೇಮಠರೇ ಅದರ ವಾರ್ಡನ್ ಆಗಿದ್ದರು.

ಈ ಸಂದರ್ಭದಲ್ಲಿ ಡಾ. ಎಸ್. ಸಿ. ನಂದೀಮಠರು ವಿಶ್ವವಿದ್ಯಾಲಯದ ರಿಜಿಸ್ಟ್ರಾರ್ ಆಗಿ ಕೆಲಸಕ್ಕೆ ಹಾಜರಾದೊಡನೆ ವಿಶ್ವವಿದ್ಯಾಲಯದ ನಿಧಿ ಸಂಗ್ರಹ ಕಾರ್ಯವನ್ನು ತುರ್ತಾಗಿ ಕೈಗೆತ್ತಿಕೊಂಡರು. ಡಾ. ಹಿರೇಮಠರು ಅವರ ಬಲಗೈಯಾಗಿ ನಿಧಿ ಸಂಗ್ರಹ ಕೆಲಸಕ್ಕೆ ಮುಂದಾಗಿ ಅವರೊಡನೆ ಪ್ರವಾಸ ಮಾಡಿದ್ದನ್ನು ನಾನು ಬಲ್ಲೆ. ವಿಶ್ವವಿದ್ಯಾಲಯ ಹಾಗೂ ಕಾಲೇಜು ಅಧ್ಯಾಪಕರು ಮತ್ತು ಆಫೀಸ್ ಸಿಬ್ಬಂದಿ ಒಂದು ತಿಂಗಳ ಸಂಬಳವನ್ನು ವಿಶ್ವವಿದ್ಯಾಲಯಕ್ಕೆ ದೇಣಿಗೆಯಾಗಿ ಕೊಡುವ ಯೋಜನೆ ಯಶಸ್ವಿಯಾಯಿತು. ಅಂದಿನಿಂದಲೇ ಹಿರೇಮಠರು ವಿಶ್ವವಿದ್ಯಾಲಯದ ಸೇವೆಗೆ ಕಂಕಣಬದ್ಧರಾದರೆನ್ನಬಹುದು. ೧೯೫೩ರ ಡಿಶಂಬರ್‌ದಿಂದ ವಿಶ್ವವಿದ್ಯಾಲಯದ ಕ್ಯಾಂಪಸ್ಸಿನ ಮನೆಯಲ್ಲಿರತೊಡಗಿದ ಅವರು ದಿನವೂ ಟ್ರೇನಿಂಗ್ ಕಾಲೇಜಿಗೆ ನಡೆದುಕೊಂಡೇ ಬಂದು ಹೋಗುತ್ತಿದ್ದರು. ಕನ್ನಡ ವಿಭಾಗದಲ್ಲಿ ಮಾತ್ರ ಪ್ರೊ. ತೀ.ನಂ. ಶ್ರೀಯವರ ಜೊತೆಗೆ ಅವರು ಅಷ್ಟು ಹೊಂದಿಕೊಳ್ಳಲಿಲ್ಲವೆಂದು ತೋರುತ್ತದೆ.

೧೯೫೪ರ ಆಗಸ್ಟನಲ್ಲಿ ಡಾ. ಡಿ.ಸಿ. ಪಾವಟೆಯವರು ಕುಲಪತಿಗಳಾಗಿ ಅಧಿಕಾರ ಸ್ವೀಕರಿಸಿದೊಡನೆ ವಿಶ್ವವಿದ್ಯಾಲಯದ ಅಭಿವೃದ್ಧಿಯ ಹೊಸ ಅಧ್ಯಾಯ ಪ್ರಾರಂಭವಾಯಿತೆನ್ನಬಹುದು. ವಿಶ್ವವಿದ್ಯಾಲಯದ ಸಮಗ್ರ ಬೆಳವಣಿಗೆಯ ದೃಷ್ಟಿಯಿಂದ ಅವರು ಕೈಕೊಂಡ ಯೋಜನೆಗಳಲ್ಲಿ

ಕನ್ನಡ ವಿಭಾಗವನ್ನು ಸಮರ್ಥವಾಗಿ ಬೆಳಸಬೇಕೆಂಬ ವಿಶೇಷ ಒಲವು ಅವರಲ್ಲಿತ್ತು. ಪ್ರೊ. ತೀ.ನಂ. ಶ್ರೀಯವರು ಮರಳಿ ಮೈಸೂರು ವಿಶ್ವವಿದ್ಯಾಲಯಕ್ಕೆ ಹಿಂತಿರುಗಿದೊಡನೆ ಡಾ. ಹಿರೇಮಠರು ೧೯೫೭ರಲ್ಲಿ ಪ್ರಾಧ್ಯಾಪಕರಾಗಿ ನೇಮಕಗೊಂಡರು. ೧೯೫೭ರಲ್ಲಿ ನಾನು ಪ್ರಸಾರಾಂಗದ ನಿರ್ದೇಶಕನಾಗಿ ಪದೋನ್ನತಿ ಪಡೆದಿದ್ದೆ. ಕನ್ನಡ ವಿಭಾಗದಲ್ಲಿ ಪ್ರಾರಂಭವಾದ ಸಂಶೋಧನೆ, ಗ್ರಂಥ ಸಂಪಾದನೆ, ತ್ರೈಮಾಸಿಕ ಸಂಶೋಧನ ಪತ್ರಿಕೆ ಇತ್ಯಾದಿ ಯೋಜನೆಗಳ ಪ್ರಕಟನೆಗೆ ವಿಶ್ವವಿದ್ಯಾಲಯದ ಪ್ರಸಾರಾಂಗ ಸಂಪೂರ್ಣ ಸಹಕಾರ ನೀಡುತ್ತಾ ಬಂದಿತು. 'ರಾಜಶೇಖರ ವಿಳಾಸ ಸಂಗ್ರಹ'ದಿಂದ ಪ್ರಾರಂಭಗೊಂಡ ಗ್ರಂಥ ಪ್ರಕಟನೆ ಮುಂದೆ ವಿವಿಧ ಮುಖಗಳಲ್ಲಿ ಅವ್ಯಾಹತವಾಗಿ ಮುಂದುವರಿಯಿತು.

ವ್ಯಾಸಂಗ ವಿಸ್ತರಣ ಉಪನ್ಯಾಸ ಶಿಬಿರ ಹಾಗೂ ವಿಶೇಷೋಪನ್ಯಾಸ ಶಿಬಿರಗಳಲ್ಲಿ ಹಿರೇಮಠರು ಬಿಡುವು ಮಾಡಿಕೊಂಡು ಬಂದು ಭಾಗವಹಿಸುತ್ತಿದ್ದರು. ಬಿಡುವಿನ ಸಮಯದಲ್ಲಿ ಉಳಿದ ಉಪನ್ಯಾಸಕರ ಜೊತೆಗೆ ಒಂದಾಗಿ ಚರ್ಚೆಯಲ್ಲಿ ಭಾಗವಹಿಸುತ್ತ, ತತ್ವಪದಗಳನ್ನು ಹಾಡಿತೋರಿಸುತ್ತ ಸಂಗೀತದಲ್ಲಿ ತಮಗಿರುವ ಆಸಕ್ತಿಯನ್ನು ವ್ಯಕ್ತಪಡಿಸಿದ್ದನ್ನು ನಾನು ಮರೆತಿಲ್ಲ.

ಡಾ. ಹಿರೇಮಠರು ತಮ್ಮ ಆಯ್ಕೆಯನ್ನು ಸಮರ್ಥಿಸುವಂತೆ ಕೆಲಸ ಮಾಡಿ ಕನ್ನಡ ವಿಭಾಗವನ್ನು ಹಂತಹಂತವಾಗಿ ಬೆಳೆಸಿ ಬಲಪಡಿಸಿದರು. ಡಾ. ಪಾವಟೆಯವರ ಬೆಂಬಲ ಹಾಗೂ ಪ್ರೋತ್ಸಾಹಕ್ಕೆ ಕೊರತೆಯಿರಲಿಲ್ಲ. ಹೀಗಾಗಿ ಹಿರೇಮಠರು ವಿದೇಶ ಪ್ರವಾಸ ಮಾಡಿ ಭಾಷಾವಿಜ್ಞಾನ ಇತ್ಯಾದಿಗಳಲ್ಲಿ ಹೆಚ್ಚಿನ ಪ್ರಾವೀಣ್ಯತೆಯನ್ನು ಗಳಿಸಿದರು. ಸಮಗ್ರ ವಚನ ವಾಙ್ಮಯ ಸಂಶೋಧನ, ಸಂಸ್ಕರಣ ಹಾಗೂ ಪ್ರಕಟನ ಯೋಜನೆಗೆ ಯು.ಜಿ.ಸಿ.ಯಿಂದ ಸಾಕಷ್ಟು ಧನಸಹಾಯ ಒದಗಿದ್ದರಿಂದ ಅದಕ್ಕಾಗಿ ವಿಶೇಷ ಸಿಬ್ಬಂದಿಯನ್ನು ನೇಮಿಸಲು ಅನುಕೂಲವಾಯಿತು. ಅಕಾಡೆಮಿಕ್ ವಲಯದ ಹೊರಗಿರುವ ವಿದ್ವಾಂಸರನ್ನು, ತಜ್ಞರನ್ನು ಈ ಯೋಜನೆಯಲ್ಲಿ ತೊಡಗಿಸಿಕೊಂಡದ್ದು ಇದರ ವಿಶೇಷ. ನಾಗಭೂಷಣಶಾಸ್ತ್ರಿಗಳು, ಈಶ್ವರ ಸಣಕಲ್, ಮೇವುಂಡಿ ಮಲ್ಲಾರಿ, ಬೆಟಗೇರಿ ಕೃಷ್ಣಶರ್ಮ ಮೊದಲಾದವರನ್ನು ಇಲ್ಲಿ ಹೆಸರಿಸಬಹುದು. ಕ್ಷೇತ್ರಕಾರ್ಯವನ್ನು ಬಿರುಸಾಗಿ ನಡೆಸಿ ವಚನ ಸಾಹಿತ್ಯದ ಹಸ್ತಪ್ರತಿ, ತಾಡವೋಲೆ ಪ್ರತಿಗಳನ್ನು ಆ ಸಂದರ್ಭದಲ್ಲಿ ವಿಪುಲವಾಗಿ ಸಂಗ್ರಹಿಸಿದ್ದರಿಂದ ಒಂದು ಉನ್ನತ ಮಟ್ಟದ ಹಸ್ತಪ್ರತಿ ಭಂಡಾರ ಕನ್ನಡ ವಿಭಾಗದಲ್ಲಿ ರೂಪುಗೊಳ್ಳಲು ಸಾಧ್ಯವಾಯಿತು. ಕನ್ನಡ ಭಾಷೆ, ಸಾಹಿತ್ಯ ಸಂಸ್ಕೃತಿ, ಭಾಷಾಶಾಸ್ತ್ರ, ಜಾನಪದ ಇತ್ಯಾದಿ ಶಾಖೋಪಶಾಖೆಗಳಲ್ಲಿ ನಡೆಯುತ್ತಿದ್ದ ಅಧ್ಯಯನ ಅಧ್ಯಾಪನದ ಕಾರ್ಯ ವೈವಿಧ್ಯ ಹಾಗೂ ವಿದ್ಯಾರ್ಥಿ ಚಟುವಟಿಕೆಗಳಿಂದ ಕನ್ನಡ ವಿಭಾಗ ಒಂದು ಹಂತದಲ್ಲಿ, ಜೇನುಗೂಡನ್ನು ನೆನಪಿಗೆ ತರುವಂತಿತ್ತು.

ಹಲವಾರು ವಿಶ್ವವಿದ್ಯಾಲಯಗಳ ಅಭ್ಯಾಸ ಮಂಡಳಿಗಳ ಸದಸ್ಯರಾಗಿ ಕಾರ್ಯ ನಿರ್ವಹಿಸುತ್ತಲೇ ಹಿರೇಮಠರು ವಿಭಾಗದ ಬಿಡುವಿಲ್ಲದ ಕೆಲಸಗಳಲ್ಲಿಯೂ ಸು. ೪೦ರಷ್ಟು ವಿದ್ಯಾರ್ಥಿಗಳಿಗೆ ಕಾಲಕಾಲಕ್ಕೆ ಪಿಎಚ್.ಡಿ. ಗಾಗಿ ಮಾರ್ಗದರ್ಶನ ಮಾಡುತ್ತ ಬಂದದ್ದು ಯಾರಿಗಾದರೂ ಆಶ್ಚರ್ಯವನ್ನುಂಟು ಮಾಡುವಂತಿದೆ.

ಶೂನ್ಯಸಂಪಾದನೆಯ ಇಂಗ್ಲಿಷ್ ಅನುವಾದ ಮತ್ತು ಕೆಲವು ವಚನ ಸಂಗ್ರಹಗಳ ಬಗ್ಗೆ ('ಮುಕ್ತಿಕಂಠಾಭರಣ') ಎದ್ದ ವಾದವಿವಾದ ಕೆಲಕಾಲ ವಿಶ್ವವಿದ್ಯಾಲಯದ ವಾತಾವರಣವನ್ನು ತಪ್ತಗೊಳಿಸಿದ್ದುಂಟು. ಪ್ರಸಾರಾಂಗದಲ್ಲಿ ಈ ಗ್ರಂಥಗಳ ಪ್ರಕಾಶಕನಾಗಿ ನನಗೂ ಅದರ ಬಿಸಿ ತಾಗದೆ ಹೋಗಲಿಲ್ಲ. ಇದರಿಂದ ಹಿರೇಮಠರಿಗೆ ಈ ಕಾರ್ಯದಲ್ಲಿ ಮೊದಲಿಗಿದ್ದ ಉತ್ಸಾಹ ಮುಂದೆ ಕಂಡುಬರಲಿಲ್ಲ. ಈ ದಿಸೆಯಲ್ಲಿ ಮುಂದೆ ಮಾಡಬೇಕೆಂದಿದ್ದ ಕೆಲಸಗಳೆಲ್ಲ ಅಲ್ಲಿಗೇ ನಿಲ್ಲುವಂತಾದುದು ಒಂದು ದುರ್ದೈವದ ಸಂಗತಿಯೆನ್ನದೆ ವಿಧಿಯಿಲ್ಲ.

ಡಾ. ಎ.ಎಸ್. ಅಡಕೆಯವರು ಕುಲಪತಿಗಳಾಗಿ ಆಯ್ಕೆಗೊಂಡು ಅಧಿಕಾರ ವಹಿಸಿಕೊಂಡ ಮೇಲೆ ಕನ್ನಡ ವಿಭಾಗದ ಇತರ ಚಟುವಟಿಕೆಗಳು ಎಂದಿನಂತೆ ಮುಂದುವರಿದವು. ಕನ್ನಡ ವಿಭಾಗ ೧೯೬೯ರಲ್ಲಿ ಅಧ್ಯಯನ ಪೀಠವಾಗಿ ಮಾರ್ಪಾಡುಹೊಂದಿತು. ಅದಕ್ಕಾಗಿ ಯೋಜಿಸಿದ ಸ್ವತಂತ್ರ ಕಟ್ಟಡದ ಕಾರ್ಯ ಆಗಲೇ ಪ್ರಾರಂಭಗೊಂಡರೂ ಮುಂದೆ ಹಿರೇಮಠರು ಕುಲಪತಿಗಳಾದಾಗಲೇ ಅದು ಪೂರ್ತಿಗೊಂಡದ್ದು ಒಂದು ಯೋಗಾಯೋಗವೆಂದೇ ಹೇಳಬೇಕು.

೧೯೭೪ರಲ್ಲಿ ಹಂಗಾಮಿ ಕುಲಪತಿಯೆಂದು ಅಧಿಕಾರವಹಿಸಿಕೊಳ್ಳುವಾಗ ಹಿರೇಮಠರು ಪಾವಟೆ ಸಾಹೇಬರನ್ನು ನೆನೆಸಿಕೊಂಡದ್ದು ಸಹಜವೇ ಆಗಿದೆ. ಈ ನಡುವೆ ಆಡಳಿತದಲ್ಲಿ ಉಂಟಾಗಿದ್ದ ಕೆಲಮಟ್ಟಿನ ಅಶಿಸ್ತು ಹಾಗೂ ಅವ್ಯವಸ್ಥೆಯನ್ನು ಹಿರೇಮಠರು ಸಾಧ್ಯವಿದ್ದಷ್ಟು ಸರಿಪಡಿಸಿದರು. ಅಪೂರ್ಣವಾಗಿದ್ದ ಕಟ್ಟಡಗಳು ಮೇಲೆದ್ದು ಪೂರ್ತಿಗೊಂಡವು. ಕ್ಯಾಂಪಸ್ಸಿನಲ್ಲಿ ಸ್ವಚ್ಛತೆ ಕಾಣಿಸಿಕೊಂಡಿತು. ಸಿಂಡಿಕೇಟಿನ ಕೆಲವು ಸದಸ್ಯರ ಸಹಯೋಗ ಹಾಗೂ ಹಿತೈಷಿಗಳ ನೆರವಿನಿಂದ ಅವರಿಗೆ ಇದು ಸಾಧ್ಯವಾಯಿತು. ಮತ್ತೊಂದು ಅವಧಿಗೆ ಹಿರೇಮಠರು ಕುಲಪತಿಯೆಂದು ನೇಮಕಗೊಂಡಾಗಲೇ ಅವರು ವಿಶ್ವವಿದ್ಯಾಲಯದ ಕ್ಯಾಂಪಸ್ಸಿನಲ್ಲಿದ್ದ ಕುಲಪತಿನಿವಾಸಕ್ಕೆ ಬಂದದ್ದು. ಈ ಅವಧಿಯಲ್ಲಿಯೇ ವಿಶ್ವವಿದ್ಯಾಲಯದ ರಜತೋತ್ಸವ ಅತ್ಯಂತ ವಿಜೃಂಭಣೆಯಿಂದ ನೆರವೇರಿತು. ಆ ಒಂದೆರಡು ವರ್ಷದಲ್ಲಿ ಮತ್ತೆ ಅನೇಕ ಮಹತ್ವದ ಗ್ರಂಥಗಳು ಪ್ರಸಾರಾಂಗದಿಂದ ಪ್ರಕಟಗೊಂಡವು.

ಡಾ. ಹಿರೇಮಠರ ಸಾಹಿತ್ಯಿಕ ಜೀವನ 'ಸುಮಾಂಜಲಿ' (೧೯೪೮) ಕವನ ಸಂಗ್ರಹದಿಂದ ಪ್ರಾರಂಭವಾಗಿತ್ತು. ೧೯೫೮ರಲ್ಲಿ ಅವರು ಅಮೇರಿಕೆಯ ಬರ್ಕ್ಲಿಯಲ್ಲಿದ್ದಾಗ ಅಲ್ಲಿಯ ನಿಸರ್ಗ ಸೌಂದರ್ಯ ಅವರನ್ನು ಮತ್ತೆ ಕಾವ್ಯರಚನೆಗೆ ಪ್ರೇರೇಪಿಸಿತು.

ಹತ್ತು ವರ್ಷಗಳಾಯ್ತು
ಎತ್ತಿ ಮೈದಡವಿಲ್ಲ
ಮುತ್ತನಿಡು ತಾಯೆ ನಾ ಪರದೇಶೀಯೆ?
ಎತ್ತಹೋದರೂ ನಿನ್ನ
ಹತ್ತಿರವೆ ನಾನಿದ್ದೆ
ಸುತ್ತಿ ಶಾಸ್ತ್ರದ ಗಿರಿಯನೇರುತಿರಲು

ಎಂದು ತಮ್ಮ ಕಾವ್ಯದ ಒಲವನ್ನು ಮತ್ತೆ ನೆನಪಿಸಿಕೊಂಡು 'ಮೌನಸ್ಪಂದನ' ಸಂಗ್ರಹವನ್ನು ಪ್ರಕಟಿಸಿದರು. ಇತ್ತೀಚೆಗೆ ಮಹಾಕಾವ್ಯವೊಂದರ ರಚನೆಯ ಬಗ್ಗೆ ಅವರು ಯೋಚಿಸುತ್ತಿದ್ದರೆಂದು ಕೇಳಿದ್ದೇನೆ. 'ದೂರದ ಅಮೇರಿಕೆಯಲ್ಲಿ ಕುಳಿತು ಬರಿಗೈಯಿಂದ ಬರವಣಿಗೆ ಪ್ರಾರಂಭಿಸಿದೆ' ಎಂದು ತಮ್ಮ ಆತ್ಮಕಥೆ 'ಉರಿಬರಲಿ, ಸಿರಿಬರಲಿ'ಯ ಅರಿಕೆಯಲ್ಲಿ ನುಡಿದಿರುವುದು ಅವರ ಅಗಾಧವಾದ ಜ್ಞಾಪಕಶಕ್ತಿಗೆ ಸಾಕ್ಷಿಯಾಗಿದೆ.

ವಿಶ್ವವಿದ್ಯಾಲಯದ ಪ್ರಾಧ್ಯಾಪಕರಾಗಿ, ಕನ್ನಡ ಅಧ್ಯಯನಪೀಠದ ಶಿಲ್ಪಿಗಳಾಗಿ, ಕುಲಪತಿಗಳಾಗಿ ಪ್ರಾರಂಭದಿಂದ ಕೊನೆಯವರೆಗೂ ವಿಶ್ವವಿದ್ಯಾಲಯದ ಅಭ್ಯುದಯಕ್ಕಾಗಿ ದುಡಿದ ಡಾ. ಆರ್.ಸಿ. ಹಿರೇಮಠರ ಹೆಸರನ್ನು ಕನ್ನಡ ಅಧ್ಯಯನ ಪೀಠಕ್ಕಿಡುವುದಾದರೆ ಅದೊಂದು ಯೋಗ್ಯ ಸ್ಮಾರಕವಾಗಬಲ್ಲದೆಂದು ನನ್ನ ಭಾವನೆ.

**'ಡಾ|| ಆರ್.ಸಿ. ಹಿರೇಮಠ ನಾವು ಕಂಡಂತೆ'**

(ಸಂಸ್ಮರಣ ಗ್ರಂಥ)

೧೯೯೯

೪೦

## ಗುರುನಾಥ ಜೋಶಿ ಹಾಗೂ ಭಾಷಾ ಬಾಂಧವ್ಯ

ನಾನು ಹೈಸ್ಕೂಲಿನಲ್ಲಿ ಓದುತ್ತಿದ್ದಾಗ 'ದೇವದಾಸ' ಕಾದಂಬರಿ ಉಪಪಠ್ಯವಾಗಿತ್ತು. ಸಾಮಾನ್ಯವಾಗಿ ಪಠ್ಯ ಪುಸ್ತಕಗಳ ಬಗೆಗಿರುವ ವಿದ್ಯಾರ್ಥಿಗಳ ಅನಾಸ್ಥೆಯನ್ನು ಈ ಪುಸ್ತಕ ಹೊಡೆದೋಡಿಸಿದ್ದಿತು : ಒಂದು ಉತ್ತಮ ಸಾಹಿತ್ಯ ಕೃತಿ ವಿದ್ಯಾರ್ಥಿಗಳ ಮನಸ್ಸನ್ನು ಹೇಗೆ ಆಕರ್ಷಿಸಬಲ್ಲದು ಎಂಬುದಕ್ಕೆ ಇದು ಒಳ್ಳೆಯ ಉದಾಹರಣೆಯಾಗಿದೆ. ಮನಸ್ಸನ್ನು ಆಳವಾಗಿ ಕಲಕುವ ಆ ಕಾದಂಬರಿಯ ಸನ್ನಿವೇಶಗಳೆಲ್ಲ ಕಣ್ಣೆದುರು ಕಟ್ಟಿದಂತಾಗಿರುತ್ತಿದ್ದವು. ಆ ಕಾದಂಬರಿಯ ಜೊತೆಗೆ ಅದನ್ನು ಕನ್ನಡಕ್ಕೆ ಅನುವಾದಿಸಿದ ಗುರುನಾಥ ಜೋಶಿಯವರ ಹೆಸರೂ ಮನಸ್ಸಿನಲ್ಲಿ ನೆಲೆಯೂರಿತು.ಅವರು ಧಾರವಾಡದಲ್ಲಿಯೇ ಇದ್ದುದರಿಂದ, ರಸ್ತೆಯ ಮೇಲೆ ಇಲ್ಲವೆ ಸಭೆ ಸಮಾರಂಭಗಳಲ್ಲಿ ಅವರನ್ನು ನೋಡುವ ಅವಕಾಶ ನನಗೆ ಸುಲಭವಾಗಿ ಒದಗಿದ್ದಿತು. ಸ್ವಲ್ಪ ಗಡಸು ಧ್ವನಿಯ, ಸಾಧಾರಣ ಎತ್ತರದ, ಸದಾ ಖಾದೀಧಾರಿಯಾಗಿರುತ್ತಿದ್ದ ಅವರು, ನೋಡಲು ಸರಳ ಆದರೆ ವಿಶಿಷ್ಟ ವ್ಯಕ್ತಿಯಾಗಿ ಕಾಣುತ್ತಿದ್ದರು. ತಲೆಯ ಮೇಲೆ ಸದಾ ಟೊಪ್ಪಿಗೆ ಇರುತ್ತಿತ್ತು. ಈ ವೇಷದಲ್ಲಿ ಈಗಲೂ ಅಷ್ಟೊಂದು ಬದಲಾವಣೆಯಿಲ್ಲ; ಹಾಗೆಯೇ ಮುಖದಲ್ಲಿಯ ಮುಗುಳು ನಗೆಯೂ.

ಕರ್ನಾಟಕ ಕಾಲೇಜು ಹಾಗೂ ಅವರು ಹಿಂದೀ ಪ್ರಾಧ್ಯಾಪಕರಾಗಿದ್ದ ಟ್ರೇನಿಂಗ್ ಕಾಲೇಜಿನ ದಾರಿ ಒಂದೇಯಾಗಿದ್ದರಿಂದ ಅವರು ಆಗಾಗ್ಗೆ ಕಣ್ಣಿಗೆ ಬೀಳದೆ ಇರುತ್ತಿರಲಿಲ್ಲ. 'ನಿಸರ್ಗ'ದ ಮಿರ್ಜಿ ಅಣ್ಣಾರಾಯರು ಆಗ ಟ್ರೇನಿಂಗ್ ಕಾಲೇಜಿನ ವಿದ್ಯಾರ್ಥಿಯಾಗಿ ಸೇರಿದ್ದರು. ಅವರೂ ಸದಾ ಖಾದೀಧಾರಿಗಳು. ಅವರ ಪರಿಚಯ ಆಗಲೇ ಆಗಿತ್ತು. ಜೋಶಿಯವರ ಪರಿಚಯವೂ ಅದೇ ಸಂದರ್ಭದಲ್ಲಿ ಆದಹಾಗೆ ನೆನಪು. ಅಧ್ಯಾಪನ, ಪ್ರವಾಸ, ಬರವಣಿಗೆ, ಭಾಷಣ-ಹೀಗೆ ಸದಾ ಚಟುವಟಿಕೆಯಿಂದ ಕೂಡಿದ ವ್ಯಕ್ತಿ ಅವರಾಗಿದ್ದರು. ಕನ್ನಡಿಗರಿಗೆ ಹಿಂದೀ ಭಾಷೆಯಲ್ಲಿ ಪ್ರೀತಿಯಿಂದ ಆಸ್ಥೆ ಹುಟ್ಟಿಸಿದ ಕೆಲವೇ ವ್ಯಕ್ತಿಗಳಲ್ಲಿ ಅವರು ಗಣ್ಯರೆನಿಸಿದ್ದರು.

ಕೆಲಕಾಲ ಜೋಶಿಯವರು 'ಜಯ ಕರ್ನಾಟಕ'ದ ಉಪಸಂಪಾದಕರಾಗಿದ್ದಾಗ ಅವರೊಡನೆ ನನಗೆ ಹೆಚ್ಚು ಸಂಪರ್ಕ ಬಂದಿತ್ತು. ಮೊಟ್ಟಮೊದಲಿಗೆ 'ದೇವದಾಸ' ಕಾದಂಬರಿಯ ಮೂಲಕ ನನಗೆ ಶರಶ್ಚಂದ್ರರ ಹುಚ್ಚು ಹಿಡಿಸಿದ ಗುರುನಾಥ ಜೋಶಿಯವರು ಅವರೇ ಬಂಗಾಲಿಯಿಂದ ಅನುವಾದಿಸಿದ 'ಪರಿಣೀತಾ', 'ಚಂದ್ರನಾಥ', 'ಶ್ರೀಕಾಂತ', 'ಚರಿತ್ರಹೀನ', 'ಷೋಡಶಿ',

‘ಸುಮತಿ’ ‘ಅನುರಾಧ’ ಮೊದಲಾದ ಕಾದಂಬರಿಗಳನ್ನು ಆಸ್ಥೆಯಿಂದ ಓದುವಂತೆ ಮಾಡಿದ್ದರು. ಹಾಗೆಯೇ ಪ್ರೇಮಚಂದರ ಅನೇಕ ಕಥೆ ಕಾದಂಬರಿಗಳನ್ನು ಅವರು ಬಿಟ್ಟೂಬಿಡದೆ ಕನ್ನಡಕ್ಕೆ ತಂದರು. ಶರತ್ ಶತಮಾನೋತ್ಸವದ ಸಂದರ್ಭದಲ್ಲಿ ಮೈಸೂರು ವಿಶ್ವವಿದ್ಯಾಲಯ ಪ್ರಕಟಿಸಿದ ಜೋಶಿಯವರ ‘ಶರಚ್ಚಂದ್ರ ಚಟ್ಟೋಪಾಧ್ಯಾಯ’ ಕನ್ನಡಿಗರಿಗೆ ಅವರ ಜೀವನ ಹಾಗೂ ಸಾಹಿತ್ಯದ ಪರಿಚಯವನ್ನು ಅಚ್ಚುಕಟ್ಟಾಗಿ ಮಾಡಿಕೊಡುವ ಒಂದು ಮೇಲ್ಮಟ್ಟದ ಸ್ವತಂತ್ರ ಕೃತಿಯಾಗಿದೆ.

ಹಿಂದೀ ಮತ್ತು ಕನ್ನಡ ಸಾಹಿತ್ಯಕ್ಕೆ ಸೇತುವೆಯಂತೆ ಜೋಶಿಯವರು ಶ್ರದ್ಧೆಯಿಂದ ಮಾಡಿರುವ ಕೆಲಸ ಗಮನಾರ್ಹವಾದದ್ದು. ‘ಹಿಂದೀ-ಕನ್ನಡ ಶಬ್ದಕೋಶ’, ‘ಕನ್ನಡ-ಕನ್ನಡ-ಹಿಂದೀ ಶಬ್ದಕೋಶ’, ‘ಸುಬೋಧ’, ‘ಹಿಂದೀ-ಕನ್ನಡ ವ್ಯಾಕರಣ’ ಮೊದಲಾದವು ಹಿಂದೀ ಭಾಷೆಯನ್ನು ಕಲಿಯಲು ಅಪೇಕ್ಷಿಸುವ ಕನ್ನಡಿಗರಿಗೆ ವರದಾನವಾಗಿ ಪರಿಣಮಿಸಿದ್ದರೆ ಆಶ್ಚರ್ಯವಿಲ್ಲ. ಕನ್ನಡ ಸಾಹಿತಿಗಳ ಹಾಗೂ ಸಾಹಿತ್ಯದ ಬಗ್ಗೆ ಹಿಂದಿಯಲ್ಲಿ ಸ್ವತಂತ್ರವಾಗಿ ಬರೆದದ್ದು ಹಾಗೂ ಕೆಲವು ಉತ್ತಮ ಕನ್ನಡ ಕೃತಿಗಳನ್ನು ಹಿಂದಿಗೆ ಅನುವಾದಿಸಿದ್ದು ಈ ಎರಡೂ ರೀತಿಯಲ್ಲಿ ಅವರು ಮಾಡಿರುವ ಕೆಲಸ ಎಂದಿಗೂ ಮರೆಯುವಂಥದಲ್ಲ. ಕನ್ನಡ ಕುಲಪುರೋಹಿತ ಆಲೂರು ವೆಂಕಟರಾಯರನ್ನು ಕುರಿತು ಹಿಂದಿಯಲ್ಲಿ ಅವರ ಪುಸ್ತಕ ಪ್ರಕಟವಾಗಿದೆ. ‘ಕನ್ನಡ ಸಾಹಿತ್ಯಕೀ ರೂಪರೇಖಾ’ ಕೇಂದ್ರ ಸರಕಾರದಿಂದ ಬಹುಮಾನಿತ ಕೃತಿಯಾಗಿದೆ. ‘ಪತ್ರ-ಪುಷ್ಪ’ ಕನ್ನಡ ಸಾಹಿತ್ಯ ಕುರಿತು ಹಿಂದಿಯಲ್ಲಿ ಅವರು ಬರೆದ ಪ್ರಬಂಧಗಳ ಸಂಕಲನವಾಗಿದೆ. ಕಾರಂತರ ‘ಅಳಿದ ಮೇಲೆ’ ಹಾಗೂ ಕುವೆಂಪು ಅವರ ‘ಕಾನೂರು ಹೆಗ್ಗಡತಿ’ಯಂಥ ಮಹತ್ವದ ಕಾದಂಬರಿಗಳ ಹಿಂದೀ ಅನುವಾದಕ್ಕೆ ನ್ಯಾಶನಲ್ ಬುಕ್ ಟ್ರಸ್ಟ್ ಮತ್ತು ಕೇಂದ್ರ ಸಾಹಿತ್ಯ ಅಕಾಡೆಮಿಗಳು ಜೋಶಿಯವರನ್ನೇ ಆಯ್ದುಕೊಂಡಿದ್ದರಲ್ಲಿ ಔಚಿತ್ಯವಿಲ್ಲದಿಲ್ಲ. ಕನ್ನಡ ಜನಪದ ಕತೆಗಳ ಹಿಂದೀ ಅನುವಾದವನ್ನು, ಹಿಂದಿಯಿಂದ ‘ಮೀರಿಮಗಳು’ ಮತ್ತು ‘ಆರು ಬೀಘ ಭೂಮಿ’ ಕೃತಿಗಳ ಕನ್ನಡ ಅನುವಾದವನ್ನು ಕೇಂದ್ರ ಸಾಹಿತ್ಯ ಅಕಾಡೆಮಿ ಇವರಿಗೆ ವಹಿಸಿಕೊಟ್ಟುದು ಜೋಶಿಯವರ ಅನುವಾದದ ಸಾಮರ್ಥ್ಯ ಹಾಗೂ ಕಾರ್ಯನಿಷ್ಠೆಯ ದ್ಯೋತಕವಾಗಿವೆ. ಕನ್ನಡದ ಪ್ರಾತಿನಿಧಿಕ ಕತೆಗಳ ಸಂಗ್ರಹವೊಂದನ್ನು ಇವರು ಹಿಂದಿಗೆ ಅನುವಾದಿಸಿದ್ದು ‘ಗಲ್ಪ ಸಂಸಾರ ಮಾಲಾ’ ಎಂಬ ಹೆಸರಿನಲ್ಲಿ ೧೯೩೮ರಷ್ಟು ಹಿಂದೆಯೇ ಅದು ಪ್ರೇಮಚಂದರ ಮಗನಿಂದ ಪ್ರಕಾಶಿತವಾಗಿರುವುದು ವೈಶಿಷ್ಟ್ಯಪೂರ್ಣವಾಗಿದೆ. ಜೋಶಿಯವರ ಈ ಭಾಷಾಬಾಂಧವ್ಯದ ಕಾರ್ಯ ಮರಾಠಿ ಮತ್ತು ಗುಜರಾತಿ ಭಾಷೆಯ ಕೃತಿಗಳನ್ನೂ ಒಳಗೊಂಡಿರುವುದು ಅದರ ವ್ಯಾಪ್ತಿಯನ್ನು ಇನ್ನೂ ಹೆಚ್ಚಿಸಿದೆ.

ತಮ್ಮ ಬರವಣಿಗೆಯ ಹೆಚ್ಚಿನ ಶಕ್ತಿಯನ್ನು ಇವರು ಅನುವಾದ ಕಾರ್ಯಕ್ಕೆ ವಿನಿಯೋಗಿಸಿದ್ದರೂ ಕನ್ನಡದಲ್ಲಿ ಸ್ವತಂತ್ರವಾಗಿ ಬರೆದಿರುವ ‘ಕರ್ನಾಟಕದ ಬಲಿದಾನ’ ೧೯೩೭ರ ವರೆಗಿನ ಕರ್ನಾಟಕದ ರಾಜಕೀಯ ಇತಿಹಾಸವನ್ನು ಒಳಗೊಂಡಿದ್ದರೆ, “ಕಾಂಗ್ರೆಸ್ಸಿನ ಇತಿಹಾಸ” ೧೯೩೭ರ ವರೆಗಿನ ಕಾಂಗ್ರೆಸ್ಸಿನ ಇತಿಹಾಸ. ಇದು ಆಗಿನ ಹಿರಿಯ ರಾಜಕೀಯ ಮುಖಂಡರ ಸಂಕ್ಷಿಪ್ತ

ಜೀವನ ಚರಿತ್ರೆಗಳನ್ನು ಚಿತ್ರಿಸುತ್ತದೆ. 'ಶ್ರೇಷ್ಠ ದಾನ' ರಾಜಕೀಯ ಕ್ಷೇತ್ರದ ಕಥೆಗಳ ಸಂಗ್ರಹವಾದರೆ 'ನನ್ನ ಕಾಶ್ಮೀರ ಪ್ರವಾಸ' ಅವರ ಪ್ರವಾಸ ಕಥನವಾಗಿದೆ.

ಪ್ರಾರಂಭದಲ್ಲಿಯೇ ಸತ್ಯಾಗ್ರಹ ಆಂದೋಲನದಲ್ಲಿ ಭಾಗವಹಿಸಿದ್ದ ಜೋಶಿಯವರು ಕರ್ನಾಟಕದಲ್ಲಿ ಬೇರೂರಿದ ಅಪ್ಪಟ ರಾಷ್ಟ್ರೀಯವಾದಿಗಳು. ಕರ್ನಾಟಕ ಪ್ರಾಂತೀಯ ಹಿಂದೀ ಪ್ರಚಾರ ಸಭೆ, ಅಖಿಲ ಭಾರತ ಸಾಹಿತ್ಯಸಮ್ಮೇಲನ, ಕರ್ನಾಟಕ ವಿದ್ಯಾವರ್ಧಕ ಸಂಘ ಮೊದಲಾದ ಸಂಘಸಂಸ್ಥೆಗಳು ಅವರು ಸಲ್ಲಿಸಿರುವ ಅಮೂಲ್ಯ ಸೇವೆಯನ್ನು ಮನ್ನಿಸಿ ಅವರನ್ನು ಸನ್ಮಾನಿಸಿವೆ. ಬಿಡುವಿಲ್ಲದೆ ದುಡಿದು ಜೀವನದ ಅಮೃತ ಮಹೋತ್ಸವವನ್ನು ಕಂಡಿರುವ ಜೋಶಿಯವರ ಉತ್ಸಾಹ, ಸರಳತೆ, ಸಜ್ಜನಿಕೆಗಳಿಗೆ ಮಾತ್ರ ಮುಪ್ಪು ಆವರಿಸಿಲ್ಲವೆಂದೇ ಹೇಳಬೇಕು. ಗುರುನಾಥ ಜೋಶಿಯವರಂಥ ವ್ಯಕ್ತಿಗಳು ಪ್ರತಿಯೊಂದು ಪ್ರಾಂತದಲ್ಲಿಯೂ ನಾಲ್ಕು ಜನ ಇದ್ದುದಾದರೆ ಭಾರತದ ವಿವಿಧ ಭಾಷೆಗಳ ಜನತೆಯಲ್ಲಿ ಪರಸ್ಪರ ತಿಳುವಳಿಕೆ ಹಾಗೂ ಸಾಹಿತ್ಯಿಕ ಕೊಡುಕೊಳ್ಳುವಿಕೆಯಿಂದ ಎಂತಹ ಸಾಮರಸ್ಯವುಂಟಾಗಬಹುದೆಂಬುದನ್ನು ಊಹಿಸಿದರೆ ಸಂತೋಷವಾಗುತ್ತದೆ.

'ನಮ್ಮ ಗುರಣ್ಣ'
(ಅಭಿನಂದನ ಗ್ರಂಥ)
೧೯೮೪

## ೪೧

# ಪ್ರೊ. ಬಿ.ಎಸ್. ಗಣಾಚಾರಿಯವರ ಸ್ಮರಣೆ

ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ನಾನು ಪ್ರಸಾರಾಂಗದ ನಿರ್ದೇಶಕನಾಗಿ ಕೆಲಸ ಮಾಡುತ್ತಿದ್ದಾಗ ಅನೇಕ ಪ್ರಾಧ್ಯಾಪಕರ ಸಂಪರ್ಕ ಒದಗಿದ್ದು ಒಂದು ಸುಯೋಗ. ಗ್ರಂಥ ಪ್ರಕಟನೆ, ಸಂಶೋಧನ ಪತ್ರಿಕೆಗಳ ಸಂಪಾದನೆ, ವ್ಯಾಸಂಗ ವಿಸ್ತರಣ ಉಪನ್ಯಾಸ ಶಿಬಿರಗಳು ಹಾಗೂ ವಿಶೇಷೋಪನ್ಯಾಸ ಮಾಲೆಗಳು - ಹೀಗೆ ಒಂದಿಲ್ಲ ಒಂದು ಕಾರ್ಯದಲ್ಲಿ ಅಧ್ಯಾಪಕ ವರ್ಗದವರು ನೀಡುತ್ತಿದ್ದ ಸಹಕಾರ ಅಪೂರ್ವವಾಗಿದ್ದಿತು. ವಿಶ್ವವಿದ್ಯಾಲಯದ ಇಂಗ್ಲಿಷ್ ವಿಭಾಗದ ಡಾ. ಸಿ.ಆರ್. ಯರವಿನತೆಲಿಮಠ ಅವರು ಒಮ್ಮೆ ಪ್ರಸಾರಾಂಗಕ್ಕೆ ಬಂದು ವಿಶ್ವವಿದ್ಯಾಲಯ ಪ್ರಕಟನೆಗೆ ತೆಗೆದುಕೊಂಡಿದ್ದ ಅವರ ಥಿಸೀಸ್ ಬಗ್ಗೆ ವಿಚಾರಿಸುತ್ತ ಆ ಕೃತಿಯನ್ನು ತಮ್ಮ ಗುರುಗಳಾದ ಪ್ರೊ ಬಿ.ಎಸ್. ಗಣಾಚಾರಿಯವರಿಗೆ ಅರ್ಪಣ ಮಾಡಲು ಅನುಮತಿ ಕೋರಿದ ಪ್ರಸಂಗ ಇಂದಿಗೂ ನನ್ನ ನೆನಪಿನಲ್ಲಿದೆ. ವಿದ್ಯಾವಿನಯ ಸಂಪನ್ನರಾದ ಪ್ರೊ. ಯರವಿನತೆಲಿಮಠರಂಥವರು ತಮ್ಮ ಭವಿಷ್ಯವನ್ನು ರೂಪಿಸಿದ ಗುರುವನ್ನು ಈ ರೀತಿ ಸ್ಮರಿಸಿಕೊಳ್ಳುತ್ತಿರುವುದನ್ನು ಕಂಡು ನನಗೆ ನಿಜಕ್ಕೂ ಸಂತೋಷವೆನಿಸಿತು.

ಪ್ರೊ. ಗಣಾಚಾರಿಯವರು ವಿಶ್ವವಿದ್ಯಾಲಯದ ಸಿಂಡಿಕೇಟ್ ಮೊದಲಾದ ಸಭೆಗಳಿಗೆ ಬಂದಾಗ ಅವರ ಭದ್ರಾಕಾರವನ್ನು ನಾನು ದೂರದಿಂದಲೇ ನೋಡಿದ್ದುಂಟು. ಒಂದು ಬಗೆಯ ಗಾಂಭೀರ್ಯ ಅವರ ನಡಿಗೆಯಲ್ಲಿದ್ದುದು ಒಡೆದು ಕಾಣುತ್ತಿತ್ತು. ಅದೇನು ಕಾರಣದಿಂದಲೊ ಏನೊ ನನಗೆ ಅವರ ಪ್ರತ್ಯಕ್ಷ ಪರಿಚಯವಾಗಲಿ, ಸಮೀಪದ ಸಂಪರ್ಕವಾಗಲಿ ಒದಗದೇ ಹೋದದ್ದನ್ನು ನೆನೆದರೆ ನನಗೇ ಇಂದು ಅಚ್ಚರಿ ಉಂಟಾಗುತ್ತದೆ. ಆದರೆ ಪರೋಕ್ಷವಾಗಿ ನಾನು ಅವರ ಬಗ್ಗೆ ಸಾಕಷ್ಟು ವಿಷಯ ತಿಳಿದುಕೊಂಡಿದ್ದೆನಾದ್ದರಿಂದ ಒಂದು ಬಗೆಯ ಗೌರವ ಭಾವನೆ ನನ್ನಲ್ಲಿ ಉಳಿದುಕೊಂಡು ಬಂದಿದೆ.

ಇಂಗ್ಲೀಷ್ ಪ್ರಾಧ್ಯಾಪಕರಾಗಿದ್ದ ಅವರು ಆ ಭಾಷೆ ಹಾಗೂ ಸಾಹಿತ್ಯದಲ್ಲಿ ವಿಶೇಷ ಪರಿಣತಿ ಪಡೆದುಕೊಂಡದ್ದಲ್ಲದೆ ಅದನ್ನು ವಿದ್ಯಾರ್ಥಿಗಳಿಗೆ ಪರಿಣಾಮಕಾರಿಯಾಗಿ ಬೋಧಿಸುವಲ್ಲಿ ಮಿಗಿಲಾಗಿದ್ದರೆಂದು ಅವರ ಅನೇಕ ವಿದ್ಯಾರ್ಥಿಗಳ ಬಾಯಿಂದ ಕೇಳಿ ನಾನು ಸಂತೋಷಪಟ್ಟಿದ್ದುಂಟು. ತನ್ನ ವಿದ್ಯಾರ್ಥಿಗಳಲ್ಲಿ ಜ್ಞಾನ ತೃಷೆಯನ್ನು ಹೆಚ್ಚಿಸಲು ಸಮರ್ಥನಾದವನೇ ನಿಜವಾದ ಅಧ್ಯಾಪಕನಲ್ಲವೆ?

ಉತ್ತರ ಕರ್ನಾಟಕದಲ್ಲಿ ಒಂದೊಂದಾಗಿ ತಲೆ ಎತ್ತಿದ ಕಾಲೇಜುಗಳು ಆಯಾ ಪ್ರದೇಶದ ಜನತೆಯಲ್ಲಿ ಶಿಕ್ಷಣದ ಜಾಗೃತಿಗಾಗಿ ಅಂದು ಪಟ್ಟ ಪರಿಶ್ರಮ ಹಾಗೂ ಆಯಾ ಸಂಸ್ಥೆಗಳಲ್ಲಿ ತ್ರಿಕರಣಪೂರ್ವಕ ದುಡಿದ ಅಧ್ಯಾಪಕರ ನಿಸ್ವಾರ್ಥ ಸೇವೆ ಚಿರಸ್ಮರಣೀಯವಾದದ್ದು. ವಿಜಾಪುರದ ವಿಜಯ ಕಾಲೇಜಿನ ರೂವಾರಿಗಳಲ್ಲಿ ಒಬ್ಬರಾಗಿದ್ದ ಹಾಗೂ ಅದರ ಜೊತೆಗೆ ಇನ್ನೂ ಕೆಲವು ವಿದ್ಯಾ ಸಂಸ್ಥೆಗಳು ಪ್ರಾರಂಭವಾಗಲು ಪ್ರಯತ್ನಿಸಿ ಸಫಲರಾದ ಪ್ರೊ.ಗಣಾಚಾರಿಯವರನ್ನು ಇಂದು ಸ್ಮರಿಸಿಕೊಳ್ಳುವುದು ಯಥೋಚಿತವಾಗಿದೆ. ಬೋಧನೆಯ ಜೊತಗೆ ದಕ್ಷ ಆಡಳಿತಗಾರರಾಗಿ, ಶಿಕ್ಷಕ ಮತದಾರ ಕ್ಷೇತ್ರದಿಂದ ವಿಧಾನ ಪರಿಷತ್ತಿಗೆ ಆಯ್ಕೆಯಾಗಿ ಶಿಕ್ಷಕ ವರ್ಗಕ್ಕೆ ಅನೇಕ ಬಗೆಯಲ್ಲಿ ನ್ಯಾಯ ಒದಗಿಸಿಕೊಟ್ಟ ಕೀರ್ತಿ ಅವರದಾಗಿದೆ.

ನಮ್ಮ ಸಂಸ್ಕೃತಿಯಲ್ಲಿ ಪ್ರಚಲಿತವಿದ್ದ 'ಸೇವಾ ಧರ್ಮ' ಎನ್ನುವ ಮಾತು ಇಂದು ತನ್ನ ಅರ್ಥವನ್ನು ಕಳೆದುಕೊಳ್ಳುತ್ತಿದೆ.ಒಳಗೊಳಗೆ ಸ್ವಾರ್ಥವನ್ನಿಟ್ಟುಕೊಂಡು ಹೊರಗೆ 'ಸೇವೆ' ಕೈಕೊಳ್ಳುವವರ ಸಂಖ್ಯೆ ಎಲ್ಲ ಕ್ಷೇತ್ರಗಳಲ್ಲಿಯೂ ಕಂಡುಬರುತ್ತಿರುವುದು ಸಾಮಾನ್ಯವಾಗಿ ಬಿಟ್ಟಿದೆ. ತಾನು ನಿಜವಾಗಿ ಮಾಡಿ ಪೂರೈಸಬೇಕಾದ ಕೆಲಸಗಳಿಂದ ತಪ್ಪಿಸಿಕೊಂಡು ಸುಲಭವಾಗಿ ಜನಪ್ರಿಯತೆಯನ್ನು ಗಳಿಸಿಕೊಳ್ಳುವ ದಾರಿಯಾಗಿ ಅದು ಮಾರ್ಪಟ್ಟಿರುವುದು ನಿಜಕ್ಕೂ ಶೋಚನೀಯ.

ಇಂಥ ಸಂದರ್ಭದಲ್ಲಿ ವಿಜಾಪುರ ಜಿಲ್ಲೆಯ ನನ್ನ ಮಿತ್ರರು ಪ್ರೊ. ಬಿ. ಎಸ್.ಗಣಾಚಾರಿ, ಡಾ.ಎಚ್. ಟಿ.ಸಾಸನೂರ ಅಂಥವರನ್ನು ನೆನಸಿಕೊಳ್ಳುತ್ತಿರುವುದು ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ದೃಷ್ಟಿಯಿಂದ ತುಂಬ ಮಹತ್ವದ್ದಾಗಿದೆ.

ಅವರ ವಿದ್ಯಾರ್ಥಿಗಳನೇಕರು (ಉದಾ: ಡಾ. ಯರವಿನತೆಲಿಮಠ, ಪ್ರೊ. ವೀರೇಂದ್ರ ಸಿಂಪಿ, ಡಾ.ಕಲಬುರ್ಗಿ, ಡಾ.ಆರ್.ಎಸ್.ಚುಳಕಿ, ಡಾ.ಆರ್.ಕೆ. ಕುಲಕರ್ಣಿ ಮೊದಲಾದವರು) ಈ ಗುರುಶಿಷ್ಯ ಪರಂಪರೆಯನ್ನು ಮುಂದುವರಿಸಿ ಉನ್ನತ ಮಟ್ಟದ ಪ್ರಾಧ್ಯಾಪಕರೂ ಗಣ್ಯ ಲೇಖಕರೂ ಆಗಿ ಹೆಸರು ಮಾಡಿರುವದು ಪ್ರಶಂಸನೀಯ. ನಿಜವಾದ ಶಿಕ್ಷಕ ಅಥವಾ ಗುರು ತನ್ನ ಶಿಷ್ಯರಿಂದ ಏನನ್ನು ನಿರೀಕ್ಷಿಸುತ್ತಾನೆಂಬ ಪ್ರಶ್ನೆಗೆ ನಮ್ಮ ಪರಂಪರೆ ಸಮರ್ಪಕವಾಗಿ ಉತ್ತರಿಸಿದೆ: 'ಶಿಷ್ಯಾದಿಚ್ಛೇತ್ ಪರಾಜಯಂ'; ಯಾವುದರಲ್ಲಿ? ವಿದ್ಯೆಯಲ್ಲಿ, ವಿನಯದಲ್ಲಿ, ವಿವೇಕದಲ್ಲಿ. ವಿದ್ಯಾಸಂಪನ್ನನಾದ ವ್ಯಕ್ತಿ ಸ್ವಾರ್ಥವನ್ನು ಸಾಧ್ಯವಿದ್ದಮಟ್ಟಿಗೆ ನೀಗಿಕೊಂಡು, ಅಹಂಕಾರವನ್ನು ತಗ್ಗಿಸಿಕೊಂಡು ಪರಾರ್ಥದತ್ತ ದೃಷ್ಟಿ ಹಾಯಿಸುತ್ತಾನೆ. ಸಮಷ್ಟಿಯ ಹಿತದಲ್ಲಿ ತನ್ನ ಹಿತವನ್ನು ಗುರುತಿಸಿಕೊಳ್ಳಲು ಪ್ರಯತ್ನಿಸುತ್ತಾನೆ; ತಾನೂ ಬದುಕಿ ಅನ್ಯರನ್ನೂ ಬದುಕಗೊಡುವ ಸನ್ಮಾರ್ಗದಲ್ಲಿ ಸಾಗುತ್ತಾನೆ. ಆದ್ದರಿಂದ ಒಬ್ಬ ಉತ್ತಮ ಶಿಕ್ಷಕನ ಪ್ರಭಾವ ವಿದ್ಯಾರ್ಥಿಯ ಜೀವನದಲ್ಲಿ ಎಲ್ಲಿ ಮುಕ್ತಾಯಗೊಳ್ಳುತ್ತದೆ ಎಂದು ಹೇಳಲು ಬರುವುದಿಲ್ಲ. Henry Adams ಎಂಬವನು ಹೇಳುತ್ತಾನೆ : A teacher affects eternity. He can never tell where his influence stops.

ಗುಣಕ್ಕಿಂತ ಹಣವೇ ಮೇಲಾಗಿ ಮೆರೆಯುತ್ತಿರುವ ಇಂದಿನ ಮೌಲ್ಯರಹಿತ ವಾತಾವರಣದಲ್ಲಿ ಅಂಥ ಗುರುಗಳ ಸ್ಮರಣೆಯಿಂದ ಒಳ್ಳೆಯ ಬದುಕಿಗೆ ಪ್ರೇರಣೆ ಪಡೆದು, ಅದನ್ನು ಯುವ ಪೀಳಿಗೆಗೆ ಸಾಗಿಸುವದು ಎಂದಿಗಿಂತ ಇಂದು ಹೆಚ್ಚಿನ ಅಗತ್ಯವೆನಿಸಿದೆ.

**'ಸಮರ್ಪಣೆ'**

(ಸಂಸ್ಮರಣ ಗ್ರಂಥ)

೨೦೦೧

## ೪೨

# ಹಿರಿಯರಾದ ಹಿರೇಗೌಡರು

ನಾನು ನನ್ನ ವಿದ್ಯಾರ್ಥಿ ದೆಸೆಯಿಂದಲೂ ಧಾರವಾಡದಲ್ಲಿ ಆಸ್ಥೆಯಿಂದ ಗಮನಿಸುತ್ತ ಬಂದ ಮಹನೀಯರಲ್ಲಿ ಶ್ರೀ ಆಯ್.ಜಿ.ಹಿರೇಗೌಡರು ಒಬ್ಬರು. ಯಾವಾಗಲೂ ಮುಖದಲ್ಲಿ ಗೆಲುವನ್ನು ತುಂಬಿಕೊಂಡು,ಚುರುಕಾಗಿ ಮಾತನಾಡುತ್ತ,ಎದುರಿಗೆ ಬಂದವರ ಯೋಗಕ್ಷೇಮವನ್ನು ವಿಚಾರಿಸುತ್ತ,ಹಿರಿಕಿರಿಯರೆಲ್ಲರನ್ನು ಸಮಾನಭಾವದಿಂದ ಕಾಣುತ್ತಿದ್ದ ಅವರ ವ್ಯಕ್ತಿತ್ವವೇ ವಿಶಿಷ್ಟವಾದದ್ದು. ನನ್ನ ಸಹಪಾಠಿಗಳಲ್ಲಿ ಕೆಲವರು ಕಾನೂನು ಪದವಿಯನ್ನು ಪಡೆದು ಹಿರೇಗೌಡರ ಕೈಯಲ್ಲಿ ಕೆಲಸಮಾಡುತ್ತ ಅವರ ಮಾರ್ಗದರ್ಶನದಲ್ಲಿ ಮುಂದುವರಿದು, ವಕೀಲವೃತ್ತಿಯಲ್ಲಿ ಹೆಸರು ಪಡೆದಿದ್ದನ್ನು ಕಂಡಿದ್ದೇನೆ. ಅವರೆಲ್ಲರೂ ಈ ಹಿರಿಯರನ್ನು ಮುಕ್ತಕಂಠದಿಂದ ಪ್ರಶಂಸೆ ಮಾಡುವುದನ್ನು ಕೇಳಿ ಸಂತೋಷಪಟ್ಟಿದ್ದೇನೆ.

ನಾನು ಕಲ್ಯಾಣನಗರದ ನಿವಾಸಿಯಾದ ಮೇಲೆ ಹಿರೇಗೌಡರನ್ನು ನೋಡದೆ ಇರುವ ದಿನವೇ ಇಲ್ಲವೆಂದು ಹೇಳಬಹುದು. ಬೆಳಗಿನ ವಾಯುವಿಹಾರವನ್ನು ಅವರು ಎಂದೂ ತಪ್ಪಿಸಿಕೊಂಡವರಲ್ಲ. ಶುಭ್ರ ಬಿಳಿಬಟ್ಟೆ, ತಲೆಯ ಮೇಲೆ ಚೂಪಾದ ಗಾಂಧಿ ಟೊಪ್ಪಿಗೆ, ಬೀಸಾದ ನಡಿಗೆ,ಹೊಳೆಯುವ ಕಣ್ಣಿನ ದೃಷ್ಟಿ ಎಲ್ಲ ಬಗೆಯಿಂದಲೂ ಎದ್ದು ಕಾಣುವ ನಿಲುವು. 'ಕಂಡ ಭಕ್ತಂಗೆ ಕೈಮುಗಿವಾತನೇ ಭಕ್ತ' ಎಂಬ ಬಸವಣ್ಣನವರ ನುಡಿಯನ್ನು ಹೀಗೆ ಆಚರಣೆಯಲ್ಲಿ ತಂದವರೆಷ್ಟು? ಶರಣರ ತತ್ತ್ವಗಳು,ವಚನಸಾಹಿತ್ಯ ಹಾಗೆಯೇ ಯೇಸುಕ್ರಿಸ್ತ,ಪೈಗಂಬರ ಮೊದಲಾದ ಮಹಾತ್ಮರ ತತ್ತ್ವಗಳ ತಿರುಳನ್ನು ಅದೇ ಶ್ರದ್ಧೆಯಿಂದ ಅಭ್ಯಾಸಮಾಡಿದವರೆಂಬುದನ್ನು ಅವರ ಭಾಷಣಗಳನ್ನು ಕೇಳಿದವರೆಲ್ಲರೂ ಬಲ್ಲರು. ಅಲ್ಲಸಲ್ಲದ ಆಡಂಬರದ ಆಚರಣೆಗಳನ್ನು ಅವರು ಖಂಡಿಸುತ್ತಿದ್ದರಲ್ಲದೆ, ಯಾವುದೇ ಧರ್ಮದಲ್ಲಿ ಮನುಷ್ಯನ ವಿಕಾಸಕ್ಕೆ, ಪ್ರಗತಿಗೆ, ಹೃದಯದ ವೈಶಾಲ್ಯಕ್ಕೆ ಅಡ್ಡಬರುವ ಅಮಾನವೀಯ ಅಂಶಗಳನ್ನು ಅಷ್ಟೇ ನಿಷ್ಠುರವಾಗಿ ತಿರಸ್ಕರಿಸುತ್ತಿದ್ದರು. ಕಾಯಿದೆ-ಕಾನೂನಿನ ವಿಷಯದಲ್ಲಿ ನಿಷ್ಣಾತರಾಗಿದ್ದಂತೆಯೇ ಅದನ್ನು ಮೀರಿದ ಮನುಷ್ಯತ್ವವನ್ನು ಅವರು ಹೆಚ್ಚು ಗೌರವಿಸುತ್ತಿದ್ದರು. ಹೀಗಾಗಿ ಸಾಮಾಜಿಕ ರಂಗದಲ್ಲಿಯೂ ಅವರು ತಮ್ಮ ನೈತಿಕಬಲದಿಂದ ಕೊನೆಯವರೆಗೂ ವಿವಿಧವರ್ಗದವರ ಗೌರವ ಮನ್ನಣೆಗಳಿಗೆ ಪಾತ್ರರಾಗಿದ್ದರು.

ಯಾವುದೇ ಸಂಘ ಸಂಸ್ಥೆಯವರು ಹಿರೇಗೌಡರನ್ನು ತಮ್ಮವರೆಂದು ಹೇಳಿಕೊಳ್ಳಲು ಹೆಮ್ಮೆಪಡುತ್ತಿದ್ದರು. ಅವರ ಸಲಹೆ ಸೂಚನೆಗಳಲ್ಲಿ ಆದರ್ಶವನ್ನು ಮರೆಯದ ವಾಸ್ತವತೆ

೧೯೬೭ರಲ್ಲಿ ನನಗೆ ಚನ್ನಬಸಪ್ಪನವರ ಇನ್ನೊಂದು ಮುಖದ ಪರಿಚಯವಾಯಿತು. ಅದು ಜಾನಪದದಲ್ಲಿರುವ ಅವರ ವಿಶೇಷ ಆಸಕ್ತಿ. ತರೀಕೆರೆಯಲ್ಲಿ ಮೊದಲ ಬಾರಿಗೆ ಬಹಳ ದೊಡ್ಡ ಪ್ರಮಾಣದಲ್ಲಿ ನೆರವೇರಿದ ಅಖಿಲ ಕರ್ನಾಟಕ ಜಾನಪದ ಸಮ್ಮೇಳನದ ಪ್ರೇರಕಶಕ್ತಿಯಾಗಿ , ಕಾರ್ಯದರ್ಶಿಯಾಗಿ ಅವರು ಮಾಡಿದ ಕೆಲಸ ಅಪೂರ್ವವಾಗಿದ್ದಿತು. ಅವರ ಕೋರಿಕೆಯಂತೆ ಸಮ್ಮೇಳನದ ಸಾಹಿತ್ಯ ಗೋಷ್ಠಿಯಲ್ಲಿ ನಾನೊಂದು ಪ್ರಬಂಧವನ್ನು ('ಜನಪದ ಕಾವ್ಯದಲ್ಲಿ ಪ್ರತಿಮಾ ವಿಧಾನ') ಮಂಡಿಸಿದೆ. ಅದೂ ಅಲ್ಲದೆ, ಕವಿವರ ಬೇಂದ್ರೆಯವರು ಆ ಸಮ್ಮೇಳನದ ಅಧ್ಯಕ್ಷರು. ಅನಾರೋಗ್ಯದ ಮೂಲಕ ಅವರು ಸಮ್ಮೇಳನಕ್ಕೆ ಬಾರದಿದ್ದರೂ ತಮ್ಮ ಭಾಷಣವನ್ನು ನನ್ನ ಕೈಯಲ್ಲಿ ಕೊಟ್ಟು ಕಳಿಸಿದ್ದರು. ಚನ್ನಬಸವಪ್ಪನವರಿಗೆ ಅದನ್ನು ತಲುಪಿಸಿದೆ. 'ಬೇಂದ್ರೆಯವರ ಪರವಾಗಿ ಅವರ್ನ ಭಾಷಣವನ್ನು ಸಭೆಯಲ್ಲಿ ನೀವೇ ಓದಬೇಕು' ಎಂದು ಅವರು ಒತ್ತಾಯದಿಂದ ಆ ಕೆಲಸವನ್ನು ನನಗೆ ವಹಿಸಿಬಿಟ್ಟರು. ರಾಜ್ಯಪಾಲರಾಗಿದ್ದ ಶ್ರೀ ಜಯಚಾಮರಾಜ ಒಡೆಯರ ಅವರು ಸಮ್ಮೇಳನವನ್ನು ಉದ್ಘಾಟಿಸಿದರು. ನೆರೆದಿದ್ದ ಪ್ರಚಂಡ ಜನ ಸಮೂಹ ಬೇಂದ್ರೆಯವರ ಗೈರುಹಾಜರಿಯಲ್ಲಿ ಅವರ ಭಾಷಣವನ್ನು ಶಾಂತ ರೀತಿಯಿಂದ ಆಲಿಸಿತು. ನಾನು ಅಗ್ನಿದಿವ್ಯದಿಂದ ಪಾರಾದೆ ಎನಿಸಿತು. ಆ ವರ್ಷದ ಕೊನೆಯಲ್ಲಿಯೇ ಸಂಸ್ಮರಣ ಗ್ರಂಥವೂ ಪ್ರಕಟವಾಯಿತು. ಚನ್ನಬಸಪ್ಪನವರೇ ಅದರ ರೂವಾರಿ ಎಂದು ಬೇರೆ ಹೇಳಬೇಕಿಲ್ಲ. ಐವತ್ತಾರು ಜನ ಲೇಖಕರ ಅಮೂಲ್ಯ ಲೇಖನಗಳನ್ನೊಳಗೊಂಡ ೮೩೫ ಪುಟಗಳ ಬೃಹತ್ ಗ್ರಂಥ 'ಹೊನ್ನ ಬಿತ್ತೇವು ಹೊಲಕೆಲ್ಲ '! ಆಮೇಲೆ ಕನ್ನಡ ನಾಡಿನ ತುಂಬ ನಡೆದ ಜಾನಪದ ಸುಗ್ಗಿಗೆ ಅಂದಿನ ಹದವಾದ ಬಿತ್ತನೆಯೇ ಕಾರಣವಾಯಿತೆಂದರೆ ತಪ್ಪಾಗದು. 'ಕರ್ನಾಟಕ ಜನಪದ ಕಲೆಗಳು' ಅವರಿಂದಲೇ ಸಂಪಾದನೆಗೊಂಡು ಸಾಹಿತ್ಯ ಪರಿಷತ್ತಿನಿಂದ ೧೯೭೭ರಲ್ಲಿ ಪ್ರಕಟವಾದಾಗ ಈ ರೀತಿಯಲ್ಲಿ ಅದು ಮತ್ತೊಂದು ಮೈಲುಗಲ್ಲಾಗಿ ಪರಿಣಮಿಸಿತು. 'ಗ್ರಾಮ ಜ್ಯೋತಿ' (ಕೆ.ಆರ್. ಲಿಂಗಪ್ಪ ಅಭಿನಂದನ ಗ್ರಂಥ) ಯನ್ನು ಅವರು ಬೆಳಗಿದಾಗ ಆ ಕ್ಷೇತ್ರದಲ್ಲಿ ಮತ್ತಷ್ಟು ಹೊಸ ಫಸಲು ಬರುವಂತಾಯಿತು.

ಹಲವಾರು ಸ್ವಂತ ಕೃತಿ ರಚನೆಯ ಜೊತೆಗೆ ಚಿತ್ರರಂಗ, ಪತ್ರಿಕಾ ಕ್ಷೇತ್ರಕ್ಕೂ ಅವರ ಸೇವೆ ಸಂದಿದೆ. ಸದಾ ಕ್ರಿಯಾಶೀಲರಾಗಿರುವ ಅವರು ತಮ್ಮ ನಿಸ್ವಾರ್ಥ ಸೇವೆಯಿಂದ ಎಲ್ಲರಿಗೂ ಅಚ್ಚುಮೆಚ್ಚು. ಕೆಲಸದಿಂದ ನಿವೃತ್ತರಾಗಿದ್ದರೂ ಅನೇಕ ಸಂಘ ಸಂಸ್ಥೆಗಳಿಗೆ ಅವರು ನಿವೃತ್ತರಾಗುವುದು ಬೇಕಾಗಿಲ್ಲ. ಈ ದಿಸೆಯಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಕಾರ್ಯದರ್ಶಿಗಳಾಗಿರುವುದು ಅವರ ಅನುಭವದ ಸದುಪಯೋಗಕ್ಕೆ ಒದಗಿರುವ ಒಂದು ದೊಡ್ಡ ಅವಕಾಶವೆನ್ನಬಹುದು.

ಹೊಟ್ಟೆಯೊಳಗಿನ ಹಾಡ ಬಿಟ್ಟು ಬಿಡದಲೆ ಹಾಡಿ
ಮುಟ್ಟಿಸಬೇಕ ಕಲಿತ ರುಣವ, ಇಲದಿರಕ
ಹಾಡ ಹಿಂಗ್ಯಾವ ಬಾಯಾಗ

ಜನಪದ ಕವಿಗಳು ತಮ್ಮ ಜೀವನವನ್ನು ಸಾರ್ಥಕಗೊಳಿಸಿಕೊಂಡದ್ದು ಇಂಥ ಕರ್ತವ್ಯ ನಿಷ್ಠೆಯಿಂದ ಕೂಡಿದ ಸಾಮಾಜಿಕ ಕಳಕಳಿಯಿಂದ, ಗೊ.ರು. ಚನ್ನಬಸಪ್ಪನವರಿಗೆ ಇಂದು ರಾಜ್ಯ ಮಟ್ಟದಲ್ಲಿ ಅಭಿನಂದನ ಸಮಾರಂಭ ನಡೆಯುತ್ತಿರುವುದು ನಾಡಿನ ಜನ ಅವರಿಗೆ ತಮ್ಮ ಋಣ ಮುಟ್ಟಿಸುತ್ತಿರುವುದರ ದ್ಯೋತಕವೆಂದು ನಾನು ಭಾವಿಸಿದ್ದೇನೆ.

**'ಹಳ್ಳಿಯ ಹಣತೆ'** ೧೯೬೧

(ಅಭಿನಂದನ ಗ್ರಂಥ)

೪೪

## ನಾಡಗೀರ ಶಿವರಾಯ : ನಾಡಭೂಷಣ

ನನ್ನ ಮಾಧ್ಯಮಿಕ ಶಿಕ್ಷಣ ಧಾರವಾಡದ ರಾಜಾ ಲಖಮಗೌಡ ಸರದೇಸಾಯಿ ಹೈಸ್ಕೂಲಿನಲ್ಲಿ ೧೯೪೦ರಿಂದ ಪ್ರಾರಂಭವಾಯಿತು. ಶೈಕ್ಷಣಿಕ ಹಾಗೂ ಸಾಹಿತ್ಯಿಕ ಚಟುವಟಿಕೆಗಳಿಂದ ತುಂಬಿ ತುಳುಕುತ್ತಿದ್ದ ಅಂದಿನ ಧಾರವಾಡದ ವಾತಾವರಣದಲ್ಲಿ ನನ್ನ ಎಳೆಯ ಮನಸ್ಸು ಕುತೂಹಲದಿಂದ ಕಣ್ಣು, ಕಿವಿ ತೆರೆಯತೊಡಗಿತ್ತು. ಮುಂದೆ ನಾಲ್ಕೈದು ವರ್ಷಗಳ ಅವಧಿಯಲ್ಲಿ ನನ್ನ ಕಿವಿಗೆ ಬೀಳುತ್ತಿದ್ದ ಒಳ್ಳೆಯ ಶಿಕ್ಷಕರ ಹೆಸರಿನಲ್ಲಿ ಕೆ.ಇ. ಬೋರ್ಡಿನ ಶ್ರೀ ನಾಡಿಗೇರ ಮಾಸ್ತರರೂ ಒಬ್ಬರಾಗಿದ್ದರು. ಆ ಸಂಸ್ಥೆಯಲ್ಲಿ ಕೆಲಸ ಮಾಡುತ್ತಿದ್ದ ಅನೇಕ ಶಿಕ್ಷಕರು ಖಾದೀಧಾರಿಗಳಾಗಿ ರಾಷ್ಟ್ರೀಯ ಮನೋಧರ್ಮವನ್ನು ವಿದ್ಯಾರ್ಥಿಗಳಲ್ಲಿ ಬಿಂಬಿಸುತ್ತಿದ್ದುದನ್ನು ನಾನು ಕಂಡಿದ್ದೆ. ನಾನು ಮೊಟ್ಟ ಮೊದಲು ಶ್ರೀ ನಾಡಿಗೇರ ಅವರನ್ನು ಕಂಡದ್ದು ಸೇವಾದಲದ ಶಿಬಿರವೊಂದರಲ್ಲಿ ಎಂದು ತೋರುತ್ತದೆ. ಅವರ ನಸುಗಪ್ಪು ಮುಖದಲ್ಲಿ ನಸುನಗೆ, ಗಾಂಭೀರ್ಯ, ಶಿಸ್ತು ಮೇಳವಿಸಿ ಕಂಗೊಳಿಸುತ್ತಿರುವುದನ್ನು ಇಂದಿಗೂ ಕಾಣಬಹುದು.

ನಾನು ಕರ್ನಾಟಕ ಕಾಲೇಜಿನಲ್ಲಿ ವಿದ್ಯಾರ್ಥಿಯಾಗಿದ್ದಾಗಲೇ ನನ್ನನ್ನು ತಮ್ಮ ಶಾಲೆಯ ಒಂದು ಸಭೆಗೆ ಆಮಂತ್ರಿಸಿ ಕಾವ್ಯದ ಬಗ್ಗೆ ನನ್ನಿಂದ ಭಾಷಣ ಮಾಡಿಸಿದ್ದನ್ನು ನಾನು ಮರೆತಿಲ್ಲ. ಕಾವ್ಯದ ಬಗ್ಗೆ, ಅದರಲ್ಲೂ ಬೇಂದ್ರೆಯವರ ಕಾವ್ಯದ ಬಗ್ಗೆ ಅವರಿಗಿದ್ದ ವಿಶೇಷ ಅಭಿರುಚಿಯನ್ನು ನಾನು ಆಗಲೇ ಕಂಡು ಸಂತೋಷಪಟ್ಟೆ.

ಶ್ರೀ ನಾಡಿಗೇರ ಅವರು ಮುಖ್ಯಾಧ್ಯಾಪಕರಾಗಿದ್ದಾಗಿನ ಅವಧಿಯಲ್ಲಿ ಏರ್ಪಾಡು ಮಾಡುತ್ತಿದ್ದ ಶೈಕ್ಷಣಿಕ ಪ್ರದರ್ಶನಗಳು ಎಷ್ಟೊಂದು ಆಕರ್ಷಕ ಹಾಗೂ ಉಪಯುಕ್ತವಾಗಿರುತ್ತಿದ್ದವೆಂದರೆ ವಿದ್ಯಾರ್ಥಿಗಳೊಂದಿಗೆ ಸಾರ್ವಜನಿಕರೂ ಸಾಲುಗಟ್ಟಿ ನಿಲ್ಲುತ್ತಿದ್ದುದನ್ನು ಅನೇಕರು ಇಂದಿಗೂ ನೆನಪಿಸಿಕೊಳ್ಳುತ್ತಾರೆ. ಕವಿವರ ಬೇಂದ್ರೆ ಹಾಗೂ ರಾಷ್ಟ್ರಕವಿ ಕುವೆಂಪು ಅವರ ಜೀವನ ಹಾಗೂ ಕೃತಿಗಳನ್ನು ಕುರಿತ ಪ್ರದರ್ಶನ ಸಮಾರಂಭಕ್ಕೆ ನನ್ನನ್ನೂ ಅವರು ಅತಿಥಿಯಾಗಿ ಬರಮಾಡಿಕೊಂಡಿದ್ದುಂಟು. ಅಲ್ಲಿಯ ಚಿತ್ರಗಳನ್ನು ತೆಗೆದವರು, ಮಾಹಿತಿಪುಟಗಳನ್ನು ತಯಾರಿಸಿದವರು ವೀಕ್ಷಕರಿಗೆ ವಿವರಗಳನ್ನು ನೀಡುತ್ತಿದ್ದವರಲ್ಲಿ ವಿದ್ಯಾರ್ಥಿಗಳೇ ಮುಖ್ಯವಾಗಿರುತ್ತಿದ್ದರು. ಅವರಿಗೆ ಮಾರ್ಗದರ್ಶನ, ಸ್ಫೂರ್ತಿ, ಪ್ರೋತ್ಸಾಹ ನೀಡುತ್ತಿದ್ದವರು ಶ್ರೀ ನಾಡಿಗೇರ ಹಾಗೂ ಅವರ ಶಿಕ್ಷಕ ಬಳಗ. ಅಂಥ ವೈಶಿಷ್ಟ್ಯಪೂರ್ಣ ಪ್ರದರ್ಶನಗಳನ್ನು

ನಾನು ಮತ್ತೆ ಬೇರೆಡೆ ಕಂಡಿಲ್ಲ ಎಂದು ಹೇಳಿದರೆ ಅತಿಶಯೋಕ್ತಿಯಾಗದು. ವಿದ್ಯಾರ್ಥಿಗಳ ಮನಸ್ಸು ಹೀಗೆ ಕಾರ್ಯಪ್ರವೃತ್ತವಾಗುವಂತೆ ಮಾಡುವಲ್ಲಿ ಶಿಕ್ಷಣದ ಉದ್ದೇಶ ತನ್ನಿಂದ ತಾನೆ ಸಫಲವಾಗುತ್ತದೆ. ಅವರ ಪ್ರತಿಭೆ, ಕೌಶಲ, ವ್ಯವಹಾರ ಪರಿಜ್ಞಾನವನ್ನು ಪರೀಕ್ಷಿಸುವ ಸಾಧನೆಗಳಾಗಿಯೂ ಇವು ಪರಿಣಮಿಸುವುದರಲ್ಲಿ ಸಂದೇಹವಿಲ್ಲ.

ನಮ್ಮ ಚಿಕ್ಕ ಮಗ ಕರುಣಪ್ರಸಾದ (ಈಗ ಅವನು ಬೆಂಗಳೂರಿನ ವಿಪ್ರೊ ಸಂಸ್ಥೆಯಲ್ಲಿ ಟೆಕ್ನಿಕಲ್ ಮ್ಯಾನೇಜರ್ ಕೆಲಸದಲ್ಲಿದ್ದಾನೆ) ಆ ಶಾಲೆಯ ವಿದ್ಯಾರ್ಥಿಯಾಗಿದ್ದಾಗ ಅವರು ಪಡೆಮಕೊಂಡ ವಿಶೇಷ ತರಬೇತಿ ಹಾಗೂ ಅದನ್ನು ನೀಡುತ್ತಿದ್ದ ಹೊಸ ಪದ್ಧತಿಯ ಬಗ್ಗೆ ನನಗೂ ಆಸಕ್ತಿ ಉಂಟಾಗಿದ್ದುಂಟು. ಆಗ ನಡೆದ ಒಂದು ಚಿಕ್ಕ ಪ್ರಸಂಗವನ್ನು ನಿಮಗೆ ಹೇಳಬೇಕು. ನಮ್ಮ ಮನೆಯಲ್ಲಿ ಸಾಕಿದ ನಾಯಿ ನಮ್ಮ ಹುಡುಗನಿಗೆ ಮುದ್ದಿನ ಪ್ರಾಣಿಯಾಗಿತ್ತು. ಒಮ್ಮೆ ಅವನು ಶಾಲೆಗೆ ಹೋಗುವಾಗ, ಕಟ್ಟಿದ ಸರಪಳಿಯನ್ನು ಬಿಚ್ಚಿಕೊಂಡಿತು. ಬೆದರಿಸಿದರೂ ಹಿಂಜರಿಯದೆ ಅವನ ಜೊತೆಗೇ ಹೋಗಿ ಕ್ಲಾಸಿನಲ್ಲಿ ಗೊಂದಲವುಂಟು ಮಾಡಿತ್ತು. ಶಿಸ್ತುಭಂಗ ಮಾಡಿದ ಕಾರಣದಿಂದ ಅವನ ಕಣ್ಣಿನಲ್ಲಿ ನೀರು ಬಂದುಬಿಟ್ಟಿತ್ತು. ಆಗ ನಾಡಿಗೇರ ಅವರು ಸಿಟ್ಟಿಗೇಳದೇ ಅವನಿಗೇ ಸಮಾಧಾನ ಹೇಳಿ ನಾಯಿ ಅವನ ಮೇಲಿಟ್ಟ ಪ್ರೀತಿಯನ್ನು ಮೆಚ್ಚಿ, ಅವನ ಅಪರಾಧಿ ಭಾವವನ್ನು ನಿವಾರಿಸಿದ್ದರು. ಆಮೇಲೆ ಅವನು ಪ್ರತಿದಿನ ಶಾಲೆಗೆ ಹೋಗುವಾಗ ಅದನ್ನು ಮನೆಯೊಳಗೆ ಕಟ್ಟಿ ಹೋಗುವುದಕ್ಕೆ ಎಂದೂ ಮರೆಯಲಿಲ್ಲ.

ವಿದ್ಯಾರ್ಥಿಗಳೊಂದಿಗೆ ಪ್ರೀತಿಯ ಸಂಬಂಧ ಸ್ಥಾಪಿಸಿಕೊಂಡು ಅವರನ್ನು ಪ್ರೋತ್ಸಾಹಿಸಿ ಅವರ ವ್ಯಕ್ತಿತ್ವ ವಿಕಾಸಕ್ಕೆ ಅಗತ್ಯವಾದ ಪರಿಸರವನ್ನು ಕಲ್ಪಿಸಿಕೊಡುವ ಬಗೆಯನ್ನು ನಾಡಿಗೇರ ಮಾಸ್ತರು ಚೆನ್ನಾಗಿ ಬಲ್ಲವರಾಗಿದ್ದರು. ವಿದ್ಯಾರ್ಥಿ ಜೀವನಕ್ಕೆ ವ್ಯತಿರಿಕ್ತವಾದ ಕಾರ್ಯಗಳಲ್ಲಿ ಅವರು ತೊಡಗದಂತೆ ಮಾಡಿ, ಆ ಅಮೂಲ್ಯವಾದ ಅವಧಿಯನ್ನು ವ್ಯರ್ಥಗೊಳಿಸದೆ ಅದನ್ನು ಸೃಜನಾತ್ಮಕವಾಗಿ ಮಾರ್ಪಡಿಸುವಲ್ಲಿ ಅವರು ಹೆಚ್ಚಿನ ಯಶಸ್ಸನ್ನು ಸಾಧಿಸಿದರು. ಸಾಮಾಜಿಕ ಜವಾಬ್ದಾರಿಯ ಅರಿವನ್ನು ಮೂಡಿಸುತ್ತ ಅವರಲ್ಲಿ ಜೀವನ ಸಾರ್ಥಕತೆಯ ಹಂಬಲವನ್ನು ಹುಟ್ಟಿಸಬಲ್ಲ ಶಿಕ್ಷಕ ಹೊಸ ಜನಾಂಗವೊಂದರ ನಿರ್ಮಾಪಕನೂ ಆಗುತ್ತಾನೆ. ಅಧ್ಯಾಪನ ಕೇವಲ ಜೀವನೋಪಾಯ ಮಾರ್ಗವಲ್ಲ ಎಂಬುದನ್ನು ಅರಿತವರಿಂದ ಮಾತ್ರ ಇದನ್ನು ಸಾಧಿಸಬಹುದಾಗಿದೆ.

ಶಿಕ್ಷಕನ ಉಪಯುಕ್ತತೆಯನ್ನು ಆಹ್ವಾನಿಸುವ ಎಷ್ಟೋ ವೈಜ್ಞಾನಿಕ ಉಪಕರಣಗಳು, ಪರಿಕರಗಳು ಇಂದು ಬಳಕೆಯಲ್ಲಿ ಬಂದಿವೆ. ಗ್ರಂಥ ಭಂಡಾರ, ಪತ್ರಿಕೆಗಳು, ರೇಡಿಯೋ, ಚಲನಚಿತ್ರ, ದೂರದರ್ಶನ ಇತ್ಯಾದಿ. ಇವೆಲ್ಲವುಗಳಿಂದ ನಾವು ಪ್ರಯೋಜನ ಪಡೆಯಬಹುದಾದರೂ ಉತ್ತಮ ಶಿಕ್ಷಕರ ಅವಶ್ಯಕತೆಯನ್ನು ಎಂದೂ ಕಡೆಗಣಿಸಲಾಗದು. ಪ್ರತ್ಯಕ್ಷವಾಗಿ ವಿಷಯ ಬೋಧಿಸುವಾಗ ಶಿಕ್ಷಕನ ವ್ಯಕ್ತಿತ್ವದ ಪ್ರಭಾವವೂ ಅದರಲ್ಲಿ ಸೇರಿ ಅದು ಜೀವಂತವಾಗಿ ವಿದ್ಯಾರ್ಥಿಯ ಮನಸ್ಸನ್ನು ಪ್ರವೇಶಿಸಿ ಸ್ಫೂರ್ತಿಯನ್ನೂ ಚೈತನ್ಯವನ್ನೂ ನೀಡುವ ಸಾಮರ್ಥ್ಯವನ್ನು

ಪಡೆದುಕೊಳ್ಳುತ್ತದೆ. 'ಜ್ಯೋತಿಯಿಂದಲಿ ನೇತ್ರ ರಾತ್ರಿಯಲಿ ಕಾಂಬಂತೆ' ಕತ್ತಲೆಯಲ್ಲಿಯೂ ವಸ್ತುಗಳನ್ನು ಕಂಡು ಹಿಡಿಯುವ ಕಣ್ಣನ್ನು ಒಳ್ಳೆಯ ಗುರುವಿನ ಉಪದೇಶ ಒದಗಿಸುತ್ತದೆಂದು ಸರ್ವಜ್ಞ ಹೇಳುತ್ತಾನೆ. ಈ ಭಾವ ಸಂಬಂಧ ಹಾಗೂ ಆತ್ಮೀಯತೆ ಶಿಕ್ಷಕನಂತೆ ಉಳಿದ ಯಾವುದೇ ಉಪಕರಣಗಳಿಂದ ದೊರೆಯಲಾರದು. ಇದು ವಿದ್ಯಾರ್ಥಿಗಳ ಮನೋಪ್ರಣತಿಗೆ ಎಣ್ಣೆ ಎರೆದು, ಮಕ್ಕು ತೆಗೆದು, ಜ್ಯೋತಿ ಮುಟ್ಟಿಸುವ ಪವಿತ್ರಕಾರ್ಯ. ಶಿಕ್ಷಣ ಕ್ಷೇತ್ರದಲ್ಲಿ ತಜ್ಞತೆಯೊಂದಿಗೆ ಹೊಸ ಪದ್ಧತಿಯ ಹಾಗೂ ಹೊಸ ಪ್ರಯೋಗದ ಹರಿಕಾರರಾಗಿ ಮೇಲ್ಮೆ ಪಡೆದ ಶ್ರೀ ನಾಡಿಗೇರ ಶಿವರಾಯರು ನಾಡಿಗೇ ಭೂಷಣಪ್ರಾಯರು. ಅಂಥವರ ಸನ್ಮಾನವೆಂದರೆ ಇಂದು ಅತ್ಯವಶ್ಯವಾಗಿ ಅನುಸರಿಸಬೇಕಾದ ಒಂದು ಆದರ್ಶವನ್ನು ಅಪ್ಪಾನಿಸಿದಂತೆ.

'ವಾತ್ಸಲ್ಯ' ೧೯೯೭
ಅಭಿನಂದನ ಗ್ರಂಥ

೪೫

## ಡಾ. ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟರು : ಯಶಸ್ಸಿನಿಂದ ಯಶಸ್ಸಿಗೆ...

ಡಾ. ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟರನ್ನು ನಾನು ಮೊದಲು ಪರಿಚಯಿಸಿಕೊಂಡದ್ದು ಅವರ ಕಾವ್ಯದ ಮೂಲಕವೇ. ನನಗಿನ್ನೂ ನೆನಪಿರುವಂತೆ ಅವರ ಪ್ರಥಮ ಸಂಕಲನ 'ವೃತ್ತ'ದಲ್ಲಿಯ 'ಸೀಮಂತಿನಿ' ಮತ್ತು 'ತಾಯಿ' ಕವಿತೆಗಳಿಂದ ಆಕರ್ಷಿತನಾಗಿ ಈ ಸಂಕಲನಕ್ಕೆ ಮುನ್ನುಡಿ ಬರೆದ ಗೆಳೆಯ ಶಿವರುದ್ರಪ್ಪನವರೊಡನೆ ಮಾತನಾಡಿದ್ದೆ. ಕಾವ್ಯದಲ್ಲಿ ನಾವೀನ್ಯವನ್ನು ತರುವ ಹಠದಿಂದ ಕೆಲವು ಚಮತ್ಕಾರದ ಪ್ರಯತ್ನಗಳು ನಡೆದಿದ್ದ ಅಂದಿನ ಸಂದರ್ಭದಲ್ಲಿ ಭಟ್ಟರ ಈ ಕವಿತೆ ತಮ್ಮ ಸ್ವಧರ್ಮಕ್ಕೆ ವಂಚನೆಯಾಗದ ರೀತಿಯಲ್ಲಿ ಕಾವ್ಯಶಕ್ತಿಯನ್ನು ಮೈಗೂಡಿಸಿಕೊಂಡು ಬಂದದ್ದು ನನಗೆ ಮೆಚ್ಚುಗೆಯನ್ನುಂಟು ಮಾಡಿತ್ತು. ಅಂದಿನಿಂದ ಈಚೆಗೆ 'ಅರುಣಗೀತೆ'ಯವರೆಗೆ ಅವರು ತಮ್ಮ ಕಾವ್ಯಾನುಭವದ ಪರಿಧಿಯನ್ನು ವಿಸ್ತರಿಸುತ್ತ ಪ್ರತಿಮಾ ನಿರ್ಮಾಣ ಸಾಮರ್ಥ್ಯದಿಂದ, ಭಾಷೆಯ ಶಿಲ್ಪಗಾರಿಕೆಯಿಂದ ಗಮನಾರ್ಹ ರಚನೆಗಳನ್ನು ನೀಡಿ ಇಂದಿನ ಮುಖ್ಯ ಕವಿಗಳಲ್ಲಿ ಒಬ್ಬರಾಗಿದ್ದಾರೆ.

ಹೊಸ ಭಾವಗೀತೆಗಳ ರಚನೆಯಿಂದ ಸುಗಮಸಂಗೀತಕ್ಕೆ ವಿಶೇಷ ಚಾಲನೆ ನೀಡಿ ಜನತೆಯಲ್ಲಿ ಕಾವ್ಯಾಭಿರುಚಿಯನ್ನು ಹೆಚ್ಚಿಸಲು ಪ್ರಯತ್ನಿಸುತ್ತಿರುವ ಕವಿಬಳಗಕ್ಕೆ ಭಟ್ಟರು ಕೇಂದ್ರಬಿಂದುವೆನಿಸಿದ್ದಾರೆ. ಇದೇ ಉದ್ದೇಶ ಹಾಗೂ ನಿಷ್ಠೆಯಿಂದ ಅವರು ಸಂಗ್ರಹಿಸಿ ಸಂಪಾದಿಸಿದ 'ಶರೀಫ ಸಾಹೇಬರ ಗೀತೆಗಳು' ಪಾಠಪರಿಷ್ಕರಣದ ದೃಷ್ಟಿಯಿಂದ ವಿವಾದಾಸ್ಪದವೆನಿಸಿದ್ದರೂ ಚೇತೋಹಾರಿಯಾದ ಮುನ್ನುಡಿಯಿಂದ ಪದ್ಯಗಳ ವಿಶೇಷಾರ್ಥಗಳಿಗೆ ದಿಕ್ಸೂಚಿಯಾಗಿದೆ. ಮಕ್ಕಳ ಸಾಹಿತ್ಯ ರಚನೆಯ ಬಗೆಗೂ ಕಾಳಜಿವಹಿಸಿ ಹೊಸರೀತಿಗೆ ದುಡಿದವರಲ್ಲಿ ಅವರದು ಅಗ್ರಪಂಕ್ತಿ.

ಕಾವ್ಯದ ಅನುವಾದಕರಾಗಿ ಭಟ್ಟರು ಗೈದಿರುವ ಸಾಧನೆ ತುಂಬ ಮಹತ್ವದ್ದಾಗಿದೆ. ಒಬ್ಬ ಕವಿ ಅತ್ಯಂತ ಸೂಕ್ಷ್ಮವಾಗಿ ಹಾಗೂ ತೀವ್ರವಾಗಿ ಅಭಿವ್ಯಕ್ತಿಸಿದ್ದನ್ನು ಆತನ ಪರಿಸರಕ್ಕೆ ಹೊರತಾದ ಮತ್ತೊಬ್ಬ ಅನುವಾದಿಸುವುದು ಅಷ್ಟೊಂದು ಸುಲಭವಲ್ಲ. ಕವಿಯ ಅಭಿವ್ಯಕ್ತಿಯನ್ನು ಮೂಲಸತ್ತ್ವ, ಹೊಳಹು ಹಾಗೂ ಬಣ್ಣ ವೈವಿಧ್ಯಗಳೊಡನೆ ಹಿಡಿದು ಬೇರೆ ಭಾಷೆಗೆ ತರುವ ಕಾರ್ಯದಲ್ಲಿ 'ಸುನೀತ' (ಷೇಕ್ಸ್‌ಪಿಯರ್‌ನ ೫೦ ಸಾನೆಟ್ಟುಗಳು) ಮತ್ತು 'ಚಿನ್ನದ ಹಕ್ಕಿ' (ಯೇಟ್ಸ್ ಕವಿಯ ೫೦ ಕವನಗಳು) ತೌಲನಿಕ ಅಧ್ಯಯನಕ್ಕೂ ಒಂದು ಮಾದರಿಯಾಗಿ ನಿಲ್ಲುವಷ್ಟು ಪ್ರಭಾವಶಾಲಿಯಾಗಿವೆ. ಮೂಲಕಾವ್ಯದ ಜಟಿಲ ರಚನಾಕ್ರಮವನ್ನು ಸವಾಲಾಗಿ ಸ್ವೀಕರಿಸಿ

ಕಾವ್ಯಧರ್ಮವನ್ನು ಕಾಪಾಡಿಕೊಂಡಿರುವ ಭಟ್ಟರು ಮೂಲ ಕವಿಗಳಿಗಿಂತಲೋ ಅಂತೆಯೇ ಕನ್ನಡ ಭಾಷೆಗೂ ಗೌರವ ಸಲ್ಲಿಸಿದ್ದಾರೆಂದರೆ ತಪ್ಪಾಗದು.

ಕನ್ನಡ ಕಾವ್ಯ 'ಮೊರಳು ದಾರಿ'ಯಲ್ಲಿದ್ದಾಗ ಅದರ ಹಿಂದು ಮುಂದಿನ ಲಕ್ಷಣಗಳನ್ನು ಸಮರ್ಪಕವಾಗಿ ಗುರುತಿಸಿ, ಸಾಹಿತ್ಯಕ್ಕೆ ಪ್ರೇರಕ ಶಕ್ತಿಯಾಗುವಂತೆ 'ವಿವೇಚನ' ನಡೆಸಿದ ಭಟ್ಟರ ವಿಮರ್ಶೆ ಅವರಿಂದ ಇನ್ನೂ ಹೆಚ್ಚಿನದನ್ನು ಕಾವ್ಯಾಸಕ್ತರು ಅಪೇಕ್ಷಿಸುವಂತೆ ಮಾಡಿದೆ.

'ಅರುಣಗೀತೆ'ಯಂಥ ಅವರ ಅತ್ಯುತ್ತಮ ಕವಿತೆ ಅಚ್ಚಾಗುವ ಮೊದಲೇ ಅದರ ನೆರಳಚ್ಚಿನ ಪ್ರತಿಗಳನ್ನು ಕಾವ್ಯಾಸಕ್ತರಲ್ಲಿ ಹಂಚಿ ಸಾಧ್ಯವಾದಲ್ಲಿ ವಾಚಿಸಿ ಸಹೃದಯರ ಪ್ರತಿಕ್ರಿಯೆಗೆ ಅವರು ಕಾದದ್ದನ್ನು ನೋಡಿದರೆ ತಮ್ಮ ಕಾವ್ಯಶಕ್ತಿಯನ್ನು ಮತ್ತೆ ಮತ್ತೆ ಪರಿಷ್ಕಾರಗೊಳಿಸಿಕೊಳ್ಳುವಲ್ಲಿ ಅವರು ಪಡುವ ಪರಿಶ್ರಮ ಇಂದಿನ ಕಾವ್ಯಸಂದರ್ಭದಲ್ಲಂತೂ ತುಂಬ ಅಪರೂಪವಾದದ್ದೆಂದೇ ನನ್ನ ಭಾವನೆ.

ಸನ್ಮಿತ್ರರಾದ ಡಾ.ಎಸ್.ಎಸ್. ಲಕ್ಷ್ಮೀನಾರಾಯಣ ಭಟ್ಟರ ಸಾಹಿತ್ಯ ಕೃಷಿ ಹೀಗೆಯೇ ಸಮೃದ್ಧವಾಗಿ ಯಶಸ್ಸಿನಿಂದ ಯಶಸ್ಸಿಗೆ ಸಾಗಲೆಂದೂ

'ಒಳಗೆಲ್ಲೊ ಗುಟ್ಟಾಗಿ ಹರಿಯುವ ಸರಸ್ವತಿಯ
ಅಮೃತದಾಳಗಳಲ್ಲಿ ಮೀಯಬೇಕು'

ಎಂಬ ಅವರ ಹಂಬಲ ಇನ್ನೂ ಹಲವು ಉತ್ತಮ ಕೃತಿಗಳ ರಚನೆಯ ಮೂಲಕ ಈಡೇರಲೆಂದೂ ಹೃತ್ಪೂರ್ವಕವಾಗಿ ಹಾರೈಸುತ್ತೇನೆ.

'ನೀಲಾಂಜನ'
(ಅಭಿನಂದನ ಗ್ರಂಥ)
೧೯೯೬

೪೬

## ಜನಪ್ರಿಯ ಲೇಖಕ ದು.ನಿಂ. ಬೆಳಗಲಿ

ಪ್ರೌಢಶಾಲಾ ಶಿಕ್ಷಕರಾಗಿದ್ದುಕೊಂಡು ಸಾಹಿತ್ಯಕ್ಷೇತ್ರದಲ್ಲಿ ಮಿಗಿಲಾದ ಕೆಲಸ ಮಾಡಿದವರ ಸಂಖ್ಯೆ ಉತ್ತರ ಕರ್ನಾಟಕದಲ್ಲಿ ಗಣನೀಯ ಪ್ರಮಾಣದಲ್ಲಿರುವುದನ್ನು ಎಲ್ಲರೂ ಬಲ್ಲರು. ಕಥೆ, ಕಾದಂಬರಿ, ವ್ಯಕ್ತಿಚಿತ್ರ, ಚರಿತ್ರೆ, ಪ್ರಬಂಧ-ಹರಟೆ, ಮಕ್ಕಳ ಸಾಹಿತ್ಯ, ಅನುವಾದ-ಹೀಗೆ ಹತ್ತು ಹಲವು ಪ್ರಕಾರಗಳಲ್ಲಿ ವಿಪುಲವಾದ ಸಾಹಿತ್ಯ ರಚಿಸಿ ಕನ್ನಡಕ್ಕೆ ತಮ್ಮದೇ ಆದ ಕೊಡುಗೆ ನೀಡಿದ ಹಿರಿಯರಲ್ಲಿ ಸಿಂಪಿ ಲಿಂಗಣ್ಣ, ಮಿರ್ಜಿ ಅಣ್ಣಾರಾಯ ಮೊದಲಾದವರು ಅಗ್ರಗಣ್ಯರೆಂದು ಹೇಳಬಹುದು. ಅವರ ನಂತರದ ತಲೆಮಾರಿನಲ್ಲಿ ಅದೇ ರೀತಿ ತಮ್ಮ ಆಸಕ್ತಿಗಳನ್ನು ಬೆಳೆಸಿಕೊಂಡು ಬಂದವರಲ್ಲಿ ಬನಹಟ್ಟಿಯ ದು.ನಿಂ. ಬೆಳಗಲಿಯವರು ಪ್ರಮುಖರಾಗಿದ್ದಾರೆ.

ಕಳೆದ ನಾಲ್ಕು ದಶಕಗಳಿಗೂ ಮೇಲ್ಪಟ್ಟು ಕನ್ನಡ ಕಾದಂಬರಿ-ಕಥಾ ಪ್ರಪಂಚದಲ್ಲಿ ವಿಶೇಷ ಕೃಷಿಗೈದು ಭಾಷೆ ಹಾಗೂ ಜನಜೀವನದ ಚಿತ್ರಣದಲ್ಲಿ ಪ್ರಾದೇಶಿಕತೆಯ ಬನಿಯನ್ನು ಒಳಗೊಂಡಂತೆ ಹಲವಾರು ಉತ್ತಮ ಕೃತಿಗಳನ್ನು ನೀಡಿರುವ ಬೆಳಗಲಿಯವರು ಪ್ರಥಮ ದರ್ಜೆಯ ಲೇಖಕರೆಂದು ಹೇಳಲು ಹಿಂದು-ಮುಂದು ನೋಡಬೇಕಾಗಿಲ್ಲ. ಇದುವರೆಗೆ ಪ್ರಕಟವಾಗಿರುವ ಅವರ ಆರು ಕಥಾಸಂಗ್ರಹಗಳು, ಹದಿನೈದು ಕಾದಂಬರಿಗಳು ಅವರ ಸೃಜನ ಸಾಮರ್ಥ್ಯವನ್ನು ಚೆನ್ನಾಗಿಯೇ ವ್ಯಕ್ತಪಡಿಸಿವೆ. ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿಗೆ ಪಾತ್ರರಾಗಿರುವ (೧೯೯೩) ಬೆಳಗಲಿ ಸಾಮಾಜಿಕವಾಗಿಯೂ ಅನೇಕ ಜನಪರ ಸಂಘ ಸಂಸ್ಥೆಗಳ ಒಡನಾಟದಿಂದ ತಮ್ಮ ಕಾರ್ಯಕ್ಷೇತ್ರವನ್ನು ವಿಸ್ತರಿಸಿಕೊಂಡಿದ್ದಾರೆ.

ಮಧ್ಯಮವರ್ಗ, ಕೆಳಮಧ್ಯಮವರ್ಗ ಹಾಗೂ ದಲಿತ ಸಮುದಾಯದ ಜೀವನವನ್ನು ತೆರೆದ ಕಣ್ಣಿನಿಂದ ಕಂಡಿರುವ ಈ ಲೇಖಕರು ಗ್ರಾಮೀಣ ಬದುಕಿನ ತಳಹದಿಯಿಂದಲೇ ಮೊಳಕೆಯೊಡೆದು ಮೇಲೆದ್ದ ಕಥೆಗಳಲ್ಲಿ 'ಮುತ್ತಿನ ತೆನೆ'ಗಳನ್ನು ಹಿಡಿದುಕೊಟ್ಟಿದ್ದಾರೆ. 'ಹಡೆದವರು' ಹಾಗೂ 'ಜೋಗಿಮರಡಿ'ಯಂಥ ಕೃತಿಗಳು ಪ್ರಾದೇಶಿಕ ಸೊಗಡಿನಿಂದ ಕೂಡಿದ್ದರೆ ಪ್ರಬಲವಾದ ಸಾಮಾಜಿಕ ಸಮಸ್ಯೆಯೊಂದನ್ನು ದಲಿತ ಜೀವನದ ಹಾಸು-ಹೊಕ್ಕಿನಲ್ಲಿ ನೆಯ್ದ 'ದೇವದಾಸಿ' ಕಾದಂಬರಿ ಸಂಪ್ರದಾಯದಲ್ಲಿರುವ ಕೇಡನ್ನು ಕಲೆಗೆ ಊನವಾಗದಂತೆ ಚಿತ್ರಿಸಿರುವ ಮಹತ್ವದ ಕೃತಿಯಾಗಿದೆ. ಅವರ ಇತ್ತೀಚಿನ ಕೃತಿ 'ಕಾತ್ರಾಳ ರತ್ನಿಯ ಚಾದಂಗಡಿ'ಯಲ್ಲಿ ರತ್ನಾಳ ಪಾತ್ರವನ್ನು ಅದ್ಭುತವಾಗಿ

ಕಲಾಸಂಯಮದಿಂದ ಕೆತ್ತಿ ನಿಲ್ಲಿಸಿರುವುದು ಅವರ ಬರವಣಿಗೆಯ ಪ್ರಬುದ್ಧತೆಗೆ ಸಾಕ್ಷಿಯಾಗಿದೆ.

ಇವುಗಳ ಹೊರತಾಗಿ ಬೆಳಗಲಿಯವರು ಆದರ್ಶ ವ್ಯಕ್ತಿಗಳ ಜೀವನ ಚಿತ್ರಗಳನ್ನೂ, ರಂಜಕವಾದ ಮಕ್ಕಳ ಸಾಹಿತ್ಯವನ್ನೂ, ನಗೆಬರಹ ಹಾಗೂ ಪ್ರಬಂಧಗಳನ್ನೂ ಬರೆದಿರುವ ಹಿನ್ನೆಲೆಯಲ್ಲಿ ಅವರ ಶಿಕ್ಷಕ ವೃತ್ತಿಯ ಕಾಳಜಿಗಳು ಎದ್ದು ಕಾಣುತ್ತವೆ. ಅವರು ಮಾಡಿದ ಇನ್ನೊಂದು ಮಹತ್ವದ ಕಾರ್ಯವೆಂದರೆ 'ಅಕ್ರಮ ಸಂತಾನ' 'ಗಬಾಳ'ದಂಥ ಮರಾಠಿ ದಲಿತ ಆತ್ಮಕಥೆಗಳನ್ನು ಕನ್ನಡಕ್ಕೆ ಅನುವಾದಿಸಿ ಆ ಜನಾಂಗದ ಹೃದಯ ವಿದ್ರಾವಕ ಜೀವನದ ಹೊಸ ಲೋಕವನ್ನು ಕನ್ನಡ ವಾಚಕವರ್ಗದ ಕಣ್ಣಮುಂದೆ ನಿಲ್ಲುವಂತೆ ಮಾಡಿದ್ದು.

ಶ್ರೀ ಬಸವರಾಜ ಕಟ್ಟೀಮನಿಯವರ ನಿಕಟ ಸಂಪರ್ಕದಿಂದ ಬೆಳಗಲಿ ಸಹಜವಾಗಿಯೇ ಪ್ರಗತಿಶೀಲ ಸಾಹಿತ್ಯದಲ್ಲಿ ಆಸ್ಥೆಯುಳ್ಳವರಾಗಿದ್ದರು. ಅಂತೆಯೇ 'ಪ್ರಗತಿಪಂಥ'ದ ಜಿಲ್ಲಾಧ್ಯಕ್ಷರಾಗಿ ಅವರ ಜೊತೆಗೂ ಕೆಲಸ ಮಾಡಿದರು.

ಶಿಕ್ಷಕ ರಾಷ್ಟ್ರ ಪ್ರಶಸ್ತಿ ಪಡೆದ (೧೯೮೮) ನಂತರ ನಿವೃತ್ತರಾದ ಬೆಳಗಲಿ 'ವಿಶ್ವ ಕರ್ನಾಟಕ ಸಾಹಿತ್ಯ ಮಂಟಪ'ವನ್ನು ಕಟ್ಟಿ ಪ್ರಕಾಶನ ಕಾರ್ಯದಲ್ಲಿಯೂ ತಮ್ಮನ್ನು ತೊಡಗಿಸಿಕೊಂಡು ಕ್ರಿಯಾಶೀಲ ವ್ಯಕ್ತಿಯಾಗಿ ಉಳಿದಿದ್ದಾರೆ. ಬೇರೆ ಬೇರೆ ರಾಜ್ಯಗಳಲ್ಲಿಯ ಸಾಹಿತ್ಯಿಕ ಸಭೆ, ಸಮ್ಮೇಳನ, ಕಮ್ಮಟಗಳಲ್ಲಿ ಭಾಗವಹಿಸಿ ತಮ್ಮ ಅನುಭವವನ್ನು ವಿಸ್ತರಿಸಿಕೊಂಡಿದ್ದಾರೆ.

ಒಳ್ಳೆಯ ಅರ್ಥದಲ್ಲಿ 'ಜನಪ್ರಿಯ' ಲೇಖಕರಾಗಿರುವ ಶ್ರೀ ದು.ನಿಂ. ಬೆಳಗಲಿಯವರು ಇನ್ನೂ ಉತ್ತಮವಾದ ಕೃತಿಗಳನ್ನು ನೀಡಿ ಕನ್ನಡ ಸಾಹಿತ್ಯ ಲೋಕವನ್ನು ಬೆಳಗಲಿ ಎಂದು ಹಾರೈಸುತ್ತೇನೆ.

'ಬೆಳಗಲಿ'
(ಅಭಿನಂದನ ಗ್ರಂಥ)
೧೯೬೮

೪೭

# ಗೆಳೆಯ ಚಿದಂಬರ ದೀಕ್ಷಿತ

ಅರವತ್ತು ತುಂಬಿದ ಗೆಳೆಯ ಚಿದಂಬರ ದೀಕ್ಷಿತರು ಮುಂಬಯಿ ವಿಶ್ವವಿದ್ಯಾಲಯದ ಕನ್ನಡ ಪ್ರಾಧ್ಯಾಪಕ ಪೀಠದಿಂದ ನಿವೃತ್ತರಾಗುತ್ತಿರುವ ಸಂದರ್ಭದಲ್ಲಿ ಅವರಿಗೆ ಅಭಿನಂದನ ಗ್ರಂಥವೊಂದನ್ನು ಸಲ್ಲಿಸುತ್ತಿರುವುದು ತುಂಬ ಸಂತೋಷದ ಸಂಗತಿ. ಕಾಲದ ತೀವ್ರ ಗತಿಯನ್ನು ನೆನೆದುಕೊಂಡರೆ ಆಶ್ಚರ್ಯವಾಗುತ್ತದೆ. ಕಳೆದ ಮೂವತ್ತೈದು ವರುಷಗಳಲ್ಲಿ ನಮ್ಮ ಜೀವನದಲ್ಲಿ ಯಾವುದೇ ಏರುಪೇರುಗಳಾಗಿದ್ದರೂ ನಮ್ಮೀರ್ವರ ಗೆಳೆತನ ಗುಪ್ತವಾಹಿನಿಯಾಗಿ ಹರಿಯುತ್ತ, ಜೀವಕ್ಕೆ ತಂಪೆರೆದಿರುವುದನ್ನು ಈ ಸಂದರ್ಭದಲ್ಲಿ ನೆನೆಯದಿರಲಾರೆ.

ಹೈಸ್ಕೂಲ್ ವಿದ್ಯಾರ್ಥಿಗಳಾಗಿದ್ದಾಗಲೇ ನಾವು ಗುರುತಿಲ್ಲದೆಯೂ ಪರಸ್ಪರ ಗುರುತಿಸಿ ಕೊಂಡಿದ್ದೇವೆಂದು ತೋರುತ್ತದೆ. ಧಾರವಾಡದ ಸಾಹಿತ್ಯಿಕ ವಾತಾವರಣವೇ ನಮ್ಮನ್ನು ಒಂದುಗೂಡಿಸಲು ಕಾರಣವಾಯಿತು. ದೀಕ್ಷಿತರು ವ್ಹಿಕ್ಟೋರಿಯಾ ಹೈಸ್ಕೂಲಿನಿಂದ (ಈಗಿನ ವಿದ್ಯಾರಣ್ಯ ಹೈಸ್ಕೂಲ್) ನಾನು ರಾಜಾ ಲಖಮ ಗೌಡ ಸರದೇಸಾಯಿ ಹೈಸ್ಕೂಲಿನಿಂದ ಮೆಟ್ರಿಕ್ಯುಲೇಶನ್ ಪಾಸಾದೆವು. ಕರ್ನಾಟಕ ವಿದ್ಯಾವರ್ಧಕ ಸಂಘ ಆಗ ವಿದ್ಯಾರ್ಥಿಗಳಿಗಾಗಿ ನಡೆಸುತ್ತಿದ್ದ ಲೋಕಮಾನ್ಯ ವಕ್ತೃತ್ವ ಸ್ಪರ್ಧೆ ಹಾಗೂ ವಿದ್ಯಾರ್ಥಿ ಸಾಹಿತ್ಯಗೋಷ್ಠಿಗಳಲ್ಲಿ ನಾವು ಭಾಗವಹಿಸಿದ್ದ ನೆನಪು.

೧೯೪೬ ರಿಂದ ೧೯೫೨ರವರೆಗೆ ನಾವು ಕರ್ನಾಟಕ ಕಾಲೇಜಿನ ವಿದ್ಯಾರ್ಥಿಗಳು. ಮೊದಲೆರಡು ವರ್ಷ ಅವರು ಸೈನ್ಸ್ ತೆಗೆದುಕೊಂಡಿದ್ದರಿಂದ ಆರ್ಟ್ಸ್ ವಿಭಾಗದಲ್ಲಿದ್ದ ನನಗೆ ಅವರೊಡನೆ ಹೆಚ್ಚು ಸಂಪರ್ಕಬರಲಿಲ್ಲ. ಆದರೂ ಕರ್ನಾಟಕ ಸಂಘದ ಕಾರ್ಯಕ್ರಮಗಳಲ್ಲಿ ಹಾಗೂ ಊರಲ್ಲಿ ನಡೆಯುತ್ತಿದ್ದ ಸಾಹಿತ್ಯಿಕ ಚಟುವಟಿಕೆಗಳಲ್ಲಿ ಆಗಾಗ ಸಂಧಿಸುತ್ತಿದ್ದೆವು. ಮುಂದೆ ಬಿ.ಎ. ಮತ್ತು ಎಂ.ಎ. ವರ್ಗಗಳಲ್ಲಿ ಕನ್ನಡವೇ ನಮ್ಮ ಪ್ರಧಾನ ವಿಷಯವಾಗಿದ್ದರಿಂದ ಆಗಲೇ ಚಿಗರೊಡೆದಿದ್ದ ನಮ್ಮ ಸ್ನೇಹದ ಬಳ್ಳಿ ಕುಡಿ ಚಾಚಿ ಬೆಳೆಯಿತು.

'ಜಯಂತಿ' ಮತ್ತು 'ಜಯಕರ್ನಾಟಕ'ಗಳಲ್ಲಿ ನಮ್ಮ ಕವಿತೆಗಳು ಆಗಾಗ ಪ್ರಕಟವಾಗುತ್ತಿದ್ದವು. ಇಂಟರ್ ಮಿಡಿಯೇಟ್‌ನಲ್ಲಿದ್ದಾಗಲೇ ದೀಕ್ಷಿತರ 'ಮುಂಬೆಳಗು' ಎಂಬ ಕವನ ಸಂಗ್ರಹ ಪ್ರಕಟವಾಗಿದ್ದಿತು. ಜ್ಯೂನಿಯರ್ ಬಿ.ಎ. ದಲ್ಲಿದ್ದಾಗ ನನ್ನ ಪ್ರಥಮ ಕವನ ಸಂಕಲನ 'ಕಾವ್ಯಾಕ್ಷಿ' ಬೆಳಕು ಕಂಡಿತು. ಹೀಗೆ ಜೊತೆಜೊತೆಯಾಗಿಯೇ ನಮ್ಮ ಕಾವ್ಯ ರಚನೆ ಮುಂದುವರಿಯಿತು. ಈ ನಡುವೆ 'ಪುತ್ರೋತ್ಸವ' ಎಂಬ ಕಥಾ ಸಂಕಲನವೊಂದನ್ನು ಅವರು ಪ್ರಕಟಿಸಿದ್ದಲ್ಲದೆ ಅದಕ್ಕೆ

ಪ್ರಕಾಶಕರಿಂದ ಸ್ವಲ್ಪ ಗೌರವ ಧನವೂ ದೊರೆಯಿತೆಂದು ಹೇಳಿದಾಗ ನಾನು ಆಶ್ಚರ್ಯಪಟ್ಟಿದ್ದೆ. ಶ್ರೀಗಳಾದ ಬೇಂದ್ರೆ, ಬೆಟಗೇರಿ, ಶಂ.ಬಾ. ಜೋಶಿ, ವ್ಹಿ.ಜಿ. ಭಟ್ಟ ಮೊದಲಾದವರೊಂದಿಗೆ ಆಗಲೇ ಅವರು ನಿಕಟ ಸಂಪರ್ಕವನ್ನು ಪಡೆದಿದ್ದರು. ಹೈಸ್ಕೂಲಿನಲ್ಲಿ ಅವರ ಗುರುಗಳಾಗಿದ್ದ ಶ್ರೀ ಶಂ.ಬಾ. ಜೋಶಿಯವರು ಅವರ ಮೇಲೆ ಹೆಚ್ಚು ಪ್ರಭಾವ ಬೀರಿದ್ದರು.

ಮಾಳಮರಡಿಯಲ್ಲಿ ನಾನು ವಾಸಿಸುತ್ತಿದ್ದ ಬಾಡಿಗೆ ಕೋಣೆ ಇದ್ದುದರಲ್ಲಿ ಸ್ವಲ್ಪ ವಿಶಾಲವಾಗಿದ್ದಿತು. ಕೀರ್ತಿನಾಥ ಕುರ್ತಕೋಟಿ, ಶಂಕರ ಮೊಖಾಶಿ, ವಸಂತ ಕವಲಿ, ಶಿವೇಶ್ವರ ದೊಡ್ಡಮನಿ ಮೊದಲಾದ ಹತ್ತು, ಹನ್ನೆರಡು ಜನ ಸ್ನೇಹಿತರು ವಾರಕ್ಕೊಮ್ಮೆ ಕೂಡಿ ಕಾವ್ಯವಾಚನ, ವಿಮರ್ಶೆ ನಡೆಸುತ್ತಿದ್ದೆವು. 'ಕಾವ್ಯಾನುಭವ ಮಂಟಪ' ಎಂದು ಕರೆಯಲ್ಪಡುತ್ತಿದ್ದ ಈ ಕೂಟದ ಸದಸ್ಯರಲ್ಲಿ ಸಿ.ಕೆ. ದೀಕ್ಷಿತರೂ ಒಬ್ಬರಾಗಿದ್ದರು.

ಬಿ.ಎ. ಪರೀಕ್ಷೆಯಲ್ಲಿ ಉನ್ನತ ಶ್ರೇಣಿಯಲ್ಲಿ ಪಾಸಾಗಿದ್ದರಿಂದ ನಾವಿಬ್ಬರೂ 'ದಕ್ಷಿಣಾ ಫೆಲೊ' ಗೌರವಕ್ಕೆ ಪಾತ್ರರಾಗಿ ಎಂ.ಎ. ಮುಗಿವವರೆಗೆ ತಿಂಗಳಿಗೆ ೩೦ ರೂ. ಫೆಲೊಶಿಪ್ ಪಡೆದೆವು. ಅಂದಿನ ನಮ್ಮ ಆರ್ಥಿಕ ಪರಿಸ್ಥಿತಿಯಲ್ಲಿ ಅದರಿಂದ ದೊರೆತ ನೆರವು ಅಷ್ಟಿಷ್ಟಲ್ಲ.

ಶ್ರೀ ದೀಕ್ಷಿತರು ಪ್ರಾಧ್ಯಾಪಕ ವೃತ್ತಿಯಿಂದಲೂ ನಾನು ಪ್ರಸಾರಾಂಗದ ನಿರ್ದೇಶಕನಾಗಿಯೂ ಇದೀಗ ನಿವೃತ್ತರಾಗಿದ್ದೇವೆ. (ನಿವೃತ್ತಿ ಪೂರ್ವದಲ್ಲಿ ಎರಡು ವರುಷ ಕನ್ನಡ ಅಧ್ಯಯನ ಪೀಠದಲ್ಲಿ ಗೌರವ ಸಂದರ್ಶಕ ಪ್ರಾಧ್ಯಾಪಕನಾಗಿ ಕೆಲಸ ಮಾಡುವ ಅವಕಾಶ ನನಗೂ ಒದಗಿದ್ದಿತು.)

ಅವರು ಮುಂಬಯಿಯಲ್ಲಿ ನಾನು ಧಾರವಾಡದಲ್ಲಿ. ಆದರೂ ಆಗೀಗ ಭೆಟ್ಟಿಯಾದಾಗ ಹಿಂದಿನ ದಿನಗಳನ್ನು ನೆನೆದು ನಾವಿಬ್ಬರೂ ಸಂತೋಷಪಟ್ಟಿದ್ದುಂಟು. ಅವರು ಧಾರವಾಡಕ್ಕೆ ಬಂದಾಗೆಲ್ಲಾ ನಮ್ಮ ಮನೆಗೆ ಬರುತ್ತಿದ್ದರು. ಆದರೆ ನಾನು ಮುಂಬಯಿಗೆ ಹೋಗುತ್ತಿದ್ದುದೇ ತುಂಬ ಅಪರೂಪ. ಈಗಲೂ ಸ್ಪಷ್ಟವಾಗಿ ನೆನಪಿರುವಂತೆ ನನ್ನ ಮೊದಲ ಮುಂಬೈ ಪ್ರವಾಸ ೧೯೬೦ರಲ್ಲಿ. ದಿಲ್ಲಿಗೆ ಒಂದು ಸಂದರ್ಶನಕ್ಕಾಗಿ ನಾನು ಹೋಗಬೇಕಾಗಿತ್ತು. ಮುಂಬಯಿಗೆ ಅಪರಿಚಿತನಾದ ನನ್ನನ್ನು ಸ್ಟೇಶನ್ನಿನಲ್ಲಿ ಎದುರುಗೊಂಡು ದೀಕ್ಷಿತರು ತಮ್ಮ ಮನೆಗೆ ಕರೆದೊಯ್ದು ಊಟ ಮಾಡಿಸಿ ಸಂಜೆ ದಿಲ್ಲಿಯ ರೈಲಿಗೆ ಹತ್ತಿಸಿದ್ದನ್ನು ನಾನು ಮರೆತಿಲ್ಲ.

ಕಳೆದ ಎರಡು-ಮೂರು ದಶಕಗಳಲ್ಲಿ ಮುಂಬಯಿಯಲ್ಲಿ ನಡೆದ ಕನ್ನಡ ಚಟುವಟಿಕೆಗಳಲ್ಲಿ ದೀಕ್ಷಿತರೂ ತಮ್ಮ ಪಾಲಿನ ಸೇವೆಯನ್ನು ನಿರ್ವಂಚನೆಯಿಂದ ಸಲ್ಲಿಸಿದ್ದಾರೆ. ಮಹಾರಾಷ್ಟ್ರ ಸರಕಾರದ ಮಾಧ್ಯಮಿಕ ಶಿಕ್ಷಣದ ಕನ್ನಡ ಪಠ್ಯಪುಸ್ತಕ ಸಮಿತಿಯ ಅಧ್ಯಕ್ಷರಾಗಿ ಮೆಚ್ಚತಕ್ಕಂತಹ ಉಪಯುಕ್ತ ಕೆಲಸ ಮಾಡಿದ್ದಾರೆ.

ನಾನು ಕಾಲೇಜಿನಲ್ಲಿದ್ದಾಗ ಬರೆದ 'ಗೆಳೆತನ' ಎಂಬ ಕವಿತೆ 'ಆಕಾಶಬುಟ್ಟಿ' ಸಂಗ್ರಹದಲ್ಲಿ ಸೇರ್ಪಡೆಯಾಗಿದೆ. 'ಗೆಳೆತನವೆ ಇಹಲೋಕಕಿರುವ ಅಮೃತ' ಎಂಬುದು ಅದರಲ್ಲಿಯ ಒಂದು ಸಾಲು. ಅದು ನನ್ನ ನಿತ್ಯದ ಅನುಭವವಾಗಿದೆ.

'ಪ್ರಾ. ಚಿದಂಬರ ದೀಕ್ಷಿತ'
(ಅಭಿನಂದನ) ೧೯೮೩

## ೪೮

# ಕವಿಮಿತ್ರ ಸಿದ್ಧಲಿಂಗ ಪಟ್ಟಣಶೆಟ್ಟಿ

ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿಯವರು ವಿದ್ಯಾರ್ಥಿ ದೆಸೆಯಲ್ಲಿಯೇ ತಮ್ಮ ಪ್ರತಿಭೆಯನ್ನು ಪ್ರಕಟಪಡಿಸುತ್ತ ಬೆಳೆದು ಬಂದುದನ್ನು ಕಂಡು ನಾನು ಸಂತೋಷಪಟ್ಟಿದ್ದೇನೆ. ಯಾವುದೇ ಕೆಲಸವನ್ನು ಕೈಕೊಂಡರೂ ಅದು ಈಡೇರುವವರೆಗೆ ದೆವ್ವದಂತೆ (ಒಳ್ಳೆಯ ಅರ್ಥದಲ್ಲಿ) ಅವರು ದುಡಿಯುವುದನ್ನು ನಾನು ಕಂಡಿದ್ದೇನೆ. ಕರ್ನಾಟಕ ಕಾಲೇಜಿನಲ್ಲಿ ಅವರು ಹಿಂದೀ ವಿಭಾಗದ ಮುಖ್ಯಸ್ಥರಾಗಿ ಇದೇ ವರ್ಷ (೨೦೦೦) ನಿವೃತ್ತರಾದರೆಂದು ಹೇಳಿದರೆ ಬಹಳ ಜನ ನಂಬುವುದಿಲ್ಲ. ಅವರ ಕ್ರಿಯಾಶೀಲತೆ ಹಾಗೂ ಕನ್ನಡ ಸಾಹಿತ್ಯದಲ್ಲಿ ಅವರು ಗೈದ ಬರವಣಿಗೆ ಅಷ್ಟೊಂದು ವ್ಯಾಪಕವಾದುದು. ಹೈಸ್ಕೂಲಿನಲ್ಲಿ ಕಲಿಯುವಾಗ ಅವರೊಮ್ಮೆ ಹಿಂದಿಯಲ್ಲಿ ನಪಾಸಾದರಂತೆ. ಅದರ ಸೇಡು ತೀರಿಸಿಕೊಳ್ಳಲೋ ಏನೋ ಎಂಬಂತೆ ಅವರು ಎಸ್.ಎಸ್.ಎಲ್.ಸಿ. ಪಾಸಾಗುವುದರೊಳಗೆ ಹಲವಾರು ಹಿಂದೀ ಪರೀಕ್ಷೆಗಳಲ್ಲಿ ತೇರ್ಗಡೆಯಾಗಿ ಹಿಂದೀ ಶಿಕ್ಷಕ ಸನದ್ ಪರೀಕ್ಷೆಯಲ್ಲಿ (೧೯೫೮) ಮುಂಬೈ ರಾಜ್ಯಕ್ಕೆ ಪ್ರಥಮ ಶ್ರೇಣಿಯಲ್ಲಿ ಪ್ರಥಮರಾಗಿ ಹೊರಬಂದರು. ಮುಂದೆ ಹಿಂದಿಯನ್ನೇ ಮುಖ್ಯ ವಿಷಯವನ್ನಾಗಿಟ್ಟುಕೊಂಡು ಸ್ನಾತಕ ಮತ್ತು ಸ್ನಾತಕೋತ್ತರ ಪರೀಕ್ಷೆಗಳಲ್ಲಿ ಪ್ರಥಮ ಶ್ರೇಣಿಗಳನ್ನು ಪಡೆದು ಹಿಂದೀ ಅಧ್ಯಾಪಕರಾಗಿಯೇ ತಮ್ಮ ವೃತ್ತಿಯನ್ನು ಪ್ರಾರಂಭಿಸಿದರು. ಈ ಛಲಗಾರಿಕೆಯನ್ನು ಅವರ ಎಲ್ಲ ಸಾಹಿತ್ಯ ಚಟುವಟಿಕೆಗಳಲ್ಲಿಯೂ, ಬರವಣಿಗೆಯಲ್ಲಿಯೂ ಕಾಣಬಹುದು. 'ಸಂಕ್ರಮಣ' ಅದಕ್ಕೆ ದೊಡ್ಡ ಚಾಲನೆಯನ್ನು ಒದಗಿಸಿದ್ದನ್ನು ಇಲ್ಲಿ ನೆನೆಯಬಹುದು.

ಪಟ್ಟಣಶೆಟ್ಟಿಯವರ ಪ್ರಥಮ ಕವನ ಸಂಗ್ರಹ 'ನೀ-ನಾ' ದಿಂದ (೧೯೬೪) ಈಚಿನ 'ಸಮಗ್ರ ಕಾವ್ಯ' (೨೦೦೦)ದ ವರೆಗಿನ ಬೆಳಸನ್ನು ಗಮನಿಸಿದಾಗ ಕನ್ನಡ ಕಾವ್ಯ ಪ್ರಪಂಚದಲ್ಲಿ ಅವರದೇ ಆದ ವಿಶಿಷ್ಟ ದನಿಯನ್ನು, ಸಾಧನೆಯನ್ನು ಓದುಗರು ಗುರುತಿಸಬಹುದು. ಉದ್ದಕ್ಕೂ ಹಿನ್ನೆಲೆಯಲ್ಲಿ 'ನೀ-ನಾ' ತಂತಿಯೇ ಮಿಡಿಯುತ್ತಿದೆಯೇನೋ ಎಂದು ಭಾಸವಾದರೂ ಅವರ ಕಾವ್ಯದ ವಸ್ತು ವಿಸ್ತಾರಗೊಳ್ಳುತ್ತ, ಆತ್ಮನಿಷ್ಠತೆಯಿಂದ ವಸ್ತುನಿಷ್ಠತೆಯತ್ತ ಸಾಗಿ, ಭಿನ್ನ ಹಾದಿಗಳನ್ನು ಕ್ರಮಿಸುತ್ತ, ವರ್ತಮಾನದ ವಾಸ್ತವಕ್ಕೆ ಬಹಳ ಹತ್ತಿರವಾಗಿ ನಿಂತು ಬದುಕನ್ನು ಶೋಧಿಸುವುದರಲ್ಲಿ ತೊಡಗಿರುವುದನ್ನು ಕಾಣುತ್ತೇವೆ. ಮಾತುಗಾರಿಕೆ ಸ್ವಲ್ಪ ಹೆಚ್ಚಾಯಿತೇನೋ ಎಂದೆನಿಸಿದರೂ ಕಲೆಗಾರಿಕೆಯಲ್ಲಿ ಹಿಂದೆ ಬೀಳದಂತೆ ನೋಡಿಕೊಳ್ಳುವುದರಿಂದ ಬರವಣಿಗೆ ಎಲ್ಲಿಯೂ ತೂಕ

ತಪ್ಪುವುದಿಲ್ಲ. 'ಇನ್ನೆಷ್ಟು ಬೇಡುವುದು ಇಷ್ಟು ಹೇಳಿದ ಮೇಲೆ' ಎಂದು ಕವಿಗೇ ಅನಿಸಿದರೂ 'ಮಾಯದಂಥಾ ಬೆಳದಿಂಗಳ'ನ್ನು ಕಟ್ಟಿಕೊಡುವ ಶಕ್ತಿಯನ್ನು ಅದು ಕಳೆದುಕೊಂಡಿಲ್ಲ. ಆದರೂ ಪಟ್ಟಣಶೆಟ್ಟಿಯವರ ಒಟ್ಟು ಕಾವ್ಯದ ವಿಮರ್ಶೆ ಇನ್ನೂ ಬರಬೇಕಾಗಿದೆ.

ಪಟ್ಟಣಶೆಟ್ಟಿಯವರ ವಿಮರ್ಶಾ ಬರವಣಿಗೆ ಅವರು ಇನ್ನಷ್ಟು ವಿಮರ್ಶೆಯನ್ನು ಬರೆಯಲಿ ಎಂಬ ಆಸೆಯನ್ನು ಹುಟ್ಟಿಸುವಂತಿದೆ. 'ಚಹಾದ ಜೋಡಿ...' ಅಂಕಣ ಸಂಗ್ರಹಗಳಲ್ಲಿ ಕಂಡುಬರುವ ಅವರ ಸ್ನೇಹ ವಲಯ ಹಾಗೂ ಸಾಂಸ್ಕೃತಿಕ ಕಾಳಜಿಗಳು ಒಮ್ಮೊಮ್ಮೆ ದಂಗು ಬಡಿಸುತ್ತವೆ. ಸಾಲಿ ರಾಮಚಂದ್ರರಾಯರು ಹಾಗೂ ಎನ್ಕೆಯವರನ್ನು ಕುರಿತ ಸಂಪಾದಿತ ಕೃತಿಗಳಲ್ಲಿ ಅವರನ್ನು ಇರುವುದಕ್ಕಿಂತ ಎತ್ತರಕ್ಕೊಯ್ಯುವ ಪ್ರಯತ್ನ ಕಂಡುಬಂದರೂ ಪಟ್ಟಣಶೆಟ್ಟಿಯವರು ಈ ದಿಶೆಯಲ್ಲಿ ಅವಿಸ್ಮರಣೀಯ ಕಾರ್ಯಗೈದಿರುವುದನ್ನು ಯಾರೂ ಮರೆಯುವಂತಿಲ್ಲ.

ಕನ್ನಡ ಮತ್ತು ಹಿಂದೀ ಸಾಹಿತ್ಯವನ್ನು ತುಲನಾತ್ಮಕವಾಗಿ ಅಭ್ಯಾಸ ಮಾಡಿರುವ ಪಟ್ಟಣಶೆಟ್ಟಿಯವರು ತಮ್ಮ ಒಲವಿಗನುಗುಣವಾಗಿ ಮೌಲಿಕವೆನಿಸಿದ್ದನ್ನು ಹಿಂದಿಯಿಂದ ಕನ್ನಡಕ್ಕೆ- ಅದೂ ನಾಟಕ ಕ್ಷೇತ್ರದಲ್ಲಿ- ತಂದು ಕೃತಕೃತ್ಯರಾಗಿದ್ದಾರೆ. ಕಾವ್ಯ, ಕಾದಂಬರಿ, ಜೀವನಚರಿತ್ರೆಗಳೂ ಇದಕ್ಕೆ ಹೊರತಾಗಿಲ್ಲ.

ಕರ್ನಾಟಕ ಸಾಹಿತ್ಯ ಅಕಾಡೆಮಿ ಹಾಗೂ ನಾಟಕ ಅಕಾಡೆಮಿಗಳು ಅವರನ್ನು ಈ ಮೊದಲೇ ಗೌರವಿಸಿರುವುದು ಯೋಗ್ಯವಾಗಿದೆ. ಧಾರವಾಡದಲ್ಲಿ ಪಟ್ಟಣಶೆಟ್ಟಿಯವರಿಗೆ ಉತ್ಸಾಹ, ಸಂಭ್ರಮಗಳಿಂದ ನೆರವೇರಿದ ಅರವತ್ತರ ಅಭಿನಂದನೆಯ ತರುವಾಯ ಮೈಸೂರೂ ಇದಕ್ಕೆ ಮುಂದಾಗಿರುವುದು ಕನ್ನಡಗಿರು ಅಭಿಮಾನಪಡತಕ್ಕ ಸಂಗತಿಯಾಗಿದೆ. ಅವರ ಆತ್ಮೀಯತೆಯೇ ಅಂತಹುದು.

'ಸಹೃದಯ'
(ಅಭಿನಂದನ ಗ್ರಂಥ)
೨೦೦೪

# ೪೯

## ಕವಿಮಿತ್ರ ಸೋಮಶೇಖರ ಇಮ್ರಾಪುರ

ಬಿಸಿಲ ಹೂಗಂಪನ್ನೆ ಸವಿದ ನನ್ನೀ ಬಾಳು
ಹಸಿದ ಹೊಟ್ಟೆಗೆ ಹಾಲು ಹರಿದಂತಿದೆ
ಮುಸುಕು ಹಾಕಿದ ಮಬ್ಬು ಮಂಜು ನಸುಕಿನಲೆದ್ದು
ಕೊಸರಿ ಕೊಂಡೆತ್ತತ್ತೊ ಹೋದಂತಿದೆ

ಎಂದು ಕುತೂಹಲದಿಂದಲೇ ತಮ್ಮ ಕಾವ್ಯ ಜೀವನವನ್ನು 'ಬಿಸಿಲ ಹೂ' (೧೯೬೪)ನಿಂದ ಪ್ರಾರಂಭಿಸಿದ ಶ್ರೀ ಸೋಮಶೇಖರ ಇಮ್ರಾಪುರ 'ಬೆಳದಿಂಗಳು' (೧೯೬೬)ದಲ್ಲಿ ಸುತ್ತಾಡಿ ಬರಬೇಕು, 'ಹುಣ್ಣಿವಿ ಹುಡುಕಬೇಕು' ಎಂಬ ತಮ್ಮ ಪ್ರಯತ್ನವನ್ನು ದಿಟ್ಟತನದಿಂದಲೇ ಮುಂದುವರಿಸಿದರು. 'ಬೆಂಕಿ' (೧೯೭೦)ಯಲ್ಲಿ

ದೀಪಾವಳಿ ಪಾಪ, ಏನು ತಿಳಕೊಂಡೀತು
ಹಚ್ಚಿಬಿಡು ದೀಪ

ಎಂಬ ಆಶಾವಾದದ ಬೆಳಕಿನ 'ಸಮಾಧಾನ'ದೊಡನೆ 'ವೇದಾಂತ'ದಂತಹ ಕವಿತೆಯಲ್ಲಿ ಅವರ ಕಾವ್ಯ ವ್ಯಂಜಕ ಸಾಮಗ್ರಿಯೊಂದಿಗೆ ಆರೋಗ್ಯಕರವಾದ ಜೀವನ ದೃಷ್ಟಿಯನ್ನೂ ಪಡೆಯುವಂತಾಯಿತು.

೧೯೭೧ರಲ್ಲಿ ಪ್ರಕಟವಾದ 'ಗಂಡ-ಹೆಂಡಿರ ಜಗಳ ಗಂಧ ತೀಡಿದ್ಹಾಂಗ' ಸಂಗ್ರಹಕ್ಕೆ ಬೆನ್ನುಡಿಯಾಗಿ ನಾನು ಮುಂದಿನ ಮಾತುಗಳನ್ನು ಬರೆದದ್ದುಂಟು.

'ಜಾನಪದ ಭಾಷೆ ಹಾಗೂ ಕಾವ್ಯದ ಮೂಲ ಸತ್ವವನ್ನು ಮೈಗೂಡಿಸಿಕೊಂಡು ತಮ್ಮ ಅಭಿವ್ಯಕ್ತಿಯ ಸಾಮರ್ಥ್ಯವನ್ನು ಹೆಚ್ಚಿಸಿಕೊಳ್ಳುತ್ತಿರುವ ಈಚಿನ ಕವಿಗಳಲ್ಲಿ ಸೋಮಶೇಖರ ಇಮ್ರಾಪುರ ಅವರ ಸಾಧನೆ ಕಡಿಮೆಯದೇನಲ್ಲ. ನೂತನ ಭಾವಗಳ ಆವಿಷ್ಕಾರಕ್ಕೂ, ರೂಪಕ ನಿರ್ಮಾಣಕ್ಕೂ ಅದನ್ನು ಹೇಗೆ ದುಡಿಸಿಕೊಳ್ಳಬಹುದೆಂಬುದನ್ನು ಅವರ ಈ ಮೊದಲಿನ ಕೆಲವು ಯಶಸ್ವಿ ರಚನೆಗಳು ಎತ್ತಿ ತೋರಿಸುತ್ತವೆ. ಪ್ರಕೃತ ಸಂಗ್ರಹದ ಬಹುಪಾಲು ಕವಿತೆಗಳು ಹಳ್ಳಿಯ ಬಾಳಿನ ಹಲವಾರು ಪ್ರೇಮ ಸನ್ನಿವೇಶಗಳನ್ನು, ಸಂಸಾರಿಕ ಜೀವನದ ಸರಸವಿರಸಗಳನ್ನು ಅಲ್ಲಿಯ ಪರಿಸರದೊಂದಿಗೆ ನಿರಾಯಾಸವಾಗಿ ಮೂಡಿಸುತ್ತವೆ. ಹಳ್ಳಿಯ ಹಾಡಿನ ಗತಿ-ಗತ್ತು, ಗಾಡಿ-ಮೋಡಿ, ಬೆಡಗು-ಬಿನ್ನಾಣಗಳನ್ನು ಸಜೀವವಾಗಿ ಸೆರೆ ಹಿಡಿದು, ದೇಸಿಯ ಸೊಗಡಿನಿಂದ

ಈ ಹಾಡುಗಳು ಹೊಮ್ಮಿ ಹೂಂಕರಿಸುತ್ತವೆ. ಆನಂದಕಂದರ 'ಸಲ್‌ವಾಡು'ಗಳ ತರುವಾಯ ಈ ಸಂಪ್ರದಾಯಕ್ಕೆ ಇನ್ನಷ್ಟು ಎಣ್ಣೆ ಎರೆದು ಅದನ್ನು ಉಜ್ವಲಗೊಳಿಸಿದ ಶ್ರೇಯಸ್ಸು ನಿರ್ವಿವಾದವಾಗಿ ಇಮ್ರಾಪುರ ಅವರಿಗೆ ಸಲ್ಲುತ್ತದೆ. ಆ ವರ್ಷದ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಬಹುಮಾನದೊಂದಿಗೆ ಹೆಚ್ಚಿನ ಜನಪ್ರಿಯತೆಯನ್ನು ಈ ಸಂಕಲನ ಅವರಿಗೆ ತಂದುಕೊಟ್ಟಿತು. ಮುಂದೆ ನಾಲ್ಕು ವರ್ಷಗಳ ತರುವಾಯ ಹೊರಬಂದ 'ಬಿರುಗಾಳಿ'ಯಲ್ಲಿ ವಸ್ತು, ಛಂದ ಹಾಗೂ ಅಭಿವ್ಯಕ್ತಿಯಲ್ಲಿ ಸಮಕಾಲೀನ ಸಂವೇದನೆಯೊಂದಿಗೆ ಹೆಚ್ಚಿನ ಹಾಸು-ಬೀಸನ್ನು ಅವರ ಕಾವ್ಯ ಪಡೆದುಕೊಂಡದ್ದಲ್ಲದೆ, ಆಡುಮಾತಿನ ಲಯವನ್ನು ಅತ್ಯಂತ ಪರಿಣಾಮಕಾರಿಯಾಗಿ ದುಡಿಸಿಕೊಂಡಿರುವುದನ್ನು ಕಾಣಬಹುದು. ಆದರೆ ಅಂದಿನ ಬಂಡಾಯದ ರಭಸದಲ್ಲಿ ಶಕ್ತಿಯುತವಾದ ಈ 'ಬಿರುಗಾಳಿ' ಕೂಡ ವಿಮರ್ಶಕರ ಲಕ್ಷ್ಯಕ್ಕೆ ಬಾರದೆ ಹೋದದ್ದು ನಿಜಕ್ಕೂ ಆಶ್ಚರ್ಯದ ಸಂಗತಿಯಾಗಿದೆ.

ಮುಂದೆ ಜಾನಪದದ ಬೇರೊಂದು ಕ್ಷೇತ್ರಕ್ಕೆ ಕಾಲಿಟ್ಟ ಇಮ್ರಾಪುರ ಅವರಿಗೆ ಅವರ ಕಾವ್ಯದ ಸೃಜನಶೀಲತೆಯೇ ಪ್ರೇರಕ ಶಕ್ತಿಯಾಗಿತ್ತೆಂದರೆ ತಪ್ಪಾಗದು.

ವೃತ್ತಿ ಜೀವನದಿಂದ ನಿವೃತ್ತರಾಗಿರುವ ಇಮ್ರಾಪುರ ಪ್ರವೃತ್ತಿ ಜೀವನದಿಂದ ನಿವೃತ್ತರಾಗದೆ ಕಾವ್ಯರಚನೆಯಲ್ಲಿ ಮತ್ತೆ ತಮ್ಮನ್ನು ತೊಡಗಿಸಿಕೊಂಡು ಇನ್ನಷ್ಟು ಉತ್ತಮ ಕಾವ್ಯವನ್ನು ರಚಿಸುವಂತಾಗಲಿ. 'ಬಲ ಹೂವ ಕೊಡುವ ತಾಯಿ' ಎಂಬ ಅವರ ಒಂದು ಒಳ್ಳೆಯ ಕವಿತೆಯಲ್ಲಿಯ ಕೋರಿಕೆ ಈಡೇರಲಿ ಎಂಬುದೇ ಈ ಸಂದರ್ಭದ ನನ್ನ ಹಾರೈಕೆಯಾಗಿದೆ.

**'ಬೇವು-ಬೆಲ್ಲ'**
(ಅಭಿನಂದನ ಗ್ರಂಥ)
೨೦೦೧

೫೦

# ನಮ್ಮ ಗುಂಜೆಟ್ಟಿಯವರು

ಪ್ರೊ. ಬಿ.ವ್ಹಿ. ಗುಂಜೆಟ್ಟಿಯವರು ಈ ವರ್ಷ ನಿವೃತ್ತರಾಗಲಿರುವರಂತೆ ನಿಜವೆ? ಎಂದು ಸ್ನೇಹಿತರೊಬ್ಬರು ಅನುಮಾನ ಹಾಗೂ ಅಚ್ಚರಿ ಬೆರೆತ ಧ್ವನಿಯಲ್ಲಿ ನನ್ನನ್ನು ಕೇಳಿದರು. ಯಾವುದಾದರೊಂದು ಒಳ್ಳೆಯ ಚಟುವಟಿಕೆಯಲ್ಲಿ ಸದಾ ತಮ್ಮನ್ನು ತೊಡಗಿಸಿಕೊಂಡಿರುವ ಹಸನ್ಮುಖದ ಈ ಕ್ರಿಯಾಶೀಲ ವ್ಯಕ್ತಿಯನ್ನು ಕಂಡವರಿಗೆ ಈ ಸಂದೇಹ ಬರುವುದು ಸಹಜವೇ ಆಗಿದೆ. ಬೆಳಗಾವಿ ಜಿಲ್ಲೆಯಲ್ಲಿ (ಹಂದಿಗುಂದ) ಜನಿಸಿ, ವಿಜಾಪುರ ಜಿಲ್ಲೆ ರಬಕವಿಯಲ್ಲಿ ಮಾಧ್ಯಮಿಕ ಶಿಕ್ಷಣ ಪಡೆದು, ಲಿಂಗರಾಜ ಕಾಲೇಜಿನಿಂದ ಪದವೀಧರರಾಗಿ, ಕರ್ನಾಟಕ ವಿಶ್ವವಿದ್ಯಾಲಯದಿಂದ ಸ್ನಾತಕೋತ್ತರ (ಕನ್ನಡ) ಪದವಿ ಪಡೆದ ಗುಂಜೆಟ್ಟಿಯವರು ಕಳೆದ ೩೪ ವರ್ಷಗಳಿಂದ ಧಾರವಾಡ ಕರ್ನಾಟಕ ಕಾಲೇಜಿನ ಕನ್ನಡ ವಿಭಾಗದಲ್ಲಿ ಪ್ರಾಧ್ಯಾಪಕರಾಗಿ, ವಿಭಾಗದ ಮುಖ್ಯಸ್ಥರಾಗಿ ಇದೀಗ ನಿವೃತ್ತರಾಗಲಿದ್ದಾರೆ. ಅಧ್ಯಾಪಕ ವೃತ್ತಿಯಲ್ಲಿ ನಿಷ್ಠೆಯುಳ್ಳವರಾಗಿ, ಪ್ರವೃತ್ತಿಯಿಂದ ಕನ್ನಡ ನಾಡು-ನುಡಿಯ ಹಿತಚಿಂತಕರಾಗಿ, ಧಾರವಾಡದ ಗುಂಜಾರವದಲ್ಲಿ ಗುಂಜೆಟ್ಟಿ ತನ್ಮಯರಾಗಿ ಬಿಟ್ಟಿದ್ದಾರೆಂದರೆ ತಪ್ಪಾಗದು.

ರಬಕವಿಯಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನವನ್ನು (೧೯೪೫) ಯಶಸ್ವಿಯಾಗಿ ನೆರವೇರಿಸುವಲ್ಲಿ ಪ್ರಮುಖ ಪಾತ್ರ ವಹಿಸಿದ ಶ್ರೀ ಎಸ್.ಎಂ. ಅಂಗಡಿಯವರು ಕನ್ನಡದ ಕಟ್ಟಾ ಅಭಿಮಾನಿಗಳು. ವಚನ ಸಾಹಿತ್ಯವನ್ನು ಇಂಗ್ಲೀಷಿಗೆ ಅನುವಾದಿಸಲು ವಿಶ್ವವಿದ್ಯಾಲಯ ಕೈಕೊಂಡ ಮಹತ್ವದ ಯೋಜನೆಯಲ್ಲಿ ಪ್ರೊ. ಮೆನೆಜಿಸ್ ಅವರ ಜೊತೆಗೆ ಅಂಗಡಿಯವರು ಸಲ್ಲಿಸಿದ ಸೇವೆ ಅವಿಸ್ಮರಣೀಯವಾದುದು. ನನಗೆ ಆತ್ಮೀಯರಾಗಿದ್ದ ಅಂಗಡಿಯವರು ಗುಂಜೆಟ್ಟಿಯವರ ಮಾವಂದಿರು. ಕರ್ನಾಟಕ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿ, ಪ್ರಾಚಾರ್ಯರಾಗಿ, ಪ್ರಸಿದ್ಧ ವಿಮರ್ಶಕರಾಗಿ ಕರ್ನಾಟಕ ಏಕೀಕರಣಕ್ಕಾಗಿ ದುಡಿದ ಹಿರಿಯರಲ್ಲಿ ಒಬ್ಬರೂ ನನ್ನ ವಿದ್ಯಾಗುರುಗಳೂ ಆದ ಪ್ರೊ. ಸ.ಸ. ಮಾಳವಾಡರ ಗರಡಿಯಲ್ಲಿ ಪಳಗಿದ ಪ್ರೊ. ಗುಂಜೆಟ್ಟಿಯವರು ಸಹಜವಾಗಿಯೇ ನನ್ನ ಆತ್ಮೀಯ ಸ್ನೇಹಿತರಲ್ಲಿ ಒಬ್ಬರಾದರು.

ಕಾಲೇಜುಗಳ ಅನೇಕ ಅಧ್ಯಾಪಕರುಗಳಿಗೆ ಕಾಲೇಜಿನ ಕಾಂಪೌಂಡು ಗೋಡೆಯೇ ಗಡಿರೇಖೆಯಾಗಿ ಬಿಟ್ಟಿರುತ್ತದೆ. ಬೇರೆ ಹವ್ಯಾಸಗಳಲ್ಲಿ ಅವರ ಆಸಕ್ತಿ ತೀರ ಕಡಿಮೆ. (ಅದಕ್ಕೆ ಅವರದೇ ಆದ ಕಾರಣಗಳಿರಬಹುದು). ಆದರೆ ಗುಂಜೆಟ್ಟಿಯಂಥವರು ಸಮಾನ

ಮನೋಧರ್ಮದವರೊಡನೆ ಸಾರ್ವಜನಿಕ ಜೀನದಲ್ಲೂ ಭಾಗವಹಿಸುತ್ತ ಯಾವುದೇ ಹಮ್ಮು-ಬಿಮ್ಮುಗಳಿಲ್ಲದೆ ಕನ್ನಡದ ಕಳಕಳಿಯಲ್ಲಿ ಒಂದಾಗಿ ಬೆಳೆಯುತ್ತ ಸಾಂಸ್ಕೃತಿಕ ಜೀವನದ ಅವಿಭಾಜ್ಯ ಅಂಗವಾಗಿ ಬಿಡುತ್ತಾರೆ.

ಕರ್ನಾಟಕ ಕಾಲೇಜಿನ ಅನೇಕ ಶೈಕ್ಷಣಿಕ ಕಾರ್ಯಗಳ ಜವಾಬುದಾರಿ ಗುಂಜೆಟ್ಟಿಯವರನ್ನು ಅರಸಿಕೊಂಡು ಬಂದದ್ದುಂಟು. ಅಲ್ಲಿಯ ವಿದ್ಯಾರ್ಥಿ ಕಲ್ಯಾಣಾಧಿಕಾರಿಯಾಗಿ. ಜಮಖಾನಾ, ಮಿಶಲನಿ ಚೇರ್ಮನ್‌ರಾಗಿ, ಗ್ರಾಂಥಾಲಯ ಸಮಿತಿ, ಸ್ಕಾಲರ್‌ಶಿಪ್ ಸಮಿತಿ, ಪ್ರವೇಶ ಸಮಿತಿ ಇತ್ಯಾದಿಗಳ ಸದಸ್ಯರಾಗಿ ಸಕ್ರಿಯ ಸೇವೆ ಸಲ್ಲಿಸಿ ಆಡಳಿತಾಧಿಕಾರಿಗಳ ಮೆಚ್ಚುಗೆ ಗಳಿಸಿದ್ದುಂಟು. ಕರ್ನಾಟಕ ವಿಶ್ವವಿದ್ಯಾಲಯವನ್ನು ಒಳಗೊಂಡು ಬೇರೆ ಬೇರೆ ವಿಶ್ವವಿದ್ಯಾಲಯಗಳ ಪದವಿ ಪರೀಕ್ಷೆಗಳ (ಕನ್ನಡ) ಪರೀಕ್ಷಕರಾಗಿ ಕಾರ್ಯನಿರ್ವಹಿಸಿದ್ದಾರೆ. ಇಂದಿರಾಗಾಂಧಿ ಮುಕ್ತ ವಿಶ್ವವಿದ್ಯಾಲಯ (ಧಾರವಾಡ ಜೆ.ಎಸ್.ಎಸ್.ಶಾಖೆ), ಸಿದ್ಧರಾಮ ಮಾರ್ಗದರ್ಶಿ, ಧಾರವಾಡ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಬಸವರಾಜ ಕಟ್ಟೀಮನಿ ವಿಚಾರವೇದಿಕೆ - ಹೀಗೆ ಹಲವಾರು ಶೈಕ್ಷಣಿಕ ಹಾಗೂ ಸಾಹಿತ್ಯಿಕ ಸಂಘ-ಸಂಸ್ಥೆಗಳಲ್ಲಿ ಅವರು ಸದ್ದಿಲ್ಲದೆ ಸೇವೆ ಸಲ್ಲಿಸುತ್ತಲೇ ಬಂದಿದ್ದಾರೆ.

ಧಾರವಾಡದ, ಅಷ್ಟೆ ಏಕೆ, ಉತ್ತರ ಕರ್ನಾಟಕದ ಅತ್ಯಂತ ಪ್ರತಿಷ್ಠಿತ ಹಿರಿಯ ಸಂಸ್ಥೆಯಾದ ಕರ್ನಾಟಕ ವಿದ್ಯಾವರ್ಧಕ ಸಂಘದ ಕಾರ್ಯಕಾರಿ ಸಮಿತಿಯ ಸದಸ್ಯರಾಗಿ, ಪ್ರಧಾನ ಕಾರ್ಯದರ್ಶಿಗಳಾಗಿ ಕಳೆದ ಇಪ್ಪತ್ತೈದು ವರ್ಷಗಳಿಂದ ಅದರ ಪ್ರತಿಯೊಂದು ಚಟುವಟಿಕೆಯಲ್ಲಿ ತಾದಾತ್ಮ್ಯ ಭಾವದಿಂದ ಕೆಲಸ ಮಾಡುತ್ತ ಅದರ ಏಳಿಗೆಯಲ್ಲಿ ಒಂದಾಗಿದ್ದಾರೆ. ಗುಂಜೆಟ್ಟಿಯವರು ಎಲ್ಲೂ ಸಿಗದಿದ್ದರೆ ವಿದ್ಯಾವರ್ಧಕ ಸಂಘದಲ್ಲಂತೂ ಸಿಕ್ಕೇ ಸಿಗುತ್ತಾರೆಂಬುದನ್ನು ಅವರ ಗೆಳೆಯರೆಲ್ಲರೂ ಬಲ್ಲರು.

ಗೋಕಾಕ ಚಳುವಳಿಗಂತೂ ಕರ್ನಾಟಕ ವಿದ್ಯಾವರ್ಧಕ ಸಂಘವೇ ಸ್ಫೂರ್ತಿಯ ಕೇಂದ್ರವಾಗಿತ್ತಷ್ಟೇ? ಚಳುವಳಿಯ ಪ್ರಮುಖ ಕಾರ್ಯಕರ್ತರಲ್ಲಿ ಒಬ್ಬರಾಗಿ, ಹಗಲಿರುಳೂ ದುಡಿಯುತ್ತ ಕ್ರಿಯಾ ಸಮಿತಿಯ ಕೋಶಾಧ್ಯಕ್ಷರಾಗಿ ಅತ್ಯಂತ ಜವಾಬ್ದಾರಿಯಿಂದ ಕಾರ್ಯನಿರ್ವಹಿಸಿದ್ದನ್ನು ನಾನು ಸಮೀಪದಿಂದ ಬಲ್ಲೆ. ಆ ಸಂದರ್ಭದಲ್ಲಿ ಹಿಂಡಲಗಿ ಜೇಲನ್ನೂ ಅವರು ಕಂಡುಬಂದರು. ಹಾಗೆ ನೋಡಿದರೆ ಅವರದು ಸೌಮ್ಯ ಸ್ವಭಾವ. ಆದರೆ ಅನ್ಯಾಯವನ್ನು ಅವರು ಎಂದಿಗೂ ಸಹಿಸರು. ಅಂಥ ಸಂದರ್ಭದಲ್ಲಿ ಅವರು ನಿಷ್ಠುರವಾಗಿಯೇ ವರ್ತಿಸುತ್ತಾರೆ. ರಾಯಬಾಗ ತಾಲೂಕಾ ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನದ (ಹಂದಿಗುಂದದಲ್ಲಿ) ಅಧ್ಯಕ್ಷ ಪದವಿಯನ್ನಿತ್ತು ಗೌರವಿಸಿದ್ದು, ಅವರ ಜನಪ್ರಿಯತೆಗೂ ಕಾರ್ಯಕ್ಷಮತೆಗೂ ಸಾಕ್ಷಿಯಾಗಿದೆ.

ಆಗಾಗ ಉತ್ತರ ಕರ್ನಾಟಕದ ಅನೇಕ ಊರುಗಳಿಗೆ ಹೋಗಿ, ಭಾಷಣ ಮಾಡಿ, ಕನ್ನಡದ ಜಾಗ್ರತಿಗೆ ಅವರು ನೆರವಾಗಿದ್ದಾರೆ. ಮಹತ್ವದ ಸಭೆ-ಸಮ್ಮೇಳನಗಳ ಸಂಘಟನೆಯಲ್ಲಿ ಗುಂಜೆಟ್ಟಿಯವರ ಪಾಲು ಯಾವಾಗಲೂ ಇದ್ದೇ ಇರುತ್ತದೆ. ನಾಲ್ಕೈದು ಸ್ವತಂತ್ರ ಕೃತಿಗಳ

ಜೊತೆಗೆ ಐದಾರು ಗ್ರಂಥಗಳನ್ನು ಅವರು ಸಂಪಾದಿಸಿ ಕೊಟ್ಟಿದ್ದಾರೆ. ಸ್ಮರಣ ಸಂಚಿಕೆ, ಅಭಿನಂದನ ಗ್ರಂಥಗಳಿಗೆ ಸಂದರ್ಭೋಚಿತ ಲೇಖನಗಳನ್ನು ಬರೆದಿದ್ದಾರೆ. ಆಕಾಶವಾಣಿಯ ಹಲವಾರು ಕಾರ್ಯಕ್ರಮಗಳಲ್ಲಿ ಭಾಗವಹಿಸಿದ್ದಾರೆ. ಅವರ ಕವಿತೆಗಳ ಸಂಗ್ರಹವೊಂದು ಪ್ರಕಟನೆಗೆ ಕಾದಿದೆ.

ಕನ್ನಡದ ಹಿರಿಯ ಚೇತನ ಶ್ರೀ ಮಾಸ್ತಿಯವರು ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾಗಿದ್ದಾಗ ಕನ್ನಡದ ಕೆಲಸವನ್ನು ಕುರಿತು ಮಾತನಾಡುತ್ತ, 'ನನಗೆ ಒಂದು ನೂರು ಜನ ಒಳ್ಳೆ ಕಾರ್ಯಕರ್ತರನ್ನು ಕೊಡಿ: ಕನ್ನಡದಲ್ಲಿ ಒಂದು ಕ್ರಾಂತಿಯನ್ನೇ ಮಾಡಿ ತೋರಿಸುತ್ತೇನೆ' ಎಂದು ಹೇಳಿದ್ದರಂತೆ. ಅವರು ಬಯಸಿದ ಅಂಥ ಕಾರ್ಯಕರ್ತರಲ್ಲಿ ಪ್ರೊ. ಗುಂಜೆಟ್ಟಿ ಅಗ್ರಪಂಕ್ತಿಯಲ್ಲಿ ನಿಲ್ಲುವಂಥವರು. ರಾಘವಾಂಕ ಕವಿ ತನ್ನ 'ಹರಿಶ್ಚಂದ್ರ ಕಾವ್ಯ'ವನ್ನು ಜನ ಬದುಕಲೆಂದು 'ಕಾವ್ಯ ಮುಖದಿಂ ಪೇಳ್ದನಪೇಕ್ಷೆಯಿಂದ' ಎಂದಿದ್ದಾನೆ. ಇಂದು ನಮ್ಮ ಸಾಮಾಜಿಕ ಹಾಗೂ ಸಾಂಸ್ಕೃತಿಕ (ರಾಜಕೀಯ ಬಿಟ್ಟುಬಿಡೋಣ) ಕ್ಷೇತ್ರದಲ್ಲಿ ಹಾಗೆ ನಿರಪೇಕ್ಷೆಯಿಂದ ಕೆಲಸ ಮಾಡುವವರ ಸಂಖ್ಯೆ ತೀರ, ತೀರ ವಿರಳವಾಗುತ್ತಿದೆ. ಅಂಥ ವಿರಳ ಹಾಗೂ ಸರಳ ವ್ಯಕ್ತಿಗಳಲ್ಲಿ ಗುಂಜೆಟ್ಟಿಯಂಥವರು ಆಶಾಕಿರಣವಾಗಿ ಕಂಡುಬರುತ್ತಾರೆ. ಅಂಥ ಸಜ್ಜನರನ್ನು ಗೌರವ ಗ್ರಂಥದೊಂದಿಗೆ ಸನ್ಮಾನಿಸುವ ಸ್ತುತ್ಯ ಕಾರ್ಯದಲ್ಲಿ ತೊಡಗಿರುವ ಮಿತ್ರ ಬಳಗಕ್ಕೆ ನನ್ನ ಶುಭಾಶಂಸೆಗಳು ಹಾಗೂ ಹಾರ್ದಿಕ ಅಭಿನಂದನೆಗಳು.

**'ಗುಂಜಾರವ'**

(ಅಭಿನಂದನ ಗ್ರಂಥ)

೨೦೦೦

೫೧

## ಎಲ್ಲರೊಳಗೊಂದಾದ ಎಲ್.ಎಸ್. ಶಾಸ್ತ್ರಿ

ಬೆಳಗಾವಿಯ ಪತ್ರಿಕಾ ಪ್ರಪಂಚ ಹಾಗೂ ಸಾಹಿತ್ಯಿಕ ಸಾಂಸ್ಕೃತಿಕ ಸಭೆ ಸಮಾರಂಭಗಳಿಗೆ ಸಂಬಂಧಪಟ್ಟಂತೆ ಯಾವುದೇ ಬಗೆಯ ಕಾರ್ಯಕ್ರಮದಲ್ಲಿ ಒಂದಿಲ್ಲ ಒಂದು ರೀತಿಯಿಂದ ತಮ್ಮನ್ನು ತೊಡಗಿಸಿಕೊಂಡು, ಚಟುವಟಿಕೆಯಿಂದ ಓಡಾಡುವ, ಮುಗ್ಧ ಮನಸ್ಸಿನ ತೆಳ್ಳನೆಯ ಬೆಳ್ಳನೆಯ ವ್ಯಕ್ತಿಯೊಬ್ಬರು ಕಂಡುಬಂದರೆ, ಅವರೇ ಎಲ್.ಎಸ್. ಶಾಸ್ತ್ರಿಗಳೆಂದು ಕೂಡಲೇ ಗುರುತಿಸಬಹುದು.

ಶಾಸ್ತ್ರಿಗಳು ತಮ್ಮ ಮಿತ್ರರಾದ ಬಾಳೇಶ ಲಕ್ಷೆಟ್ಟಿಯವರೊಂದಿಗೆ ಬೇರೆ ಬೇರೆ ಸಂದರ್ಭಗಳಲ್ಲಿ ನನ್ನನ್ನು ಅನೇಕ ಸಲ ಭೆಟ್ಟಿಯಾಗಿದ್ದುಂಟು. ಅವುಗಳಲ್ಲಿ ಯಾವುದೂ ವೈಯಕ್ತಿಕವಾಗಿರದೆ ಸಾರ್ವಜನಿಕ ಹಿತಾಸಕ್ತಿಯೇ ಪ್ರಮುಖವಾಗಿರುತ್ತಿದ್ದುದನ್ನು ನಾನು ಕಂಡುಕೊಂಡಿದ್ದೆ. ಉಪನ್ಯಾಸ, ಕವಿಗೋಷ್ಠಿ, ಪುಸ್ತಕ ಬಿಡುಗಡೆ, ಸನ್ಮಾನ-ಹೀಗೆ ಅವರು ಸಂಘಟಿಸಿದ ಹಲವಾರು ಕಾರ್ಯಕ್ರಮಗಳಲ್ಲಿ ನಾನು ಭಾಗವಹಿಸಿದಾಗೆಲ್ಲ ಅವರ ಪರಹಿತಾರ್ಥ ಚಿಂತನೆ ಹಾಗೂ ಸಂಘಟನೆ ಸಾಮರ್ಥ್ಯ ನನ್ನನ್ನು ಚಕಿತಗೊಳಿಸಿದೆ. ವೈಯಕ್ತಿಕವಾಗಿ ಯಾವುದೇ ಸ್ಥಾನಮಾನಕ್ಕೆ ಹಾತೊರೆಯದೆ ಉಳಿದವರ ಉತ್ಕರ್ಷದಲ್ಲಿಯೇ ತಮ್ಮನ್ನು ತಾವು ಕಂಡುಕೊಳ್ಳುವ ಅಪರೂಪದ ಸ್ವಭಾವ ಅವರದಾಗಿದೆ. ಪ್ರಾರಂಭದಿಂದಲೂ ಪತ್ರಿಕಾವ್ಯವಸಾಯವನ್ನೇ ತಮ್ಮ ವೃತ್ತಿಯಾಗಿ ಮಾಡಿಕೊಂಡಿರುವ ಅವರು ಉತ್ತರ ಕನ್ನಡ ಜಿಲ್ಲೆಯಿಂದ ಬೆಳಗಾವಿಗೆ ಬಂದು ನೆಲೆಸಿದ್ದು ಒಂದು ಯೋಗಾಯೋಗ. ಸಾಮಾನ್ಯವಾಗಿ ಬೆಳಗಾವಿಯ ಎಲ್ಲ ದಿನಪತ್ರಿಕೆಗಳಲ್ಲಿಯೂ ಉಪಸಂಪಾದಕರಾಗಿ ಕೆಲಸ ಮಾಡಿದ ಅವರ ಅನುಭವ ವಿಶಿಷ್ಟವಾಗಿರಲಿಕ್ಕೆ ಸಾಧ್ಯ. ಅವರು ಆಗಾಗ ದೀಪಾವಳಿ ಸಂಚಿಕೆ ಅಥವಾ ಯಾವುದೇ ವಿಶೇಷ ಸಂಚಿಕೆಗೆ ಕವಿತೆ ಅಥವಾ ಲೇಖನವನ್ನು ಕೋರಿ ನನಗೆ ಪತ್ರ ಬರೆದಾಗೆಲ್ಲ ಅವರ ವಿಳಾಸಗಳು ಬದಲಾಗುತ್ತಲೇ ಬಂದಿರುವುದನ್ನು ನಾನು ಗಮನಿಸಿದ್ದೇನೆ. ಕೆಲಕಾಲ ಸ್ವಂತ ಪತ್ರಿಕೆಯ ಪ್ರಕಟನೆಯಲ್ಲಿ ಅವರು ಉತ್ಸಾಹ ತೋರಿಸಿದ್ದೂ ಉಂಟು. ಹೀಗೆ ಪತ್ರಿಕಾ ಕ್ಷೇತ್ರದಲ್ಲಿ ಎಲ್ಲಾ ಋತುಮಾನಗಳಲ್ಲಿಯೂ ಬೆಳೆ ತೆಗೆಯಲು ದುಡಿಯುತ್ತ ಬಂದ ಶಾಸ್ತ್ರಿಯವರನ್ನು ರಾಜ್ಯ ಪತ್ರಿಕಾ ಅಕಾಡೆಮಿ ಗುರುತಿಸಿ ಪ್ರಶಸ್ತಿ ಪ್ರದಾನ ಮಾಡಿದ್ದು ಸಂತೋಷ ಪಡತಕ್ಕ ಸಂಗತಿಯೇ ಸರಿ.

ಕವಿಯಾಗಿ, ಯಕ್ಷಗಾನ ಕಲಾತಜ್ಞರಾಗಿ, ನಿರ್ಭೀತ ಪತ್ರಿಕಾಕರ್ತರಾಗಿ, ಪ್ರಖ್ಯಾತರಾಗಿದ್ದ ಜಿ.ಆರ್. ಪಾಂಡೇಶ್ವರ ಅವರ ಸ್ಮರಣಾರ್ಥ ಪಾಂಡೇಶ್ವರ ಪ್ರತಿಷ್ಠಾನ ಕಳೆದ ವರ್ಷ ಧಾರವಾಡದಲ್ಲಿ ಸ್ಥಾಪನೆಗೊಂಡಿತು. ಅದರ ಉದ್ಘಾಟನ ಸಮಾರಂಭದ ಸಂದರ್ಭದಲ್ಲಿ ಅರ್ಹ ಪತ್ರಕರ್ತರಿಗೆ ಕೊಡಲು ಯೋಜಿಸಿದ ಪ್ರತಿಷ್ಠಾನದ ಪ್ರಶಸ್ತಿಯನ್ನು ಪ್ರಥಮವಾಗಿ ಸ್ವೀಕರಿಸಿದವರು ಎಲ್.ಎಸ್. ಶಾಸ್ತ್ರಿಯವರು. ಶಾಸ್ತ್ರಿಯವರಿಗೆ ಇದು ಅನಿರೀಕ್ಷಿತವಾಗಿದ್ದರೂ ಹೊನ್ನಾವರದಲ್ಲಿ ಪಾಂಡೇಶ್ವರರಂಥ ಹಿರಿಯ ಪತ್ರಕರ್ತರ ಪ್ರತ್ಯಕ್ಷ ಪ್ರಭಾವಕ್ಕೆ ಅವರು ಒಳಗಾಗಿದ್ದ ಒಳ್ಳೆಯ ಅಂಶವನ್ನು ಸಮಾರಂಭದ ಉದ್ಘಾಟನೆಯ ಭಾಷಣದಲ್ಲಿ ನಾನು ಎತ್ತಿ ಹೇಳಿದಾಗ ಶಾಸ್ತ್ರಿಯವರು ಅದನ್ನು ಕೃತಜ್ಞತೆಯಿಂದ ಒಪ್ಪಿಕೊಂಡುದನ್ನು ಇಲ್ಲಿ ಉಲ್ಲೇಖಿಸಬಹುದಾಗಿದೆ.

ಶಾಸ್ತ್ರಿಯವರು ಅರವತ್ತು ವಸಂತಗಳನ್ನು ಕಾಣುತ್ತಿರುವ ಈ ಸಂದರ್ಭವನ್ನು ಸದುಪಯೋಗಪಡಿಸಿಕೊಂಡು ಬೆಳಗಾವಿಯಲ್ಲಿ ಅವರಿಗೆ ಸಾರ್ವಜನಿಕ ಸನ್ಮಾನ ಹಾಗೂ ಗೌರವ ಗ್ರಂಥ ಪ್ರಕಟನೆಯ ಕಾರ್ಯವನ್ನು ಹಮ್ಮಿಕೊಂಡಿರುವ ಶ್ರೀ ಎಲ್.ಎಸ್. ಶಾಸ್ತ್ರಿ ಷಷ್ಟ್ಯಬ್ದಿ ಸನ್ಮಾನ ಸಮಿತಿಯನ್ನು ಹಾರ್ದಿಕವಾಗಿ ಅಭಿನಂದಿಸುತ್ತೇನೆ. ಈ ಸಂದರ್ಭದಲ್ಲಿ ಬೆಳಗಾವಿ ನಗರಾಭಿವೃದ್ಧಿ ಪ್ರಾಧಿಕಾರ ಇನ್ನುಳಿದ ಪತ್ರಿಕಾಕರ್ತರಂತೆ ಶ್ರೀ ಶಾಸ್ತ್ರಿಯವರಿಗೂ ನಿವೇಶನದ ಸೌಲಭ್ಯವನ್ನು ಒದಗಿಸಿ ತನ್ನ ಪಾಲಿನ ಕರ್ತವ್ಯವನ್ನು ನೆರವೇರಿಸುವದೆಂದು ಆಶಿಸುತ್ತೇನೆ. ರಾಜ್ಯದ ಸಚಿವರು ಶಾಸಕರಾದಿಯಾಗಿ ಅನೇಕ ಗಣ್ಯ ವ್ಯಕ್ತಿಗಳನ್ನೊಳಗೊಂಡಿರುವ ಸನ್ಮಾನ ಸಮಿತಿಯು ಇದೇ ಕಾಲಕ್ಕೆ ಒಂದು ಶಾಶ್ವತ ನಿಧಿಯನ್ನು ಸ್ಥಾಪಿಸಿ ಶಾಸ್ತ್ರಿಯವರ ಹೆಸರಿನಲ್ಲಿ ದತ್ತಿ ಬಹುಮಾನದ ವ್ಯವಸ್ಥೆಯನ್ನು ಕೈಗೊಂಡಲ್ಲಿ ಬೆಳಗಾವಿಯ ಸತ್ಸಂಪ್ರದಾಯವನ್ನು ಮುಂದುವರಿಸಿದ ಶ್ರೇಯಸ್ಸಿಗೆ ಅದು ಖಂಡಿತವಾಗಿಯೂ ಪಾತ್ರವಾಗಬಲ್ಲದು.

ಸ್ವತಃ ಒಳ್ಳೆಯ ಲೇಖಕರಾಗಿದ್ದು ಸ್ವಇಚ್ಛೆಯಿಂದ ಅಥವಾ ಪ್ರಸಂಗಾನುಸಾರ ಪತ್ರಿಕಾಕರ್ತರಾಗಿ ತಮ್ಮತನವನ್ನು ಮೆರೆದ ಪ್ರತಿಭಾವಂತರು ಬೆಳಗಾವಿಯಲ್ಲಿ ಹಲವರಿದ್ದಾರೆ. ಗಡಿ-ಬಿಡಿ ಗೊಂದಲಾಸುರರಿಗೆ ಬುದ್ಧಿಗಲಿಸಿ, ಪರಸ್ಪರ ತಿಳಿವಳಿಕೆಯ ಬಾಂಧವ್ಯಕ್ಕೆ ನೀರೆರೆಯುತ್ತ, ನಗರದ ಸಾಂಸ್ಕೃತಿಕ ಜೀವನಕ್ಕೆ ಹೊಸ ಜೀವಕಳೆಯನ್ನು ತಂದುಕೊಡುತ್ತಿರುವ ವೃತ್ತಿ ಬಾಂಧವರ ಪಂಕ್ತಿಯಲ್ಲಿ ಎಲ್.ಎಸ್. ಶಾಸ್ತ್ರಿಗಳು ಸ್ಥಾನ ಪಡೆದಿರುವುದು ನಿಜಕ್ಕೂ ಸಂತೋಷದ ಸಂಗತಿ ಈ ದಿಸೆಯಲ್ಲಿ ಇನ್ನೂ ಹೆಚ್ಚಿನ ಸೇವೆಗೆ ಅಣಿಗೊಳ್ಳುವಂತೆ ಭಗವಂತನು ಶಾಸ್ತ್ರಿಯವರಿಗೆ ಆಯುರಾರೋಗ್ಯವನ್ನು ಒದಗಿಸಲೆಂದು ಹಾರೈಸುತ್ತೇನೆ.

'ಸವ್ಯಸಾಚಿ'
(ಗೌರವ ಗ್ರಂಥ)
೨೦೦೭

## ೫೨

# ಉತ್ಸಾಹಕ್ಕೊಂದು ಉಡುಗೊರೆ

ಶ್ರೀ ಬಾಳೇಶ ಲಕ್ಷೆಟ್ಟಿ ಆತ್ಮಾವಲೋಕನ ಮಾಡಿಕೊಳ್ಳುತ್ತ ಒಂದೆಡೆ ಹೇಳಿದ್ದಾರೆ. "ಜನ ನನ್ನನ್ನು ನೋಡಿ ವ್ಯಂಗ್ಯವಾಗಿ ನಕ್ಕಾಗಲೇ ಅವರ ಮನಸ್ಸಿಗೆ ಸಮಾಧಾನ. ಅವರ ನಗುವನ್ನು ಕುರಿತು ಆಲೋಚಿಸಿದಾಗಲೆಲ್ಲ ಆ ನಗುವಿಗೂ ಒಂದು ಅರ್ಥವಿದ್ದಿರಬೇಕೆಂದು ಅನ್ನಿಸುತ್ತದೆ."

ಲಕ್ಷೆಟ್ಟಿಯವರನ್ನು ಲಿಂಗರಾಜ ಕಾಲೇಜಿನ ವಿದ್ಯಾರ್ಥಿಯಾಗಿದ್ದಾಗಿನಿಂದಲೂ ನಾನು ಬಲ್ಲೆ. ಆಗಲೇ ಅವರಿಗೆ ಸಾಹಿತ್ಯದ ಹುಚ್ಚು. ಸಾಹಿತಿಗಳನ್ನು ಪರಿಚಯ ಮಾಡಿಕೊಳ್ಳುವುದು; ಅವರೊಡನೆ ಪತ್ರವ್ಯವಹಾರ ಮಾಡುವುದು; ಸಾಹಿತ್ಯಿಕ ಚಟುವಟಿಕೆಗಳಲ್ಲಿ ಸಭೆಸಮಾರಂಭಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವುದು; ಭೆಟ್ಟಿಯಾದಾಗೆಲ್ಲ ತಮಗೆ ಪ್ರಿಯವಾದ ವಿಷಯಗಳ ಬಗ್ಗೆ ಚರ್ಚಿಸಿ ಸಂದೇಹ ನಿವಾರಣೆ ಮಾಡಿಕೊಳ್ಳುವುದು; ಲೇಖಕರ ಬಳಗವನ್ನು ಕಟ್ಟುವುದು; ಹಿರಿಯರನ್ನು ಓಲೈಸುವುದು, ಕಿರಿಯನ್ನು ಪ್ರೋತ್ಸಾಹಿಸುವುದು; ತಮಗನಿಸಿದ್ದನ್ನು ಬರವಣಿಗೆಯಲ್ಲಿಳಿಸಲು ಪ್ರಯತ್ನಿಸುವುದು; ಹೀಗೆ ಕಳೆದ ಮೂರು ದಶಕಗಳಿಗೂ ಮಿಕ್ಕಿ ಅವರು ತಮ್ಮ ಬದುಕನ್ನು ಬರವಣಿಗೆಯನ್ನು ತಿದ್ದಿ ಹದಗೊಳಿಸಿಕೊಳ್ಳುತ್ತ ಬಂದಿದ್ದಾರೆ. ಮೊದಮೊದಲು ಕೆಲವರಿಗೆ ಇವರ ಹವ್ಯಾಸಗಳು ವಿಚಿತ್ರವಾಗಿ ಕಂಡಿರಬಹುದು. ಕೆಲವರು ಸೋಮಾರಿಗಳು ಇವರ ಉಕ್ಕಿ ಹರಿಯುವ ಉತ್ಸಾಹವನ್ನು ಕಂಡು ನಕ್ಕಿರಬಹುದು, ಆದರೆ ನನಗನಿಸುವಂತೆ ಖಂಡಿತ ಅಂಥವರು ವ್ಯಂಗ್ಯವಾಗಿ ನಕ್ಕಿರಲಾರರು. ಯಾಕೆಂದರೆ ಸ್ವತಃ ಲಕ್ಷೆಟ್ಟಿಯವರೇ ನಕ್ಕವರ ಜೊತೆಗೆ ತಾವೂ ನಗಬಲ್ಲ ಸ್ವಚ್ಛ ಸ್ವಭಾವದವರು. ಅವರೇ ಹೇಳಿರುವಂತೆ ಆ ನಗುವಿನಲ್ಲಿಯೂ ಒಂದು ಅರ್ಥವನ್ನು ಅವರು ಕಂಡುಕೊಂಡಿದ್ದಾರೆ. ಅದೀಗ ಮಾಗಿದ ಬೆಳವಣಿಗೆಯ ಲಕ್ಷಣ. ಬೆಳಗಾವಿ ಜಿಲ್ಲೆಯ ಲೇಖಕರಲ್ಲಿ ಸ್ವಂತಸಾಹಸದಿಂದ, ಸ್ವಯಂಪ್ರಕಾಶನಗಳಿಂದ ಒಡೆದುಕಾಣುವ ವ್ಯಕ್ತಿಗಳಲ್ಲಿ ಅವರು ಒಬ್ಬರೆನಿಸಿದ್ದಾರೆ. ಅದೇ ಕಾರಣದಿಂದಾಗಿಯೇ ಆ ಜಿಲ್ಲೆಯ ಹಿರಿಯ ಸಾಹಿತಿಗಳಾದ ಕೃಷ್ಣಮೂರ್ತಿ ಪುರಾಣಿಕ ಹಾಗೂ ಬಸವರಾಜ ಕಟ್ಟೀಮನಿಯಂಥವರು ಅವರನ್ನು ಪ್ರೀತಿಯಿಂದ ಕಂಡು ಬೆನ್ನು ತಟ್ಟಿದ್ದಾರೆ.

ಲಕ್ಷೆಟ್ಟಿ ತಮ್ಮ ಬರವಣಿಗೆಯ 'ಭಾಗ್ಯೋದಯ' (೧೯೫೭)ವನ್ನು ಕವಿತೆಯಿಂದಲೇ ಕಂಡುಕೊಂಡವರಾದರೂ ಸಣ್ಣಕಥೆ, ಪತ್ರಸಾಹಿತ್ಯ, ವ್ಯಕ್ತಿಚಿತ್ರ, ಜೀವನಚರಿತ್ರೆ, ಮಕ್ಕಳ ಸಾಹಿತ್ಯ-ಹೀಗೆ ತಮ್ಮ ಅಳವಿಗೆ ಸಿಗಬಹುದಾದ ಸಾಹಿತ್ಯ ಪ್ರಕಾರಗಳಲ್ಲಿ ಎಡೆಬಿಡದೆ ಕೃಷಿ

ಮಾಡುತ್ತ ೨೫ಕ್ಕೂ ಮಿಕ್ಕಿ ಕೃತಿರಚನೆ ಮಾಡಿದ್ದಾರೆ. ಆದರೂ ಕವನಸಂಗ್ರಹಗಳಿಗೇ ಅದರಲ್ಲಿ ಹೆಚ್ಚಿನ ಪಾಲು ಸಲ್ಲುತ್ತದೆ. ಭಾವುಕತೆಯಿಂದ ವೈಚಾರಿಕತೆಯತ್ತ ಅವರು ಹೆಜ್ಜೆ ಹಾಕುತ್ತಿರುವುದನ್ನು ಅಲ್ಲಿ ಗುರುತಿಸಬಹುದು. ಈಚೆಗೆ ಒಂದು ಕಾದಂಬರಿಯನ್ನು ಅವರು ಬರೆದಿದ್ದಾರೆ, ಒಬ್ಬ ಆದರ್ಶ ಶಿಕ್ಷಕರ ಜೀವನದ ಸಂಕಷ್ಟಗಳನ್ನು ಇಂದಿನ ರಾಜಕೀಯ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಚಿತ್ರಿಸಲು ಪ್ರಯತ್ನಿಸಿದ್ದಾರೆ. ವ್ಯಕ್ತಿಚಿತ್ರ ಹಾಗೂ ಜೀವನ ಚರಿತ್ರೆ ಅವರಿಗೆ ಹೆಚ್ಚು ಒಗ್ಗಿದ ಸಾಹಿತ್ಯಪ್ರಕಾರವಾಗಿ ಕಾಣುತ್ತದೆ. 'ಸಾಹಿತ್ಯ ಯಾತ್ರಿಕರು' ಕೃತಿಯಿಂದ ಪ್ರಾರಂಭಿಸಿದ ಅವರು 'ಡಾ. ಶ್ಯಾಮಪ್ರಸಾದ ಮುಖರ್ಜಿ' ಕೃತಿಯಲ್ಲಿ ಹೆಚ್ಚಿನ ಸಫಲತೆಯನ್ನು ಪಡೆದಿದ್ದಾರೆ.

ಅವರೀಗ ಬೆಳಗಾವಿಯಲ್ಲಿ ತಮ್ಮ ಅಧ್ಯಾಪಕ ವೃತ್ತಿಯನ್ನು ಮುಂದುವರಿಸಿರುವುದು ಅಲ್ಲಿಯ ಕನ್ನಡದ ಚಟುವಟಿಕೆಗಳಿಗೆ, ಸಾಹಿತ್ಯಿಕ ಕಾರ್ಯಕಲಾಪಗಳಿಗೆ ಹೆಚ್ಚಿನ ಬಲವನ್ನು ತಂದುಕೊಡುವ ಸೂಚನೆಗಳನ್ನು ನೀಡಿದೆ. ಸ್ಥಳೀಯ ಸಂಘ ಸಂಸ್ಥೆಗಳ ಜೊತೆ ಮಧುರ ಬಾಂಧವ್ಯವನ್ನು ಇಟ್ಟುಕೊಳ್ಳುತ್ತಲೇ ತಮ್ಮದೇ ಆದ ಒಂದು ಬಳಗವನ್ನು ಸ್ಥಾಪಿಸುವ ಉತ್ಸಾಹದಲ್ಲಿ ಅವರು ಎಂದೂ ಹಿಂದೆ ಬೀಳಲಾರರು. ಆದರಿಂದ ಪರಸ್ಪರ ಮೈತ್ರಿಗೆ ಬಾಧೆ ಬರದಂತೆ ನೋಡಿಕೊಳ್ಳುವ ಕೌಶಲ ಅವರಿಗಿದೆ. ಬೆಳಗಾವಿಯಲ್ಲಿ ಕೆಲದಿನಗಳ ಹಿಂದೆ ಅವರು ಹೊಸದಾಗಿ ಪ್ರಾರಂಭಿಸಿದ 'ಸಾಹಿತ್ಯ ಕಲಾವೇದಿಕೆ'ಯ ಉದ್ಘಾಟನೆ ಮಾಡುವ ಅವಕಾಶ ನನಗೆ ಒದಗಿದ್ದಿತು. ಲಕ್ಷೆಟ್ಟಿಯವರ ಸ್ನೇಹಿತರ ಬಳಗ ಎಷ್ಟು ದೊಡ್ಡದು, ಅವರಿಟ್ಟುಕೊಂಡು ಬಂದ ಮಾನವೀಯ ಸಂಬಂಧ ಎಂಥದು ಎನ್ನುವುದಕ್ಕೆ ಅಂದಿನ ಸಭೆ ಒಂದು ಒಳ್ಳೆಯ ನಿದರ್ಶನವಾಗಿ ನನಗೆ ತೋರಿತು. ಆ ಮಾತನ್ನು ಅಂದಿನ ಸಭಿಕರಲ್ಲಿ ಹಂಚಿಕೊಂಡು ನಾನು ಸಂತೋಷಪಟ್ಟಿದ್ದುಂಟು.

"ಜೀವನದಲ್ಲಿ ಮಾನವೀಯ ಸಂಸ್ಕೃತಿಗೆ ಪ್ರಥಮ ಸ್ಥಾನವಿದೆ. ಅಂತಹ ಸಂಸ್ಕೃತಿಯನ್ನು ಬೆಳೆಸಲು ನಾನು ಮುಂದಾಗಬೇಕು" ಎಂಬುದು ಬಾಳೇಶ ಲಕ್ಷೆಟ್ಟಿಯವರ ಹಂಬಲ. ರಾಷ್ಟ್ರೀಯತೆಯ ಒಲವನ್ನೂ, ಪ್ರಗತಿಶೀಲ ಮನೋಧರ್ಮವನ್ನೂ ಹೊಂದಿರುವ ಅವರಿಗೆ ಈ ದಿಸೆಯಲ್ಲಿ ಹೆಚ್ಚಿನ ಯಶಸ್ಸು ದೊರೆಯಲೆಂದೂ, ನಾಡು-ನುಡಿಗೆ ಅವರಿಂದ ಇನ್ನೂ ಹೆಚ್ಚಿನ ಸೇವೆ ಸಲ್ಲುವಂತಾಗಲೆಂದೂ ಹಾರೈಸುತ್ತೇನೆ.

'ಏಣೆ'

(ಅಭಿನಂದನ ಗ್ರಂಥ)

೧೯೯೩

೫೩

## ಶ್ರೀಮತಿ ಲೀಲಾದೇವಿ ಪ್ರಸಾದ

ಶ್ರೀ ಎಚ್.ಎಸ್. ರೇಣುಕಾಪ್ರಸಾದ್-ಶ್ರೀಮತಿ ಲೀಲಾದೇವಿ ಪ್ರಸಾದ್ ದಂಪತಿಗಳನ್ನು ನಾನು ಮೊದಲು ಕಂಡದ್ದು ಗುರುಗಳಾದ ಪ್ರೊ|| ಸ.ಸ. ಮಾಳವಾಡರ ಮನೆಯಲ್ಲಿ ಎಂದು ನೆನಪು. ಶ್ರೀಮತಿ ಶಾಂತಾದೇವಿ ಮಾಳವಾಡರು ಲೀಲಾದೇವಿಯವರನ್ನು ಒಡಹುಟ್ಟಿದ ತಂಗಿಯೆಂದೇ ಕಾಣುತ್ತ ಬಂದಿದ್ದಾರೆ. ನನ್ನ ಶ್ರೀಮತಿ, ಶಾಂತಾದೇವಿ ಮಾಳವಾಡರ ಚಿಗವ್ವನ ಮಗಳು. ಅಲ್ಲದೆ, ಲೀಲಾದೇವಿ ಹಾಗೂ ಶ್ರೀಮತಿ ಶಾಂತಾ ಕಣವಿ ಬಾಲ್ಯ ಸ್ನೇಹಿತೆಯರು. ಹೀಗಾಗಿ ಲೀಲಾದೇವಿಗೂ ನನ್ನ ಶ್ರೀಮತಿಗೂ ಮಾಳವಾಡ ದಂಪತಿಗಳು ಪ್ರೀತಿಯ “ಅಕ್ಕ-ಮಾಮಾ” ಆದರು. ಈಗಲೂ ಲೀಲಾದೇವಿ ಪ್ರಸಾದ್ ಶಾಂತಾ ಕಣವಿಯವರು ಕೂಡಿದಾಗೆಲ್ಲ ತಮ್ಮ ಬಾಲ್ಯದ ಅನುಭವಗಳನ್ನು ಮೆಲುಕಾಡಿಸಿ ಸುಖಿಸುವುದುಂಟು.

ರೇಣುಕಾಪ್ರಸಾದರು ಬಹಳ ವರ್ಷಗಳ ಹಿಂದೆ ತಮ್ಮ ವಕೀಲರ ಸಂಘಕ್ಕೆ ನನ್ನನ್ನು ಕರೆದುಕೊಂಡು ಹೋಗಿ ಭಾಷಣ ಮಾಡಿಸಿದ್ದು ನೆನಪಿದೆ. ಈಚೆಗೆ ಅವರ ಭೆಟ್ಟಿ ತುಂಬ ವಿರಳವಾಗಿದೆ. ಪ್ರಸಾದರದು ಮಾತು ಕಡಿಮೆ, ಮೌನವಾಗಿಯೇ ತಮ್ಮ ಕೆಲಸದಲ್ಲಿ ಮಗ್ನವಾಗಿರುವ ಸ್ವಭಾವ. ಲೀಲಾದೇವಿ ಮಾತಿನಲ್ಲಿ ತುಂಬ ಗಳಿಬಿಳಿ. ಹಾಗೆಂದು ಕೆಲಸದಲ್ಲಿ ಎಂದೂ ಹಿಂದೆ ಬಿದ್ದವರಲ್ಲ. ಎರಡನ್ನೂ ಸಮಬಲದಲ್ಲಿ ತೂಗಿಸಿಕೊಂಡು ಸಾರ್ವಜನಿಕ ಕಾರ್ಯಗಳಲ್ಲಿ, ಅದರಲ್ಲೂ ಮಹಿಳೆಯರ ಚಟುವಟಿಕೆಗಳಲ್ಲಿ ತಮ್ಮನ್ನು ಬಿಡುವಿಲ್ಲದಂತೆ ತೊಡಗಿಸಿಕೊಂಡು ಮೇಲ್ಮೆಯನ್ನು ಸಾಧಿಸುತ್ತ ಬಂದವರು. ಈ ಗುಣ ಬಹುಶಃ ಅವರ ತಾಯಿ ಶ್ರೀಮತಿ ಗುರುದೇವಿ ಹಿರೇಮಠ ಅವರಿಂದ ಒದಗಿದ ಸಂಸ್ಕಾರವಿರಬಹುದು.

ಲೀಲಾದೇವಿಯವರ ತಂದೆ ಶ್ರೀ ವ್ಹಿ. ಎಸ್. ಹಿರೇಮಠರು ಧಾರವಾಡ ಜಿಲ್ಲಾಧಿಕಾರಿಗಳಾಗಿ ಬಂದದ್ದು - ಅದರಲ್ಲೂ ಧಾರವಾಡದಂಥ ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಕೇಂದ್ರಕ್ಕೆ ಮೊದಲ ಸಲ ಕನ್ನಡಿಗರು ಕಲೆಕ್ಟರರಾಗಿ ಬಂದುದು ಆಗ ಇಲ್ಲಿಯ ಜನತೆಯಲ್ಲಿ ಉತ್ಸಾಹವನ್ನೂ, ಗೆಲುವನ್ನೂ ಮೂಡಿಸಿತ್ತು. ಶ್ರೀಮತಿ ಗುರುದೇವಿ ಹಿರೇಮಠರದು ಅತ್ಯಂತ ಸ್ಫುರದ್ರೂಪಿ ವ್ಯಕ್ತಿತ್ವ. ಧಾರವಾಡದ ಅಕ್ಕನ ಬಳಗ, ಜಿಲ್ಲಾ ಮಹಿಳಾ ಮಂಡಳಿ, ಜಿಲ್ಲಾ ಸಮಾಜಕಲ್ಯಾಣ ಕೇಂದ್ರ ಮೊದಲಾದ ಹತ್ತು ಹಲವು ಸಂಸ್ಥೆಗಳ ಕಾರ್ಯಗಳಲ್ಲಿ ಶಾಂತಾದೇವಿ ಮಾಳವಾಡ ಹಾಗೂ ಸರಸ್ವತಿದೇವಿ ಗೌಡರ ಜೊತೆಗೂಡಿ, ಅಧಿಕಾರ, ಐಶ್ವರ್ಯದ ಅಹಂಕಾರದ ಸೋಂಕಿಲ್ಲದೆ

ಕೆಲಸ ಮಾಡಿ ಸಾರ್ವಜನಿಕರ ಪ್ರೀತಿ-ಗೌರವಗಳಿಗೆ ಪಾತ್ರರಾಗಿದ್ದರು. ವಚನ ಸಾಹಿತ್ಯದಲ್ಲಿ ಆಸಕ್ತಿವಹಿಸಿ ತ್ರಿಪದಿಯಲ್ಲಿ 'ಅಕ್ಕಮಹಾದೇವಿ ಪುರಾಣ', 'ನೋವು-ನಲಿವು' ಕವನ ಸಂಗ್ರಹ, 'ವಚನಕಾರರು' ಮೊದಲಾದ ಕೃತಿಗಳನ್ನು ರಚಿಸಿದರು. ಈ ಹಿನ್ನೆಲೆಯಲ್ಲಿ ಬೆಳೆದ ಲೀಲಾದೇವಿ ಪ್ರಸಾದ್ ಸಹಜವಾಗಿಯೇ ಆ ಗುಣಗಳನ್ನು ಮೈಗೂಡಿಸಿಕೊಂಡು ಸಾಮಾಜಿಕ, ಶೈಕ್ಷಣಿಕ ಕ್ಷೇತ್ರಗಳಲ್ಲಿ ಸೇವೆಗೈಯುತ್ತ ರಾಜಕೀಯ ಕ್ಷೇತ್ರದಲ್ಲಿಯೂ ಪಳಗಿ, ಬೆಳೆದು ಬಂದ ಬಗೆ ನಿಜಕ್ಕೂ ಬೆರಗುಗೊಳಿಸುವಂತಹುದು. ಧಾರವಾಡದಲ್ಲಿ ಹುಟ್ಟಿ ಬೆಳಗಾವಿಯಲ್ಲಿ ಬೆಳೆದು, ಬೆಂಗಳೂರಿನಲ್ಲಿ ಬೇರೂರಿದ ಲೀಲಾದೇವಿ ಪ್ರಸಾದ್ ಶಾಸಕಿಯಾಗಿ, ಮಂತ್ರಿಯಾಗಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಚಟುವಟಿಕೆಗಳಿಗೆ ಹೆಚ್ಚಿನ ಚಾಲನೆಯಿತ್ತು ಜನಪ್ರಿಯರಾದದ್ದು ಹಲವಾರು ಸಮಿತಿಗಳಲ್ಲಿದ್ದು ಕರ್ತವ್ಯ ದಕ್ಷತೆಯನ್ನು ಮೆರೆದದ್ದು ಈಗ ಇತಿಹಾಸ. ಕಾದಂಬರಿ, ನಾಟಕ, ವೈಚಾರಿಕ ಬರವಣಿಗೆಯಲ್ಲೂ ಕೈಯಾಡಿಸಿ, ರಾಜಕೀಯ ಏಳು-ಬೀಳುಗಳನ್ನು ಲೆಕ್ಕಿಸದೆ ಇಂದಿಗೂ ಕ್ರಿಯಾಶೀಲರಾಗಿರುವುದನ್ನು ಕಂಡರೆ ಯಾರಿಗೂ ಮೆಚ್ಚುಗೆಯುಂಟಾಗದಿರದು.

ಶ್ರೀಮತಿ ಲೀಲಾದೇವಿ ಪ್ರಸಾದ್ ತಾಯಿಯಿಂದ ಬಳುವಳಿಯಾಗಿ ಬಂದ ಗುಣಗಳನ್ನು ಅಳವಡಿಸಿಕೊಂಡು ಬೆಳೆದಂತೆ ಶ್ರೀ ಎಚ್.ಎಸ್. ರೇಣುಕಾಪ್ರಸಾದ್ ತಂದೆಯ ಪ್ರಭಾವವನ್ನು ಅರಗಿಸಿಕೊಂಡು ತಮ್ಮ ಬದುಕಿಗೆ ಮೆರುಗನ್ನೂ ಅರ್ಥವಂತಿಕೆಯನ್ನೂ ತಂದುಕೊಂಡರೆಂದು ಹೇಳಿದರೆ ತಪ್ಪಾಗದು. ಪ್ರಸಿದ್ಧ ವಿದ್ವಾಂಸರೂ, ಕೀರ್ತನಕಲಾಪ್ರವೀಣರೂ, ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರೂ ಆಗಿದ್ದ ಪದ್ಮಶ್ರೀ ಡಾ|| ಬಿ. ಶಿವಮೂರ್ತಿ ಶಾಸ್ತ್ರಿಗಳು ಕನ್ನಡ ಸಾಂಸ್ಕೃತಿಕ ಕ್ಷೇತ್ರಕ್ಕೆ ಸಲ್ಲಿಸಿದ ಸೇವೆ ಅಮೋಘವಾದದ್ದು. ನಾಡಿನ ಮೂಲೆ ಮೂಲೆಗಳಲ್ಲಿ ಸಂಚರಿಸಿ ಅಪಾರ ಸಂಶೋಧನ ಸಾಮಗ್ರಿಗಳನ್ನು ಸಂಗ್ರಹಿಸಿ, ಗಡಿನಾಡುಗಳ ಭಾಗಗಳಲ್ಲಿ ಜಾಗೃತಿಯನ್ನುಂಟುಮಾಡಿ, ಕರ್ನಾಟಕ ಏಕೀಕರಣಕ್ಕಾಗಿ ದುಡಿದು ಸಫಲರಾದ ಶಾಸ್ತ್ರಿಗಳ ಸೇವೆಯನ್ನು ಕನ್ನಡಿಗರು ಮರೆಯುವಂತಿಲ್ಲ. ಕನ್ನಡ ಸಾಹಿತ್ಯ ಪರಿಷತ್ತಿನ ಸದಸ್ಯರ ಸಂಖ್ಯೆ ಹತ್ತಾರು ಪಟ್ಟು ಹೆಚ್ಚಾದದ್ದು ಅವರ ಕಾಲದಲ್ಲಿಯೇ. ೧೯೫೫ರಲ್ಲಿಯೇ ನಾನು ಸಾಹಿತ್ಯ ಪರಿಷತ್ತಿನ ಆಜೀವ ಸದಸ್ಯನಾಗಲು ಕಾರಣಕರ್ತರಾದ ಅವರನ್ನು ಈ ಸಂದರ್ಭದಲ್ಲಿ ನೆನೆಯದಿರಲಾರೆ. ೧೯೫೩ರಲ್ಲಿ ಜರುಗಿದ ಲೀಲಾದೇವಿ ಮತ್ತು ರೇಣುಕಾಪ್ರಸಾದ್‌ರ ಮದುವೆ ಒಂದು ರೀತಿಯಲ್ಲಿ - ಅಂದರೆ ೫೦ ವರ್ಷಗಳ ಹಿಂದೆ - ಕರ್ನಾಟಕ ಏಕೀಕರಣದ ಸಂಕೇತವಾಗಿತ್ತೆಂದು ಪ್ರೊ|| ಮಾಳವಾಡರು ಹೇಳುತ್ತಿದ್ದುದು ಈಗ ನೆನಪಿಗೆ ಬರುತ್ತಿದೆ. ಶ್ರೀ ರೇಣುಕಾಪ್ರಸಾದ್‌ರು ಸಾಹಿತ್ಯ, ಸಂಗೀತ, ಶಿಕ್ಷಣವನ್ನೊಳಗೊಂಡು ಹಲವಾರು ಸಾಮಾಜಿಕ ಕ್ಷೇತ್ರಗಳಲ್ಲಿ ಆಸಕ್ತಿವಹಿಸಿ ಶ್ರೀಮತಿ ಲೀಲಾದೇವಿಯವರ ಸ್ವತಂತ್ರ ವಿಚಾರ ಪ್ರವೃತ್ತಿ ಹಾಗೂ ಕಾರ್ಯಬಾಹುಳ್ಯಕ್ಕೆ ಯಾವ ರೀತಿಯಿಂದಲೂ ಹಿನ್ನಡೆಯೊದಗದಂತೆ ನೋಡಿಕೊಂಡಿರುವುದು ನಿಜಕ್ಕೂ ಪ್ರಶಂಸನೀಯ. 'ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ' ಎಂಬ ಮಾತು ಎಷ್ಟು ಅರ್ಥಪೂರ್ಣ!

ಹಿಡಿದ ಕೆಲಸವನ್ನು ಶ್ರದ್ಧೆಯಿಂದ ಮಾಡಿ ಮುಗಿಸುವುದರಲ್ಲಿ ಈ ದಂಪತಿಗಳಿಗೆ ಇರುವ ಆಸಕ್ತಿ ಅನುಕರಣೀಯವಾಗಿದೆ. ಇಂಥ ಹಿಗ್ಗನ್ನು ತೃಪ್ತಿಯನ್ನು ಪಡೆಯುವ ಅವಕಾಶ ಅವರಿಗೆ ನಿರಂತರವೂ ಒದಗುತ್ತಿರಲಿ. ಇವರು ದೀರ್ಘಾಯುಷಿಗಳಾಗಿ ತಮ್ಮ ಸಂಸಾರ ಸಾರಸರ್ವಸ್ವವನ್ನು ಪ್ರೀತಿಯಿಂದ ಎಲ್ಲರೊಂದಿಗೆ ಹಂಚಿಕೊಂಡು ನಾಡುನುಡಿಯ ಸೇವೆಯಲ್ಲಿ ಹೆಚ್ಚಿನ ಚೈತನ್ಯವನ್ನು ಪಡೆಯುವಂತಾಗಲಿ ಎಂದು ನನ್ನ ಶ್ರೀಮತಿಯವರೂ ನಾನೂ ಜೊತೆಗೂಡಿ ಹಾರೈಸುತ್ತೇವೆ.

'ಸುವರ್ಣಬಹುಮುಖಿ'

(ಅಭಿನಂದನ ಗ್ರಂಥ) ೨೦೦೩

೫೪

## ಸಂಸ್ಕೃತಿಯ ಅನನ್ಯಸೇವಕ : ಪಾರ್ಶ್ವನಾಥ

ಕರ್ನಾಟಕದ ಅನೇಕ ಮಹತ್ವದ ವ್ಯಕ್ತಿಗಳ ಜೀವನದಲ್ಲಿ ಧಾರವಾಡ ಒಂದಲ್ಲ ಒಂದು ರೀತಿಯಲ್ಲಿ, ಒಂದಲ್ಲ ಒಂದು ಕಾಲದಲ್ಲಿ ತನ್ನ ಪ್ರಭಾವವನ್ನು ಬೀರದೆ ಹೋಗಿಲ್ಲ ಎಂದರೆ ಅತಿಶಯೋಕ್ತಿಯೆನಿಸದು. ಪ್ರದೇಶ, ವೃತ್ತಿ, ಹವ್ಯಾಸಗಳು ಭಿನ್ನವಾಗಿರಬಹುದು. ಆದರೆ ನಾಡು, ನುಡಿ, ಕಲೆ, ಸಂಸ್ಕೃತಿಯ ಸಂದರ್ಭದಲ್ಲಿ ಹೋರಾಟದ ಹಾದಿಯನ್ನು ಕಂಡುಕೊಳ್ಳುವ ದಿಸೆಯಲ್ಲಿ ಧಾರವಾಡ ಅಂಥವರನ್ನು ಆಯಸ್ಕಾಂತದಂತೆ ತನ್ನ ಕಡೆಗೆ ಸೆಳೆದುಕೊಂಡದ್ದಿದೆ, ಅವರ ಬದುಕಿನಲ್ಲಿ ಸುವರ್ಣರೇಖೆಯಾಗಿ ಮೂಡಿದ್ದಿದೆ. ಹಾಗೆ ಧನ್ಯತೆ ಪಡೆದವರಲ್ಲಿ ಡಾ. ಹೆಚ್.ಎ. ಪಾರ್ಶ್ವನಾಥ ಅವರೂ ಒಬ್ಬರು.

ಹುಟ್ಟಿದ್ದು ಹಾಸನದಲ್ಲಿ, ವಿದ್ಯಾರ್ಹತೆ ಗಳಿಸಿದ್ದು ಮೈಸೂರಿನಲ್ಲಿ, ಅಧ್ಯಾಪಕರಾಗಿ ಸೇವೆ ಸಲ್ಲಿಸಿದ್ದು ಬಳ್ಳಾರಿ, ಬೆಂಗಳೂರು, ಮೈಸೂರು ಹಾಗೂ ಹುಬ್ಬಳ್ಳಿ ಮೆಡಿಕಲ್ ಕಾಲೇಜುಗಳಲ್ಲಿ. ಹನ್ನೆರಡು ವರ್ಷಗಳಷ್ಟು ದೀರ್ಘಕಾಲ (೧೯೭೯-೯೧) ನಿರಂತರವಾಗಿ ಅಧ್ಯಾಪಕ ವೃತ್ತಿಯಲ್ಲಿ. ಅಭಿವೃದ್ಧಿಯ ದಾರಿಯಲ್ಲಿ ಸಾಗಿದ್ದು ಮಾತ್ರ ಹುಬ್ಬಳ್ಳಿ ಕರ್ನಾಟಕ ಮೆಡಿಕಲ್ ಕಾಲೇಜಿನಲ್ಲಿ. ಹುಬ್ಬಳ್ಳಿ - ಧಾರವಾಡ ಅವಳಿನಗರಗಳು ಅನೇಕ ವೇದಿಕೆಗಳ ಮೂಲಕ ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಅವಿನಾಭಾವದಿಂದ ಪರಸ್ಪರ ಪೂರಕವಾಗಿ ಕೆಲಸ ಮಾಡುತ್ತ ಬಂದಿವೆ. ಆದರೂ ಹುಬ್ಬಳ್ಳಿ ಬಹುಮಟ್ಟಿಗೆ ವಾಣಿಜ್ಯ ಕೇಂದ್ರವಾಗಿಯೇ ಉಳಿದಿದೆ. ಇಂಥ ಸಂದರ್ಭದಲ್ಲಿ ಕಳೆದ ವರ್ಷ ನವಂಬರ್ ೧೭ರಿಂದ ಮೂರು ದಿನ ಏಕಕಾಲಕ್ಕೆ ಎರಡೂ ನಗರಗಳ ಏಳೆಂಟು ವೇದಿಕೆಗಳಲ್ಲಿ ನಡೆದ ಧಾರವಾಡ ಜಿಲ್ಲಾ ಉತ್ಸವದ ಕಾರ್ಯಕ್ರಮಗಳು ಸಾಂಸ್ಕೃತಿಕ ಬೆಸುಗೆಯನ್ನು ಬಲಪಡಿಸುವಲ್ಲಿ ಹೆಚ್ಚಿನ ಯಶಸ್ಸು ಸಾಧಿಸಿದವೆಂದೇ ಹೇಳಬಹುದು. ಈ ಉತ್ಸವದ ಅನೇಕ ಉಪಸಮಿತಿಗಳಲ್ಲಿ ಒಂದಾದ ನಾಟಕ ವಿಭಾಗದ ಸದಸ್ಯರಾಗಿದ್ದ ಡಾ।। ಪಾರ್ಶ್ವನಾಥರು, ಡಾ।। ಸಿದ್ಧಲಿಂಗಪಟ್ಟಣಶೆಟ್ಟಿಯವರೊಂದಿಗೆ ಸಲ್ಲಿಸಿದ ಸೇವೆಯಲ್ಲಿ ಅವರು ಈ ಹಿಂದೆ ಈ ಕ್ಷೇತ್ರದಲ್ಲಿ ಪಡೆದ ಅನುಭವ ನೆರವಿಗೆ ಬಂದುದರಲ್ಲಿ ಸಂದೇಹವಿಲ್ಲ.

ಹುಬ್ಬಳ್ಳಿ ಮೆಡಿಕಲ್ ಕಾಲೇಜಿನ ಕನ್ನಡ ಸಂಘದ ಕಾರ್ಯಾಧ್ಯಕ್ಷ ಹಾಗೂ ಉಪಾಧ್ಯಕ್ಷರಾಗಿ ಹತ್ತುವರ್ಷಗಳ ಕಾಲ ಇವರು ಕೈಕೊಂಡು ನಿರ್ವಹಿಸಿದ ಚಟುವಟಿಕೆಗಳಂತೂ ತುಂಬ

ಚೇತೋಹಾರಿಯಾಗಿರುತ್ತಿದ್ದುದನ್ನು ನಾನು ಕಂಡಿದ್ದೇನೆ. ಉಪನ್ಯಾಸ, ಕವಿಗೋಷ್ಠಿ, ನಾಟಕೋತ್ಸವ ಇತ್ಯಾದಿ ಹಲವಾರು ಕಾರ್ಯಕ್ರಮಗಳಿಗೆ ನನ್ನನ್ನು ಅತಿಥಿಯಾಗಿ ಬರಮಾಡಿಕೊಂಡು ಗೌರವಿಸಿದ್ದುಂಟು. ಆ ಸಂದರ್ಭಗಳಲ್ಲೆಲ್ಲ ಪಾರ್ಶ್ವನಾಥರ ಕ್ರಿಯಾಶೀಲತೆಯನ್ನು ಕಂಡು ನಾನು ಬೆರಗುಪಟ್ಟದ್ದುಂಟು. ಸುಸಜ್ಜಿತವಾದ ಆ ಕಾಲೇಜಿನ ಸಭಾಗೃಹ (Auditorium) ಅವರ ಕಲಾತ್ಮಕ ಸ್ಪರ್ಶದಿಂದ ಇನ್ನಷ್ಟು ಕಳೆಗೊಂಡು ಕಲಾಸಕ್ತರನ್ನು ಆಕರ್ಷಿಸುತ್ತಿತ್ತು. ನಮ್ಮ ಕರ್ನಾಟಕ ವಿಶ್ವವಿದ್ಯಾಲಯದ ಪ್ರಸಾರಾಂಗದ ವಿಶೇಷೋಪನ್ಯಾಸಗಳಿಗೆ ಆಮಂತ್ರಿತರಾಗುತ್ತಿದ್ದ ವಿದ್ವಾಂಸರನ್ನು, ಸಾಹಿತಿಗಳನ್ನೂ ಡಾ॥ ಪಾರ್ಶ್ವನಾಥ ಹಾಗೂ ಅಲ್ಲಿಯ ಕನ್ನಡ ಸಂಘದ ಪದಾಧಿಕಾರಿಗಳು ತಮ್ಮ ಸಂಘಕ್ಕೂ ಕರೆದೊಯ್ದು ಉಪಚರಿಸದೆ ಬಿಡುತ್ತಿರಲಿಲ್ಲ. ಅಂಥ ಒಂದು ಸಂದರ್ಭದಲ್ಲಿ ಶ್ರೀರಂಗರನ್ನು ನಾನು ಅವರ ಕಾಲೇಜಿಗೆ ಕರೆದುಕೊಂಡು ಹೋದಾಗ ಅಲ್ಲಿಯ ಸುಂದರ ಸಭಾಗೃಹವನ್ನು ನೋಡಿ, "ಭಾಷಣ ಮಾಡುವದಕ್ಕಿಂತ ಇಲ್ಲಿ ನಾನೊಂದು ನಾಟಕವನ್ನಾಡಿದ್ರೆ ಹೆಚ್ಚು ಸಂತೋಷವಾಗುತ್ತಿತ್ತು" ಎಂದು ಉದ್ಗಾರವೆತ್ತಿದ್ದುಂಟು.

ಕೈಲಾಸಂ ಅವರ ವ್ಯಕ್ತಿತ್ವ ಹಾಗೂ ಕೃತಿಗಳಿಂದ ತೀವ್ರ ಪ್ರಭಾವಿತರಾಗಿದ್ದ ಪಾರ್ಶ್ವನಾಥರು ಕೆ.ಎಂ.ಸಿ. ವೇದಿಕೆಯಲ್ಲಿ ೧೯೮೦ರಿಂದ ಪ್ರಾರಂಭಿಸಿದ್ದ ಕೈಲಾಸಂ ದಿನಾಚರಣೆಯನ್ನು ಇಂದಿಗೂ ಯಶಸ್ವಿಯಾಗಿ ನಿರ್ವಹಿಸಿಕೊಂಡು ಬರಲಾಗುತ್ತಿದೆ. ಧಾರವಾಡದ ರಂಗಾಸಕ್ತರು ಹಾಗೂ ರಂಗಕರ್ಮಿಗಳ ಒಡನಾಟದಿಂದ ಅವರು ಹೆಚ್ಚಿನ ಚೈತನ್ಯವನ್ನು ಪಡೆದುಕೊಂಡದ್ದಲ್ಲದೆ ರಂಗಭೂಮಿಯ ನಿರಂತರ ಕಾಯಕದಲ್ಲಿ ತಮ್ಮನ್ನು ತೊಡಗಿಸಿಕೊಂಡ ಕಾರಣದಿಂದ ೧೯೯೮ನೇ ಸಾಲಿನ ಕರ್ನಾಟಕ ನಾಟಕ ಅಕಾಡೆಮಿಯ ಫೆಲೋಶಿಪ್‌ಗೆ ಪಾತ್ರರಾದದ್ದರಲ್ಲಿ ಆಶ್ಚರ್ಯವೇನೂ ಇಲ್ಲ. ನೀನಾಸಂ ಹಾಗೂ ಪೂನಾ ಫಿಲಂ ಇನ್‌ಸ್ಟಿಟ್ಯೂಟ್ ಒಳಗೊಂಡ ಅನೇಕ ಸಂಸ್ಥೆಗಳ ತರಬೇತಿಗಳಲ್ಲಿ ಭಾಗವಹಿಸಿದ್ದಲ್ಲದೆ ನೂರಾರು ನಾಟಕಗಳ ಅಸಂಖ್ಯಾತ ಪ್ರಯೋಗಗಳಲ್ಲಿ ಹಾಗೂ ಬೀದಿ ನಾಟಕಗಳಲ್ಲಿ, ಚಲನಚಿತ್ರಗಳಲ್ಲಿ ನಟಿಸಿದ ಪಾರ್ಶ್ವನಾಥರಿಗೆ ಅಭಿನಯಕಲೆ ಬದುಕಿನ ಒಂದು ಭಾಗವಾಗಿಬಿಟ್ಟಿದೆ.

ಇವರ ರಂಗಸ್ನೇಹಿತರಾಗಿದ್ದ ಪ್ರೊ. ಎಸ್.ಆರ್. ತೋಂಟದಾರ್ಯರು ಕರ್ನಾಟಕ ವಿಶ್ವವಿದ್ಯಾಲಯದ ಪ್ರಾಧ್ಯಾಪಕ ವೃತ್ತಿಯಿಂದ ನಿವೃತ್ತರಾದ ನಂತರ ಧಾರವಾಡವನ್ನು ಬಿಟ್ಟು ಹೋಗುವುದು ಅನಿವಾರ್ಯವಾಯಿತು. ಆದರೆ ಸ್ವಲ್ಪ ಕಾಲ ಮೈಸೂರು ಮೆಡಿಕಲ್ ಕಾಲೇಜಿನಲ್ಲಿ ಪ್ರಿನ್ಸಿಪಾಲರಾಗಿ ಹಾಗೂ ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯದ ಜಂಟಿ ನಿರ್ದೇಶಕರಾಗಿ ಪಾರ್ಶ್ವನಾಥರು ನಿವೃತ್ತಿಯ ನಂತರ ಪುನಃ ಧಾರವಾಡಕ್ಕೆ ಬರುವಂತಾದುದು ಎಂಥ ಯೋಗಾಯೋಗ! ಅವರೀಗ ಧಾರವಾಡದ ಎಸ್.ಡಿ.ಎಂ. ಮೆಡಿಕಲ್ ಕಾಲೇಜಿನ ರೋಗಲಕ್ಷಣ ಶಾಸ್ತ್ರ ವಿಭಾಗದ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ವೃತ್ತಿ-ಪ್ರವೃತ್ತಿಗಳೆರಡರಲ್ಲಿಯೂ ಉನ್ನತಿಕೆಯನ್ನು ಸಾಧಿಸಿ ಇವರಂತೆ ಎರಡರಲ್ಲಿಯೂ ಸಮತೂಕವನ್ನು ಕಾಪಾಡಿಕೊಂಡು ಬಂದವರು ವಿರಳವೆಂದೇ ಹೇಳಬಹುದು. ಬೆಂಗಳೂರು-ಮೈಸೂರುಗಳಿಗಿಂತ

ಹುಬ್ಬಳ್ಳಿ-ಧಾರವಾಡಗಳೆರಡರ ಸ್ನೇಹ ಬಲವತ್ತರವಾಗಿರುವುದರ ಬಗೆಗಿನ ಕೃತಜ್ಞತಾಭಾವವನ್ನು ಅವರ ಮುಖದ ಪ್ರಸನ್ನತೆಯಲ್ಲಿಯೇ ಕಂಡುಕೊಳ್ಳಬಹುದು.

ಸಾಹಿತ್ಯ ಹಾಗೂ ಸಂಶೋಧನೆಯಲ್ಲಿ ಅಷ್ಟೇ ಆಸ್ಥೆಯುಳ್ಳ ಪಾರ್ಶ್ವನಾಥರು ಹಲವಾರು ಸಾಹಿತ್ಯಗೋಷ್ಠಿಗಳಲ್ಲಿ ಭಾಗವಹಿಸಿ ವಿಚಾರವಂತ ಪ್ರಬಂಧಗಳನ್ನು ಮಂಡಿಸಿದ್ದನ್ನೂ, ಉಪನ್ಯಾಸ ಗಳಲ್ಲಿ ವೈಚಾರಿಕತೆಯ ಕಡೆಗೆ ಒಲವು ತೋರಿಸಿದ್ದನ್ನೂ ನಾನು ಕಂಡಿದ್ದೇನೆ. 'ಸನ್ನಿಧಿ', 'ರಂಗಸಂಗ', 'ವ್ಯಕ್ತಿ-ಶಕ್ತಿ', 'ರಂಗಲೋಕ'ಗಳಂಥ ಕೃತಿಗಳು ಆಯಾ ಕ್ಷೇತ್ರಗಳಲ್ಲಿ ಅವರು ಸಾಧಿಸಿದ ಪರಿಣತಿಗೆ ಸಾಕ್ಷಿಯಾಗಿದೆ.

ಹೀಗೆ ಹಲವು ರಂಗಗಳಲ್ಲಿ ತಮ್ಮ ಹೆಗ್ಗಳಿಕೆಯನ್ನು ಮೆರೆದಿದ್ದರೂ ಯಾವುದೇ ಬಗೆಯ ಆಡಂಬರಕ್ಕೆ ಎಡೆಗೊಡದ ವಿನಯ, ಸರಳ ಸಜ್ಜನಿಕೆ, ಹೃದಯವಂತಿಕೆ ಹಾಗೂ ಹಾಸ್ಯ ಪ್ರವೃತ್ತಿಯಿಂದ ಎಲ್ಲರ ಪ್ರೀತಿಗೆ ಪಾತ್ರರಾಗಿರುವ ಈ ಸ್ನೇಹಜೀವಿ ಅರವತ್ತರ ಪ್ರಾಯದಲ್ಲಿಯೂ ಸದಾ ಪುಟಿಯುವ ಕಾರಂಜಿಯಂತೆ ಕ್ರಿಯಾಶೀಲರಾಗಿರುವುದನ್ನು ನೋಡುವುದೇ ಒಂದು ಸಂತೋಷ. ಜಡತೆ, ನಿಷ್ಕ್ರಿಯತೆ, ಸಂಸ್ಕೃತಿವಿಹೀನತೆಗೆ ಈಡಾಗಿರುವ ಇಂದಿನ ಬಹುಸಂಖ್ಯೆಯ ಯುವಕರಿಗೆ ಡಾ.ಎಚ್.ಎ. ಪಾರ್ಶ್ವನಾಥರಂಥ ಸುಸಂಸ್ಕೃತ ವ್ಯಕ್ತಿಗಳು ಮಾರ್ಗದರ್ಶಕರಾಗಿ ನಿಲ್ಲುವಂತಾದರೆ ಅಂಥ ಭಾಗ್ಯ ಬೇರೊಂದಿಲ್ಲ. ಇವರಿಂದ ನಾಡು-ನುಡಿಯ ಸೇವೆ ಇತೋಪ್ಯತಿಶಯವಾಗಿ ನಡೆಯಲೆಂದು ಹಾರೈಸಿ, ಅರವತ್ತರ ಅಭಿನಂದನೆಯ ಸಂದರ್ಭದಲ್ಲಿ ಅವರಿಗೆ ಎಲ್ಲ ಶುಭಗಳನ್ನು ಕೋರುತ್ತೇನೆ.

'ರತ್ನಕರಂಡಕ'
(ಅಭಿನಂದನ ಗ್ರಂಥ)
೨೦೦೭

೫೫

# ಶತಮಾನದ ಶ್ರೀಮದ್ವಿಭೂತಿ

ನಾನು ಹಾಯ್‌ಸ್ಕೂಲ್ ವಿದ್ಯಾರ್ಥಿಯಾಗಿದ್ದಾಗ ನಾಲ್ಕುವರ್ಷ ಧಾರವಾಡದ ಮುರುಘಾಮಠದ ಪ್ರಸಾದ ನಿಲಯ ನನಗೆ ಆಶ್ರಯ ಒದಗಿಸಿತ್ತು. ಭಕ್ತಿಯ ತವರುಮನೆಯಂತಿದ್ದ ಮಠದ ಮೃತ್ಯುಂಜಯ ಸ್ವಾಮಿಗಳು ವಿದ್ಯಾರ್ಥಿಗಳೇ ತಮ್ಮ ಸರ್ವಸ್ವವೆಂದು ಭಾವಿಸಿದವರು. ಸದಾ ಸಮಾಜದ ಹಿತಚಿಂತನೆಯಲ್ಲಿಯೇ ಸೇವಾನಿರತರಾಗಿರುತ್ತಿದ್ದ ಅವರನ್ನು ಸಾಮಾನ್ಯವಾಗಿ ಎಲ್ಲರೂ 'ಮೃತ್ಯುಂಜಯ ಅಪ್ಪಗಳು' ಎಂದೇ ಕರೆಯುತ್ತಿದ್ದರು. ಸ್ವಾಮಿಯ ಹಿರಿತನವನ್ನು ಅವರೆಂದೂ ಆಹ್ವಾನಿಸಿಕೊಂಡಿರಲಿಲ್ಲ. ಅವರ ಈ ವಿಶೇಷ ಗುಣದಿಂದ ಆಕರ್ಷಿತರಾದ ಭಕ್ತರಂತೂ ಸರಿಯೆ, ವಿದ್ವಾಂಸರು, ಸಾಹಿತಿಗಳು, ಸಂಗೀತಗಾರರು ಮೃತ್ಯುಂಜಯ ಅಪ್ಪಗಳ ದರುಶನಕ್ಕೆ ಬರುತ್ತಲೇ ಇದ್ದರು. ಪ್ರಸಾದ, ಶಿವಾನುಭವ, ದಾಸೋಹ, ಕಾಯಕ ಮೊದಲಾದ ಪದಗಳಿಗೆ ಈ ಮಠದ ವಾತಾವರಣವೇ ಅರ್ಥಬೋಧೆ ಮಾಡುವಂತಿತ್ತು. ಸ್ವಾಮಿಗಳು ಅತ್ಯಂತ ಆದರದಿಂದ ಬರಮಾಡಿಕೊಂಡು ಭಕ್ತಿಸೇವೆ ಸಲ್ಲಿಸುತ್ತಿದ್ದ ಮಠಾಧಿಪತಿಗಳಲ್ಲಿ ತುಮಕೂರಿನ ಶಿವಕುಮಾರಸ್ವಾಮಿಗಳೂ ಒಬ್ಬರಾಗಿದ್ದರು. ಸುಮಾರು ಅರವತ್ತು ನಾಲ್ಕು ವರ್ಷಗಳ ಹಿಂದೆ ಧಾರವಾಡದ ಮುರುಘಾಮಠದಲ್ಲಿ ಅವರನ್ನು ಮೊದಲ ಸಲ ಕಂಡ ಆ ಎತ್ತರದ ನಿಲುವು ನನ್ನ ಮನಸ್ಸಿನಲ್ಲಿ ಅಚ್ಚಳಿಯದೇ ಉಳಿದಿದೆ.

ಆ ಮೇಲೆ ನಾನು ಅವರನ್ನು ಕಂಡದ್ದು ಇಪ್ಪತ್ತು ವರ್ಷಗಳ ನಂತರ, ೧೯೬೩ರಲ್ಲಿ ಸಿದ್ಧಗಂಗಾ ಕ್ಷೇತ್ರದಲ್ಲಿ ನೆರವೇರಿದ ೪೪ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ. ಸಮ್ಮೇಳನದ ಕವಿಗೋಷ್ಠಿಯಲ್ಲಿ ಭಾಗವಹಿಸಲು ನನ್ನನ್ನು ಆಮಂತ್ರಿಸಲಾಗಿತ್ತು. ಕವಿ ಮಿತ್ರರಾದ ಡಾ. ಜಿ.ಎಸ್. ಶಿವರುದ್ರಪ್ಪನವರು ಆ ಗೋಷ್ಠಿಯ ಅಧ್ಯಕ್ಷರು. ನಾವಿಬ್ಬರೂ ಅಲ್ಲಿಯ ಹಾಸ್ಟೆಲಿನಲ್ಲಿ ಒಂದು ಕೋಣೆಯಲ್ಲಿ ಉಳಿದುಕೊಂಡಿದ್ದೆವು. ರಾತ್ರಿ ಮೂರುಗಂಟೆಯ ಹೊತ್ತಿಗೆ ಟಕ್ ಟಕ್ ಎಂಬ ಲಯಬದ್ಧವಾದ ಸದ್ದುಕೇಳಿ ನನಗೆ ಎಚ್ಚರವಾಯಿತು. ನಾನು ಶಿವರುದ್ರಪ್ಪನವರನ್ನು ವಿಚಾರಿಸಿದಾಗ ಅದು ಸ್ವಾಮಿಗಳು ನಡೆದಾಡುವಾಗಿನ ಆವುಗೆಯ ಸಪ್ಪಳ ಎಂದು ಗೊತ್ತಾಯಿತು. ೧೯೪೩-೪೪ರಲ್ಲಿ ತುಮಕೂರು ಇಂಟರ್‌ಮೀಡಿಯೇಟ್ ಕಾಲೇಜಿನಲ್ಲಿ ಓದುವಾಗ ಸಿದ್ಧಗಂಗಾಮಠ ತಮಗೆ ಆಶ್ರಯ ನೀಡಿದ್ದನ್ನೂ ಸ್ವಾಮಿಗಳ ಬಗೆಗಿನ ಭಾವನಾತ್ಮಕ ಸಂಬಂಧವನ್ನೂ ಕೃತಜ್ಞತೆಯಿಂದ ಅವರು ನೆನೆದುಕೊಂಡರು. 'ಸಿದ್ಧಗಂಗೆಯ ಶ್ರೀಚರಣಕ್ಕೆ' ಎಂಬ ಅವರ ಕವಿತೆಯಲ್ಲಿ ಒಂದು ಸುಂದರ ಸ್ಮೃತಿಯಾಗಿ ಅದು ಒಡಮೂಡಿದೆ.

ಹರನ ಕರುಣೋದಯದ ತೆರದಲಿ ಬೆಳಗು ತೆರೆಯುವ ಹೊತ್ತಿಗೆ
ವೇದಘೋಷದ ದಿವ್ಯಲಹರಿಯ ಮನವ ತೊಳೆಯಲು ಮೆಲ್ಲಗೆ
ಬರುವ ಶ್ರೀಗುರು ಪಾದುಕೆಯ ದನಿ ಅನುರಣಿತವಾಗಲು ಮೌನಕೆ
ಸಿದ್ಧಗಂಗೆಯ ನೆಲವು-ಜಲವೂ ನಮಿಸಿ ನಿಲುವುದು ಸುಮ್ಮಗೆ.

ಅಂದಿನ ಸಾಹಿತ್ಯ ಸಮ್ಮೇಳನದ ಸ್ವಾಗತಾಧ್ಯಕ್ಷರಾಗಿ ಅದರ ಎಲ್ಲಾ ಏರ್ಪಾಡುಗಳನ್ನೂ ಸಮರ್ಥವಾಗಿ ನಿರ್ವಹಿಸಿದ ಶ್ರೀಗಳವರು ಸಮ್ಮೇಳನದ ಎಲ್ಲ ಗೊಷ್ಠಿಗಳಿಗೂ ನಿಯಮಿತ ವೇಳೆಗೆ ಮುಂಚಿತವಾಗಿಯೇ ವೇದಿಕೆಯ ಮೇಲೆ ಆಸೀನರಾಗಿರುತ್ತಿದ್ದರು. ಅಂಥ ಸಮಯ ನಿಷ್ಠೆ ಇದುವರೆಗೆ ನಾನು ಭಾಗವಹಿಸಿದ ಯಾವ ಸಾಹಿತ್ಯ ಸಮ್ಮೇಳನದಲ್ಲಿಯೂ ಕಂಡು ಬಂದಿಲ್ಲವೆಂದು ಹೇಳಿದರೆ ಅತಿಶಯೋಕ್ತಿಯಾಗದು.

ಸಮ್ಮೇಳನದ ಅಧ್ಯಕ್ಷರಾಗಿದ್ದ ಡಾ|| ರಂ. ಶ್ರೀ ಮುಗಳಿಯವರು ತಮ್ಮ ಭಾಷಣದ ಪ್ರಾರಂಭದಲ್ಲಿಯೇ ಹೀಗೆ ಪ್ರಸ್ತಾಪಿಸಿದರು:

"ತುಮಕೂರು ಜಿಲ್ಲೆ ಮತ್ತು ಶ್ರೀ ಸಿದ್ಧಗಂಗಾ ಕ್ಷೇತ್ರವು ಶ್ರೀ ಸಿದ್ಧಲಿಂಗೇಶ್ವರ, ನಿಟ್ಟೂರು ನಂಜಣ್ಣ, ವಿರಕ್ತ ತೋಂಟದಾರ್ಯ, ಗುಬ್ಬಿಮಲ್ಲಣಾರ್ಯ ಮತ್ತು ಮಲ್ಲಣಾಚಾರ್ಯ, ಕವಿ ಶಾಂತೇಶ, ಗೂಳೂರು ಸಿದ್ಧವೀರಣಾಚಾರ್ಯ, ಸಂಪಾದನೆಯ ಪರ್ವತೇಶ್ವರ ಮುಂತಾದ ಹಲವಾರು ಮನ್ನಣೆವೆತ್ತ ಪಂಡಿತಕವಿಗಳ ಮತ್ತು ಶರಣರ ಪಾದಸ್ಪರ್ಶದಿಂದ ಪುನೀತವಾಗಿದೆ; ಅವರ ಕೃತಿಗಳಿಂದ ಪ್ರಖ್ಯಾತವಾಗಿವೆ. ಇಂಥ ಜಿಲ್ಲೆಯ ಈ ಪುಣ್ಯಕ್ಷೇತ್ರದಲ್ಲಿ ವಿದ್ಯಾಪ್ರೇಮಿಗಳೂ, ವಿದ್ಯಾದಾನಿಗಳೂ ಆದ ಪೂಜ್ಯ ಶ್ರೀ ನಿ.ಪ್ರ ಶಿವಕುಮಾರ ಸ್ವಾಮಿಗಳ ಸಮರ್ಥ ನೇತೃತ್ವದಲ್ಲಿ ಇದೇ ಜಿಲ್ಲೆಯವರೂ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರೂ ಆಗಿರುವ ಮಾನ್ಯ ಶ್ರೀ ಶಿವಮೂರ್ತಿಶಾಸ್ತ್ರಿಗಳ ಚತುರ ಬೆಂಬಲದಿಂದ ಸ್ವಾಗತ ಸಮಿತಿಯು ಸಾಹಿತ್ಯ ಸಮ್ಮೇಳನವನ್ನು ನೆರವೇರಿಸುವದು ತುಂಬ ಅಭಿನಂದನೀಯ ಸಂಗತಿಯಾಗಿದೆ. ಸುಮಾರು ಐವತ್ತು ವರ್ಷಗಳಲ್ಲಿ ಇದುವರೆಗೆ ಕನ್ನಡ ಸಾಹಿತ್ಯ ಸಮ್ಮೇಳನವು ಈ ತುಮಕೂರು ಜಿಲ್ಲೆಯಲ್ಲಿ ಆಗಲಿಲ್ಲವೆಂಬ ಅಪವಾದವನ್ನು ಈ ಸಮ್ಮೇಳನ ಪರಿಹರಿಸಿದೆ ಎನ್ನಬಹುದು."

ಈಚೆಗೆ ೨೦೦೨ರಲ್ಲಿ ೬೯ನೇ ಕನ್ನಡ ಸಾಹಿತ್ಯ ಸಮ್ಮೇಳನ ತುಮಕೂರಿನಲ್ಲಿ ನೆರವೇರಿದ ಸಂದರ್ಭದಲ್ಲಿ ಪ್ರತಿನಿಧಿಗಳಿಗೆ ಊಟದ ವ್ಯವಸ್ಥೆ ಸರಿಯಾಗಿರದ್ದರಿಂದ ಬಹಳ ಗೊಂದಲವುಂಟಾಗಿ ಮರುದಿನ ಪತ್ರಿಕೆಗಳಲ್ಲಿಯೂ ಟೀಕೆಗಳು ಪ್ರಕಟವಾದವು. ಈ ವಿಷಯವನ್ನು ತಿಳಿದು ಸ್ವಾಮಿಗಳು ತುಂಬ ನೊಂದುಕೊಂಡು ತಮ್ಮ ಮಠದ ದಾಸೋಹದಲ್ಲಿ ಅಂಥವರಿಗೆ ಪ್ರಸಾದ ವ್ಯವಸ್ಥೆ ಮಾಡಿದ್ದನ್ನು ನಾನು ಕಣ್ಣಾರೆ ಕಂಡಿದ್ದೇನೆ.

* * * *

ತ್ರಿವಿಧ ದಾಸೋಹ ಪದವನ್ನು ಕೇವಲ ಧಾರ್ಮಿಕ ಅರ್ಥದಲ್ಲಲ್ಲದೆ ಸಾಮಾಜಿಕ ಶೈಕ್ಷಣಿಕ ಸೇವೆ ಎಂಬರ್ಥದಲ್ಲಿಯೂ ಶ್ರೀಗಳು ಸ್ವೀಕರಿಸಿದರು. ೧೯೪೧ರಿಂದ ಸಿದ್ಧಗಂಗಾಮಠದ ಅಧ್ಯಕ್ಷರಾಗಿ ಸೇವಾಜೀವನವನ್ನು ಮುಂದುವರಿಸಿಕೊಂಡು ಬಂದ ಕಾಲುಶತಮಾನದಲ್ಲಿ ಅನೇಕ ಶಿಕ್ಷಣ

ಸಂಸ್ಥೆಗಳನ್ನು ಸ್ಥಾಪಿಸಿ ಅನ್ನದಾಸೋಹ ಜ್ಞಾನ ದಾಸೋಹಗಳೆರಡನ್ನೂ ಯಶಸ್ವಿಯಾಗಿ ಕೈಕೊಂಡು, ಜಾತಿಮತಗಳ ಭೇದವಿಲ್ಲದೆ ಸಾವಿರಾರು ವಿದ್ಯಾರ್ಥಿಗಳಿಗೆ ಉಚಿತ ಊಟ ವಸತಿಯ ಏರ್ಪಾಟು ಮಾಡಿ ಅವರಲ್ಲಿ ಶಿಸ್ತು, ಸಂಯಮ, ಸಮತಾಭಾವವನ್ನು ಮೂಡಿಸತೊಡಗಿದರು. ಶ್ರೀಗಳವರ ಈ ಸದ್ದಿಲ್ಲದ ಸಾಧನೆ ಸಂಯುಕ್ತ ಮುಂಬಯಿ ರಾಜ್ಯದ ಸಾರ್ವಜನಿಕ ಶಿಕ್ಷಣ ಇಲಾಖೆಯ ನಿವೃತ್ತ ನಿರ್ದೇಶಕರೂ, ಶ್ರೇಷ್ಠ ಶಿಕ್ಷಣತಜ್ಞರೂ ಕರ್ನಾಟಕ ವಿಶ್ವವಿದ್ಯಾಲಯದ ಕುಲಪತಿಗಳೂ ಆದ ಡಾ|| ಡಿ.ಸಿ. ಪಾವಟೆಯವರ ಲಕ್ಷ್ಯವನ್ನು ಸೆಳೆಯಿತು. ೧೯೬೫ರಲ್ಲಿ ವಿಶ್ವವಿದ್ಯಾಲಯ ವಾರ್ಷಿಕ ಘಟಿಕೋತ್ಸವದ ಸಂದರ್ಭದಲ್ಲಿ ಶ್ರೀ ಶಿವಕುಮಾರ ಸ್ವಾಮಿಗಳವರಿಗೆ ಗೌರವ ಡಾಕ್ಟರೇಟ್ ಪದವಿಯನ್ನು ನೀಡಿ ಆದರಪೂರ್ವಕ ಗೌರವಿಸಲಾಯಿತು. ಪರಂಪರೆಯ ಜೊತೆಗೆ ಆಧುನಿಕ ಕಾಲದ ಪ್ರಗತಿಪರ ವಿಚಾರಗಳಿಗೂ ಪ್ರಜಾತಾಂತ್ರಿಕ ಮೌಲ್ಯಗಳಿಗೂ ಸ್ಪಂದಿಸುತ್ತಿರುವ ಶ್ರೀಗಳವರ ಕಾರ್ಯ ಎಷ್ಟೊಂದು ಅದ್ಭುತವಾದದ್ದು ಎಂಬುದು ಇದರಿಂದ ಶಿಕ್ಷಣಪ್ರೇಮಿಗಳಿಗೆ ಮನವರಿಕೆಯಾಯಿತು.

"ನಿಮಗೆಲ್ಲರಿಗೂ ಕೃತಜ್ಞ. ಹೆಚ್ಚು ಸಮಯ ನಾನಿಲ್ಲಿ ಮಾತನಾಡುತ್ತ ಕುಳಿತರೆ ನನ್ನ ಮೂರು ಸಾವಿರ ವಿದ್ಯಾರ್ಥಿಗಳು ಮಠದಲ್ಲಿ ಪ್ರಸಾದವಿಲ್ಲದೆ ನರಳುತ್ತಾರೆ. ನನಗೆ ಅಪ್ಪಣೆಕೊಡಿ" ಎಂದು ನುಡಿದು ಶ್ರೀಗಳು ಕ್ಷಿಪ್ರದಲ್ಲಿಯೆ ವೇದಿಕೆಯಿಂದ ತೆರಳಿದರು. ಶ್ರೀಗಳವರ ಸೇವಾತತ್ಪರತೆ ಆತ್ಮಗೌರವಗಳನ್ನು ಕಂಡು ಸಭೆಗೆ ಸಭೆಯೇ ಅವರಿಗೆ ತಲೆಬಾಗಿತು.

* * * *

೧೯೮೭ ಜನವರಿ ತಿಂಗಳು ಸಿದ್ಧಗಂಗಾ ಮಠದಲ್ಲಿ ನಡೆಯುವ ಬಸವಜಯಂತಿ ಕಾರ್ಯಕ್ರಮಕ್ಕೆ ನಾನು ಹಾಗೂ ನನ್ನ ಮಿತ್ರರಾದ ಡಾ. ಎಚ್. ತಿಪ್ಪೇರುದ್ರ ಸ್ವಾಮಿಯವರೂ ಆಮಂತ್ರಿತರಾಗಿದ್ದೆವು. ಹಿಂದಿನ ದಿನ ರಾತ್ರಿ ತಿಪ್ಪೇರುದ್ರಸ್ವಾಮಿಯವರು ನನಗೊಂದು ವಿಷಯ ತಿಳಿಸಿದರು. ನಸುಕಿನ ನಾಲ್ಕು ಗಂಟೆಗೆ ಸರಿಯಾಗಿ ಶ್ರೀಗಳು ಲಿಂಗಪೂಜೆ ಮಾಡಿಕೊಳ್ಳುತ್ತಾರೆ. ಆ ಸಂದರ್ಭದಲ್ಲಿ ಆಸಕ್ತಿ ಇದ್ದವರಿಗೆ ಮಾತ್ರ ಅವರ ಸಾನ್ನಿಧ್ಯದಲ್ಲಿ ತಂತಮ್ಮ ಇಷ್ಟಲಿಂಗದೊಡನೆ ಪೂಜೆಯಲ್ಲಿ ಪಾಲ್ಗೊಳ್ಳುವ ಅವಕಾಶವಿರುತ್ತದೆ ಎಂದು. ನಸುಕಿನ ನಾಲ್ಕುಗಂಟೆಯಿಂದ ಐದು ಗಂಟೆಯವರೆಗೆ ಸ್ವಾಮೀಜಿಯವರ ಮಹಾಲಿಂಗ ಪೂಜೆಯ ಪ್ರಶಾಂತ ವೈಭವದಲ್ಲಿ ನಾವಿಬ್ಬರೂ ಪಾಲ್ಗೊಂಡದ್ದು ಒಂದು ಅವರ್ಣನೀಯ ಅನುಭವ:

ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ
ಪಾತಾಳದಿಂದತ್ತತ್ತ ನಿಮ್ಮ ಶ್ರೀ ಚರಣ.
ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀಮಕುಟ !
ಅಪ್ರಮಾಣ ಅಗಮ್ಯ ಅಗೋಚರ ಅಪ್ರತಿಮ ಲಿಂಗವೆ,
ಕೂಡಲ ಸಂಗಮ ದೇವಯ್ಯಾ
ಎನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಯ್ಯ !

ಬಸವಣ್ಣನವರ ಈ ವಚನ ಶ್ರೀಗಳವರ ಸಾನ್ನಿಧ್ಯದಲ್ಲಿ ಅಪೂರ್ವ ದೈವಿಕ ಕಲಾಕೃತಿಯಾಗಿ ಪರಿಣಮಿಸಿತಲ್ಲದೆ ಲಿಂಗದ ನಿಜರೂಪ ದರ್ಶನವನ್ನು ಮಾಡಿಸಿದಂತಾಯಿತು.

ಮರುದಿನ ಸಂಜೆ, ಪ್ರಕೃತಿಯ ಮಧ್ಯದಲ್ಲಿರುವ ಬೆಟ್ಟದ ಮೇಲಿರುವ ಸಿದ್ಧಲಿಂಗೇಶ್ವರ ಹಾಗೂ ಸಿದ್ಧಗಂಗಾ ಕುಂಡದ ದೇವಮಂದಿರಗಳ ಸುಂದರ ದೃಶ್ಯವನ್ನು ಆಸ್ವಾದಿಸಿ ಕೆಳಗಿಳಿಯುತ್ತ ಬಂದಾಗ ಇನ್ನೊಂದು ದೃಶ್ಯ ಸಂಜೆಯ ಹೊಂಬೆಳಕಿನಲ್ಲಿ ಕಣ್ಣಿಗೆ ಕಟ್ಟಿತು. ಸ್ವಚ್ಛವಾದ ಬಯಲಿನಲ್ಲಿ ಬಿಳಿಪಂಚೆ, ಕೆಂಪು ವಸ್ತ್ರ, ಹಣೆಗೆ ವಿಭೂತಿ ಧರಿಸಿದ ಐದಾರು ಸಾವಿರ ಮಕ್ಕಳು ಯಾವ ಭೇದಭಾವವೂ ಇಲ್ಲದೆ ಶ್ರೀಗಳವರ ಎದುರು ಸಮಾನವಾಗಿ ಕುಳಿತು ಸಾಮೂಹಿಕ ಪ್ರಾರ್ಥನೆಯಲ್ಲಿ ತೊಡಗಿರುವುದನ್ನು ಕಂಡು ಶಿವರುದ್ರಪ್ಪನವರ ಕವಿತೆ ಮತ್ತೆ ನೆನಪಾಯಿತು:

'ಎಲ್ಲ ನನ್ನವರೆನುವ ಭಾವದ ಕರುಣೆಯೇ ಕಣ್ತೆರೆ'ದಂತೆ 'ಕಾವಿಯುಡುಗೆಯನುಟ್ಟು ನಭವೇ ಕಿರಣ ಹಸ್ತವ ಚಾಚಿದೆ'. ದಿಗಂತದಂಚಿನಲ್ಲಿದ್ದ ಸೂರ್ಯನ ಹೊಂಗಿರಣಗಳು ಈ ಮಕ್ಕಳ ಕಣ್ಣುಗಳಲ್ಲಿ ಪ್ರತಿಫಲಿಸುತ್ತಿರುವಂತೆ ತೋರಿತು.

* * * *

ಶ್ರೀಗಳು ದಿನದ ಇಪ್ಪತ್ತೆರಡು ಗಂಟೆಗಳಷ್ಟು ಕಾರ್ಯತತ್ಪರರಾಗಿ ಜನಪರವಾದ ಕಳಕಳಿಯಿಂದ ಲೋಕಕಲ್ಯಾಣದಲ್ಲಿ ನಿರತರಾಗಿರುವದು ಆಧುನಿಕ ಕಾಲದ ಒಂದು ಪವಾಡವೇ ಎಂದು ಎನಿಸಿದರೆ ಆಶ್ಚರ್ಯವಿಲ್ಲ. ಅವರ ಮನಸ್ಸು ಸದಾ ಜಾಗ್ರತವಾಗಿರುತ್ತದೆ. ಸಭೆ ಸಮಾರಂಭಗಳಲ್ಲಿ ಕುಳಿತಾಗ ಸ್ವಲ್ಪ ತಲೆ ಬಾಗಿದ ಭಂಗಿ. ಭಾಷಣಕಾರರ ಮಾತುಗಳನ್ನೆಲ್ಲ ಏಕಾಗ್ರತೆಯಿಂದ ಆಲಿಸುತ್ತಾರೆ. ಕೊನೆಯಲ್ಲಿ ಮಾತನಾಡುವಾಗ ಆಯಾ ವಿಷಯಗಳಿಗೆ ಸಂಬಂಧಪಟ್ಟಂತೆ ದೇಶದ ಆಗುಹೋಗುಗಳ ಬಗ್ಗೆ, ಪ್ರಚಲಿತ ಸಮಸ್ಯೆಗಳ ಬಗ್ಗೆ ತಮ್ಮ ಆಲೋಚನೆಗಳನ್ನು ಹರಿಬಿಟ್ಟಾಗ ತಗ್ಗಿದ ದನಿಗೆ ಸಭಿಕರು ನಿಶ್ಶಬ್ದವಾಗಿ ಕಿವಿಗೊಡುತ್ತಾರೆ. ಭಕ್ತರಲ್ಲಿ ಬಡವರು ಶ್ರೀಮಂತರು ಎಂದು ಯಾವ ಭೇದವನ್ನು ಎಣಿಸದೆ ಅವರ ಮನೆಯ ಪೂಜಾಕಾರ್ಯದಲ್ಲಿ ಭಾಗವಹಿಸಿ ಸದ್ಭಾವನೆಯ ಸುಗಂಧವನ್ನು ಹರಡುತ್ತಾರೆ. ಸಾರ್ವಜನಿಕ ಕಾರ್ಯಕ್ರಮಗಳಲ್ಲಿ ಸಾಂಪ್ರದಾಯಿಕ ಹಿರಿತನವನ್ನು ಪ್ರದರ್ಶಿಸಿದ್ದಂತೂ ಇಲ್ಲವೇ ಇಲ್ಲ.

ಸುವರ್ಣ ಕರ್ನಾಟಕ ವರ್ಷದಲ್ಲಿ ಕರ್ನಾಟಕ ಸರಕಾರ ಶತಾಯುಷಿಗಳಾದ ಶ್ರೀಗಳವರಿಗೆ 'ಕರ್ನಾಟಕ ರತ್ನ' ಪ್ರಶಸ್ತಿ ನೀಡಿ ಗೌರವಿಸಿದ್ದು ಸರಿಯಷ್ಟೆ. ಆದರೆ ಅವರ ವ್ಯಕ್ತಿತ್ವದ ಘನತೆ ಎಲ್ಲ ಬಗೆಯ ಪ್ರಶಸ್ತಿಗಳನ್ನೂ ಮೀರಿದ್ದು. 'ಸಿದ್ಧಗಂಗಾಶ್ರೀ' ಕವಿತೆಯಲ್ಲಿ ಅಭಿವ್ಯಕ್ತಿಗೊಂಡ ನನ್ನ ಭಾವದ ಮಿಡಿತವನ್ನು ಕಾಲು ಶತಮಾನದ ನಂತರ ಮತ್ತೆ ಅನುಭವಿಸುತ್ತಿದ್ದೇನೆ.

ತ್ಯಾಗದೆತ್ತರಕೆ ತೂಗಿ, ಮುಗಿಲು ಸುತ್ತಲು ಬಾಗಿ
ನೆಲದ ಬದುಕಿಗೆ ಕರುಣೆ - ಕಾಯಕದಲ್ಲಿ ಕರಗಿ
ಮಿರುಗುವ ವಿಭೂತಿ !

೨೦೦೮

## ೫೬

# ಶಾಂತರಸ : ಕೆಲವು ನೆನಪುಗಳು

ನಾನು ಕಾಲೇಜ್ ವಿದ್ಯಾರ್ಥಿಯಾಗಿದ್ದಾಗ ಧಾರವಾಡದ ಟಿ.ಡಿ. ಶಿವಲಿಂಗಯ್ಯನವರ 'ಕರ್ನಾಟಕ ಸಾಹಿತ್ಯ ಮಂದಿರ' ಪುಸ್ತಕದಂಗಡಿಗೆ ಹೊಸಪುಸ್ತಕಗಳನ್ನು ನೋಡಲು ಇಲ್ಲವೆ ಕೊಂಡುಕೊಳ್ಳಲು ಆಗಾಗ ಹೋಗುತ್ತಿದ್ದೆ. ಅ.ನ.ಕೃ ಧಾರವಾಡಕ್ಕೆ ಬಂದಾಗ ಕೆಲ ಹೊತ್ತು ಈ ಅಂಗಡಿಯಲ್ಲಿ ಕಳೆಯುತ್ತಿದ್ದುದೂ ಮತ್ತು ಅವರ ಹೊಸ ಪುಸ್ತಕಗಳು ಪ್ರಕಟವಾದೊಡನೆ ಮೊದಲು ಈ ಅಂಗಡಿಯಲ್ಲಿ ಕಾಣಿಸಿಕೊಳ್ಳುತ್ತಿದ್ದುದೂ ನಮ್ಮ ಆಕರ್ಷಣೆಗೆ ಕಾರಣವಾಗಿತ್ತು. ೧೯೪೭ರಲ್ಲಿ ನಾನೊಮ್ಮೆ ಕರ್ನಾಟಕ ಸಾಹಿತ್ಯ ಮಂದಿರಕ್ಕೆ ಹೋದಾಗ 'ಮುಸುಕು-ತೆರೆ' ಎಂಬ ಹೊಸ ಪುಸ್ತಕ ಕಣ್ಣಿಗೆ ಬಿತ್ತು. ನಾನು ಅದನ್ನು ಕೈಯಲ್ಲಿ ಹಿಡಿದು ಆಸಕ್ತಿಯಿಂದ ನೋಡುತ್ತಿದ್ದಾಗ ಒಬ್ಬ ವ್ಯಕ್ತಿಯನ್ನು ಶಿವಲಿಂಗಯ್ಯನವರು ನನಗೆ ಪರಿಚಯಿಸಿದರು. ಅವರು ಈ ಪುಸ್ತಕವನ್ನು ನನಗೆ ಕಾಣಿಕೆಯಾಗಿ ಕೊಟ್ಟಾಗ ನನಗೆ ಸಂತೋಷವಾಯಿತು, ಆಶ್ಚರ್ಯವೂ ಆಯಿತು. ಅವರು ಆ ಪುಸ್ತಕದ ಸಂಪಾದಕರಲ್ಲಿ ಒಬ್ಬರಾದ 'ಅಮರಾನಂದ'ರು (ಚೆನ್ನಬಸವಪ್ಪ ಬೆಟದೂರು) ಇರಬೇಕೆಂದು ನನಗೆ ನೆನಪು. ಜೊತೆ ಸಂಪಾದಕರಾದ ಶಾಂತರಸರ ಹೆಸರು ಮೊದಲು ನನ್ನ ಕಣ್ಣಿಗೆ ಬಿದ್ದುದು ಈ ಪುಸ್ತಕದ ಮೂಲಕ. ಸಿದ್ದಯ್ಯಪುರಾಣಿಕರಂಥ ಪ್ರಸಿದ್ಧ ಕವಿಗಳನ್ನೊಳಗೊಂಡು ಹೈದರಾಬಾದ ಕರ್ನಾಟಕದ ಅನೇಕ ಕವಿಗಳನ್ನೂ ಲೇಖಕರನ್ನೂ ನಾಡಿನ ಓದುಗರಿಗೆ ಒಂದೆಡೆ ಪರಿಚಯಿಸಿದ ಪುಸ್ತಕ ಬಹುಶಃ ಇದೇ ಮೊದಲನೆಯದಾಗಿರಬಹುದು.

ಶಾಂತರಸ ಹಾಗೂ 'ಅಮರಾನಂದ'ರ ೬೫ ವರ್ಷಗಳಷ್ಟು ದೀರ್ಘವಾದ ಹಾಗೂ ಗಾಢವಾದ ಸ್ನೇಹ, ಹೈದರಾಬಾದ ಕರ್ನಾಟಕದ ಸಾಂಸ್ಕೃತಿಕ ಜೀವನವನ್ನು ಕಟ್ಟುವಲ್ಲಿ ಅವರು ನಡೆಸಿದ ನಿರಂತರ ಹೋರಾಟ ಮುಂದಿನವರಿಗೆ ಒಂದು ದಂತಕಥೆಯಾಗಿ ಗೋಚರಿಸಿದರೆ ಆಶ್ಚರ್ಯವಿಲ್ಲ.

ದೇವೇಂದ್ರ ಕುಮಾರ ಹಕಾರಿಯವರು ಧಾರವಾಡಕ್ಕೆ ಒಂದು ನೆಲೆಸಿದ ಮೇಲೆ ಶಾಂತರಸರ ಸಂಪರ್ಕ ನನಗೆ ಹೆಚ್ಚಾಗಿ ಒದಗಿತು. ಒಬ್ಬೊಬ್ಬ ವ್ಯಕ್ತಿಯ ದೆಸೆಯಿಂದ ಒಂದೊಂದು ಊರು ನನಗೆ ಪ್ರಿಯವಾಗಿರುವುದುಂಟು. ಹಾಗೆ ರಾಯಚೂರು ನನ್ನ ಮನಸ್ಸಿನಲ್ಲಿ ನೆಲೆಯೂರಿದ್ದು ಶಾಂತರಸರಿಂದಲೇ. ಅಲ್ಲಿ ಅವರು ಪೋಷಿಸಿ, ಪ್ರೋತ್ಸಾಹಿಸಿದ ಯುವ ಪ್ರತಿಭೆಗಳು, ನಿರಂತರ ನಡೆಸುತ್ತಿದ್ದ ಸಾಹಿತ್ಯಿಕ ಸಾಂಸ್ಕೃತಿಕ ಚಟುವಟಿಕೆಗಳು, ಹುಟ್ಟು ಹಾಕಿದ ಸತ್ಯಸ್ನೇಹ ಪ್ರಕಾಶನ,

ಹೊರಡಿಸುತ್ತಿದ್ದ ಪತ್ರಿಕೆ, ('ಪ್ರತೀಕ') ಸಾಹಿತ್ಯದೊಡನೆ ಬೆಳೆಸಿಕೊಂಡ ಸಂಗೀತ ಚಿತ್ರಕಲಾಸಕ್ತಿ, ವೈಚಾರಿಕ ನೆಲೆಯಲ್ಲಿ ಸಮುದಾಯದ ಸಂಘಟನೆ, ಪ್ರಗತಿಪರ ಹೋರಾಟ - ಇವೇ ಮೊದಲಾದವು ಹೈದರಾಬಾದ ಕರ್ನಾಟಕವನ್ನೆಲ್ಲ ವ್ಯಾಪಿಸಿದ್ದಲ್ಲದೆ ಉಳಿದ ಭಾಗದ ಜನರ ಲಕ್ಷ್ಯವನ್ನು ಗಮನಾರ್ಹವಾಗಿ ಸೆಳೆದುಕೊಂಡಿದ್ದವು.

ಧಾರವಾಡಕ್ಕೆ ಬಂದಾಗೆಲ್ಲ ಶಾಂತರಸರು ಏನಾದರೂ ಹೊಸಯೋಜನೆ ಹೊತ್ತುಕೊಂಡೆ ಬರುತ್ತಿದ್ದರಲ್ಲದೆ ತಾವು ನಡೆಸಿದ ಸಂಶೋಧನೆಯ ಬಗ್ಗೆ ಚರ್ಚಿಸುತ್ತಿದ್ದರು. ಮುಕ್ತ ಮನಸ್ಸಿನಿಂದ ಹರಟೆ ಹೊಡೆಯುತ್ತಿದ್ದರು. ಕೆಲವರ ಆಚಾರ ವಿಚಾರಗಳ ಬಗ್ಗೆ ಸಾತ್ವಿಕ ಸಿಟ್ಟು ವ್ಯಕ್ತಪಡಿಸುತ್ತಿದ್ದಂತೆಯೇ ಇನ್ನು ಕೆಲವು ಸಂಗತಿಗಳ ಬಗ್ಗೆ ಹೃದಯ ತುಂಬಿ ಹೊರಚೆಲ್ಲುವಂತೆ ಖುಷಿ ಪಡುತ್ತಿದ್ದರು. ಸ್ವಾಭಿಮಾನಿಯಾಗಿದ್ದರೂ ತಮ್ಮನ್ನು ಮೇಲುಗಟ್ಟಿ ಮಾತನಾಡಿದವರಲ್ಲ. ಆದರೆ ಸಾಹಿತ್ಯಿಕವಾಗಿ, ಸಾಮಾಜಿಕವಾಗಿ ಸಂಭವಿಸುತ್ತಿದ್ದ ಅನ್ಯಾಯಗಳನ್ನು ಪ್ರತಿಭಟಿಸದೆ ಬಿಡುತ್ತಿರಲಿಲ್ಲ. ಪ್ರತಿಭಟನೆಯನ್ನು ಕೃತಿಯಲ್ಲಿ ಇಳಿಸಿದಾಗಲೇ ಅವರಿಗೆ ಸಮಾಧಾನ. ಸಮಾನ ಮನಸ್ಕರ ದೊಡ್ಡ ಬಳಗವನ್ನೇ ಅವರು ಬೆಳೆಸಿದ್ದಲ್ಲದೆ ಅದು ಕ್ರಿಯಾಶೀಲವಾಗಿರುವಂತೆ ನೋಡಿಕೊಂಡರು.

* * * *

ಸ್ವತಃ ಉತ್ತಮ ಕವಿ ಹಾಗೂ ಕತೆಗಾರರಾಗಿದ್ದ ಅವರ ಕಲಾಭಿರುಚಿ ಕೂಡ ಉನ್ನತಮಟ್ಟದ್ದಾಗಿತ್ತು. ನನ್ನ 'ನೀಲಾಂಬಿಕೆ' ಕವಿತೆ ಅವರ ಮನಸ್ಸನ್ನು ಸೂರೆಗೊಂಡಿತ್ತು. (ನಾನು ಅದನ್ನು ಬರೆದದ್ದು ಬಸವಣ್ಣನವರ ಅಷ್ಟಶತಮಾನೋತ್ಸವ ಸಂದರ್ಭದಲ್ಲಿ) ಎಷ್ಟರಮಟ್ಟಿಗೆ ಎಂದರೆ, ಶ್ರೇಷ್ಠ ಸಂಗೀತಗಾರರಾದ ಸಿದ್ಧರಾಮ ಜಂಬಲದಿನ್ನಿಯವರಿಂದ ಅದಕ್ಕೆ ರಾಗಸಂಯೋಜನೆ ಮಾಡಿಸಿ, ಹಾಡಿಸಿ ಹರ್ಷಪಟ್ಟರು. ಅವರ ಭಾವಪೂರ್ಣ ಹಾಡುಗಾರಿಕೆ ಸಂಗೀತದ ಮೂಲಕ ಆ ಕವಿತೆಗೆ ವ್ಯಾಖ್ಯಾನ ಬರೆದಂತಿತ್ತು. ಬರಬರುತ್ತ ಜಂಬಲದಿನ್ನಿಯವರ ಸಂಗೀತ ಕಾರ್ಯಕ್ರಮವಿದ್ದಲ್ಲೆಲ್ಲ ಜನರ ಅಪೇಕ್ಷೆಯಂತೆ ಕೊನೆಯಲ್ಲಿ 'ನೀಲಾಂಬಿಕೆ' ಪದ್ಯವನ್ನು ಹಾಡುವುದು ಕ್ರಮವಾಗಿ ಬಿಟ್ಟಿತು. ಅದು ಅಷ್ಟಕ್ಕೇ ನಿಲ್ಲದೆ ಜಂಬಲದಿನ್ನಿಯವರು ಧ್ವನಿಸುರುಳಿಯೊಂದರಲ್ಲಿ ವಚನಗಳು, ಪ್ರಭುಲಿಂಗಲೀಲೆಯ ಶರಣಾರ್ಥಿಪದ್ಯಗಳು, ಮೃತ್ಯುಂಜಯ ಸುಪ್ರಭಾತ ಮೊದಲಾದವುಗಳ ಜೊತೆಗೆ 'ನೀಲಾಂಬಿಕೆ' ಪದ್ಯವೂ ಸೇರುವಂತಾಯಿತು. ತೋಂಟದಾರ್ಯಮಠದ ಪುಣ್ಯಪುರುಷರ ಮಾಲಿಕೆಯಲ್ಲಿ 'ಸಿದ್ಧರಾಮ ಜಂಬಲದಿನ್ನಿ'ಯವರನ್ನು ಕುರಿತು ಶಾಂತರಸರು ಪುಸ್ತಿಕೆ ಬರೆಯುವಾಗ ಇದನ್ನು ಉಲ್ಲೇಖಿಸಿದ್ದಾರೆ.

* * * *

ವಚನ ಸಾಹಿತ್ಯದಂತೆಯೇ ಅವರಿಗೆ ಬಾಲ್ಯದಿಂದಲೇ ತತ್ವಪದಗಳ ಹುಚ್ಚು. ಸಾವಿರಾರು ಅನುಭಾವದ ಹಾಡುಗಳನ್ನು ಸ್ವತಃ ಸಂಗ್ರಹಿಸಿದರು. ಅವರ 'ಎಡೆದೊರೆನಾಡಿನ ಅನುಭಾವಿ ಕವಿಗಳು' ಪುಸ್ತಕವನ್ನು ಕರ್ನಾಟಕ ವಿಶ್ವವಿದ್ಯಾಲಯದ ಪ್ರಸಾರಾಂಗ ಪ್ರಕಟಿಸಿದಾಗ ಹೆಮ್ಮೆಪಟ್ಟರು.

ಅವರು ಆಸ್ಥೆಯಿಂದ ಸಂಗ್ರಹಿಸಿ ಸಂಪಾದಿಸಿದ 'ಕೊಡಲೂರು ಬಸವಲಿಂಗಶರಣರ ಸ್ವರವಚನಗಳು' ಕೃತಿ ಹತ್ತುವರ್ಷಗಳ ನಂತರ ಗದಗಿನ ತೋಂಟದಾರ್ಯ ಮಠದಿಂದ ಬೆಳಕು ಕಂಡಿತು. ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾದಾಗ ತತ್ವಪದಗಳ ಪ್ರಾತಿನಿಧಿಕ ಸಂಕಲನವನ್ನು ದೊಡ್ಡ ಪ್ರಮಾಣದಲ್ಲಿ ಹೊರತರುವ ಯೋಜನೆ ರೂಪಿಸಿ ಕಾರ್ಯಗತಗೊಳಿಸಿದರು.

* * * *

ಮದುವೆ, ಪುಣ್ಯಸ್ಮರಣೆಯಂಥ ಸಂದರ್ಭಗಳಲ್ಲಿ ಪುಸ್ತಕ ಪ್ರಕಟನೆ, ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆಯಲು ಪ್ರೇರೇಪಿಸಿದರು. ಶಿರವಾರದ ಚುಕ್ಕಿ ಪ್ರತಿಷ್ಠಾನ ಇಂಥ ಪ್ರಯತ್ನದ ಫಲ. ಒಂದು ಸಲ ಅದರ ಕಾರ್ಯಕ್ರಮಕ್ಕೆ ನನ್ನನ್ನು ಬರಮಾಡಿಕೊಂಡು ಸತ್ಕರಿಸಿದ್ದೂ ಉಂಟು. ಧಾರವಾಡದಿಂದ ಹೊರಟು ತಿರುಗಿ ಬರುವವರೆಗೆ ದೇವೇಂದ್ರಕುಮಾರ ಹಕಾರಿಯವರು ನನ್ನ ಜೊತೆಗಿದ್ದು ಹೈದರಾಬಾದಿನ ತಮ್ಮ ಹಳೆಯ ನೆನಪುಗಳನ್ನು ಸ್ವಾರಸ್ಯಮಯವಾಗಿ ವಿವರಿಸುವಾಗ ಶಾಂತರಸರ ಸ್ನೇಹವಲಯದ ವಿಸ್ತಾರ ಇನ್ನಷ್ಟು ಮನದಟ್ಟಾಯಿತು.

ರಾಯಚೂರಿನ ಹೊಟೇಲೊಂದರಲ್ಲಿ ನಾವಿಬ್ಬರೂ ಇಳಿದುಕೊಂಡಾಗ ಶಾಂತರಸರ ಗೆಳೆಯರ ಬಳಗದ ಸಂಭ್ರಮ ನೋಡುವಂತಿತ್ತು. ಕಾವ್ಯಶಾಸ್ತ್ರ ವಿನೋದಕ್ಕೆ ಕಳೆ ಏರಿತ್ತು. ಯಾವುದಾದರೂ ಒಂದು ವಿಷಯದ ಬಗ್ಗೆ ಭಿನ್ನಾಭಿಪ್ರಾಯ ಉಂಟಾದಾಗ ಅದನ್ನು ಎಲ್ಲರೂ ಕೂಡಿ ಚರ್ಚಿಸುವುದಕ್ಕೆ ಆ ಭಾಗದಲ್ಲಿ 'ವಿಚಾರಕ್ಕೆ ಹಾಕು' ಎಂಬ ನುಡಿಗಟ್ಟು ಪ್ರಚಲಿತವೆಂದು ಶಾಂತರಸರಿಂದ ನನಗೆ ತಿಳಿದುಬಂತು. ಮಾತು ಮಾತಿಗೆ ಆ ಪದವನ್ನು ನಾವು ಅಂದು ಪ್ರಯೋಗಿಸಿ ನಕ್ಕು ನಲಿದದ್ದನ್ನು ನಾನು ಮರೆಯುವಂತಿಲ್ಲ.

ರಾಯಚೂರಿನಿಂದ ಮರಳುವಾಗ ನೀರಮಾನ್ವಿ ವೀರಣ್ಣ ಗೌಡರ ತೋಟದಲ್ಲಿ ಆತ್ಮೀಯವಾದ ಆತಿಥ್ಯ. ಅವರ ಹಾಸ್ಯಪ್ರವೃತ್ತಿಯಂತೂ ಅಪರೂಪವಾದದ್ದು. ಶಾಂತರಸರೊಡನೆ ಅವರದು ಏಕವಚನದ ಸಲಿಗೆ. ಬೆಟದೂರಿನಲ್ಲಿ ಚೆನ್ನಬಸವಪ್ಪನವರ ಮನೆಯಲ್ಲಿ ಸೊಗಸಾದ ಊಟೋಪಚಾರ. ಕಲಾವಿದ ಶಂಕರಗೌಡರ ಚಿತ್ರಕಲೆಯ ದರ್ಶನವೂ ಆಯಿತು. ಅನಿವಾರ್ಯ ಕಾರಣಗಳಿಂದ ಈ ಕಲಾವಿದರು ಮತ್ತೆ ವ್ಯವಸಾಯದಲ್ಲಿ ತೊಡಗಿದ್ದರು.

* * * *

ಕತೆಗಾರಿಕೆಯಲ್ಲಿ ತಮ್ಮ ಹೆಚ್ಚಿನ ನೈಪುಣ್ಯವನ್ನು ತೋರಿದರೂ ಮೊದಲೇ ಪ್ರೀತಿಸಿದ ಕಾವ್ಯವನ್ನು ಕೈಬಿಡಲಿಲ್ಲ. ಅವರ ಎರಡನೆಯ ಕವನ ಸಂಗ್ರಹ 'ಬಯಲು ಸೀಮೆಯ ಬಿಸಿಲು' ನನ್ನ ಮುನ್ನುಡಿಗಾಗಿ ಕಾಯಬೇಕಾಯಿತು. ಕೊನೆಗೂ ಸಂಕ್ಷಿಪ್ತವಾಗಿ ಎರಡು ಮಾತು ಬರೆದೆ. ಸಂಕ್ಷಿಪ್ತವಾಗಿದ್ದರೂ ಸಾರವತ್ತಾಗಿದೆ. ನಾನು ಇದನ್ನೇ ಬಯಸಿದ್ದು ಎಂದು ಪತ್ರ ಬರೆದರು. ಆ ಭಾಗದ ಕವಿಗಳನ್ನು ಲೇಖಕರನ್ನು ಉಳಿದವರು ಗುರುತಿಸುವುದಿಲ್ಲವೆಂಬ ಆಕ್ಷೇಪ ಅವರಲ್ಲಿ ಬಲವತ್ತರವಾಗಿತ್ತು. ಅದು ಕೆಲಮಟ್ಟಿಗೆ ನಿಜವೂ ಕೂಡ. ಲಂಕೇಶರ 'ಅಕ್ಷರ ಹೊಸ ಕಾವ್ಯ' ಪ್ರಕಟವಾದ ಮರುವರ್ಷವೇ ಬುದ್ದಣ್ಣ ಹಿಂಗಮಿರೆಯವರ 'ಹೊಸ ಜನಾಂಗದ ಕಾವ್ಯ'

ಹೊರಬಿದ್ದಾಗ ಹೈದರಾಬಾದ್ ಕರ್ನಾಟಕದ ಒಬ್ಬಕವಿಗೂ ಆ ಆ್ಯಂಥಾಲಜಿಗಳಲ್ಲಿ ಸ್ಥಾನವಿಲ್ಲದ್ದನ್ನು ಕಂಡು ಶಾಂತರಸರಿಗೆ ತಡೆದುಕೊಳ್ಳುವುದಾಗಲಿಲ್ಲ. ಆರ್ಥಿಕ ಸಂಕಷ್ಟದಲ್ಲಿಯೂ 'ಬೆನ್ನ ಹಿಂದಿನ ಬೆಳಕು' ಎಂಬ ಅರ್ಥವತ್ತಾದ ಹೆಸರಿನಲ್ಲಿ ಆ ಭಾಗದ ೨೭ ಕವಿಗಳ ಕವಿತೆಗಳ ಸಂಕಲನವನ್ನು ಪ್ರಕಟಿಸಿ ತಮ್ಮ ಜಿಗಟುಗಾರಿಕೆ ಮೆರೆದರು.

ಅದಾದ ಎಷ್ಟೋ ವರ್ಷಗಳ ನಂತರ ಲಂಕೇಶ ರಾಯಚೂರು, ಗುಲ್ಬರ್ಗಾ ಕಡೆಗೆ ಪ್ರವಾಸಕ್ಕೆ ಹೋದಾಗ ('ಪ್ರಗತಿರಂಗ'ದ ಸಂದರ್ಭದಲ್ಲಿ ಇರಬಹುದು) ಶಾಂತರಸರೂ ಅವರ ಜೊತೆಗಿದ್ದರು. ಸಾಹಿತ್ಯಿಕ ವಿಷಯ ಬಂದಾಗ ಶಾಂತರಸರು ಗಝಲ್ ಕಾವ್ಯದ ಬಗ್ಗೆ ಮಹತ್ವದ ಅಂಶಗಳನ್ನು ವಿವರಿಸುತ್ತಿರುವಾಗ ಲಂಕೇಶ ಆ ಬಗ್ಗೆ ಬೇಸರಪಟ್ಟುಕೊಂಡ ಸಂಗತಿ ಪತ್ರಿಕೆಯ 'ಟೀಕೆ-ಟಿಪ್ಪಣಿ'ಯಲ್ಲಿ ಬಂದಿತ್ತು. ಲಂಕೇಶರ ಸ್ವಭಾವ ವೈಚಿತ್ರ್ಯದ ಬಗ್ಗೆ ಆಮೇಲೆ ಶಾಂತರಸರು ತಕ್ಕ ಪ್ರತಿಕ್ರಿಯೆ ವ್ಯಕ್ತಪಡಿಸಿದ್ದೂ ಉಂಟು. 'ನಾನೊಲ್ಲದ ನನ್ನ ಗುಣ' ಎಂಬ ಲೇಖನವೊಂದನ್ನು ಹಿಂದೆ ಲಂಕೇಶ ಬರೆದಿದ್ದರು. ಈ ಪ್ರಸಂಗ ಅದಕ್ಕೆ ಹೊಂದಿಕೊಳ್ಳುವಂತೆಯೇ ಇದೆ.

ಗಝಲ್‌ನಂಥ ಉರ್ದುಭಾಷೆಯ ವಿಶಿಷ್ಟ ಕಾವ್ಯ ಪ್ರಕಾರವನ್ನು ಅದರ ಮೂಲ ಲಕ್ಷಣಗಳೊಂದಿಗೆ ಕನ್ನಡಕ್ಕೆ ಒಗ್ಗಿಸಿ, ಹಾಗೂ ಹಿಗ್ಗಿಸಿಕೊಟ್ಟ ಮೊದಲ ಶ್ರೇಯಸ್ಸು ಶಾಂತರಸರಿಗೆ ಖಂಡಿತವಾಗಿಯೂ ಸಲ್ಲುತ್ತದೆ. ಜೊತೆಗೆ ಉರ್ದು ಭಾಷೆಯ ಬೇರೆ ಕಾವ್ಯಪ್ರಕಾರಗಳನ್ನೂ ಅವರು ಕನ್ನಡಕ್ಕೆ ಪರಿಚಯಿಸಿದ್ದೂ ಉಂಟು. ಈ ಕಾರ್ಯವನ್ನು ಮುಕ್ತಾಯಕ್ಕ, ಜಂಬಣ್ಣ ಅಮರ ಚಿಂತ, ಕಾಶೀನಾಥ ಅಂಬಲಿಗೆ, ಚೆನ್ನಣ್ಣ ವಾಲಿಕಾರ ಮೊದಲಾದವರು ಯಶಸ್ವಿಯಾಗಿ ಮುಂದುವರಿಸಿದ್ದಾರೆ.

* * * *

ಧಾರವಾಡಕ್ಕೆ ಎಷ್ಟೋ ವರ್ಷಗಳಿಂದ ಬರದಿದ್ದ ಶಾಂತರಸರು ಒಂದು ದಿನ, ಮಗಳು ಭಾರತಿ ಕೋಟಿ ಹಾಗೂ ಮೊಮ್ಮಕ್ಕಳೊಂದಿಗೆ ನಮ್ಮ ಮನೆಗೆ ಬಂದಿಳಿದರು. ಕೈಯಲ್ಲಿ ಹೂವು ಹಣ್ಣುಹಂಪಲ ಬೇರೆ. ಅದು, ನಾನು ಹಾಸನ ಸಾಹಿತ್ಯ ಸಮ್ಮೇಳನದ ಅಧ್ಯಕ್ಷನಾಗಿ ನಿಯೋಜಿತಗೊಂಡ ಸಂದರ್ಭ. ಅವರಿಗೆ ಹಿಡಿಸಲಾರದಷ್ಟು ಸಂತೋಷ. ಲಕ್ಷ್ಮೀದೇವಿಯವರು ಮಾತ್ರ ಕಾರಿನಲ್ಲಿಯೇ ಕುಳಿತಿದ್ದರು. ಕೆಳಗೆ ಇಳಿದು ಬಾರದಷ್ಟು ಅಸ್ವಸ್ಥತೆಯವರಿಗೆ. ಶಾಂತರಸರ ಆರೋಗ್ಯವೂ ಅಷ್ಟಕ್ಕಷ್ಟೆ. ಅಂಥದರಲ್ಲಿಯೂ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿದ್ದ ಅವಧಿಯಲ್ಲಿ ಆಗಬೇಕಾದ ಕಾರ್ಯ-ಚಟುವಟಿಕೆಗಳಿಗೆ ಯಾವುದೇ ಬಗೆಯ ವ್ಯತ್ಯಾಸವಾಗದಂತೆ ನೋಡಿಕೊಂಡದ್ದು ನಿಜಕ್ಕೂ ಮೆಚ್ಚತಕ್ಕದ್ದೆ.

* * * *

ಆಮೇಲೆ ಶಾಂತರಸರ ಜೊತೆಯಲ್ಲಿ ಕೆಲ ಸಮಯ ಕಳೆದದ್ದು ಜುಲೈ ೧೯೯೯ರಂದು ಗದುಗಿನ ತೋಂಟದ ಸಿದ್ಧಲಿಂಗ ಸ್ವಾಮಿಗಳು ಪೀಠವೇರಿದ ರಜತಮಹೋತ್ಸವದ ಸಂದರ್ಭದಲ್ಲಿ. ಲಕ್ಷ್ಮೀದೇವಿಯವರು ತೀರಿಕೊಂಡಮೇಲೆ ಅವರು ಅರ್ಧಕ್ಕರ್ಧ ಇಳಿದು ಹೋಗಿದ್ದರು. ಮಗಳು

ಭಾರತಿ ಕೋಟಿಯವರ ಮನೆಗೆ ಹೋಗಿ ಅವರನ್ನು ಕಂಡು ಸಾಂತ್ವನ ಹೇಳಿದಾಗ ಅವರ ಕಣ್ಣು ಒದ್ದೆಯಾಗಿದ್ದವು; ಗದ್ಗದಿತರಾಗಿಯೇ ಮಾತಾಡಿದರು.

* * * *

ಶಾಂತರಸರ ಸ್ವಭಾವ ಎಷ್ಟು ನೇರ ಹಾಗೂ ಪ್ರಾಮಾಣಿಕ ಎಂಬುದಕ್ಕೆ ಒಂದು ಘಟನೆ ನೆನಪಾಗುತ್ತದೆ. ಕೊಪ್ಪಳದಲ್ಲಿ ನಡೆಯಲಿರುವ ಸಾಹಿತ್ಯ ಸಮ್ಮೇಳನಕ್ಕೆ ಅಧ್ಯಕ್ಷರಾಗಬೇಕೆಂದು ಕೆಲವು ಸ್ನೇಹಿತರು ಅವರನ್ನು ಉತ್ತೇಜಿಸಿದ್ದರು. ಅವರೂ ಮನಸ್ಸು ಮಾಡಿದ್ದರು. ಅದಕ್ಕಾಗಿ ನನ್ನ ಬೆಂಬಲವನ್ನು ಕೋರಿ ಪತ್ರವನ್ನು ಬರೆದರು. ಆದರೆ ನಾನು ಅಷ್ಟರೊಳಗಾಗಿ ಹಿರಿಯರಾದ ಸಿಂಪಿ ಲಿಂಗಣ್ಣನವರ ಹೆಸರನ್ನು ಸೂಚಿಸಿ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಿಗೆ ಪತ್ರ ಬರೆದು ಬಿಟ್ಟಿದ್ದೆ. ಈ ವಿಷಯವನ್ನು ಅವರಿಗೆ ತಿಳಿಸಿದಾಗ ತಕ್ಷಣ ಶಾಂತರಸರು ನನ್ನ ಸೂಚನೆಯನ್ನು ಮೆಚ್ಚಿ ತಾವೂ ಸಿಂಪಿಲಿಂಗಣ್ಣನವರನ್ನೇ ಬೆಂಬಲಿಸುವುದಾಗಿ ತಮ್ಮ ಹೆಸರನ್ನು ಹಿಂದಕ್ಕೆ ತೆಗೆದುಕೊಂಡರು. ಆ ಸಮ್ಮೇಳನದ ಸಮಾರೋಪ ಸಮಾರಂಭದ ಮುಖ್ಯ ಅತಿಥಿಯಾಗಿ ಶಾಂತರಸರು ಭಾಗವಹಿಸಿದ್ದಲ್ಲದೆ ತಮ್ಮ ಭಾಷಣದಲ್ಲಿ ವೈಜನಾಥ ಪಾಟೀಲ ಮೊದಲಾದವರ ಹೈದರಾಬಾದ ಕರ್ನಾಟಕದ ಪ್ರತ್ಯೇಕ ರಾಜ್ಯದ ಬೇಡಿಕೆಯನ್ನು ಖಂಡಿಸಿದರು.

ಕೆಲವರ್ಷಗಳನಂತರ ಬೀದರಿನಲ್ಲಿ ನೆರವೇರಿದ ೭೭ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪೀಠ ಅವರಿಗಾಗಿ ಕಾದುಕೊಂಡಂತಿತ್ತು. ದೈಹಿಕವಾಗಿ ಹಣ್ಣಾಗಿದ್ದರೂ ಮಾನಸಿಕವಾಗಿ ಅವರು ಎಂದಿನಂತೆ ಚುರುಕಾಗಿಯೇ ಇದ್ದರು. ಕರ್ನಾಟಕದ ಭವಿಷ್ಯದ ಬಗ್ಗೆ ಭರವಸೆಯೊಂದಿಗೆ ಎಚ್ಚರಿಕೆಯ ಮಾತುಗಳನ್ನಾಡಲು ಅವರು ಮರೆಯಲಿಲ್ಲ.

* * * *

ಕಳೆದ ಏಪ್ರಿಲ್ ೧೩ರಂದು ನಾನು ದಿಲ್ಲಿಯಲ್ಲಿ ನಮ್ಮ ಹಿರಿಯ ಮಗ ಶಿವಾನಂದನ ಮನೆಯಲ್ಲಿದ್ದೆ. ಸಂಜೆ ದೂರದರ್ಶನದಲ್ಲಿ ಕನ್ನಡದ ಸುದ್ದಿಯನ್ನು ಕೇಳುತ್ತಿದ್ದಂತೆ ಶಾಂತರಸರ ನಿಧನದ ಸುದ್ದಿ ನನ್ನನ್ನು ಒಂದು ಕ್ಷಣ ದಿಙ್ಮೂಢನನ್ನಾಗಿಸಿತು. ಹಿಂದಿನ ನೆನಪುಗಳೆಲ್ಲಾ ಒಂದೊಂದಾಗಿ ಒಳಗಣ್ಣಿನ ಮುಂದೆ ದೃಶ್ಯಗಳಾಗಿ ಸರಿಯ ತೊಡಗಿದವು.

ಶಾಂತರಸರ 'ಬಯಲು ಸೀಮೆಯ ಬಿಸಿಲು' ಕವನಸಂಗ್ರಹಕ್ಕೆ ನಾನು ಮುನ್ನುಡಿ ಬರೆಯುವಾಗ ಮೆಚ್ಚಿಕೊಂಡಿದ್ದ ನಾಲ್ಕು ಸಾಲುಗಳು ನೆನಪಾದವು:

ಹುಟ್ಟೋ ಸೂರ್ಯನ್ಗಿಂತ ಸಾಯೊ ನೇಸರ್ನ ಮ್ಯಾಲೆ
ನನಗ ಹೆಚ್ ಪ್ರೀತಿ!
ತನ್ನ ಮೈಬೆಳಕಿನ ಚಿತೆ ತಾನೇ ಏರಿ
ಸೂರ್ಯ ಸುಟ್ ಮರ್‍ಯಾದಾಗ
ಆ ಉರ್‍ಯಾಗೇನೆ ಹುಟ್ಟಿಬರ್ತಾನ ಬಿದ್ಗಿಚಂದ್ರ

೨೦೦೮

೧

# ಶಿಕ್ಷಣದ ಸಮಸ್ಯೆ

ಈಗ ನಮ್ಮ ದೇಶದಲ್ಲಿ ಶಾಲೆಯೆಂದು ಕರೆಯಿಸಿಕೊಳ್ಳುವ ಸಂಸ್ಥೆ ನಿಜವಾಗಿಯೂ ಒಂದು ಕಾರ್ಖಾನೆಯೇ ಸರಿ. ಶಿಕ್ಷಕರು ಆ ಕಾರ್ಖಾನೆಯ ಒಂದು ಭಾಗವಾಗಿದ್ದಾರೆ. ಮುಂಜಾವ ಹತ್ತೂವರೆ ಗಂಟೆಗೆ ಗಂಟೆ ಬಾರಿಸಿದೊಡನೆ ಕಾರ್ಖಾನೆಯು ತೆರೆಯುತ್ತದೆ. ಆಮೇಲೆ ಇತ್ತ ಶಿಕ್ಷಕರು ಮಾತನಾಡತೊಡಗಿದರೆಂದರೆ ಅತ್ತ ಯಂತ್ರಗಳು ತಮ್ಮ ಕೆಲಸವನ್ನು ಪ್ರಾರಂಭಿಸುತ್ತವೆ. ಅಪರಾಹ್ನ ನಾಲ್ಕು ಗಂಟೆಗೆ ಕಾರ್ಖಾನೆ ಮುಚ್ಚುವ ಹೊತ್ತಿಗೆ ಶಿಕ್ಷಕರು ತಮ್ಮ ಸಂಭಾಷಣೆಯನ್ನು ನಿಲ್ಲಿಸುತ್ತಾರೆ. ವಿದ್ಯಾರ್ಥಿಗಳು ತಾವು ಯಾಂತ್ರಿಕವಾಗಿ ಕಲಿತ ಕೆಲವು ಪುಟಗಳೊಂದಿಗೆ ಮನೆಯ ಹಾದಿ ಹಿಡಿಯುತ್ತಾರೆ. ಕೆಲ ದಿನಗಳ ತರುವಾಯ ಬಿಲ್ಲೆಯನ್ನು ಅವರ ಹಣೆಗೆ ಹಚ್ಚಲಾಗುತ್ತದೆ.

ಕಾರ್ಖಾನೆಯ ಒಂದು ಸೌಲಭ್ಯವೆಂದರೆ, ನಾವು ಮಾಡಲು ಹೇಳಿದ ರೀತಿಯಲ್ಲಿಯೇ ಸಾಮಾನುಗಳನ್ನು ತಯಾರಿಸಿ ಕೊಡುವುದು. ಅದೂ ಅಲ್ಲದೆ ಈ ಸಾಮಾನುಗಳಿಗೆ ಚೀಟಿ ಅಂಟಿಸುವುದು ಇನ್ನೂ ಸುಲಭ. ಯಾಕೆಂದರೆ, ಬೇರೆ ಬೇರೆ ಯಂತ್ರಗಳು ತಯಾರಿಸಿದ ಈ ವಸ್ತುವಿನಲ್ಲಿ ಹೇಳಿಕೊಳ್ಳುವಂಥ ವ್ಯತ್ಯಾಸವೇನೂ ಇರುವುದಿಲ್ಲ.

ಆದರೆ ಒಬ್ಬ ಮನುಷ್ಯನಿಗೂ ಮತ್ತೊಬ್ಬ ಮನುಷ್ಯನಿಗೂ ಎಷ್ಟೋ ಅಂತರವಿರುತ್ತದೆ. ಅಷ್ಟೇಕೆ, ಅದೇ ಮನುಷ್ಯನನ್ನು ಬೇರೆ ಬೇರೆ ದಿನಗಳಲ್ಲಿ ಕಂಡಾಗಲೂ ವ್ಯತ್ಯಾಸವಿದ್ದೇ ಇರುತ್ತದೆ.

ಅದೇನೇ ಇರಲಿ, ಮನುಷ್ಯಪ್ರಾಣಿಗಳಿಂದ ನಮಗೆ ದೊರೆಯುವುದನ್ನು ಯಂತ್ರಗಳಿಂದ ಎಂದೂ ಪಡೆಯಲಾರೆವು. ಯಂತ್ರವು ಒಂದು ವಸ್ತುವನ್ನು ನಮ್ಮೆದುರು ಹಿಡಿಯಬಲ್ಲದು; ಆದರೆ ಅದನ್ನು ನಮ್ಮ ಕೈಯಲ್ಲಿ ಕೊಡಲಾರದು. ದೀಪವನ್ನು ಹೊತ್ತಿಸಲು ಅದು ನಮಗೆ ಎಣ್ಣೆಯನ್ನು ಕೊಡಬಹುದು; ಆದರೆ ಅದೇ ದೀಪವನ್ನು ಹಚ್ಚಲಾರದು.

ಯುರೋಪ್ ಖಂಡದ ಹುಡುಗನ ಮಾನಸಿಕ ಬೆಳವಣಿಗೆಯಲ್ಲಿ ಅಲ್ಲಿಯ ಶಾಲೆಯ ಪಾತ್ರ ಅಷ್ಟು ಮುಖ್ಯವಾಗಿಲ್ಲ. ಅವನು ಬೆಳೆದು ದೊಡ್ಡವನಾಗುತ್ತಿರುವ ಆ ದೇಶದ ಜೀವನ ಅದರಲ್ಲಿ ಹಿರಿಯ ಪಾತ್ರವನ್ನು ವಹಿಸುತ್ತದೆ. ಯೂರೋಪಿನ ಶಿಕ್ಷಣಕ್ರಮವು ಜೀವನದಿಂದ ದೂರವಿರದೆ ಅದರ ಸಮಗ್ರತೆಯ ಭಾಗವಾಗಿದೆ. ಅದು ಸಮಾಜದಲ್ಲಿಯೇ ಬೆಳೆದು ವಿಕಾಸಹೊಂದಿ ಪ್ರಸಾರಗೊಳ್ಳುತ್ತಿರುತ್ತದೆ. ಜನರು ತಮ್ಮ ನಿತ್ಯ ಜೀವನದಲ್ಲಿ ಆಡುವ ಮಾತು, ವಿಚಾರಿಸುವ ಸಂಗತಿ ಮತ್ತು ಮಾಡುವ ಕಾರ್ಯ-ಎಲ್ಲದರ ಮೇಲೂ ತನ್ನ ಮುದ್ರೆಯನ್ನು

ಒತ್ತಿರುತ್ತದೆ. ಸಮಾಜವು ತನ್ನ ದೀರ್ಘ ಚರಿತ್ರೆಯಿಂದ, ಅನೇಕ ಜನರ ನಾನಾ ಬಗೆಯ ಕಾರ್ಯಚಟುವಟಿಕೆಗಳಿಂದ, ತನ್ನದನ್ನಾಗಿ ಮಾಡಿಕೊಂಡಿರುವ ಸಂಸ್ಕೃತಿಯ ಮಾಧ್ಯಮ ಮಾತ್ರ ಆಗಿದೆ ಶಾಲೆಯೆಂಬುದು.

ಆದರೆ ನಮ್ಮ ದೇಶದಲ್ಲಿಯೇ ಶಾಲೆಗಳು ಸಮಾಜದ ಸಮಗ್ರತೆಯ ಅಂಶವಾಗಿರದೆ ಹೊರಗಿನಿಂದ ಅದರ ಮೇಲೆ ತಂದು ಹೇರಿದವುಗಳಾಗಿವೆ. ಅವು ಕಲಿಸುವ ಅಭ್ಯಾಸಕ್ರಮಗಳು ರಸಹೀನವೂ ಕಲಿಯಲು ಕಷ್ಟಕರವೂ ಆಗಿದ್ದು ಕಲಿತಮೇಲೆಯೂ ನಿರುಪಯೋಗಿಯಾಗಿವೆ. ದಿವಸದಲ್ಲಿ ಹತ್ತರಿಂದ ನಾಲ್ಕು ಗಂಟೆಯವರೆಗೆ ವಿದ್ಯಾರ್ಥಿಗಳು ಉರುಹೊಡೆಯುವ ಪಾಠಗಳಿಗೂ ಅವರು ಜೀವಿಸುತ್ತಿರುವ ದೇಶಕ್ಕೂ ಏನೂ ಸಂಬಂಧವೇ ಇರುವುದಿಲ್ಲ. ಅವರ ತಂದೆ ತಾಯಿಗಳು, ಬಂಧುಬಳಗದವರು, ಮನೆಯಲ್ಲಿ ಮಾತಾನಾಡಿಕೊಳ್ಳುವ ವಿಷಯಗಳಿಗೂ ಶಾಲೆಯಲ್ಲಿ ಅವರು ಕಲಿತು ಬರುವ ವಿಷಯಗಳಿಗೂ ಪರಸ್ಪರ ಹೊಂದಿಕೆಯೇ ಇರುವುದಿಲ್ಲ; ಇಷ್ಟೇ ಅಲ್ಲ, ಅವುಗಳಲ್ಲಿ ವಿರೋಧಾಂಶಗಳೇ ಹೆಚ್ಚಿರುತ್ತವೆ. ಶಾಲೆಗಳು ಕಾರ್ಖಾನೆಗಳಿಗಿಂತ ಉತ್ತಮವಾಗಿ ಮನುಷ್ಯ ಯಂತ್ರಗಳನ್ನು ತಯಾರಿಸಬಲ್ಲುವಾಗಿವೆ.

ಆದ್ದರಿಂದ ಇಷ್ಟು ಮಾತ್ರ ಸ್ಪಷ್ಟ : ಯುರೋಪಿನ ಶಾಲೆಗಳ ಬಾಹ್ಯ ಸಂಗತಿಗಳನ್ನು ತದ್ವತ್ತಾಗಿ ಅನುಕರಿಸುವುದರಲ್ಲಿ ನಾವು ಯಶಸ್ವಿಯಾದರೂ ಅದರ ನಿಜವಾದ ತಿರುಳನ್ನು ನಾವು ಎಂದಿಗೂ ಪಡೆಯಲಾರೆವು. ಹಾಗೆ ಮಾಡುವುದರಿಂದ ಮೇಜು ಕುರ್ಚಿಗಳ, ನಿಯಮ ಪಾಠಕ್ರಮಗಳ, ಭಾರವನ್ನು ವ್ಯರ್ಥ ಹೊತ್ತು ಕೊಂಡಂತಾಗುತ್ತದೆ, ಅಷ್ಟೇ. ಯುರೋಪಿನ ಶಾಲೆಗಳು ಎಷ್ಟೇ ನಿರ್ದೋಷವಾಗಿದ್ದರೂ, ಅವು ನಮಗೆ ಮಾತ್ರ ಬರೀ ಅನುಕರಣೆಯಾಗಿ ಸಂಭವಿಸುತ್ತವೆ.

ಪ್ರಾಚೀನ ಭಾರತದಲ್ಲಿ ಶಿಕ್ಷಣವು ನೈತಿಕ ಹಾಗೂ ಆಧ್ಯಾತ್ಮಿಕ ಉಪದೇಶಕರಾಗಿದ್ದ 'ಗುರು'ಗಳ ಕೈಯಲ್ಲಿರುತ್ತಿದ್ದಿತು. ಆ ಬೋಧಕರು ಮನುಷ್ಯರಾಗಿದ್ದರಲ್ಲದೆ ಯಂತ್ರಗಳಾಗಿರಲಿಲ್ಲ. ಆಗಿನ ಶಿಕ್ಷಣವು ತೀರ ಸುತ್ತು ಬಳಸಾದ ವಿಸ್ತಾರ ವ್ಯಾಪ್ತಿಯುಳ್ಳದಾಗಿರಲಿಲ್ಲ; ಸಮಾಜದಲ್ಲಿಯ ಪ್ರಚಲಿತ ವಿಚಾರ ಮತ್ತು ಅಭಿಪ್ರಾಯಗಳಿಗೆ ವ್ಯತಿರಿಕ್ತವೂ ಆಗಿರಲಿಲ್ಲ. ಆದರೆ ಅದನ್ನು ಈಗ ಪುನಃ ತಂದುಕೊಳ್ಳಲು ಪ್ರಯತ್ನಿಸಿದರೆ ಆ ಪದ್ಧತಿಗಳನ್ನು ವ್ಯರ್ಥವಾಗಿ ಪುನರುಜ್ಜೀವನಗೊಳಿಸಿ ದಂತಾಗುತ್ತದಲ್ಲದೆ ಕೊನೆಯಲ್ಲಿ ಅದೇ ಒಂದು ಹೊರೆಯಾಗಿ ಪರಿಣಮಿಸುತ್ತದೆ.

ಇಂದಿನ ಆವಶ್ಯಕತೆಗಳನ್ನು ನಾವು ತಿಳಿದುಕೊಂಡದ್ದೇ ಆದಲ್ಲಿ, ನಾವು ಸ್ಥಾಪಿಸುವ ಯಾವುದೇ ಹೊಸ ಶಾಲೆಗಳು ಮುಂದೆ ಕಾಣಿಸಿದ ನಿಯಮಗಳನ್ನು ಈಡೇರಿಸುವಂತಿವೆಯೇ ಎಂಬುದನ್ನು ನೋಡಬೇಕು. ಅಭ್ಯಾಸಕ್ರಮಗಳು ಉಲ್ಲಾಸಮಯವೂ ವೈವಿಧ್ಯಪೂರ್ಣವೂ ಆಗಿರಬೇಕು. ಹೃದಯಕ್ಕೂ ಬುದ್ಧಿಗೂ ಕೂಡಿಯೇ ಅವು ಪೋಷಕವಾಗಿರಬೇಕು. ಯಾವುದೇ ಬಗೆಯ ಅನೈಕ್ಯತೆ ವಿಸಂಗತಿಗಳು ನಮ್ಮ ಯುವಕರ ಮನಸ್ಸನ್ನು ಬಲವಂತದಿಂದ ಬೇರ್ಪಡಿಸುವಂತಿರಕೂಡದು. ಶಿಕ್ಷಣವು ಯಾವುದೋ ಅವಾಸ್ತವ ಸಂಗತಿಯಾಗಿರಬಾರದು. ಶಾಲೆಯಲ್ಲಿ ಕೆಲವು ಗಳಿಗೆ ಇರುವ ವಿದ್ಯಾರ್ಥಿಗಳಿಗೆ ಅದು ಭಾರವೂ ಗಹನವೂ ಆಗಿರಕೂಡದು. ಶಾಲೆಗಳನ್ನು ಮನೆಗಳನ್ನಾಗಿ

ಪರಿವರ್ತಿಸಿದರೆ ಅವು 'ಬೋರ್ಡಿಂಗ್ ಸ್ಕೂಲು' (ಹಣಕ್ಕೆ ಊಟ ಹಾಕಿ ವಿದ್ಯೆ ಕಲಿಸುವ ಪಾಠಶಾಲೆ)ಗಳಾಗಿ ಪರಣಮಿಸುತ್ತವೆ. ಇಂಥ ಶಾಲೆಗಳು ಸಂತೋಷವರಿಯದ ಕನಸು ನೋಟಗಳ ಮಾಟವಾಗಿರುವುವಲ್ಲದೆ ಅವು ದಂಡಿನ ಪಾಳೆಯಗಳಿಗೆ, ಹುಚ್ಚರಾಸ್ಪತ್ರೆಗಳಿಗೆ, ದವಾಖಾನೆಗಳಿಗೆ ಮತ್ತು ಜೈಲುಗಳಿಗೆ ಸಮಾನವಾಗಿರುತ್ತವೆ.

ಯುರೋಪಿನ ಮಾದರಿಯನ್ನು ನಾವು ನಮ್ಮ ಮನಸ್ಸಿನಿಂದ ಸಂಪೂರ್ಣ ಕಿತ್ತೊಗೆಯಬೇಕು. ಇದಕ್ಕಿರುವ ಒಂದೇ ಕಾರಣವೆಂದರೆ ಯುರೋಪಿನ ಇತಿಹಾಸ ಮತ್ತು ಅಲ್ಲಿಯ ಸಮಾಜ ನಮ್ಮ ಇತಿಹಾಸ ಹಾಗೂ ಸಮಾಜಗಳಿಂದ ತೀರ ಭಿನ್ನವಾಗಿರುವುದು. ಹಿಂದೆ ನಮ್ಮ ದೇಶದ ಮನಸ್ಸನ್ನು ಆಕರ್ಷಿಸಿ ಉತ್ತೇಜನಗೊಳಿಸಿದ ಆದರ್ಶಗಳನ್ನು ನಾವಿಂದು ಸರಿಯಾಗಿ ತಿಳಿದುಕೊಳ್ಳಲು ಪ್ರಯತ್ನಿಸಬೇಕು.

ಇದರಿಂದ ಅನೇಕ ತೊಂದರೆಗಳು ಉದ್ಭವಿಸುತ್ತವೆ, ಯಾಕೆಂದರೆ, ನಾವು ಕಲಿತದ್ದು ಇಂಗ್ಲಿಷ್ ಶಿಕ್ಷಣವನ್ನು. ಇಂಗ್ಲಿಷ್ ಮಾದರಿಗಳು ನಮ್ಮ ದೃಷ್ಟಿ ವಿಸ್ತಾರವನ್ನೆಲ್ಲ ಅಪಹರಿಸುವುದಲ್ಲದೆ ನಮ್ಮ ದೇಶ ಪಡೆದ ಸಿದ್ಧಿಗಳನ್ನೂ ಮಂಕುಗೊಳಿಸುತ್ತವೆ. ಬ್ರಿಟಿಷ್ ಆಡಳಿತದಿಂದ ಬಿಡುಗಡೆ ಹೊಂದಲು ಹೂಡಿದ ನಮ್ಮ ತೀಕ್ಷ್ಣ ಹೋರಾಟಗಳಲ್ಲೂ ಕೂಡ ನಾವು ಬ್ರಿಟಿಷ್ ರಾಜಕೀಯ ಮಾದರಿಯನ್ನೇ ಅನುಸರಿಸಿದ್ದರಿಂದ ಅವರ ಬಂಧನದಲ್ಲಿಯೇ ಉಳಿದೆವು.

ಇಲ್ಲಿಯೂ ನಮಗೊಂದು ತೊಂದರೆಯಿದೆ. ಬ್ರಿಟನ್ನಿನ ಸರಿಯಾದ ಜ್ಞಾನವಿಲ್ಲದೆ ಇಂಗ್ಲಿಷ್ ಶಿಕ್ಷಣವನ್ನು ಅದರ ಸರಿಯಾದ ಹಿನ್ನೆಲೆಯಲ್ಲಿ ಇಡಲಾರದಾಗಿದ್ದೇವೆ. ಅಲ್ಲಿಯ ಸಮಾಜಕ್ಕೆ ಅನ್ವಯಿಸಿ ನಾವು ಅದನ್ನು ಎಂದೂ ನೋಡಿಲ್ಲವಾದುದರಿಂದ ಅದರ ಭಾರತೀಯ ಪ್ರತಿರೂಪ, ಭಾರತೀಯ ಜೀವನದೊಡನೆ ಹೊಂದಿಕೊಳ್ಳುವ ಹಾದಿಯನ್ನು ನಾವು ಕಾಣದಾಗಿದ್ದೇವೆ. ಆದಾಗ್ಯೂ ಇದು ಅತ್ಯಂತ ಮಹತ್ವದ ಪ್ರಶ್ನೆ. ಕೆಲವೊಂದು ಇಂಗ್ಲಿಷ್ ಶಾಲೆ ಇಲ್ಲವೆ ಕಾಲೇಜುಗಳಲ್ಲಿ ಗೊತ್ತುಪಡಿಸಿದ ಪಠ್ಯಪುಸ್ತಕಗಳ ಮತ್ತು ಅಲ್ಲಿ ಪಾಲಿಸುತ್ತಿರುವ ನಿಯಮಗಳ ಮೇಲಿಂದ ಇಂಥ ಪ್ರಶ್ನೆಗಳನ್ನು ಚರ್ಚಿಸುವುದು ವೇಳೆಯ ದುರುಪಯೋಗವೇ ಸರಿ.

ಒಂದು ಸಂಘವನ್ನು ಕಟ್ಟುವುದರಿಂದ, ಒಂದು ಸಮಿತಿಯನ್ನು ನಿಯಮಿಸುವುದರಿಂದ, ಏನಾದರೂ ಸಾಧಿಸಬಹುದೆಂಬ ವಿಚಾರ ನಮ್ಮಲ್ಲಿ ಗಟ್ಟಿಯಾಗಿ ಬೇರೂರಿದಂತೆ ತೋರುತ್ತದೆ. ತಮ್ಮ ಪರವಾಗಿ ಪ್ರಾರ್ಥನಾಚಕ್ರವನ್ನು ತಿರುಗಿಸಲು ಲಾಮಾನಿಗೆ ಬಾಡಿಗೆ ಕೊಟ್ಟು ಹಚ್ಚಿ, ಅದರಿಂದ ಸ್ವರ್ಗದಲ್ಲಿ ತಮಗೆ ಪುಣ್ಯ ದೊರೆಯುವುದೆಂದು ನಂಬಿರುವ ಟಿಬೇಟಿನ ಜನರನ್ನು ನಾವು ಈ ವಿಷಯದಲ್ಲಿ ಹೋಲುತ್ತೇವೆ. ಬಹಳ ದಿವಸದ ಹಿಂದೆಯೇ ವಿಜ್ಞಾನ ಸಂಘವನ್ನು ಸ್ಥಾಪಿಸಿ, ಈಗ ನಮ್ಮ ದೇಶ ವಿಜ್ಞಾನದಲ್ಲಿ ಆಸ್ಥೆವಹಿಸುತ್ತಿಲ್ಲವೆಂದು ವರುಷವರುಷವೂ ನಾವು ಗೋಳಿಡುತ್ತಿದ್ದೇವೆ. ವಿಜ್ಞಾನ ಸಂಘವನ್ನು ಸ್ಥಾಪಿಸಿಬಿಟ್ಟರೆ, ಜನರನ್ನು ವಿಜ್ಞಾನದಲ್ಲಿ ಆಸಕ್ತಿವಹಿಸಲು ಹಚ್ಚಿದಂತೆಯೇ ಎಂದು ನಾವು ತಿಳಿದಿದ್ದೇವೆ. ಅದರ ಸ್ಥಾಪನೆಯಾದ ಕೂಡಲೇ ದೇಶ ಸಾವಿರಾರು ವಿಜ್ಞಾನಿಗಳನ್ನು ತಯಾರಿಸುತ್ತದೆಯೆಂದು ಭಾವಿಸುವುದು, ಈ ಯುಗದಲ್ಲಿ ಯಂತ್ರಪೂಜೆಗೆ ನಾವು ಎಷ್ಟು ಅಂಟಿಕೊಂಡಿದ್ದೇವೆಂಬುದನ್ನು ತೋರಿಸುತ್ತದೆ.

ಜನತೆ ಆಸ್ಥೆವಹಿಸುವಂತೆ ಮಾಡುವುದು ಮುಖ್ಯ ಕೆಲಸ. ಅದಿಷ್ಟಾದರೆ, ನಮ್ಮ ಪ್ರಯತ್ನಕ್ಕೆ ಸಂಪೂರ್ಣ ಫಲ ದೊರೆಯುತ್ತದೆ. ಹಿಂದಿನ ಕಾಲದ ನಮ್ಮ ಜನ ತಾವು ಕಲಿತ ವಿದ್ಯೆಯಲ್ಲಿ ಸಂಪೂರ್ಣ ಆಸಕ್ತಿ ವಹಿಸುತ್ತಿದ್ದರಲ್ಲ, ಅದು ಹೇಗೆ? ಈ ಪ್ರಶ್ನೆಯನ್ನು ನಾವು ಸ್ವಲ್ಪ ಗಂಭೀರವಾಗಿಯೇ ವಿಚಾರಿಸಬೇಕಾಗಿದೆ. ಕೆಲವರು ವಿದೇಶೀ ವಿಶ್ವವಿದ್ಯಾಲಯದ ಕ್ಯಾಲೆಂಡರು (ದಾಖಲೆಯ ಪುಸ್ತಕ)ಗಳನ್ನು ಅವು ನಿಜಕ್ಕೂ ಸಂತೋಷದಾಯಕವಾಗಿವೆಯೆಂಬುದನ್ನು ತೋರಿಸಲಿಕ್ಕೆ ಎಷ್ಟೊಂದು ತತ್ವನಿಷ್ಠೆಯಿಂದ ಅಭ್ಯಾಸ ಮಾಡುತ್ತಾರೆಂಬುದನ್ನು ನಾನು ಬಲ್ಲೆ. ಅವರ ಸಂತೋಷವನ್ನು ಹಾಳುಮಾಡುವ ಇಚ್ಛೆ ನನಗಿಲ್ಲ. ನಮ್ಮ ಶಾಲೆಗಳಲ್ಲಿ ಕಲಿಸಬೇಕಾದ ವಿಷಯಗಳ ಬಗ್ಗೆ ವಿಚಾರಿಸುವುದು ನಿಜಕ್ಕೂ ಮಹತ್ವದ್ದಾಗಿದೆ. ಆದರೆ ವಿದ್ಯಾರ್ಥಿಗಳನ್ನು ತಮ್ಮ ಕಾರ್ಯದಲ್ಲಿ ಸಂಪೂರ್ಣ ಆಸ್ಥೆವಹಿಸುವಂತೆ ಮಾಡುವ ಪ್ರಶ್ನೆಯೂ ಅಷ್ಟೇ ಮಹತ್ವದ್ದಾಗಿದೆ.

ನಮ್ಮ ಸಂಪ್ರದಾಯ ತಿಳಿಸುವಂತೆ ಪ್ರಾಚೀನ ಭಾರತದ ಗುರುಗಳು ಆಶ್ರಮಗಳಲ್ಲಿ ಇರುತ್ತಿದ್ದರು. ಅವರು ನಿಜವಾಗಿಯೂ ಎಂಥವರಾಗಿದ್ದರೆಂಬುದರ ನಿಚ್ಚಳ ಚಿತ್ರವನ್ನು ನಾವು ರೂಪಿಸಲಾರೆವು. ಆದರೆ ಇಷ್ಟು ಮಾತ್ರ ನಿಜ. ಗುರು ಕೌಟುಂಬಿಕ ವ್ಯಕ್ತಿಯಾಗಿದ್ದನು ಮತ್ತು ವಿದ್ಯಾರ್ಥಿಗಳು ಅವನೊಂದಿಗೆ ಮನೆಯವರಾಗಿಯೇ ಇರುತ್ತಿದ್ದರು. ಶಿಕ್ಷಕನೂ ಅವನ ವಿದ್ಯಾರ್ಥಿಗಳೂ ಕೂಡಿಯೇ ಇರಬೇಕೆಂಬ ವಿಚಾರ ಇಂದಿನವರೆಗೂ ನಡೆದುಬಂದಿದೆ. ಧಾರ್ಮಿಕ ಹಿಂದೂ ವಿದ್ಯೆಯನ್ನು ನೀಡುತ್ತಿರುವ ತೋಲ್ ಚತುಷ್ಪಾಠಿ (ಶಾಲೆ ಕಾಲೇಜು)ಗಳಲ್ಲಿ ಕೆಲವು ಸಲ ಈ ರೀತಿಯನ್ನು ಕಾಣುತ್ತೇವೆ.

ಈ ತೋಲ್ ಮತ್ತು ಚತುಷ್ಪಾಠಿಗಳನ್ನು ನೋಡಿದಾಗಲೂ ಪುಸ್ತಕೀಯ ಜ್ಞಾನಕ್ಕೆ ಅವು ಶಿಕ್ಷಣದಲ್ಲಿ ಮಹತ್ವದ ಸ್ಥಾನವನ್ನು ಕೊಟ್ಟಿಲ್ಲದಿರುವುದು ಕಂಡುಬರುತ್ತದೆ. ಅವರ ಸುತ್ತಮುತ್ತು ಸಂಸ್ಕೃತಿಯ ವಾತಾವರಣ ವ್ಯಾಪಿಸಿಕೊಂಡಿರುತ್ತದೆ ಮತ್ತು ಶಿಕ್ಷಕರು ತಮ್ಮ ವೃತ್ತಿಯಲ್ಲಿ ಸಂಪೂರ್ಣ ಮಗ್ನರಾಗಿರುತ್ತಾರೆ. ಮನಸ್ಸನ್ನು ಚಂಚಲಗೊಳಿಸುವ ಯಾವುದೇ ಐಷಾರಾಮವಾಗಲಿ, ಆಶೆ ಆಮಿಷಗಳಾಗಲಿ ಇಲ್ಲದೆ ಅವರು ಸರಳ ಜೀವನವನ್ನು ನಡೆಸುತ್ತಾರೆ. ತಾವು ಕಲಿತದ್ದನ್ನು ಅರಗಿಸಿಕೊಳ್ಳಲು ಅವರಿಗೆ ಸಾಕಾದಷ್ಟು ವೇಳೆ ಹಾಗೂ ಅವಕಾಶವಿರುತ್ತದೆ. ಯುರೋಪಿನ ದೊಡ್ಡ ದೊಡ್ಡ ವಿದ್ಯಾಪೀಠಗಳಲ್ಲಿಯೂ ಈ ವಿಚಾರ ಕಂಡುಬರುತ್ತದೆಂಬ ಸಂಗತಿಯನ್ನು ನಾನಿಲ್ಲಿ ಹೇಳಬಯಸುತ್ತೇನೆ.

ಪ್ರಾಚೀನ ಭಾರತದಲ್ಲಿ ವಿದ್ಯಾರ್ಥಿಯು ತನ್ನ ಗುರುವಿನ ಮನೆಯಲ್ಲಿಯೇ ಇದ್ದು ಬ್ರಹ್ಮಚರ್ಯ ಪಾಲಿಸುವುದು ಅಗತ್ಯವೆಂದು ಗಣಿಸಲಾಗಿದ್ದಿತು.

ಬ್ರಹ್ಮಚರ್ಯವೆಂದರೆ ಕಠಿಣವ್ರತವೆಂದು ಅರ್ಥಮಾಡಬಾರದು. ಅನೇಕ ಜನರ ಹಾಗೂ ಸಂಗತಿಗಳ ಪ್ರಭಾವದಿಂದ, ಸಮಾಜಮಧ್ಯದಲ್ಲಿ ಬೆಳೆಯುವ ಹುಡುಗ ಚಂಚಲಗೊಳ್ಳುತ್ತಾನೆ ಮತ್ತು ಅವನ ನೈಸರ್ಗಿಕ ಬೆಳವಣಿಗೆಗೆ ಅದರಿಂದ ಆತಂಕವೊದಗುತ್ತದೆ. ಅವನ ಭಾವನೆಗಳನ್ನು ಇನ್ನೂ ರೂಪುಗೊಳ್ಳುವ ಕಾಲದಲ್ಲಿಯೇ, ಸುಳ್ಳು ಉತ್ತೇಜನೆಯಿಂದ ಉದ್ರೇಕಗೊಳಿಸಲಾಗುತ್ತದೆ.

ಆಮೇಲೆ ಶಾರೀರಿಕ ಹಾಗೂ ಮಾನಸಿಕ ಶಕ್ತಿಯ ಹ್ರಾಸಕ್ಕೆ ಪ್ರಾರಂಭವಾಗುತ್ತದೆ. ಎಳೆಯತನದ ಸ್ವಭಾವವನ್ನು ಅಡ್ಡಹಾದಿ ಹಿಡಿಯುವ ಎಲ್ಲ ಶಕ್ತಿಗಳಿಂದ ಬೇರ್ಪಡಿಸಬೇಕು. ಬೆಳೆಯುತ್ತಿರುವ ಪುರುಷತ್ವವನ್ನು ಅಪಕ್ವವಾದ ಆಶೆಗಳಿಂದ ಮತ್ತು ಅದರ ಆರೋಗ್ಯಕರವಲ್ಲದ ತೃಪ್ತಿಯಿಂದ ತಿದ್ದುಪಾಟುಗೊಳಿಸಿ ಕಾಪಾಡುವುದೇ ಬ್ರಹ್ಮಚರ್ಯದ ಉದ್ದೇಶವಾಗಿದೆ.

ನಿಜವಾದ ಸಂಗತಿಯೆಂದರೆ, ಹುಡುಗರು ನಿಸರ್ಗದ ಶಿಕ್ಷಣೆಯಲ್ಲಿರಲು ಸಂತೋಷಪಡುತ್ತಾರೆ. ಪೂರ್ಣ ವಿಕಾಸಹೊಂದಲು ಮತ್ತು ಸ್ವಾತಂತ್ರ್ಯದ ನಿಜವಾದ ಆನಂದವನ್ನು ಸವಿಯಲು ಈ ನೇಮ ಅವರಿಗೆ ಸಹಾಯ ಮಾಡುತ್ತದೆ; ಅಲ್ಲದೆ, ಚಿಗುರುತ್ತಿರುವ ಅವರ ಮನಸ್ಸುಗಳ ಬಲದಿಂದ ದೇಹವನ್ನು ಕಾಂತಿಗೊಳಿಸುತ್ತದೆ.

ನಮ್ಮ ಶಾಲೆಗಳಲ್ಲಿ ಈಗ ಬ್ರಹ್ಮಚರ್ಯದ ಸ್ಥಾನವನ್ನು ನೈತಿಕ ಶಿಕ್ಷಣವು ಆಕ್ರಮಿಸಿದ್ದು ಅದನ್ನು ಯಾವುದೇ ಸಂಭಾವ್ಯ ನೆಪದಲ್ಲಾದರೂ ಕೊಡಬೇಕೆಂದು ಪಾಲಕರು ಬಯಸುತ್ತಾರೆ. ಶಕ್ತಿಗುಂದಿದವರಿಗೆ ದಿನವೂ ಸಾರ್ಸಪರಿಲಾ ಕುಡಿಯಲು ಕೊಟ್ಟಂತೆ ಇಲ್ಲವೆ ಕೂಸುಗಳನ್ನು ಬಲಿಷ್ಠಗೊಳಿಸಲು ಕೊಡುವ, ಗೊತ್ತುಪಡಿಸಿದ ಅಳತೆಯ ಆಹಾರದಂತೆ ಇದೂ ಯಾಂತ್ರಿಕವಾಗಿದೆ. ಇದರಿಂದ ಅನೇಕ ತೊಂದರೆಗಳು ಉದ್ಭವಿಸುತ್ತವೆ. ಈ ಬಗೆಯ ನೈತಿಕ ಶಿಕ್ಷಣವನ್ನು ಹುಡುಗರಿಗೆ ಆಕರ್ಷಕವಾಗುವಂತೆ ಮಾಡುವುದು ಸಾಧ್ಯವಿಲ್ಲ. ಇದು ಅವರನ್ನು ನೋಯಿಸುತ್ತದೆ; ಇಲ್ಲವೆ, ಅವರ ಬುದ್ಧಿಗೆ ಮೀರಿದ್ದಾಗಿರುತ್ತದೆ. ಮತ್ತು ನಾವು ಅಪರಾಧಿಗಳೆಂಬ ಭಾವನೆಯನ್ನು ಅವರಲ್ಲಿ ಮೂಡಿಸುತ್ತದೆ. ನೈತಿಕ ಶಿಕ್ಷಣದಿಂದ ವೇಳೆ ಹಾಗೂ ಪ್ರಯತ್ನಗಳೆರಡನ್ನೂ ವ್ಯರ್ಥ ಹಾಳುಮಾಡಿದಂತಾಗುತ್ತದೆಂದು ನಾನು ಭಾವಿಸಿದ್ದೇನೆ. ಒಳ್ಳೆಯ ಜನರೂ ಅದರ ಬಗ್ಗೆ ಆತುರವಾಗಿರುವುದನ್ನು ಕಂಡು ನನಗೆ ಭೀತಿಯೆನಿಸಿದೆ. ಅದು ಅನನುಕೂಲವಾಗಿರುವಷ್ಟೇ ನಿರುಪಯೋಗಿಯೂ ಆಗಿದೆ. ಸಮಾಜಕ್ಕೆ ಇದಕ್ಕೂ ಹೆಚ್ಚಿನ ಹಾನಿಯುಂಟು ಮಾಡುವ ಸಂಗತಿ ಬೇರಾವುದೂ ಇರಲಾರದು.

ಇಂದಿನ ಜಗತ್ತಿನಲ್ಲಿ ನಮ್ಮ ಮಟ್ಟವು ಅಸತ್ಯ ಮತ್ತು ಅಪಾರ್ಥಗಳಿಂದ ದಿನದಿನವೂ ಕೆಳಗಿಳಿಯುತ್ತಿದೆ. ಹೀಗಿರುವಾಗ ಶಾಲೆಯಲ್ಲಿ ಹತ್ತರಿಂದ ನಾಲ್ಕು ಗಂಟೆಯವರೆಗೆ ಕಾಪಿ ಪುಸ್ತಕಗಳಲ್ಲಿಯ ಸೂಕ್ತಿಗಳನ್ನು ಗಿಳಿಪಾಠ ಮಾಡುವುದರಿಂದ ಎಲ್ಲವೂ ಸರಿಹೋಗುತ್ತದೆಂದು ಆಶೆ ಹಿಡಿಯುವುದು ಎಷ್ಟೂ ಸಲ್ಲದು. ಇಂಥ ಭಾವನೆಗಳು ಡಂಭಾಚಾರ ದುರಭಿಮಾನಗಳ ಘೋರ ಮೊಟ್ಟೆಯನ್ನೇ ಹುಟ್ಟಿಸುತ್ತವೆ ಮತ್ತು ಎಳೆಯ ಮನಸ್ಸುಗಳ ಸ್ವಾಭಾವಿಕತೆ ಹಾಗೂ ಚುರುಕುಗಳನ್ನು ನಾಶಮಾಡುತ್ತವೆ.

ಬ್ರಹ್ಮಚರ್ಯವು ಬರಿಯ ಶಿಕ್ಷಣವಷ್ಟನ್ನೇ ಅಲ್ಲದೆ ಶಕ್ತಿಯನ್ನೂ ನೀಡುತ್ತದೆ. ಅದು ನೈತಿಕತೆಯನ್ನು ಜೀವನದ ಬಾಹ್ಯಾಲಂಕಾರವೆಂದು ತಿಳಿಯದೆ ಅದರ ಮುಖ್ಯ ಘಟಕವೆಂದೇ ಭಾವಿಸುತ್ತದೆ. ಬ್ರಹ್ಮಚರ್ಯವನ್ನು ಪಾಲಿಸುವ ವ್ಯಕ್ತಿ ಧರ್ಮವನ್ನು ಅನ್ಯವಿಷಯವೆಂದು ಎಂದೂ ಭಾವಿಸದೆ ಸಹಜವಾಗಿಯೇ ಗೆಳೆಯನಂತೆ ಅದಕ್ಕೆ ಅಂಟಿಕೊಳ್ಳುತ್ತಾನೆ ಮತ್ತು ತನ್ನ ಹೃದಯಕ್ಕೆ ಅದನ್ನು

ಹತ್ತಿರವಾಗಿಸುತ್ತಾನೆ ಹುಡುಗರ ಮನಸ್ಸು ಮತ್ತು ಶೀಲವನ್ನು ರೂಪಿಸುವಲ್ಲಿ ಬೇಕಾದುದು ನೈತಿಕ ಶಿಕ್ಷಣವಲ್ಲ; ಸ್ನೇಹದಿಂದ ಕೂಡಿದ ಮಾರ್ಗದರ್ಶನ ಹಾಗೂ ಹಿತವಾದ ವಾತಾವರಣ.

ಬ್ರಹ್ಮಚರ್ಯವನ್ನು ಆಚರಿಸುವುದರ ಜೊತೆಗೆ ವ್ಯಕ್ತಿ ನಿಸರ್ಗದ ಮಡಿಲಲ್ಲಿ ಜೀವಿಸಬೇಕು. ಪಟ್ಟಣಗಳು ನಮ್ಮ ಸ್ವಾಭಾವಿಕ ವಾಸಸ್ಥಳಗಳಲ್ಲ. ನಮ್ಮ ಭೌತಿಕ ಅವಶ್ಯಕತೆಗಳನ್ನು ಪೂರೈಸಲು ಅವುಗಳನ್ನು ಕಟ್ಟಲಾಗಿದೆ. ನಾವು ಪಟ್ಟಣಗಳಲ್ಲಿ ಹುಟ್ಟಿ ಕಲ್ಲು ಇಟ್ಟಿಗೆಗಳ ಹಾಸಿನಲ್ಲಿ ಬೆಳೆಯಬೇಕೆಂದು ದೇವರು ಎಂದೂ ಇಚ್ಛಿಸಿರಲಿಲ್ಲ. ಪಟ್ಟಣಗಳು ನಮ್ಮನ್ನು ನಿಸರ್ಗದ ಮಡಿಲಿನಿಂದ ಎಳೆದೊಯ್ದು, ತಮ್ಮ ಹಸಿವೆಯ ಹಂಚಿನಲ್ಲಿ ಬೇಯಿಸಿ ತಿಂದುಬಿಡುತ್ತವೆ. ನಗರಗಳಲ್ಲಿ ವಾಸಿಸುವ ಜನರು ತಮ್ಮ ಕೆಲಸದಲ್ಲಿಯೇ ಮುಳುಗಿ, ತಮ್ಮ ಬಾಳಿನಲ್ಲಿ ಏನನ್ನೋ ಕಳೆದುಕೊಳ್ಳುತ್ತಿದ್ದೇವೆಂಬ ಭಾವನೆಯೂ ಅವರಿಗೆ ಬರದೆ ಹೋಗುತ್ತದೆ. ಮೊದಲೇ ನಿಸರ್ಗದಿಂದ ದೂರ ಸರಿದಿರುವುದಲ್ಲದೆ, ಅವರು ಬೃಹದ್ ವಿಶ್ವದಿಂದ ದಿನದಿನವೂ ಇನ್ನಿಷ್ಟು ಇನ್ನಿಷ್ಟು ದೂರವಾಗುತ್ತಾರೆ.

ಆದರೆ, ನಾವಿನ್ನೂ ಬೆಳೆಯುವ ದಿಸೆಯಲ್ಲಿರುವಾಗ, ಇನ್ನೂ ಕಲಿಯುತ್ತಿರುವಾಗ, ಹಾಗೂ ಜೀವನದ ನಾನಾ ಸುಳಿಗಳ ತಿರುಗಣೆ ಮಡುವಿನಲ್ಲಿ ಬೀಳುವ ಮೊದಲು, ನಿಸರ್ಗದ ಸಹಾಯ ನಮಗೆ ಅತ್ಯಗತ್ಯ. ಗಿಡಮರಗಳು, ಹಳ್ಳಹೊಳೆಗಳು, ನೀಲಾಕಾಶ ಮತ್ತು ಸುಂದರ ದೃಶ್ಯಗಳು, ಇವು ಕರಿಯಹಲಗೆ, ಬೆಂಚು, ಪುಸ್ತಕಗಳು ಮತ್ತು ಪರೀಕ್ಷೆಗಳಷ್ಟೇ ಅವಶ್ಯಕ ವಸ್ತುಗಳಾಗಿವೆ.

ಪುರಾತನ ಕಾಲದಿಂದಲೂ ಭಾರತೀಯನ ಮನಸ್ಸು ನಿಸರ್ಗದೊಡನೆ ನಿರಂತರ ಸಂಬಂಧವಿಟ್ಟುಕೊಂಡೇ ವಿಕಾಸಗೊಳ್ಳುತ್ತ ಬಂದಿದೆ. ಪ್ರಾಣಿ ಹಾಗೂ ವನಸ್ಪತಿ ಜೀವನದೊಡನೆ ಒಂದಾಗಿ ಬಾಳಬೇಕೆಂಬ ಬಯಕೆ ಭಾರತೀಯ ಚೇತನದಲ್ಲಿ ಪರಂಪರಾಗತವಾಗಿ ಬಂದಿದೆ. ಪ್ರಾಚೀನ ಭಾರತದ ವಟುಗಳು ಹೀಗೆ ಮಂತ್ರಪಠನ ಮಾಡುತ್ತಿದ್ದರು :

ಬೆಂಕಿಯಲಿ, ನೀರಿನಲಿ, ಗಿಡವನಸ್ಪತಿಗಳಲಿ
ಜಗದಲ್ಲಿ, ವಿಶ್ವದಲಿ ಅಂತಸ್ಥನೇ
ನಮಿಸುವೆವು, ನಮಿಸುವೆವು ಓ ದೇವನೆ !

ನೆಲ, ನೀರು, ಗಾಳಿ, ಬೆಂಕಿ ಈ ನಾಲ್ಕು ಮೂಲಭೂತಗಳು ಕೂಡಿ ಒಂದು ಇಡಿಯಾಗಿದ್ದು ಅವು ವಿಶ್ವಾತ್ಮನ ಅಂತಃಸ್ಫೂರ್ತಿಯಾಗಿವೆ. ಪಶ್ಚಿಮದಲ್ಲಿ ಕಲಿಯುವ ಹುಡುಗರಿಗೆ ಈ ಜ್ಞಾನ ದೊರೆಯಲಾರದು. ಅವರು ಕಲಿಯುವ ಶಾಲೆ ಒಂದು ಕಾರ್ಖಾನೆ; ಜಗತ್ತನ್ನು ಒಂದು ಯಂತ್ರದಂತೆ ಭಾವಿಸಲು ಮಾತ್ರ ಅದು ಕಲಿಸಬಲ್ಲುದು.

ವ್ಯಾವಹಾರಿಕ ಜನರು ಈ ಬಗೆಯ ವಿಚಾರವನ್ನು ರಹಸ್ಯವಾದವೆಂದೋ ಇಲ್ಲವೆ ಕಣ್ಣಿಗೆ ಮಣ್ಣೆರಚುವ ಕಾರ್ಯವೆಂದೋ ತಳ್ಳಿಹಾಕಿಬಿಡುತ್ತಾರೆ. ಆದರೆ ಹುಡುಗರ ಶರೀರ ಹಾಗೂ ಮನಸ್ಸಿನ ಸರಿಯಾದ ಬೆಳವಣಿಗೆಗೆ ನೀಲಾಕಾಶ ಮತ್ತು ಗಾಳಿ, ಗಿಡಗಳು ಮತ್ತು ಹೂವುಗಳು ಅಗತ್ಯವಾದವುಗಳೆಂಬುದನ್ನು ಅವರೂ ಕೂಡ ಅಲ್ಲಗಳೆಯಲು ಸಾಧ್ಯವಿಲ್ಲ. ನಾವು ಬೆಳೆದು

ದೊಡ್ಡವರಾಗಿ ನಗರವೊಂದರ ಆಫೀಸಿನಲ್ಲಿ ದುಡಿಯುತ್ತ ಕಾರ್ಯಭಾರದಲ್ಲಿ ಮುಳುಗಿ ಏಳುತ್ತಿರುವಾಗ ನಿಸರ್ಗದ ಸಾಮೀಪ್ಯ ಸಂಪರ್ಕದಲ್ಲಿರುವುದು ಸಾಧ್ಯವಾಗದು. ಆದ್ದರಿಂದ ನಾವಿನ್ನೂ ಚಿಕ್ಕವರಿರುವಾಗಲೇ ಪ್ರಕೃತಿಯ ಪ್ರಭಾವದಲ್ಲಿರುವುದು ಇನ್ನೂ ಅಗತ್ಯವಾಗಿದೆ. ನಮ್ಮ ಮನಸ್ಸು ಆಗ ಹೊಸ ಹುರುಪಿನಲ್ಲಿ ಕಲಿಯಲು ಉತ್ಸುಕವಾಗಿರುತ್ತದಲ್ಲದೆ ನಮ್ಮ ಇಂದ್ರಿಯಗಳೂ ಶಕ್ತಿಯುತವಾಗಿರುತ್ತವೆ. ನಮ್ಮ ತಾಯಂದಿರ ಮೊಲೆಹಾಲಿನಿಂದ ಪೋಷಣೆ ಪಡೆದಂತೆ ನೆಲ, ನೀರು, ಗಾಳಿ, ಆಕಾಶಗಳಿಂದಲೂ ನಾವು ಜೋಪಾನಗೊಂಡರೆ ಮಾತ್ರ ಪೂರ್ಣಪೌರುಷದಿಂದ ಬೆಳೆಯಬಲ್ಲೆವು. ಆದ್ದರಿಂದ ತೆರೆದ ಬಾನಿನ ಕೆಳಗೆ ಬಿಸಿಲು ಮೋಡಗಳ ಆಡುಂಬೊಲವಾದ ಬಯಲಿನಲ್ಲಿ ಮಕ್ಕಳು ಆಟವಾಡಲಿ. ಪರಮಾತ್ಮ ಸ್ವರೂಪಿಯಾದ 'ಭೂಮ'ದಿಂದ ಅವರನ್ನು ಅಗಲಿಸುವುದು ಬೇಡ. ಸೂರ್ಯನು ತನ್ನ ಬಂಗಾರ ಕಿರಣಗಳಿಂದ ದಿವಸದ ಬಾಗಿಲನ್ನು ತೆರೆಯುವುದನ್ನು ಅವರು ಕಣ್ಣಾರೆ ಕಾಣಲಿ. ಸಂಜೆಯ ಪ್ರಶಾಂತ ಶಾಂತಿ ಇರುಳಿನ ನಕ್ಷತ್ರ ಖಚಿತ ಕತ್ತಲೆಯಲ್ಲಿ ಮುಳುಗುವುದನ್ನು ನೋಡಲಿ, ವರುಷದ ಆರು ಋತುಗಳ ಮೂಲಕ ಪ್ರಕೃತಿ ಆಡುವ ಆರಂಕದ ಸಂಗೀತ ರೂಪಕವನ್ನು ಅವರು ನಿರೀಕ್ಷಿಸಲಿ. ಗುಡುಗಿನ ಗರ್ಜನೆಯನ್ನವರು ಕೇಳಲಿ, ಮಳೆ ಸುರಿಯುವ ಮುನ್ನ ಕಾರ್ಮೋಡಗಳು ಹಿಂಡುಗಟ್ಟಿ ಕಾಡನ್ನೆಲ್ಲ ಕತ್ತಲೆಗೊಳಿಸುವುದನ್ನು ಕಾಣಲಿ. ಮಳೆ ನಿಂತ ಮೇಲೆ ಹನಿಗೊಂಡ ಹಸುರು ಹೊಲಗಳು ಗಾಳಿಯಲ್ಲಿ ತೆರೆಯಾಡುವುದನ್ನು, ಕ್ಷಿತಿಜದಂಚಿನವರೆಗೆ ಅವು ಕಾಳುಗಳಿಂದ ತುಂಬಿ ತೂಗುವುದನ್ನು ಮಕ್ಕಳು ಕಣ್ತುಂಬ ನೋಡಲಿ.

ಬೆಳವಣಿಗೆಯ ಕಾಲದಲ್ಲಿ ಮನಸ್ಸಿಗೆ ಸ್ವಾತಂತ್ರ್ಯ ಅತ್ಯವಶ್ಯ. ನಿಸರ್ಗ ಅದನ್ನು ಸಾಕಾದಷ್ಟು ದೊರಕಿಸಿಕೊಡುತ್ತದೆ. ಪೋಲೀಸ್ ಸ್ಟೇಷನ್ನಿಗೆ ಹೋಗಿ ಹಾಜರಿ ಕೊಟ್ಟು ಬರುವ ಅನುಮಾನದ ವ್ಯಕ್ತಿಯಂತೆ ಶಾಲೆಯಲ್ಲಿ ಹಾಜರಿ ಹಾಕುವ ಹೊತ್ತಿಗೆ ಹೋಗುವ ಅವಸರದಲ್ಲಿರುತ್ತಾರೆ ನಮ್ಮ ಹುಡುಗರು. ಇದಕ್ಕಾಗಿ ಮುಂಜಾನೆ ಹತ್ತು ಗಂಟೆಯ ಒಳಗೆ ಊಟ ಮುಗಿಸಿ ಓಡುವ ಹುಡುಗನು ಆರೋಗ್ಯದಿಂದ ಬೆಳವಣಿಗೆ ಹೊಂದಲು ಸಾಧ್ಯವಿಲ್ಲ. ಶಿಕ್ಷಣವನ್ನು ಗೋಡೆಗಳ ನಡುವಿರಿಸಿ, ಬಾಗಿಲು ಬಂದುಮಾಡಿ, ಕಾವಲುಗಾರನನ್ನಿಟ್ಟು ಎಳೆಯ ಮಕ್ಕಳಿಗೆ ನಾವು ಎಂಥ ಕಷ್ಟವನ್ನು ಕೊಡುತ್ತೇವೆ ! ಈ ಜಗತ್ತಿನಲ್ಲಿ ಹುಟ್ಟುವ ಮೊದಲೇ ಅಂಕಗಣಿತದ ಲೆಕ್ಕಗಳನ್ನೂ ಇತಿಹಾಸದ ಇಸವಿಗಳನ್ನೂ ಅವರು ಕಲಿತುಕೊಂಡು ಬರಲಿಲ್ಲವೆಂದು ಅವರಿಗೆ ದೋಷಾರೋಪಣೆ ಮಾಡಬಹುದೆ ? ಗಾಳಿ ಬೆಳಕು ಸ್ವಾತಂತ್ರ್ಯ ಸಂತೋಷಗಳನ್ನು ಅವರಿಗೆ ಇಲ್ಲದಂತೆ ಮಾಡಿ ಅವರಿಗೆ ಕೊಡಬೇಕಾದ ಶಿಕ್ಷಣವನ್ನು ಪ್ರತಿಯೊಂದು ರೀತಿಯಲ್ಲಿಯೂ ಶಿಕ್ಷೆಯನ್ನಾಗಿ ಪರಿವರ್ತಿಸುವುದು ಯಾವ ಕಾರಣಕ್ಕಾಗಿ ? ಬೆಳೆ ಬೆಳೆದಂತೆ ಹಂತಹಂತವಾಗಿ ಜ್ಞಾನಾರ್ಜನೆಯ ಸಂತೋಷ ಅವರಿಗೆ ಉಂಟಾಗಲೆಂದೇ ಮಕ್ಕಳು ಅಜ್ಞಾನಿಗಳಾಗಿ ಹುಟ್ಟಿರುತ್ತಾರೆ. ಶಿಕ್ಷಣವನ್ನು ಆನಂದಮಯ ವಿಷಯವನ್ನಾಗಿ ಮಾಡುವಲ್ಲಿ ನಾವು ತೀರ ಅಸಮರ್ಥ-ರಾಗಿರಬಹುದು. ಆದರೆ ಶಾಲೆಗಳನ್ನು ಸೆರೆಮನೆಗಳನ್ನಾಗಿ ಮಾಡುವಷ್ಟು ನಾವು ಕ್ರೂರರಾಗಬಾರದು. ಮಕ್ಕಳು ನಿಸರ್ಗದ ಸ್ವತಂತ್ರ ವಾತಾವರಣದಲ್ಲಿ ಶಿಕ್ಷಣ ಹೊಂದಬೇಕೆಂದು

ದೇವರ ಇಚ್ಛೆ. ಅವನ ಬಯಕೆಯನ್ನು ಭಂಗಪಡಿಸುವುದರಿಂದ ನಾವು ನಮ್ಮನ್ನೇ ಸೋಲಿಸಿಕೊಂಡಂತಾಗುತ್ತದೆ. ಆದ್ದರಿಂದ ಅನುಕಂಪಕ್ಕಾದರೂ ನಾವು ಸೆರೆಯ ಗೋಡೆಗಳನ್ನು ಕೆಡಹೋಣ. ಮಕ್ಕಳನ್ನು ಇನ್ನು ಮೇಲಾದರೂ ಕಠಿಣ ಶಿಕ್ಷೆ ಕೊಟ್ಟು ಸೆರೆಯಲ್ಲಿಡುವುದು ಬೇಡ. ಏಕೆಂದರೆ ಅವರು ಹುಟ್ಟುವ ಮೊದಲೇ ಪಂಡಿತರಾಗಿರಲಿಲ್ಲ.

ಪ್ರಾಚೀನ ಭಾರತದ ಶಿಕ್ಷಣದ ತತ್ವಗಳನ್ನು ನಾವು ಅನುಕರಿಸಬೇಕೆಂಬುದು ನನ್ನ ಅಭಿಪ್ರಾಯವಾಗಿದೆ. ವಿದ್ಯಾರ್ಥಿಗಳು ಮತ್ತು ಶಿಕ್ಷಕರು ನೈಸರ್ಗಿಕ ಆವರಣದಲ್ಲಿ ಕೂಡಿ ವಾಸಿಸಬೇಕು. ಬ್ರಹ್ಮಚರ್ಯವನ್ನಾಚರಿಸುತ್ತ ವಿದ್ಯಾರ್ಥಿಗಳು ತಮ್ಮ ವಿದ್ಯಾರ್ಜನೆಯನ್ನು ಮುಗಿಸಬೇಕು. ಕಾಲಕಾಲಕ್ಕೆ ನಮ್ಮ ಸುತ್ತು ಮುತ್ತಿನ ಪರಿಸ್ಥಿತಿ ಎಷ್ಟೇ ಬದಲಾವಣೆಗೊಂಡಿದ್ದರೂ, ಮಾನವ ಸ್ವಭಾವದ ನಿತ್ಯಸತ್ಯಗಳ ಮೇಲೆ ನಿಂತ ಈ ತತ್ವಗಳು ತಮ್ಮ ವೈಶಿಷ್ಟ್ಯವನ್ನೇನೂ ಕಳೆದುಕೊಂಡಿಲ್ಲ.

ಮಾದರಿಯಾಗಿ ನಿಲ್ಲಬಲ್ಲ ಶಾಲೆಯನ್ನು ಕಟ್ಟಬೇಕೆಂದರೆ ಅದು ನಗರದ ಗಡಿಬಿಡಿ ಗದ್ದಲಗಳಿಂದ ದೂರವಿರುವ ಶಾಂತ ಸ್ಥಳದಲ್ಲಿ ಸ್ಥಾಪಿತವಾಗಿರಬೇಕು. ಅಲ್ಲದೆ ತೆರೆದ ಬಾನು, ಹೊಲಗಳು, ಗಿಡಗಳು, ಇಂಥ ನೈಸರ್ಗಿಕ ಅನುಕೂಲತೆಗಳನ್ನು ಪಡೆದುದ್ದಾಗಿರಬೇಕು. ಶಿಕ್ಷಕರೂ ವಿದ್ಯಾರ್ಥಿಗಳೂ ವಿದ್ಯಾವ್ಯಾಸಂಗದಲ್ಲಿ ತನ್ಮಯರಾಗಿರಬೇಕಾದರೆ ಏಕಾಂತ ಸ್ಥಾನವೇ ಬೇಕು.

ಸಾಧ್ಯವಾದರೆ ಅಲ್ಲಿ ಒಂದಿಷ್ಟು ಭೂಮಿ ಇರಬೇಕು. ಅಂದರೆ ವಿದ್ಯಾರ್ಥಿಗಳು ಅದನ್ನು ಕೃಷಿಗೊಳಿಸಲು ಸಹಾಯ ನೀಡಬಹುದು. ಅದರಿಂದ ಶಾಲೆಗೆ ಆಹಾರಧಾನ್ಯವೂ ದೊರೆಯಬಹುದು. ಹಾಲು ಪೂರೈಸಲು ಅಲ್ಲಿ ಆಕಳುಗಳು ಇರಬೇಕು ಮತ್ತು ಅವುಗಳನ್ನು ಜೋಪಾನ ಮಾಡುವುದರಲ್ಲಿ ವಿದ್ಯಾರ್ಥಿಗಳೂ ಪಾಲುಗೊಳ್ಳಬೇಕು. ಅಭ್ಯಾಸವಿಲ್ಲದಿರುವಾಗ ವಿದ್ಯಾರ್ಥಿಗಳು ತೋಟದಲ್ಲಿ ಮಡಿಮಾಡುತ್ತ, ಸಸಿಗಳಿಗೆ ನೀರುಣಿಸುತ್ತ, ಬೇಲಿಯನ್ನು ಸರಿಪಡಿಸುತ್ತ, ಕೆಲಸ ಮಾಡುತ್ತಿರಬೇಕು. ಹೀಗಿರುವಾಗ ಮಾನಸಿಕವಾಗಿಯೂ ಶಾರೀರಿಕವಾಗಿಯೂ ನಿಸರ್ಗದೊಡನೆ ಅವರ ಸಂಬಂಧವೇರ್ಪಡುತ್ತದೆ.

ಹವಾಮಾನ ಅನುಕೂಲವಿದ್ದಾಗ ಮರಗಳ ನೆರಳಿನಲ್ಲಿಯೇ ವರ್ಗಗಳನ್ನು ತೆರೆಯಬೇಕು. ಗಿಡಗಳ ಸಾಲಿನಲ್ಲಿ ಅಡ್ಡಾಡಿಕೊಂಡು ಬರುತ್ತಿರುವಾಗ, ವಿದ್ಯಾರ್ಥಿ ಶಿಕ್ಷಕರ ನಡುವೆ ಚರ್ಚೆಯ ರೂಪದಲ್ಲಿ ಕೆಲವೊಂದು ವಿಷಯ ಕಲಿಸಬೇಕು. ಸಂಜೆಯ ಬಿಡುವಿನಲ್ಲಿ ವಿದ್ಯಾರ್ಥಿಗಳು ನಕ್ಷತ್ರಗಳನ್ನು ನಿರೀಕ್ಷಿಸಬೇಕು, ಸಂಗೀತಸಾಧನೆ ಮಾಡಬೇಕು ಮತ್ತು ಪೌರಾಣಿಕ ಹಾಗೂ ಐತಿಹಾಸಿಕ ಕಥೆಗಳನ್ನು ಕೇಳಬೇಕು.

ತಪ್ಪು ಮಾಡಿದ ವಿದ್ಯಾರ್ಥಿಯು ಹಿಂದೆ ನಮ್ಮ ದೇಶದಲ್ಲಿ ರೂಢಿಯಾಗಿದ್ದಂತೆ ತನ್ನ ತಪ್ಪಿಗೆ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು. ಶಿಕ್ಷೆ ವಿಧಿಸುವುದು ತಪ್ಪು ಮಾಡಿದವನ ಮೇಲೆ ಸೇಡು ತೀರಿಸಿಕೊಂಡಂತೆ. ಆದರೆ ಪ್ರಾಯಶ್ಚಿತ್ತಮಾಡಿಕೊಳ್ಳುವುದಾಗಲಿ ಪರಿಹಾರ ಕೊಡುವುದಾಗಲಿ ತಪ್ಪಿತಸ್ಥನೇ ಸ್ವಯಂಪ್ರೇರಣೆಯಿಂದ ಕೈಗೊಳ್ಳುವುದಾಗಿದೆ. ಪ್ರಾಯಶ್ಚಿತ್ತವು ನಮಗೆ ನಾವೇ

ಸಲ್ಲಿಸಬೇಕಾದ ಕರ್ತವ್ಯವೆಂಬುದನ್ನು ನಾವೆಲ್ಲರೂ ನಮ್ಮ ಜೀವನದಲ್ಲಿ ಆದಷ್ಟು ಬೇಗ ಕಲಿಯಬೇಕಾಗಿದೆ. ತಪ್ಪನ್ನು ಸಂಪೂರ್ಣ ನಿವಾರಿಸಿಕೊಳ್ಳಬೇಕಾದರೆ ಅದಕ್ಕೆ ಇದೊಂದೇ ಮಾರ್ಗ. ಒಬ್ಬ ಮನುಷ್ಯನು ಇನ್ನೊಬ್ಬ ಮನುಷ್ಯನನ್ನು ಶಿಕ್ಷಿಸುವುದೆಂದರೆ ಅವನ ತೇಜೋಭಂಗ ಮಾಡಿದಂತೆ.

ಈ ಸಂದರ್ಭದಲ್ಲಿ ಹೇಳಬೇಕಾದ ಬೇರೊಂದು ಮಾತೂ ಉಂಟು. ನಮ್ಮ ಮಾದರಿಯ ಶಾಲೆಗಳಲ್ಲಿ ಮೇಜು, ಕುರ್ಚಿ, ಬೆಂಚುಗಳು ಏಕಿರಬೇಕೊ ನನಗೆ ತಿಳಿಯದು. ಯುರೋಪಿನ ಪದ್ಧತಿಯ ಬಗ್ಗೆ ಪೂರ್ವಗ್ರಹದಿಂದ ನಾನು ಇದನ್ನು ಹೇಳುತ್ತಿದ್ದೇನೆಂದು ಯಾರೂ ಭಾವಿಸಕೂಡದು. ಅಮುಖ್ಯವಾದುದೆಲ್ಲವನ್ನು ವರ್ಜಿಸಿಬಿಡಬೇಕೆಂಬ ತತ್ವ ನನ್ನ ಮನಸ್ಸಿನಲ್ಲಿದೆ. ನಮ್ಮ ಶಾಲೆಗಳಲ್ಲಿ ಈ ತತ್ವವನ್ನು ಎಲ್ಲ ರೀತಿಯಿಂದಲೂ ಎತ್ತಿ ಹಿಡಿಯುವಂತೆ ಮಾಡುವ ಬಯಕೆ ನನಗಿದೆ. ಮೇಜು, ಕುರ್ಚಿ, ಬೆಂಚುಗಳನ್ನು ಇಟ್ಟುಕೊಳ್ಳುವುದು ನಮಗೆಲ್ಲರಿಗೂ ಸಾಧ್ಯವಿಲ್ಲ. ಆದರೆ ಕೂಡಲು ನೆಲ ಎಲ್ಲರಿಗೂ ಇದ್ದೇ ಇದೆ. ಕುರ್ಚಿಬೆಂಚುಗಳು ನೆಲದ ಉಪಯೋಗ ಮಾಡಿಕೊಳ್ಳುವುದನ್ನು ತಪ್ಪಿಸಿಬಿಡುತ್ತವೆ. ನಮ್ಮದು ಶೀತದೇಶವೇನೂ ಅಲ್ಲ. ಅಲ್ಲದೆ ನಮ್ಮ ಬಟ್ಟೆಬರೆಗಳು ನೆಲದ ಮೇಲೆ ಕೂಡಲು ಅನುಕೂಲವಾಗಿವೆ. ಅದಾಗ್ಯೂ ನಾವು ಪರದೇಶದ ಪದ್ಧತಿಯನ್ನು ಅನುಕರಿಸುವುದರಲ್ಲಿ ತೀರ ಉತ್ಸುಕರಾಗಿದ್ದೇವೆ. ತೀರ ಅನಾವಶ್ಯಕವೆಂದು ಕಂಡುಬಂದ ಮೇಜು ಕುರ್ಚಿಗಳನ್ನು ನಿರ್ಮಿಸುತ್ತೇವೆ. ನಿಜಕ್ಕೂ ಉಪಯೋಗವಿಲ್ಲದ ವಸ್ತುಗಳನ್ನು ಅವಶ್ಯವಾದವುಗಳೆಂದು ನಾವು ಎಷ್ಟೆಷ್ಟು ಭಾವಿಸುತ್ತೇವೆಯೋ ಅಷ್ಟಷ್ಟು ನಮ್ಮ ಶಕ್ತಿಯನ್ನು ಹ್ರಾಸಗೊಳಿಸಿದಂತೆಯೇ.

ಶ್ರೀಮಂತವಾದ ಯುರೋಪ್ ಖಂಡದಂತೆ ನಮ್ಮ ದೇಶ ಸಂಪನ್ಮೂಲಗಳನ್ನು ಪಡೆದಿಲ್ಲ. ಯುರೋಪಿನವರಿಗೆ ಅಗ್ಗವಾಗಿರುವ ಸಾಮಾನುಗಳು ನಮಗೆ ತೀರ ತುಟ್ಟಿಯಾಗಿರುತ್ತವೆ. ನಾವು ಕೈಕೊಂಡಿರುವ ಯಾವುದೊಂದು ಸಾರ್ವಜನಿಕ ಕಲ್ಯಾಣದ ಕೆಲಸದ ಬಗ್ಗೆ ಯೋಜನೆಯನ್ನು ತಯಾರಿಸುವಾಗ ಮನೆ, ಮೇಜು, ಕುರ್ಚಿ ಮೊದಲಾದ ಆರಂಭದ ಸಂಗತಿಗಳ ಬಗ್ಗೆ ಹೆಚ್ಚು ಲಕ್ಷ್ಯವಹಿಸುತ್ತೇವೆ. ನೋಡಿದರೆ ಅವು ಅನವಶ್ಯವಾದವುಗಳು. ಆದರೂ ಅವುಗಳಿಗೆ ಬೀಳುವ ಬೆಲೆ ಮುಂತಾದುದರ ಬಗ್ಗೆ ನಾವು ತಲೆ ಕೆಡಿಸಿಕೊಳ್ಳುತ್ತೇವೆ. ಮಣ್ಣಿನ ಜೋಪಡಿಯಲ್ಲಿಯೇ ನಮ್ಮ ಕಾರ್ಯ ಪ್ರಾರಂಭಿಸೋಣ, ಸಭೆ ಸೇರುವಾಗ ನೆಲದ ಮೇಲೆಯೇ ಕುಳಿತುಕೊಳ್ಳೋಣ, ಎಂದು ಹೇಳುವ ಧೈರ್ಯ ನಮಗೆ ಏಕಿಲ್ಲ ? ನಮ್ಮ ಕೆಲಸದ ಗುಣವನ್ನು ಕುಗ್ಗಿಸದೆ ನಮ್ಮ ಶ್ರಮವನ್ನು ಅದು ಅರ್ಧಕ್ಕರ್ಧ ಕಡಿಮೆ ಮಾಡಬಹುದಾಗಿದೆ. ಈಗಿರುವಂತೆ ಯುರೋಪಿನ ಮಾದರಿಯಲ್ಲಿ ಮಹತ್ವಾಕಾಂಕ್ಷೆಯ ಯೋಜನೆಗಳನ್ನು ನಾವು ಮಾಡದಿದ್ದರೆ ನಮಗೆ ನಾಚಿಕೆಯೆನಿಸುತ್ತದೆ, ಅತೃಪ್ತಿಯೂ ಆಗುತ್ತದೆ. ಆ ದೇಶಗಳು ಅನಂತಸಂಪತ್ತಿನ ಆಗರವಾಗಿದ್ದು ಶ್ರೀಮಂತಿಕೆಯಿಂದ ತುಂಬಿ ತುಳುಕುತ್ತಿವೆ. ನಮ್ಮ ಇದ್ದು ಬಿದ್ದ ಸಂಪನ್ಮೂಲಗಳನ್ನು ಆರಂಭದ ವಸ್ತುಗಳನ್ನು ಒದಗಿಸುವಲ್ಲಿಯೇ ನಾವು ಉಪಯೋಗಿಸಿಬಿಡುವುದರಿಂದ ಕೈಗೊಂಡ ಕೆಲಸಕ್ಕೆ ತೀರ ಸ್ವಲ್ಪ ಹಣ ಉಳಿಯುತ್ತದೆ.

ಹುಡುಗರು ಬರೆಯುವುದನ್ನು ಕಲಿಯಲು ಸುದ್ದೆಯ ಒಂದು ಉಂಡೆ, ಬರಿದಾದ ನೆಲ, ಇಷ್ಟೇ ಸಾಕಾಗಿದ್ದಾಗ ನಮ್ಮ ದೇಶದಲ್ಲಿ ಶಾಲೆಗಳಿಗೆ ಕೊರತೆಯಿರಲಿಲ್ಲ. ಈಗ ಸಾಕಾಗುವಷ್ಟು ಪಾಟಿ ಪೇಣೆಗಳಿವೆ; ಆದರೆ ಶಾಲೆಗಳೇ ಕಡಿಮೆ. ಇಂದು ನಮ್ಮ ಜೀವನದ ಪ್ರತಿಯೊಂದು ಮುಖದಲ್ಲಿಯೂ ಮುಖ್ಯವಾದವಕ್ಕಿಂತ ಅಮುಖ್ಯವಾದ ವಸ್ತುಗಳ ಬಗ್ಗೆ ಹೆಚ್ಚು ಲಕ್ಷ್ಯವೀಯುವ ಪ್ರವೃತ್ತಿ ಕಂಡುಬರುತ್ತಿದೆ. ನಮ್ಮ ಹಿರಿಯರು ಸಾಮಾಜಿಕ ಮರ್ಯಾದೆಗಳಿಗೆ ಅಷ್ಟೊಂದು ಮಹತ್ವ ಕೊಡದೆ ಸಾಮಾಜಿಕ ಕರ್ತವ್ಯಗಳ ಬಗ್ಗೆ ಹೆಚ್ಚು ಗಮನಕೊಡುತ್ತಿದ್ದರು. ನಮ್ಮ ಕ್ರಮ ಅದಕ್ಕೆ ವಿರುದ್ಧವಾಗಿದೆ. ಕುರ್ಚಿಮೇಜುಗಳನ್ನು ಅವರು ಸಂಪತ್ತಿನ ಭಾಗವೆಂದು ಗಣಿಸಿದ್ದರಲ್ಲದೆ, ನಾಗರಿಕತೆಯ ಲಕ್ಷಣವೆಂದಲ್ಲ. ಆಗಿನ ಕಾಲದಲ್ಲಿ ನಾಗರಿಕತೆಯ ಸಂರಕ್ಷಕರೆನಿಸಿಕೊಂಡವರ ಮನೆಯಲ್ಲಿ ಇಂಥ ಸಾಮಾನುಗಳು ತೀರ ಸ್ವಲ್ಪ ಇರುತ್ತಿದ್ದವು. ಬಡತನವನ್ನು ಆದರಣೀಯಗೊಳಿಸಿ ದೇಶಕ್ಕೆ ಅವರು ತೃಪ್ತಿಯನ್ನು ತಂದುಕೊಟ್ಟಿದ್ದರು. ನಾವು ಚಿಕ್ಕವರಿರುವಾಗಲೇ ಸರಳ ಜೀವನದ ಆದರ್ಶವನ್ನು ಹೊಂದಿದರೆ ಉಳಿದದ್ದೇನನ್ನೂ ದೊರಕಿಸದಿದ್ದರೂ ಕೆಲವೊಂದು ಅಧಿಕಾರಗಳನ್ನಾದರೂ ನಾವು ಕೈವಶಮಾಡಿಕೊಳ್ಳಬಹುದು; ನೆಲದ ಮೇಲೆ ಕೂಡುವ, ಸಾಮಾನ್ಯ ಬಟ್ಟೆಗಳನ್ನು ಧರಿಸುವ, ಸಾಮಾನ್ಯ ಆಹಾರವನ್ನು ಸೇವಿಸುವ ಮತ್ತು ಅತ್ಯಂತ ಕಡಿಮೆ ಪ್ರಯತ್ನದಿಂದ ಸಾಧ್ಯವಿರುವಷ್ಟು ಉತ್ತಮ ಫಲ ಪಡೆಯುವ ಅಧಿಕಾರಗಳು ಅವು. ಇವೇನೂ ಅಂಥ ಸಣ್ಣಪುಟ್ಟ ಅಧಿಕಾರಗಳಲ್ಲ, ಅವುಗಳನ್ನು ಗಳಿಸಲು ಎಷ್ಟೋ ಸಾಹಸ ಮಾಡಬೇಕಾಗುತ್ತದೆ.

ಸರಳತೆ, ಸಹಜತೆ ಹಾಗೂ ನೆಮ್ಮದಿ, ಇವು ನಾಗರಿಕರ ಲಕ್ಷಣಗಳಾಗಿದ್ದರೆ, ಅತಿರೇಕ, ಡಾಂಭಿಕತೆ, ಇವು ಅನಾಗರಿಕರ ಲಕ್ಷಣಗಳಾಗಿವೆ. ನಿಜವಾದ ದೊಡ್ಡತನ ತನ್ನ ಹುಟ್ಟು ಕಾಂತಿಯಿಂದಲೇ ಬೆಳಗುತ್ತದೆ ಮತ್ತು ಎಂಥ ದೀನ ಪರಿಸರದಲ್ಲಿಯೂ ಅದರ ಬೆಲೆ ಕಡಿಮೆಯಾಗದು. ಇದು ತೀರ ಸರಳವಾದ ಸತ್ಯಸಂಗತಿ. ಆದರೆ ಅದನ್ನು ಸಾಧ್ಯವಾದ ರೀತಿಯಲ್ಲಿ ನಮ್ಮ ಹುಡುಗರ ಮನಸ್ಸಿನಲ್ಲಿ ನೆಡುವಂತೆ ಮಾಡಬೇಕಲ್ಲದೆ, ಅವರ ಸ್ವಭಾವದಲ್ಲಿ ಅದನ್ನು ಬೀರಬೇಕು. ಅವರಿಗೆ ಏನೂ ಹಿತಮಾಡದ ನೈತಿಕ ಬೋಧೆಯೆಂದು ಕಲಿಯದೆ, ಇದನ್ನವರು ತಮ್ಮ ಶಾಲೆಯಲ್ಲಿ ಎಲ್ಲಿ ನೋಡಿದಲ್ಲಿ ಕಂಡುಬರುವ ಸರಳ ಜೀವನದ ಪ್ರತ್ಯಕ್ಷ ಉದಾಹರಣೆಯಿಂದ ಕಲಿಯಬೇಕು. ಒಂದು ವೇಳೆ ಅವರಿದನ್ನು ಕಲಿಯದಿದ್ದರೆ ಕೈಮುಟ್ಟಿ ಕೆಲಸ ಮಾಡುವ ಬಗ್ಗೆ ಬೇಸರಗೊಳ್ಳುತ್ತಾರೆ ಮತ್ತು ನೆಲದ ಮೇಲೆ ಕೂಡುವುದು ಕಡಿಮೆ ಮಟ್ಟದ ಲಕ್ಷಣ ಎಂದು ಭಾವಿಸುತ್ತಾರೆ. ಇನ್ನೂ ಕೆಡಕಿನ ಸಂಗತಿಯೆಂದರೆ, ಅವರು ತಮ್ಮ ತಾತ ಮುತ್ತಾತರನ್ನು ತಿರಸ್ಕರಿಸುತ್ತಾರೆ, ಪ್ರಾಚೀನ ಭಾರತದ ಸಂದೇಶವನ್ನು ತಪ್ಪು ತಿಳಿದುಕೊಳ್ಳುತ್ತಾರೆ.

ಬಾಹ್ಯ ಸಂಗತಿಗಳು ಎಷ್ಟೇ ಮೋಹಕವಾಗಿದ್ದರೂ, ಅವುಗಳನ್ನೆಲ್ಲ ಬಿಟ್ಟು ಕೊಟ್ಟು ಅಂತರಂಗದ ಸತ್ವದ ಮೇಲೆಯೇ ಪೂರ್ಣ ನಮ್ಮ ಮನಸ್ಸನ್ನು ಕೇಂದ್ರೀಕೃತಗೊಳಿಸಿದೆವೆಂದು ತಿಳಿಯೋಣ. ನಮ್ಮ ಅಧೀನದಲ್ಲಿರುವ ಸಂಪನ್ಮೂಲಗಳು ನಮ್ಮ ಉದ್ದೇಶವನ್ನೀಡೇರಿಸುವಷ್ಟು ಇವೆಯೇ ಎಂಬ ಪ್ರಶ್ನೆ ಈಗ ಏಳುತ್ತದೆ, ಕಲಿಸುವುದನ್ನೆಲ್ಲ ಗುರುಗಳಿಗೆ ಒಪ್ಪಿಸುವಂತೆ ನೋಡಿಕೊಳ್ಳುವುದು ನಮ್ಮ

ಮೊದಲ ಕರ್ತವ್ಯ. ಆದರೆ ಅವರನ್ನು ಹೇಗೆ ದೊರಕಿಸುವುದು ? ಗುರುಗಳನ್ನು ನಮಗೆ ಬೇಕಾದಂತೆ ನಿರ್ಮಾಣ ಮಾಡಲಾರೆವು. ಪ್ರಕಟಣೆ ಕೊಟ್ಟು ಶಾಲಾ ಶಿಕ್ಷಕರನ್ನು ದೊರಕಿಸಿದಂತೆ ಅವರನ್ನು ಪಡೆಯಲಾರೆವು.

ಈ ಪ್ರಶ್ನೆ ಬಂದಾಗ ಹಾಸಿಗೆಯಿದ್ದಷ್ಟೇ ಕಾಲುಚಾಚಬೇಕೆಂಬುದನ್ನು ನಾನು ಒಪ್ಪುತ್ತೇನೆ. ನಾನು ಗುರುವನ್ನೇ ಪಡೆಯಬೇಕೆಂದು ಮಾಡಿದ್ದರಿಂದ ಯಾಜ್ಞವಲ್ಕ್ಯನಂಥವನನ್ನೇ ದೊರಕಿಸುತ್ತೇವೆಂದು ಭಾವಿಸುವುದು ಶುದ್ಧ ಮೂರ್ಖತನ. ಆದರೆ ಇದನ್ನೂ ನಾವು ನೆನಪಿನಲ್ಲಿಡಬೇಕು: ಈಗ ಇರುವ ಪರಿಸ್ಥಿತಿಯಲ್ಲಿ ನಮ್ಮ ದೇಶದ ಎಷ್ಟೋ ಪ್ರತಿಭಾಶಕ್ತಿ ತುಕ್ಕು ಹಿಡಿದಿದೆ : ವ್ಯಾಪಾರದಲ್ಲಿ ತೊಡಗಿಸದ ಹಣದಂತೆ. ಯಾಕೆಂದರೆ, ಅದರ ಪೂರ್ಣ ಉಪಯೋಗ ಪಡೆಯುವ ಪ್ರಯತ್ನವೇ ನಮ್ಮಲ್ಲಿ ನಡೆದಿಲ್ಲ. ಅಂಚೆಯ ಕವರಿನ ಮೇಲೆ ಹಾಸಲುಚೀಟಿ ಹಚ್ಚಲು ದೊಡ್ಡ ಹರಿವೆಯತುಂಬ ನೀರು ತೆಗೆದುಕೊಂಡರೆ ಅದರಲ್ಲಿರುವ ಬಹುಪಾಲು ನೀರನ್ನು ಉಪಯೋಗಿಸದೆ ಬಿಟ್ಟುಬಿಡುತ್ತೇವೆ. ಆದರೆ ಅದೇ ನೀರನ್ನೇ ಸ್ನಾನಮಾಡಲು ತೆಗೆದುಕೊಂಡರೆ ಎಲ್ಲ ನೀರನ್ನೂ ಬಳಸಿಬಿಡುತ್ತೇವೆ. ಇದರಿಂದ ಕಂಡುಬರುವುದೇನೆಂದರೆ, ಹರಿವೆಯಲ್ಲಿದ್ದ ನೀರಿನ ಬೆಲೆ ನಮ್ಮ ಉಪಯೋಗಕ್ಕನುಗುಣವಾಗಿ ಹೆಚ್ಚು ಕಡಿಮೆ ಆಗುತ್ತದೆ. ಇಂದು ಶಾಲಾಶಿಕ್ಷಕನು ನಿರ್ವಹಿಸುತ್ತಿರುವ ಕರ್ತವ್ಯಗಳನ್ನು ಗಮನಿಸಿದರೆ, ಅದರಲ್ಲಿ ಅವನ ಮನಸ್ಸು ಹಾಗೂ ಚೇತನದ ಅಲ್ಪಭಾಗವೂ ಉಪಯೋಗ ಬೀಳುತ್ತಿಲ್ಲ. ಗ್ರಾಮಾಫೋನಿಗೆ ಒಂದು ತುಂಡು ಮೆದುಳು ಹಾಗೂ ಒಂದು ಬೆತ್ತವನ್ನು ಕಟ್ಟಿಬಿಟ್ಟರೆ, ಅಷ್ಟು ಕೆಲಸವನ್ನು ಅದೇ ಮಾಡಬಹುದು. ಆದರೆ ಅದೇ ಶಿಕ್ಷಕನನ್ನು ಗುರುವಿನ ಕರ್ತವ್ಯಗಳನ್ನು ನೆರವೇರಿಸಲು ಕೇಳಿಕೊಂಡರೆ, ವಿದ್ಯಾರ್ಥಿಗಳ ಸೇವೆಗಾಗಿ ಅವನು ತನ್ನ ಸಂಪೂರ್ಣ ಮನಸ್ಸು ಹಾಗೂ ಶಕ್ತಿಯನ್ನು ಮೀಸಲಿಡುತ್ತಾನೆ. ತನ್ನ ಸಾಮರ್ಥ್ಯ ಮೀರಿ ಅವನು ಕೊಡಲಾರ, ನಿಜ. ಆದರೆ ಕಡಿಮೆ ಕೊಡಲೂ ಅವನು ನಾಚಿಕೆಪಟ್ಟುಕೊಳ್ಳುತ್ತಾನೆ. ಒಂದು ವಸ್ತುವಿನ ವ್ಯಾಪಾರವಾಗಬೇಕಾದರೆ ಇಬ್ಬರು ಬೇಕು. ನಮಗೆ ಬೇಕಾಗಿದ್ದರೆ ಶ್ರೇಷ್ಠವಾದುದನ್ನೇ ಕೇಳಬೇಕು. ನಮ್ಮ ದೇಶದ ಬೌದ್ಧಿಕ ಹಾಗೂ ಆಧ್ಯಾತ್ಮಿಕ ಶಕ್ತಿಗಳ ಅಲ್ಪಾಂಶ ಮಾತ್ರ ಶಿಕ್ಷಕರ ರೂಪದಲ್ಲಿ ಕಾರ್ಯನಿರ್ವಹಿಸುತ್ತಿದೆ. ಆದರೆ ನಮ್ಮ ದೇಶ ಇಚ್ಛಿಸಿದರೆ, ಆ ಶಕ್ತಿಗಳ ಬಹುಪಾಲು ಗುರುಗಳ ರೂಪದಲ್ಲಿ ಕಾರ್ಯ ಮಾಡತೊಡಗುತ್ತದೆ.

ಆರ್ಥಿಕ ಅಡಚಣೆಗಳು ಇಂದಿನ ಶಿಕ್ಷಕನನ್ನು ವಿದ್ಯಾರ್ಥಿಗಳನ್ನು ಹುಡುಕಲು ಒತ್ತಾಯಿಸುತ್ತವೆ. ಆದರೆ ಸ್ವಾಭಾವಿಕವಾದ ರೀತಿಯಲ್ಲಿ ನೋಡಿದರೆ, ವಿದ್ಯಾರ್ಥಿಗಳೇ ಶಿಕ್ಷಕರನ್ನು ಹುಡುಕಿಕೊಂಡು ಹೋಗಬೇಕು. ಶಿಕ್ಷಕನು ಈಗ ವ್ಯಾಪಾರಿಯಾಗಿದ್ದು, ಗಿರಾಕಿಗಳಿಗಾಗಿ ಅಡ್ಡಾಡುತ್ತ, ಶಿಕ್ಷಣದ ಮಾರಾಟದಲ್ಲಿ ತೊಡಗಿದ್ದಾನೆ. ಅವನಲ್ಲಿ ಮಾರಾಟಕ್ಕಿರುವ ಸಾಮಾನುಗಳ ಪಟ್ಟಿಯಲ್ಲಿ ಮಮತೆ, ಆದರ, ಶ್ರದ್ಧೆ ಅಥವಾ ಯಾವುದೇ ಭಾವನೆಯನ್ನು ಕಾಣುವಂತಿಲ್ಲ. ಅವನು ತನ್ನ ಸಾಮಾನನ್ನು ಮಾರಿದ ಮೇಲೆ, ಪಗಾರದ ರೂಪದಲ್ಲಿ ಅದಕ್ಕೆ ಹಣಸಂದಾಯವಾಗಿರುತ್ತದೆ. ಅನಂತರ ವಿದ್ಯಾರ್ಥಿಗಳ ಜೊತೆಗೆ ಅವನ ಕೆಲಸವೇನೂ ಇಲ್ಲ. ಆದರೆ ಇಂದಿನ ಪ್ರತಿಕೂಲ ಪರಿಸ್ಥಿತಿಯಲ್ಲೂ

ತಮ್ಮ ಅಂತಶ್ಶಕ್ತಿಯಿಂದ ಹಣಕಾಸಿನ ವಿಚಾರವನ್ನು ಅಷ್ಟೊಂದು ಮಹತ್ವದ್ದೆಂದು ಗಣಿಸದೆ ಕಾರ್ಯಪ್ರವೃತ್ತರಾಗುವ ಶಿಕ್ಷಕರು ಕೆಲವರಾದರೂ ನಮ್ಮ ದೇಶದಲ್ಲಿ ಇನ್ನೂ ಇದ್ದಾರೆ. ಇವರಲ್ಲಿಯೇ ಒಬ್ಬನನ್ನು ಗುರುವಿನ ಸ್ಥಾನಕ್ಕೆ ಎತ್ತಿ ಹಿಡಿಯಬೇಕು. ಅವನು ಗುರುವಾದಾಗ ತನ್ನ ಜೀವನದಿಂದ ಶಿಷ್ಯರಲ್ಲಿ ಜೀವ ತುಂಬುವುದರಿಂದ, ತನ್ನ ವಿದ್ಯೆಯಿಂದ ಅವರ ಹಣತೆಯನ್ನು ಹೊತ್ತಿಸುವುದರಿಂದ ಮತ್ತು ತನ್ನ ಪ್ರೀತಿಯಿಂದ ಅವರನ್ನು ಸಂತೋಷಗೊಳಿಸುವುದರಿಂದ ಒಳ್ಳೆಯ ಹೆಸರು ಬರುತ್ತದೆಂಬುದನ್ನು ಆತ ಮರೆಯಲಾರ. ಪೇಟೆಯಲ್ಲಿ ಮಾರಾಟಕ್ಕೆ ದೊರೆಯದ ಹಾಗೂ ಎಲ್ಲ ಬೆಲೆಗಳನ್ನೂ ಮೀರಿದ ವಸ್ತುಗಳನ್ನು ತನ್ನ ಶಿಷ್ಯರಿಗೆ ಕೊಡುವುದರಿಂದ, ಅವರಿಂದ ಪ್ರತಿಯಾಗಿ ಶಿಕ್ಷೆಯ ಅಂಜಿಕೆಯನ್ನು ಕಳೆದೊಗೆದ ಶ್ರದ್ಧೆಯನ್ನು ಆತ ಗಳಿಸುತ್ತಾನೆ. ಆ ಶ್ರದ್ಧೆ ಧಾರ್ಮಿಕವೆನ್ನುವಷ್ಟು ಆಳವೂ, ಉತ್ಕೃಷ್ಟವೆನಿಸುವಷ್ಟು ಸ್ವಾಭಾವಿಕವೂ, ಆಗಿರುತ್ತದೆ. ತನ್ನ ಜೀವನೋಪಾಯಕ್ಕಾಗಿ ಸಂಬಳ ತೆಗೆದುಕೊಳ್ಳಲು ಅವನು ಸಮ್ಮತಿಸಿದರೂ, ತನಗೆ ಕೊಡುವ ಸಂಬಳಕ್ಕಿಂತ ಎಷ್ಟೋ ಹೆಚ್ಚಿನದನ್ನು ತಾನು ಅವರಿಗೆ ಕೊಟ್ಟು, ತನ್ನ ಸ್ಥಾನಕ್ಕೆ ಗೌರವವನ್ನು ತಂದುಕೊಡುತ್ತಾನೆ. ಶಿಕ್ಷಣಕ್ಕಾಗಿ ಮನೆಬಿಟ್ಟು ದೂರ ಕಳುಹಿಸುವುದು ಹುಡುಗರಿಗೆ ಒಳ್ಳೇಯದೋ ಹೇಗೆ, ಮೊದಲಾದ ಮೂಲಭೂತ ಪ್ರಶ್ನೆಗಳ ಬಗ್ಗೆ ನನ್ನೊಡನೆ ಒಪ್ಪದಿರುವ ವಾಚಕರಿಗೆ ಇಂಥ ವಿವರಗಳ ಚರ್ಚೆ ನಿರುಪಯೋಗಿಯೆಂದು ತೋರಬಹುದು.

ಈ ಪ್ರಶ್ನೆಯ ಬಗ್ಗೆ ನಾನು ಮೊದಲು ಹೇಳುವುದೇನೆಂದರೆ, ಈಗ ಸಾಮಾನ್ಯವಾಗಿ ಶಿಕ್ಷಣವೆಂದು ಭಾವಿಸಿರುವುದನ್ನು ಹುಡುಗರಿಗೆ ಕೊಡಿಸಲು ನಮ್ಮ ಪಾಲಕರು ಹೆಚ್ಚಿನದೇನನ್ನೂ ಮಾಡಬೇಕಿಲ್ಲ; ಅವರನ್ನು ಹತ್ತಿರವಿರುವ ಶಾಲೆಗೆ ಕಳುಹಿಸುವುದು ಇಲ್ಲವೆ, ಸ್ವಂತ ಮೇಷ್ಟರನ್ನು ನೇಮಿಸುವುದು. ಆ ರೀತಿಯ 'ಶಿಕ್ಷಣ' ಹುಡುಗನನ್ನು ಹಣಗಳಿಸುವವನನ್ನಾಗಿ ಮಾಡುವುದೊಂದೇ ಗುರಿಯಾಗಿಟ್ಟುಕೊಂಡಿದೆ. ನಾನು ಈಗಾಗಲೇ ಎತ್ತಿ ತೋರಿಸಿರುವಂತೆ ಅದು ಶಿಕ್ಷಣವೆಂಬ ಹೆಸರಿಗೆ ಅನರ್ಹವಾಗಿದೆ.

ಜಗತ್ತು ಬೇರೆಬೇರೆ ಉದ್ಯೋಗಗಳಲ್ಲಿ ತೊಡಗಿದ ಜನರಿಂದ ಕೂಡಿದೆ. ಅವರ ಸ್ವಭಾವ ಬೇರೆಬೇರೆ. ಅವರ ಮನೆಗಳಲ್ಲಿಯ ವಾತಾವರಣವೂ ಬೇರೆಬೇರೆ. ಅವರ ಮಕ್ಕಳು ಎಳವೆಯಿಂದಲೇ ವಿಶಿಷ್ಟ ಗುಣಗಳಿಂದೊಡಗೂಡಿ ಬೆಳೆಯುತ್ತವೆ. ಅವರವರ ಉದ್ಯೋಗಗಳ ಪ್ರಕಾರ ಪ್ರೌಢರಾದವರು ಬೇರೆ ಬೇರೆ ವೈಶಿಷ್ಟ್ಯಗಳನ್ನು ಪಡೆಯುತ್ತಾರೆ ಮತ್ತು ಪ್ರತ್ಯೇಕ ಗುಂಪುಗಳಲ್ಲಿ ಬರುತ್ತಾರೆ. ಏನೇ ಇರಲಿ, ಜೀವನದ ಹೊಸ್ತಿಲಲ್ಲಿರುವಾಗ ಹುಡುಗನು ಅವನ ತಂದೆತಾಯಿಗಳ ಅಚ್ಚಿನಲ್ಲಿ ತಯಾರಾಗುವುದು ಅಷ್ಟು ಒಳ್ಳೆಯದಲ್ಲ.

ಶ್ರೀಮಂತ ವ್ಯಕ್ತಿಯ ಮಗನ ಉದಾಹರಣೆಯನ್ನೇ ತೆಗೆದುಕೊಳ್ಳೋಣ. ಅವನು ಈ ಜಗತ್ತಿಗೆ ಬರುವಾಗ ಬಡವನ ಮಗನಿಗಿಂತ ಬೇರೆಯಾದ ಅಂಥ ವಿಶೇಷವಾದದ್ದೇನನ್ನೂ ತನ್ನೊಡನೆ ತಂದಿರುವುದಿಲ್ಲ. ಅವನನ್ನು ಬೆಳೆಸಿಕೊಂಡು ಬಂದ ರೀತಿಯೇ ಅವನಿಗೆ ಶ್ರೀಮಂತಿಕೆಯ ಲಕ್ಷಣಗಳನ್ನು ನೀಡುತ್ತದೆ. ಸಮಾನ ಮಾನವತೆಯನ್ನು ಅವನಲ್ಲಿ ನಿರ್ಮಿಸುವುದು ಅವನ

ತಂದೆತಾಯಿಗಳ ಪ್ರಥಮ ಕರ್ತವ್ಯವಾಗಿದೆ. ಈ ದಿಸೆಯಲ್ಲಿ ಅಗತ್ಯವಾದಷ್ಟನ್ನು ಮಾಡಿದ ನಂತರವೇ ಅವರು ಅವನನ್ನು ಶ್ರೀಮಂತ ಮನುಷ್ಯನ ಮಗನಂತೆ ಬೆಳೆಯಲು ಅವಕಾಶವೀಯಬೇಕು. ಆದರೆ ವಾಸ್ತವ ಸಂಗತಿಯು ಇದಕ್ಕೆ ವಿರುದ್ಧವಾಗಿದೆ. ಮಾನವ ಶಿಶುವಿನಂತೆ ಆಚರಿಸುವುದನ್ನು, ನಡೆಯುವುದನ್ನು, ಪೂರ್ಣ ಕಲಿತುಕೊಳ್ಳುವ ಮೊದಲೇ ಶ್ರೀಮಂತನ ಮಗನಂತೆ ನಡೆಯಲು ಆ ಹುಡುಗನಿಗೆ ಕಲಿಸಲಾಗುತ್ತದೆ. ಇದರಿಂದಾಗಿ ಬಾಲ್ಯದ ಅನೇಕ ಫಲವತ್ತಾದ ಅನುಭವಗಳಿಗೆ ಅವನು ಹೊರತಾಗಬೇಕಾಗುತ್ತದೆ ಮತ್ತು ನಿಯಮಿತ ಕ್ಷೇತ್ರದಲ್ಲಿಯ ಅನುಭವದಿಂದಲೇ ಅವನು ಬೆಳೆಯುತ್ತಾನೆ. ಆದರೆ ಇಷ್ಟು ಮಾತ್ರ ನಿಜ : ಪಂಜರದಲ್ಲಿಯ ಗರಿ ಮುರಿದ ಹಕ್ಕಿಯಂತೆ ಸ್ವತಃ ಬಾಳುವ ತಂದೆತಾಯಿಗಳ ಯತ್ನದಿಂದಲೇ ಅವನು ಕೈಕಾಲುಗಳಿದ್ದರೂ ಕುಂಟನಾಗಿ ಪರಿಣಮಿಸುತ್ತಾನೆ. ಅವನು ನಡೆದಾಡಕೂಡದು, ಗಾಡಿಯಿರಲೇಬೇಕು. ತೀರ ಹಗುರಾದ ವಸ್ತುವನ್ನು ಕೂಡ ಅವನು ಒಯ್ಯಕೂಡದು; ಅದಕ್ಕೆ ಆಳುಮಗನೇ ಬೇಕು. ತನಗೇನಾದರೂ ಬೇಕಿದ್ದರೆ ಅದನ್ನು ತಾನೇ ಮಾಡಕೂಡದು; ಅದಕ್ಕೆ ಒಬ್ಬ ಸೇವಕನೇ ಇರಬೇಕು. ಅವನ ಪ್ರತಿಯೊಂದು ಅವಯವವೂ ಆರೋಗ್ಯದಿಂದಿದ್ದರೂ ಪಾರ್ಶ್ವವಾಯುಪೀಡಿತನಂತೆಯೇ ಅವನು ವರ್ತಿಸತಕ್ಕದ್ದು. ದೈಹಿಕ ಅಸ್ವಸ್ಥತೆಯಿಂದಲ್ಲವಾದರೂ, ಹಾಗೆ ಮಾಡದಿದ್ದರೆ ಜನ ಏನು ತಿಳಿದುಕೊಂಡಾರು ಎಂಬ ಭಯದಿಂದ ಇದನ್ನೆಲ್ಲವನ್ನು ಅವನು ಮಾಡಲೇಬೇಕು. ಇದರ ಪರಿಣಾಮವಾಗಿ ಮುಂದೆ ಅತ್ಯಂತ ಹಗುರಾದ ಕೆಲಸವೂ ಅವನಿಗೆ ಕಠಿಣವಾಗುತ್ತದೆ ; ತೀರ ಸ್ವಾಭಾವಿಕ ಸಂಗತಿಗಳೂ ನಾಚಿಕೆಯವಾಗಿ ತೋರುತ್ತವೆ. ತಮ್ಮ ಸಾಮಾಜಿಕ ಸಂಬಂಧಗಳ ಮರ್ಯಾದೆಗನುಸರಿಸಿ ಅವನ ತಂದೆತಾಯಿಗಳು ಮನುಷ್ಯಪ್ರಾಣಿಗಿರುವ ಎಲ್ಲ ನೈಸರ್ಗಿಕ ಅಧಿಕಾರಗಳನ್ನೂ ಅವನಿಂದ ಕಿತ್ತುಕೊಂಡು, ಎಷ್ಟೋ ನಿರರ್ಥಕ ರೂಢಿಗಳಿಗೆ ಅವನನ್ನು ಈಡುಮಾಡುತ್ತಾರೆ. ಕಾಳು ಬೆಳೆಯುವ ಹೊಲಗಳಲ್ಲಿ ಕಸ ಬಿತ್ತುವ ಇಂಥ ಪಾಲಕರನ್ನು ಮಕ್ಕಳನ್ನು ನೋಡಿಕೊಳ್ಳಲು ತಕ್ಕ ಜನರೆಂದು ಕರೆಯೋಣವೆ ?

ಬೆಳೆದ ಹುಡುಗರನ್ನು ದೊಡ್ಡಸ್ತಿಕೆಯ ದಾಸ್ಯಭೋಗದಿಂದ ದೂರವಿರಿಸುವುದು ಸಾಧ್ಯವಿಲ್ಲ. ಆದರೆ ಮಕ್ಕಳು ನಿಜವಾಗಿ ಏನನ್ನು ಪ್ರೀತಿಸುತ್ತಾರೆಂಬುದನ್ನು ನಾವು ತಿಳಿದರೆ, ಆ ಬಗೆಯ ಅಡ್ಡಹಾದಿಗೆ ಅವರನ್ನು ತಳ್ಳಬಾರದು. ಈ ಭೂಮಿಯಲ್ಲಿ ಕೊಳೆಕಸವಿದ್ದರೂ ಮಕ್ಕಳು ಅದನ್ನು ಪ್ರೀತಿಸುತ್ತಾರೆ. ಸೂರ್ಯನನ್ನು, ಗಾಳಿಯನ್ನು, ಮಳೆಯನ್ನು, ಕಂಡು ಅವರು ಹಿಗ್ಗುತ್ತಾರೆ. ಅವರಿಗೆ ವಸ್ತ್ರಾಲಂಕಾರ ಬೇಕಿಲ್ಲ. ತಮ್ಮ ಇಂದ್ರಿಯಗಳ ಮೂಲಕ ಜಗತ್ತಿನ ಹೊಸ ಹೊಸ ಸಂಗತಿಗಳನ್ನು ಕಂಡುಹಿಡಿದಾಗ ಅವರು ಅತ್ಯಂತ ಸಂತೋಷಭರಿತರಾಗಿರುತ್ತಾರೆ ಮತ್ತು ನೈಸರ್ಗಿಕವಾದ ರೀತಿಯಲ್ಲಿ ಇರುವುದೆಂದರೆ ಅವರಿಗೆ ಹೆಚ್ಚು ಪ್ರೀತಿ.

ಈ ದೇಶದಲ್ಲಿರುವ ಯುರೋಪಿಯನ್ನರ ಹಾಗೆಯೇ ನಮ್ಮ ಎಷ್ಟೋ ಹುಡುಗಹುಡುಗಿಯರಿಗೆ ಈಗ ಶಿಕ್ಷಣ ಕೊಡಿಸಲಾಗುತ್ತಿದೆ. ಅವರನ್ನು ನೋಡಿಕೊಳ್ಳಲು ದಾದಿಯರಿರುತ್ತಾರೆ. ಅವರು ತಪ್ಪುತಪ್ಪು ಹಿಂದಿಯನ್ನು ಕಲಿತು ಬಂಗಾಲಿಯನ್ನು ಮರೆಯುತ್ತಾರೆ. ಎಲ್ಲ ಮಕ್ಕಳೂ ತಮ್ಮ

ಜನ್ಮಭೂಮಿಗೆ ಹತ್ತಿರವಾಗಿದ್ದುಕೊಂಡು ಅದರಿಂದಲೇ ಪೋಷಣಶಕ್ತಿಯನ್ನು ಹೀರಿಕೊಳ್ಳುವಂತಿರಬೇಕಾದ ಹೊಕ್ಕಳು ಹುರಿಯಿಂದ ಇವರನ್ನು ಕಳಚಿಹಾಕಲಾಗಿರುತ್ತದೆ. ಇದೂ ಅಲ್ಲದೆ, ಯುರೋಪಿಯನ್ ಸಮಾಜದಲ್ಲಿಯೂ ಅವರಿಗೆ ಪ್ರವೇಶವಿಲ್ಲ. ಅವರನ್ನು ಅರಣ್ಯದಿಂದ ಕಿತ್ತುತಂದು ಯುರೋಪಿಯನ್ನರ ಹೂವಿನ ಕುಂಡದಲ್ಲಿ ಹಚ್ಚಲಾಗಿದೆ. ವಯಸ್ಸಿಗೆ ಬಂದ ಬಂಗಾಲಿ ಯುವಕನು ತನಗೆ ಬೇಕೆನಿಸಿದರೆ ಯುರೋಪಿನ ರೀತಿನೀತಿಗಳನ್ನು ಅಂಗೀಕರಿಸಲು ಸ್ವತಂತ್ರನು ಸರಿ. ಆದರೆ, ಬಂಗಾಲೀ ತಂದೆತಾಯಿಗಳು ತಮ್ಮ ಮಕ್ಕಳನ್ನು ಯುರೋಪಿನ ರೀತಿಯಲ್ಲಿ ಬೆಳೆಯಿಸುತ್ತಿರುವುದೇಕೊ ತಿಳಿಯದು. ಪಾಶ್ಚಾತ್ಯ ಮಾದರಿಯಲ್ಲಿ ಬೆಳೆದ ಹುಡುಗನೊಬ್ಬನು ಭಾರತೀಯ ವೇಷದಲ್ಲಿದ್ದ ತಮ್ಮ ಸಂಬಂಧಿಕರನ್ನು ನೋಡಿ ತನ್ನ ತಾಯಿಗೆ, "ಮಮ್ಮಾ, ಮಮ್ಮಾ ನೋಡು - ಎಷ್ಟೊಂದು ಬಾಬುಗಳು ಬರುತ್ತಿದ್ದಾರೆ" ಎಂದು ಒದರಿದ್ದನ್ನು ನಾನೊಮ್ಮೆ ಕೇಳಿದೆನು. ಇದಕ್ಕಿಂತ ಹೆಚ್ಚಿನ ಅಧಃಪತನವನ್ನು ನಾನು ಊಹಿಸಲಾರೆ. ಇಂಥ ಹುಡುಗರು ಬೆಳೆದು ದೊಡ್ಡವರಾದಮೇಲೆ ಬಂಗಾಲದ ಸಮಾಜಕ್ಕೆ ಅಯೋಗ್ಯರಾಗುತ್ತಾರೆ ಮತ್ತು ಯುರೋಪಿಯನ್ ಸಮಾಜದ ಸ್ವೀಕಾರಕ್ಕೂ ಅನರ್ಹರಾಗಿ ಸಮಾಜಬಾಹಿರವಾಗಿ ಇರುವ ಹಣೆಬರಹ ಅವರದಾಗುತ್ತದೆ.

ಹಾಗೆ ನೋಡಿದರೆ, ಆ ಪಾಲಕರಿಗೆ ತಮ್ಮ ಮಗನನ್ನು ತಪ್ಪುಹಾದಿಯಲ್ಲಿ ಬೆಳೆಸುತ್ತಿದ್ದೇವೆಂಬ ವಿಚಾರವೇ ಹೊಳೆದಿರಲಿಲ್ಲ. ತಮ್ಮವೇ ದೋಷಗಳಿಗೆ ಜನರು ಕುರುಡರಾಗಿರುವುದರಿಂದ ಉಳಿದವರಿಗೆ ತಾವು ಮಾಡುವ ಹಾನಿಯ ಅರಿವು ಅವರಿಗೇ ಇರುವುದಿಲ್ಲ. ಆದ್ದರಿಂದಲೇ ಮನೆಯು ದುಷ್ಟಪ್ರವೃತ್ತಿಗಳ, ಪೂರ್ವಗ್ರಹ ಮೂಢನಂಬಿಕೆಗಳ ಆಗರವಾಗಿದ್ದರೂ ಅವರು ತಮ್ಮ ಮಕ್ಕಳನ್ನು ಶಿಕ್ಷಣಕ್ಕಾಗಿ ಮನೆ ಬಿಟ್ಟು ದೂರ ಕಳುಹಿಸಲು ಮನಸ್ಸು ಮಾಡುವುದಿಲ್ಲ. ತಮ್ಮ ಹುಡುಗರು ನಿಜವಾದ ಮನುಷ್ಯರಾಗಬೇಕೆಂದು ಬಯಸುವ ತಂದೆತಾಯಿಗಳು ಗುರುಗಳೊಂದಿಗೆ ನಿಸರ್ಗದ ಸಾನ್ನಿಧ್ಯದಲ್ಲಿ ಬ್ರಹ್ಮಚರ್ಯವನ್ನಾಚರಿಸುತ್ತ ಇರುವ ಶಾಲೆಗಳಿಗೆ ಅವರನ್ನು ಕಳುಹಿಸುವುದು ತಮ್ಮ ಕರ್ತವ್ಯವೆಂದು ತಿಳಿಯಬೇಕು.

ಭ್ರೂಣಗಳು ಮತ್ತು ಬೀಜಗಳು ಗರ್ಭದ ಏಕಾಂತದಲ್ಲಿ, ಭೂಮಿಯ ಒಳಗೆ ಬೆಳೆಯುತ್ತವೆ. ಹೊರಗೆ ಗಾಳಿ ಬೆಳಕಿನಲ್ಲಿ ಬರಲು ಸಮರ್ಥವಾಗುವವರೆಗೆ ಹಗಲೂ ಇರುಳೂ ತಮ್ಮ ಪರಿಸರದಿಂದ ಪೋಷಣೆಯನ್ನು ಹೊಂದುತ್ತವೆ, ಮತ್ತು ಹೊರಗಿನ ಯಾವುದೇ ಆಘಾತದಿಂದ ಅವಕ್ಕೆ ಬಾಧೆ ತಟ್ಟದಂತೆ ನಿಸರ್ಗ ಅವುಗಳನ್ನು ಹಿತವಾದ ಪರಿಸರದಲ್ಲಿ ಇಡುತ್ತದೆ.

ಬಾಲ್ಯದಲ್ಲಿ ಮಾನವ ಮನಸ್ಸು ಭ್ರೂಣಾವಸ್ಥೆಯಲ್ಲಿರುವುದರಿಂದ ತೊಂದರೆ ಕೊಡುವ ಎಲ್ಲ ಆಘಾತಗಳಿಂದ ಅವರನ್ನು ರಕ್ಷಿಸುವಂಥ ಪರಿಸರದಲ್ಲಿ ಶಾಲಾ ಬಾಲಕರನ್ನು ಇಡುವಂತಾಗಬೇಕು. ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ವಿದ್ಯೆಯನ್ನು ಪಡೆಯುತ್ತ ಬಲಗೊಳ್ಳುವುದು ಅವರ ಪ್ರಮುಖ ಗುರಿಯಾಗಿರಬೇಕು ಮತ್ತು ಅವರ ಸುತ್ತಮುತ್ತಿನ ವಾತಾವರಣ ಅದಕ್ಕೆ ಹೊಂದುವಂತಿರಬೇಕು.

ಮೂಲ : ರವೀಂದ್ರನಾಥ ಠಾಕೂರ

'ವಿಶ್ವಮಾನವನೆಡೆಗೆ' : ೧೯೬೪

೨

# 'ಸಂಯುಕ್ತ ಕರ್ನಾಟಕ'ಕ್ಕೆ ಸುವರ್ಣಾಮೃತವರ್ಷ

ಕರ್ನಾಟಕ ಏಕೀಕರಣದ ಸುವರ್ಣ ಮಹೋತ್ಸವವನ್ನು ನಾಡಿನ ತುಂಬ ಆಚರಿಸುತ್ತಿರುವ ಸಂದರ್ಭದಲ್ಲಿ ನಾಡಿನ ಏಕೀಕರಣಕ್ಕಾಗಿ ಎದೆಗೊಟ್ಟು ಹೋರಾಡಿದ ಸಂಯುಕ್ತ ಕರ್ನಾಟಕ ಪತ್ರಿಕೆ ಅಮೃತವರ್ಷದಲ್ಲಿ ಕಾಲಿಡುತ್ತಿರುವುದು ಎಷ್ಟೊಂದು ಅರ್ಥಪೂರ್ಣ! ಇದನ್ನು ಯೋಗಾಯೋಗ (ಅದೃಷ್ಟ ಕೂಡಿ ಬರುವದು) ಎನ್ನುವುದಕ್ಕಿಂತ ಬಸವಣ್ಣ ನುಡಿದಂತೆ 'ನಿಮ್ಮ ಪೂಜಿಸಿದ ಫಲ ಕೈಯಮೇಲೆ' ಎಂದು ಭಾವಿಸುವುದು ಹೆಚ್ಚು ಉಚಿತವೆಂದು ನನ್ನ ಭಾವನೆ.

೧೮೪೩ರ 'ಮಂಗಳೂರ ಸಮಾಚಾರ'ವನ್ನು ಮೊದಲನೆಯ ಕನ್ನಡ ಪತ್ರಿಕೆಯೆಂದು ಪರಿಗಣಿಸಲಾಗಿದೆ. ಕಲ್ಲಚ್ಚಿನ ಪಕ್ಷ ಪತ್ರಿಕೆಯಾಗಿದ್ದ ಅದರ ಬೆಲೆ ಆ ಕಾಲದ ಒಂದು ದುಡ್ಡು. ರೆವರೆಂಡ ಮೊಗ್ಲಿಂಗ್ ಅದರ ಸಂಪಾದಕ. ಅಂದಿನಿಂದ ಇಂದಿನವರೆಗಿನ ಕನ್ನಡ ಪತ್ರಿಕಾ ಪ್ರಪಂಚ ಹಲವಾರು ಹಳ್ಳ-ಕೊಳ್ಳಗಳನ್ನು ದಾಟಿ, ಸ್ವಾತಂತ್ರ್ಯೋತ್ತರ ಕಾಲದಲ್ಲಿ ಸಮಪಾತಳಿಯನ್ನು ಕಂಡುಕೊಂಡು ಹೊಸ ಇತಿಹಾಸಕ್ಕೆ ನಾಂದಿ ಹಾಡಿದೆ. ಉದ್ದಿಮೆಯಾಗಿಯೂ ಅದು ದೊಡ್ಡ ಪ್ರಮಾಣದಲ್ಲಿ ಬೆಳೆದಿದೆ. ಪ್ರತಿಯೊಂದು ವಿಭಾಗದಲ್ಲಿಯೂ ಆಕರ್ಷಣೀಯವಾದ ಉನ್ನತ ಮಟ್ಟವನ್ನು ಸಾಧಿಸಲು ನಡೆಸಿರುವ ಹಿತಕರವಾದ ಸ್ಪರ್ಧೆ ಯಾರಿಗಾದರೂ ಸಂತೋಷವನ್ನುಂಟು ಮಾಡದಿರದು. 'ಸುದ್ದಿ' 'ಅಭಿಪ್ರಾಯ' ಎರಡನ್ನೂ ಸಮನ್ವಯಗೊಳಿಸಿಕೊಂಡು, ಜನರ ಧ್ವನಿಯೊಡನೆ ಒಂದಾಗಿ, ವಿವಿಧ ಬಗೆಯ ಅಂಕಣಗಳ ಮೂಲಕ ಅರಿವನ್ನು ಹಂಚುತ್ತ, ಸೂಕ್ತ ಪುರವಣಿಗಳೊಂದಿಗೆ ಓದುಗರ ಮನಸ್ಸನ್ನು ಒಲಿಸಿಕೊಂಡಿವೆ. ಸಾಕ್ಷರತೆಯ ಯೋಜನೆಗಳು ಸಫಲವಾಗಿದ್ದರೆ ನಮ್ಮ ಪತ್ರಿಕೋದ್ಯಮಕ್ಕೂ ಹೊಸ ತಿರುವು ಪ್ರಾಪ್ತವಾಗಬಹುದಾಗಿತ್ತು. ಆದರೂ ನಿರಾಶಾವಾದಕ್ಕೆ ಆಸ್ಪದವೀಯದಂತೆ ಅದು ಪ್ರಭಾವಶಾಲಿ ಮಾಧ್ಯಮವಾಗಿ ಪರಿಣಮಿಸಿರುವುದರಲ್ಲಿ ಸಂದೇಹವಿಲ್ಲ. ಜಾಹೀರಾತುದಾರರ ಹಂಗು, ರಾಜಕೀಯ ಒತ್ತಡಗಳು, ದರದ ಪೈಪೋಟಿ, ಆಶೆ ಆಮಿಷಗಳ ಪ್ರಲೋಭನ, ಮಾಲೀಕರ ಪ್ರಭುತ್ವ, ಸರಕಾರದೊಡನೆ ಸಂಘರ್ಷ, ಪತ್ರಿಕಾ ನಿರ್ಬಂಧಗಳು ಇವೇ ಮೊದಲಾದ ಆತಂಕಗಳನ್ನು ಅಲ್ಲಗಳೆಯು ವಂತಿಲ್ಲವಾದರೂ ಸ್ವಾರ್ಥವನ್ನು ಬದಿಗಿಟ್ಟು, ಜನತೆಯ ಹಿತಸಂಬಂಧಗಳಿಗೆ ಧಕ್ಕೆ ಬರದಂತೆ ನಾಡಿನ ಪ್ರಗತಿಯನ್ನು ಲಕ್ಷ್ಯದಲ್ಲಿಟ್ಟುಕೊಂಡು ತಂತಮ್ಮ ಸಾಧನೆಯ ಮಾರ್ಗಗಳನ್ನು ಕಂಡುಕೊಂಡ ಪತ್ರಿಕೆಗಳಲ್ಲಿ 'ಸಂಯುಕ್ತ ಕರ್ನಾಟಕ'ಕ್ಕೆ ಹಿರಿಯ ಚೇತನದ ಸ್ಥಾನವನ್ನು ಸಲ್ಲಿಸಿದರೆ ತಪ್ಪಾಗದು.

ಜನತೆಯಲ್ಲಿ ರಾಷ್ಟ್ರಾಭಿಮಾನವನ್ನು ಉದ್ದೀಪಿಸಿ ಅದೇ ಕಾಲಕ್ಕೆ ಹರಿದು ಹಂಚಿಹೋದ ಕನ್ನಡ ನಾಡನ್ನು ಸಂಯುಕ್ತವಾಗಿ ಬೆಸೆದು ಒಂದಾಗಿಸುವ ಧ್ಯೇಯದೊಡನೆ ಸಮೃದ್ಧ ಕರ್ನಾಟಕದ ಕನಸನ್ನು ಕನ್ನಡಿಗರ ಮನಸ್ಸಿನಲ್ಲಿ ಬಿತ್ತಿದ ಶ್ರೇಯಸ್ಸಿನ ಬಹುಪಾಲು ಈ ಪತ್ರಿಕೆಯದಾಗಿದ್ದರೆ ಯಾರೂ ಆಶ್ಚರ್ಯಪಡಬೇಕಾಗಿಲ್ಲ. ಅಂದಿನ ದಿನಗಳನ್ನು ನೆನೆಸಿಕೊಳ್ಳುವದೇ ಇಂದಿನ ಪೀಳಿಗೆಗೆ ಒಂದು ರೋಮಾಂಚಕಾರಿ ಅನುಭವ ನೀಡಬಲ್ಲುದು.

ಧಾರವಾಡದಲ್ಲಿ ಪ್ರಾರಂಭವಾದ ಕರ್ನಾಟಕ ಏಕೀಕರಣದ ಆಂದೋಲನ ಬೆಳಗಾವಿಯನ್ನು ಆವರಿಸಿಕೊಂಡಾಗ ಅಲ್ಲಿನ ಧುರೀಣರು ಈ ವಿಷಯದಲ್ಲಿ ಆಸಕ್ತಿವಹಿಸಿ ಆಂದೋಲನಕ್ಕೆ ಮುಂದಾದರು. ೧೯೨೪ರಲ್ಲಿ ಮಹಾತ್ಮಗಾಂಧೀಜಿಯವರ ಅಧ್ಯಕ್ಷತೆಯಲ್ಲಿ ಕಾಂಗ್ರೆಸ್ ರಾಷ್ಟ್ರೀಯ ಮಹಾಧಿವೇಶನ ಬೆಳಗಾವಿಯಲ್ಲಿ ಜರುಗಿದ್ದು ಕರ್ನಾಟಕದ ದೃಷ್ಟಿಯಿಂದ ಒಂದು ವರವಾಗಿ ಪರಿಣಮಿಸಿತು. ಬೆಳಗಾವಿ ಕರ್ನಾಟಕದ ಅವಿಭಾಜ್ಯ ಅಂಗವೆಂದು 'ಕೇಸರಿ' ಪತ್ರಿಕೆಯ ಸಂಪಾದಕರೂ ಮಹಾರಾಷ್ಟ್ರದ ಮುಖಂಡರೂ ಆಗಿದ್ದ ನ.ಚಿ. ಕೇಳಕರರು ಐತೀರ್ಪು ಕೊಟ್ಟದ್ದು ಏಕೀಕರಣದ ಹೋರಾಟಕ್ಕೆ ಹೆಚ್ಚಿನ ಸ್ಫೂರ್ತಿಯನ್ನು ಒದಗಿಸಿತು. ೧೯೨೯ರಲ್ಲಿ ಬೆಳಗಾವಿಯ ಕನ್ನಡಿಗರ ಪ್ರಯತ್ನದ ಫಲವಾಗಿ ಹದಿನೈದನೆಯ ಕನ್ನಡ ಸಾಹಿತ್ಯ ಸಮ್ಮೇಳನ ಬೆಳಗಾವಿಯಲ್ಲಿ ನೆರವೇರಿತು. ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ ಅವರು ತಮ್ಮ ಅಧ್ಯಕ್ಷ ಭಾಷಣದಲ್ಲಿ 'ಕನ್ನಡಿಗರು ಯಾರು ?' ಎಂಬ ಪ್ರಶ್ನೆಯನ್ನೆತ್ತಿ 'ಕನ್ನಡ ನಾಡಿನಲ್ಲಿ ನೆಲಸಿರುವ ಎಲ್ಲ ಜನರು' ಎಂದು ಉತ್ತರಿಸಿ, 'ನನ್ನ ಮನೆಯ ಮಾತು ತಮಿಳು, ಆದರೂ ನಾನು ಅಚ್ಚಗನ್ನಡಿಗನೇ, ತಮಿಳಿಗಿಂತಲೂ ಹೆಚ್ಚಾಗಿಯೇ ನನಗೆ ಕನ್ನಡವು ಮಾತೃಭಾಷೆ' ಎಂದು ಹೇಳಿದ್ದಲ್ಲದೆ ತಮ್ಮ ಪ್ರಕೃತಸ್ಥಿತಿಯಲ್ಲಿ ಬಹುಮುಖ್ಯವಾದ ಏರ್ಪಾಡೆಂದರೆ ಕರ್ನಾಟಕದ ಏಕೀಕರಣದ... ಕನ್ನಡದ ಆಡಳಿತದ ಕೆಲಸವೆಲ್ಲ ಕನ್ನಡದಲ್ಲಿ ನಡೆಯುವಂತೆ ಮಾಡಬೇಕು' ಎಂದು ಒತ್ತಿ ಹೇಳಿದ್ದು ನಾಡಿನ ಎಲ್ಲ ಸಾಹಿತಿಗಳ ಪ್ರಾತಿನಿಧಿಕ ಧ್ವನಿಯಾಗಿತ್ತಲ್ಲದೆ ಮೈಸೂರು ಭಾಗದ ರಾಜಕಾರಣಿಗಳಿಗೂ ಬಿಸಿ ತಟ್ಟುವಂತೆ ಮಾಡಿತು.

ಇವೆಲ್ಲದರ ಪರಿಣಾಮವಾಗಿ ಬೆಳಗಾವಿಯಲ್ಲಿ ಒಂದು ಕನ್ನಡದ ನಿಯತಕಾಲಿಕದ ಆವಶ್ಯಕತೆಯನ್ನು ಮನಗುಂಡು ಅಲ್ಲಿಯ ಕನ್ನಡ ಧುರೀಣರು ಒಂದುಗೂಡಿ ೧೯೨೯ರ ದಸರೆಯ ದಿನ 'ಸಂಯುಕ್ತ ಕರ್ನಾಟಕ'ದ ಸಾಪ್ತಾಹಿಕವನ್ನು ಪ್ರಾರಂಭಿಸಿದರು. ಮುಂದೆ ೧೯೩೩ರ ಏಪ್ರಿಲ್ ೨೭ರ ಅಕ್ಷಯ ತೃತೀಯೆಯ ಶುಭ ಮುಹೂರ್ತದಲ್ಲಿ ದೈನಿಕ ಪತ್ರಿಕೆಯಾಗಿ ಬಿಡುಗಡೆಗೊಂಡಿತು. ಈ ಸಂದರ್ಭದಲ್ಲಿ ಕೇಸರಿ ಪತ್ರಿಕೆಯ ಸಂಪಾದಕರಾದ ನ.ಚಿ. ಕೇಳಕರ ಅವರು ಕಳಿಸಿದ ಸಂದೇಶವನ್ನು ನೋಡಿದರೆ ಕನ್ನಡ ನಾಡುನುಡಿಯ ಏಳಿಗೆಯ ಬಗ್ಗೆ ಅವರಿಗಿದ್ದ ಕಳಕಳಿ ಎದ್ದು ಕಾಣುತ್ತದೆ : "ಮಾತೃಭಾಷೆಯಲ್ಲಿಯ ದೈನಿಕ ಪತ್ರಿಕೆಯು ಬೆಳಗಾವಿಯಲ್ಲಿ ಇಲ್ಲದ್ದರಿಂದ ಬಹಳೇ ಕೊರತೆಯಾಗಿತ್ತು. ಆದರೆ ಕನ್ನಡ ಮುಂದಾಳುಗಳು ಒಂದು ದೈನಿಕಪತ್ರಿಕೆಯನ್ನು ಹೊರಡಿಸಿ ತಮ್ಮ ಪ್ರಾಂತೀಯ ಜನಗಳ ತೊಂದರೆ, ಅವಶ್ಯಕತೆ, ತಕರಾರು ಮುಂತಾದವುಗಳನ್ನು

ಮತ್ತು ಅಧಿಕಾರಿ ವರ್ಗದ ಜನರಿಂದಾಗುವ ಒಲುಮೆಯನ್ನು ಪ್ರಕಟಿಸಲಿಕ್ಕೆ ಆಶ್ರಯ ಸ್ಥಾನವನ್ನು ಕೊಟ್ಟಿರುವರು. ಇಷ್ಟೇ ಅಲ್ಲ, ಎಲ್ಲರಿಗೆ ಎಲ್ಲ ರೀತಿಯಿಂದಲೂ ಆಶ್ರಯ ದೊರಕಬೇಕೆಂದು ಸಂಪಾದಕರು ತಮ್ಮ ಪತ್ರಿಕೆಯನ್ನು ಮಾತೃಭಾಷೆಯಲ್ಲಿ, ಅಂದರೆ ಕನ್ನಡದಲ್ಲಿ ಹೊರಡಿಸಿರುವರು. ಮಾತೃಭಾಷೆಯ ಸೇವೆ ಮಾಡುವದೆಂದರೆ ಸಾಕ್ಷಾತ್ತಾಗಿ ಮಾತೆಯ ಸೇವೆ ಮಾಡಿದಂತೆಯೇ". ಇಂದಿನ ಮಹಾರಾಷ್ಟ್ರದ ರಾಜಕೀಯ ಮುಖಂಡರಿಗೆ ಇದು ಇನ್ನೂ ಅರ್ಥವಾಗದಿರುವದು ದುರದೃಷ್ಟಕರ ಸಂಗತಿಯಾಗಿದೆ.

ಸಂಯುಕ್ತ ಕರ್ನಾಟಕ ಬೆಳಗಾವಿಯಿಂದ ಪ್ರಕಟವಾಗುತ್ತಿದ್ದಾಗ ಹೈಸ್ಕೂಲ್ ವಿದ್ಯಾರ್ಥಿಯಾಗಿದ್ದ ತಮ್ಮ ಸಂಬಂಧದ ಬಾಲ್ಯದ ನೆನಹುಗಳನ್ನು ಖ್ಯಾತ ಕಾದಂಬರಿಕಾರ ಹಾಗೂ ಪತ್ರಕರ್ತರಾದ ಬಸವರಾಜ ಕಟ್ಟೀಮನಿಯವರು ತಮ್ಮ 'ಕಾದಂಬರಿಕಾರನ ಕಥೆ'ಯಲ್ಲಿ ದಾಖಲಿಸಿರುವದು ಗಮನಾರ್ಹವಾಗಿದೆ.

"ಹನುಮನ ಬೀದಿಯಲ್ಲಿ ಅದರ ಕಾರ್ಯಾಲಯ, 'ನಾಡನರಿಗಳ ಸಂಘ'ದ ಗ್ರಂಥಾಲಯದ ಕೆಲಸಗಾರನಾದ ಬಳಿಕ 'ಸಂಯುಕ್ತ ಕರ್ನಾಟಕ'ದೊಡನೆ ಸಂಬಂಧ ಬೆಳೆಯಿತು. ತಮ್ಮ ಪತ್ರಿಕೆಗೆ ವಿನಿಮಯವಾಗಿ ಬರುತ್ತಿದ್ದ ಪತ್ರಿಕೆಗಳೆಲ್ಲವನ್ನೂ ಅವರು ಕನ್ನಡ ವಾಚನಾಲಯಕ್ಕೆ ಉಚಿತವಾಗಿ ಕೊಟ್ಟು ಸಹಾಯ ಮಾಡುತ್ತಿದ್ದರು. ದೇಶಪಾಂಡೆ ಗೋಪಾಲರಾಯರು ಆಗ 'ಸಂಯುಕ್ತ ಕರ್ನಾಟಕ'ದ ವ್ಯವಸ್ಥಾಪಕರಾಗಿದ್ದರು. ಅವರು ನಮ್ಮೂರಿನ ಸಮೀಪದ ಹುದಲಿಯವರು. ಗಂಗಾಧರರಾಯರ ಬಂಧುಗಳು. ಶ್ರೀ ಪುರೋಹಿತ ಹನುಮಂತಾಚಾರ್ಯರು ಪ್ರಮುಖ ಉಪಸಂಪಾದಕರಾಗಿದ್ದರು. ಆಗ ಹುಡುಗನಾಗಿದ್ದ ನನ್ನನ್ನು ಅವರಿಬ್ಬರೂ ತುಂಬ ಮಮತೆಯಿಂದ ಮಾತನಾಡಿಸುತ್ತಿದ್ದುದು ಈಗಲೂ ನೆನಪಿನಲ್ಲಿದೆ. ಪುರೋಹಿತರಂತೂ ಮೇಲಿಂದಮೇಲೆ ಹತ್ತಿರ ಕರೆದು ಹಿತವಚನಗಳನ್ನು ಹೇಳುತ್ತಿದ್ದರು. ಅವರು ಬ್ರಹ್ಮಚಾರಿಗಳು. ಬಾಗಲಕೋಟೆಯ ಪರಮನಿಷ್ಠ ಮಾಧ್ವ ಅಚಾರ್ಯ ಮನೆತನದವರು. ತಮ್ಮ ಜಾತಿಪದ್ಧತಿಯಂತೆ ಆಚರಿಸುತ್ತಿದ್ದರಾದರೂ ಇತರ ಜಾತಿಗಳವರನ್ನು ಹೀನಾಯವಾಗಿ ಕಂಡವರಲ್ಲ. ಸಂಸಾರದ ಜಂಜಡವಿರಲಿಲ್ಲವಾದುದರಿಂದ 'ಸಂಯುಕ್ತ ಕರ್ನಾಟಕ'ವೇ ಅವರ ಸಂಸಾರವಾಗಿದ್ದಿತು. ತಮ್ಮ ಇಡಿಯ ಆಯುಷ್ಯವನ್ನೇ 'ಸಂಯುಕ್ತ ಕರ್ನಾಟಕ'ಕ್ಕಾಗಿ ವಿನಿಯೋಗಿಸಿದ ಮೂರು, ನಾಲ್ಕು ಜನರಲ್ಲಿ ಅವರೊಬ್ಬರು. ಹೈಸ್ಕೂಲಿನ ಅಭ್ಯಾಸವನ್ನು ಕಡೆಗಣಿಸಿ ನಾನು ಎಷ್ಟೋ ಹಗಲುಗಳನ್ನು 'ಸಂಯುಕ್ತ ಕರ್ನಾಟಕ' ಕಾರ್ಯಾಲಯದಲ್ಲಿ ಕಳೆದುದ್ದುಂಟು. ಅಲ್ಲಿಯ ಪತ್ರಿಕೆ ಪುಸ್ತಕಗಳನ್ನೋದುವದು, ಶ್ರೀ ಪುರೋಹಿತರೂ ಇನ್ನಿತರ ಉಪ ಸಂಪಾದಕರೂ ಕೆಲಸ ಮಾಡುವದನ್ನು ವೀಕ್ಷಿಸುವುದು, ಕರಡು ತಿದ್ದುವದು, ಸಣ್ಣಪುಟ್ಟ ಲೇಖನ ಬರೆಯುವದು, ನನ್ನ ನಿತ್ಯ ಕ್ರಮವಾಯಿತು".

೨

ನನ್ನ ಬಾಲ್ಯದಲ್ಲಿ ಪತ್ರಿಕೆ ಓದುವ ಹವ್ಯಾಸ ಬೆಳೆದಿದ್ದು 'ಸಂಯುಕ್ತ ಕರ್ನಾಟಕ'ದಿಂದಲೇ. ೧೯೩೯-೪೦ರ ಹೊತ್ತಿಗೆ ಪ್ರಾಥಮಿಕ ಏಳನೆಯ ತರಗತಿಯಲ್ಲಿದ್ದಾಗ ಎರಡನೆಯ ಮಹಾಯುದ್ಧ

ಪ್ರಾರಂಭವಾಗಿತ್ತು. ಅಂಗಡಿಗಳಲ್ಲಿ ಸಾಮಾನ್ಯವಾಗಿ ಎಲ್ಲರ ಕೈಯಲ್ಲೂ 'ಸಂಯುಕ್ತ ಕರ್ನಾಟಕ' ಪತ್ರಿಕೆ ಇರುತ್ತಿತ್ತು. ನಾವು ನಾಲ್ಕಾರು ಜನ ಗೆಳೆಯರು ಅಲ್ಲಿ ಹೋಗಿ ಅವರು ಓದುತ್ತಿದ್ದ ಪತ್ರಿಕೆಯಲ್ಲಿಯೇ ಮುಖ ತೂರಿಸಿ ಯುದ್ಧದ ಬಿಸಿ ಬಿಸಿ ಸುದ್ದಿಗಳನ್ನು ಓದುತ್ತಿದ್ದೆವು. ಗಾಂಧೀಜಿಯ ಸತ್ಯಾಗ್ರಹ, ದೇಶಭಕ್ತರ ಜೈಲುವಾಸ, ಲಾಠಿಚಾರ್ಜು, ಏಕೀಕರಣದ ಒತ್ತಡ - ಹೀಗೆ ನಾಡಿನ ಹಾಗೂ ದೇಶವಿದೇಶಗಳ ನಾನಾ ಬಗೆಯ ಸುದ್ದಿಗಳು ಮನಸ್ಸಿನಲ್ಲಿ ವಿಚಿತ್ರ ಭಾವನೆಗಳನ್ನು ಕೆರಳಿಸುತ್ತಿದ್ದವು. ಮುಂದೆ ನಾಲ್ಕಾರು ವರ್ಷಗಳವರೆಗೆ ಯುದ್ಧರಂಗದ ವಿವಿಧ ವರ್ಣನೆಗಳನ್ನೊಳಗೊಂಡ 'ಸಂಜಯ'ರ ಲೇಖನಗಳನ್ನು ಓದಲು ತಪ್ಪುತ್ತಿರಲಿಲ್ಲ. ('ಸಂಯುಕ್ತ ಕರ್ನಾಟಕ'ದಲ್ಲಿ ಮೊದಲಿನಿಂದಲೂ ಸೇವೆ ಸಲ್ಲಿಸುತ್ತ, ಅತ್ಯಂತ ಕಷ್ಟಕಾಲದಲ್ಲಿ ಅದಕ್ಕೆ ಕಾಯಕಲ್ಪ ಚಿಕಿತ್ಸೆ ಒದಗಿಸಿದ ಶ್ರೀ ಕೆ. ಶಾಮರಾಯರೇ ಆ ಹೆಸರಿನಲ್ಲಿ ಬರೆಯುತ್ತಿದ್ದುದು ಆಮೇಲೆ ತಿಳಿದು ಬಂದಿತು.)

ಆಗ ಮುಲ್ಕೀ ಪರೀಕ್ಷೆಯ ಪರಿಣಾಮದೊಂದಿಗೆ ವಿದ್ಯಾರ್ಥಿಗಳ ಹೆಸರುಗಳೂ ಪತ್ರಿಕೆಯಲ್ಲಿ ಪ್ರಕಟವಾಗುತ್ತಿದ್ದವು. ನಾನು ಧಾರವಾಡ ಕೇಂದ್ರಕ್ಕೆ ಪ್ರಥಮ ಸ್ಥಾನ ಪಡೆದು ಪಾಸಾದದ್ದನ್ನು 'ಸಂಯುಕ್ತ ಕರ್ನಾಟಕ'ದಲ್ಲಿ ಓದಿ ಪಡೆದ ಸಂತೋಷವನ್ನು ಮರೆಯುವಂತಿಲ್ಲ. ಆಗ ಹಳ್ಳಿಗಳಲ್ಲಿ ಈ ಪತ್ರಿಕೆಯನ್ನು ಪ್ರಾರಂಭದಿಂದ ಕೊನೆಯ ಅಕ್ಷರದವರೆಗೂ ಓದುತ್ತಿದ್ದವರನ್ನು ನಾನು ನೋಡಿದ್ದೆ. ಹೀಗೆ ಒಂದಿಲ್ಲ ಒಂದು ರೀತಿಯಲ್ಲಿ ಪತ್ರಿಕೆಯೊಡನೆ ನನ್ನ ಆತ್ಮೀಯ ಬಾಂಧವ್ಯ ಬೆಳೆದುಕೊಂಡು ಬಂದಿದೆ. ಆಕಾಶವಾಣಿ, ದೂರದರ್ಶನಗಳಲ್ಲಿ ಎಡೆಬಿಡದೆ ಸುದ್ದಿಗಳು ಪ್ರಕಟವಾಗುತ್ತಿದ್ದರೂ ಪತ್ರಿಕೆಯಲ್ಲಿ ಅದು ಪ್ರಕಟವಾಗಿ ನಮ್ಮ ಕೈಗೆ ಬಂದಾಗಲೇ ಅದು ಅಧಿಕೃತವೆಂದು ನಂಬುವ ಜನ ಸುಶಿಕ್ಷಿತರಲ್ಲಿ ಇಂದಿಗೂ ಕಂಡು ಬರುತ್ತಾರೆ. ಪತ್ರಿಕೆ ಎಂಥ ಪ್ರಭಾವಶಾಲಿ ಮಾಧ್ಯಮ ಎಂಬುದು ಇದರಿಂದ ವ್ಯಕ್ತವಾಗುತ್ತದೆ.

ನಾನು ಹೈಸ್ಕೂಲ್ ಶಿಕ್ಷಣಕ್ಕೆ ಧಾರವಾಡಕ್ಕೆ ಬಂದ ಮೇಲೆ ಇನ್ನೂ ಹಲ ಕೆಲವು ಪತ್ರಿಕೆಗಳು ಪ್ರಾರಂಭವಾಗಿರುವುದು ನನ್ನ ಗಮನಕ್ಕೆ ಬಂದಿತು. ಅವುಗಳ ಮೇಲೂ ನಾನು ಕಣ್ಣಾಡಿಸುತ್ತಿದ್ದೆನಾದರೂ ಸಂಯುಕ್ತ ಕರ್ನಾಟಕವನ್ನು ಓದದಿದ್ದರೆ ಮನಸ್ಸಿಗೆ ಸಮಾಧಾನವೆನಿಸುತ್ತಿರಲಿಲ್ಲ. ಸಾರ್ವಜನಿಕ ವಾಚನಾಲಯವನ್ನು ಪ್ರವೇಶಿಸಿದೊಡನೆ ಅನೇಕ ಪತ್ರಿಕೆಗಳು ಕಣ್ಮನಗಳನ್ನು ಸೆಳೆಯುತ್ತಿದ್ದವು. ವಾರ ಪತ್ರಿಕೆಗಳಲ್ಲಿ 'ಕರ್ಮವೀರ' 'ಪ್ರಜಾಮತ', 'ಶರಣ ಸಂದೇಶ', ಮಾಸಪತ್ರಿಕೆಗಳಲ್ಲಿ 'ಜಯಂತಿ', 'ಜೀವನ', 'ಜಯ ಕರ್ನಾಟಕ', 'ಉಷಾ', 'ಕಥೆಗಾರ', 'ಶಿವಾನುಭವ' ಮೊದಲಾದವು ನನ್ನ ಸಾಹಿತ್ಯಾಭಿರುಚಿಗೆ ಪ್ರಚೋದನೆಯೊದಗಿಸಿದವು. 'ಉಷಾ' ಪತ್ರಿಕೆಯ ಮೂಲಕ ಪ್ರಗತಿಶೀಲ ಸಾಹಿತ್ಯದ ಬಗ್ಗೆ ಕುತೂಹಲವುಂಟಾಗಿ, ಅದರ ಸಂಪಾದಕರಾಗಿದ್ದ ಬಸವರಾಜ ಕಟ್ಟೀಮನಿಯವರು ನಾನು ಕಾಲೇಜು ಸೇರಿದ ಒಂದೆರಡು ವರ್ಷಗಳಲ್ಲಿ ನನ್ನ ಆತ್ಮೀಯ ಸ್ನೇಹಿತರಲ್ಲಿ ಒಬ್ಬರಾದರು. ಈ ನಡುವೆ ಧಾರವಾಡದಲ್ಲಿ ಗ.ಶಿ. ಹುರಳಿಯವರ ವಾರಪತ್ರಿಕೆ 'ಅಂಕುಶ' ಚೂಪಾಗಿತ್ತು. 'ನರಸಿಂಹ' ಮಾಸ ಪತ್ರಿಕೆ ಕೆಲ ಕಾಲ ಧಾರವಾಡ ಸಾಹಿತಿಗಳಲ್ಲಿ ವಿಮರ್ಶೆಯ ನೆಪದಲ್ಲಿ ಕೋಲಾಹಲವೆಬ್ಬಿಸಿ ಪರಸ್ಪರ

ದೋಷಾರೋಪಣೆಯಲ್ಲಿ ತನ್ನ ಅವತಾರವನ್ನು ಸಮಾಪ್ತಿಗೊಳಿಸಿತು. ಶಂಭೂರಾವ್ ಜತಾರರ 'ಸಮಾಜ' ಮಾಸಪತ್ರಿಕೆ ಕಟ್ಟೀಮನಿಯವರ ಸಂಪಾದಕತ್ವದಲ್ಲಿ ಪುನರುಜ್ಜೀವನಗೊಂಡರೂ ಆರ್.ಎಸ್.ಎಸ್.ನ್ನು ಕಟುವಾಗಿ ಟೀಕಿಸಿದ ಒಂದು ಲೇಖನದ ಪರಿಣಾಮವಾಗಿ ಮತ್ತೆ ಕೆಲ ತಿಂಗಳುಗಳಲ್ಲಿಯೇ ಅದು ನಿಂತು ಹೋಯಿತು. ಹಿಂದೆ ಶಂಭೂರಾವ್ ಜತಾರರ ಹಿರಿಯರು ಹೊರಡಿಸುತ್ತಿದ್ದ 'ರಾಜಹಂಸ' ಪತ್ರಿಕೆಯೇ ಉತ್ತರ ಕರ್ನಾಟಕದ ಪ್ರಪ್ರಥಮ ದಿನಪತ್ರಿಕೆಯಾಗಿದ್ದಿತೆಂದು ಕಟ್ಟೀಮನಿಯವರು ಹೇಳಿದ್ದಾರೆ. (ನಾನಿನ್ನೂ ಅದನ್ನು ಪ್ರಮಾಣಿಸಿ ನೋಡಿಲ್ಲ) 'ವಿಶಾಲ ಕರ್ನಾಟಕ'ದ ಪಾಟೀಲ ಪುಟ್ಟಪ್ಪ, 'ನವಯುಗ'ದ ಜಿ. ಆರ್. ಪಾಂಡೇಶ್ವರ, 'ಜನಶಕ್ತಿ' (ವಾರಪತ್ರಿಕೆ)ಯ ಕುಳುಕುಂದ ಶಿವರಾವ್ (ನಿರಂಜನ), 'ಗರ್ಜನೆ' ಮಾಸಪತ್ರಿಕೆಯ ಲೊ.ಪ. ಬಂಕಾಪುರ ಆಗ ನನ್ನ ಆಸಕ್ತಿಯನ್ನು ಕೆರಳಿಸಿದ ಪತ್ರಕರ್ತ ಪಟುಗಳಲ್ಲಿ ಪ್ರಮುಖರು.

೩

ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಹೊಸದಾಗಿ ಪ್ರಾರಂಭವಾದ ವ್ಯಾಸಂಗ ವಿಸ್ತರಣ ಪ್ರಕಟನ ವಿಭಾಗದ (ಇದೇ ಮುಂದೆ 'ಪ್ರಸಾರಾಂಗ'ವಾಯಿತು) ಮುಖ್ಯಸ್ಥನಾಗಿ ೧೯೫೭ರಲ್ಲಿ ನಾನು ಕೆಲಸಕ್ಕೆ ಸೇರಿಕೊಂಡೆ. ಜ್ಞಾನ ಪ್ರಸಾರದ ಯೋಜನೆಯನ್ನು ಕೂಡಲೇ ಸಿದ್ಧಪಡಿಸಿ ಅದೇ ವರ್ಷ ನವೆಂಬರ ೮ ಹಾಗೂ ೯ರಂದು ಮೊದಲನೆಯ ಉಪನ್ಯಾಸ ಶಿಬಿರವನ್ನು ಗದಗಿನಲ್ಲಿ ಏರ್ಪಡಿಸಲಾಯಿತು. ಕುಲಪತಿ ಶ್ರೀ ಸಿ.ಸಿ. ಹುಲಕೋಟಿಯವರು ಉದ್ಘಾಟಿಸಿದ ಆ ಕಾರ್ಯಕ್ರಮದಲ್ಲಿ ಪ್ರೊ. ತೀ.ನಂ. ಶ್ರೀಕಂಠಯ್ಯ, ಪ್ರಿ. ವಿ.ಕೃ. ಗೋಕಾಕ ಮೊದಲಾದ ಐದು ಜನ ಪ್ರಾಧ್ಯಾಪಕರು ವಿವಿಧ ವಿಷಯಗಳನ್ನು ಕುರಿತು ಉಪನ್ಯಾಸವಿತ್ತರು. 'ಸಂಯುಕ್ತ ಕರ್ನಾಟಕ'ದ ಸಹಾಯಕ ಸಂಪಾದಕರಾಗಿದ್ದ ಶ್ರೀ ವ್ಹಿ.ಬಿ. ನಾಯಕ ಅವರು ಎರಡೂ ದಿನ ಉಪಸ್ಥಿತರಿದ್ದರಲ್ಲದೆ ಐದೂ ಉಪನ್ಯಾಸಗಳ ಸಾರವನ್ನು ವಿವರವಾಗಿ ಪ್ರಕಟಿಸಿ ಮುಂದೆಯೂ ಇದೇ ಬಗೆಯ ಪ್ರೋತ್ಸಾಹ ಹಾಗೂ ಪ್ರಚಾರ ನೀಡುತ್ತ ಬಂದದ್ದರಿಂದ ಪ್ರಸಾರೋಪನ್ಯಾಸ ಶಿಬಿರಗಳ ಜನಪ್ರಿಯತೆ ಹೆಚ್ಚುತ್ತ ಬಂದಿತು. ಉಳಿದ ಪತ್ರಿಕೆಗಳೂ ಈ ಯೋಜನೆಗೆ ಇದೇ ರೀತಿ ಪ್ರಚಾರ ನೀಡಿ ನೆರವಾದವು.

೧೯೫೩ರಲ್ಲಿ ವಿನೋಬಾ ಭಾವೆಯವರು ಭೂದಾನ ಚಳುವಳಿಯ ನಿಮಿತ್ತ ಧಾರವಾಡ ಜಿಲ್ಲೆಯ ಪ್ರವಾಸ ಕೈಕೊಂಡ ಸಂದರ್ಭದಲ್ಲಿ ರಾಷ್ಟ್ರಮಟ್ಟದಲ್ಲಿ ಅದೊಂದು ಮಹತ್ವದ ಆಂದೋಲನವಾಗಿದ್ದರಿಂದ 'ಸಂಯುಕ್ತ ಕರ್ನಾಟಕ'ವೂ ಅದರ ವರದಿಗಳನ್ನು ವಿವರವಾಗಿ, ಸಚಿತ್ರವಾಗಿ ಪ್ರಕಟಿಸುತ್ತ ಉಳ್ಳವರ ಮನಃಪರಿವರ್ತನೆಯ ಕಾರ್ಯದಲ್ಲಿ ಪತ್ರಿಕೆ ತನ್ನ ಕರ್ತವ್ಯವನ್ನು ಸಮರ್ಪಕವಾಗಿಯೇ ನೆರವೇರಿಸಿತು. ಶ್ರೀ ಸುರೇಂದ್ರ ದಾನಿಯವರು ವಿಶೇಷ ವರದಿಗಾರರಾಗಿ ಈ ಕಾರ್ಯವನ್ನು ಅತ್ಯಂತ ದಕ್ಷತೆಯಿಂದ ನೆರವೇರಿಸಿದರು. ಕನ್ನಡ ಭಾಷೆ, ಸಾಹಿತ್ಯದ ಬಗ್ಗೆ ತಿಳಿದುಕೊಳ್ಳಲು ವಿನೋಬಾ ಭಾವೆಯವರಿಗೆ ವಿಶೇಷ ಆಸ್ಥೆಯಿರುವುದನ್ನು ತಿಳಿದು, ಆಗ ಹಾನಗಲ್ಲ ತಾಲೂಕಿನ ತಿಳವಳ್ಳಿಯಲ್ಲಿ ಅವರು ಬಿಡಾರ ಹೂಡಿದಾಗ ಧಾರವಾಡ ಜಿಲ್ಲಾ

ಗ್ರಾಮೋದ್ಯೋಗ ಸಂಸ್ಥೆಯಲ್ಲಿ ಮುಖ್ಯಸ್ಥರಾಗಿದ್ದ ಕವಿ ವ್ಹಿ.ಜಿ. ಭಟ್ಟ ಅವರು ಅದಕ್ಕೊಂದು ಅವಕಾಶ ಒದಗಿಸಿದರು. ಶ್ರೀಯುತರಾದ ಬೇಂದ್ರೆ, ಗೋಕಾಕ, ಮಾಳವಾಡ ಅವರ ಜೊತೆಗೆ ನನ್ನನ್ನೂ ಕರೆದುಕೊಂಡು ತಿಳವಳ್ಳಿಯಲ್ಲಿ ವಿನೋಬಾಜಿಯವರ ಭೆಟ್ಟಿಯ ಏರ್ಪಾಡು ಮಾಡಿದರು. ವಿನೋಬಾಜಿಯವರು ಕನ್ನಡದಲ್ಲಿ ಸಹಿ ಮಾಡುವದನ್ನು ಕಲಿತಿದ್ದರಲ್ಲದೆ ನಮ್ಮ ಕವಿತೆಗಳನ್ನು ಮೂಲ ಕನ್ನಡದಲ್ಲಿಯೇ ಓದಿಸಿ ಕೇಳಿದರು. ಭೂಮಿ ತಾಯಿಯ ಪರಿಕಲ್ಪನೆಯನ್ನು ಬೇಂದ್ರೆಯವರು ತಮ್ಮದೇ ಆದ ರೀತಿಯಲ್ಲಿ ವಿವರಿಸಿದಾಗ ವಿನೋಬಾಜಿಯವರು ಹರ್ಷಭರಿತರಾದರು. ಮರುದಿನದ 'ಸಂಯುಕ್ತ ಕರ್ನಾಟಕ'ದಲ್ಲಿ ನಮ್ಮ ಸಂಭಾಷಣೆಯ ವಿವರಗಳನ್ನು ಸುರೇಂದ್ರ ದಾನಿಯವರು ಸಾರವತ್ತಾಗಿ ವರದಿ ಮಾಡಿದ್ದರು.

೧೯೫೭ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಆಶ್ರಯದಲ್ಲಿ ೩೯ನೆಯ ಕನ್ನಡ ಸಾಹಿತ್ಯ ಸಮ್ಮೇಳನ ಧಾರವಾಡದಲ್ಲಿ ವಿಜೃಂಭಣೆಯಿಂದ ನೆರವೇರಿತು. ಏಕೀಕರಣದ ನಂತರ ಅದೇ ಮೊದಲ ಸಮ್ಮೇಳನವಾಗಿದ್ದರಿಂದ ಸಮಗ್ರ ಕರ್ನಾಟಕವನ್ನು ಪ್ರತಿನಿಧಿಸುವ ರೀತಿಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಸಾಹಿತಿಗಳನ್ನು ಬರಮಾಡಿಕೊಂಡು ವಿಶಿಷ್ಟ ಬಗೆಯ ಕಾರ್ಯಕ್ರಮಗಳನ್ನು ಸಂಯೋಜಿಸಲಾಗಿತ್ತು. ಸಮಗ್ರವಾಗಿ ಹಾಗೂ ವಿಶೇಷಾಂಶಗಳಿಗೆ ಹೆಚ್ಚಿನ ಗಮನ ಕೊಟ್ಟು ವರದಿ ಪ್ರಕಟಿಸಿದ ಪತ್ರಿಕೆಗಳಲ್ಲಿ 'ಸಂಯುಕ್ತ ಕರ್ನಾಟಕ' ಒಡೆದು ಕಾಣುತ್ತಿತ್ತು.

ಕರ್ನಾಟಕ ವಿಶ್ವವಿದ್ಯಾಲಯದ ಘಟಿಕೋತ್ಸವದ ಸಂದರ್ಭದಲ್ಲಿ ಕರ್ನಾಟಕದ ಒಟ್ಟು ಸಂಸ್ಕೃತಿಯನ್ನು ಬಿಂಬಿಸುವ ಸೂಕ್ತವಾದ ನಾಡಗೀತೆಯೊಂದನ್ನು ಪ್ರತಿವರ್ಷ ಹಾಡಿಸಬೇಕೆಂಬುದು ಕುಲಪತಿಗಳಾದ ಡಾ. ಡಿ.ಸಿ. ಪಾವಟೆಯವರ ಅಪೇಕ್ಷೆಯಾಗಿತ್ತು. ಅದನ್ನು ನನ್ನೊಡನೆ ಪ್ರಸ್ತಾಪಿಸಿದ್ದರು ಕೂಡಾ. ಅವರ ಪ್ರೇರಣೆಯಿಂದಲೇ ನಾನು 'ವಿಶ್ವಭಾರತಿಗೆ ಕನ್ನಡದಾರತಿ' ಎಂಬ ಗೀತೆಯನ್ನು ಬರೆದೆ. ಅದನ್ನವರು ಬಹುವಾಗಿ ಮೆಚ್ಚಿಕೊಂಡು ಕರ್ನಾಟಕ ಕಾಲೇಜಿನ ಸಂಗೀತ ವಿಭಾಗದ ಶ್ರೀಮತಿ ಶಾರದಾ ಹಾನಗಲ್ಲ ಅವರಿಗೆ ಕೂಡಲೇ ರಾಗ ಸಂಯೋಜನೆ ಮಾಡಲು ತಿಳಿಸಿದರು. ಅದೇ ವರ್ಷ (೧೯೬೧) ಘಟಿಕೋತ್ಸವದಲ್ಲಿ ವಿದ್ಯಾರ್ಥಿ ವೃಂದ ಸಮೂಹ ಗೀತೆಯಾಗಿ ಆ ಕವಿತೆಯನ್ನು ಹಾಡಿದಾಗ ಇಡೀ ಸಭೆ ರೋಮಾಂಚನಗೊಂಡು ದೀರ್ಘ ಚಪ್ಪಾಳೆಯ ಮೂಲಕ ತನ್ನ ಹರ್ಷವನ್ನು ವ್ಯಕ್ತಪಡಿಸಿತು. ಮರುದಿನ 'ಸಂಯುಕ್ತ ಕರ್ನಾಟಕ'ದ ಮುಖಪುಟದಲ್ಲಿ ಸಮಾರಂಭದ ವರದಿ ಪ್ರಕಟವಾಯಿತು. ವರದಿಯ ಮಧ್ಯ ಒಂದು ಚೌಕಟ್ಟಿನಲ್ಲಿ ಘಟಿಕೋತ್ಸವ ಗೀತೆಯನ್ನು ವಿಶೇಷವಾಗಿ ಪ್ರಶಂಸಿಸಿ ಅದು ನನ್ನಿಂದ ರಚಿತವಾದದ್ದೆಂಬುದನ್ನೂ ಸೂಚಿಸಲಾಗಿತ್ತು. ಅಂದು ವಿಶೇಷ ವರದಿಗಾರರಾಗಿ ಕೆ.ಎಸ್. ಶರ್ಮಾ ಬಂದಿದ್ದರೆಂದು ತೋರುತ್ತದೆ. ಅದನ್ನು ಓದಿ, ಸೆನೆಟ್ ಸದಸ್ಯರನ್ನೊಳಗೊಂಡು ಅನೇಕರು ನನಗೆ ಅಭಿನಂದನೆಯ ಪತ್ರ ಬರೆದದ್ದುಂಟು.

ಶಿಕ್ಷಣ, ಆಡಳಿತ ಮೊದಲುಗೊಂಡು ಎಲ್ಲ ಹಂತದಲ್ಲಿ ಕರ್ನಾಟಕದಲ್ಲಿ ಕನ್ನಡಕ್ಕೆ ಸಾರ್ವಭೌಮಸ್ಥಾನ ಸಿಗಬೇಕೆಂದು ೧೯೮೨ರಲ್ಲಿ ಗೋಕಾಕ್ ಚಳವಳಿ ಪ್ರಾರಂಭವಾಯಿತು.

ಅನೇಕ ಕನ್ನಡಪರ ಸಂಘಟನೆಗಳು ಫೆಬ್ರುವರಿ ೨೩, ೧೯೮೭ರಂದು ಕರ್ನಾಟಕ ವಿದ್ಯಾವರ್ಧಕ ಸಂಘದಲ್ಲಿ ಸಭೆ ಸೇರಿ, ಅದರ ನೇತೃತ್ವದಲ್ಲಿ ಅಖಿಲ ಕರ್ನಾಟಕ ಕೇಂದ್ರ ಕನ್ನಡ ಕ್ರಿಯಾಸಮಿತಿ ರಚಿತಗೊಂಡು ಹೋರಾಟ ಪ್ರಾರಂಭಿಸಲು ಅದು ರಾಜ್ಯಾದ್ಯಂತ ವ್ಯಾಪಿಸಿ, ಶಿಕ್ಷಣ, ಸಾಹಿತ್ಯ, ಚಲನಚಿತ್ರ, ಸಮೂಹ ಮಾಧ್ಯಮ, ಹೀಗೆ ಎಲ್ಲ ಕ್ಷೇತ್ರಗಳ ಧುರೀಣರೂ, ಕಲಾವಿದರೂ ಹೋರಾಟದಲ್ಲಿ ಭಾಗವಹಿಸಿ ನಾಡಿನ ನಾನಾ ಭಾಗಗಳಲ್ಲಿ ಧರಣಿ, ಉಪವಾಸ ಸತ್ಯಾಗ್ರಹ, ಪ್ರತಿಭಟನೆಗಳು ಬಿಟ್ಟೂ ಬಿಡದೆ ನಡೆಯತೊಡಗಿದವು. ಗೋಕಾಕ ಸಮಿತಿಯ ಭಾಷಾ ಸೂತ್ರವನ್ನು ಕೂಡಲೇ ಜಾರಿಗೆ ತರಬೇಕೆಂದು ಸರಕಾರದ ಮೇಲೆ ಒತ್ತಡ ತರಲಾಯಿತು. ಪ್ರತಿಬಂಧಕಾಜ್ಞೆಯನ್ನು ಉಲ್ಲಂಘಿಸಿ ಸಾವಿರಾರು ಜನ ಬಂಧನಕ್ಕೊಳಗಾಗಿ ಜೈಲು ಸೇರಿದರು. ಎರಡನೆಯ ಹಂತದಲ್ಲಿ ಹೋರಾಟ ಉಗ್ರ ರೂಪವನ್ನು ತಳೆದಾಗ ಸರಕಾರ ಮಣಿಯಬೇಕಾಯಿತು. ಅಭೂತಪೂರ್ವವಾದ ಜನತೆಯ ಈ ಹೋರಾಟದ ವರದಿಗಳು ಪುಂಖಾನುಪುಂಖವಾಗಿ ಪತ್ರಿಕೆಗಳಲ್ಲಿ ದಿನವೂ ಪ್ರಕಟವಾದವು. ವಿಶೇಷ ಲೇಖನಗಳೂ ಸಂಪಾದಕೀಯ ಟಿಪ್ಪಣಿಗಳೂ ಕಾಣಿಸಿಕೊಂಡವು. ಈ ಸಂದರ್ಭದಲ್ಲಿ ಚಳವಳಿಯ ಕೇಂದ್ರವಾದ ಧಾರವಾಡಕ್ಕೆ 'ಸಂಯುಕ್ತ ಕರ್ನಾಟಕ' ತೀರ ಹತ್ತಿರವಿದ್ದುದರಿಂದ ಕಾರ್ಯಯೋಜನೆಯ ಹೆಚ್ಚಿನ ಸಂಗತಿಗಳು ಸಹಜವಾಗಿ ಅದಕ್ಕೆ ಬೇಗ ಗೊತ್ತಾಗುತ್ತಿದ್ದವು. ಅಷ್ಟೇ ವೇಗದಲ್ಲಿ ಅವುಗಳನ್ನು ಪ್ರಕಟಿಸಿ 'ಸಂಯುಕ್ತ ಕರ್ನಾಟಕ' ಮುಂಚೂಣಿಯಲ್ಲಿ ನಿಲ್ಲುತ್ತಿತ್ತು. ಈ ಭಾಷಾ ಆಂದೋಲನದ ಶಕ್ತಿ, ಸಂಘಟನೆ ವ್ಯವಸ್ಥೆಯ ಅಚ್ಚುಕಟ್ಟುತನ, ಅಹಿಂಸಾತ್ಮಕ ಪ್ರತಿಭಟನೆಗಳು ಗಾಂಧೀಜಿಯವರ ಸತ್ಯಾಗ್ರಹವನ್ನು ನೆನಪಿಗೆ ತರುತ್ತವೆಂದು ಪತ್ರಿಕೆ ಬರೆಯಿತು. ಇದರಿಂದ ಕಾರ್ಯಕರ್ತರಿಗೆ ಹೆಚ್ಚಿನ ನೈತಿಕ ಬೆಂಬಲ ದೊರೆಯಿತು.

೪

ಪತ್ರಿಕೆಯ ಆಡಳಿತವನ್ನೆಲ್ಲ ತಮ್ಮ ಕೈಯಲ್ಲಿಟ್ಟುಕೊಂಡು ಕಾಲು ಶತಮಾನ ಕಾಲ ಹಗಲಿರುಳು ದುಡಿದು, ಸಂಸ್ಥೆಯನ್ನು ಕಟ್ಟಿ, ಬೆಳೆಸಿ 'ಸಂಯುಕ್ತ ಕರ್ನಾಟಕ'ವನ್ನು ಉತ್ತರ ಕರ್ನಾಟಕದಲ್ಲಿ ಜನಪ್ರಿಯ ಪತ್ರಿಕೆಯನ್ನಾಗಿಸಿದ ಶ್ರೇಯಸ್ಸು ನಿಸ್ಸಂದೇಹವಾಗಿ ಮೊಹರೆ ಹಣಮಂತರಾಯರಿಗೆ ಸಲ್ಲುತ್ತದೆ. ಅವರ ಧೈರ್ಯ ಮತ್ತು ದೂರದೃಷ್ಟಿ ಉಳಿದವರಿಗೂ ಪ್ರೇರಕ ಶಕ್ತಿಯಾಯಿತು. ರಾಷ್ಟ್ರೀಯ ವಿಚಾರಧಾರೆಯನ್ನು ಪ್ರಚುರಪಡಿಸುವಲ್ಲಿ ಪ್ರಮುಖ ಪಾತ್ರ ವಹಿಸುವದಷ್ಟೇ ಆಗಿರದೆ, ಸ್ಥಾಪಕರಿಂದ ಕಾರ್ಯಕರ್ತರವರೆಗೆ ಎಲ್ಲರೂ ದೇಶಭಕ್ತ ಕಾಂಗ್ರೆಸ್ಸಿಗರೇ ಆಗಿದ್ದುದು ಈ ಪತ್ರಿಕಾ ಬಳಗದ ವೈಶಿಷ್ಟ್ಯವಾಗಿತ್ತು. ಮುಂದೆ ಕಾಲಕಾಲಕ್ಕೆ ಸಂಪಾದಕರಾಗಿ ಬಂದರೂ ಸಹ ತಮ್ಮ ಇತಿಮಿತಿಯಲ್ಲಿ ಪತ್ರಿಕೆಯ ಮೂಲ ಧ್ಯೇಯಕ್ಕೆ ವ್ಯತ್ಯಯವಾಗದಂತೆ, ಆಕಸ್ಮಿಕವಾಗಿ ಒಳಗಿನವರಿಂದಲೇ ಒದಗಿದ ಆತಂಕವನ್ನೂ ದಾಟಿ ಪತ್ರಿಕೆಯ ಪ್ರಗತಿಗೆ ತಮ್ಮ ಸೇವೆಯನ್ನು ಸಲ್ಲಿಸುತ್ತ ಬಂದಿದ್ದಾರೆ. ವೈಯಕ್ತಿಕ ಒಡೆತನ ಹಾಗೂ ಲಿಮಿಟೆಡ್ ಕಂಪನಿಗಳ ಒಡೆತನದಲ್ಲಿ ಪ್ರಕಟವಾಗದೆ ಸಾರ್ವಜನಿಕ ಧರ್ಮದರ್ಶಿತ್ವ ಸಂಸ್ಥೆಯಾಗಿ 'ಲೋಕಶಿಕ್ಷಣ ಟ್ರಸ್ಟಿ'ನ ಆಶ್ರಯದಲ್ಲಿ ಪತ್ರಿಕೆ ನಡೆಯುತ್ತಿರುವುದು ಒಂದು ಪ್ರಧಾನ ವೈಶಿಷ್ಟ್ಯವಾಗಿದೆ.

೧೯೫೪ರ ವೇಳೆಗೆ ಕನ್ನಡದಲ್ಲಿ 'ಕರ್ಮವೀರ' ವಾರಪತ್ರಿಕೆ ಬಿಟ್ಟರೆ ಹೊಸ ಆಯಾಮದ ಪತ್ರಿಕೆಗಳಿರಲಿಲ್ಲ. ಏಕೀಕರಣ ಹಾಗೂ ನಾಡಹಬ್ಬದ ಪ್ರಚಾರಗಳಿಗೆ ಮಾಧ್ಯಮವಾಗಿದ್ದ ಅದು ಆಗಾಗ ಸ್ಥಗಿತಕೊಂಡು ಮತ್ತೆ ತಲೆಯೆತ್ತುತ್ತಿತ್ತು. ಈಚೆಗೆ ಪ್ರಚಲಿತವಾಗಿರುವ ಅನೇಕ ಹೊಸ ರೀತಿಯ ವಾರ ಪತ್ರಿಕೆಗಳ ಸಂದರ್ಭದಲ್ಲಿ ತನ್ನ ವೈಶಿಷ್ಟ್ಯವನ್ನು ಕಾಯ್ದುಕೊಳ್ಳಲು ಪ್ರಯತ್ನಿಸಿತು. 'ರೀಡರ್ಸ್ ಡೈಜೆಸ್ಟ್' ಮಾದರಿಯ ಜ್ಞಾನ ವಿಜ್ಞಾನ ಮನರಂಜನೆಯ ವಿಷಯ ವೈವಿಧ್ಯದಿಂದ ಕೂಡಿದ 'ಕಸ್ತೂರಿ'ಯನ್ನು ೧೯೫೬ರಲ್ಲಿ ಪ್ರಕಟಿಸಲು ಪ್ರಾರಂಭಿಸಿ ಲೋಕಶಿಕ್ಷಣ ಟ್ರಸ್ಟ್ ನೂತನ ಸಾಹಸದಿಂದ ಓದುಗರ ಪ್ರಶಂಸೆಗೆ ಪಾತ್ರವಾಯಿತು. ಶ್ರೀ ಪಾ.ವೆಂ. ಆಚಾರ್ಯರಂತಹ ಜ್ಞಾನ ಪಿಪಾಸುಗಳು ಹಾಗೂ ಸಮರ್ಥ ಲೇಖಕರು ಕರ್ಣಧಾರತ್ವ ವಹಿಸಿ ತಮ್ಮ ಪ್ರತಿಭೆಯಿಂದ 'ಕಸ್ತೂರಿ'ಯ ಪರಿಮಳವನ್ನು ನಾಡಿನ ಒಳಗೂ ಹೊರಗೂ ಹರಡುವಂತೆ ಮಾಡಿದ್ದರಿಂದ ಇಂದಿಗೂ ಅದು ತನ್ನ ಹೆಸರನ್ನು ಉಳಿಸಿಕೊಂಡಿದೆ. ಅದಕ್ಕೆ ಪೂರ್ವದಲ್ಲಿಯೇ ಶ್ರೀ ಪಾಟೀಲ ಪುಟ್ಟಪ್ಪನವರ 'ಪ್ರಪಂಚ' ವಾರಪತ್ರಿಕೆ ಅಂದಿನ ಸಂದರ್ಭದಲ್ಲಿ ವೃತ್ತಿಯ ಪರಿಜ್ಞಾನ ಮತ್ತು ಪರಿಣತಿಯ ಹೊಸ ಆಯಾಮದಿಂದ ಕರ್ನಾಟಕದ ಪತ್ರಿಕಾ ಪ್ರಪಂಚದಲ್ಲಿ ಹೊಸ ಶಕೆಯನ್ನು ಪ್ರಾರಂಭಿಸಿದ್ದನ್ನು ಮರೆಯುವಂತಿಲ್ಲ.

ಹಾಗೆ ನೋಡಿದರೆ 'ಸಂಯುಕ್ತ ಕರ್ನಾಟಕ' ನಡೆದು ಬಂದ ದಾರಿ ಅಷ್ಟೊಂದು ಸುಗಮವಾಗಿರಲಿಲ್ಲ. ಆರ್ಥಿಕವಾಗಿ ಆಡಳಿತಾತ್ಮಕವಾಗಿ ಅನೇಕ ಬಗೆಯ ಕಷ್ಟ ನಷ್ಟಗಳನ್ನು, ಅಡ್ಡಿಆತಂಕಗಳನ್ನು, ಅನಿರೀಕ್ಷಿತ ಆಪತ್ತುಗಳನ್ನು ಎದುರಿಸುವಂತಾದರೂ ತನ್ನ ಮೂಲಧ್ಯೇಯಕ್ಕೆ ಚ್ಯುತಿ ಬರದಂತೆ ಹಾಗೂ ತನ್ನ ಕೈಹಿಡಿದು ನಡೆದುಕೊಂಡು ಬಂದ ಜನತೆಯ ಆಶೋತ್ತರಗಳಿಗೆ ಭಂಗ ಬರದಂತೆ ನೋಡಿಕೊಂಡದ್ದು ಅದರ ಅದೃಷ್ಟವೆಂದೇ ಹೇಳಬೇಕು. ಅದರಲ್ಲೂ ಮಾರ್ಗ ಮಧ್ಯದಲ್ಲಿ ಸುಮಾರು ಹನ್ನೆರಡು ವರ್ಷ ಪರೀಕ್ಷಾ ಕಾಲವನ್ನೇ ಅನುಭವಿಸಬೇಕಾಗಿ ಬಂದದ್ದು ಬಹಳ ಜನರಿಗೆ ಗೊತ್ತಿರಲಿಲ್ಲ. ೧೯೯೬ರಲ್ಲಿ ಲೋಕ ಶಿಕ್ಷಣ ಟ್ರಸ್ಟ್ ಪ್ರಕಟಿಸಿದ 'ಹನ್ನೆರಡು ವರ್ಷಗಳ ವನವಾಸ' ಪುಸ್ತಿಕೆಯ ಮೂಲಕ ಅದರ ಅಂತರಂಗದ ಕಥೆ ಬಹಿರಂಗಕ್ಕೆ ಬಂದಿತು. ಪತ್ರಕರ್ತ ಸತ್ಯಸಂಶೋಧಕನಾಗದೆ ವೃತ್ತಿ ರಾಜಕಾರಣಿಗಳಂತಾಗತೊಡಗಿದಾಗ ಇಂಥ ಅವಘಡಗಳು ಸಂಭವಿಸುವದನ್ನು ಇನ್ನಿತರ ಕೆಲವು ಪತ್ರಿಕೆಗಳ ಸಂದರ್ಭದಲ್ಲಿಯೂ ಕಾಣಬಹುದು. ೧೯೮೬ರಿಂದ ಹೊಸ ಧರ್ಮದರ್ಶಿ ಮಂಡಳಿ, ಜನತೆಯ ಆಶೋತ್ತರಗಳಿಗೆ ಸ್ಪಂದಿಸುತ್ತ ಜನತೆಯ ಪ್ರೀತಿ ವಿಶ್ವಾಸಗಳನ್ನು ಮತ್ತೆ ಗಳಿಸಿಕೊಂಡುದು ಸಮಾಧಾನದ ಸಂಗತಿ. ಅದರ ಇಂದಿನ ಪರಿಸ್ಥಿತಿಯ ಪ್ರಶಾಂತಿಯನ್ನು ಕಂಡಾಗ ಟೆನಿಸನ್ ಕವಿಯ ಒಂದು ಸಾಲು ನೆನಪಾಗುತ್ತದೆ

By zig-zag paths and jets of pointed rock
came on the shining levels of the lake

ಹಿರಿಯ ಗಾಂಧಿವಾದಿ ಹಾಗೂ ಚಿಂತಕರಾದ ಶ್ರೀ ಹಾರನಹಳ್ಳಿ ರಾಮಸ್ವಾಮಿಯವರು ಲೋಕಶಿಕ್ಷಣ ಟ್ರಸ್ಟಿನ ಅಧ್ಯಕ್ಷತೆ ವಹಿಸಿಕೊಂಡ ಮೇಲೆ ಸಂಸ್ಥೆ ಮತ್ತೆ ಅಭಿವೃದ್ಧಿಯ ಪಥದಲ್ಲಿ 'ಸಾಧನೆಯ ಪರ್ವ'ಕ್ಕೆ ನಾಂದಿ ಹಾಡಿದೆ. ಹಿರಿಯ ನ್ಯಾಯವಾದಿಗಳೂ ಶಿಕ್ಷಣ ತಜ್ಞರೂ ಆದ

ಡಾ. ಜಿ.ಎಂ. ಪಾಟೀಲರಂಥವರು ದೀರ್ಘ ಅವಧಿಯಲ್ಲಿ ಧರ್ಮದರ್ಶಿ ಮಂಡಳಿಯ ಸದಸ್ಯರಾಗಿ, ಉಳಿದ ಸದಸ್ಯರ ಸಹಕಾರದೊಂದಿಗೆ ಸಿಬ್ಬಂದಿ ವರ್ಗದ ಹಿತರಕ್ಷಣೆಗೆ ತಕ್ಕ ಕ್ರಮ ಕೈಗೊಂಡಿರುವುದಾಗಿ ತಿಳಿದು ಬಂದಿದೆ. ಐದು ವರ್ಷಗಳ ಹಿಂದೆ ಹುಬ್ಬಳ್ಳಿ ಕಾರ್ಯಾಲಯದಲ್ಲಿ ಜರುಗಿದ ಪತ್ರಿಕೆಯ ಎಪ್ಪತ್ತನೆಯ ಹುಟ್ಟುಹಬ್ಬದ ದಿನಾಚರಣೆಯ ಮುಖ್ಯ ಅತಿಥಿಯಾಗಿ ಪಾಲ್ಗೊಂಡ ಸಂದರ್ಭದಲ್ಲಿ ಕಾರ್ಯಾಲಯದಲ್ಲಿ ಸೌಹಾರ್ದ ವಾತಾವರಣ ಮೂಡಿ ನೌಕರರು ನಿರಾತಂಕವಾಗಿ ಕಾರ್ಯನಿರ್ವಹಿಸುತ್ತಿರುವುದನ್ನು ಕಂಡು ನನಗೆ ತುಂಬ ಸಂತೋಷವಾಯಿತು. 'Experience is the name which we give to our mistakes' ಎಂದು ಆಸ್ಕರ್ ವೈಲ್ಡ್ ಹೇಳಿದ್ದನ್ನು ಇಲ್ಲಿ ಸ್ಮರಿಸಬಹುದು. ಹಿಂದಿನ ಅನುಭವಗಳಿಂದ ಪಾಠ ಕಲಿತು ಸರಿಯಾದ ದಾರಿಯಲ್ಲಿ ಮುಂದುವರಿಯುವುದೇ ನಿಜವಾದ ಪ್ರಗತಿಯ ಲಕ್ಷಣ.

ಲೋಕ ಶಿಕ್ಷಣ ಟ್ರಸ್ಟ್ ಗ್ರಂಥಮಾಲೆಯಲ್ಲಿ ಜನರ ಬದುಕಿಗೆ ಬೆಳಕು ನೀಡಬಲ್ಲ ಹಲವಾರು ಮೌಲಿಕ ಗ್ರಂಥಗಳು ಪ್ರಕಟವಾಗಿವೆ. ೧೯೮೬ರ ಎರಡನೆಯ ಘಟ್ಟದಲ್ಲಿಯೂ ಆ ಕಾರ್ಯ ಯಥೋಚಿತವಾಗಿ ಮುಂದುವರಿದಿರುವುದು ಸ್ತುತ್ಯ ಸಂಗತಿ. ಇತ್ತೀಚೆಗೆ ಒಂದು ಮಹತ್ವದ ಕಾರ್ಯದಲ್ಲಿ ಅದು ಪಾಲ್ಗೊಂಡ ವಿಷಯ ಅನೇಕರ ಗಮನಕ್ಕೆ ಬಂದಂತಿಲ್ಲ. ಗಳಗನಾಥರ ಇಪ್ಪತ್ತೆಂಟು ಕಾದಂಬರಿಗಳನ್ನು ಆರು ಸಂಪುಟಗಳಲ್ಲಿ ಸಮಗ್ರವಾಗಿ ಪ್ರಕಟಿಸಲು ಅದರ ಸಂಪೂರ್ಣ ವೆಚ್ಚವನ್ನು ಅಂದರೆ ಆರು ಲಕ್ಷ ರೂ.ಗಳ ಮೊತ್ತದಷ್ಟು ಹಣವನ್ನು ಹಂಪಿ ವಿಶ್ವವಿದ್ಯಾಲಯಕ್ಕೆ ನೀಡಿ ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಅಮೋಘವಾದ ಸೇವೆ ಸಲ್ಲಿಸಿದೆ. ಇದಕ್ಕೆ ಮುಖ್ಯ ಕಾರಣಕರ್ತರಾದವರು ಟ್ರಸ್ಟಿನ ಕಾರ್ಯದರ್ಶಿಗಳೂ ಪತ್ರಿಕೆಯ ವ್ಯವಸ್ಥಾಪಕ ಸಂಪಾದಕರೂ ಆಗಿದ್ದ ದಿ. ಕೆ. ಶಾಮರಾಯರು. ಕರ್ನಾಟಕ ವಿದ್ಯಾವರ್ಧಕ ಸಂಘದ ೧೧೦ನೆಯ ಸಂಸ್ಥಾಪನ ದಿನದ ಸಮಾರಂಭದಲ್ಲಿ ಹಾಗೂ ಬೆಳಗಾವಿ ಕೆ.ಎಲ್.ಇ. ಸಂಸ್ಥೆ ಅವರನ್ನು ಸನ್ಮಾನಿಸಿದ ಸಭೆಯಲ್ಲಿ ನಾನೂ ಅವರ ಜೊತೆಗೆ ಭಾಗವಹಿಸಿದ್ದೆ. ಶಾಮರಾಯರ ಸಂಪರ್ಕ ನನಗೆ ಬಹಳ ಬಂದಿರದಿದ್ದರೂ ಅವರ ಮಾತುಗಳಲ್ಲಿ ದಿಟ್ಟತನದ ಜಿಗಟುಗಾರಿಕೆಯನ್ನು, ಹೋರಾಟದ ಮನೋಧರ್ಮವನ್ನೂ ಕಂಡುಕೊಳ್ಳಲು ಬಹಳ ಸಮಯ ಬೇಕಿರಲಿಲ್ಲ. "ಹೋರಾಟದ ಛಲ ಎಲ್ಲಿಯವರೆಗೆ ನಮ್ಮಲ್ಲಿ ಮೂಡುವುದಿಲ್ಲವೋ ಅಲ್ಲಿಯವರೆಗೆ ಉತ್ತರ ಕರ್ನಾಟಕದ ಅಭಿವೃದ್ಧಿ ಅಸಾಧ್ಯ. ಉತ್ತರ ಕರ್ನಾಟಕಕ್ಕೆ ಅನ್ಯಾಯವಾಗಿದೆ ಎಂಬ ಕೂಗಿಗೆ ನಾವೇ ಕಾರಣವಾಗಿದ್ದೇವೆ. ಸ್ವಾತಂತ್ರ್ಯಕ್ಕಾಗಿ, ಏಕೀಕರಣಕ್ಕಾಗಿ ಹೋರಾಡಿ ಜೈಲುವಾಸ ಅನುಭವಿಸಿದೆವು. ಆದರೆ ಇಂದು ಆದದ್ದೇನು?" ಎಂದು ಪ್ರಶ್ನಿಸಿದ ಅವರು, ಇದಕ್ಕೆ ನಮ್ಮಲ್ಲಿನ ದೌರ್ಬಲ್ಯವೇ ಕಾರಣ ಎಂದೂ ವಿಶ್ಲೇಷಿಸಿದರು. ತಾವು ಸಂಯುಕ್ತ ಕರ್ನಾಟಕಕ್ಕೆ ಏನೂ ಮಾಡಿಲ್ಲ. ಏನಾದರೂ ಮಾಡಿದ್ದರೆ ಅದು ಋಣ ತೀರಿಸಿಕೊಳ್ಳಲು ಮಾತ್ರ ಎಂಬ ನಮ್ರತೆಯೂ ಅವರಲ್ಲಿತ್ತು.

ಪತ್ರಿಕೆಗಳ ದೃಷ್ಟಿಯಿಂದ ಸುದ್ದಿ ಎನ್ನಿಸದ ಎಷ್ಟೋ ಘಟನೆಗಳು, ಸಂಗತಿಗಳು ಜಗತ್ತಿನಲ್ಲಿ ಜನತೆಯ ಜೀವನದಲ್ಲಿ ಸಂಭವಿಸುತ್ತಿರುತ್ತವೆ. ಆದ್ದರಿಂದ ಪತ್ರಿಕಾ ಸುದ್ದಿಗಳಷ್ಟರಿಂದಲೇ ಜಗತ್ತು ನಡೆಯುತ್ತದೆಂದು ತಿಳಿದರೆ ತಪ್ಪಾದೀತು. ಅಂಥ ಅಚ್ಚಿನ ಮುಖ ಕಾಣದ ಸುದ್ದಿಗಳಿಗೆ 'ಅಪತ್ರಿಕಾ

ವಾರ್ತೆ’ ಎಂಬ ಪದವನ್ನು ಕುವೆಂಪು ಟಂಕಿಸಿದ್ದರು. ಅಂಥ ವಾರ್ತೆಗಳ ಕಡೆಗೂ ಗಮನ ಹರಿಸಬೇಕಾದುದು ಅವಶ್ಯ. ಕೆಟ್ಟಸುದ್ದಿಗಳಿಗೇ ಹೆಚ್ಚಿನ ಪ್ರಚಾರ ದೊರೆಯುತ್ತ ಹೋದರೆ ಒಳ್ಳೆಯದನ್ನು ಎತ್ತಿ ತೋರಿಸುವರಾರು? ಇದೂ ಅಲ್ಲದೆ ಸಮಗ್ರ ರಾಜ್ಯದ ಆಸಕ್ತಿಯ ಕಾರ್ಯಕ್ರಮಗಳು ಬೆಂಗಳೂರಿನ ಹೊರಗೂ, ಮಂತ್ರಿಮಾನ್ಯರ ಉಪಸ್ಥಿತಿಯಿಲ್ಲದೆಯೂ ಬೇರೆ ಬೇರೆ ಊರುಗಳಲ್ಲಿ ನಡೆಯುತ್ತಿರುತ್ತವೆ. ಆದರೆ ಅವು ಜಿಲ್ಲಾ ಆವೃತ್ತಿಗಳಲ್ಲಷ್ಟೇ ಕಾಣಿಸಿಕೊಳ್ಳುವುದರಿಂದ ಉಳಿದ ಭಾಗದ ಜನರಿಗೆ ಅದರ ಮಾಹಿತಿಯ ಲಾಭ ತಟ್ಟದೆ ಹೋಗುತ್ತದೆ. ಇದಕ್ಕೆ ಸೂಕ್ತ ವ್ಯವಸ್ಥೆಯಾಗದೆ ಹೋದರೆ ಆಯಾ ಭಾಗದ ಜನತೆಯನ್ನು ತಿಳಿದುಕೊಳ್ಳುವ ಅವಕಾಶದಿಂದ ದೂರವಿಟ್ಟ ಆರೋಪಕ್ಕೆ ಪತ್ರಿಕಾಕರ್ತರು ಗುರಿಯಾಗಬೇಕಾಗುತ್ತದೆ.

ನಾಡಿನ ಸರ್ವತೋಮುಖ ಅಭಿವೃದ್ಧಿಯ ಹಂಬಲ ಹೊಂದಿರುವ ‘ಸಂಯುಕ್ತ ಕರ್ನಾಟಕ’ದಂತಹ ಹಿರಿಯ ಪತ್ರಿಕೆ ಜಾತ್ಯತೀತ ಧೋರಣೆಗೆ ಗಟ್ಟಿಯಾಗಿ ಅಂಟಿಕೊಂಡು ಪಕ್ಷಾತೀತವಾಗಿ ವರ್ತಿಸುತ್ತ ಸಮಾಜದ ಸ್ವಾಸ್ಥ್ಯರಕ್ಷಣೆಯ ತನ್ನ ಸಂಕಲ್ಪವನ್ನು ಇನ್ನೂ ಹೆಚ್ಚಿನ ಮಟ್ಟದಲ್ಲಿ ಈಡೇರಿಸುವಂತಾಗಲಿ ಎಂದು ಹೃದಯ ತುಂಬಿ ಹಾರೈಸುತ್ತೇನೆ.

‘ಸಂಯುಕ್ತ ಅಮೃತೋತ್ಸವ’೨೦೦೭
(ಸ್ಮರಣ ಸಂಚಿಕೆ)

೩

## ಬಸವೇಶ್ವರ ವಿದ್ಯಾವರ್ಧಕ ಸಂಘ : ನೂರರ ನಮನ

ಮಾಡಿದೆನೆಂಬುದು ಮನದಲ್ಲಿಲ್ಲದಿದ್ದಡೆ ಬೇಡಿದ್ದ ನೀವನು ಕೂಡಲ ಸಂಗಮದೇವ

- ಬಸವಣ್ಣ

ಕನ್ನಡ ನಾಡಿನಲ್ಲಿ ಇಂದು ಎಲ್ಲಿ ನೋಡಿದರಲ್ಲಿ ಸುವರ್ಣ ಮಹೋತ್ಸವ ಹಾಗೂ ಶತಮಾನೋತ್ಸವ ಸಂಭ್ರಮದ ಸಡಗರವನ್ನು ಕಾಣುವ ಅವಕಾಶ ಇಂದಿನ ಪೀಳಿಗೆಗೆ ಒದಗಿರುವುದು ನಮ್ಮೆಲ್ಲರ ಭಾಗ್ಯ. ಕನ್ನಡ ಸಾಹಿತ್ಯದ ನವೋದಯ ಕಾಲದ ಅನೇಕ ಹಿರಿಯ ಚೇತನಗಳ ಜನ್ಮಶತಮಾನೋತ್ಸವವನ್ನು ಕಳೆದ ಕೆಲವು ವರ್ಷಗಳಿಂದ ನಾವು ಆಚರಿಸುತ್ತ ಬಂದಿದ್ದೇವೆ. ನಾಡು-ನುಡಿಗೆ ಅವರು ಸಲ್ಲಿಸಿದ ಅಪಾರವಾದ ಸೇವೆಯನ್ನು ನೆನೆದರೆ ಯಾರಿಗಾದರೂ ರೋಮಾಂಚನವಾಗದಿರದು. ಇದರ ಜೊತೆಯಲ್ಲಿಯೇ ಜನತೆಯಲ್ಲಿ ಶಿಕ್ಷಣ ಪ್ರಸಾರದ ಅಪೂರ್ವ ಜಾಗೃತಿಯ ಅರುಣೋದಯದ ದ್ಯೋತಕವಾಗಿ ಮೂಡಿದ ನಾಡಿನ ಕೆಲವು ಸಂಘ ಸಂಸ್ಥೆಗಳು ಅನೇಕ ತ್ಯಾಗಜೀವಿಗಳ ಶಕ್ತಿ ಸಾಹಸಗಳನ್ನು ಒಗ್ಗೂಡಿಸಿಕೊಂಡು ಭವ್ಯವೂ ವಿಸ್ತಾರವೂ ಆದ ಜ್ಞಾನ ದೇಗುಲಗಳಾಗಿ ಕಂಗೊಳಿಸುತ್ತಿರುವುದೂ ಅಷ್ಟೇ ಮಹತ್ವದ ಸಂಗತಿಯಾಗಿದೆ. ಧಾರವಾಡದ ಗಂಡುಮಕ್ಕಳ ಸರಕಾರಿ ಟ್ರೈನಿಂಗ್ ಕಾಲೇಜು ಶತಮಾನೋತ್ತರ ಸುವರ್ಣ ಮಹೋತ್ಸವವನ್ನು ಆಚರಿಸುವ ಸಿದ್ಧತೆಯಲ್ಲಿದ್ದರೆ, ವಾಣಿಜ್ಯ ಕೇಂದ್ರವಾಗಿ ರೂಪುಗೊಳ್ಳುತ್ತಿದ್ದ ಬಾಗಲಕೋಟೆಯನ್ನು ಜ್ಞಾನದ ಕೋಟೆಯ ಬಾಗಿಲನ್ನಾಗಿ ಪರಿವರ್ತಿಸಿದ ಬಸವೇಶ್ವರ ವಿದ್ಯಾವರ್ಧಕ ಸಂಘ, ಕರ್ನಾಟಕದ ಶಿಕ್ಷಣ ಕ್ಷೇತ್ರದಲ್ಲಿ ಶತಮಾನದ ಸುದೀರ್ಘ ಇತಿಹಾಸವನ್ನು ದಾಖಲಿಸಿ, ಹೊಸ ಕಾಲಕ್ಕೆ ತಕ್ಕ ಹೊಸಪರಿಯ ಸಿಂಗರದಿಂದ ಮುನ್ನಡೆದಿರುವುದು ಅಭಿಮಾನಪಡತಕ್ಕ ಸಂಗತಿಯಾಗಿದೆ. ಅಧ್ಯಾತ್ಮ, ಸಾಹಿತ್ಯ, ಸಂಗೀತ, ಶಿಲ್ಪಕಲೆ, ಪತ್ರಿಕೋದ್ಯಮ, ದೇಶದ ಸ್ವಾತಂತ್ರ್ಯ ಹಾಗೂ ನಾಡಿನ ಏಕೀಕರಣದ ಹೋರಾಟ-ಇವೆಲ್ಲದರ ಪರಿಸರದಲ್ಲಿ ಈ ಸಂಘಕ್ಕೊಂದು ಪ್ರಭಾವಳಿ ನಿರ್ಮಾಣಗೊಂಡಿದ್ದರೆ ಅದು ಅತ್ಯಂತ ಸಹಜವೆಂದೇ ಹೇಳಬಹುದು.

ಇಪ್ಪತ್ತನೆಯ ಶತಮಾನದ ಪ್ರಾರಂಭ ಕಾಲವೆಂದರೆ ಉತ್ತರ ಕರ್ನಾಟಕಕ್ಕೆ ಎಲ್ಲ ದೃಷ್ಟಿಯಿಂದಲೂ ಅರುಣೋದಯದ ಕಾಲ. ಕುವೆಂಪು ವಾಣಿ ಅದನ್ನು ಸರಿಯಾಗಿ ಕಂಡರಿಸಿದೆ:

'ನಾಡಿನ ಪುಣ್ಯದ ಪೂರ್ವದಿಗಂತದಿ
ನವ ಅರುಣೋದಯ ಹೊಮ್ಮುತಿದೆ
ಚಿರನೂತನ ಚೇತನದುತ್ಸಾಹದಿ
ನವೀನ ಜೀವನ ಚಿಮ್ಮುತಿದೆ!'

ಭಾಷೆ, ಶಿಕ್ಷಣ, ಸಾಹಿತ್ಯ, ಸಂಸ್ಕೃತಿ, ಕೈಗಾರಿಕೆ, ಆರ್ಥಿಕತೆ, ಸಾಮಾಜಿಕ ಚಿಂತನೆ-ಹೀಗೆ ಎಲ್ಲ ದಿಸೆಯಲ್ಲಿಯೂ ನಾಡಿನಲ್ಲಿ ಕವಿದ ಮಬ್ಬು ಕ್ರಮೇಣ ಕರಗಿ, ವಿಸ್ಮೃತಿಯನ್ನು ಹೋಗಲಾಡಿಸಿ, ಬೆಳಕಿಗೆ ಕಣ್ಣು ತೆರೆದ ಕಾಲ. ಅನ್ಯ ಭಾಷೆಯ ಆಕ್ರಮಣದಿಂದ ಕರ್ನಾಟಕದ ಸಾಂಸ್ಕೃತಿಕ ರಾಜಧಾನಿಯೆನಿಸಿರುವ ಧಾರವಾಡಕ್ಕೆ ಧಾರವಾಡವೇ ವರ್ತಮಾನ ಹಾಗೂ ಭವಿಷ್ಯದ ಬಗೆಗಿನ ಎಲ್ಲ ಭರವಸೆಗಳನ್ನು ಕಳೆದುಕೊಂಡಿದ್ದ ಸಂದರ್ಭದಲ್ಲಿ ಅದೇ ಧಾರವಾಡದ ಮೂಲಕ ಶಿಕ್ಷಣ ಕ್ಷೇತ್ರದಲ್ಲಿ ಉತ್ತರ ಕರ್ನಾಟಕದ ಕಣ್ಣು ತೆರೆಯಿಸಿ, ಅದರ ಭಾಷೆ, ಬದುಕು ಸಂಸ್ಕೃತಿಗೆ ಒಂದು ಭವಿಷ್ಯವನ್ನು ರೂಪಿಸಿಕೊಟ್ಟ ಮಹಾಚೇತನಗಳಲ್ಲಿ ಡೆಪ್ಯೂಟಿ ಚೆನ್ನಬಸಪ್ಪನವರು ಪ್ರಾತಃಸ್ಮರಣೀಯರು. ಅವರ ಪ್ರಭಾವಳಿಯ ಹಿನ್ನೆಲೆಯಲ್ಲಿಯೇ ೧೮೮೩ರಲ್ಲಿ ಧಾರವಾಡದಲ್ಲಿ ಲಿಂಗಾಯತ ವಿದ್ಯಾವರ್ಧಕ ಸಂಘ ಸ್ಥಾಪನೆಗೊಂಡಿತು. ೧೯೦೬ರಲ್ಲಿ ಬಾಗಲಕೋಟೆಯಲ್ಲಿ ಬಸವೇಶ್ವರ ವಿದ್ಯಾವರ್ಧಕ ಸಂಘ ತಲೆದೋರಿತು. ೧೯೧೦ರಲ್ಲಿ ವಿಜಾಪುರದಲ್ಲಿ ಬಿ.ಎಲ್.ಡಿ.ಇ. ಸಂಸ್ಥೆ ಸ್ಥಾಪಿತವಾಯಿತು. ೧೯೧೬ರಲ್ಲಿ ಬೆಳಗಾವಿಯಲ್ಲಿ ಕೆ.ಎಲ್.ಇ. ಸಂಸ್ಥೆ, ಅದೇ ವರ್ಷ ಬಳ್ಳಾರಿಯಲ್ಲಿ ವೀರಶೈವ ವಿದ್ಯಾವರ್ಧಕ ಸಂಘ ಅಸ್ತಿತ್ವಕ್ಕೆ ಬಂದವು. ಇವಕ್ಕೆಲ್ಲ ಮೂಲ ಪ್ರೇರಣೆ ದೊರೆತದ್ದು ೧೯೦೪ರಲ್ಲಿ ಧಾರವಾಡದಲ್ಲಿ ನೆರವೇರಿದ ವೀರಶೈವ ಮಹಾಸಭೆಯ ಪ್ರಥಮ ಅಧಿವೇಶನವೆಂಬುದನ್ನು ಮರೆಯುವಂತಿಲ್ಲ.

ಬಸವೇಶ್ವರ ವಿದ್ಯಾವರ್ಧಕ ಸಂಘದ ಸದ್ಯದ ಆಡಳಿತಾಧಿಕಾರಿಗಳಾದ ಪ್ರೊ. ಎನ್.ಜಿ. ಕರೂರ ಅವರು ಈ ಸಂಸ್ಥೆಗಳ ಬೆಳವಣಿಗೆಯಲ್ಲಿ ಒಂದು ಸಾಮಾನ್ಯ ಲಕ್ಷಣವನ್ನು ಗುರುತಿಸಿರುವುದು ಕುತೂಹಲಕಾರಿಯಾಗಿದೆ. ಈ ಎಲ್ಲ ಸಂಸ್ಥೆಗಳು ಪ್ರಾರಂಭದಲ್ಲಿ ಕೈಗೊಂಡ ಹತ್ತು ವಿಶಿಷ್ಟ ಅಂಶಗಳನ್ನು ಸೂಚಿಸುತ್ತ ಈ ಸಂಸ್ಥೆಗಳ ವಿದ್ಯಾಲಯಗಳ ಕಟ್ಟಡಗಳ ನಕ್ಷೆ ಒಂದೇ ತೆರನಾಗಿರುವದನ್ನು ಎತ್ತಿ ತೋರಿಸಿದ್ದಾರೆ. ಅಂತೆಯೇ ಬೆಳಗಾವಿ ಲಿಂಗರಾಜ ಕಾಲೇಜು (ಮೊದಲು ಹೈಸ್ಕೂಲ್), ಬಾಗಲಕೋಟೆ ಬಸವೇಶ್ವರ ಕಾಲೇಜು, ವಿಜಾಪುರ ಸಿದ್ಧೇಶ್ವರ ಹೈಸ್ಕೂಲ್ ಕಟ್ಟಡಗಳ ನಿರ್ಮಾಣ ಒಂದೇ ರೀತಿಯಾಗಿರುವುದನ್ನು ಇಂದಿಗೂ ನೋಡಬಹುದು.

ಬಸವೇಶ್ವರ ವಿದ್ಯಾವರ್ಧಕ ಸಂಘ ಶಿಶುವಿಹಾರದಿಂದ ಮೊದಲ್ಗೊಂಡು ಉನ್ನತ ಮಟ್ಟದವರೆಗೆ ಸಾಮಾನ್ಯ ಶಿಕ್ಷಣ ಹಾಗೂ ಎಂಜಿನಿಯರಿಂಗ್, ದಂತ ವೈದ್ಯಕೀಯ ಹಾಗೂ ವೈದ್ಯಕೀಯ ಕಾಲೇಜುಗಳಂಥ ವೃತ್ತಿಪರ ಶಿಕ್ಷಣ ಸಂಸ್ಥೆಗಳನ್ನು ಸುವ್ಯವಸ್ಥಿತವಾಗಿ ನಡೆಸುತ್ತ ಉತ್ತರ ಕರ್ನಾಟಕದ ಶಿಕ್ಷಣ ಪ್ರಸಾರದ ಸಂಸ್ಥೆಗಳಲ್ಲಿಯೇ ಒಂದು ಬೃಹತ್ ಸಂಸ್ಥೆಯಾಗಿ, ಸತ್ವದಲ್ಲಿಯೂ ಮಹತ್ತಾಗಿ ಬೆಳೆದಿರುವುದು ಅಭಿಮಾನ ಪಡತಕ್ಕ ಸಂಗತಿಯೇ ಸರಿ. ಉತ್ತರ ಕರ್ನಾಟಕದಲ್ಲಿ ಧಾರವಾಡದ ಸರಕಾರಿ ಕರ್ನಾಟಕ ಕಾಲೇಜು ಹಾಗೂ ಖಾಸಗಿ ಸಂಸ್ಥೆಯಾಗಿ ಬೆಳಗಾವಿ ಲಿಂಗರಾಜ ಕಾಲೇಜು-ಹೀಗೆ ಎರಡೇ ಮಹಾವಿದ್ಯಾಲಯಗಳಿರುವಾಗ ತಾಲ್ಲೂಕು ಸ್ಥಳವಾದ ಬಾಗಲಕೋಟೆಯಲ್ಲಿ ೧೯೪೪ರಲ್ಲಿ ಬಸವೇಶ್ವರ ಕಾಲೇಜು (ಖಾಸಗಿ) ಸ್ಥಾಪನೆಗೊಂಡದ್ದು ಒಂದು ಚರಿತ್ರಾರ್ಹ ಘಟನೆಯಾಗಿದೆ. ಗ್ರಾಮೀಣ ಭಾಗದ ವಿದ್ಯಾರ್ಥಿಗಳಿಗೆ ಇದು ಎಂಥ ದೊಡ್ಡ ವರದಾನವಾಗಿ ಪರಿಣಮಿಸಿತೆಂಬುವನ್ನು ಊಹಿಸಿಯೇ ತಿಳಿಯಬಹುದು.

ಡಾ.ಎಸ್. ಸಿ. ನಂದೀಮಠರಂತಹ ವಿದ್ವಾಂಸರು ಪ್ರಾಚಾರ್ಯರಾಗಿ ಬಂದರು. ಅವರ ಜೊತೆಗೇ ಬೆಳಗಾವಿಯಿಂದ (ಲಿಂಗರಾಜ ಕಾಲೇಜು) ಬಂದ ಇಂಗ್ಲಿಷ್ ಪ್ರಾಧ್ಯಾಪಕ ಡಾ. ಕೆ.ಆರ್. ಶ್ರೀನಿವಾಸ ಅಯ್ಯಂಗಾರ್ ಅವರು ಬಸವೇಶ್ವರ ಕಾಲೇಜಿನಲ್ಲಿದ್ದು ಕೆಲ ಕಾಲದ ನಂತರ ಆಂಧ್ರ ವಿಶ್ವವಿದ್ಯಾಲಯ (ವಾಲ್ಟೇರ್)ದ ಕುಲಪತಿಗಳಾಗಿ ಕೆಲಸ ಮಾಡಿದ್ದನ್ನೂ ವಿಶ್ರಾಂತರಾದ ನಂತರ ಕೇಂದ್ರ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾದುದನ್ನು ಇಲ್ಲಿ ನೆನೆಯಬಹುದು. ಜ್ಞಾನಪೀಠ ಪ್ರಶಸ್ತಿ ಪುರಸ್ಕೃತರಾದ... ಅನರ್ಘ್ಯ ರತ್ನ ವಿಂದಾ ಕರಂದೀಕರ ಅವರು ನೀಡಿದ ಸಂದರ್ಶನವೊಂದರಲ್ಲಿ ಬಸವೇಶ್ವರ ಕಾಲೇಜನ್ನು ನೆನಪಿಸಿಕೊಂಡು ಹೇಳಿದ್ದಾರೆ: "ನಾನು ಇಂಗ್ಲಿಷ್ ಸಾಹಿತ್ಯದಲ್ಲಿ ಎಂ.ಎ. ಮಾಡಿದ್ದು ನಿಮ್ಮ ಕರ್ನಾಟಕದ ಬಾಗಲಕೋಟೆಯಲ್ಲಿ, ಅದು ಬಸವೇಶ್ವರ ಕಾಲೇಜಿನಲ್ಲಿ. ಆಗ ನಂದೀಮಠ ಎಂಬುವರು ಮುಖ್ಯಸ್ಥರಾಗಿದ್ದರು". ವಯೋಮಾನದಿಂದ ವಿಸ್ಮರಣೆಯ ಸ್ಥಿತಿಯಲ್ಲಿರುವ ಕವಿಯ ಸ್ಮೃತಿಪಟಲದಲ್ಲಿ ಈ ಕಾಲೇಜು ಚಿರಸ್ಥಾಯಿಯಾಗಿರುವದು ಎಂಥ ಸಂತೋಷದ ಸಂಗತಿ ! ಅದೇ ಸಂದರ್ಭದಲ್ಲಿ ಕನ್ನಡದ ಓದುಗರಿಗಾಗಿ ತಮ್ಮ ಕವಿತೆಯ ಒಂದು ನುಡಿಯನ್ನು ನೀಡಿದ್ದಾರೆ. "ಎಲ್ಲರೂ ಜೊತೆ ಸೇರಿ ಎಲ್ಲರಿಗಾಗಿ ಸಾಯುವುದರಲ್ಲಿ ಆನಂದವಿದೆ; ಎಲ್ಲರೂ ಜೊತೆ ಸೇರಿ ಎಲ್ಲರಿಗಾಗಿ ಬದುಕುವುದರಲ್ಲಿ ಬ್ರಹ್ಮಾನಂದವಿದೆ". ಸಂಘ ಸಂಸ್ಥೆಗಳ ಸಂದರ್ಭದಲ್ಲಂತೂ ಈ ನುಡಿ ಅತ್ಯಂತ ಅರ್ಥಪೂರ್ಣವಾಗಿ ಗೋಚರಿಸದಿರದು. ಡಾ.ಸಿ.ವಿ.ರಾಮನ್, ಜವಾಹರಲಾಲ ನೆಹರು, ಇಂದಿರಾಗಾಂಧಿ, ಮೈಸೂರು ಮಹಾರಾಜರು-ಮೊದಲಾದ ಗಣ್ಯಾತಿಗಣ್ಯ ವ್ಯಕ್ತಿಗಳು ಈ ಕಾಲೇಜಿಗೆ ಭೆಟ್ಟಿ ಕೊಟ್ಟು ಮೆಚ್ಚುಗೆ ವ್ಯಕ್ತಪಡಿಸಿದ್ದು ಸ್ಮರಣೀಯ.

ಕಾಲೇಜು ಮತ್ತು ಸಂಘದ ಪುರೋಭಿವೃದ್ಧಿಗೆ ಹಲವಾರು ಬಗೆಯಲ್ಲಿ ಅಪಾರವಾಗಿ ಶ್ರಮಿಸಿದ ಶ್ರೀಯುತರಾದ ಪಿ.ಎಮ್. ನಾಡಗೌಡ, ಎಸ್.ಆರ್.ಕಂಠಿ ಹಾಗೂ ಡಾ.ಎಸ್.ಸಿ. ನಂದೀಮಠರ ಹೆಸರುಗಳನ್ನು ಈಚೆಗೆ ಸಂಘದ ಬೇರೆ ಬೇರೆ ಕಾಲೇಜುಗಳಿಗೆ ಅಂಕಿತಗೊಳಿಸುವುದರ ಮೂಲಕ ಸಂಘ ಹಾಗೂ ಜನತೆ ತನ್ನ ಕೃತಜ್ಞತೆಯನ್ನು ವ್ಯಕ್ತಪಡಿಸಿರುವುದು ಅನುಕರಣೀಯ ಕಾರ್ಯವೆನ್ನಬಹುದು.

ಸಂಘದ ಬೆಳವಣಿಗೆಯಲ್ಲಿ ಅನೇಕ ಬಗೆಯ ಅಡೆತಡೆಗಳು ಎದುರಾದದ್ದುಂಟು. ಆದರೆ ಪರಸ್ಪರ ಸಹಕಾರದಿಂದ, ನಿಸ್ವಾರ್ಥ ಬುದ್ಧಿಯಿಂದ, ಪಟ್ಟುಬಿಡದ ಹೋರಾಟದಿಂದ ದೂರದೃಷ್ಟಿಯುಳ್ಳ ಹಿರಿಯ ಹಿತೈಷಿಗಳು ಅವನ್ನೆಲ್ಲ ನಿವಾರಸಿಕೊಂಡು ತಮಗಿಂತಲೂ ಸಂಸ್ಥೆ ದೊಡ್ಡದು ಎಂದು ಭಾವಿಸಿ ಮುಂದುವರಿದಿದ್ದರಿಂದ ಇಡೀ ಒಂದು ಜನಾಂಗದ ಭವಿಷ್ಯವನ್ನು ರೂಪಿಸಲು ಸಂಘಕ್ಕೆ ಸಾಧ್ಯವಾಯಿತು. ಈ ಸಂಘಕ್ಕೆ ಮಾರ್ಗದರ್ಶನ ಮಾಡುತ್ತ ಬಂದ ಗುರುಗಳು ಜನಾಭಿಮುಖವಾಗಿ ಸಮಾಜಮುಖಿಯಾಗಿ ನಿಂತು ಚಿಂತನೆ ನಡೆಸಿದ ಮಠಾಧೀಶರು. ಅವರ ಆಧ್ಯಾತ್ಮಿಕ ಶಕ್ತಿ ಎಲ್ಲ ವರ್ಗದ ಜನತೆಯಲ್ಲಿ ಶಿಕ್ಷಣ-ಸಂಸ್ಕೃತಿಯ ಪ್ರಜ್ಞೆಯನ್ನು ಜಾಗೃತಗೊಳಿಸಲು ನೆರವಾಯಿತು.

ಕಳೆದ ಶತಮಾನದ ಖ್ಯಾತ ದಾರ್ಶನಿಕ ಬರ್ಟ್ರ್ಯಾಂಡ್ ರಸೆಲ್ ಹೇಳಿದಂತೆ ಜ್ಞಾನ ಒಂದು ಶಕ್ತಿಯಿದ್ದಂತೆ Knowledge is Power. ಇದನ್ನು ಒಳ್ಳೆಯದಕ್ಕೂ ಉಪಯೋಗಿಸಬಹುದು. ಒಳ್ಳೆಯದಲ್ಲದಕ್ಕೂ ಉಪಯೋಗಿಸಬಹುದು. ೧೩೦ ವರ್ಷಗಳ ಹಿಂದೆಯೇ ಸ್ವಾಮಿ ವಿವೇಕಾನಂದರು 'ಶಿಕ್ಷಣ, ಶಿಕ್ಷಣ, ಶಿಕ್ಷಣ - ಇದೊಂದೇ ಭಾರತದ ಬಡತನಕ್ಕೆ ತಾರಕಮಂತ್ರ' ಎಂದು ಒತ್ತಿ ಒತ್ತಿ ಹೇಳಿದರು. ಅದು ವಿಕಸಿತ ವ್ಯಕ್ತಿತ್ವವನ್ನು ರೂಪಿಸಬೇಕು. ಶೀಲವಂತರನ್ನಾಗಿಸಬೇಕು. ಮಾನವೀಯ ಉತ್ಕೃಷ್ಟತೆಯನ್ನು ದೊರಕಿಸಿ ಇತರರೊಂದಿಗೆ ಹಂಚಿಕೊಳ್ಳುವ ದಾನ ಮನೋವೃತ್ತಿಯನ್ನು ಬೆಳೆಸಿ ಸಿಂಹದ ಗರ್ಜನೆಯ ಧೈರ್ಯವನ್ನು ಕೊಡದಿದ್ದರೆ ಅದು ಶಿಕ್ಷಣವೇ ಅಲ್ಲ ಎಂದರು. ವಿದ್ಯಾವಂತರಾದವರು ಬಡಬಗ್ಗರ ಬಗ್ಗೆ ಯೋಚಿಸಿ ಅವರ ಕಣ್ಣೀರನ್ನು ಒರೆಸದಿದ್ದರೆ ಅವರು ಸಮಾಜ ದ್ರೋಹಿಗಳೆಂದು ಘೋಷಿಸಿದರು.

೧೯೯೧ರಲ್ಲಿ ಶ್ರೀ ವೀರಣ್ಣ ಚರಂತಿಮಠ ಕಾರ್ಯಾಧ್ಯಕ್ಷರಾಗಿ ಅಧಿಕಾರ ವಹಿಸಿಕೊಂಡ ತರುವಾಯ ಅನೇಕ ಹೊಸ ಶಿಕ್ಷಣ ಸಂಸ್ಥೆಗಳು ಸ್ಥಾಪನೆಗೊಂಡು, ಇಂದಿನ ಕಾಲಕ್ಕೆ ಅಗತ್ಯವಾದ ಹೊಸ ಹೊಸ ಕೋರ್ಸುಗಳನ್ನು ಪ್ರಾರಂಭಿಸಲಾಯಿತು. ಮೂಲಭೂತ ಸೌಕರ್ಯಗಳನ್ನು ಒದಗಿಸಿ ಗ್ರಾಮಾಂತರ ಪ್ರದೇಶದ ಮಕ್ಕಳಿಗೂ ಶಿಕ್ಷಣದ ಅಗತ್ಯಗಳನ್ನು ಪೂರೈಸಿದ ಶ್ರೇಯಸ್ಸು ಯುವಕರಾದ ಚರಂತಿಮಠರಿಗೆ ಸಲ್ಲುತ್ತದೆ. ಅವರ ಆಡಳಿತಾವಧಿಯಲ್ಲಿ ಪೂರ್ವಪ್ರಾಥಮಿಕ ಶಾಲೆಗಳಿಂದ ಹಿಡಿದು ಮೆಡಿಕಲ್ ಕಾಲೇಜಿನವರೆಗೆ ಸುಮಾರು ಐವತ್ತು ವಿವಿಧ ಬಗೆಯ ಶಿಕ್ಷಣ ಸಂಸ್ಥೆಗಳು ಅಸ್ತಿತ್ವದಲ್ಲಿ ಬಂದು ವ್ಯವಸ್ಥಿತವಾಗಿ ಕಾರ್ಯ ಮಾಡುತ್ತಿರುವುದು ಸಣ್ಣ ಮಾತಲ್ಲ. ಇದರಿಂದ ವಿದ್ಯಾರ್ಥಿ ಸಮುದಾಯಕ್ಕೂ ಹಿರಿಯರಿಗೂ ಭವಿಷ್ಯದಲ್ಲಿ ಭರವಸೆ ಮೂಡುವಂತಾಗಿದ್ದರೆ ಆಶ್ಚರ್ಯವಿಲ್ಲ. ಶ್ರೀ ಚರಂತಿಮಠರು ಈಚೆಗೆ ವಿಧಾನಸಭೆಯ ಸದಸ್ಯರಾಗಿ ಆಯ್ಕೆಯಾಗಿರುವುದು ಅವರ ಜನಪ್ರಿಯತೆಗೂ ಕ್ರಿಯಾಶೀಲ ವ್ಯಕ್ತಿತ್ವಕ್ಕೂ ಸಾಕ್ಷಿಯಾಗಿದೆ. ಈ ಎಲ್ಲ ಅಭಿವೃದ್ಧಿಯ ಹಿಂದೆ ಕಾರ್ಯನಿರ್ವಾಹಕ ಮಂಡಳಿಯ ಸದಸ್ಯರ ಹಾಗೂ ಗೌರವ ಕಾರ್ಯದರ್ಶಿಗಳ ಸಹಕಾರವೇ ಒಂದು ಪ್ರಬಲ ಶಕ್ತಿಯಾಗಿ ಕೆಲಸ ಮಾಡಿರುವುದನ್ನು ಯಾರೂ ಅಲ್ಲಗಳೆಯಲಾರರು. ಈ ನೂರು ವರ್ಷಗಳ ಅವಧಿಯಲ್ಲಿ ಸಂಘದ ಪದಾಧಿಕಾರಿಗಳ ಹುದ್ದೆಗೆ ಒಮ್ಮೆಯೂ ಚುನಾವಣೆ ನಡೆದಿಲ್ಲವೆಂಬ ಸಂಗತಿಯನ್ನು ಸಂಘದ ದಕ್ಷ ಆಡಳಿತಗಾರರೂ ಆತ್ಮೀಯ ಸ್ನೇಹಿತರೂ ಆದ ಶ್ರೀ ಎನ್.ಜಿ. ಕರೂರ ಅವರು ನನಗೆ ತಿಳಿಸಿದಾಗ ನಾನು ನಂಬಲೇ ಬೇಕಾಯಿತು. ಈ ಬಗೆಯ ಒಮ್ಮತದ ಕಾರ್ಯನಿರ್ವಹಣೆ ನಮ್ಮ ನಾಡಿನ ಸಂಘ-ಸಂಸ್ಥೆಗಳ ಇತಿಹಾಸದಲ್ಲಿ ಅಪೂರ್ವ ಘಟನೆಯಾಗಿ ಉಳಿಯುವುದರಲ್ಲಿ ಸಂದೇಹವಿಲ್ಲ.

ಸಾಧನೆಗೆ ಅಗಾಧ ವ್ಯಾಪ್ತಿಯಿರುವುದನ್ನು ಸೂಚಿಸುವ ನನ್ನ ಕವಿತೆಯೊಂದರ ಎರಡು ನುಡಿಗಳಿಂದ ಈ ಬರಹವನ್ನು ಮುಕ್ತಾಯಗೊಳಿಸಲು ಇಷ್ಟಪಡುತ್ತೇನೆ:

ಬೆಳೆವುದೆಲ್ಲ ಕೆಳಗಿಂದ, ಬೇರಿನೊಳಗಿಂದ ಸತ್ವ ಹೀರಿ
ಹಳ್ಳಿ-ದಿಳ್ಳಿಗೂ ಇದೇ ಮಾತು, ಮತ್ತದೇ ಸಹಜ ದಾರಿ.

ಒಂದನೊಂದು ಭೇದಿಸುತ ನೂರು ವರ್ತುಳದ ಪರಿಘದಲ್ಲಿ
ಕೇಂದ್ರ ಬಿಂದುವನೆ ಮರೆತರೆಂತು ಸೌಂದರ್ಯ ನಕ್ಷೆಯಲ್ಲಿ ?
ಸಫಲತೆಯ ತೃಪ್ತಿ, ತತ್ಕಾಲ ದೀಪ್ತಿ, ಸಾಧನೆಗಗಾಧ ವ್ಯಾಪ್ತಿ,
ಶಿಖರದಲ್ಲಿ ಗುರಿ, ಸಾಹಸಕ್ಕೆ ಸರ್ವಾಂಗ ಶಕ್ತಿ ಕೋರಿ,
ನಿರಂತರವು ಎಚ್ಚರದ ಗಂಟೆ, ಹಚ್ಚಿರಲಿ ಸಾಲು ದೀಪ
ಸಮರ್ಪಣೆಗೆ ಕೃತು ಶಕ್ತಿ ಸೇರಿ ತೋರುವದು ವಿಶ್ವರೂಪ.

'ಶತಮಾನ ಪ್ರಭೆ' : ೨೦೦೯

೪

## ಜನತಾ ಜನಾರ್ಧನನ ಸೇವೆಗೆ ಚಿನ್ನದ ಕಿರೀಟ

೧೯೫೩ರಲ್ಲಿ ಶ್ರೀ ದಿನಕರ ದೇಸಾಯಿಯವರು ಕೆನರಾ ವೆಲ್‌ಫೇರ್ ಟ್ರಸ್ಟ್ ಪ್ರಾರಂಭಿಸಿದಾಗಲೇ ಆ ಜಿಲ್ಲೆಯ ಶಿಕ್ಷಣ ಕ್ಷೇತ್ರದ ಕ್ಷಿತಿಜದ ಮೇಲೆ ದಿನಕರನ ಉದಯವಾಯಿತೆಂದು ಹೇಳಬಹುದು ಎಂದು ಕರ್ನಾಟಕ ವಿಶ್ವವಿದ್ಯಾಲಯದ ಕುಲಸಚಿವರಾಗಿದ್ದ ಶ್ರೀ ಸದಾಶಿವ ಒಡೆಯರ ಅವರು ಅಂದು ಹೇಳಿದ ಮಾತು ಇಂದು ನೂರಕ್ಕೆ ನೂರರಷ್ಟು ಸತ್ಯವಾಗಿ ಆ ಸಂಸ್ಥೆ ಚಿನ್ನದ ಹಬ್ಬದ ಸಂಭ್ರಮದಲ್ಲಿರುವ ಸಂಗತಿ ಕನ್ನಡಿಗರನ್ನು ಹರ್ಷಪುಲಕಿತರನ್ನಾಗಿಸಿದೆ. ಅರಣ್ಯಾವೃತವಾದ ಇಡೀ ಉತ್ತರ ಕನ್ನಡ ಜಿಲ್ಲೆ, 'ಜನತಾ ಜನಾರ್ಧನನ ಸೇವೆಯೇ ಹೂವು, ಈ ಹೂವಿನಿಂದಲೇ ದೇಶದುದ್ಧಾರ. ಸೇವೆಗಿಂತಲೂ ಶ್ರೇಷ್ಠವಲ್ಲ ಅಧಿಕಾರ' ಎಂದು ನುಡಿದು ಅದನ್ನು ಅಕ್ಷರಶಃ ಕಾರ್ಯರೂಪದಲ್ಲಿಳಿಸಿದ ಕವಿ ದಿನಕರನ ದಿವ್ಯಪ್ರಕಾಶದಲ್ಲಿ ಶೈಕ್ಷಣಿಕವಾಗಿ ಮೈಕೊಡವಿಕೊಂಡು ಮೇಲೆದ್ದುದು ಸಾಮಾನ್ಯಸಂಗತಿಯೇನೂ ಅಲ್ಲ. ಯಾವ ಶ್ರೀಮಂತಿಕೆಯ ಅಟ್ಟಹಾಸವೂ ಇಲ್ಲದೆ ರೈತರೇ ಕೂಡಿಸಿಟ್ಟ ೬,೦೦೦ ರೂ.ಗಳ ಮೂಲ ಬಂಡವಾಳದೊಂದಿಗೆ ಪ್ರಾರಂಭವಾಗಿ ಶೋಷಿತವರ್ಗದ ಹಿತರಕ್ಷಣೆಗಾಗಿ ಅವರ ಮಕ್ಕಳಿಗೆ ಶಿಕ್ಷಣದ ಸೌಲಭ್ಯ ಕಲ್ಪಿಸುವುದಕ್ಕಾಗಿ ಎಷ್ಟೊಂದು ಸಂಸ್ಥೆಗಳ ಉದಯ ! ಉತ್ತರ ಕನ್ನಡ ಜಿಲ್ಲೆಯ ೯ ತಾಲ್ಲೂಕುಗಳ ೧೮ ಕೇಂದ್ರಗಳಲ್ಲಿ ವಿವಿಧ ಬಗೆಯ ಒಟ್ಟು ೩೭ ಶಿಕ್ಷಣ ಸಂಸ್ಥೆಗಳಲ್ಲಿ ಸುಮಾರು ಹತ್ತು ಸಾವಿರ ವಿದ್ಯಾರ್ಥಿಗಳ ಓದು. ಒಟ್ಟು ಆಸ್ತಿಯ ಮೌಲ್ಯ ಸುಮಾರು ೧೨ ಕೋಟಿ! ಇದಕ್ಕೂ ಹಲವಾರು ಪಟ್ಟು ಬೆಲೆಬಾಳುವ (ಬೆಲೆ ತರುವ) ಶಾಲೆ-ಕಾಲೇಜುಗಳನ್ನು ನಡೆಸುವ ಸಂಸ್ಥೆಗಳು ಕರ್ನಾಟಕದಲ್ಲಿ ಕಣ್ಣು ಮುಂದೆಯೇ ರಾರಾಜಿಸುತ್ತಿರಬಹುದು. ಆದರೆ ಗಾಂಧೀಜಿ ಕನಸಿನ ಗ್ರಾಮೀಣ ಭಾರತವನ್ನು ಪ್ರಮುಖ ಕಾಳಜಿಯಾಗಿಟ್ಟುಕೊಂಡು ಶಿಕ್ಷಣ ಸಂಸ್ಥೆಗಳನ್ನು ಕಟ್ಟಿ ಬೆಳೆಸಿದ ಕೀರ್ತಿ ದಿನಕರ ದೇಸಾಯಿ ಮತ್ತು ಅವರ ತತ್ವನಿಷ್ಠರಾದ ಸಂಗಾತಿಗಳಿಗೆ ಖಂಡಿತವಾಗಿಯೂ ಸಲ್ಲುತ್ತದೆ. ಇದು ಕೇವಲ ಶಿಕ್ಷಣ ಪ್ರಸಾರದ ಕಾರ್ಯವಾಗಿರದೆ ಸಾಮಾಜಿಕ ಪರಿವರ್ತನೆಯ ದಾರಿಯಲ್ಲಿ ದೇಶವನ್ನು ಕಟ್ಟುವ ಮಹತ್ಕಾರ್ಯವೆನ್ನುವುದನ್ನು ನಾವು ಮರೆಯುವಂತಿಲ್ಲ.

'ಜನತಾ' ಎಂಬ ಪದ ದಿನಕರ ದೇಸಾಯಿಯವರಿಗೆ ಮಂತ್ರಕ್ಕಿಂತಲೂ ಮಿಗಿಲಾದದ್ದು. ಇದರಲ್ಲಿ ತೀರಾ ಹಿಂದುಳಿದ ವರ್ಗಕ್ಕೆ ಸೇರಿದವರು, ಕೃಷಿ ಕೂಲಿಕಾರರು, ಆದಿವಾಸಿಗಳು (ಹಾಲಕ್ಕಿ ಒಕ್ಕಲು), ವನವಾಸಿಗಳು, ದಲಿತವರ್ಗದವರು ಎಲ್ಲರೂ ಸೇರಿಕೊಳ್ಳುತ್ತಾರೆ. ಕಾವ್ಯದಲ್ಲಿ ಅವರ ಜೀವನದ ಸ್ಥಿತಿಗತಿಗಳನ್ನು ಚಿತ್ರಿಸಿದರೆ ಪ್ರತ್ಯಕ್ಷ ಜೀವನದಲ್ಲಿ ಅವರ ಏಳ್ಗೆಗಾಗಿ ಹೋರಾಟ.

ಎರಡನ್ನೂ ತೂಗಿ ನೋಡಿದರೆ ಎರಡೂ ಸಮತೂಕದಲ್ಲಿ ನಿಲ್ಲುವುದು ಬಹುಶಃ ದಿನಕರ ದೇಸಾಯಿಯವರ ಬದುಕಿನಲ್ಲಿ ಮಾತ್ರ ಎಂದು ಹೇಳಿದರೆ ಅತಿಶಯೋಕ್ತಿಯಾಗದು. ರೈತ ಚಳುವಳಿ ಬಿರುಸಿನಿಂದ ನಡೆದ ಜಿಲ್ಲೆಯ ಎಲ್ಲ ತಾಲ್ಲೂಕುಗಳ ಗ್ರಾಮೀಣ ಭಾಗಗಳಲ್ಲಿ ಟ್ರಸ್ಟಿನ ಶಿಕ್ಷಣ ಸಂಸ್ಥೆಗಳಿಗೆ ಅಗ್ರಸ್ಥಾನ. ಎಲ್ಲವೂ ಹೆಚ್ಚು ಕಡಿಮೆ ಜನತಾ ವಿದ್ಯಾಲಯಗಳೇ. ಅವುಗಳ ರಚನಾಕ್ರಮದಲ್ಲಿಯೂ ಆದರ್ಶದ ಒಂದೇ ಮಾದರಿ. ಅಂತರಂಗ ಬಹಿರಂಗದಲ್ಲಿಯೂ ಒಂದೇ ಸಂಬಂಧ ಸೂತ್ರ.

ಮುದ್ರಣಾಲಯದ ಹೆಸರು 'ಜನಮುದ್ರಣ' (೧೯೫೪) ವಾರಪತ್ರಿಕೆಯೂ 'ಜನಸೇವಕ'. ಅದಕ್ಕೂ ಅದರದೇ ಆದ ವಿಶಿಷ್ಟಧ್ಯೇಯ. ದಿನಕರ ದೇಸಾಯಿಯವರ ಮುಖ್ಯ ಗುರಿ ಈ ಪತ್ರಿಕೆಯ ಮೂಲಕ ಜನಸಾಮಾನ್ಯರಿಗೆ ರಾಜಕೀಯ ಶಿಕ್ಷಣ ನೀಡುವದು, ಸಮಗ್ರ ಕರ್ನಾಟಕದ ಅಭಿವೃದ್ಧಿಯ ಕನಸನ್ನು ಕಟ್ಟಿಕೊಂಡೇ ಹೊರಟವರು ದೇಸಾಯರು. ಹದಿನೇಳು ವರ್ಷ ನಿರಂತರ ಸೇವೆಗೈದ ಪತ್ರಿಕೆಯ ರೀತಿಯೇ ಅಚ್ಚರಿಗೊಳಿಸುವಂಥದು. ಅವರದೇ ವಾರದ 'ಸಂಪಾದಕೀಯ' (ಆಗೀಗ ಅಮ್ಮೆಂಬಳ ಆನಂದರಿಂದಲೂ ಬರವಣಿಗೆ) ವಿಚಾರ ಪ್ರಚೋದಕ ಲೇಖನಗಳು, ಚುರುಕುಮುಟ್ಟಿಸುವ ಚುಟುಕುಗಳು, ಗೌರೀಶ ಕಾಯ್ಕಿಣಿಯವರ ವೈಚಾರಿಕ ವೈಖರಿ! ಇಂಥ ಪತ್ರಿಕೆಗೂ ಆರ್ಥಿಕ ನಷ್ಟ ಕಾಡದೆ ಬಿಡಲಿಲ್ಲವೆನ್ನುವುದು ಕನ್ನಡಿಗರ ದುರ್ದೈವ. 'ಜನಸೇವಕ' ಶಬ್ದಕ್ಕೆ ಅನ್ವರ್ಥಕವಾಗಿ ಬಾಳಿದ ದಿನಕರ ದೇಸಾಯಿಯವರು ತಮ್ಮ ೭೨ನೆಯ ವಯಸ್ಸಿನಲ್ಲಿ ಕಣ್ಮರೆಯಾದಾಗ ನಾಡಿಗೆಲ್ಲ ದಿಗ್ಭ್ರಮೆ. ಇಂಥ ದಿನಕರನು ಅಸ್ತಂಗತನಾಗುವದೆಂದರೇನು? ಅವನು ಗೈದ ಕಾರ್ಯಗಳಿಗೆ, ಕಟ್ಟಿದ ಸಂಸ್ಥೆಗಳಿಗೆ, ಪಾಲಿಸಿದ ತತ್ವಗಳಿಗೆ, ತೋರಿದ ಮಾರ್ಗಕ್ಕೆ ಸಾವೆಂಬುದೇ ಇಲ್ಲ. ಉಳಿದವರಿಗೆ ಅದು ನಿತ್ಯನೂತನ ಪ್ರಕಾಶ. ಇಂಥ ಮೌನಕ್ರಾಂತಿಯ ಮಹಾನುಭಾವನ ವಾರಸುದಾರರಾಗಿ ಚಾರಿತ್ರಿಕ ಮಹತ್ವದ ಈ ಟ್ರಸ್ಟಿನ ಆಡಳಿತ ಸೂತ್ರವನ್ನು ವಹಿಸಿಕೊಂಡು ಕ್ರಿಯಾಶೀಲರಾಗಿ, ಜನಪರರಾಗಿ ಪ್ರಸಿದ್ಧ ನ್ಯಾಯವಾದಿ ಎಸ್.ಪಿ. ಕಾಮತರು ಹಾಗೂ ಅವರ ಸಂಗಡಿಗರೂ ಮುನ್ನಡೆದಿರುವುದು ಸಂತೋಷದ ಹಾಗೂ ಸಮಾಧಾನದ ಸಂಗತಿ. ಕೆನರಾ ವೆಲ್‌ಫೇರ್ ಟ್ರಸ್ಟಿನ ಸುವರ್ಣ ಮಹೋತ್ಸವವೆಂದರೆ ಅದು ಇಡೀ ಉತ್ತರ ಕನ್ನಡ ಜಿಲ್ಲೆಯ ಶೈಕ್ಷಣಿಕ, ಸಾಂಸ್ಕೃತಿಕ, ಆರ್ಥಿಕ, ಸಾಮಾಜಿಕ ರಂಗಗಳ ಪುನರ್ ವಿಮರ್ಶೆಯ ಬಗೆಗಿನ ಜನಜಾಗೃತಿಯ ಉತ್ಸವ ಆಗಬೇಕೆಂಬ ಆಶಯವನ್ನು - ಆ ಸಂಸ್ಥೆಯಲ್ಲಿಯೇ ದುಡಿದು ದಿನಕರ ದೇಸಾಯಿಯವರ ಮಾರ್ಗದಲ್ಲಿ ದಿಟ್ಟ ಹೆಜ್ಜೆಯನ್ನಿಟ್ಟು ಸಾಗಿರುವ ಕವಿಮಿತ್ರ ವಿಷ್ಣು ನಾಯಕ ಅವರು ವ್ಯಕ್ತಪಡಿಸಿರುವುದು ಸಕಾಲಿಕವೂ ಔಚಿತ್ಯಪೂರ್ಣವೂ ಆಗಿದೆ.

ಈ ಸಂದರ್ಭದಲ್ಲಿ ಶ್ರೀ ದಿನಕರ ದೇಸಾಯಿಯವರನ್ನು ಕುರಿತು ವೈಯಕ್ತಿಕವಾದ ಚಿಕ್ಕ ಚಿತ್ರಣವೊಂದನ್ನು ಇಲ್ಲಿ ಸೇರಿಸಿದರೆ ತಪ್ಪಾಗದು ಎಂದು ನಾನು ಭಾವಿಸಿದ್ದೇನೆ.

ದಿನಕರ ದೇಸಾಯಿಯವರ ವ್ಯಕ್ತಿತ್ವದ ಒಂದು ಪ್ರಮುಖ ಮುಖವಾದ ಅವರ ಕಾವ್ಯದಿಂದಲೇ ನಾನು ಅವರ ಬಗ್ಗೆ ಮೊದಲು ಆಕರ್ಷಿತನಾದದ್ದು. ನಾನು ಬಿ.ಎ.ದಲ್ಲಿ ಓದುತ್ತಿದ್ದಾಗಲೇ

ಅವರ 'ಕವನ ಸಂಗ್ರಹ' (೧೯೫೦) ನನಗೆ ಓದಲು ಸಿಕ್ಕಿತು. ಸಾಮಾನ್ಯವಾಗಿ ಕವಿಗಳು ತಮ್ಮ ಕವನ ಸಂಗ್ರಹಗಳಿಗೆ ತರತರದ ಸುಂದರವಾದ ಹೆಸರನ್ನಿಡುತ್ತಿರುವ ಆ ಕಾಲದಲ್ಲಿ (ಈ ಕಾಲದಲ್ಲಿಯೂ ಕೂಡ) ಹೆಸರಿಗಾಗಿ ಹಾತೊರೆಯದ ದೇಸಾಯಿಯವರ ಮನೋಧರ್ಮವೇ ಮೊದಲು ನನ್ನನ್ನು ಚಕಿತಗೊಳಿಸಿತು. ಅಲ್ಲದೆ ಕವಿಯ ಸಾಮಾಜಿಕ ಪ್ರಜ್ಞೆ, ಮಡಿಮೈಲಿಗೆ ತೊರೆದ ಭಾಷಾಶೈಲಿ, ತನ್ನದೇ ಆದ ಧಾಟಿ-ಧೋರಣೆ ನನ್ನ ಮನಸ್ಸನ್ನು ಸೆಳೆದವು.

ಹರನೂ ನೋಡಾ, ಹರಿಗೂ ಬೇಡಾ
ಹೆಸರಿಗೆ ಮಾತ್ರ 'ಹರಿಜನ'ರೋ

* * * *

ಯಾರಪ್ಪನ ಯಾರವ್ವನ ಇಚ್ಛೆ
ಉತ್ತರ ಕನ್ನಡ ಜಿಲ್ಲೆಗೆ ಕಚ್ಚೆ
ಸ್ವರ್ಗವನೇರಲಿ ಬಡವರ ಚಿಂದಿ
ನೋಡಲಿ ಇಂದ್ರನ ಲೋಕದ ಮಂದಿ.

ಆಮೇಲೆ ಅಷ್ಟೇ ಸಹಜವಾಗಿ 'ಹೂಗೊಂಚಲು' ಕಂಗೊಳಿಸಿತು. ಚುಟುಕುಗಳಂತೂ ನಿರಂತರ ಚಕಚಕ ಹೊಳೆಯುತ್ತಲೇ ಇದ್ದವು. ಮುಂದೆ ೧೫ ವರ್ಷಗಳ ನಂತರ ಅವರನ್ನು ಪ್ರತ್ಯಕ್ಷ ಕಾಣುವ ಸುಯೋಗ ನನಗೆ ಒದಗಿಬಂದಿತು. ಅವರು ಧಾರವಾಡಕ್ಕೆ ಬರಬೇಕಾಗಿದ್ದ ಒಂದು ಸಂದರ್ಭದಲ್ಲಿ ನನ್ನನ್ನು ಕಾಣುವ ಇಚ್ಛೆಯನ್ನು ವ್ಯಕ್ತಪಡಿಸಿದ್ದರಲ್ಲದೆ (ಡಾ॥ ಶಾಂತಿನಾಥ ದೇಸಾಯಿಯವರ ಮೂಲಕ) ನನ್ನ ಕೆಲವು ಕವಿಮಿತ್ರರನ್ನೂ ಕಾಣಬಯಸಿದ್ದರು. ವಿಶ್ವವಿದ್ಯಾಲಯದ ಕ್ಯಾಂಪಸ್ಸಿನಲ್ಲಿದ್ದ ನನ್ನ ಮನೆಯಲ್ಲಿಯೇ ನಾವೆಲ್ಲ ಕೂಡಿದೆವು. ಎಷ್ಟೆಲ್ಲ ಮಾತಾಡಿದೆವು.ಅವರ ಸರಳತೆ, ಕಾವ್ಯಪ್ರೇಮ, ಯುವಕವಿಗಳ ಬಗೆಗಿನ ಅಭಿಮಾನ ಆಸಕ್ತಿಗಳಿಗೆ ನಾನು ಮಾರುಹೋದೆ. ಸಮಾಜಸೇವೆಯಲ್ಲಿ ತಮ್ಮನ್ನು ಸಂಪೂರ್ಣ ತೊಡಗಿಸಿಕೊಂಡು ಮಾಡುತ್ತಿರುವ ಅವರ ಕಾರ್ಯಗಳ ಬಗ್ಗೆ ತಿಳಿದುಕೊಂಡಂತೆ ಅವರ ಬಗ್ಗೆ ನನ್ನ ಗೌರವ ಹೆಚ್ಚುತ್ತ ಬಂದಿತು. 'ಹೋರಾಟದೊಳಗುಂಟು ನಿಜವಾದ ಗೆಲವು' ಎಂಬುದು ಅವರ ಜೀವನದ ಸಂದೇಶವಾಗಿ ನನ್ನನ್ನು ತಟ್ಟಿತು. 'ನನ್ನ ಕನ್ನಡ ನುಡಿಯೇ ನೀನೆಷ್ಟು ಚಂದ! ಏನು ಗೀಚಿದರು ಆಗುವುದು ಶ್ರೀಗಂಧ'. ಕನ್ನಡವ ಬಗೆಗೆ ಅದೆಷ್ಟು ಪ್ರೀತಿ, ಅಭಿಮಾನ !

ನವ್ಯ ಕಾವ್ಯ ಅಟ್ಟಹಾಸದಿಂದ ಮೆರೆಯುತ್ತಿರುವ ಸಂದರ್ಭದಲ್ಲಿ ಪ್ರಕಟವಾದ ಅವರ 'ಹೂಗೊಂಚಲು' (೧೯೫೮) ಮುನ್ನುಡಿಯಲ್ಲಿ ದಿನಕರ ದೇಸಾಯಿಯವರು ಬರೆದ ಮಾತುಗಳು ಗಮನ ಸೆಳೆದವು. 'ಯಾವನೊಬ್ಬ ಕವಿಯು ಕೇವಲ 'ಫ್ಯಾಷನ್ನಿ'ಗಾಗಿ ಯಾವುದೇ ಪದ್ಧತಿಯನ್ನು ಅನುಸರಿಸಬಾರದು....... ಹೃದಯದಿಂದ ಸಹಜವಾಗಿ ಮೂಡಿದ ರೀತಿಯಲ್ಲಿಯೇ ಕವನ ಹೊಮ್ಮಿ ಬರಲಿ..... ನಿಜವಾದ ಕಾವ್ಯ ಎಂದಿಗೂ ಹಳತಾಗುವುದಿಲ್ಲ.' ಈ ಮಾತು ಇಂದಿಗೂ ಪ್ರಸ್ತುತ.

೧೯೭೯ರಲ್ಲಿ ಅಂಕೋಲೆಯಲ್ಲಿ ಜರುಗಿದ ದೇಸಾಯರ ಷಷ್ಟ್ಯಬ್ಧಿ ಸಮಾರಂಭದಲ್ಲಿ ಪಾಲ್ಗೊಳ್ಳಲು ವಿಶ್ವವಿದ್ಯಾಲಯದ ಕುಲಪತಿ ಡಾ॥ ಅಡಕೆಯವರು, ಕುಲಸಚಿವರಾಗಿದ್ದ ಶ್ರೀ ಸದಾಶಿವ ಒಡೆಯರ ಅವರು, ಜೊತೆಗೆ ಡಾ॥ ಶಾಂತಿನಾಥ ದೇಸಾಯಿ ಹಾಗೂ ನಾನೂ ಹೋದಾಗ ಅಲ್ಲಿ ನೆರೆದ ಜನಸಮೂಹದಲ್ಲಿ ಹಳ್ಳಿಯ ಜನಸಾಮಾನ್ಯರ ಉತ್ಸಾಹವನ್ನು ಕಂಡು ಚಕಿತನಾಗಿದ್ದೆ. ಆದರೆ ಇಷ್ಟೆಲ್ಲ ಜನಪ್ರಿಯತೆಯನ್ನು ಪಡೆದ ದಿನಕರ ದೇಸಾಯಿಯವರೇ ಆ ಸಮಾರಂಭಕ್ಕೆ ಬಂದಿರಲಿಲ್ಲ. ಸ್ತುತಿಗೆ ಸಂಕೋಚ, ಪ್ರಚಾರವಿಮುಖತೆ, ಅದೇ ಅವರ ವೈಶಿಷ್ಟ್ಯ. 'ಕವಿಗೆ ಬೇಕಾಗಿಲ್ಲ ಯಾವ ಮೆರವಣಿಗೆ'.

೧೯೭೮ರಲ್ಲಿ ಅಂಕೋಲೆಯ ಕೆನರಾ ವೆಲ್‌ಫೇರ್ ಟ್ರಸ್ಟಿನವರು ಏರ್ಪಡಿಸಿದ ಸಮಾರಂಭವೊಂದರಲ್ಲಿ ದೇಸಾಯಿಯವರ ೨೫೦೦ ಮುಕ್ತಕಗಳ ಮಾಲೆ 'ದಿನಕರನ ಚೌಪದಿ' ಸಂಗ್ರಹವನ್ನು ಬಿಡುಗಡೆ ಮಾಡುವ ಗೌರವವನ್ನು ನನಗೆ ನೀಡಲಾಗಿತ್ತು. ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದ ಹಂಪ ನಾಗರಾಜಯ್ಯನವರೂ ಅಂದಿನ ಸಭೆಯಲ್ಲಿ ಉಪಸ್ಥಿತರಿದ್ದರು. ಗೋಖಲೆ ಸೆಂಟಿನರಿ ಕಾಲೇಜಿನ ಆವರಣದಲ್ಲಿ ನಡೆದ ಸಮಾರಂಭದ ಸವಿನೆನಪು ಇನ್ನೂ ನನ್ನ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿದಿದೆ.

ಕರ್ನಾಟಕ ವಿಶ್ವವಿದ್ಯಾಲಯದ ಆವರಣದಲ್ಲಿ ಕಂಡುಬರುವ ಸೌಂದರ್ಯವನ್ನೇ ನಾನು ಆ ಕಾಲೇಜಿನ ಆವರಣದಲ್ಲಿಯೂ ಕಂಡು ಸಂತಸಪಟ್ಟೆ. ಆ ಕಾಲೇಜಿನ ಬಗ್ಗೆ ದಿನಕರ ದೇಸಾಯಿಯವರಿಗಿದ್ದ ಸುಂದರ ಕಲ್ಪನೆಯನ್ನು ಅದರ ಪ್ರಾಚಾರ್ಯರಾಗಿದ್ದ ಪ್ರೊ. ಕೆ.ಜಿ. ನಾಯಕ ಅವರು ಕಾರ್ಯರೂಪದಲ್ಲಿ ನಿರ್ವಹಿಸಿ ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಪ್ತಿಯಲ್ಲಿರುವ ಕಾಲೇಜುಗಳಲ್ಲಿಯೇ ಇದನ್ನೊಂದು ಮಾದರಿ ಕಾಲೇಜನ್ನಾಗಿ ರೂಪಿಸಿ ಶ್ರೇಯೋಭಾಗಿಯಾಗಿದ್ದನ್ನು ಯಾರೂ ಮರೆಯುವಂತಿಲ್ಲ. ಪ್ರಾಚಾರ್ಯ ಕೆ.ಜಿ. ನಾಯಕ ಅವರು ದಿನಕರದೇಸಾಯಿಯವರ ಇಚ್ಛೆಯ ಮೇರೆಗೆ ಅವರ ಕೊನೆಯ ಕವನ ಸಂಕಲನ 'ದಾಸಾಳ'ಕ್ಕೆ ನನ್ನಿಂದ ಮುನ್ನುಡಿಯನ್ನು ಬರೆಯಿಸಿದರು. ಆದರೆ ಅದು ಪ್ರಕಟವಾಗುವ ಮುನ್ನವೇ ಅವರು ಭೌತಿಕವಾಗಿ ನಮ್ಮಿಂದ ದೂರವಾದರು.

ನಾಡಿನ ಒಂದು ಹಿರಿಯ ಚೇತನ ಮತ್ತೊಂದು ಹಿರಿಯ ಚೇತನವನ್ನು ಗುರುತಿಸಿದ ಬಗೆಯನ್ನು ಡಿ.ವಿ.ಜಿ. ಯವರ ಮಾತಿನಲ್ಲಿ ಕಾಣಬಹುದು. 'ದೇಸಾಯಿಯವರು ಒಬ್ಬ ಖ್ಯಾತ ಸಾಹಿತಿಯೆಂಬ ಕೀರ್ತಿಯ ಬಗೆಗೆ ನನಗೆ ಅನುಮಾನವಿದ್ದಿಲ್ಲ. ಅವರ ಜೀವನವು ಒಂದು ವೈಚಾರಿಕ ಸಿದ್ಧಾಂತದ ಮೇಲೆ ನಿಂತಿದೆ ಎಂದು ನನಗೀಗ ಅರ್ಥವಾಯಿತು ಮತ್ತು ಈ ಸಿದ್ಧಾಂತದ ಪರಿಣಾಮವೇ ಅವರ ಕಾರ್ಯಸಾಧನೆಗಳಾಗಿವೆ. ದಿನಕರ ದೇಸಾಯಿಯವರು ಒಬ್ಬ ಮಹಾನ್ ಶಕ್ತಿ. ನಾಡು ಅವರನ್ನು ಅರಿಯುವಂತಾಗಲಿ'.

'ಸುವರ್ಣ ಸಂಚಿಕೆ'
೨೦೦೪

೫

# ಕನ್ನಡದ ಹಿತಚಿಂತನೆ

ಕರ್ನಾಟಕ ರಾಜ್ಯ ನಿರ್ಮಾಣವಾಗಿ ಇಂದಿಗೆ ನಾಲ್ವತ್ತೊಂದು ವರ್ಷಗಳಾದವು. ಭಾರತ ಸ್ವಾತಂತ್ರ್ಯದ ಚಿನ್ನದ ಹಬ್ಬದ ಸಂದರ್ಭದಲ್ಲಿ ಈಗ ನಾವಿದ್ದೇವೆ. ಪ್ರಾರಂಭದ ಈ ನಾಲ್ಕು ದಶಕಗಳು ಬೆಳವಣಿಗೆಯ ಹಂತದ ದೃಷ್ಟಿಯಿಂದ ಒಂದು ನಾಡಿನ ಇತಿಹಾಸದಲ್ಲಿ ಮಹತ್ವದ ಅವಧಿಯೆಂದೇ ಭಾವಿಸಬೇಕಾಗುತ್ತದೆ. ನಾವು ಇದುವರೆಗೆ ನಡೆದು ಬಂದ ದಾರಿಯನ್ನು ಅವಲೋಕಿಸಿ ಭವಿಷ್ಯದ ಚಿಂತನೆ ನಡೆಸಲು ಇದು ತಕ್ಕ ಕಾಲವೆಂದೇ ಹೇಳಬಹುದು.

ನಾಡು ನುಡಿಯ ಹಿತರಕ್ಷಣೆ ಹಾಗೂ ಬೆಳವಣಿಗೆಗಾಗಿ ನಾವು ಇನ್ನೂ ಏನೇನು ಮಾಡುವುದಿದೆ ಎಂಬ ವಿಷಯದಲ್ಲಿ ಭಿನ್ನ ನಿಲುವುಗಳು ಇರಬಹುದಾದರೂ ಕನ್ನಡದ ಅಭಿಮಾನ ಮತ್ತು ಕಾಳಜಿ ನಮ್ಮನ್ನು ಒಂದೇ ವೇದಿಕೆಯ ಮೇಲೆ ಆಗಾಗ ತರುತ್ತಿದೆ. ತಾತ್ವಿಕ ತಳಹದಿಯ ಮೇಲೆ ಕನ್ನಡಿಗರಿಗೆ ಸಹಜವಾದ ಸಾತ್ವಿಕ ಕೆಚ್ಚಿನ ಕನ್ನಡತನವನ್ನು ನಾಡಿನಲ್ಲಿ ಸ್ಥಾಪಿಸುವ ಪ್ರಯತ್ನಗಳು ಎಡೆಬಿಡದೆ ಮುಂದುವರಿಯಬೇಕಾಗಿದೆ.

ಕನ್ನಡಿಗರ ಗುಣ ಸ್ವಭಾವಗಳನ್ನು ವರ್ಣಿಸುವ ಕವಿರಾಜಮಾರ್ಗಕಾರನ ಪದ್ಯವನ್ನು ಓದಿದರೆ ಈಗಲೂ ರೋಮಾಂಚನವೆನಿಸುತ್ತದೆ;

ಸುಭಟರ್ಕಳ್, ಕವಿಗಳ್, ಸು-
ಪ್ರಭುಗಳ್, ಚೆಲ್ವರ್ಕಳ್, ಅಭಿಜನರ್ಕಳ್, ಗುಣಿಗಳ್ ।
ಅಭಿಮಾನಿಗಳ್, ಅತ್ಯುಗ್ರರ್,
ಗಭೀರಚಿತ್ತರ್, ವಿವೇಕಿಗಳ್ ನಾಡವರ್ಗಳ್॥

ಕರ್ನಾಟಕ ಸಂಸ್ಕೃತಿಯ ಎಲ್ಲ ಉತ್ತಮ ಮೌಲ್ಯಗಳನ್ನು ಈ ಪದ್ಯ ದಾಖಲಿಸುತ್ತದೆಂಬುದು ನಿಜ, ಆದರೆ ಈ ಗುಣಗಳ ಮೊತ್ತದಲ್ಲಿ 'ಅಭಿಮಾನಿಗಳ್, ಅತ್ಯುಗ್ರರ್' ಎಂಬ ವಿಶೇಷಣಗಳು ಇಂದಿನ ಕನ್ನಡಿಗರಿಗೆ ಅನ್ವಯಿಸುತ್ತವೆಯೇ? ಎಂದು ಕೇಳಬೇಕಾಗುತ್ತದೆ. ಸ್ವಾಭಿಮಾನ ಶೂನ್ಯತೆಯೇ ಇಂದು ಕನ್ನಡಿಗರು ಅನೇಕ ಕ್ಷೇತ್ರಗಳಲ್ಲಿ ಹಿಂದುಳಿಯಲು ಕಾರಣವಾಗಿದೆಯೆಂದರೆ ತಪ್ಪಾಗದು.

ನಮ್ಮ ಭಾಷೆ ಪಂಪ, ಬಸವಣ್ಣ, ಕುಮಾರವ್ಯಾಸ, ಸರ್ವಜ್ಞ, ಪುರಂದರರಂಥವರನ್ನು ಪಡೆದ ಮಾತ್ರಕ್ಕೆ ಮುಗಿಯಲಿಲ್ಲ. ಅದರ ಹಿಂದೆ ವಿವಿಧ ಬಗೆಯ ಸಂಪನ್ಮೂಲಗಳೂ ಸಾಹಸಪ್ರಿಯರಾದ ಉದ್ಯಮಶೀಲರೂ ಬೆಳೆದು ಮುಂದೆ ಬರಬೇಕು. ನಮ್ಮ ಪ್ರಾಚೀನತೆಯ

ಬಗ್ಗೆ ಹೆಮ್ಮೆಪಡುತ್ತಿರುವ ಸಂದರ್ಭದಲ್ಲಿಯೇ ಇಂದು ಕನ್ನಡಿಗರು ನೆಲ ಜಲದ ಪ್ರಶ್ನೆ, ಉದ್ಯೋಗಾವಕಾಶದ ಪ್ರಶ್ನೆ, ಭಾಷೆಯನ್ನು ಜ್ಞಾನಾರ್ಜನೆಯ ಭಾಷೆಯನ್ನಾಗಿ, ಸುಗಮವಾದ ಆಡಳಿತ ಭಾಷೆಯನ್ನಾಗಿ ಬೆಳೆಸುವ ಪ್ರಶ್ನೆ - ಇವೇ ಮೊದಲಾದವು ನಮ್ಮನ್ನು ಬಾಧಿಸುತ್ತಿರುವುದನ್ನು ಮರೆಯುವಂತಿಲ್ಲ.

ಭಾಷಾವಾರು ಪ್ರಾಂತಗಳ ರಚನೆ ಸ್ವತಂತ್ರ ಭಾರತದ ಅಗತ್ಯಗಳಲ್ಲಿ ಒಂದೆಂದು ಮಹಾತ್ಮಾಗಾಂಧಿಯವರು ತಿಳಿದಿದ್ದರು. ವಿವಿಧ ಭಾಷೆ ಹಾಗೂ ಪ್ರಾಂತಗಳ ಜೀವನಾಡಿಯನ್ನು ಹಿಡಿದೇ ಅವರು ಈ ಮಾತನ್ನು ಹೇಳಿದ್ದರು. ಕನ್ನಡಿಗರ ಸಂಸ್ಕೃತಿ ಹಾಗೂ ಜೀವನ ಕ್ರಮವನ್ನು ನೋಡಿದರೆ, ಕರ್ನಾಟಕವೆಂದರೆ ಸಂಕ್ಷಿಪ್ತ ಭರತಖಂಡ ಎನ್ನುವಷ್ಟರ ಮಟ್ಟಿಗೆ ಅದರ ವೈಶಿಷ್ಟ್ಯ ಒಡೆದು ಕಾಣುತ್ತಿದೆ. ಜನಜೀವನದ ಆಶೋತ್ತರಗಳು ಆಯಾ ಭಾಷೆಗಳಲ್ಲಿ ನೆಲೆಯೂರಬೇಕಾದರೆ ಪ್ರಭುತ್ವ ದೆಹಲಿಯಿಂದ ಬೆಂಗಳೂರಿಗೆ ವರ್ಗಾವಣೆಯಾದರೆ ಮಾತ್ರ ಸಾಲದು. ಬೆಂಗಳೂರಿನಿಂದ ಅದು ಪ್ರತಿ ಜಿಲ್ಲೆಗೆ, ಪ್ರತಿ ತಾಲ್ಲೂಕಿಗೆ, ಪ್ರತಿ ಹಳ್ಳಿಗೆ ವರ್ಗಾವಣೆಯಾದಾಗಲೇ ವಿಕೇಂದ್ರೀಕರಣ ಫಲಪ್ರದವಾಗಬಲ್ಲದು. ಅಭಿವೃದ್ಧಿಯ ಕಾರ್ಯದಲ್ಲಿ ಪ್ರಾದೇಶಿಕ ಅಸಮತೋಲನವನ್ನು ಇದು ನಿವಾರಿಸಬಲ್ಲದು. ನೆರೆ ರಾಜ್ಯಗಳೊಂದಿಗಿನ ನದಿ ನೀರಿನ ವಿವಾದಗಳಿಗೆ ಕಾನೂನಿನ ಚೌಕಟ್ಟಿನಲ್ಲಿ ಪರಿಹಾರ ಸಿಗುವದು ಕಷ್ಟ; ಅದು ಪರಸ್ಪರ ಕೊಂಡ್ಕೊಳ್ಳುವಿಕೆಯಲ್ಲಿ ಬಗೆಹರಿಯಬೇಕು. ರಾಜಕೀಯ ಸ್ವಾರ್ಥ ಅದಕ್ಕೆ ಅಡ್ಡ ಬರಬಾರದು.

ಕರ್ನಾಟಕದಲ್ಲಿ ವಾಸಿಸುವ ಅನ್ಯಭಾಷೆಯವರು ಕನ್ನಡದಲ್ಲಿ ಓದಲು, ಬರೆಯಲು, ವ್ಯವಹರಿಸಲು ಬಾರದವರಾಗಿದ್ದರೆ ಅವರನ್ನು ಅನಕ್ಷರಸ್ಥರೆಂದೇ ಹೇಳಬೇಕಾಗುತ್ತದೆ. ಕರ್ನಾಟಕದಲ್ಲಿದ್ದೂ ಕನ್ನಡ ಸಂಸ್ಕೃತಿಗೆ ಸ್ಪಂದಿಸದೆ ಹೋದರೆ ಅಂತವರು ಅಸಂಸ್ಕೃತರೆಂದೇ ಭಾವಿಸಬೇಕಾಗುತ್ತದೆ. ಹೊರನಾಡಿನಲ್ಲಿರುವ ಕನ್ನಡಿಗರಿಗೂ ಇದು ಅನ್ವಯಿಸುತ್ತದೆ. ಆದರೆ ಅವರು ಈ ಸಾಮರಸ್ಯವನ್ನು ಎಂದೋ ಸಾಧಿಸಿದ್ದಾರೆಂಬುದು ನಿಜಕ್ಕೂ ಆದರ್ಶಪ್ರಾಯವಾದದ್ದು. ಅದೇ ಹೊತ್ತಿಗೆ ಅವರು ಕನ್ನಡತನವನ್ನು ಕಾಪಾಡಿಕೊಳ್ಳುವಂತೆ ನೆರವಾಗುವದು ಒಳನಾಡಿಗರ ಹಾಗೂ ಕರ್ನಾಟಕ ಸರಕಾರದ ಕರ್ತವ್ಯವಾಗಿದೆ. ಕನ್ನಡ ಜನತೆ ತನ್ನ ಮನೆಯ ಯಜಮಾನಿಕೆಯನ್ನು ಇಂಗ್ಲಿಷಿಗೆ ನೀಡಿಬಿಟ್ಟಿರುವ ಅಪಾಯವನ್ನು ಈಗ ಎದುರಿಸಬೇಕಾಗಿದೆ. ನಮ್ಮ ಮಕ್ಕಳು ಆದಷ್ಟು ಕಡಿಮೆ ಕನ್ನಡವನ್ನು, ಆದಷ್ಟು ಹೆಚ್ಚು ಇಂಗ್ಲಿಷನ್ನು ಮಾತಾಡುವ ಸಾಧ್ಯತೆಯೇ ಉತ್ತಮ ವಿದ್ಯಾಭ್ಯಾಸವೆಂಬ ತಪ್ಪು ಕಲ್ಪನೆಯಿಂದ ನಮ್ಮ ಮಕ್ಕಳ ವಿದ್ಯಾಭ್ಯಾಸ ಹಸಗೆಟ್ಟು, ಹದಗೆಟ್ಟು ಹೋಗುತ್ತಿದೆ. ಪ್ರತಿ ತಾಲೂಕು ಹಾಗೂ ಪ್ರತಿ ದೊಡ್ಡ ಊರುಗಳಲ್ಲಿ ಕನ್ನಡ ಮಾಧ್ಯಮದ ಮಾದರಿ ಶಾಲೆಗಳನ್ನು ತೆರೆದು ಅವು ಸುಭದ್ರವಾಗಿಯೂ ಆಕರ್ಷಣೀಯವೂ ಆಗಿ ನಡೆಯುವಂತೆ ನೋಡಿಕೊಳ್ಳುವುದು ಸರಕಾರದ ಮೊಟ್ಟ ಮೊದಲ ಗುರಿಯಾಗಬೇಕು. ಖಾಸಗಿ ಕನ್ನಡ ಮಾಧ್ಯಮದ ಶಾಲೆಗಳಿಗೆ ಪ್ರಾರಂಭದಿಂದಲೇ ಅನುದಾನ ದೊರೆಯುವಂತಾಗಬೇಕು.

ಕರ್ನಾಟಕದಲ್ಲಿ ಎಲ್ಲ ಹಂತದಲ್ಲೂ ತಮ್ಮ ಆಡಳಿತ ಭಾಷೆ ಕನ್ನಡವಾಗದಿದ್ದರೆ ನಮ್ಮ ಪ್ರಜಾಪ್ರಭುತ್ವಕ್ಕೆ ಅರ್ಥವೇ ಇಲ್ಲ. ಆಡಳಿತ ಭಾಷೆ ಸುಲಭವೂ ಸರಳವೂ ಆಗಿರಬೇಕೆಂದು ಪ್ರತ್ಯೇಕ ಹೇಳಬೇಕಾಗಿಲ್ಲ. ಭಾಷೆಯ ದೃಷ್ಟಿಯಿಂದ ಅಂಥ ಮಡಿವಂತಿಕೆಯನ್ನೇನೂ ಕನ್ನಡ ಇಟ್ಟುಕೊಂಡಿಲ್ಲ. ಹಿರಿಯ ಕವಿಗಳೊಬ್ಬರು ಹೇಳಿದಂತೆ ಕನ್ನಡ ಭಾಷೆ ಅಪ್ಸರೆಯಿದ್ದಂತೆ. ಬೇರೆ ಭಾಷೆಗಳ ಪ್ರಭಾವ ಇವಳ ಮೇಲೆ ಆದರೂ ಇವಳು ಕನ್ಯೆಯಾಗಿಯೇ ಉಳಿದಿರುತ್ತಾಳೆ. ತಾನು ಜೀವಿಸುವ ಭಾಷೆಯಲ್ಲಿ ಕಲಿಯದ ಮಗು ಕೇವಲ ಬಾಯಿಪಾಠ ಮಾಡುವ ಗಿಣಿಯಾಗುತ್ತದೆ. ಸ್ವತಂತ್ರ ವಿಚಾರ ಮಾಡುವದು ಅದಕ್ಕೆ ಸಾಧ್ಯವಾಗುವುದಿಲ್ಲ. ಈ ನೆಲದಲ್ಲಿ ನಿಂತು ಸಹಜವಾಗಿ ಯೋಚಿಸುವದಕ್ಕೂ ಅದು ಅಸಮರ್ಥವಾಗುತ್ತದೆ.

ಹಲವು ಪಕ್ಷಗಳ ಒಕ್ಕೂಟವೂ ವಿಕೇಂದ್ರೀಕೃತವೂ ಆಗಲಿರುವ ಭವಿಷ್ಯ ಭಾರತವನ್ನು ಲಕ್ಷ್ಯದಲ್ಲಿಟ್ಟುಕೊಂಡು, ತನ್ನ ರಕ್ಷಣೆ ಹಾಗೂ ಅನ್ಯರ ಹಿತ, ಬೇರೆ ಬೇರೆಯಲ್ಲದ ಒಂದು ಹಾರ್ದಿಕ ನೆಲೆಯನ್ನು ಕನ್ನಡಿಗರು ಇಂದು ಕಂಡುಕೊಳ್ಳಬೇಕಾಗಿದೆ.

'ಪ್ರಭಾಂಕಲಿ'

(ಅಭಿನಂದನ ಗ್ರಂಥ : ೧೯೯೯)

೬

## ನೈಜ ಸಂಸ್ಕೃತಿಯ ಸುಖಾನುಭವ

ಜೀವನದಲ್ಲಿ ನಾವು ಎಷ್ಟೋ ತೀರ್ಥಕ್ಷೇತ್ರಗಳನ್ನೂ ಐತಿಹಾಸಿಕ ಪ್ರೇಕ್ಷಣೀಯ ಸ್ಥಳಗಳನ್ನೂ ಕಾಲಕಾಲಕ್ಕೆ ನೋಡಿರುತ್ತೇವೆ. ಆದರೆ ನಮ್ಮ ಮನಸ್ಸಿನಲ್ಲಿ ಅಚ್ಚೊತ್ತಿ ಉಳಿದಿರುವಂಥವು ಕೆಲವು ಮಾತ್ರ. ನಾನು ಶ್ರೀ ಧರ್ಮಸ್ಥಳ ಕ್ಷೇತ್ರವನ್ನು ಪ್ರಥಮ ಬಾರಿಗೆ ಕಂಡದ್ದು ಐವತ್ತು ವರ್ಷಗಳ ಹಿಂದೆಯಾದರೂ ಅದೊಂದು ಸ್ಮರಣೀಯ ಅನುಭವವಾಗಿ ನನ್ನ ಮನಸ್ಸನ್ನು ಇಂದಿಗೂ ತುಂಬಿಕೊಂಡಿದೆ. ಅದಕ್ಕೆ ಮುಖ್ಯವಾಗಿ ಮೂರು ಕಾರಣಗಳಿವೆ. ಮೊದಲನೆಯದು ಸದಾ ಹಸಿರು ಮುರಿಯುವ ಕಾಡು ಬೆಟ್ಟಗಳ ನಿಸರ್ಗ ಸೌಂದರ್ಯ. ಎರಡನೆಯದು, ಅದರ ಮಡಿಲಲ್ಲಿ ಜೈನ ಧರ್ಮಾಧಿಕಾರಿಗಳ ಸಮರ್ಥ ಉಸ್ತುವಾರಿಯಲ್ಲಿ ವೈಷ್ಣವ ಧರ್ಮದ ಅರ್ಚಕರಿಂದ ಪೂಜೆಗೊಳ್ಳುತ್ತಿರುವ ಶೈವ ಧರ್ಮದ ಮಂಜುನಾಥೇಶ್ವರ ದೇವಾಲಯದ ವಿಶಾಲ ದೃಷ್ಟಿಯ ವಿಶಿಷ್ಟ ಸಂಪ್ರದಾಯ. ಮೂರನೆಯದಾಗಿ, ಕಾರ್ತಿಕ ಮಾಸದಲ್ಲಿ ಶ್ರೀ ಮಂಜುನಾಥ ಸ್ವಾಮಿಯ ಲಕ್ಷದೀಪೋತ್ಸವದ ಶುಭ ಸಂದರ್ಭದಲ್ಲಿ ೧೯೩೩ರಿಂದಲೂ ಸಂಘಟಿಸುತ್ತ ಬಂದಿರುವ ಸಾರ್ಥಕವಾದ ಸರ್ವಧರ್ಮ - ಸಾಹಿತ್ಯ ಸಮ್ಮೇಳನಗಳು. ಬಹುಶಃ ಭಾರತದ ಬೇರಾವ ಕಡೆಗಳಲ್ಲಿಯೂ ಈ ಬಗೆಯ ಸುಂದರ ಸಮನ್ವಯದ ದೃಶ್ಯ ಕಣ್ಣಿಗೆ ಬೀಳಲಾರದು.

ಇಂಥ ಒಂದು ಸಮಾರಂಭದಲ್ಲಿ ಭಾಗವಹಿಸಲು ಕೋರಿ ೧೯೫೬ರಲ್ಲಿ ಶಿವರಾಮ ಕಾರಂತರಿಂದ ನನಗೆ ಪತ್ರ ಬಂದಾಗ ನನಗಾದ ಸಂತೋಷ ಅವರ್ಣನೀಯ. ಪುಣೆ-ಬೆಂಗಳೂರು ರೈಲಿನಲ್ಲಿ ಹೊರಟು ಕಡೂರಿನಲ್ಲಿಳಿದು, ಅದೇ ಹೊತ್ತಿಗೆ ಬೆಂಗಳೂರಿನಿಂದ ಬಂದ ಅತಿಥಿಗಳೊಂದಿಗೆ ಮೊದಲೇ ವ್ಯವಸ್ಥೆಗೊಳಿಸಿದ ವ್ಯಾನಿನಲ್ಲಿ ಹೊರಟಾಗ ಇನ್ನೂ ಕತ್ತಲು. ಚಾರ್ಮಾಡಿಯ ಘಾಟನ್ನು ದಾಟುವಷ್ಟರಲ್ಲಿ ವಾಂತಿಯಾಗಿ ಸುಸ್ತಾಗಿದ್ದ ನನ್ನ ಅವಸ್ಥೆಯನ್ನು ನೋಡಿ ಜ.ಪಿ. ರಾಜರತ್ನಂ ಅವರು ಆಗಾಗ, 'ಹ್ಯಾಗಿದ್ದೀರಿ ದೇವರೂ?' ಎಂದು ವಿಚಾರಿಸಿಕೊಂಡದ್ದನ್ನು ಮರೆಯುವಂತಿಲ್ಲ.

ಉಜಿರೆಯ ಸಿದ್ಧವನ ಗುರುಕುಲದಲ್ಲಿ ಅತಿಥಿಗಳಿಗೆ ಉಳಿದುಕೊಳ್ಳುವ ವ್ಯವಸ್ಥೆ ಮಾಡಲಾಗಿತ್ತು. ಆ ಗುರುಕುಲದಲ್ಲಿ ಎಲ್ಲ ಜಾತಿ ಪಂಗಡಗಳ-ಮುಸ್ಲಿಂ, ಕ್ರೈಸ್ತರನ್ನು ಒಳಗೊಂಡ ವಿದ್ಯಾರ್ಥಿಗಳಿರುವುದು ನನ್ನ ಕುತೂಹಲವನ್ನು ಕೆರಳಿಸಿತ್ತು. ಇದರ ಜೊತೆಗೆ ಅಲ್ಲಿ ನಡೆಯುವ ಎಲ್ಲ ಕಾರ್ಯಕ್ರಮಗಳಿಗೆ ಹೊಸ ಆಯಾಮವನ್ನು ಹಾಕಿಕೊಟ್ಟ ದಿವಂಗತ ಮಂಜಯ್ಯ ಹೆಗ್ಗಡೆಯವರ

ಸರಳತೆ, ಸಹಜತೆ, ಅಹಿಂಸಾಪರತೆ, ದೈವಭಕ್ತಿಯೊಳಗೊಂಡ ಆತ್ಮಶಕ್ತಿ, ಆಡಳಿತದ ಮುತ್ಸದ್ದಿತನ, ದೂರದೃಷ್ಟಿ, ಸಾಹಿತ್ಯೋಪಾಸನೆ, ಕಲಾದೃಷ್ಟಿಗಳ ಬಗ್ಗೆ ಮೊದಲೇ ಅಷ್ಟಿಷ್ಟು ಕೇಳಿ ತಿಳಿದಿದ್ದ ನನಗೆ ಎಲ್ಲವೂ ಅಲ್ಲಿ ಜೀವಂತವಾಗಿ ಪ್ರತ್ಯಕ್ಷವಾಗಿತ್ತು. ಸಹಜತೆಗೆ ಚ್ಯುತಿಯೊದಗದಂತೆ, ವೈಜ್ಞಾನಿಕ ಹಾಗೂ ಆಧುನಿಕ ದೃಷ್ಟಿಕೋನವನ್ನು ಹೊಂದಿದ್ದ ಅವರ ಆದರ್ಶವನ್ನು ಶ್ರೀ ರತ್ನವರ್ಮ ಹೆಗ್ಗಡೆಯವರು ಸಾಧ್ಯವಿದ್ದಮಟ್ಟಿಗೆ ಮುಂದುವರಿಸಿರುವುದು ಕಂಡು ಬಂದಿತು.

ದೇವಸ್ಥಾನದ ಎದುರಿಗಿದ್ದ ಎತ್ತರವಾದ ಸ್ಥಳದಲ್ಲಿ, ಕಟ್ಟಿದ 'ವಸಂತ ಮಹಲ್'ನಲ್ಲಿ ಕಾರ್ಯಕ್ರಮಗಳಿಗೆ ವೇದಿಕೆ ಸುಂದರವಾಗಿ ಸಜ್ಜುಗೊಂಡಿದ್ದಿತು. ಸಭಾಗೃಹದಲ್ಲಿ ರೋಮ್ ಮಾದರಿಯ ಕಂಬಗಳು ಕಲಾತ್ಮಕ ವಿಲಾಸದೊದಿಗೆ ಕಂಗೊಳಿಸಿದರೆ ಒಳಗಡೆ, ಸ್ವತಃ ಮಂಜಯ್ಯ ಹೆಗ್ಗಡೆಯವರು ರಚಿಸಿದ ಹಾಗೂ ಆಯ್ಕೆ ಮಾಡಿದ ತೈಲ ವರ್ಣಚಿತ್ರಗಳು ಗೋಡೆಗಳನ್ನು ಅಲಂಕರಿಸಿದ್ದವು. ಮೊದಲಿಗೆ ನಡೆದ ಸರ್ವಧರ್ಮ ಸಮ್ಮೇಳನದಲ್ಲಿ ವೀರಶೈವ ಧರ್ಮವನ್ನು ಕುರಿತು ಮಾತನಾಡಬೇಕಿದ್ದ ವಿದ್ವಾಂಸರು ಅನಿವಾರ್ಯ ಕಾರಣಗಳಿಂದ ಬಾರದ್ದರಿಂದ ಆ ಕಾರ್ಯವನ್ನು ನಾನೇ ಪೂರೈಸಿಕೊಡಬೇಕೆಂದು ಹಿಂದಿನ ರಾತ್ರಿಯೇ ನನಗೆ ಸೂಚಿಸಲಾಗಿತ್ತು. ಶರಣರ ಚರ್ಚೆಗಳನ್ನೇ ಆಧಾರವಾಗಿಟ್ಟುಕೊಂಡು ನಾನು ತಕ್ಕಮಟ್ಟಿಗೆ ಅದನ್ನೂ ನಿರ್ವಹಿಸಿದೆ. ಡಾ.ಎಸ್.ಕೆ. ರಾಮಚಂದ್ರರಾವ್‌ರಂಥ ವಿದ್ವಾಂಸರು ಬೇರೆ ಬೇರೆ ಧರ್ಮಗಳನ್ನು ಕುರಿತು ಉದ್ಬೋಧಕವಾಗಿ ಮಾತನಾಡಿದರು. ಜಿ.ಪಿ. ರಾಜರತ್ನಂ ಅವರ ಅಧ್ಯಕ್ಷತೆಯಲ್ಲಿ ನಡೆದ ಕವಿಗೋಷ್ಠಿಯಲ್ಲಿ ಭಾಗವಹಿಸಿದ್ದ ಕವಿಗಳಲ್ಲಿ ನಾನೂ ಒಬ್ಬನಾಗಿದ್ದೆ. ಎಲ್ಲಾ ಅತಿಥಿಗಳನ್ನೂ ಯೋಗ್ಯ ರೀತಿಯಲ್ಲಿ ಸನ್ಮಾನಿಸಲಾಯಿತು.

ಸಾಹಿತ್ಯ ಸಮ್ಮೇಳನಕ್ಕೆ ಮೈಸೂರು, ಬೆಂಗಳೂರು, ಮಂಗಳೂರು, ಧಾರವಾಡ - ಹೀಗೆ ಅಖಿಲ ಕರ್ನಾಟಕ ಸ್ವರೂಪ ಒದಗಿಸಲಾಗಿತ್ತು. ಸರ್ವಧರ್ಮ ಸಮ್ಮೇಳನದಲ್ಲಿ, ವೀರಶೈವ, ಜೈನ, ಬೌದ್ಧ, ಹಿಂದೂ, ಮುಸ್ಲಿಂ, ಕ್ರಿಶ್ಚಿಯನ್ - ಹೀಗೆ ಎಲ್ಲಾ ಧರ್ಮಗಳ ವಿಚಾರಗಳನ್ನು ಯಾವ ಧರ್ಮಕ್ಕೂ ಅಪಚಾರವಾಗದಂತೆ ಆಯಾ ಧರ್ಮಗಳ ವಿಚಾರಗಳನ್ನು ಆಯಾ ಧರ್ಮಗಳ ಅಂತರಾರ್ಥವನ್ನು ಪ್ರತಿಪಾದಿಸಲಾಯಿತು. ಹೀಗೆ ಧರ್ಮಸಮನ್ವಯದ, ಭಿನ್ನ ಸಂಪ್ರದಾಯಗಳ ಹಿತಕರವಾದ ಸಹಬಾಳುವೆಯ ಆದರ್ಶವನ್ನು 'ಮನುಷ್ಯ ಜಾತಿ ತಾನೊಂದೆ ವಲಂ' ಎಂಬ ಮಹಾಕವಿ ಪಂಪನ ಧ್ಯೇಯ ವಾಕ್ಯದ ಪರಿಪಾಲನೆಯನ್ನು ಮೊದಲ ಬಾರಿಗೆ ಧರ್ಮಸ್ಥಳದಲ್ಲಿ ಕಂಡ ಹಿಗ್ಗು ನನ್ನದಾಯಿತು.

ಮುಂದೆ ೧೯೬೨ರಲ್ಲಿ ಧರ್ಮಪತ್ನಿ ಶಾಂತಾದೇವಿಯೊಂದಿಗೆ ಮತ್ತೊಮ್ಮೆ ಶ್ರೀ ಧರ್ಮಸ್ಥಳ ಕ್ಷೇತ್ರಕ್ಕೆ ಹೊರಟಾಗ ಸ್ನೇಹಿತರಾದ ಪ್ರೊ. ಹಾ.ಮಾ. ನಾಗೇಶ ನಮ್ಮ ಜೊತೆಗೆ ಮಾರ್ಗದರ್ಶಕರಾಗಿ ಎಳ್ಳಷ್ಟೂ ತೊಂದರೆಯಾಗದಂತೆ ಕಾಳಜಿ ವಹಿಸಿದ್ದನ್ನು ಇಲ್ಲಿ ನೆನೆಯಬೇಕು. ಸರ್ವಧರ್ಮ-ಸಾಹಿತ್ಯ ಸಮ್ಮೇಳನಗಳ ವಜ್ರಮಹೋತ್ಸವದ ವಿಶೇಷ ಸಂದರ್ಭ ಅದಾಗಿದ್ದರಿಂದ ಶ್ರೀ ಕ್ಷೇತ್ರ ಸಂಭ್ರಮ - ಸಡಗರಗಳಿಂದ ತುಂಬಿ ತುಳುಕುತ್ತಿತ್ತು. ೧೯೬೮ರಲ್ಲಿ ಶ್ರೀ ರತ್ನವರ್ಮ ಹೆಗ್ಗಡೆಯವರು

ವಿಧಿವಶರಾದ ನಂತರ ಇಪ್ಪತ್ತರ ಕಿರುವಯಸ್ಸಿನಲ್ಲಿ ಪಟ್ಟಾಭಿಷಿಕ್ತರಾದ ಧರ್ಮಾಧಿಕಾರಿ ಶ್ರೀ ವೀರೇಂದ್ರ ಹೆಗ್ಗಡೆಯವರು ವಯಸ್ಸಿಗೆ ಮೀರಿದ ಜಾಣ್ಮೆ, ಅನುಭವ ಹಾಗೂ ಶ್ರದ್ಧೆಯಿಂದ ನಾಲ್ಕು ದಶಕಗಳಲ್ಲಿ ಅದ್ಭುತವಾದ ಬದಲಾವಣೆಗಳಿಗೆ ಕಾರಣೀಭೂತರಾದುದನ್ನು ಇಡೀ ಕ್ಷೇತ್ರವೇ ಒಡನುಡಿಯುತ್ತಿರುವಂತೆ ನನಗೆ ಭಾಸವಾಯಿತು. ಸ್ವಧರ್ಮವನ್ನು ನಿಷ್ಠೆಯಿಂದ ಪಾಲಿಸುತ್ತ ಪ್ರಪಂಚದ ಎಲ್ಲಾ ಮತ ಧರ್ಮಗಳ ಒಳ್ಳೆಯ ಮಾತುಗಳಿಗೆ ತಮ್ಮ ಹೃದಯವನ್ನು ತೆರೆದಿಟ್ಟುಕೊಂಡೇ, ರಾಜರ್ಷಿಯಾಗಿ ಅವರು ರೂಪುಗೊಂಡಿದ್ದರು. ಸಾಹಿತ್ಯ ಕಲೆಗಳಲ್ಲಿ ವಿಶೇಷ ಆಸಕ್ತಿವಹಿಸಿ ಆಧುನಿಕ ಜಗತ್ತಿನ ಸೌಲಭ್ಯಗಳನ್ನು ಹಿತಕರವಾಗಿ ಬಳಸಿಕೊಂಡು, 'ಮಂಜೂಷ' ವಸ್ತುಸಂಗ್ರಹಾಲಯ ಹಾಗೂ ಗ್ರಂಥಾಲಯಗಳನ್ನು ಉಪಯುಕ್ತತೆಯಲ್ಲಿ ಮಹತ್ತಾಗಿಯೂ, ಬೃಹತ್ತಾಗಿಯೂ ಬೆಳಸಿದ ರೀತಿ ಅನುಪಮವಾದದ್ದು. ನದಿಗಳ ಹೆಸರನ್ನು ಹೊತ್ತ ನೂತನ ಅತಿಥಿಗೃಹವೊಂದರಲ್ಲಿ ನಮ್ಮನ್ನು ಉಳಿಸಲಾಗಿತ್ತು. ಕಾಲೇಜುಗಳ ಅಧ್ಯಾಪಕರೇ ಸ್ವಯಂಸೇವಕರಂತೆ ಹೆಜ್ಜೆ ಹೆಜ್ಜೆಗೆ ನೆರವಾಗುತ್ತಿದ್ದದನ್ನು ಎಂದೂ ಮರೆಯುವಂತಿಲ್ಲ. ಜನಜಾತ್ರೆಯಂತಿದ್ದರೂ ಪ್ರತಿಯೊಬ್ಬರೂ ತಮ್ಮಷ್ಟಕ್ಕೇ ಒಂದು ಆಂತರಿಕ ಶಿಸ್ತಿಗೆ ಒಳಗಾಗಿ ಯಾತ್ರೆಯ ಸುಖವನ್ನು ಅನುಭವಿಸುವಂತಿತ್ತು.

ವಜ್ರಮಹೋತ್ಸವದ ಸಾಹಿತ್ಯ ಸಮ್ಮೇಳನದ ಉದ್ಘಾಟನೆಯ ಭಾಗ್ಯ ನನ್ನದಾಗಿದ್ದರೆ, ಸಮ್ಮೇಳನದ ಅಧ್ಯಕ್ಷತೆಯನ್ನು ಡಾ.ಯು.ಆರ್. ಅನಂತಮೂರ್ತಿಯವರು ವಹಿಸಿದ್ದರು. ಹೆಗ್ಗಡೆಯವರ ಬೀಡಿನಿಂದ ಸಮ್ಮೇಳನದ ವಿಶಾಲವಾದ ಭವ್ಯ ಮಂಟಪದವರೆಗೆ ಯಕ್ಷಗಾನದ ರೀತಿಯಲ್ಲಿ ಒಂದು ಸಣ್ಣ ಮೆರವಣಿಗೆ. ಸೊಂಡಿಲಲ್ಲಿ ಹೂಮಾಲೆಯನ್ನು ಹಿಡಿದ ಗಜರಾಜನಿಂದ ದ್ವಾರದಲ್ಲಿ ಸ್ವಾಗತ. ಮೆರವಣಿಗೆ ಸರಳ ಹಾಗೂ ಆಡಂಬರ ರಹಿತವಾಗಿ ಹಿತವಾಗಿತ್ತು. ಕಾರ್ಯಕ್ರಮ ಸಂಪೂರ್ಣ ಸಮಯ ನಿಷ್ಠೆಯಿಂದ ಕೂಡಿತ್ತು. ಸಭೆಯಲ್ಲಿ ಸಾವಿರಾರು ಜನರಿದ್ದರೂ ಎಲ್ಲೂ ಸದ್ದುಗದ್ದಲ ಕೇಳಬಾರದು. ಸಭಿಕರೆಲ್ಲರೂ ಒಂದು ಶಿಸ್ತಿಗೆ ಒಳಪಟ್ಟಂತೆ ತನ್ಮಯತೆಯಿಂದ ಉಪನ್ಯಾಸಗಳನ್ನು ಕೇಳುತ್ತಾರೆ. ಜನ ಭಕ್ತಿ-ಗೌರವದಿಂದ ಭಾಗವಹಿಸುವುದರಿಂದ ಸಮ್ಮೇಳನದಲ್ಲಿ ಗೊಂದಲಕ್ಕೆ ಆಸ್ಪದವಿರುವುದಿಲ್ಲ. ಯಾವುದೇ ಬಗೆಯ ಗಡಿಬಿಡಿಯ ಓಡಾಟವಾಗಲಿ, ಸುಮ್ಮನೆ ವೇಳೆಯನ್ನು ವ್ಯರ್ಥಗೊಳಿಸುವವರಾಗಲಿ, ರಾಜಕಾರಣಿಗಳ ಸಲುವಾಗಿ ಕಾಯುವವರಾಗಲಿ ಅಲ್ಲಿ ಇಲ್ಲವೇ ಇಲ್ಲ. ಉಳಿದ ಕೆಲವು ಧಾರ್ಮಿಕ ಕ್ಷೇತ್ರಗಳಲ್ಲಿ ಕಂಡುಬರುವಂತೆ ಉಸಿರು ಕಟ್ಟಿಸುವ ವಾತಾವರಣಕ್ಕೆ ಅಲ್ಲಿ ಆಸ್ಪದವೇ ಇಲ್ಲ. ಮುಕ್ತವಾದ ಹಿತವಾದ ವಾತಾವರಣ. ಅತಿಥಿಗಳಾಗಿ ಭಾಗವಹಿಸಿದವರಿಗೆ ಅಲ್ಲಿ ದೊರೆಯುವ ಸುಖಾನುಭವ ಹಾಗೂ ಶ್ರೋತೃಗಳಿಗೆ ಸಿಗುವ ಸಮಾಧಾನ ಉಳಿದ ಕಡೆಗಳಲ್ಲಿ ನಡೆಸುವ ಸಾಹಿತ್ಯ ಸಮ್ಮೇಳನಗಳಲ್ಲಿಯೂ ದೊರೆಯುವಂತಾದರೆ ಅದು ಕನ್ನಡಿಗರ ಭಾಗ್ಯವೆಂದೇ ಹೇಳಬೇಕು.

ವಿನಯಶೀಲರಾದ ವೀರೇಂದ್ರ ಹೆಗ್ಗಡೆಯವರು ಮೃದುಭಾಷಿಗಳು, ವಿದ್ವತ್ ಪರಂಪರೆಯನ್ನು ಮನಸಾರೆ ಮೆಚ್ಚುವವರು. ಹೊಸ ಹೊಸ ಪ್ರತಿಭೆಗಳನ್ನು ಸ್ವಾಗತಿಸಿ ಮನ್ನಣೆ ನೀಡುವವರು.

ಕ್ಷೇತ್ರಕ್ಕೆ ಬಂದ ಅತಿಥಿಗಳಿಗಂತೂ ರಾಜಮರ್ಯಾದೆ. ಕ್ಷೇತ್ರದಲ್ಲಿ ಭಕ್ತ ಸಮೂಹಕ್ಕೆ ಹೊಸ ರೀತಿಯ ಸೌಲಭ್ಯಗಳನ್ನು ಒದಗಿಸುವುದರಲ್ಲಂತೂ ಎಲ್ಲರಿಗಿಂತ ಮುಂದು. 'ಅನ್ನಪೂರ್ಣ'ದಲ್ಲಿಯ ಹೊಸ ವ್ಯವಸ್ಥೆ; ಆದರಾತಿಥ್ಯಕ್ಕೆ, ಸೌಜನ್ಯದ ನಡವಳಿಕೆಗೆ, ಹೆಚ್ಚಾಗಿ ಸ್ವಚ್ಛತೆಗೆ ನಾಡಿಗೇ ಮಾದರಿ. ಮಹಾಮಾನವ ಮಂಜಯ್ಯ ಹೆಗ್ಗಡೆಯವರ ವ್ಯಕ್ತಿತ್ವದಿಂದ ಪ್ರೇರಣೆ ಪಡೆದ ವೀರೇಂದ್ರ ಹೆಗ್ಗಡೆಯವರು ತಮಗೆ ದೊರೆತ ಎಲ್ಲಾ ಅವಕಾಶಗಳನ್ನೂ ಸತ್ಕಾರ್ಯಕ್ಕೆ ವಿನಿಯೋಗಿಸಿ, ಸಂತರು ಪ್ರಾರಂಭಿಸಿದ ಸರ್ವಧರ್ಮ - ಸಾಹಿತ್ಯ ಸಮ್ಮೇಳನಗಳ ಮೂಲ ಆಶಯವನ್ನು ನೂರಕ್ಕೆ ನೂರರಷ್ಟು ಫಲಪ್ರದಗೊಳಿಸಿರುವುದು ಕನ್ನಡನಾಡಿಗರ ಭಾಗ್ಯ, ಭಾರತಕ್ಕೆ ಭೂಷಣಪ್ರಾಯ. ವೈಯಕ್ತಿಕವಾಗಿ ಈ ಮೊದಲು ಭಾಗವಹಿಸಿದ ನನಗಂತೂ ಅದೊಂದು ನೈಜ ಸಂಸ್ಕೃತಿಯ ತಿರುಳನ್ನು ತೋರಿದ ಚಿರಸ್ಮರಣೀಯ ಅನುಭವ.

'ಅಮೃತವರ್ಷಿಣಿ'

೨೦೦೮

೭

# ಭುವನೇಶ್ವರೀದೇವಿ ರಥವನೇರಿದಳು

೧೯೨೪ರಲ್ಲಿ ಮಹಾತ್ಮ ಗಾಂಧೀಜಿಯವರ ಅಧ್ಯಕ್ಷತೆಯಲ್ಲಿ ಬೆಳಗಾವಿಯಲ್ಲಿ ನೆರವೇರಿದ ಅಖಿಲ ಭಾರತ ಕಾಂಗ್ರೆಸ್ ಅಧಿವೇಶನದ ಸಂದರ್ಭದಲ್ಲಿ ಹುಯಿಲಗೋಳ ನಾರಾಯಣ ರಾಯರಿಂದ ರಚಿತವಾದ 'ಉದಯವಾಗಲಿ ನಮ್ಮ ಚೆಲುವ ಕನ್ನಡನಾಡು' ಗೀತೆಯನ್ನು ಕರ್ನಾಟಕದ ನಾಡಗೀತೆಯಾಗಿ ಹಾಡಲಾಯಿತು. ಅಂದಿನಿಂದಲೂ ನಾಡಿನ ಜನತೆಯಲ್ಲಿ ಚಿಕ್ಕವರು ದೊಡ್ಡವರು ಎನ್ನದೆ ಎಲ್ಲರಿಗೂ ಆ ನಾಡಗೀತೆ ಸ್ಫೂರ್ತಿಯನ್ನು ನೀಡುತ್ತ ಬಂದುದನ್ನು ಎಲ್ಲರೂ ಬಲ್ಲರು. ಕರ್ನಾಟಕ ಏಕೀಕರಣವಾದ ಮೇಲೆ ಭಾಷೆ, ಸಾಹಿತ್ಯ, ಸಂಸ್ಕೃತಿ, ರಾಜಕಾರಣ - ಎಲ್ಲ ದೃಷ್ಟಿಯಿಂದಲೂ ಪ್ರಾದೇಶಿಕವಾಗಿ ಒಂದು ನಿರ್ದಿಷ್ಟ ನೆಲೆಯನ್ನು ರಾಜ್ಯ ಪಡೆದುಕೊಂಡಿತಷ್ಟೆ. ಆ ಸಂದರ್ಭದಲ್ಲಿ 'ಉದಯವಾಗಲಿ' ನಾಡಗೀತೆಯನ್ನು 'ಉದಯವಾಗಿದೆ' ಎಂದು ಮಾರ್ಪಡಿಸಿ ಹಾಡಬೇಕೆಂಬ ಅತ್ಯುತ್ಸಾಹ ಕೆಲವರಲ್ಲಿ ಕಂಡುಬಂದಿತು. ಆದರೆ ಎಷ್ಟೋ ಕನ್ನಡ ಪ್ರದೇಶಗಳು ತಾಯ್ನಾಡಿನಿಂದ ದೂರವಾಗಿ ಬಿಟ್ಟಿರುವುದಲ್ಲದೆ ಒಳನಾಡಿನ ವಿವಿಧ ಭಾಗಗಳ ಜನರ ಮನಸ್ಸಿನಲ್ಲಿಯೇ ಕನ್ನಡಿಗರೆಲ್ಲ ಒಂದು ಎಂಬ ತಾದಾತ್ಮ್ಯಭಾವ ಇನ್ನೂ ಮೂಡದಿರುವಾಗ 'ಉದಯವಾಗಲಿ' ಎಂದೇ ಹಾಡುವದು ಯೋಗ್ಯವೆಂದು ವಿಚಾರವಂತರಾದ ಹಿರಿಯರು ಬಯಸಿದರು. ಅರ್ಧಶತಮಾನದ ನಂತರವೂ ಆ ಪರಿಸ್ಥಿತಿಯಲ್ಲಿ ವಿಶೇಷ ಬದಲಾವಣೆ ಯಾಗದಿರುವುದು ವಾಸ್ತವ ಸಂಗತಿಯಾಗಿದೆ.

ಒಳನಾಡಿನಲ್ಲಿಯೇ ಈ ಸ್ಥಿತಿ ಇರುವಾಗ ಇನ್ನು ಗಡಿನಾಡಿನ ದುರವಸ್ಥೆಯಂತೂ ಹೇಳತೀರದು. ಈ ನಾಡಿನ ರಾಜಧಾನಿ ಮಧ್ಯಭಾಗದಲ್ಲಿರದೆ ದೂರದ ಮೂಲೆಯಲ್ಲಿ ವಿರಾಜಮಾನವಾದದ್ದೂ ಇದಕ್ಕೆ ಕಾರಣವಾಗಿರಬಹುದು. ಯಾರೋ ನಾಲ್ಕು ಜನ ಬಲ್ಲವರು ಒತ್ತಾಯ ತಂದಾಗ ಸಮಿತಿಗಳನ್ನೋ ಆಯೋಗಗಳನ್ನೋ ನಿಯಮಿಸಿ ಸರಕಾರ ಕೈತೊಳೆದುಕೊಂಡದ್ದುಂಟು. ಆ ವರದಿಗಳ ಮುಖ್ಯಾಂಶಗಳನ್ನಾದರೂ ನಿಷ್ಠೆಯಿಂದ ಕಾರ್ಯರೂಪದಲ್ಲಿ ತಂದಿದ್ದರೆ ಪರಿಸ್ಥಿತಿ ಎಷ್ಟೋ ಸುಧಾರಿಸಬಹುದಿತ್ತು. ಆರ್ಥಿಕವಾಗಿ, ಶೈಕ್ಷಣಿಕವಾಗಿ, ಸಾಂಸ್ಕೃತಿಕವಾಗಿ ಗಡಿಭಾಗದ ಕನ್ನಡಿಗರನ್ನು ಮೇಲೆತ್ತಿ ಉಳಿದ ಕನ್ನಡಿಗರ ಸಮಕ್ಕೆ ತರದೆ ಹೋದರೆ ಪರಿಸ್ಥಿತಿ ಇನ್ನೂ ವಿಕೋಪಕ್ಕೆ ಹೋಗುವ ದಿನಗಳು ದೂರವಿಲ್ಲ. ನಂಜುಂಡಪ್ಪ ವರದಿಯನ್ನು ಪೂರ್ಣವಾಗಿ ಜಾರಿಗೆ ತರುವುದು ಕರ್ನಾಟಕ ಸರಕಾರದ ಪ್ರಥಮ ಕರ್ತವ್ಯವಾಗಬೇಕಾಗಿದ್ದಿತು. ಅಂಥದರಲ್ಲಿ ನೈತಿಕ

ಜವಾಬ್ದಾರಿಯಿಲ್ಲದೆ ರಾಜಕೀಯ ಪಕ್ಷಗಳು ಸ್ವಾರ್ಥಕ್ಕಾಗಿ ಪರಸ್ಪರ ಕಚ್ಚಾಡಿ ನಾಡಿನ ಹಿತವನ್ನೇ ಕಡೆಗಣಿಸಿರುವದು ಅತ್ಯಂತ ದುರ್ದೈವದ ಸಂಗತಿಯೆನ್ನದೆ ವಿಧಿಯಿಲ್ಲ.

ನಾಡು ಒಂದಾಗಿ ಐವತ್ತು ದೀಪಾವಳಿಗಳನ್ನು ಕಂಡಿದ್ದರೂ ನಾಡಿನ ಎಷ್ಟೋ ಮೂಲೆಗಳಲ್ಲಿ ಬೆಳಕಿನ ಕಿರಣವನ್ನೇ ಕಾಣದ, ಕನ್ನಡದ ತೇಜಸ್ಸಿನಿಂದ ಮರೆಯಾಗಿ ಬಣಗುಡುತ್ತ ನೆರೆ ರಾಜ್ಯಗಳ ಸುಸ್ಥಿತಿಯ ಆಕರ್ಷಣೆಗೆ ಒಳಗಾಗಿ ಕನ್ನಡ ಸಂಸ್ಕೃತಿಗೆ ಎರವಾಗುತ್ತಿರುವುದನ್ನು ಕಾಣುತ್ತಿದ್ದೇವೆ. ಗಡಿಯಾಚೆಗೆ ಉಳಿದಿರುವ ಕನ್ನಡಿಗರ ಪಾಡನ್ನಂತೂ ಹೇಳತೀರದು. ಕರ್ನಾಟಕದಲ್ಲಿರುವ ಉಳಿದ ಭಾಷೆಗಳ ಬಗ್ಗೆ ಕರ್ನಾಟಕ ಸರಕಾರ ಉದಾರ ಭಾವನೆ ತಾಳಿ, ಅದು ನೀಡಿದಷ್ಟು ಸವಲತ್ತುಗಳನ್ನು ಉಳಿದ ಯಾವ ರಾಜ್ಯಗಳೂ - ಅದರಲ್ಲಿಯೂ ಮಹಾರಾಷ್ಟ್ರ - ನೀಡುತ್ತಿಲ್ಲವೆಂಬುದನ್ನು ತಜ್ಞರೇ ತೋರಿಸಿಕೊಟ್ಟಿದ್ದಾರೆ, ವಾಸ್ತವಸ್ಥಿತಿ ಹೀಗಿರುವಾಗ ಮಹಾರಾಷ್ಟ್ರದ ಉಪಮುಖ್ಯಮಂತ್ರಿಯಾದಿಯಾಗಿ ಅಲ್ಲಿಯ ಕೆಲವರು ಕರ್ನಾಟಕದಲ್ಲಿ ಮಹಾರಾಷ್ಟ್ರೀಯರ ಮೇಲೆ ದೌರ್ಜನ್ಯ ನಡೆಯುತ್ತಿದೆ ಎಂಬ ಪ್ರಚೋದನಕಾರಿ ಹೇಳಿಕೆ ನೀಡಿ, ಉಭಯ ರಾಜ್ಯಗಳ ಸಾಮಾನ್ಯ ಜನರ ಸಹಬಾಳ್ವೆಗೆ ಹುಳಿಹಿಂಡುವ ಹೀನ ಕೆಲಸದಲ್ಲಿ ತೊಡಗಿರುವದು ದೊಡ್ಡ ವಿಪರ್ಯಾಸ. ಮಹಾರಾಷ್ಟ್ರದ ರಾಜಕಾರಣಿಗಳ ಗೂಂಡಾಗಿರಿ ಪುಂಡಾಟಿಕೆ ಹಾಗೂ ಕ್ಷುಲ್ಲಕ ಕಾರಣಗಳಿಂದ ಜನರನ್ನು ತಪ್ಪುದಾರಿಗೆಳೆದು ತಮ್ಮ ರಾಜಕೀಯ ಬೇಳೆ ಬೇಯಿಸುಕೊಳ್ಳುವ ಪ್ರವೃತ್ತಿಯನ್ನು ಕನ್ನಡಿಗರು ಒಗ್ಗಟ್ಟಿನಿಂದ ತಡೆಗಟ್ಟಲೇಬೇಕು.

ಇಂಥ ವಿಷಮ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ತಾಲೂಕಿನ ಚಿಂಚಣಿ ಗ್ರಾಮದ ಸಿದ್ಧಸಂಸ್ಥಾನ ಮಠದ ಗಡಿಕನ್ನಡಿಗರ ಬಳಗ ಹಾಗೂ ಕನ್ನಡ ಜಾಗೃತಿಪುಸ್ತಕ ಮಾಲೆ ದಶಮಾನೋತ್ಸವವನ್ನಾಚರಿಸುತ್ತಿರುವಂಥ ಒಳ್ಳೆಯ ಸುದ್ದಿ ಮತ್ತಾವುದೂ ಇರಲಾರದು. ಮೇಲೆ ಕಾಣಿಸಿದ ಸಮಸ್ಯೆಗಳಿಗೆ ಪರಿಹಾರವೆನ್ನುವಂತೆ ಯಾವ ಬೀದಿ ಕೂಗಿನ ಘೋಷಣೆಯೂ ಇಲ್ಲದೆ ರಚನಾತ್ಮಕವಾದ ರೀತಿಯಲ್ಲಿ ಕನ್ನಡಪರ ಕಾರ್ಯಕ್ರಮಗಳನ್ನು ರೂಪಿಸಿ, ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳ ಮೂಲಕ ಜನಜಾಗೃತಿಯನ್ನುಂಟುಮಾಡಿ ಜನಮನದ ಪರಿವರ್ತನೆಗೆ ಕಾರಣರಾದ ಸತ್ವಶಾಲಿ ವ್ಯಕ್ತಿಯೊಬ್ಬರು ಆ ಭಾಗದಲ್ಲಿ ಕನ್ನಡದ ದೀಕ್ಷೆ ತೊಟ್ಟಿರುವುದು ಉತ್ತರ ಗಡಿನಾಡ ಕನ್ನಡಿಗರ ಭಾಗ್ಯವೆಂದೇ ಹೇಳಬಹುದು. ಮಠದ ಪೀಠಾಧಿಪತಿಗಳಾದ ಶ್ರೀ ಅಲ್ಲಮಪ್ರಭು ಸ್ವಾಮೀಜಿಯವರು ಜನರ ದೃಷ್ಟಿಯಲ್ಲಿ 'ಕನ್ನಡದಸ್ವಾಮಿ'ಯಾಗಿ ಮಠ 'ಕನ್ನಡದ ಮಠ'ವಾಗಿ ಜನರ ಪ್ರೀತಿ, ವಿಶ್ವಾಸ, ಅಭಿಮಾನಗಳಿಗೆ ಪಾತ್ರವಾಗಿರುವುದು ಒಂದು ದಶಕದ ಮಹತ್‌ಸಾಧನೆಗೆ ಸಾಕ್ಷಿಯಾಗಿದೆ. ಗಡಿಯಾಚೆಯ ಮರಾಠಿಗರಲ್ಲಿಯೂ ತಿಳಿವಳಿಕೆಯನ್ನು ಮೂಡಿಸಿ, ಗಡಿಯೀಚೆಯ ಹಳ್ಳಿ ಹಳ್ಳಿಗಳಲ್ಲಿಯೂ ಪ್ರವಾಸ ಮಾಡಿ ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿಯ ಕಂಪನ್ನು ಹರಡುತ್ತ, ಕನ್ನಡ ನೆಲ-ಜಲ-ಭಾಷೆಯ ಸಮಸ್ಯೆಗಳ ಬಗ್ಗೆ ನಾಡಿನ ಬೇರೆ ಬೇರೆ ಭಾಗದ ಸಾಹಿತಿಗಳನ್ನೂ ತಜ್ಞರನ್ನೂ ಆಮಂತ್ರಿಸಿ, ಅವರಿಂದ ಉಪನ್ಯಾಸಕೊಡಿಸಿ ರಾಜ್ಯೋತ್ಸವವನ್ನು ಅರ್ಥಪೂರ್ಣವಾಗಿ ಆಚರಿಸುತ್ತಿರುವುದು ಒಂದು ಮಾದರಿಯಾಗಿ ನಿಂತಿದೆ.

ಶ್ರೀ ಮಠದ ಆಶ್ರಯದಲ್ಲಿರುವ ಜನ ಕಲ್ಯಾಣ ಸಂಸ್ಥೆ 'ಕನ್ನಡ ಜಾಗೃತಿ ಗ್ರಂಥಮಾಲೆಯನ್ನು ಪ್ರಾರಂಭಿಸಿ ಇದುವರೆಗೆ ೨೩ ಗ್ರಂಥಗಳನ್ನು ಪ್ರಕಟಿಸಿ ಕನ್ನಡ ಪರ ಚಿಂತನೆಗೆ, ಸಂಸ್ಕೃತಿ ವಿವೇಚನೆಗೆ ನಾಡಿನ ಅಭಿವೃದ್ಧಿಯ ಯೋಜನೆಗೆ ವೈಚಾರಿಕವಾಗಿ ಎಡಗೊಟ್ಟಿರುವದು ಈ ಮಾಲೆಯ ವೈಶಿಷ್ಟ್ಯವಾಗಿದೆ. ಇದಕ್ಕೂ ಹಿಂದಿನಿಂದಲೇ ಮಠದಲ್ಲಿ ಬಡಮಕ್ಕಳ ಬದುಕಿಗೆ ದಾರಿದೀಪವಾಗಬಲ್ಲ 'ಬಾಳಿನಬುತ್ತಿ ಕಲಿಕಾಕೇಂದ್ರ'ವೊಂದನ್ನು ಯಶಸ್ವಿಯಾಗಿ ನಡೆಸಿಕೊಂಡು ಬಂದಿದ್ದಾರೆ. ಪ್ರಾಥಮಿಕಶಾಲೆಯ ಈ ಮಕ್ಕಳು ಕನ್ನಡನಾಡು, ಭಾರತ ದೇಶವನ್ನು ಕುರಿತು ಕೇಳುವ ರಸಪ್ರಶ್ನೆಗಳಿಗೆ ಉತ್ತರಿಸುವ ರೀತಿ, ಒಬ್ಬೊಬ್ಬರೂ ನೂರಾರು ವಚನಗಳನ್ನು ಮುಖೋದ್ಗತವಾಗಿ, ಶುದ್ಧವಾಗಿ ಹೇಳುವ ಕ್ರಮ ಸಂದರ್ಶಕರನ್ನು ಅಚ್ಚರಿಗೊಳಿಸದಿರದು. ಶ್ರೀಗಳು ಚಿಕ್ಕೋಡಿಯಲ್ಲಿ ಸ್ಥಾಪಿಸಿರುವ ಉದ್ಯೋಗಮುಖಿಯಾದ ಶಿಕ್ಷಣ ನೀಡುವ 'ಅಲ್ಲಮಪ್ರಭು ಕೈಗಾರಿಕೆ ತರಬೇತಿ ಕೇಂದ್ರ'ದ ಶಿಕ್ಷಣ ಮಾಧ್ಯಮ ಸಂಪೂರ್ಣ ಕನ್ನಡವಾಗಿರುವದು ಗ್ರಾಮೀಣ ಭಾಗದ ವಿದ್ಯಾರ್ಥಿಗಳಿಗೆ ಒಂದು ವರವಾಗಿದೆ. ಶ್ರೀಗಳವರ ಮನಸ್ಸಿನಲ್ಲಿ ಇಂಥದೊಂದು ಕನಸನ್ನು ಮೂಡಿಸಿ, ಅದಕ್ಕೆ ಮಾರ್ಗದರ್ಶಕರಾಗಿ ನಿಂತವರು 'ಕನ್ನಡದ ಜಗದ್ಗುರು'ಗಳೆಂದೇ ಹೆಸರಾದ, ರಾಷ್ಟ್ರೀಯ ಏಕತಾ ಭಾವೈಕ್ಯತಾ ಪ್ರಶಸ್ತಿ ಪುರಸ್ಕೃತರಾದ ಗದುಗಿನ ತೋಂಟದಾರ್ಯ ಮಠದ ಡಾ॥ ಸಿದ್ಧಲಿಂಗ ಮಹಾಸ್ವಾಮಿಗಳವರು. ಹೀಗೆ ಚೆಲುವ ಕನ್ನಡನಾಡು ಇನ್ನಷ್ಟು ಉಜ್ವಲವಾಗಿ 'ಉದಯವಾಗಲಿ' ಎಂಬ ಆಶಯದಿಂದ ಗಡಿಯುದ್ದಕ್ಕೂ 'ಹಚ್ಚೇವು ಕನ್ನಡದ ದೀಪ' ಎಂದು ಪಣತೊಟ್ಟು, 'ಉಸಿರಾಗಲಿ ಕನ್ನಡ' ಎಂದು ಹಗಲಿರುಳು ಶ್ರಮಿಸುತ್ತಿರುವ ಚಿಂಚಣಿಯ ಗಡಿಕನ್ನಡಿಗರ ಬಳಗ ಮುಂಚೂಣಿಯಲ್ಲಿ ನಿಂತು ಆಚರಿಸುತ್ತಿರುವ ಹತ್ತು ವರುಷದ ಹರುಷದ ಹಬ್ಬ ಸುವರ್ಣ ಕರ್ನಾಟಕದ ಮಹೋತ್ಸವದ ಆಚರಣೆಯನ್ನು ಸಂಧಿಸುತ್ತಿರುವದೂ ಒಂದು ಯೋಗಾಯೋಗವೇ.

ಶ್ರೀ ಅಲ್ಲಮಪ್ರಭು ಸ್ವಾಮೀಜಿಯವರು ಗಡಿಯಲ್ಲಿ ಕೆತ್ತಿ ಸಿಂಗಾರಗೊಳಿಸಿದ ಕನ್ನಡ ಭುವನೇಶ್ವರಿಯ ತೇರನ್ನು ಸಂಭ್ರಮದಿಂದ ಎಳೆಯಲು ನೂರಾರು ಕಾರ್ಯಕರ್ತರು ಕೈಗೊಡುವರೆಂಬ ಭರವಸೆ ನನಗಿದೆ.

'ಕನ್ನಡ ಭುವನೇಶ್ವರಿ' ಎಂದರೆ ಯಾವುದೇ ಸಂಕುಚಿತ ಭಾವನೆಗೆ ಎಡೆಗೊಡದ, ಕನ್ನಡ ನಾಡಿನಲ್ಲಿ ಬಾಳಿ ಬದುಕುತ್ತಿರುವ ಎಲ್ಲರ ಹೃದಯೇಶ್ವರಿ, ಜಾತಿ, ಮತ, ಪಂಥಗಳನ್ನು ಮೀರಿದ ನಾಡಿನ ಸರ್ವಶಕ್ತಿಯ ಸಂಕೇತ ಎಂದು ಭಾವಿಸಬೇಕು. 'ಭುವನೇಶ್ವರಿ' ಎಂದೊಡನೆ 'ಶ್ರೀ'ಯವರ ಕವಿತೆಯ ಸಾಲುಗಳು ನೆನಪಾಗುತ್ತವೆ:

ಭುವನೇಶ್ವರಿದೇವಿ ರಥವನೇರಿದಳು
ಕೂಗಿದರು ಎಲ್ಲರೂ ಒಕ್ಕೊರಲ್ -
"ತಾಯ್ ಬಿಜಯ ಮಾಡುವಳು, ದಾರಿಬಿಡಿ, ದಾರಿಬಿಡಿ,
ಅಡ್ಡಬಾರದಿರಿ,

ಭಾರತಾಂಬೆಯ ಹಿರಿಯ ಹೆಣ್ಮಗಳೆ, ದಾರಿ ತೋರುವ ಹಿರಿಯ ಸೋದರೆ,
ಬಾಳಮ್ಮ ಬಾಳು!
ನೀನ್ ಬಾಳೆ ಏನ್ ಬಾಳು ನಿನ್ನ ಮಕ್ಕಳದು - ಬಾನ್ ಬಾಳು - ತಾಯೆ
ಬಾಳಮ್ಮ ಬಾಳು!"

ಕರ್ನಾಟಕ ಮಾತೆ ಕುವೆಂಪು ಅವರಿಗೆ 'ಭಾರತ ಜನನಿಯ ತನುಜಾತೆ' ಯಾಗಿದ್ದರೆ ಅವರ ಗುರುಗಳಾದ ಬಿ.ಎಂ.ಶ್ರೀ.ಯವರು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ 'ಭಾರತಾಂಬೆಯ ಹಿರಿಯ ಹೆಣ್‌ಮಗಳೆ' ಎಂದು ಉದ್ಗರಿಸುತ್ತಾರೆ. ಈ ಸಂದರ್ಭದಲ್ಲಿ ಈ ಹಿರಿಯ ಚೇತನರ ಹೆಬ್ಬಯಕೆಯನ್ನು ಮರೆಯದಿರೋಣ.

'ಸಿರಿಗನ್ನಡದ ತೇರು'

(ಕನ್ನಡ ಜಾಗೃತಿ ಗ್ರಂಥಮಾಲೆಯ ದಶಮಾನೋತ್ಸವ)

೨೦೦೮

೮

# ಹೂವುಗಳು ಹಾಗೂ ಹಣ್ಣುಗಳು

**ಲಿನ್‌ಯುಟಾಂಗ್‌ನ ವಿಚಾರ ಲಹರಿ**

ಹೂವುಗಳು ಬಾಡುವುದನ್ನು, ಬಾನಂಚಿನಲ್ಲಿ ಚಂದ್ರ ಮುಳುಗುವುದನ್ನು, ಚೆಲುವೆಯರು ತಾರುಣ್ಯದಲ್ಲಿ ಸಾಯುವುದನ್ನು ನೋಡಲಾಗದು.

ಹೂವಿನ ಗಿಡಗಳನ್ನು ಹಚ್ಚಿದ ಮೇಲೆ ಹೂ ಅರಳಿದಾಗ ನೋಡಬೇಕು. ಚಂದ್ರನಿಗಾಗಿ ಕಾದಮೇಲೆ ಪೂರ್ಣಚಂದ್ರನನ್ನೇ ನೋಡಬೇಕು. ಪುಸ್ತಕವನ್ನು ಬರೆಯತೊಡಗಿದ ಮೇಲೆ ಅದು ಮುಗಿದಾಗ ನೋಡುವದೊಳಿತು. ಸುಂದರ ಸ್ತ್ರೀಯರನ್ನು ಅವರು ಗೆಲುವಿನಿಂದ, ಸಂತೋಷದಿಂದ ಇದ್ದಾಗ ಕಾಣಬೇಕು. ಇಲ್ಲವಾದರೆ ನಮ್ಮ ಉದ್ದೇಶ ಈಡೇರಲಾರದು.

ಬೆಳಗಿನಲ್ಲಿ ತಲೆ ಬಾಚಿಕೊಂಡು, ಪೌಡರು ಹಚ್ಚಿಕೊಂಡಾಗ ಸುಂದರ ಹೆಣ್ಣುಗಳು ನೋಡಲು ಸೊಗಸು.

ಅಂದವಿಲ್ಲದ ಮುಖಗಳಿವೆ. ಆದರೂ ನೋಡಲು ಪರವಾಗಿಲ್ಲ. ಕೆಲವು ಅಂದಗೇಡಿಯಲ್ಲದ ಮುಖಗಳಿದ್ದರೂ ನೋಡಲು ಮನಸ್ಸಾಗುವುದಿಲ್ಲ. ವ್ಯಾಕರಣಬದ್ಧವಾಗಿರದಿದ್ದರೂ ಕೆಲವೊಂದು ಬರವಣಿಗೆ ಪ್ರೀತಿ ಬರುವಂತಿರುತ್ತವೆ. ಇನ್ನು ಕೆಲವು ಸೂತ್ರಾನುಸಾರವಾಗಿದ್ದರೂ ಬೇಸರ ಹುಟ್ಟಿಸುತ್ತವೆ. ಇದೊಂದು ರೀತಿ, ಪೊಳ್ಳು ವ್ಯಕ್ತಿಗಳಿಗೆ ನಾನು ತಿಳಿಸಿ ಹೇಳಲು ಬರದಂತಹದು.

ಸುಂದರ ವಸ್ತುಗಳನ್ನು ಪ್ರೀತಿಸುವ ಹೃದಯದಿಂದಲೇ ಹೂವುಗಳನ್ನು ಪ್ರೀತಿಸಿದರೆ ಒಂದು ವಿಶೇಷ ಸೊಬಗಿನ ಅನುಭವವಾಗುತ್ತದೆ. ಹೂವುಗಳನ್ನು ಪ್ರೀತಿಸುವ ಹೃದಯದಿಂದಲೇ ಚೆಲುವೆಯರನ್ನು ಪ್ರೀತಿಸಿದರೆ ಒಂದು ವಿಶಿಷ್ಟ ಬಗೆಯ ಕೋಮಲತೆ ಹಾಗೂ ಸುರಕ್ಷಿತ ಒಲವನ್ನು ಅನುಭವಿಸಬಹುದು.

ಸುಂದರ ಸ್ತ್ರೀಯರು ಹೂವುಗಳಿಗಿಂತ ಲೇಸು, ಯಾಕೆಂದರೆ ಅವರು ಮನುಷ್ಯನ ಭಾಷೆಯನ್ನು ಅರ್ಥಮಾಡಿಕೊಳ್ಳುತ್ತಾರೆ. ಸುಂದರ ಸ್ತ್ರೀಯರಿಗಿಂತ ಹೂವುಗಳು ಮೇಲು, ಯಾಕೆಂದರೆ ಅವು ಪರಿಮಳವನ್ನು ಸೂಸುತ್ತವೆ. ಇವೆರಡನ್ನೂ ಒಂದೇ ವೇಳೆಗೆ ಪಡೆಯುವುದು ಸಾಧ್ಯವಿರದಿದ್ದರೆ, ಅಂಥವರು ಸುವಾಸಿತಗಳನ್ನು ತೊರೆದು ಮಾತಾಡಬಲ್ಲವನ್ನು ಸ್ವೀಕರಿಸಬೇಕು.

ಹೂವುಗಳನ್ನು ಹೂಜಿಯಲ್ಲಿಡುವಾಗ ಅದರ ಆಕಾರ ಮತ್ತು ಎತ್ತರ ಪ್ರಮಾಣಕ್ಕೆ ತಕ್ಕಂತೆ ಹೂಗಳನ್ನು ಜೋಡಿಸಬೇಕು. ಹೂದಾನಿಯ ಬಣ್ಣದ ಛಾಯೆ ಮತ್ತು ಗಾಢತೆ ಹಾಗೂ ಹೂವುಗಳ ಬಣ್ಣದ ವ್ಯತ್ಯಾಸ ಒಡೆದು ಕಾಣುವಂತಿರಬೇಕು.

ಸುಂದರವಾಗಿದ್ದು ಮರುಳುಗೊಳಿಸುವ ಎಷ್ಟೋ ಹೂವುಗಳಿಗೆ ಸುವಾಸನೆ ಇರುವುದಿಲ್ಲ. ಪಕಳೆಯ ಮೇಲೆ ಪಕಳೆ ಒತ್ತೊತ್ತಾಗಿರುವ ಹೂಗಳು ಅಷ್ಟೊಂದು ಮಾಟವಾಗಿ ಕಾಣುವುದಿಲ್ಲ. ಛೆ, ಪೂರ್ಣವ್ಯಕ್ತಿತ್ವ ಎಷ್ಟೊಂದು ವಿರಳ ! ಕಮಲದ ಹೂವಿನಲ್ಲಿ ಮಾತ್ರ ಎರಡರ ಸಮನ್ವಯವನ್ನು ಕಾಣಬಹುದು.

ಪ್ಲಮ್ ಹೂವು ನೋಡುವವನಲ್ಲಿ ಉದಾತ್ತಭಾವವನ್ನು ಹುಟ್ಟಿಸಿದರೆ, ಆರ್ಕಿಡ್ (ಉಜ್ವಲವರ್ಣದ ಚಿತ್ರವಿಚಿತ್ರ ಹೂ) ಪ್ರತ್ಯೇಕತೆಯ ಭಾವನೆಗೆ ಎಡೆಗೊಡುತ್ತದೆ. ಸೇವಂತಿಗೆ ಸರಳ ಹೃದಯಿಯನ್ನಾಗಿಸಿದರೆ, ಕಮಲಪುಷ್ಪ ಕುಡವರನ್ನು ಸಂತೃಪ್ತಗೊಳಿಸುತ್ತದೆ. ವಸಂತಕಾಲದ ಹೈಟ್ಯಾಂಗ್ (ಪೈರಸ್ ಜಾತಿಯ ಎತ್ತರದ ಗಿಡ) ನೋಡಿದಾಗ ಮನುಷ್ಯ ಭಾವೋದ್ರಿಕ್ತನಾದರೆ, ಪ್ಯೂನಿ ಶೂರತನದ ಭಾವನೆ ತಂದುಕೊಡುತ್ತದೆ. ಬಿದಿರು ಮತ್ತು ಆಲಗಳು ಮನಮೋಹಕವಾಗಿ ಪರಿಣಮಿಸುತ್ತವೆ. ಶರತ್ಕಾಲದ ಹೈಟ್ಯಾಂಗ್ ಭೂಷಣಪ್ರಾಯವಾಗಿ ಅನಿಸಿದರೆ, ಪೈನ್‌ಮರ ನಿಸ್ಸಂಗತ್ವವನ್ನು ಸೂಚಿಸುತ್ತದೆ. 'ವುಟುಂಗ್' ವ್ಯಕ್ತಿಯ ಹೃದಯವನ್ನು ನಿರ್ಮಲಗೊಳಿಸುವಂತಿದ್ದರೆ ವಿಲೊ (ನೀರಹಬ್ಬೆಗಿಡ) ಭಾವಾತಿರೇಕಕ್ಕೆ ಕಾರಣವಾಗಬಹುದು.

ಸೌಂದರ್ಯಕ್ಕೆ ಹೂವಿನ ಮುಖ, ಹಕ್ಕಿಯ ಧ್ವನಿ, ಚಂದ್ರನ ಹೃದಯ, ವಿರಹಿಯ ಅಭಿವ್ಯಕ್ತಿ, ಶರತ್ಕಾಲದ ಸರೋವರದ ರಮಣೀಯತೆ, ದಣಿದ ಕುದುರೆಯ ಮೂಳೆ, ಹಿಮದ ಚರ್ಮ ಮತ್ತು ಕಾವ್ಯದ ಹೃದಯ-ಇವೆಲ್ಲ ಇರುವುದಾದರೆ ನನಗಂತೂ ಸಂಪೂರ್ಣ ತೃಪ್ತಿ.

ಈ ಜಗತ್ತಿನಲ್ಲಿ ಗ್ರಂಥಗಳು ಇಲ್ಲದೇ ಹೋಗಿದ್ದರೆ ಅದರ ಬಗ್ಗೆ ಏನೂ ಹೇಳುವ ಅವಶ್ಯಕತೆಯಿಲ್ಲ. ಆದರೆ ಗ್ರಂಥಗಳಿವೆ ಎಂದ ಮೇಲೆ ಅವುಗಳನ್ನು ಓದಲೇಬೇಕು. ವೈನ್ ಇಲ್ಲದೇ ಹೋಗಿದ್ದರೆ ಆ ಬಗ್ಗೆ ಹೇಳುವುದೇನೂ ಇಲ್ಲ; ಆದರೆ ವೈನ್ ಇದೆಯಾದ್ದರಿಂದ ಅದನ್ನು ಸವಿಯಲೇಬೇಕು. ಪ್ರಸಿದ್ಧವಾದ ಬೆಟ್ಟಗಳು ಇಲ್ಲವೆಂದರೆ ಆ ಮಾತೇ ಬೇಡ; ಆದರೆ ಅವು ಇವೆಯಲ್ಲ ಎಂದ ಮೇಲೆ ಅವುಗಳನ್ನು ನೋಡಲೇಬೇಕು. ಹೂವುಗಳು, ಚಂದ್ರ ಇದ್ದಿಲ್ಲವಾದರೆ ಅದು ಬೇರೆ ವಿಷಯ; ಆದರೆ ಅವು ಇರುವುದರಿಂದ ಅವುಗಳ ಸೊಗಸನ್ನು ಅನುಭವಿಸಿ ನಲಿದಾಡಬೇಕು. ಪ್ರತಿಭಾವಂತ ಪುರುಷರು, ಸುಂದರ ಸ್ತ್ರೀಯರು ಇರದಿದ್ದರೆ ಆ ಬಗ್ಗೆ ಹೇಳುವುದೇನಿದೆ? ಆದರೆ ಅವರಿರುವುದರಿಂದ ಅವರನ್ನು ಪ್ರೀತಿಸಬೇಕು, ರಕ್ಷಿಸಬೇಕು.

ರೂಪವತಿಯರಲ್ಲದ ಹೆಂಗಸರಿಗೆ ಕನ್ನಡಿ ವೈರಿಯಾಗದು. ಯಾಕೆಂದರೆ ಅದಕ್ಕೆ ಭಾವನೆಗಳೇ ಇರುವುದಿಲ್ಲ; ಒಂದು ವೇಳೆ ಇದ್ದಿದ್ದರೆ ಅವರು ಅದನ್ನು ಖಂಡಿತವಾಗಿಯೂ ಒಡೆದು ಚೂರು ಮಾಡಿಬಿಡುತ್ತಿದ್ದರು.

ಅದೇ ಆಗ ಒಳ್ಳೆಯ ಹೂವಿನಕುಂಡವನ್ನು ಕೊಂಡು ತಂದವನಿಗೆ ಅದರ ಬಗ್ಗೆ ಮೃದುವಾದ ಭಾವನೆ ಇದ್ದೇ ಇರುತ್ತದೆ. "ಮಾತಾಡುವ ಹೂ"ವಿನ ಬಗ್ಗೆ ಅವನು ಇನ್ನೂ ಎಷ್ಟು ಮೃದುವಾಗಿರಬೇಡ!

ವೈನ್ ಮತ್ತು ಕಾವ್ಯವಿಲ್ಲದೆ ಬೆಟ್ಟ-ಗುಡ್ಡಗಳು, ನೀರ-ಝರಿಗಳು ಇದ್ದು ಪ್ರಯೋಜನವೇನು? ಸುಂದರಿಯರ ಜೊತೆಯಿಲ್ಲದೆ ಹೂವು, ಚಂದ್ರ ಇದ್ದರೂ ವ್ಯರ್ಥವೇ. ಪ್ರತಿಭಾವಂತರಾದ ವ್ಯಕ್ತಿಗಳು ರೂಪವಂತರೂ ಆಗಿದ್ದರೆ, ಸುಂದರ ಸ್ತ್ರೀಯರು ಬರೆಯಬಲ್ಲವರೂ ಆಗಿದ್ದರೆ ಅಂಥವರು ಸಾಮಾನ್ಯವಾಗಿ ದೀರ್ಘಾಯುಷಿಗಳಾಗಿರುವುದಿಲ್ಲ. ದೇವರು ಇಂಥವರ ಬಗ್ಗೆ ಮತ್ಸರವುಳ್ಳವನಾಗಿರುವುದಷ್ಟೇ ಅಲ್ಲ, ಈ ಮಾದರಿಯ ವ್ಯಕ್ತಿಗಳು ಒಂದು ತಲೆಮಾರಿನ ಸಂಪತ್ತಷ್ಟೇ ಆಗಿರದೆ ಎಲ್ಲ ಕಾಲದ ನಿಧಿಯಾಗಿದ್ದಾರೆ. ಇವರ ಮೇಲೆ ಅತ್ಯಾಚಾರವಾಗಬಹುದೆಂದು ಭಯದಿಂದ ಸೃಷ್ಟಿಕರ್ತ ಇವರನ್ನು ಈ ಜಗತ್ತಿನಲ್ಲಿ ಹೆಚ್ಚು ಕಾಲ ಇಡಬಯಸುವುದಿಲ್ಲ.

(ಚೀನಾದ ಮಹಾ ಲೇಖಕ ಲಿನ್‌ಯುಟಾಂಗ್‌ನ 'The importance of living' (1938) ಗ್ರಂಥದಿಂದ ಆಯ್ದು ಅನುವಾದಿಸಿದ್ದು)

'ಲಂಕೇಶ ಪತ್ರಿಕೆ'
ವಿಶೇಷಾಂಕ ೨೦೦೨

೯

## ಸುಗಮ ಸಂಗೀತದ ಸಾಂಸ್ಕೃತಿಕ ಮಹತ್ವ

ಒಂದು ಜನಾಂಗದ ಸಂಸ್ಕೃತಿಯ ಸಾಧನೆ ಅದರ ಸಾಹಿತ್ಯದಲ್ಲಿ, ಕಾವ್ಯದಲ್ಲಿ ಸ್ಪಷ್ಟವಾಗಿ ಗೋಚರವಾಗುತ್ತದೆ. ಅಭಿವ್ಯಕ್ತಿಯ ಸಾಧನೆಗಳಲ್ಲಿ ಉಕ್ತಿಯ ಪ್ರಭಾವವನ್ನು ಮನಗಂಡೇ ಸರಸ್ವತಿಯನ್ನು ವಿಸ್ತಾರವಾದ ಅರ್ಥದಲ್ಲಿ 'ವಾಗ್‌ರೂಪಿಣಿ' ಎಂದು ಕರೆಯಲಾಗಿದೆ. ವಾಗರ್ಥಗಳನ್ನು ಶಿವಶಕ್ತಿಯರಂತೆ ಸಮನ್ವಯಗೊಳಿಸಿ ಮನುಷ್ಯ ತನ್ನ ಭಾವನೆಗಳನ್ನು, ಅನುಭವಗಳನ್ನು, ಆಶೋತ್ತರಗಳನ್ನು ತಲೆಮಾರಿನಿಂದ ತಲೆಮಾರಿಗೆ ಸಾಗಿಸಿಕೊಂಡು ಬಂದದ್ದು ಭಾಷೆಯ ಮೂಲಕ. ಆ ಭಾಷೆಯನ್ನು ಅತ್ಯಂತ ಸತ್ವಪೂರ್ಣವಾಗಿ, ಸಮರ್ಥವಾಗಿ ಬಳಸಿಕೊಳ್ಳುವದು ಕಾವ್ಯದ ಮೂಲಕ.

ಕನ್ನಡದ ಮಹತ್ವದ ಕಾವ್ಯಗಳೆಲ್ಲ ಜನಜೀವನದ ಮೇಲೆ ವಿಶೇಷ ಪ್ರಭಾವವನ್ನು ಬೀರುತ್ತ ಬಂದಿವೆ. ಸಂಸ್ಕೃತಿಯ ದೃಷ್ಟಿಯಿಂದ ಮಹತ್ವದ ಮಾತೆಂದರೆ ಅವುಗಳಲ್ಲಿ ಅನೇಕ ಕಾವ್ಯಗಳು ಜನಜೀವನದಲ್ಲಿ ಹಾಸುಹೊಕ್ಕಾಗಿ ಸೇರಿದವು. ದೇವಾಲಯಗಳಲ್ಲಿ, ಮಠಗಳಲ್ಲಿ, ಹಬ್ಬಹರಿದಿನಗಳಲ್ಲಿ, ಸಂತೋಷಕೂಟಗಳಲ್ಲಿ ಕಾವ್ಯಗಳನ್ನು ಓದುವದು ಮತ್ತು ಅವನ್ನು ಸಾರ್ವಜನಿಕವಾಗಿ ಕುಳಿತು ಕೇಳುವುದು-ಈ ಪದ್ಧತಿ ಬೆಳೆದು ಬಂದಿತು. ಕಾವ್ಯವಾಚನ ಅಥವಾ 'ಗಮಕ' ಎಂಬ ವಿಶೇಷ ಕಲೆಯೇ ರೂಪುಗೊಂಡಿತು. ಕುಮಾರವ್ಯಾಸ, ಲಕ್ಷ್ಮೀಶ, ಚಾಮರಸ, ವಿರೂಪಾಕ್ಷ ಪಂಡಿತ ಮೊದಲಾದವರಂತು ಬಹಳ ಜನಪ್ರಿಯ ಕವಿಗಳಾದರು. 'ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್' ಎಂಬ ಕವಿರಾಜಮಾರ್ಗಕಾರನ ಉಕ್ತಿ ಜನಸಾಮಾನ್ಯರನ್ನು ಲಕ್ಷ್ಯದಲ್ಲಿಟ್ಟುಕೊಂಡೇ ಹೇಳಿದ್ದು. ಇದು ಎಲ್ಲ ಕಾಲಕ್ಕೂ ಅನ್ವಯವಾಗುವ ಮಾತು. ಓದು ಬಾರದಿದ್ದರೂ ಕಾವ್ಯ ಪ್ರಯೋಗಗಳಲ್ಲಿ ಪರಿಣತರಾದದ್ದು ಹೇಗೆ ಎನ್ನುವ ಪ್ರಶ್ನೆಗೆ ಕಾವ್ಯವಾಚನ ಕಲೆಯಲ್ಲಿ ನಿಪುಣರಾದವರು ಓದಿದ್ದನ್ನು ಪದೇ ಪದೇ ಕೇಳಿಯೇ ಎಂಬ ಉತ್ತರ ತಾನಾಗಿ ಹೊರಡುತ್ತದೆ ಎಂದ ಮೇಲೆ ಗಮಕ ಕಲೆ ೯ನೇ ಶತಮಾನದಷ್ಟು ಅಥವಾ ಅದಕ್ಕೂ ಮುಂಚಿನಿಂದ ಕನ್ನಡನಾಡಿನಲ್ಲಿ ಪ್ರಸಿದ್ಧವಾದ ಕಲೆಯೆನ್ನಬಹುದು. ಪ್ರಾಚೀನ ಕಾಲದಲ್ಲಿ ಕವಿಗಳೂ ಗಮಕಿಗಳೂ ಕಾವ್ಯಗಳನ್ನು ಓದಿಯೇ ಜನರನ್ನು ಮೆಚ್ಚಿಸುತ್ತಿದ್ದರು.

ಈ ಕಾರಣಗಳಿಂದಲೇ ಕಾವ್ಯ ಶ್ರಾವ್ಯವೆಂದು ಪ್ರಸಿದ್ಧವಾಗಿರುವುದು. ಮುದ್ರಣ ಕಲೆ ಬಂದಮೇಲೆ ಈ ಕಲೆ ಹಿಂದೆ ಸರಿಯಿತಾದರೂ ಈಗ ಗಮಕ ಕಲೆ ಪುನಶ್ಚೇತನಗೊಂಡಿದೆ.

ಇಂತಹ ಗಮಕಿಗಳು ಹಳಗನ್ನಡ, ನಡುಗನ್ನಡ ಕಾವ್ಯಗಳನ್ನು ಜನತೆಗೆ ಮುಟ್ಟಿಸುವ ಕಾರ್ಯದಲ್ಲಿ ಕೃತಕೃತ್ಯರಾಗಿದ್ದಾರೆ. 'ಶ್ರೀ ರಾಮಾಯಣ ದರ್ಶನಂ' ಕೂಡ ಶ್ರುತಿರಾಗಯುಕ್ತವಾಗಿ ಪರಿಪೂರ್ಣ ಗಮಕಕ್ಕೆ ಅಳವಡುವ ರಚನೆಯೇ ಆಗಿದೆ.

ನಿಜಗುಣರ ತತ್ತ್ವಪದಗಳು, ಶರಣರ ಅನುಭಾವದ ಹಾಡುಗಳು, ದಾಸರ ಕೀರ್ತನೆಗಳು ಇಂದಿಗೂ ಜನರ ನಾಲಿಗೆಯ ಮೇಲೆ ನಲಿದಾಡುತ್ತಿರುವುದಕ್ಕೆ ಸಾಹಿತ್ಯದೊಡನೆ ಸಂಗೀತದ ನಾದವಿನ್ಯಾಸವೂ ಸೇರಿಕೊಂಡಿರುವುದೇ ಮುಖ್ಯ ಕಾರಣವೆನಿಸಿದೆ. ಸನ್ನಿವೇಶಕ್ಕನುಗುಣವಾಗಿ ಹೊಮ್ಮುವ ಧ್ವನಿತರಂಗಗಳೇ ಅರ್ಥವ್ಯಕ್ತಿಗೆ ಪ್ರತೀಕವಾಗಿ ನಿಲ್ಲುವುದನ್ನು ಜನಪದ ಕಾವ್ಯದಲ್ಲಿ ಕಾಣಬಹುದು. ಜನಜೀವನದಿಂದ ನೇರವಾಗಿ ಸೆಲೆಯೊಡೆದು ಬಂದ ಜನತೆಯ ಸಮಷ್ಟಿ ಮನಸ್ಸಿನ ಪ್ರತಿನಿಧಿಯಾಗಿ ಜಾನಪದ ಗೀತೆಗಳು ಮನ ಸೆಳೆಯುತ್ತವೆ.

ಕನ್ನಡದ ನವೋದಯ ಕಾವ್ಯ ತನ್ನ ಗೇಯಗುಣದಿಂದ ಜನಮನವನ್ನು ಹೆಚ್ಚಾಗಿ ಆಕರ್ಷಿಸಿತು. ಪಂಜೆ, ಬೇಂದ್ರೆ, ಕುವೆಂಪು, ರಾಜರತ್ನಂ ಮೊದಲಾದ ಕವಿಗಳು ತಮ್ಮ ಕಾವ್ಯವಾಚನದಿಂದ ಆಧುನಿಕ ಕನ್ನಡ ಕಾವ್ಯದ ಸಾಹಿತ್ಯದ ಮೌಲ್ಯವನ್ನು ಎತ್ತಿ ತೋರಿಸಿದರು. ಇದರಿಂದ ಭಾವಗೀತೆಗಳ ಹಾಡುಗಾರಿಕೆಗೆ ಹೆಚ್ಚಿನ ಪ್ರೇರಣೆ ದೊರೆಯಿತು. ಪ್ರಾರಂಭದಲ್ಲಿ ಜಯಂತಿದೇವಿ ಹಿರೇಬೇಟ್, ಪಿ.ಆರ್. ಭಾಗವತ, ಪಿ. ಕಾಳಿಂಗರಾವ್, ಅನಂತಸ್ವಾಮಿ, ಎಚ್.ಆರ್. ಲೀಲಾವತಿ, ಅನುರಾಧಾ ಧಾರೇಶ್ವರ, ಬಾಳಪ್ಪ ಹುಕ್ಕೇರಿ ಮೊದಲಾದವರ ಕಾವ್ಯಗಾಯನ ಜನಮನವನ್ನು ಸೂರೆಗೊಂಡಿತು.

ಆಕಾಶವಾಣಿಯಲ್ಲಿ ಭಾವಗೀತೆಗಳ ಪ್ರಸಾರ ಆರಂಭಗೊಂಡ ಮೇಲೆ ಅವುಗಳ ಪ್ರಚಾರ ಇನ್ನಷ್ಟು ಹೆಚ್ಚಿತು. ಹಿಂದಿನ ಕಾವ್ಯಗಳಿಗಿಂತ ಭಾವಗೀತೆಗಳ ಸಂಗೀತ ವಿಶಿಷ್ಟ ರೀತಿಯಲ್ಲಿ ನೆರವು ನೀಡಿತು. ಪ್ರೇಮ, ಪ್ರಕೃತಿ, ದೇಶಭಕ್ತಿ ನಾಡು-ನುಡಿಯ ಹಿರಿಮೆ, ಆಧ್ಯಾತ್ಮ ಹೀಗೆ ಎಲ್ಲ ಬಗೆಯ ಭಾವಗಳಿಗೂ ಇವುಗಳಲ್ಲಿ ಎಡೆ ದೊರೆಯಿತು. ಶಾಲಾ ಕಾಲೇಜುಗಳ ಸಮಾರಂಭಗಳಲ್ಲಿ, ಸಾಹಿತ್ಯಿಕ ಸಭೆಗಳಲ್ಲಿ, ಅಷ್ಟೇ ಅಲ್ಲದೆ ಯಾವುದೇ ಸಾರ್ವಜನಿಕ ಸಭೆಗಳಲ್ಲಿಯೂ ಕಾವ್ಯ ಗಾಯನ ಒಂದು ಅವಶ್ಯ ಭಾಗವಾಗಿ ಶುದ್ಧ ಮನೋರಂಜನೆಯ ಸಾಧನವಾಗಿ ಪರಿಮಿಸಿತು. ಶಾಸ್ತ್ರೀಯ ಸಂಗೀತ, ಜಾನಪದ ಸಂಗೀತ ಹಾಗೂ ಚಿತ್ರಗೀತಗಾಯನಕ್ಕಿಂತ ಇದು ಭಿನ್ನವಾಗಿ ಸುಗಮ ಸಂಗೀತವೆಂಬ ಹೆಸರಿನಲ್ಲಿ ಇದು ತನ್ನದೇ ಆದ ಪ್ರತ್ಯೇಕ ಸ್ಥಾನವನ್ನು ಪಡೆದುಕೊಂಡದ್ದಲ್ಲದೆ ನಾಡಿನ ಸಾಂಸ್ಕೃತಿಕ ಜೀವನದ ಅವಿಭಾಜ್ಯ ಅಂಗವೆನಿಸಿಬಿಟ್ಟಿದೆ. ಇದರಿಂದ ಒಂದು ಬಗೆಯ ಸಾಂಸ್ಕೃತಿಕ ಮಹತ್ವವು ಅದಕ್ಕೆ ಲಭಿಸಿದೆ.

ಸಾಹಿತ್ಯಕ್ಕೇ ಮುಖ್ಯವಾಗಿ ಒತ್ತುಕೊಟ್ಟು ಇಂದಿನ ಭಾಷೆಗೆ ಹತ್ತಿರವಿರುವ ವಚನಗಳನ್ನೂ ಅನುಭಾವ ಪದಗಳನ್ನೂ ಸುಗಮ ಸಂಗೀತ ಶೈಲಿಯಲ್ಲಿ ಹಾಡಿದಾಗ ಅವು ಹೆಚ್ಚು ಅರ್ಥಪೂರ್ಣವಾಗಿ ಸಂವಹನಗೊಳ್ಳುವುದನ್ನು ಕಾಣುತ್ತೇವೆ. ಇದರಿಂದ ಉತ್ತಮ ಸಾಹಿತ್ಯವನ್ನು ಕಾವ್ಯಗುಣದಿಂದ ಕೂಡಿದ್ದನ್ನು ಜನಕ್ಕೆ ತಲುಪಿಸುವ ಉದ್ದೇಶ ಬಹುಮಟ್ಟಿಗೆ ಈಡೇರಿದಂತಾಗುತ್ತದೆ.

ಜನಮನದ ಸದಭಿರುಚಿಯನ್ನು ಬೆಳೆಸಿಕೊಂಡು ಸಂಸ್ಕೃತಿ ಪ್ರಸಾರದ ಮಾಧ್ಯಮವಾಗಿ ತನ್ನದೇ ಆದ ರೀತಿಯಲ್ಲಿ ಸಾಗಿರುವ ಸುಗಮ ಸಂಗೀತ ತನ್ನ ಸಾಂಸ್ಕೃತಿಕ ಜವಾಬ್ದಾರಿಯನ್ನು ಮರೆಯಕೂಡದು. ಅಬ್ಬರದಿಂದ ಸಿನಿಮಾ ಸಂಗೀತದ ಜಾಡಿಗೆ ಜಾರದಂತೆ ನೋಡಿಕೊಳ್ಳುವುದು ಆವಶ್ಯಕ. ಕೇವಲ ಹಣದ ಬಲದಿಂದ ಕಲೆಯನ್ನು ನಿರ್ಲಕ್ಷಿಸಿ ಕ್ಯಾಸೆಟ್ ಪ್ರಪಂಚಕ್ಕೆ ದಾಳಿಯಾಗುತ್ತಿರುವುದನ್ನು ತಡೆಗಟ್ಟಬೇಕು. ಯೋಗ್ಯತೆಗೆ ತಕ್ಕ ಮನ್ನಣೆ ನೀಡಿ ಹೊಸ ಹೊಸ ಕಲಾವಿದರನ್ನು ಬೆಳಕಿಗೆ ತರುವ ಕಾರ್ಯ 'ಸುಗಮ ಸಂಗೀತ ಸಂಸ್ಥೆಗಳಿಂದ ನಡೆಯಬೇಕಾಗಿದೆ. ಕೇವಲ ನವುರಾದ ಭಾವವುಳ್ಳ ಭಾವಗೀತೆಗಳನ್ನು ಮಾತ್ರ ಆಯ್ಕೆ ಮಾಡದೆ ಸಾಮಾಜಿಕ ಕಾಳಜಿ ಹಾಗೂ ವೈಚಾರಿಕ ಜಾಗೃತಿಯ ಅಂಶಗಳುಳ್ಳ ಕವನಗಳನ್ನೂ ಸುಗಮ ಸಂಗೀತಕ್ಕೆ ಅಳವಡಿಸಿಕೊಳ್ಳುವತ್ತ ಗಾಯಕರೂ ಸಂಗೀತ ನಿರ್ದೇಶಕರೂ ಲಕ್ಷ್ಯವಹಿಸಬೇಕು. ಈ ದಿಸೆಯಲ್ಲಿ ಸುಗಮ ಸಂಗೀತ ಸಂಯೋಜನೆ ವಾಚನಕ್ಕೆ ಹತ್ತಿರವಾಗಿರಬೇಕೆಂಬ ಸಿ. ಅಶ್ವತ್ಥರ ತತ್ವ ಆದರ್ಶಪ್ರಾಯವಾದದ್ದು.

ಕನ್ನಡ ನಾಡಿನ ಸಂಸ್ಕೃತಿಯ ಸುಗಂಧವನ್ನು ಹರಡುವ ಗೀತ ಕಾವ್ಯಗಳು ಸುಗಮ ಸಂಗೀತದಿಂದ ಜನಸಾಮಾನ್ಯರಿಗೆ ಹತ್ತಿರವಾಗುತ್ತಿರುವುದು ನಿಜಕ್ಕೂ ಆಶಾದಾಯಕವಾಗಿದೆ. ಅನೇಕ ಸಭೆ, ಉತ್ಸವ, ಮದುವೆ ಸಮಾರಂಭಗಳಲ್ಲಿ ಇದಕ್ಕೆ ಅವಕಾಶಗಳು ಸಿಗುತ್ತಿವೆ. ಸುಗಮ ಸಂಗೀತ ರಸಿಕರ ಸಂಖ್ಯೆ ಹೆಚ್ಚುತ್ತಿದ್ದು ಮೂರು ನಾಲ್ಕು ಗಂಟೆಗಳವರೆಗೂ ಕುಳಿತು ತಮ್ಮ ಮೆಚ್ಚಿನ ಗಾಯಕರ ಹಾಗೂ ಕವಿಗಳ ಹಾಡುಗಳನ್ನು ಕೇಳಿ ಅವರು ಸುಖಿಸುತ್ತಿರುವುದನ್ನು ಕಾಣುತ್ತಿದ್ದೇವೆ. ಇದರಿಂದ ವಾಣಿಜ್ಯ ಸಂಸ್ಕೃತಿಯನ್ನು ತಡೆಗಟ್ಟುವ ಅಲೆಯೊಂದು ಕಾಣಿಸಿಕೊಳ್ಳುತ್ತಿದ್ದು ಹೃದಯ ದಾರಿದ್ರ್ಯಕ್ಕೆ ತಕ್ಕ ಔಷಧವನ್ನು ಸುಗಮ ಸಂಗೀತ ಒದಗಿಸುತ್ತಿದೆಯೆಂದರೆ ತಪ್ಪಾಗದು.

ಸುಗಮ ಸಂಗೀತದಲ್ಲಿ ಆಸ್ಥೆಯುಳ್ಳ ವಿದ್ಯಾರ್ಥಿಗಳಿಗೆ ಕಲಾವಿದರಿಗೆ ಮಾರ್ಗದರ್ಶಕವೆನಿಸಬಲ್ಲ ಗ್ರಂಥಗಳನ್ನು ಸಿ. ಅಶ್ವತ್ಥ್ ಹಾಗೂ ಎಚ್.ಆರ್. ಲೀಲಾವತಿಯವರು ಬರೆದಿದ್ದಾರೆ. 'ಸ್ವರಮಾಧುರಿ'ಯಂಥ ಬೆಲೆಯುಳ್ಳ ಕೊಡುಗೆಯನ್ನು ಸುಗಮ ಸಂಗೀತ ಪ್ರಪಂಚಕ್ಕೆ ನೀಡಿರುವ ಅಶ್ವತ್ಥರು ಈ ದಿಸೆಯಲ್ಲಿ ತಮ್ಮದೇ ಆದ ಸಿದ್ಧಾಂತಕ್ಕೆ ಶಾಸ್ತ್ರದ ಚೌಕಟ್ಟನ್ನು ನೀಡಿ ಅದನ್ನು ಸುಭದ್ರವಾದ ನೆಲೆಗೆ ತಂದು ನಿಲ್ಲಿಸಿದ ಕೀರ್ತಿಗೆ ಪಾತ್ರರಾಗಿದ್ದಾರೆ. ಅನೇಕ ಹಿರಿ-ಕಿರಿಯ ಗಣ್ಯ ಕಲಾವಿದರು ಇಂದು ಸುಗಮ ಸಂಗೀತದ ಗೌರವವನ್ನು ಹೆಚ್ಚಿಸುತ್ತ ಅದರ ಮುಂದುವರಿಕೆಯಲ್ಲಿ ಪಾಲ್ಗೊಳ್ಳುತ್ತಿರುವುದು ನಿಜಕ್ಕೂ ಅಭಿನಂದನೀಯ. ಸುಗಮ ಸಂಗೀತದ ಸಾಂಸ್ಕೃತಿಕ ಮಹತ್ವವನ್ನು ಕಾಪಾಡಿಕೊಳ್ಳುವಲ್ಲಿ ಗಾಯಕರು, ಸಂಗೀತ ನಿರ್ದೇಶಕರು ಮತ್ತು ಸ್ವತಃ ಕವಿಗಳು ಕೂಡಿಯೆ ಜವಾಬ್ದಾರಿಯಿಂದ ತಮ್ಮ ಕೆಲಸವನ್ನು ನಿರ್ವಹಿಸಬೇಕಾಗುತ್ತದೆಂಬುದನ್ನು ಮರೆಯುವಂತಿಲ್ಲ.

'ತಂಬೂರಿ'

೧೯೯೯

# ೧೦

## ಮೊದಲ ಕುಸುಮ : 'ಕಾವ್ಯಾಕ್ಷಿ'

ಧಾರವಾಡದ ರಾಜಾಲಖಮಗೌಡ ಸರದೇಸಾಯಿ ಹಾಯ್‌ಸ್ಕೂಲಿನಲ್ಲಿ ಕಲಿಯುತ್ತಿದ್ದಾಗಲೇ (೧೯೪೦-೪೫) ನಾನು ಪದ್ಯ ಬರೆಯುವ ಪ್ರಯತ್ನ ಮಾಡಿದ್ದೆ. ಅದರ ರಚನಾಕ್ರಮದ ಬಗ್ಗೆ ಏನನ್ನೂ ತಿಳಿದುಕೊಂಡಿರಲಿಲ್ಲವಾದರೂ ನಾನು ಓದಿದ ಹಾಗೂ ಕೇಳಿದ ಕವಿತೆಗಳ ಪ್ರಭಾವ ನನ್ನ ಮೇಲೆ ಸಾಕಷ್ಟಾಗಿತ್ತೆಂದು ತೋರುತ್ತದೆ. ಹಾಯಸ್ಕೂಲ್ ಮಿಸೆಲೆನಿಯಲ್ಲಿ ನನ್ನ ಪದ್ಯಗಳನ್ನು ಮೊದಲು ಪ್ರಕಟಿಸಿ ಪ್ರೋತ್ಸಾಹಿಸಿದವರು ಶಾಲೆಯ ಮುಖ್ಯಾಧ್ಯಾಪಕರಾಗಿದ್ದ ಶ್ರೀ.ವೀ.ರು. ಕೊಪ್ಪಳ ಅವರು. ಉಳಿದ ವರ್ಗಗಳಲ್ಲಿಯೂ ಅವರು ಅವನ್ನು ಓದಿ ತೋರಿಸುತ್ತಿದ್ದರೆಂದು ನನಗೆ ಆಮೇಲೆ ತಿಳಿಯಿತು. ಅವು ಈಗ ನನ್ನ ನೆನಪಿನಲ್ಲಿಯೂ ಕೂಡ ಉಳಿದಿಲ್ಲ. 'ಕೋಲ್ಮಿಂಚು' ಎನ್ನುವ ಒಂದು ಪದ್ಯದ ಎರಡು ಸಾಲುಗಳು ಮಾತ್ರ ನೆನಪಿನಲ್ಲಿವೆ.

ಕೋಲ್ಮಿಂಚೊಂದು ಮಿಂಚುತಲಿತ್ತು
ಬಾಲೆಯ ಚಪಲವ ಚಾಚುತಲಿತ್ತು

(ನನ್ನ ಅಂದಿನ ಸಹಪಾಠಿ ಸ್ನೇಹಿತ ಷಣ್ಮುಖಪ್ಪ ಇಚ್ಚಂಗಿ ಈಗ ಧಾರವಾಡದ ಪ್ರಸಿದ್ಧ ಅಡ್ವೋಕೇಟ್. ಅವರು ಈಗಲೂ ಅದನ್ನು ನೆನಪಿಟ್ಟುಕೊಂಡು ಹೇಳಿ ನನ್ನನ್ನು ಅಚ್ಚರಿಗೊಳಿಸುವುದುಂಟು) ಬಿ.ಎಂ.ಶ್ರೀ ಸಂಪಾದಿಸಿದ್ದ 'ಕನ್ನಡ ಬಾವುಟ' ಪುಸ್ತಕ ನನಗೆ ಬಹುಮಾನವಾಗಿ ಬಂದಿತ್ತು. ಹಳಗನ್ನಡ ಹಾಗೂ ನಡುಗನ್ನಡ ಕಾವ್ಯದ ಆಯ್ದಕಾವ್ಯ ಭಾಗಗಳಲ್ಲದೆ ಹೊಸಗನ್ನಡ ಕವಿತೆಗಳೂ ಆ ಸಂಕಲನದಲ್ಲಿದ್ದವು. ನವೋದಯದ ಹಿರಿಯ ಕವಿಗಳೆಲ್ಲರ ಕವಿತೆಗಳ ಮಾದರಿಗಳೂ ನನಗೆ ಅದರಲ್ಲಿ ಓದಲು ದೊರೆತು ನನ್ನ ಹುಮ್ಮಸ್ಸನ್ನು ಹೆಚ್ಚಿಸಿದವು. ನಾನು ಮೆಚ್ಚಿಕೊಂಡ ಕವಿತೆಗಳ ನುಡಿಗಳನ್ನು ನಾನು ಆಗಾಗ ಮೆಲುಕು ಹಾಕುತ್ತಿದ್ದೆ. ನಮಗೆ ಮ್ಯಾಟ್ರಿಕ್ ಕ್ಲಾಸಿಗೆ ಪಠ್ಯವಾಗಿದ್ದ ಗದ್ಯಪದ್ಯ ಸಂಗ್ರಹದಲ್ಲಿಯ ಬೇಂದ್ರೆ, ಕುವೆಂಪು, ಮಧುರ ಚೆನ್ನ, ಕಡೆಂಗೋಡ್ಲು ಶಂಕರಭಟ್ಟರ ಕವಿತೆಗಳಂತೂ ನನಗೆ ಬಾಯಿಪಾಠವಾಗಿಬಿಟ್ಟಿದ್ದವು.

ಮುಂದೆ ಕಾಲೇಜಿಗೆ ಹೋದ ಮೇಲೆ (೧೯೪೬) ನಾನು ಬರೆಯತೊಡಗಿದ ಕವಿತೆಗಳಿಗೆ ತಾನಾಗಿಯೇ ಒಂದು ರೂಪ ಬರತೊಡಗಿತು. ಕಾವ್ಯದ ಅಭ್ಯಾಸ ಒಂದು 'ಹುಚ್ಚು' ಎನಿಸುವಷ್ಟು ಬೆಳೆಯಿತು. ಆ ಸಂದರ್ಭದಲ್ಲಿ ನಾನು ಬರೆದ ಮೊದಲ ಕವಿತೆ 'ಕಾವ್ಯಾಕ್ಷಿ'. ಆ ಹೆಸರು ನನಗೆ ಹೇಗೆ ಹೊಳೆಯಿತೋ ಗೊತ್ತಿಲ್ಲ. ೧೯೪೭ರಲ್ಲಿ ಅದು ಮಾಸ್ತಿಯವರ 'ಜೀವನ' ಪತ್ರಿಕೆಯಲ್ಲಿ

ಪ್ರಕಟಗೊಂಡಾಗ ನನ್ನ ಆನಂದಕ್ಕೆ ಮೇರೆಯಿರಲಿಲ್ಲ. ನನ್ನ ಪ್ರಥಮ ಕವನ ಸಂಕಲನ ಅದೇ ಶೀರ್ಷಿಕೆಯಲ್ಲಿ, ನಾನು ಜ್ಯೂ.ಬಿ.ಎ.ದಲ್ಲಿದ್ದಾಗಲೇ ೧೯೪೯ರಲ್ಲಿ ಗೆಳೆಯರ ಒತ್ತಾಯದಿಂದ ಪ್ರಕಟವಾಯಿತು. ಕವಿವರ್ಯ ಬೇಂದ್ರೆಯವರು ಅದಕ್ಕೆ ಮುನ್ನುಡಿ ಬರೆದು ಹರಸಿದರು. ಡಾ. ಹೀರೇಮಲ್ಲೂರು ಈಶ್ವರನ್ ತಮ್ಮ ಕಲ್ಪನಾ ಗ್ರಂಥಮಾಲೆಯಲ್ಲಿ ಅದನ್ನು ಪ್ರಕಟಿಸುವ ಔದಾರ್ಯ ತೋರಿದರು.

ಈ ಮೊದಲ ಕುಸುಮ 'ಕಾವ್ಯಾಕ್ಷಿ' ಅರಳಿದ ಸಂದರ್ಭ ಸನ್ನಿವೇಶವನ್ನು ಈಗ ಸ್ವಲ್ಪ ವಿವರಿಸಬೇಕು. ಧಾರವಾಡ-ಹುಬ್ಬಳ್ಳಿ ಮಾರ್ಗದಲ್ಲಿ ಧಾರವಾಡದಿಂದ ಮೂರು ಮೈಲಿನ ಅಂತರದಲ್ಲಿ ನವಲೂರು ಗ್ರಾಮ. ನನ್ನ ಗೆಳೆಯ ಶಿವೇಶ್ವರ ದೊಡ್ಡಮನಿ ಆ ಊರಿನವರು. ಧಾರವಾಡದ ಕಚೇರಿಯೊಂದರಲ್ಲಿ ಅವರು ಟೈಪಿಸ್ಟ್ ಆಗಿ ಕೆಲಸ ಮಾಡುತ್ತಿದ್ದರು. ಅವರೂ ಕಾವ್ಯ ಪ್ರೇಮಿಗಳಾಗಿದ್ದರಲ್ಲದೆ ಜನಪದ ಗೀತೆಗಳ ಸಂಗ್ರಹ ಅವರ ಹವ್ಯಾಸವಾಗಿತ್ತು. ಬೆಳಗಿನಲ್ಲಿ ನಾವಿಬ್ಬರೂ ನವಲೂರು ದಾರಿಯಲ್ಲಿ ವಾಕಿಂಗ್ ಹೋಗುತ್ತಿದ್ದೆವು. ಅವರ ಊರಿನ ಸಮೀಪ ಹೆದ್ದಾರಿಯ ಇಕ್ಕೆಲಗಳಲ್ಲಿ ಕಕ್ಕೆಯ ಮರಗಳಿರಡು ಹಳದಿಯ ಹೂಗೊಂಚಲುಗಳಿಂದ ಕಿಕ್ಕಿರಿದುದನ್ನು ನಾವಿಬ್ಬರೂ ಮೊದಲ ಸಲ ಕಂಡಾಗ ರೋಮಾಂಚನಗೊಂಡೆವು. ಆ ಹೂವುಗಳ ಸುಗಂಧ ನವುರಾಗಿ ಗಾಳಿಯಲ್ಲಿ ತೇಲಿ ಬರುತ್ತಿತ್ತು. ಭೃಂಗಗಳು (ಜೈನ್ನೊಣಗಳಲ್ಲ) ಆ ಹೂಗೊಂಚಲ ಸುತ್ತ ಸೊಕ್ಕಿನಿಂದ ಸುಳಿದಾಡುತ್ತಿದ್ದವು. ದಿನವೂ ಅದೇ ಸ್ಥಳ ನಮ್ಮ ವಿಹಾರದ ಪಾಜೆಗಟ್ಟೆಯಾಯಿತು. ಕೆಲದಿನಗಳ ನಂತರ ಒಂದು ಸಂಜೆ (೧೯೪೪ಲ) ನನ್ನ ಕೋಣೆಯಲ್ಲಿ ಏನೋ ಓದುತ್ತ ಕುಳಿತಾಗ 'ಆ ಗಿಡಾ ಈ ಗಿಡಾ ಒದೊಂದೂ ಜೇಂಗೊಡಾ' ಎಂಬ ಸಾಲು ನನ್ನ ಮನಸ್ಸಿನಲ್ಲಿ ತಾನಾಗಿ ಹೊರಹೊಮ್ಮಿತು. ಅದೇ ನಾದದ ಗುಂಗಿನಲ್ಲಿ ನಾನು ಒಂದು ಕವಿತೆಯನ್ನು ಬರೆದು ಮುಗಿಸಿದೆ. ಅದರ ಮೊದಲ ನುಡಿ :

ಆ ಗಿಡಾ, ಈ ಗಿಡಾ
ಒಂದೊಂದೂ ಜೇಂಗೊಡಾ;
ಬ್ವಾಂದೇವಿಗೆ ನೆಲದಾಯಿಯ
ಹೂಗೊಂಡೆಯ ಹೊಂಗೊಡಾ

ಏಳೆಂಟು ನುಡಿಗಳಲ್ಲಿ, ಅದೇ ಛಂದದಲ್ಲಿ ಮುಂದುವರಿದು ಕೊನೆಯಲ್ಲಿ

ತನಗೆ ತಾನೆ ತಿಳಿಯದಂತೆ
ತುಳುಕಿತಹಹ ಭಾವನಾ
ಕಮ್ಮಲರಿಗೆ
ಕವಿಗಾಳಿಗೆ
ಕಾವ್ಯಾಕ್ಷಿಗೆ ವಂದನಾ

ಹೀಗೆ ಮುಕ್ತಾಯಗೊಂಡಿತ್ತು. ನನ್ನಷ್ಟಕ್ಕೆ ನಾನು ಅದನ್ನು ಗುಣುಗುಣಿಸುತ್ತ ಆನಂದಪಟ್ಟದ್ದನ್ನು ಮರೆಯುವಂತಿಲ್ಲ. ಮರುದಿನ ಶಿವೇಶ್ವರ ಅದನ್ನು ನೋಡಿ ಹಿಗ್ಗಿ ಹೋದರು. ಇಷ್ಟೇ ಅಲ್ಲ, ನಾವಿಬ್ಬರೂ ಮತ್ತೆ ಆ ಸ್ಥಳಕ್ಕೆ ಹೋದಾಗ ಆ ಮರದ ಕೆಳಗೆ ನನ್ನನ್ನು ನಿಲ್ಲಿಸಿ ಒಂದು ಫೋಟೊ ಕೂಡ ತೆಗೆದರು. ಆ ಕವಿತೆ 'ಜೀವನ'ದಲ್ಲಿ ಪ್ರಕಟವಾದದ್ದನ್ನು ಹಿಂದೆಯೇ ಹೇಳಿದ್ದೇನೆ. ಕಾಲೇಜಿನ ಗೆಳೆಯರಲ್ಲಿ ಕೆಲವರು ಭಾವಗೀತಗಳನ್ನು ಚೆನ್ನಾಗಿ ಹಾಡಬಲ್ಲವರಾಗಿದ್ದರು. ಅವರ ಕೈಯಲ್ಲಿ, ಬಾಯಲ್ಲಿ ಸಿಕ್ಕು ಅದು ಆಗಲೆ ಜನಪ್ರಿಯವಾಗಿಬಿಟ್ಟಿತು. ಮುಂದೆ ಧಾರವಾಡ ಆಕಾಶವಾಣಿಯಿಂದಲೂ ಅದು ಹಲವು ಸಲ ಪ್ರಸಾರಗೊಂಡಿತು.

ಇತ್ತೀಚೆಗೆ ಪರಿಸರ ಕುರಿತ ನುಡಿಚಿತ್ರವೊಂದರಲ್ಲಿ ಈ ಹಾಡನ್ನು ಹಿನ್ನೆಲೆಯಾಗಿ ಬಳಸಿಕೊಂಡಿದ್ದಾರೆಂದು ಕೇಳಿದ್ದೇನೆ. ಇತ್ತೀಚೆಗೆ ವಿಮರ್ಶಕ ಮಿತ್ರರೊಬ್ಬರು ನನ್ನ ಕಾವ್ಯದ ಬಗ್ಗೆ ಲೇಖನವೊಂದನ್ನು ಬರೆಯುವಾಗ ನಾನು ಸೃಷ್ಟಿಸಿದ ಕೆಲವು ಹೊಸ ಪದಗಳನ್ನು ಉದಾಹರಿಸುತ್ತ ಈ ಕವಿತೆಯಲ್ಲಿ 'ಕಾವ್ಯಾಕ್ಷಿ' ಹಾಗೂ 'ಕವಿಗಾಳಿ' ಎಂಬ ಪದಗಳನ್ನು ಅದರಲ್ಲಿ ಸೇರಿಸಿದ್ದಾರೆ. ಈ ಕವಿತೆ ಬರೆದು ಇಂದಿಗೆ ಸರಿಯಾಗಿ ೫೧ ವರ್ಷವಾಯಿತು.

ಈ ಕವಿತೆಯನ್ನು ಬಹುವಾಗಿ ಮೆಚ್ಚಿಕೊಂಡಿದ್ದ ಗೆಳೆಯ ಶಿವೇಶ್ವರ ದೊಡ್ಡಮನಿ ತಮ್ಮ ಮಗಳಿಗೆ 'ಕಾವ್ಯಾಕ್ಷಿ' ಎಂದು ಹೆಸರಿಟ್ಟಿದ್ದರು. ಮುಂದೆ ೧೯೫೦ರಲ್ಲಿ ಅವರು ಅಕಾಲ ಮರಣಕ್ಕೀಡಾದಾಗ ನನ್ನ ಮನಸ್ಸಿಗೆ ಆದ ಆಘಾತ ವರ್ಣಿಸಲಸದಳ. (೧೯೫೩ರಲ್ಲಿ ಪ್ರಕಟವಾದ ನನ್ನ 'ಆಕಾಶಬುಟ್ಟಿ' ಕವನ ಸಂಗ್ರಹದಲ್ಲಿಯ 'ಚರಮಗೀತೆ' ಅವರನ್ನೇ ಕುರಿತು ಬರೆದದ್ದು) ಅವರ ಸ್ವಂತ ಕವನಗಳು, ಸಂಗ್ರಹಿಸಿದ ಜನಪದ ಗೀತೆಗಳು ಹಾಗೂ ಲೇಖನಗಳನ್ನೊಳಗೊಂಡ 'ವಾಚಿಕೆ'ಯೊಂದನ್ನು ಕನ್ನಡ ಪುಸ್ತಕ ಪ್ರಾಧಿಕಾರ ಇದೀಗ ಪ್ರಕಟಿಸುವ ಸನ್ನಾಹದಲ್ಲಿರುವುದು ಇದ್ದುದರಲ್ಲಿ ನನಗೆ ಸಮಾಧಾನವನ್ನುಂಟು ಮಾಡಿದೆ.

'ಮೊದಲ ಕಸುಮ' ಶೀರ್ಷಿಕೆಯ ಈ ಲೇಖನವನ್ನು 'ಮಂಗಳ'ದ ಕೃಪೆಯಿಂದ ಗೆಳೆಯ ಶಿವೇಶ್ವರರಿಗೆ ಅರ್ಪಿಸುತ್ತಿದ್ದೇನೆ.

'ಮಂಗಳ'ವಾರಪತ್ರಿಕೆ

೧೩-೦೧-೧೯೯೯

೧೧

## ಮುರುಘಾಮಠದ ಪರಿಸರ - ಪ್ರಭಾವ

ಧಾರವಾಡದ ಮುರುಘಾಮಠವನ್ನು ನೆನೆಸಿದೊಡನೆ ನನ್ನ ಮನಸ್ಸಿನಲ್ಲಿ ನಾಲ್ಕು ದಶಕಗಳ ಹಿಂದಿನ ದೃಶ್ಯಗಳು ಮೂಡತೊಡಗುತ್ತವೆ. ಇಷ್ಟೊಂದು ಕಾಲಾವಧಿಯ ನಂತರವೂ ಅವೆಲ್ಲ ನಿನ್ನ-ಮೊನ್ನೆ ನಡೆದಂತೆ ನೆನಪಿನ ಉದ್ಯಾನದಲ್ಲಿ ಅರಳಿ ನಿಲ್ಲುತ್ತವೆ. 'ಎವೆ ತೆರೆದಿಕ್ಕುವ ಹೊತ್ತಿನ ಒಳಗೆ ಹಕ್ಕಿ ಹಾರುತಿದೆ ನೋಡಿದಿರಾ?' ಎಂದು ಕಾಲದ ವೇಗವನ್ನು ಕವಿ ನಮ್ಮ ಗಮನಕ್ಕೆ ತಂದುಕೊಟ್ಟರೂ ಜೀವನದಲ್ಲಿ ಕೆಲವು ಘಟನೆಗಳು ವ್ಯಕ್ತಿಯ ಬಾಳನ್ನು ರೂಪಿಸುವಲ್ಲಿಯ ಮಹತ್ವದ ಅವಿಭಾಜ್ಯ ಅಂಶಗಳಾಗಿ ಕಾಲವನ್ನು ಮೀರಿ ನಿಲ್ಲಬಲ್ಲ ಸಾಮರ್ಥ್ಯವನ್ನು ಪಡೆದುಕೊಳ್ಳುತ್ತವೆ. ಮುರುಘಾಮಠದ ಶ್ರೀ ಶಿವಯೋಗೀಶ್ವರ ಪ್ರಸಾದ ನಿಲಯದಲ್ಲಿ ನಾನು ಕಳೆದ (ಗಳಿಸಿಕೊಂಡ) ಎಳೆವರಯದ ನಾಲ್ಕೈದು ವರುಷಗಳು ನನ್ನ ಜೀವನ ಪಥದ ಮಹತ್ವದ ಮೈಲಿಗಲ್ಲುಗಳಾಗಿವೆ.

ಧಾರವಾಡದಿಂದ ಒಂಬತ್ತು ಮೈಲಿನ ಮೇಲಿರುವ ಗರಗ ಗ್ರಾಮದ ಪ್ರಾಥಮಿಕ ಶಾಲೆಯಿಂದ ವಿದ್ಯಾರ್ಥಿಗಳು ಮುಲ್ಕೀ ಪರೀಕ್ಷೆಗಾಗಿ ೧೯೪೦ರಲ್ಲಿ ಧಾರವಾಡಕ್ಕೆ ನಡೆದುಕೊಂಡು ಬಂದಾಗ ಮುರುಘಾಮಠವೇ ನಮಗೆ ಆಶ್ರಯ ನೀಡಿದ್ದಿತು. ಧಾರವಾಡದ ಉತ್ತರದಂಚಿಗಿದ್ದ ಆ ಮಠದ ಪರಿಸರದಲ್ಲಿ ನಾನು ಕಾಲಿಟ್ಟದ್ದು ಅದೇ ಮೊದಲು. ಆ ಬಿಸಿಲುಗಾಲದಲ್ಲಿ ಮಠದ ಆವರಣ ತಂಪಾಗಿದ್ದಿತು. ಅಲ್ಲಿ ನಮಗೆ ಯಾರ ಪರಿಚಯವಿಲ್ಲದಿದ್ದರೂ ನಮ್ಮ ಶಿಕ್ಷಕರ ಮೂಲಕ ಅಲ್ಲಿದ್ದವರೆಲ್ಲ ಪರಿಚಿತರಂತೆಯೇ ನಮ್ಮ ಬಗ್ಗೆ ಕಾಳಜಿವಹಿಸಿದರು. ಒಂಬತ್ತು ಒಂಬತ್ತೂವರೆ ಗಂಟೆಯ ಹೊತ್ತಿಗೆ ನಮಗೆ ಊಟದ ವ್ಯವಸ್ಥೆಯಾಗಿರುತ್ತಿತ್ತು. ಬಿಸಿಲು ಚುರುಕು ಹತ್ತುವ ಮೊದಲೇ ನಾವು ನಮ್ಮ ಪರೀಕ್ಷಾಸ್ಥಳವಾದ ಟ್ರೇನಿಂಗ್ ಕಾಲೇಜಿನಲ್ಲಿರಲು ಇದರಿಂದ ತುಂಬ ಅನುಕೂಲವಾಗಿತ್ತು. ಸಂಜೆ ಮತ್ತೆ ಮರಳಿದಾಗ ಮಠದ ಆವರಣ ಅಲ್ಲಿಯ ಹೂ-ಗಿಡಗಳಿಂದಾಗಿ ಸುಗಂಧಮಯವಾಗಿರುತ್ತಿತ್ತು. ನಾವು ಪರೀಕ್ಷೆ ಮುಗಿಸಿ ಊರಿಗೆ ಹೊರಟಾಗ ನಮ್ಮ ಮುಖ್ಯಾಧ್ಯಾಪಕರು ನಮಗೆ ಅಲ್ಲಿಯ ಸ್ವಾಮಿಗಳ ದರ್ಶನ ಮಾಡಿಸಿದರು. ಚಿಂಗಾವಿಯ ಉಡುಪಿನಲ್ಲಿ ತೇಜಸ್ವಿಯಾಗಿದ್ದ ಅವರು 'ಬಹಳ ಸಂತೋಷ' ಎನ್ನುತ್ತ, ಮಂದಹಾಸದಿಂದ ನಮ್ಮನ್ನು ಆಶೀರ್ವದಿಸಿದರು. ಅವರ ಬಳಿಯಲ್ಲಿಯೇ ನಿಂತಿದ್ದ ಸೌಮ್ಯಮುಖಮುದ್ರೆಯ ಚಿಕ್ಕವಯಸ್ಸಿನ ಮರಿಸ್ವಾಮಿಗಳೊಬ್ಬರು ಅವರು ಹೇಳಿದ ಕೆಲಸವನ್ನು ತಕ್ಷಣವೇ ಮಾಡುತ್ತ, ಗೆಲುವಾಗಿರುವುದನ್ನು ಕಂಡೆ.

ಆ ವರ್ಷ ಮುಲ್ಕಿ ಪರೀಕ್ಷೆಯಲ್ಲಿ ಧಾರವಾಡ ಕೇಂದ್ರಕ್ಕೆ ನಾನು ಮೊದಲ ನಂಬರು ಪಡೆದು ಪಾಸಾದೆ. ಹಳ್ಳಿಯ ಪ್ರಾಥಮಿಕ ಶಾಲೆಯ ಶಿಕ್ಷಕರಾಗಿ ನಿವೃತ್ತಿ ಪಡೆದಿದ್ದ ನನ್ನ ತಂದೆಯವರಿಗೆ ನನ್ನನ್ನು ಮುಂದೆ ಕಲಿಸುವಷ್ಟು ಧನಬಲವಿರಲಿಲ್ಲ. ಮುರುಘಾಮಠದ ಉಚಿತ ಪ್ರಸಾದನಿಲಯದಲ್ಲಿದ್ದು ಹಾಯಸ್ಕೂಲ ಶಿಕ್ಷಣ ಮುಂದುರಿಸಬಹುದೆಂಬ ಸಲಹೆಯೂ ಕೆಲ ಹಿತೈಷಿಗಳಿಂದ ಬಂದಿತು. ಅಲ್ಲಿ ನನಗೆ ನಿರಾಯಾಸವಾಗಿ ಪ್ರವೇಶವೂ ದೊರೆಯಿತು. ಸರಳ, ಪರಿಶುದ್ಧ ಜೀವನ್ನು ನಡೆಸುತ್ತಿದ್ದ ನನ್ನ ತಂದೆಯವರ ಶಿಕ್ಷಣದಿಂದ, ನನಗೆ ಮುರುಘಾಮಠದ ವಾತಾವರಣಕ್ಕೆ ಹೊಂದಿಕೊಳ್ಳುವದು ಕಷ್ಟದಾಯಕವೆನಿಸಲಿಲ್ಲ.

ಮಠದ ಆವರಣವನ್ನು ಪ್ರವೇಶಿಸುತ್ತಿದ್ದಂತೆಯೇ ಗುರುಗದ್ದುಗೆಯ ಮುಂದಿನ ಚೌಕು ಹಾಗೂ ಬನ್ನಿ ಬಿಲ್ವವೃಕ್ಷಗಳು ಕಣ್ಣಿಗೆ ಬೀಳುತ್ತವೆ. ಸಂಜೆಯ ಸಮಯವಾಗಿದ್ದರೆ ಸಾಮಾನ್ಯವಾಗಿ ಸ್ವಾಮಿಗಳು ಅಲ್ಲಿ ಭಕ್ತರೊಂದಿಗೆ ಮಾತನಾಡುತ್ತ ಕುಳಿತಿರುತ್ತಿದ್ದರು. ಬಲಬದಿಯಲ್ಲಿ ಪುರಾತನರ ಹೆಸರು ಹೊತ್ತ, ಚಚ್ಚೌಕಾಕಾರದಲ್ಲಿ ನಿರ್ಮಾಣಗೊಂಡ, ಪ್ರಸಾದನಿಲಯದ ವಿದ್ಯಾರ್ಥಿಗಳ ವಾಸದ ಅರವತ್ತು ಮೂರು ಕೋಣೆಗಳು, ಪ್ರಾಂಗಣದ ನಟ್ಟನಡುವೆ ಅರುಣೋದಯವನ್ನು ನಿರೀಕ್ಷಿಸುತ್ತಿರುವಂತಿರುವ ಅಥಣಿ ಶಿವಯೋಗಿಗಳ ಕರುಣೋದಯದ ಅಮೃತ ಶಿಲಾ ಪ್ರತಿಮೆ, ಸುತ್ತಲೂ ಉಪವನ :

> ತೆಂಗುಗರಿಯ ಚಾಮರವು, ಸುತ್ತು ಸಂಪಿಗೆಯ ಕಂಪುಗಾಳಿ
> ಚೆಂಗುಲಾಬಿ, ಮಲ್ಲಿಗೆಯು, ಬಕುಳ, ಸೇವಂತಿ ರಂಗು ತಾಳಿ
> ನಡುವೆ ಬೆಳ್ಳ ಬೆಳಕಾಗಿ ಮಾಗಿ ಶಿವಯೋಗಿ ಕುಲುಕುಲೆಂದು
> ನಗುತಲಿಹನು ಆ ಸೂರ್ಯ-ಚಂದ್ರ ಸಾಷ್ಟಾಂಗದಲ್ಲಿ ಮಿಂದು.

ನಸುಕಿನ ಐದು ಗಂಟೆಗೆ ಶಿವಯೋಗೀಶ್ವರ ಮಂಟಪದಲ್ಲಿ ವಿದ್ಯಾರ್ಥಿಗಳ ಪ್ರಾರ್ಥನೆಯಿಂದ ನಮ್ಮ ದಿನಚರಿ ಪ್ರಾರಂಭ. ಮುಂದೆ ಎರಡು-ಮೂರು ತಾಸು ಅಧ್ಯಯನ. ಬಸವತೀರ್ಥ (ಬಾವಿ)ದಿಂದ ನಮ್ಮ ಬಕೆಟ್ಟುಗಳಿಂದಲೇ ನೀರು ಸೇದಿಕೊಂಡು ಸ್ನಾನ. ೯-೩೦ ಗಂಟೆಗೆ ಊಟದ ಗಂಟೆ. ನಮ್ಮ ನಮ್ಮ ತಾಟು ತಂಬಿಗೆಗಳೊಂದಿಗೆ ಭೋಜನಾಲಯದಲ್ಲಿ ಪ್ರವೇಶ, ಪ್ರಾರ್ಥನೆಯ ಹಾಡುಗಳು, ವಚನಗಾಯನ, ಅರವತ್ತು ಮೂರು ಮಂದಿ ಪುರಾತನರಲ್ಲಿ ಪ್ರತಿದಿನವೂ ಒಬ್ಬೊಬ್ಬರ ಚರಿತ್ರೆಯ ವಾಚನ. ಅವರ ಹೆಸರಿನಲ್ಲಿ ಅಂದಿನ ಪ್ರಸಾದ. ಶಾಲೆಕಾಲೇಜುಗಳಿಗೆ ಹೋಗಿ ಬಂದ ಮೇಲೆ ಸಂಜೆ ಏಳು ಗಂಟೆಗೆ ಶಿವಾನುಭವ ಕಾರ್ಯಕ್ರಮ, ವಚನಗಳನ್ನು ಕುರಿತು ಪ್ರವಚನ ಇತ್ಯಾದಿ. ಬೆಳಗಿನಂತೆಯೇ ಸಾಯಂಕಾಲದ ಊಟದ ಕ್ರಮ. ವಿದ್ಯಾರ್ಥಿಗಳೆಲ್ಲರಿಗೂ ಸಾಲುವಷ್ಟು ಕುಡಿವ ನೀರನ್ನು ಬಾವಿಯಿಂದ ಸೇದುವುದು, ಎರಡೂ ಹೊತ್ತು ಊಟಕ್ಕೆ ನೀಡುವುದು ಇವನ್ನು ವಿದ್ಯಾರ್ಥಿಗಳೇ ಪಾಳಿಯ ಪ್ರಕಾರ ನೆರವೇರಿಸುವುದು. ಬೆಳಗಿನ ಪ್ರಾರ್ಥನೆ, ಸಾಯಂಕಾಲದ ಶಿವಾನುಭವ ಕಾರ್ಯಕ್ರಮಗಳಿಗೆ ಗೈರುಹಾಜರ ಇದ್ದವರಿಗೆ ಮೇಲಿನ ಕೆಲಸಗಳ ಹೆಚ್ಚಿನ ಪಾಳಿ ಬೀಳುತ್ತಿತ್ತು. ಪ್ರತಿ ರವಿವಾರ ಪಾಳಿಯ ಪ್ರಕಾರ

ವಿದ್ಯಾರ್ಥಿಗಳಿಂದಲೇ ಎರಡೂ ಹೊತ್ತಿನ ಅನುಭವದಡಿಗೆ. ಇದೊಂದು ರೀತಿ ಸ್ವಾವಲಂಬನದ ಪಾಠ. ಶಿಸ್ತುಪಾಲನೆ, ಸಂಯಮದ ವರ್ತನೆ ವಿದ್ಯಾರ್ಥಿಗಳಲ್ಲಿ ನೆಲೆಗೊಳ್ಳುವ ಅವಕಾಶ. ಈ ಬಗೆಯ ನಿಯಮಿತತೆ, ಸಮುದಾಯ ಕಾರ್ಯ ವಿದ್ಯಾರ್ಥಿಗಳ ಜೀವನವನ್ನು ಒಂದು ನೆಲೆಯಲ್ಲಿ ರೂಪಿಸುತ್ತಿದ್ದರೆ, ಅಲ್ಲಿ ಆಗಾಗ ನಡೆಯುತ್ತಿದ್ದ ಧಾರ್ಮಿಕ, ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳು ಇನ್ನೊಂದು ಪಾತಳಿಯಲ್ಲಿ ವಿದ್ಯಾರ್ಥಿಗಳ ವ್ಯಕ್ತಿತ್ವ ವಿಕಾಸಕ್ಕೆ ಪೋಷಕವಾಗುತ್ತಿದ್ದವು. ಯಾರಾದರೂ ಗಣ್ಯ ವಿದ್ವಾಂಸರು, ಸಾಹಿತಿಗಳು, ಸಂಗೀತಗಾರರು ಆಗಾಗ ಸ್ವಾಮಿಗಳ ದರ್ಶನಕ್ಕೆ ಬರುತ್ತಲೇ ಇದ್ದರು. ಅಂಥವರು ಬಂದಾಗೆಲ್ಲಾ ಸ್ವಾಮಿಗಳಿಗೆ ಎಲ್ಲಿಲ್ಲದ ಹಿಗ್ಗು. ಸಾಯಂಕಾಲ 'ಶಿವಾನುಭವ'ದ ವೇಳೆಗೆ ಅವರ ಭಾಷಣ, ಪ್ರವಚನ, ಸಂಗೀತ ಮೊದಲಾದವು ವಿದ್ಯಾರ್ಥಿಗಳ ಸಮ್ಮುಖದಲ್ಲಿ ನಡೆಯುತ್ತಿದ್ದವು. ಶ್ರಾವಣಮಾಸ ಹಾಗೂ ಶಿವಯೋಗೀಶ್ವರ ರಥೋತ್ಸವ ಸಂದರ್ಭದಲ್ಲಂತೂ ತಿಂಗಳುಗಟ್ಟಲೆ ಇಂಥ ಕಾರ್ಯಕ್ರಮಗಳಿಗೆ ಪೂರ ಬರುತ್ತಿತ್ತು. ಪ್ರಸಾದ, ಶಿವಾನುಭವ, ದಾಸೋಹ, ಕಾಯಕ ಮೊದಲಾದ ಪದಗಳಿಗೆ ಸ್ವಾಮಿಗಳ ಹಾಗೂ ಅವರಿಗೆ ತಕ್ಕ ಶಿಷ್ಯರಾಗಿದ್ದ ಮಹಾಂತಪ್ಪಗಳ ಮೂಲಕ ಮಠದಲ್ಲಿ ಮೂಡಿದ ವಾತಾವರಣವೇ ಅರ್ಥಬೋಧೆ ಮಾಡುವಂತಿತ್ತು. ವಿದ್ಯಾರ್ಥಿಗಳಿಗೆ ಇದರಿಂದ ಒದಗುತ್ತಿದ್ದ ಸಂಸ್ಕಾರ ಅದ್ವಿತೀಯವಾದದ್ದು. ವಿದ್ಯಾರ್ಥಿಗಳ ಅಭ್ಯಾಸಕ್ಕೆ ಇದರಿಂದ ತೊಂದರೆಯಾಗಬಹುದೆಂಬ ಭಾವನೆ ಕೆಲವರಲ್ಲಿ ಉಂಟಾಗಬಹುದಿತ್ತಾದರೂ ಕಾಲಕಳೆದಂತೆ ಅದರ ಮಹತ್ವ ಅವರವರ ಅಂತರಂಗಕ್ಕೇ ಗೋಚರಿಸುತ್ತಿತ್ತೆಂಬುದರಲ್ಲಿ ಸಂದೇಹವಿಲ್ಲ.

೧೯೪೨ರಲ್ಲಿ ನಡೆದ ಪ್ರಸಾದನಿಲಯದ ಬೆಳ್ಳಿಹಬ್ಬದ ಕಾರ್ಯಕ್ರಮಗಳು ನನ್ನ ಮೇಲೆ ತುಂಬ ಪ್ರಭಾವಬೀರಿದವು. ಅದರ ಅಂಗವಾಗಿ ನೆರವೇರಿದ ಹರಿಹರ ಕವಿಯ ಬಗೆಗಿನ ವಿಶೇಷ ಸಾಹಿತ್ಯೋತ್ಸವ, ಅವನ ಕಾವ್ಯಗಳ ವಾಚನ ನನ್ನ ಮನ್ಸಸಿನ ಮೇಲೆ ಅಚ್ಚಳಿಯದ ಪರಿಣಾಮ ಬೀರಿದವು. ನಾನಾಗ ಹಾಯಸ್ಕೂಲಿನ ನಾಲ್ಕನೆಯ ವರ್ಗದ ವಿದ್ಯಾರ್ಥಿ. ನನ್ನಲ್ಲಿ ಕಾವ್ಯ ಮತ್ತು ಸಾಹಿತ್ಯದ ಬಗ್ಗೆ ಆಸ್ಥೆ ಕುದುರಿದ್ದು ಆಗಲೇ. ಅನೇಕ ಗಣ್ಯವಿದ್ವಾಂಸರನ್ನು, ಸಾಹಿತಿಗಳನ್ನು, ಒಂದೇ ವೇದಿಕೆಯ ಮೇಲೆ ಕಾಣುವ ಭಾಗ್ಯ ನಮ್ಮದಾಗಿತ್ತು. ಪ್ರೊ. ಬಸವನಾಳರ ಪ್ರೇರಣೆಯಿಂದ ಸಂಗೀತರತ್ನ ಮಲ್ಲಿಕಾರ್ಜುನ ಮನಸೂರ ಅವರು, ಹೊಸ ಹೊಸ ವಚನಗಳನ್ನು ಭಾವಪೂರ್ಣವಾಗಿ ಅರ್ಥಬೋಧೆಯಾಗುವಂತೆ ಸುಶ್ರಾವ್ಯವಾಗಿ ಹಾಡಲು ಪ್ರಾರಂಭಿಸಿದ ಕಾಲ ಅದು. ಹರಿಹರ ಕವಿಯ ಮಾದಾರ ಚೆನ್ನಯ್ಯಗಳ ರಗಳೆಯ ಕೆಲವು ಸಾಲುಗಳನ್ನು ಮೊದಲಿಗೆ ನಾನು ಅವರ ಕಂಠದಿಂದ ಕೇಳಿದಾಗ ವಿಲಕ್ಷಣವಾದ ಒಂದು ಸವಿ ಅನುಭವ ನನ್ನಲ್ಲುಂಟಾಯಿತು.

"ಎಲೆ ದೇವ, ದೇವನೊಲಿದನ ಕುಲವೆ ಸತ್ಕುಲಂ
ಘನಮಹಿಮನೊಲಿದ ಜಾತಿಯೆ ಜಾತಿ ನಿರ್ಮಲಂ"

ನಾಲ್ವತ್ತು ವರ್ಷಗಳ ನಂತರವೂ ಅದನ್ನು ನೆನೆದುಕೊಂಡಾಗ ಇದನ್ನು ಹಾಡುತ್ತಿದ್ದಾಗಿನ ಅವರ ಹಾವಭಾವ, ಅದರಿಂದ ಹೊಮ್ಮಿದ ಆನಂದದಲ್ಲಿ ಮುಳುಗಿ ಲೋಲಾಡುತ್ತಿದ್ದ ಅಂದಿನ ಸಭೆ ಇಂದಿಗೂ ನನ್ನ ಕಣ್ಣ ಮುಂದೆ ಕಟ್ಟಿದಂತೆ, ಕಿವಿಯನ್ನು ತಟ್ಟಿದಂತೆ, ಅಂತಃಕರಣವನ್ನು ಮುಟ್ಟಿದಂತೆ ಭಾಸವಾಗುತ್ತದೆ.

ಅಂದಿನಿಂದ ವಚನ ಸಾಹಿತ್ಯ ನನ್ನ ಮನಸ್ಸನ್ನು ಆವರಿಸಿಬಿಟ್ಟಿತು. ಹರಿಹರ ಕವಿ ನನ್ನ ಅಚ್ಚುಮೆಚ್ಚಿನ ಕವಿಯಾದ. ಅದೇ ಸಂದರ್ಭದಲ್ಲಿ ನಾನೊಂದು ಕವಿತೆ ಬರೆದು ಮಠದಲ್ಲಿ ಶ್ರಾವಣಮಾಸದ ಕಾರ್ಯಕ್ರಮವೊಂದರಲ್ಲಿ ಓದಿದೆ. ಮೃತ್ಯುಂಜಯ ಸ್ವಾಮಿಗಳು ಸಂತೋಷದಿಂದ ಹಿಗ್ಗಿದರು. ಬಿಲ್ವಪತ್ರಿ ಹಾಗೂ ಗುಲಾಬಿ ಹೂವನ್ನು ನನ್ನ ಬೊಗಸೆಯಲ್ಲಿತ್ತು ಆಶೀರ್ವದಿಸಿದರು. ಸಭೆಯಲ್ಲಿ ಮಾತನಾಡುವಂತೆ ಧೈರ್ಯತುಂಬಿ ಪ್ರೋತ್ಸಾಹಿಸಿದರು. ತಮಗೆ ಆಗುತ್ತಿದ್ದ 'ಶಿವಯೋಗಿಗಳ ಪ್ರೇರಣೆ'ಯನ್ನು ವಿದ್ಯಾರ್ಥಿಗಳಲ್ಲಿಯೂ ಹರಿಸಿ ಹರಸಿದರು.

ವಾಣಿ ವೀಣಾನಾದ ಪಾಣಿಯಿಂದೊಗೆವಂತೆ
ಜಾಣ ಶ್ರೀಗುರುವೆ ನೀಂ ನುಡಿಸಿದಂತೆ ನಾ
ಮಾಣದಲೆ ನುಡಿವೆ ಕೃಪೆಯಾಗು

ನಮ್ಮ ನಿತ್ಯ ಪಾಠಕ್ಕೊದಗಿಸಿದ್ದ ಮೈಲಾರ ಬಸವಲಿಂಗ ಶರಣರ 'ಗುರುಕರುಣ ತ್ರಿವಿಧಿ'ಯಲ್ಲಿಯ ಈ ಪದ್ಯವನ್ನು ಇಂಥ ಸಂದರ್ಭದಲ್ಲಿ ನಾನು ಮನಸ್ಸಿನಲ್ಲಿಯೇ ಅಂದುಕೊಳ್ಳುತ್ತಿದ್ದೆ.

ಮಹಾಂತಪ್ಪಗಳು ಯಾವಾಗಲೂ ತಮ್ಮ ಗುರುಗಳ ಬಳಿಯಲ್ಲಿ, ಅವರ ಬೆನ್ನ ಹಿಂದೆಯೇ ಕಾದಿರುತ್ತಿದ್ದರು. ನಿಕಟ ಸಾಮೀಪ್ಯವನ್ನು ಸೂಚಿಸಲು ಅವರ ನೆರಳಾಗಿದ್ದರು ಎಂದು ಹೇಳುವುದುಂಟು. ಆದರೆ ಮಹಾಂತಪ್ಪಗಳು ಬರಿ ನೆರಳಾಗಿರಲಿಲ್ಲ. ಗುರುಗಳ ಯೋಜನೆಗಳನ್ನೆಲ್ಲ ಸದ್ದಿಲ್ಲದೆ ಕಾರ್ಯರೂಪಕ್ಕೆ ತರುವ ತಿರುಳಾಗಿದ್ದರು. ಗುರುಗಳದು ಬೀಸಾದ ನಡಿಗೆ. ಪ್ರತಿದಿನ ಸಂಜೆ ಪ್ರಸಾದನಿಲಯದ ಒಳಾಂಗಣದ ಸುತ್ತು ವೇಗದಿಂದ ನಡೆದಾಡುತ್ತಿದ್ದರು. ಅದು ಶಿವಯೋಗಿಗಳ ಮಂಟಪಕ್ಕೆ ಪ್ರದಕ್ಷಿಣೆಯೂ ಆಗಿರುತ್ತಿತ್ತು. ಹಾಗೆಯೆ ವಿದ್ಯಾರ್ಥಿಗಳು ತಮ್ಮ ತಮ್ಮ ಕೋಣೆಗಳನ್ನು, ಮುಂಭಾಗದ ಆವರಣವನ್ನು ಹೇಗೆ ಇಟ್ಟಿದ್ದಾರೆ ಎಂಬುದರ ಸೂಕ್ಷ್ಮ ಅವಲೋಕನವೂ ಆಗಿರುತ್ತಿತ್ತು. ಮಹಾಂತಪ್ಪಗಳು ಅಷ್ಟೇ ವೇಗದಿಂದ ಅವರನ್ನು ಅನುಸರಿಸುತ್ತಿದ್ದರು. ಕೆಲವೊಂದು ವಿಚಾರಗಳ ವಿನಿಮಯವೂ ಆಗ ಅವರಿಬ್ಬರಲ್ಲಿ ನಡೆಯುತ್ತಿತ್ತು. ಕೋಣೆಯ ಒಳಗೆ ಕುಳಿತಿರುತ್ತಿದ್ದ ನಮಗೆ ಅವರ ಈ ಪ್ರದಕ್ಷಿಣೆ ಒಂದು ಪರೀಕ್ಷಾಸಮಯದಂತೇ ಅನಿಸುತ್ತಿತ್ತು. ಅವರ ನಡಿಗೆಯ ಲಯ ಇಂದಿಗೂ ನನ್ನ ಒಳಗಿವಿಗೆ ಕೇಳಿಸುವಂತಿದೆ. ಸ್ವಾಮಿಗಳಿಗೆ ನಮ್ಮ ನಿತ್ಯದ ನಿಯಮಗಳಲ್ಲಿ ಎಷ್ಟೂ ವ್ಯತ್ಯಾಸವಾಗಕೂಡದು. ನಸುಕಿನ ಪ್ರಾರ್ಥನೆ, ಸಂಜೆಯ ಶಿವಾನುಭವ ಮೊದಲಾದವುಗಳನ್ನು ನಾವು ಯಾವ ಕಾರಣಕ್ಕೂ ತಪ್ಪಿಸಕೂಡದು. ಒಂದೆರಡು ಸಲ ಮೊದಲೇ ತಿಳಿಸಿ ಅನಿವಾರ್ಯ ಕಾರಣಗಳಿಂದ ತಪ್ಪಿಸಿದರೆ ಕ್ಷಮ್ಯ, ಆದರೆ ಅದೇ ಮುಂದುವರಿಯಕೂಡದು. ಹಾಗೆ ಆದಾಗ ಇಲ್ಲವೆ ಯಾವುದಾದರೂ ಅನುಚಿತ ಘಟನೆ

ನಡೆದಾಗ ಮೃತ್ಯುಂಜಯಪ್ಪಗಳು ಕರೆಕಳುಹಿಸುತ್ತಿದ್ದರು. ಭಯ-ಭಕ್ತಿಯಿಂದ ನಾವು ಅವರೆದುರು ಹೋಗಿ ಕೈಕಟ್ಟಿಕೊಂಡು ನಿಲ್ಲುತ್ತಿದ್ದೆವು. ಅವರ ಸಿಟ್ಟು ಇಳಿಯುವವರೆಗೂ ನಾವು ಮೌನವಾಗಿಯೇ ಇರುತ್ತಿದ್ದೆವು. 'ತಪ್ಪಾಯಿತ್ರೆಪಾ' ಎನ್ನುವ ಒಂದೇ ಮಾತು ನಮ್ಮಿಂದ ತಾನೇತಾನಾಗಿ ಹೊರಬರುತ್ತಿತ್ತು. 'ಇನ್ನೊಮ್ಮೆ ಹೀಗೆ ಮಾಡಭಾರದು' ಎಂದು ಅವರೆಂದ ಕೂಡಲೆ, ನಮ್ಮ ಮನಸ್ಸು ಒಮ್ಮೆಲೆ ಹಗುರಾಗಿ, ಭಯದ ಸ್ಥಾನವನ್ನೆಲ್ಲ ಭಕ್ತಿಯೇ ತುಂಬಿಕೊಳ್ಳುತ್ತಿತ್ತು. 'ತಂದೆ ಮಕ್ಕಳಿಗೆ ಬುದ್ಧಿ ಹೇಳುವಲ್ಲಿ ತಪ್ಪಿಂಗೆ ಮುನಿವನಲ್ಲದೆ ಪ್ರಾಣಕ್ಕೆ ಮುನಿಯ' ಎಂಬ ಬಸವಣ್ಣನವರ ವಚನದಂತೆ ಮೃತ್ಯುಂಜಯಪ್ಪಗಳ ರೀತಿ. ಗುರುನಿಷ್ಠರೂ, ಸರಳಸ್ವಭಾವದವರೂ ಶಾಂತಮೂರ್ತಿಗಳೂ ಆದ ಮಹಾಂತಪ್ಪಗಳದು ಮಾತೃಹೃದಯ. ಗುರುಗಳು ವಿದ್ಯಾರ್ಥಿಗಳ ನಡೆವಳಿಕೆಯ ಬಗ್ಗೆ ಹೀಗೆ ಸಿಟ್ಟಿಗೆದ್ದಾಗ ಅವರು 'ಇದೊಂದು ಸಲ ಕ್ಷಮಿಸಿ ಬಿಡ್ರೆಪಾ' ಎಂದು ಅವರ ಮನಸ್ಸನ್ನು ಮೃದುಗೊಳಿಸಿಬಿಡುತ್ತಿದ್ದರು. ಮಹಾಂತಪ್ಪಗಳು ಆಮೇಲೆ ತಮ್ಮದೇ ಆದ ರೀತಿಯಲ್ಲಿ ನಮಗೆ ಬುದ್ಧಿವಾದ ಹೇಳಿ ಸಾಂತ್ವನಗೊಳಿಸಿ ಕಳಿಸುತ್ತಿದ್ದರು. ಚಂದ್ರನಂತೆ ಸೂರ್ಯನ ಪ್ರಖರತೆಯನ್ನು ತಂಪುಗೊಳಿಸಿಕೊಡುವ ಅನೇಕ ಸಂದರ್ಭಗಳಲ್ಲಿ ಅವರು ನಮ್ಮನ್ನು ಹೀಗೆ ರಕ್ಷಿಸಿ ಕಾಪಾಡಿದ್ದುಂಟು. ಸ್ವಂತ ಮಕ್ಕಳನ್ನು ಎಲ್ಲರೂ ಮುದ್ದಿಸುವರು ಆದರೆ ಎಲ್ಲ ಮಕ್ಕಳನ್ನು ತಾಯಿಮಾತ್ರ ಮುದ್ದಿಸಿಯಾಳು. ಅಂಥ ಮಾತೃಹೃದಯ ಮಹಾಂತಪ್ಪಗಳದು.

ಸ್ವಾಮಿಗಳದು 'ಮಾಡಿದೆನೆಂಬುದು ಮನದಲ್ಲಿ ಹೊಳೆಯದ' ಸೇವಾಭಾವ. ಅವರು ಯಾರಿಗೂ ಉಪದೇಶಮಾಡುತ್ತಿರಲಿಲ್ಲ. ಅವರ ನಡೆಯೇ ಜೀವಂತ ಉಪದೇಶ. ಒಮ್ಮೊಮ್ಮೆ ವಿದ್ಯಾರ್ಥಿಗಳು ಏನಾದರೂ ತಪ್ಪು ಮಾಡಿದಾಗ ಅವರಿಗೆ ಬುದ್ಧಿ ಹೇಳುತ್ತಿದ್ದ ಮಾತುಗಳನ್ನು ನಾನು ಪದ್ಯರೂಪದಲ್ಲಿ ಹೀಗೆ ಹಿಡಿದಿಟ್ಟಿದ್ದೇನೆ:

"ವ್ಯರ್ಥವಲ್ಲ ಶಿವಕೊಟ್ಟ ವಸ್ತು ಕಸಬರಿಗಿ ಕಡ್ಡಿ ಕೂಡ
ಅರ್ತಿಯಿಂದ ಪುಟ ತೆರೆಯಬೇಕು ಅಪ್ಪನವರ ವಚನ ನೋಡ;
ಮಾವಿನೆಲೆಯ ನೀ ಮಾಡಬಲ್ಲೆಯಾ? ಯಾವ ಬಣ್ಣದಿಂದ?
ನಾನು, ನೀನು, ಏನೇನೊ ಮೂಡಿ ಬಂತದೇ ಮಣ್ಣಿನಿಂದ"

ದುಡಿಯಬೇಕು, ನೆಲ ಕಡಿಯಬೇಕು, ಹೋರಾಡಬೇಕು ಜೀವ
ಪಡೆದು, ಕೊಟ್ಟು ಕೊಂಡಾಡಬೇಕು ಸರ್ವಾಂಗಲಿಂಗ ಜಗವ
ಕಟಕುರೊಟ್ಟಿ, ಮೆಣಸ್ಹಿಂಡಿ ತಿಂದು, ಮೇಲೊಂದು ಗುಟುಕು ನೀರು
ಕಟೆದ ಹಾಗೆ ಈ ಮೂರ್ತಿ ಮಾಟ, ಆಮೇಲೆ ಗುಡಿಯು ತೇರು

ಯಾವುದಾದರೂ ಸಭೆ ನಡೆದಾಗ ಅದರ ಅಂತ್ಯ ಮಂಗಲ ಅವರಿಂದಲೇ ಆಗಬೇಕು. ಎಲ್ಲರಲ್ಲೂ ಅವರು ಬೇಡುತ್ತಿದ್ದುದು ಭಕ್ತಿ-ಭಿಕ್ಷೆ. ಅವರು ಹಾಡುತ್ತಿದ್ದ ಅನುಭವದ ಹಾಡುಗಳಿಗೆ ಅವರದೇ ಆದ ರೀತಿ, ಸೊಗಸು, 'ನೋಡಲಾಗದೇ ದೇವ', 'ಮಾಡಲಿಲ್ಲವೇ ತಪವ', 'ಪರಪೂಜೆ ಗುರುಸೇವೆ', 'ಲಾಲಿಲಾಲಿಯು ಪರಬ್ರಹ್ಮದ ಶಿಶುವೆ' - ಇವೇ ಮೊದಲಾದ ಹಾಡುಗಳನ್ನು ತಮ್ಮ ಜೀವಜೀವಾಳದಿಂದ ಅದ್ದಿ ತೆಗೆಯುತ್ತಿದ್ದರು.

ಈ ಗುರುಶಿಷ್ಯರು ಪರಸ್ಪರರನ್ನು ಅರಿತುಕೊಂಡಿದ್ದ ಬಗೆ, ಬೆಳೆಸಿಕೊಂಡಿದ್ದ ಸಂಬಂಧ ಅಪರೂಪವಾದದ್ದು. ಮೃತ್ಯುಂಜಯಪ್ಪಗಳ ಮನಸ್ಸಿನಲ್ಲಿ ಬಂದದ್ದೆಲ್ಲ ಮಹಾಂತಪ್ಪಗಳಿಗೆ ತಟ್ಟನೆ ತಿಳಿದುಬಿಡುತ್ತಿತ್ತು. ಕ್ರಿಯೆ, ಪ್ರತಿಕ್ರಿಯೆಗಳು ಪರಸ್ಪರ ಪೂರಕ ಪರಿಪೂರಕವಾಗಿರುತ್ತಿದ್ದವು. ಯಾವುದಕ್ಕೂ ಮಹಾಂತಪ್ಪಗಳ ಸಲಹೆ ಬೇಕು; ಅವರ ಸಂದೇಹಗಳಿಗೆ ಇವರು ತಕ್ಷಣ ಪರಿಹಾರ ಸೂಚಿಸುತ್ತಿದ್ದರು. ಆದರೂ 'ತಮ್ಮ ಅಪ್ಪಣೆಯಂತೆ ಆಗಲ್ರೆಪಾ' ಎಂಬ ಕೈಂಕರ್ಯಭಾವ ಅಲ್ಲಿ ತಾನೆ ತಾನಾಗಿ ಕಂಗೊಳಿಸುತ್ತಿತ್ತು.

ಬಸವಾದಿ ಪ್ರಮಥರ ಹಾದಿಯಲ್ಲಿ ನಡೆದ ಶ್ರೀಮದಥಣಿ ಶಿವಯೋಗಿಗಳ ಸಂಪೂರ್ಣ ಕೃಪೆಗೆ ಪಾತ್ರರಾದ ಮೃತ್ಯುಂಜಯಪ್ಪಗಳು ತಾವು ಅಳವಡಿಸಿಕೊಂಡಿದ್ದ ಹಿರಿಯ ಗುಣಗಳ ಸಾರವನ್ನೆಲ್ಲ ಮಹಾಂತಪ್ಪನವರಿಗೆ ಧಾರೆಯೆರೆದರು. ಅದರ ಫಲವಾಗಿಯೇ ಮರುಘಾಮಠದ ಉದಾತ್ತ ಪರಂಪರೆಗೆ ಎಲ್ಲಿಯೂ ಧಕ್ಕೆ ಬರದಂತೆ ಮಹಾಂತಪ್ಪಗಳ ಮುಖಾಂತರ ಅದು ಅಖಂಡವಾಗಿ, ಹೊಸಕಾಲಕ್ಕೆ ತಕ್ಕಂತೆ ಹೊಸದನ್ನು ಅಳವಡಿಸಿಕೊಳ್ಳುತ್ತ ಮುಂದುವರಿದಿದೆ. ಈಗ್ಗೆ ೪೩ ವರ್ಷಗಳ ಹಿಂದೆ ನಾನು ಮೊಟ್ಟ ಮೊದಲು ಕಂಡ 'ಮಹಾಂತ ದೇವರು' ಇಂದಿಗೂ ಅದೇ ಸರಳತೆಯ ಮುಗ್ಧತೆಯ ಮೂರ್ತಿಯಾಗಿದ್ದು, ಮಾತೃವಾತ್ಸಲ್ಯ, ಗುರುಭಕ್ತಿ, ದಾಸೋಹ ಭಾವಗಳ ಪರಿಪಕ್ವತೆಯ ಪ್ರತೀಕವಾಗಿದ್ದಾರೆ.

ಮುರುಘಾಮಠದ ಆವರಣ ಈಗ ಹೊಸ ಹೊಸ ಕಟ್ಟಡಗಳಿಂದ ತುಂಬಿ ತುಳುಕುತ್ತಿದೆ. ಹೊಸರೂಪ ಲಾವಣ್ಯಗಳಿಂದ, ಗೋಪುರದ ಗಡಿಯಾರದಿಂದ, ಹೊಳೆಯುವ ಕಳಸದಿಂದ ಕಣ್ಣಿಗೆ ಎದ್ದು ಕಾಣುತ್ತಿದೆ. ಇದೆಲ್ಲ ಕಣ್ಣಮುಂದೆಯೇ ಇದ್ದಾಗಲೂ, ನನ್ನ ಮನಸ್ಸು ಅದೇಕೊ ನಾಲ್ವತ್ತು ವರ್ಷಗಳ ಹಿಂದೆ ಸರಿದು, ನಿರಾಡಂಬರವಾದ ಗುರುಗದ್ದುಗೆಯ ಮುಂದಿನ ಚೌಕಿನಲ್ಲಿ ಮೃತ್ಯುಂಜಯಪ್ಪಗಳು ಮಂದಹಾಸ ಬೀರುತ್ತ ಕುಳಿತಂತೆ, ಬದಿಯಲ್ಲಿಯೆ ಗೋಡೆಗಾತು ನಿಂತಿರುವ ಮಹಾಂತ ದೇವರ ಕಿವಿಯಲ್ಲಿ ಯಾವುದೊ ಸೂಕ್ಷ್ಮ ಸಂಗತಿಯನ್ನು ಉಸುರುತ್ತಿದ್ದಂತೆ, ಅಲ್ಲಿಯೇ ಎದುರಿಗಿದ್ದ ಬನ್ನಿಯ ಗಿಡ, ಬಿಲ್ವವೃಕ್ಷಗಳು ಬಂದ ಭಕ್ತರನ್ನು ಬರಮಾಡಿಕೊಳ್ಳುತ್ತಿರುವಂತೆ: 'ಶ್ರೀ ಗುರುವೆ ಸತ್ಕೃಯೆಯ ಆಗರವೆ ಸುಜ್ಞಾನ ಸಾಗರವೆ ಎನ್ನ ಮತಿಗೆ ಮಂಗಳವಿತ್ತು ರಾಗದಿಂ ಬೇಗ ಕೃಪೆಯಾಗು' ಎಂದು ವಿದ್ಯಾರ್ಥಿಗಳು ಏಕಕಂಠದಿಂದ ಹಾಡುತ್ತಿರುವಂತೆ - ಆ ಹಿಂದಿನ ದೃಶ್ಯವೇ ಕಣ್ಣೆದುರು ಕಟ್ಟಿದಂತಾಗಿ ಯಾವುದೋ ಹೇಳಲಾಗದ ಪವಿತ್ರ ಭಾವನೆಯಲ್ಲಿ ಮುಳುಗಿಬಿಡುತ್ತದೆ.

ಇಪ್ಪತ್ತೆರಡು ವರ್ಷಗಳ ಹಿಂದೆ ಮೃತ್ಯುಂಜಯಪ್ಪಗಳ ೭೪ನೆಯ ವರ್ಧಂತಿ ಮಹೋತ್ಸವದ ಶುಭದಿನದಂದು. ಪ್ರಸಾದನಿಲಯದ ಹಿಂದಿನ ವಿದ್ಯಾರ್ಥಿಗಳ ತೃತೀಯ ಸ್ನೇಹಸಮ್ಮೇಳನದ ಸಂದರ್ಭದಲ್ಲಿ 'ನೈವೇದ್ಯ' ಸಂಪುಟವನ್ನು ಸಂಪಾದಿಸಿ ಶ್ರೀಗಳವರಿಗೆ ಅರ್ಪಿಸುತ್ತ, ನಾನು ಬರೆದು ಓದಿದ 'ಪುಷ್ಪಾಂಜಲಿ' ಕವಿತೆಯ ಒಂದೆರೆಡು ನುಡಿಗಳನ್ನೇ ಮಹಾಂತಪ್ಪಗಳ ಅಮೃತ ಮಹೋತ್ಸವದ ಸಂದರ್ಭದಲ್ಲಿ ಮತ್ತೆ ನೆನಪು ಮಾಡಿಕೊಳ್ಳುತ್ತ ಇವರಲ್ಲಿಯೂ ಅವರನ್ನೇ ಕಾಣುತ್ತೇನೆ.

ಸ್ವಾಮಿಯಡಿಗೆ ಶಿರಬಾಗಿ ಬಂದೆವಿದೊ ಎಲ್ಲ ಸೀಮೆಯಿಂದ
ಅರಿವು-ಮರೆವು ಕಣ್ದೆರೆದು ಕರೆದ ಆ ಪೂರ್ವಸ್ಮರಣೆಯಿಂದ
ನೀಲದಲ್ಲಿ ತೇಲಾಡೆ ಗಾಳಿಪಟ ಕೃಪಾಸೂತ್ರದಿಂದ
ಕಂಡವೇಸೊ ನೆಲ ಜಲದ ಚೆಲುವ ನೀವಿತ್ತ ನೇತ್ರದಿಂದ.

ಎತ್ತರೆತ್ತರಕು ಹಾರಿ ಏರಿದರು ಕೋತಿ ಹೊಡೆಯದಂತೆ
ದಿಕ್ಕು ದಿಕ್ಕುಗಳ ಗಾಳಿ ಜಗ್ಗಿದರು ಬಿಲ್ಲು ಮಣಿಯದಂತೆ
ನೂರು ಸೊಲ್ಲು ಗುಲ್ಲಿನಲು ಎಲ್ಲೊ ಮಿಡಿದಿಹುದು ಏಕನಾದ
ಆ ನಾದ ಹಿಡಿದು ಬಂದೇವು ನಾವು ಕರುಣಿಸಿರಿ ತಮ್ಮ ಪಾದ.

ದೊರೆಯಬಹುದೆ ದರುಶನವು, ದಿವ್ಯ ಸ್ಪರ್ಶನದ ಜೀವನಾದ ?
ಎರೆದು ಹೊಚ್ಚಿ ಎದೆ ಹಾಲು ತೊರೆವ ಪಾದೋದಕ ಪ್ರಸಾದ.
ಇರವಿನಲ್ಲಿ ಆ ತೆರವು ತುಂಬಿ ತೆರೆಯಾಡುವಂತೆ ಕಡಲು
ಅರಿವಿನೊಂದು ಹೊಸ ಬರವಿಗಾಗಿ ಹಾತೊರೆಯುತಿಹುದು ಒಡಲು.

ಮರ್ತ್ಯವನ್ನೆ ಮಹಮನೆಯ ಗೈದ ಮೃತ್ಯುಂಜಯನ ಚರಣ
ಶರಣಭಾವದಲಿ ಕಿರಣಿಸಿಹುದು ಪುಷ್ಪಾಂಜಲಿಯ ಸ್ಮರಣ.
ಇರುಳ ಮೌನ ತಿಳಿಗೊಂಡು ಅರಳಿ ನರುಗಂಪು ನಸುಕು ಹರಿದು
ಕಿವಿಯೊಳಿಂತು ಉಚ್ಚರಿಸಿತಣ್ಣ ಎಚ್ಚರಿಸಿ ದೂರ ಕರೆದು.

'ಅಮೃತಬೆಳಸು' ೧೯೮೫

# ೧೨

# ಕವಿ ಕಂಡ ರವಿ

"ಲೋಕದ ಚೇಷ್ಟೆಗೆ ರವಿ ಬೀಜವಾದಂತೆ" ಎಂದು ಅಕ್ಕಮಹಾದೇವಿ ನುಡಿದದ್ದುಂಟು. ಪೃಥ್ವಿಯ ಪ್ರಥಮ ಸೌಂದರ್ಯದರ್ಶನವಾಗುವುದೇ ಸೂರ್ಯೋದಯದಿಂದ. ಪ್ರಕೃತಿಯ ಮಧ್ಯದಲ್ಲಿ ವಾಸಿಸುತ್ತ ಅದರ ಸೌಂದರ್ಯದಿಂದ ಭಾವೋದ್ದೀಪನ ಪಡೆದ ನಮ್ಮ ಪೂರ್ವಜರು ಸರ್ವಸೌಂದರ್ಯದ ಮೂಲವಾದ ಪರಮಾತ್ಮನ ಬಗ್ಗೆ ಚಿಂತಿಸಿದರು. ಪ್ರಕೃತಿ ಮತ್ತು ಮಾನವನಲ್ಲಿ ಇರುವ ಆತ್ಮ ಒಂದೇ ಎಂಬುದನ್ನು ಕಂಡುಕೊಂಡ ಆದಿ ಋಷಿಕವಿಗಳು ಈ ಸೌಂದರ್ಯದ ನವನವೋನ್ಮೇಷತ್ವವನ್ನು ಕುರಿತು ಉಷಾಸೂಕ್ತಗಳಲ್ಲಿ ಬಣ್ಣಿಸಿದ್ದಾರೆ.

ಪುನಃ ಪುನರ್ಜಾಯಮಾನಾ ಪುರಾಣೀ
ಸಮಾನಂ ವರ್ಣಮಭಿ ಶುಂಭಮಾನಾ

ದಿನದಿನವೂ ಯೌವನವತಿಯಾಗಿ ಉಷಾಸೌಂದರ್ಯ ನಮ್ಮೆದುರು ಶೋಭಿಸುತ್ತಿದೆ. ಆದರೆ ನಾವು ಮಾತ್ರ ದಿನದಿನವೂ ಮುಪ್ಪಿಡಿದು ನಶಿಸುತ್ತಿದ್ದೇವೆ ಎನ್ನುವ ಸತ್ಯದ ಜಿಜ್ಞಾಸೆಗೆ ಅದು ಪ್ರೇರಣೆಯನ್ನಿತ್ತಿದೆ. "ವಿಶ್ವದಲ್ಲಿ ಯಾವ ಯಾವುದು ಬೆಳಗುತ್ತಿದೆಯೋ ಅದೆಲ್ಲವೂ ಆ ಮಹಾ ಬೆಳಗಿನ ಛಾಯೆ ಮಾತ್ರ, ಅದು ಬೆಳಗುವದರಿಂದ ಇದೆಲ್ಲವೂ ಬೆಳಗುತ್ತಿದೆ" ಎಂದು ರೂಪಾತೀತವಾದ ಮೂಲ ಸೌಂದರ್ಯದ ವಿಚಾರವನ್ನು ಉಪನಿಷತ್ತು ಒತ್ತಿ ಹೇಳುತ್ತದೆ.

ಭೂಮಿತಾಯಿಯನ್ನೇ ತಮ್ಮ ಅಧಿದೈವವನ್ನಾಗಿ ಮಾಡಿಕೊಂಡ ನಮ್ಮ ಜಾನಪದ ಕವಿಗಳ ಮನಸ್ಸು ಈ ದೈವಿಕ ಭಾವದಿಂದಲೇ ಸ್ಫುರಣಗೊಂಡು

ಮೂಡಣ ಮಡಿಲಲ್ಲಿ ಮೂಡ್ಯಾನು ಸ್ವಾಮಿ
ಮಲ್ಲಿಗೆ ಮೊಗ್ಗೆಲ್ಲ ನಗುತಾವೆ ನೋಡಾ

ಈ ಉಜ್ವಲವಾದ ಬೆಳಗಿನ ಬಣ್ಣನೆಯನ್ನು ಈ ಜನಪದ ಕವಿ ಪ್ರತಿಮೆಯೊಂದರಿಂದ ಇನ್ನಿಷ್ಟು ಇಂದ್ರಿಯ ಗೋಚರವಾಗುವಂತೆ ಮಾಡಿ ಹೃದಯಂಗಮಗೊಳಿಸುತ್ತಾನೆ.

ಕಸುಕಾದ ದಾಳಿಂಬ: ರಸತುಂಬಿ ಒಡೆದಂತೆ
ನಸುಗೆಂಪು ಒಡೆದು ಮೂಡಲವು: ಶಿವಭಕ್ತಿ
ಹಸುಗೆಂಪು ಹರಿದು ಜಗತುಂಬಿ:

ನಸುಕಿನ ನಸುಗೆಂಪಿನೊಡನೆಯೇ ಶಿವಭಕ್ತಿಯ ಹಸುಗೆಂಪು ಜಗತ್ತನ್ನು ತುಂಬಿಕೊಳ್ಳುವ ತಾದಾತ್ಮ್ಯಭಾವ ಸೌಂದರ್ಯಭೋಧೆಯೊಡನೆ ಸಮರಸಗೊಳ್ಳುತ್ತದೆ.

(೨)

ದೈವಿಕವಾದ ಹಾಗೂ ಭಾವೋದ್ದೀಪಕವಾದ ಈ ಪ್ರಭಾತಕಾಲದ ಸೊಗಸನ್ನು ಎಷ್ಟು ಜನ ನಮ್ಮ ಹಿಂದಿನ ಕವಿಗಳು ಅನುಭವಿಸಿ ತಮ್ಮ ಕಾವ್ಯದಲ್ಲಿ ಅಭಿವ್ಯಕ್ತಿಗೊಳಿಸಿದ್ದಾರೆ ಎಂದು ಪರಿಶೀಲಿಸ ಹೋದರೆ ನಿಜವಾಗಿಯೂ ನಿರಾಶೆಯುಂಟಾಗುತ್ತದೆ. ಮಹಾಕಾವ್ಯದಲ್ಲಿ ಹದಿನೆಂಟು ವರ್ಣನೆಗಳಿರಬೇಕೆಂಬ ಲಾಕ್ಷಣಿಕರ ನಿಯಮದಂತೆ ಏಳು ವರ್ಣನೆಗಳು ಪ್ರಕೃತಿವರ್ಣನೆಗೆ ಸಂಬಂಧಪಟ್ಟಿವೆ. ಆದರೆ ಅವೆಲ್ಲವೂ ಬಹುಮಟ್ಟಿಗೆ ಒಂದೇ ಪಡಿಯಚ್ಚಿನಲ್ಲಿ ಹಾಯ್ದು ಬಂದವುಗಳು. ಬಹುಜನ ಕವಿಗಳಿಗೆ ಸೂರ್ಯೋದಯ ಕೇವಲ ಕಾಲಸೂಚಕ. ಆ ದಿವ್ಯ ಮನೋಹರ ದೃಶ್ಯದ ರಸಾನುಭವಕ್ಕಿಂತ ಅದರ ಪರಿಣಾಮಗಳನ್ನು ಕುಮುದ ಮುಚ್ಚಿತು,ಕಮಲ ಅರಳಿತು-ಇತ್ಯಾದಿ ಕವಿಸಮಯದ ಸಂಕೇತಗಳಿಂದ ಬಣ್ಣಿಸುವದು ಅವರ ಪದ್ಧತಿ. ಆದರೆ ಈ ಸಂಪ್ರದಾಯದ ಮಾರ್ಗದಲ್ಲಿಯೇ ಉತ್ಪ್ರೇಕ್ಷೆಯ ಜಾಡಿನಲ್ಲಿಯೇ ಆದರೂ ತಮ್ಮ ನೈಜಾನುಭವವನ್ನು ತೋರಿದ ಕವಿಗಳೂ ಕೆಲವರಿದ್ದಾರೆ. ಲಕ್ಷ್ಮೀಶನ ಈ ಪದ್ಯ ನೋಡಿ:

ಬೀಡುಗೊಂಡಿರ್ದ ಕತ್ತಲೆಯ ಪಾಳೆಯಮೆತ್ತ
ಲೋಡಿದುದೋ ನೋಡಿದಪೆನೆಂದು, ಪೂರ್ವಾಚಲದ
ಕೋಡುಗಲ್ಲಂ ಪತ್ತಿದಂತೆ ಮೆರೆದಂ ಪ್ರಭೆಯೊಳೌನ್ನತ್ಯನಾದಿತ್ಯನು

ಭರತೇಶ ವೈಭವದಲ್ಲಿ ರತ್ನಾಕರವರ್ಣಿ ಸೂರ್ಯೋದಯದ ಸನ್ನಿವೇಶವನ್ನು ನಾಲ್ಕೇ ಮಾತುಗಳಲ್ಲಿ ನಾಟ್ಯೀಕರಿಸಿ ಚಿತ್ರಿಸಿದ್ದಾನೆ :

'ಎಳವಿಸಿಲಡರ್ದೇರಿ ಜಿನನಿಲಯದ ರತ್ನ ಕಳಶದೊಡನೆ ಮಾತನಾಡಿತು' ಎನ್ನುವದು ತುಂಬ ಚೇತೋಹಾರಿಯಾಗಿದೆ.

ಸೂರ್ಯೋದಯಕ್ಕೆ ಮುಂಚೆ ಅರುಣೋದಯದ ವರ್ಣನೆಯನ್ನು ಶಾಂತರಸ ಪ್ರತೀಕವಾಗಿ ವರ್ಣಿಸಿರುವ ನಾಗಚಂದ್ರನ ಪದ್ಯ ಸುಂದರವಾಗಿದೆ. ವೈರಾಗ್ಯಕ್ಕೆ ಒಲಿಯುತ್ತಿರುವ ಮನಸ್ಸಿಗೆ ಸುಪ್ರಭಾತ ಕಂಡ ರೀತಿಯಿದು :

ಮೂಡಣ ಸಂಜೆ ಕೆಂದಳಿರ ಕಾವಣದಂತಿರೆ, ಚಂದ್ರಮಂಡಲಂ
ಬಾಡಿದ ಮಾಧವೀ ಮಧುರ ಮಂಜರಿಯಂತಿರೆ, ತಾರಕಾಳಿ ನೀ
ರೋಡಿ ಕಳಲ್ದು ಬಿದ್ದ ಕಳೆವೂಗೆಣೆಯಾಗಿರೆ, ತಣ್ಣನಪ್ಪೆಲರ್
ತೀಡಿ ತಪೋವನಂಬೊಲತಿ ಪಾವನವಾಯ್ತು ನಭಂ ಪ್ರಭಾತದೊಳ್

ಪ್ರಕೃತಿಸೌಂದರ್ಯದ ಪರಿಯೇ ಹಾಗೆ, ಅದನ್ನು ನೋಡುವ, ಅನುಭವಿಸುವ ವ್ಯಕ್ತಿ ಯಾವ ಯಾವ ಮನೋಭಾವವನ್ನು ತಾಳುವನೋ ಹಾಗೆ ಅದು ಕಾಣುತ್ತದೆ. ದೃಷ್ಟಿ ಎಂಬ ಮಾತಿನ

ಅರ್ಥ ಇಂಥ ಸಂದರ್ಭಗಳಲ್ಲಿ ನಮಗೆ ಗೋಚರಿಸುತ್ತದೆ. ಬಸವಣ್ಣನವರು ಕನಸಿನಲ್ಲಿ ಕೂಡಲ ಸಂಗನ ಅಗಲಿಕೆಯ ಅನುತಾಪವನ್ನು ಅನುಭವಿಸುತ್ತಿರುವಾಗ 'ನಿನ್ನೊಡನೆ ಬಿಡದೆ ಬಪ್ಪೆಂ ಬಸವ' ಎಂಬ ಭರವಸೆಯ ನುಡಿಯೊಡನೆ ಕಣ್ಣು ತೆರೆದಾಗ 'ಹರ ಕರುಣೋದಯ ಮಾದಂತರುಣೋದಯಮಾಗೆ' ಎಂದು ಹರಿಹರ ಕವಿ ಬಣ್ಣಿಸುತ್ತಾನೆ.

ಸೂರ್ಯೋದಯದಂತೆ ಸೂರ್ಯಾಸ್ತವೂ ಕಾವ್ಯಗಳಲ್ಲಿ ಕಾಲಸೂಚಕವಾಗಿದ್ದು ಕೆಲಮಟ್ಟಿಗೆ ಪ್ರಭಾತಕಾಲದ ವರ್ಣನೆಯಂತೆಯೇ ತೋರುತ್ತದೆ. ಆದರೆ ಸಂಧ್ಯಾಕಾಲದ ನಿಜವಾದ ಸೌಂದರ್ಯವನ್ನು ರುದ್ರಭಟ್ಟ, ಪಂಪ, ಲಕ್ಷ್ಮೀಶರು ಕಂಡಿದ್ದಾರೆ.

........... ಅರುಣತೆಯಂಪೆತ್ತು, ಚೆಲ್ವಾದುದು

ಅಸ್ತಾಚಳತುಂಗ ವ್ಯಾಘ್ರಜೃಂಭಾವೃತ ವದನಮೆನಿಪ್ಪಂದದಿಂ, ಭಾನು ಬಿಂಬಂ

ಮುಳುಗುವ ಸೂರ್ಯ ಪಡುವಣ ಬೆಟ್ಟದಲ್ಲಿ ಬಾಯ್ದೆರೆದು ಆಕಳಿಸುವ ಹುಲಿಯ ಮುಖದಂತೆ ತೋರುತ್ತಿದೆ ಎನ್ನುವ ರುದ್ರಭಟ್ಟನ ಕಲ್ಪನೆ ನಾವೀನ್ಯದಿಂದ ಮನೋಹರವಾಗಿದೆ. ಸೂಕ್ತಿಸುಧಾರ್ಣವದ ಒಂದು ಪದ್ಯದಲ್ಲಿ 'ಒಪ್ಪಿದಂ ಗಗನವೃಕ್ಷದ ಪಣ್ಗೆ ಎಣೆಯಾಗಿ ಭಾಸ್ಕರಂ' ಎನ್ನುವ ಮಾತೂ ಅಷ್ಟೇ ಸೊಗಸಾಗಿದೆ. ಪಂಪಕವಿ ವಿಕ್ರಮಾರ್ಜುನ ವಿಜಯದಲ್ಲಿ ತೀರ ಹೊಸತಾದ ಚಿತ್ರವೊಂದನ್ನು ನೀಡಿದ್ದಾನೆ.

............ ಪೊಳೆವ ಸಂಜೆಯ ಕೆಂಪು ಸಾಣೆಗೊಡ್ಡಿದಿ
ಟ್ಟಗೆಯ ರಂಜಬೋಲ್ ಎಂಬಿನೆಗಂ ಅಸ್ತಮಕ್ಕಿಳಿದಂ ದಿವಾಕರಂ

ಹೊಳೆವ ಸಂಜೆಯ ಕೆಂಪು ಸಾಣೆಗೆ ಒಡ್ಡಿದ ಇಟ್ಟಿಗೆಯ ಧೂಳಿನಂತೆ ಕಾಣಿಸಿತಂತೆ. ಮುಳುಗುವ ಸೂರ್ಯ ಸಾಣೆಕಲ್ಲಿನಂತೆ ಗಿರ್ರನೆ ತಿರುಗುತ್ತಿದ್ದಾನೆ. ಸಂಜೆಗೆಂಪು ಆ ಸಾಣೆಗೊಡ್ಡಿದ ಇಟ್ಟಿಗೆ ರಜದಂತೆ ಎಲ್ಲೆಡೆಗೂ ವ್ಯಾಪಿಸುತ್ತಿದೆ. ಇದು ನಿಜಕ್ಕೂ ಸಂಪ್ರದಾಯಕ್ಕೆ ಜೋತು ಬೀಳದ, ಕವಿಪ್ರತಿಭೆಯ ಮೂಸೆಗೆ ಸಿಕ್ಕು, ಉಜ್ವಲಗೊಂಡ ಚಿತ್ರವಾಗಿದೆ. ಮಾನವನ ಸುಖದುಃಖಗಳಲ್ಲಿ ಪ್ರಕೃತಿ ತಟಸ್ಥವಾಗಿರದೆ ತಾನೂ ಅದರಲ್ಲಿ ಸಹಭಾಗಿಯಾಗಿರುತ್ತದೆಂಬ ಸತ್ಯವನ್ನು ಮಹಾಕವಿಗಳು ಬಲ್ಲರು. ಭೀಷ್ಮರ ಅವಸಾನದ ಸಮಯದಲ್ಲಿ ಕವಿ ಕಂಡ ಸೂರ್ಯಾಸ್ತವನ್ನು ಕುಮಾರವ್ಯಾಸನ ಪ್ರತಿಭೆ -

'ಪಡುವಣಶೈಲ ವಿಪುಲಸ್ತಂಭ ದೀವಿಗೆಯಂತೆ ರವಿ ಮೆರೆದ' ಎಂಬ ಒಂದು ರೂಪಕದಲ್ಲಿ ಚಿತ್ರಿಸುತ್ತದೆ. "ದ್ವಾಪರಯುಗದ ಸತ್ಯದ ಪ್ರತೀಕವಾದ ಭೀಷ್ಮರ ಅವಸಾನದ ಸಮಯದಲ್ಲಿ ಪ್ರಕೃತಿಯೇ ದೀವಿಗೆ ಹಚ್ಚಿತು. ಪಡುವಣ ಶೈಲವೇ ದೀಪಸ್ತಂಭವಾಯಿತು, ಮುಳುಗುವ ಸೂರ್ಯನೇ ಅದರ ತುದಿಗೆ ಹಣತೆಯಾಗಿ ನಿಂತ ಎನ್ನುವ ಒಂದು ಚಿತ್ರದಲ್ಲಿ ಕವಿ ಪ್ರಕೃತಿ ವರ್ಣನೆಯ ಭವ್ಯತೆಯ ಜೊತೆಗೆ ಭೀಷ್ಮರ ಮಹೋನ್ನತಿಯನ್ನು ಸೂಚಿಸಿದ್ದಾನೆ" (ಜಿ.ಎಸ್.ಎಸ್.)

(೩)

ನವೋದಯ ಕವಿಗಳ ಕಾಲ, ವಿಶೇಷ ವೈವಿಧ್ಯದಿಂದ ತುಂಬಿದ್ದು. ಹಾಗೆಯೇ ಅವರವರ ಅನುಭವ ಕ್ಷೇತ್ರ ವಿಶಾಲವೂ ಜಟಿಲವೂ ಆದದ್ದು. ಏನುಬೇಕಾದರೂ ಅವರ ಪರಿಭಾವನೆಯ ವಸ್ತುವಾಗಬಲ್ಲ ತೀವ್ರ ಬದಲಾವಣೆಯನ್ನು ಇಲ್ಲಿ ಕಾಣುತ್ತೇವೆ. ವ್ಯಕ್ತಿನಿಷ್ಠವಾದ ಭಾವಗೀತೆಗೆ ಅಲ್ಲಿ ಪ್ರಾಶಸ್ತ್ಯ ಹೆಚ್ಚು. ನಿಸರ್ಗದಲ್ಲಿ ಹಾಗೂ ಬದುಕಿನಲ್ಲಿ ಕಾಣುವ ಜೀವನಸೌಂದರ್ಯ ಆ ಸೌಂದರ್ಯದ ಅನುಭವವನ್ನು ಕುರಿತ ಚಿಂತನಶೀಲತೆ - ಇವು ಈ ಕವಿಗಳ ರಸಾನುಭವದ ಉಗಮಸ್ಥಾನಗಳಾಗಿವೆ. 'ಕುವೆಂಪು ಅವರಲ್ಲಿ ಉತ್ಸಾಹವೂ, ಪು.ತಿ.ನ. ಅವರಲ್ಲಿ ವಿಷಾದವೂ, ಬೇಂದ್ರೆಯವರಲ್ಲಿ ಉಲ್ಲಾಸವೂ - ಸೌಂದರ್ಯಾನುಭವದ ಸ್ಥಾಯಿಯಾಗಿರುವಂತೆ ತೋರುತ್ತದೆ' ಎಂಬ ಜಿ.ಎಸ್. ಶಿವರುದ್ರಪ್ಪನವರ ಮಾತನ್ನಿಲ್ಲಿ ನೆನೆಯಬಹುದು.

ಬಂದದ ಸೂರ್ಯನ ಹೊಳೀ
ನಡೀ ಮೈತೊಳಿ, ನೀರಿಸ್ಯಾಗಿಳೀ
ಬಾ, ಗೆಣೆಯಾ ಯಾಕ ಮೈ ಛಳೀ

ಎಂದು ಸೂರ್ಯನ ಬೆಳಕು ಹೊಳೆಯಾಗಿ ನುಗ್ಗಿಬರುವ ಉತ್ಸಾಹವನ್ನು ಬೇಂದ್ರೆ ಕಾವ್ಯ ನಾಟ್ಯೀಕರಿಸುತ್ತದೆ. 'ಬಾಳೆಲ್ಲ ಒಂದು ಎನ್ನುವುದನ್ನು ಅನುಭವದಿಂದ ಕಂಡು' ಆ ಅನುಭವವೇ ಪ್ರಕೃತಿಯಲ್ಲಿ ಕಂಡ ತತ್ವವನ್ನು ಧ್ವನಿಸುವ ಈ ರೀತಿ ಕವಿಯ 'ಬೆಳಗು' ಕವನದಲ್ಲಿ ಸುಂದರವಾಗಿ ಮೂಡಿದೆ.

ಮೂಡಲ ಮನೆಯಾ ಮುತ್ತಿನ ನೀರಿನ
ಎರಕವ ಹೊಯ್ದಾ -
ನುಣ್ಣನ್ನೆರಕವ ಹೊಯ್ದಾ
ಬಾಗಿಲ ತೆರೆದೂ ಬೆಳಕು ಹರಿದೂ
ಜಗವೆಲ್ಲಾ ತೊಯ್ದಾ
ಹೋಯ್ತೊ - ಜಗವೆಲಾ ತೊಯ್ದಾ

ಮೊದಲು ಚೆಲುವಾಗಿ ಇಂದ್ರಿಯಗಳನ್ನು ಮೋಹಿಸುವ, ಒಂದು ರೀತಿಯ ನಲವಾಗಿ ಅಂತರಂಗವನ್ನು ತಣಿಸುವ, ಚೈತನ್ಯವಾಗಿ ಅನುಭವಕ್ಕೆ ಬರುವ ಈ ಸೌಂದರ್ಯ ದೈವೀ ಕೃಪೆಯಲ್ಲದೆ ಬೇರೆಯಲ್ಲ ಎಂಬ ಅನುಭವವಾಗುತ್ತದೆ ಕವಿಗೆ -

ಶಾಂತೀರಸವೇ ಪ್ರೀತಿಯಿಂದ ಮೈದೋರಿತಣ್ಣ
ಇದು ಬರಿ ಬೆಳಗಲ್ಲೋ ಅಣ್ಣಾ

ಎನ್ನುವ ಕವಿ, ಬೆಳಗು ಆಗಿ ಮೈದೋರಿರುವ ಶಾಂತಿರಸವನ್ನೇ, ಆ ಪರಮ ಕಾರುಣ್ಯವನ್ನೇ ಕಂಡಿದ್ದಾರೆ.

ಕನ್ನಡದಲ್ಲಿ ಸೂರ್ಯೋದಯ ಗೀತಗಳನ್ನು ವಿಪುಲವಾಗಿ ರಚಿಸಿದ ಕವಿ, ಕುವೆಂಪು ಎಂದೇ ಹೇಳಬೇಕು. ಅತೀಂದ್ರಿಯವಾದ ಅಲೌಕಿಕವಾದ ರಸಾನಂದದ ದಿವ್ಯೋನ್ಮಾದವನ್ನು ಈ ಗೀತಗಳಲ್ಲಿ ಕಾಣುತ್ತೇವೆ.

ಇಂತಹ ಸುಂದರ ಪ್ರಾತಃಕಾಲದಿ
ಜೀವಿಸುವುದಕಿಂತಲೂ ಬೇರೆಯ ಗುರಿ
ಜೀವಕೆ ಬೇಕಿಲ್ಲ

ಎನ್ನುವ ತೃಪ್ತಿ, ಇದಕ್ಕಿಂತ ಮಿಗಿಲಾದದ್ದು ಇನ್ನಿರಲಾರದು ಎಂಬ ಭಾವನೆ 'ರಸಾನುಭೂತಿಯ ರಸಪಥದಲ್ಲಿಯೇ ಸತ್ಯಕ್ಕೆ ಗತಿ' ಎಂದು ಈ ಕವಿಯ ಗೀತಗಳು ಸಾರುತ್ತವೆ.

ಮಿಂಚು ಹರಿದಂತೆ ನೆತ್ತರು ಚಿಮ್ಮಿ ದೇಹದಲಿ
ತೇಜಸ್ವಿಯಾದೆ ನಾಂ ಸೂರ್ಯನಂತೆ

ಎಂದು ಜೀವನದುದ್ದಕ್ಕೂ ನಡೆಸಿದ ಸೂರ್ಯೋಪಾಸನೆಯ ಫಲವಾಗಿ ಹೊರಹೊಮ್ಮಿದ ಭಾವವಿಸ್ಫುಲಿಂಗಗಳನ್ನು ಈ ಕವನಗಳಲ್ಲಿ ಕಾಣುತ್ತೇವೆ. 'ಕವಿಗೆ ಕವಿಯ ತೋರಿಸಿತ್ತು ಸುಪ್ರಭಾತಂ' ಎಂಬ ಮಾತಿನಲ್ಲಿ 'ಪ್ರಭಾತ ಈ ಮರ್ತ್ಯ ಕವಿಗೆ ವಿಶ್ವಕವಿಯನ್ನು ತೋರಿಸಿಕೊಟ್ಟಿತು' ಎಂದೂ ಅಭಿಪ್ರಾಯವಾಗಬಹುದು'. ಶಿವಸೌಂದರ್ಯಗಳು ಸಮರಸಗೊಂಡ ಒಂದು ನೆಲೆಯಿಂದ 'ಬಾ ಫಾಲ್ಗುಣ ರವಿ ದರ್ಶನಕೆ' ಎಂದು ಕವಿ ಕರೆದಾಗ, ಸೂರ್ಯೋದಯ ಜಗನ್ಮಂಗಳಕರವಾದ ದಿವ್ಯಯಜ್ಞವಾಗಿ ಅನುಭೂತವಾಗುವದು :

ಕುಂಕುಮಧೂಳಿಯ ದಿಕ್ತಟವೇದಿಯೊಳೋಕುಳಿಯಲಿ
ಮಿಂದೇಳುವನು,
ಕೋಟಿವಿಹಂಗಮ ಮಂಗಲರಸ ರವ ನೈವೇದ್ಯಕೆ ಮುದ ತಾಳುವನು
ಚಿನ್ನದ ಚೆಂಡೆನೆ ಮೂಡುವನು ; ಹೊನ್ನನೆ ಹೊಯ್ ನೀರ್ ನೀಡುವನು
ಸೃಷ್ಟಿಯ ಹೃದಯಕೆ ಪ್ರಾಣಾಗ್ನಿಯ ಹೊಳೆ ಹರಿಯಿಸಿ ರವಿ ದಯ
ಮಾಡುವನು

ಹೀಗೆ ಸೂರ್ಯೋದಯವಾದಾಗ ಪ್ರಾಣದ, ಚೈತನ್ಯದ ಅಗ್ನಿಪ್ರವಾಹವೇ ಸೃಷ್ಟಿಯ ಹೃದಯಕೆ ಹರಿದು ಬಂದು ಅದನ್ನು ಉಜ್ಜೀವಿಸುತ್ತದೆ.

ಪೌರಾಣಿಕ ಪ್ರತಿಮೆಗಳ ಬಳಕೆಯಲ್ಲಿ ಹೊಸ ಅರ್ಥವನ್ನು ತುಂಬುವ ಚಿಂತನಶೀಲ ಕವಿ ಪು.ತಿ.ನ. ಅವರು ಕಾಣುವ ಸೂರ್ಯೋದಯ ಇದು :

ದಾನವಹೃತ ಮೇದಿನಿಯಂ
ದಂಷ್ಟ್ರಾಗ್ರದೊಳಿರಿಸಿ
ಭೂದಾರಂ ಪಾತಾಳವ

ಸುಳಿದೆದ್ದನೊ ಎನಿಸಿ
ದೂರದಿಗಂತದೊಳೊಪ್ಪಿರೆ
ರವಿ ಮಂಡಿತ ಶೃಂಗಂ

ವರಾಹವತಾರ ಕಾಲದಲ್ಲಿ ಭೂದೇವಿಯನ್ನೆತ್ತಿ ತಂದ ವಿಷ್ಣುವಿನ ಲೀಲೆಯ ಭವ್ಯ ಚಿತ್ರ ಈ ಮೂಲಕ ಕಟ್ಟುತ್ತದೆ. ಯುಗ ಯುಗಗಳನ್ನೆ ಹೊತ್ತು ಮೇಲಿರುವ ಸೂರ್ಯ 'ಚಲ ನಿಶ್ಚಲ ತೇಜೋಗೋಳವ ಬೆಂಕಿಯ ಬಾನಾಡಿ'ಯಾಗಿ 'ಪ್ರಾತಃಸ್ತೇಜ' ಎಂಬ ಕವನದಲ್ಲಿ ಇವರಿಗೆ ಕಂಡಿದೆ.

ಋತುಚಕ್ರದಲ್ಲಿ ಲೋಕಕ್ಕೆ ಸುಖಸೌಂದರ್ಯಗಳನ್ನು ನೀಡುವ ಸೂರ್ಯನ ಮಹಿಮೆಯನ್ನು ವಿ.ಸೀ. ಹೀಗೆ ಬಣ್ಣಿಸುತ್ತಾರೆ.

ಕಾಲಕ್ಕೆ ಚಲನೆಯನ್ನಿತ್ತು ನಿರ್ಧರಿಪಾತ
ಲೀಲೆ ಮಿಗೆ ಋತುಧರ್ಮ ನಡೆಸುವಾತ
ಕಾಲಾಗ್ನಿರುದ್ರನ ಫಾಲದಲ್ಲುರಿವಾತ
ಮೂಲೋಕ ಸೌಂದರ್ಯ ಸೌಖ್ಯದಾತ

ಬೆಳಕನ್ನು ಸ್ವಾಗತಿಸುತ್ತ ಆನಂದಕಂದರು -

ಹೊರಗೊಳಗು ಕತ್ತಲೆಯೆ ತುಂಬಿಹುದೊ
ಕಿರುಸೊಡರ ಮಿಣುಕು ಮನೆಯೆಂತಹುದೊ
ಉರಿಪಂಜುಗಳನೆಂತು ನಂಬುವದೋ

ನೀ ಬೇಕೆಂಬುದೆ ಎಲ್ಲರ ಬಯಕೆ
ಬಾ, ತರಣಿಯ ತುಂಬಿದ ಹೊಂಬೆಳಕೇ

ಎಂದು ಬಾಳಿನಲ್ಲಿ ನಿರಾಸೆಗೊಳ್ಳದೆ, ತುಂಬಿದ ಹೊಂಬೆಳಕಿಗೆ ಹಂಬಲಿಸಿದ್ದಾರೆ.

ಮತ್ತ ದಿಗ್ಗಜದಂತೆ ಬಂದನು
ಸೂರ್ಯ ಕಣ್ಣ ಕಿಸಿದು
ರತಿಯನರಸಿ ಮನ್ಮಥನೇ ಬಂದನು
ಕಾಮ ಕ್ಷುಧೆಗೆ ಹಸಿದು

ಭೂದೇವಿಯ ಮಂಗಲಗರ್ಭವು ಬೆಳೆದು ಆಶೆಯ ಅನಂತ ಸಂತತಿಯನ್ನು ಸೂರ್ಯದೀಧಿತಿಯು ಸಂವರ್ಧಿಸಿ ತೋರೆವುದೆಂದು ಕವಿ ನುಡಿದಿದ್ದಾರೆ.

ಜಗದ ತುಂಬ ಬೆಳಕಿನ ತೂರ್ಯವನ್ನೂದುತ್ತ ಬರುವ ಸೂರ್ಯನು

ಇಳೆಗೆ ಕಾದಲನಂತೆ ಕಾವನಿತ್ತು
ಸುರುವಿ ಬೆಚ್ಚಗೆ ಬಸಿರಿನಲ್ಲಿ ತನ್ನಗ್ನಿಯನು

ಸೃಜನದೊಂದುತ್ಸಾಹದಿಂದ ಹಗಲುದ್ದಕೂ
ಗಹಗಹಿಸಿ ಅವ ನಕ್ಕ ನಗೆಯೇನು,
ಬದುಕಿಸಿದೆ ನಮ್ಮನ್ನು ಅವನ ಔದಾರ್ಯ
ಅವ ನಮ್ಮ ಒಕ್ಕಲಿಗ, ಅವ ನಮ್ಮ ಆರ್ಯ
ಸೂರ್ಯ

ಎಂದು ಭಾವದ ಉತ್ಕಟತೆಯನ್ನು ವಿವರಪೂರ್ಣವಾಗಿ ಸಾಧಿಸಿ. ತೋರಿಸುತ್ತದೆ ಗಂಗಾಧರ ಚಿತ್ತಾಲರ 'ಸೂರ್ಯಗೀತ'.

'ಆಹ, ಪ್ರಾತಃಕಾಲದಲ್ಲಿ ಬೆಳಕಿನದಾಹ' ಎಂಬ ವಿರೋಧಾಭಾಸದ ತೀವ್ರತೆಯನ್ನು ಅಡಿಗರು ವ್ಯಕ್ತಪಡಿಸಿದರೆ, "ಬೊಗಸೆಗಂಗಳ ತೆರೆದು ಮೊಗೆ ಮೊಗೆದು ಕುಡಿದರೂ ಈ ಪುರಾತನ ದಾಹ ತೀರದಲ್ಲಾ" ಎಂದು ಕಣವಿ ಸೌಂದರ್ಯದ ಚಿರಂತನ ದಾಹಕ್ಕೆ ಅಚ್ಚರಿಗೊಳ್ಳುತ್ತಾರೆ. ಭಾರತದಲ್ಲಿ ಬ್ರಿಟಿಷ್ ಸಾಮ್ರಾಜ್ಯಶಾಹಿ ಕೊನೆಗೊಂಡ ಸಂದರ್ಭದಲ್ಲಿ ಅವರೇ ಸಂಜೆಯ ಸೂರ್ಯನನ್ನು ಹೀಗೆ ಪ್ರತಿಮಿಸಿದ್ದಾರೆ.

ಮುಳುಗುತಿಹ ನೇಸರನು ಮುದಿಸಿಂಹನಂತಾಗಿ
ಪಶ್ಚಿಮಾದ್ರಿಯ ಗವಿಯ ಸೇರುತಿಹನು
ತನ್ನ ಸರ್ವಾಧಿಕಾರಿತ್ವ ಕೊನೆಗೊಳ್ಳುತಿರೆ
ಲೋಗರೆಡೆ ಕೆಕ್ಕರಿಸಿ ನೋಡುತಿಹನು.

ಬಾಳಿನ ವಿಕೃತಿಯನ್ನು ಯಾಂತ್ರಿಕವಾದ ನಾಗರಿಕ ಜೀವನದ ಜುಗುಪ್ಸೆಯನ್ನು ಲೋಕಾನುಭವದ ತುಮುಲದಲ್ಲಿ ನಿಲ್ಲಿಸುವ ಆಧುನಿಕ ಪರಿಸರದ ನವ್ಯ ಸಂವೇದನೆ ತೀರ ಭಿನ್ನವಾಗಿರುವುದನ್ನು ಅರವಿಂದ ನಾಡಕರ್ಣಿಯವರ 'ಸೂರ್ಯ' ಕವನ ಸೂಚಿಸುತ್ತದೆ.

ಬರಿದೇಕೆ ಕಿಟಕಿಕಿಟಕಿಯಲಿ ಹಣಿಕಿ
ಕೆಣಕುವೆ ಎಲೆಲೆ ಸೂರ್ಯ, ಕುಹಕಿ?
ಲಡ್ಡುಲಡ್ಡಾದ ಹಳೇ ಕೋಚಿನ ಕುದುರೆ
ಕೆನೆದು ಕೆಡತೆ ನಿನ್ನನೊಂದೆ ತುಳಿತಕ್ಕೆ ನೆಲಕ್ಕೆ ?
ಈ ಗಜಿಬಿಜಿ ಕುಳಿಗೆ?
ಸೊಕ್ಕಿದಂಧಕಾರ ಧೀಂಕಿಡುವ ನಗರ ರಂಗಸ್ಥಳಕ್ಕೆ?
ಅಜ್ಜನಿತ್ತರ್ಘ್ಯ ಪುಕ್ಕಟೆ ತಿಂದೇ
ಬೊಜ್ಜು ಬೆಳೆದಿದೆ ನಿನಗೆ, ಆದಕೇ ದಂಥೆ
ಹೋಗಲೇ ಹೋಗು ಪೂರ್ವಾಚಲ ಮರೆಗೆ
ದಿನದ ಸೂಟುಬೂಟಿನಲಿ ಪುನೀತನಾಗಿ

ಕಾಲಸೇರಿಸಿ ಹೊರಬಿದ್ದಾಗ ಬಾ
ಆಗ ನೀನೆ ವಿಶ್ವದೀಪ.

ತೀವ್ರವಾದ ಸಾಮಾಜಿಕ ಪ್ರಜ್ಞೆಯ ಹಿನ್ನೆಲೆಯಲ್ಲಿ, ಸಾಮಾಜಿಕ ಶಿಷ್ಟಾಚಾರಗಳನ್ನೂ ಲಕ್ಷಿಸದೆ, ಅನುಭವವನ್ನು ಶೋಧಿಸಿಕೊಳ್ಳುವ ಶ್ರೀಕೃಷ್ಣ ಆಲನಹಳ್ಳಿ ಅವರಿಗೆ ಊರಿನಲ್ಲಿ ಬೆಳಗಾದದ್ದು ಹೀಗೆ :

ಇರುಳ ಬೆತ್ತಲೆ ತೆಕ್ಕೆ ಬಿಡಿಸಿಕೊಂಡೆದ್ದ
ಸೂರ್ಯ; ಜಿಬರೆಗಣ್ಣೊರಸುತ್ತಾತಕಳಿಸಿ,
ಕೊಬ್ಬಿದಾಡು, ಕುರಿ, ಕೋಳಿ ಸಿಗಿದು ಸೀಳಿ
ಕಂದು, ನೀಲಿ, ಬಿಳಿ, ಕೆಂಪು ಖಂಡಗಳ ತೂಗಿಟ್ಟು
ಬಣ್ಣಬಣ್ಣದ ಮೂಡಣದ ಮಾಂಸದಂಗಡಿ ತೆರೆದಾಗ
ನನ್ನೂರಿನಲ್ಲಿ ಬೆಳಗಾಯಿತು.

ಸೂರ್ಯನನ್ನು ಕುರಿತು ಒಂದಲ್ಲ, ಎರಡಲ್ಲ, ನಲವತ್ತೆಂಟು 'ಕಲ್ಪನೆ'ಗಳ ಒಂದು ವಿನೂತನ ಸಂಗ್ರಹ ಶಾ. ಬಾಲೂರಾಯರ 'ಸೂರ್ಯ ಇವನೊಬ್ಬನೇ'. ಒಂದು ವಸ್ತುವನ್ನು ಹಲವು ಬಗೆಯಾಗಿ ಕಂಡು ಒಂದೊಂದು ರೂಪ, ಭಾವದಲ್ಲಿ ಸೆರೆಹಿಡಿದು ಚಿತ್ರಿಸುವದು ಇಲ್ಲಿಯ ವೈಶಿಷ್ಟ್ಯ ಅವುಗಳಲ್ಲಿ ಒಂದು ಅಪರೂಪದ ಚಿತ್ರವನ್ನು ಇಲ್ಲಿ ಉದಾಹರಿಸಬಹುದು.

ಮುಂಜಾನೆ
ನಾವು ನೀವೇಳುವ ಮೊದಲೇ ಎದ್ದು
ಕೋಟಿ ಕಡ್ಡಿಗಳ ಕಸಬರಿಕೆ ಹಿಡಿದು
ಆಕಾಶದುದ್ದಕ್ಕೂ ಹಾದಿಬೀದಿಗಳಲ್ಲಿ
ಮಂಜುಧೂಳನ್ನು ಗುಡಿಸಿ
ಬೆಳಕು ನೀರನ್ನು ಸಿಂಪಡಿಸಿ
ಇದೊ ಜರ್ಬಾಗಿ ಎಲೆಅಡಿಕೆ ಜಗಿಯುತ್ತ
ನಿಂತಿದ್ದಾನೆ ನೋಡಿ
ಜಾಡಮಾಲಿ.

ರವಿ ಕಾಣದುದ್ದನ್ನು ಕವಿ ಕಾಣುತ್ತಾನೆ ಎಂದು ಹೇಳುವದುಂಟು. ಕವಿಯೇ ರವಿಯನ್ನು ಹೇಗೆ ಕಂಡಿದ್ದಾನೆ ಎಂಬುದನ್ನು ಕನ್ನಡ ಕಾವ್ಯದ ಕೆಲವು ಉದಾಹರಣೆಗಳಿಂದ ಮೇಲೆ ನಿರೂಪಿಸಲು ಯತ್ನಿಸಲಾಗಿದೆ. ಋಷಿಗಳಿಗೆ ಜಗಚ್ಚಕ್ಷುವಾಗಿ ಕಂಡ ಸೂರ್ಯ ಇಂದಿಗೂ ಆಯಾ ಕಾಲದ ಕವಿಗಳಿಗೆ ಅವರವರ ಪ್ರತಿಭೆಗನುಗುಣವಾಗಿ ಸ್ಫೂರ್ತಿಯ ಸೆಲೆಯಾಗಿದ್ದಾನೆ.

(ಸಮತೋಲನ : ೧೯೮೯)

೧೩

## ರಸಿಕನಾಡಿದ ಮಾತು

"ಯಾವ ಕಾರಣದಿಂದಲೆ ಆಗಲಿ ಯಾವುದರಲ್ಲಿ ಮನಸ್ಸು ದೃಢವಾಗಿ ನಿಲ್ಲುವದೊ, ಅದನ್ನನುಭವಿಸುವಾಗ ನಮಗೆ ನಿರತಿಶಯಾನಂದವಾಗುವದೊ, ಅಂತಹ ಆನಂದವನ್ನು ಸಾಧಿಸಲು ಪ್ರಯತ್ನಿಸುವದೇ ರಸಿಕತ್ವಕ್ಕೆ ಲಕ್ಷಣ" ಎಂಬುದಾಗಿ ವಿದ್ವಾಂಸರೊಬ್ಬರು ವ್ಯಾಖ್ಯಾನ ಮಾಡಿದ್ದಾರೆ. ತನ್ನ ಮನಸ್ಸಿಗೆ ಆನಂದವನ್ನು ಕೊಡುವ ಭೋಗಾನುಭವದಲ್ಲಿ ರಸಿಕನು ಕಷ್ಟಸುಖಗಳನ್ನಾಗಲಿ, ಲಾಭನಷ್ಟಗಳನ್ನಾಗಲಿ, ಧರ್ಮಾಧರ್ಮವನ್ನು ಕೂಡ ಲೆಕ್ಕಿಸದೆ ಕೆಲಸ ಮಾಡುತ್ತಾನೆ. ಆದರೆ ಭೋಗ ಪಡುವವರೆಲ್ಲ ರಸಿಕರೆಂದು ಹೇಳಲುಬಾರದು. "ಭೋಗವಸ್ತುಗಳನ್ನು ಹೊತ್ತು-ಗೊತ್ತು, ಹವಣು-ಹಾಳತ, ರೀತಿ-ರಂಜನೆ ಇದನ್ನರಿತು ಭೋಗಿಸುವವನು ನಿಜವಾದ ರಸಿಕ, ಅನುಭವದಿಂದ ರಸಿಕತೆ ಸಿದ್ಧಿಸಿ ಒಂದು ನೆಲೆಗೆ ಬರಬೇಕಾದರೆ ತಕ್ಕಮಟ್ಟಿಗೆ ವಯಸ್ಸು ಆಗಬೇಕು".

ರಸಿಕ ಸತ್ವಸಂಪನ್ನ ಉದಾರಿ. ಹಣ್ಣು ಹಂಚಿತಿನ್ನುವ, ಹೂವು ಕೊಟ್ಟು ಮುಡಿಯುವ ಸ್ವಭಾವ ಅವನದು. ತಾನು ಪಡುವ ಸುಖ ಸಂತೋಷಗಳನ್ನು ನಗು-ನಲಿವುಗಳನ್ನು ಇತರರೂ ಪಡಲಿ ಎಂದು ಆಶಿಸುವವನು. ನಾಲ್ಕು ಜನ ಸಮಾನ ಮನೋಧರ್ಮದವರು ದೊರೆತರೆ ಅವನಿಗೆ ಹಿಗ್ಗು. ಸುಮ್ಮಸುಮ್ಮನೆ ರೇಗಿ, ಕೋಪ ಮಾಡಿಕೊಂಡು ತನ್ನ ಮನಸ್ಸಮಾಧಾನವನ್ನು ಕೆಡಿಸಿಕೊಳ್ಳಲು ಅವನು ಇಷ್ಟಪಡುವುದಿಲ್ಲ. ಅಂಥ ಪ್ರಸಂಗಗಳು ಆದಷ್ಟು ಒದಗದಂತೆ ಸರಸವಾದ ಮಾತಿನಿಂದ ವ್ಯಂಗ್ಯಪೂರ್ಣವಾದ ನುಡಿಯಿಂದ, ಮಧುರಹಾಸ್ಯದಿಂದ ವಾತಾವರಣದಲ್ಲಿ ಗೆಲುವನ್ನುಂಟು ಮಾಡುತ್ತಾನೆ. ರುಚಿಯ ಹಾಗೂ ಗುಣದ ತಾರತಮ್ಯವನ್ನರಿತು ಬಳಸಿಕೊಳ್ಳುವ ಹೃದಯಧರ್ಮ ರಸಿಕನ ಸಂಸ್ಕಾರದಲ್ಲಿರುತ್ತದೆ.

ರಸಿಕನದು 'ಹೊತ್ತಿಗೊದಗುವ ಮಾತು', ಅದೂ ಹೊಲಬನ್ನರಿತದ್ದು.

ಹೊಲಬನರಿಯದ ಮಾತು ತಲೆಬೇನೆ ಎದ್ದಂತೆ
ಹೊಲಬರಿತು ಒಂದ ನುಡಿದಿಹರೆ । ಅದು ದಿವ್ಯ
ಫಲಪಕ್ವದಂತೆ ಸರ್ವಜ್ಞ.

ಹೀಗೆ ಹೊಲಬರಿತು ಆಡುವ ಅವನ ಒಂದೊಂದು ಮಾತೂ ರಸವತ್ತಾದ, ಅತ್ಯಂತ ರುಚಿಕರವಾದ, ಮಾಗಿದ ಹಣ್ಣಿನಂತೆ. ಸರ್ವಜ್ಞನು ಹೇಳುವ ಲೋಕಾನುಭವದಲ್ಲಿ ರಸಿಕತೆಗೂ

ಸಾಕಷ್ಟು ಸ್ಥಾನ ಕೊಟ್ಟಿದ್ದಾನೆ. ಅವನು ವಿರಾಗಿಯಂತೆ ಕಂಡರೂ ಜೀವನದ ಸೌಂದರ್ಯಕ್ಕೆ, ಅದರ ಸೊಗಸಿಗೆ ಅವನು ಕಣ್ಣುಮುಚ್ಚಿಕೊಂಡವನಲ್ಲ. ಅಷ್ಟೇ ಅಲ್ಲ, ಅದರ ಸುಖಾನುಭವವನ್ನೂ ಹೇಳಿಕೊಟ್ಟವನು. ಅವನಾಡುವ ಮಾತುಗಳಲ್ಲಿ ಇದನ್ನು ವೆಗ್ಗಳವಾಗಿ ಕಾಣಬಹುದು. ಕಡುಬೇಸಿಗೆ ಸಾಮಾನ್ಯವಾಗಿ ಎಲ್ಲರಿಗೂ ಬೇಸರ ತರುವಂಥದು, ಅಲ್ಲವೆ? ಇಂಥ ಬೇಸಿಗೆಯು ಹಿಂಗದೇ ಇರಲಿ ಎಂದು ಸರ್ವಜ್ಞನುಡಿದಾಗ ಯಾರಿಗಾದರೂ ಅಚ್ಚರಿಯಾಗಬಹುದು. ಆದರೆ ಅವನ ರಸಿಕ ಮನೋಧರ್ಮ ಅದರಲ್ಲೂ ಒಂದು ಸೊಗಸನ್ನು ಅನುಭವಿಸುತ್ತದೆ. ಅದು ಹೇಗೆ ?

ಅಂಗನೆಯು ಗುಣೆಯಾಗೆ । ಅಂಗಳದಿ ಹೊರಸಾಗೆ
ತಂಗಾಳಿ ಜೊನ್ನದಿರುಳಾಗೆ । ಬೇಸಿಗೆಯು
ಹಿಂಗದಿರಲೆಂದ ಸರ್ವಜ್ಞ.

ರಸಿಕತೆಗೆ ದೊಡ್ಡ ಶ್ರೀಮಂತಿಕೆಯೇ ಬೇಕೆಂದೇನಿಲ್ಲ. ರಸಿಕನಿಗೆ ಬೇಕಾದದ್ದು ಹಣವಲ್ಲ, ಇದ್ದುದರಲ್ಲಿಯೇ ಅದರ ಸ್ವಾರಸ್ಯವನ್ನು ಹೀರಿ ಸಂತೋಷಗೊಳ್ಳುವ ಗುಣ. ಸಣ್ಣ ಸಣ್ಣ ಸಂಗತಿಗಳಲ್ಲೂ ಇರುವ ಸೊಗಸನ್ನು, ಅದನ್ನು ಸವಿಯುವ ರೀತಿಯನ್ನೂ ಅವನು ಬಲ್ಲ. ಕೇಳಿ:

ಹರಕು ಹೋಳಿಗೆ ಲೇಸು ; ಮುರುಕು ಹಪ್ಪಳ ಲೇಸು
ಕುರುಕುರೂ ಕಡಲೆ ಬಲು ಲೇಸು; ಪಾಯಸದ
ಸುರುಕು ಲೇಸೆಂದ ಸರ್ವಜ್ಞ.

ಹೋಳಿಗೆ ಹರಿದಿದ್ದರೆ ಅದರ ಹೂರಣವೂ ಬೆಂದು ಅದಕ್ಕೊಂದು ರುಚಿ, ಅಲ್ಲದೆ ಪಚನಕ್ಕೂ ಸಹಾಯ. ಹಪ್ಪಳವನ್ನು ಇಡಿಯಾಗಿಯೇ ಬಾಯಲ್ಲಿ ಕಡಿದು ಗಂಟಲಕ್ಕೆ ಘಾಟು ಅಡರಿದಾಗ ಕಸಿವಿಸಿ ಪಡುವ ಹುಂಬನೆಲ್ಲಿ? ಅದನ್ನು ಅಷ್ಟಷ್ಟೇ ಮುರಿದು ಮುಖ್ಯ ಪದಾರ್ಥದೊಡನೆ ರುಚಿಯಾಗಿ ವ್ಯಂಜಿಸಿಕೊಳ್ಳುವ ರಸಿಕನೆಲ್ಲಿ ? ಮಕ್ಕಳೊಂದಿಗೆ ಮಾತಾಡುತ್ತ, ಕಥೆ ಹೇಳುತ್ತ ನಡುನಡುವೆ ಕಡಲೆಯನ್ನು ಕುರುಕುರು ತಿನ್ನುತ್ತ ಇದ್ದರೆ ಬಾಯಿಗೂ ರುಚಿ, ಕಥೆಗೂ ರುಚಿ. ಮೇಜಿನ ಮೇಲೆ ಪಾಯಸದ ಬಟ್ಟಲನ್ನಿಟ್ಟುಕೊಂಡು ಚಮಚೆಯಿಂದ ತಿನ್ನುವದು ನಾಗರೀಕತೆಯ ಲಕ್ಷಣವಾಗಿ ತೋರಬಹುದು. ಆದರೆ ಅದು ತೋರಿಕೆಯ ಆಡಂಬರದ ಸುಖ. ನಿಜವಾದ ಸೊಗಸಿರುವುದು ಚೆನ್ನಾಗಿ ನೆಲದ ಮೇಲೆ ಕುಳಿತು, ತೋಳೇರಿಸಿ, ಕೈಯಿಂದಲೇ ಪಾಯಸವನ್ನು ಸುರಕ್ ಎಂದು ಸವಿದಾಗ; ಅದರ ರುಚಿ ರಸಿಕನಿಗೆ ಮಾತ್ರ ಗೊತ್ತು.

ನಮ್ಮ ಕೊರತೆಗಳನ್ನು ಕುರಿತು ಆಡಿಕೊಳ್ಳುವಾಗಲೂ ಮಧುರವಾದ ಹಾಸ್ಯದಿಂದ, ಮಾತಿನ ಚಮತ್ಕಾರದಿಂದ ರಸಿಕನಾಡುವ ಮಾತು ಅದರ ಕಹಿಯನ್ನು ಮರೆಸಿಬಿಡುತ್ತದೆ :

ನಲ್ಲ ಒಲ್ಲಿಯನೊಲ್ಲ ; ನೆಲ್ಲಕ್ಕಿ ಬೋನೊಲ್ಲ
ಅಲ್ಲವನು ಒಲ್ಲ ; ಮೊಸರೊಲ್ಲ, ಯಾಕೊಲ್ಲ
ಇಲ್ಲದಕ ಒಲ್ಲ ಸರ್ವಜ್ಞ.

ನಮ್ಮ ಹಳ್ಳಿಯ ಜನಸಾಮಾನ್ಯರಲ್ಲಿರುವ ರಸಿಕತೆ ಯಾರಿಗೂ ಕಡಿಮೆಯಾದದ್ದಲ್ಲ. ಇಂಥ ವ್ಯಕ್ತಿಗಳನ್ನು ಚಿತ್ರಿಸುವ 'ನಮ್ಮ ಊರಿನ ರಸಿಕರು' ಎಂಬ ಪುಸ್ತಕವನ್ನೇ ಶ್ರೀ ಗೊರೂರು ಬರೆದರು. ಈ ಜನ ಆಡುವ ಮಾತುಗಳಲ್ಲಿ, ಉಪಯೋಗಿಸುವ ಗಾದೆಗಳಲ್ಲಿ ಅವರ ಜೀವನಾನುಭವ ಹಾಗೂ ರಸಿಕತೆ ಅದೆಷ್ಟು ಸಹಜವಾಗಿ ಹೊರಹೊಮ್ಮಿರುತ್ತದೆ; 'ಅತ್ತೆಯ ಮನೆಯಲ್ಲಿ ಹೇಗಿರುವೆ ಮಗಳೇ ?' ಎಂದು ಕೇಳಿದರೆ, ಆ ಮನೆಯಲ್ಲಿ ಯಾರೂ ಕಾಣದಂತೆ ಒಳಗೇ ಸಣ್ಣಗೆ ನೋವನ್ನನುಭವಿಸಿದ ಮಗಳು ಉತ್ತರ ಕೊಡುತ್ತಾಳೆ : 'ಚಿಲುಕಕ್ಕೆ ಮೊಳಕೈ ತಗುಲಿದ ಹಾಗೆ' ಎಂದು. ಪೆಟ್ಟು ಸಣ್ಣದು ಆದರೆ ನೋವು ದೊಡ್ಡದು ಎನ್ನುವ ಭಾವವನ್ನು ಅವಳ ಮಾತು ಎಷ್ಟೊಂದು ಅಡಕವಾಗಿ ಸೂಚಿಸುತ್ತದೆ ! 'ಮೊದಲೇ ಚೆಲುವೆ ಇನ್ನು ನಕ್ಕರೆ ಹೇಗೆ?' ಎಂದು ಊಹಿಸಿಕೊಳ್ಳುತ್ತದೆ - ಇನ್ನೊಂದು ರಸಿಕ ಮನಸ್ಸು. 'ಅಜ್ಜಾ ಮದುವೆ ಅಂದರೆ, ಯಾರಿಗೆ ನಂಗಾ? ಅಂದನಂತೆ ?' ಹೇಗಿದೆ ಈ ಜನರ ಹಾಸ್ಯಪ್ರಜ್ಞೆ? 'ಮುತ್ತಿನಂಥಾ ಕೊಂಡಿಯಿಂದ ಮೆತ್ತಗೆ ಮುಟ್ಟಿದರೆ, ಕತ್ತೆಯ ಹಾಗೆ ಬಾಯಿ ಕಿಸಿದ' ಎಂದಿತಂತೆ; ಯಾವುದು? ಚೇಳು.

ಇಂಥ ರಸಿಕರಾಡಿದ ಮಾತಿನಿಂದಲೇ ಜನಪದ ಸಾಹಿತ್ಯದ ಬಹುಪಾಲು ತನ್ನ ಸತ್ವವನ್ನೂ ಕಂಪನ್ನೂ ಇನ್ನೂ ಉಳಿಸಿಕೊಂಡಿದೆ. ತಾಯಿ ಮಗಳನ್ನು ತವರಿಗೆ ಕರೆದರೆ, ಸಮರಸ ದಾಂಪತ್ಯದ ಸುಖವನ್ನನುಭವಿಸುತ್ತಿರುವ ಮಗಳು ಹೇಳುತ್ತಾಳೆ.

ಹಚ್ಚಡದ ಪದರಾಗ ಮುಚ್ಚಿ ಮಲ್ಲಿಗಿ ಹೂವ
ಬಿಚ್ಚಿ ನನಮ್ಯಾಲ ಒಗಿವಂಥ ರಾಯರನ
ಬಿಟ್ಟು ಬರಲ್ಯಾಂಗ ಹಡದವ್ವ

ಹಾಗೆಯೇ ಆಕೆಯ ಗಂಡನೂ ತನ್ನ ಈ ಒಲುಮೆಯ ಹೆಂಡತಿಯನ್ನು ಅಗಲಿ ಇರಲಾರ:

ಕಾಮಕಸ್ತೂರಿ ನಿನ್ನ ಕಾಣದಲೆ ಇರಲಾರೆ
ಮಲ್ಲೀಗಿ ಮಾಲೆ ಮರಿಲಾರೆ ; ಕ್ಯಾದಿಗಿಯ
ಗರಿಯೆ ನಿನ್ನಗಲಿ ಇರಲಾರೆ

ಹೀಗೆ ಪ್ರೇಮದ ಸರುಗಂಪಿನಿಂದ ತುಂಬಿ ತುಳುಕುತ್ತದೆ ದಂಪತಿಗಳ ಈ ಮಾತಿನ ರಸಿಕತೆ.

ರಸಿಕ ನಿಸರ್ಗ ಪ್ರೇಮಿ. ಪ್ರಕೃತಿ ಸೌಂದರ್ಯವನ್ನು ಮನಸಾರೆ ಸವಿದು, ಅದರಿಂದ ರಸೋನ್ಮಾದವನ್ನೂ ಪಡೆಯಬಲ್ಲವನು. ಒಂದೊಂದು ಗಿಡಮರವೂ ಅವನಿಗೆ ಚೈತನ್ಯದಿಂದ ತುಂಬಿ ತುಳುಕುವ ವಸ್ತು. ತಳಿತ, ಹೂತ ಮಾವಿನಮರವನ್ನು ಕಂಡಾಗ ಪಂಪನ ರಸಿಕತೆ ಮೇರೆ ಮೀರಿ ಹರಿಯುತ್ತದೆ.

ತಳಿರೋಳ್ ನೀನೆ ಬೆಡಂಗನಯ್, ನನೆಗಳೊಳ್ ನೀ ನೀರನ್ನೆ
ಪುಷ್ಪ ಸಂಕುಳದೋಳ್ ನೀನೆ ವಿಲಾಸಿಯೈ
ಮಿಡಿಗಳೋಳ್ ನೀ ಚೆಲ್ವನೈ

ಪಣ್ತ ಪಣ್ಗಳಿಂ ಓವೊ ಪೆರತೇನೊ ನೀನೆ ಭುವನಕ್ಕಾರಾಧ್ಯನೈ
ಭೃಂಗ ಕೋಕಿಳಕೀರಪ್ರಿಯ ಚೂತರಾಜ
ತರುಗಳ್ ನಿನ್ನಂತೆ ಚೆನ್ನಂಗಳೆ?

ಎಂದು ಸಲಿಗೆಯಿಂದ ಹಾಡಿ ಹೊಗಳಿ ಆ ಮರದ ಸೌಂದರ್ಯವನ್ನೆಲ್ಲ ಸೂರೆಗೊಳ್ಳುತ್ತಾನೆ. 'ರಸಿಕ ಚಕ್ರಿ'ಯೆನಿಸಿದ ಹರಿಹರ ಕವಿ ಹಣ್ಣನ್ನು ಸವಿಯುವ ಗಿಳಿಯ ಚಿತ್ರವೊಂದನ್ನು ಸ್ವಭಾವೋಕ್ತಿಯಿಂದ ಜೀವಂತಗೊಳಿಸಿ ಹೀಗೆ ಚಿತ್ರಿಸುತ್ತಾನೆ :

ಬಿಗಿಯಪ್ಪಿ, ಮೊಗಮನಿಟ್ಟಾ
ಲಿಗಳವು ನಸುಮುಚ್ಚಿ, ಪಕ್ಷಯುಗಳಮಳಲೆ, ರಸ
ದೆಗೆವ ದನಿ ನಿಮಿರೆ, ನಾಲಗೆ
ಚಿಗುರುತ್ತಿರೆ ಸವಿದುದೊಂದು ಗಿಳಿ ತನಿವಣ್ಣಂ

ಇಲ್ಲಿ ಗಿಳಿ ಹಣ್ಣನ್ನು ಸವಿಯುವ ರೀತಿ ನಿಜವಾದ ರಸಿಕನು ಸುಖವನ್ನು ಭೋಗಿಸುವ ರೀತಿಯದು. ಹಣ್ಣನ್ನು ಸವಿಸವಿದಂತೆ ಗಿಳಿಯ ನಾಲಗೆಯೂ ಚಿಗುರತೊಡಗಿತಂತೆ, ಇದೀಗ ನಿಜವಾದ ರಸಿಕನಾಡುವ ಮಾತು.

ರಸಿಕ ನಕ್ಕು ನಗಿಸುವವನಲ್ಲದೆ ಎರಡನೆಯವರನ್ನು ಪರಿಹಾಸ್ಯ ಮಾಡಿ ವಿನೋದ ಗೊಳ್ಳುವವನಲ್ಲ. ತಾನೂ ನಕ್ಕು ಇತರರನ್ನೂ ನಗಿಸಿ ನಲಿಸುವ ಕಲೆಯನ್ನು ಅವನು ಅರಿತವನು. ನವಿರಾದ ಹಾಸ್ಯ, ಸೂಕ್ಷ್ಮವಾದ ವ್ಯಂಗ್ಯವುಳ್ಳ ಸರಸ ಸಂಭಾಷಣೆ ಅವನ ವ್ಯಕ್ತಿತ್ವದ ಜೀವಾಳ. ಶ್ರೀರಾಮನ ಅಶ್ವಮೇಧ ಕತೆಯನ್ನು ತಿರುಳ್ಗನ್ನಡದಲ್ಲಿ ನವರಸಭರಿತವಾಗಿ ಹೇಳಹೊರಟ ಮುದ್ದಣ, ಮನೋರಮೆಯ ಒಪ್ಪಿಗೆ ಪಡೆದು, ತನ್ನ ಮನೋರಮೆಯನ್ನು ರಸಿಕ ಮನೋರಾಜ್ಯದ ಪಟ್ಟಕ್ಕೇರಿಸಿದಾಗಿನ ಅವರ ಸಂಭಾಷಣೆಯನ್ನು ಕೇಳಿ :

ಮುದ್ದಣ್ಣ : ಆದಂತಿರ್ಕೆ, ಇಂತಪ್ಪ
ಕತೆಯಂ ಬಿತ್ತರಿಸಿದೊಡೆ ಅರಮನೆಯೊಳ್ ರನ್ನ
ಕಡಗಮಂ, ಪೊನ್ನ ಕಂಠಿಕೆಯಂ ಮೆಚ್ಚನೀವರ್
ನೀನೀವುದೇಂ?

ಮನೋರಮೆ : ಪೆರತೇಂ ಎನ್ನನೆ ನಾನೀವೆಂ

ಮುದ್ದಣ : ಬಲ್ಲಡಸುಗಾರ್ತಿಯೈಸೆ ಅರಿಯೆಯಾ
ಮುನ್ನಮೆ ನಿನ್ನ ತಾಯ್ತಂದೆಯರ್ ಎನಗೆ
ಇತ್ತರೆಂಬುದಂ

ಮನೋರಮೆ : ಇದೇತರ ನುಡಿ ; ಪೋಕೆ

ಆಂ ಪರಾಧೀನೆಗಡ: ಪುರಾಣಮಂ ಓದಿದ
ಬಳಿಕಮಲ್ತೆ ದಕ್ಷಿಣೆಯನೀವುದು?
ಅರಮನೆಯವರು ಕಬ್ಬಮಂ ಕಂಡಲ್ತೆ ಕಜ್ಜಳಿ
ಯನಿತ್ತಪರ್, ಆನುಂ ಕತೆಯಂ ಕೇಳ್ದು ಸೊಗಸಾಗೆ ಬಲ್ಲಂತೆ
ಸುಮ್ಮಾನಿಸುವೆಂ

ಮುದ್ದಣ್ಣ : ಒಳ್ಳಿತೊಳ್ಳಿತು, ಕತೆಯನಾಲಿಸಿ,
ಲಾಲಿಸಿ ಬಳಿಕ್ಕ ಈಯೆನೆಂದೊಡೆ ಬಿಡೆಂ, ನೋಳ್ಪೆಂ

ಮನೋರಮೆ : ಆನುಂ ನೋಳ್ಪೆಂ, ಕತೆಯ
ಪುರುಳು ಎಂತಿರ್ಕುಂ ಎಂದು.

ಬಡತನದಲ್ಲಿ ಕಷ್ಟಜೀವನವನ್ನು ಕಳೆದಿದ್ದ ಈ ದಂಪತಿಗಳು ಕನ್ನಡಿಗರ ಹೃದಯ ಸಿಂಹಾಸನದಲ್ಲಿ ವಿರಾಜಮಾನರಾದದ್ದು, ಅವರು ರಸಿಕ ಸಾಮ್ರಾಜ್ಯದ ರಾಜರಾಣಿಯರಾಗಿ ಒಲವನ್ನೆ ತಮ್ಮ ಬದುಕನ್ನಾಗಿ ಮಾಡಿಕೊಂಡಿದ್ದರಿಂದಲ್ಲವೆ ?

ತನಗೆ ಒಬ್ಬಳೇ ಮಗಳು ಎಂದು ಕಾಳಜಿ ಮಾಡುತ್ತಿರುವ ಮಾವನವರಿಗೆ ನರಸಿಂಹಸ್ವಾಮಿಯವರ ಕವಿತೆಯಲ್ಲಿರುವ ಅಳಿಯ 'ಒಬ್ಬಳೇ ಮಗಳೆಂದು ನೀವೇಕೆ ಕೊರಗುವಿರಿ? ಒಬ್ಬಳೇ ಮಡದಿಯೆನಗೆ!' ಎಂದು ನುಡಿಯುವ ಜಾಣ್ಮೆ ರಸಿಕರಲ್ಲದವರಿಗೆ ಬರಲಾರದು.

ಬೇಂದ್ರೆಯವರು 'ಕುಣಿಯೋಣ ಬಾರ' ಕವಿತೆಯಲ್ಲಿ ಒಡಮೂಡಿಸಿರುವುದು ಇಂಥ ಒಲವಿನ ಉಲ್ಲಾಸದ, ರಸಿಕತೆಯ ಜೀವನೋತ್ಸಾಹವನ್ನು.

ಇದ್ದದ್ದು ಮರೆಯೋಣ
ಇಲ್ಲದ್ದು ತೆರೆಯೋಣ
ಹಾಲ್ಜೇನು ಸುರಿಯೋಣ
ಕುಣಿಯೋಣ ಬಾ

ಆ ಸುಖವನ್ನು ತಾನಷ್ಟೇ ಸವಿಯುವ ಸ್ವಾರ್ಥಿಯಲ್ಲ ರಸಿಕ

ಹದಿನಾಲ್ಕು ಲೋಕಕ್ಕ
ಚಿಮ್ಮಲಿ ಈ ಸುಖ
ಹಿಗ್ಗಲಿ ಸಿರಿಮುಖ

ಎಂದು ಆಶಿಸುತ್ತಾನೆ. ಈ ಸೃಷ್ಟಿಯಲ್ಲಿ ಆನಂದಗೊಳ್ಳುವದು ಹೇಗೆ ಎನ್ನುವದನ್ನು ಅವನು ನಮ್ಮ ಅರಿವಿಗೆ ತಂದು ಕೊಡುತ್ತಾನೆ. ಕುವೆಂಪು ನುಡಿದಂತೆ,

ಆನಂದಮಯ ಈ ಜಗಹೃದಯ
ಏತಕೆ ಭಯ ಮಾಣೋ;

ಸೂರ್ಯೋದಯ ಚಂದ್ರೋದಯ
ದೇವರ ದಯ ಕಾಣೋ;

ಎಂಬ ಭರವಸೆಯನ್ನು ಅವನು ಬಾಳಿಗೆ ನೀಡುತ್ತಾನೆ.

ಹಾಸ್ಯದಿಂದ ಜೀವನ ಧನ್ಯವಾಗಬೇಕಾದರೆ ಕವಿತೆ ನಗುತ್ತಿರಬೇಕೆನ್ನುತ್ತಾರೆ ದಿನಕರ ದೇಸಾಯಿ.

ಕವಿತೆ ನಕ್ಕರೆ ಜೊತೆಗೆ ಮಕ್ಕಳೂ ನಕ್ಕಿ
ಅರಗಳಿಗೆಯಲಿ ಶಬ್ದವಾಗುವುದು ಹಕ್ಕಿ
ಒಲೆಯ ಮೇಲಿನ ಅಕ್ಕಿ ಅಗುಳಾಗಿ ಅನ್ನ
ಹಾಸ್ಯರಸದಿಂದ ಜೀವನವಾಯ್ತು ಧನ್ಯ

ಹೌದು, ಹಾಸ್ಯರಸದಿಂದ ಶಬ್ದಗಳಿಗೆ ಹಕ್ಕಿಯಂತೆ ಹಾರುವ ಚೈತನ್ಯ ಒದಗುತ್ತದೆ. ಜೀವನದ ಭಾರವನ್ನು ಹಗುರಗೊಳಿಸುತ್ತದೆ.

ಜೀವನದ ಕಷ್ಟಕೋಟಲೆಗಳಿಂದ, ಜಂಜಾಟದಿಂದ ರಸಿಕ ನಿರ್ವಿಣ್ಣನಾದಾಗಲೂ ಜೀವನದಲ್ಲಿಯ ಆಸ್ಥೆಯನ್ನು ಕಳೆದುಕೊಳ್ಳುವದಿಲ್ಲ. ಅದನ್ನೆಲ್ಲ ಸಹಿಸಿಕೊಂಡು ಅವನು ಆಶಾವಾದಿಯಾಗಿದ್ದುಕೊಂಡು ತನ್ನದೆ ಆದ ರೀತಿಯಲ್ಲಿ ದೇವರನ್ನೇ ಕೆಣಕುತ್ತಾನೆ. ಶ್ರೀ ಎಸ್.ವ್ಹಿ. ಪರಮೇಶ್ವರ ಭಟ್ಟರು 'ಪಾಮರ'ದ ಒಂದು ವಚನದಲ್ಲಿ ಒಡನುಡಿಯುತ್ತಾರೆ:

ಹಣವೆಷ್ಟಿದ್ದರೇನು?
ವರಮಾನ ತೆರಿಗೆಯ ತೆರಬೇಡವೆ? ಸಾಲದ ಬಡ್ಡಿಗೆ ತೆರಬೇಡವೆ?
ಹೆಂಡತಿಗಷ್ಟು ಮಕ್ಕಳಿಗಷ್ಟು ಕೊಡಬೇಡವೆ?
ಅಗಸನಿಗಷ್ಟು ದರ್ಜಿಗಷ್ಟು ಕೊಡಬೇಡವೆ?
ಕಸಮುಸುರೆಯವಳಿಗಷ್ಟು ಹಾಲುಮೊಸರಿನವಳಿಗಷ್ಟು ಕೊಡಬೇಡವೆ?
ಸೌದೆ ಇದ್ದಲಿಗಷ್ಟು ಹೂವು ಹಣ್ಣಿಗಷ್ಟು ಕೊಡಬೇಡವೆ?
ಬಟ್ಟೆಯಂಗಡಿಗಷ್ಟು, ದವಸದಂಗಡಿಗಷ್ಟು ಕೊಡಬೇಡವೆ?
ಲಾಯರಿಗಷ್ಟು ವೈದ್ಯರಿಗಷ್ಟು ಕೊಡಬೇಡವೆ?
ಹೋಟಲಿಗಷ್ಟು ನಾಟಕ ಸಿನಿಮಾಗಳಿಗಷ್ಟು ಕೊಡಬೇಡವೆ?
ಔತಣದೂಟಕೆ ಕೊಡಬೇಡವೆ? ಟೀಪಾರ್ಟಿಗೆ ಕೊಡಬೇಡವೆ?
ಬರುವ ಹೋಗುವ ನಂಟರಿಗಷ್ಟು ಬಂಧುಬಳಗದವರಿಗೆ ಕೊಡಬೇಡವೆ?
ಪೂಜೆ ಪುನಸ್ಕಾರಕೆ ಹಬ್ಬ ಹರಿದಿನಕೆ ಕೊಡಬೇಡವೆ?
ಇಷ್ಟೆಲ್ಲ ಕೊಟ್ಟ ಮೇಲೆ ನನಗೇನುಳಿದೀತು?
ನಿನ್ನ ಧ್ಯಾನವೊಂದನ್ನು ಬಿಟ್ಟು ಮತ್ತೇನುಳಿದೀತು ಸದಾಶಿವಗುರು?

ಕಾರ್ಮೋಡದಲ್ಲಿಯ ಕೋಲ್ಮಿಂಚಿನಂತೆ, ಕೊನೆಯ ಮಾತಿನ ಸೂಕ್ಷ್ಮ ವ್ಯಂಗ್ಯ ಚಕ್ಕನೆ ಬೆಳಗುತ್ತದೆ.

ಹಲವು ಹಳ್ಳ ನದಿಗಳು ಸೇರಿ ಸಮುದ್ರವಾದಂತೆ ಹಲವಾರು ಬಗೆಯಿಂದ ರಸಿಕನು ತನ್ನ ಜ್ಞಾನಭಂಡಾರವನ್ನು ಬೆಳೆಯಿಸಿಕೊಂಡಿರುತ್ತಾನೆ. ಎಲ್ಲವೂ ಸ್ವಂತ ಅನುಭವವೇ ಇರಬೇಕೆಂದೇನೂ ಇಲ್ಲ. 'ಕೋಳಿ'ಯ ಬಗ್ಗೆ ಲಲಿತ ಪ್ರಬಂಧವನ್ನು ಬರೆಯುತ್ತ ವಿ.ಸೀ. ಹೇಳುತ್ತಾರೆ : "ಕೋಳಿಯನ್ನು ಕುರಿತು ಈ ಬ್ರಾಹ್ಮಣ ಏನು ಬರೆದಾನು ಎಂದುಕೊಳ್ಳಬೇಡಿ. ಬ್ರಾಹ್ಮಣನಾದರೇನು? ಕೋಳಿಯನ್ನು ಕಂಡಿರುವುದಿಲ್ಲವೆ? ಅದರ ರುಚಿ ಕಂಡವನಾದರೆ ಮಾತ್ರ ಅದನ್ನು ಕುರಿತು ಬರೆಯಬಹುದು. ಇಲ್ಲವೆಂದರೆ ಸ್ವರ್ಗನರಕ ಎಂದು ಬರೆಯುವರೆಲ್ಲ ಅಲ್ಲಿಗೆ ಹೋಗಿ ನೋಡಿಕೊಂಡು ಬಂದವರೆ? ಎಲ್ಲವನ್ನು ಸ್ವಂತ ಅನುಭವದಿಂದಲೆ ಬರೆಯಬೇಕೆಂದರೆ ಆಗುತ್ತದೆಯೆ? ಬರವಣಿಗೆಗೆ ಏನೇನೊ ಬಂದು ಸೇರುತ್ತದೆ, ಒಗ್ಗುತ್ತದೆ -ನೋಡುವ ಕಣ್ಣಿದ್ದರೆ, ಕೇಳುವ ಕಿವಿ ಇದ್ದರೆ, ಯೋಚಿಸಲು ತಲೆ ಇದ್ದರೆ ಪ್ರೀತಿಸಲು ಹೃದಯವಿದ್ದರೆ". ನಿಜವಾದ ರಸಿಕ ಈ ನಾಲ್ಕನ್ನೂ ಪಡೆದಿರುತ್ತಾನೆ. ಅದರಿಂದಲೇ ಅವನಾಡಿದ ಮಾತಿಗೆ ವಿಶಿಷ್ಟವಾದ ಹದ, ರುಚಿ ಬಂದಿರುತ್ತದೆ. ಈ ಬಗೆಯ ಅನುಭವದಿಂದ ಪಕ್ವಗೊಂಡ ಅವನ ನುಡಿ ವಿಚಾರ ಪ್ರಚೋದಕವೂ ಆಗಿರುತ್ತದೆ. ನಮ್ಮಲ್ಲಿ ಹಲವರು ಯಶಸ್ಸನ್ನೇ ಗುರಿಯಾಗಿಟ್ಟುಕೊಂಡಿರುತ್ತೇವಲ್ಲವೆ? ಆದರೆ ಕಾರಂತರು ಹೇಳುತ್ತಾರೆ. ಯಶಸ್ಸು ಪೂರ್ಣತೆಯ ಲಕ್ಷಣ, ಅದರ ಮುಂದೆ ಆಗಬೇಕಾದ ಕೆಲಸವೇನಿಲ್ಲ. ನಮ್ಮ ನಿಸರ್ಗ ನಮ್ಮ ಈ ಪ್ರಪಂಚ ಇನ್ನೂ ಸಾಗುತ್ತಿರುವುದನ್ನು ಕಂಡರೆ ಅದು ತನ್ನ ಗುರಿಯನ್ನು ಮುಟ್ಟಿಲ್ಲ, ಪೂರ್ಣತೆಯನ್ನು ಹೊಂದಿಲ್ಲ ಎಂಬುದು ಸ್ಪಷ್ಟವಾಗದೆ? ಅಂದರೆ ಈ ತನಕ ನಡೆದ ಬಾಳ್ವೆ ವ್ಯರ್ಥವಾಯಿತೆ? ಪೂರ್ಣತೆಯ ಕಡೆಗೆ ಸಾಗುವ ಯತ್ನ ಪೂರ್ಣತೆಗಿಂತಲೂ ಸುಂದರವಾದದ್ದು. ಅದಕ್ಕೂ ಮುಖ್ಯವಾದದ್ದು. ಹೀಗೆ ನಮ್ಮ ಕಣ್ಣ ಮುಂದೆ ಕಟ್ಟಿದ ಮಬ್ಬನ್ನು ಓಸರಿಸಿ ಹೊಸ ಬೆಳಕನ್ನು, ನಮ್ಮ ವಿಚಾರಗಳಿಗೆ ಹೊಸ ತಿರುವನ್ನು ನೀಡಿ ಮನಸ್ಸಿಗೆ ಮುದ ನೀಡುತ್ತದೆ ರಸಿಕನಾಡುವ ಮಾತು. ಅದಕ್ಕೇ ಸರ್ವಜ್ಞನ ಈ ಧ್ವನಿಪೂರ್ಣ ನುಡಿ : 'ರಸಿಕನಾಡಿದ ಮಾತು ಶಶಿಯುದಿಸಿ ಬಂದಂತೆ'.

('ಸಮತೋಲನ' : ೧೯೮೯)

೧೪

# ಪ್ರಭಾವ ಬೀರಿದ ಪುಸ್ತಕಗಳು

ಎಳೆಯವಸ್ಸಿನಿಂದಲೇ ಮನುಷ್ಯ ಅರಿತೊ, ಅರಿಯದೆಯೊ ಅನೇಕ ಬಗೆಯ ಪ್ರಭಾವಗಳಿಗೆ ಈಡಾಗುತ್ತಾನೆ. ತಾನು ಓಡಾಡಿ ನಲಿದ ಮನೆಯ ವಾತಾವರಣ, ತನ್ನ ಬೆಳವಣಿಗೆಯಲ್ಲೇ ಮಗ್ನರಾಗಿರುವ ತಂದೆ-ತಾಯಿಗಳು, ತನ್ನೊಡನೆ ಸುಃಖ-ದುಃಖದಲ್ಲಿ ಪಾಲುಗೊಂಡ ಗೆಳೆಯರು, ಶಾಲೆ-ಕಾಲೇಜುಗಳಲ್ಲಿ ತನ್ನ ಜ್ಞಾನ ವಿಕಾಸಕ್ಕೆ ಕಾರಣರಾದ ಗುರುಗಳು, ತನ್ನ ಸುತ್ತುಮುತ್ತಲಿನ ನಿಸರ್ಗ, ತನ್ನ ಮನಸ್ಸನ್ನು ಸೂರೆಗೊಂಡ ಪುಸ್ತಕಗಳು-ಈ ಎಲ್ಲವೂ ಒಂದಿಲ್ಲ ಒಂದು ರೀತಿಯಲ್ಲಿ, ಒಂದೊಂದು ಹಂತದಲ್ಲಿ ತಮ್ಮ ಪ್ರಭಾವವನ್ನು ಬೀರಿ ನಮ್ಮ ಬದುಕನ್ನು ರೂಪಿಸುತ್ತವೆ. ನಾವು ಎಲ್ಲೆಲ್ಲಿಯೊ ಅಲೆದಾಡಿದರೂ ಕೊನೆಗೆ ಮನಸ್ಸು ಮನೆಯ ಕಡೆಗೆ ಆಕರ್ಷಿತವಾಗುತ್ತದೆ. ತಂದೆ-ತಾಯಿಗಳ, ನಮಗಿಂತಲೂ ಹಿರಿಯರಾದವರ ನಡೆ-ನುಡಿ, ರೀತಿ-ನೀತಿಗಳು ದಿನವೂ ಅಲ್ಲಿ ನಮಗೆ ಕಣ್ಣಿಗೆ ಬೀಳುತ್ತವೆ. ಸಲಿಗೆಯ ಗೆಳೆಯರೆದುರು ಮನಸ್ಸು ಬಿಚ್ಚಿ ಮಾತನಾಡಿದಂತೆ ಉಳಿದವರೆದುರು ನಾವು ವರ್ತಿಸಲಾರೆವು. ಸಹೃದಯತೆ ಮೊದಲು ನಮ್ಮ ಜೀವನದಲ್ಲಿ ಕಾಲಿಕ್ಕುವದು ಗೆಳೆತನದಿಂದಲೇ. ಜಗತ್ತಿನ ತುಂಬ ಹರಡಿರುವ ಜ್ಞಾನವನ್ನು ನಮ್ಮ ಅರಿವಿಗೆ ತಂದುಕೊಟ್ಟು, ನಮ್ಮ ಓದನ್ನು ಪ್ರಯೋಜನಕಾರಿಯಾದ ರೀತಿಯಲ್ಲಿ ಬೆಳೆಸಿಕೊಳ್ಳುವದಕ್ಕೂ, ತಕ್ಕ ಸ್ಫೂರ್ತಿ ಪಡೆಯುವದಕ್ಕೂ ವಿದ್ಯಾಭ್ಯಾಸದಲ್ಲಿ ಮಾರ್ಗದರ್ಶಕರಾಗಿ ಗುರುಗಳ ಪಾತ್ರವೂ ದೊಡ್ಡದಾಗಿರುತ್ತದೆ. ನಿಸರ್ಗವಂತೂ ತನ್ನ ರುದ್ರರಮಣೀಯವಾದ ನೂರು ನೋಟಗಳಿಂದ ನೂರು ಬೆರಗುಗಳಿಂದ ನಮ್ಮ ಹೃದಯವನ್ನು ಅರಳಿಸುತ್ತ, ಮನಸ್ಸನ್ನು ವಿಶಾಲಗೊಳಿಸುತ್ತಲೇ ಇರುತ್ತದೆ. ಮೇಲಿನ ಈ ಎಲ್ಲ ಗುಣಗಳೂ ಗ್ರಂಥಗಳಲ್ಲಿ ಒಟ್ಟುಗೂಡಿರುತ್ತವೆಂದು ನನ್ನ ಅನಿಸಿಕೆ. ಅಲ್ಲಿರುವ ಸಾಹಿತ್ಯದ ಮುಖಾಂತರ ನಮ್ಮ ಸುತ್ತಮುತ್ತಲಿನ ಜಗತ್ತು, ಅದರ ಸುಖ, ದುಃಖ, ಸೌಂದರ್ಯ, ಭವ್ಯತೆ, ದುರಂತ ಈ ಎಲ್ಲದರ ಅರ್ಥ ನಮಗಾಗುತ್ತದೆ. ಆತ್ಮಶೋಧನೆ, ಹಾಗೂ ಆತ್ಮಜ್ಞಾನದ ಪ್ರಕ್ರಿಯೆಯಲ್ಲಿ ಗ್ರಂಥಗಳು ಅಮೂಲ್ಯವಾದ ಸಾಧನಗಳಾಗಿವೆ. "ಕಾಂತೆಯಂತೆ ಒಲಿಸಿ, ಗೆಳೆಯನಂತೆ ನಲಿಸಿ, ಗುರುವಿನಂತೆ ಕಲಿಸಿ, ಮನಸ್ಸನ್ನು ಅರಳಿಸುತ್ತ ಬುದ್ಧಿಯನ್ನು ಬೆಳಗುತ್ತ, ಹೃದಯವನ್ನು ಹಿಗ್ಗಿಸುತ್ತ ಆತ್ಮವನ್ನು ವಿಕಾಸಗೊಳಿಸುತ್ತ" ಜೀವನದ ಉದ್ದಕ್ಕೂ ನಮ್ಮನ್ನು ಕೈಹಿಡಿದು ಅವು ನಡೆಸುತ್ತವೆ. ಜೀವನದ ಕೊನೆಯವರೆಗೂ ತಾನೊಬ್ಬ ವಿದ್ಯಾರ್ಥಿಯೇ ಎಂಬ ಅರಿವು ಹಾಗೂ ಜ್ಞಾನದ ಅಗಾಧತೆ, ಗ್ರಂಥವಾಚನದಿಂದ ನಮಗೆ ಉಂಟಾಗುತ್ತದೆ. ಎಷ್ಟೇ ಅಂದರೂ ಅಧ್ಯಾಪಕರು ಕಲಿಸುವ ಬೋಧೆಗೆ ಒಂದು ಮಿತಿ ಇರುತ್ತದೆ.

ಆದರೆ ಪುಸ್ತಕಗಳು ಕಲಿಸುವ ಕಲಿಕೆಗೆ ಆ ಮಿತಿಯಿಲ್ಲ. ಮಹಾಕವಿ ಮಿಲ್ಟನ್ ನುಡಿದಂತೆ "ಒಂದು ಸದ್ಗ್ರಂಥವು ಮಹಾ ಚೇತನನೊಬ್ಬನ ಅನರ್ಘ್ಯವಾದ ಜೀವಸಾರ; ಜೀವಿತದ ಮುಂದಿನ ಜೀವಿತಕ್ಕಾಗಿ ನಿಕ್ಷೇಪವಾಗಿಟ್ಟ ಜೀವಸಾರ". ಆದುದರಿಂದಲೇ ನಮ್ಮ ಜೀವನದಲ್ಲಿ ಪುಸ್ತಕಗಳ ಪ್ರಭಾವ ಮಹತ್ತರವಾದುದು.

ನನ್ನ ವಿಚಾರ ಹಾಗೂ ಸೃಜನಶಕ್ತಿಯ ಅರ್ಥಾತ್ ನನ್ನ ಭಾವ-ಬುದ್ಧಿಗಳ ಮೇಲೆ ಪ್ರಭಾವ ಬೀರಿದ ಪುಸ್ತಕಗಳನ್ನು ಕುರಿತು ನಾನೀಗ ಹೇಳಬೇಕಾಗಿದೆ. ಹಾಗೆ ಪ್ರಭಾವ ಬೀರಿದ ಪುಸ್ತಕಗಳು ಒಂದಲ್ಲ, ನೂರಾರು. ಆದುದರಿಂದ ಯಾವುದೋ ಒಂದು ಪುಸ್ತಕ ಒಬ್ಬನ ಇಂಥದೇ ಜೀವನವನ್ನು ಅಥವಾ ಸಾಹಿತ್ಯವನ್ನು ಪ್ರಭಾವಿಸಿತೆಂದು ಬೊಟ್ಟಿಟ್ಟು ಹೇಳುವದು ಕಷ್ಟ. ಅದರಲ್ಲೂ ನಮ್ಮದೇ ಆದ ಕಾವ್ಯರಚನೆ ಅಥವಾ ಸಾಹಿತ್ಯ ಸೃಷ್ಟಿಯ ಮೇಲೆ ಇವುಗಳ ಪ್ರಭಾವವನ್ನು ಹೇಳುವಾಗಲಂತೂ ಅದು ಇನ್ನೂ ಕಠಿಣವಾಗುತ್ತದೆ. ಅಷ್ಟೊಂದು ಗಾಢವಾದ ಪ್ರಭಾವವನ್ನು ಬೀರಿದ ಒಂದು ಗ್ರಂಥದ ಹೆಸರನ್ನು ಆಯ್ದು ಹೇಳಬಹುದಾದರೂ ಇನ್ನಿತರ ಕೆಲವು ಪುಸ್ತಕಗಳ ಬಗೆಗೂ ಕೆಲವು ಮಾತುಗಳನ್ನು ಅವಶ್ಯವಾಗಿ ಹೇಳಲೇಬೇಕಾಗುತ್ತದೆ.

ನಾನು ಚಿಕ್ಕವನಿದ್ದಾಗ ಆಟಗಳಲ್ಲಿ ವಿಶೇಷ ಆಸ್ಥೆವಹಿಸುತ್ತಿರಲಿಲ್ಲ. ಗೆಳೆಯರ ಬಳಗವೂ ಮಿತವಾದದ್ದು. ಆದ್ದರಿಂದ ಹೆಚ್ಚಾಗಿ ನಾನು ಒಬ್ಬೊಂಟಿಯಾಗಿರುತ್ತಿದ್ದೆ. ನನ್ನ ತಂದೆಯವರು ಕನ್ನಡ ಶಾಲೆಯ ಶಿಕ್ಷಕರಾಗಿದ್ದು ಪ್ರಾಚೀನ ಕಾವ್ಯಗಳನ್ನೂ, ಧಾರ್ಮಿಕ ಗ್ರಂಥಗಳನ್ನೂ ಮನೆಯಲ್ಲಿ ಆಗೀಗ ಓದುತ್ತಿದ್ದರು. ಆಗ ಕೈಗೆ ಸಿಕ್ಕ ಯಾವುದಾದರೂ ಪುಸ್ತಕ ಇಲ್ಲವೆ ಪತ್ರಿಕೆಯನ್ನು ಓದುವದರಲ್ಲಿ ನಾನು ಮಗ್ನನಾಗಿರುತ್ತಿದ್ದೆ. ಪಂಚತಂತ್ರದ ಕಥೆಗಳು, ಇಸೋಪ ನೀತಿಯ ಕಥೆಗಳು ಇತ್ಯಾದಿಗಳನ್ನು ಆಗ ಓದಿದ ನೆನಪು. ಹಾಯಸ್ಕೂಲು ಹಾಗೂ ಕಾಲೇಜಿನಲ್ಲಿ ಅಭ್ಯಾಸ ಮಾಡುವಾಗ ಸಹಜವಾಗಿಯೆ ನನ್ನ ಮನಸ್ಸು ಸಾಹಿತ್ಯದ ಕಡೆಗೆ ಹೊರಳಿತು. ಆ ಅವಧಿಯಲ್ಲಿ ಓದಿದ ಪುಸ್ತಕಗಳಿಗೆ ಲೆಕ್ಕವೇ ಇಲ್ಲ. ಕಾವ್ಯ, ಕಥೆ, ಕಾದಂಬರಿ ಜೀವನಚರಿತ್ರೆ, ಪ್ರಬಂಧ, ನಾಟಕ, ಪ್ರವಾಸ ಕಥನ-ಹೀಗೆ ಕೈಗೆ ಸಿಕ್ಕ ಪುಸ್ತಕಗಳನ್ನೆಲ್ಲ-ಗೆಳೆಯರಿಂದ ಎರವಲು ತಂದು ಇಲ್ಲವೆ ವಾಚನಾಲಯಗಳಿಂದ ಪಡೆದು ಸಿಕ್ಕ ಸಿಕ್ಕ ವೇಳೆಯಲ್ಲಿ ಓದಿ ಮುಗಿಸಿದ್ದುಂಟು. ಆದರೆ ಒಂದು ಆಶ್ಚರ್ಯವೆಂದರೆ, ಪತ್ತೇದಾರಿ ಕಥೆ, ಕಾದಂಬರಿಗಳನ್ನು ಓದುವ ಪ್ರಸಂಗವೇ ನನಗೆ ಬರಲಿಲ್ಲ. ವಿದ್ಯಾರ್ಥಿ ಜೀವನದ ಆ ೧೦-೧೨ ವರ್ಷಗಳ ಅವಧಿಯಲ್ಲಿ ನನ್ನ ಮನಸ್ಸಿನ ಮೇಲೆ ಪರಿಣಾಮವನ್ನುಂಟು ಮಾಡಿದ ಹಾಗೂ ಪದೇ ಪದೇ ಅವುಗಳನ್ನು ಓದಬೇಕೆಂಬ ಅಭಿರುಚಿಯನ್ನು ಹುಟ್ಟಿಸಿದ ಕೆಲವು ಪುಸ್ತಕಗಳ ಹೆಸರನ್ನು ಮಾತ್ರ ಇಲ್ಲಿ ಉಲ್ಲೇಖಿಸಬಹುದಾಗಿದೆ; ಮಾಸ್ತಿಯವರ ಸಣ್ಣ ಕಥೆಗಳು, ಅ.ನ.ಕೃ ಅವರ 'ಮಂಗಳಸೂತ್ರ' ಮತ್ತು 'ಸಂಧ್ಯಾರಾಗ', ಗೊರೂರರ 'ನಮ್ಮ ಊರಿನ ರಸಿಕರು', ಶರಶ್ಚಂದ್ರರ 'ದೇವದಾಸ', ಕಾರಂತರ 'ಮರಳಿಮಣ್ಣಿಗೆ,' ಕುವೆಂಪು ಅವರ 'ಕಾನೂರು ಸುಬ್ಬಮ್ಮ ಹೆಗ್ಗಡತಿ' 'ಸ್ವಾಮಿ ವಿವೇಕಾನಂದ', ಮೂರ್ತಿರಾಯರ ಲಲಿತಪ್ರಬಂಧಗಳು, ಶೇಕ್ಸ್‌ಪೀಯರನ ನಾಟಕಗಳು, ಆಂಡ್ರೆ ಮಾರುವಾನ 'ಏರಿಯಲ್' 'ಬೈರನ್' ಇತ್ಯಾದಿ, ಇತ್ಯಾದಿ. ಇವು ಒಂದೊಂದೂ ವಿಶಾಲವಾದ, ವೈವಿಧ್ಯಮಯವಾದ ಪ್ರಪಂಚವನ್ನು, ಮನುಷ್ಯ ವ್ಯಕ್ತಿಯ ನಾನಾಬಗೆಯ ಶೀಲ-ಸ್ವಭಾವಗಳನ್ನು

ನನ್ನ ಕಣ್ಣೆದುರು ತೆರೆದು ತೋರಿಸಿದವು. ಇವುಗಳನ್ನು ಮೊದಲ ಸಲ ಓದಿದಾಗ ಒಂದು ಬಗೆಯ ಗುಂಗು ನನ್ನನ್ನು ಆವರಿಸಿಕೊಳ್ಳುತ್ತಿತ್ತು. ಉಲ್ಲಾಸದಿಂದಲೂ, ಅನುಕಂಪದಿಂದಲೂ ಕೂಡಿದ ಮನಸ್ಸು ಅವುಗಳಲ್ಲಿ ಚಿತ್ರಿತವಾದ ಜೀವನದ ಬಗ್ಗೆ ಆಲೋಚನೆಗೆ ತೊಡಗುತ್ತಿತ್ತು. ನನ್ನ ಮನಸ್ಸಿಗೆ ಹಿಡಿಸಿದ ಭಾಗಗಳನ್ನು ಉಳಿದವರಿಗೂ ಓದಿ ತೋರಿಸಬೇಕೆಂಬ, ಅವರೂ ನನ್ನ ಆನಂದದಲ್ಲಿ ಪಾಲುದಾರರಾಗಬೇಕೆಂಬ ಹಂಬಲ ನನ್ನಲ್ಲಿ ಉಂಟಾಗುತ್ತಿತ್ತು. ಒಂದು ಪುಸ್ತಕವನ್ನು ಓದಿ ಆ ಲೇಖನದ ಅನುಭವವನ್ನು ಪಡೆದ ಮೇಲೆ ಈ ಪ್ರಪಂಚವು ನಮ್ಮ ಅರಿವಿನಲ್ಲಿ ಎಷ್ಟೊಂದು ವಿಸ್ತಾರವನ್ನು ಹೊಂದುತ್ತದೆ; ಸೃಷ್ಟಿಯಲ್ಲಿ ನಾವು ಲಕ್ಷ್ಯವೀಯದೆ, ಅಸಡ್ಡೆ ಮಾಡಿದ, ಎಷ್ಟು ವ್ಯಕ್ತಿಗಳು, ಸಂಗತಿಗಳು ನಮಗೆ ಆತ್ಮೀಯವಾಗಿ ಬಿಡುತ್ತವೆ, ಗ್ರಂಥಕರ್ತನ ಮಾತಿನ ಬೆಳಕಿನಲ್ಲಿ ನಮಗೆ ಈ ಮೊದಲುಕಾಣದ ಎಂಥ ಚೆಲುವು ಕಂಡಿತು: ಕಥೆಯ ಓಟಕ್ಕಿಂತಲೂ ಅವು ಕೊಡುವ ಜೀವನ ಚಿತ್ರಗಳು, ನಿಸರ್ಗದ ಜೀವಂತ ವಾತಾವರಣ ನನ್ನ ಮನಸ್ಸನ್ನು ಹಿಡಿದು ನಿಲ್ಲಿಸುತ್ತಿದ್ದವು. ಯಾರಾದರೂ ನಾನು ಓದಿದ ಒಂದು ಪುಸ್ತಕದ ಅಥವಾ ಕಾದಂಬರಿಯ ಸಾರಾಂಶ ಏನು ಎಂದು ಕೇಳಿದರೆ, ನನಗೆ ಹೇಳಲು ಆಗುತ್ತಲೇ ಇರಲಿಲ್ಲ. ಯಾಕೆಂದರೆ, ಅದರ ಸಮಗ್ರ ಜೀವನ ಚಿತ್ರವೇ ನನ್ನ ಕಣ್ಣ ಮುಂದೆ ನಿಂತು ಬಿಡುತ್ತಿತ್ತು; ಆ ಬದುಕಿನ ಒಟ್ಟು ಸೌಂದರ್ಯ ನನ್ನ ಮನಸ್ಸನ್ನು ಆವರಿಸಿಕೊಳ್ಳುತ್ತಿತ್ತು. ಹೀಗೆ ನಮ್ಮ ಮನಸ್ಸಿಗೆ ಹಿಡಿಸಿದ ಪ್ರತಿಯೊಂದು ಪುಸ್ತಕವೂ ನಮ್ಮ ಮೇಲೆ ತನ್ನ ಪ್ರಭಾವವನ್ನು ಅಲ್ಪಪ್ರಮಾಣದಲ್ಲಾದರೂ ಬೀರದೆ ಹೋಗುವದಿಲ್ಲ. ಶ್ರೇಷ್ಠ ಸಾಹಿತ್ಯದ ಶಕ್ತಿ ಮತ್ತು ವೈಭವಗಳು ನಮ್ಮಲ್ಲಿ ಅಪರೂಪದ ಬದಲಾವಣೆಗಳನ್ನು ಉಂಟು ಮಾಡುತ್ತವೆ. ಅವುಗಳ ಪ್ರಭಾವ ಹೆಚ್ಚು ಸೂಕ್ಷ್ಮವಾದದ್ದು ಹಾಗೂ ಹೂವಿನ ವಾಸನೆಯಂತೆ ಅಗೋಚರವಾದದ್ದು. "Timid thoughts, do not be afraid of me, I am a poet" ಎಂದು ರವೀಂದ್ರರು ನುಡಿದಂತೆ ಅನೇಕ ನವಿರಾದ ಸೂಕ್ಷ್ಮವಾದ ಭಾವಗಳನ್ನು ಕವಿ ತನ್ನ ಕೃತಿಯಲ್ಲಿ ಸುರಕ್ಷಿತವಾಗಿ ಇಟ್ಟಿರುತ್ತಾನೆ.

ನನ್ನ ಭಾವ ಬುದ್ಧಿಗಳನ್ನು ಎಚ್ಚರಿಸಿ, ಸೃಜನಶಕ್ತಿಯನ್ನು ಪ್ರಚೋದಿಸಿ ಅದನ್ನು ರೂಪಿಸುವಲ್ಲಿ ಕಾವ್ಯಕೃತಿಗಳು ಹೆಚ್ಚಿನ ಪ್ರಭಾವ ಬೀರಿವೆ ಎಂದು ಹೇಳಬಹುದು. ನಾನು ಚಿಕ್ಕವನಿದ್ದಾಗಲೇ ಕೇಳಿದ ಹಳ್ಳಿಯ ಹಾಡುಗಳು, ಅನುಭಾವದ ಪದಗಳು, ಅವುಗಳ ಗಮಕ-ಗತ್ತು ನನ್ನ ಮನಸ್ಸನ್ನು ತುಂಬಿಕೊಂಡವು. ಪ್ರಾಚೀನ ಕವಿಗಳಲ್ಲಿ ಹರಿಹರ, ಸರ್ವಜ್ಞ, ಕುಮಾರವ್ಯಾಸ ಒಂದು ರೀತಿಯಿಂದ ಪ್ರಭಾವ ಬೀರಿದ್ದರೆ, ಪಂಪ ಬೇರೊಂದು ರೀತಿಯ ಪ್ರಭಾವಕ್ಕೆ ಕಾರಣನಾಗಿದ್ದಾನೆ. ಹರಿಹರನ ರಗಳೆಗಳ ಆ ನಿರರ್ಗಳ ಓಟ, ಭಕ್ತಿಯ ನಿರ್ಭರತೆ, ಆತ್ಮೀಯವಾದ ಸಹಜವಾದ ಬಣ್ಣನೆ, ಇವಕ್ಕೆ ಮನಸ್ಸು ಮಾರುಹೋದರೆ, ಸರ್ವಜ್ಞನ ಜೀವನವಿಮರ್ಶೆ, ಹರಿತವಾದ ವಿಡಂಬನೆ, ಸಾರವತ್ತಾದ, ಶಕ್ತಿಯುತವಾದ ಮಾತಿನ ಬಳಕೆ-ಇವುಗಳನ್ನು ಕಂಡು ಹೌದು, ಭಾಷೆಯನ್ನು ಬಳಸಿದರೆ ಹೀಗೆ ಬಳಸಬೇಕು ಎನ್ನಿಸುತ್ತಿತ್ತು. ಮಾತುಮಾತಿಗೆ ರೂಪಕಗಳನ್ನು ತೂರುವ, ಪಾತ್ರಗಳನ್ನು ಜೀವಂತವಾಗಿ ಕಣ್ಣೆದುರು ನಿಲ್ಲಿಸುವ ಕುಮಾರವ್ಯಾಸನ ಹಾಸು-ಬೀಸು ಲೇಸೆನಿಸಿತು. ವರ್ಡ್ಸ್‌ವರ್ಥ್, ಶೆಲ್ಲಿ, ಕೀಟ್ಸ್, ಟಾಗೋರ್, ವಿಟ್ಮನ್, ಈಲಿಯಟ್ ಮುಂತಾದವರ

ಕವನಗಳಿಂದ ನನ್ನ ಕಾವ್ಯರಚನೆಯ ಬೆಳವಣಿಗೆಯ ಒಂದೊಂದು ಹಂತದಲ್ಲಿ ಕೆಲಮಟ್ಟಿಗೆ ಪ್ರೇರಣೆ ಪಡೆದಿರಬಹುದು. It is my faith that every flower enjoys the air it breathes ಎಂಬ ವರ್ಡ್ಸ್‌ವರ್ಥನ ನುಡಿ, ಪ್ರಕೃತಿಯ ಆನಾಂದನುಭೂತಿಯ ಬಗೆಗೆ ನನ್ನ ನಂಬಿಕೆಯನ್ನು ಇನ್ನಿಷ್ಟು ದೃಢಗೊಳಿಸಿತು.

ಇವರೆಲ್ಲರ ಕೃತಿಗಳನ್ನು ಓದುತ್ತಿರುವಂತೆಯೇ ನನ್ನಲ್ಲಿ ಕವಿತೆ ಬರೆಯಬೇಕೆಂಬ ಉತ್ಸಾಹ, ಬಯಕೆ ಉಂಟಾಗಿರಬೇಕೆಂದು ತೋರುತ್ತದೆ. ಆದರೆ ಯಾವ ರೂಪದಲ್ಲಿ ಬರೆಯುವದು ?

ಬೇಂದ್ರೆಯವರ 'ಗರಿ, ಸಖಿಗೀತ, ನಾದಲೀಲೆ' ಕುವೆಂಪು ಅವರ 'ನವಿಲು, ಪಾಂಚಜನ್ಯ' ಕಡೆಂಗೋಡ್ಲು ಅವರ 'ನಲ್ಮೆ' ಮಧುರಚೆನ್ನರ 'ನನ್ನನಲ್ಲ' ಇವೇ ಮೊದಲಾದ ಕವನಸಂಗ್ರಹಗಳು ಆ ರೂಪವನ್ನು ನನಗರಿಯದಂತೆಯೇ ತೋರಿಸಿಕೊಟ್ಟವು. "ಚಿಗರ್‍ಯಾಗಿ, ತಿಗರ್‍ಯಾಗಿ, ನಿದ್ದೀಯ ಬಗರ್‍ಯಾಗಿ, ಗಾಳೀಗು ಹಗುರಾಗಿ ಕುಣಿಯೋಣು ಬಾ" ಎಂಬ ಬೇಂದ್ರೆ ಕಾವ್ಯದ ಜನಪದ ಲಯ, ಧಾಟಿ, ವ್ಯಂಜಕತೆ, ನಾದೋನ್ಮಾದ ಒಂದು ಕಡೆ ಮನಸ್ಸನ್ನು ಸೆಳೆದರೆ, 'ದೀರ್ಘದಿಗಂತದ ರೇಖಾತೋರಣ ನೀಲಾಕಾಶದ ಸ್ವರ್ಗಾರೋಹಣ ಮೃಣ್ಮಯಶೈಲದ ಚಿನ್ಮಯಧಾರಣ ವಿರಚಿಸೆ ರಸಲಿಪಿ ಭಿತ್ತಿಯಲಿ' ಎಂಬಂತಹ ಕುವೆಂಪು ಕಾವ್ಯದ ಗಂಭೀರವಾದ ಶೈಲಿ ಪ್ರಭಾವಶಾಲಿಯಾಗಿ ತೋರಿತು. ಈ ಮಧ್ಯದಲ್ಲಿ 'ಏನಮ್ಮ ಪ್ರತಿಭೆ ನೀನೀಸುದಿನವೆಲ್ಲಿದ್ದೆ ? ಮತ್ತೆ ಹೇಗಿಲ್ಲಿಗೇ ಮರಳಿ ಬಂದೆ ?' ಎಂಬ ಆತ್ಮೀಯವಾದ, ಸಲಿಗೆಯ ಸಲ್ಲಾಪದ ಮಧುರಚೆನ್ನರ 'ನನ್ನ ನಲ್ಲ' ನನ್ನ ಮೇಲೆ ಗಾಢವಾದ ಪ್ರಭಾವವನ್ನು ಬೀರಿತು. ಜನಪದ ಸತ್ವ ಅನುಭಾವದ ಅಭಿವ್ಯಕ್ತಿಯಲ್ಲಿ ಅರಳಿಸಿದ ಅನಿರ್ವಚನೀಯವಾದ ಸೌಂದರ್ಯದ ದರ್ಶನ ನನಗೆ ಆ ಕಾವ್ಯದಲ್ಲಿ ಕಂಡಿತು. ಅದನ್ನು ಓದಿದ್ದೂ ಓದಿದ್ದೇ. ನನ್ನದೇ ಆದ ರೀತಿಯಲ್ಲಿ ಮೆಲುಕು ಹಾಕಿಕೊಂಡದ್ದೂ ಹಾಕಿಕೊಂಡದ್ದೇ. ಅದರಿಂದಲೇ ನನ್ನ 'ಭಾವಜೀವಿ' ಕಾವ್ಯಕ್ಕೆ ಪ್ರೇರಣೆ ದೊರೆಯಿತು. ಇದರ ಛಂದ ಹಾಗೂ ಶೈಲಿಯ ರೀತಿ ಮಧುರಚೆನ್ನರ ಕೃತಿಗಳ ಮಾದರಿಗೆ ಸೇರಿದ್ದಾದರೂ ಇದೊಂದು ಸ್ವತಂತ್ರ ಕೃತಿಯೆಂಬುದನ್ನು ಕಾವ್ಯದುದ್ದಕ್ಕೂ ಕಾಣಬಹುದು ಎಂದು ಗೋಕಾಕರು 'ಭಾವಜೀವಿ'ಯ ಮುನ್ನುಡಿಯಲ್ಲಿ ಬರೆದದ್ದುಂಟು. ವೈಚಾರಿಕತೆಯ ಆಚೆಗೆ ಇರುವ ನಮ್ಮ ಜೀವನದ ಭಾವುಕ ಕ್ಷಣಗಳಿಗೆ, ನನ್ನ ಕಾವ್ಯ ಇಂಬುಗೊಡಲು ಇದರಿಂದಲೂ ಪ್ರೇರಣೆ ದೊರೆತಿರಬಹುದು.

ಆದರೆ ಒಟ್ಟಾಗಿ ನನ್ನ ಆಲೋಚನೆ, ತಾತ್ವಿಕ ಚಿಂತನೆ, ಕಾವ್ಯಸೃಷ್ಟಿ ಹಾಗೆಯೇ ಜೀವನದ ರೀತಿಗಳ ಮೇಲೆ ಮೊದಲಿನಿಂದ ಕೊನೆಯವರೆಗೆ ಪ್ರಭಾವ ಬೀರಿದ ಅತ್ಯಂತ ಪ್ರಮುಖ ಗ್ರಂಥವೆಂದರೆ 'ಬಸವಣ್ಣನವರ ಷಟ್‌ಸ್ಥಲದ ವಚನಗಳು'. ಧಾರ್ಮಿಕವಾಗಿ, ಸಾಮಾಜಿಕವಾಗಿ, ನೈತಿಕವಾಗಿ, ಸಾಹಿತ್ಯಿಕವಾಗಿ ಅನೇಕ ಹೊಸ ವಿಚಾರಗಳನ್ನು, ಲೋಕೋತ್ತರ ಸ್ಫುರಿತಗಳನ್ನು ನಾನು ಅದರಲ್ಲಿ ಕಂಡುಕೊಂಡಿದ್ದೇನೆ. ಕಾವ್ಯದ ಮೂಲಕ ನಾನು ಜೀವನದ ಬಗ್ಗೆ ಒಂದು ತಾತ್ವಿಕ ನಿಲುವನ್ನು ತಾಳುವಲ್ಲಿ ಅದರ ಪಾತ್ರ ಅತ್ಯಂತ ಹಿರಿದಾಗಿದೆ.

'ಎನ್ನ ಚಿತ್ತ ಅತ್ತಿಯ ಹಣ್ಣು ನೋಡಯ್ಯ' ಎಂಬ ಮನೋವಿಶ್ಲೇಷಣೆ, 'ನನೆಯೊಳಗಣ ಪರಿಮಳದಂತೆ' ದೇವರ ನಿಲುವನ್ನು ಕಂಡ ಬಗೆ, 'ನುಡಿದರೆ ಮುತ್ತಿನ ಹಾರದಂತಿರಬೇಕು'

ಎಂದು ಆಡಿದ್ದನ್ನೆಲ್ಲ ಕಾವ್ಯ ಮಾಡುವ ರೀತಿ, ಹಬ್ಬಕ್ಕೆ ತಂದ ಹರಕೆಯ ಕುರಿ, ತೋರಣಕ್ಕೆ ತಂದ ತಳಿರ ಮೇಯಿತ್ತು ಎಂಬ ಮುಗ್ಧಜೀವಿಗಳ ಕರುಣಾಜನಕ ದೃಶ್ಯ, ಮಾವಿನ ಕಾಯಿಯೊಳಗೊಂದು ಎಕ್ಕೆಯ ಕಾಯಿ ನಾನು ಎಂಬ ಕಿಂಕರ ಭಾವ, ಹೆಪ್ಪನೆರೆದ ಹಾಲು ಕೆಟ್ಟು ತುಪ್ಪವಪ್ಪಂತೆ ಇಪ್ಪ ಶರಣರ ಚಿತ್ರ; 'ಮರಕ್ಕೆ ಬಾಯಿ ಬೇರೆಂದು ತಳಕ್ಕೆ ನೀರೆರೆದರೆ ಮೇಲೆ ಪಲ್ಲವಿಸಿತ್ತು ನೋಡಾ' ಎಂಬಲ್ಲಿ ತಮ್ಮ ಜಂಗಮ ತತ್ವದ ಸುಂದರವಾದ ಪ್ರತಿಪಾದನೆ, 'ಕರುವನಗಲಿಸಿ ತಾಯ ಮರುಗಿಸಿ ಮೊಲೆವಾಲ ಕರೆದುಣಬೇಡವೊ' ಎಂಬ ತೀವ್ರಾನುಕಂಪ, 'ಆಗಳು ಲೋಗರ ಮನೆಯ ಬಾಗಿಲ ಕಾಯ್ದುಕೊಂಡಿಪ್ಪವು ಕೆಲವು ದೈವಂಗಳು' ಎಂಬ ವಿಡಂಬನೆ, 'ವೇದವನೋದಿದವರ ಮುಂದೆ ಹೋಗಿ ಆಳು ಕಂಡೆಯಾ ಎಲೆ ಹೋತೆ' ಎಂಬ ವ್ಯಂಗ್ಯ, 'ಬೆರಣೆಯನಾಯಲಲ್ಲದೆ ಅಟ್ಟುಣ್ಣ ತೆರಹಿಲ್ಲವೆನಗೆ' ಎಂಬ ಆತ್ಮವಿಮರ್ಶೆ, 'ಕೊಲುವೆನೆಂಬ ಭಾಷೆ ದೇವನದು ಗೆಲುವೆನೆಂಬ ಭಾಷೆ ಭಕ್ತನದು' ಎನ್ನುವ ಅದಮ್ಯ ಆಶಾವಾದ. 'ನುಡಿಯಲ್ಲಿ ಎಚ್ಚತ್ತು, ನಡೆಯಲ್ಲಿ ತಪ್ಪಿದರೆ ಹಿಡಿದಿರ್ದ ಲಿಂಗ ಘಟಸರ್ಪದಂತೆ' ಎಂಬ ಎಚ್ಚರ. 'ನೆಲನೊಂದೇ ಹೊಲಗೇರಿ ಶಿವಾಲಯಕ್ಕೆ' ಎಂಬ ಸರ್ವಸಮತಾಭಾವ, 'ಕಣ್ಗಳು ತುಂಬಿದಬಳಿಕ ನೋಡಲಿಲ್ಲ' ಎಂಬ ಅನುಭಾವದ ಉನ್ನತಸ್ಥಿತಿ ಸಾವಿರ ಸಾವಿರ ರೀತಿಗಳಲ್ಲಿ, ಪ್ರತಿಮೆಗಳಲ್ಲಿ ತಮ್ಮ ವ್ಯಕ್ತಿತ್ವವನ್ನೇ ಕರಗಿಸಿ ಎರಕ ಹೊಯ್ದಿದ್ದಾರೆ ಮಹಾಸಾಧಕ, ತೀವ್ರಾನುಭವಶೀಲ ಬಸವಣ್ಣನವರು.

ನಾವು ಓದಿದ ಎಲ್ಲ ಗ್ರಂಥಗಳೂ ನಮ್ಮ ಮೇಲೆ ಪ್ರಭಾವವನ್ನು ಬೀರಲಾರವು. ಆದರೆ ನಾವಾಗಿ ಅವುಗಳ ಮಹತ್ವವನ್ನು ಶೋಧಿಸಿ ಕಂಡುಕೊಂಡಂಥ ಗ್ರಂಥಗಳು ಮಾತ್ರ ನಮ್ಮ ಅಮೂಲ್ಯ ನಿಧಿಯಾಗುತ್ತವೆ. ಈ ಬಗೆಯ ಸಾಹಿತ್ಯ ಎಂದಿಗೂ ಹಳಸಲಾರದು. ಕಾಲ ಗತಿಸಿದಂತೆ, ಇಲ್ಲವೆ ವಿಚಾರಗಳು ಬೆಳೆದಂತೆ ಇವು ಹಿಂದೆ ಬೀಳುವಂಥವಲ್ಲ. ವಿಜ್ಞಾನ ಪ್ರಪಂಚದ ಹೊಸ ಹೊಸ ಶೋಧನೆಗಳಾಗಲಿ, ತತ್ವಜ್ಞಾನದ ಹೊಸಹೊಸ ವಿಚಾರಗಳಾಗಲಿ ಇಂಥ ಕೃತಿಗಳನ್ನು ಹಳೆಯದನ್ನಾಗಿ ಮಾಡಲಾರವು. ಏಕೆಂದರೆ ಅವುಗಳಲ್ಲಿ ಸ್ವಂತ ಅನುಭವದಿಂದ ಕಂಡುಕೊಂಡ ಸಾರ್ವಕಾಲೀನ ಮೌಲ್ಯಗಳು ಸಮಕಾಲೀನಕ್ಕೂ ಬೆಳಕನ್ನು ಬೀರಿ ಪ್ರಸ್ತುತವೆನಿಸುವ ಸತ್ವವನ್ನು ಪಡೆದಿರುತ್ತದೆ. ಆದುದರಿಂದ ಈ ವಚನಗ್ರಂಥದಲ್ಲಿ ಎಂದೆಂದಿಗೂ ಸತ್ವಶಾಲಿಯಾದ ಸಮಾಧಾನವನ್ನೂ ಆಶ್ರಯವನ್ನೂ ನಾನು ಪಡೆದಿದ್ದೇನೆ. ಅಲ್ಲಿರುವುದೆಲ್ಲ "ತೆರಹಿಲ್ಲದ ನಡೆ, ತೆರಹಿಲ್ಲದ ನುಡಿ, ತೆರಹಿಲ್ಲದ ಸಂಭಾಷಣೆಯ ಸುಖವು, ತೆರಹಿಲ್ಲದ ನಂಬಿಕೆ, ಸ್ವಾನುಭಾವದ ಸುಖವು. ತೆರಹಿಲ್ಲದ ಮಹಿಮೆ, ತೆರಹಿಲ್ಲದ ವಿಚಾರ".

ನನ್ನ ಕಾವ್ಯದ ಮೇಲೆ ವಚನಸಾಹಿತ್ಯದ ಈ ಪ್ರಭಾವವನ್ನು ವಿಮರ್ಶಕರು ಗುರುತಿಸಿದ್ದಾರೆ. ಶ್ರೀ ಗೌರೀಶ ಕಾಯ್ಕಿಣಿಯವರು ಈ ಬಗ್ಗೆ ಬರೆಯುತ್ತ, "ಈ ಕವಿಯ ಕನ್ನಡ ವಾಗ್ಧೋರಣೆಯೇ ಶಿವಶರಣರ ವಚನ ವೈಖರಿಯಲ್ಲಿ ಸಂಸ್ಕಾರಗೊಂಡು ಪುಟವಿಟ್ಟಂತೆ ಇದೆ. ಆದ್ದರಿಂದ ಅನೇಕ ಕವನಗಳಲ್ಲಿ ಸ್ಪಷ್ಟವಾಗಿಯೋ ಅಸ್ಪಷ್ಟವಾಗಿಯೋ ವಚನಗಳ ದನಿ ಗಡುಸಾಗಿ, ಮಿದುವಾಗಿ, ಹೆಡಸಾಗಿ, ನವಿರಾಗಿ ಪಡಿನುಡಿಯುತ್ತವೆ. ಕೆಲವು ಸಲ Allusion ಅಥವಾ

ಶ್ರುತನಿಯೋಜನದಿಂದ ಕವಿಯ ಒಂದು ಉಕ್ತಿಗೆ, ಅದರ ಸಂದರ್ಭಕ್ಕೆ, ಅದರ ಅರ್ಥಗೌರವಕ್ಕೆ ಹೆಚ್ಚಿನ ಅಂತಸ್ತು ಆಯಾಮ ಕಟ್ಟಿ ನಿಲ್ಲುತ್ತವೆ. ಈ ಪ್ರಾಸಾದಿಕ ವಾಣಿಯು ಒಂದು ಅಪೂರ್ವ ಹೃದ್ಯತೆಯ ಸಂವೇದನೆಯನ್ನು ಜುಮ್ಮನೆ ಇಂಗಿತಜ್ಞರ ನರಗಳಲ್ಲಿ ಮಿಂಚಾಡಿಸುತ್ತದೆ" ಎಂದಿದ್ದಾರೆ.

ಕಾವ್ಯದಲ್ಲಿ ಗದ್ಯತನವೂ ಹೊಸಬಗೆಯ ಕವಿತೆಯ ಒಂದು ಧೋರಣೆ. ಇದರ ಉದ್ದೇಶ ಕಾವ್ಯವನ್ನು ಸಂಗೀತವಾಗಿಸದೆ ಕಾವ್ಯವಾಗಿಯೇ ಉಳಿಸುವುದು. ಹಾಗೂ ಅದನ್ನು ಓದುಗರಿಗೆ ಹತ್ತಿರವಾಗಿಸುವುದು. ಆದರೆ ಇದು ನೀರಸ ಗದ್ಯವಾಗದೆ, ದಿನಬಳಕೆಯ ಮಾತು ಮಾತ್ರ ಆಗದೆ ಕಾವ್ಯವಾಗಬೇಕಾದರೆ ಕವಿತೆಯುದ್ದಕ್ಕೂ ಸಾಧಿಸುವ ಅಂತರ್ಲಯ ಹಾಗೂ ಶಬ್ದಾರ್ಥ ಕೋಶಾರ್ಥಕ್ಕೆ ನಿಲ್ಲದೆ, ಅನುಭವವನ್ನು ಮುಟ್ಟಿಸುವ, ಧ್ವನಿಯನ್ನು ಅನುರಣನಗೊಳಿಸುವ ಶಕ್ತಿ ಅಗತ್ಯ. ನನ್ನ ಕಾವ್ಯದಲ್ಲಿ ಇದು ಕೆಲಮಟ್ಟಿಗೆ ಸಾಧಿತವಾಗಿದ್ದರೆ ಅದು ಬಸವಣ್ಣನವರ ವಚನಗಳ ಪ್ರಭಾವವನ್ನು ಅರಗಿಸಿಕೊಂಡುದರಿಂದಲೇ ಎಂದು ಹೇಳಬಹುದು.

ಪುಸ್ತಕಗಳ ಮೇಲೆ ಪುಸ್ತಕಗಳು ಪ್ರಕಟವಾಗುತ್ತಲೇ ಇರುತ್ತವೆ. ಆದರೆ ನಿಜವಾದ ಪುಸ್ತಕವೊಂದು ಪ್ರಕಟವಾದಾಗ ಅದು ತನ್ನಲ್ಲಿಯ ಶಬ್ದಗಳಿಗೆ ಅಭೂತಪೂರ್ವವಾದ ಶಕ್ತಿಯನ್ನೂ, ದೀರ್ಘಾಯುಸ್ಸನ್ನೂ ನೀಡುತ್ತದೆ. ಜೀವನದ ಹೋರಾಟಕ್ಕೆ ಒಂದು ಉದ್ದೇಶವನ್ನೂ, ಗುರಿಯನ್ನೂ, ಪ್ರೇರಣೆ ಪ್ರೋತ್ಸಾಹಗಳನ್ನೂ ಒದಗಿಸುತ್ತದೆ. 'ಮಂಕುತಿಮ್ಮನ ಕಗ್ಗ'ದಲ್ಲಿ ಡಿವಿಜಿಯವರು ತಮ್ಮ ಅವೇಶರಹಿತವಾದ, ಗಹನವಾದ ಚಿಂತನೆಗೆ ಪದ್ಯರೂಪದ ಚೌಕಟ್ಟನ್ನು ಒದಗಿಸುವಾಗ, ಸ್ವಾನುಭಾವದೊಡನೆ ಗ್ರಂಥಾನುಭವವನ್ನೂ ಬರೆದಿದ್ದಾರೆ :

ವಿಶದಮಾದೊಂದು ಜೀವನಧರ್ಮ ದರ್ಶನವನು
ಉಸುರಿಕೊಳೆ ತನ್ನ ಮನಸಿಗೆ ತಾನೆ ಬಗೆದು
ನಿಸದವಂ ಗ್ರಂಥಾನುಭವಗಳಿಂದಾಗಿಸುತ
ಹೊಸೆದಿನೀ ಕಗ್ಗವನು, ಮಂಕುತಿಮ್ಮ.

ಉತ್ತಮವಾದ ಪ್ರತಿಯೊಂದು ಗ್ರಂಥದ ಹಿಂದೆ ಒಂದು ಜೀವಂತ ಆತ್ಮವಿರುತ್ತದೆ. ಆ ಗ್ರಂಥವನ್ನೋದಿದಾಗ ಅದರ ಸ್ಪರ್ಶ ನಮಗೂ ಆಗುತ್ತದೆ. ಬಸವಣ್ಣನವರ ವಚನಗಳನ್ನೋದುವಾಗ ಅವರ ವ್ಯಕ್ತಿತ್ವವನ್ನು ನಾವು ಹೆಜ್ಜೆಹೆಜ್ಜೆಗೂ, ಕ್ಷಣಕ್ಷಣಕ್ಕೂ ಅನುಭವಿಸುತ್ತೇವೆ. ವಾಲ್ಟವ್ಹಿಟ್‌ಮನ್ ತನ್ನ ಒಂದು ಕವಿತೆಯಲ್ಲಿ ಹೀಗೆ ನುಡಿಯುತ್ತಾನೆ.

My songs cease - I abandon them,
From behind the screen where I hid, I
advance personally, solely to you
Camerado! This is no book
Who touches this, touches a man

(ಸಮತೋಲನ : ೧೯೮೯)

## ೧೫

## ಸಂಭಾಷಣೆ : ಕಳೆದುಹೋಗುತ್ತಿರುವ ಕಲೆ

"ಜೀವನದ ಅತ್ಯಂತ ಹೆಚ್ಚಿನ ಸಂತೋಷಗಳಲ್ಲಿ ಸಂಭಾಷಣೆಯೂ ಒಂದು"

- ಸಿಡ್ನೆ ಸ್ಮಿಥ್

"ನಮ್ಮ ಮಿದುಳನ್ನು ಉಳಿದವರೊಂದಿಗೆ ಉಜ್ಜಿ ಹೊಳಪುಗೊಳಿಸಿಕೊಳ್ಳುವುದು ಒಳ್ಳೆಯದು"

- ಮಾಂಟೇನ್

ಮನೆಯಲ್ಲಿಯೇ ಕುಳಿತು ನಡೆಸಬಹುದಾದ ನಮ್ಮ ಅತ್ಯಂತ ಪ್ರಾಚೀನ ಕ್ರೀಡೆಯಾದ ಸಂಭಾಷಣೆಗೆ ಈಗ ಆಪತ್ಕಾಲ ಒದಗಿದೆ. ಆಧುನಿಕ ವರದಾನಗಳೆನಿಸಿದ ರೇಡಿಯೊ, ದೂರದರ್ಶನ ಮೊದಲಾದವು ಮನೆಯ ಬಾಗಿಲಿಗೇ ಬಂದು ನಿಂತಿರುವಾಗ ಒಳಗೆ ನಡೆಯುವ ಸಂಭಾಷಣೆ ಕಿಡಕಿಯಿಂದ ಹೊರಗೆ ಹಾರಿ ಹೋಗುವ ತಯಾರಿಯಲ್ಲಿದ್ದಂತೆ ತೋರುತ್ತದೆ. ಸುಮಾರು ಎರಡು ದಶಕಗಳ ಹಿಂದೆ ಯೇಲ್ ವಿಶ್ವವಿದ್ಯಾಲಯದ ಅಧ್ಯಕ್ಷ ಹೀಗೆ ಹೇಳಿದ್ದರು:

"ಸಂಭಾಷಣೆಗೆ ಈ ದೇಶದಲ್ಲೀಗ ಕೇಡುಗಾಲ ಬಂದಿದೆ. ವ್ಯಾಪಾರಿ ಹಾಡ ಹೊಗಳಿಕೆಯಲ್ಲಿ ಅದು ಮುಳುಗಿಹೋಗಿದೆ. ಈ ಮೊದಲು ಒದು-ವಾದಗಳಲ್ಲಿ ಉತ್ಸಾಹದಿಂದ ತೊಡಗುತ್ತಿದ್ದವರು, ಈಗ ಮಂದ ಬೆಳಕಿನ ದಿವಾನಖಾನೆಯಲ್ಲಿ ದೂರದರ್ಶನವನ್ನು ವೀಕ್ಷಿಸುತ್ತ ಮಾತುಕತೆಯ ಸದ್ದಡಗಿಸಿಬಿಟ್ಟಿದ್ದಾರೆ. ನಮ್ಮನ್ನು ಸಮರ್ಥಿಸಿಕೊಂಡಿರುವ ನಾಗರೀಕತೆಗೆ ಅಸ್ತಿಭಾರ ಹಾಕಿದ್ದು ಸಂಭಾಷಣೆ. ಉನ್ನತವಾದ ಬೋಧೆಯನ್ನು ಮೊಟ್ಟ ಮೊದಲು ದಾಖಲೆಗೊಳಿಸಿದ ಬೈಬಲಿನ ಹೊಸ ಒಡಂಬಡಿಕೆ (New Testament) ಸಂವಾದ ರೂಪದಲ್ಲಿ ರಚನೆಗೊಂಡಿದೆ. ಮಹಾಗ್ರಂಥಗಳು, ವೈಜ್ಞಾನಿಕ ಸಂಶೋಧನೆಗಳು, ಕಲಾಕೃತಿಗಳು ಸತ್ಯ ಮತ್ತು ಸೌಂದರ್ಯದ ವಿಶಿಷ್ಟ ಕಾಣ್ಕೆಗಳು - ಇವೆಲ್ಲವೂ ಅರ್ಥಪೂರ್ಣವೆನಿಸಲು ಸಂವಾದದ ಅಗತ್ಯವಿದೆ. ಅದಿಲ್ಲದಿದ್ದರೆ ಅವೆಲ್ಲ ಸುಮ್ಮನೆ ಅರ್ಥವಿಲ್ಲದ ಭಾಷೆ-ಕುರುಡನಿಗೆ ಬಣ್ಣ, ಕಿವುಡನಿಗೆ ಸಂಗೀತದಂತೆ. ಅಧ್ಯಯನ, ನಿಜವಾದ ಧರ್ಮ ಮತ್ತು ಸ್ವತಂತ್ರ ಸರಕಾರ ಇವುಗಳ ತೊತ್ತು ಸಂಭಾಷಣೆ".

ಬಹಳ ಹಿಂದೆಯೇ ಪ್ಲೇಟೋ ಹೇಳಿದ, "ಎಲ್ಲ ಮನುಷ್ಯರು ಸರಿಯಾಗಿ ಪ್ರಶ್ನೆ ಹಾಕಿ ಪರೀಕ್ಷಿಸಿದರೆ ಸರಿಯಾಗಿಯೇ ಉತ್ತರಿಸುತ್ತಾರೆ". ಸಂಭಾಷಣೆಯ ಮೂಲಕವೇ ಸಾಕ್ರೆಟೀಸ್ ತತ್ತ್ವಜ್ಞಾನವನ್ನು ಮುಗಿಲಿನಿಂದ ಕೆಳಗೆ ನಡೆದಾಡುವ ಬೀದಿಗಿಳಿಯುವಂತೆ ಮಾಡಿದನು. ಸಂಸ್ಕೃತಿಯ

ಪ್ರಗತಿಯೇ ಬಿಡುವಿನ ಸಮಯವನ್ನು ಜಾಣ್ಮೆಯಿಂದ ಉಪಯೋಗಿಸುವುದನ್ನವಲಂಬಿಸಿದೆ. ಸಂಭಾಷಣೆ ಅದರ ಒಂದು ರೂಪವಾಗಿದೆ ಎಂದು ಚೀನದ ಪಂಡಿತ-ತತ್ವಜ್ಞಾನಿ ಲಿನ್‌ಯುಂಟಾಂಗನ ಅಭಿಪ್ರಾಯ. ಅವನೇ ಹೇಳಿರುವಂತೆ, ಗ್ರೀಕರ ಸ್ಪಷ್ಟವಾದ ವಿಚಾರಗಳು ಮತ್ತು ಅವರ ತಿಳಿಯಾದ ಗದ್ಯಶೈಲಿ ಪ್ಲೇಟೋನ ಸಂಭಾಷಣೆಗಳಲ್ಲಿ ಕಂಡುಬಂದಿರುವಂತೆ ಅವರ ಬಿಡುವಿನ ಸಂಭಾಷಣ ಕಲೆಗೆ ಋಣಿಯಾಗಿವೆ. ಕನ್ನಡದ ಶ್ರೇಷ್ಠ ಅನುಭಾವ ಗ್ರಂಥವೆನಿಸಿರುವ ಶೂನ್ಯ ಸಂಪಾದನೆ, ಹನ್ನೆರಡನೇ ಶತಮಾನದ ಶರಣರ ವಚನಗಳು ಒಂದು ಬಗೆಯ ಸಂವಾದ ರೂಪವನ್ನು ಪಡೆದಿರುವುದರಿಂದಲೇ ವಿಶಿಷ್ಟವೆನಿಸಿವೆ. ವ್ಯಾಸಂಗದಿಂದ ನಾವು ಪಡೆದ ವಿದ್ಯೆಯ ಆಚೆಗಿರುವ ಜ್ಞಾನದ ಕೊಡುಗೆ ಸಂವಾದದಿಂದ ದೊರೆಕೊಳ್ಳುವದೆಂಬುದು ನಮ್ಮೆಲ್ಲರ ಅನುಭವಕ್ಕೆ ಬಂದ ಮಾತಾಗಿದೆ. ಸಂವಾದ-ಸಂಭಾಷಣೆ ವಿದ್ಯಾರ್ಥಿಯ ಪ್ರಯೋಗಶಾಲೆ ಹಾಗೂ ಕಮ್ಮಟ ಎನಿಸಿರುವುದು ಸಾರ್ವತ್ರಿಕ ತತ್ವವಾಗಿದೆ. ನಮ್ಮ ಎಲ್ಲ ಸಂತೋಷಗಳಲ್ಲಿ ಕಡಿಮೆ ಶ್ರಮದಿಂದ ಹೆಚ್ಚಿನದನ್ನು ಪಡೆಯುವ ಸಾಧನವೆಂದರೆ ಸಂಭಾಷಣೆ, ಸರಸ ಸಲ್ಲಾಪ.

ನಾಗರೀಕತೆಯ ಕೊಡುಗೆಯೆನಿಸಿದ ಈ ಸಂಭಾಷಣ ಸಾಮರ್ಥ್ಯ ನಿಘಂಟಿನಲ್ಲಿ ವಿವರಿಸಿದಂತೆ ಆಡುಮಾತಿನಲ್ಲಿ ವಿಚಾರಗಳನ್ನು ತಿಳಿಸುವುದು-ಪ್ರಾಣಿಗಳಿಂದ ನಮ್ಮನ್ನು ಬೇರ್ಪಡಿಸಿ ತೋರಿಸುತ್ತದೆ. ಸ್ಪಷ್ಟೋಚ್ಚಾರದ ಧ್ವನಿಯ ಮೂಲಕ ಸಂವಹನ ನಮ್ಮ ಮನುಷ್ಯ ಜಾತಿಯ ಅಗತ್ಯಗಳಲ್ಲಿ ಒಂದಾಗಿದೆ. ಮಾತು ನಾಗರಿಕತೆಯ ಸಂಕೇತ ಹಾಗೂ ಸೂಚನೆಗಳಲ್ಲಿ ಒಂದೆನಿಸಿದ್ದು ಬಹಳಷ್ಟು ಜನರಿಗೆ ಸಂಭಾಷಣ ಕಲೆಯ ಅರಿವೇ ಇದ್ದಂತಿಲ್ಲ. ಅದರ ಬಗ್ಗೆ ಅವರ ಅಜ್ಞಾನ ಎಷ್ಟಿದೆಯೆಂದರೆ, ಅದೊಂದು ಕಲೆ ಎಂದು ಅವರು ನಂಬುವದಕ್ಕೂ ಸಾಧ್ಯವಿಲ್ಲ. "ಅದೇನು? ಮನುಷ್ಯನಿಗೆ ಸೀನುವಷ್ಟೆ ಸ್ವಾಭಾವಿಕವಾದದ್ದು" ಎಂದು ಅವರು ವಿನೋದವಾಡಬಹುದು. ಏನಿದ್ದರೂ ಅದು ತಪ್ಪು ತಿಳುವಳಿಕೆ. ಅತ್ಯಂತ ಕಠಿಣವಾದ ಕಲೆಗಳಲ್ಲಿ ಸಂಭಾಷಣೆಯನ್ನು ಪರಿಗಣಿಸಬಹುದು. ಗಾಳಿವಾದ್ಯ, ತಂತಿವಾದ್ಯಗಳಿಂದ ಹೊರಡಿಸುವ ಸಂಗೀತಕ್ಕಿಂತಲೂ ಇದು ಕಷ್ಟಕರವಾದದ್ದು, ನಿಜಕ್ಕೂ ಜೀವನದಷ್ಟೇ ಶ್ರಮ ಸಾಧ್ಯವಾದದ್ದು. ಸುಂದರವಾದ ಸಂಭಾಷಣೆ, ಉತ್ಕೃಷ್ಟ ಸ್ವಭಾವ ಹಾಗೂ ಸಂಸ್ಕೃತಿಯ ಹೊಂದಿಕೆಯಿಂದ ಮಾತ್ರ ಹೊರಹೊಮ್ಮುವಂಥದು. ಹೇಗೋ ಹಗುರಾಗಿ ಉತ್ಪಾದನೆಗೊಳ್ಳುವ ವಸ್ತು ಅದಲ್ಲ. ವಿವಿಧ ಬಗೆಯ ಜ್ಞಾನದ ಕಣಜದಂತಿರುವ ಮನಸ್ಸು ಸಂಭಾಷಣೆಯ ನಿಜವಾದ ಆಸ್ತಿಯೆನ್ನಬಹುದು. ಹೊತ್ತಿಗೆ ಸರಿಯಾಗಿ ಅದನ್ನು ಒದಗಿಸುವುದರಲ್ಲಿಯೇ ಜಾಣತನವಿದೆ. ಸರ್ವಜ್ಞ ಅದನ್ನು ಪರಿಣಾಮಕಾರಿಯಾಗಿ ಸೂಚಿಸುತ್ತಾನೆ.

ಹೊತ್ತಿಗೊದಗಿದ ಮಾತು । ಸತ್ತವನು ಎದ್ದಂತೆ<br>
ಹೊತ್ತಾಗಿ ನುಡಿದ-ಮಾತು ಕೈಜಾರಿದಾ<br>
ಮುತ್ತಿನಂತಿಹುದು ಸರ್ವಜ್ಞ

ಈಗ ನೋಡಿದರೆ, ಸಂಭಾಷಣೆಯ ಸುಖ, ಸಂತೋಷಗಳನ್ನೇ ಅರಿಯದ ಪೀಳಿಗೆಯೊಂದು ಬೆಳೆದುಬರುತ್ತಿರುವಂತೆ ತೋರುತ್ತದೆ. ಸಂಭಾಷಣೆ-ಹಾಗೆಂದರೇನು ಎಂಬುದು ಕೂಡ ಅವರಿಗೆ ಗೊತ್ತಿರುವಂತಿಲ್ಲ. ನಮ್ಮ ಯುವಕ ಮಿತ್ರರು ಹೇಳಬಹುದು- ಸಂಗ, ಸಂಭಾಷಣೆ ಕಾಲದ ಗೊತ್ತು ಪಾಡು, ರಿಕ್ಷಾ ಅಥವಾ ಕೈಬಂಡಿಗಳಂತೆ ಅಸಂಗತವಾದದ್ದು ಎಂದು. ಆದರೆ "ಇಡಿಯ ಮಾನವಕುಲವನ್ನೇ ಮನುಷ್ಯ ತನ್ನ ಸ್ಪರ್ಧೆಗಾಗಿ ಪಡೆದಿರುವ ಕಲೆ ಸಂಭಾಷಣೆ" ಎಂದಿದ್ದಾನೆ ಎಮರ್ಸನ್. ಎಷ್ಟೋ ಜನ ಎಮರ್ಸನ್‌ನನ್ನು ಮರೆತುಬಿಟ್ಟಿರುವಂತೆ ಈ ಕಲೆಯೂ ಈಗ ಮರೆತುಹೋದ ವಿಷಯವಾಗಿದೆ.

ವಯಸ್ಸಾಗಿದ್ದರೂ, ಮುಪ್ಪನ್ನು ನಿರಾಕರಿಸುತ್ತಿರುವ ನಮ್ಮ ತಲೆಮಾರಿನವರೂ ಸಂಭಾಷಣೆಯ ಸುದ್ದಿ ತೆಗೆದರೆ ಹಳಹಳಿಕೆಯ ಭಾವನೆ ತಾಳುತ್ತಾರೆ. ನಮ್ಮ ಮಾತಿನಲ್ಲಿ, ಭಾಷಣದಲ್ಲಿ ನಮಗೆ ಎಷ್ಟೊಂದು ನಿರ್ಲಕ್ಷ್ಯವೆಂದರೆ-ಸರಿಯಾಗಿರದ ವಾಕ್ಸರಣಿ, ನುಡಿಕಟ್ಟು ಜಗ್ಗಾಡಿದಂತಿರುವ, ವಿರೂಪಗೊಂಡ, ಒಂದಕ್ಕೊಂದು ಸಂಬಂಧವಿರದ ವಾಕ್ಯಗಳು ನಮ್ಮ ವಿಚಾರಗಳನ್ನು ಸ್ಪಷ್ಟವಾಗಿ ತಿಳಿಯಪಡಿಸುವುದೇ ಇಲ್ಲ. ಹಿಂದಿನ ಕಾಲದ, ಅಂದರೆ ಸುಮಾರು ಮೂವತ್ತರ ದಶಕದ ಮಧ್ಯದ ಸಂಸ್ಕೃತಿಯಲ್ಲಿ ಶಿಕ್ಷಣ ಪಡೆದ ಭಾರತೀಯನಿಗೆ ಭಾಷೆಯ ಬಗ್ಗೆ ಹೆಚ್ಚು ಗೌರವವಿದ್ದಿತು. ಒಂದಿಷ್ಟು ಅಸಹಜವೆಂದು ತೋರಿದರೂ (೧೮ನೇ ಅಥವಾ ೧೯ನೇ ಶತಮಾನದ ಗದ್ಯದಂತೆ) ಅವನ ನೀಟಾದ ಉಡುಪಿನಂತೆ. ಸಮನಾಗಿ ಸುತ್ತಿದ ಜರತಾರಿ ಅಂಚಿನ ರುಮಾಲಿನಂತೆ, ತನ್ನ ಸ್ನೇಹಿತರು ಕಂಡಾಗ ಕೈಜೋಡಿಸಿ ನೀಡುವ ನಮಸ್ಕಾರದ ಸೊಗಸಿನಂತೆ ಅವನ ಪದವಿನ್ಯಾಸದಲ್ಲಿ ಒಂದು ರಮ್ಯತೆ ಇರುತ್ತಿತ್ತು. ಬೆಳೆಸಿಕೊಂಡು ಹೋಗಲು ಯೋಗ್ಯ ಎಂದಷ್ಟೆ ಅಲ್ಲ, ನಿಜವಾಗಿಯೂ ಶಿಕ್ಷಣದ ಒಂದು ಅಗತ್ಯದ ಅಂಗವಾಗಿ ಆ ಕಾಲದಲ್ಲಿ ಸಂಭಾಷಣೆಯನ್ನು ಒಂದು ಕಲೆಯಂತೆ ಪರಿಗಣಿಸಲಾಗುತ್ತಿತ್ತು. ಮನೋವಿಕಾರಗಳು, ದೌರ್ಬಲ್ಯಗಳು ಮೊದಲಾದವುಗಳಿಂದ ಮನುಷ್ಯ ವ್ಯಕ್ತಿ ದುಷ್ಟನಾಗಿರಬಹುದು; ಆದರೆ ಉಳಿದವರ ಜೊತೆಗಿರುವಾಗ ಮೊದ್ದನಂತೆ ಇರುವುದು, ಸಮಾಜದಿಂದ ಬಹಿಷ್ಕಾರಗೊಂಡಷ್ಟು ಅಕ್ಷಮ್ಯ ಅಪರಾಧವೆನಿಸುತ್ತಿತ್ತು.

ಮಾತಿಗೆ ಮೊದಲು ಮಾಡುವಾಗ ಎಲ್ಲರಿಗೂ ಸಂಬಂಧಪಟ್ಟಂತೆ ಹವಾಮಾನದ ಸುದ್ದಿಯಿಂದ ಪ್ರಾರಂಭಗೊಂಡರೂ ಅಷ್ಟೇ ಅದರ ಉದ್ದೇಶವಲ್ಲ. 'ಜಾನ್ ಓ ಲಂಡನ್ ವೀಕ್ಲಿ'ಯಲ್ಲಿ ಲೇಖಕರೊಬ್ಬರು ಸೂಚಿಸಿರುವಂತೆ, ಸಂಭಾಷಣೆ ತನ್ನ ಹರ್ಷದಾಯಕ ರೀತಿಯಿಂದ, ಸಾವಧಾನದ, ಪುನರಾವೃತ್ತಿಯ ಒಳಹೊಕ್ಕು ನೋಡುವ ಲಕ್ಷಣವುಳ್ಳದ್ದು. ಚಳಿಯಿಂದ ಪ್ರಾರಂಭವಾಗಿ ಬರಬರುತ್ತ ಪರಸ್ಪರ ಮನಸ್ಸುಗಳನ್ನು ಬೆಚ್ಚಗೆ ಉತ್ತೇಜನಗೊಳಿಸುತ್ತ, ಕಿಡಿಗಳು, ಒಮ್ಮೊಮ್ಮೆ ಉರಿಯೂ ಕಾಣುವ ಹಾಗಾಗುವ ಇಬ್ಬರು ಮನುಷ್ಯ ವ್ಯಕ್ತಿಗಳ ಪ್ರಕ್ರಿಯೆ ಅದು. ಸಂಭಾಷಣೆ ಬೆಳೆಯಬೇಕಾದರೆ ಸ್ವಲ್ಪ ಕಾಲಬೇಕು. ಮಾತಿನಲ್ಲಿ ತೊಡಗಿದವರ ವ್ಯಕ್ತಿತ್ವ ಮೊಗ್ಗೆಯಾಗಿ ಹೂವಾಗುವಂತೆ ನೈಸರ್ಗಿಕ ವಿಕಾಸ ಅದರಿಂದಾಗಬೇಕು. ಅದೊಂದು ವ್ಯಕ್ತಿತ್ವಗಳ ಒಡನಾಟ. ಹೆರಾಕ್ಲಿಟಿಸನನ್ನು ಕುರಿತ ಒಂದು ಹಾಡಿನಲ್ಲಿ ಅದರ ಅನಂತತೆಯ ಅನುಭವವಾಗುತ್ತದೆ:

ಅವರು ನನಗೆ ಹೇಳಿದರು ಹೆರಾಕ್ಲಿಟಿಸ್
ನೀನು ತೀರಿಕೊಂಡೆಯೆಂದು ಹೇಳಿದರು.
ಈ ದುವಾರ್ತೆಯನ್ನವರು ನನಗೆ ಮುಟ್ಟಿಸಿದರು.
ದುಃಖ ತುಂಬಿದ ನನ್ನ ಕಣ್ಣೀರ ಕಟ್ಟೆಯೊಡೆದರು.
ನೆನಪಾದಾದಂತೆ ನಾನು ಅತ್ತುಬಿಟ್ಟೆ, ಅದೆಷ್ಟು ಸಲ
ನಾವಿಬ್ಬರೂ ಹಾಗೆ ಕುಳಿತುಬಿಡುತ್ತಿದ್ದವು-
ಮಾತಾಡುತ್ತಾ, ಆಡುತ್ತಾ ಸೂರ್ಯನನ್ನೇ ದಣಿಸಿ
ಆಕಾಶದಂಚಿನಲ್ಲಿ ಮುಳುಗಿಸಿಬಿಡುತ್ತಿದ್ದವು.

ಮಾತು ಅಥವಾ ಸಂಭಾಷಣೆಯಲ್ಲಿ ಮೂರು ಸಂಗತಿಗಳನ್ನು ಮುಖ್ಯವಾಗಿ ಗಮನಿಸಬೇಕೆಂದು ಹೇಳಲಾಗುತ್ತದೆ. ಸ್ವತಃ ತಾನು, ಸಂಬಂಧಪಟ್ಟ ಇನ್ನೊಬ್ಬ(ರು) ಮತ್ತು ಇವರನ್ನು ಬಿಟ್ಟು ಉಳಿದೆಲ್ಲವು; ಅದನ್ನೇ ಜಗತ್ತೆಂದು ಕರೆಯಬಹುದು. ಈ ಮೂವರೂ ಅದರಲ್ಲಿ ಪಾಲುಗೊಳ್ಳಬೇಕು ಮತ್ತು ಪರಸ್ಪರ ಸಾಕಷ್ಟು ಲಕ್ಷ್ಯ ವಹಿಸಿರಬೇಕು. ಇದರಂತೆಯೇ ಸಂಭಾಷಣಾ ಚತುರರನ್ನು ಮೂರು ಗುಂಪುಗಳಲ್ಲಿ ವಿಂಗಡಿಸಬಹುದು. ಮಾತಿನ ಕೊಡುಕೊಳೆಯನ್ನು, ಏನೇ ಆಗಲಿ 'ಸುರಕ್ಷಿತ' ಹಾಗೂ ದಿನ ಬಳಕೆಯ ಮಟ್ಟದಲ್ಲಿಡಲು ನಿರ್ಧರಿಸಿದವರನ್ನು ಮೊದಲನೆಯ ಗುಂಪಿಗೆ ಸೇರಿಸಬಹುದು. ಪ್ರಸ್ತಾಪಿಸಲ್ಪಟ್ಟ ವಿಷಯದ ಬಗ್ಗೆ ಮನುಸ್ಸು ಮಾಡಿದವರು ನಂತರದ ಗುಂಪಿಗೆ ಸೇರುತ್ತಾರೆ. ಅದರ ಮೇಲೆ ಅಂಥ ಹೆಚ್ಚಿನ ಬೆಳಕು ಬೀರಲು ಅವರು ಬಯಸುವವರಲ್ಲ. ಹೇಳಿದ್ದನ್ನು ಲಕ್ಷ್ಯಗೊಟ್ಟು ಕೇಳುತ್ತ, ಆಗಾಗ ಪ್ರಶ್ನೆ ಮಾಡುತ್ತ, ಅನುಭವಕ್ಕಾಗಿ ಸಾಹಸಪಡುತ್ತ ಎದುರಾಬದುರು ಸಂಭಾಷಿಸಬಲ್ಲ ಸಂಸ್ಕಾರಗೊಂಡ ಜೀವಿಗಳ ಮೂರನೆಯ ಗುಂಪೊಂದು ಇರುವುದು ನಮ್ಮ ಸುದೈವ. ಸ್ವಾರಸ್ಯಕರವಾಗಿದ್ದು, ಸಹನೆ, ಔಚಿತ್ಯಗಳನ್ನು ಕಾಪಾಡಿಕೊಂಡು, ಅಪ್ರಿಯವಾಗದ ರೀತಿಯಲ್ಲಿ ಭಿನ್ನಾಭಿಪ್ರಾಯ ಹೊಂದಿರಬಹುದು ಎಂಬುದನ್ನು ಈ ಗುಂಪಿಗೆ ಸೇರಿದವರು ಚೆನ್ನಾಗಿ ಬಲ್ಲರು. ಅಂಥವರ ಸಂವಾದ ಯುಗಳಗೀತದಂತೆ, ಒಬ್ಬರ ಧ್ವನಿ ಇನ್ನೊಬ್ಬರ ಧ್ವನಿಯೊಂದಿಗೆ ಮೇಳಗೊಂಡು ಸಮತೂಕದ ನಿರ್ಣಯ, ನಿರಾತಂಕವಾದ ಮನಸ್ಸಿನ ನಲಿವನ್ನು ಪಡೆದಿರುತ್ತದೆ. ಅಲ್ಲದೆ ಆಗಾಗ ನಗೆಯ ಹೊನಲನ್ನೇ ಅಲ್ಲಿ ಕಾಣಬಹುದು. ಸರಿಜೋಡಿಯಾದ ಎರಡು ತಲೆಗಳು ಯಾವುದೇ ಒಂದು ವಿಷಯವನ್ನು ತಳಮಟ್ಟ ಸೋಸಿ ತೆಗೆದು, ಅಸ್ಪಷ್ಟವಾಗಿದ್ದ ವಿಚಾರಗಳನ್ನು ಸ್ಫುಟಗೊಳ್ಳುವಂತೆ ಮಾಡಿದರೆ ಯಾರಿಗೆ ಸಂತೋಷವಾಗದು?

ಮಾತಾಳಿಗಳಾದ, ಭಾವೋದ್ರೇಕ ಪ್ರವೃತ್ತಿಯ ಫ್ರೆಂಚ್ ಜನರು ಸಂಭಾಷಣ ಕಲೆಯಲ್ಲಿ ಉಳಿದೆಲ್ಲ ದೇಶಗಳನ್ನು ಮೀರಿಸಿರುವುದು ಎಲ್ಲರಿಗೂ ಗೊತ್ತಿರುವ ಸಂಗತಿ. ಇಂಗ್ಲಿಷ್ ಜನರು ಸಾಮಾನ್ಯವಾಗಿ ಸ್ನೇಹಕ್ಕೆ ಸಗ್ಗದ, ಸಂವಹನಕ್ಕೆ ಸಿದ್ಧಗೊಳ್ಳದ ಮನೋಧರ್ಮದವರೆಂದು ಭಾವಿಸಲಾಗಿದೆ. ಆಂಗ್ಲ ವ್ಯಕ್ತಿಗೆ ಮೇಲಿಂದ ಮೇಲೆ ಕೀಲಿ ಕೊಡಬೇಕಾಗುತ್ತದೆ.

ಕೆಳಮಗ್ಗುಲಾದೊಡನೆ ಅದು ನಿಂತುಬಿಡುತ್ತದೆ. ಆದರೆ ಫ್ರೆಂಚ್ ಮನುಷ್ಯ ಅಲಾರಂ ಬಾರಿಸುತ್ತ ನಿರಂತರ ಮುಂದುವರಿಯುತ್ತಾನೆ. ಮಹಾಕ್ರಾಂತಿಗೆ ಸ್ವಲ್ಪ ಮುಂಚಿನ ಕಾಲದಲ್ಲಿ ಫ್ರೆಂಚರು ಸಂಭಾಷಣೆಯನ್ನು ಉನ್ನತ ಮಟ್ಟಕ್ಕೊಯ್ದಿದ್ದರು. ತತ್ವಜ್ಞಾನಿಗಳ ಕ್ಲಬ್ಬುಗಳಲ್ಲಿ (ಅವರ ವಿನಾಶಕಾರಿ ಸಿದ್ಧಾಂತಗಳು ಅವರ ದೇಶವನ್ನು ಅರಾಜಕತೆಯ ತಿರುಗಣಿ ಮಡುವಿಗೆ ಒಗೆಯುವಂತಿದ್ದವು) ಮ್ಯಾಡಮ್ ಡೆ ಸ್ಟೇಲ್‌ಗಳಂತಹ ಸುಂದರ ಸ್ತ್ರೀಯರಿದ್ದ ಶ್ರೀಮಂತ ದಿವಾನಖಾನೆಗಳಲ್ಲಿ, ಸಾಹಿತಿಗಳ 'ಚಿಕ್ಕ ಭೋಜನಕೂಟ'ಗಳಲ್ಲಿ ಸಂಭಾಷಣೆಯೇ ಅವುಗಳ ಮುಖ್ಯ ಉದ್ದೇಶ ಹಾಗೂ ಆಕರ್ಷಣೆಯಾಗಿದ್ದಿತು. ಫ್ರಾನ್ಸ್ ಮತ್ತು ಯುರೋಪದ ಉನ್ನತ ಮೇಧಾವಿಗಳು, ಬುದ್ಧಿಶಾಲಿಗಳಾದ ವಾಕ್ಚತುರರು ಉಜ್ವಲ ವ್ಯಕ್ತಿಗಳು ಅವುಗಳಲ್ಲಿ ಭಾಗವಹಿಸುತ್ತಿದ್ದರು. ಇಂಗ್ಲೆಂಡಿನಲ್ಲಿ ಸಂಭಾಷಣೆಯ ಕಲೆ ಉಚ್ಛ್ರಾಯ ಸ್ಥಿತಿಗೇರಿದ ಗೋಷ್ಠಿಗಳಿರುತ್ತಿದ್ದವು. 'ಮರ್ಮೇಡ್' ಮದ್ಯದಂಗಡಿಗಳಲ್ಲಿ ಶೇಕ್ಸ್‌ಪಿಯರ್ ಮತ್ತು ಬೆನ್ ಜಾನ್ಸನ್ ಕೂಡಿದಾಗ ಈ ಕಲೆ ವಿಕಾಸಗೊಂಡು ತನ್ನ ಸುವರ್ಣ ದಿನಗಳನ್ನು ಕಂಡಿತು. ಅದೇ ಎಲಿಜಾಬೆಥ್ ಯುಗದಲ್ಲಿ, ವಾಲ್ಟರ್ ರ್‍ಯಾಲೆ, ಫಿಲಿಪ್ ಸಿಡ್ನಿ ಮತ್ತು ಎಡ್ಮಂಡ್ ಸ್ಪೆನ್ಸರ್‌ರಂಥ ಉಜ್ವಲ ರತ್ನಗಳಿದ್ದ ರಾಣಿ ಬೆಸ್‌ಳ ಆಸ್ಥಾನದಲ್ಲಿಯೂ ಸಂಭಾಷಣೆಯ ಕಲೆ ಉನ್ನತಿಕೆಯನ್ನು ಪಡೆಯಿತು. ಹಾಗೆಯೇ ಆ್ಯಡಿಸನ್, ಸ್ಟೀಲ್ ಮತ್ತು ಸ್ವಿಫ್ಟ್ ಕಾಫಿ ಹೌಸುಗಳಲ್ಲಿ ಟ್ಯಾಟ್ಲರ್ ಪತ್ರಿಕೆಗೆ ಲೇಖನಗಳನ್ನು ಕುರಿತು ಚರ್ಚಿಸುತ್ತಿದ್ದಾಗಲೂ, ಅದರಂತೆ ಕ್ವೀನ್ ಆ್ಯನ್ನಳ ಕಾಲದಲ್ಲಿ ಕ್ಲಬ್ಬುಗಳಲ್ಲಿ, ಆಗಸ್ಟನ್ ಯುಗದಲ್ಲಿ ಡಾ|| ಜಾನ್ಸನ್ ಅಧಿಕಾರವಾಣಿಯಿಂದ ಮಾತನಾಡಿದಾಗ ಸ್ವಲ್ಪ ವಿಕಾರವಾಗಿ, ನಸ್ಯದ ವಾಸನೆ, ಎಣ್ಣೆಯ ಕಲೆಗಳಿಂದ ಕೂಡಿದಂತಿದ್ದರೂ ಅಮೂಲ್ಯವಾದ ಪ್ರವಾದಿಯ ನುಡಿಗಳು-ಗೋಲ್ಡ್‌ಸ್ಮಿಥ್, ಬಾಸ್ವೆಲ್, ಎಡ್ಮಂಡ್ ಬರ್ಕ್, ಗಾರ್ನರ್ ಮತ್ತು ಜೋಸುವಾ ರೇನಾಲ್ಡ್‌ರಂಥ ಉದ್ದಾಮ ಸಾಹಿತಿಗಳು ಆತನ ಸಮ್ಮುಖದಲ್ಲಿರುತ್ತಿದ್ದರು. ನಂತರ ಲ್ಯಾಂಬನ ಗೆಳೆಯರ ಗುಂಪು ಹ್ಯಾಜ್‌ಲಿಟ್, ಲೀ ಹಂಟ್, ಎಸ್.ಟಿ. ಕೋಲರಿಜ್, ವರ್ಡ್ಸ್‌ವರ್ಥ್ ಮತ್ತು ಸದೆ. ಇವರೆಲ್ಲರ ನಡುವೆ ನಡೆಯುತ್ತಿದ್ದ ಸಂಭಾಷಣೆಯೆಂದರೆ ಆ ಯುಗದ ಜ್ಞಾನ, ಬುದ್ಧಿ ಚಾತುರ್ಯ, ರಸಿಕತೆಗಳ ಆರ್ಕವಾಗಿರುತ್ತಿತ್ತು. ಶೆರಿಡನ್ ಮತ್ತು ಸಿಡ್ನೆಸ್ಮಿಥ್ ಇಬ್ಬರೂ ಅತ್ಯಂತ ಶ್ರೇಷ್ಠ ಮಾತುಗಾರರೆಂದು ಪ್ರಸಿದ್ಧರಾಗಿದ್ದರು. ಶೆರಿಡನ್ ಏಕಾಂತದಲ್ಲಿ ಕುಳಿತು, ಪ್ರಸಂಗ ಬಂದಾಗ ಉಪಯೋಗಿಸಲೆಂದು ತನ್ನ ಉತ್ತಮ ಉಕ್ತಿಗಳನ್ನು ಕುರಿತು ಚಿಂತನೆ ಮಾಡುತ್ತಿದ್ದನೆಂದು ಹೇಳಲಾಗುತ್ತದೆ. ಆದರೆ ಸಿಡ್ನೆಸ್ಮಿಥ್‌ನ ಮಾತುಗಾರಿಕೆ ಸಹಜ ನಿರರ್ಗಳತೆಯಿಂದ ಸೃಜನಾತ್ಮಕವಾಗಿರುತ್ತಿತ್ತು. ಆ ತರುವಾಯ ಈ ಸಂಪ್ರದಾಯವನ್ನು ಚೆನ್ನಾಗಿ ಉಳಿಸಿಕೊಂಡು ಬಂದವರೆಂದರೆ ಆಸ್ಕರ ವೈಲ್ಡ್ ಮತ್ತು ಜಿ.ಬಿ.ಷಾ. ಅವರ ಸಂಭಾಷಣೆಯಂತೂ ಆನಂದ ವೃತ್ತಿ ಹಾಗೂ ತೀಕ್ಷ್ಣ ಬುದ್ಧಿಯ ಮಿಂಚಿನಿಂದೊಡಗೂಡಿ, ತತ್‌ಕ್ಷಣದ ವಿನೋದಾತ್ಮಕ ಪ್ರತ್ಯುತ್ತರಗಳಿಂದ, ಖಾರವಾದ ಚಾಟೂಕ್ತಿಗಳಿಂದ ಜೀವಂತವಾಗಿರುತ್ತಿತ್ತು.

ಡಾ|| ಜಾನ್ಸನ್ ಒಮ್ಮೆ ಹೇಳಿದ : "ಮದ್ಯದಂಗಡಿ (Tavern) ಅಥವಾ ಛತ್ರ (Inn)ಗಳು ಒದಗಿಸುವ ಸಂತೋಷವನ್ನು ಮನುಷ್ಯ ಬೇರೆ ಯಾವುದರಿಂದಲೂ ಪಡೆಯಲು ಇನ್ನೂ

ಸಾಧ್ಯವಾಗಿಲ್ಲ". "ಹೌಸ್ ಆಫ್ ಕಾಮನ್ಸ್‌ನಲ್ಲಿ ಔಪಚಾರಿಕವಾಗಿ ಭಾಗವಹಿಸಿ ಪಡೆಯುವ ತಿಳಿವಳಿಕೆಗಿಂತ ಹೆಚ್ಚಿನ ಸತ್ಯ ಸಂಗತಿಗಳನ್ನು ಗದ್ದಲದಿಂದ ಕೂಡಿದ ಮದ್ಯದಂಗಡಿಗಳಿಂದ ಕಲಿಯಬೇಕಾಗಿದೆ" ಎಂದು ಹ್ಯಾಜಲಿಟ್ ನುಡಿದದ್ದುಂಟು. ಲಂಡನ್ನಿನ 'ಪಬ್'ಗಳನ್ನು ಈ ಪುರಾತನ ಕಲೆಯ ಹಾಗೂ ವ್ಯಕ್ತಿ ವೈಶಿಷ್ಟ್ಯದ ಕೊನೆಯ ಕೊತ್ತಳಗಳಲ್ಲಿ ಗಣಿಸಲಾಗಿದೆ. ಪಾಶ್ಚಾತ್ಯ ದೇಶಗಳಲ್ಲಿ ದಾರಿಬದಿಯ ಕೆಫೆ, ಛತ್ರ ಮೊದಲಾದವು ಅನೇಕರಿಗೆ ಅವರವರ ಇಚ್ಛೆತಗಳನ್ನೊದಗಿಸುವ ತಾಣಗಳಾಗಿದ್ದವು. ಪರಸ್ಪರ ಭೆಟ್ಟಿಯ ಜಾಗ, ಕಾಲ್ನಡಿಗೆಯಿಂದ ದಣಿದವರಿಗೆ ವಿಶ್ರಾಂತಿ ಸ್ಥಳ, ಹರಟೆ ಹೊಡೆಯುತ್ತ ಬೇಸರ ಕಳೆದುಕೊಳ್ಳುವ ಚಾವಡಿ ಇತ್ಯಾದಿ. ಅವು ಆಕರ್ಷಕವಾದ, ಚಿಂತನಶೀಲ, ನಿಧಾನವಾದ ಜೀವನ ಕ್ರಮದ ಸಂಕೇತಗಳೆನಿಸಿದ್ದವು. ಜೊತೆಗಾರಿಕೆ ಹಾಗೂ ಸಂಸರ್ಗದಲ್ಲಿ ನಂಬಿಗೆಯುಳ್ಳ ಸಂಭಾಷಣ ಪ್ರಿಯರಿಗೆ ಅವು ನಿಜಕ್ಕೂ ಸ್ವರ್ಗವೇ ಆಗಿದ್ದರೆ ಆಶ್ಚರ್ಯವಿಲ್ಲ.

ನಮ್ಮ ದೇಶದಲ್ಲಿ ಹೀಗೆ ಗೆಲುವಿನ ವಾತಾವರಣದ, ಅಭಿಪ್ರಾಯೋಕ್ತಿಗಳನ್ನು ಉದ್ದೀಪಿಸುವ, ಸಂಭಾಷಣೆಯನ್ನು ಪೋಷಿಸುವ ಸಾರ್ವಜನಿಕ ಆಶ್ರಯ ಸ್ಥಾನಗಳು ಇಲ್ಲದಿರುವುದು ಶೋಚನೀಯ. ಇಲ್ಲಿಯೂ ಮದ್ಯದಂಗಡಿಗಳಿವೆ; ಅಲ್ಲಿ ಸಿಕ್ಕಾಬಟ್ಟೆ ಕುಡಿದು ಒದರಾಡುತ್ತ, ಅಮಲು ತಲೆಗೇರಿ ಒಬ್ಬರೊಬ್ಬರ ತಲೆಯೊಡೆಯುವ ಪ್ರಸಂಗಗಳೇ ಹೆಚ್ಚು. ಕ್ಲಬ್ಬುಗಳಲ್ಲಂತೂ ಇಸ್ಪೀಟಾಟವೇ ಪ್ರಮುಖವಾಗಿ ಬೇರೆ ಮಾತುಕತೆಗೆ ಆಸ್ಪದವೇ ಇರುವುದಿಲ್ಲ. ಮಾತು ಅವರ ಕಂಪನಿಯನ್ನು ಕೆಡಿಸುತ್ತದೆಂದು ಅವರ ದೂರು. ಕೆಫೆ, ರೆಸ್ಟೋರೆಂಟ್‌ಗಳಲ್ಲಿ ತಿಂಡಿಗಳ ಬೆಲೆಯಂತೂ ಗಗನಕ್ಕೇರಿ, ನಮ್ಮನ್ನು ಸುಮ್ಮನೆ ಮಿಕಿಮಿಕಿ ನೋಡುತ್ತ ಕೂಡುವಂತೆ ಮಾಡುತ್ತವೆ. ತಿನಿಸುಗಳು ಆಕಾರದಲ್ಲಿ ಎಷ್ಟು ಸಣ್ಣವಿರುತ್ತವೆಂದರೆ (ಪಕೋಡಾ, ಬೊಂಡಾಗಳಂತೂ ಸಣ್ಣ ಬೆನಕದಾಕಾರಕ್ಕಿಳಿದಿವೆ.) ನೀವು ಅವುಗಳನ್ನು ಮೆಲ್ಲುತ್ತ ಮಾತಾಡುತ್ತ ಕೂಡುವಂತೆಯೇ ಇಲ್ಲ; ಅಷ್ಟು ಬೇಗ ಅವು ಮುಗಿದುಬಿಟ್ಟಿರುತ್ತವೆ. ಹೀಗಾಗಿ, ಮೇಜಿನ ಮುಂದೆ ಕುಳಿತ ಆಧುನಿಕ ತಲೆಮಾರಿನವರ ಸಂಭಾಷಣೆ 'ಹಾ, ಹಾ, ಹೌದು, ಹೌದು' ಇಂಥ ಬಿಡಿ ಪದಗಳಲ್ಲಿಯೇ ಮುಗಿದು ಬಿಡುತ್ತದೆ.

ಮಾತುಕತೆಯನ್ನು ಕಂಡರಾಗದ ಕೆಲವು ವೈರಿಗಳೂ ಇದ್ದಾರೆ. ಅಂಥ ಕೆಲವರನ್ನು ಮಾತ್ರ ಇಲ್ಲಿ ಉಲ್ಲೇಖಿಸಬಹುದು: ಅಹಂಕಾರಿಯಾದ ಸ್ವಗತಭಾಷಣಕಾರ, (ಏಕಪಾತ್ರಾಭಿನಯದ ನಟನಂತೆ) ನಿವೃತ್ತ ರಾಜಕಾರಣಿ, ಹಳಸಿದ ಅಡ್ಡಗತೆಗಳನ್ನೇ ಗಳಹುತ್ತ ಕೂಡುವ ಆಸಾಮಿ, ಅದ್ಭುತವಾದ ಮಕ್ಕಳನ್ನು ಹಡೆದ ತಾಯಿ, ಮಂದಿಯೊಡನೆ ಕೂಡದೆ ತನ್ನಷ್ಟಕ್ಕೆ ಇರುವವ, ಸ್ವಂತ ವಿಷಯದಲ್ಲೇ ತೃಪ್ತಿಗೊಳ್ಳುವವ, ತೊಂದರೆಬಡುಕ ಇತ್ಯಾದಿ. ಜಡವಾದ ಮೌನದಿಂದ ಮಾತಿನ ಸೆಲೆಯನ್ನೇ ಬತ್ತಿಸುವ ಮಂದಮತಿಗಳು, ಆಗೊಂದು ಈಗೊಂದು ಕೊಂಕು ಮಾತಾಡಿ, ಉಳಿದವರ ಮಾತನ್ನು ಮೊದಲೇ ಚಿವುಟಿ ಹಾಕುವ ಔಚಿತ್ಯವರಿಯದ ಅಜ್ಞರು-ಇವರೂ ಈ ಗುಂಪಿಗೆ ಸೇರಿದವರೆ.

ಸ್ವಾರ್ಥಪರರಾದ, ಅಹಂಕಾರದ ಮಾತಿನವರ ಜೊತೆಗಿನ ಅನುಭವ ಅನೇಕರಿಗೆ ಬಂದಿರಬಹುದು. ಸುಖವಾಗಿ ಮಾತಾಡುತ್ತ ಕಾಲಕಳೆಯಬೇಕೆಂದು ನಾಲ್ಕಾರು ಸ್ನೇಹಿತರನ್ನು ಉಪಹಾರಕ್ಕೆ ಅಥವಾ ಊಟಕ್ಕೆ ಕರೆದಿರುತ್ತಾರೆನ್ನಿ. ಆಗ ಎಲ್ಲರೂ ಅಷ್ಟಷ್ಟು ಮಾತಾಡಿ, ಸಂಭಾಷಣೆಗೆ ಜೀವಕಳೆ ಬರುವಂತೆ ಮಾಡಿದರೆ ಅದರ ಸೊಗಸೇ ಬೇರೆ. ಆದರೆ ದುರದೃಷ್ಟದಿಂದ ಅವರಲ್ಲಿ ಒಬ್ಬಿಬ್ಬರು ಎಲ್ಲವೂ ತಮಗೇ ಮೀಸಲಾಗಿರುವಂತೆ ಭಾವಿಸಿ ಕೊನೆಯವರೆಗೂ ತಮ್ಮ ಮಾತನ್ನೇ ಮುಗಿಸುವುದಿಲ್ಲ. ಚಿತ್ರಕಲೆ, ಶಿಲ್ಪ ಇತ್ಯಾದಿ ಅಲ್ಪಸ್ವಲ್ಪ ತಮಗೆ ತಿಳಿದ ವಿಷಯವನ್ನೇ ದೊಡ್ಡದಾಗಿ ಮಾಡಿ, ಅಜಂತ, ಎಲ್ಲೋರಾ, ಹಳೆಬೀಡು, ಬೇಲೂರು, ಮಹಾಬಲಿಪುರಂ ಹೀಗೆ ರವಿವರ್ಮನ ವರೆಗೆ ಬಡಬಡಿಸುತ್ತಾರೆ. ಅವರ ಮಾತಿನ ಓಘವನ್ನು ಬೇರೆ ಕಡಗೆ ಹೊರಳಿಸಬೇಕೆಂದು ನೀವೆಷ್ಟೇ ಪ್ರಯತ್ನಪಟ್ಟರೂ ಅವರು ತಮ್ಮ ಮೊಂಡುತನವನ್ನು ಬಿಡುವುದೇ ಇಲ್ಲ. ಒಂದು ಬಗೆಯ ನಿರಾಶೆಯಿಂದ ನೀವು ಆಕಳಿಸುತ್ತ, ಕೈಗಡಿಯಾರದ ಕಡೆಗೆ ನೋಡುತ್ತ, ಕಾಲುಗಳನ್ನು ಸರಿಸ್ಯಾಡುತ್ತೀರಿ. ಆದರೆ ಇವಾವ ಸೂಚನೆಗಳನ್ನೂ ಅವರು ಗಮನಿಸುವುದೇ ಇಲ್ಲ. ಅವರು ಒಂದು ವೇಳೆ ಆತಿಥೇಯರ ಸಂಬಂಧಿಕರಾಗಿದ್ದರಂತೂ ತೀರಿಹೋಯಿತು. ತಮ್ಮಷ್ಟಕ್ಕೆ ತಾವೇ ಒಂದು ಬಗೆಯ ಮೆಚ್ಚುಗೆ ಅಭಿಮಾನದಿಂದ ಬೀಗಿಹೋಗುತ್ತಾರೆ. ಹೀಗೆ ಸಂಭಾಷಣೆಯಲ್ಲಿ ತಾವೇ ತಾವಾಗಿ ಮೆರೆಯಬಯಸುವವರು ವಿಚಾರಗಳ ವಿನಿಮಯವೇ ಸಂಭಾಷಣೆಯ ತಿರುಳೆಂಬುದನ್ನು ತಿಳಿದುಕೊಳ್ಳದೆ ಒಳ್ಳೆಯ ಅವಕಾಶಗಳನ್ನು ಹಾಳುಮಾಡಿಬಿಡುತ್ತಾರೆ. ಇಂಥ 'ಮುದ್ದಿನ ಪ್ರಾಣಿ'ಗಳನ್ನು ಸಾರ್ವಜನಿಕರ ವೈರಿಗಳೆಂದು ದೂರವಿಡಬೇಕು. ಸಂಭಾಷಣೆ ಕೂಡಿಕೊಂಡು ಮಾತಾಡುವುದು, ಎಲ್ಲರ ಕೈಗೂ ಹೋಗಿಬರುವ ಚೆಂಡಾಟ; ಒಬ್ಬರೇ ಹಿಡಿದುಕೊಂಡು ಅದನ್ನು ಪುಟಿಸುತ್ತ ಕೂಡ್ರುವುದಲ್ಲ.

ಸಂಭಾಷಣ ಕಲೆ ನಶಿಸಿಹೋಗುತ್ತಿರುವ ಬಗ್ಗೆ ನಿಜಕ್ಕೂ ವ್ಯಥೆಪಡುವಂತಾಗಿದೆ. ಆಧುನಿಕ ಜೀವನದ ವೇಗದ ಗತಿ ಅದಕ್ಕೆ ಕಾರಣವೆಂದು ಆರೋಪಿಸಬಹುದು. ಅಲ್ಲದೆ ನಮ್ಮ ದೇಶದಲ್ಲಿ ದುಡಿತದ ಮೊದಲಿನ ಮತ್ತು ನಂತರದ ಸಮಯವೆಲ್ಲ ಹಾಲು, ಚಿಮಣಿಎಣ್ಣೆ, ಅಕ್ಕಿ, ಗೋಧಿಗೆ ಅಂಗಡಿಯ ಮುಂದೆ ಪಾಳಿ ಹಚ್ಚುವುದರಲ್ಲೇ ಹೋಗುತ್ತದೆ. ಇತ್ತೀಚೆಗೆ ನೀರಿಗಾಗಿ ಪರದಾಟವಂತೂ ಹೇಳತೀರದು. ಆಧುನಿಕ ಜೀವನದ ಅಂತರ್ಯದಲ್ಲಿಯೇ ಮಾತಿನ ಬಗ್ಗೆ ದ್ವೇಷವಿದ್ದಂತಿದೆ. ಸಲ್ಲಾಪಕ್ಕೆ ಹೆಚ್ಚಿನದೇನೂ ಬೇಕಿರದಿದ್ದರೂ ಇಂದಿನ ಜೀವನ ರೀತಿಯೇ ಅದಕ್ಕೆ ಅನುಕೂಲಕರವಾಗಿಲ್ಲ. ಹಿಂದಿನ ಕಾಲದ ಪ್ರವಾಸಿಗಳಿಗೆ ಸಂಭಾಷಣೆಗೆ ಹೆಚ್ಚಿನ ಅವಕಾಶವಿರುತ್ತಿತ್ತು. ಆ ಕಾಲದ ಕಾದಂಬರಿಗಳನ್ನೋದಿದರೆ ಇದು ಗೊತ್ತಾಗುತ್ತದೆ. ನಿಧಾನವಾಗಿ ಕುಲುಕುತ್ತ ಸಾಗುವ ಎತ್ತಿನ ಬಂಡಿ ಅಥವಾ ಜಟಕ, ಇಲ್ಲವೆ ಟಾಂಗಾ ಅದು ಇದು ಮಾತನಾಡುತ್ತ ಹೋಗಲು ತಕ್ಕ ವಾಹನವಾಗಿರುತ್ತಿದ್ದವು. ಸಂಚಿಯನ್ನು ಬಿಚ್ಚಿ ಎಲೆ-ಅಡಿಕೆ ಮೆಲ್ಲುತ್ತ, ಚಿಟಕೆ ನಶ್ಯ ಏರಿಸುತ್ತ ಹೋದಂತೆ ಮೆದುಳು ಚುರುಕುಗೊಂಡು ಮಾತು ರಂಗೇರುತ್ತಿತ್ತು. ಇವುಗಳ ಸ್ಥಾನವನ್ನು ಇಂದು ರೈಲು, ಬಸ್ಸು ಆಕ್ರಮಿಸಿವೆ. ಪ್ರವಾಸದ ಈ ಬಗೆಯ ಸಂತೋಷವೆಲ್ಲ ಈಗ

ಮಾಯವಾಗಿ ಅದೊಂದು ಪೀಡೆ ಅಥವಾ ಉಪದ್ರವವಾಗಿ ನೂಕು ನುಗ್ಗುವ ಗದ್ದಲದಿಂದ ಯಾವಾಗ ಪಾರಾದೇವೋ ಎನಿಸಿಬಿಡುತ್ತದೆ.

ಕಾರು, ವಿಮಾನಯಾನ ಆರಾಮೆನಿಸಿದರೂ ಅವುಗಳ ವೇಗ ಹಾಗೂ ಸಪ್ಪಳದಲ್ಲಿ ಸಂಭಾಷಣೆ ಸಾಧ್ಯವಾಗುವುದೇ ಇಲ್ಲ. ಘೋರವಾದ ಮೌನ ಇಲ್ಲವೆ ಆಗೀಗ ಕಿರುಚಿ ಮಾಡುವ ಟೀಕೆ ಇದರಿಂದ ಆ ಸುಖವೂ ನುಚ್ಚು ನೂರಾಗುತ್ತದೆ. ಸ್ವಾಸ್ಥ್ಯಗೆಡಿಸುವ ಸಿಗರೇಟು ಉರಿಸುತ್ತ, ಒಂದೊಂದೇ ಶಬ್ದವನ್ನು ಗೊಣಗುತ್ತ, ಹೇಗೆ ಮಾತನಾಡಬೇಕೆಂಬುದೇ ಗೊತ್ತಿರದ ಯಾಂತ್ರಿಕ ಮನಸ್ಸಿನ ಪೀಳಿಗೆ ಈಗ ಕಂಡುಬರುತ್ತಿದೆ. ಎತ್ತ ಹೊರಳಿದರೂ ಗಡಿಬಿಡಿ ಗದ್ದಲ, ಕಾರುಗಳು, ಬಸ್ಸುಗಳು, ರಿಕ್ಷಾಗಳು; ಅಪಸ್ವರದ ಕರ್ಕಶವಾದ ಪಾಪ್ ಧ್ವನಿವರ್ಧಕಗಳಲ್ಲಿ ಕಿವಿಗಡಚಿಕ್ಕುವ ಜಾಹಿರಾತುಗಳು; ಸೈರನ್ನಿನ ಕೂಗು-ಮಾತು ಅಸ್ತಿತ್ವದಲ್ಲಿಯೇ ಉಳಿಯದಂತೆ ಮಾಡಲು ಇನ್ನೇನುಬೇಕು? ಪುರಸತ್ತಿಲ್ಲದೆ ದಿಕ್ಕೆಟ್ಟು ಅಲೆದಾಡುವ ಇಂದಿನ ಸಂದರ್ಭದಲ್ಲಿ ಬೆಲೆಯುಳ್ಳ ಸಂಭಾಷಣೆ ಇನ್ನೇನು ಉಸಿರುಕಟ್ಟಿ ಹೋಗುತ್ತದೆ. ನಾವೆಲ್ಲರೂ ನಮ್ಮ ಮಾತುಕತೆಯನ್ನು 'ಹೌದು' 'ಅಲ್ಲ' - ಎಂಬ ಎರಡೇ ಪದಗಳಿಗಿಳಿಸುವ ಹಂತಕ್ಕೆ ಬಂದಿದ್ದೇವೆ. ಆದರೆ ಒಂದು ವಿಷಯ ನೆನಪಿಡಬೇಕು. ಎಂದೂ ಬಾಡದ ಹಾಗೂ ಹಳಸಿಹೋಗದ ಒಳ್ಳೆಯ ಮಾತುಕತೆ ಇಂದಿಗೂ ನಮ್ಮ ಮನೋರಂಜನೆಯ ಕ್ಲಿಯೊಪಾತ್ರಾ ಇದ್ದಂತೆ. ಈ ಅಭಿಜಾತ ಕಲೆಯ ಉಪಾಸಕನಾದ ಆ್ಯಂಟನಿ ಅವಳಿಂದ ಎಂದೂ ನಾಶಗೊಂಡಿಲ್ಲ.

('ಸಮತೋಲನ' : ೧೯೮೯)

೧೬

## ನನ್ನ ನಾ ಕಂಡಂತೆ

"ಕನ್ನಡದ ಪ್ರಮುಖ ಲೇಖಕರ ಜೀವನಾನುಭವಗಳನ್ನು ಕುರಿತು ಒಂದು ಲೇಖನಮಾಲೆಯನ್ನು ಪ್ರಾರಂಭಿಸಬೇಕೆಂದಿದ್ದೇವೆ. ಅದರ ತಲೆಬರಹ "ನನ್ನ ನಾ ಕಂಡಂತೆ", ಸುಮಾರು ೨೦೦೦ ಶಬ್ದಗಳ ಮಿತಿಯಲ್ಲಿ ತಾವು ತಮ್ಮ ಜೀವನ ಮತ್ತು ಕೃತಿಗಳನ್ನು, ಕಾಣುವ ದೃಷ್ಟಿಯನ್ನು ಕನ್ನಡದ ಓದುಗರ ಮುಂದಿಡಲು ಮನಸ್ಸು ಮಾಡುತ್ತೀರಾ?" ಎಂದು 'ಕಸ್ತೂರಿ'ಯ ಕವಿಮಿತ್ರರು ಕೇಳಿದಾಗ ಬರವಣಿಗೆಯ ಮೂಲಕ ನನ್ನನ್ನು ನಾನು ಕಂಡುಕೊಳ್ಳಲು ಪ್ರಯತ್ನಿಸಿದ ರೀತಿಯಿದು.

ನಾನು ಗದ್ಯ ಬರೆದದ್ದೇ ಕಡಿಮೆ. ಲೇಖಕನೆನಿಸಿಕೊಳ್ಳುವ ಹೊಸ ಹುರುಪಿನಲ್ಲಿ ಗದ್ಯ, ಪದ್ಯ ಎರಡನ್ನೂ ಬರೆದದ್ದುಂಟು. ಅದೇ ಕಾಲಕ್ಕೆ ಒಂದೆರಡು ಸಣ್ಣ ಕತೆಗಳನ್ನೂ ಬರೆದ ನೆನಪು. ಹತ್ತಾರು ಲಲಿತ ಪ್ರಬಂಧಗಳೂ ಆಗ ಮೂಡಿದವು. ಅದೇಕೊ ಕತೆ ಬರೆಯುವದರ ಕಡೆಗೆ ನನ್ನ ಮನಸ್ಸು ಅಷ್ಟಾಗಿ ಹೊರಳಲಿಲ್ಲ. ಆಮೇಲೆ ಪ್ರಬಂಧಗಳನ್ನು ಬರೆಯಲು ಮನಸ್ಸು ಮಾಡಿರದಿದ್ದರೂ ಅದರ ಮೇಲಿನ ಒಲವು ಕಡಿಮೆಯಾಗಿಲ್ಲ. ಉತ್ತಮ ಪ್ರಬಂಧವನ್ನು ಬರೆದಾಗ ಓದಿದಾಗ ಒಂದು ಒಳ್ಳೆಯ ಕವಿತೆಯಿಂದ ಒದಗುವ ಸಂತೋಷವನ್ನೇ ನಾನು ಪಡೆದಿದ್ದೇನೆ. ನಮ್ಮ ಹಳಗನ್ನಡ ಕವಿಗಳು ತಮ್ಮ ಕಾವ್ಯವನ್ನು "ಸುಭಗ ಪ್ರಬಂಧ"ವೆಂದೇ ಹೇಳಿಕೊಂಡರು. ಅದೇನೇ ಇದ್ದರೂ ಪ್ರಬಂಧ ನೀಡುವ ಈ ಗೆಲುವಿಗಿಂತ ಕವಿತೆ ನಡೆಸುವ ಪವಾಡವೇ ನನ್ನನ್ನು ಸಂಪೂರ್ಣವಾಗಿ ತನ್ನ ಕೈವಶಮಾಡಿಕೊಂಡಿತು.

ಬಾನುಲಿಗಾಗಿ ಕೆಲವು ರೂಪಕಗಳನ್ನು ಬರೆದದ್ದುಂಟು. ಅವುಗಳಲ್ಲಿ ಸೊಗಸಿಲ್ಲವೆಂದಲ್ಲ, ಆದರೆ ಎಷ್ಟೆಂದರೂ ಅವು ಹೇಳಿಸಿಕೊಂಡು ಬರೆದುವುಗಳು. ಸ್ವಂತ ಪ್ರಚೋದನೆಯ ಹೊಳಹೂವೂ ಅವುಗಳಲ್ಲಿ ಮೂಡಿರದೆ ಇಲ್ಲ. ಆದರೆ ಒಮ್ಮೆ ಪ್ರಸಾರಗೊಂಡ ಮೇಲೆ, ಅವುಗಳ ಉದ್ದೇಶ ಅಷ್ಟಕ್ಕೇ ಈಡೇರಿದಂತಾಯಿತು. ಪುನಃ ಅವುಗಳನ್ನು ಅಚ್ಚಿಸುವ ಅವಶ್ಯಕತೆ ಸದ್ಯಕ್ಕೆ ನನಗೆ ಕಂಡುಬಂದಿಲ್ಲ. ಕವಿಹೃದಯದ ವ್ಯಾಪಾರವನ್ನು ತಿಳಿದು, ಕೃತಿಯ ಸೌಂದರ್ಯವನ್ನು ಇರುವಲ್ಲಿಯೇ ದಳದಳ ಬಿಡಿಸಿ ನೋಡುವ ಸೊಗಸಿನಿಂದಲೋ ಏನೋ-ವಿಮರ್ಶೆಯ ಬಗ್ಗೆ ಒಲವು ಹೆಚ್ಚು. ಅಂತಹ ಕೆಲವು ವಿಮರ್ಶಾಲೇಖನಗಳನ್ನು ನಾನು ಬರೆದಿದ್ದರೂ ಅವುಗಳನ್ನು ಸಂಗ್ರಹರೂಪದಲ್ಲಿ ತರಲು ಮನಸ್ಸು ಇನ್ನೂ ಹಿಂದು-ಮುಂದು ನೋಡುತ್ತಿದೆ.

ಗದ್ಯ ಬರೆಯುವಾಗ ನನ್ನ ಮನಸ್ಸು ಪದ್ಯ ಬರೆಯುವಾಗಿನಕ್ಕಿಂತಲೂ ಹೆಚ್ಚು

ಜಾಗೃತಗೊಂಡಿರುತ್ತದೆ. ಒಂದು ಶಬ್ದ ಏರುಪೇರಾದರೂ ಎಲ್ಲಿ ವಾಕ್ಯದ ತೂಕ ತಪ್ಪುತ್ತದೆಯೋ, ವಿಚಾರದ ಸರಳತೆಗೆ ಎಲ್ಲಿ ಭಂಗ ಬರುತ್ತದೆಯೋ ಎಂದು ನನ್ನ ಮನಸ್ಸು ಹೊಯ್ದಾಡುತ್ತಿರುತ್ತದೆ. 'ನಿಮ್ಮ ಗದ್ಯ ಶೈಲಿಯೂ ತುಂಬ ಚೆನ್ನಾಗಿದೆ' ಎಂದು ಕೆಲವು ಸ್ನೇಹಿತರು ಆ ಬಗ್ಗೆ ಮೆಚ್ಚಿಗೆ ತೋರಿಸಿದ್ದುದುಂಟು. ಆದರೆ ಅದನ್ನು ಬರೆಯಬೇಕಾದರೆ ಆ ಕಷ್ಟ ನನಗೇ ಗೊತ್ತು. ಇಷ್ಟೆಲ್ಲ ಸುತ್ತುವರಿದು ಏಕೆ ಹೇಳಬೇಕಾಯಿತೆಂದರೆ ಕಾವ್ಯ ಬರೆಯುವಾಗಿನ ಸುಖ ನನಗೆ ಗದ್ಯ ಬರೆಯುವಾಗ ದೊರೆಯುವುದಿಲ್ಲ ಎನ್ನುವದಕ್ಕೆ. ಒಂದು ಸಣ್ಣ ಕವಿತೆಯನ್ನು ಬರೆದು ಮುಗಿಸಿದಾಗಿನ ಆನಂದ ಎಷ್ಟೋ ಪುಟ ಗದ್ಯವನ್ನು ಬರೆದಾಗ ಆಗುವುದಿಲ್ಲ. ಭಾವಗಳು ಕವಿತೆಯಲ್ಲಿ ಒಂದು ಪೂರ್ಣಾವಸ್ಥೆಯ ರೂಪವನ್ನು ತಾಳಿ ನಿಲ್ಲುವದೇ ಇದಕ್ಕೆ ಕಾರಣವಿರಬಹುದು. ಮಳೆಯಿಂದ ಸುರಿದ ನೀರು ನೆಲದ ಮೇಲೆ ಹರಿದು ಹೋಗುವುದಕ್ಕೂ ಅದೇ ನೀರು ನೆಲದಲ್ಲಿ ಇಂಗಿ ಮುಂದೆ ಒಂದು ಸ್ಥಳದಲ್ಲಿ ಚಿಲುಮೆಯಾಗಿ ಪುಟಿಯುವದಕ್ಕೂ ಇರುವ ಅಂತರವೇ ಗದ್ಯದ ಬರವಣಿಗೆಗೂ ಕಾವ್ಯದ ಬರವಣಿಗೆಗೂ ಇರುವ ಅಂತರವೆಂದು ತೋರುತ್ತದೆ.

'ನೀವೇಕೆ ಕಾದಂಬರಿ ಬರೆದಿಲ್ಲ ?' ಎಂದು ಕೆಲವರು ಆಶ್ಚರ್ಯದಿಂದ ನನ್ನನ್ನು ಕೇಳುತ್ತಾರೆ. ಕನ್ನಡದಲ್ಲಿ ಲೇಖಕರೆನಿಸಿಕೊಂಡವರೆಲ್ಲ ಕಾದಂಬರಿ ಬರೆಯಲೇಬೇಕೆಂಬ ಧೋರಣೆ ಅವರ ಮಾತಿನಲ್ಲಿ ವ್ಯಕ್ತವಾಗುತ್ತಿರುತ್ತದೆ ಅಥವಾ ಕನ್ನಡದಲ್ಲಿ ಈಗ ಬರುತ್ತಿರುವ ಕಾದಂಬರಿಗಳ ರಾಶಿಯನ್ನು ಕಂಡು ಅದನ್ನು ಬರೆಯುವದು ಸುಲಭವೆಂದು ಕಲ್ಪಿಸಿಕೊಂಡಿರಬಹುದು. ಆದರೆ ಆ ಕೆಲಸ ಅಷ್ಟು ಹಗುರಾದುದೆಂದು ನಾನು ಭಾವಿಸಿಲ್ಲ. ಕವಿಗಿರಬೇಕಾದ ಒಂದು ವಿಶಿಷ್ಟ ಮನೋಧರ್ಮ ಕಾದಂಬರಿಕಾರನಿಗೂ ಇರುತ್ತದೆ. ವಿಸ್ತಾರವಾದ ಒಂದು ವ್ಯಾಪ್ತಿಯಲ್ಲಿ ಜೀವನವನ್ನು ತೀರ ಹತ್ತಿರದಿಂದ ವಿವರವಿವರವಾಗಿ ಕಂಡು ವ್ಯಕ್ತಿ-ಸಮಾಜ-ಪ್ರಕೃತಿಗಳ ಪರಸ್ಪರ ತಾಗು-ಬಾಗುಗಳನ್ನು, ಕ್ರಿಯೆ-ಪ್ರತಿಕ್ರಿಯೆಗಳನ್ನು ಜೀವನ ಪ್ರವಾಹದ ಒಂದು ದೃಷ್ಟಿಕೋನದಿಂದ ಒಂದು ಚೌಕಟ್ಟಿನಲ್ಲಿ ಕಾದಂಬರಿಕಾರ ಕಲಾತ್ಮಕವಾಗಿ ಹಿಡಿದಿಡಬೇಕಾಗುತ್ತದೆ. ಆ ತಾಕತ್ತುಳ್ಳವನೇ ಆ ಕಣಕ್ಕಿಳಿಯಬೇಕೆಂದು ನನ್ನ ಅಭಿಪ್ರಾಯ. ಇನ್ನೂ ಒಂದು ಮಾತು, ಬರೆಯಬೇಕು ಎಂದು ನನಗೆನಿಸುವವರೆಗೆ ನಾನು ಯಾವುದನ್ನೂ ಬರೆಯತೊಡಗುವದಿಲ್ಲ. ಹಾಗೆ ಅನಿಸಿದಾಗ ಎಷ್ಟೋ ದಿನ ಅದು ನೆನಸಿಕೆಯಲ್ಲಿಯೇ ಉಳಿಯುತ್ತದೆ. ಈ ಅನಿಸಿಕೆಯೇ ನೆನಸಿಕೆಯಾಗಿ, ನೆನಸಿಕೆಯೇ ಅನಿಸಿಕೆಯಾಗಿ ಒಂದೇ ಆದಾಗ ಬರವಣಿಗೆ ತಾನಾಗಿ ಒಂದು ರೂಪ ತಳೆಯುತ್ತದೆ. ಆಗ ಪುರಸತ್ತು ಮಾಡಿಕೊಂಡು ಅದನ್ನು ಕಾಗದಕ್ಕಿಳಿಸಿಬಿಡಬಹುದು. ಆದರೆ 'ಪುರಸತ್ತು' ಯಾರ ಸೊತ್ತೂ ಅಲ್ಲ. ನಾವೇ ಅದಕ್ಕೆ ತೊತ್ತಾಗಬೇಕು. ಇಲ್ಲವಾದರೆ ನಮ್ಮ ಬರವಣಿಗೆಯೇ ಅದಕ್ಕೆ ತುತ್ತಾಗಿಬಿಡುತ್ತದೆ.

ನನಗೆ ಯಾವುದು ಮೂಲತಃ ಬರೆಯಲು ಪ್ರೇರಿಸಿತು ಎಂಬುದನ್ನು ಬೊಟ್ಟಿಟ್ಟು ಹೇಳುವದು ಕಷ್ಟ. ಆದರೆ ಏಕೋ ಬರೆಯಬೇಕೆನ್ನಿಸಿತು, ಬರೆಯತೊಡಗಿದೆ. ತೀರ ಚಿಕ್ಕಂದಿನಿಂದಲೇ ಕೈಗೆ ಸಿಕ್ಕದ್ದನ್ನೆಲ್ಲ ಓದುವ ಚಟ ಅಂಟಿಕೊಂಡಿತ್ತು. ನಾನು ಕನ್ನಡ ಶಾಲೆಯಲ್ಲಿದ್ದಾಗಲೇ ಗಳಗನಾಥರ

'ಮಾಧವಕರುಣಾ ವಿಲಾಸ' ನನ್ನ ಕೈಗೆ ಹೇಗೊ ಬಂದಿತ್ತು. ಮನೆಯಲ್ಲಿ ಯಾರಿಗೋ ತೀವ್ರ ಜಡ್ಡಾಗಿ ಮಲಗಿಕೊಂಡಾಗಲೂ ನಾನು ಈ ಪುಸ್ತಕದಲ್ಲಿಯೇ ಮಗ್ನವಾದುದಕ್ಕೆ ಬೈಸಿಕೊಂಡ ನೆನಪೂ ನನಗಿದೆ. ಕವಿತೆಗಳನ್ನೋದಿದಾಗ, ಜಾನಪದ ಹಾಡುಗಳನ್ನು ಕೇಳಿದಾಗ, ಸುತ್ತಣ ಪ್ರಕೃತಿಯನ್ನು ಕಂಡಾಗ ಯಾವುದೋ ಒಂದು ಭಾವ ಮನಸ್ಸಿನಲ್ಲಿ ಜಾಗೃತಗೊಳ್ಳುತ್ತಿತ್ತು. ಮೋಡಗಳು ವಿಚಿತ್ರವಾದ ಆಕಾರ ತಾಳುವದನ್ನೂ ಅವು ಮಳೆಯಾಗಿ ಸುರಿಯುವ ಚಮತ್ಕಾರವನ್ನೂ ಕಂಡು ನಾನು ವಿಸ್ಮಯಾನಂದದಲ್ಲಿ ಮುಳುಗುತ್ತಿದ್ದೆ. ಈಗಲೂ ಮಳೆ ಬರುತ್ತಿರುವಾಗ ಕಿಟಕಿ ತೆಗೆದು ಹೊರಗಿನ ಸೃಷ್ಟಿಯನ್ನು ನೋಡದೆ ಮನಸ್ಸಿಗೆ ಸಮಾಧಾನವೆನಿಸುವುದಿಲ್ಲ. 'ಕಾವ್ಯಾಕ್ಷಿ', 'ಮೇಘೋಪಾಸನೆ' 'ಒಂದು ಮುಂಜಾವು' 'ಪಥಿಕ' 'ಸೃಷ್ಟಿ ನೋಂತು ನಿಂದಿದೆ'-ಇವೇ ಮೊದಲಾದ ನನ್ನ ಕವಿತೆಗಳು ಈ ಬಗೆಯ ಪ್ರಕೃತಿಯುಪಾಸನೆಯಿಂದ ಮೂಡಿದವುಗಳು. ಹಳ್ಳಿಯಲ್ಲಿ ಕಳೆದ ಬಾಲ್ಯಜೀವನವು ಆಗಿನ ಕಾಲದ ಜೀವನದ ಸೊಬಗನ್ನು, ಸವಿಯನ್ನು ಸಾಕಷ್ಟು ತುಂಬಿಕೊಂಡಿತು. ಅಲ್ಲಿಯ ಹೊಲ, ತೋಟ, ಗುಡ್ಡ, ಮರಡಿ, ಹಳ್ಳ-ಝರಿ, ಬಣ್ಣಬಣ್ಣದ ಹಬ್ಬ ಹುಣ್ಣಿಮೆಗಳು, ಹಾಡು, ಕಥೆ, ಜನತೆಯ ರಂಗು ರಂಗಾದ ಬಾಳು, ಇವೆಲ್ಲವುಗಳಲ್ಲಿಯ ಕಾವ್ಯಾಂಶವನ್ನು ನನ್ನ ಮನಸ್ಸು ಆಗ ಗ್ರಹಿಸಿಕೊಂಡು ಭಾವಕೋಶವನ್ನು ತಕ್ಕಮಟ್ಟಿಗೆ ಪುಷ್ಟಿಗೊಳಿಸಿಕೊಂಡಿರಬೇಕು. ಹಾಯಸ್ಕೂಲಿನಲ್ಲಿದ್ದಾಗ ನಾನು ಕೆಲವು ಪದ್ಯಗಳನ್ನು ಬರೆದೆ. ಪ್ರಾಸ, ಛಂದಸ್ಸು ಇದಾವುದರ ಕಲ್ಪನೆಯಿಲ್ಲದೆ ಯಾವುದೋ ಒಂದು ಲಯದಲ್ಲಿ ಮೂಡಿದ ರಚನೆಗಳವು. ಕಾಲೇಜಿನಲ್ಲಿದ್ದಾಗ ಅವುಗಳಿಗೆ ಒಂದು ರೂಪ ಬರತೊಡಗಿತು. ಜೀವನದ ವಾಸ್ತವತೆಯ ಬಿಸಿ ನನ್ನ ಭಾವಮುಗ್ಧತೆಯನ್ನು ಆಗಾಗ ಅಲುಗಾಡಿಸುತ್ತಿದ್ದರೂ ಭಾವೋದ್ವೇಗದ ಹಿಡಿತದಿಂದ ತಪ್ಪಿಸಿಕೊಳ್ಳುವುದಾಗುತ್ತಿರಲಿಲ್ಲ.

ನನ್ನ ಪ್ರಥಮ ಸಂಗ್ರಹ 'ಕಾವ್ಯಾಕ್ಷಿ' ೧೯೪೯ರಲ್ಲಿ ಪ್ರಕಟವಾಯಿತು. "ಮಾತೃವಾತ್ಸಲ್ಯ, ಮಾತೃಭಾಷಾ ವಾತ್ಸಲ್ಯ, ಸೌಂದರ್ಯದೃಷ್ಟಿ, ಅಭೀಪ್ಸೆಯ ತೀವ್ರತೆ, ನವಸ್ವಾತಂತ್ರ್ಯದ ಎಚ್ಚರ, ಹೊಸ ಮೌಲ್ಯಗಳ ಸ್ವೀಕಾರ, ದೇಶಾಭಿಮಾನ, ರಾಷ್ಟ್ರಭಕ್ತಿ, ಆದರ್ಶ ಪ್ರೀತಿ-ಇವೇ ಮೊದಲಾಗಿ ಅವರ ಕಾವ್ಯಸ್ಫೂರ್ತಿಯ ವಿಷಯಗಳಾಗಿವೆ" ಎಂದು ಶ್ರೀ ಬೇಂದ್ರೆಯವರು ಅದಕ್ಕೆ ಬರೆದ ಮುನ್ನುಡಿಯಲ್ಲಿ ಹೇಳಿದ್ದಾರೆ. "ಅವರು ಉಂಡದ್ದನ್ನು ಮೈಗೂಡಿಸಿಕೊಳ್ಳುವರಲ್ಲದೆ, ತನ್ನತನದ ಅರಿವಿನ ಅಂಕುರಗಳನ್ನೂ ಸಹಜ ವೈಖರಿಯಿಂದ ಹೊರಹೊಮ್ಮಿಸುತ್ತಿದ್ದಾರೆ" ಎಂದು ಅವರು ಬರೆದ ಮಾತೂ ನನಗೆ ಸಾಕಷ್ಟು ಪ್ರೋತ್ಸಾಹ ನೀಡಿತು. ಈ ಸಂಗ್ರಹದಲ್ಲಿ "ಸಮಕಾಲೀನ ಸಾಹಿತ್ಯದ ಪ್ರತಿಧ್ವನಿಯೂ ಗತಿಧ್ವನಿಯೂ ಸಹಜ ನಿರ್ಭಯತೆಯಿಂದ ಕಾಲಿಕ್ಕಿದೆ" ಎಂಬುದನ್ನೂ ಅವರು ಅಲ್ಲಿ ಹೇಳಲು ಮರೆತಿಲ್ಲ. "ಮುಂದೆ ಬಾಳು ಬೆಳೆದಂತೆ, ಅನುಭವ ಹೆಚ್ಚಾದಂತೆ ಇವರ ವಿಷಯಗಳೂ ಬದಲಾಗಿವೆ. ಗೆಳೆತನ, ಸಾಹಿತ್ಯ, ಮದುವೆ, ದಾಂಪತ್ಯ, ಮಕ್ಕಳ ಒಲವು ಹೀಗೆ ಕ್ರಮವಾಗಿ ಇವರ ಕಾವ್ಯವಸ್ತುಗಳನ್ನು ಎಣಿಸಿ ಹೇಳಬಹುದು" ಎಂದು ಮನ್ವಂತರದ ವಿಮರ್ಶಕ ಮಿತ್ರರು ನುಡಿಯುವಾಗ, 'ಭಾವಜೀವಿ' 'ಆಕಾಶಬುಟ್ಟಿ' 'ಮಧುಚಂದ್ರ' ಈ ಸಂಗ್ರಹಗಳನ್ನವರು ಲಕ್ಷ್ಯದಲ್ಲಿಟ್ಟುಕೊಂಡಿದ್ದರೆಂದು ತೋರುತ್ತದೆ. ಅವರೇ ಇತ್ತೀಚಿಗಿನ ಎರಡು

ಸಂಗ್ರಹಗಳಲ್ಲಿ "ಅವರ ಕಾವ್ಯಕ್ಕೆ ನವ್ಯತೆಯ ಕವಲೊಡೆದಿದೆ" ಎಂದು 'ದೀಪಧಾರಿ'ಯ ಹಾಗೂ 'ಮಣ್ಣಿನ ಮೆರವಣಿಗೆ' ಸಂಗ್ರಹಗಳ ಬಗ್ಗೆ ಸೂಚಿಸಿದ್ದಾರೆ.

ನನ್ನ ಸ್ಫೂರ್ತಿಯ ಉಗಮವನ್ನು ಗುರುತಿಸಲು ಹವಣಿಸಿದ್ದೇ 'ಭಾವಜೀವಿ' ಕಾವ್ಯವಾಗಿ ಪರಿಣಮಿಸಿತು. ಅದನ್ನು ಬರೆದಾಗ ನನ್ನ ಮನಸ್ಸು ಹಕ್ಕಿಯಂತೆ ಹಗುರಾಗಿ ಗಾಳಿಯ ಅಲೆಅಲೆಯಲ್ಲಿಯೂ ಉಲ್ಲಾಸವನ್ನು ಅನುಭವಿಸಿತು. ಆಮೇಲೆ ನಾನು ಬರೆದ ಇತರ ಕವಿತೆಗಳು ನನಗೆ ತೃಪ್ತಿಯನ್ನು ನೀಡಿಲ್ಲವೆಂದಲ್ಲ. ಆದರೆ 'ಭಾವಜೀವಿ'ಯ ಅಂತರಂಗದ ನಿಸ್ತರಂಗ ತಿಳಿಗೊಳದಲ್ಲಿ ಕಂಡಂಥ ಸೋಜಿಗದ ಹೊಳಲನ್ನು ಉಳಿದವುಗಳಲ್ಲಿ ಇನ್ನೂ ಕಾಣಬೇಕಾಗಿದೆ. ಅತ್ತಿಯ ಹಣ್ಣಿಗಾಗಿ ಒಂದು ಕರುಳು ಉಪವಾಸವಿರುತ್ತದೆಂದು ಹೇಳಲಾಗುತ್ತದೆ. ಯಾವುದೋ ಅಪರೂಪದ ವಸ್ತುವಿನ ಬಯಕೆಯನ್ನು ಈ ಮಾತು ಸೂಚಿಸುತ್ತಿರಬೇಕು. ಅಂಥ ಒಂದು ಅಪರೂಪ ಕಾವ್ಯಕೃತಿಯ ನಿರ್ಮಾಣಕ್ಕಾಗಿ ನನ್ನ ಕರುಳು ಉಪವಾಸವಿರುವಂತೆ ನನಗೆ ಆಗೀಗ ಭಾಸವಾಗುತ್ತದೆ.

ಈಗ ಯಾವುದು ಬರೆಯುವ ಸ್ಫೂರ್ತಿಯನ್ನಿತ್ತಿದೆ? ಎಂದು ನೀವು ಕೇಳಬಹುದು. ಈಗಲೂ ವಿಸ್ತಾರವಾದ ಪ್ರಕೃತಿಯ ಮಧ್ಯದಲ್ಲಿ ಸಾಗುತ್ತಿರುವ ಜೀವನವೇ ನನಗೆ ಸ್ಫೂರ್ತಿಯ ಸೆಲೆಯಾಗಿದೆ. ವ್ಯಕ್ತಿಯ ಅಂತರಂಗ ಬಹಿರಂಗಗಳಲ್ಲಿ ನಡೆಯುವ ಘರ್ಷಣೆ ಜೀವನದ ರಹಸ್ಯವನ್ನು ಸ್ಫೋಟಗೊಳಿಸುವಂತೆ ನನಗೆ ತೋರುತ್ತದೆ. "ಮಾನವ ಹೃದಯದ ಚಿರಂತನ ಭಾವ ಭಾವಾಂತರಗಳ ಚಿತ್ರಣಕ್ಕೆ ಈ ಕವಿಯ ಮನೋಧರ್ಮ ಯೋಗ್ಯವಾದದ್ದು ಎನಿಸುತ್ತದೆ" ಎಂದು ನನ್ನ ಕಾವ್ಯದ ಬಗ್ಗೆ ಬಂದಿರುವ ವಿಮರ್ಶೆಯಲ್ಲಿ ತಥ್ಯವಿದೆ. ನನ್ನ ಮನೋಧರ್ಮ ರಭಸದ್ದಲ್ಲ. ಪ್ರಶಾಂತಿಯದು ಎಂಬ ಮಾತನ್ನೂ ನಾನು ಒಪ್ಪಿಕೊಳ್ಳುತ್ತೇನೆ. ಚಿಂತನೆ, ಸೂಕ್ಷ್ಮತೆ, ನಯ ಇವುಗಳೆ ಹೆಚ್ಚಾಗಿ ನನ್ನ ಭಾವೋದ್ದೀಪನಕ್ಕೆ ಪ್ರೇರಣೆಯಾಗಿವೆ ಎನ್ನಬಹುದು. ಹಿಂದಣ ಬರವಣಿಗೆಯಲ್ಲಿ ವಾಸ್ತವತೆಯನ್ನು ನಾನು ಮರೆತಿರದಿದ್ದರೂ ಅದರ ವಿಶೇಷ ಪ್ರಜ್ಞೆಯು ತನ್ನ ಶಕ್ತಿ, ಸೌಂದರ್ಯವನ್ನು ಅಚ್ಚಹೊಸತೆನಿಸುವಂತೆ ಹೊರಹೊಮ್ಮಿಸುವ ಮೋಡಿ ನವ್ಯಕಾವ್ಯದತ್ತ ನನ್ನ ಮನಸ್ಸನ್ನು ತಿರುಗಿಸಿತೆಂದು ತೋರುತ್ತದೆ. ನನ್ನ ಪ್ರಥಮ ಸಂಕಲನದಲ್ಲಿ 'ಸ್ಫೂರ್ತಿ'ಯನ್ನು ಕುರಿತು ಸ್ಫೂರ್ತಿಯುತವಾಗಿಯೇ ಬರೆದಿದ್ದೇನೆ. ಆದರೆ ಈಗ ಆ ದಿಸೆಯಲ್ಲಿ ನನ್ನ ವಿಚಾರ ಸ್ವಲ್ಪ ಬದಲಾಗಿದೆ. ಸ್ಫೂರ್ತಿಯ ಮೂಲಧೋರಣೆಯ ಬಗೆಗಲ್ಲ, ಆದರೆ ಕಾವ್ಯರಚನೆಯಲ್ಲಿ ಅದು ಆಡುವ ಪಾತ್ರದ ಔಚಿತ್ಯದ ಬಗ್ಗೆ. ಸ್ಫೂರ್ತಿ ಬಂದಾಗ ಬರೆದು ಬಿಡುವುದು ಕಾವ್ಯ ಗುಣವನ್ನು ಎಲ್ಲ ಕಾಲದಲ್ಲೂ ಕಾಪಾಡೀತೆಂದು ಹೇಳಲಿಕ್ಕಾಗದು. ಸ್ಫೂರ್ತಿಯೆನ್ನುವದೂ ಬರಬರುತ್ತ ಒಂದು ಸಂಸ್ಕಾರ ವಿಶೇಷವಾಗಿ ಪರಿಣಮಿಸಬಹುದೆಂದು ನನಗೆನಿಸುತ್ತದೆ. ಆದ್ದರಿಂದ ಅದನ್ನು ಹಿಡಿದಿಟ್ಟುಕೊಂಡು ಅದಕ್ಕುಚಿತವಾದ ಆಕಾರವನ್ನು ನೀಡುವುದೇ ಕಾವ್ಯಕಲೆಯೆಂದು ಹೇಳಬಹುದು. ಬುದ್ಧಿ ಹಾಗೂ ಭಾವ ಒಂದೊಂದು ಪದದಲ್ಲಿ, ಹಂತದಲ್ಲಿ ಸಮ್ಮುಖಿಗೊಂಡು ಪ್ರತಿಮೆಯಲ್ಲಿ ಒಡಮೂಡುವದೇ ಕಾವ್ಯದ ಮೊದಲನೆಯ ಕೆಲಸವೆಂದು ತೋರುತ್ತದೆ. ನನ್ನ ಈಚಿನ ಕೆಲವು ಕವಿತೆಗಳಲ್ಲಿ ಈ ಬಗೆಯ ತೊಳಲಾಟವನ್ನು ಕಾಣಬಹುದು. ಎಲ್ಲಿಯೋ ಕೆಲವೆಡೆ ಯಶಸ್ಸು

ಸಿಕ್ಕಿದೆಯೆನಿಸಿದರೂ ಅದರೊಡನೆ ಕವಿ ನಿರಂತರ ಹೋರಾಡಬೇಕಾಗುತ್ತದೆ ಎಂಬುದು ನನ್ನ ಈಚಿನ ಅನುಭವವಾಗಿದೆ. ನನಗೆ ಒಪ್ಪಿಗೆಯಾದ ಕವಿತೆಗಳನ್ನು ಓದುಗರು ಅಷ್ಟು ಮೆಚ್ಚದೆ ಇರಬಹುದು. ಕಾವ್ಯಗುಣದ ಸಮಗ್ರ ದೃಷ್ಟಿಯಿಂದ ನೋಡಿದಾಗ ಒಂದೊಂದು ಕವಿತೆಯ ಬಗೆಗೂ ಅಷ್ಟಿಷ್ಟು ಅತೃಪ್ತಿ ನನ್ನಲ್ಲಿ ಉಳಿದೇ ಇದೆ. ಕವಿತೆ ಜನತೆಯ ನಾಲಿಗೆಯಮೇಲೂ ನಲಿಯುತ್ತಿರಬೇಕು, ವಿಚಾರವಂತರಿಗೂ ವಿದ್ವಾಂಸರಿಗೂ ಸಾಕಷ್ಟು ಅನ್ನವನ್ನೂ ಒದಗಿಸುತ್ತಿರಬೇಕು ಎಂದು ಕೆಲವರು ಹೇಳುತ್ತಾರೆ. ಇದನ್ನು ಸಾಧಿಸುವ ಕಷ್ಟವನ್ನು ಕವಿಯೇ ಬಲ್ಲ. ಬಿಳಿಯ ಹಾಳೆಯ ಮೇಲೆ ಒಮ್ಮೆಲೆ ಚೊಕ್ಕವಾಗಿ ಕವಿತೆಯನ್ನು ಮೂಡಿಸುವ ಧೈರ್ಯವು ನನಗಿನ್ನೂ ಬಂದಿಲ್ಲ. ಅದು ಪಕ್ಕಾ ಆಗಬೇಕಾದರೆ ನಾಲ್ಕಾರು 'ಕಚ್ಚಾ'ಗಳಲ್ಲಿ ಹಾದು ಬಂದಾಗಲೇ ನನಗೆ ಸಮಾಧಾನ.

'ಬರವಣಿಗೆಗೆ ನೀವು ವಸ್ತುವನ್ನು ಹೇಗೆ ದೊರಕಿಸುತ್ತೀರಿ' ಎಂದು ಯಾರಾದರೂ ಕೇಳಿದರೆ, ಹಾಗೆ ಕೇಳಿದವರನ್ನೇ ಕಾವ್ಯದ ವಸ್ತುವಾಗಿ ಮಾಡಿಕೊಳ್ಳಬಲ್ಲ ಕವಿ. ವಸ್ತುವಿಗಾಗಿ ಕವಿ ಕುಸ್ತಿಯನ್ನು ಹಿಡಿಯಬೇಕಾದುದಿಲ್ಲ. ಜೀವನದ ಅಸ್ತವ್ಯಸ್ತ ಅನುಭವಗಳಲ್ಲಿಯೇ ಅವನಿಗೆ ಬೇಕಾದ ವಸ್ತುವೂ ಅಡಗಿಕೊಂಡಿರುತ್ತದೆ. ಕವಿಯ ಚಿಂತನೆಯಲ್ಲಿ ಅದು ಒಂದು 'ಶಿಸ್ತಿ'ಗೆ ಒಳಪಟ್ಟು ತನ್ನಷ್ಟಕ್ಕೇ 'ಸ್ವಸ್ತಿ' ಹೇಳುತ್ತದೆ. ಎಷ್ಟೋ ಸಲ ಕವಿತೆ ಬರೆದಾದಮೇಲೂ ಅದಕ್ಕೆ ತಲೆಬರಹ ಹೊಳೆಯುವದಿಲ್ಲ. ಒಮ್ಮೊಮ್ಮೆ ತಲೆಬರಹವೇ ತಲೆಯಲ್ಲಿ ಕುಳಿತು ಕವಿತೆ ಹೊರಡುವ ಸಮಯಕ್ಕಾಗಿ ಕಾಯಬೇಕಾಗುತ್ತದೆ. ಹೀಗೆ ಕಾಯುವದೂ-ಕಟ್ಟುವದೂ ನೋಯುವದೂ-ಈಯುವದೂ ಕವಿಯ ಮನಸ್ಸಿನ ನಿರಂತರ ಕ್ರಿಯೆಯಾಗಿದೆ.

ನನ್ನ ಮಟ್ಟಿಗೆ ಹೇಳಬೇಕೆಂದರೆ ಬರೆಯುವಾಗ ನಾನು ಯಾವ ಸಾಮಾಜಿಕ ಉದ್ದೇಶವಿಟ್ಟುಕೊಂಡೂ ಹೊರಡುವದಿಲ್ಲ. ಆದರೆ ಕವಿಯು ಜೀವಿಸುತ್ತಿರುವ ಅವನ ಸುತ್ತಮುತ್ತಿನ ಸಮಾಜದ ಪ್ರಭಾವ ಅವನ ಮೇಲೆ ಕೆಲಮಟ್ಟಿಗಾದರೂ ಆಗಿಯೇ ಆಗುತ್ತದೆ. ಆದರ ಕೆಲವು ರೀತಿನೀತಿಗಳು, ಕಟ್ಟುಪಾಡುಗಳು ಅವನಿಗೆ ಸೇರಬಹುದು, ಸೇರಲಿಕ್ಕಿಲ್ಲ. ಅದಕ್ಕೆ ಅವನ ಪ್ರತಿಕ್ರಿಯೆ ಅರಿತೊ, ಅರಿಯದೆಯೊ ಅವನ ಕಾವ್ಯದಲ್ಲಿ ಸೇರಿಕೊಳ್ಳುತ್ತದೆ. ಅವನ ಕಾವ್ಯದಿಂದ ಸಮಾಜದ ಕಣ್ಣು ತೆರೆಯಬಹುದು, ಹೊಸ ದೃಷ್ಟಿಯನ್ನೇ ಸಮಾಜ ಪಡೆಯಬಹುದು. ಕವಿಯು ಬರೆಯುವಾಗ ಸಾಮಾನ್ಯವಾಗಿ ಇದನ್ನೆಲ್ಲ ಭಾವಿಸಿರುವುದಿಲ್ಲ. ತನ್ನ ಕಾವ್ಯವನ್ನು ಓದುವ ರಸಿಕರನ್ನು ಕೆಲಮಟ್ಟಿಗೆ ಅವನು ಲಕ್ಷ್ಯದಲ್ಲಿಟ್ಟುಕೊಂಡಿರುತ್ತಾನೆ. ತಾನು ಬಯಸುವ ಒಂದು ಮಟ್ಟದ ಓದುಗರು ಬೇಡವೆಂದರೂ ಅವನ ಮನಸ್ಸಿನಲ್ಲಿ ಸುಳಿಯುತ್ತಾರೆ ಅವನ ಕಾವ್ಯ ರಚನೆಯ ಕಾಲದಲ್ಲಿಯೇ.

ಪ್ರಪಂಚ ಕವಿಯನ್ನು ಏನೆಂದು ಗುರುತಿಸದಿದ್ದರೂ ಒಬ್ಬ ಮನುಷ್ಯನನ್ನಾಗಿಯಾದರೂ ಕಾಣಬೇಕು. ಕಾವ್ಯರಚನೆಯನ್ನು ಬಿಟ್ಟು ಉಳಿದಹೊತ್ತಿನಲ್ಲಿ ಅವನೂ ಒಬ್ಬ ಸಾಮಾನ್ಯ ಮನುಷ್ಯನೇ. ಕವಿಗಳು ಈ ಲೋಕದವರೇ ಅಲ್ಲ ಎಂದು ಆಡುವ ಮಾತು ಅವನ ಶಕ್ತಿಯನ್ನೂ

ಗುಣವಿಶೇಷವನ್ನೂ ಎತ್ತಿ ತೋರಿಸಿದಂತೆಯೇ ವ್ಯಾವಹಾರಿಕವಾಗಿ ಅವನ ನಿಸ್ಸಹಾಯಕತೆಯನ್ನು ಸೂಚಿಸುತ್ತದೆ. (ಮನುಷ್ಯನಾಗಿದ್ದೇ ಮನುಷ್ಯಮಾತ್ರರಿಗೆ ಸಾಧ್ಯವಲ್ಲದ ಕೆಲವು ಉದಾತ್ತ ಭಾವಗಳನ್ನೂ ಕೆಲವು ಆದರ್ಶ ಕನಸನ್ನೂ ಆತ ಬಿಂಬಿಸಬಲ್ಲ. ಆದರೆ ಅಷ್ಟು ಮಾತ್ರಕ್ಕೇ 'ಕವಿಯಾದವನು ಭವ್ಯತೆಯ ದರ್ಶನ ಮಾಡಿಸಬೇಕು. ಮರ್ತ್ಯದ ಜೀವನವನ್ನು ಮುಗಿಲಿಗೆ ಎತ್ತರಿಸಬೇಕು' ಇತ್ಯಾದಿ ತತ್ತರಿಸುವ ಭಾರವನ್ನು ಕವಿಯ ಮೇಲೆ ಹೇರಬಾರದು. ಅವನ ಅನುಭೂತಿ, ಅನುಭವ, ಅಭಿವ್ಯಕ್ತಿಯ ಸಾಮರ್ಥ್ಯಕ್ಕನುಸರಿಸಿ ತನ್ನ ಪಾಲಿನ ದರ್ಶನವನ್ನು ಕವಿಯು ನೀಡಿಯೇ ನಿಡುತ್ತಾನೆ. ಓದುಗರ ಸಂಸ್ಕಾರವೂ ಅವಕ್ಕೆ ಸರಿಯಾಗಿ ಕೂಡಿಕೊಂಡರೆ ಅದಕ್ಕೆ ತಕ್ಕ ರಸಾನುಭವವನ್ನು ಅವರು ಪಡೆಯುತ್ತಾರೆ. ಆ ರಸಾನುಭವದಲ್ಲಿಯೇ ಒಂದು ಬ್ರಹ್ಮಾಂಡ ಅಡಗಿದೆ.

ಪ್ರಪಂಚ ನನ್ನನ್ನು ನನ್ನನ್ನಾಗಿಯೇ ಕಾಣಬೇಕೆಂದು ನನ್ನ ಅಪೇಕ್ಷೆ. ನನ್ನ ಸ್ಥಾನದಲ್ಲಿ ಮತ್ತೊಬ್ಬರನ್ನಿರಿಸಿ ಅಥವಾ ಇನ್ನೊಬ್ಬರೊಡನೆ ಹೋಲಿಸಿ ನೋಡಬಾರದು. ಏಕೆಂದರೆ ನನ್ನಲ್ಲಿರುವ ದೌರ್ಬಲ್ಯಗಳು ಅವು ಯಾವಾಗಲೂ ನನ್ನವೇ. ನನ್ನಲ್ಲಿರುವ ಗುಣಗಳಂತೆಯೇ ದೋಷಗಳ ಬಗೆಗೂ ಇತರರು ಆತ್ಮೀಯತೆ ತೋರಿಸಬೇಕು ಅಷ್ಟೆ.

ಕನ್ನಡಿಗರಿಗೆ ಕಾವ್ಯದ ಮೇಲೆ ಮಮತೆ ಇದೆ ; ಆದರೆ ಕಾವ್ಯಾಭ್ಯಾಸದ ಕಡೆಗೆ ಲಕ್ಷ್ಯವಿಲ್ಲ. ಯಾರೋ ಹಾಡಿದ ಕೆಲವು ಸಾಲುಗಳನ್ನು ತಾವು ಗುಣಗುಣಿಸಿ ಕೃತಾರ್ಥರಾಗುತ್ತಾರೆ. ಯಾವುದಾದರೊಂದು ಕವನ ಸಂಗ್ರಹ ಪ್ರಕಟವಾದರೆ ಹತ್ತಿರದ ನಾಲ್ಕು ಜನರಿಗೆ ಮಾತ್ರ ಅದು ಗೊತ್ತಾಗುತ್ತದೆ. ಎಷ್ಟೋ ದಿವಸಗಳಾದಮೇಲೆ ಎಲ್ಲಿಯೋ ಒಂದು ಪತ್ರಿಕೆಯ ಮೂಲೆಯಲ್ಲಿ ಅದರ ಅವಸರದ ಅವಲೋಕನವಾಗಿರುತ್ತದೆ; ತೀರಿತು, ಮುಂದೆ ಅದರ ಸುದ್ದಿಯೇ ಇಲ್ಲ. ಒಂದು ಸಂಕಲನ ಪ್ರಕಟವಾದರೆ ರಸಿಕರ ಮನಸ್ಸಿಗೆ ಒಂದು ಹೊಸ ಬೆಳಕಿನ ಹೊಳೆ ಹರಿದಂತಾಗಬೇಕು. ಜನಮನದಲ್ಲಿ ಹೊಸ ಭಾವಗಳ ಸಂಚಾರವಾಗಬೇಕು. ಗಾಳಿಯಲ್ಲಿ ಕವಿಯ ಮಾತು ತೇಲುತ್ತಿರಬೇಕು. ಕಿವಿಗೊಟ್ಟವರಿಗೆ ಕೇಳುತ್ತಿರಬೇಕು. ಇದು ಎಚ್ಚತ್ತ ಜನಾಂಗದ ಕುರುಹು. ಆದರೆ ನಮ್ಮ ನಾಡಿನ ಸ್ಥಿತಿ ಒಂದು ಬಗೆಯ ಮಬ್ಬಿನಲ್ಲಿಯೇ ಇದೆ. ಯಾವುವೋ ಪೂರ್ವಗ್ರಹಗಳು ಅವರನ್ನು ಕಾಡುತ್ತಿವೆ. ಎಚ್ಚತ್ತವರು ಎಲ್ಲಿಯೋ ಸ್ವಲ್ಪ ಜನ. ಬಹುಜನಸಮುದಾಯದಲ್ಲಿ ಅವರ ಮಾತಿಗೂ ಬೆಲೆಯಿಲ್ಲದಾಗಿದೆ. ಆದರೂ ಕವಿ ತನ್ನ ಹೊಸ ಅರಿವಿನ, ಎಚ್ಚರಿಕೆಯ ಮಾತನ್ನು ಹೇಳುತ್ತಲೇ ಇರಬೇಕು.

೮-೧೦ ವರ್ಷಗಳ ಮೇಲಾದರೂ ನನ್ನ ಕೆಲವು ಕವನಸಂಗ್ರಹಗಳು ಪುನರ್ಮುದ್ರಣ-ಗೊಂಡಿವೆಯೆಂಬ ಅಲ್ಪತೃಪ್ತಿ ನನಗಿದ್ದರೂ ನನ್ನ ಕಾವ್ಯ ಸಂಗ್ರಹವನ್ನು ಪ್ರಕಟಿಸಬೇಕಾದಾಗ ಯೋಗ್ಯ ಸಂಭಾವನೆಯನ್ನು ಕೊಡುವ, ಅಂದವಾಗಿ ಪ್ರಕಟಿಸುವ ಪ್ರಕಾಶಕರನ್ನು ಹುಡುಕುತ್ತ ಹೋಗುವ ಪ್ರಸಂಗ ನನಗೆ ತಪ್ಪಿಲ್ಲ; ಉಳಿದ ಎಷ್ಟೋ ಕವಿಗಳಿಗೂ ತಪ್ಪಿಲ್ಲವೆನ್ನಬಹುದು. ಇಂಗ್ಲೆಂಡಿನಲ್ಲೂ ಕಾವ್ಯಕ್ಕಿರುವ ಪೇಟೆ ಇಷ್ಟೇ ಸೀಮಿತವಾಗಿದೆಯೆಂದು ಹೇಳುತ್ತಾರೆ. ಆದರೆ ಪಠ್ಯಪುಸ್ತಕದಲ್ಲಿ ಬರುವ

ಕವಿತೆಗಳ ಮೂಲಕವೇ ಕವಿಯ ಹೆಸರು ಪ್ರಸಾರವಾಗುವ ಪ್ರಮೇಯ ಬಹುಶಃ ಅಲ್ಲಿ ಇರಲಿಕ್ಕಿಲ್ಲ.

ನನ್ನ ಸಾಹಿತ್ಯಸಾಧನೆ ಅಂಥ ಮಹತ್ತರವಾದುದು ಎಂದೇನೂ ನಾನು ಭಾವಿಸಿಲ್ಲ. ಹಾಗೆ ನೋಡಿದರೆ ನನ್ನ ರಚನೆಯೂ ಅಷ್ಟೊಂದು ವಿಪುಲವಾಗಿಲ್ಲ. ಆದರೆ ನನ್ನ ಹೃದಯದ, ನನ್ನವೇ ಆದ ಕೆಲವು ನುಡಿಗಳನ್ನು ಕನ್ನಡದ ಗಾಳಿಯಲ್ಲಿ ತೇಲಿಸಿದ್ದೇನೆ ಎನ್ನುವ ತೃಪ್ತಿ ಇದೆ. ಈಗ ಬೆಳೆದದ್ದು ಸಾಲದು ಎನ್ನುವ ಅತೃಪ್ತಿಯ ಜೊತೆಯಲ್ಲಿಯೇ ಇನ್ನೂ ಬೆಳೆಯಬೇಕೆಂಬ ಆಕಾಂಕ್ಷೆಯೂ ಇದೆ. ಅದಕ್ಕೆಂದೇ ಕಾವ್ಯರಚನೆ ಮುಂದುವರೆಯುತ್ತಿದೆ.

('ಸಾಹಿತ್ಯಚಿಂತನ' : ೧೯೬೬)

## ೧೭

## ನೆನಪು : ಸಿಹಿ-ಕಹಿ

ನಾನು ಹುಟ್ಟಿದ್ದು ಗದಗ ತಾಲೂಕಿನ ಹೊಂಬಳ ಗ್ರಾಮದಲ್ಲಿ, ೨೮ ಜೂನ್ ೧೯೨೮. ಸ್ಥಳೀಯ ಶಾಸನವೊಂದರಲ್ಲಿ (೧೧೮೯) ಪೊಂಬೊಳಲ್ ಹೆಸರಿದೆ. ಬೆಳೆದದ್ದು ಅದೇ ತಾಲೂಕಿನ ಸಣ್ಣ ಹಳ್ಳಿ ಶಿರುಂದದಲ್ಲಿ. ನನ್ನ ತಂದೆ ಅಲ್ಲಿ ಪ್ರಾಥಮಿಕ ಶಾಲಾ ಶಿಕ್ಷಕರಾಗಿದ್ದರು. ಆಚಾರ-ವಿಚಾರಗಳಲ್ಲಿ ಅವರು ತುಂಬ ಕಟ್ಟುನಿಟ್ಟಿನವರಾದ್ದರಿಂದ ಊರಿನ ಜನರಿಗೆ ಸಕ್ಕರೆಪ್ಪ ಮಾಸ್ತರು ಎಂದರೆ ಎಲ್ಲಿಲ್ಲದ ಗೌರವ. ಶಾಲೆಯಲ್ಲಿ ನಾಲ್ಕನೆಯ ಇಯತ್ತೆಯವರೆಗೆ ಅವರೊಬ್ಬರೇ ಕಲಿಸುತ್ತಿದ್ದರು. ತಪ್ಪಿ ನಡೆದ ಹುಡುಗರಿಗೆ ಛಡಿ ಏಟಿನ ಶಿಕ್ಷೆ ತಪ್ಪುತ್ತಿರಲಿಲ್ಲ. ನನಗೂ ಅದರಲ್ಲಿ ಯಾವುದೇ ರಿಯಾಯಿತಿ ಇರಲಿಲ್ಲ. ಅವರು ಊರು ಬಿಟ್ಟು ಹೋಗುತ್ತಿದ್ದುದೇ ಅಪರೂಪ. ಹತ್ತಿರದ ಶಿರಹಟ್ಟಿಗೊ ಇಲ್ಲವೆ ಗದಗಿಗೊ ನಡೆದುಕೊಂಡೇ ಸಂತೆಗೆ ಹೋಗಿಬರುತ್ತಿದ್ದರು. ತಮ್ಮ ಸೇವಾವಧಿಯಲ್ಲಿ ಮೂರುದಿನ ಮಾತ್ರ ರಜೆ ತೆಗೆದುಕೊಂಡಿದ್ದರಂತೆ, ಅದೂ ನಮ್ಮ ಅಕ್ಕನ ಮದುವೆಯ ಸಂದರ್ಭದಲ್ಲಿ. ರಾತ್ರಿ ಕೆಲವು ವಿದ್ಯಾರ್ಥಿಗಳು ನಮ್ಮ ಮನೆಗೆ ಓದಲು ಬರುತ್ತಿದ್ದರು. ಅವರ ಮನೆಗಳಲ್ಲಿ ಓದಲು ತಕ್ಕ ಸ್ಥಳವಾಗಲಿ, ಪ್ರತ್ಯೇಕ ದೀಪವಾಗಲಿ ಇರುತ್ತಿರಲಿಲ್ಲ. ವರುಷಕ್ಕೊಮ್ಮೆ ಸಾಲಿ ಸಾಹೇಬರು ಪರೀಕ್ಷೆ ತೆಗೆದುಕೊಳ್ಳಲು ಬಂದಾಗ ಇಡೀ ಊರಿಗೇ ಅದೊಂದು ಕುತೂಹಲದ ಸಂಗತಿಯಾಗುತ್ತಿತ್ತು. ಮರುದಿನ ಪಾಸು, ನಾಪಾಸುಗಳನ್ನು ಹೇಳಿ ಮೊದಲ ಮೂರು ನಂಬರಿನವರಿಗೆ ಪುಸ್ತಕ, ಪಾಟಿ, ಪೆನ್ಸಿಲ್, ಬಣ್ಣದ ಪೆಟ್ಟಿಗೆ ಇತ್ಯಾದಿಗಳನ್ನು ಬಹುಮಾನವಾಗಿ ಕೊಡುತ್ತಿದ್ದರು. ನನಗೆ ಮೊದಲನೇ ಬಹುಮಾನ ಬಂದಾಗೆಲ್ಲ, 'ಎಷ್ಟೆಂದರೂ ಮಾಸ್ತರ ಮಗ, ಶಾಣ್ಯಾ ಇರದ ಏನು?' ಎಂದು ಕೆಲವರು ಅಂದುಕೊಳ್ಳುತ್ತಿದ್ದರು. ಶುದ್ಧವಾದ ಓದು, ಬರೆಪ, ಕವಿತಾ ಪಾಠಗಳಿಗೆ ಆಗ ಹೆಚ್ಚು ಲಕ್ಷ್ಯ ಕೊಡಲಾಗುತ್ತಿತ್ತು. ಪಠ್ಯದಲ್ಲಿಯ ಪದ್ಯಗಳೆಲ್ಲ ನನಗೆ ಕಂಠಪಾಠವಾಗಿ ಬಿಡುತ್ತಿದ್ದವು.

ನನ್ನ ತಂದೆ ಮನೆಯಲ್ಲಿದ್ದಾಗಲೆಲ್ಲ ಏನಾದರೂ ಓದುತ್ತಲೇ ಇರುತ್ತಿದ್ದರು. ಯಾವುದಾದರೂ ಕಾವ್ಯ ಇಲ್ಲವೆ ತತ್ವಪದಗಳನ್ನು ತಮ್ಮಷ್ಟಕ್ಕೇ ರಾಗವಾಗಿ ಹೇಳಿಕೊಳ್ಳುತ್ತಿದ್ದರು. ನನ್ನ ತಾಯಿ ಪಾರ್ವತೆವ್ವ, ಮನೆಯ ಕೆಲಸವನ್ನೆಲ್ಲ ಒಬ್ಬರೇ ಅಚ್ಚುಕಟ್ಟಾಗಿ ನೋಡಿಕೊಳ್ಳುತ್ತಿದ್ದರು. ನಾವು ಮನೆಯಲ್ಲಿ ಒಂದು ಆಕಳು ಸಾಕಿದ್ದೆವು. ಒಂದು ವರ್ಷ ಮಳೆ ಕಡಿಮೆಯಾಗಿ ಹೊಟ್ಟು ಮೇವಿನ ಕೊರತೆಯಾದದ್ದಕ್ಕೆ ಅದನ್ನು ಹೊಂಬಳಕ್ಕೆ ಅಟ್ಟಿದ್ದೆವು. ಮುಂದೆ ಒಂದು ದಿನ ಬೆಳಗಿನಲ್ಲಿ ಅದು

ನಮ್ಮ ಮನೆಯ ಬಾಗಿಲಲ್ಲಿಯೆ ಬಂದು ಮಲಗಿದ್ದನ್ನು ಕಂಡು ನನಗೆ ಆಚ್ಚರಿಯಾಯಿತು. ಶಿರುಂದ ಸಣ್ಣ ಹಳ್ಳಿಯಾದರೂ ಅಲ್ಲಿ ಎಲ್ಲ ಕಸುಬಿನವರೂ ಇದ್ದರು. ಕಮ್ಮಾರ ಶಾಲೆ ಹಾಗೂ ಕುಂಬಾರನ ತಿಗರಿ ಎರಡೂ ನನಗೆ ಆಕರ್ಷಣೆಯ ಕೇಂದ್ರಗಳಾಗಿದ್ದವು. ಅಲ್ಲಿಯ ಕೆಲಸವನ್ನು ನೋಡುತ್ತ ನಾನು ಎಷ್ಟೋ ಸಲ ಮೈಮರೆತು ನಿಂತುಬಿಡುತ್ತಿದ್ದೆ. ನಮ್ಮ ಸಾಲೆಯ ಎದುರಿಗೇ ಸಾರ್ವಜನಿಕ ಬಾವಿ. ಬಾವಿಯ ಕಟ್ಟೆಯ ಸುತ್ತಲೂ ಕೆಳಗೆ ಹರಿಜನರು ಮಣ್ಣಿನ ಕೊಡಗಳನ್ನಿಟ್ಟುಕೊಂಡು ದೈನಾಸಬಟ್ಟು ಕೇಳಿ ನೀರು ಹಾಕಿಸಿಕೊಳ್ಳುತ್ತಿದ್ದರು. ನಮ್ಮ ಮನೆಯ ಎದುರಿನ ಅರಳೆಯ ಮರದಲ್ಲಿ ಸಂಜೆಯ ಮುಂದೆ ಗಿಳಿಗಳ ಕಿಲಿಕಿಲಿ. ನಾನು ಗಿಡದ ಕೆಳಗೆ ಬಿದ್ದ ಗಿಳಿ ಪುಚ್ಚವನ್ನು ಆಯ್ದುಕೊಂಡು ಬಂದು ಪುಸ್ತಕದಲ್ಲಿಡುತ್ತಿದ್ದೆ. ವಾರಕ್ಕೊಮ್ಮೆ ಗ್ರಾಮದೇವತೆಗೆ ಪಲ್ಲಕ್ಕಿ ಸೇವೆ ನಡೆದಾಗ ಡೊಳ್ಳಿನ ಹಾಡು, ಕುಣಿತ, ಹಬ್ಬ-ಹುಣ್ಣಿಮೆಗಳಲ್ಲಿ ಕರಡಿಮಜಲು ಕಿವಿ ತುಂಬುತ್ತಿದ್ದವು. ಊರಿನ ಸುತ್ತ ಕಪ್ಪತಗುಡ್ಡದ ಸಾಲು. ಎಲೆವಳ್ಳಿ ತೋಟಗಳಿಗೆ ಕಪ್ಪಲಿಹೊಡೆದು ನೀರು ಹಾಯಿಸುವಾಗ ಬಾವಿಯ ಗಡಗಡೆಯ 'ಗಿರಕೂ ಗಿರಕೂ' ನಾದ ಊರಲ್ಲಿದ್ದರೂ ಕೇಳುತ್ತಿತ್ತು. ಮೂರು ಮೈಲು ದೂರವಿದ್ದ ಶಿರಹಟ್ಟಿಯಲ್ಲಿ ಫಕ್ಕೀರಸ್ವಾಮಿ ಮಠದ ದೊಡ್ಡಜಾತ್ರೆಗೆ ಹೋದಾಗ ನನಗೆ ಕೊಟ್ಟಿದ್ದ ಒಂದು ರೂಪಾಯಿಯನ್ನು ಗುಳಗುಳಿ ಆಟದಲ್ಲಿ ಸೋತು, ಬರಿ ಹೊಟ್ಟೆಯಿಂದ ಮನೆಗೆ ಬಂದು ತಂದೆಯವರಿಂದ ಚೆನ್ನಾಗಿ ಬೈಸಿಕೊಂಡದ್ದು ಇನ್ನೂ ನೆನಪಿದೆ.

ಒಂದು ಸಲ ಊರಿನಲ್ಲಿ ಒಮ್ಮೆಲೆ ಪ್ಲೇಗಿನ ಹಾವಳಿ. ಸಾವಿನ ಮೇಲೆ ಸಾವು. ಎಲ್ಲೆಲ್ಲೂ ಭಯದ ವಾತಾವರಣ. ಜನರೆಲ್ಲ ಊರು ಬಿಟ್ಟು ದೂರ ಹೊಲಗಳಲ್ಲಿ ಗುಡಿಸಲು ಹಾಕಿಕೊಂಡು ವಾಸ. ನಮ್ಮ ಗುಡಿಸಲದ ಹತ್ತಿರದಲ್ಲಿಯೆ ರೈತರ ಸುಗ್ಗಿಯ ಕಣ. ಗಿಡಗಳ ನೆರಳಲ್ಲಿ ಶಾಲೆ. ಆ ಬಯಲಲ್ಲಿ ಒಂದು ಬಗೆಯ ಬಿಡುಗಡೆಯ ಉಲ್ಲಾಸವನ್ನು ನಾನು ಅನುಭವಿಸಿದೆ.

ನಾನು ನಾಲ್ಕನೆ ಇಯತ್ತೆ ಮುಗಿಸುವಷ್ಟರಲ್ಲಿ ನನ್ನ ತಂದೆ ನಿವೃತ್ತರಾಗಿ ಆ ಸ್ಥಳಕ್ಕೆ ನನ್ನ ಹಿರಿಯಣ್ಣ ಮಾಸ್ತರರಾಗಿ ನೇಮಕಗೊಂಡಿದ್ದರು. ಅವರಿಗೂ ಮುಂದೆ ಬೇರೆ ಊರಿಗೆ ವರ್ಗವಾಗಿದ್ದರಿಂದ ಅಲ್ಲಿದ್ದ ಸಣ್ಣ ಮನೆಯನ್ನು ಮಾರಿ ನಾವೆಲ್ಲ ಮತ್ತೆ ಹೊಂಬಳಕ್ಕೆ (ತಾಯ ತವರುಮನೆ) ಬಂದೆವು. ಅಲ್ಲಿ ಒಬ್ಬಳೇ ಇರುತ್ತಿದ್ದ ಅಜ್ಜಿಗೂ ಇದರಿಂದ ಸಂತೋಷವಾಯಿತು. ಮುಂದಿನ ಅಭ್ಯಾಸಕ್ಕೆ ನಾನು ಧಾರವಾಡದ ಬಳಿಯ ಗರಗ ಗ್ರಾಮಕ್ಕೆ ಬಂದೆ. ಅಲ್ಲಿ ನನ್ನ ಭಾವ ಪ್ರಾಥಮಿಕ ಶಾಲೆಯ ಮುಖ್ಯಾಧ್ಯಾಪಕರಾಗಿದ್ದರು. ಅಲ್ಲಿ ನಾನು ಮೂರು ವರುಷ ಕಲಿತು ಮುಲ್ಕಿ ಪರೀಕ್ಷೆ ಪಾಸಾದೆ. ನನ್ನ ಬಾಲ್ಯದ ಹತ್ತು ಹನ್ನೊಂದು ವರ್ಷಗಳನ್ನು ಕಳೆದ ಶಿರುಂದ ಗ್ರಾಮದ ಸೊಗಸು, ಭಾವನಾತ್ಮಕ ಸಂಬಂಧ ನನಗೆ ಇಲ್ಲಿ ದೊರೆಯದಿದ್ದರೂ ಸ್ವಾತಂತ್ರ್ಯ ಚಳುವಳಿಯ ಹೊಸ ವಾತಾವರಣ ನನ್ನನ್ನೂ ಆವರಿಸಿತು. ರವಿವಾರಕ್ಕೊಮ್ಮೆ ಸಾಲೆಯ ಹುಡುಗರೆಲ್ಲ ಶಿಕ್ಷಕರೊಂದಿಗೆ ಪ್ರಭಾತಫೇರಿಯಲ್ಲಿ ಭಾಗವಹಿಸಿ ದೇಶಭಕ್ತಿಯ ಹಾಡುಗಳನ್ನು ಹೇಳುತ್ತಿದ್ದೆವು. 'ಎಂಥಾ ಶ್ಯಾಣ್ಯಾ ಮಹಾತ್ಮಾಗಾಂಧಿ! ಹಿಂದೂಸ್ಥಾನಕವನೇ ತಂದಿ', 'ಝೇಂಡಾ ಊಂಚಾ ರಹೇ ಹಮಾರಾ', 'ಕರುನಾಡು ನಮ್ಮ ನಾಡು' - ಇವೇ ಮೊದಲಾದ ಹಾಡುಗಳನ್ನು

ಹಾಡುವುದರಲ್ಲಿ ನಾನು ಮುಂದಾಗಿರುತ್ತಿದ್ದ. ಇದೇ ಧಾಟಿಯಲ್ಲಿ ನಾನು ಆಗೊಂದು ಪದ್ಯ ಬರೆದ ಹಾಗೆ ನೆನಪು. ಆ ಊರಿನ ಬಹುತೇಕ ಜನರು ಖಾದೀಧಾರಿಗಳಾಗಿದ್ದರು. ಧಾರವಾಡಕ್ಕೆ ಬರುತ್ತಿದ್ದ ರಾಜಕೀಯ ಮುಖಂಡರಲ್ಲ ಆ ಊರಿಗೂ ಬಂದು ಭಾಷಣ ಮಾಡುತ್ತಿದ್ದರು. ಶಿರುಂದದಲ್ಲಿದ್ದಾಗ ಅಪರೂಪಕ್ಕೆ ಯಾರಾದರೂ ಸೈಕಲ್ ಮೇಲೆ ಬಂದರೆ ಅವರು ಕೆಳಗ ಬೀಳದೆ ಇರುವುದನ್ನು ಕಂಡು ಆಶ್ಚರ್ಯ ಪಡುತ್ತಿದ್ದ ನಾನು ಈಗ ಸ್ವತಃ ಸೈಕಲ್ ಸವಾರಿ ಮಾಡತೊಡಗಿದೆ. ಪತ್ರಿಕೆಗಳಲ್ಲಿ ಎರಡನೆ ಮಹಾಯುದ್ಧದ ಸುದ್ದಿಗಳನ್ನು - ಅದರಲ್ಲೂ ಇಂಗ್ಲೆಂಡಿನ ಮೇಲೆ ಹಿಟ್ಲರ್ ದಾಳಿ ಮಾಡಿದ್ದು - ಓದಿ ಗೆಳೆಯರೊಡನೆ ರೋಮಾಂಚನಗೊಳ್ಳುತ್ತಿದ್ದ.

ಊರಿಗೆ ಸಮೀಪದ ಹಳ್ಳದ ದಂಡೆಯ ಮೇಲೆ ಮಡಿವಾಳೇಶ್ವರರ ಗದ್ದುಗೆ ಹಾಗೂ ಮಠ. (ಮಡಿವಾಳಪ್ಪನವರು ಶಿಶುನಾಳ ಶರೀಫರ ಸಮಕಾಲೀನರು.) ಪ್ರತಿದಿನ ಸಂಜೆ ನಾನು ಹಳ್ಳದ ದಂಡೆಯಲ್ಲಿ ಕುಳಿತು ಸೂರ್ಯಾಸ್ತದ ಸೊಬಗನ್ನು ಸವಿದು, ಅಲ್ಲಿಯ ಸಿಹಿನೀರಿನ ಬಾವಿಯಿಂದ ಒಂದು ಕೊಡ ನೀರನ್ನು ಮನೆಗೆ ತರುತ್ತಿದ್ದೆ. ವಿದ್ಯಾರ್ಥಿಗಳೆಲ್ಲ ಕೂಡಿ ಒಮ್ಮೆ ಶಾಲೆಯಲ್ಲಿ 'ಗಾಂಧಿಟೋಪಿ' ನಾಟಕವನ್ನಾಡಿದಾಗ ವಡೆ ಮಾರುವ ಸಾವಕ್ಕನ ಪಾತ್ರವನ್ನು ಚೆನ್ನಾಗಿ ಅಭಿನಯಿಸಿದ್ದಕ್ಕೆ ನನಗೆ ಬೆಳ್ಳಿಯ ಪದಕ ಬಹುಮಾನವಾಗಿ ದೊರೆತಿತ್ತು. ಶಾಲೆಯ ಚಿಕ್ಕ ಕಪಾಟೊಂದರಲ್ಲಿ ಕೆಲವು ಪುಸ್ತಕಗಳಿದ್ದವು. ಗಳಗನಾಥರ 'ಮಾಧವ ಕರುಣಾ ವಿಲಾಸ' ಕಾದಂಬರಿಯನ್ನು ನಾನು ಅಲ್ಲಿದ್ದಾಗಲೇ ಓದಿದೆ.

ಮುಲ್ಕೀ ಪರೀಕ್ಷೆಯಾದೊಡನೆ ಪ್ರಾಥಮಿಕ ಶಾಲಾ ಶಿಕ್ಷಕನಾಗಲು ತಂದೆಯವರು ನನ್ನಿಂದ ಅರ್ಜಿ ಹಾಕಿಸಿದ್ದರು. ಅವರಿಗೆ ಬರುತ್ತಿದ್ದುದು ೧೮ ರೂ. ನಿವೃತ್ತಿ ವೇತನ. ಯಾವ ಆಸ್ತಿಯನ್ನೂ ಅವರು ಮಾಡಿರಲಿಲ್ಲ. ಆ ವರ್ಷ ಪರೀಕ್ಷೆಯಲ್ಲಿ ನಾನು ಧಾರವಾಡ ಜಿಲ್ಲೆಗೆ ಮೊದಲನೆಯ ನಂಬರು ಬಂದದ್ದರಿಂದ ಅವರಿಗೆ ಮುಂದೆ ಕಲಿಸಲು ಮನಸ್ಸಾಯಿತು. ೧೯೪೦ರಲ್ಲಿ ನಾನು ಧಾರವಾಡದಲ್ಲಿ ರಾಜಾ ಲಖಮಗೌಡ ಸರದೇಸಾಯಿ ಹೈಸ್ಕೂಲು ಸೇರಿದೆ. ಸ್ಕಾಲರ್‌ಶಿಪ್ ಪರೀಕ್ಷೆಯಲ್ಲಿ ಪಾಸಾಗಿ ಸರಕಾರಿ ಶಿಷ್ಯವೇತನ ಬರತೊಡಗಿತು. ಮುರುಘಾಮಠದ ಉಚಿತ ಪ್ರಸಾದ ನಿಲಯದಲ್ಲಿ ಪ್ರವೇಶವೂ ಸಿಕ್ಕಿತು. ಹೀಗಾಗಿ ನನ್ನ ಓದಿಗೆ ಒಂದು ದಾರಿಯಾಯಿತು.

ಮಠದಲ್ಲಿ ನಸುಕಿನಲ್ಲಿ ಪ್ರಾರ್ಥನೆ, ಸಂಜೆ ಶಿವಾನುಭವ ಪ್ರವಚನ, ಎಲ್ಲವೂ ನಿಯಮಾನುಸಾರ ನಡೆಯುವಂತೆ ಸ್ವಾಮಿಗಳು ಕಟ್ಟುನಿಟ್ಟಾಗಿ ನೋಡಿಕೊಳ್ಳುತ್ತಿದ್ದರು. ಮೃತ್ಯುಂಜಯಸ್ವಾಮಿಗಳದು ಉಜ್ವಲವಾದ ವ್ಯಕ್ತಿತ್ವ. ವಿದ್ಯಾರ್ಥಿಗಳ ಮೇಲೆ ತುಂಬ ಪ್ರೀತಿ. ಆದರೆ ಕ್ರಮ ತಪ್ಪಿ ನಡೆದರೆ ಒಮ್ಮೊಮ್ಮೆ ಉಗ್ರ ಕೋಪಕ್ಕೂ ಗುರಿಯಾಗುತ್ತಿದ್ದೆವು. ಶ್ರಾವಣಮಾಸದಲ್ಲಿ ವಿದ್ವಜ್ಜನರ ಭಾಷಣಗಳು, ಸಂಗೀತ ಸಭೆಗಳೂ ನಡೆಯುತ್ತಿದ್ದವು. ಆಗಲೇ ಮಲ್ಲಿಕಾರ್ಜುನ ಮನ್ಸೂರರ ಸಂಗೀತವನ್ನು, ವಚನಗಳ ಹಾಡುಗಾರಿಕೆಯನ್ನೂ ಕೇಳಿ ನಾನು ತುಂಬ ಪ್ರಭಾವಿತನಾದೆ. ಸ್ವತಃ ಸ್ವಾಮಿಗಳು ನಿಜಗುಣ ಶಿವಯೋಗಿ, ಬಾಲಲೀಲಾ ಮಹಾಂತ ಶಿವಯೋಗಿ, ಸರ್ಪಭೂಷಣ ಶಿವಯೋಗಿ, ಮುಪ್ಪಿನ ಷಡಕ್ಷರಿ ಮೊದಲಾದವರ ಅನುಭಾವ ಪದಗಳನ್ನು ಅತ್ಯಂತ ಭಾವ ಪೂರ್ಣವಾಗಿ

ಹಾಡುತ್ತಿದ್ದರು. ಶಿ.ಶಿ. ಬಸವನಾಳರು, ಉತ್ತಂಗಿ ಚೆನ್ನಪ್ಪನವರು ಆಗಾಗ ಮಠಕ್ಕೆ ಬಂದಾಗ ವಚನಕಾರರು ಹಾಗೂ ಸರ್ವಜ್ಞನನ್ನು ಕುರಿತು ಉಪನ್ಯಾಸವೀಯುತ್ತಿದ್ದರು. ಅಂದಿನಿಂದಲೇ ಬಸವಣ್ಣ, ಹರಿಹರ, ಸರ್ವಜ್ಞ ಮೊದಲಾದವರ ಬಗ್ಗೆ ಹೆಚ್ಚಿನ ಆಸ್ಥೆ ಉಂಟಾಯಿತು.

ಹೈಸ್ಕೂಲಿನ ಮಿಸಲೆನಿಯಲ್ಲಿ ನನ್ನ ಕವಿತೆಗಳು ಪ್ರಕಟವಾಗತೊಡಗಿದವು. ಮುಖ್ಯಾಧ್ಯಾಪಕರಾದ ವೀ.ರು. ಕೊಪ್ಪಳ ಅವರು ನನ್ನ ಬರವಣಿಗೆಗೆ ತುಂಬ ಪ್ರೋತ್ಸಾಹ ನೀಡಿದ ಗುರುಗಳು. ಒಮ್ಮೊಮ್ಮೆ ನನ್ನ ಬರೆಹಗಳನ್ನು ಅವರು ಬೇರೆ ಕ್ಲಾಸುಗಳಲ್ಲಿ ಓದಿ ತೋರಿಸುತ್ತಿದ್ದುದೂ ಉಂಟು. ಹೈಸ್ಕೂಲಿನ ಪುಟ್ಟ ಗ್ರಂಥಾಲಯದಲ್ಲಿದ್ದ 'ನನ್ನ ನಲ್ಲ', 'ಗರಿ', 'ನವಿಲು', 'ಹೊನ್ನಿಯ ಮದುವೆ' ಮೊದಲಾದ ಕವನ ಸಂಗ್ರಹಗಳನ್ನು ನನಗೆ ಓದಲು ಒದಗಿಸುತ್ತಿದ್ದರು. 'ಕಾನೂರು ಹೆಗ್ಗಡಿತಿ', 'ಸ್ವಾಮಿ ವಿವೇಕಾನಂದ' ಪುಸ್ತಕಗಳನ್ನು ಮತ್ತೆ ಮತ್ತೆ ಓದಿ ಸವಿದೆ. ಪುಸ್ತಕ ಕೊಳ್ಳಲು ಹಣವಿರುತ್ತಿರಲಿಲ್ಲ. ಆದರೂ ಆಗ ಕೊಂಡ ಪುಸ್ತಕಗಳಲ್ಲಿ 'ಕನ್ನಡ ಬಾವುಟ'ವೂ ಒಂದು. ಬಸವನಾಳರು ಅಧ್ಯಕ್ಷರಾಗಿದ್ದ ರಬಕವಿ ಸಾಹಿತ್ಯ ಸಮ್ಮೇಳನಕ್ಕೆ ಒಂದಿಬ್ಬರು ಗೆಳೆಯರೊಂದಿಗೆ ಹೇಗೋ ಪ್ರಯತ್ನಪಟ್ಟು ಹೋಗಿ ಬಂದೆ (೧೯೪೪). ಅದು ನಾನು ನೋಡಿದ ಪ್ರಥಮ ಸಾಹಿತ್ಯ ಸಮ್ಮೇಳನ. ಬಿ.ಎಂ.ಶ್ರೀ., ಮಾಸ್ತಿ, ರಾಜರತ್ನಂ, ಸಿಂಪಿ ಲಿಂಗಣ್ಣ, ಅ.ನ.ಕೃ., ತ.ರಾ.ಸು., ನಿರಂಜನ ಮೊದಲಾದವರನ್ನು ನಾನು ಕಂಡದ್ದು ಅದೇ ಮೊದಲು.

ಕರ್ನಾಟಕ ವಿದ್ಯಾವರ್ಧಕ ಸಂಘದಲ್ಲಿ ನಡೆಯುತ್ತಿದ್ದ ಸಾಹಿತ್ಯಿಕ ಸಭೆಗಳನ್ನು ನಾನು ಸಾಮಾನ್ಯವಾಗಿ ತಪ್ಪಿಸಿಕೊಳ್ಳುತ್ತಿರಲಿಲ್ಲ. ಸಭೆಯ ಪ್ರಾರಂಭ ಇಲ್ಲವೆ ಕೊನೆಯಲ್ಲಿ ಭಾವಗೀತೆಗಳ ಹಾಡುಗಾರಿಕೆ ಇದ್ದೇ ಇರುತ್ತಿತ್ತು. ಬೇಂದ್ರೆ, ಬೆಟಗೇರಿ (ಆನಂದಕಂದ), ಕುವೆಂಪು, ನರಸಿಂಹಸ್ವಾಮಿ ಇವರ ಕೆಲವು ಭಾವಗೀತೆಗಳು ಧಾರವಾಡದ ಕವಿಗಾಳಿಯಲ್ಲಿ ಬೆರೆತು ಬಿಟ್ಟಿದ್ದವು. ಸಂಘದ ವಕ್ತೃತ್ವ ಸ್ಪರ್ಧೆಗಳಲ್ಲಿ ಭಾಗವಹಿಸಿ ನಾನು ಎರಡು ಸಲ ಬಹುಮಾನ ಪಡೆದಿದ್ದೆ. ಹಣದ ರೂಪದಲ್ಲಿ ಬಂದ ಬಹುಮಾನಗಳಿಂದ ನನ್ನ ಕೆಲವು ಆವಶ್ಯಕತೆಗಳನ್ನು ಪೂರೈಸಿಕೊಳ್ಳಲು ಅನುಕೂಲವಾಗುತ್ತಿತ್ತು. ಸಂಘದ ಆಶ್ರಯದಲ್ಲಿ ಒಂದೆರಡು ವರ್ಷ ವಿದ್ಯಾರ್ಥಿ ಸಾಹಿತ್ಯಗೋಷ್ಠಿಯನ್ನು ಏರ್ಪಡಿಸುವಲ್ಲಿ ನಾನು ಪಾಲ್ಗೊಂಡಿದ್ದೆ.

ಮ್ಯಾಟ್ರಿಕ್ ಪರೀಕ್ಷೆಯಲ್ಲಿ ಪ್ರಥಮ ತರಗತಿಯಲ್ಲಿ ತೇರ್ಗಡೆಯಾದ್ದರಿಂದ ಸರ್ಕಾರಿ ಶಿಷ್ಯವೇತನ ಕಾಲೇಜಿನಲ್ಲಿಯೂ ಮುಂದುವರಿಯಿತು. ಇದರಿಂದ ಮನೆಯಿಂದ ಹಣ ತರಿಸಿಕೊಳ್ಳುವ ಪ್ರಮೇಯ ಯಾವಾಗಲೂ ಒದಗಲಿಲ್ಲ. ಕರ್ನಾಟಕ ಕಾಲೇಜಿನಲ್ಲಿ ಕರ್ನಾಟಕ ಸಂಘದ ಚಟುವಟಿಕೆಗಳು ಪ್ರೋತ್ಸಾಹದಾಯಕವಾಗಿದ್ದವು. ಮೊದಲ ವರ್ಷವೇ ಕಾವ್ಯ ಸ್ಪರ್ಧೆಯಲ್ಲಿ ಭಾಗವಹಿಸಿ ಪ್ರಥಮ ಬಹುಮಾನ ಪಡೆದಿದ್ದೆ. ಮರುವರ್ಷ 'ಕರ್ನಾಟಕ ಏಕೀಕರಣ'ವನ್ನು ಕುರಿತು ದಿವಾಕರರ ಉಪನ್ಯಾಸವನ್ನು ಕರ್ನಾಟಕ ಸಂಘ ಏರ್ಪಡಿಸಿತು. ಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದ ಡಿ.ವಿ. ಗುಂಡಪ್ಪನವರು ನನ್ನ ಬೆನ್ನು ತಟ್ಟಿ, 'ಎಲ್ಲಿ, ಕವಿತೆಗಳನ್ನು ನೋಡಬೇಕಲ್ಲ' ಎಂದರು. ಈ ಕಾರ್ಯಕ್ರಮದ ವಿವರಗಳು ನನಗೆ ಮುಂಚಿತವಾಗಿ ತಿಳಿದಿರಲಿಲ್ಲ. ಆಮೇಲೆ ಪ್ರೊ. ಎಸ್.ಆರ್. ಮಳಗಿಯವರು ಕವಿತೆಗಳನ್ನು ಗುಂಡಪ್ಪನವರಿಗೆ ಕೊಟ್ಟ ಹಾಗೆ ನೆನಪು.

ಧಾರವಾಡದ ನಿಸರ್ಗ ಸೌಂದರ್ಯ ನನ್ನ ಕಾವ್ಯ ರಚನೆಗೆ ಚೇತೋಹಾರಿಯಾಗಿ ಪರಿಣಮಿಸಿತು. ಮಾಸ್ತಿಯವರ 'ಜೀವನ', ಬೆಟಗೇರಿ ಕೃಷ್ಣಶರ್ಮರ 'ಜಯಂತಿ' ಹಾಗೂ ಬಸವನಾಳರ 'ಜಯಕರ್ನಾಟಕ' ಪತ್ರಿಕೆಗಳಲ್ಲಿ ನನ್ನ ಕವಿತೆಗಳು ಪ್ರಕಟವಾಗತೊಡಗಿದಂತೆ ನನ್ನಲ್ಲಿ ಹೆಚ್ಚಿನ ಆತ್ಮವಿಶ್ವಾಸ ಉಂಟಾಯಿತು. ಬೆಟಗೇರಿಯವರ ಜಯಂತಿ ಆಫೀಸಿಗೆ ಹೋದಾಗೆಲ್ಲ ಮತ್ತೇನು ಬರೆದಿರಿ ಎಂದು ಕೇಳಿ ಕಾವ್ಯದ ಬಗ್ಗೆ ಉಪಯುಕ್ತ ಸಲಹೆ ನೀಡುತ್ತಿದ್ದರು. ನಮ್ಮ ಪ್ರಾಚೀನ ಕಾವ್ಯಗಳ ಬಗೆಗಂತೂ ಅವರು ವಿಶೇಷ ಪಾಂಡಿತ್ಯ ಗಳಿಸಿದವರಾಗಿದ್ದರು.

ಕಾಲೇಜಿನಲ್ಲಿ ಪ್ರೊ. ಮಾಳವಾಡರು ಭಾವೋದ್ವೇಗಕ್ಕೆ ಒಳಗಾಗದ ವಿಮರ್ಶಾ ವಿವೇಕವನ್ನು ನನ್ನಲ್ಲಿ ಪರ್ಯಾಯವಾಗಿ ಮೂಡಿಸಿದರು. ಶ್ರೇಷ್ಠ ಇಂಗ್ಲಿಷ್ ಅಧ್ಯಾಪಕರಾಗಿದ್ದ ಪ್ರೊ. ಅರ್ಮಾಂಡೊ ಮೆನೆಜಿಸ್ ಗಣ್ಯ ಕವಿಯೂ ಆಗಿದ್ದುದರಿಂದ ಅವರೊಡನೆ ಆತ್ಮೀಯತೆ ಬೆಳೆಯಿತು. ಮುಂದೆ ನನ್ನ ಕೆಲವು ಕವಿತೆಗಳನ್ನು ಅವರು ಇಂಗ್ಲಿಷಿಗೆ ಅನುವಾದಿಸಿದ್ದುಂಟು. ಭಾರತಕ್ಕೆ ಸ್ವಾತಂತ್ರ್ಯ ದೊರೆತ ವರ್ಷ ನಾನು ಇಂಟರ್ ಮೀಡಿಯೇಟ್‌ನಲ್ಲಿದ್ದೆ. ಮರುವರ್ಷ ಸ್ವಾತಂತ್ರ್ಯೋತ್ಸವವನ್ನು ಆಚರಿಸಲು ಕಾಲೇಜಿನ ಮೈದಾನದಲ್ಲಿ ಬೃಹತ್ ಸಭೆಯನ್ನು ಏರ್ಪಡಿಸಲಾಗಿತ್ತು. ನಾನು 'ಬಂಧದಿಂ ಬಿಡುಗಡೆಗೆ' ಎಂಬ ಕವಿತೆಯನ್ನೋದಿದೆ. ದೊಡ್ಡ ಸಭೆಯೊಂದರಲ್ಲಿ ನಾನು ಕಾವ್ಯ ವಾಚನ ಮಾಡಿದ್ದು ಅದೇ ಮೊದಲ ಸಲ. ಅದಕ್ಕೆ ದೊರೆತ ಪ್ರತಿಕ್ರಿಯೆಯೂ ಅಷ್ಟೇ ಉತ್ಸಾಹಪೂರ್ಣವಾಗಿತ್ತು.

ಆಗಲೇ ಸ್ನೇಹಿತರ ಬಳಗವೊಂದು ರೂಪುಗೊಂಡಿತ್ತು. ಒಬ್ಬಿಬ್ಬರನ್ನು ಬಿಟ್ಟರೆ ಎಲ್ಲರೂ ಒಂದೇ ಕಾಲೇಜಿನಲ್ಲಿದ್ದವರೇ. ಅಭ್ಯಾಸದ ವಿಷಯ ಬೇರೆ ಬೇರೆಯಾಗಿರುತ್ತಿದ್ದವು ಅಷ್ಟೆ. ಚಿದಂಬರ ದೀಕ್ಷಿತ, ಕೀರ್ತಿನಾಥ ಕುರ್ತಕೋಟಿ, ಶಂಕರ ಮೊಕಾಶಿ, ವಸಂತ ಕವಲಿ, ಜಿ.ಎಚ್. ಕಣೇಕಲ್, ಶಿವೇಶ್ವರ ದೊಡ್ಡಮನಿ ಮೊದಲಾದವರು ಅವರಲ್ಲಿ ಪ್ರಮುಖರು. ಮಾಳಮಡ್ಡಿಯಲ್ಲಿ ನಾನು ವಾಸಿಸುತ್ತಿದ್ದ ಕೋಣೆ ಸ್ವಲ್ಪ ದೊಡ್ಡದಿದ್ದುದರಿಂದ ಎಲ್ಲರೂ ವಾರಕ್ಕೊಮ್ಮೆ ಅಲ್ಲಿಯೇ ಕೂಡುತ್ತಿದ್ದೆವು. ತಂತಮ್ಮ ಕವಿತೆಗಳ ವಾಚನವೆ ಮುಖ್ಯ ಕಾರ್ಯಕ್ರಮ, ನಂತರ ವಿಮರ್ಶೆ, ಹರಟೆ, ಚಹಾಪಾನ. ನಮ್ಮ ಕೂಟಕ್ಕೆ 'ಕಾವ್ಯಾನುಭವ ಮಂಟಪ' ಎಂದು ಹೆಸರಿಡಲಾಯಿತು. (ವಿದ್ಯಾವರ್ಧಕ ಸಂಘದ ಅಟ್ಟದ ಮೇಲೆ ಆಗ ಹಿರಿಯ ಸಾಹಿತಿಗಳು 'ಸಾಹಿತ್ಯ ಮಂಟಪ' ನಡೆಸುತ್ತಿದ್ದರು). ಮುಂದೆ ಕೆಲ ದಿನಗಳಲ್ಲಿ ಯಾವುದೊ ಕಾರ್ಯದ ನಿಮಿತ್ತ ಸೊಲ್ಲಾಪುರದಿಂದ ಬೇಂದ್ರೆಯವರೂ, ಕೊಲ್ಹಾಪುರದಿಂದ ಗೋಕಾಕರೂ ಧಾರವಾಡಕ್ಕೆ ಬಂದಾಗ ಅವರನ್ನು ನಮ್ಮ ಮಂಟಪಕ್ಕೆ ಬರಮಾಡಿಕೊಂಡು ಒಂದು ಕಾವ್ಯ ಹಾಗೂ ವಿಮರ್ಶೆಯ ಕಾರ್ಯಕ್ರಮ ನಡೆಸಿದೆವು. ತುಂಬ ಸಂತೋಷಭರಿತರಾಗಿ ಅವರು ತಮ್ಮ 'ಗೆಳೆಯರ ಗುಂಪ'ನ್ನು ನೆನಪಿಸಿಕೊಂಡದ್ದಲ್ಲದೆ ಬಹಳ ಹೊತ್ತು ನಮ್ಮೆಲ್ಲರ ಜೊತೆ ಕಾವ್ಯ ಕಲಾಪದಲ್ಲಿ ಕಳೆದರು.

ನಾನು ಜ್ಯೂ. ಬಿ.ಎ.ದಲ್ಲಿದ್ದಾಗ ನನ್ನ ಪ್ರಥಮ ಕವನ ಸಂಕಲನ 'ಕಾವ್ಯಾಕ್ಷಿ' ಬೇಂದ್ರೆಯವರ ಮುನ್ನುಡಿಯೊಂದಿಗೆ ಪ್ರಕಟವಾಯಿತು (೧೯೪೯). ಅವರ ಮುನ್ನುಡಿ ನನಗೆ ಉತ್ತೇಜನಕರವಾಗಿ

ಪರಿಣಮಿಸಿತು. 'ಭಾವಜೀವಿ' ಖಂಡಕಾವ್ಯಕ್ಕೆ ಗೋಕಾಕರು ದೀರ್ಘ ಮುನ್ನುಡಿ ಬರೆದರು (೧೯೫೦). ವಿದ್ಯಾರ್ಥಿದೆಸೆಯಲ್ಲಿ ಪ್ರಕಟವಾದ ಇವೆರಡೂ ಸಂಗ್ರಹಗಳು ನನಗೆ ಅನೇಕ ಜನ ಸಹೃದಯರನ್ನೂ ಸ್ನೇಹಿತರನ್ನೂ ಒದಗಿಸಿದವು. ಈ ಕೃತಿಗಳನ್ನು ತಮ್ಮ ಕಲ್ಪನಾ ಗ್ರಂಥಮಾಲೆ ಹಾಗೂ ಪ್ರಗತಿಶೀಲ ಸಾಹಿತ್ಯಮಾಲೆಯಲ್ಲಿ ಪ್ರಕಟಿಸಿ ಪ್ರೋತ್ಸಾಹಿಸಿದ ಹಿರೇಮಲ್ಲೂರು ಈಶ್ವರನ್ ಹಾಗೂ ಬಸವರಾಜ ಕಟ್ಟೀಮನಿಯವರ ಜೊತೆಗೆ ನನ್ನ ಸ್ನೇಹ ಬೆಳೆಯುತ್ತ ಆತ್ಮೀಯವಾಗುತ್ತಲೇ ಬಂದಿತು. ಸಾಹಿತ್ಯಿಕ ಬೆಳವಣಿಗೆ ಪರಸ್ಪರ ವಯಸ್ಸಿನ ಅಂತರವನ್ನು ಸಂಪೂರ್ಣ ಹೋಗಲಾಡಿಸಿತು.

ನವಲೂರಿನ ಶಿವೇಶ್ವರ ದೊಡ್ಡಮನಿ ಕಾಲೇಜಿನ ಹೊರಗೆ ಪರಿಚಯವಾದವರಲ್ಲಿ ಮುಖ್ಯರು. ಆರ್ಥಿಕ ಅನನುಕೂಲತೆಯಿಂದ ಕಾಲೇಜಿಗೆ ಹೋಗದೆ ಬ್ಯಾಂಕಿನಲ್ಲಿ ಟೈಪಿಸ್ಟ್ ಆಗಿದ್ದರು. ಜನಪದ ಕಾವ್ಯಸಂಗ್ರಹದ ಗೀಳು ಅವರಿಗೆ ಎಷ್ಟರಮಟ್ಟಿಗೆ ಹಿಡಿದಿತ್ತೆಂದರೆ ಒಮ್ಮೊಮ್ಮೆ ಹತ್ತಿರ ಕಾಗದವಿಲ್ಲದಾಗ ಸಿಗರೇಟ್ ಪ್ಯಾಕಿನ ರಟ್ಟಿನಲ್ಲಿ ಪದ್ಯ ಬರೆದಿಟ್ಟುಕೊಳ್ಳುತ್ತಿದ್ದರು. ಧಾರವಾಡದಿಂದ ಮೂರು ಮೈಲಿನ ಮೇಲಿನ ನವಲೂರಿನಲ್ಲಿ ಅವರ ಮನೆಯಿದ್ದರೂ ಹೆಚ್ಚು ವೇಳೆಯನ್ನು ಅವರು ನನ್ನ ರೂಮಿನಲ್ಲಿಯೇ ಕಳೆಯುತ್ತಿದ್ದರು. ನಾವಿಬ್ಬರೂ ನಮ್ಮ ನೆಚ್ಚಿನ ಕವಿಗಳ ಕವಿತೆಗಳನ್ನು ರಾಗವಾಗಿ ಓದುತ್ತ, ಚರ್ಚಿಸುತ್ತ ಎಷ್ಟೋ ರಾತ್ರಿಗಳನ್ನು ಕಳೆದದ್ದುಂಟು. ಅವರಿಗೆ ಮನೆಯಲ್ಲಿ ಹೆಂಡತಿ, ಮಕ್ಕಳಿದ್ದರು. ಆದರೂ ನೆನಪಾದೊಡನೆ ಬುತ್ತಿ ಕಟ್ಟಿಕೊಂಡು ನಮ್ಮ ರೂಮಿಗೆ ಬಂದುಬಿಡುತ್ತಿದ್ದರು. ಒಂದೇ ವಿಷಯವನ್ನಿಟ್ಟುಕೊಂಡು ನಾವಿಬ್ಬರೂ ಸಾನೆಟ್ ಬರೆಯುತ್ತಿದ್ದೆವು. ಅವರು ಸಂಗ್ರಹಿಸಿದ ಕೆಲವು ಜನಪದ ಗೀತಗಳು ನಾಡಿನ ಹಲವಾರು ಪತ್ರಿಕೆಗಳಲ್ಲಿ ಪ್ರಕಟಗೊಳ್ಳುತ್ತಿದ್ದವು. ಜೀವನ ಪತ್ರಿಕೆಯಲ್ಲಿ 'ಜನಪದ ಸಾಹಿತ್ಯದಲ್ಲಿ ಜೀವನ ಸೌಂದರ್ಯ' ಎಂಬ ಲೇಖನ ಮಾಲೆಯಲ್ಲಿ ಅವರ ಏಳೆಂಟು ಲೇಖನಗಳು ಬಂದವು. ಅತಿಯಾದ ಸಿಗರೇಟು ಸೇವನೆಯಿಂದ ಅವರ ಆರೋಗ್ಯ ಕ್ಷೀಣಿಸತೊಡಗಿತು. ಕಣ್ಣಿನ ದೃಷ್ಟಿ ಮಂದವಾಯಿತು. ಹುಬ್ಬಳ್ಳಿಯಲ್ಲಿ ಕುಳಕುಂದರ (ನಿರಂಜನ) ಜೊತೆಗೆ 'ಜನಶಕ್ತಿ'ವಾರಪತ್ರಿಕೆಯಲ್ಲಿ ಆರೋಗ್ಯದ ಪರಿವೆಯಿಲ್ಲದೆ ಹಗಲಿರುಳು ದುಡಿದರು. ಆ ಕೆಲಸ ಅವರಿಗೆ ಸಂತೋಷದಾಯಕವಾಗಿದ್ದರೂ ದೈಹಿಕ ತೊಂದರೆ ಕಡಿಮೆಯಾಗಲಿಲ್ಲ. ಕೊನೆಗೆ ವಿಷಮಜ್ವರಕ್ಕೆ ತುತ್ತಾದರು (೧೯೫೦). ಅವರ ಅಗಲಿಕೆ ನನ್ನ ಜೀವನದಲ್ಲಿಯೆ ಒಂದು ದೊಡ್ಡ ಆಘಾತ. ಅಂದಿನಿಂದಲೇ 'ಸಾವು' ನನ್ನ ಕಾವ್ಯ ಜಿಜ್ಞಾಸೆಯಲ್ಲಿ ಒಂದು ಮುಖ್ಯ ಎಳೆಯಾಗಿ ಸೇರಿಕೊಂಡಿತೊ ಏನೊ. ಅವರನ್ನು ಕುರಿತು ಬರೆದ 'ಚರಮಗೀತೆ'ಯಲ್ಲಿಯೇ ಅದು ಕಾಣಿಸಿಕೊಂಡಿತು.

ಬಿ.ಎ. ಪರೀಕ್ಷೆಯಲ್ಲಿ (೧೯೫೦) ವಿಶ್ವವಿದ್ಯಾಲಯಕ್ಕೆ ಕನ್ನಡದಲ್ಲಿ ಪ್ರಥಮ ರ್‍ಯಾಂಕ್ ನನ್ನದಾಯಿತು. ನನ್ನ ಪಾಲಿಗೆ ೧೯೫೨ ಮೂರು ಮಹತ್ವದ ಘಟನೆಗಳನ್ನೊಳಗೊಂಡ ವರ್ಷ. ಎಂ.ಎ. ಮುಗಿಸಿದೆ, ಮದುವೆಯಾಯಿತು, ವಿಶ್ವವಿದ್ಯಾಲಯದಲ್ಲಿ ವ್ಯಾಸಂಗ ವಿಸ್ತರಣ ಹಾಗೂ ಪ್ರಕಟನ ವಿಭಾಗದ ಕಾರ್ಯದರ್ಶಿ ಕೆಲಸಕ್ಕೆ ಆಯ್ಕೆಯಾದೆ. ಎರಡು ವರ್ಷಗಳ ಹಿಂದೆ ಪ್ರೊ. ಮಾಳವಾಡ ದಂಪತಿಗಳ ಮುಖಾಂತರ ವಿಜಾಪುರದಲ್ಲಿ ಮಾಮಲೆದಾರರಾಗಿದ್ದ

ಎಸ್.ವಿ. ಗಿಡ್ನವರ ಅವರ ಪರಿಚಯವಾಗಿತ್ತು. ಗದಗದಲ್ಲಿ ಶಾಲಾಮುಖ್ಯಾಧ್ಯಾಪಕರಾಗಿದ್ದ ನನ್ನ ಭಾವ ಗೋಗೇರಿಯವರಿಗೆ ಬಡತಿಯಾಗಿ ಅವರೂ ವಿಜಾಪುರದಲ್ಲಿ ಕೆಲಸಕ್ಕಿದ್ದರು. ಒಂದು ತಿಂಗಳ ರಜೆಯನ್ನು ಅಲ್ಲಿ ಕಳೆಯುವಾಗ ಗಿಡ್ನವರ ಮನೆಯ ಸ್ವಂತ ಗ್ರಂಥಭಂಡಾರ ನನ್ನನ್ನು ಆಕರ್ಷಿಸಿತು. ಅವರು ರೆವಿನ್ಯೂ ಇಲಾಖೆಯಲ್ಲಿ ಕೆಲಸ ಮಾಡುತ್ತಿದ್ದರೂ ಸಾಹಿತ್ಯ ಮತ್ತು ತತ್ತ್ವ ಜ್ಞಾನದಲ್ಲಿ ಅವರಿಗೆ ವಿಶೇಷ ಆಸಕ್ತಿ ಇದ್ದಿತು. ಅನೇಕ ಇಂಗ್ಲಿಷ್ ಹಾಗೂ ಕನ್ನಡ ಪತ್ರಿಕೆಗಳನ್ನೂ ತರಿಸುತ್ತಿದ್ದರು. ಬೇಂದ್ರೆ, ಮುಗಳಿ, ಸಿಂಪಿ ಲಿಂಗಣ್ಣ, ಮಧುರಚೆನ್ನ ಮೊದಲಾದವರು ಅವರ ನಿಕಟ ಸ್ನೇಹಿತರಾಗಿದ್ದರು ಅವರ ಮನೆಯ ಸುಸಂಸ್ಕೃತ ವಾತಾವರಣ ನನಗೆ ತುಂಬ ಹಿಡಿಸಿತು. ಅವರ ಕುಟುಂಬದ ಸದಸ್ಯರೆಲ್ಲರಿಗೆ ನಾನು ಬಹುಬೇಗ ಆತ್ಮೀಯನಾದೆ. ಅವರ ಮೂರನೆಯ ಮಗಳು ಶಾಂತಾ 'ಪುಸ್ತಕದ ಹುಳು' ಎನಿಸಿಕೊಂಡಿದ್ದಳು. ನನಗೆ ಬೇಕಾದ ಪುಸ್ತಕಗಳನ್ನು ಹುಡುಕಿಕೊಡುವ ಕೆಲಸ ಸಹಜವಾಗಿಯೇ ಅವಳ ಪಾಲಿಗೆ ಬಂದಿತ್ತು. ಆಗಾಗ ಕಾವ್ಯವಾಚನ, ಕಾವ್ಯಗಾಯನ ಕಾರ್ಯಕ್ರಮ ನಡೆದಾಗ ಶಾಂತಾ ಭಾವಗೀತಗಳನ್ನೂ ಜನಪದ ಗೀತಗಳನ್ನೂ ಹಾಡುತ್ತಿದ್ದಳು. ನನ್ನ 'ಕಾವ್ಯಾಕ್ಷಿ'ಯಲ್ಲಿಯ ಒಂದೆರಡು ಭಾವಗೀತಗಳಿಗೆ ಆಕೆ ಹಚ್ಚಿದ ಧಾಟಿ ನನಗೆ ತುಂಬ ಹಿಡಿಸಿತು. ರಜೆ ಮುಗಿಸಿ ನಾನು ಧಾರವಾಡಕ್ಕೆ ಹೊರಡುವ ಹಿಂದಿನ ದಿನ ಸಂಜೆ ಅವರ ಮನೆಯಲ್ಲಿ ಮಾತಾಡುತ್ತ ಕುಳಿತಾಗ ಶ್ರೀಮತಿ ಗಿಡ್ನವರ (ಭಾಗೀರಥಿ ದೇವಿ) ತಮ್ಮ ಮಾತಿನ ನಡುವೆ ಶಾಂತಾಳನ್ನು ಉದ್ದೇಶಿಸಿ, 'ಹುಡುಗಿ ಮನಸ್ಸಿಗೆ ಬಂದಳೆ?' ಎಂದು ನನ್ನನ್ನು ಕೇಳಿಬಿಟ್ಟರು. ನಾನು ಒಂದು ಕ್ಷಣ ತಬ್ಬಿಬ್ಬಾದೆ. ನನ್ನ ಮನಸ್ಸಿನಲ್ಲಿದ್ದದ್ದನ್ನು ಇವರು ಹೇಗೆ ಕಂಡು ಹಿಡಿದರು ಎಂದು ಅಚ್ಚರಿಯಾಯಿತು. ಶಾಂತಾಳನ್ನು ಮದುವೆಯಾಗಲು ನಾನು ಸಂತೋಷದಿಂದ ಒಪ್ಪಿಕೊಂಡೆ. ನನ್ನ ಎಂ.ಎ. ಮುಗಿಯುವವರೆಗೆ, ಅಂದರೆ ಎರಡು ವರ್ಷ ನಾವು ಕಾಯಬೇಕಾಯಿತು. ಈ ದೀರ್ಘಾವಧಿಯನ್ನು ನಾವಿಬ್ಬರೂ ಪತ್ರವ್ಯವಹಾರದಿಂದ ತುಂಬಿಕೊಂಡೆವು.

ಮರುವರ್ಷ ಮೇ ತಿಂಗಳ ರಜೆಯಲ್ಲಿ ನಾನು ವಿಜಾಪುರಕ್ಕೆ ಹೋದಾಗ ಒಂದು ದಿನ ಮಧುರಚೆನ್ನರು ಗಿಡ್ನವರ ಮನೆಗೆ ಬಂದರು. ಅವರನ್ನು ಕಾಣುವ ನನ್ನ ಬಹುದಿನಗಳ ಆಕಾಂಕ್ಷೆ ಈಡೇರಿದಂತಾಯಿತು. ನನ್ನ 'ಭಾವಜೀವಿ' ಕಾವ್ಯವನ್ನು ಅವರಿಗೆ ಅರ್ಪಿಸಿದ್ದರೂ ಅವರನ್ನು ಈ ಮೊದಲು ಪ್ರತ್ಯಕ್ಷ ಕಂಡಿರಲಿಲ್ಲ. ಈ ಶ್ರೇಷ್ಠ ಸಾಧಕ-ಕವಿಯ ವಿನಯ, ಸರಳತೆ, ಸೌಜನ್ಯಗಳು ನನ್ನನ್ನು ಬೆರಗುಗೊಳಿಸಿದವು. ಗಿಡ್ನವರ ಮನೆತನದೊಡನೆ ನನ್ನ ಸಂಬಂಧ ಬೆಳೆದದ್ದು ಅವರಿಗೆ ಹೆಚ್ಚಿನ ಸಂತೋಷವನ್ನುಂಟುಮಾಡಿತ್ತು. ಅವರನ್ನು ಕಂಡದ್ದು ಅದೇ ಮೊದಲು, ಅದೇ ಕೊನೆಯಾಯಿತು. ಮುಂದೆ ಎರಡು ವರ್ಷಗಳಲ್ಲಿ ಮಧುರಚೆನ್ನರು ಗಂಟಲು ಕ್ಯಾನ್ಸರ್‌ನಿಂದ ತೀರಿಕೊಂಡರು (೧೯೫೩).

ವಿಶ್ವವಿದ್ಯಾಲಯದ ಹಾಗೂ ಸಾಮಾನ್ಯ ಜನತೆಯ ನಡುವೆ ಸಂಪರ್ಕ ಹೆಚ್ಚಿಸುವ ಜ್ಞಾನ ಪ್ರಸಾರದ ಕಾರ್ಯದಲ್ಲಿ ನಾನು ಉತ್ಸಾಹದಿಂದಲೇ ತೊಡಗಿದೆ. ಗ್ರಾಮಾಂತರ ಪ್ರದೇಶದಲ್ಲಿ ಏರ್ಪಡಿಸುತ್ತಿದ್ದ ಉಪನ್ಯಾಸ ಶಿಬಿರಗಳು ಜನಪ್ರಿಯವಾಗತೊಡಗಿದವು. ಕನ್ನಡದಲ್ಲಿ

ಮಾತಾಡಲು, ಬರೆಯಲು ಹಿಂಜರಿಯುತ್ತಿದ್ದ ಎಷ್ಟೋ ಜನ ಅಧ್ಯಾಪಕರು ಮೈಚಳಿಬಿಟ್ಟು ಈ ಯೋಜನೆಯಲ್ಲಿ ಪಾಲ್ಗೊಳ್ಳುವಂತೆ ಮಾಡಿದ ಸಮಾಧಾನ ನನ್ನದಾಯಿತು. ಒಬ್ಬಂಟಿಯಾಗಿದ್ದ ಪ್ರಕಟನ ವಿಬಾಗ ಹೆಚ್ಚಿನ ಸಿಬ್ಬಂದಿಯೊಂದಿಗೆ ವಿಸ್ತಾರಗೊಂಡು ನಾನು ನಿರ್ದೇಶಕನಾಗಿ ನೇಮಕಗೊಂಡೆ (೧೯೫೬). ವಿವಿಧ ಬಗೆಯ ಗ್ರಂಥ ಪ್ರಕಟನೆ, ಸಂಶೋಧನ ಪತ್ರಿಕೆಗಳು, ವಿಶೇಷೋಪನ್ಯಾಸಗಳು ಹೀಗೆ ಎಡೆಬಿಡದೆ ಪ್ರಸಾರಂಗದ ಚಟುವಟಿಕೆಗಳಲ್ಲಿ ನನ್ನನ್ನು ತೊಡಗಿಸಿಕೊಂಡೆ. ಇದರ ಪರಿಣಾಮ ನನ್ನ ದೇಹದ ಮೇಲೂ ಆಯಿತು. ತೀವ್ರವಾದ ಗ್ಯಾಸ್ಟ್ರಿಕ್ ತೊಂದರೆಯಿಂದ ನಾಲ್ಕೈದು ವರ್ಷ ಬಳಲಬೇಕಾಯಿತು (ಈಗಲೂ ಆಗೀಗ ಅದು ತನ್ನ ಕೈವಾಡ ತೋರಿಸುವುದುಂಟು). ನನ್ನ ಕೆಲಸ ನನಗೆ ಸಂತೋಷ ನೀಡುತ್ತಿದ್ದುದರಿಂದ ಉಳಿದ ತೊಂದರೆಗಳಿಗೆ ನಾನು ಅಷ್ಟೊಂದು ಗಮನ ಕೊಡುತ್ತಿರಲಿಲ್ಲ.

ಓದಲು, ಬರೆಯಲು ವೇಳೆಯ ಅಭಾವವಿರುತ್ತಿದ್ದುದೇನೋ ನಿಜ; ಆದರೂ ಕಾವ್ಯ ರಚನೆ ಅಬಾಧಿತವಾಗಿ ಮುಂದುವರಿದಿತ್ತು. ಕಾಲಕಾಲಕ್ಕೆ ಬಂದ ಕುಲಪತಿಗಳು, ಕುಲಸಚಿವರು ನನ್ನ ಕೆಲಸವನ್ನು ಮೆಚ್ಚಿಕೊಂಡಂತೆಯೆ ನನ್ನ ಕಾವ್ಯದ ಬಗ್ಗೆಯೂ ಆದರ, ಗೌರವವುಳ್ಳವರಾಗಿದ್ದರು. ಇಂದು ಜನಪ್ರಿಯವಾಗಿರುವ 'ವಿಶ್ವಭಾರತಿಗೆ ಕನ್ನಡದಾರತಿ' ಕವಿತೆಯನ್ನು ನಾನು ಬರೆದದ್ದು ಅಂದಿನ ಕುಲಪತಿ ಡಾ. ಡಿ.ಸಿ. ಪಾವಟೆಯವರ ಪ್ರೇರಣೆಯಿಂದ. ವಿಶ್ವವಿದ್ಯಾಲಯದ ಗೀತವಾಗಿ ಅದು ಅಂಗೀಕೃತಗೊಂಡು ಎಲ್ಲರ ಮೆಚ್ಚುಗೆ ಗಳಿಸಿತು. ಕರ್ನಾಟಕ ವಿಶ್ವವಿದ್ಯಾಲಯದ ಗೌರವ ಡಾಕ್ಟರೇಟ್ ಪದವಿಪ್ರಧಾನ ಸಮಾರಂಭದಲ್ಲಿ (೧೯೬೬) ಕುವೆಂಪು ಅವರು ಆ ಗೀತವನ್ನು ಕೇಳಿ ತಾವು ರೋಮಾಂಚನಗೊಂಡುದನ್ನು ನನಗೆ ತಿಳಿಸಿದಾಗ ನನ್ನ ಆನಂದಕ್ಕೆ ಎಣೆಯಿರಲಿಲ್ಲ.

ಈ ಮಧ್ಯೆ ೧೯೫೪-೫೫ರ ಅವಧಿಯಲ್ಲಿ ಸಂಭವಿಸಿದ ಮೂರು ಸಾವುಗಳು ನನ್ನನ್ನು ಕೆಲಮಟ್ಟಿಗೆ ಅಧೀರನನ್ನಾಗಿಸಿದವು. ಮುಪ್ಪಿನ ತಂದೆಯುವರದು ಒಂದು ರೀತಿ ಇಚ್ಛಾಮರಣದಂತಿದ್ದರೆ ಒಬ್ಬ ಅಣ್ಣ ಹಾಗೂ ಅಕ್ಕನ ಅಂತ್ಯ ತೀವ್ರ ಅನಾರೋಗ್ಯದಿಂದ ವೇದನಾಪೂರ್ಣವಾಗಿದ್ದವು. ಅವರೆಲ್ಲರ ಪ್ರೀತಿಯ ಋಣದಿಂದ ಹೃದಯ ಭಾರವಾಗಿ, ಅದರಿಂದ ಚೇತರಿಸಿಕೊಳ್ಳಲು ಕೆಲ ದಿನಗಳೇ ಬೇಕಾದವು.

ಕಾವ್ಯದ ಮೂಲಕ ನನಗೆ ಹಾರ್ದಿಕವಾಗಿ ಹತ್ತಿರವಾಗುತ್ತ ಬಂದವರು ಜಿ.ಎಸ್. ಶಿವರುದ್ರಪ್ಪ ಹಾಗೂ ಗೋಪಾಲಕೃಷ್ಣ ಅಡಿಗರು. ಪತ್ರವ್ಯವಹಾರದಿಂದ ಚಿಗುರಿದ ಪರಸ್ಪರ ಸ್ನೇಹ ಪ್ರತ್ಯಕ್ಷ ಭೆಟ್ಟಿಯಿಂದ ದಾಂಗುಡಿಯಿಟ್ಟು ಬೆಳೆಯಿತು. ೧೯೫೦ರಲ್ಲಿ ದಾವಣಗೆರೆಯಿಂದ ಶಿವರುದ್ರಪ್ಪನವರೂ ೧೯೫೨ರಲ್ಲಿ ಕುಮಟೆಯಿಂದ ಅಡಿಗರೂ ಧಾರವಾಡಕ್ಕೆ ಬಂದುಹೋದರು. ಆಗ ಹೊಸ ರೀತಿಯಲ್ಲಿ ಬರೆಯಲು ಪ್ರಾರಂಭಿಸಿದ್ದ ಆರೇಳು ಜನ ಕವಿಗಳ ಕವಿತೆಗಳ ಸಂಕಲನವೊಂದನ್ನು ಪ್ರಕಟಿಸುವ ಇಚ್ಛೆಯನ್ನು ಅಡಿಗರು ನನ್ನೊಂದಿಗೆ ಪ್ರಸ್ತಾಪಿಸಿದ್ದರು. ಆದರೆ ಅದು ಕೈಗೂಡಲಿಲ್ಲ. ಮುಂದೆ 'ನವ್ಯಧ್ವನಿ' ಸಂಕಲನದ ಮೂಲಕ (೧೯೫೭) ಗೋಕಾಕರೂ ನಾನೂ ಆ ಕೆಲಸವನ್ನು ತಕ್ಕಮಟ್ಟಿಗೆ ಪೂರೈಸಿದ್ದೆವು. ಅಡಿಗರ 'ಭೂಮಿಗೀತ' ಮೊದಲು ಪ್ರಕಟಗೊಂಡದ್ದು 'ನವ್ಯ ಧ್ವನಿ'ಯಲ್ಲಿಯೇ.

೧೯೫೫ರಲ್ಲಿ ಮೈಸೂರು ವಿ.ವಿ. ಆಶ್ರಯದಲ್ಲಿ ಕಾರಂತರ ಅಧ್ಯಕ್ಷತೆಯಲ್ಲಿ ನೆರವೇರಿದ ಸಮ್ಮೇಳನಕ್ಕೆ ಆಹ್ವಾನಿತನಾಗಿ ನಾನು ಕವಿಗೋಷ್ಠಿ ಹಾಗೂ ವಿಮರ್ಶಾ ಗೋಷ್ಠಿಗಳಲ್ಲಿ ಭಾಗವಹಿಸಿದ್ದು ಒಂದು ವಿಶೇಷ ಅನುಭವ (ಸಮ್ಮೇಳನದ ವೇದಿಕೆಗೆ ವಿಶೇಷ ಮನ್ನಣೆಯಿರುತ್ತಿದ್ದ ಕಾಲವದು). ಗೆಳೆಯ ಕಟ್ಟೀಮನಿಯವರ ಜೊತೆಗೆ 'ಉದಯರವಿ'ಯಲ್ಲಿ ಪ್ರಥಮ ಬಾರಿಗೆ ಕುವೆಂಪು ಅವರನ್ನು ಕಂಡೆ. ಬದುಕು ಬರಹ ಎರಡನ್ನೂ ದೊಡ್ಡದಾಗಿ ಬೆಳೆಸಿದ ಗೌರವಪೂರ್ಣವಾದ ಮಹಾಚೇತನವಾಗಿಯೇ ಅವರು ನನ್ನ ಮನಸ್ಸನ್ನು ತುಂಬಿಕೊಂಡರು. ವಿ.ಸೀ., ಪರಮೇಶ್ವರ ಭಟ್ಟ, ಚದುರಂಗ ಮೊದಲಾದವರನ್ನು ಹತ್ತಿರದಿಂದ ಕಾಣುವ ಸುಯೋಗವು ಆಗ ಒದಗಿತ್ತು. ಬರುವಾಗ ಬೆಂಗಳೂರಿನಲ್ಲಿ ಡಿ.ವಿ.ಜಿ. ಅವರನ್ನು ನಾಗಸಂದ್ರದ ಅವರ ಮನೆಯಲ್ಲಿ, ಕೆ.ಎಸ್. ನರಸಿಂಹಸ್ವಾಮಿಯವರನ್ನು ಅವರು ಕೆಲಸ ಮಾಡುತ್ತಿದ್ದ ಕಛೇರಿಯಲ್ಲಿಯೂ ಕಂಡುಬಂದೆವು. ಡಿ.ವಿ.ಜಿ. ಮನೆಯಲ್ಲಿ ತಂಪಾದ ಪಾನಕ, ಕೆ.ಎಸ್.ನ. ಜೊತೆ ಹೋಟೇಲಿನಲ್ಲಿ ಬಿಸಿಯಾದ ಕಾಫಿ ದೊರೆಯಿತು. ಯಾವುದೋ ಮೂಡಿನಲ್ಲಿದ್ದಂತೆ ತೋರಿದ ನರಸಿಂಹಸ್ವಾಮಿ ಬೀಡಾ ಪ್ರಿಯರೆಂಬುದು ಅದನ್ನವರು ಸವಿಯುತ್ತಿದ್ದ ರೀತಿಯಲ್ಲಿ ವ್ಯಕ್ತವಾಯಿತು. 'ಅನ್ನಪೂರ್ಣ'ದಲ್ಲಿ ಅ.ನ.ಕೃ. ಅವರನ್ನು ಕಾಣಲು ಹೋದಾಗ ಕಟ್ಟೀಮನಿ ಹಣ್ಣು ಹೂಗಳನ್ನು ಕೈಯಲ್ಲಿ ಹಿಡಿದಿದ್ದರು. (ಪ್ರಗತಿಶೀಲ ಸಾಹಿತ್ಯದ ಅಬ್ಬರ ಅಪ್ಪೂತ್ತಿಗೆ ಇಳಿಮುಖವಾಗಿತ್ತು). ಸಾಹಿತಿಗಳನ್ನು ಹೊರಗೆ ಕಾಣುವುದಕ್ಕೂ ಅವರವರ ಮನೆಯಲ್ಲಿ ಹೋಗಿ ಭೆಟ್ಟಿಯಾಗುವುದಕ್ಕೂ ಸಾಕಷ್ಟು ವ್ಯತ್ಯಾಸವಿರುವುದನ್ನು ನಾನು ಕಂಡುಕೊಂಡೆ.

ಧಾರವಾಡದ ಸಾಹಿತ್ಯಿಕ ಸಭೆಗಳ ಸಂಘಟನೆಯಲ್ಲಿ ಮೊದಲಿನಿಂದಲೂ ನಾನು ಆಸಕ್ತಿ ವಹಿಸಿಕೊಂಡು ಬಂದಿದ್ದೆ. ಕರ್ನಾಟಕ ವಿದ್ಯಾವರ್ಧಕ ಸಂಘವೇ ಅದಕ್ಕೆ ಕೇಂದ್ರ ಸ್ಥಳವೆಂದರೆ ತಪ್ಪಾಗದು. ಬಹಳ ದಿನಗಳಿಂದ ಸ್ಥಗಿತಗೊಂಡಿದ್ದ 'ಸಾಹಿತ್ಯ ಮಂಟಪ'ದ ಸಂಚಾಲಕತ್ವವನ್ನು ವಹಿಸಿ ನಿಯಮಿತವಾಗಿ ಕಾರ್ಯಕಲಾಪಗಳು ಮುಂದುವರಿಯುವಂತೆ ನಾನು ಪ್ರಯತ್ನಿಸಿದೆ. ಶ್ರೀರಂಗರ ಷಷ್ಟ್ಯಬ್ದಿ ಉತ್ಸವ ನಡೆದ ಸಂದರ್ಭದಲ್ಲಿ ಅವರು ಮಂಟಪದ ಸಭೆಗೆ ಅತಿಥಿಯಾಗಿ ಬಂದು ಉತ್ತೇಜನವಿತ್ತರು. ಸೊಲ್ಲಾಪುರದಿಂದ ನಿವೃತ್ತರಾಗಿ ಸಾಧನಕೇರಿಗೆ ಮರಳಿದ ಬೇಂದ್ರೆಯವರ ಷಷ್ಟ್ಯಬ್ದಿ ಮಹೋತ್ಸವ ಅಭೂತಪೂರ್ವವಾಗಿ ನೆರವೇರಿದಾಗ ನಾನು ಅದರ ಪ್ರಧಾನ ಕಾರ್ಯದರ್ಶಿಯಾಗಿ ಕೆಲಸ ಮಾಡಿದೆ (೧೯೫೬). ಮರುವರ್ಷ ಕರ್ನಾಟಕ ವಿಶ್ವವಿದ್ಯಾಲಯದ ಆಶ್ರಯದಲ್ಲಿ ಕುವೆಂಪು ಅಧ್ಯಕ್ಷತೆಯಲ್ಲಿ ಜರುಗಿದ ೩೯ನೇ ಕನ್ನಡ ಸಾಹಿತ್ಯ ಸಮ್ಮೇಳನದ ಪ್ರಧಾನ ಕಾರ್ಯದರ್ಶಿಯಾಗಿ ಕೆಲಸ ಮಾಡಿದ್ದರಲ್ಲಿ ಒಂದು ಸಾರ್ಥಕ್ಯವನ್ನು ಕಂಡುಕೊಂಡೆ. ಕರ್ನಾಟಕ ಏಕೀಕರಣದ ನಂತರ ಮೊದಲ ಬಾರಿಗೆ ಸಾಹಿತಿಗಳು ಹಾಗೂ ನಾಡು ನುಡಿಯ ಅಭಿಮಾನಿಗಳು ಅತ್ಯಂತ ಹೆಚ್ಚಿನ ಸಂಖ್ಯೆಯಲ್ಲಿ ಈ ಸಮ್ಮೇಳನದಲ್ಲಿ ಭಾಗವಹಿಸಿ ಸಂತೋಷಪಟ್ಟದ್ದು ನನ್ನ ಕೃತಕೃತ್ಯತೆಗೆ ಮುಖ್ಯ ಕಾರಣವಾಗಿತ್ತು.

ಪ್ರೊ. ಕೆ.ಜಿ. ಕುಂದಣಗಾರರ ಅಧ್ಯಕ್ಷತೆಯಲ್ಲಿ ಗದಗಿನಲ್ಲಿ ನಡೆದ ಸಾಹಿತ್ಯ ಸಮ್ಮೇಳನ (೧೯೬೧)ದಲ್ಲಿ ಕವಿಗೋಷ್ಠಿಯ ಅಧ್ಯಕ್ಷತೆ ವಹಿಸುವ ಭಾಗ್ಯ ನನ್ನದಾಗಿತ್ತು. ಕೃಷ್ಣರಾಜ ಸಾಗರದಲ್ಲಿ

ಕೇಂದ್ರ ಶಿಕ್ಷಣ ಹಾಗೂ ಸಂಸ್ಕೃತಿ ಇಲಾಖೆ ಏರ್ಪಡಿಸಿದ ಅಖಿಲ ಭಾರತ ಲೇಖಕರ ಕೂಟದಲ್ಲಿ ಡಾ.ಡಿ.ಎಸ್. ಕರ್ಕಿಯವರೊಡನೆ ಕನ್ನಡದ ಪ್ರತಿನಿಧಿಯಾಗಿ ಭಾಗವಹಿಸಿದ ಸಂದರ್ಭದಲ್ಲಿ ಭಾರತದ ಬೇರೆ ಬೇರೆ ಭಾಷೆಗಳ ಸಾಹಿತಿಗಳೊಡನೆ ನಡೆದ ಆತ್ಮೀಯ ಚರ್ಚೆ ಹಾಗೂ ಸಂವಾದ ನನ್ನ ಮನಸ್ಸಿನ ಕ್ಷಿತಿಜವನ್ನು ಹಿಗ್ಗಿಸುವಲ್ಲಿ ನೆರವಾದವು. ರಾಜ್ಯ ಹಾಗೂ ಕೇಂದ್ರ ಸಾಹಿತ್ಯ ಅಕಾಡೆಮಿಗಳ ಸದಸ್ಯನಾಗಿದ್ದಾಗ ಪಡೆದ ಅನುಭವವೂ ಇದೇ ಬಗೆಯದು. ಮೈಸೂರು, ಬೆಂಗಳೂರು ವಿಶ್ವವಿದ್ಯಾಲಯಗಳು ಯೋಜಿಸಿದ ಲೇಖಕರ ಗೋಷ್ಠಿ ಹಾಗೂ ವಿಚಾರ ಸಂಕಿರಣಗಳಲ್ಲಿ, ನಾಡಿನ ಇನ್ನೂ ಹಲವಾರು ಕಡೆಗಳಲ್ಲಿ ಏರ್ಪಟ್ಟ ವಿಚಾರಗೋಷ್ಠಿ ಮುಂತಾದವುಗಳಲ್ಲಿ ಭಾಗವಹಿಸಿದಾಗ ಹಿರಿಯ ತಲೆಮಾರಿನ ಜೊತೆಗೆ ಅನೇಕ ಹೊಸ ಪ್ರತಿಭೆಗಳ ಸಂಪರ್ಕ ಪಡೆದು ಪ್ರಚಲಿತ ವಿದ್ಯಮಾನಗಳಿಗೆ, ಪ್ರಯೋಗಗಳಿಗೆ ನನ್ನ ಮನಸ್ಸು ಸದಾ ತೆರೆದುಕೊಂಡಿರುವಂತಾಯಿತು.

ಕಳೆದ ನಾಲ್ವತ್ತು ವರ್ಷಗಳಲ್ಲಿ ಪ್ರಕಟವಾದ ನನ್ನ ೧೨ ಕವನ ಸಂಗ್ರಹಗಳ ಸಮಗ್ರ ಸಂಪುಟವನ್ನು ಧಾರವಾಡದಲ್ಲಿ ಪು.ತಿ.ನ. ಬಿಡುಗಡೆಗೊಳಿಸಿದರು (೧೯೮೯). ಆಶ್ಚರ್ಯದ ಹಾಗೂ ಸಂತೋಷದ ಸಂಗತಿಯೆಂದರೆ ಹಿಂದೆ 'ಚೆಂಬೆಳಕು' ಅಭಿನಂದನ ಗ್ರಂಥವನ್ನು ಬಿಡುಗಡೆಗೊಳಿಸಿದ ಈ ಸುಸಂಸ್ಕೃತ ಕವಿಚೇತನವೇ 'ಹೊಂಬೆಳಕು' ಹೊಮ್ಮಿದಾಗಲೂ ಅದರಲ್ಲಿ ಭಾಗಿಯಾದದ್ದು ! ಸುಂದರವಾದದ್ದನ್ನು, ಸೂಕ್ಷ್ಮವಾದದ್ದನ್ನು, ತಕ್ಷಣ ಮೆಚ್ಚಿ ಮುದಗೊಳ್ಳುವ ಪು.ತಿ.ನ. ಅವರಂಥ ಹಿರಿಯ ಸಹೃದಯರ ಸ್ನೇಹ ಒಂದು ದೊಡ್ಡ ಭಾಗ್ಯ. ಈ ಸಂದರ್ಭದಲ್ಲಿ ದಿವಂಗತ ಡಿ.ಎಸ್. ಕರ್ಕಿಯವರ ನೆನಪು ನನ್ನ ಮನಸ್ಸನ್ನು ಆರ್ದ್ರಗೊಳಿಸುತ್ತದೆ.

ವಿಮರ್ಶೆ ಹಾಗೂ ಲಲಿತಪ್ರಬಂಧ ನನ್ನ ಎರಡನೆಯ ಒಲವಾಗಿರುವುದನ್ನು 'ಸಾಹಿತ್ಯ ಚಿಂತನ' (೧೯೬೬), 'ಕಾವ್ಯಾನುಸಂಧಾನ' (೧೯೭೦), 'ಸಮಾಹಿತ' (೧೯೭೭), 'ಸಮತೋಲನ' (೧೯೮೯), 'ಮಧುರಚೆನ್ನ' ಕೃತಿಗಳಲ್ಲಿ ಕಾಣಬಹುದು. 'ನವ್ಯಧ್ವನಿ', 'ನಮ್ಮೆಲ್ಲರ ನೆಪರು', 'ಆಧುನಿಕ ಕನ್ನಡ ಕಾವ್ಯ'- ಮೊದಲಾದ ಆ್ಯಂಥಾಲಜಿಗಳ ಹಾಗೂ 'ನೈವೇದ್ಯ', 'ಜೀವನಸಿದ್ಧಿ', 'ಸಿದ್ಧಿ ವಿನಾಯಕ ಮೋದಕ'ದಂಥ ಅಭಿನಂದನ ಸ್ವರೂಪದ ಗ್ರಂಥಗಳ ಸಂಪಾದನೆಯಲ್ಲಿಯೂ ನಾನು ಪಾಲ್ಗೊಂಡಿದ್ದೇನೆ. ಮಕ್ಕಳಿಗಾಗಿ 'ಪಕ್ಷಿಪುಚ್ಛ' (ಕವನ ಸಂಗ್ರಹ)ವನ್ನು ಹಿಡಿದುಕೊಡಲು ಪ್ರಯತ್ನಿಸಿದ್ದೇನೆ.

೧೯೮೩ರಲ್ಲಿ ಪ್ರಸಾರಾಂಗದ ನಿರ್ದೇಶಕ ಹುದ್ದೆಯಿಂದ ನಿವೃತ್ತನಾಗುವ ಪೂರ್ವದಲ್ಲಿ ಎರಡು ಮೂರು ವರ್ಷ ಕನ್ನಡ ಅಧ್ಯಯನ ಪೀಠದಲ್ಲಿ ಗೌರವ ಸಂದರ್ಶಕ ಪ್ರಾಧ್ಯಾಪಕನಾಗಿ ಸೇವೆ ಸಲ್ಲಿಸುವ ಅವಕಾಶವನ್ನು ಕುಲಪತಿ ಡಾ. ಡಿ.ಎಂ. ನಂಜುಂಡಪ್ಪನವರು ಒದಗಿಸಿಕೊಟ್ಟರು. ನಾನು ಅಧ್ಯಾಪಕನಾಗಿರದಿದ್ದಾಗಲೂ ವಿದ್ಯಾರ್ಥಿಗಳು ಹಾಗೂ ಯುವ ಕವಿಗಳು ಒಂದಿಲ್ಲ ಒಂದು ರೀತಿಯಲ್ಲಿ ನನ್ನ ಸಂಬಂಧ ಸಂಪರ್ಕವನ್ನು ಇಟ್ಟುಕೊಂಡಿರುತ್ತಿದ್ದರು. ಈಗಲೂ ಆ ಸಂಬಂಧದಲ್ಲಿ ಯಾವ ಕೊರತೆಯೂ ಕಂಡುಬಂದಿಲ್ಲ.

೧೯೮೩-೮೭ರ ಅವಧಿಯಲ್ಲಿ ಮತ್ತೆ ಮೂವರು ಹಿರಿಯರ ಅಗಲಿಕೆಯನ್ನು ಅನುಭವಿಸುವ ಪ್ರಸಂಗ. ಮೂವತ್ತು ವರ್ಷಗಳಿಂದಲೂ ನಮ್ಮ ಹೊಸ ಮನೆಯಲ್ಲಿ ತಮ್ಮ ಕಣ್ಗಾವಲಿನಿಂದ ನಮ್ಮನ್ನು ಕಾಪಾಡುತ್ತಿದ್ದ ತಾಯಿ ವೃದ್ಧಾಪ್ಯದಿಂದ ಶಾಂತವಾಗಿ ಕಣ್ಮುಚ್ಚಿದರು. ಮರುವರ್ಷವೇ ನನ್ನ ಹಿರಿಯಣ್ಣ ಕ್ಯಾನ್ಸರ್‌ನಿಂದ ವಿಧಿವಶರಾದರು. ನಾನು ಅತ್ಯಂತ ಗೌರವದಿಂದ ಕಾಣುತ್ತಿದ್ದ ಪುಸ್ತಕ ಪ್ರೇಮಿಗಳಾದ ನನ್ನ ಮಾವಂದಿರು ಸಿದ್ಧಬಸಪ್ಪ ಗಿಡ್ನವರ, ವ್ಯವಹಾರ ಕೌಶಲದೊಂದಿಗೇ ಸಂತನ ನಿರ್ಲಿಪ್ತತೆಯನ್ನು ಸಾಧಿಸಿಕೊಂಡವರು, ೮೫ನೇ ವಯಸ್ಸಿನಲ್ಲಿ ಇಹಲೋಕಯಾತ್ರೆಯನ್ನು ಮುಗಿಸಿದರು. ಹೋರಾಟದ ಕೆಂಪು ಶಾಲನ್ನು ಹೊದ್ದುಕೊಂಡೇ ಕಟ್ಟೀಮನಿ ಶಾಂತವಾಗಿ ಕಣ್ಣು ಮುಚ್ಚಿದರು (೧೯೮೯). ಸಾವಿನ ಸತ್ಯದಂತೆಯೇ ಬದುಕಿನ ಸಾರ್ಥಕತೆಯನ್ನೂ ಇವರೆಲ್ಲರೂ ತಮ್ಮ ಕೊನೆಯ ಗಳಿಗೆಯಲ್ಲಿ ನನಗೆ ಕಾಣಿಸಿದಂತೆ ಭಾಸವಾಯಿತು.

ನಾಡಿನ ಅನೇಕ ಸಂಘ ಸಂಸ್ಥೆಗಳು, ಹಿರಿಯರು,ಕಿರಿಯರು, ಸ್ನೇಹಿತರು ನನ್ನ ಬಗ್ಗೆ ತೋರಿಸುತ್ತಿರುವ ಪ್ರೀತಿ ಆದರ, ಅಭಿಮಾನಗಳು ನನ್ನನ್ನು ಎಷ್ಟೋಸಲ ಮೂಕವಿಸ್ಮಿತನನ್ನಾಗಿ ಮಾಡಿವೆ. ನನ್ನ ಐವತ್ತನೆಯ ವಯಸ್ಸಿನಲ್ಲಿ ಕರ್ನಾಟಕ ವಿದ್ಯಾವರ್ಧಕ ಸಂಘ ನನ್ನನ್ನು ಆತ್ಮೀಯವಾಗಿ ಸನ್ಮಾನಿಸಿದ್ದಲ್ಲದೆ ಗೌರೀಶ ಕಾಯಕಿಣಿಯವರ ವಿಮರ್ಶಾ ಗ್ರಂಥವನ್ನು ('ಚನ್ನವೀರ ಕಣವಿಯವರ ಕಾವ್ಯದೃಷ್ಟಿ') ಇದೇ ಸಂದರ್ಭದಲ್ಲಿ ಪ್ರಕಟಿಸಿ ಬಿಡುಗಡೆಗೊಳಿಸಿತು (೧೯೭೭). ಮುಂದೆ ಮೂರು ವರ್ಷಗಳಲ್ಲಿ ಧಾರವಾಡದ ಸ್ನೇಹಿತರ ಬಳಗ ಅಭಿನಂದನ ಗ್ರಂಥವೊಂದನ್ನು ('ಚೆಂಬೆಳಕು'(ಸಂ.) ಡಾ. ಜಿ.ಎಸ್.ಕಾಪಸೆ) ಅರ್ಪಿಸಿತು. ಅನಂತರ ಕೇಂದ್ರ ಸಾಹಿತ್ಯ ಅಕಾಡೆಮಿ ಪುರಸ್ಕಾರ ('ಜೀವಧ್ವನಿ' ಕವನಸಂಗ್ರಹಕ್ಕೆ), ರಾಜ್ಯ ಸಾಹಿತ್ಯ ಅಕಾಡೆಮಿ ಗೌರವಪ್ರಶಸ್ತಿ, ರಾಜ್ಯೋತ್ಸವ ಪ್ರಶಸ್ತಿಗಳೂ ಲಭಿಸಿವೆ. ಹಲವಾರು ಸಂಘಸಂಸ್ಥೆಗಳು, ವಿದ್ಯಾರ್ಥಿಗಳಿಂದ ಮೊದಲುಗೊಂಡು ಬೇರೆ ಬೇರೆ ಕ್ಷೇತ್ರದಲ್ಲಿಯ ಹಿರಿಯರೂ ಕಿರಿಯರೂ ಕಾವ್ಯಪ್ರೇಮಿಗಳೂ ಆಗಾಗ ಕಾಗದ ಬರೆಯುತ್ತ ಭೆಟ್ಟಿಯಾಗುತ್ತ ತಮ್ಮ ಪ್ರೀತಿ ವಿಶ್ವಾಸಗಳನ್ನು ಧಾರೆಯೆರೆದು 'ಇದುವೆ ಜೀವ,ಇದು ಜೀವನ, ಪವನದಂತೆ ಪಾವನ' ಎಂಬುದನ್ನು ನನಗೆ ಮನಗಾಣಿಸಿಕೊಡುತ್ತಾರೆ.

ಮನೆಯನ್ನೂ, ಮಕ್ಕಳನ್ನೂ ಚೆನ್ನಾಗಿ ನೋಡಿಕೊಂಡು ನಾನು ನಿಶ್ಚಿಂತೆಯಿಂದ ನನ್ನ ಕೆಲಸ ಹಾಗೂ ಬರವಣಿಗೆಯಲ್ಲಿ ತೊಡಗುವಂತೆ ಅನುಕೂಲತೆ ಕಲ್ಪಿಸಿದ ಶ್ರೇಯಸ್ಸು ಪತ್ನಿ ಶಾಂತದೇವಿಯದು. ಉಳಿದ ಹೊತ್ತಿನಲ್ಲಿ ಹೆಣಿಕೆ ಹಾಕುತ್ತ, ಮನಸ್ಸಿನಲ್ಲಿ ಕತೆಗಳನ್ನು ಹೆಣೆಯುತ್ತ ಸಮಯ ಸಂದರ್ಭ ನೋಡಿಕೊಂಡು ಅವುಗಳನ್ನು ಬರವಣಿಗೆಗಿಳಿಸುವುದು ಆಕೆಯ ರೀತಿ. ಅವು ರಾಜ್ಯ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಯನ್ನೂ ಅವರಿಗೆ ತಂದುಕೊಟ್ಟಿವೆ. ಮನೆಯೊಳಗಿನ ಗ್ರಂಥಭಂಡಾರ, ಮನೆಯ ಮುಂದಿನ ಕೈತೋಟ ಇವೆರಡೂ ನಮ್ಮೀರ್ವರ ಎಷ್ಟೋ ಅವಶ್ಯಕತೆಗಳನ್ನು ತುಂಬಿಕೊಟ್ಟಂತಾಗಿದೆ. ಐದು ಜನ ಮೊಮ್ಮಕ್ಕಳು ಬಂದು ಇದರ ಅಂಗಳದಲ್ಲಿ ಆಡಿದಾಗ, ಬಂಧುಬಳಗ ಆಗಾಗ ಬಂದು ಜೊತೆಗೂಡಿದಾಗ 'ಚೆಂಬೆಳಕು' ತುಂಬಿ ತುಳುಕುತ್ತದೆ.

ಕಿರಿಯ ಕವಿಗಳಿಗೆ ಸಾಧ್ಯವಿದ್ದ ಮಾರ್ಗದರ್ಶನ ಮಾಡುವುದು ನನ್ನ ಪಾಲಿನ ಕರ್ತವ್ಯವೆಂದು ಭಾವಿಸಿದ್ದೇನೆ. ಹಾಗೆಯೇ ಸುಮ್ಮಮ್ಮನೆ ಕವಿಯಾಗಬೇಕೆಂಬ ಕೆಲವರ ಹುಚ್ಚು ಹವ್ಯಾಸವನ್ನು ಬಿಡಿಸಿ ಬೇರೆ ಬರವಣಿಗೆ ಅಥವಾ ಕೆಲಸದಲ್ಲಿ ತೊಡಗಿಸುವ ಪ್ರಯತ್ನವನ್ನೂ ಮಾಡುತ್ತಿದ್ದೇನೆ. ಸಾಹಿತ್ಯದಲ್ಲಿ ಶ್ರೇಷ್ಠತೆಯನ್ನು ಕಾಣುವ ಬಯಕೆಯಂತೆಯೇ ಹೊಸ ಪ್ರತಿಭೆಗಳನ್ನು ಗುರುತಿಸಿ ಪ್ರೋತ್ಸಾಹಿಸುವದೂ ಅಷ್ಟೇ ಮುಖ್ಯವೆಂದು ನನಗೆ ಕಂಡಿದೆ. ಆಗಬೇಕಾದ ಕನ್ನಡದ ಕೆಲಸಗಳ ಬಗ್ಗೆ; ಕನ್ನಡ-ಕನ್ನಡಿಗ-ಕರ್ನಾಟಕದ ಹೆಚ್ಚಿನ ಅರಿವಿನ ಬಗ್ಗೆ ಜನತೆಯಲ್ಲಿ ಸರಿಯಾದ ತಿಳಿವಳಿಕೆ ಮೂಡಿಸುವ ಕಾರ್ಯದಲ್ಲಿ ಸಹಕರಿಸುವ ಪ್ರಯತ್ನ ನನ್ನದಾಗಿದೆ. ಹಿಂದೆ ಗೋಕಾಕ ಚಳುವಳಿಯಲ್ಲಿ ಭಾಗವಹಿಸಿದ ಅನುಭವವನ್ನಂತೂ ಎಂದಿಗೂ ಮರೆಯುವಂತಿಲ್ಲ.

ನಿಸರ್ಗದ ಚೈತನ್ಯ, ಜನತೆಯ ಪ್ರೀತಿ, ಸ್ನೇಹದ ಭಾಗ್ಯ-ಇವು ಬದುಕಿನ ಬಗ್ಗೆ ನನ್ನ ಶ್ರದ್ಧೆಯನ್ನೂ ಜೀವನೋತ್ಸಾಹವನ್ನೂ ಹೆಚ್ಚಿಸಿವೆ.

('ತುಷಾರ' ಮೇ ೧೯೯೧)

## ೧೮

## ಶಿಕ್ಷಣವನ್ನು ಕುರಿತು ರವೀಂದ್ರರ ವಿಚಾರಗಳು

ರವೀಂದ್ರನಾಥ ಠಾಕೂರರು ಶ್ರೇಷ್ಠ ಕವಿಗಳೆಂಬುದು ಪ್ರಪಂಚಕ್ಕೆಲ್ಲ ಗೊತ್ತು. ಶಿಕ್ಷಣ, ಅರ್ಥಶಾಸ್ತ್ರ ರಾಜಕಾರಣ, ಸಾಮಾಜಿಕ ವ್ಯವಹಾರಗಳ ಕ್ಷೇತ್ರಗಳಲ್ಲಿಯೂ ಠಾಕೂರರು ಮಹತ್ವದ ಸಾಹಿತ್ಯವನ್ನು ನಿರ್ಮಾಣ ಮಾಡಿದ್ದರೂ ಅದು ಭಾರತಕ್ಕಷ್ಟೆ ಅಲ್ಲದೆ ಪ್ರಪಂಚಕ್ಕೂ ನೀಡಿದ ಮಹತ್ವದ ಕಾಣಿಕೆಯೆನ್ನುವದನ್ನು ಬಹಳ ಜನ ಅರಿತಿರಲಿಲ್ಲ. ೧೯೬೧ರಲ್ಲಿ ಅವರ ಜನ್ಮಶತಮಾನೋತ್ಸವದ ಸಂದರ್ಭದಲ್ಲಿ ವಿವಿಧ ವಿಷಯಗಳ ಬಗೆಗಿನ ಅವರ ಮಹತ್ವದ ಪ್ರಬಂಧಗಳನ್ನು ಇಂಗ್ಲೀಷಿಗೆ ಅನುವಾದಿಸಿ ಪ್ರಕಟಿಸಿ ಆ ಕೊರತೆಯನ್ನು ಕೆಲಮಟ್ಟಿಗೆ ತುಂಬಿಕೊಡಂತಾಯಿತು. ಬಂಗಾಳದ ಪ್ರಸಿದ್ಧ ವಿದ್ವಾಂಸರು ಹಾಗೂ ಅಂದಿನ ಭಾರತ ಸರ್ಕಾರದ ಸಂಸ್ಕೃತಿ ಮತ್ತು ವಿಜ್ಞಾನ ಸಂಶೋಧನಾ ಶಾಖೆಯ ಮಂತ್ರಿಗಳೂ ಆಗಿದ್ದ ಪ್ರೊ. ಹುಮಾಯೂನ್ ಕಬೀರ್ ಈ ಗ್ರಂಥಕ್ಕೆ ದೀರ್ಘವಾದ ಪೀಠಿಕೆಯೊಂದನ್ನು ಬರೆದು ಠಾಕೂರರ ಜೀವನ ಮತ್ತು ಕೃತಿಗಳನ್ನು ಕುರಿತಲ್ಲದೆ ಅವರ ಆರ್ಥಿಕ, ಶೈಕ್ಷಣಿಕ, ಸಾಮಾಜಿಕ ಮತ್ತು ರಾಜಕೀಯ ನಂಬುಗೆಗಳನ್ನು ವಿವರವಾಗಿ ವಿವೇಚಿಸಿ, ಜೀವನದಲ್ಲಿ ಅವರಿಗಿದ್ದ ಸಮನ್ವಯ ದೃಷ್ಟಿಯೇ ಅವರ ಹಿರಿದಾದ ಶಕ್ತಿಯಾಗಿತ್ತು ಎಂಬುದನ್ನು ಎತ್ತಿ ತೋರಿಸಿದರು. ರವೀಂದ್ರರ ಸಾಧನೆಗಳು ಎಷ್ಟರಮಟ್ಟಿಗೆ ವಿಶಿಷ್ಟವಾಗಿದ್ದುವೆಂದರೆ ಅವು ಅವರನ್ನು ಹಿರಿಯ ವ್ಯಕ್ತಿಗಳಲ್ಲೊಬ್ಬರನ್ನಾಗಿ ಮಾಡಿದ್ದಲ್ಲದೆ ಇಡಿಯ ಮಾನವಕುಲಕ್ಕೇ ಸಂದೇಶ ಕೊಡುವಂತಹ ವ್ಯಕ್ತಿಗಳಲ್ಲಿ ಒಬ್ಬರನ್ನಾಗಿಸಿದ್ದವೆಂಬುದನ್ನೂ ಪ್ರಸ್ತುತಪಡಿಸಿದರು.

ಶಿಕ್ಷಣ ವಿಷಯದಲ್ಲಿ ರವೀಂದ್ರರ ವಿಚಾರಗಳು ಅನುಭವದಿಂದಲೇ ಬಂದಿರುವಂಥವು. ಪಟ್ಟಣಗಳಲ್ಲಿ ಮಕ್ಕಳನ್ನು ನೋಡಿಕೊಳ್ಳಲು ಸೇವಕರಿರುತ್ತಾರೆ. ಅವರ ಮೇಲ್ವಿಚಾರಣೆ ಒಂದು ರೀತಿ ಬಂಧನವಿದ್ದಂತೆಯೇ. ಚಿಕ್ಕಮಕ್ಕಳ ಮನಸ್ಸು ಯಾವಾಗಲೂ ಸ್ವಾತಂತ್ರ್ಯ ಬಯಸುತ್ತದೆಂಬುದನ್ನು ರವೀಂದ್ರರು ಕಂಡುಕೊಂಡಿದ್ದರು. ಬಯಲಿನಲ್ಲಿ ಓಡಾಡುವದು ಮಕ್ಕಳಿಗೆ ಇಷ್ಟ. ಅವರು ಓದುತ್ತಿದ್ದ ಶಾಲೆಯಲ್ಲಿ ಬೇಡವಾದ ವಿಷಯಗಳನ್ನು ಕಡ್ಡಾಯವಾಗಿ ಕಲಿಸುವದೂ ಯಾಂತ್ರಿಕವಾಗಿ ಶಿಕ್ಷಣವೀಯುವದೂ ಆ ಶಿಕ್ಷಣ ಪದ್ಧತಿಯನ್ನೇ ಪ್ರತಿಭಟಿಸುವಂತೆ ಮಾಡಿತು. ಅಂದಿನ ಶಿಕ್ಷಣ ಪದ್ಧತಿಯಂತೂ ಭಾರತೀಯರ ಸಂಪ್ರದಾಯ ಸಂಸ್ಕೃತಿಗಳಿಗೆ ಸಂಬಂಧವಿಲ್ಲದಂತೆ ಇದ್ದುದರ ಅನುಭವ ಅವರಿಗಾಯಿತು. ತಂದೆಯೊಡನೆ ಹಿಮಾಲಯವನ್ನು ನೋಡಿ ಬಂದ ಮೇಲಂತೂ ನಿಸರ್ಗದೊಡನೆ ನಿತ್ಯ ಸಂಬಂಧ-ಸಂಪರ್ಕವನ್ನಿಟ್ಟುಕೊಳ್ಳುವದು ಬಾಲಕರ ವಿಕಾಸಕ್ಕೆ

ಉತ್ತಮ ಸಾಧನವೆಂಬುದು ಹೆಚ್ಚು ಮನದಟ್ಟಾಯಿತು. ಅವರ ಅಭಿರುಚಿ, ಮನೋವಿಕಾಸ ಮತ್ತು ದೈಹಿಕ ವಿಕಾಸಗಳ ಕಡೆಗೆ ಗಮನಕೊಟ್ಟು ಸಂಪ್ರದಾಯಗಳನ್ನು ದೂರವಿರಿಸಿ, ನಿಸರ್ಗದ ಸಂಪರ್ಕವನ್ನಿರಿಸಿಕೊಂಡು ಬಾಲಕರಿಗೆ ಕೊಡುವ ಶಿಕ್ಷಣ ಪದ್ಧತಿಯ ಕಾರ್ಯದ ಆಚರಣೆಯನ್ನು ಆರಂಭಿಸಿದರು. "ಮಕ್ಕಳ ಶಿಕ್ಷಣದ ಬಗ್ಗೆ ನನ್ನದು ಒಂದು ಹೊಸ ತತ್ತ್ವವೇನೂ ಇಲ್ಲ; ಅದು ತನ್ನ ಬಾಲ್ಯದ ಶಿಕ್ಷಣದ ಅನುಭವಸಾರ" ಎಂದು ಅವರು ತಮ್ಮ ಭಾಷಣವೊಂದರಲ್ಲಿ ಹೇಳಿದ್ದಾರೆ. (It was not any new theory of education)

ಪ್ರಾಚೀನ ಭಾರತದ ಶಿಕ್ಷಣದ ತತ್ತ್ವಗಳನ್ನು ನಾವು ಅನುಸರಿಸಬೇಕೆಂಬುದು ಅವರ ಅಭಿಪ್ರಾಯವಾಗಿತ್ತು. ವಿದ್ಯಾರ್ಥಿಗಳು ಮತ್ತು ಶಿಕ್ಷಕರು ನೈಸರ್ಗಿಕ ಆವರಣದಲ್ಲಿ ಕೂಡಿವಾಸಿಸಬೇಕು. ಬ್ರಹ್ಮಚರ್ಯವನ್ನಾಚರಿಸುತ್ತ ವಿದ್ಯಾರ್ಥಿಗಳು ತಮ್ಮ ವಿದ್ಯಾರ್ಜನೆಯನ್ನು ಮುಗಿಸಬೇಕು. ಕಾಲಕಾಲಕ್ಕೆ ನಮ್ಮ ಸುತ್ತಮುತ್ತಿನ ಪರಿಸ್ಥಿತಿ ಎಷ್ಟೇ ಬದಲಾವಣೆಗೊಂಡಿದ್ದರೂ ಮಾನವ ಸ್ವಭಾವದ ನಿತ್ಯಸತ್ಯಗಳ ಮೇಲೆ ನಿಂತ ಈ ತತ್ತ್ವಗಳು ತಮ್ಮ ವೈಶಿಷ್ಟ್ಯವನ್ನೇನೂ ಕಳೆದುಕೊಂಡಿಲ್ಲ. ಅವರ ದೃಷ್ಟಿಯಲ್ಲಿ ಮಾದರಿಯಾಗಿ ನಿಲ್ಲಬಲ್ಲ ಶಾಲೆ ನಗರದ ಗಡಿಬಿಡಿ ಗದ್ದಲಗಳಿಂದ ದೂರವಿರುವ ಶಾಂತ ಸ್ಥಳದಲ್ಲಿ ಸ್ಥಾಪಿತವಾಗಿರಬೇಕು. ತೆರೆದ ಆಕಾಶ, ಹೊಲಗದ್ದೆಗಳು, ಗಿಡಮರಗಳು, ಇಂಥ ನೈಸರ್ಗಿಕ ಅನುಕೂಲತೆಗಳನ್ನು ಪಡೆದಿರಬೇಕು. ಶಿಕ್ಷಕರೂ ವಿದ್ಯಾರ್ಥಿಗಳೂ ವಿದ್ಯಾವ್ಯಾಸಂಗದಲ್ಲಿ ತನ್ಮಯರಾಗಿರಬೇಕಾದರೆ ಏಕಾಂತ ಸ್ಥಾನವೇ ಬೇಕು. ಸುತ್ತಲೂ ಒಂದಿಷ್ಟು ಭೂಮಿಯಿದ್ದರೆ ವಿದ್ಯಾರ್ಥಿಗಳು ಅದನ್ನು ಕೃಷಿಗೊಳಿಸಲು ಸಹಾಯ ನೀಡಬಹುದು. ಆದ್ದರಿಂದ ಶಾಲೆಗೆ ಆಹಾರಧಾನ್ಯವೂ ಒದಗಬಹುದು. ಹಾಲು ಪೂರೈಸಲು ಅಲ್ಲಿ ಆಕಳುಗಳಿರಬೇಕು. ಅವುಗಳ ಜೋಪಾನದಲ್ಲಿ ವಿದ್ಯಾರ್ಥಿಗಳು ಪಾಲ್ಗೊಳ್ಳಬೇಕು. ಅಭ್ಯಾಸವಿಲ್ಲದಿರುವಾಗ ವಿದ್ಯಾರ್ಥಿಗಳು ತೋಟದಲ್ಲಿ ಮಡಿ ಮಾಡುತ್ತ, ಸಸಿಗಳಿಗೆ ನೀರುಣಿಸುತ್ತ, ಬೇಲಿಯನ್ನು ಸರಿಪಡಿಸುತ್ತ, ಕೆಲಸ ಮಾಡುತ್ತಿರಬೇಕು. ಹೀಗಿರುವಾಗ ಮಾನಸಿಕವಾಗಿಯೂ ಶಾರೀರಿಕವಾಗಿಯೂ ನಿಸರ್ಗದೊಡನೆ ಅವರ ಸಂಬಂಧವೇರ್ಪಡುತ್ತದೆ. ಹವಾಮಾನ ಅನುಕೂಲವಿದ್ದಾಗ ಮರಗಳ ನೆರಳಿನಲ್ಲಿಯೇ ವರ್ಗಗಳನ್ನು ತೆರೆಯಬೇಕು. ಸಂಜೆಯ ಬಿಡುವಿನಲ್ಲಿ ವಿದ್ಯಾರ್ಥಿಗಳು ನಕ್ಷತ್ರಗಳನ್ನು ನಿರೀಕ್ಷಿಸಬೇಕು, ಸಂಗೀತ ಸಾಧನೆ ಮಾಡಬೇಕು ಮತ್ತು ಪೌರಾಣಿಕ ಹಾಗೂ ಐತಿಹಾಸಿಕ ಕಥೆಗಳನ್ನು ಕೇಳಬೇಕು.

ವಿದ್ಯಾರ್ಥಿಗಳಿಗೆ ಶಿಕ್ಷೆ ವಿಧಿಸುವುದು ತಪ್ಪು ಎಂಬುದು ರವೀಂದ್ರರ ಅಭಿಪ್ರಾಯ. ತಪ್ಪು ಮಾಡಿದ ವಿದ್ಯಾರ್ಥಿ ಹಿಂದೆ ನಮ್ಮ ದೇಶದಲ್ಲಿ ರೂಢಿಯಾಗಿದ್ದಂತೆ ತಪ್ಪಿಗೆ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು. ಶಿಕ್ಷೆ ವಿಧಿಸುವುದು ಅವರ ದೃಷ್ಟಿಯಲ್ಲಿ ತಪ್ಪು ಮಾಡಿದವನ ಮೇಲೆ ಸೇಡು ತೀರಿಸಿಕೊಂಡಂತೆ. ಆದರೆ ಪ್ರಾಯಶ್ಚಿತ್ತ ಮಾಡಿಕೊಳ್ಳುವುದಾಗಲಿ, ಪರಿಹಾರ ಕೊಡುವುದಾಗಲಿ ತಪ್ಪಿತಸ್ಥನೇ ಸ್ವಯಂಪ್ರೇರಣೆಯಿಂದ ಕೈಗೊಳ್ಳುವುದಾಗಿದೆ. ಒಬ್ಬ ಮನುಷ್ಯನು ಇನ್ನೊಬ್ಬ ಮನುಷ್ಯನನ್ನು ಶಿಕ್ಷಿಸುವುದೆಂದರೆ ಅವನ ತೇಜೋಭಂಗ ಮಾಡಿದಂತೆ. ಈ ಸಂದರ್ಭದಲ್ಲಿ ಇನ್ನೊಂದು ಮಾತನ್ನು ಅವರು ಹೇಳುತ್ತಾರೆ. ನಮ್ಮ ಮಾದರಿಯ ಶಾಲೆಗಳಲ್ಲಿ ಮೇಜು,

ಕುರ್ಚಿ ಬೆಂಚುಗಳು ಇರುವ ಅವಶ್ಯಕತೆಯಿಲ್ಲ. ಯುರೋಪಿನ ಪದ್ಧತಿಯ ಬಗ್ಗೆ ಪೂರ್ವಗ್ರಹದಿಂದ ಅವರು ಈ ಮಾತು ಹೇಳುತ್ತಿಲ್ಲ. ಅಮುಖ್ಯವಾದುದೆಲ್ಲವನ್ನು ವರ್ಜಿಸಿಬಿಡಬೇಕೆಂಬ ತತ್ವ ಅವರ ಮನಸ್ಸಿನಲ್ಲಿದೆ. ಸರಳತೆ, ಸಹಜತೆ ಹಾಗೂ ನೆಮ್ಮದಿ ಇವು ನಾಗರಿಕರ ಲಕ್ಷಣಗಳಾಗಿದ್ದರೆ ಅತಿರೇಕ, ಡಾಂಭಿಕತೆ ಇವು ಅನಾಗರಿಕರ ಲಕ್ಷಣಗಳಾಗಿವೆ. ಇದನ್ನವರು ತಮ್ಮ ಶಾಲೆಯಲ್ಲಿ ಎಲ್ಲಿ ನೋಡಿದಲ್ಲಿ ಕಂಡು ಬರುವ ಸರಳ ಜೀವನದ ಪ್ರತ್ಯಕ್ಷ ಉದಾಹರಣೆಯಿಂದ ವಿದ್ಯಾರ್ಥಿಗಳು ಕಲಿಯಬೇಕು. ಒಂದು ವೇಳೆ ಅವರಿದನ್ನು ಕಲಿಯದಿದ್ದರೆ ಕೈಮುಟ್ಟಿ ಕೆಲಸ ಮಾಡುವ ಬಗ್ಗೆ ಅವರು ಬೇಸರಿಯುತ್ತಾರೆ ಮತ್ತು ನೆಲದ ಮೇಲೆ ಕೂಡುವುದು ಕಡಿಮೆ ಮಟ್ಟದ ಲಕ್ಷಣ ಎಂದು ಭಾವಿಸುತ್ತಾರೆ.

ಶಿಕ್ಷಣ ಕ್ರಮದ ಅವಸ್ಥಾಂತರಗಳು (The vicissitude of Education 1892) ಎಂಬ ಅವರ ಮೊಟ್ಟ ಮೊದಲ ಪ್ರಬಂಧ ಮಾತೃಭಾಷೆಯೇ ಬಾಲಕರ ಶಿಕ್ಷಣಕ್ಕೆ ಎಲ್ಲದರ ವಿಕಾಸಕ್ಕೆ ಮುಖ್ಯ ಸಾಧನೆ ಎಂಬ ವಿಷಯವನ್ನು ತಿಳಿಸುವುದರಿಂದ ಮಹತ್ವದ್ದಾಗಿದೆ. ಈ ದೇಶದಲ್ಲಿ ಹುಡುಗರಿಗೆ ಇರುವ ಅವಕಾಶವೇ ಬಹಳ ಕಡಿಮೆ. ಅವನು ಪರಭಾಷೆಯನ್ನು ಕಲಿಯಲೇಬೇಕು; ಹಲವು ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಬೇಕು; ಆದಷ್ಟು ಕಡಿಮೆ ಅವಧಿಯಲ್ಲಿ ಆತ ಯಾವುದೊ ನೌಕರಿಯೊಂದಕ್ಕೆ ಅರ್ಹತೆಯನ್ನು ಗಳಿಸಿಕೊಳ್ಳಬೇಕು. ಆದಕಾರಣ ಉಸಿರುಕಟ್ಟಿಸುವ ವೇಗದಲ್ಲಿ ಹಲವಾರು ಪಠ್ಯಪುಸ್ತಕಗಳನ್ನು ಉರುಹೊಡೆಯುವುದಲ್ಲದೆ ಅವನಿಗೆ ಬೇರೆ ದಾರಿ ಏನಿದೆ ? ಆತನ ತಂದೆ ತಾಯಂದಿರಾಗಲಿ, ಉಪಾಧ್ಯಾಯರಾಗಲಿ, ಈತ ತನ್ನ ಮನೋಲ್ಲಾಸಕ್ಕಾಗಿ ಬೇರೆ ಏನನ್ನಾದರೂ ಓದುವುದನ್ನು ಕಂಡರೆ, ಈ ಹುಡುಗ ತನ್ನ ವೇಳೆ ಹಾಳು ಮಾಡುತ್ತಿದ್ದಾನೆಂದು ತಕ್ಷಣವೇ ಅದನ್ನು ಕಿತ್ತುಕೊಂಡು ಬಿಡುತ್ತಾರೆ. ಯಾವಾಗ ವಿದ್ಯಾರ್ಥಿಯೊಬ್ಬ ತನಗೆ ಪ್ರಿಯವಾದುದನ್ನು ಓದುತ್ತಾನೋ ಆಗ ಆತನಲ್ಲಿ ಓದುವ ಅಭಿರುಚಿಯೂ ಅವನಿಗರಿವಿಲ್ಲದೆಯೇ ಹೆಚ್ಚುತ್ತದೆ. ಅಂತೆಯೆ ಓದಿದ್ದನ್ನು ಗ್ರಹಿಸುವ, ಗ್ರಹಿಸಿದ್ದನ್ನು ಅರಗಿಸಿಕೊಳ್ಳುವ ಅರಗಿಸಿಕೊಂಡದ್ದನ್ನು ತನ್ನದನ್ನಾಗಿ ಮಾಡಿಕೊಳ್ಳುವ ಶಕ್ತಿ ಸಹಜವಾಗಿ, ಸರಳವಾಗಿ ಬಲಗೊಳ್ಳುತ್ತದೆ.

ಬದುಕಿನ ಕರ್ತವ್ಯ ನಿರ್ವಹಣೆಗೆ ಆಲೋಚನಾಶಕ್ತಿ ಹಾಗೂ ಕಲ್ಪನಾ ಶಕ್ತಿಗಳು ಅತ್ಯಂತ ಅನಿವಾರ್ಯವೆಂಬುದನ್ನು ರವೀಂದ್ರರು ಒತ್ತಿ ಹೇಳುತ್ತಾರೆ. ಇವಿಲ್ಲದಿದ್ದರೆ ನಾವು ನಿಜವಾದ ವ್ಯಕ್ತಿಗಳಾಗಲಾರೆವು. ಎಳೆಯರಿದ್ದಾಗಲೆ ಅವನ್ನು ಬೆಳೆಯಿಸಿಕೊಳ್ಳದಿದ್ದಲ್ಲಿ ಬೆಳೆದು ದೊಡ್ಡವರಾದ ಮೇಲೆ ಅವು ಬಾರವು. ಇಂಥ ಶಕ್ತಿಗಳ ಬೆಳವಣಿಗೆಗೆ ನಮ್ಮ ಇಂದಿನ ಶಿಕ್ಷಣ ಕ್ರಮ ಅವಕಾಶವನ್ನೇ ನೀಡುವುದಿಲ್ಲ. ನಮ್ಮ ಬಾಲ್ಯದ ಬಹುಕಾಲವೆಲ್ಲಾ ಅಸಮರ್ಥವಾದ ಉಪಾಧ್ಯಾಯರಿಂದ ಪರಭಾಷೆಯನ್ನು ಕಲಿಯುವುದರಲ್ಲಿಯೆ ಕಳೆದು ಹೋಗುತ್ತದೆ. ಇಂಗ್ಲೀಷ್ ಭಾಷೆಯನ್ನು ಕಲಿಯುವುದೆ ಮೊದಲ ಕಷ್ಟ. ಇನ್ನು ಆಂಗ್ಲ ಚಿಂತನೆ ಹಾಗೂ ಭಾವನೆಗಳನ್ನು ನಮ್ಮದನ್ನಾಗಿ ಮಾಡಿಕೊಳ್ಳುವುದು ಇನ್ನೂ ಕಷ್ಟ. ಈ ಪ್ರಯತ್ನದಲ್ಲಿ ನಮ್ಮ ಆಲೋಚನಾಶಕ್ತಿ ತನ್ನ ಪ್ರಕಾಶನಕ್ಕೆ ಅವಕಾಶವನ್ನು ಪಡೆಯದೆ ಜಡವಾಗಿ ಬಿಡುತ್ತದೆ.

ನಾವು ಪಡೆಯುತ್ತಿರುವ ಶಿಕ್ಷಣಕ್ಕೂ ನಮ್ಮ ಬದುಕಿಗೂ ಯಾವ ಸಂಬಂಧವೂ ಇಲ್ಲದ ಕಾರಣ, ನಾವು ಓದುವ ಪಠ್ಯಪುಸ್ತಕಗಳು ನಮ್ಮ ಬದುಕಿನ ಯಾವ ಚಿತ್ರವನ್ನೂ ಸ್ಪಷ್ಟವಾಗಿ ಮೂಡಿಸುವುದಿಲ್ಲ, ನಮ್ಮ ಸಮಾಜದ ಯಾವ ಆದರ್ಶಗಳನ್ನೂ ಎತ್ತಿ ತೋರುವುದಿಲ್ಲ. ಅವುಗಳ ಪುಟಪುಟಗಳಲ್ಲಿ ನಮ್ಮ ದೈನಂದಿನ ಜೀವನದ ಹೋರಾಟಕ್ಕೆ ಪ್ರವೇಶವಿಲ್ಲ. ಅಲ್ಲಿನ ಪಾತ್ರಗಳಲ್ಲಿ ನಮಗೆ ಪ್ರಿಯ ಪರಿಚಿತವಾದ ವ್ಯಕ್ತಿಗಳನ್ನು ಕಂಡು ಸುಖಿಸಲು ಅವಕಾಶವಿಲ್ಲ; ನಮ್ಮ ನೆಲ, ನಮ್ಮ ಮುಗಿಲು, ನಮ್ಮ ಸಂಜೆಮುಂಜಾವುಗಳ ಸೊಗಸು, ನಮ್ಮ ಹೊಳೆ ಗದ್ದೆ ಬಯಲುಗಳ ನೋಟ ಯಾವುದೂ ಅಲ್ಲಿ ಕಾಣದು. ಈ ಪರಿಸ್ಥಿತಿಯಲ್ಲಿ ಶಿಕ್ಷಣ ಹಾಗೂ ಜೀವನ ಇವೆರಡೂ ಎಂದೆಂದಿಗೂ ಒಂದಾಗದೆ ವಿಶೇಷ ಅಂತರದಲ್ಲಿಯೇ ದೂರ ನಿಲ್ಲುವಂತಾದರೆ ಇನ್ನೇನಾದೀತು ? ನಮ್ಮ ವಿದ್ಯಾಭ್ಯಾಸ, ರವೀಂದ್ರರೆಂದಂತೆ ನಮ್ಮ ಬೇರುಗಳಿಗೆ ದೂರವಾದ ಯಾವುದೋ ನೆಲದಲ್ಲಿ ಬಿದ್ದ ಮಳೆಯಂತಾಗಿದೆ.

ಮಾತೃಭಾಷೆಯಲ್ಲಿ ಶಿಕ್ಷಣ ಕೊಡುವುದರಿಂದಲೇ ವಿದ್ಯಾರ್ಥಿಗಳು ಸಹಜವಾಗಿ ವಿಷಯವನ್ನು ಗ್ರಹಿಸಬಲ್ಲರು ಎಂಬ ಮಾತು ಈ ಮೊದಲೇ ಬಂದಿದೆ. ವಿದ್ಯಾರ್ಥಿ ತಿಳಿದುಕೊಳ್ಳಬೇಕಾದ ವಿಷಯವನ್ನು ಪರಭಾಷೆಯಲ್ಲಿ ಕೇಳುವಾಗ ಅವನ ಮನಸ್ಸು ವಿಷಯ ಗ್ರಹಣ ಮತ್ತು ಭಾಷಾಗ್ರಹಣಗಳ ಗೊಂದಲದಲ್ಲಿ ಸಿಲುಕಿ ತಿಳಿಯದಂತಾಗುತ್ತದೆ. ಮಾತೃಭಾಷೆಯಲ್ಲಿ ಈ ರೀತಿಯ ತೊಳಲಾಟವು ಬಾರದು. ತಮ್ಮ ಭಾಷೆ, ಸಂಸ್ಕೃತಿ ಮತ್ತು ಪರಂಪರೆಗಳ ಆಧಾರದ ಮೇಲೆ ಹೊರ ಜಗತ್ತಿನ ಬೌದ್ಧಿಕ, ನೈತಿಕ, ಸಾಂಸ್ಕೃತಿಕ ವಿಚಾರಗಳನ್ನು ಧಾರಾಳವಾಗಿ ಸ್ವೀಕರಿಸಬಹುದೆಂದು ಠಾಕೂರರು ಸಾರಿ ಹೇಳಿದರು. ನಿಜವಾದ ಶಿಕ್ಷಕನನ್ನು ದೊರಕಿಸುವುದೇ ಕಠಿಣ ಕೆಲಸವೆಂಬುದನ್ನು 'ಶಿಕ್ಷಣ ಸಮಸ್ಯೆ' (Problem of Education : 1906) ಎಂಬ ತಮ್ಮ ಲೇಖನದಲ್ಲಿ ವಿವರಿಸಿದ್ದಾರೆ. ಅಂಥವರನ್ನು ಹುಡುಕಿದ ನಂತರ ಪಾಠಕ್ರಮ, ಶಿಸ್ತು ಮೊದಲಾದ ವಿಷಯಗಳನ್ನು ನಿರ್ಣಯಿಸುವುದು ಸುಲಭವೆಂದು ಅವರು ಹೇಳುತ್ತಾರೆ. ಶಿಕ್ಷಕನ ಉದ್ಯೋಗ ಮತ್ತು ಜ್ಞಾನಕ್ಕಿಂತ ಅವನ ಇರುವಿಕೆಯೇ ಬಹಳ ಮಹತ್ವದ್ದು. ಕೇವಲ ಭಾರವಾದ ಪಾಂಡಿತ್ಯಕ್ಕಿಂತ ಅದು ಪ್ರಕಾಶಮಾನವಾಗಿರುವುದು ಮುಖ್ಯ. ಅಂತಹ ಬೆಳಕನ್ನೀಯುವ ಮನೋಭಾವನೆ ಶಿಕ್ಷಕನಲ್ಲಿರಬೇಕಾದ ಗುಣ. ಶಿಕ್ಷಕ ಮತ್ತು ವಿದ್ಯಾರ್ಥಿಗಳ ಮಾನಸಿಕ ಮಿಲನ ಮತ್ತು ಹೊಂದಾಣಿಕೆಗಳೇ ನಿಜವಾದ ಶಿಕ್ಷಣದ ಗುರಿ. ಶಿಕ್ಷಣವೆಂದರೆ ಒಂದು ದೀಪದಿಂದ ಇನ್ನೊಂದು ದೀಪವನ್ನು ಹೊತ್ತಿಸಿ ಬೆಳಕನ್ನುಂಟು ಮಾಡಿದಂತೆ. ಶಿಕ್ಷಕನು ಹೆಚ್ಚಿನದನ್ನು ಕಲಿಯುವದನ್ನು ಮರೆತರೆ ದೀಪವು ನಂದಿದಂತೆಯೇ ಎಂಬ ಭಾವನೆಯನ್ನು ರವೀಂದ್ರರು ವ್ಯಕ್ತಪಡಿಸಿದ್ದಾರೆ.

ಆರ್ಥಿಕ ಅಡಚಣೆಗಳು ಇಂದಿನ ಶಿಕ್ಷಕನನ್ನು ವಿದ್ಯಾರ್ಥಿಗಳನ್ನು ಹುಡುಕಲು ಒತ್ತಾಯಿಸುತ್ತವೆ. ಆದರೆ ಸ್ವಾಭಾವಿಕವಾದ ರೀತಿಯಲ್ಲಿ ನೋಡಿದರೆ, ವಿದ್ಯಾರ್ಥಿಗಳೇ ಶಿಕ್ಷಕರನ್ನು ಹುಡುಕಿಕೊಂಡು ಹೋಗಬೇಕು. ಶಿಕ್ಷಕನು ಈಗ ವ್ಯಾಪಾರಿಯಾಗಿದ್ದು, ಗಿರಾಕಿಗಳಿಗಾಗಿ ಅಡ್ಡಾಡುವ, ಶಿಕ್ಷಣದ ಮಾರಾಟದಲ್ಲಿ ತೊಡಗಿದ್ದಾನೆ. ಅವನಲ್ಲಿ ಮಾರಾಟಕ್ಕಿರುವ ಸಾಮಾನುಗಳ ಪಟ್ಟಿಯಲ್ಲಿ ಮಮತೆ,

ಆದರ, ಶ್ರದ್ಧೆ ಅಥವಾ ಯಾವುದೇ ಭಾವನೆಯನ್ನು ಕಾಣುವಂತಿಲ್ಲ. ಅವನು ತನ್ನ ಸಾಮಾನನ್ನು ಮಾರಿದ ಮೇಲೆ ಪಗಾರದ ರೂಪದಲ್ಲಿ ಅದಕ್ಕೆ ಹಣ ಸಂದಾಯವಾಗಿರುತ್ತದೆ. ಅನಂತರ ವಿದ್ಯಾರ್ಥಿಗಳ ಜೊತೆಗೆ ಅವನ ಕೆಲಸವೇನೂ ಇಲ್ಲ. ಆದರೆ ಇಂದಿನ ಪ್ರತಿಕೂಲ ಪರಿಸ್ಥಿತಿಯಲ್ಲೂ ತಮ್ಮ ಅಂತಶ್ಶಕ್ತಿಯಿಂದ ಹಣಕಾಸಿನ ವಿಚಾರವನ್ನು ಅಷ್ಟೊಂದು ಮಹತ್ವದ್ದೆಂದು ಗಣಿಸದೆ ಕಾರ್ಯಪ್ರವೃತ್ತರಾದ ಶಿಕ್ಷಕರು ಕೆಲವರಾದರೂ ನಮ್ಮ ದೇಶದಲ್ಲಿ ಇನ್ನೂ ಇದ್ದಾರೆ. ಇವರಲ್ಲಿಯೇ ಒಬ್ಬನನ್ನು ಗುರುವಿನ ಸ್ಥಾನದಲ್ಲಿ ಎತ್ತಿ ಹಿಡಿಯಬೇಕು. ಅವನು ಗುರುವಾದಾಗ ತನ್ನ ಜೀವನದಿಂದ, ಶಿಷ್ಯರಲ್ಲಿ ಜೀವ ತುಂಬುವುದರಿಂದ, ತನ್ನ ವಿದ್ಯೆಯಿಂದ ಅವರ ಹಣತೆಯನ್ನು ಹೊತ್ತಿಸುವುದರಿಂದ ಮತ್ತು ತನ್ನ ಪ್ರೀತಿಯಿಂದ ಅವರನ್ನು ಸಂತೋಷಗೊಳಿಸುವದರಿಂದ ಒಳ್ಳೆಯ ಹೆಸರು ಬರುತ್ತದೆಂಬುದನ್ನು ಆತ ಮರೆಯಲಾರ.

ಠಾಕೂರರು ವ್ಯಕ್ತಿಯ ಪ್ರಯತ್ನ ಮತ್ತು ಸ್ವಾತಂತ್ರ್ಯಗಳಲ್ಲಿ ಶ್ರದ್ಧೆಯನ್ನಿರಿಸಿಕೊಂಡುದರಿಂದ ಕಡ್ಡಾಯದ ನಿಯಮಗಳನ್ನು ಅಷ್ಟೊಂದು ನಂಬಲಿಲ್ಲ. ಭಾರತೀಯ ಸಂಸ್ಕೃತಿ, ಧ್ಯೇಯ ಮತ್ತು ಪರಂಪರೆಗಳನ್ನು ಆದರದಿಂದ ಕಂಡರೂ ಪಾಶ್ಚಾತ್ಯರ ಪ್ರಭಾವದಿಂದ ಅವುಗಳಲ್ಲಿ ಬದಲಾವಣೆ ಮಾಡಿಕೊಳ್ಳಬೇಕಾಗಿದೆಯೆಂಬ ಅಂಶವನ್ನು ಗುರುತಿಸಿದ್ದರು. ಹೊಸತನವನ್ನು, ಹೊಸಹೊಸ ಸಂಶೋಧನೆಗಳನ್ನು ಸ್ವೀಕರಿಸಲು ರವೀಂದ್ರರ ಮನಸ್ಸು ಯಾವಾಗಲೂ ಇಷ್ಟಪಡುತ್ತಿತ್ತು. ಆದರಿಂದಲೇ ಅವರು ಬದಲಾವಣೆಯೇ ಜೀವನದ ತತ್ವವೆಂಬ ಮಾತನ್ನು ಸಾರಿ ಹೇಳಿದರು. ಹಲವಾರು ಭಾಷೆ ಮತ್ತು ಜನಾಂಗಗಳಿದ್ದಾಗ್ಯೂ ಭಾರತವು ಅಂತರ್‌ರಾಷ್ಟ್ರೀಯ ರಂಗದಲ್ಲಿ ವಿಶಿಷ್ಟವಾದ ಪಾತ್ರವನ್ನು ವಹಿಸಬೇಕಾಗುತ್ತದೆಂಬ ಮಾತನ್ನು ಠಾಕೂರರು ತಮ್ಮ 'ಶಿಕ್ಷಣ ಸಮನ್ವಯ' (Unity of Education) ಎಂಬ ನಿಬಂಧದಲ್ಲಿ ಎತ್ತಿ ತೋರಿಸಿದ್ದಾರೆ. ಪ್ರೊ. ಹುಮಾಯೂನ್ ಕಬೀರ ಅವರು ಹೇಳುವಂತೆ ಶಾಂತಿನಿಕೇತನದ ಸ್ಥಾಪನೆಗಿಂತ ಪೂರ್ವದ ಅವರ ಬರಹಗಳ ಉದ್ದೇಶವೆಲ್ಲ ಮಾತೃಭಾಷೆಯಲ್ಲಿಯೇ ಶಿಕ್ಷಣವನ್ನು ಕೊಡಬೇಕೆಂಬುದನ್ನು ತಿಳಿಸುವದೇ ಆಗಿತ್ತು. ಶಾಂತಿನಿಕೇತನವನ್ನು ಸ್ಥಾಪಿಸಿದ ನಂತರ ಅವರ ದೃಷ್ಟಿಯೆಲ್ಲವೂ ನಿಸರ್ಗದ ಸನ್ನಿಧಿಯಲ್ಲಿ ವಿದ್ಯಾರ್ಥಿಗಳಿಗೆ ರಾಷ್ಟ್ರೀಯ ಗುಣಗಳನ್ನು ಕಲಿಸಲು ಶಾಲೆಯನ್ನು ಕಟ್ಟುವುದರಲ್ಲಿಯೇ ಮಗ್ನವಾಗಿತ್ತು. ಅನುಭವ ಮತ್ತು ಸಹಾನುಭೂತಿಯಿಂದ ರವೀಂದ್ರರು ಪಕ್ವವಾದಂತೆಲ್ಲ ಮಾನವನಲ್ಲಿ ನಂಬುಗೆಯನ್ನೇ ಆಧಾರವಾಗಿರಿಸಿಕೊಂಡು ಬೆಳೆಯಿಸಿಕೊಂಡ ವಿಶ್ವಮಾನವ ದೃಷ್ಟಿ ಮತ್ತು ಮಾನವೀಯತೆಯನ್ನು ರೂಪಿಸುವಂತೆ ಪೌರಸ್ತ್ಯ ಪಾಶ್ಚಾತ್ಯ ಮೌಲ್ಯಗಳನ್ನು ಸಮನ್ವಯಗೊಳಿಸುವ ಉದ್ದೇಶದಿಂದ 'ವಿಶ್ವಭಾರತಿ' ಎಂಬ ವಿಶ್ವವಿದ್ಯಾಲಯವನ್ನು ಸಂಸ್ಥಾಪಿಸಲು ತೊಡಗಿದರು.

ಶ್ರೀ ವಿ. ಸೀತಾರಾಮಯ್ಯನವರ ಮಾತಿನಲ್ಲಿ ಹೇಳಬಹುದಾದರೆ, "ಸದ್ಯ ನಮಗೆ ಸಂಪತ್ತಿಲ್ಲ, ಐಶ್ವರ್ಯವಿಲ್ಲ, ಶಕ್ತಿ ದರ್ಪಗಳಿಲ್ಲ ನಿಜ. ಆದರೆ ಸಿದ್ಧಿಗೆ ಬೇಕಾದ ಇತರ ಸಾರಾಂಶಗಳು ಇವೆ. ಅರಸಿದರೆ ಸಿಕ್ಕುವವು. ಅಂಥ ದಾನಕ್ಕೆ ನಮ್ಮನ್ನು ಸಿದ್ಧಗೊಳಿಸುವದೇ (ಠಾಕೂರರಿಗೆ) ಶಿಕ್ಷಣದ ಗುರಿ, ಆ ಪ್ರಯತ್ನವೇ ಶಿಕ್ಷಣದ ವಿಧಾನ" ('ರವೀಂದ್ರ ಪ್ರಶಸ್ತಿ' ೧೯೬೨)

ಶಿಕ್ಷಣ ಕ್ಷೇತ್ರದಲ್ಲಿ ಕಾಲಕಾಲಕ್ಕೆ ಹೊಸಪ್ರಯೋಗಗಳು ನಡೆದಿದ್ದು ಪರಿಸ್ಥಿತಿಯಲ್ಲಿ ಸಾಕಷ್ಟು ಸುಧಾರಣೆಗಳು ಕಂಡು ಬಂದಿವೆಯಾದರೂ ಸುಮಾರು ನೂರು ವರ್ಷಗಳ ಹಿಂದೆಯೇ ರವೀಂದ್ರನಾಥ ಠಾಕೂರರು ವ್ಯಕ್ತಪಡಿಸಿದ ಎಷ್ಟೋ ವಿಚಾರಗಳು ಹಾಗೂ ಚಿಂತನೆಗಳು ಇಂದಿಗೂ ಪ್ರಸ್ತುತವಾಗಿವೆಯೆಂಬುದನ್ನು ಮರೆಯುವಂತಿಲ್ಲ.

('ಹೊಸತು' ವಿಶೇಷ ಸಂಚಿಕೆ : ೨೦೦೯)

೧೯

## 'ಪಂಪಾಯಾತ್ರೆ' : ಒಂದು ನಿತ್ಯ ನೂತನ ಕೃತಿ

"ಹಂಪೆ ಪುಣ್ಯ ಕ್ಷೇತ್ರ; ಇಥಾ ಪುಣ್ಯಸ್ಥಳದಲ್ಲಿ ಇಷ್ಟು ಚೇಳು, ಮೊಂಡರಕಪ್ಪೆ ಏಕಿವೆಯೊ ಆ ಪಂಪಾಪತಿಗೇ ಗೊತ್ತು"

"ಹಾಸುಗೆ ಗೀಸುಗೆ ಹಾಗೇ ಇರಲಿ ಸಾರ್, ನೀವು ಯಾರು ಏನು ಬೇಕಾದರೂ ಮಾಡಿಕೊಳ್ಳಿ ನಾನಂತೂ ಮಲಗಿಕೊಳ್ಳುವದಿಲ್ಲ" ಎಂದು ವೆಂಕಟೇಶಯ್ಯನವರು ಹೇಳಿದರು.

ಯಜಮಾನರು - ಇನ್ನೇನು ಮಾಡುತ್ತೀರಿ, ಆದರೆ?

ವೆಂ - ಹೀಗೇ ಕೂತುಕೊಂಡೂ ನಿಂತುಕೊಂಡೂ ರಾತ್ರಿ ದಬ್ಬುತ್ತೇನೆ.

ರಾಯರು - ನನಗೂ ಹಾಗೇ ತೋರುತ್ತೆ ಸಾರ್, ದೇವರು ಗೀವರು ಎಲ್ಲ ಸಾಕು. ಚೇಳಿನ ಕೊಂಡಿಯ ದರುಶನದಿಂದಲೇ ಮುಕ್ತಿ ಬಂದಿತು.

ಪ್ರಾರಂಭದ ವಾಕ್ಯದಿಂದಲೇ ಓದುಗನನ್ನು ಬೇರೊಂದು ಪ್ರಪಂಚಕ್ಕೆ ಕರೆದೊಯ್ಯುವ ವಿ.ಸೀ. ಯವರ 'ಪಂಪಾಯಾತ್ರೆ' ಕನ್ನಡದ ಮೊದಲ ಪ್ರವಾಸ ಕಥನ. ಅದು ಅವರ ಮೊದಲ ಕೃತಿಯು ಕೂಡ. ೧೯೨೫ರಷ್ಟು ಹಿಂದೆ ಯಾವಬಗೆಯ ಸೌಕರ್ಯವೂ ಇಲ್ಲದಿರುವ ಕಾಲದಲ್ಲಿ ಅವರು ಕೈಕೊಂಡ 'ಹಾಳುಹಂಪೆ'ಯ ಪ್ರವಾಸದ ಒಂದೆರಡು ದಿನದ ವಿಶಿಷ್ಟ ಅನುಭವ ಅವರ ಅನಿರ್ಬಂಧಿತ ಭಾವಲಹರಿಯ ಅನನ್ಯ ಶೈಲಿಯಿಂದ 'ಪಂಪಾಯಾತ್ರೆ'ಯಾಗಿ ಪರಿಣಮಿಸಿದೆ. ಕಾಲ್ನಡಿಗೆಯಿಂದಲೇ ಇವರು ಯಾತ್ರೆ ಮಾಡಿದ್ದು ಇಂದಿನವರಿಗೆ ಅಚ್ಚರಿ ಹುಟ್ಟಿಸಬಹುದು. ಇಲ್ಲಿಬರುವ ಯಜಮಾನರು - ಬೆಳ್ಳಾವೆ ವೆಂಕಟನಾರಾಯಣಪ್ಪನವರು. ರಾಯರು - ಡಿ.ವಿ. ಗುಂಡಪ್ಪನವರು, ವೆಂಕಟೇಶಯ್ಯ - ಟಿ.ಎಸ್. ವೆಂಕಣ್ಣಯ್ಯನವರು. ಮೂರ್ತಿ - ಎಂ.ಆರ್. ಶ್ರೀನಿವಾಸಮೂರ್ತಿಯವರು. ಇವರಲ್ಲಿ ವಿ.ಸೀ.ಯವರೇ ಚಿಕ್ಕವರು. ಆದರೂ ಅವರೆಲ್ಲರೂ ಇಲ್ಲಿ ವ್ಯವಹರಿಸುವುದು ಸಾಮಾನ್ಯ ಮಾನವರಂತೆಯೇ. ವಿದ್ವಾಂಸರೂ ರಸಿಕರೂ ಆದ ಇವರ ಸಹಯೋಗದಿಂದ ಆ ಸನ್ನಿವೇಶ ಅಸಾಧಾರಣವಾಯಿತು. ನಾಲ್ಕನೆಯ ಆವೃತ್ತಿಯ ಮುನ್ನುಡಿಯಲ್ಲಿ ವಿ.ಸೀ.ಯವರೇ ನುಡಿದಂತೆ 'ಅವರ ಸಾಹಚರ್ಯ ಸ್ಥಾನದ ಹಿರಿಮೆ, ಅದರ ಚರಿತೆಯ ಆಳದಲ್ಲಿ ಹುದುಗಿರುವ ರಾಮಾಯಣ ಕಾಲದ, ವಿಜಯನಗರ ಕಾಲದ ಮತ್ತು ಕಲೆಯ ಇತಿಹಾಸದ ಸಾಂಗತ್ಯ ಅದಕ್ಕೆ ಒಂದು ವಿಶೇಷ ಮೆರುಗನ್ನು ಕೊಟ್ಟಿತು'. ವಿ.ಸೀ.ಯವರ ಪ್ರಬಂಧ ಪ್ರತಿಭೆಗೆ ಇಲ್ಲಿ ಸ್ವಚ್ಛಂದ ವಿಹಾರ. "ವರ್ಣನೆಯೊಂದಿಗೆ ನಮ್ಮ ಭಾವನೆಗಳನ್ನು ಬೆರೆಸಿ,

ಮನಸನ್ನು ಅದರೊಳಗೆ ಹೊಗಿಸಿ ಸ್ವಚ್ಛಂದವಾಗಿ ಬರೆದಿರುವವರು ಕನ್ನಡದಲ್ಲಿ ಕಮ್ಮಿ ಎಂಬ ವಿಶೇಷ ಸಂಗತಿ" ಅವರ ಇಂಥ ಬರವಣಿಗೆಗೆ ಪ್ರೇರಣೆ ನೀಡಿದ್ದು ಕನ್ನಡದ ಪುಣ್ಯವೆಂದೇ ಹೇಳಬೇಕು.

ಪ್ರವಾಸದಲ್ಲಿಯ ಸಣ್ಣಸಣ್ಣ ಘಟನೆಗಳೂ, ಸನ್ನಿವೇಶಗಳೂ ಸಜೀವ ವಿವರಣೆ ಅಥವಾ ನಿರೂಪಣೆಯಿಂದ ಆಪ್ತವಾಗಿ ಗಮನ ಸೆಳೆಯುತ್ತವೆ. ಕಾಫೀ ಪ್ರಸಂಗವನ್ನೇ ನೋಡಿ: "ಯಜಮಾನರು ಬಹು ನಿಷ್ಠುರು. ಅವರಿಗೆ ಕಾಫೀ ಟೀಗಳ ಅಭ್ಯಾಸವಿಲ್ಲ. ನಾನು ಬಹಳ ಕಷ್ಟಪಟ್ಟು ಉರಿಯುವ ಬಿಸಿಲಿನಲ್ಲಿ ಅಂಗಡಿಗೆ ಓಡಿ ಹೋಗಿ ಹೊಸಪೇಟೆಯಿಂದ ಒಂದು ಪೌಂಡು ಪುಡಿಯನ್ನು ತಂದಿದ್ದೆ. ...... 'ನಿಮಗೆ ಬೇಕಾದಷ್ಟು ಕಾಫೀ ಮಾಡಿ ಕುಡಿಯಿರಪ್ಪ. ಆಮೇಲೆ ಮುಖಗಳನ್ನು ಪಿಟೀಲು ಕಮಾನುಗಳಂತೆ ಉದ್ದ ಎಳೆದು ಜೋಲು ಹಾಕಬೇಡಿ' ಎಂದು ಅವರು ಹೇಳಿದರು. ವಸಂತ ಕುಸುಮಗಳ ಹಾಗೆ ನಮ್ಮ ಮುಖ ಕುಸುಮಗಳು ಅರಳಿ ಬಗ್ಗಿದವು... ಹಂಪೆಯ ಕಾಫಿ ಎಷ್ಟು ರುಚಿಯಾಗಿತ್ತೊ !" ಈ ಕಾಫಿ ಪ್ರಸಂಗ ಮೂರು ನಾಲ್ಕು ಪುಟಗಳಷ್ಟು ತನ್ನ ರುಚಿಯನ್ನು ಓದುಗರಿಗೆ ನೀಡುತ್ತ ಸಾಗುತ್ತದೆ.

ವಿರೂಪಾಕ್ಷ ದೇವಸ್ಥಾನವ ಮುಂದೆ ಅಗಲವಾದ ತೇರು ಬೀದಿಯಲ್ಲಿ ಸಾಗುತ್ತಿರುವಾಗ ಇಕ್ಕಡೆಗಳಲ್ಲಿಯೂ ಕಲ್ಲು ಮಂಟಪಗಳು; ರಸ್ತೆಯ ಕೊನೆಯಲ್ಲಿ ಎಡಗಡೆ ಬೃಹದಾಕಾರದ ಕಲ್ಲು ಬಸವನ ವಿಗ್ರಹ. ಅದನ್ನು ಕಂಡಾಗ ಮನುಷ್ಯ ಸಹಜ ಭಾವನೆ, ಅಚ್ಚರಿ ಲೇಖಕರಲ್ಲಿ ಮೂಡುತ್ತದೆ. "ಆಗಿನ ಕಾಲದವರಿಗೆ ಮಾಡುವದಕ್ಕೆ ಬೇರೆ ಏನೂ ಕೆಲಸವಿರಲಿಲ್ಲವೆಂದು ನರಸಿಂಹ ವಿಗ್ರಹಗಳನ್ನು ಕೆತ್ತುತ್ತಿದ್ದರು. ಕೆಲಸದ ಶ್ರಮವೂ ಅಗಾಧತೆಯೂ ಅವರಿಗೆ ತೋರುತ್ತಲೇ ಇರಲಿಲ್ಲವೇನೊ? ಇಲ್ಲವಾದರೆ ಹತ್ತು ಹದಿನೈದು ಅಡಿ ಅಗಲದ ಪಾಣಿಪೀಠದ ಮೇಲೆ ಆರು ಏಳು ಅಡಿಗಳ ಉದ್ದದ ಶಿವಲಿಂಗ ಮೂಡಿಸುತ್ತಿದ್ದರೆ? ಹದಿನೈದು ಇಪ್ಪತ್ತು ಅಡಿ ಎತ್ತರದ ನರಸಿಂಹ ಸ್ವಾಮಿ! ಅಂಥ ಅವುಗಳ ಹೆಸರು ಬಲ್ಲಿರೇನು? ಒಂದು ಸಾಸಿವೆ ಕಾಳಿನ ಗಣೇಶ, ಇನ್ನೊಂದು ಕಡಲೆ ಕಾಳಿನ ಗಣೇಶನಂತೆ. ಹೀಗೆಯೇ ಹಲಸಿನಕಾಯಿ ಗಣೇಶನೆಂದು ಒಂದು ಮಾಡಿದ್ದರೆ ಹೇಗಿರುತ್ತಿದ್ದಿತೊ! ನಾನು ಊಹಿಸಲಾರೆ" ಇಂಥ ವಿನೋದಮಯವಾದ ಟೀಕೆ ಟಿಪ್ಪಣಿಗಳು ಒಮ್ಮೊಮ್ಮೆ ಗಂಭೀರವಾಗಿ, ಒಮ್ಮೊಮ್ಮೆ ವಿಷಾದದ ಅಂಶದಿಂದ ಕೂಡಿ ಈ ಪ್ರವಾಸ ಕಥನದ ವಿನ್ಯಾಸವನ್ನು ರೂಪಿಸುತ್ತವೆ.

ವಿ.ಸೀ.ಯವರದು ಮೂಲತಃ ಕವಿ ಸತ್ವವಾದ್ದರಿಂದ ಎಷ್ಟೋ ದೃಶ್ಯಗಳನ್ನು ಸೊಗಸಾಗಿ ಕಣ್ಣಮುಂದೆ ಕಟ್ಟಿ ತನ್ಮಯಗೊಳಿಸುತ್ತಾರೆ. ಕೋದಂಡರಾಮಸ್ವಾಮಿ ದೇವಸ್ಥಾನದ ಎದುರಿನಲ್ಲಿ ತುಂಗಭದ್ರೆ ನಮ್ರಳಾಗಿ ಪ್ರಣಾಮಗೈಯಲೆಳಸಿ ಪ್ರದಕ್ಷಿಣೆ ಮಾಡಿ ಮುಂದೆ ಹೋಗುವಂತಿದೆ. ನದಿಯ ಆಚೆ ಕಡೆಯ ದಂಡೆಯಲ್ಲಿ ಶ್ರೀ ರಾಮದೂತನು ಹುಟ್ಟಿದನೆಂಬ ಅಂಜನಾಪರ್ವತ. ನಮಗೆ ಎಡಗಡೆ ಬೆಟ್ಟಗಳ ನಡುವೆ ಜಾಗಮಾಡಿಕೊಂಡು ಹರಿದು ಬರುತ್ತಿರುವ ನದಿ. ವಿಶಾಲವಾದ ನಮ್ಮ ಮುಂದಿನ ಜಲಾಂಗಣ, ತುಂಗಭದ್ರೆ ಅಲ್ಲಿಂದ ಮುಂದೆ ಅತಿ ಸಂಭ್ರಮದಿಂದ

ಪ್ರಯಾಣ ಮಾಡುತ್ತ ಎದುರಿಗೆ ಸಿಕ್ಕಿದ ಕಲ್ಲುಬಂಡೆಗಳನ್ನು ಅಪ್ಪಳಿಸಿಕೊಂಡು ಸೀರ್ಪನಿಗಳನ್ನು ಚೆಲ್ಲಿಕೊಂಡು ಅವುಗಳ ಮೇಲೆ ಝಿಲ್ಲನೆ ಹರಿದು, ಸುಳಿದು ಹೋಗುತ್ತಿರುವ ದೃಶ್ಯ" ಹೀಗೆ ಓದುಗರ ಮನಸ್ಸಿನಲ್ಲಿ ಗಂಭೀರಭಾವತರಂಗಗಳು ಸಹಜವಾಗಿಯೇ ಉದಯಿಸುತ್ತವೆ.

ನದಿಯ ಆಚೆ ಕಡೆ ಇರುವ ಕಲ್ಲು ಮಂಟಪವೇ ಸಂನ್ಯಾಸಿ ದಿಬ್ಬವೆಂದು ತಿಳಿದಾಗ ರಾಯರು (ಡಿವಿಜಿ) ಹಾಗೇ ಧ್ಯಾನಿಸುತ್ತ ನಿಂತರು. 'ವಿದ್ಯಾರಣ್ಯರ ಮನಸ್ಸು ಧ್ಯಾನದಲ್ಲಿ ಮುಳುಗಿದ್ದನ್ನು ಹೇಳುತ್ತ 'ಅವರನ್ನು ನಾಸ್ತಿಕರೆಂದು ಕರೆಯುವರಾರು?' ಎಂದು ಲೇಖಕರಿಗೆ ಅನಿಸಿದ್ದರಲ್ಲಿ ಆಶ್ಚರ್ಯವಿಲ್ಲ.

ಅನತಿದೂರದಲ್ಲಿಯೆ ಅರಸರು ಸುವರ್ಣದಾನಗಳನ್ನು ಮಾಡುತ್ತಿದ್ದರೆನ್ನಲಾದ ಎತ್ತರವಾದ ತುಲಾಪುರುಷದಾನಸ್ತಂಭಗಳನ್ನು ನೋಡಿ ವಿ.ಸೀ.ಯವರ ವೈಚಾರಿಕ ಪ್ರಜ್ಞೆ ಪ್ರಶ್ನಿಸುತ್ತದೆ : "ಅದು ಶಾಂತಿ ಕರ್ಮವೊ ಶಾಸ್ತ್ರವಿಧಿಯೋ ತಮ್ಮ ವೈಭವ ದರ್ಪಗಳ ಉದ್ದಂಡ ಧೋರಣೆಯನ್ನು ಲೋಕಕ್ಕೆ ಪ್ರಕಟಿಸಿ ಖ್ಯಾತಿಗೊಳ್ಳಲು ಹಿಂದಿನವರು ನಡೆಸುತ್ತಿದ್ದ ಡಂಭವೃತ್ತಿಯೊ ಇವೆಲ್ಲವನ್ನು ಹೇಳುವವರಾರು? ನಮ್ಮದು ಅತಿವೃಷ್ಟಿ ಅನಾವೃಷ್ಟಿಯ ಖಂಡ. ಇಲ್ಲಿ ಯಾವ ವಿಷಯದಲ್ಲಿಯೂ ಜನರಲ್ಲಿ ಸಮತೆಯಾಗಲಿ ಸ್ತಿಮಿತತೆಯಾಗಲಿ ಮಧ್ಯ ವೃತ್ತಿಯಾಗಲಿ ಇರದು".

ಅದೇ ಕಲೆಯ ವಿಷಯಕ್ಕೆ ಬಂದಾಗ ವಿ.ಸೀ. ಮೈಮರೆಯುತ್ತಾರೆ. ವಿಠ್ಠಲಸ್ವಾಮಿ ಗುಡಿಯ ಚಿತ್ರಕೃತಿಯ ಸಂವಿಧಾನ, ಶಿಲ್ಪಕಲಾ ಕೌಶಲ್ಯವನ್ನು ಮನವಾಸಾರೆ ಅನುಭವಿಸುತ್ತಾರೆ. ಇತ್ತಿಂದತ್ತ, ಅತ್ತಿಂದಿತ್ತ ಆ ಸೊಬಗನ್ನೇ ಸವಿಯುತ್ತಿರುವಂತೆಯೇ ಪ್ರಬಂಧಕಾರನ ಚಿಕಿತ್ಸಕ ಬುದ್ಧಿ ಮೇಲೆದ್ದು ನಿಲ್ಲುತ್ತದೆ. "ಇಲ್ಲಿ ಇಷ್ಟು ಶೃಂಗಾರವೇತಕೆ ? ಎಂದು ಒಂದು ಸಲ ಪ್ರಶ್ನೆ ಬಂತು. ದೇವರು ಇಷ್ಟು ಸೌಂದರ್ಯವನ್ನು ಒಂದೇ ಕಡೆ ರಾಶಿ ಹಾಕಿ ಮಿಕ್ಕ ಭಾಗಗಳಿಗೆ ಬಡತನವನ್ನೇಕೆ ಕೊಟ್ಟನೊ! ಅವನಿಗೂ ಹೀಗೆ ತಕ್ಷಣದ ಬುದ್ಧಿ ಬಂದ ಮೇಲೆ ಸಾಮಾನ್ಯರು ನಿಷ್ಪಕ್ಷಪಾತಿಗಳಲ್ಲವೆಂದು ಅವರನ್ನು ಏಕೆ ಆಕ್ಷೇಪಿಸಬೇಕು ?" ಎಂದು ತಮ್ಮಷ್ಟಕ್ಕೆ ಅಂದುಕೊಳ್ಳುತ್ತ ವರ್ತಮಾನಕ್ಕೆ ಸ್ಪಂದಿಸಿಬಿಡುತ್ತಾರೆ.

ಕಲ್ಯಾಣ ಮಂಟಪದ ಅಮೋಘ ಸೌಂದರ್ಯವನ್ನು ಸವಿಯುತ್ತ ಆ ರಾಜರ ಕಲಾಭಿರುಚಿ, ಅಲಂಕಾರದೃಷ್ಟಿ, ರಸಿಕತೆ ಇವುಗಳ ಬಗ್ಗೆ ಮೆಚ್ಚಿಕೊಳ್ಳುತ್ತಲೇ ಪದಚ್ಯುತರಾದ ದೇವತಾವಿಗ್ರಹಗಳು ಒಡೆದು ಬಿದ್ದಿರುವ ಇನ್ನು ಬೀಳುತ್ತಲೇ ಇರುವ ಕಟ್ಟಡಗಳು, ಅವುಗಳಿಗೆ ಒದಗಿದ ದುರ್ಗತಿಯಾದರೂ ಎಂಥದೆಂಬುದನ್ನು ನೋಡಿ .... ನೀತಿಗೊಳ್ಳಲಿ ಎಂದು ರಾಶಿರಾಶಿಯಾಗಿ ಬಿದ್ದಿರಬಹುದೆ ? ಎಂದು ಊಹಿಸುತ್ತಾರೆ.

ಹಂಪೆಯ ಆಕೃತಿಯನ್ನು, ಅಲ್ಲಿನ ಭೂಕಟ್ಟನ್ನು, ಪ್ರಕೃತಿ ರಮಣೀಯತೆಯನ್ನು ನೋಡಿದರೆ ಸಾಮಾನ್ಯರಾದವರ ಮಾನಸಿಕ ಉತ್ಸಾಹವೇ ಮೇಲೆ ಎತ್ತಿದಂತಾಗುತ್ತದೆನ್ನುವ ಲೇಖಕರು ನಿಸರ್ಗ ರಮಣೀಯತೆಯನ್ನು ಬಣ್ಣಿಸುವಾಗ ಅವರು ಹೃದಯ ತುಂಬಿ ಮಾತನಾಡುತ್ತಾರೆ. ಅಂಥಲ್ಲಿ ಯಾವ ಅಡ್ಡಡ್ಡ ಮಾತುಗಳಿಗೂ ಆಸ್ಪದವೀಯವುದಿಲ್ಲ. ಅಂಜನಾ ಪರ್ವತದ ತಪ್ಪಲಲ್ಲಿ ತಿಳಿಹಸಿರಿನ ಮೃದು ಚೌಕಟ್ಟಿನಲ್ಲಿ ನೆಲಸಿರುವ ಪ್ರಶಾಂತ ಪಂಪಾಸರಸ್ಸನ್ನು ಕಂಡಾಗ ಮನಸ್ಸಿನ

ಎಲ್ಲ ಅಲ್ಪ ಭಾವನೆಗಳೂ ದೇಹದ ಎಲ್ಲ ಪಾಪಗಳೂ ಮಾಯವಾದವು ಎನ್ನುತ್ತಾರೆ. "ಇಲ್ಲಿನದು ತಿಳಿಯಾಗಿ ಪೊಳೆವ ಪುಣ್ಯೋದಕ, ಶ್ರೀರಾಮಪಾದದಿಂದ ಪವಿತ್ರವಾದದ್ದು. ಕನ್ನಡಿಯಂತೆ ಶುಭ್ರ ತೇಜಸ್ಸಿನಿಂದ ಹೊಳೆವ ಅದರ ವಕ್ಷದಲ್ಲಿ ಅಲ್ಲಲ್ಲಿ ತಾವರೆ ನೈದಿಲೆ ಹೂಗಳು ಪಗಲೆಲ್ಲ ಅರಳಿದ್ದು ಈಗ ಅರ್ಧಅರ್ಧವಾಗಿ ಅತಿಗುಂಠಿತವಾಗುತ್ತಿರುವಂತಿದೆ. ಸೂಕ್ಷ್ಮ ಹೂಗಿಡಗಳೂ ಪರ್ವತ ಪಂಕ್ತಿಗಳೂ ತಮ್ಮ ಪ್ರತಿಬಿಂಬಗಳನ್ನು ಅದರೊಳಗೆ ಕಾಣುತ್ತ ಕೃತಕೃತ್ಯತೆಯನ್ನು ಪಡೆವಂತಿದೆ. ಉಗ್ರವಾಗಿ ಬೀಸುವ ಮಾರುತ ಕೂಡ, ಭಕ್ತಿಯಿಂದ ಮೃದುವಾಗಿ ಚಲಿಸಿ, ಸರಸ್ಸಿನ ಗೋಜಿಗೆ ಹೋಗದೆ ತನ್ನ ಸ್ವಚ್ಛಂದವನ್ನು ಮರೆತು, ಮೆಲ್ಲನೆ ಸುಳಿದು ಹೋಗುತ್ತಿದೆ. ಪಕ್ಕದ ಪರ್ವತ ಶಿಖರಗಳೊಂದಿಗೆ ಎಷ್ಟೋ ಬಾರಿ ಸರಸದಿಂದ ಕ್ರೀಡಿಸಿದ್ದ ಸಿಡಿಲುಗಳೂ ಪದಾಹತರಾಗಿ ಈ ಶಾಂತಿಯಲ್ಲಿ ಲಯವಾಗಿ ಹೋಗಿರಬೇಕು." ಭಾವಗೀತೆಗೂ ಲಲಿತಪ್ರಬಂಧಕ್ಕೂ ತೂಗುವಂತಿದೆ ಇಲ್ಲಿಯ ಶೈಲಿ.

ಆಗಲೇ ಸಂಜೆಯಾಗಿತ್ತು. ಆಕಾಶದಲ್ಲಿ ಕಾರ್ಮೋಡಗಳು ಹಾಕಿ ಸುತ್ತಲೂ ಕತ್ತಲು ಕಂದಿತ್ತು. ಜಾಗ್ರತೆ ಮನೆಗೆ ಹೋಗಿ ಸೇರಿ ಕೊಳ್ಳಲು ಈ ಪ್ರವಾಸಿಗಳು ಅಂಬಿನ ವೇಗದಿಂದ ಹೊರಟಾಗ ಮಿಂಚು ಗುಡುಗುಗಳ ಹಾವಳಿ ಹೆಚ್ಚಿ ಮಳೆ ಬಂದೇ ಬಿಟ್ಟಿತು. ವಿ.ಸೀ.ಯವರ ಕಥನ ಎಲ್ಲಿಯೂ ನೀರಸವಾಗದಂತೆ ನೋಡಿಕೊಳ್ಳುವದಷ್ಟೇ ಅಲ್ಲ, ಅವರ ನಿರೂಪಣಾ ಸಾಮರ್ಥ್ಯ ಇಂಥ ಸಂದರ್ಭಗಳ ಸ್ವಾರಸ್ಯವನ್ನು ನೂರಕ್ಕೆ ನೂರರಷ್ಟು ಜೀವಂತ ಗೊಳಿಸುವದನ್ನು ಇಲ್ಲಿ ಕಾಣಬಹುದು.

"ಒಂದೊಂದು ಹನಿ ಒಂದೊಂದು ನಲ್ಲಿಯ ಕಾಯಿನಷ್ಟು ಗಾತ್ರ; ತಡೆಯಲಾರದಷ್ಟು ರಭಸದಲ್ಲಿ, ತೀವ್ರಧಾರೆಯಲ್ಲಿ ಬಂದಿತು. ಮಳೆಯ ಜೊತೆಗೆ ಗಾಳಿ, ಗಾಳಿಯ ಜೊತೆಗೆ ಮಳೆ. ಈ ಕೋಲಾಹಲದ ಜೊತೆಗೆ ನಮ್ಮ ಛತ್ರಿಗಳು ದುರ್ದಮನೀಯುವಾಗಿ ಸ್ವತಂತ್ರ ವೃತ್ತಿಯನ್ನವಲಂಬಿಸಿದವು. ಅವುಗಳ ಮೇಲೆ ನಮಗಿದ್ದ ಇಷ್ಟು ದಿನದ ಅಧಿಕಾರವೂ ಈಗೊಂದು ನಿಮಿಷದಲ್ಲಿ ಹಾರಿ ಹೋಯಿತು. ಬಹು ದಿನ ಪರತಂತ್ರದಲ್ಲಿದ್ದ ಜನರು ಹೊರಗಣ ಬಲಾತ್ಕಾರದಿಂದ ದಂಗೆಯೆದ್ದು ಸ್ವತಂತ್ರ ಸಂಪಾದನೆಗೆ ಹೊರಟರೆ ಯಾವ ಯಾವ ವಕ್ರವೃತ್ತಿ ಚೇಷ್ಟೆಗಳನ್ನು ಮಾಡುವರೊ ಅದಕ್ಕಿಂತಲೂ ಹೆಚ್ಚಿನ ಚೇಷ್ಟೆ ಮಾಡಲಾರಂಭಿಸಿದವು. ನನ್ನ ಛತ್ರಿಯಂತೂ ಕೀಲುಗಳನ್ನು ಮೇಲಕ್ಕೆತ್ತಿ ತಲೆ ಕೆಳಗಾಗಿ ನಿಂತಿತು. ಸುರಿಯುವ ಮಳೆಯಲ್ಲಿ ಈ ಉತ್ಸವ ಬೇರೆ. ಸ್ನೇಹಿತರ ಲೇವಡಿ, ನಗಿ! ಬೇಕಾದಷ್ಟು ನಗಿ!! ಎಂದುಕೊಂಡೆ!!! ಹತ್ತಿರದಲ್ಲಿಯೇ, ಒಂದು ಹಳೆಯ ಆಲೆಯ ಮೇಲೆ. ಅಲ್ಲಿ ಇವರಂಥವರು ಇನ್ನು ಅನೇಕರು ಸೇರಿದ್ದರು. ಮಳೆಯಲ್ಲಿ ತೊಯ್ದ ಅವರೆಲ್ಲರ ಸ್ಥಿತಿ, ಸಾಮಾನ್ಯ ಜನತೆಯ ರೀತಿ, ನೀತಿ, ನಡಾವಳಿ, ವಿಚಿತ್ರ ತಮಾಷೆಗಳು ವಿ.ಸೀ.ಯವರ ಚಿತ್ರಕಶಕ್ತಿಗೆ ಒಂದು ಶ್ರೇಷ್ಠ ನಿದರ್ಶನದಂತಿದೆ.

ಪ್ರಕೃತಿಯ ಪ್ರಶಾಂತ ರಮಣೀಯತೆಯಂತೆಯೇ (ಪಂಪಾಸರಸ್ಸು)ರುದ್ರಭೀಕರತೆಯನ್ನು ಅಷ್ಟೇ ಸಮರ್ಥವಾಗಿ, ಪರಿಣಾಮಕಾರಿಯಾಗಿ ಇವರು ಹೇಗೆ ನಮ್ಮ ಅನುಭವಕ್ಕೆ ತಾಗಿಸಬಲ್ಲರೆಂಬುದಕ್ಕೆ ಹಿಂದೆ ವರ್ಣಿಸಿದ ಮಳೆಯ ಸನ್ನಿವೇಶವೇ ಇನ್ನಷ್ಟು ಭಯಂಕರವಾಗಿ ಹೀಗೆ ಮುಂದುವರಿಯುತ್ತದೆ:

"ಈಗ ಹೃದಯವಿದ್ರಾವಕವಾಗಿ ದೇಹ..... ಕೀಲುಗಳ ಮೇಲೆ ನಾವು ನಡೆದು ಹೋಗುತ್ತಿರುವಾಗ, ಕಾಲ್ಕೆಳಗಿನ ಭೂಮಿಕಂಪಿಸಿ ಆ ಕಂಪನ ರಭಸ ನಮ್ಮೆಲ್ಲರನ್ನು ಐವತ್ತು ಅಡಿ ಮೇಲಕ್ಕೆ ಎತ್ತಿಹಾಕಿ ಬಿಟ್ಟಿದ್ದರೆ ನಮ್ಮ ಆತ್ಮ ಹೇಗೆ ತಲ್ಲಣಿಸಿ ಹೋಗಬಹುದಿತ್ತೊ ಅದಕ್ಕಿಂತಲೂ ಹತ್ತರಷ್ಟು ಪ್ರಬಲವಾದ ತಲ್ಲಣ ಉಂಟಾಯಿತು. ಅದು ಸುತ್ತಲ ಪ್ರದೇಶವನ್ನು ಹತ್ತಿಸಿ ಉರಿಸಿ ತನ್ನ ವಿದ್ಯುನ್ಮೊರರೌದ್ರಗಳಿಂದ ತಿವಿದುಕೊಂಡು ಹೋಗುವುದನ್ನು ಆ ಸನ್ನಿವೇಶದಲ್ಲಿ ಅನುಭವಿಸಬೇಕು!" ಇದನ್ನು ಓದುತ್ತಿರುವಂತೆಯೇ ಓದುಗನು ಅದನ್ನು ಖಂಡಿತವಾಗಿಯೂ ಅನುಭವಿಸಿ ಬಿಡುತ್ತಾನೆ.

ಈ ಐವರ ಜೊತೆಗೆ 'ಮಾರ್ಗದರ್ಶಿ' ಚೆನ್ನಯ್ಯನ ಪಾತ್ರವೂ ಸೇರಿಕೊಂಡಿರುವುದು ಯಾತ್ರೆಗೆ ಹೆಚ್ಚಿನ ಕಳೆಯನ್ನು ತಂದುಕೊಟ್ಟಿರುವುದಲ್ಲದೆ ಅದನ್ನು ಹೆಚ್ಚು ಮಾನವೀಯವಾಗಿಯೂ ಮಾಡಿದೆ. ಮೊದಲ ದಿನವೇ ರಾತ್ರಿ ಹಾವು ಚೇಳುಗಳ ಭಯದಿಂದ ನಿದ್ದೆಗೆಟ್ಟು ಕಕ್ಕಾಬಿಕ್ಕಿಯಾದಾಗ ಇವರ ಈ ದುಸ್ಥಿತಿಯ ಹುಚ್ಚುಸಂಭ್ರಮವನ್ನು ದೂರದಿಂದ ನೋಡಿದ ಬೈರಾಗಿ ಚೆನ್ನಯ್ಯ ಎಲ್ಲವನ್ನು ಹುಡುಕಿ ಹಾಸುಗೆ ಕೊಡವಿ "ಏನು ಸ್ವಾಮಿ ಜೇಡರ ಹುಳ ಬಂದರೆ ಹೀಗೆ ಹುಚ್ಚು ಕುಣಿತ ಸುರು ಮಾಡಿದ್ದೀರಲ್ಲ" ಎಂದು ಚಪ್ಪಾಳೆ ಹೊಡೆದುಕೊಂಡು ಮೊಳಕಾಲು ಬಡಿದುಕೊಂಡು ನಗುವುದಕ್ಕೆ ಪ್ರಾರಂಭಿಸಿದಾಗಲೇ ಇವನ ಪ್ರಥಮ ದರ್ಶನ ಓದುಗರಿವಾಗುತ್ತದೆ.

ಅವನೇ ನಮಗೆ ಅಲ್ಲಿ ಮಾರ್ಗದರ್ಶಕನು. ಪರಮಾಪ್ತ ಸ್ನೇಹಿತನು. ಎಲ್ಲರ ಪರವಾಗಿಯೇ ಲೇಖಕರ ಈ ಮಾತು. ಒಮ್ಮೆ ಹೊರಡುವ ಹೊತ್ತಿಗೆ ಅವನು ಇರಲಿಲ್ಲ. ಬರುವ .... ಕಳೆದು ಕೊಂಡು ಯಾರಿಗೆ ಕಷ್ಟ ? ಎಂದು ಸಮಾಧಾನ ಮಾಡಿಕೊಂಡರೂ 'ಅವನು ಒಬ್ಬ ಆಳು ಎಂಬ ಭಾವನೆ ಇವರಿಗುಂಟಾಗದಂತಹ ನಡತೆ ಆತನದು. ದೇವಸ್ಥಾನದ ದಾರಿಯಲ್ಲಿ ನಾಲ್ಕಾರು ಸಾರಿ ಕವಲೊಡೆದಾಗ ಕೈಯಲ್ಲಿದ್ದ ಗೈಡಪುಸ್ತಕ ಪ್ರಯೋಜನಕ್ಕೆ ಬರುತ್ತಿರಲಿಲ್ಲ. ಆಗ ಮತ್ತೆ ಈ ನಾಗರಿಕ ಪ್ರವಾಸಿಗಳಿಗೆ ಅನಿಸುತ್ತದೆ 'ಚೆನ್ನಯ್ಯನಿದ್ದಿದ್ದರೆ ! ಅವನು ದಾರಿಗಳನ್ನು ಬಲ್ಲವನು. ಸುಲಭವಾಗಿ ನೇರವಾಗಿ ನಮ್ಮನ್ನು ಕರೆದುಕೊಂಡು ಹೋಗುತ್ತಿದ್ದನು. ನಮ್ಮ ಸ್ವಂತ ಅನುಭವ ಪರೀಕ್ಷೆಗಳಿಂದಲೇ ಎಲ್ಲವನ್ನು ಕಂಡು ತಿಳಿದುಕೊಳ್ಳುವೆನೆಂದು ಯಾವ ಕೆಲಸ ಮಾಡಿದರೂ ಹೀಗೆಯೇ ಎಂದು ತೋರುತ್ತದೆ. ಪರಿಣಾಮದಲ್ಲಿ ಫಲವೇನೊ ದೊರಕಬಹುದು, ಆದರೆ ಮಾರ್ಗ ತಪ್ಪುವ ಸಂಭವವುಂಟು. ಮಾರ್ಗ ಕಷ್ಟವಾಗುವದಂತೂ ಖಂಡಿತ. ಗುರುಮುಖೇನ ಕಲಿತ ಪಾಠ ಸುಲಭವಾಗಿ ಉತ್ತಮ ಶಿಕ್ಷಣವನ್ನು ಕೊಡುವಂತೆ". ಈ ಬಗೆಯ ತಾತ್ವಿಕ ವಿವೇಚನೆ, ಹೊರಹೊಮ್ಮಿ ವಿ.ಸೀ. ಎಂಥ ಉನ್ನತ ಮಟ್ಟದ ಪ್ರಬಂಧಕಾರರೆಂಬುದನ್ನು ಸೂಚಿಸುತ್ತವೆ. ಬೆಟ್ಟದ ಕಿಬ್ಬಿಯಲ್ಲಿರುವ ಒಂದೇ ಬಂಡೆಯಲ್ಲಿದೇವಸ್ಥಾನವನ್ನು ಕೊರೆದು ಸಾಮಾನ್ಯವಾಗಿ ಕಟ್ಟಿದ ಲಕ್ಷ್ಮೀನಾರಾಯಣಸ್ವಾಮಿಯ ದೇವಸ್ಥಾನ ಕಂಡಾಗ ಲೇಖಕರ ಸನ್ನಿವೇಶ ಬುದ್ಧಿ ಮತ್ತೆ ಜಾಗೃತಗೊಳ್ಳುತ್ತದೆ. ಯಾರೊ ಕ್ರೂರಕರ್ಮಿಗಳು ಘಾತುಕರು ಈ ಸೌಂದರ್ಯವನ್ನೇ ದೂರದಿಂದ ಹುಡುಕಿಕೊಂಡು ಬಂದು ವಿಗ್ರಹಗಳ ಚೆಂದವನ್ನು ಚೆಲುವನ್ನು ನೋಡಿ ಸಹಿಸಲಾರದೆ ಅವನ್ನು ಭಿನ್ನ ಮಾಡಿದ್ದಾರೆ ಎಂದು ಅನಿಸುತ್ತದೆಯೇ ಹೊರತು ಅನ್ಯಮತೀಯರೇ ಅದನ್ನು

ಮಾಡಿರಬೇಕೆನ್ನಲಾರೆ, ನಾಶಕ್ರಿಯೆಯಲ್ಲಿ ನಮ್ಮವರ ವ್ಯಾಪಾರ ಸಣ್ಣದೇನಲ್ಲ ಎಂಬ ಅಭಿಪ್ರಾಯ ಅವರ ಸಮಚಿತ್ತಕ್ಕೆ ಸಾಕ್ಷಿಯಾಗುತ್ತದೆ.

ಕೋದಂಡ ರಾಮಸ್ವಾಮಿಯ ಗುಡಿಯ ಹತ್ತಿರ ಇವರ 'ಭಾಗ್ಯದೇವತೆ'ಯಂತೆ ಚೆನ್ನಯ್ಯ ಇನ್ನೊಬ್ಬ ಪ್ರವಾಸಿಗಳ ಕೆಲಸ ಮುಗಿಸಿ ದಣಿದು ಬಂದರೂ ಅವರ ಬಲವಂತಕ್ಕೆ ಒಪ್ಪಿ ಅವರನ್ನು ಮುನ್ನಡೆಸುತ್ತಾನೆ. 'ಅಲ್ಲಿ ನೀರು ಬಲು ಆಳ ಸ್ವಾಮಿ, ಮೊನ್ನೆ ಇಬ್ಬರು ಮುಳುಗಿ ಹೋದರು ಎಂದು ಎಚ್ಚರಿಕೆ ಹೇಳುತ್ತಾನೆ. ಹಾಗೇ ಸಾಗುತ್ತ ವಿಠ್ಠಲಸ್ವಾಮಿ ಗುಡಿಯಲ್ಲಿ ಇವರು ಒಳಹೊಕ್ಕಾಗ ಚೆನ್ನಯ್ಯ ಬಾಗಿಲಲ್ಲಿ ಜಗುಲಿಯ ಮೇಲೆ ಹುಳಿಮಾವಿನ ಕಾಯಿಗಳನ್ನು ತಿನ್ನುತ್ತ ಕುಳಿತು ಕೋತಿಗಳೊಡನೆ ಚೆಲ್ಲಾಟವಾಡುತ್ತ. 'ಅವನಿಗೇನು ? ಎಲ್ಲಿದ್ದರೆ ಅದೇ ಮನೆ - ಅವನ ಆಯುಧ ಆ ದೊಣ್ಣೆ, ಆ ಹರಕು ಜಮಖಾನನೇ ಸರ್ವಸ್ವ ಆಸ್ತಿ. ಅವನ್ನು ಬಿಟ್ಟರೆ,ಪ್ರಪಂಚದಲ್ಲಿ ತನ್ನದೆನ್ನುವ ಬೇರೊಂದು ವಸ್ತು ಇಲ್ಲ. ಅವನ ವ್ಯಕ್ತಿತ್ವದ ಒಳಹೊಕ್ಕು ನೋಡುತ್ತದೆ ಪ್ರಬಂಧಕಾರನ ದೃಷ್ಟಿ. ಹಿಂದೆ ಒಂದು ಸಂದರ್ಭದಲ್ಲಿ ಮಳೆಗಾಳಿಗೆ ಸಿಕ್ಕು ಇವರ ಛತ್ರಿ ತಲೆಕೆಳಕಾದಾಗ ಜೊತೆಯವರು ಅಪಹಾಸ್ಯ ಮಾಡಿದರು. ಚೆನ್ನಯ್ಯನೂ ಅವರ ಜೊತೆಗೆ ಸೇರಿಕೊಂಡು 'ಹ್ಯೋ' ಎಂದು ಷುರು ಮಾಡಿದಾಗ ಇವರಿಗೆ ರೇಗಿತು. 'ಏಕೋ, ನೀನೇಕೊ ನಗೋದು?' ಎಂದು ಗದರಿಸಿದಾಗ ಇವರ ಗಂಭೀರ ಭೀಷಣ ಧ್ವನಿಯೂ ಅವನ ನಗುವನ್ನು ಅಡಗಿಸದೆ 'ನಗು ಬಂದಿತು ಸ್ವಾಮಿ, ಏನು ಮಾಡೋದು?' ಎಂದು ತನ್ನ ಮುಗ್ಧತನವನ್ನು ತೋರಿಸಿದ. 'ಅಯ್ಯೋ ರ್‍ಯಾಸ್ಕಲ್' ಎಂದು ಮನಸ್ಸಿನಲ್ಲೇ ಅಂದುಕೊಂಡು ಇವರು ಸುಮ್ಮನಾದರು. ಇಂಥ ಮನುಷ್ಯ ಸಹಜವಾದ ಅಭಿವ್ಯಕ್ತಿ ಈ ಬರವಣಿಗೆಯ ಜೀವಾಳ.

ಇನ್ನೊಂದು ಸಂದರ್ಭದಲ್ಲಿ ಹರಿಗೋಲಿಗಿಳಿದು ಕತ್ತಲ ರಾತ್ರಿಯಲ್ಲಿ 'ಚೆನ್ನಯ್ಯ ಮುಂದೆ ನಡೆಯಪ್ಪ, ದಾರಿ ತೋರಿಸು' ಎಂದು ಹೇಳಿ ಹಿಂಬಾಲಿಸುತ್ತಾರೆ. ಒಂದೊಂದು ಸಲ ಅವನಿಗೂ ದಾರಿ ಕಾಣಿಸದಾಗುತ್ತಿತ್ತು. 'ಆಗ ಅವನು ಸೇದುತ್ತಿದ್ದ ಬೀಡಿಯ ಬೆಳಕೇ ನಮಗೆ ಮಾರ್ಗದರ್ಶಿ' ಮುಂದೆ ಮುಂದೆ ಕಷ್ಟಪಡುತ್ತ ಸಾಗಿದಾಗ 'ಈಗ ಎಲ್ಲಿದ್ದೇವಯ್ಯ, ಚೆನ್ನಯ್ಯ?' ಎಂದರು ರಾಯರು. ಅವನು, 'ಆಗ ತೋರಿಸಿದೆನಲ್ಲ ಸ್ವಾಮಿ, ಸೀತಮ್ಮನೋರು, ಒಡವೆ ಬಿಸಾಕಿದ ಸ್ಥಳ ಎಂದು ಅಲ್ಲಿಗೆ ಬಂದಿದ್ದೇವೆ' ಎಂದನು. ಅವನ ಉತ್ತರ ಸರಳವಾಗಿದ್ದರೂ ಎಷ್ಟೊಂದು ಸಾಂಕೇತಿಕವಾಗಿದೆ.

ಅಂದು ಗುಡಿ ಸೇರಿದ ಮೇಲೆ ರಾತ್ರಿಯಲ್ಲಿ ಕನಸುಗಳ ಮೇಲೆ ಕನಸು. ವಿಜಯನಗರ ಸಾಮ್ರಾಜ್ಯದ ವೈಭವವನ್ನು ಹೃದಯಂಗಮ ದೃಶ್ಯಗಳ ಮೂಲಕ ಒಂದಾದ ಮೇಲೊಂದರಂತೆ ಕಣ್ಣಿಗೆ ಕಟ್ಟುವಂತೆ ಮನಸ್ಸಿಗೆ ನಾಟುವಂತೆ ಚಿತ್ರಿಸುವ ಹತ್ತು ಪುಟಗಳ ಗದ್ಯದ ಸೊಗಸು ಕನ್ನಡ ಸಾಹಿತ್ಯದಲ್ಲಿಯೇ ಅಪರೂಪವಾದದ್ದು. ಕನಸುಗಳ ಮೂಲಕ ಕಂಡದ್ದು ಸಹಜವಾಗಿರುವಂತೆಯೇ ಬರವಣಿಗೆಯ ಒಂದು ತಂತ್ರವಾಗಿಯೂ ಯಶಸ್ವಿಯಾಗಿದೆ.

ಕೊನೆಯ ಸನ್ನಿವೇಶದಲ್ಲಿ ಚೆನ್ನಯ್ಯ ಮತ್ತೆ ಓದುಗರ ಮುಂದೆ ಕಾಣಿಸಿಕೊಳ್ಳುವುದು ಅರ್ಥಪೂರ್ಣವಾಗಿದೆ. ಆ 'ಪ್ರಸನ್ನಮುಖಿ' ನಿರಾಳಮನಸ್ಸಿನ ವೀರಾಗಿ ಯೋಗ್ಯತಾಪತ್ರ ಕೇಳಿದಾಗ

ಯುಕ್ತಾಯುಕ್ತ ವಿಚಾರ ಮಾಡಿ ಕೊನೆಗೂ ರಾಯರು ಬರೆದುಕೊಟ್ಟರು. 'ಸರಿಯೇನಯ್ಯ ಇನ್ನೇನಾದರೂ ಬರೆಯಬೇಕೊ ?' ಎಂದರು. 'ಇನ್ನೇನು ಸ್ವಾಮಿ ಬೇಕು ? ಹೀಗೆ ಶಿಫಾರಸ್ಸು ಬರೆದು ಕೊಟ್ಟರೆ ದಗಾಖೋರನಿಗೆ ಖಲಾಸೆಯಾಗಿ ಬಿಡುತ್ತೆ' ಎಂದ ಚೆನ್ನಯ್ಯ. ಈ ಇಡೀ ಯಾತ್ರೆಯಲ್ಲಿ ಅವನ ಪಾತ್ರವಿಲ್ಲದೆ ಹೋಗಿದ್ದರೆ ನಾಡು-ನುಡಿಯ ಈ ನಮ್ಮ ಹಿರಿಯರ ಸಂಸ್ಕೃತಿಯ 'ಮಾರ್ಗ'ಕ್ಕೆ 'ದೇಸಿ'ಯ ಆಯಾಮವಿಲ್ಲದೆ ಹೋಗುತ್ತಿತ್ತು. "ನವೋದಯ ಕಾಲದ ಮೌಲ್ಯ -'ಸಾಮಾನ್ಯ ಮನುಷ್ಯನನ್ನು ಕೇಂದ್ರಕ್ಕೆ ತರುವ ಪ್ರಯತ್ನ - ಇಲ್ಲಿ ಸಹಜವೆಂಬಂತೆ ಆಕಾರ ಪಡೆದಿದೆ. 'ಪಂಪಾಯಾತ್ರೆ'ಯಲ್ಲಿ ಚನ್ನಯ್ಯ ಪ್ರಮುಖ ಪಾತ್ರವೆಂಬಂತೆ ಚಿತ್ರಿತವಾಗಿರುವುದನ್ನು ನಾವು ಈ ಹಿನ್ನೆಲೆಯಲ್ಲಿ ಗಮನಿಸಬೇಕು. ಇತಿಹಾಸ, ಪುರಾಣಗಳ ನಡುವೆ ಅತ್ಯಂತ ಜೀವಂತವಾಗಿ ಚಿತ್ರಿತವಾಗಿರುವ ಪಾತ್ರ - ಚನ್ನಯ್ಯ" ಎಂದಿರುವ ನರಹಳ್ಳಿ ಬಾಲಸುಬ್ರಹ್ಮಣ್ಯ ಅವರು ಈ ಪ್ರವಾಸ ಕಥನದ ವೈಶಿಷ್ಟ್ಯವನ್ನು ಸರಿಯಾಗಿಯೇ ಗುರುತಿಸಿದ್ದಾರೆ. ಅವನಿಗೆ ಸಂಬಂಧಪಟ್ಟ ಎಲ್ಲ ವಿವರಣೆಗಳೂ ಸಹಜವಾಗಿಯೇ ಸಂಕೇತದ ಶಕ್ತಿಪಡೆದುಕೊಂಡು ಬಿಡುವುದನ್ನು ಎತ್ತಿ ತೋರಿಸಿದ್ದಾರೆ (ನಾಲ್ಕನೆಯ ಆವೃತ್ತಿಯ ಮುನ್ನುಡಿ)

"ಎರಡು ದಿನಗಳ ಅಲ್ಪಾವಧಿಯಲ್ಲಿ ಇನ್ನೂರ ಐವತ್ತು ವರ್ಷಗಳ ಚರಿತ್ರೆಯನ್ನು ಸತ್ವತಃ ಅನುಭವ ಮಾಡಿಕೊಟ್ಟು, ಒಂದೇ ಕಾಲದಲ್ಲಿ ಸುಖದುಃಖ ಉಂಟುಮಾಡಿದ ಆ ಸೌಂದರ್ಯದ ಪಾಳನ್ನು ಪಾಳೆಯವನ್ನು ಬಿಟ್ಟು ಹೊರಟೆವು". ಹಾಗೆ ಹೊರಟಾಗಲೂ ಎಲ್ಲ ನೋಡಿದೆವೆಂಬ ತೃಪ್ತಿ ಲೇಖಕರಿಗಿರಲಿಲ್ಲ. ಆಯಾ ಸ್ಥಳಗಳಿಗೆ ಮತ್ತೆ ಭೆಟ್ಟಿಕೊಟ್ಟು ಸಂಬಂಧಪಟ್ಟ ವ್ಯಕ್ತಿಗಳನ್ನು ಘಟನೆಗಳನ್ನು ಸನ್ನಿವೇಶಗಳನ್ನು ಕಲ್ಪಿಸಿಕೊಂಡು ಅವುಗಳಲ್ಲಿ ಪ್ರಾಣ ಪ್ರತಿಷ್ಠಾಪನೆ ಮಾಡಿ, ಅವುಗಳೊಡನೆ ಕಲೆತು ಪುನಃ ನಮ್ಮೆದುರಿಗೆ ಅವು ಜೀವಿಸುವಂತೆ ಮಾಡಿಕೊಳ್ಳಬೇಕು ಎಂಬ ಅಪೇಕ್ಷೆ ಅವರಿಗೆ. ಐತಿಹಾಸಿಕ ಸ್ಥಳಗಳಿಗೆ ಪ್ರವಾಸ ಹೋಗುವವರಿಗೆ ಈ ಮಾತು ಆದರ್ಶವಾಗಬೇಕಲ್ಲವೆ? 'ಪಂಪಾಯಾತ್ರೆ'ಯ ನಾಲ್ಕನೆಯ ಆವೃತ್ತಿಗೆ (೧೯೭೪) ಮುನ್ನುಡಿ ಬರೆಯುತ್ತ ವಿ.ಸೀ.ಯವರು 'ಈಗ ಇಂಥದನ್ನು ಬರೆಯಬಲ್ಲೆನೆಂಬ ಧೈರ್ಯವಿಲ್ಲ' ಎಂದಿದ್ದಾರೆ. ನವೋದಯದ ಹಿರಿಯರ ಅನೇಕ ಪ್ರಥಮ ಕೃತಿಗಳಿಗೆ ಈ ಮಾತು ಅನ್ವಯಿಸುವಂತಿದೆ. ಒಂದು ದೃಷ್ಟಿಯಿಂದ ಈ ವಿಷಯ ಅಧ್ಯಯನ ಯೋಗ್ಯವೆಂದು ನನಗೆ ತೋರುತ್ತದೆ. ಎಂಥ ಪುನರ್‌ಮೌಲ್ಯಮಾಪನದ ಸಂದರ್ಭದಲ್ಲಿಯೂ ಪ್ರವಾಸಕಥನವಾಗಿ 'ಪಂಪಾಯಾತ್ರೆ'ಯ ಬೆಲೆ ಏರುತ್ತ ಹೋಗುತ್ತದೆಯೇ ವಿನಃ ಇಳಿಯುವುದಿಲ್ಲ.

ಕನ್ನಡದ ಮಹತ್ವದ ಕವಿಗಳಾದ ಡಾ. ಚೆನ್ನವೀರ ಕಣವಿಯವರ ಕಾವ್ಯ ನಮ್ಮ ಸಾಹಿತ್ಯ ವಿಮರ್ಶೆಯಲ್ಲಿ ಚರ್ಚೆಗೆ ಒಳಗಾದ ಪರಿಯಲ್ಲಿ ಅವರ ಗದ್ಯ ಪಡೆದಿಲ್ಲದಿರುವುದು ಸೋಜಿಗದ ಸಂಗತಿಯಾಗಿದೆ. ಪ್ರಾರಂಭದಿಂದಲೂ ತಮ್ಮ ಕಾವ್ಯಕೃಷಿಯ ಜೊತೆಗೆ ಸಂದರ್ಭಾನುಸಾರ ಗದ್ಯಸೃಷ್ಟಿಯಲ್ಲಿಯೂ ಅವರು ತಮ್ಮನ್ನು ತೊಡಗಿಸಿಕೊಂಡವರು. ಕಣವಿಯವರ ಕಾವ್ಯ ಹೇಗೆ ಕಾಲಕಾಲದ ನಿರೀಕ್ಷೆ, ಅಪೇಕ್ಷೆ, ಬದಲಾವಣೆ ಮತ್ತು ಸಂಕ್ರಮಣದ ತುಯ್ತಗಳಿಗೆ ತನ್ನನ್ನು ಒಡ್ಡಿಕೊಳ್ಳುತ್ತ ಅನನ್ಯತೆಯನ್ನೂ ಅನುಸ್ಯೂತತೆಯನ್ನೂ ಕಾಪಾಡಿಕೊಂಡು ಬಂದಿದೆಯೋ ಹಾಗೆಯೇ ಅವರ ಗದ್ಯ ಬರವಣಿಗೆ ಈ ವಿಕಾಸದ ಹಾದಿಯಲ್ಲಿ ಎಚ್ಚರದಿಂದ ತನ್ನ ಹೆಜ್ಜೆಗಳನ್ನು ಮೂಡಿಸುತ್ತ ಬಂದಿದೆ. ಕಳೆದ ಅರ್ಧಶತಮಾನದ ಕನ್ನಡದ ಸಾಹಿತ್ಯಕ-ಸಾಂಸ್ಕೃತಿಕ ಚರಿತ್ರೆಯ ಪಲುಕುಗಳನ್ನು ತನ್ನ ತೆಕ್ಕೆಗೆ ಆಹ್ವಾನಿಸಿಕೊಂಡು, ಅದರ ಗತಿ-ಪ್ರಗತಿಗಳನ್ನು ಅವರ ಗದ್ಯಕೃಷಿ ತುಂಬ ಸಾವಧಾನವಾಗಿ ಯಾವ ಪೂರ್ವಾಗ್ರಹಕ್ಕಾಸ್ಪದವಿಲ್ಲದೆ ಪರಿಶೀಲಿಸಿದೆ. ಆಧುನಿಕತೆ ಹಾಗೂ ಪರಂಪರೆಯ ಒಂದು ಹದವಾದ ಬೆಸುಗೆಯಂತಿರುವ ಅವರ ಗದ್ಯ ಬರವಣಿಗೆಯ ವೈಶಿಷ್ಟ್ಯಕ್ಕೆ ಪ್ರಸ್ತುತ ಸಂಪುಟಗಳು ನಿದರ್ಶನದಂತಿವೆ.



ಕರ್ನಾಟಕ ಸರ್ಕಾರ
ಕನ್ನಡ ಮತ್ತು ಸಂಸ್ಕೃತಿ ಇಲಾಖೆ
ಕನ್ನಡ ಭವನ, ಜೆ.ಸಿ.ರಸ್ತೆ, ಬೆಂಗಳೂರು